ಶಂಕರಾಚಾರ್ಯರವರ

# ಉಪನಿಷದ್ಭಾಷ್ಯಗಳು

ಸಂಪುಟ ೬



ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳು

ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಶ್ರೀಶಂಕರಾಚಾರ್ಯರವರ ಗ್ರಂಥಗಳು

# ಉಪನಿಷದ್ಭಾಷ್ಯಗಳು

## ಸಂಪುಟ ೬

(ಛಾಂದೋಗ್ಯೋಪನಿಷತ್ತು)

ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ.
೧೯[illegible]

**Karnatak Sahitya Mandira.**
**Market, DHARWAR.**
**(Mysore State)**

ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಸಂಖ್ಯೆ ೫೮

ಶ್ರೀಶಾಂಕರಭಾಷ್ಯಸಮೇತ

# ಛಾಂದೋಗ್ಯೋಪನಿಷತ್ತು

ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ-
ಮುಂತಾದವುಗಳೊಡನೆ

ಬರೆದವರು :
ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೯

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ.

೧೯೫೬

# ಮೊದಲ ಮಾತು

ಛಾಂದೋಗ್ಯೋಪನಿಷತ್ತು ಮುಗಿದದ್ದರಿಂದ ಪ್ರಸಿದ್ಧವಾದ ದಶೋಪನಿಷತ್ತುಗಳು, ಭಗವದ್ಗೀತೆ, ಮತ್ತು ಬ್ರಹ್ಮಸೂತ್ರ- ಎಂಬ ಪ್ರಸ್ಥಾನತ್ರಯದ ಭಾಷ್ಯಗಳು ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲೆಯಲ್ಲಿಯೇ ಪ್ರಕಟವಾದಂತೆ ಆಯಿತು.

ಶ್ರೀಶಂಕರಭಗವತ್ಪಾದರವರ ಕೃತಿಗಳೆಂದು ಪ್ರಚಾರದಲ್ಲಿರುವ ಪ್ರಕರಣಗಳೊಳಗೆ ಉಪದೇಶಸಾಹಸ್ರಿ, ಅಪರೋಕ್ಷಾನುಭೂತಿ, ಅದ್ವೈತಾನುಭೂತಿ- ಇಷ್ಟಕ್ಕೆ ಮಾತ್ರ ಒಂದು ಸಂಪುಟದೊಳಗೆ ಈ ಗ್ರಂಥರತ್ನಮಾಲೆಯಲ್ಲಿ ಪ್ರವೇಶವು ಲಭಿಸಿತು. ಮಿಕ್ಕ ಪ್ರಕರಣಗಳನ್ನು ಮತ್ತೊಂದು ಆಜ್ಞಾಪತ್ರವನ್ನು ಕಳುಹಿಸುವವರೆಗೆ ಈ ಮಾಲಿಕೆಗಾಗಿ ಸಿದ್ಧಗೊಳಿಸಬೇಕಾದದ್ದಿಲ್ಲವೆಂದು ಅರಮನೆಯಿಂದ ನಿರೂಪವು ಬಂದದ್ದರಿಂದ ಅವುಗಳನ್ನು ಸ್ವತಂತ್ರವಾಗಿಯೇ ಪ್ರಕಟಿಸುವ ಯೋಚನೆಯನ್ನು ಮಾಡಬೇಕಾಗಿದೆಯೆಂದು ಅಧ್ಯಾತ್ಮಪ್ರಕಾಶಕಾರ್ಯಾಲಯದವರು ತಿಳಿಸಿರುತ್ತಾರೆ. ಹೇಗಾದರೂ ಪ್ರಕರಣಗಳೆಲ್ಲವನ್ನೂ ಕನ್ನಡಿಗರಿಗೆ ಆದಷ್ಟುಬೇಗನೆ ಒದಗಿಸಿಕೊಡಬೇಕೆಂಬುದೇ ನನ್ನ ಹಿರಿಯಾಸೆ. ಅದನ್ನು ಭಗವಂತನು ಪರಿಪೂರ್ತಿಗೊಳಿಸಿಕೊಡಬೇಕಾಗಿದೆ.

ಈ ಗ್ರಂಥರತ್ನಮಾಲಿಕೆಯುಲ್ಲಿ ಹೊರಕ್ಕೆ ತಂದಿರುವ ಶಾಂಕರವೇದಾಂತದ ಅತ್ಯಂತಪ್ರಮುಖಗ್ರಂಥಗಳನ್ನು ಅಚ್ಚಿಗೆ ಸಿದ್ಧಪಡಿಸುವವರಲ್ಲಿ ನನಗೆ ನೆರವಾಗಿರುವ ಮಹನೀಯರುಗಳಿಗೂ ಒಟ್ಟು ಗ್ರಂಥಮಾಲಿಕೆಗೇ ಆರ್ಥಿಕಸಹಾಯವನ್ನು ಉದಾರಭಾವದಿಂದ ಕೊಟ್ಟು ಕನ್ನಡನಾಡಿಗೇ ಉಪಕಾರಮಾಡಿರುವ ಕಾರ್ಯಾಲಯದ ಪರಿಪಾಲಕರಾದ ಮಹಾಪ್ರಭುಗಳಿಗೂ ಹಾರ್ದಿಕ ಅಭಿನಂದನೆಗಳನ್ನು ನಾರಾಯಣಸ್ಮರಣಪೂರ್ವಕವಾಗಿ ಇಲ್ಲಿ ತಿಳಿಸುವದು ನನ್ನ ಕರ್ತವ್ಯವಾಗಿರುತ್ತದೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,<br>ದುರ್ಮುಖಿಸಂವತ್ಸರದ ವೈಶಾಖ ಬಹುಳ ೧೦ } **ಅನುವಾದಕ**

# ಪೀಠಿಕೆ

## ಸಾಮವೇದ

ಛಾಂದೋಗ್ಯೋಪನಿಷತ್ತು ಸಾಮವೇದಕ್ಕೆ ಸೇರಿದ್ದು. ಸಾಮವೇದದ ವಿಷಯಕ್ಕೆ ತಿಳಿಸಬೇಕಾದದ್ದನ್ನೂ ವೇದಸಾಮಾನ್ಯದ ವಿಷಯವಾಗಿಯೂ ವೈದಿಕ ಕರ್ಮಗಳ ವಿಷಯವಾಗಿಯೂ ತಿಳಿಸಬೇಕಾದದ್ದನ್ನೂ ಸಂಗ್ರಹಿಸಿ **ಪರಿಶಿಷ್ಟ**ದಲ್ಲಿ ಕೊಡಲಾಗಿದೆ.

## ಛಾಂದೋಗ್ಯೋಪನಿಷತ್ತಿನ ಸ್ಥಾನ

ಪರಿಶಿಷ್ಟದಲ್ಲಿ ಕೊಟ್ಟಿರುವ ವಿವರದಿಂದ ಛಾಂದೋಗ್ಯವು ತಾಂಡ್ಯ ಬ್ರಾಹ್ಮಣಕ್ಕೆ ಸೇರಿದ್ದೆಂದೂ ಆ ಬ್ರಾಹ್ಮಣವು ಕೌಥುಮಶಾಖೆಯದೆಂದೂ ಕಲ್ಪಿಸಬೇಕಾಗಿರುತ್ತದೆ. ಆದರೆ ಶ್ರೀಶಂಕರಾಚಾರ್ಯರು ಭಾಷ್ಯವನ್ನು ಬರೆದಿರುವ ಉಪನಿಷತ್ತು ಕೌಥುಮಶಾಖೆಯದೆ, ಅಲ್ಲವೆ ? – ಎಂಬ ಬಗೆಗೆ ಕೆಲವು ವಿಚಾರಣೀಯವಿಷಯಗಳಿರುತ್ತವೆ. ಅದನ್ನು ವಿಮರ್ಶಿಸುವದು ವೈದಿಕವಾಙ್ಮಯದಲ್ಲಿ ಈ ಉಪನಿಷತ್ತಿನ ಸ್ಥಾನವನ್ನು ನಿರ್ಣಯಿಸುವದಕ್ಕೆ ಅವಶ್ಯವಾಗಿರುತ್ತದೆ.

೧. **ಸೂತ್ರಭಾಷ್ಯದಲ್ಲಿ** (೩-೩-೨೩ ರಲ್ಲಿ) **ರಾಣಾಯನೀಯಶಾಖೆ**ಯವರ ಉಪನಿಷತ್ತಿನ ಪರಾಮರ್ಶವು (ಭಾ. ಭಾ. ೩೬೧) ಕಾಣಬರುತ್ತದೆ. ಅಲ್ಲಿ ಹೆಸರಿಸಿರುವ ಶಾಂಡಿಲ್ಯವಿದ್ಯೆ, ದಹರವಿದ್ಯೆ, ಉಪಕೋಸಲವಿದ್ಯೆಗಳು ಪ್ರಕೃತವಾದ ಛಾಂದೋಗ್ಯದಲ್ಲಿ ಕಾಣಬರುತ್ತಿವೆ. ಅದೇ ಸೂತ್ರಭಾಷ್ಯದಲ್ಲಿ (೩-೩-೨೪ ರಲ್ಲಿ) **ತಾಂಡಿ, ಪೈಂಗಿ**ಶಾಖೆಗಳ ರಹಸ್ಯಬ್ರಾಹ್ಮಣದ ಪರಾಮರ್ಶವು (ಭಾ. ಭಾ. ೩೬೩) ಕಾಣಬರುತ್ತದೆ. ಅಲ್ಲಿ ಕೊಟ್ಟಿರುವ 'ಪುರುಷಯಜ್ಞ'ದ ವರ್ಣನೆಯೂ ಪ್ರಕೃತವಾದ ಛಾಂದೋಗ್ಯದಲ್ಲಿದೆ. ಇನ್ನು ಸೂತ್ರಭಾಷ್ಯದಲ್ಲಿ (೩-೩-೨೬ರಲ್ಲಿ) **ತಾಂಡಿಗಳ ಶ್ರುತಿ** ಎಂದು ಉದಾಹರಿಸಿರುವ (ಭಾ. ಭಾ. ೩೬೮) ವಾಕ್ಯವೂ ಪ್ರಕೃತ ಛಾಂದೋಗ್ಯದಲ್ಲಿ ಕಾಣಬರುತ್ತಿದೆ. ಈ ಮೂರು ಸೂತ್ರಭಾಷ್ಯಪರಾಮರ್ಶಗಳಿಂದ ಛಾಂದೋಗ್ಯವು ತಾಂಡಿ, ರಾಣಾಯನೀಯ, ಪೈಂಗಿ – ಈ ಮೂರರಲ್ಲಿ ಯಾವದಾದರೊಂದು ಶಾಖೆಯದಾಗಿರಬಹುದಾಗಿದೆ ; ಅಥವಾ ಈ ಮೂರರಲ್ಲಿಯೂ ಇದೇ ಉಪನಿಷತ್ತಿನ ಭಾಗಗಳು ಇದ್ದಿದ್ದರೂ ಇರಬಹುದು ಎಂಬ ಊಹೆಗೆ ಎಡೆಯಿರುತ್ತದೆ.

೨. ಇನ್ನು **ಛಾಂದೋಗ್ಯಭಾಷ್ಯದ** ಆರಂಭದಲ್ಲಿ ಬರೆದಿರುವ ಅವತರಣಿಕೆಯಲ್ಲಿ 'ಪ್ರಾಣವೇ ಮುಂತಾದವುಗಳ ಉಪಾಸನೆಗಳಿಂದೊಡಗೂಡಿರುವದರಿಂದ

ಅರ್ಚಿರಾದಿಮಾರ್ಗದಿಂದ ಬ್ರಹ್ಮಪ್ರಾಪ್ತಿಗೆ ಕಾರಣವಾಗಿರುವ ಕರ್ಮ, ಧೂಮಾದಿ ಮಾರ್ಗದಿಂದ ಚಂದ್ರಲೋಕಪ್ರಾಪ್ತಿಗೆ ಕಾರಣವಾಗಿರುವ ಬರಿಯ ಕರ್ಮ – ಇವುಗಳನ್ನು ತಿಳಿಸಿದ್ದಾಗಿದೆ. ಅಜ್ಞಾನಸ್ವಭಾವದಿಂದ ಪ್ರವೃತ್ತರಾದವರಿಗೆ ಈ ಎರಡು ಮಾರ್ಗಗಳೂ ತಪ್ಪಿ ಕಷ್ಟವಾದ ಅಧೋಗತಿಯಾಗುವದೆಂದು ಹೇಳಲಾಯಿತು' (ಭಾ. ಭಾ. ೨) ಎಂದಿದೆ. ಆದರೆ ಈ ಉಪಾಸನೆಗಳನ್ನಾಗಲಿ ಗತಿಗಳನ್ನಾಗಲಿ ಹೇಳುವ ಭಾಗವು ತಾಂಡ್ಯಬ್ರಾಹ್ಮಣದಲ್ಲಿ ಕಾಣುತ್ತಿಲ್ಲ. ಈ ಶಾಖೆಯ ಆರಣ್ಯಕ ಭಾಗವೊಂದು ಬೇರೆಯಿದೆಯೊ ಇಲ್ಲವೊ, ತಿಳಿಯದು. ಇದನ್ನು ಮನದಂದು ಕೊಂಡರೂ ಛಾಂದೋಗ್ಯೋಪನಿಷತ್ತು ತಾಂಡ್ಯಬ್ರಾಹ್ಮಣಕ್ಕೆ ಸೇರಿದ್ದಲ್ಲವೇನೊ ಎಂಬ ಸಂಶಯವುಂಟಾಗುತ್ತದೆ. ಸಾಮವೇದದ ಬೇರೆಯ ಶಾಖೆಗಳ ಬ್ರಾಹ್ಮಣಗಳು ನಮಗೆ ಸದ್ಯಕ್ಕೆ ಸಿಕ್ಕಿಲ್ಲವಾದ್ದರಿಂದ ಈ ವಿಷಯವನ್ನು ನಿರ್ಣಯಿಸುವದನ್ನು ವೈದಿಕವಾಙ್ಮಯಶೋಧನೆಯಲ್ಲಿ ಹೆಚ್ಚಿನ ಪರಿಶ್ರಮವುಳ್ಳ ವಿದ್ವಾಂಸರಿಗೇ ಬಿಡಬೇಕಾಗಿದೆ.

## ಈ ಉಪನಿಷತ್ತಿನ ಹೆಚ್ಚುಗಾರಿಕೆ

ಬೃಹದಾರಣ್ಯಕವನ್ನು ಬಿಟ್ಟರೆ ಛಾಂದೋಗ್ಯದಷ್ಟು ದೊಡ್ಡದಾದ ಉಪನಿಷತ್ತು ನಮಗೆ ಸಿಕ್ಕುವದಿಲ್ಲ. ಸೂತ್ರಭಾಷ್ಯದಲ್ಲಿ ಈ ಉಪನಿಷತ್ತಿನಿಂದ ಆರಿಸಿಕೊಂಡಿರುವಷ್ಟು ಹೆಚ್ಚಿನ ಸಂಖ್ಯೆಯ ವಾಕ್ಯಗಳನ್ನು ಮತ್ತೆ ಯಾವ ಉಪನಿಷತ್ತಿನಿಂದಲೂ ಆರಿಸಿಕೊಂಡಿರುವದಿಲ್ಲ. ಬ್ರಹ್ಮಸೂತ್ರದ ಸಮನ್ವಯಾಧ್ಯಾಯದಲ್ಲಿ ಈ ಉಪನಿಷತ್ತಿನ ವಾಕ್ಯಗಳನ್ನು ಯಥಾಪರಿತವಾದ ಅನುಕ್ರಮದಲ್ಲಿಯೇ (೧-೬-೬, ೧-೯-೧, ೧-೧೧-೫, ೩-೧೩-೭, ೩-೧೪-೧, ೪-೧೫-೧, ೫-೧೧ ರಿಂದ ೨೪, ೭-೨೩-೧, ೮-೧-೧, ೮-೧೨-೩, ೮-೧೪) ತೆಗೆದುಕೊಂಡು ವಿಚಾರಮಾಡಿರುವದನ್ನೂ ಸಂಗತಿಗೆ ಹೊಂದುವಂತೆ ತೈತ್ತಿರೀಯ, ಕೌಷೀತಕಿ, ಕಠ, ಮುಂಡಕ, ಪ್ರಶ್ನ– ಇವುಗಳ ವಾಕ್ಯಗಳನ್ನು ಅಲ್ಲಲ್ಲಿಗೆ ಹೆಣೆದುಕೊಂಡಿರುವದನ್ನೂ ನೋಡಿದರೆ ಸೂತ್ರಭಾಷ್ಯದಲ್ಲಿ ಇದಕ್ಕೆ ಕೊಟ್ಟಿರುವ ಹೆಚ್ಚಿನ ಸ್ಥಾನವು ಮನಸ್ಸಿಗೆ ತಟ್ಟುವದು. ಎಲ್ಲಕ್ಕೂ ಮಿಗಿಲಾಗಿ ಉಪಾಸನೆಗಳಿಗೆ ಈ ಉಪನಿಷತ್ತಿನಲ್ಲಿ ಕೊಟ್ಟಿರುವ ಪ್ರಾಧಾನ್ಯವನ್ನು ಮತ್ತೆಯಾವ ಉಪನಿಷತ್ತಿನಲ್ಲಿಯೂ ಕೊಟ್ಟಿರುವದು ಕಂಡುಬರುವದಿಲ್ಲ. ಈ ಎಲ್ಲಾ ಕಾರಣಗಳಿಂದ ಈ ಉಪನಿಷತ್ತಿಗೆ ವೇದಾಂತವಾಙ್ಮಯದಲ್ಲಿ ಬಹುಮುಖ್ಯಸ್ಥಾನವಿದೆ ಎಂದು ಹೇಳಬೇಕಾಗಿದೆ.

## ಉಪನಿಷದ್ಭಾಷ್ಯವನ್ನು ಬರೆದವರು

ಈ ಉಪನಿಷತ್ತಿಗೆ ಭಾಷ್ಯವನ್ನು ಬರೆದಿರುವವರು ಸೂತ್ರಭಾಷ್ಯವನ್ನು ಬರೆದಿರುವ ಶ್ರೀಶಂಕರಾಚಾರ್ಯರೇ ಎಂದು ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುತ್ತದೆ.

'ಶಾರೀರಕದಲ್ಲಿ ಉಪನಿಷತ್ತನ್ನು ವಿಸ್ತಾರವಾಗಿ ವಿವರಿಸಿದೆಯಾದರೂ ಪಾಠಕ್ರಮ ವನ್ನನುಸರಿಸಿ ಬರೆದಿಲ್ಲ ; ಪಾಠಕ್ರಮವನ್ನಾಶ್ರಯಿಸಿ **ದ್ರವಿಡಾಚಾರ್ಯರು** ಬರೆದಿ ರುವ ಭಾಷ್ಯವು[1] ವಿಸ್ತಾರವಾಗಿದೆ ಇಲ್ಲಿ ಸಂಕ್ಷೇಪವಾಗಿ ಪಾಠಕ್ರಮದಲ್ಲಿಯೇ ಅರ್ಥ ವನ್ನು ಸ್ಫುಟಗೊಳಿಸಿದೆ ಎಂದು ಆನಂದಗಿರಿಗಳ ಟೀಕೆಯಲ್ಲಿ ಬರೆದಿದೆ. ಬರೆವಣಿಗೆ ಯ ಶೈಲಿಯನ್ನು ನೋಡಿದರೂ ಇದು ಸುಪ್ರಸಿದ್ಧ ಶಂಕರಾಚಾರ್ಯರದೇ ಆಗಿರಬೇಕೆಂದು ಹೇಳಬೇಕಾಗುತ್ತದೆ. ಹೀಗಿದ್ದರೂ ಈ ಉಪನಿಷತ್ತಿನ ಭಾಷ್ಯ, ಬೃಹದಾರಣ್ಯಕಭಾಷ್ಯ – ಇವುಗಳನ್ನು ಸೂತ್ರಭಾಷ್ಯಕ್ಕೆ ಹೋಲಿಸುವಾಗ ಕೆಲವು ಮತಭೇದಗಳು ಕಂಡುಬರುತ್ತವೆ. ಅವನ್ನು ಯಥಾಮತಿಯಾಗಿ ಟಿಪ್ಪಣಿಯಲ್ಲಿ ಅಲ್ಲಲ್ಲಿ[2] ವಾಚಕರ ಲಕ್ಷ್ಯಕ್ಕೆ ತಂದಿರುತ್ತೇವೆ. ಈ ಮತಭೇದಗಳಿಗೆ ಕಾರಣವೇ ನೆಂಬುದನ್ನು ಈ ಮೂರು ಭಾಷ್ಯಗಳನ್ನು ಚಿಕಿತ್ಸಾದೃಷ್ಟಿಯಿಂದ ಓದಿ ವಿದ್ವಾಂಸರೇ ನಿರ್ಣಯಿಸಬೇಕಾಗಿದೆ. ಮುಖ್ಯಸಿದ್ಧಾಂತದ ವಿಷಯದಲ್ಲಿ ಮಾತ್ರ ಯಾವ ಅನ್ಯೋನ್ಯವಿರೋಧವೂ ಕಾಣಿಸುತ್ತಿಲ್ಲವೆಂಬುದು ಮುಮುಕ್ಷುಗಳಿಗೆ ಮನಃ ಸಮಾಧಾನಕ್ಕೆ ಕಾರಣವಾಗಿರುತ್ತದೆ.

## ಉಪಾಸನೆಗಳು

ಈ ಉಪನಿಷತ್ತಿನಲ್ಲಿ ಉಪಾಸನೆಯ ವಿಧಾನಕ್ಕೆ ಹೆಚ್ಚಿನ ಭಾಗವನ್ನು ವಿನಿ ಯೋಗಿಸಿದೆ ಎಂಬುದು ಎದ್ದುಕಾಣಬರುವಂತಿದೆ. ಈ ಉಪಾಸನೆಗಳನ್ನು ಒಂದಾ ನೊಂದು ಕ್ರಮವನ್ನು ಅನುಸರಿಸಿ ಸೋಪಾನಕ್ರಮದಿಂದ ಹೇಳುತ್ತಾಬಂದಿದೆ ಎಂಬು ದನ್ನು ಒಳಹೊಕ್ಕು ವಿಚಾರಮಾಡುವವರು ಕಾಣಬಹುದು. ಮೊದಲು ಉದ್ಗೀಥ ಭಕ್ತಿಯ ಅವಯವವಾದ ಓಂಕಾರದ ಉಪಾಸನೆಯನ್ನು ಹೇಳಿದೆ ; ಅದನ್ನು ಒಗೆ ಬಗೆಯ ದೃಷ್ಟಿಯಿಂದ ಬಗೆಬಗೆಯಾಗಿ ಉಪಾಸನೆಮಾಡಬಹುದೆಂಬುದನ್ನು ವಿವರಿ ಸಿದ ಬಳಿಕ ಆ ಪ್ರಸಂಗದಿಂದ 'ಪ್ರಸ್ತಾವ', 'ಪ್ರತಿಹಾರ'–ಎಂಬ ಭಕ್ತಿಗಳ ಉಪಾ ಸನೆಯನ್ನು ಹೇಳಿದೆ. ಆಮೇಲೆ ಸಾಮಗಾನಗಳಲ್ಲಿ ಬರುವ ಸ್ತೋಭಗಳ ವಿಷಯ ವಾದ ಉಪಾಸನೆಯನ್ನು ಹೇಳಿದೆ. ಹೀಗೆ ಸಾಮಾವಯವಗಳ ಉಪಾಸನೆಯಾದ

---

1. ಈ ದ್ರಾವಿಡಭಾಷ್ಯವು ಇನ್ನೂ ಸಿಕ್ಕಿರುವದಿಲ್ಲವಾದ್ದರಿಂದ ದ್ರವಿಡಾಚಾರ್ಯರ ವಿಷಯಕ್ಕೆ ಹೆಚ್ಚಿಗೆಯೇನೂ ತಿಳಿದಿಲ್ಲ. ಅವರ ಗ್ರಂಥದಿಂದ ಕೆಲವು ವಿಷಯಗಳನ್ನು ಇಲ್ಲಿ ಸಂಗ್ರಹಿಸಿರುತ್ತಾರೆಂದು ಟೀಕೆಯಿಂದ ತಿಳಿದುಬಂದಿದೆ. ಇವೇ ಆಚಾರ್ಯರ ವಾಕ್ಯಗಳು ಮಾಂಡೂಕ್ಯ, ಬೃಹದಾರಣ್ಯಕ– ಇವುಗಳ ಭಾಷ್ಯದಲ್ಲಿ ಉದಾಹೃತವಾಗಿರುವದನ್ನು ನೋಡಿದರೆ ಇವರು ಅದ್ವೈತಿಗಳೆಂಬುದು ಸ್ಫುಟವಾಗುವದು. ಶ್ರೀರಾಮಾನುಜಾಚಾರ್ಯರು ಉದಾಹರಿಸಿ ರುವ ದ್ರವಿಡಾಚಾರ್ಯರು ಬೇರೆ ಎಂಬುವನ್ನು "ವೇದಾರ್ಥಸಂಗ್ರಹ"ದ ಭೂಮಿಕೆಯಲ್ಲಿ ನಾವು ಸ್ಪಷ್ಟಗೊಳಿಸಿರುವೆವು.

2. ೧೨೧, ೧೪೨, ೧೪೫, ೪೧೪, ೩೪೮, ೪೮೨, ೬೧೬, ೫೯೦, ೬೩೦, ೬೨೮, ೭೦೫, ೮೬೫, ೯೬೩, ೧೦೨೪ –ಮುಂತಾದ ಪುಟಗಳಲ್ಲಿ.

ಬಳಿಕ **ಸಮಸ್ತಸಾಮದ** ಉಪಾಸನೆಗಳನ್ನು ಹೇಳಿದೆ, ಸಮಸ್ತಸಾಮವನ್ನು ಪಾಂಚಭಕ್ತಿಕವೆಂದೂ ಸಾಪ್ತಭಕ್ತಿಕವೆಂದೂ ವಿಂಗಡಿಸಿಕೊಂಡು ಬೇರೆಬೇರೆಯ ಪ್ರಕಾರದ ಉಪಾಸನೆಗಳನ್ನು ಹೇಳಿದೆ.[1] ಇದಾದ ಬಳಿಕ ಉದ್ಗಾತೃವಿಗೆ ಗಾನ ವಿಶೇಷಗಳಲ್ಲಿರಬೇಕಾದ ಗಾನವಿಶೇಷಗಳ ಮತ್ತು ಸ್ವರಾದಿವರ್ಣಗಳ ವಿಷಯದ ಭಾವನೆಯನ್ನು ಹೇಳಿದೆ. ಇದಾದ ಮೇಲೆ ಪ್ರಾಸಂಗಿಕವಾಗಿ ಪರಮಾತ್ಮಪ್ರತೀಕ ವಾದ **ಓಂಕಾರಮಾತ್ರದ ಉಪಾಸನೆ**ಯನ್ನು ಹೇಳಿದೆ ಆ ಬಳಿಕ **ಯಜ್ಞಾಂಗ** ಭೂತವಾದ ಸಾಮಹೋಮಾದಿವಿಜ್ಞಾನವನ್ನು ತಿಳಿಸಿದೆ. ಅನಂತರ **ಯಜ್ಞದ ಫಲ**ವಾದ ಆದಿತ್ಯನ ಮಧುವಿದ್ಯೆ ಎಂಬ ಉಪಾಸನೆಯನ್ನು ಹೇಳಿದೆ, ಹೀಗೆ ಆದಿತ್ಯನ ಮೂಲಕ ಬ್ರಹ್ಮೋಪಾಸನೆಯನ್ನು ಹೇಳಿದ ಮೇಲೆ ಛಂದಸ್ಸುಗಳಲ್ಲೆಲ್ಲ ಶ್ರೇಷ್ಠವೆನಿಸಿರುವ **ಗಾಯತ್ರಿ**ಯ ಮೂಲಕವೂ ಅದೇ ಬ್ರಹ್ಮದ ಉಪಾಸನೆಯನ್ನು ಹೇಳಿದೆ ಆ ಬಳಿಕ ಅದೇ ಬ್ರಹ್ಮವನ್ನು ಮನೋಮಯತ್ವಾದಿವಿಶಿಷ್ಟಶಕ್ತಿ ಗಳಿಂದೊಡಗೂಡಿ ಉಪಾಸನೆಮಾಡುವ ಬಗೆಯನ್ನು ತಿಳಿಸಿದೆ. ಇದರ ಮುಂದೆ ಬ್ರಹ್ಮದ ಏಕದೇಶವಾಗಿ ಉಪದೇಶಿಸಿದ ಮನಆಕಾಶಗಳನ್ನು **ಸಮಸ್ತಬ್ರಹ್ಮ ದೃಷ್ಟಿ**ಯಿಂದ ಉಪಾಸನೆಮಾಡಬೇಕೆಂದು ವಿಧಿಸಿದೆ; ಅಲ್ಲಿ ಚತುಷ್ಪಾದ್ಬ್ರಹ್ಮನ ಪಾದವೆಂದು ಹೇಳಿದ್ದ ಆದಿತ್ಯನನ್ನು ಸಕಲಬ್ರಹ್ಮದೃಷ್ಟಿಯಿಂದ ಉಪಾಸನೆಮಾಡ ಬೇಕೆಂದು ಆಮೇಲೆ ತಿಳಿಸಿದೆ; ಹೀಗೆಯೇ ಬ್ರಹ್ಮದ ಪಾದಗಳೆಂದು ಮೊದಲು ಹೇಳಿದ್ದ ವಾಯುಪ್ರಾಣಗಳಲ್ಲಿ ನೇರಾಗಿ ಬ್ರಹ್ಮದೃಷ್ಟಿಯನ್ನು ವಿಧಿಸಿದೆ. ಆಮೇಲೆ ಇಡಿಯ ಜಗತ್ತನ್ನು ಹದಿನಾರುಕಲೆಗಳಾಗಿ ವಿಂಗಡಿಸಿ **ಷೋಡಶಕಲಬ್ರಹ್ಮವಿದ್ಯೆ** ಯನ್ನು ಉಪದೇಶಿಸಿದೆ ಮತ್ತೆ ಯಜ್ಞದ ಅಗ್ನಿಗಳ ಮೂಲಕ **ಅಕ್ಷಿಪುರುಷ** ನಾದ ದೃಷ್ಟಿದ್ರಷ್ಟೃವೇ ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ಬೋಧಿಸಿದೆ. ಆ ಬಳಿಕ **ಪಂಚಾಗ್ನಿವಿದ್ಯೆ**ಯಿಂದ ಗೃಹಸ್ಥರಿಗೂ ಹಿರಣ್ಯಗರ್ಭಾದ್ಯುಪಾಸಕರಿಗೂ ಉತ್ತರಮಾರ್ಗವನ್ನು ಅನುವಾದಮಾಡಿಕೊಂಡು ಕೇವಲಕರ್ಮಿಗಳಿಗೆ ದಕ್ಷಿಣ ಮಾರ್ಗಗತಿಯನ್ನೂ ಮಿಕ್ಕವರಿಗೆ ಕ್ಷುದ್ರಜಂತುಗಳ ಜನ್ಮದ ಪ್ರಾಪ್ತಿಯನ್ನೂ ವನ್ನು ವೈರಾಗ್ಯಪ್ರಾಪ್ತಿಗಾಗಿ ಬೋಧಿಸಿ ಮುಂದೆ ಸರ್ವಜಗದಾತ್ಮನಾದ ವೈಶ್ವಾನರನ ಉಪಾಸನೆಯನ್ನು ಹೇಳಿದೆ. ಈ ಕ್ರಮವನ್ನು ಮನಸ್ಸಿನಲ್ಲಿ ಹೊರಳಿಸಿ ನೋಡಿದರೆ ಕರ್ಮದ ಅಂಗವಾದ ಸಾಮವನ್ನೂ ಛಂದಸ್ಸನ್ನೂ ಕರ್ಮವನ್ನೂ ಫಲವನ್ನೂ ನೆಪಮಾಡಿಕೊಂಡು ಉಪಾಸನೆಗಳನ್ನು ವಿಧಿಸುತ್ತಾ ಕ್ರಮಕ್ರಮವಾಗಿ ಉಪಾಸ್ಯ ಸ್ವರೂಪವನ್ನು ಹೆಚ್ಚುಹೆಚ್ಚಾಗಿ ವ್ಯಾಪಕವಾಗಿ ತಿಳಿಸುತ್ತಾಹೋಗಿದೆ ಎಂಬುದು ಜಿಜ್ಞಾಸುಗಳ ಮನಸ್ಸಿನಲ್ಲಿ ಮಿಂಚದೆ ಇರಲಾರದು

ಈ ಉಪಾಸನೆಗಳ ವಿಷಯದಲ್ಲಿ ಸೂಕ್ಷ್ಮಮತಿಗಳಾದ ಜಿಜ್ಞಾಸುಗಳಿಗೆ ಹೊಳೆಯಬಹುದಾದ ಮತ್ತೊಂದು ವಿಷಯವೇನೆಂದರೆ ಅಧ್ಯಾತ್ಮಕರ್ಮವು ಬಹಿ

---

1. ಭಕ್ತಿಗಳ ವಿಷಯಕ್ಕೆ ಪರಿಶಿಷ್ಟವನ್ನು ನೋಡಿ.

ದೃಷ್ಟಿಯವರಿಗೆ ವಿಹಿತವಾಗಿದ್ದರೂ ಆದೇ ಕರ್ಮಕ್ಕೆ ಅಂಗವಾಗಿ ಉದ್ಗಾತೃವೇ ಮುಂತಾದ ಋತ್ವಿಜರು ಅಂತರ್ಮುಖರಾಗಿದ್ದರೆ ಉಪಾಸನೆಯನ್ನೂ ಮಾಡಿ ಕರ್ಮ ಫಲಕ್ಕಿಂತ ಹೆಚ್ಚಿನ ಫಲವನ್ನು ಸಂಪಾದಿಸಿಕೊಳ್ಳಬಹುದೆಂಬುದನ್ನು ಇಲ್ಲಿ ತೋರಿಸಿ ಕೊಟ್ಟಿರುತ್ತದೆ. ಇಷ್ಟೇ ಅಲ್ಲ, ಓಂಕಾರ, ಉದ್ಗೀಥ, ಗಾಯತ್ರೀಛಂದಸ್ಸು, ಕರ್ಮ ಫಲವಾದ ಆದಿತ್ಯ, ಸಾಮಗಾನಕ್ಕೆ ಬೇಕಾದ ಪ್ರಾಣ- ಇವುಗಳಿಗೆ ಪರಮಾತ್ಮನನ್ನು ಸಂಬಂಧಿಸಿ ವಿಶಿಷ್ಟವಾದ ಗುಣಗಳೂ ಶಕ್ತಿಗಳೂ ಇರುವ ಆ ಈಶ್ವರನೆಂಬ ದೃಷ್ಟಿ ಯಿಂದ ಉಪಾಸನೆಮಾಡಬೇಕೆಂದು ತಿಳಿಸಿ ಕರ್ಮವನ್ನು ಕರ್ಮಯೋಗವಾಗಿ ಮಾರ್ಪಡಿಸಿರುವ ಕೌಶಲವೂ ಇಲ್ಲಿ ಕಾಣಬರುತ್ತಿದೆ. ಹೀಗೆ ಕರ್ಮಗಳಿಂದ ಈಶ್ವರೋಪಾಸನೆಗೆ ಮನಸ್ಸನ್ನು ತಿರುಗಿಸಿದ ಬಳಿಕವೇ ಕೇವಲೋಪಾಸನೆಗಳನ್ನು ವಿಧಿಸಿರುವದರಿಂದ ಅಧಿಕಾರಿಗಳನ್ನು ಸೋಪಾನಕ್ರಮದಿಂದ ಈಶ್ವರೋಪಾಸನೆಗೆ ಅಣಿಮಾಡುವದೇ ಉಪನಿಷತ್ತಿನ ಗುರಿ ಎಂಬುದು ವಿಚಾರಶೀಲರಿಗೆ ಮನವರಿಕೆ ಯಾಗುವಂತಿದೆ.

## ಜ್ಞಾನವೂ ಉಪಾಸನೆಯೂ

ಆಚಾರ್ಯರ ಸಿದ್ಧಾಂತದಂತೆ ಕರ್ಮನಿರಪೇಕ್ಷವಾದ ಅದ್ವೈತಾತ್ಮವಿಜ್ಞಾನ ವೇ ಪರಮಪುರುಷಾರ್ಥಕ್ಕೆ ಸಾಧನವಾಗಿರುತ್ತದೆ ಹೀಗಿರುವಲ್ಲಿ ಉಪನಿಷತ್ತು ಗಳಲ್ಲಿಯೂ ಕರ್ಮೋಪಾಸನೆಗಳನ್ನು ಏತಕ್ಕೆ ಹೇಳಿರುತ್ತದೆ ? -ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದು ಅದ್ವೈತಸಂಪ್ರದಾಯದ ದೃಷ್ಟಿಯಿಂತೆ ಅತ್ಯಂತ ಅವಶ್ಯ ವಾಗಿರುತ್ತದೆ

ಅಧ್ಯಯನ, ಅಗ್ನಿಹೋತ್ರಾದಿಗಳು- ಮುಂತಾದ ಕರ್ಮಗಳನ್ನು ಮಾಡು ತ್ತಿರಬೇಕೆಂದು ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ ಒತ್ತಿಹೇಳಿರುತ್ತದೆ. ಆ ಉಪನಿಷತ್ತಿನಲ್ಲಿ ಕರ್ಮಗಳನ್ನು ಮಾಡಬೇಕೆಂದು ಎರಡು ಸಾರಿ ಉಪದೇಶಿಸಿರು ವದಕ್ಕೆ ಕಾರಣವೇನೆಂಬ ಪ್ರಶ್ನೆಗೆ ಭಾಷ್ಯಕಾರರು ಹೀಗೆ ಉತ್ತರವನ್ನು ಬರೆದಿರು ತ್ತಾರೆ : "ಋತಾದೀನಾಂ ಪೂರ್ವತ್ರೋಪದೇಶ ಆನರ್ಥಕ್ಯಪರಿಹಾರಾರ್ಥಃ । ಇಹ ತು ಜ್ಞಾನೋತ್ಪತ್ತ್ಯರ್ಥತ್ವಾತ್ ಕರ್ತವ್ಯತಾನಿಯಮಾರ್ಥಃ" (ಭಾ. ಭಾ. ೬೦) ಕರ್ಮಗಳನ್ನು ಮೊದಲು ಉಪದೇಶಿಸಿರುವದು ಕರ್ಮಗಳಿಗೆ ಆನರ್ಥಕ್ಯವನ್ನು ಪರಿ ಹರಿಸುವದಕ್ಕೆ ; ಎಂದರೆ ಉಪಾಸನೆಯಿಂದಲೇ ಸ್ವಾರಾಜ್ಯರೂಪವಾದ ಮುಕ್ತಿ ಯು ದೊರಕುವದರಿಂದ ಕರ್ಮವು ವ್ಯರ್ಥ- ಎಂದು ಶಂಕಿಸಬಾರದೆಂಬುದನ್ನು ತಿಳಿಸುವದಕ್ಕೆ. ಮತ್ತೆ ಎರಡನೆಯ ಸಲ ಕರ್ಮಗಳನ್ನು ಉಪದೇಶಿಸಿರುವದು ಕರ್ಮಗಳು ಚಿತ್ತಶುದ್ಧಿಯ ಮೂಲಕವಾಗಿ ಜ್ಞಾನೋತ್ಪತ್ತಿಗೆ ಕಾರಣವಾಗಿರುವದ ರಿಂದ ಅವಶ್ಯವಾಗಿ ಅವನ್ನು ಮಾಡಬೇಕು- ಎಂಬುದನ್ನು ತಿಳಿಸುವದಕ್ಕೆ ಎಂದು

ಆ ಭಾಷ್ಯವಾಕ್ಯದ ಅಭಿಪ್ರಾಯ. ಇದು ಕರ್ಮಗಳಿಗೂ ಜ್ಞಾನಕ್ಕೂ ಇರುವ ಸಂಬಂಧವನ್ನು ಕುರಿತ ವಿಚಾರವು.

ಈ ಛಾಂದೋಗ್ಯೋಪನಿಷತ್ತಿನಲ್ಲಿ ಬಲು ಹೆಚ್ಚಿನ ಭಾಗವನ್ನು ಉಪಾಸನೆಗಳಿಗೇ ವಿನಿಯೋಗಿಸಿರುವದೇಕೆ? -ಎಂಬ ಪ್ರಶ್ನೆಗೆ ಆಚಾರ್ಯರು ಈ ಉತ್ತರವನ್ನು ಬರೆದಿರುತ್ತಾರೆ. 'ರಹಸ್ಯಸಾಮಾನ್ಯಾತ್, ಮನೋವೃತ್ತಿಸಾಮಾನ್ಯಾಚ್ಚ' (ಛಾ. ಭಾ. ೫) ಈ ಎರಡೂ ಕರ್ಮಕ್ಕೆ ಹೋಲಿಸಿದರೆ ರಹಸ್ಯವಿದ್ಯೆಗಳಾಗಿರುತ್ತವೆ, ಮತ್ತು ಎರಡೂ ಮನೋವೃತ್ತಿಗಳಾಗಿರುತ್ತವೆ ಆದ್ದರಿಂದ ಉಪನಿಷತ್ತಿನಲ್ಲಿಯೇ ಉಪಾಸನೆಗಳನ್ನು ಹೇಳಿರುತ್ತದೆ ಎಂಬುದು ವಾಕ್ಯದ ಅಭಿಪ್ರಾಯ. ತಟ್ಟನೆ ನೋಡಿದರೆ ಉಪಾಸನೆಗೂ ಜ್ಞಾನಕ್ಕೂ ರೂಪದಲ್ಲಿರುವ ಸಾಮಾನ್ಯವೊಂದೇ ಉಪಾಸನೆಯನ್ನು ಉಪನಿಷತ್ತಿನಲ್ಲಿ ಸೇರಿಸಿರುವದಕ್ಕೆ ಕಾರಣವೆಂದು ಕಾಣಿಸುತ್ತದೆ. ಆದರೆ ಆಚಾರ್ಯರು ಮತ್ತೊಂದು ವಾಕ್ಯದಿಂದ ತಮ್ಮ ಅಭಿಪ್ರಾಯವನ್ನು ಸ್ಪಷ್ಟಗೊಳಿಸಿರುತ್ತಾರೆ: "ತಾನ್ಯೇತಾನಿ ಉಪಾಸನಾನಿ ಸತ್ತ್ವಶುದ್ಧಿಕರತ್ವೇನ ವಸ್ತುತತ್ತ್ವಾವಭಾಸಕತ್ವಾತ್ ಅದ್ವೈತಜ್ಞಾನೋಪಕಾರಕಾಣಿ ಆಲಮ್ಬನವಿಷಯತ್ವಾತ್ ಸುಸಾಧ್ಯಾನಿ ಚ ಇತಿ ಪೂರ್ವಮ್ ಉಪನ್ಯಸ್ಯನ್ತೇ" (ಛಾ. ಭಾ. ೬) ಈ ಉಪಾ**ಸನೆಗಳು ಸತ್ತ್ವಶುದ್ಧಿಯನ್ನುಂಟುಮಾಡಿ ವಸ್ತುತತ್ತ್ವವನ್ನು ತೋರಿಸಿಕೊಡುವದರಿಂದ ಅದ್ವೈತಜ್ಞಾನಕ್ಕೆ ಉಪಕಾರಕವಾಗಿರುತ್ತವೆ; ಆಲಂಬನವನ್ನಿಟ್ಟುಕೊಂಡಿರುವ ವೃತ್ತಿರೂಪವಾಗಿರುವದರಿಂದ ಇವುಗಳನ್ನು ಸುಲಭವಾಗಿ ಸಾಧಿಸಿಕೊಳ್ಳಲೂಬಹುದು. ಆದ್ದರಿಂದ ಜ್ಞಾನವನ್ನು ಹೇಳುವದಕ್ಕಿಂತ ಮೊದಲು ಇವನ್ನು ಹೇಳಿರುತ್ತದೆ**- ಎಂಬುದು ವಾಕ್ಯದ ಅಭಿಪ್ರಾಯ. ಕರ್ಮಗಳಿಂದಾಗುವ ಚಿತ್ತಶುದ್ಧಿಯು ಬಾಹ್ಯವಿಷಯದ ಚಿಂತೆಯನ್ನು ತಪ್ಪಿಸುತ್ತದೆ; ಉಪಾಸನೆಯಿಂದಾಗುವ ಚಿತ್ತಶುದ್ಧಿಯು ಚಿತ್ತದ ಕಾಲುಷ್ಯವನ್ನು ಕಳೆಯುವದರ ಜೊತೆಗೆ ಅದರ ಚಾಂಚಲ್ಯವನ್ನೂ ಕಳೆದು ಪ್ರತ್ಯಗಾತ್ಮನನ್ನು ಅರಿತುಕೊಳ್ಳುವದಕ್ಕೆ ಅದನ್ನು ಅಣಿಗೊಳಿಸುತ್ತದೆ. ಭಗವದ್ಗೀತೆಯಲ್ಲಿ ಹೇಳಿರುವ ಕರ್ಮಯೋಗ, ಧ್ಯಾನಯೋಗ- ಇವುಗಳ ಸಂಬಂಧವನ್ನು ಇಲ್ಲಿ ವಾಚಕರು ಮನದಂದುಕೊಳ್ಳಬೇಕು.

## ಜ್ಞಾನೋಪಾಸನೆಗಳ ತಾರತಮ್ಯ

ಜ್ಞಾನೋಪಾಸನೆಗಳೆರಡೂ ಮನೋವೃತ್ತಿಗಳೇ ಆದರೂ: ಇವೆರಡಕ್ಕೂ ತಾರತಮ್ಯವಿದೆ. ಭಾಷ್ಯಕಾರರು ಇದನ್ನು ಹೀಗೆ ತಿಳಿಸಿಕೊಟ್ಟಿರುತ್ತಾರೆ: "ಸ್ವಾಭಾವಿಕಸ್ಯ ಆತ್ಮನಿ ಅವಿಕ್ರಿಯೇ ಅಧ್ಯಾರೋಪಿತಸ್ಯ ಕರ್ತ್ರಾದಿಕಾರಕಕ್ರಿಯಾಫಲಭೇದವಿಜ್ಞಾನಸ್ಯ ನಿವರ್ತಕಮ್ ಅದ್ವೈತವಿಜ್ಞಾನಮ್। ರಜ್ಜ್ವಾದಾವಿವ ಸರ್ಪಾದ್ಯಥಾ

ರೋಪಲಕ್ಷಣಜ್ಞಾನಸ್ಯ ರಜ್ಜ್ವಾದಿಸ್ವರೂಪನಿಶ್ಚಯಃ ಪ್ರಕಾಶನಿಮಿತ್ತಃ । ಉಪಾಸನಂ ತು ಯಥಾಶಾಸ್ತ್ರಸಮರ್ಪಿತಂ ಕಿಂಚಿದಾಲಂಬನಮ್ ಉಪಾದಾಯ ತಸ್ಮಿನ್ ಸಮಾನಚಿತ್ತವೃತ್ತಿಸಂತಾನಕರಣಂ ತದ್ವಿಲಕ್ಷಣಪ್ರತ್ಯಯಾನಂತರಿತಮ್ ಇತಿ ವಿಶೇಷಃ ॥" (ಛಾ. ಭಾ. ೫) ಅದ್ವೈತವಿಜ್ಞಾನವೆಂದರೆ ಆತ್ಮನು ಇರುವ ರೂಪದಿಂದ ಅವನನ್ನು ತಿಳಿಯಿಸಿಕೊಡುವ ಅರಿವು, ಮಿಕ್ಕ ಅರಿವುಗಳಂತೆಯೇ ಅದು ತನ್ನ ವಿಷಯದ ಅಜ್ಞಾನವನ್ನು ತೊಲಗಿಸುತ್ತದೆ. **ನಮ್ಮ ಆತ್ಮನು ಕರ್ತೃರೂಪನು, ಕಾರಕಗಳಿಂದ ಕ್ರಿಯೆಯನ್ನು ಮಾಡಿ ಫಲವನ್ನು ಪಡೆದುಕೊಳ್ಳುವ ಸ್ವಭಾವದವನು -ಎಂಬುದು ಲೋಕದ ಜನರ ನಂಬಿಕೆ. ಇದು ತಪ್ಪುತಿಳಿವಳಿಕೆಯೆಂಬುದನ್ನು ತೋರಿಸಿಕೊಟ್ಟು ಇದನ್ನು ತೊಲಗಿಸಿ ಆತ್ಮನು ಅದ್ವಿತೀಯನೇ ಎಂಬುದನ್ನು ತಿಳಿಸಿಕೊಡುವದೇ ವೇದಾಂತಜ್ಞಾನವೆಂದೂ** ಆಚಾರ್ಯರ ಅಭಿಪ್ರಾಯವು. ಇನ್ನು **ಉಪಾಸನೆ ಎಂದರೆ ಶಾಸ್ತ್ರದಲ್ಲಿ ತಿಳಿಸಿಕೊಟ್ಟಿರುವ ಒಂದಾನೊಂದು ಆಲಂಬನವನ್ನು ಮನಸ್ಸಿಗೆ ತಂದುಕೊಂಡು ಅದನ್ನೇ ಎಡಬಿಡದೆ -ಮತ್ತೊಂದು ಬಗೆಯ ಪ್ರತ್ಯಯವನ್ನು ನಡುವೆ ಬರಗೊಡದೆ ಚಿತ್ತವೃತ್ತಿಯನ್ನು ಧಾರಾಕಾರವಾಗಿ ಮಾಡುವದು.** ಇದರಲ್ಲಿ ವಸ್ತುವಿನ ಸ್ವರೂಪವು ಹೇಗೇ ಇರಲಿ, ಶಾಸ್ತ್ರದಲ್ಲಿ ವಿಧಿಸಿರುವ ರೂಪದಿಂದಲೇ ಅದನ್ನು ಭಾವಿಸುವದು ಮುಖ್ಯವು. ಈ ಕ್ರಿಯೆಯು ಭಾವನೆಮಾಡುವ ಕರ್ತೃವಿಗೆ ಅಧೀನವಾಗಿರುತ್ತದೆ ಎಂಬುದು ಆಚಾರ್ಯರ ಆಶಯ.

## ಜ್ಞೇಯೋಪಾಸ್ಯಬ್ರಹ್ಮಗಳಿಗೆ ಸಂಬಂಧ

ಉಪಾಸನೆಗೆ ಶಾಸ್ತ್ರೋಕ್ತವಾದ **ಬೇರೆಬೇರೆಯ** ಆಲಂಬನಗಳು ಇರಬಹುದೆಂದು ಮೇಲೆ ನಿಶ್ಚಯವಾಯಿತಷ್ಟೆ. ಇಂಥ ಆಲಂಬನಗಳು ಓಂಕಾರಾದಿಶಬ್ದರೂಪವಾಗಿರಬಹುದು, ಅಗ್ನಿಯೇ ಮುಂತಾದ ಕರ್ಮಾಂಗವಸ್ತುಗಳಾಗಿರಬಹುದು; ಮನಸ್ಸು ಮುಂತಾದ ಅಧ್ಯಾತ್ಮವಸ್ತುವಾಗಿರಬಹುದು; ಆಕಾಶ, ಆದಿತ್ಯ-ಮುಂತಾದ ಅಧಿದೈವತವಸ್ತುಗಳಾಗಿರಬಹುದು, ಇಷ್ಟೇ ಅಲ್ಲ; ಬ್ರಹ್ಮವೂ ಆಗಿರಬಹುದು. ಇದನ್ನು ಆಚಾರ್ಯರು 'ತತ್ರೈತಸ್ಮಿನ್ ಅದ್ವೈತವಿದ್ಯಾಪ್ರಕರಣೇ ಅಭ್ಯುದಯಸಾಧನಾನಿ ಉಪಾಸನಾನಿ ಉಚ್ಯನ್ತೇ । ಕೈವಲ್ಯಸಂನಿಕೃಷ್ಟಫಲಾನಿ ಚ ಅದ್ವೈತಾತ್ ಈಷದ್ವಿಕೃತಬ್ರಹ್ಮವಿಷಯಾಣಿ 'ಮನೋಮಯಃ ಪ್ರಾಣಶರೀರಃ' (೩-೧೪-೨) ಇತ್ಯಾದೀನಿ । ಕರ್ಮಸಮೃದ್ಧಿಫಲಾನಿ ಚ ಕರ್ಮಾಙ್ಗಸಂಬನ್ಧೀನಿ।" (ಛಾ.ಭಾ. ೫) ಎಂಬ ವಾಕ್ಯದಿಂದ ತಿಳಿಸಿರುತ್ತಾರೆ. ಇಲ್ಲಿ ಹೇಳಿರುವ ಫಲಗಳು ಕರ್ಮಸಮೃದ್ಧಿ, ಅಭ್ಯುದಯ- ಇವೇ ಅಲ್ಲದೆ '**ಕೈವಲ್ಯಕ್ಕೆ ಸಮೀಪವಾಗಿರುವ ಫಲವೂ**' ಉಂಟು ಎಂದು ಆಚಾರ್ಯರು ಹೇಳಿರುತ್ತಾರೆಂಬುವನ್ನು ಲಕ್ಷಿಸತಕ್ಕದ್ದಾಗಿದೆ. ಜ್ಞಾನ

ದಿಂದಾಗುವ ಕೈವಲ್ಯಕ್ಕೆ ಹತ್ತಿರವಾದ ಫಲವು ಉಪಾಸನೆಯಿಂದ ಹೇಗೆ ದೊರೆಯುತ್ತದೆ ?- ಎಂಬುದನ್ನು ವಿಮರ್ಶಿಸತಕ್ಕದ್ದಿದೆ. ಏಕೆಂದರೆ ಉಪಾಸನೆಯಿಂದ ಸಿಕ್ಕುವದು ಬ್ರಹ್ಮಲೋಕ, ಅದು ಕಾರಕಗಳಿಂದ ಕ್ರಿಯೆಯನ್ನು ಮಾಡಿ ಅರ್ಚಿರಾದಿಮಾರ್ಗದಿಂದ ಪಡೆಯುವ ಫಲವು. ಹೀಗಿರುವಲ್ಲಿ ಕ್ರಿಯಾಕಾರಕಫಲಗಳಿಲ್ಲದ ಅದ್ವೈತಬ್ರಹ್ಮರೂಪವಾದ ಕೈವಲ್ಯಕ್ಕೆ ಅದು ಹೇಗೆ ಸಮೀಪವಾಗಿದ್ದೀತು?-ಎಂಬ ಸಂಶಯವು ಮನಸ್ಸಿನಲ್ಲಿ ಎದ್ದುಕೊಳ್ಳುವದು ಸಹಜವಾಗಿದೆ.

ಇದಕ್ಕೆ ಉತ್ತರವನ್ನು ವೇದಾಂತಮೀಮಾಂಸಾಸೂತ್ರದಲ್ಲಿ ಕಂಡುಕೊಳ್ಳಬೇಕಾಗಿದೆ. ಬ್ರಹ್ಮವು ಕಾರ್ಯರೂಪವಾಗಿರುವ **ಅಪರಬ್ರಹ್ಮ**ವೆಂದೂ ಅವಿಕೃತವಾದ ಮುಖ್ಯಬ್ರಹ್ಮ ಅಥವಾ **ಪರಬ್ರಹ್ಮ**ವೆಂದೂ ಎರಡು ರೂಪದಲ್ಲಿರುವದು (ಸೂ. ಭಾ ೪-೩-೭, ಭಾ ಭಾ ೫೭೩). ಉಪಾಸಕರು ಕಾರ್ಯಬ್ರಹ್ಮವನ್ನೇ ಅರ್ಚಿರಾದಿಮಾರ್ಗದಿಂದ ಹೋಗಿ ಮುಟ್ಟಿರುತ್ತಾರೆ. ಸಮಸ್ತಜಗತ್ತಿಗೂ ಜನ್ಮಾದಿಕಾರಣವಾಗಿರುವದೇ ಮುಖ್ಯಬ್ರಹ್ಮವಾದರೂ ಕಾರ್ಯಬ್ರಹ್ಮವನ್ನು ಬ್ರಹ್ಮವೆಂದು ಕರೆಯುವದು ತಪ್ಪಲ್ಲ, ಏಕೆಂದರೆ ವಿಶುದ್ಧವಾದ ಉಪಾಧಿಗಳ ಸಂಬಂಧವುಳ್ಳದ್ದಾಗಿ ನಾಮರೂಪಕರ್ಮಗಳಾದ ಮನೋಮಯತ್ವಾದಿಧರ್ಮಗಳಿಂದ ಉಪಾಸನೆಮಾಡಬೇಕೆಂದು ಶಾಸ್ತ್ರದಲ್ಲಿ ವಿಹಿತವಾಗಿರುವಾಗ ಆ ಪರಬ್ರಹ್ಮವೇ ಅಪರಬ್ರಹ್ಮವೆಂಬ ಹೆಸರಿಗೆ ತಕ್ಕದ್ದಾಗುತ್ತದೆ. ಆದ್ದರಿಂದ ಅಪರಬ್ರಹ್ಮವು ಕಾರಣಬ್ರಹ್ಮಕ್ಕೆ ಸಮೀಪವಾಗಿರುತ್ತದೆ (ಸೂ ಭಾ. ೪-೩-೯, ಭಾ. ಭಾ. ೫೭೬) ಇನ್ನು ಕಾರ್ಯಬ್ರಹ್ಮವನ್ನು ಪಡೆದವರಿಗೆ ಆಗುವ ಫಲವು ಕೈವಲ್ಯಕ್ಕೆ ಹತ್ತಿರವಿರುವದು ಹೇಗೆಂದರೆ ಕಾರ್ಯಬ್ರಹ್ಮವು ಪ್ರಲಯವಾಗುವ ಕಾಲವು ಬಂದಾಗ **ಅಲ್ಲಿಯೇ ಸಮ್ಯಗ್ಜ್ಞಾನವನ್ನು ಪಡೆದುಕೊಂಡವರು ಅಪರಬ್ರಹ್ಮವೆನಿಸುವ ಹಿರಣ್ಯಗರ್ಭನೊಡನೆ ಅದ್ವೈತಮುಕ್ತಿಯನ್ನು ಪಡೆದುಕೊಳ್ಳುತ್ತಾರೆ.** ಇದಕ್ಕೆ **ಕ್ರಮಮುಕ್ತಿ** ಎಂದು ಹೆಸರು. ಈ ದೃಷ್ಟಿಯಿಂದ ಆ ಫಲವು ಕೈವಲ್ಯಕ್ಕೆ ಹತ್ತಿರವೆನಿಸುತ್ತದೆ.

ಯಾರಿಗೆ ಬ್ರಹ್ಮಲೋಕದಲ್ಲಿಯೇ ಸಮ್ಯಗ್ಜ್ಞಾನವಾಗುವದಿಲ್ಲವೋ ಅವರು ಈ ಕಲ್ಪವಾದ ಬಳಿಕ ಮತ್ತೊಂದು ಕಲ್ಪದಲ್ಲಿ ಸಂಸಾರಕ್ಕೆ ಮರಳಿ ಬಂದೇತೀರುತ್ತಾರೆ ಎಂಬುದನ್ನು ಈ ಛಾಂದೋಗ್ಯೋಪನಿಷತ್ತಿನ ಭಾಷ್ಯದಲ್ಲಿಯೇ (೫-೧೦-೨ ಭಾ. ಭಾ ೪೦೫ರಲ್ಲಿ), ಸ್ಪಷ್ಟಪಡಿಸಿರುತ್ತದೆ.

## ಉಪನಿಷತ್ತಿನಲ್ಲಿ ನಿರ್ಗುಣಬ್ರಹ್ಮವಿಚಾರವಿದೆಯೆ?

ಮೇಲೆ ಹೇಳಿರುವಂತೆ ಒಂದೇ ಬ್ರಹ್ಮವನ್ನೇ ಉಪಾಸನೆಗಾಗಿ ಸಗುಣವೆಂದೂ ಜ್ಞಾನಕ್ಕಾಗಿ ನಿರ್ಗುಣವೆಂದೂ ಹೇಳಿರುತ್ತದೆ ಎಂಬುದು ಆಚಾರ್ಯರ ಅಭಿಪ್ರಾಯ

ವಷ್ಟೆ. ಈ ವಿಷಯದಲ್ಲಿ ಈಗಿನ ವೇದಾಂತಿಗಳೆಲ್ಲರಲ್ಲಿಯೂ ಒಂದೇ ಅಭಿಪ್ರಾಯ ವಿರುವದಿಲ್ಲ ಉಪನಿಷತ್ತುಗಳಲ್ಲಿ ಒಂದೇ ಬ್ರಹ್ಮವನ್ನು ಹೇಳಿರುವದು ನಿಜ ವಾದರೂ ಅಲ್ಲಿ ಪ್ರತಿಪಾದಿತವಾಗಿರುವದು ಸಗುಣಬ್ರಹ್ಮವೇ ಆಗಿರುತ್ತದೆ- ಎಂದು ಅಭಿಪ್ರಾಯಪಡುವ ಭಾಷ್ಯಕಾರರುಗಳೂ ಇರುತ್ತಾರೆ. ಅವರನ್ನು ಅನುಸರಿಸುವವರು ಈ ಉಪನಿಷತ್ತಿನಲ್ಲಿ ಹೇಳಿರುವ 'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ' (೩-೧೪-೧) ಮುಂತಾದ ಕಡೆಯಲ್ಲಿಯೇ ಅಲ್ಲದೆ 'ಸದೇವ ಸೋಮ್ಯೇ ದದಮಗ್ರ ಆಸೀತ್' (೬-೨-೧) ಎಂಬ ಆರುಣಿವಾಕ್ಯದಲ್ಲಿಯೂ 'ಯ ಆತ್ಮಾಽಪಹತ ಪಾಪ್ಮಾ' (೮-೭-೧) ಎಂಬ ಪ್ರಜಾಪತಿವಾಕ್ಯದಲ್ಲಿಯೂ ಸಗುಣವಿದ್ಯೆಯನ್ನೇ ಹೇಳಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ 'ಸದೇವ' ಎಂಬಲ್ಲಿ ಬ್ರಹ್ಮವು 'ನಾನು ಬಹುವಾಗುವೆನು, ಹುಟ್ಟುವೆನು'- ಎಂದು ಸಂಕಲ್ಪಿಸಿ ಜಗತ್ತನ್ನು ಸೃಷ್ಟಿಸಿರುತ್ತದೆ ಯೆಂದೂ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿರುವದೆಂದೂ ಸ್ಪಷ್ಟವಾಗಿ ಹೇಳಿರುವವರಿಂದ ಬ್ರಹ್ಮವು ಕಾರ್ಯಕಾರಣಾವಸ್ಥೆಗಳುಳ್ಳದ್ದೆಂದು ತಿಳಿಯುವದೂ ಪ್ರಕರಣಾಂತರದಲ್ಲಿ ಹೇಳಿರುವ ಸರ್ವಜ್ಞತ್ವಸರ್ವಶಕ್ತಿತ್ವಸರ್ವೇಶ್ವರತ್ವಾದಿಗುಣ ಗಳನ್ನೂ ಆ ಬ್ರಹ್ಮಕ್ಕೆ ಸೇರಿಸಿಕೊಳ್ಳುವದೂ ಯುಕ್ತವಾಗಿರುತ್ತದೆ ಎಂದು ಅವರು ಭಾವಿಸಿರುತ್ತಾರೆ. ದಹರವಿದ್ಯೆಯಲ್ಲಿ ಹೇಳಿರುವಂತೆಯೇ ಪ್ರಜಾಪತಿವಾಕ್ಯದಲ್ಲಿ ಸತ್ಯ ಕಾಮತ್ವಸತ್ಯಸಂಕಲ್ಪತ್ವಾದಿಗಳನ್ನು ಹೇಳಿರುವದರಿಂದಲೂ ಈ ಎರಡು ಸಂದರ್ಭ ಗಳಲ್ಲಿ ಹೇಳಿರುವ ಆತ್ಮವರ್ಣನೆಯು ಒಂದೇ ರೂಪವಾಗಿರುವದರಿಂದಲೂ ಈ ವಾಕ್ಯ ಗಳಲ್ಲಿ ಬೇರೆಬೇರೆಯ ಬ್ರಹ್ಮವನ್ನು ಹೇಳಿರುತ್ತದೆ ಎಂಬುದಕ್ಕೆ ಗಮಕವೇನೂ ಇಲ್ಲ ಎಂಬುದು ಅವರ ಅಭಿಪ್ರಾಯ. ಪ್ರತ್ಯಕ್ಷಾದಿಪ್ರಮಾಣಗಳಾಗಲಿ ಶಬ್ದಪ್ರಮಾಣ ವಾಗಲಿ ನಿರ್ವಿಶೇಷವಸ್ತುಗಳನ್ನು ತಿಳಿಸುವ ಯೋಗ್ಯತೆಯೇ ಇಲ್ಲದವಾಗಿರುವದ ರಿಂದ ನಿರ್ಗುಣವಾಕ್ಯಗಳೆಂದು ಅದ್ವೈತಿಗಳು ಎಣಿಸಿರುವ ವಾಕ್ಯಗಳಿಗೂ ಸಗುಣ ವಾಕ್ಯಗಳಿಗೆ ಅವಿರುದ್ಧವಾಗಿಯೇ ಅರ್ಥವನ್ನು ಮಾಡುವದು ಯುಕ್ತವಾಗಿದೆ ಎಂಬುದು ಅವರ ಆಶಯವಾಗಿದೆ.

ಮತಾಂತರದವರ ಸಿದ್ಧಾಂತವನ್ನು ವಿಮರ್ಶಿಸುವದರಿಂದ ಪ್ರಕೃತಭಾಷ್ಯವನ್ನು ಓದುವವರಿಗೆ ಯಾವ ಪ್ರಯೋಜನವೂ ಇರುವದಿಲ್ಲವಾದರೂ ಮತಾಂತರದವರು ಆಚಾರ್ಯರ ಭಾಷ್ಯವಿವರಣೆಗೆ ಅಂಟಿಸಿರುವ ದೋಷಗಳಿಗೆ ಪ್ರಸ್ಥಾನತ್ರಯಭಾಷ್ಯ ದಲ್ಲಿ ಯಾವ ಪರಿಹಾರವು ದೊರಕುತ್ತದೆ ಎಂಬುದನ್ನು ಸಂಗ್ರಹವಾಗಿ ತಿಳಿಸುವದ ರಿಂದ ಭಾಷ್ಯಾರ್ಥಚಿಂತಕರಿಗೆ ಪ್ರಯೋಜನವುಂಟು. ಆದ್ದರಿಂದ ಇಲ್ಲಿ ಈ ಉಪನಿ ಷತ್ತಿನ ಒಟ್ಟುತಾತ್ಪರ್ಯವನ್ನು ನಿರ್ಣಯಿಸುವದಕ್ಕೆ ಪ್ರಯತ್ನಿಸುವೆವು.

'ಅತ್ರ ಬ್ರಹ್ಮ ಸಮಶ್ನುತೇ' (ಕಾ. ೨-೩-೧೪), 'ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ. ೩-೨-೯) -ಎಂಬ ಶ್ರುತಿಗಳಲ್ಲಿ ಹೇಗೆ

ಬ್ರಹ್ಮಜ್ಞಾನದಿಂದ ಸಿಕ್ಕುವ ಬ್ರಹ್ಮಾತ್ಮರೂಪಕೈವಲ್ಯವು ಇಲ್ಲಿಯೇ ದೊರಕು ವದೆಂದು ಹೇಳಿದೆಯೋ ಹಾಗೆಯೇ ಇಲ್ಲಿಯೂ 'ತತ್ತ್ವಮಸಿ' ಎಂಬ ಬ್ರಹ್ಮಾತ್ಮೈಕ್ಯ ವನ್ನು ಅತ್ಯಂತಸ್ಪಷ್ಟವಾಗಿ ಹೇಳಿರುತ್ತದೆ ಪ್ರಜಾಪತಿವಾಕ್ಯದಲ್ಲಿ ಇಂದ್ರನು ತನಗೆ ಉಪದಿಷ್ಟವಾದ ಅರ್ಥವನ್ನು ವಿಮರ್ಶಿಸಿ 'ನಾಹಮತ್ರ ಭೋಗ್ಯಂ ಪಶ್ಯಾಮಿ' (೮-೯-೧, ೨, ೮-೧೦-೨, ೩೪, ೮-೧೧-೧, ೨) ಎಂದು ಮತ್ತೆಮತ್ತೆ ಹೇಳಿರು ತ್ತಾನೆ. 'ಈ ಜ್ಞಾನದಿಂದ ನನಗೆ ಯಾವ ಭೋಗ್ಯಫಲವೂ ಕಾಣಿಸುತ್ತಿಲ್ಲ' ಎಂದು ಹೇಳುವದು ದೃಷ್ಟಫಲವಾದ ಜ್ಞಾನಕ್ಕೆ ಹೊಂದುತ್ತದೆಯೇ ಹೊರತು ಸತ್ತ ಮೇಲೆ ಅರ್ಚಿರಾದಿಮಾರ್ಗದಿಂದ ಹೋಗಿ ಪಡೆಯಬೇಕಾಗಿರುವ ಫಲಕ್ಕಾಗಿ ಮಾಡುವ ಉಪಾಸನೆಗೆ ಅಷ್ಟು ಸಮಂಜಸವಾಗಿ ಹೊಂದುವದಿಲ್ಲ. 'ಈ ಯಾಗವನ್ನು ಮಾಡಿದರೆ ಸ್ವರ್ಗವು ಸಿಕ್ಕುವದು' ಎಂದು ಶಾಸ್ತ್ರದಲ್ಲಿ ಹೇಳಿದ್ದನ್ನು ಕೇಳಿ ಆಸ್ತಿಕ ನಾದವನು ನನಗೆ ಇದರಲ್ಲಿ ಯಾವ ಫಲವೂ ಕಾಣಿಸುತ್ತಿಲ್ಲ -ಎಂದಾನೇನು ? ಇಲ್ಲ. ಹೀಗೆಯೇ ಅದೃಷ್ಟಫಲವನ್ನು ಕೊಡುವ ಉಪಾಸನೆಯ ವಿಷಯದಲ್ಲಿಯೂ ಅವಿಶ್ವಾಸಪ್ರದರ್ಶನಕ್ಕೆ ಅವಕಾಶವಿರುವದಿಲ್ಲ. ಇದರಿಂದಲೂ ಪ್ರಜಾಪತಿಯು ಉಪದೇಶಮಾಡಿರುವದು ಇಲ್ಲಿಯೇ ಫಲವನ್ನು ಕೊಡುವ ಜ್ಞಾನವೇ ಎಂದು ಗೊತ್ತಾಗುತ್ತದೆ. ಇದಲ್ಲದೆ ಉಪಾಸನೆಯನ್ನು ವಿಧಿಸಿರುವ ವಾಕ್ಯಗಳಲ್ಲಿ ಸಂಶಯ ಕ್ಕೆ ಪರಿಹಾರವಾಗಿ ದೃಷ್ಟಫಲವುಳ್ಳ ಅನುಭವವನ್ನು ವಿಮರ್ಶೆಮಾಡಿರುವದು ಎಲ್ಲಿಯೂ ಕಂಡುಬರುವದಿಲ್ಲ, ಅಲ್ಲೆಲ್ಲ ಶಾಸ್ತ್ರವು ಇಂಥ ಉಪಾಸನೆಯನ್ನು ಮಾಡಿ ದವನಿಗೆ ಇಂಥ ಅನುಗುಣವಾದ ಫಲವು ಸಿಕ್ಕುತ್ತದೆ ಎಂದಿಷ್ಟೇ ಹೇಳಿರುತ್ತದೆ. ಇಲ್ಲಿಯಾದರೋ ಆತ್ಮಸ್ವರೂಪದ ಜ್ಞಾನಕ್ಕಾಗಿ ಅವಸ್ಥಾತ್ರಯವಿಚಾರವನ್ನು ಮಾಡಿ 'ಅದೇ ಆತ್ಮನನ್ನೇ ಹೇಳುತ್ತೇನೆ' ಎಂದು ಮತ್ತೆ ಮತ್ತೆ ಪ್ರಜಾಪತಿಯು ಆತ್ಮ ಸ್ವರೂಪವನ್ನು ತಿಳಿಸಿಕೊಟ್ಟಿರುತ್ತಾನೆ ಅವಸ್ಥಾತ್ರಯವನ್ನು ವಿಚಾರಮಾಡಿದರೆ ಆತ್ಮನು ಅಶರೀರನೆಂಬುದು ಗೊತ್ತಾಗುತ್ತದೆ ಎಂಬುದು ಉಪದೇಶ, ಈಗಲೂ ಯಾರು ಅವಸ್ಥಾತ್ರಯವನ್ನು ಪರೀಕ್ಷೆಮಾಡಿದರೂ ಆ ಜ್ಞಾನವನ್ನು ಸಂಪಾದಿಸಿ ಕೊಳ್ಳಬಹುದು. ಈ ಎಲ್ಲಾ ಕಾರಣಗಳಿಂದ ಪ್ರಜಾಪತಿವಾಕ್ಯದಲ್ಲಿ ಅಶರೀರನಾದ ನಿರ್ವಿಶೇಷಾತ್ಮನನ್ನೇ ಉಪದೇಶಿಸಿದೆ ಎಂದು ನಿರ್ಣಯಿಸುವದು ಅಯುಕ್ತವೆಂದು ಹೇಳುವದಕ್ಕೆ ಬರುವದಿಲ್ಲ. ಈ ಜ್ಞಾನವು ಅಪರೋಕ್ಷವಾಗಿ ಇಲ್ಲಿಯೇ ಆಗುತ್ತಿರು ವದರಿಂದ ಇಲ್ಲಿ ಹೇಳಿರುವ ಸತ್ಯಕಾಮ, ಸತ್ಯಸಂಕಲ್ಪ - ಮುಂತಾದ ವಿಶೇಷಣ ಗಳನ್ನೂ 'ಜಕ್ಷತ್ ಕ್ರೀಡನ್ ರಮಮಾಣಃ' (೮-೧೨-೩) ಎಂದುಮುಂತಾಗಿರುವ ಫಲವಾಕ್ಯಗಳನ್ನೂ, ವಿಷಯಕ್ಕೆ ತಕ್ಕಂತೆ ಹೊಂದಿಸಿಕೊಳ್ಳಬೇಕೆಂಬುದು ಯುಕ್ತ ವಾಗಿರುತ್ತದೆ. ಆಚಾರ್ಯರು ಹಾಗೆ ಹೊಂದಿಸಿ ಹೇಳಿಯೂ ಇರುತ್ತಾರೆ.

ಇನ್ನು 'ಸದೇವ ಸೋಮ್ಯೇದಮಗ್ರ ಆಸೀತ್' ಮುಂತಾಗಿರುವ ಉಪ ದೇಶವು ಸಗುಣಬ್ರಹ್ಮಪರವೆ? - ಎಂಬುದನ್ನು ವಿಮರ್ಶಿಸಿ ನೋಡಿದರೆ ಇಲ್ಲಿ

ತಂದಿರುವ ಬಗೆಬಗೆಯ ದೃಷ್ಟಾಂತಗಳಿಂದ ಶ್ವೇತಕೇತುವಿಗೆ ಸದ್ಬ್ರಹ್ಮದ ಸ್ವರೂಪ ವನ್ನು ಉಪಪಾದನೆಮಾಡಿ ತಿಳಿಸಿರುವದು ಕಂಡುಬರುತ್ತದೆ. ಪ್ರಜಾಪತಿವಾಕ್ಯ ದಲ್ಲಿ ಹೇಗೋಹಾಗೆ ಇಲ್ಲಿಯೂ ಈ ಕಾರಣದಿಂದಲೇ ಪ್ರಕರಣವು ದೃಷ್ಟಫಲವುಳ್ಳ ಜ್ಞಾನಕ್ಕೆ ಹೊಂದುಗೆಯಾಗಿದೆಯೆಂದು ಹೇಳಬೇಕಾಗುತ್ತದೆ. 'ತತ್ತ್ವಮಸಿ' ಅದೇ ನೀನಾಗಿರುವೆ- ಎಂದು ಮತ್ತೆಮತ್ತೆ ಹೇಳಿರುವ ಅಭ್ಯಾಸವು ಈಗಲೇ ಶ್ವೇತಕೇತುವು ಸದ್ಬ್ರಹ್ಮಸ್ವರೂಪನಾಗಿರುತ್ತಾನೆ ಎಂಬುದನ್ನು ತಿಳಿಸುವದಕ್ಕೇ ತಂದೆಯು ಪ್ರಯತ್ನಿಸುತ್ತಿದಾನೆಂಬುದನ್ನು ದೃಢಪಡಿಸುತ್ತದೆ. ಕೊನೆಯಲ್ಲಿ 'ತದ್ಧಾಸ್ಯ ವಿಜಜ್ಞೌ' 'ಈ ತಂದೆಯ ಆ ಉಪದೇಶವನ್ನು ಅವನು ಅರಿತುಕೊಂಡನು' ಎಂದೇ ಉಪಸಂಹಾರಮಾಡಿದೆಯೇ ಹೊರತು ಹೀಗೆಂದು ಉಪಾಸನೆಮಾಡಿ ಉತ್ತರ ಮಾರ್ಗದಿಂದ ಹೋಗಿ ಫಲವನ್ನು ಪಡೆದನು ಎಂದೇನೂ ಹೇಳಿಲ್ಲ ಈ ಎಲ್ಲಾ ಕಾರಣದಿಂದ ಶ್ರುತಿಯು ಜ್ಞಾನಪರವೇ ಎಂಬ ಸಂಭಾವನಾಯುಕ್ತಿಯು ಏರ್ಪಡು ತ್ತದೆ.

ಈಗ ಇಲ್ಲಿ ಬ್ರಹ್ಮದ ಕಾರ್ಯಕಾರಣಾವಸ್ಥೆಗಳ ಉಪದೇಶವನ್ನು ಮಾಡುವದಕ್ಕೆ ಶ್ರುತಿಯು ಹೊರಟಿದೆಯೆ ? -ಎಂಬುದನ್ನು ವಿಚಾರಿಸಿನೋಡೋಣ. ತಂದೆಯು ಮೊದಲು ಜ್ಞಾನಕ್ಕೆ ದೃಷ್ಟಾಂತವಾಗಿ ತೆಗೆದುಕೊಂಡಿರುವ ಮೃದಾದಿ ದೃಷ್ಟಾಂತದಲ್ಲಿ 'ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' (೬-೧-೪) ಎಂದುಮುಂತಾಗಿ ಕಾರಣವೇ ಸತ್ಯವೆಂದು ಅವಧಾರಣೆ ಮಾಡಿದಂತೆ 'ತತ್ಸತ್ಯಂ ಸ ಆತ್ಮಾ' (ಅದೇ ಸತ್ಯವು, ಅದೇ ಆತ್ಮನು) ಎಂದು ಮತ್ತೆ ಮತ್ತೆ (೬-೮-೭, ೬-೯-೪, ೬-೧೦-೩, ೬-೧೧-೩, ೬-೧೨-೩, ೬-೧೩-೩, ೬-೧೪-೩, ೬-೧೫-೩, ೬-೧೬-೩) ಅವಧಾರಣೆಮಾಡಿರುವದನ್ನು ಮನದಂದರೆ ಸನ್ಮಾತ್ರವೇ ಸತ್ಯವು, ಅದೇ ಆತ್ಮನು -ಎಂಬುದೇ ಶ್ರುತಿಗೆ ಒಪ್ಪೆಂದು ಏರ್ಪಡು ತ್ತದೆ ಕಾರ್ಯವು ವಾಚಾರಂಭಣಮಾತ್ರವೆಂದು ತಿಳಿಸುವದಕ್ಕೆ 'ಅಪಾಗಾದಗ್ನೇ ರಗ್ನಿತ್ವಮ್, ಅಪಾಗಾದಾದಿತ್ಯಾದಾದಿತ್ಯತ್ವಮ್' (೬-೩-೧ರಿಂದ ೪) ಎಂದು ಮುಂತಾಗಿ ಕಾರ್ಯದ ಕಾರ್ಯತ್ವವನ್ನು ಅಲ್ಲಗಳೆಯುವದೂ ಇಲ್ಲಿ ಕಾರ್ಯಕಾರಣ ಭಾವವು ವಿವಕ್ಷಿತವಲ್ಲವೆಂಬುದಕ್ಕೆ ಪೋಷಕಯುಕ್ತಿಯಾಗಿದೆ. 'ಅನ್ನವೆಂಬ ಶುಂಗ ದಿಂದ ಅಪ್ಪೆಂಬ ಮೂಲವನ್ನು ಹುಡುಕು, ಅಪ್ಪೆಂಬ ಶುಂಗದಿಂದ ತೇಜೋಮೂಲ ವನ್ನು ಹುಡುಕು. ತೇಜಸ್ಸೆಂಬ ಶುಂಗದಿಂದ ಸನ್ಮೂಲವನ್ನು ಹುಡುಕು' ಎಂದು ಕಾರ್ಯದಿಂದ ಕಾರಣವನ್ನು ಹುಡುಕಿ ಅರಿಯಲೆಂದೇ ಇಲ್ಲಿ ಸೃಷ್ಟಿಯನ್ನು ಹೇಳಿದೆ ಯೆಂದು ಗೊತ್ತಾಗುತ್ತದೆ. ಆದ್ದರಿಂದ 'ಸೋಮ್ಯನೆ, ಈ ಎಲ್ಲಾ ಪ್ರಜೆಗಳೂ ಸನ್ಮೂಲವಾದವು, ಸದಾಯತನಗಳು, ಸತ್ಪ್ರತಿಷ್ಠೆಗಳು' (೬-೮-೪) ಎಂಬ ವಾಕ್ಯವು ಸತ್ತಿನಿಂದ ಕಾರ್ಯಗಳು ಹುಟ್ಟಿವೆ ಎಂಬುದನ್ನು ತಾತ್ಪರ್ಯದಿಂದ ಹೇಳುವದಕ್ಕೆ

ಬಂದಿಲ್ಲವೆಂದೂ ಸನ್ಮಾತ್ರವೇ ಸರ್ವಕಾರ್ಯದ ತಿರುಳೆಂದು ಹೇಳುವದಕ್ಕೇ ಬಂದಿವೆ ಯೆಂದೂ ತೀರ್ಮಾನಮಾಡಬೇಕಾಗುತ್ತದೆ. ಸೃಷ್ಟಿಯನ್ನರಿತವನಿಗೆ ಯಾವ ಫಲ ವನ್ನೂ ಹೇಳದೆ, 'ಯಾವದರ ಶ್ರವಣಮನನವಿಜ್ಞಾನದಿಂದ, ಶ್ರವಣಾದಿಗಳನ್ನು ಮಾಡದೆ ಇರುವದೆಲ್ಲವನ್ನೂ ಶ್ರವಣಾದಿಗಳಿಂದ ಅರಿತಂತೆ ಆಗುವದೋ ಅದರ ಉಪದೇಶವನ್ನು ಪಡೆದುಕೊಂಡಿರುವೆಯೇನು ?'– ಎಂದು ಕಾರಣರೂಪವನ್ನು ಅರಿತಮಾತ್ರದಿಂದಲೇ ಸರ್ವಜ್ಞತ್ವವು ಬರುವದೆಂದು ಹೊಗಳಿರುವದೂ ಕಾರ್ಯ ಕಾರಣಭಾವವನ್ನು ಹೇಳುವದಕ್ಕೆ ಶ್ರುತಿಯು ಬಂದಿಲ್ಲವೆಂದೂ ಕಾರಣದಂತೆ ಕಾಣುವ ಸದಾತ್ಮವಸ್ತುವೊಂದೇ ಸತ್ಯವೆಂಬುದರ ಜ್ಞಾನವನ್ನು ಉಪದೇಶಿಸು ವದಕ್ಕೇ ಅದು ಬಂದಿದೆಯೆಂದೂ ನಿರ್ಣಯಿಸುವದಕ್ಕೆ ಸಾಕಾದ ಯುಕ್ತಿಯಾಗಿರು ತ್ತದೆ.

ಇನ್ನೊಂದು ವಿಷಯ. ಶ್ವೇತಕೇತುವಿಗೆ ತಂದೆಯು ಆತ್ಮತತ್ತ್ವವನ್ನು ಹೇಳಿಕೊಡುವದಕ್ಕಾಗಿ ಉಪಯೋಗಿಸಿರುವ ಯಾವ ದೃಷ್ಟಾಂತದಲ್ಲಿಯೂ ಸವಿಶೇಷ ವಾದ ಸಗುಣಬ್ರಹ್ಮವನ್ನುಪದೇಶಿಸಿರುವದು ಕಂಡುಬರುವದಿಲ್ಲ, ಅಲ್ಲಿ ದೃಷ್ಟಾಂತ ಕ್ಕೆ ತೆಗೆದುಕೊಂಡಿರುವ ಸುಷುಪ್ತ್ಯಾದಿಗಳಲ್ಲಿ ಯಾವ ವಿಶೇಷವೂ ಇಲ್ಲದ ಆತ್ಮನ ಅನುಭವವೇ ಕಂಡುಬರುತ್ತಿದೆ. ಈ ಅನುಭವವನ್ನು ಯಾರೂ ಅಲ್ಲಗಳೆಯುವದ ಕ್ಕಿಲ್ಲ. ಸುಷುಪ್ತಿಯಲ್ಲಿಯೂ ಸವಿಶೇಷಾನುಭವವೇ ಇದೆ ಎಂದು ಜಾಗ್ರದವಸ್ಥೆಯ **ನೆನಪಿನ ಆಧಾರದಿಂದ** ತರ್ಕಿಸುವವರೂ ಇರುತ್ತಾರೆ, ಅವರೆ ಸುಷುಪ್ತಿಯ **ಅನುಭವ**ವನ್ನು ಅವರೂ ಅಲ್ಲಗಳೆಯುವದಕ್ಕೆ ಆಗುವದಿಲ್ಲ. ಹೀಗಿರುವದರಿಂದ ನಿರ್ವಿಶೇಷವಸ್ತುವನ್ನು ಯಾವ ಪ್ರಮಾಣವೂ ತಿಳಿಸಲಾರದು ಎಂಬ ಯುಕ್ತಿಯು ಯಾವ ಕೆಲಸಕ್ಕೂ ಬರಲಾರದು, ಏಕೆಂದರೆ ಅನುಭವವು ಎಲ್ಲಾ ಪ್ರಮಾಣಗಳಿ ಗಿಂತಲೂ ಹೆಚ್ಚಿನದಾಗಿರುತ್ತದೆ, ಪ್ರಮಾಣಗಳಿಗೂ ಅನುಭವವೇ ಬೆಲೆಯನ್ನು ತಂದುಕೊಡತಕ್ಕದ್ದಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ 'ಸದೇವ ಸೋಮ್ಯ' ಎಂಬಲ್ಲಿರುವದು ವಸ್ತು ತಂತ್ರವಾದ ಅದ್ವೈತಜ್ಞಾನವೇ ಎಂದು ನಿಶ್ಚಯಿಸಬೇಕಾಗಿರುತ್ತದೆ.

## ಬ್ರಹ್ಮಜ್ಞಾನವಾಕ್ಯಗಳಿಗೂ ಉಪಾಸನಾವಾಕ್ಯಗಳಿಗೂ ತಾರತಮ್ಯ

ಈಗ ಉಪನಿಷತ್ತುಗಳಲ್ಲಿ ಹೇಳಿರುವ ಬ್ರಹ್ಮಸ್ವರೂಪವರ್ಣನವಾಕ್ಯಗಳಲ್ಲಿ ಯಾವವು ಪ್ರಬಲ ? ಅವೇ ಪ್ರಬಲವೆಂಬುದಕ್ಕೆ ಗಮಕವೇನು ?– ಎಂಬುದನ್ನು ನಿರ್ಣಯಿಸುವ ಕೆಲಸವೊಂದು ಉಳಿದಿರುತ್ತದೆ. ಬ್ರಹ್ಮವು ಸತ್ಯಕಾಮನೂ, ಸತ್ಯ

ಸಂಕಲ್ಪನೂ ಜಗತ್ಕಾರಣನೂ ಅಂತರ್ಯಾಮಿಯೂ ಪ್ರಶಾಸಿತೃವೂ ಆದ ಪರಮೇಶ್ವರನಾಗಿರುತ್ತಾನೆ ಎಂದು ಕೆಲವು ವಾಕ್ಯಗಳಿಂದ ತಿಳಿಯಬರುತ್ತದೆ, ಅದರಲ್ಲಿ ಯಾವ ವಿಶೇಷವೂ ಇಲ್ಲ. ಅದು ವಿದಿತಾವಿದಿತಗಳಿಗಿಂತ ಬೇರೆ, ವಾಙ್ಮನಸ್ಸುಗಳಿಗೆ ವಿಷಯವಲ್ಲ, ಉಪಶಾಂತಸ್ವರೂಪವಾಗಿರುತ್ತದೆ ಎಂದುಮುಂತಾಗಿ ಕೆಲವು ವಾಕ್ಯಗಳಿಂದ ತಿಳಿದುಬರುತ್ತದೆ. ಹೀಗಿರುವದರಿಂದ ಸಗುಣವಾಕ್ಯಗಳನ್ನು ಮುಖ್ಯವೆಂದು ಹಿಡಿದು ನಿರ್ಗುಣವಾಕ್ಯಗಳನ್ನು ಪರಮಾತ್ಮನು ಹೇಯಗುಣರಹಿತನೆಂಬ ಅರ್ಥಾಂತರವಿಷಯಕವೆಂದು ತಿರುಗಿಸಿಕೊಳ್ಳುವದು ಯುಕ್ತವೆ, ಅಥವಾ ನಿರ್ಗುಣವಾಕ್ಯಗಳನ್ನು ಮುಖ್ಯವೆಂದು ಹಿಡಿದು ಸಗುಣವಾಕ್ಯಗಳನ್ನೇ ಬೇರೊಂದು ಅರ್ಥವುಳ್ಳವೆಂದು ಕಲ್ಪಿಸುವದು ಯುಕ್ತವೆ ? ವೇದವು ಸರ್ವಥಾ ಪ್ರಮಾಣವಾಗಿರುವದರಿಂದ ಯಾವ ವಾಕ್ಯಕ್ಕಾದರೂ ಕಡಿಮೆಯ ಪ್ರಾಮಾಣ್ಯವನ್ನು ಏಕೆ ಕೊಡಬೇಕು ?- ಎಂಬ ಪ್ರಶ್ನೆಯು ಎದ್ದುಕೊಳ್ಳುವದು ಸ್ವಾಭಾವಿಕವಾಗಿರುತ್ತದೆ.

ಇದಕ್ಕೆ ಆಚಾರ್ಯರು ಸೂತ್ರಭಾಷ್ಯದಲ್ಲಿ ಒಂದು ಉತ್ತರವನ್ನು ಕೊಟ್ಟಿರುತ್ತಾರೆ. ಬ್ರಹ್ಮವು ರೂಪಾದಿವಿಶೇಷಗಳಿಲ್ಲದ್ದೆಂದು ನಿರ್ಣಯಿಸುವದೇ ಯುಕ್ತ, ಏಕೆಂದರೆ ನಿರ್ವಿಶೇಷಬ್ರಹ್ಮವನ್ನು ತಿಳಿಸುವ ವಾಕ್ಯಗಳು **ತತ್ಪ್ರಧಾನವಾಗಿರುತ್ತವೆ.** ಅವುಗಳು ಬ್ರಹ್ಮವಸ್ತುವಿನಲ್ಲಿಯೇ ಸಮನ್ವಯವಾಗುತ್ತವೆ ಅವುಗಳು ಬ್ರಹ್ಮವನ್ನು ಯಾವದೊಂದು ವಿಧಿಗೂ ಶೇಷವಾಗಿ ತಿಳಿಸುವದಿಲ್ಲ, ಆದರೆ ಸವಿಶೇಷಬ್ರಹ್ಮವನ್ನು ತಿಳಿಸುವ ವಾಕ್ಯಗಳೋ ಎಂದರೆ ಅವು ಬ್ರಹ್ಮಸ್ವರೂಪಪ್ರತಿಪಾದನಪರವಾಗಿರುವದಿಲ್ಲ, ಅವು **ಉಪಾಸನಾವಿಧಿಪರ**ವಾಗಿರುತ್ತವೆ. ಅಲ್ಲಿ ವರ್ಣಿಸಿರುವ ಬ್ರಹ್ಮರೂಪವು ಉಪಾಸನಾವಿಧಿಗೆ ಶೇಷವಾಗಿರುತ್ತದೆ. ಆದ್ದರಿಂದ ತತ್ಪರವಾಗಿರುವ ವಾಕ್ಯವು ಅತತ್ಪರವಾಗಿರುವ ವಾಕ್ಯಗಳಿಗಿಂತ ಪ್ರಬಲವಾಗಿರುತ್ತದೆ. ಈ ಅರ್ಥವು ಸೂತ್ರಭಾಷ್ಯದಲ್ಲಿ (೩-೨-೧೪) ಸ್ಪಷ್ಟವಾಗಿ ಲಿಖಿತವಾಗಿರುತ್ತದೆ. ಅಲ್ಲಿರುವ ಉಭಯಲಿಂಗಾಧಿಕರಣದ ಸೂತ್ರಗಳ ಭಾಷ್ಯವನ್ನೆಲ್ಲ (ಸೂ.ಭಾ. ೩-೨-೧೧ರಿಂದ ೨೧ರವರೆಗಿನ ಗ್ರಂಥವನ್ನೆಲ್ಲ) ಸಾವಧಾನವಾಗಿ ವಾಚಕರು ಓದಿ ಮನನಮಾಡಿಕೊಂಡರೆ ಈ ವಿಷಯದಲ್ಲಿ ಯಾವ ಸಂಶಯವೂ ಉಳಿಯಲಾರದು.

## ಉಪನಿಷತ್ತಿನಲ್ಲಿ ಅದ್ವೈತಜ್ಞಾನಕ್ಕಿರುವ ಪ್ರಾಶಸ್ತ್ಯ

ಉಪನಿಷತ್ತುಗಳಲ್ಲಿ ಉಪಾಸನೆ, ವಸ್ತುಬೋಧಕಜ್ಞಾನ- ಇವೆರಡನ್ನೂ ಉಪದೇಶಿಸಿರುತ್ತದೆ. ಅನೇಕರು ತತ್ತ್ವಜ್ಞಾನವನ್ನು ಸಂಪಾದಿಸುವದಕ್ಕೆ ತಕ್ಕ ಅಧಿಕಾರವುಳ್ಳವರಾಗಿರುವದಿಲ್ಲವಾದ್ದರಿಂದ ಮಧ್ಯಮಾಧಿಕಾರಿಗಳಾದವರಿಗಾಗಿ ಶ್ರುತಿಯು ಉಪಾಸನೆಯನ್ನೇ ಬಹಳವಾಗಿ ಹೇಳಿರುವದು ಯುಕ್ತವೇ ಆಗಿರುತ್ತದೆ. ಈಗ್ಗೆ ವೇದಾಂತಿಗಳೆಂದು ಹೇಳಿಕೊಳ್ಳುತ್ತಿರುವ ಅನೇಕರು ಕೆಲವು ಶ್ರುತಿವಾಕ್ಯ

ಗಳನ್ನು ಉದಾಹರಿಸಿ ಶುಷ್ಕತರ್ಕಪ್ರಧಾನವಾದ ವಾಕ್ಯಗಳನ್ನು ಬಳಸುತ್ತಾ ತಾವು ಜ್ಞಾನಿಗಳೆಂದು ಹೊರಗೆ ತೋರಿಸಿಕೊಳ್ಳುತ್ತಿರುವದರಿಂದ ಉಪಾಸನೆಯ ಹೆಚ್ಚುಗಾರಿಕೆಯನ್ನು ಅರಿಯದ ಅನೇಕರು ವೇದಾಂತದ ವಿಷಯಕ್ಕೆ ತಪ್ಪುಕಲ್ಪನೆ ಗಳನ್ನು ಮಾಡಿಕೊಳ್ಳುವ ಸಂಭವವಿದೆ. ಅಂಥವರು ಈ ಉಪನಿಷತ್ತನ್ನು ಮನ ಮುಟ್ಟಿ ಓದಿ ಚಿಂತನೆಮಾಡಿದರೆ ಆಚಾರ್ಯರ ವೇದಾಂತದಲ್ಲಿ ಉಪಾಸನೆಗೆ ಇರುವ ಹೆಚ್ಚಿನ ಬೆಲೆಯು ಗೊತ್ತಾದೀತು.

ಆದರೆ ಉಪನಿಷತ್ತಿನ ಪರಮತಾತ್ಪರ್ಯವು ಬ್ರಹ್ಮಾತ್ಮೈಕ್ಯಜ್ಞಾನದಲ್ಲಿಯೇ ಎಂಬುದನ್ನು ಮಾತ್ರ ಯಾರೂ ಅಲ್ಲಗಳೆಯುವದಕ್ಕಿಲ್ಲ ಆತ್ಮಜ್ಞಾನದ ಆಧಾರ ದಿಂದಲೇ ಸಗುಣಬ್ರಹ್ಮಶರಣರಿಗೂ ಅವೃತ್ತಿರಹಿತಮುಕ್ತಿಯಾಗುವದು (ಸೂ. ಭಾ. ೪-೪-೨೨) ಎಂದು ಆಚಾರ್ಯರು ಕಂಠೋಕ್ತವಾಗಿ ಹೇಳಿಟ್ಟಿರುತ್ತಾರೆ. ಈ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನು ಕರ್ಮೋಪಾಸನೆಗಳು ಒದಗಿಸಿಕೊಡುವವಾದರೂ ಅವೇ ನೇರಾಗಿ ಎಂದಿಗೂ ಕೈವಲ್ಯವನ್ನು ಕೊಡಲಾರವು. ಆಶ್ರಮತ್ರಯದಲ್ಲಿ ನಿಷ್ಠರಾಗಿರುವವರಿಗೆ ಪುಣ್ಯಲೋಕವು ಆಗುವದು, ಬ್ರಹ್ಮಸಂಸ್ಥನಾದ ಸಂನ್ಯಾಸಿಗೆ ಮಾತ್ರ ಅಮೃತತ್ವವು ಸಿಕ್ಕುವದು- ಎಂದು ಪ್ರಣವೋಪಾಸನಾ ವಿಧಿಗೆ ಶೇಷವಾಗಿರುವ ಅರ್ಥವಾದ ಶ್ರುತಿಯು (೨-೨೩-೧) ಒಂದು ಅಮೋಘ ತತ್ತ್ವವನ್ನು ಸಾರುತ್ತದೆ ಇದರಿಂದ ಅಮೃತತ್ವಕ್ಕೆ ಕರ್ಮದ ಹಂಗಿಲ್ಲವೆಂದು ಉಪಾಸನಾಪ್ರಕರಣದಲ್ಲಿಯೂ ಸ್ಪಷ್ಟವಾಗಿ ಹೇಳಿದಂತೆ ಆಗಿರುತ್ತದೆ. ಇಲ್ಲಿ ಮರೆಯದೆ ಲಕ್ಷ್ಯದಲ್ಲಿಡಬೇಕಾದ ವಿಷಯವೊಂದಿದೆ. ಆತ್ಮನು ಪರಮಾರ್ಥ ದೃಷ್ಟಿಯಿಂದ ಅದ್ವಿತೀಯನೇ ಆಗಿದ್ದರೂ ಅವನಲ್ಲಿ ಅವಿದ್ಯೆಯಿಂದ ಕಲ್ಪಿತವಾದ ನಾಮರೂಪಗಳಿಂದಾದ ಉಪಾಧಿಗಳು ತೋರುತ್ತಿರುವವು. ಈ ಉಪಾಧಿಗಳ ಕೆಲವು ಧರ್ಮಗಳನ್ನು ವಿಶೇಷಣವಾಗಿಟ್ಟುಕೊಂಡು ಮಧ್ಯಮಾಧಿಕಾರಿಗಳಿಗೆ ಬ್ರಹ್ಮೋ ಪಾಸನೆಯನ್ನು ಶಾಸ್ತ್ರದಲ್ಲಿ ವಿಧಿಸಿರುತ್ತದೆ. ವಿಚಾರಪ್ರಧಾನರಾದ ಜಿಜ್ಞಾಸುಗಳಿಗೆ ಇದೇ ಉಪಾಧಿಗಳನ್ನೇ- ಮನುಷ್ಯನ ಜ್ಞಾನಕ್ಕೆ ಸಾಧನವಾಗಿರುವ ನೆರಳಿನಂತೆ ಆತ್ಮಜ್ಞಾನಕ್ಕೆ ಉಪಾಯವಾಗಿಯೂ ಉಪದೇಶಿಸಿರುತ್ತದೆ. ಉಪಾಸನಾವಾಕ್ಯದಲ್ಲಿ ಉಪಾಧಿಗಳು ವಿವಕ್ಷಿತವಾಗಿರುತ್ತವೆ, ಜ್ಞಾನವಾಕ್ಯದಲ್ಲಿ ಉಪಾಯಮಾತ್ರವಾಗಿರು ವದರಿಂದ ಅವಿವಕ್ಷಿತವಾಗಿರುತ್ತವೆ- ಎಂಬುದೊಂದು ವಿಶೇಷ. (ಸೂ. ಭಾ. ೧-೧-೧೨, ಭಾ. ಭಾ. ೯೧, ೯೨)ನ್ನು ನೋಡಿ. ಒಂದೇ ಬ್ರಹ್ಮವನ್ನೇ ಉಪಾಸ್ಯ ವಾಗಿಯೂ ಜ್ಞೇಯವಾಗಿಯೂ ಶ್ರುತಿಯಲ್ಲಿ ಹೇಳಿರುವದರಿಂದ ಉಪಾಸನಾ ಪ್ರಕರಣದಲ್ಲಿ ಉಪಾಸನೆಗಾಗಿ ಹೇಳಿದ ರೂಪವನ್ನು ಕೂಡ ಜ್ಞಾನಪ್ರಕರಣದಲ್ಲಿ ವಸ್ತುನಿರೂಪಣೆಗೆ ಉಪಯೋಗಿಸಿಕೊಳ್ಳಬಹುದಾಗಿದೆ. ಉದಾಹರಣೆಗೆ 'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನ್' (೩-೧೪-೧) ಎಂದು ಉಪಾಸನಾಪ್ರಕರಣದಲ್ಲಿ ಹೇಳಿಪ್ಪ ಜಗಜ್ಜನ್ಮಾದಿಕಾರಣತ್ವವನ್ನೇ 'ಸದೇವ ಸೋಮ್ಯ' ಎಂಬ ಜ್ಞಾನ

ಪ್ರಕರಣದಲ್ಲಿ ಉಪಪಾದನೆಮಾಡಿ ಅದ್ವೈತಾತ್ಮಸ್ವರೂಪವನ್ನು ನಿರ್ಧರಿಸಿರುತ್ತದೆ, ಇದರಂತೆ ಉಪಾಸನಾಪ್ರಕರಣದಲ್ಲಿ ವೈಶ್ವಾನರಾತ್ಮನಿಗೆ ಹೇಳಿರುವ ದ್ಯುಮೂರ್ಧತ್ವಾದಿ(೫-೧೮-೨)ವಿಶೇಷಣಗಳನ್ನು ಜಾಗರಿತಸ್ಥಾನದ ಆತ್ಮನ ಸ್ವರೂಪದ ನಿರೂಪಣೆಗೆ ಮಾಂಡೂಕ್ಯದಲ್ಲಿ ಉಪಯೋಗಿಸಿಕೊಂಡು ಅದ್ವಿತೀಯಾತ್ಮನಾದ ತುರೀಯನ ತತ್ತ್ವವನ್ನು ನಿಶ್ಚಯಿಸುವವಕ್ಕೆ ವಿನಿಯೋಗಿಸಿರುವದನ್ನು ಇಲ್ಲಿ ಮನದಂದುಕೊಳ್ಳಬಹುದು. ಹೀಗೆಯೇ ಉಪಾಸ್ಯವಾದದ್ದು ಪರಬ್ರಹ್ಮವೋ, ಅಲ್ಲವೋ ? -ಎಂಬುದನ್ನು ಗೊತ್ತುಮಾಡುವದಕ್ಕೆ ಸರ್ವರ ಆತ್ಮನಾಗಿರುವದೇ ಮುಂತಾದ ಪರಮಾತ್ಮಸ್ವರೂಪಬೋಧಕವಾದ ವಿಶೇಷಣಗಳನ್ನು ಉಪಯೋಗಿಸಿಕೊಂಡು ಉಪಾಸ್ಯವು ಬ್ರಹ್ಮವೇ ಎಂದು ನಿಶ್ಚಯಿಸಿರುವ ಉದಾಹರಣೆಗಳನ್ನು ಸೂತ್ರಭಾಷ್ಯದಲ್ಲಿ ವಾಚಕರು ಕಾಣಬಹುದಾಗಿದೆ.

ಇದೂ ಅಲ್ಲದೆ ಜ್ಞಾನದ ಫಲವು ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವದಾಗಿರುತ್ತದೆ. ಇದನ್ನು ಇಲ್ಲವೆನ್ನುವದು ಯಾರಿಂದಲೂ ಆಗುವದಿಲ್ಲ -ಎಂದು ಭಾಷ್ಯಕಾರರು ತಮ್ಮ ಭಾಷ್ಯಗಳಲ್ಲಿ ಮತ್ತೆಮತ್ತೆ ಬರೆದಿರುತ್ತಾರೆ. ಅದ್ವೈತಜ್ಞಾನವಾದ ಬಳಿಕ ಯಾವ ಶಂಕೆಯೂ ಉಳಿಯುವಂತೆಯೇ ಇಲ್ಲವಾದ್ದರಿಂದ ಅದ್ವೈತ ಸಿದ್ಧಾಂತದಲ್ಲಿ ಯಾವ ದೋಷವನ್ನೂ ಯಾರೂ ಆರೋಪಿಸುವದಕ್ಕೆ ಬರುವಹಾಗಿಲ್ಲ ಅದ್ವೈತಾನುಭವವು ಬಂದಾಗ ಎಲ್ಲಾ ದ್ವೈತವನ್ನೂ ಬಾಧಿಸಿಯೇ ಬರುವದರಿಂದ ಆಮೇಲೆ ಉಪಾಸನಾವಾಕ್ಯಗಳಿಗೆ ಗತಿಯೇನು ?- ಎಂಬ ಶಂಕೆಗಂತೂ ಯಾವ ಅವಕಾಶವೂ ಉಳಿಯುವದಿಲ್ಲ. ಈ ಕಾರಣದಿಂದಲೇ 'ತತ್ತ್ವಮಸಿ' ಮುಂತಾದ ವಾಕ್ಯಗಳಿಗೆ ಉಪಾಸನಾವಿಧಿಪರವಾದ ಅರ್ಥವನ್ನು ಕಲ್ಪಿಸುವದಾಗಲಿ ಇದು ಕೇವಲ ಸ್ತುತಿಗಾಗಿ ಬಂದಿರುವ ಅರ್ಥವಾದವೆಂದು ಕಲ್ಪಿಸುವದಾಗಲಿ ಆಗಲಾರದು -ಎಂದು ಆಚಾರ್ಯರು ಆರನೆಯ ಅಧ್ಯಾಯದ ಉಪಸಂಹಾರಭಾಷ್ಯ (ಛಾ. ಭಾ. ೫೪೧)ದಲ್ಲಿ ಸ್ಪಷ್ಟಪಡಿಸಿರುತ್ತಾರೆ ಈ ಯುಕ್ತಿಗಳ ಜೊತೆಗೆ ಕೇವಲ ತರ್ಕಪ್ರಧಾನರಾಗಿರುವವರ ಸಲುವಾಗಿ ಮತ್ತೊಂದು ಯುಕ್ತಿಯನ್ನು ಇಲ್ಲಿ ಹೇಳಬಹುದು. ದ್ವೈತವನ್ನು ಸಿದ್ಧಾಂತವೆಂದು ಇಟ್ಟುಕೊಂಡರೆ ಅಲ್ಲಿ ಶಂಕಾಸಮಾಧಾನಗಳಿಗೆ ಅವಕಾಶವಿದ್ದೇ ಇರುತ್ತದೆ, ಏಕೆಂದರೆ ಶಂಕೆಯೂ ಸಮಾಧಾನವೂ ದ್ವೈತಕ್ಷೇತ್ರದೊಳಗೆ ಇದ್ದೇ ಇರುತ್ತವೆ . ಆದರೆ ಅದ್ವೈತವನ್ನು ಸಿದ್ಧಾಂತವೆಂದು ವಾದಕ್ಕಾಗಿ ಒಪ್ಪಿ ಇಟ್ಟುಕೊಂಡರೂ ಯಾವ ಶಂಕೆಗೂ ಅವಕಾಶವಿರುವದಿಲ್ಲ. ಜಿಜ್ಞಾಸುಗಳು ಇದನ್ನು ನೆನಪಿನಲ್ಲಿಟ್ಟರೆ ಅದ್ವೈತದ ಮೇಲಿನ ಆಕ್ಷೇಪಗಳಿಗೆಲ್ಲ ಪರಿಹಾರವು ದೊರಕುವದು

## ತತ್ತ್ವಪ್ರತಿಪಾದನಪ್ರಕ್ರಿಯೆಗಳು

ಮೇಲೆ ತಿಳಿಸಿರುವಂತೆ ಜಿಜ್ಞಾಸುಗಳಿಗೆ ತತ್ತ್ವವನ್ನು ಬೋಧಿಸುವದಕ್ಕೆಂದು ಶ್ರುತಿಯಲ್ಲಿ ಬೇರೆಬೇರೆಯ ಉಪಾಧಿಗಳನ್ನವಲಂಬಿಸಿರುತ್ತದೆ ಆದರೆ ಅವುಗಳಲ್ಲಿ

ಯಾವದೊಂದು ಉಪಾಧಿಯೂ ವಿವಕ್ಷಿತವಲ್ಲ. ಆದ್ದರಿಂದ ಕೊನೆಯಲ್ಲಿ ಅದ್ವೈತಾತ್ಮನನ್ನು ಅವಧಾರಣೆಮಾಡಿಯೇ ಉಪದೇಶವನ್ನು ಮುಗಿಸಿರುತ್ತದೆ. ಅಧಿಕಾರಿಗಳು ಬೇರೆಬೇರೆಯ ಚಿತ್ತಭೂಮಿಕೆಯಲ್ಲಿರುತ್ತಾರಾದ್ದರಿಂದ ಅವರವರಿಗೆ ತಕ್ಕಂತೆ ಉಪದೇಶದ ಪ್ರಕ್ರಿಯೆಯೂ ಬೇರೆಬೇರೆಯಾಗಿರುತ್ತದೆ ಅಷ್ಟೆ

ಪ್ರಕೃತೋಪನಿಷತ್ತಿನಲ್ಲಿ ಉಪಯೋಗಿಸಿರುವ ಪ್ರಕ್ರಿಯೆಗಳು ಹೀಗಿವೆ :

(೧) **ಆರನೆಯ ಅಧ್ಯಾಯದಲ್ಲಿ** ಶ್ವೇತಕೇತುವಿಗೆ ನೀನು ಸಂಸಾರಿಯಲ್ಲ, ಪರಮಾತ್ಮನೇ ಎಂಬುದನ್ನು ಬೋಧಿಸುವದಕ್ಕಾಗಿ ಮುಖ್ಯವಾಗಿ ಜಗತ್ಕಾರಣವಾದ ಸದ್ಬ್ರಹ್ಮವನ್ನು ಹೇಳುವದಕ್ಕೆ ಉಪಕ್ರಮಿಸಿ ಆ ಸತ್ತೇ ಜೀವರೂಪದಿಂದ ಕಾರ್ಯಕರಣಸಂಘಾತದಲ್ಲಿ ಒಳಹೊಕ್ಕು ನಾಮರೂಪಗಳನ್ನು ವ್ಯಾಕರಣಮಾಡಿದೆ- ಎಂಬ ಕಾರ್ಯಕಾರಣಪ್ರಕ್ರಿಯೆಯನ್ನು ಆಗಿರುತ್ತದೆ. ಇಡಿಯ ಜಗತ್ತೆಲ್ಲವೂ ನಿಜವಾಗಿ ಆ ಸದಾತ್ಮಕಬ್ರಹ್ಮವೇ ಆಗಿರುತ್ತದೆ, ಅಂಥ ಅದ್ವಿತೀಯಬ್ರಹ್ಮವೇ ನೀನು, ಕಾರ್ಯಕರಣಸಂಘಾತಕ್ಕೆ ಕಟ್ಟುಬಿದ್ದವನಲ್ಲ- ಎಂಬುದನ್ನು ಬಗೆಬಗೆಯ ಶಂಕಾಸಮಾಧಾನಗಳ ರೂಪದಿಂದ ಶ್ವೇತಕೇತುವಿಗೆ ತಂದೆಯು ಬೋಧಿಸಿದನೆಂದು ತಿಳಿಸಿದೆ

(೨) **ಏಳನೆಯ ಅಧ್ಯಾಯದಲ್ಲಿ** ನಾರದನಿಗೆ ಸನತ್ಕುಮಾರಭಗವಂತನು ಋಗ್ವೇದಾದಿಗಳನ್ನೆಲ್ಲ ನಾಮಮಾತ್ರದಲ್ಲಿ ಅಡಗಿಸಿ, ನಾಮದಿಂದ ಪ್ರಾಣಾಂತವಾದ ಕಾರ್ಯಗಳು ಒಂದಕ್ಕಿಂತ ಒಂದು ವ್ಯಾಪಕವಾಗಿರುವದರಿಂದ ಆತ್ಮಶಬ್ದಕ್ಕೆ ಹೆಚ್ಚುಹೆಚ್ಚು ಅರ್ಹವಾಗಿರುವವೆಂಬುದನ್ನು ತಿಳಿಸಿಕೊಟ್ಟು, ಆ ಪ್ರಾಣವನ್ನು ಕೂಡ ಪರಮಾರ್ಥಸತ್ಯವಾದ **ಭೂಮ**ವೆಂಬ ಹೆಸರಿನ ಪರಮಾತ್ಮನು ವ್ಯಾಪಿಸಿಕೊಂಡಿರುತ್ತಾನೆಂದೂ ಅದ್ವಿತೀಯನಾದ ಆ ಪರಮಾತ್ಮನೇ ಮುಖ್ಯಾರ್ಥದಲ್ಲಿ ಆತ್ಮನೆಂದೂ ತಿಳಿಸಿಕೊಟ್ಟಿರುತ್ತದೆ

(೩) **ಎಂಟನೆಯ ಅಧ್ಯಾಯದಲ್ಲಿ** ಪ್ರಜಾಪತಿಯು ಇಂದ್ರನಿಗೆ ಅಪಹತಪಾಪ್ಮನೂ ಅಶನಾಯಾದ್ಯತೀತನೂ ಆದ ಅಮೃತಾಭಯಬ್ರಹ್ಮವೇ ನಿಜವಾದ ಆತ್ಮನೆಂಬುದನ್ನು ಇಂದ್ರಿಯಜ್ಞಾನ, ಸ್ವಪ್ನಜ್ಞಾನ, ಸುಷುಪ್ತಿಜ್ಞಾನ- ಇವುಗಳ ಮೂಲಕವಾಗಿ ಕಾರ್ಯಕರಣಸಂಘಾತರಹಿತನಾದ ಅಶರೀರಾತ್ಮನ ಸ್ವರೂಪದ ತಿಳಿವಳಿಕೆಯನ್ನು ಕ್ರಮಕ್ರಮವಾಗಿ ಮಾಡಿಕೊಟ್ಟು ಮನಗಾಣಿಸಿರುತ್ತಾನೆ. ಕೊನೆಯಲ್ಲಿ "ನಾನು ಈ ಇಂದ್ರಿಯದಿಂದ ಇದನ್ನು ಅರಿಯುತ್ತೇನೆ" ಎಂಬ ಪ್ರಮಾತೃಪ್ರಮಾಣಪ್ರಮೇಯವಿಭಾಗವು ಯಾವ ಚೈತನ್ಯರೂಪವಾದ ಆತ್ಮನಿಗೆ ತೋರುತ್ತಿರುವದೋ ಅವನೇ ಆತ್ಮನು ಎಂದು ಸಾಕ್ಷಿಸ್ವರೂಪವನ್ನು ತಿಳಿಸಿಕೊಟ್ಟಿರುತ್ತಾನೆ.

ಇಲ್ಲಿ **ಶ್ವೇತಕೇತುವು** ಗುರುಗಳಲ್ಲಿ ಎಲ್ಲವನ್ನೂ ಕಲಿತೆನೆಂದು ತಪ್ಪುತಿಳಿವಳಿಕೆಯ ಅಭಿಮಾನದಿಂದ ಬಂದಿದ್ದಾಗ ಆತ್ಮಜ್ಞಾನದಿಂದಲೇ ಸರ್ವಜ್ಞತ್ವವು ಬರುವದೆಂದು ತಿಳಿಸುವದಕ್ಕಾಗಿ ಕಾರಣವಿಜ್ಞಾನದಿಂದ ಕಾರ್ಯವೆಲ್ಲವನ್ನೂ ಅರಿತಂತಾಗುವದೆಂಬ ಪ್ರಕ್ರಿಯೆಯನ್ನು ಉಪಯೋಗಿಸಿರುತ್ತದೆ. **ನಾರದನು**

ನಾನು ಬರಿಯ ಮಂತ್ರರೂಪವಾದ ಶಬ್ದಜ್ಞಾನವುಳ್ಳವನು, ಅವುಗಳಿಗೆ ಗುರಿಯಾದ ಆತ್ಮನನ್ನು ಅರಿಯದೆ ಶೋಕಿಸುತ್ತಿರುವೆನು ಎಂದು ಹೇಳಿಕೊಂಡದ್ದರಿಂದ ಆ ಶಬ್ದದಿಂದಲೇ ಮೊದಲುಮಾಡಿಕೊಂಡು ಪ್ರಾಣಾಂತವಾದ ವ್ಯಾಪಕತತ್ತ್ವವನ್ನು ಬೋಧಿಸಿ ಸರ್ವವ್ಯಾಪಕವಾದ ಅದ್ವಿತೀಯಾತ್ಮನೇ ಸುಖವು ಎಂದು ಶೋಕಪರಿಹಾರೋಪಾಯವನ್ನು ಉಪದೇಶಿಸಿದೆ **ಇಂದ್ರನು** ಯಾವ ಆತ್ಮಸ್ವರೂಪವನ್ನು ತಿಳಿದರೆ ಸರ್ವಲೋಕಗಳಲ್ಲಿಯೂ ಕಾಮಚಾರರೂಪವಾದ ಭೋಗವು ದೊರಕೀತು? -ಎಂಬುದನ್ನು ಅರಿತುಕೊಳ್ಳುವದಕ್ಕಾಗಿ ಬಂದದ್ದರಿಂದ ಅಶರೀರಾತ್ಮಜ್ಞಾನವೇ ಸರ್ವಾತ್ಮಭಾವದಿಂದ ಸರ್ವಕಾಮಾಪ್ತಿಗೆ ಮಾರ್ಗವೆಂದು ಉಪದೇಶಿಸಿದೆ ಹೀಗೆ ಅಧಿಕಾರಭೇದದಿಂದ ಉಪದೇಶಪ್ರಕ್ರಿಯೆಯು ಬೇರೆಬೇರೆಯಾದರೂ ಅದ್ವೈತಜ್ಞಾನವೆಂಬ ಗುರಿಯು ಒಂದೇ ಆಗಿರುತ್ತದೆ.

## ಸಾಧನವೂ ಫಲವೂ

ಜ್ಞಾನವಾಗಲಿ ಉಪಾಸನೆಯಾಗಲಿ ಬರಿಯ ಒಣತರ್ಕದಿಂದ ಎಂದಿಗೂ ದಕ್ಕುವದಿಲ್ಲವೆಂಬುದನ್ನು ಈ ಉಪನಿಷತ್ತಿನಲ್ಲಿ ಆಯಾ ಆಖ್ಯಾನದ ಮೂಲಕ ಮತ್ತೆಮತ್ತೆ ಮನಗಾಣಿಸಿದೆ. ಗುರುಶುಶ್ರೂಷೆ, ಬ್ರಹ್ಮಚರ್ಯ, ಗುರುವಿನಲ್ಲಿ ವಿನಯದಿಂದ ಪ್ರಶ್ನೆಮಾಡುವದು- ಇವುಗಳಿಂದಲೇ ಪರಮಾತ್ಮಪ್ರಾಪ್ತಿಗೆ ಸಾಧನವಾದ ಉಪಾಸನೆಯಾಗಲಿ ಜ್ಞಾನವಾಗಲಿ ಅಳವಡುವದೇ ಹೊರತು ಆಸುರಸಂಪತ್ತಿನವರಿಗೆ ದಕ್ಕಲಾರದು- ಎಂಬುದನ್ನು ಸ್ಪಷ್ಟನಾಗಿ ತೋರಿಸಿದೆ. ಉಪಾಸನೆಯಲ್ಲಿಯೂ ಪರಮಾತ್ಮಜ್ಞಾನದಲ್ಲಿಯೂ ನೆಲೆನಿಂತ ಮಹನೀಯರ ಮಹಿಮೆಯನ್ನು ಆಯಾ ಉಪಾಸನೆಯ ಮತ್ತು ಜ್ಞಾನದ ಪ್ರಕರಣದಲ್ಲಿ ತಿಳಿಯಪಡಿಸಿದೆ. ವಿನೀತರಾಗಿ ಸದ್ಗುರುವಿನ ಮೂಲಕವೇ ಪರಮಪುರುಷಾರ್ಥದ ಸಾಧನವನ್ನು ಪಡೆದು ಕೃತಾರ್ಥರಾಗಬೇಕೆಂಬುದನ್ನು ಮುಮುಕ್ಷುಗಳೆಲ್ಲರೂ ಇಲ್ಲಿರುವ ಬೇರೆಬೇರೆಯ ಆಖ್ಯಾನಗಳಿಂದ ಗ್ರಹಿಸಬಹುದಾಗಿರುತ್ತದೆ.

## ಉಪಸಂಹಾರ

ಹೀಗೆ ಶ್ರುತಿಯುಕ್ತ್ಯನುಭವಗಳಿಗೆ ಸಂಮತವಾಗಿರುವ ಆಚಾರ್ಯರ ಭಾಷ್ಯವನ್ನು ಯಥಾಮತಿಯಾಗಿ ಕನ್ನಡಿಸುವ ಸುಯೋಗವನ್ನು ಅನುಗ್ರಹಿಸಿರುವದಕ್ಕಾಗಿ ಆ ಮಹಾತ್ಮರನ್ನು ಪೂಜ್ಯಬುದ್ಧಿಯಿಂದ ಮತ್ತೆಮತ್ತೆ ನಮಸ್ಕರಿಸಿ ಈ ಪೀಠಿಕೆಯನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಮನ್ಮಥಸಂವತ್ಸರ, ಮಾಘ ಬಹುಳ ೧೧

**ಅನುವಾದಕ.**

# ವಿಷಯಾನುಕ್ರಮಣಿಕೆ

**ವಿಶೇಷ :** ಇಲ್ಲಿ ಚರ್ಚಾಭಾಗಗಳನ್ನು ಸೇರಿಸಿಲ್ಲ ಕಂಸಗಳಲ್ಲಿರುವ ಸಂಖ್ಯೆಗಳು ಭಾಷ್ಯಭಾಗಗಳನ್ನು ಸೂಚಿಸುವವು.

## ಭಾಷ್ಯಕಾರರ ಅವತರಣಿಕೆ



## ಒಂದನೆಯ ಅಧ್ಯಾಯ–ಒಂದನೆಯ ಖಂಡ

### (ಉದ್ಗೀಥಾವಯವವಾದ ಓಂಕಾರದ ಉಪಾಸನೆ)



## ಎರಡನೆಯ ಖಂಡ

### (ಪ್ರಾಣಾದಿದೃಷ್ಟಿಗಳಿಂದ ಓಂಕಾರೋಪಾಸನೆ)

## ಮೂರನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)



## ನಾಲ್ಕನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)



## ಐದನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)

## ಆರನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)



## ಏಳನೆಯ ಖಂಡ



## ಎಂಟನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)



## ಒಂಬತ್ತನೆಯ ಖಂಡ

### (ಉದ್ಗೀಥೋಪಾಸನೆ ಮುಂದುವರಿದದ್ದು)

## ಹತ್ತನೆಯ ಖಂಡ

### (ಪ್ರಸ್ತಾವಾದಿಗಳ ಉಪಾಸನೆ)



## ಹನ್ನೊಂದನೆಯ ಖಂಡ

### (ಪ್ರಸ್ತಾವಪ್ರತಿಹಾರೆಗಳ ಉಪಾಸನೆ)



## ಹನ್ನೆರಡನೆಯ ಖಂಡ



## ಹದಿಮೂರನೆಯ ಖಂಡ

### (ಸ್ತೋಭೋಪಾಸನೆಗಳು)



—— ೦ ——



# ಎರಡನೆಯ ಅಧ್ಯಾಯ

### (ಸಮುಸ್ತಸಾಮದ ಉಪಾಸನೆ)

## ಒಂದನೆಯ ಖಂಡ

## ಎರಡನೆಯ ಖಂಡ

### (ಪಂಚವಿಧನಾಮಗಳ ಉಪಾಸನೆ)



## ಮೂರನೆಯ ಖಂಡ

### (ಪಂಚವಿಧನಾಮೋಪಾಸನೆ ಮುಂದುವರಿದದ್ದು)



## ನಾಲ್ಕನೆಯ ಖಂಡ

### (ಪಂಚವಿಧನಾಮೋಪಾಸನೆ ಮುಂದುವರಿದದ್ದು)



## ಐದನೆಯ ಖಂಡ

### (ಪಂಚವಿಧನಾಮೋಪಾಸನೆ ಮುಂದುವರಿದದ್ದು)



## ಆರನೆಯ ಖಂಡ

### (ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ಏಳನೆಯ ಖಂಡ

### (ಪಂಚವಿಧಸಾಮೋಪಾಸನೆ ಮುಂದುವರಿದದ್ದು)



## ಎಂಟನೆಯ ಖಂಡ

### (ಸಪ್ತವಿಧಸಾಮೋಪಾಸನೆ)



## ಒಂಬತ್ತನೆಯ ಖಂಡ

### (ಸಪ್ತವಿಧಸಾಮೋಪಾಸನೆ ಮುಂದುವರಿದದ್ದು)



## ಹತ್ತನೆಯ ಖಂಡ

### (ಸಪ್ತವಿಧಸಾಮೋಪಾಸನೆ ಮುಂದುವರಿದದ್ದು)



## ಹನ್ನೊಂದನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆಗಳು)

## ಹನ್ನೆರಡನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ)



## ಹದಿಮೂರನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ).



## ಹದಿನಾಲ್ಕನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ)



## ಹದಿನೈದನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ)



## ಹದಿನಾರನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ)



## ಹದಿನೇಳನೆಯ ಖಂಡ

### (ಗಾಯತ್ರಾದಿಸಾಮಗಳ ಉಪಾಸನೆ)

## ಇಪ್ಪತ್ತುನಾಲ್ಕನೆಯ ಖಂಡ

(ಸಾಮಹೋಮಮಂತ್ರೋತ್ಥಾನಗಳು)





# ಮೂರನೆಯ ಅಧ್ಯಾಯ

(ಕರ್ಮಫಲವಾದ ಆದಿತ್ಯೋಪಾಸನೆ)

## ಒಂದನೆಯ ಖಂಡ

(ಆದಿತ್ಯೋಪಾಸನೆ)



## ಎರಡನೆಯ ಖಂಡ

(ಆದಿತ್ಯೋಪಾಸನೆ)



## ಮೂರನೆಯ ಖಂಡ

(ಆದಿತ್ಯೋಪಾಸನೆ)

(೨೨೪)- ಬ್ರಹ್ಮಲೋಕದ ವಿಷಯಕ್ಕೆ ಉಪಾಸಕನ ಅನುಭವ (೨೨೫)- ಮಧುವಿದ್ಯೆಗೆ ಕಾಲಾಪರಿಚ್ಛಿನ್ನಬ್ರಹ್ಮಪ್ರಾಪ್ತಿಯೇ ಫಲ (೨೨೬)- ವಿದ್ಯೆಯ ಗುರುಪರಂಪರೆ (೨೨೭)- ಈ ವಿದ್ಯೆಗೆ ಜ್ಯೇಷ್ಠಪುತ್ರ, ಯೋಗಶಿಷ್ಯ- ಇಬ್ಬರೇ ಅಧಿಕಾರಿಗಳು (೨೨೮).

ಪುಟ ೨೯೯-೩೦೬

## ಹನ್ನೆರಡನೆಯ ಖಂಡ

### (ಗಾಯತ್ರೀಬ್ರಹ್ಮೋಪಾಸನೆ)

ಮುಂದಿನ ಗ್ರಂಥದ ಸಂಬಂಧ (೨೨೯)- ಗಾಯತ್ರೀಬ್ರಹ್ಮವು ಸರ್ವಭೂತಾತ್ಮಕ (೨೩೦)- ಗಾಯತ್ರಿಯು ಪೃಥಿವ್ಯಾತ್ಮಕ (೨೩೧)- ಗಾಯತ್ರೀಬ್ರಹ್ಮವು ಶರೀರಾತ್ಮಕ (೨೩೨)- ಗಾಯತ್ರೀಬ್ರಹ್ಮವು ಹೃದಯಾತ್ಮಕ (೨೩೩)- ಗಾಯತ್ರಿಯು ಚತುಷ್ಪಾದಗಳುಳ್ಳದ್ದು, ಷಡ್ವಿಧ (೨೩೪)- ಗಾಯತ್ರೀಬ್ರಹ್ಮವು ಸರ್ವಭೂತಾತೀತ (೨೩೫)- ಗಾಯತ್ರೀಬ್ರಹ್ಮವು ಹೃದಯಾಕಾಶವೇ (೨೩೬)- ಹಾರ್ದಾಕಾಶರೂಪವಾದ ಬ್ರಹ್ಮದ ಉಪಾಸನೆಯ ಫಲ (೨೩೮).

ಪುಟ ೨೯೮-೩೧೮

## ಹದಿಮೂರನೆಯ ಖಂಡ

### (ಗಾಯತ್ರೀಬ್ರಹ್ಮದ ಅಂಗೋಪಾಸನೆಗಳು, ಪ್ರತೀಕೋಪಾಸನೆ)

ಮುಂದಿನ ಗ್ರಂಥಸಂಬಂಧ (೨೩೯)- ಪೂರ್ವದ್ವಾರಪುರುಷನ ಉಪಾಸನೆ (೨೪೦)- ದಕ್ಷಿಣದ್ವಾರಪುರುಷನ ಉಪಾಸನೆ (೨೪೧)- ಪಶ್ಚಿಮದ್ವಾರಪಾಲನ ಉಪಾಸನೆ (೨೪೨)- ಉತ್ತರದ್ವಾರಪಾಲನ ಉಪಾಸನೆ (೨೪೩)- ಮೇಲುಗಡೆಯ ದ್ವಾರಪಾಲನ ಉಪಾಸನೆ (೨೪೪)- ಪಂಚದ್ವಾರಪಾಲರ ಉಪಾಸನೆಗೆ ಫಲ. (೨೪೫)- ಜ್ಯೋತಿರ್ಬ್ರಹ್ಮೋಪಾಸನೆ: ಮುಂದಿನ ಗ್ರಂಥಭಾಗದ ಸಂಬಂಧ (೨೪೬)- ಜ್ಯೋತಿರ್ಬ್ರಹ್ಮದ ವರ್ಣನೆ (೨೪೭)- ಜ್ಯೋತಿರ್ಬ್ರಹ್ಮದ ದರ್ಶನ (೨೪೮)-ಜ್ಯೋತಿರ್ಬ್ರಹ್ಮದ ಶ್ರವಣ (೨೪೯)- ಉಪಾಸನಾಗುಣವಿಧಿಯೂ ಉಪಾಸನೆಯ ಫಲವೂ (೨೫೦).

ಪುಟ ೩೧೯-೩೩೬

## ಹದಿನಾಲ್ಕನೆಯ ಖಂಡ

### (ಶಾಂಡಿಲ್ಯವಿದ್ಯೆ)

**ಮನೋಮಯತ್ವಾದಿ ಗುಣಕಬ್ರಹ್ಮೋಪಾಸನೆ:** ಗ್ರಂಥಸಂಬಂಧ (೨೫೧) ಬ್ರಹ್ಮೋಪಾಸನೆಯಲ್ಲಿ ಶಮವಿರಬೇಕು (೨೫೨) - ಬ್ರಹ್ಮವನ್ನು ಉಪಾಸನೆಮಾಡುವ ರೀತಿ (೨೫೩) - ಚಿಂತಿಸಬೇಕಾದ ಬ್ರಹ್ಮದ ಗುಣಗಳು (೨೫೪) - ಈ ಬ್ರಹ್ಮವನ್ನು ಹೃದಯದಲ್ಲಿ ಉಪಾಸನೆಮಾಡಬೇಕು (೨೫೫)- ಗುಣಗಳಿಂದೊಡಗೂಡಿಯೇ ಉಪಾಸನೆ ಮಾಡಬೇಕು (೨೫೬)- ಸಾಕ್ಷಾತ್ಕಾರವು ಫಲಪ್ರಾಪ್ತಿಗೆ ಅವಶ್ಯ (೨೫೭). ಪುಟ ೩೩೭-೩೫೨

## ಹದಿನೈದನೆಯ ಖಂಡ

### (ಪುತ್ರನ ಆಯುಸ್ಸಿಗಾಗಿ ಉಪಾಸನೆ)



## ಹದಿನಾರನೆಯ ಖಂಡ

### (ದೀರ್ಘಜೀವನಕ್ಕಾಗಿ ಉಪಾಸನೆ)



## ಹದಿನೇಳನೆಯ ಖಂಡ

### (ದೀರ್ಘಾಯುಸ್ಸಿಗೆ ಉಪಾಸನೆ ಮುಂದುವರಿದದ್ದು)



## ಹದಿನೆಂಟನೆಯ ಖಂಡ

### (ಮನಆಕಾಶಗಳಲ್ಲಿ ಬ್ರಹ್ಮದೃಷ್ಟಿ)



## ಹತ್ತೊಂಬತ್ತನೆಯ ಖಂಡ

### (ಆದಿತ್ಯಬ್ರಹ್ಮೋಪಾಸನೆ)

## ನಾಲ್ಕನೆಯ ಅಧ್ಯಾಯ

(ಸಂವರ್ಗವಿದ್ಯೆ)

### ಒಂದನೆಯ ಖಂಡ

(ಜಾನಶ್ರುತಿಯು ರೈಕ್ವನನ್ನು ಹುಡುಕಿಸಿದ್ದು)



### ಎರಡನೆಯ ಖಂಡ

(ಸಂವರ್ಗವಿದ್ಯೆ ಮುಂದುವರಿದದ್ದು)



### ಮೂರನೆಯ ಖಂಡ

(ಸಂವರ್ಗವಿದ್ಯೆ ಮುಂದುವರಿದದ್ದು)

## ನಾಲ್ಕನೆಯ ಖಂಡ

### (ಷೋಡಶಕಲವಿದ್ಯೆ)



## ಐದನೆಯ ಖಂಡ

### (ಷೋಡಶಕಲವಿದ್ಯೆ)



## ಆರನೆಯ ಖಂಡ

### (ಷೋಡಶಕಲವಿದ್ಯೆ ಮುಂದುವರಿದದ್ದು)



## ಏಳನೆಯ ಖಂಡ

### (ಷೋಡಶಕಲವಿದ್ಯೆ ಮುಂದುವರಿದದ್ದು)



## ಎಂಟನೆಯ ಖಂಡ

### (ಷೋಡಶಕಲವಿದ್ಯೆ ಮುಂದುವರಿದದ್ದು)

## ಒಂಬತ್ತನೆಯ ಖಂಡ

### (ಷೋಡಶಕಲವಿದ್ಯೆ)

**ಗುರುವಿನಿಂದ ಉಪದೇಶ :** ಗುರುವನ್ನು ಉಪದೇಶಮಾಡಬೇಕೆಂದು ಬೇಡಿಕೊಂಡದ್ದು (೩೨೩) – ಆಚಾರ್ಯನೂ ಷೋಡಶಕಲವಿದ್ಯೆಯನ್ನೇ ಹೇಳಿಕೊಟ್ಟದ್ದು (೩೨೪). ಪುಟ ೪೪೯–೪೫೨

## ನಾಲ್ಕನೆಯ ಅಧ್ಯಾಯದ ನಾಲ್ಕರಿಂದ ಒಂಬತ್ತರವರೆಗಿನ ಖಂಡಗಳ ಸಾರ

ಪುಟ ೪೫೩–೪೫೪

## ಹತ್ತನೆಯ ಖಂಡ

### (ಉಪಕೋಸಲವಿದ್ಯೆ)

**ಉಪಕೋಸಲನು ವಿದ್ಯೆಗಾಗಿ ನಿರಶನನಾದದ್ದು :** ಗ್ರಂಥದ ಸಂಬಂಧ (೩೨೫) – ಉಪಕೋಸಲನಿಗೆ ಗುರು ಉಪದೇಶಮಾಡದೆ ಇದ್ದದ್ದು (೩೨೬)– ಹೆಂಡತಿ ನೆನಪುಕೊಟ್ಟರೂ ಗುರು ಉಪದೇಶಿಸದೆ ಇದ್ದದ್ದು (೩೨೭) – ಉಪಕೋಸಲನು ವ್ಯಥೆಯಿಂದ ಊಟಮಾಡದೆ ಹೋದದ್ದು (೩೨೮) – **ಉಪಕೋಸಲನಿಗೆ ಅಗ್ನಿಗಳ ಉಪದೇಶ .** ಪ್ರಾಣವು ಬ್ರಹ್ಮ, ಖಂ ಬ್ರಹ್ಮ (೩೨೯) – ಉಪಕೋಸಲನ ಸಂಶಯ (೩೩೦) – ಸುಖವಿಶಿಷ್ಟಬ್ರಹ್ಮವನ್ನೇ ಇಲ್ಲಿ ಹೇಳಿದೆ (೩೩೧) ಕಂಖಂಗಳ ವ್ಯತಿಹಾರೋಪದೇಶಕ್ಕೆ ಕಾರಣ (೩೩೨) ಅಗ್ನಿಗಳ ಉಪದೇಶದ ಒಟ್ಟರ್ಥ (೩೩೩). ಪುಟ ೪೫೫–೪೬೪

## ಹನ್ನೊಂದನೆಯ ಖಂಡ

### (ಉಪಕೋಸಲವಿದ್ಯೆ ಮುಂದುವರಿದದ್ದು)

**ಗಾರ್ಹಪತ್ಯಾಗ್ನಿವಿದ್ಯೆ :** ಗಾರ್ಹಪತ್ಯಾಗ್ನಿವಿದ್ಯೆಯ ತನುಚತುಷ್ಟಯ (೩೩೪) ಗಾರ್ಹಪತ್ಯೋಪಾಸನೆಗೆ ಫಲ (೩೩೫). ಪುಟ ೪೬೫–೪೬೭

## ಹನ್ನೆರಡನೆಯ ಖಂಡ

### (ಉಪಕೋಸಲವಿದ್ಯೆ ಮುಂದುವರಿದದ್ದು)

**ಅನ್ವಾಹಾರ್ಯಪಚನಾಗ್ನಿವಿದ್ಯೆ:** ಅನ್ವಾಹಾರ್ಯಪಚನದ ತನುಚತುಷ್ಟಯವೂ ಉಪಾಸನೆಯ ಫಲವೂ (೩೩೬). ಪುಟ ೪೬೮–೪೭೦

## ಹದಿಮೂರನೆಯ ಖಂಡ

### (ಉಪಕೋಸಲವಿದ್ಯೆ ಮುಂದುವರಿದದ್ದು)

**ಆಹವನೀಯಾಗ್ನಿವಿದ್ಯೆ :** ಆಹವನೀಯದ ತನುಚತುಷ್ಟಯ (೩೩೭). ಪುಟ ೪೭೦–೪೭೧

## ಹದಿನಾಲ್ಕನೆಯ ಖಂಡ

### (ಉಪಕೋಸಲವಿದ್ಯೆ ಮುಂದುವರಿದದ್ದು)



## ಹದಿನೈದನೆಯ ಖಂಡ

### (ಉಪಕೋಸಲವಿದ್ಯೆ)



## ಹದಿನಾರನೆಯ ಖಂಡ

### (ಪ್ರಾಸಂಗಿಕವಾಗಿ ಯಜ್ಞಧರ್ಮಗಳು)



## ಹದಿನೇಳನೆಯ ಖಂಡ

### (ಪ್ರಾಸಂಗಿಕವಾಗಿ ಯಜ್ಞಧರ್ಮಗಳು, ಮುಂದುವರಿದದ್ದು)

**ಹದಿನಾರುಹದಿನೇಳನೆಯ ಖಂಡಗಳ ಸಾರ** ಪುಟ ೫೦೨

# ಐದನೆಯ ಅಧ್ಯಾಯ

(ಪ್ರಾಣವಿದ್ಯೆ)

## ಒಂದನೆಯ ಖಂಡ

(ಪ್ರಾಣದ ಹೆಚ್ಚುಗಾರಿಕೆ)

ಅಧ್ಯಾಯದ ಸಂಬಂಧ (೩೫೬)- ಪ್ರಾಣವಿದ್ಯೆಯ ಸಂಬಂಧ (೩೫೭)- ಪ್ರಾಣವು ಜ್ಯೇಷ್ಠ, ಶ್ರೇಷ್ಠ (೩೫೮)- ವಾಕ್ಕು ವಸಿಷ್ಠ (೩೫೯)- ಚಕ್ಷುಸ್ಸು ಪ್ರತಿಷ್ಠೆ (೩೬೦)- ಶ್ರೋತ್ರವು ಸಂಪತ್ತು (೩೬೧) - ಮನಸ್ಸು ಆಯತನ (೩೬೨) - ಪ್ರಾಣಗಳೊಳಗೆ ವಿವಾದ (೩೬೩) - ಪ್ರಜಾಪತಿಯ ತೀರ್ಮಾನ (೩೬೪)- ವಾಕ್ಕಿಲ್ಲದೆ ಮಿಕ್ಕ ಪ್ರಾಣಗಳು ಬದುಕಿದ್ದದ್ದು (೩೬೫)- ಚಕ್ಷುರಾದಿಗಳಿಲ್ಲದಿದ್ದರೂ ಬದುಕಿದ್ದದ್ದು (೩೬೬) - ಪ್ರಾಣನನ್ನು ಉತ್ಕ್ರಾಂತನಾಗದಂತೆ ವಾಗಾದಿಗಳು ಬೇಡಿಕೊಂಡದ್ದು (೩೬೭)- ವಾಗಾದಿಗಳು ತಮ್ಮ ವಸಿಷ್ಠತ್ವಾದಿಗಳನ್ನು ಪ್ರಾಣನಿಗೆ ಒಪ್ಪಿಸಿದ್ದು (೩೬೮)- ಮುಖ್ಯಪ್ರಾಣವು ಸರ್ವಕರಣರೂಪವಾದದ್ದು (೩೬೯). ಪುಟ ೫೦೩-೫೨೦

## ಎರಡನೆಯ ಖಂಡ

(ಪ್ರಾಣೋಪಾಸನೆ ಮುಂದುವರಿದದ್ದು)

ಪ್ರಾಣನ ಅನ್ನವೂ ವಸ್ತ್ರವೂ : ಪ್ರಾಣನ ಅನ್ನ (೩೭೨) - ಪ್ರಾಣನಿಗೆ ವಸ್ತ್ರ (೩೭೩) - ಪ್ರಾಣದರ್ಶನಸ್ತುತಿ (೩೭೫) - ಶ್ರೀಮಂಥಕರ್ಮ : ಕರ್ಮದ ಪ್ರಕಾರವೂ ಹೋಮಗಳೂ (೩೭೬) - ಮಂಥಕರ್ಮದ ಉಳಿದ ಹೋಮಗಳು (೩೭೭)- ಮಂಥಜಪಮಂತ್ರ (೩೭೮) - ಮಂಥಭಕ್ಷಣಪ್ರಕಾರ (೩೭೯) - ಮಂಥಕರ್ಮವು ಸಮೃದ್ಧವಾದದ್ದಕ್ಕೆ ಗುರುತು (೩೮೦). ಪುಟ ೫೨೦-೫೩೫

**ಐದನೆಯ ಅಧ್ಯಾಯದ ಒಂದು ಎರಡನೆಯ ಖಂಡಗಳ ಸಾರ**

ಪುಟ ೫೩೬-೫೩೭

## ಮೂರನೆಯ ಖಂಡ

(ಪಂಚಾಗ್ನಿವಿದ್ಯೆ)

ಶ್ವೇತಕೇತು ಪಂಚಾಲರಾಜನಲ್ಲಿಗೆ ಹೋದದ್ದು : ಕಥೆಯ ಸಂಬಂಧ (೩೮೧) ಶ್ವೇತಕೇತುವಿಗೂ ಜೈವಲಿಗೂ ಸಂಭಾಷಣೆ (೩೮೨) - ಜೈವಲಿಯ ಪ್ರಶ್ನೆಗಳಿಗೆ ಶ್ವೇತಕೇತು ಉತ್ತರವನ್ನು ಹೇಳಲಾರದೆಹೋದದ್ದು (೩೮೩) - ಶ್ವೇತಕೇತು ತಂದೆಯ ಬಳಿಗೆ ಬಂದದ್ದು : ತಂದೆಗೂ ಪ್ರಶ್ನೆಗಳ ಉತ್ತರ ತಿಳಿಯದೆ ಇದ್ದದ್ದು

## ನಾಲ್ಕನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)



## ಐದನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)



## ಆರನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)



## ಏಳನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)



## ಎಂಟನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)



## ಒಂಬತ್ತನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)

## ಹತ್ತನೆಯ ಖಂಡ

### (ಪಂಚಾಗ್ನಿವಿದ್ಯೆ ಮುಂದುವರಿದದ್ದು)

**ಪಂಚಾಗ್ನಿವಿದ್ಯೆಯ ಫಲ :** ಕೇವಲ ಕರ್ಮಿಗಳಾದ ಗೃಹಸ್ಥರಿಗೆ ದಕ್ಷಿಣಮಾರ್ಗ (೪೦೭)– ಕರ್ಮಿಗಳು ದೇವತೆಗಳಿಗೆ ಭಕ್ಷ್ಯವಾಗುತ್ತಾರೆಂದರೇನು ? (೪೦೮)–ಇಷ್ಟಾದಿಕಾರಿಗಳು ಈ ಲೋಕಕ್ಕೆ ಬರುವ ಕ್ರಮ (೪೦೯)– ಕರ್ಮಶೇಷದಿಂದ ಇಷ್ಟಾದಿಕಾರಿಗಳು ಇಳಿಯುತ್ತಾರೆ (೪೧೦) – ಇಷ್ಟಾದಿಕರ್ಮಿಗಳು ಹಿಂತಿರುಗುವ ಮಾರ್ಗ (೪೧೧–೪೧೨) – ಚಂದ್ರಮಂಡಲದಿಂದ ಇಳಿಯುವವರಿಗೆ ದುಃಖದ ಅರಿವು ಇಲ್ಲ (೪೧೩)– **ಅನುಶಯಿಗಳಿಗೆ ಜನ್ಮಾಂತರ :** ಕರ್ಮಕ್ಕೆ ಅನುಗುಣವಾಗಿ ಜನ್ಮ (೪೧೪) –ಕರ್ಮಿಗಳೂ ಉಪಾಸಕರೂ ಅಲ್ಲದವರಿಗೆ ಗತಿ (೪೧೫) – **ಜೈವಲಿಯ ಪ್ರಶ್ನೆಗಳಿಗೆ ಉತ್ತರಗಳ ವಿನಿಯೋಗ** (೪೧೬) ವೈರಾಗ್ಯೋಪದೇಶ (೪೧೭)– **ಪಂಚಾಗ್ನಿವಿದ್ಯೆಯ ಸ್ತುತಿ :** ಮಹಾಪಾತಕಿಗಳ ಸವ್ಯವಹಾರದಿಂದಲೂ ಪಂಚಾಗ್ನ್ಯುಪಾಸಕರಿಗೆ ದೋಷವಾಗದು (೪೧೮). ಪುಟ ೫೬೫–೬೦೩

### ಐದನೆಯ ಅಧ್ಯಾಯದ ಮೂರರಿಂದ ಹತ್ತರವರೆಗಿನ ಖಂಡಗಳ ಸಾರ

ಪುಟ ೬೦೩–೬೦೫

## ಹನ್ನೊಂದನೆಯ ಖಂಡ

### (ವೈಶ್ವಾನರವಿದ್ಯೆ)

**ವೈಶ್ವಾನರವಿದ್ಯೆಗಾಗಿ ಆಖ್ಯಾಯಿಕೆ :** ಮುಂದಿನ ಗ್ರಂಥದ ಸಂಬಂಧ (೪೧೯) –ಪ್ರಾಚೀನಶಾಲಾದಿಗಳು ಆತ್ಮವಿಚಾರವನ್ನು ಮಾಡಿದ್ದು (೪೨೦) – ಉದ್ದಾಲಕನ ಬಳಿಗೆ ಬಂದದ್ದು (೪೨೧) – ಅವನು ಅಶ್ವಪತಿಯ ಬಳಿಗೆ ಅವರನ್ನು ಕರೆದುಕೊಂಡು ಹೋದದ್ದು (೪೨೨) – **ಅಶ್ವಪತಿಯಲ್ಲಿ ಪ್ರಾಚೀನಶಾಲಾದಿಗಳು ಶಿಷ್ಯರಾದದ್ದು:** ಅಶ್ವಪತಿಯು ಯಾಗಕ್ಕೆ ನಿಲ್ಲಬೇಕೆಂದು ಕೇಳಿಕೊಂಡದ್ದು (೪೨೩) – ವೈಶ್ವಾನರವಿದ್ಯೆಯನ್ನೇ ಅವರು ಬೇಡಿದ್ದು (೪೨೪) – ರಾಜನು ಉಪದೇಶಮಾಡಲು ಒಪ್ಪಿದ್ದು (೪೨೫).

ಪುಟ ೬೦೬–೬೧೫

## ಹನ್ನೆರಡನೆಯ ಖಂಡ

### (ವೈಶ್ವಾನರವಿದ್ಯೆ ಮುಂದುವರಿದದ್ದು)

**ದ್ಯುಲೋಕವೆಂಬ ವೈಶ್ವಾನರನ ತಲೆ (೪೨೬).** ಪುಟ ೬೧೬–೬೧೮

## ಹದಿಮೂರನೆಯ ಖಂಡ

### (ವೈಶ್ವಾನರವಿದ್ಯೆ ಮುಂದುವರಿದದ್ದು)

**ಆದಿತ್ಯನೆಂಬ ವೈಶ್ವಾನರನ ಕಣ್ಣು (೪೨೭).** ಪುಟ ೬೧೯–೬೨೦

## ಹದಿನಾಲ್ಕನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಹದಿನೈದನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಹದಿನಾರನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಹದಿನೇಳನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಹದಿನೆಂಟನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಹತ್ತೊಂಬತ್ತನೆಯ ಖಂಡ

(ವೈಶ್ವಾನರವಿದ್ಯೆ ಮುಂದುವರಿದದ್ದು)



## ಇಪ್ಪತ್ತರಿಂದ ಇಪ್ಪತ್ತುಮೂರನೆಯ ಖಂಡದವರೆಗೆ

(ವೈಶ್ವಾನರವಿದ್ಯೆ ಮುಂದುವರಿದದ್ದು)

## ಇಪ್ಪತ್ತುನಾಲ್ಕನೆಯ ಖಂಡ

(ವೈಶ್ವಾನರವಿದ್ಯೆಯ ಉಪಸಂಹಾರ)

**ಪ್ರಾಣಾಗ್ನಿಹೋತ್ರದ ಸ್ತುತಿಗಾಗಿ ಕೇವಲಾಗ್ನಿಹೋತ್ರದ ನಿಂದೆ (೪೩೮) – ಈ ಅಗ್ನಿಹೋತ್ರದ ವೈಶಿಷ್ಟ್ಯ (೪೩೯) –ಉಪಾಸಕನಿಗೆ ಪಾಪನಾಶ (೪೪೦)– ವೈಶ್ವಾನರೋಪಾಸಕನಿಗೆ ನೀಚರಿಗೆ ಉಚ್ಛಿಷ್ಟದಾನಮಾಡಿದ ದೋಷವಿಲ್ಲ (೪೪೧) – ಈ ಉಪಾಸಕನ ಭೋಜನವನ್ನು ಎಲ್ಲರೂ ಕಾದುಕೊಂಡಿರುತ್ತಾರೆ (೪೪೨). ಪುಟ ೬೩೮–೬೪೩**

## ಐದನೆಯ ಅಧ್ಯಾಯದ ಹನ್ನೊಂದರಿಂದ ಸಮಾಪ್ತಿಯುವರೆಗಿನ ಖಂಡಗಳ ಸಾರ

**ಪುಟ ೬೪೪–೬೪೬**

# ಆರನೆಯ ಅಧ್ಯಾಯ

(ಆತ್ಮೈಕತ್ವಜ್ಞಾನ)

## ಒಂದನೆಯ ಖಂಡ

(ಏಕವಿಜ್ಞಾನದಿಂದ ಸರ್ವಜ್ಞಾನ)

**ಅಧ್ಯಾಯದ ಸಂಬಂಧ (೪೪೩) – ಶ್ವೇತಕೇತುವು ಬ್ರಹ್ಮಚರ್ಯವಾಸಕ್ಕೆ ಹೋದದ್ದು (೪೪೪) – ಶ್ವೇತಕೇತು ಬ್ರಹ್ಮಚರ್ಯದಿಂದ ಹಿಂತಿರುಗಿದ್ದು (೪೪೫) – ಆತ್ಮೋಪದೇಶವನ್ನು ಪಡೆದಿದ್ದೀಯೋ ಎಂದು ತಂದೆ ಕೇಳಿದ್ದು (೪೪೬) – ಏಕ ವಿಜ್ಞಾನದಿಂದ ಸರ್ವವಿಜ್ಞಾನವಾಗುವದಕ್ಕೆ ದೃಷ್ಟಾಂತಗಳು · ಕಾರಣಗಳಿಗಿಂತ ಕಾರ್ಯವು ಬೇರೆಯಲ್ಲ (೪೪೭) – ಶ್ವೇತಕೇತು ತಂದೆಯನ್ನು ಉಪದೇಶಮಾಡುವಂತೆ ಕೇಳಿಕೊಂಡದ್ದು (೪೪೮). ಪುಟ ೬೪೭–೬೫೬**

## ಎರಡನೆಯ ಖಂಡ

(ಅದ್ವಿತೀಯಸತ್ತಿನಿಂದ ಎಲ್ಲದರ ಸೃಷ್ಟಿ)

**ಸೃಷ್ಟಿಗೆ ಪೂರ್ವದಲ್ಲಿ ಅದ್ವಿತೀಯಸನ್ಮಾತ್ರವಿತ್ತು (೪೪೯)– ಶ್ರುತಿಯಲ್ಲಿರುವದು ವೈಶೇಷಿಕರ ಸತ್ತಾಸಾಮಾನ್ಯವಲ್ಲ (೪೫೦) – ಸತ್ತಿನಿಂದ ತೇಜೋಬನ್ನಗಳ ಸೃಷ್ಟಿ : ಕಾಣುವ ಕಾರ್ಯವು ಅಸತ್ತಲ್ಲ (೪೫೬) – ತೇಜಆದಿಯಾಗಿ ಸೃಷ್ಟಿಯನ್ನು ಹೇಳಿರುವದೇಕೆ? (೪೫೭)– ತೇಜಸ್ಸಿನಿಂದ ಅಪ್ಪಿನ ಸೃಷ್ಟಿ (೪೫೮)– ಅಪ್ಪಿನಿಂದ ಅನ್ನದ ಸೃಷ್ಟಿ (೪೫೯). ಪುಟ ೬೫೭–೬೮೧**

## ಮೂರನೆಯ ಖಂಡ

(ಸೃಷ್ಟಿಯಲ್ಲಿ ಆತ್ಮನ ಪ್ರವೇಶ, ತ್ರಿವೃತ್ಕರಣ)

**ಪ್ರಾಣಿಗಳಿಗೆ ಆಯಾ ಜಾತಿಯ ಪ್ರಾಣಿಗಳು ಕಾರಣ (೪೬೧)– ಅಂಡವು ಅಂಡಜಗಳಿಗೆ ಕಾರಣವಲ್ಲ (೪೬೨) – ಸದ್ಬ್ರಹ್ಮದ ಸಂಕಲ್ಪ (೪೬೨) – ಒಂದೊಂದು**

## ನಾಲ್ಕನೆಯ ಖಂಡ

### (ಬಾಹ್ಯತ್ರಿವೃತ್ಕರಣ)



## ಐದನೆಯ ಖಂಡ

### (ತ್ರಿವೃತ್ಕರಣ ಮುಂದುವರಿದದ್ದು)



## ಆರನೆಯ ಖಂಡ

### (ತ್ರಿವೃತ್ಕರಣ ಮುಂದುವರಿದದ್ದು)



## ಏಳನೆಯ ಖಂಡ

### (ತ್ರಿವೃತ್ಕರಣ ಮುಂದುವರಿದದ್ದು)

## ಎಂಟನೆಯ ಖಂಡ

### (ಸುಷುಪ್ತಿವಿಚಾರದಿಂದ ಜೀವನ ಸತ್ಸ್ವರೂಪನಿರ್ಧಾರ)



## ಒಂಬತ್ತನೆಯ ಖಂಡ

### (ಸತ್ಸಂಪತ್ತಿಯ ವಿಷಯಕ್ಕೆ ಆಕ್ಷೇಪಸಮಾಧಾನಗಳು)



## ಹತ್ತನೆಯ ಖಂಡ

### (ಸತ್ಸಂಪತ್ತಿಯ ವಿಷಯಕ್ಕೆ ಆಕ್ಷೇಪಸಮಾಧಾನಗಳು)



## ಹನ್ನೊಂದನೆಯ ಖಂಡ

### (ಸತ್ಸಂಪತ್ತಿಯ ವಿಷಯಕ್ಕೆ ಆಕ್ಷೇಪಸಮಾಧಾನಗಳು)

## ಹನ್ನೆರಡನೆಯ ಖಂಡ

### (ಸತ್ತಿನಿಂದ ಜಗತ್ತುಂಟಾಗುವ ಬಗ್ಗೆ ಶಂಕಾಸಮಾಧಾನಗಳು)



## ಹದಿಮೂರನೆಯ ಖಂಡ

### (ಸದಾತ್ಮನ ದರ್ಶನಕ್ಕೆ ಉಪಾಯವಿದೆ)



## ಹದಿನಾಲ್ಕನೆಯ ಖಂಡ

### (ಸತ್ತನ್ನರಿತುಕೊಳ್ಳುವದಕ್ಕೆ ಉಪಾಯ)



## ಹದಿನೈದನೆಯ ಖಂಡ

### (ಸತ್ಸಂಪತ್ತಿಯ ಕ್ರಮ)



## ಹದಿನಾರನೆಯ ಖಂಡ

### (ಸತ್ತನ್ನರಿತವನಿಗೆ ಅಪುನರಾವೃತ್ತಿ)

ಕ್ಕೆ ಕಾರಣ (೫೩೯) – ಶ್ವೇತಕೇತು ಸದ್ಬ್ರಹ್ಮವೇ ತಾನೆಂದು ಅರಿತುಕೊಂಡದ್ದು (೫೪೦). ಪುಟ ೭೮೪–೭೯೯

**ಆರನೆಯ ಅಧ್ಯಾಯದ ಸಾರ** ಪುಟ ೮೦೦–೮೦೫

# ಏಳನೆಯ ಅಧ್ಯಾಯ

## (ಭೂಮವಿದ್ಯೆ)

## ಒಂದನೆಯ ಖಂಡ

### (ನಾರದಸನತ್ಕುಮಾರಸಂವಾದ – ನಾಮಬ್ರಹ್ಮೋಪದೇಶ)

**ನಾರದನು ಸನತ್ಕುಮಾರರಲ್ಲಿಗೆ ಬಂದದ್ದು :** ಏಳನೆಯ ಅಧ್ಯಾಯದ ಸಂಬಂಧ (೫೪೬) – ಕಥೆಯ ಸಂಬಂಧ (೫೪೭) – ಸನತ್ಕುಮಾರನು ನಾರದನನ್ನು ಏನೇನು ಬಲ್ಲೆ ? ಎಂದು ಕೇಳಿದ್ದು (೫೪೮) – ನಾರದನಿಗೆ ತಿಳಿದಿದ್ದ ಋಗ್ವೇದಾದಿಗಳು (೫೪೯) – ಆತ್ಮವಿದ್ಯೆಯನ್ನು ಹೇಳಿಕೊಡಬೇಕೆಂದು ಪ್ರಾರ್ಥಿಸಿದ್ದು (೫೫೦) – ಸನತ್ಕುಮಾರನ ಉಪದೇಶ (೫೫೧) – ನಾಮವೇ ಬ್ರಹ್ಮವೆಂದು ಉಪಾಸನೆಮಾಡಬೇಕು (೫೫೨) – ನಾಮೋಪಾಸನೆಗೆ ಫಲ (೫೫೩) – ನಾಮಕ್ಕಿಂತಲೂ ಹೆಚ್ಚಿನದುಂಟು (೫೫೪).

ಪುಟ ೮೦೬–೮೧೮

## ಎರಡನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)

**ವಾಗ್ಬ್ರಹ್ಮ :** ವಾಕ್ಕಿನ ಹೆಚ್ಚುಗಾರಿಕೆ (೫೫೫) – ವಾಗ್ಬ್ರಹ್ಮೋಪಾಸನೆಗೆ ಫಲ (೫೫೬). ಪುಟ ೮೧೯–೮೨೧

## ಮೂರನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)

**ಮನೋಬ್ರಹ್ಮ :** ಮನಸ್ಸಿನ ಹೆಚ್ಚುಗಾರಿಕೆ (೫೫೭) – ಮನೋಬ್ರಹ್ಮೋಪಾಸನೆಗೆ ಫಲ (೫೫೮). ಪುಟ ೮೨೨–೮೨೫

## ನಾಲ್ಕನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)

**ಸಂಕಲ್ಪಬ್ರಹ್ಮ :** ಸಂಕಲ್ಪದ ಹೆಚ್ಚುಗಾರಿಕೆ (೫೫೯) – ಸಂಕಲ್ಪವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು (೫೬೦) – ಸಂಕಲ್ಪೋಪಾಸನೆಗೆ ಫಲ (೫೬೧).

ಪುಟ ೮೨೫–೮೩೨

## ಐದನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಆರನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಏಳನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಎಂಟನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಒಂಬತ್ತನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹತ್ತನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)

## ಹನ್ನೊಂದನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹನ್ನೆರಡನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹದಿಮೂರನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹದಿನಾಲ್ಕನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹದಿನೈದನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಹದಿನಾರನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)

## ಹದಿನೇಳನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಹದಿನೆಂಟನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಹತ್ತೊಂಬತ್ತನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತೊಂದನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತೆರಡನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತುಮೂರನೆಯ ಖಂಡ

(ಭೂಮವಿದ್ಯೆ ಮುಂದುವರಿದದ್ದು)

## ಇಪ್ಪತ್ತುನಾಲ್ಕನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತೈದನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



## ಇಪ್ಪತ್ತಾರನೆಯ ಖಂಡ

### (ಭೂಮವಿದ್ಯೆ ಮುಂದುವರಿದದ್ದು)



# ಎಂಟನೆಯ ಅಧ್ಯಾಯ

### (ದಹರವಿದ್ಯೆ)

## ಒಂದನೆಯ ಖಂಡ

### (ದಹರೋಪಾಸನೆಯ ವಿವರ)

## ಎರಡನೆಯ ಖಂಡ

### (ದಹರವಿದ್ಯೆ)



## ಮೂರನೆಯ ಖಂಡ

### (ದಹರವಿದ್ಯೆ)



## ನಾಲ್ಕನೆಯ ಖಂಡ

### (ದಹರವಿದ್ಯೆ ಮುಂದುವರಿದದ್ದು)



## ಐದನೆಯ ಖಂಡ

### (ದಹರವಿದ್ಯೆ ಮುಂದುವರಿದದ್ದು)



## ಆರನೆಯ ಖಂಡ

### (ದಹರವಿದ್ಯೆ ಮುಂದುವರಿದದ್ದು)

(೬೩೯) – ಸುಷುಪ್ತಿಯಲ್ಲಿ ನಾಡಿಗಳ ದ್ವಾರದಿಂದ ಪರಮಾತ್ಮಪ್ರವೇಶ (೬೪೦) – ಸುಷುಪ್ತಜೀವನಿಗೆ ಕರ್ಮಸಂಬಂಧವಿಲ್ಲ (೬೪೧) – ಉಪಾಸಕನ ಉತ್ಕ್ರಾಂತಿಯ ಪೂರ್ವಾವಸ್ಥೆ (೬೪೨) – ಬ್ರಹ್ಮಲೋಕಕ್ಕೆ ಹೋಗುವ ಕ್ರಮ (೬೪೩) – ಸುಷುಪ್ತಿ ನಾಡಿಯೇ ಅಮೃತನಾಡಿ (೬೪೪). ಪುಟ ೯೫೬–೯೬೮

## ಎಂಟನೆಯ ಅಧ್ಯಾಯದ ಮೊದಲನೆಯ ಆರುಖಂಡಗಳ ಸಾರ

ಪುಟ ೯೬೯–೯೭೧

## ಏಳನೆಯ ಖಂಡ

### (ಅವಸ್ಥಾತ್ರಯನಿರೂಪಣದಿಂದ ಆತ್ಮತತ್ತ್ವನಿರ್ಧಾರಣ)

ಮುಂದಿನ ಗ್ರಂಥದ ಸಂಬಂಧ (೬೪೫) – ಪ್ರಜಾಪತಿಯು ಹೇಳಿದ ಆತ್ಮನ ಲಕ್ಷಣ (೬೪೬)– ಆತ್ಮವಿಜ್ಞಾನದ ಫಲ (೬೪೭)– "ಅನ್ವೇಷ್ಟವ್ಯೋ ವಿಜಿಜ್ಞಾಸಿತವ್ಯಃ" ಎಂಬುದು ವಿಧಿಯಲ್ಲ (೬೪೮)– ಇಂದ್ರವಿರೋಚನರು ಪ್ರಜಾಪತಿಯ ಬಳಿಗೆ ಬಂದದ್ದು (೬೪೯) – ಇಂದ್ರವಿರೋಚನರು ಆತ್ಮೋಪದೇಶವನ್ನು ಕೇಳಿಕೊಂಡದ್ದು (೬೫೦) – ಅಕ್ಷಿಪುರುಷನಾದ ಬ್ರಹ್ಮ (೬೫೧) – ಪ್ರಜಾಪತಿಯು ಸುಳ್ಳುಹೇಳಿದನೆ ? (೬೫೨).

ಪುಟ ೯೭೨–೯೮೩

## ಎಂಟನೆಯ ಖಂಡ

### (ಅವಸ್ಥಾತ್ರಯನಿರೂಪಣ)

**ನೀರಿನ ಶರಾವೆಯ ದೃಷ್ಟಾಂತ :** ಶರಾವೆಯಲ್ಲಿ ಪ್ರತಿಬಿಂಬವನ್ನು ಇಂದ್ರವಿರೋಚನರು ಕಂಡದ್ದು (೬೫೩) – ಅಲಂಕರಿಸಿಕೊಂಡು ಮತ್ತೆ ಪ್ರತಿಬಿಂಬವನ್ನು ಕಂಡದ್ದು, ಇದರ ಅಭಿಪ್ರಾಯ (೬೫೪) – ಪ್ರಜಾಪತಿಯು ಮತ್ತೆ ಆತ್ಮಸ್ವರೂಪವನ್ನೇ ವರ್ಣಿಸಿದ್ದು (೬೫೫) – ಇಂದ್ರವಿರೋಚನರು ಹಿಂತಿರುಗಿದ್ದು, ವಿರೋಚನನ ನಿಶ್ಚಯ (೬೫೬)– ದೇಹಾತ್ಮವಾದವೇ ಅಸುರರ ಉಪನಿಷತ್ತು (೬೫೭). ಪುಟ ೯೮೪–೯೯೫

## ಒಂಬತ್ತನೆಯ ಖಂಡ

### (ಅವಸ್ಥಾತ್ರಯನಿರೂಪಣ)

ಇಂದ್ರನು ದೇಹಚ್ಛಾಯಾತ್ಮವಾದದಲ್ಲಿ ದೋಷವನ್ನು ಕಂಡದ್ದು (೬೫೮) – ಇಂದ್ರನು ಪ್ರಜಾಪತಿಯಲ್ಲಿ ತನ್ನ ಅಭಿಪ್ರಾಯವನ್ನು ಹೇಳಿಕೊಂಡದ್ದು (೬೫೯) – ಇಂದ್ರವಿರೋಚನರ ಮತಭೇದಕ್ಕೆ ಕಾರಣ (೬೬೦) – ಪ್ರಜಾಪತಿಯು ಇಂದ್ರನನ್ನು ಮತ್ತೆ ಬ್ರಹ್ಮಚರ್ಯಕ್ಕೆ ನಿಲ್ಲಿಸಿದ್ದು (೬೬೧) . ಪುಟ ೯೯೬–೧೦೦೨

## ಹತ್ತನೆಯ ಖಂಡ

### (ಅವಸ್ಥಾತ್ರಯನಿರೂಪಣ)

ಸ್ವಪ್ನಾತ್ಮನ ಉಪದೇಶ, ಇಂದ್ರನ ಅಸಂತೋಷ (೬೬೨) - ಇಂದ್ರನು ಮತ್ತೆ ಬ್ರಹ್ಮಚರ್ಯಕ್ಕೆ ನಿಂತದ್ದು (೬೬೩). ಪುಟ ೧೦೦೩-೧೦೦೮

## ಹನ್ನೊಂದನೆಯ ಖಂಡ

### (ಅವಸ್ಥಾತ್ರಯನಿರೂಪಣ)

ಸುಷುಪ್ತಾತ್ಮನ ಉಪದೇಶವೂ, ಇಂದ್ರನ ಅಸಂತೋಷವೂ (೬೬೪) – ಇಂದ್ರನು ಇನ್ನೈದು ವರ್ಷಗಳು ಬ್ರಹ್ಮಚರ್ಯಕ್ಕೆ ನಿಂತದ್ದು (೬೬೫). ಪುಟ ೧೦೦೯-೧೦೧೩

## ಹನ್ನೆರಡನೆಯ ಖಂಡ

### (ಅವಸ್ಥಾತ್ರಯಾತೀತಾತ್ಮನ ಸ್ವರೂಪ)

ಮರ್ತ್ಯವಾದ ಶರೀರವು ಆತ್ಮನಿಗೆ ಅಧಿಷ್ಠಾನ (೬೬೬) – ಸಶರೀರನಿಗೆ ಪ್ರಿಯಾಪ್ರಿಯಗಳು ತಪ್ಪವು (೬೬೭)– ಅಶರೀರನಿಗೆ ಪ್ರಿಯಾಪ್ರಿಯಗಳು ಸೋಂಕವು (೬೬೮) – ಪ್ರಜಾಪತಿಯು ಸಂವೇದ್ಯಾನಂದಪ್ರಾಪ್ತಿಯನ್ನು ಹೇಳಿಲ್ಲ (೬೬೯) – ಮುಕ್ತನಿಗೆ ಐಶ್ವರ್ಯವನ್ನು ಹೇಳುವ ವಾಕ್ಯಗಳ ಗತಿ (೬೭೦)–ಅಶರೀರಸ್ವರೂಪಪ್ರಾಪ್ತಿಪ್ರಕಾರ: ಆತ್ಮನ ಸ್ವರೂಪನಿಷ್ಪತ್ತಿಗೆ ದೃಷ್ಟಾಂತ (೬೭೬) – ವಿದ್ಯೆಯಿಂದ ಸ್ವರೂಪವನ್ನು ಪಡೆದುಕೊಂಡವನೇ ಉತ್ತಮಪುರುಷನು (೬೭೭) – ಮುಕ್ತಾತ್ಮನ ಐಶ್ವರ್ಯ (೬೭೮) – ದ್ವಿತೀಯಾಭಾವವಿದ್ದರೂ ಕಾಣುತ್ತಾನೆ ಎಂಬುದರ ಅಭಿಪ್ರಾಯ (೬೭೯) – ಅಕ್ಷಿಯಲ್ಲಿ ಕಾಣುತ್ತಾನೆ ಎಂಬುದರ ಅಭಿಪ್ರಾಯ (೬೮೦) - ಜ್ಞಾನವು ಆತ್ಮನದು, ನಿರ್ವಿಶೇಷ ದರ್ಶನವು ಕರಣದ್ದು : ಅಶರೀರಾತ್ಮನು ಇಂದ್ರಿಯಗಳಲ್ಲಿ ಕಾಣಬರುವ ಬಗೆ (೬೮೧) ಅರಿವೇ ಆತ್ಮನ ಸ್ವರೂಪವು (೬೮೨) – ಮುಕ್ತನಿಗೆ ದೈವಮನಸ್ಸಿನಿಂದ ಸರ್ವಕಾಮಾವಾಪ್ತಿ (೬೮೩)–ದೇವತೆಗಳಿಗೆ ಈ ಜ್ಞಾನದಿಂದಾದ ಫಲ : ದೇವತೆಗಳಿಗೆ ಆತ್ಮಜ್ಞಾನದಿಂದ ಸರ್ವಲೋಕಕಾಮಗಳೂ ದೊರಕಿವೆ (೬೮೪) . ಪುಟ ೧೦೧೪-೧೦೪೮

## ಹದಿಮೂರನೆಯ ಖಂಡ

### (ಜಪಧ್ಯಾನಾರ್ಥಮಂತ್ರಗಳು)

ಉಪಾಸಕನಿಗೆ ಮಂತ್ರ : ಉಪಾಸಕನು ಮಾಡುವ ಬ್ರಹ್ಮಲೋಕಧ್ಯಾನ (೬೮೫). ಪುಟ ೧೦೪೮-೧೦೫೦

## ಹದಿನಾಲ್ಕನೆಯ ಖಂಡ

(ಬ್ರಹ್ಮಲಕ್ಷಣವೂ ಧ್ಯಾನಮಂತ್ರವೂ)



## ಹದಿನೈದನೆಯ ಖಂಡ

(ಗುರುವಂಶವೂ ಸಾಧನಕಲಾಪವೂ)



---

# ಭಾಷ್ಯಚರ್ಚೆಗಳ ಅನುಕ್ರಮಣಿಕೆ

---

## ೧. ಬ್ರಹ್ಮಸಂಸ್ಥನೆಂದರೆ ಯಾರು?



## ೨. ಸೂರ್ಯೋದಯಾಸ್ತಮಯಗಳ ವಿಷಯಕ್ಕೆ ಚರ್ಚೆ



## ೩. ಚರ್ಚೆ: ವಾಗಾದಿಗಳು ಸ್ಪರ್ಧೆಮಾಡಿದವೆಂಬುದು ಹೇಗೆ ಸರಿ?



## ೪. ಚರ್ಚೆ: ಇದು ವಸ್ತ್ರದೃಷ್ಟಿಯೊ? ಆಚಮನಾಂತರವಿಧಿಯೊ?



## ೫. ದೇವಯಾನದ ವಿಷಯಕ್ಕೆ ಚರ್ಚೆ

## ೬. ಬೌದ್ಧರ ಅಸತ್ಕಾರ್ಯವಾದದಲ್ಲಿ ದೋಷ



## ೭. ಈಕ್ಷಿತೃತ್ವವಿಷಯಕ್ಕೆ ಆಕ್ಷೇಪಸಮಾಧಾನಗಳು



## ೮. ಆತ್ಮನು ದೇಹದಲ್ಲಿ ಪ್ರವೇಶಿಸಿರುವ ಬಗೆ



## ೯. ಚರ್ಚೆ : ಜ್ಞಾನಿಗೆ ಮತ್ತೊಂದು ಶರೀರಪ್ರಾಪ್ತಿಯುಂಟೆ?



## ೧೦. ಸತ್ಸಂಪತ್ತಿಕ್ರಮದಲ್ಲಿ ಮತಾಂತರವೂ ಖಂಡನೆಯೂ



## ೧೧. ತತ್ತ್ವಮಸಿ ಎಂಬ ವಾಕ್ಯಕ್ಕೆ ತಾತ್ಪರ್ಯ

## ೧೨. ಭೂಮದಲ್ಲಿ ತನ್ನನ್ನು ಕಾಣುವದೇ ಮುಂತಾದ ವ್ಯವಹಾರವುಂಟೆ?

ಭೂಮದಲ್ಲಿ ವ್ಯವಹಾರವುಂಟೆ? (೫೯೫). ಪುಟ ೮೮೨-೮೮೫

## ೧೩. ಚರ್ಚೆ: ಇಲ್ಲಿ ಬ್ರಹ್ಮಚರ್ಯವನ್ನೇ ಮುಖ್ಯವಾಗಿ ಹೊಗಳಿದೆಯೆ?

ಬ್ರಹ್ಮಚರ್ಯವನ್ನು ಹೊಗಳಿದೆಯೆ? (೬೩೫). ಪುಟ ೯೪೯

## ೧೪. ಬ್ರಹ್ಮಲೋಕದ ಪದಾರ್ಥಗಳು ಮಾನಸಮಾತ್ರವೆ?

ಮಾನಸಮಾತ್ರವೇ? ಎಂಬ ಚರ್ಚೆ (೬೩೬). ಪುಟ ೯೫೦-೯೫೫

## ೧೫. ಪ್ರಜಾಪತಿಯು ಪ್ರತಿಪರ್ಯಾಯದಲ್ಲಿಯೂ ಒಬ್ಬನೇ ಆತ್ಮನನ್ನು ಹೇಳಿದನೆ?

ಪೂರ್ವಪಕ್ಷ: ಇಲ್ಲಿ ಬೇರೆಬೇರೆಯ ಆತ್ಮರುಗಳನ್ನೇ ಹೇಳಿದೆ (೬೭೧)– ಸಿದ್ಧಾಂತ: ಅವಸ್ಥಾತ್ರಯದಲ್ಲಿಯೂ ಪರಮಾತ್ಮನನ್ನೇ ಇಲ್ಲಿ ಹೇಳಿದೆ (೬೭೨) – ಸ್ವಪ್ನದಲ್ಲಿಯೂ ಸಾಕ್ಷಿಯನ್ನೇ ಉಪದೇಶಿಸಿರುತ್ತದೆ (೬೭೩) – ತುರೀಯನು ಜೀವನಿಗಿಂತ ಬೇರೆಯಲ್ಲ (೬೭೪) – ಆತ್ಮನಲ್ಲಿ ಸಂಸಾರಿತ್ವವು ಕಲ್ಪಿತವಾಗಿದೆ (೬೭೫). ಪುಟ ೧೦೨೨-೧೦೩೩

# ಸಂಕೇತಗಳ ವಿವರ

ಈ ಪುಸ್ತಕದಲ್ಲಿ ಉಪಯೋಗಿಸಿರುವ ಕೆಲವು ಸಂಕೇತಗಳನ್ನು ಮಾತ್ರ ವಿವರಿಸಿದೆ. ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲೆಯಲ್ಲಿ ಉಪಯೋಗಿಸಿರುವ ಇತರ ಸಂಕೇತಗಳೂ ಇಲ್ಲಿ ಕಾಣಬರುತ್ತವೆ.

| | | |
|---|---|---|
| ಅ. | = | ಆನ್ವೇಕರ್ ಕಂಪನಿಯ ಪುಸ್ತಕದ ಪಾಠ |
| ಆ. ಟೀ. | = | ಆನಂದಗಿರಿಗಳ ಟೀಕೆ |
| ಐ. ಬ್ರಾ. | = | ಐತರೇಯಬ್ರಾಹ್ಮಣ |
| ಗೌ. ಧ. | = | ಗೌತಮಧರ್ಮಸೂತ್ರ |
| ತೆ. | = | ತೆಲಗುಪುಸ್ತಕಪಾಠ |
| ತೈ. ಬ್ರಾ. | = | ತೈತ್ತಿರೀಯಬ್ರಾಹ್ಮಣ |
| ಪಾ. ಸೂ. | = | ಪಾಣಿನೀಯಸೂತ್ರ |
| ಮನು. | = | ಮನುಸ್ಮೃತಿ |
| ವಾ. | = | ವಾಣೀವಿಲಾಸಪುಸ್ತಕಪಾಠ |
| ವಿ. ಪು. | = | ವಿಷ್ಣುಪುರಾಣ |
| ಶತ. ಬ್ರಾ. | = | ಶತಪಥಬ್ರಾಹ್ಮಣ |
| ಶಾ. ಭಾ. | = | ಶಾಬರಭಾಷ್ಯ |



॥ ಓಮ್ ॥

ಶಾಂಕರಭಾಷ್ಯಸಮೇತವಾದ

# ಛಾಂದೋಗ್ಯೋಪನಿಷತ್ತು



## ಭಾಷ್ಯಕಾರರ ಅವತರಣಿಕೆ

### ಗ್ರಂಥಾರಂಭಪ್ರತಿಜ್ಞೆ

(ಭಾಷ್ಯ)

೧. 'ಓಮಿತ್ಯೇತದಕ್ಷರಮ್' ಇತ್ಯಾದ್ಯಷ್ಟಾಧ್ಯಾಯೀ ಛಾನ್ದೋಗ್ಯೋಪನಿಷತ್ । ತಸ್ಯಾಃ ಸಂಕ್ಷೇಪತೋಽರ್ಥಜಿಜ್ಞಾಸುಭ್ಯಃ ಋಜುವಿವರಣಮ್ ಅಲ್ಪಗ್ರನ್ಥಮ್ ಇದಮ್ ಆರಭ್ಯತೇ ॥

(ಭಾಷ್ಯಾರ್ಥ)

ಓಮಿತ್ಯೇತದಕ್ಷರಮ್ ಎಂದು ಮೊದಲಾಗಿರುವ ಎಂಟು ಅಧ್ಯಾಯಗಳ (ಗ್ರಂಥವು) ಛಾಂದೋಗ್ಯೋಪನಿಷತ್ತು. ಆ (ಉಪನಿಷತ್ತಿಗೆ) ಸಂಕ್ಷೇಪವಾಗಿ ಅರ್ಥವನ್ನು ತಿಳಿಯಬೇಕೆನ್ನುವವರಿಗೋಸ್ಕರ[1] ಅಲ್ಪಗ್ರಂಥವುಳ್ಳ[2] ಈ ಋಜು ವಿವರಣವನ್ನು[3] ಆರಂಭಿಸಿರುತ್ತದೆ.

---

1. ಶಾರೀರಕದಲ್ಲಿ ವಿಸ್ತಾರವಾಗಿ ಚರ್ಚೆಮಾಡಿದ್ದರೂ ಈ ಉಪನಿಷತ್ತಿನ ಅರ್ಥವನ್ನು ಸಂಗ್ರಹವಾಗಿ ತಿಳಿದುಕೊಳ್ಳಬೇಕೆನ್ನುವವರಿಗೋಸ್ಕರ ಎಂದರ್ಥ. ಟೀ॥

2. ದ್ರಾವಿಡಭಾಷ್ಯವು ವಿಸ್ತಾರವಾಗಿರುವದರಿಂದ ಸ್ವಲ್ಪ ಗ್ರಂಥದ ಭಾಷ್ಯವು ಬೇಕೆನ್ನುವವರಿಗೆ ಬೇಕಾಗುತ್ತದೆ ಎಂಬ ಭಾವವು ಈ ವಿಶೇಷಣದಲ್ಲಿ ಅಡಗಿದೆ ಎಂದು ಟೀ॥

3. ಪಾಠಕ್ರಮಕ್ಕನುಗುಣವಾಗಿ ಶಾರೀರಕಭಾಷ್ಯದಲ್ಲಿ ವಿಚಾರವಿಲ್ಲ ; ಆದ್ದರಿಂದಲೂ ಈ ವಿವರಣವು ಜಿಜ್ಞಾಸುಗಳಿಗೆ ಅವಶ್ಯವಾಗಿದೆ ಎಂದರ್ಥ. ಈ ಉಪನಿಷತ್ತಿನ ಸ್ಥಾನ, ವಿಷಯ- ಮುಂತಾದವುಗಳ ವಿಷಯಕ್ಕೆ ಪೀಠಿಕೆಯನ್ನು ನೋಡಿ.

## ಹಿಂದಿನ ಗ್ರಂಥಕ್ಕೂ ಈ ಉಪನಿಷತ್ತಿಗೂ ಸಂಬಂಧ

(ಭಾಷ್ಯ)

೨. ತತ್ರ ಸಂಬನ್ಧಃ । ಸಮಸ್ತಂ ಕರ್ಮ ಅಧಿಗತಂ ಪ್ರಾಣಾದಿದೇವತಾ[1] ವಿಜ್ಞಾನಸಹಿತಮ್ ಅರ್ಚಿರಾದಿಮಾರ್ಗೇಣ ಬ್ರಹ್ಮಪ್ರತಿಪತ್ತಿಕಾರಣಮ್ । ಕೇವಲಂ ಚ[2] ಧೂಮಾದಿಮಾರ್ಗೇಣ ಚನ್ದ್ರಲೋಕಪ್ರತಿಪತ್ತಿಕಾರಣಮ್ । ಸ್ವಭಾವಪ್ರವೃತ್ತಾನಾಂ ಚ ಮಾರ್ಗದ್ವಯಪರಿಭ್ರಷ್ಟಾನಾಂ ಕಷ್ಟಾ ಅಧೋಗತಿ ರುಕ್ತಾ । ನ ಚ ಉಭಯೋರ್ಮಾರ್ಗಯೋರನ್ಯತರಸ್ಮಿನ್ನಪಿ ಮಾರ್ಗೇ ಆತ್ಯನ್ತಿಕೀ ಪುರುಷಾರ್ಥಸಿದ್ಧಿಃ । ಇತ್ಯತಃ ಕರ್ಮನಿರಪೇಕ್ಷಮ್ ಅದ್ವೈತಾತ್ಮವಿಜ್ಞಾನಂ ಸಂಸಾರಗತಿತ್ರಯಹೇತೂಪಮರ್ದೇನ ವಕ್ತವ್ಯಮ್ ಇತಿ ಉಪನಿಷತ್ ಆರಭ್ಯತೇ ॥

(ಭಾಷ್ಯಾರ್ಥ)

ಇಲ್ಲಿ[3] ಸಂಬಂಧವೇನೆಂದರೆ : ಪ್ರಾಣವೇ ಮುಂತಾದ[4] (ದೇವತೆಗಳ) ಉಪಾಸನೆಯ ಸಹಿತವಾಗಿ[5] **ಅರ್ಚಿರಾದಿಮಾರ್ಗ**ದಿಂದ[6] ಬ್ರಹ್ಮಪ್ರಾಪ್ತಿಗೆ[7] ಕಾರಣವಾಗಿರುವ (ಕರ್ಮ), **ಧೂಮಾದಿಮಾರ್ಗ**ದಿಂದ ಚಂದ್ರಲೋಕ ಪ್ರಾಪ್ತಿಗೆ ಕಾರಣವಾಗಿರುವ ಬರಿಯ[8] (ಕರ್ಮ- ಹೀಗೆ) ಸಮಸ್ತಕರ್ಮವನ್ನೂ ತಿಳಿದುಕೊಂಡದ್ದಾಯಿತು. ಸ್ವಭಾವದಿಂದಲೇ ಪ್ರವೃತ್ತರಾಗಿ[9] ಈ ಎರಡು

---

1. 'ಪ್ರಾಣಾಗ್ನ್ಯಾದಿದೇವತಾ' ಎಂದು ಟೀಕಾಸಮ್ಮತವಾದ ಪಾಠ.

2. ಇದಾದಮೇಲೆ 'ಕರ್ಮ' ಎಂದು ಹೆಚ್ಚಾಗಿರುವ ಅ॥ ವಾ॥ ಪಾಠವೂ ಆಗ ಬಹುದು. 3. ಈ ಉಪನಿಷತ್ತಿಗೆ.

4. ಟೀಕಾಸಮ್ಮತವಾದ ಪಾಠದಂತೆ 'ಪ್ರಾಣ, ಅಗ್ನಿ'- ಮುಂತಾದ ಎಂದು ಕನ್ನಡಿಸಿ ಕೊಳ್ಳಬೇಕು ; ಈಗಿನ ಪಾಠದಲ್ಲಿಯೇ ಅಗ್ನಿಯೂ ಸೇರಿರುತ್ತಾನೆ.

5. ಇಲ್ಲಿಯೂ ಪ್ರಾಣಾದ್ಯುಪಾಸನೆಯಿದ್ದರೂ ಅದನ್ನು ಉಪಾಸನೆಮಾಡಿದರೆ ಅಲ್ಪಫಲವೆಂಬುದನ್ನು ಅನುವಾದಮಾಡಿ ಆತ್ಯಂತಿಕಫಲವನ್ನು ತಿಳಿಸುವ ಬ್ರಹ್ಮಜ್ಞಾನಕ್ಕೆ ಅವತರಣಿಕೆಯನ್ನು ಮಾಡಿರುವದೇ ವಿಶೇಷ.

6. ಅರ್ಚಿರಾದಿ (ದೇವಯಾನ, ಉತ್ತರ)ಮಾರ್ಗ, ಧೂಮಾದಿ (ಪಿತೃಯಾಣ, ದಕ್ಷಿಣ)ಮಾರ್ಗ- ಇವುಗಳನ್ನು ಇಲ್ಲಿಯೂ ನಾಲ್ಕನೆಯ ಐದನೆಯ ಅಧ್ಯಾಯಗಳಲ್ಲಿ ಅನು ವಾದಕ್ಕಾಗಿ ಹೇಳಿರುತ್ತದೆ.

7. 'ಬ್ರಹ್ಮಲೋಕಪ್ರತಿಪತ್ತಿಕಾರಣಮ್' ಎಂಬ ಪಾಠಾಂತರವೂ ಇದೆ. ಅದು ಇಲ್ಲ ದಿದ್ದರೂ ಅಪರಬ್ರಹ್ಮಪ್ರಾಪ್ತಿಗೆ ಎಂದೇ ಇಲ್ಲಿ ಅರ್ಥ.

8. ಉಪಾಸನಾಸಂಬಂಧವಿಲ್ಲದ.

9. ಶಾಸ್ತ್ರದ ಚೋದನೆಯಿಲ್ಲದೆ ರಾಗದ್ವೇಷಾದಿಗಳಿಂದೊಡಗೂಡಿದ ಸ್ವಾಭಾವಿಕ ವಾದ ತಿಳಿವಳಿಕೆಯಿಂದಲೇ ಕರ್ಮದಲ್ಲಿ ತೊಡಗಿರುವ ಎಂದರ್ಥ.

ಮಾರ್ಗಗಳಿಂದಲೂ ತಪ್ಪಿ ಜಗುಳಿರುವ (ಜೀವ)ರಿಗೆ ಕಷ್ಟವಾದ ಅಧೋಗತಿಯನ್ನೂ ಹೇಳಿದ್ದಾಗಿದೆ[1]. ಆದರೆ ಈ ಎರಡು ಮಾರ್ಗಗಳಲ್ಲಿ (ಯಾವ) ಒಂದು ಮಾರ್ಗದಲ್ಲಿಯೂ ಆತ್ಯಂತಿಕವಾದ ಪುರುಷಾರ್ಥದ ಸಿದ್ಧಿ(ಯಾಗುವ)ದಿಲ್ಲ[2]ವಾದ್ದರಿಂದ[2] **ಕರ್ಮದ ಅಪೇಕ್ಷೆಯಿಲ್ಲದ ಅದ್ವೈತಾತ್ಮವಿಜ್ಞಾನವನ್ನು -ಸಂಸಾರದ ಮೂರು ಗತಿಗಳಿಗೂ ಕಾರಣ(ವಾದ ಅಜ್ಞಾನವನ್ನು) ಬಾಧಿಸಿ- ಹೇಳಬೇಕೆಂದು ಉಪನಿಷತ್ತನ್ನು ಆರಂಭಿಸಿರುತ್ತದೆ.**

## ಅದ್ವೈತಾತ್ಮವಿಜ್ಞಾನವಿಲ್ಲದೆ ಆತ್ಯಂತಿಕಮೋಕ್ಷವಿಲ್ಲ

(ಭಾಷ್ಯ)

೩. ನ ಚ ಅದ್ವೈತಾತ್ಮವಿಜ್ಞಾನಾತ್ ಅನ್ಯತ್ರ ಆತ್ಯನ್ತಿಕೀ ನಿಃಶ್ರೇಯಸಪ್ರಾಪ್ತಿಃ। ವಕ್ಷ್ಯತಿ ಹಿ "ಅಥ ಯೇಽನ್ಯಥಾತೋ ವಿದುರನ್ಯರಾಜಾನಸ್ತೇ ಕ್ಷಯ್ಯಲೋಕಾ ಭವನ್ತಿ" (೭-೨೫-೨), ವಿಪರ್ಯಯೇ ಚ "ಸ ಸ್ವರಾಡ್ಭವತಿ" (೭-೨೫-೨) ಇತಿ। ತಥಾ ದ್ವೈತವಿಷಯಾನೃತಾಭಿಸಂಧಸ್ಯ ಬನ್ಧನಂ ತಸ್ಕರಸ್ಯೇವ ತಪ್ತಪರಶುಗ್ರಹಣೇ ಬನ್ಧದಾಹಭಾವಃ ಸಂಸಾರದುಃಖಪ್ರಾಪ್ತಿಶ್ಚ ಇತ್ಯುಕ್ತ್ವಾ ಅದ್ವೈತಾತ್ಮಸತ್ಯಾಭಿಸಂಧಸ್ಯ ಅತಸ್ಕರಸ್ಯೇವ ತಪ್ತಪರಶುಗ್ರಹಣೇ ಬನ್ಧದಾಹಾಭಾವಃ ಸಂಸಾರದುಃಖನಿವೃತ್ತಿಃ, ಮೋಕ್ಷಶ್ಚ ಇತಿ॥

(ಭಾಷ್ಯಾರ್ಥ)

ಅದ್ವೈತಾತ್ಮವಿಜ್ಞಾನಕ್ಕಿಂತ ಬೇರೆಯ (ಸಾಧನ)ದಿಂದ ಆತ್ಯಂತಿಕವಾದ ನಿಃಶ್ರೇಯಸದ ಪ್ರಾಪ್ತಿ(ಯಾಗ)ಲಾರದು. "ಇನ್ನು ಯಾರು ಇದಕ್ಕಿಂತ ಬೇರೆಯಾಗಿ ತಿಳಿದಿರುವರೋ, ಮತ್ತೊಬ್ಬನನ್ನು ರಾಜನಾಗಿಟ್ಟುಕೊಂಡಿರುವ ಅವರು ಕ್ಷಯಿಸತಕ್ಕ ಲೋಕ(ಗಳನ್ನು ಪಡೆದವ)ರಾಗುತ್ತಾರೆ" (೭-೨೫-೨), ಅದಕ್ಕೆ ವಿಪರೀತವಾಗಿ (ಹೀಗೆ ಅರಿತುಕೊಂಡಿರುವನಲ್ಲ), "ಅವನು ಸ್ವರಾಜನಾಗಿರುವನು" (೭-೨೫-೨)- ಎಂದು ಮುಂದೆ ಹೇಳಿದೆಯಲ್ಲವೆ? ಇದರಂತೆ ದ್ವೈತ

---

1. ಮತ್ತೆ ಮತ್ತೆ ಹುಟ್ಟಿ ಸಾಯುವದೆಂಬ ಈ ಮೂರನೆಯ ಗತಿಯನ್ನು ಈ ಉಪನಿಷತ್ತಿನಲ್ಲಿಯೂ ಐದನೆಯ ಅಧ್ಯಾಯದಲ್ಲಿ ಅನುವಾದಮಾಡಿಕೊಂಡಿದೆ. ಹಿಂದಿನ ಕರ್ಮಕಾಂಡದಲ್ಲಿಯೇ ಈ ಮೂರು ಗತಿಯನ್ನೂ ಹೇಳಿದ್ದರೂ ಇವುಗಳನ್ನು ಇಲ್ಲಿ ಅನುವಾದಮಾಡಿಕೊಂಡು ಮೋಕ್ಷಹೇತುವನ್ನು ಹೇಳಿದೆ ಎಂಬುದೇ ಒಟ್ಟರ್ಥ.

2. ಬರಿಯ ಕರ್ಮದಿಂದ ಆಗುವ ಪಿತೃಲೋಕಪ್ರಾಪ್ತಿಯು ಬೇಗನೆ ಕ್ಷಯವಾಗುವದು. ಉಪಾಸನಾಸಮುಚ್ಚಿತಕರ್ಮದಿಂದಾಗುವ ದೇವಲೋಕಪ್ರಾಪ್ತಿಯು ಹೆಚ್ಚುಕಾಲದವರೆಗೆ ಇದ್ದರೂ ನಿತ್ಯವಾದ ಮೋಕ್ಷವನ್ನು ಕೊಡುವದಿಲ್ಲ, ಸ್ವಾಭಾವಿಕಕರ್ಮವಂತೂ ಮತ್ತೆಮತ್ತೆ ಹುಟ್ಟುವದಕ್ಕೆ ಕಾರಣವಾಗಿರುತ್ತದೆ. ಅದ್ದರಿಂದ ಎಂದರ್ಥ.

ವಿಷಯವಾದ ಅನೃತದಲ್ಲಿ[1] ಅಭಿಮಾನವುಳ್ಳವನಿಗೆ, ಕಳ್ಳನಿಗೆ ಕಾಯಿಸಿದ ಕೊಡಲಿಯನ್ನು ಹಿಡಿದಾಗ ಬಂಧವೂ ಸುಡುವಿಕೆಯೂ (ದುಃಖಪ್ರಾಪ್ತಿಯೂ) ಆಗುವಂತೆ, ಬಂಧವೂ ಸಂಸಾರದುಃಖಪ್ರಾಪ್ತಿಯೂ ಆಗುವವೆಂದು (೬-೧೬-೧) ಹೇಳಿ ಅದ್ವೈತಾತ್ಮನೆಂಬ ಸತ್ಯದಲ್ಲಿ ಅಭಿಮಾನವುಳ್ಳವನಿಗೆ, ಕಳ್ಳನಲ್ಲದವನು ಕಾಯಿಸಿದ ಕೊಡಲಿಯನ್ನು ಹಿಡಿದಾಗ ಬಂಧದಾಹಗಳೂ (ದುಃಖಪ್ರಾಪ್ತಿಯೂ) ಆಗದಿರುವಂತೆ, ಸಂಸಾರದುಃಖಗಳ ನಿವೃತ್ತಿಯೂ ಮೋಕ್ಷವೂ[2] (ಆಗುವ) ವೆಂದೂ (ಮುಂದೆ ಹೇಳಿದೆ).

## ಅದ್ವೈತಾತ್ಮಜ್ಞಾನಕ್ಕೂ ಕರ್ಮಕ್ಕೂ ಸಮುಚ್ಚಯವಿಲ್ಲ

(ಭಾಷ್ಯ)

೪. ಅತ ಏವ ನ ಕರ್ಮಸಹಭಾವಿ ಅದ್ವೈತಾತ್ಮದರ್ಶನಮ್। ಕ್ರಿಯಾಕಾರಕಫಲಭೇದೋಪಮರ್ದೇನ 'ಸದೇಕಮೇವ ಅದ್ವಿತೀಯಮ್,' (೬-೨-೧, ೨), "ಆತ್ಮೈವೇದಂ ಸರ್ವಮ್" (೭-೨೫-೨)- ಇತ್ಯೇವಮಾದಿವಾಕ್ಯಜನಿತಸ್ಯ ಬಾಧಕಪ್ರತ್ಯಯಾನುಪಪತ್ತೇಃ। ಕರ್ಮವಿಧಿಪ್ರತ್ಯಯಃ ಇತಿ ಚೇತ್। ನ। ಕರ್ತೃಭೋಕ್ತೃಸ್ವಭಾವವಿಜ್ಞಾನವತಃ ತಜ್ಜನಿತಕರ್ಮಫಲರಾಗದ್ವೇಷಾದಿದೋಷವತಶ್ಚ ಕರ್ಮವಿಧಾನಾತ್। ಅಧಿಗತಸಕಲವೇದಾರ್ಥಸ್ಯ ಕರ್ಮವಿಧಾನಾತ್ ಅದ್ವೈತಜ್ಞಾನವತೋಽಪಿ ಕರ್ಮ ಇತಿ ಚೇತ್। ನ। ಕರ್ಮಾಧಿಕೃತವಿಷಯಸ್ಯ ಕರ್ತೃಭೋಕ್ತ್ರಾದಿಜ್ಞಾನಸ್ಯ ಸ್ವಾಭಾವಿಕಸ್ಯ 'ಸದೇಕಮೇವಾದ್ವಿತೀಯಮ್', 'ಆತ್ಮೈವೇದಂ ಸರ್ವಮ್' ಇತ್ಯನೇನ ಉಪಮರ್ದಿತತ್ವಾತ್। ತಸ್ಮಾತ್ ಅವಿದ್ಯಾದಿದೋಷವತ ಏವ ಕರ್ಮಾಣಿ ವಿಧೀಯನ್ತೇ ನಾದ್ವೈತಜ್ಞಾನವತಃ। ಅತ ಏವ ಹಿ ವಕ್ಷ್ಯತಿ "ಸರ್ವ ಏತೇ ಪುಣ್ಯಲೋಕಾ ಭವನ್ತಿ, ಬ್ರಹ್ಮಸಂಸ್ಥೋಽಮೃತತ್ವಮೇತಿ" (೨-೨೩-೧) ಇತಿ ||

(ಭಾಷ್ಯಾರ್ಥ)

ಆದ್ದರಿಂದಲೇ ಅದ್ವೈತಾತ್ಮದರ್ಶನವು ಕರ್ಮದೊಡನೆ ಇರತಕ್ಕದ್ದಲ್ಲ. ಏಕೆಂದರೆ ಕ್ರಿಯೆ, ಕಾರಕ, ಫಲ – ಎಂಬ ಭೇದವನ್ನು ಬಾಧಿಸಿ "ತನಗೆರಡನೆಯದಿಲ್ಲದ ಸತ್ತೊಂದೇ" (೬-೨-೧,೨), "ಇದೆಲ್ಲವೂ ಆತ್ಮನೇ" (೭-೨೫-೨)

---

1. ಅನೃತ, ಮಿಥ್ಯಾ, ವಿತಥ- ಈ ಶಬ್ದಗಳನ್ನು ಹುಸಿತೋರಿಕೆ ಎಂಬರ್ಥದಲ್ಲಿಯೇ ಭಾಷ್ಯದಲ್ಲಿ ಪ್ರಯೋಗಿಸಿದೆ.

2. ಸಂಸಾರಬಂಧ, ದುಃಖಪ್ರಾಪ್ತಿ- ಇವುಗಳಲ್ಲದೆ ಎಲ್ಲಾ ಅನಿಷ್ಟದಿಂದಲೂ ಬಿಡುಗಡೆಯಾಗುವದೆಂಬ ಮೋಕ್ಷವು ಕಳ್ಳನಲ್ಲದವನಿಗೆ ಬಂಧ, ಸುಡುವಿಕೆ, ದುಃಖ- ಇವುಗಳಿಲ್ಲದಂತಾಗುವ ಬಿಡುಗಡೆಯನ್ನು ಹೋಲುತ್ತದೆ.

–ಎಂಬಿದೇ ಮುಂತಾದ ವಾಕ್ಯದಿಂದ ಹುಟ್ಟಿದ ಜ್ಞಾನಕ್ಕೆ ಬಾಧಕಪ್ರತ್ಯಯ ವುಂಟಾಗುವಹಾಗಿಲ್ಲ[1].

(ಆಕ್ಷೇಪ):– ಕರ್ಮಗಳನ್ನು ವಿಧಿಸಿದೆ ಎಂಬ ಪ್ರತ್ಯಯವು(ಬಾಧಕವು)[2] ಎಂದರೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ ಕರ್ತೃಭೋಕ್ತೃಸ್ವಭಾವದ (ಆತ್ಮನ) ಅರಿವುಳ್ಳವನೂ ಅದರಿಂದುಂಟಾಗುವ ಕರ್ಮಫಲದಲ್ಲಿ ರಾಗ, ದ್ವೇಷ–ಮುಂತಾದ ದೋಷವುಳ್ಳವನೂ ಆಗಿರುವವನಿಗೇ ಕರ್ಮವನ್ನು ವಿಧಿಸಿದೆ[3].

(ಆಕ್ಷೇಪ) :– ಸಕಲವೇದಾರ್ಥವನ್ನೂ ಅರಿತುಕೊಂಡವನಿಗೇ ಕರ್ಮವನ್ನು ವಿಧಿಸಿರುವದರಿಂದ ಅದ್ವೈತಜ್ಞಾನವಿರುವವನಿಗೂ ಕರ್ಮ(ವುಂಟು)[4] ಎಂದರೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ ಕರ್ಮದಲ್ಲಿ ಅಧಿಕೃತನಾದವನಿಗೆ (ಇರುವ) ಸ್ವಾಭಾವಿಕವಾದ ಕರ್ತೃಭೋಕ್ತ್ರಾದಿವಿಜ್ಞಾನವು "ತನಗೆರಡನೆಯದಿಲ್ಲದ ಸತ್ತೊಂದೇ", "ಇದೆಲ್ಲವೂ ಆತ್ಮನೇ" –ಎಂಬೀ (ವಿಜ್ಞಾನ)ದಿಂದ ಬಾಧಿತವಾಗಿರುತ್ತದೆ[5]. ಆದ್ದರಿಂದ ಅವಿದ್ಯೆಯೇ ಮುಂತಾದ ದೋಷವುಳ್ಳವನಿಗೇ ಕರ್ಮಗಳು ವಿಹಿತವಾಗಿರುತ್ತವೆಯೇ ಹೊರತು ಅದ್ವೈತಜ್ಞಾನವುಳ್ಳವನಿಗಲ್ಲ[6]. ಆದ್ದರಿಂದಲೇ ಅಲ್ಲವೆ, "ಇವರೆಲ್ಲರೂ ಪುಣ್ಯಲೋಕವುಳ್ಳವರಾಗುವರು ; (ಆದರೆ)

1. ಬಾಧಕವಿರುವದು ದ್ವೈತಭೂಮಿಕೆಯಲ್ಲಿ, ಎಲ್ಲವೂ ಆತ್ಮನೇ –ಎಂಬ ಅದ್ವೈತಾವಸ್ಥೆಯಲ್ಲಿ ಬಾಧಕವೇ ಇರುವಂತಿಲ್ಲ, ಆದ್ದರಿಂದ ಅದ್ವೈತಜ್ಞಾನದೊಡನೆ ಕರ್ಮವನ್ನು ಸಮುಚ್ಚಯಮಾಡಿಕೊಳ್ಳುವ ಸಂಭವವೇ ಇಲ್ಲ.

2. ಶಾಸ್ತ್ರದಲ್ಲಿ ಕರ್ಮವನ್ನು ವಿಧಿಸಿರುವದು ವ್ಯರ್ಥವಾಗದೆ ಇರುವದಕ್ಕಾಗಿ ಕರ್ಮವನ್ನು ಮಾಡಬೇಕು ಎಂಬ ಅರಿವು ಅದ್ವೈತಪ್ರತ್ಯಯಕ್ಕೆ ಬಾಧಕವಲ್ಲವೆ ?

3. ನಿತ್ಯಕರ್ಮವನ್ನುಕೂಡ ಅವಿದ್ಯಾದಿದೋಷವುಳ್ಳವನಿಗೇ ವಿಧಿಸಿದೆ. ಬೃ. ಭಾ. ೧–೩–೧ (ಭಾ. ಭಾ. ೫೫).

4. ಅದ್ವೈತಾರ್ಥವೂ ವೇದಜ್ಞಾನವಾದದ್ದರಿಂದ ಅದನ್ನು ಅರಿತಮೇಲೆಯೇ ಕರ್ಮಕ್ಕೆ ಅಧಿಕಾರವೆಂದಾಯಿತು ಎಂದು ಭಾವ. ತೈ. ಭಾ. ೧–೧೧ (ಭಾ. ಭಾ. ೬೦), ಸೂ. ಭಾ. ೩–೪–೬ (ಭಾ. ಭಾ. ೪೪೩) –ಇವನ್ನು ನೋಡಿ.

5. ಆತ್ಮನೊಬ್ಬನೇ ಎಂಬ ಜ್ಞಾನದಲ್ಲಿ ಕಾರಕಗಳೂ ವಿಷಯಗಳೂ ಬೇರೆಯಾಗಿರುವದೇ ಇಲ್ಲ, ಅವಿದ್ಯಾವಸ್ಥೆಯಲ್ಲಿ ಮಾತ್ರ ದ್ವೈತವು ಕಾಣುತ್ತದೆ.

6. ಕ್ರಿಯೆಯ ಫಲದಲ್ಲಿ ಆಶೆಯಿರುವ ಅವಿದ್ಯಾವಂತನಿಗೆ ಆಯಾ ಫಲಪ್ರಾಪ್ತಿಗಾಗಿ ಕರ್ಮವನ್ನು ಶಾಸ್ತ್ರದಲ್ಲಿ ವಿಧಿಸಿರುತ್ತದೆ. ಅಷ್ಟರಿಂದಲೇ ಕರ್ಮವಿಧಿಯು ಸಾರ್ಥಕವಾಗುತ್ತದೆ. ಆಶೆಯೇ ಇಲ್ಲದ ಅದ್ವೈತಜ್ಞಾನಿಗೂ ವಿಹಿತವಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ ಎಂದು ಭಾವ. ತೈ. ಭಾ. ಭಾ. ೮೦ನ್ನು ನೋಡಿ.

ಬ್ರಹ್ಮಸಂಸ್ಥನು ಅಮೃತತ್ವವನ್ನು ಪಡೆಯುವನು" (೨-೨೩-೧) ಎಂದು ಮುಂದೆ ಹೇಳಿರುತ್ತದೆ[1] ?

## ಅದ್ವೈತಜ್ಞಾನಕ್ಕೂ ಉಪಾಸನೆಗೂ ತಾರತಮ್ಯ

(ಭಾಷ್ಯ)

೫. ತತ್ರ ಏತಸ್ಮಿನ್ ಅದ್ವೈತವಿದ್ಯಾಪ್ರಕರಣೇಽಭ್ಯುದಯಸಾಧನಾನಿ ಉಪಾಸನಾನಿ ಉಚ್ಯನ್ತೇ। ಕೈವಲ್ಯಸಂನಿಕೃಷ್ಟಫಲಾನಿ ಚ ಅದ್ವೈತಾತ್ ಈಷದ್ವಿಕೃತಬ್ರಹ್ಮವಿಷಯಾಣಿ "ಮನೋಮಯಃ, ಪ್ರಾಣಶರೀರಃ" (೩-೪-೧೨) ಇತ್ಯಾದೀನಿ ಕರ್ಮಸಮೃದ್ಧಿಫಲಾನಿ ಚ ಕರ್ಮಾಙ್ಗಸಂಬನ್ಧೀನಿ। ರಹಸ್ಯಸಾಮಾನ್ಯಾತ್। ಮನೋವೃತ್ತಿಸಾಮಾನ್ಯಾಚ್ಚ। ಯಥಾ ಅದ್ವೈತಜ್ಞಾನಂ ಮನೋವೃತ್ತಿಮಾತ್ರಮ್, ತಥಾ ಅನ್ಯಾನ್ಯಪಿ ಉಪಾಸನಾನಿ ಮನೋವೃತ್ತಿರೂಪಾಣಿ ಇತಿ ಅಸ್ತಿ ಹಿ ಸಾಮಾನ್ಯಮ್। ಕಸ್ತರ್ಹಿ ಅದ್ವೈತಜ್ಞಾನಸ್ಯ ಉಪಾಸನಾನಾಂ ಚ ವಿಶೇಷಃ ? ಉಚ್ಯತೇ। ಸ್ವಾಭಾವಿಕಸ್ಯ ಆತ್ಮನಿ ಅವಿಕ್ರಿಯೇ[2] ಅಧ್ಯಾರೋಪಿತಸ್ಯ ಕರ್ತ್ರಾದಿಕಾರಕಕ್ರಿಯಾಫಲಭೇದವಿಜ್ಞಾನಸ್ಯ ನಿವರ್ತಕಮ್ ಅದ್ವೈತವಿಜ್ಞಾನಮ್। ರಜ್ಜ್ವಾದಾವಿವ ಸರ್ಪಾದ್ಯಧ್ಯಾರೋಪಲಕ್ಷಣಜ್ಞಾನಸ್ಯ ರಜ್ಜ್ವಾದಿಸ್ವರೂಪನಿಶ್ಚಯಃ ಪ್ರಕಾಶನಿಮಿತ್ತಃ। ಉಪಾಸನಂ ತು ಯಥಾಶಾಸ್ತ್ರಸಮರ್ಪಿತಂ[3] ಕಿಂಚಿದಾಲಮ್ಬನಮ್ ಉಪಾದಾಯ ತಸ್ಮಿನ್ ಸಮಾನಚಿತ್ತವೃತ್ತಿಸಂತಾನಕರಣಂ ತದ್ವಿಲಕ್ಷಣಪ್ರತ್ಯಯಾನನ್ತರಿತಮ್ ಇತಿ ವಿಶೇಷಃ ॥

(ಭಾಷ್ಯಾರ್ಥ)

(ಹೀಗಿರು)ವಲ್ಲಿ, ಈ ಅದ್ವೈತವಿದ್ಯೆಯ ಪ್ರಕರಣದಲ್ಲಿ ಅಭ್ಯುದಯಕ್ಕೆ ಸಾಧನವಾಗಿರುವ ಉಪಾಸನೆಗಳೂ ಕೈವಲ್ಯಕ್ಕೆ ಸಮೀಪದಲ್ಲಿರುವ ಫಲವುಳ್ಳ ಅದ್ವೈತಕ್ಕಿಂತ ಒಂದಿಷ್ಟು ವಿಕಾರರೂಪವಾಗಿರುವ ಬ್ರಹ್ಮದ ವಿಷಯವಾಗಿರುವ "ಮನೋಮಯನು, ಪ್ರಾಣಶರೀರನು" (೩-೧೪-೨) ಎಂಬಿದೇ ಮುಂತಾದ (ಉಪಾಸನೆ)ಗಳೂ[4] ಕರ್ಮದ ಅಂಗಕ್ಕೆ[5] ಸಂಬಂಧಪಟ್ಟು ಕರ್ಮಸಮೃದ್ಧಿ

---

1. ಈ ಶ್ರುತಿಯಲ್ಲಿ ಪುಣ್ಯಲೋಕವೆಂಬ ಫಲವನ್ನು ಕೊಡುವ ಕರ್ಮನಿಷ್ಠೆಯು ಬ್ರಹ್ಮನಿಷ್ಠನಿಗೆ ಇಲ್ಲ ; ಅಮೃತತ್ವವನ್ನು ಕೊಡುವ ಬ್ರಹ್ಮನಿಷ್ಠೆಯು ಕರ್ಮನಿಷ್ಠನಿಗೆ ಇಲ್ಲ ಎಂದು ಹೇಳಿರುತ್ತದೆ ಎಂದು ಭಾವ.

2. 'ಅಕ್ರಿಯೇ' ಎಂಬುದಕ್ಕಿಂತ ಈ ಪಾಠವು ಮೇಲು.

3. 'ಸಮರ್ಥಿತಂ' ಎಂಬುದಕ್ಕಿಂತ ಈ ಪಾಠವೇ ಮೇಲು.

4. ಅಪರಬ್ರಹ್ಮಪ್ರಾಪ್ತಿಯ ಮೂಲಕವಾಗಿ ಕ್ರಮಮುಕ್ತಿಯನ್ನು ಕೊಡುವ ಉಪಾಸನೆಗಳು ಎಂದರ್ಥ. ಸೂ. ಭಾ. ೪-೩-೧೦, (ಭಾ. ಭಾ. ೫೭೬)ನ್ನು ನೋಡಿ.

5. ಕರ್ಮಕ್ಕೆ ಅಂಗವಾಗಿರುವ ಸಾಮವೇ ಮುಂತಾದವುಗಳಿಗೆ ಸಂಬಂಧಪಟ್ಟ ಉಪಾಸನೆಗಳನ್ನು ಇಲ್ಲಿ ಹೇಳಿದೆ. ಇವಕ್ಕೆ ಕರ್ಮವು ಹೆಚ್ಚಿನ ಫಲವನ್ನು ಕೊಡುವದೇ ಫಲವು- ಎಂದರ್ಥ. ಉಪಾಸನೆಗಳ ಫಲದ ವಿಷಯವಾಗಿ ಸೂ. ಭಾ. ೧-೧-೧೨ (ಭಾ. ಭಾ. ೯೧)ನ್ನು ನೋಡಿರಿ.

ಎಂಬ ಫಲವನ್ನು (ಕೊಡುವ ಉಪಾಸನೆ)ಗಳೂ ಉಕ್ತವಾಗಿರುತ್ತವೆ. ಏಕೆಂದರೆ ರಹಸ್ಯವಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ[1]. ಮನೋವೃತ್ತಿರೂಪವಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿರುವದರಿಂದಲೂ (ಇದನ್ನು ಇಲ್ಲಿಯೇ ಹೇಳಿದೆ. ಇದರ ವಿವರ); **ಹೇಗೆ ಅದ್ವೈತಜ್ಞಾನವು ಮನೋವೃತ್ತಿಮಾತ್ರವಾಗಿರುತ್ತದೆಯೋ ಹಾಗೆಯೇ ಬೇರೆಯ ಉಪಾಸನೆಗಳೂ ಮನೋವೃತ್ತಿರೂಪವಾಗಿರುತ್ತವೆ[2] ಎಂಬೀ ಹೋಲಿಕೆಯು (ಎರಡಕ್ಕೂ) ಇದೆಯಲ್ಲವೆ?**

(ಪ್ರಶ್ನೆ) :- ಹಾಗಾದರೆ ಅದ್ವೈತಜ್ಞಾನಕ್ಕೂ ಉಪಾಸನೆಗಳಿಗೂ ವಿಶೇಷವೇನು ?

(ಉತ್ತರ) :- ಹೇಳುತ್ತೇವೆ. **ಸ್ವಭಾವದಿಂದ ಇದ್ದುಕೊಂಡಿರುವದಾಗಿ,[3] ಯಾವ ವಿಕಾರವೂ ಇಲ್ಲದ[4] ಆತ್ಮನಲ್ಲಿ ಅಧ್ಯಾರೋಪಿತವಾಗಿರುವ ಕರ್ತ್ರಾದಿಕಾರಕಗಳು, ಕ್ರಿಯೆ, ಫಲ- ಎಂಬ ಭೇದದ ಅರಿವನ್ನು ತೊಲಗಿಸುವದು ಅದ್ವೈತವಿಜ್ಞಾನವು. ಹಗ್ಗವೇ ಮುಂತಾದದ್ದರಲ್ಲಿ ಹಾವೇ ಮುಂತಾದದ್ದನ್ನು ಅಧ್ಯಾರೋಪಿಸುವ ರೂಪದ ಅರಿವನ್ನು ಬೆಳಕಿನ ನಿಮಿತ್ತದಿಂದಾದ ಹಗ್ಗವೇ ಮುಂತಾದದ್ದರ ಸ್ವರೂಪದ ನಿಶ್ಚಯವು (ತೊಲಗಿಸು)ವಂತೆಯೇ[5] (ಇದು ಭೇದವಿಜ್ಞಾನವನ್ನು ತೊಲಗಿಸತಕ್ಕದ್ದು). ಉಪಾಸನೆಯಾದರೋ ಶಾಸ್ತ್ರವು ತಿಳಿಸಿಕೊಟ್ಟಿರುವ ಯಾವದಾದರೊಂದು ಆಲಂಬನವನ್ನು ತೆಗೆದುಕೊಂಡು ಅದರಲ್ಲಿ ಒಂದೇ ಬಗೆಯ ಚಿತ್ತವೃತ್ತಿಯನ್ನು, ಅದಕ್ಕಿಂತ ವಿಲಕ್ಷಣವಾದ**

---

1. ಅದ್ವೈತಾತ್ಮಜ್ಞಾನಕ್ಕೂ ಉಪಾಸನೆಗಳಿಗೂ 'ರಹಸ್ಯ', ಉಪನಿಷತ್ತು- ಎಂಬ ಹೆಸರು ಸಮಾನವಾಗಿರುತ್ತದೆ. ಕಾಯಪ್ರಧಾನವಾಗಿರುವ ಕರ್ಮಕ್ಕಿಂತಲೂ ಮನಃಪ್ರಧಾನವಾಗಿರುವ ಈ ಎರಡೂ ರಹಸ್ಯವಾಗಿರುತ್ತವೆ.

2. ಆತ್ಮಜ್ಞಾನವಾಗುವಾಗಲೂ ಒಂದಾನೊಂದು ಮನೋವೃತ್ತಿಯುಂಟಾಗಬೇಕು.

3. ಭೇದಗಳನ್ನು ತಿಳಿಯಿಸುವ ಅರಿವಿನ ರೂಪವಾದ ಅವಿದ್ಯೆಯು ಸ್ವಭಾವದಿಂದಲೇ ಇದ್ದುಕೊಂಡಿರುತ್ತದೆ; ವಿದ್ಯೆಯಂತೆ ಅದು ಉಪದೇಶದಿಂದ ಹೊಸದಾಗಿ ಉಂಟಾಗತಕ್ಕದ್ದಲ್ಲ.

4. ಕಾರಕಗಳು, ಕ್ರಿಯೆ, ಫಲಭೋಗ- ಇವುಗಳು ತಮ್ಮ ಆಶ್ರಯದಲ್ಲಿ ವಿಕಾರವನ್ನುಂಟುಮಾಡತಕ್ಕವು; ಆದರೆ ಆತ್ಮನು ಯಾವ ವಿಕಾರವೂ ಇಲ್ಲದ ಸ್ವಭಾವದವನು; ಈ ಅವಿಕ್ರಿಯನಲ್ಲಿ ವಿಕ್ರಿಯಾಹೇತುಗಳನ್ನು ಅವಿದ್ಯೆಯು ಹುಟ್ಟಿಹಾಕಿರುತ್ತದೆ.

5. ಅವಿದ್ಯೆಯು ಭ್ರಾಂತಿಜ್ಞಾನ, ವಿದ್ಯೆಯು ಸಮ್ಯಗ್ಜ್ಞಾನ; ಭ್ರಾಂತಿಜ್ಞಾನವನ್ನು ತೊಲಗಿಸುವದೇ ಸಮ್ಯಗ್ಜ್ಞಾನದ ಕೃತ್ಯ ಎಂಬುದನ್ನು ಈ ಉದಾಹರಣೆಯು ಸ್ಪಷ್ಟಪಡಿಸುತ್ತದೆ.

**ಪ್ರತ್ಯಯವು ನಡುವೆ ಬಾರದಂತೆ, ಸಂತತವಾಗಿ ನಡೆಯಿಸಿಕೊಂಡು ಬರುವದು.**[1]

## ಮೊದಲು ಉಪಾಸನೆಗಳನ್ನೇ ಹೇಳಿರುವದೇಕೆ?

(ಭಾಷ್ಯ)

೬. ತಾನ್ಯೇತಾನಿ ಉಪಾಸನಾನಿ ಸತ್ತ್ವಶುದ್ಧಿಕರತ್ವೇನ ವಸ್ತುತತ್ತ್ವಾವಭಾಸಕತ್ವಾತ್ ಅದ್ವೈತಜ್ಞಾನೋಪಕಾರಕಾಣಿ ಆಲಮ್ಬನವಿಷಯತ್ವಾತ್ ಸುಸಾಧ್ಯಾನಿ ಚ ಇತಿ ಪೂರ್ವಮ್ ಉಪನ್ಯಸ್ಯನ್ತೇ। ತತ್ರ ಕರ್ಮಾಭ್ಯಾಸಸ್ಯ ದೃಢೀಕೃತತ್ವಾತ್ ಕರ್ಮಪರಿತ್ಯಾಗೇನ ಉಪಾಸನ ಏವ ದುಃಖಂ ಚೇತಃ ಸಮರ್ಪಣಂ ಕರ್ತುಮ್ ಇತಿ ಕರ್ಮಾಙ್ಗವಿಷಯಮೇವ ತಾವತ್ ಆದೌ ಉಪಾಸನಮ್ ಉಪನ್ಯಸ್ಯತೇ ॥

(ಭಾಷ್ಯಾರ್ಥ)

ಆ ಈ ಉಪಾಸನೆಗಳು ಸತ್ತ್ವಶುದ್ಧಿಯನ್ನುಂಟುಮಾಡುವದರಿಂದ ವಸ್ತುತತ್ತ್ವವನ್ನು ತಿಳಿಸಿಕೊಡುವದರಿಂದ ಅದ್ವೈತಜ್ಞಾನಕ್ಕೆ ಉಪಕಾರಕವಾಗಿರುತ್ತವೆ[2]; ಆಲಂಬನದ ವಿಷಯವಾಗಿರುವದರಿಂದ ಸುಲಭವಾಗಿ ಅದನ್ನು ಸಾಧಿಸಲೂಬಹುದು[3] –ಎಂಬ (ಕಾರಣ)ದಿಂದ (ಅವನ್ನು) ಮೊದಲು ಹೇಳಿರುತ್ತದೆ. ಆದರಲ್ಲಿಯೂ ಕರ್ಮಾಭ್ಯಾಸವು ಗಟ್ಟಿಯಾಗಿಬಿಟ್ಟಿರುವದರಿಂದ[4] ಕರ್ಮವನ್ನು ಬಿಟ್ಟು (ಬರಿಯ) ಉಪಾಸನೆಯಲ್ಲಿಯೇ ನೇರಾಗಿ ಚಿತ್ತವನ್ನು ಇಡುವದು ಕಷ್ಟವಾದ್ದರಿಂದ ಕರ್ಮಾಂಗವಿಷಯವಾದ ಉಪಾಸನೆಯನ್ನೇ ಮೊಟ್ಟಮೊದಲು ಹೇಳಲಾಗುವದು.[5]

---

1. ಉಪಾಸನೆಯು ಕರ್ತೃತಂತ್ರ, ಆತ್ಮವಿಜ್ಞಾನವು ವಸ್ತುತಂತ್ರ; ಉಪಾಸನೆಯು ಅವೃತ್ತ್ಯಪೇಕ್ಷ, ಜ್ಞಾನವು ಒಂದು ಸಲ ಉಂಟಾದರೇ ಅಜ್ಞಾನವನ್ನು ಕಳೆಯುತ್ತದೆ ಎಂಬ ತಾರತಮ್ಯವನ್ನು ಇಲ್ಲಿ ತಿಳಿಸಿಕೊಟ್ಟಿದೆ. ಸೂ. ಭಾ. ೧–೧–೪, ಭಾ.ಭಾ. ೫೧ನ್ನು ನೋಡಿ.

2. ಕರ್ಮವು ಜ್ಞಾನಕ್ಕೆ ಹೊರಗಿನ ಸಾಧನ, ಉಪಾಸನೆಯು ಒಳಗಿನ ಸಾಧನ. ಕರ್ಮವು ಚಿತ್ತದ ಮಲವನ್ನೂ ಉಪಾಸನೆಯು ವಿಕ್ಷೇಪವನ್ನೂ ಕಳೆದು ಅದ್ವೈತಜ್ಞಾನವುಂಟಾಗುವದಕ್ಕೆ ಸಹಾಯವನ್ನು ಮಾಡುತ್ತವೆ.

3. ಅದ್ವೈತಜ್ಞಾನಕ್ಕೆ ಯಾವ ಆಕಾರವೂ ಇಲ್ಲದ ಬ್ರಹ್ಮವು ವಿಷಯವಾದ್ದರಿಂದ ಅದು ನಿರಾಲಂಬನವು; ಉಪಾಸನೆಗೆ ಆಕಾರಯುಕ್ತವಾದದ್ದೇ ವಿಷಯವಾದದ್ದರಿಂದ ಅದು ಸಾಲಂಬನವು. ಆದ್ದರಿಂದ ಜ್ಞಾನಕ್ಕಿಂತಲೂ ಉಪಾಸನೆ ಸುಸಾಧ್ಯ.

4. ಇದುವರೆಗೆ ಕರ್ಮವನ್ನು ಮಾಡಿಮಾಡಿ ಕರ್ಮವಾಸನೆಯು ಗಟ್ಟಿಯಾಗಿಬಿಟ್ಟಿರುವದರಿಂದ.

5. ಕರ್ಮಾಂಗೋಪಾಸನೆಗಳ ವಿಷಯವನ್ನು ಸೂ.ಭಾ. ೩–೩–೪೨ ; ೩–೩–೫೫, ೫೬ ; ೩–೪–೨೧ ; ೩–೪–೪೪– ಇವುಗಳಲ್ಲಿ ಚರ್ಚಿಸಿರುತ್ತದೆ.

## ಒಂದನೆಯ ಅಧ್ಯಾಯ-ಒಂದನೆಯ ಖಂಡ

(ಉದ್ಗೀಥಾವಯವವಾದ ಓಂಕಾರದ ಉಪಾಸನೆ)

## ಓಂಕಾರೋಪಾಸನಾವಿಧಿ

(ಉಪನಿಷತ್ತು)

**ಓಮಿತ್ಯೇತದಕ್ಷರಮುದ್ಗೀಥಮುಪಾಸೀತ । ಓಮಿತಿ ಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಮ್ ॥ ೧ ॥**

೧. ಓಮ್ ಎಂಬೀ ಅಕ್ಷರವಾದ ಉದ್ಗೀಥವನ್ನು ಉಪಾಸನೆ ಮಾಡಬೇಕು; ಏಕೆಂದರೆ ಓಮೆಂದೇ ಉದ್ಗಾನಮಾಡುತ್ತಾನೆ. ಅದರ ಉಪವ್ಯಾಖ್ಯಾನವು (ಪ್ರಾರಂಭವಾಗಿದೆ).

### ಓಂಕಾರದ ಉಪಾಸನೆಯನ್ನು ಮಾಡಬೇಕು

(ಭಾಷ್ಯ)

೭. ಓಮಿತ್ಯೇತದಕ್ಷರಮುದ್ಗೀಥಮುಪಾಸೀತ । ಓಮಿತ್ಯೇತದಕ್ಷರಂ ಪರಮಾತ್ಮನಃ ಅಭಿಧಾನಂ ನೇದಿಷ್ಠಮ್ । ತಸ್ಮಿನ್ ಹಿ ಪ್ರಯುಜ್ಯಮಾನೇ ಸ ಪ್ರಸೀದತಿ ಪ್ರಿಯನಾಮಗ್ರಹಣ ಇವ ಲೋಕಃ । ತದಿಹ ಇತಿಪರಂ ಪ್ರಯುಕ್ತಮ್ ಅಭಿಧಾಯಕತ್ವಾತ್ ವ್ಯಾವರ್ತಿತಂ ಶಬ್ದಸ್ವರೂಪಮಾತ್ರಂ ಪ್ರತೀಯತೇ । ತಥಾ ಚ ಅರ್ಚಾದಿವತ್ ಪರಸ್ಯ ಆತ್ಮನಃ ಪ್ರತೀಕಂ ಸಂಪದ್ಯತೇ । ಏವಂ ನಾಮತ್ವೇನ ಪ್ರತೀಕತ್ವೇನ ಚ ಪರಮಾತ್ಮೋಪಾಸನಸಾಧನಂ ಶ್ರೇಷ್ಠಮ್ ಇತಿ ಸರ್ವವೇದಾನ್ತೇಷು ಅವಗತಮ್ । ಜಪಕರ್ಮಸ್ವಾಧ್ಯಾಯಾದ್ಯನ್ತೇಷು ಚ ಬಹುಶಃ ಪ್ರಯೋಗಾತ್ ಪ್ರಸಿದ್ಧಮಸ್ಯ ಶ್ರೈಷ್ಠ್ಯಮ್ । ಅತಃ ತದೇತದಕ್ಷರಂ ವರ್ಣಾತ್ಮಕಮ್ ಉದ್ಗೀಥಭಕ್ತ್ಯವಯವತ್ವಾತ್ ಉದ್ಗೀಥಶಬ್ದವಾಚ್ಯಮ್ ಉಪಾಸೀತ । ಕರ್ಮಾಙ್ಗಾವಯವಭೂತೇ ಓಂಕಾರೇ ಪರಮಾತ್ಮಪ್ರತೀಕೇ ದೃಢಾಮ್ ಐಕಾಗ್ರ್ಯಲಕ್ಷಣಾಂ ಮತಿಂ ಸಂತನುಯಾತ್ । ಸ್ವಯಮೇವ ಶ್ರುತಿಃ ಓಂಕಾರಸ್ಯ ಉದ್ಗೀಥಶಬ್ದವಾಚ್ಯತ್ವೇ ಹೇತುಮ್ ಆಹ— ಓಮಿತಿ ಹಿ ಉದ್ಗಾಯತಿ । ಓಮಿತ್ಯಾರಭ್ಯ ಹಿ ಯಸ್ಮಾತ್ ಉದ್ಗಾಯತಿ ಅತಃ ಉದ್ಗೀಥ ಓಂಕಾರಃ ಇತ್ಯರ್ಥಃ । ತಸ್ಯ ಉಪವ್ಯಾಖ್ಯಾನಮ್ । ತಸ್ಯ ಅಕ್ಷರಸ್ಯ ಉಪವ್ಯಾಖ್ಯಾನಮ್ ಏವಮುಪಾಸನಮ್, ಏವಂವಿಭೂತಿ, ಏವಂಫಲಮ್— ಇತ್ಯಾದಿಕಥನಮ್ ಉಪವ್ಯಾಖ್ಯಾನಮ್ । ಪ್ರವರ್ತತೇ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

ಓಮಿತ್ಯೇತದಕ್ಷರಮುದ್ಗೀಥಮುಪಾಸೀತ (ಎಂಬುದರ ಅಭಿಪ್ರಾಯ ವೇನೆಂದರೆ) : **ಓಮ್ ಎಂಬೀ ಅಕ್ಷರವು ಪರಮಾತ್ಮನಿಗೆ ಅತ್ಯಂತಸಮೀಪ ವಾಗಿರುವ ಹೆಸರು. ಏಕೆಂದರೆ ಅದನ್ನು ಪ್ರಯೋಗಿಸಿದರೆ (ತನ್ನ) ಪ್ರಿಯವಾದ ನಾಮವನ್ನು ತೆಗೆದುಕೊಂಡು (ಉಚ್ಚರಿಸಿದರೆ) ಜನವು ಹೇಗೆ (ಪ್ರಸನ್ನನಾಗುತ್ತದೆಯೋ) ಹಾಗೆಯೇ ಆ (ಪರಮಾತ್ಮನು) ಪ್ರಸನ್ನನಾಗುತ್ತಾನೆ.** ಆ (ಅಕ್ಷರವನ್ನು) ಇಲ್ಲಿ ಇತಿ (ಎಂಬ) ಶಬ್ದವನ್ನು ಮುಂದೆ (ಇಟ್ಟು) ಪ್ರಯೋಗಿಸಿರುವದರಿಂದ ಅಭಿಧಾಯಕತ್ವವನ್ನು ಬಿಟ್ಟು ಬರಿಯ ಶಬ್ದಸ್ವರೂಪವೇ ಎಂದು ತಿಳಿಯಬರುತ್ತದೆ[1]. ಹೀಗಿರುವದರಿಂದ (ಅದು) ಅರ್ಚೆಯೇ ಮುಂತಾದವುಗಳಂತೆ[2] ಪರಮಾತ್ಮನಿಗೆ 'ಪ್ರತೀಕ' ವೆಂದಾಗುತ್ತದೆ.[3] ಹೀಗೆ (ಪರಮಾತ್ಮನ) ನಾಮವಾಗಿಯೂ ಪ್ರತೀಕವಾಗಿಯೂ (ಈ ಓಂಕಾರವು) ಪರಮಾತ್ಮನ ಉಪಾಸನೆಗೆ ಶ್ರೇಷ್ಠವಾದ ಸಾಧನವೆಂದು ಸರ್ವವೇದಾಂತಗಳಲ್ಲಿಯೂ[4] ಗೊತ್ತಾಗಿರುತ್ತದೆ. ಜಪ, ಕರ್ಮ, ಸ್ವಾಧ್ಯಾಯ–[5] ಇವುಗಳ ಆದಿಯಲ್ಲಿಯೂ ಅಂತದಲ್ಲಿಯೂ ಬಹಳವಾಗಿ (ಇದನ್ನು) ಪ್ರಯೋಗಮಾಡುವದರಿಂದ ಇದು ಶ್ರೇಷ್ಠ(ವಾದ ಸಾಧನ) ವೆಂಬುದು ಪ್ರಸಿದ್ಧವಾಗಿರುತ್ತದೆ.[6] ಆದ್ದರಿಂದ[7] ಅಂಥ ಈ ವರ್ಣಾ

---

1. ಓಮಿತಿ (ಓಮ್ ಎಂಬುದು) ಎಂದು ಇತಿಶಬ್ದಪರವಾಗಿ ಪ್ರಯೋಗಿಸಿರುವದರಿಂದ ಅದು ಓಂಶಬ್ದವಾಚ್ಯನಾದ ಪರಮಾತ್ಮನನ್ನು ಹೇಳುವದಿಲ್ಲ; ಓಮ್ ಎಂಬ ಬರಿಯ ಶಬ್ದವನ್ನೇ ಹೇಳುತ್ತದೆ ಎಂದರ್ಥ. 'ಸಕ್ಕರೆ ಎಂಬಿದು ಒಂದು ಸಿಹಿಪದಾರ್ಥದ ಹೆಸರು' ಎಂಬ ವಾಕ್ಯದಲ್ಲಿರುವ ಸಕ್ಕರೆ ಎಂಬ ಶಬ್ದದಂತೆ ಇದು ಶಬ್ದಸ್ವರೂಪವನ್ನು ಮಟ್ಟಿಗೆ ಹೇಳುತ್ತದೆ.

2. ಅರ್ಚನೆಗೆ ಉಪಯೋಗಿಸುವ ಪ್ರತಿಮೆಯೇ ಮುಂತಾದವುಗಳಂತೆ.

3. ಪ್ರತೀಕವೆಂದರೆ ಮತ್ತೊಂದರ ಸ್ಥಾನದಲ್ಲಿದ್ದು ಉಪಾಸ್ಯವಾಗಿರುವ ವಸ್ತು. ಓಂಕಾರವನ್ನೇ ಬ್ರಹ್ಮವೆಂದಿಟ್ಟುಕೊಂಡು ಉಪಾಸನೆಮಾಡಬೇಕು –ಎಂಬುದು ಈ ವಿಧಿವಾಕ್ಯದ ಅರ್ಥ. ಪ್ರತೀಕೋಪಾಸನೆಗಳ ವಿಷಯಕ್ಕೆ ಸೂ. ಭಾ. ೪-೧-೪, ೫ ಇವನ್ನು ನೋಡಿ.

4. ಕ. ೧-೨-೧೭, ಪ್ರ. ೫-೨, ತೈ. ೧-೮ – ಇವುಗಳ ಭಾಷ್ಯವನ್ನು ನೋಡಿ.

5. ಗಾಯತ್ರ್ಯಾದಿಜಪ, ಯಜ್ಞಾದಿಕರ್ಮ, ವೇದಾಧ್ಯಯನರೂಪವಾದ ಸ್ವಾಧ್ಯಾಯ– ಇವುಗಳ ಪ್ರಾರಂಭದಲ್ಲಿಯೂ ಕೊನೆಯಲ್ಲಿಯೂ ಓಂಕಾರವನ್ನು ಪ್ರಯೋಗಿಸುವರು. ಗೀ. ೧೭-೨೪.

6. ಶಿಷ್ಟಾಚಾರವೂ ಇದರ ಶ್ರೇಷ್ಠತ್ವಕ್ಕೆ ಒಂದು ಗುರುತಾಗಿರುತ್ತದೆ.

7. ಹೀಗೆ ಉಪಾಸನೆಗೆ ಶ್ರೇಷ್ಠವಾದ ಸಾಧನವಾಗಿರುವದರಿಂದ ಎಂದರ್ಥ.

ತ್ಮಕವಾದ[1] ಅಕ್ಷರವನ್ನು ಉದ್ಗೀಥಭಕ್ತಿಯು[2] ಅವಯವವಾಗಿರುವದರಿಂದ ಉದ್ಗೀಥಶಬ್ದವಾಚ್ಯವಾಗಿರುವ[3] (ಈ ಓಂಕಾರವನ್ನು) ಉಪಾಸನೆಮಾಡಬೇಕು; ಕರ್ಮಾಂಗವಾದ (ಉದ್ಗೀಥದ) ಅವಯವವಾಗಿರುವ ಪರಮಾತ್ಮನಿಗೆ ಪ್ರತೀಕ ವಾಗಿರುವ, ಓಂಕಾರದಲ್ಲಿ ಏಕಾಗ್ರತಾರೂಪವಾಗಿರುವ ಗಟ್ಟಿಯಾದ ಪ್ರತ್ಯಯ ವನ್ನು ಸಂತತವಾಗಿ ಮಾಡಬೇಕು ಎಂದರ್ಥ.

ಓಂಕಾರವು ಉದ್ಗೀಥಶಬ್ದವಾಚ್ಯವಾಗಿರುವದಕ್ಕೆ ಕಾರಣವನ್ನು ಶ್ರುತಿಯು ತಾನೇ ಹೇಳುತ್ತಿದೆ: ಏಕೆಂದರೆ ಓಮ್! ಎಂದೇ ಉದ್ಗಾನಮಾಡುತ್ತಾನೆ; (ಹಿ=ಯಸ್ಮಾತ್) ಓಮ್! ಎಂದು ಆರಂಭಿಸಿಯೇ ಉದ್ಗಾನಮಾಡುತ್ತಾನಲ್ಲವೆ, ಆದ್ದರಿಂದ ಓಂಕಾರವು ಉದ್ಗೀಥವು ಎಂದರ್ಥ[4].

'ಅದರ ಉಪವ್ಯಾಖ್ಯಾನವು', ಆ ಅಕ್ಷರದ ಉಪವ್ಯಾಖ್ಯಾನವು– ಎಂದರೆ (ಅದು) ಇಂಥ ಉಪಾಸನೆಯುಳ್ಳದ್ದು[5], ಇಂಥ ವಿಭೂತಿಗಳುಳ್ಳದ್ದು[6], ಇಂಥ ಫಲವುಳ್ಳದು[7]– ಎಂದು ಮುಂತಾಗಿ[8] ಹೇಳುವ ಉಪವ್ಯಾಖ್ಯಾನವು 'ಪ್ರಾರಂಭ ವಾಗಿರುತ್ತದೆ' ಎಂದು (ಈ) ವಾಕ್ಯಕ್ಕೆ ಶೇಷವನ್ನು (ಪೂರಣಮಾಡಿಕೊಳ್ಳ ಬೇಕು)[9].

---

1. 'ಓಮಿತ್ಯೇತದಕ್ಷರಮ್' ಎಂಬ ವಿಶೇಷಣವಿರುವದರಿಂದ ಇಲ್ಲಿ ಅಕ್ಷರವೆಂದರೆ ವರ್ಣರೂಪವಾದ ಓಂಕಾರವೇ, ಪರಮಾತ್ಮನಲ್ಲ ಎಂದು ಭಾವ.

2. ಸಾಮದ ಭಾಗಗಳಿಗೆ ಭಕ್ತಿಗಳೆಂದು ಹೆಸರು; ಉದ್ಗಾತೃವು ಹೇಳುವ ಭಾಗವು ಉದ್ಗೀಥವು.

3. 'ಓಮಿತ್ಯೇತದಕ್ಷರಮುದ್ಗೀಥಮ್' ಎಂಬಲ್ಲಿ ಓಂಕಾರದಲ್ಲಿ ಉದ್ಗೀಥದೃಷ್ಟಿ ಯನ್ನು ಅಧ್ಯಾಸಮಾಡಿ ಉಪಾಸನೆಮಾಡಬೇಕೆಂದಾಗಲಿ, 'ಬೆಳ್ಳಿಯು ಕಪ್ಪೆಯಚಿಪ್ಪೇ' ಎಂಬಂತೆ ಓಂಕಾರವು ನಿಜವಾಗಿ ಉದ್ಗೀಥವೇ ಎಂದಾಗಲಿ, 'ಬ್ರಾಹ್ಮಣನು ವಿಪ್ರನು' ಎಂಬಂತೆ ಓಂಕಾರಕ್ಕೂ ಉದ್ಗೀಥಕ್ಕೂ ಏಕತ್ವವೆಂದಾಗಲಿ ಅರ್ಥವಲ್ಲ; ಉದ್ಗೀಥಶಬ್ದ ವಾಚ್ಯವಾದ ಓಂಕಾರವನ್ನು ಉಪಾಸನೆಮಾಡಬೇಕು ಎಂದೇ ಅರ್ಥ– ಎಂದು ಭಾವ. ಸೂ. ಭಾ. ೩-೩-೯ (ಭಾ. ಭಾ. ೩೩೧, ೩೩೩).

4. ಇದು ವಾಕ್ಯದ ಒಟ್ಟರ್ಥ. ಇದು ಜ್ಯೋತಿಷ್ಟೋಮವೆಂಬ ಕರ್ಮದ ಅಂಗ ವಾದ ಉದ್ಗೀಥವನ್ನು ಆಶ್ರಯಿಸಿರುವ ಉಪಾಸನೆಯಾದರೂ ಇದು ಸ್ವತಂತ್ರವಾದ ಉಪಾ ಸನೆ, ಕರ್ಮಕ್ಕೇ ಸೇರಿದ್ದಲ್ಲ. ಸೂ.ಭಾ. ೩-೩-೪೨ (ಭಾ.ಭಾ. ೪೯೯).

5. ರಸತಮತ್ವ, ಆಪ್ತಿ, ಸಮೃದ್ಧಿ– ಎಂಬ ಗುಣಗಳುಳ್ಳದ್ದೆಂದು ಉಪಾಸನೆಮಾಡ ತಕ್ಕದ್ದು.

6. ಪರಮ, ಪರಾರ್ಧ್ಯ, ವೈದಿಕಕರ್ಮಪ್ರವರ್ತಕತ್ವ– ಎಂಬ ವಿಭೂತಿಗಳುಳ್ಳದ್ದು.

7. ಕಾಮಾಪ್ತಿ, ಸಮೃದ್ಧಿ –ಎಂಬ ಫಲವುಳ್ಳದ್ದು.

8. ಈ ಉಪಾಸನೆಯ ಸಹಿತವಾಗಿ ಮಾಡಿದ ಕರ್ಮವು ವೀರ್ಯವತ್ತರವಾಗುತ್ತದೆ ಎಂದು ಮುಂತಾಗಿ.

9. ಮುಂದೆ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನಾಗುಣವೇ ಮುಂತಾದದ್ದನ್ನೇ ಉಪವ್ಯಾಖ್ಯಾನವೆಂಬ ಶಬ್ದವು ಸೂಚಿಸುತ್ತದೆ ಎಂದು ಭಾವ.

## ಓಂಕಾರದವರೆಗಿನ ರಸಗಳು

(ಉಪನಿಷತ್ತು)

**ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸಃ । ಅಪಾಮೋಷಧಯೋ ರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯ ವಾಗ್ರಸೋ ವಾಚ ಋಗ್ರಸ ಋಚಃ ಸಾಮ ರಸಃ ಸಾಮ್ನ ಉದ್ಗೀಥೋ ರಸಃ ॥ ೨ ॥**

೨. ಈ ಭೂತಗಳಿಗೆ ಪೃಥಿವಿಯು ರಸವು ; ಪೃಥಿವಿಗೆ ಅಪ್ಪು ರಸವು ; ಅಪ್ಪಿಗೆ ಓಷಧಿಗಳು ರಸವು ; ಓಷಧಿಗಳಿಗೆ ಪುರುಷನು ರಸವು ; ಪುರುಷನಿಗೆ ವಾಕ್ಕು ರಸವು ; ವಾಕ್ಕಿಗೆ ಋಕ್ಕು ರಸವು ; ಋಕ್ಕಿಗೆ ಸಾಮವು ರಸವು ; ಸಾಮಕ್ಕೆ ಉದ್ಗೀಥವು ರಸವು.

(ಭಾಷ್ಯ)

೮. ಏಷಾಂ ಚರಾಚರಾಣಾಂ ಭೂತಾನಾಂ ಪೃಥಿವೀ ರಸಃ, ಗತಿಃ ಪರಾಯಣಮ್ ಅವಷ್ಟಂಭಃ । ಪೃಥಿವ್ಯಾಃ ಆಪೋ ರಸಃ । ಅಪ್ಸು ಹಿ ಓತಾ ಚ ಪ್ರೋತಾ ಚ ಪೃಥಿವೀ । ಅತಸ್ತಾಃ ರಸಃ ಪೃಥಿವ್ಯಾಃ । ಅಪಾಮ್ ಓಷಧಯೋ ರಸಃ । ಅಪ್ಪರಿಣಾಮತ್ವಾತ್ ಓಷಧೀನಾಮ್ । ತಾಸಾಂ ಪುರುಷೋ ರಸಃ । ಅನ್ನಪರಿಣಾಮತ್ವಾತ್ ಪುರುಷಸ್ಯ । ತಸ್ಯಾಪಿ ಪುರುಷಸ್ಯ ವಾಕ್ ರಸಃ । ಪುರುಷಾವಯವಾನಾಂ ಹಿ ವಾಕ್ ಸಾರಿಷ್ಠಾ । ಅತೋ ವಾಕ್ ಪುರುಷಸ್ಯ ರಸಃ ಉಚ್ಯತೇ । ತಸ್ಯಾ ಅಪಿ ವಾಚಃ ಋಕ್ ರಸಃ ಸಾರತರಾ । ಋಚಃ ಸಾಮರಸಃ, ಸಾರತರಮ್ । ತಸ್ಯಾಪಿ ಸಾಮ್ನಃ ಉದ್ಗೀಥಃ ಪ್ರಕೃತತ್ವಾತ್ ಓಂಕಾರಃ ಸಾರತರಃ ॥

(ಭಾಷ್ಯಾರ್ಥ)

ಈ ಸ್ಥಾವರಜಂಗಮ[1] ಭೂತಗಳಿಗೆ ಪೃಥಿವಿಯು ರಸವು, ಗತಿಯು, ಪರಾಯಣವು, ಆಶ್ರಯವು. ಪೃಥಿವಿಗೆ ಅಪ್ಪು ರಸವು. ಅಪ್ಪಿನಲ್ಲಲ್ಲವೆ, ಪೃಥಿವಿಯು ಹಾಸುಹೊಕ್ಕಾಗಿ ಹೆಣೆದುಕೊಂಡಿರುವದು ? ಆದ್ದರಿಂದ ಅದು ಪೃಥಿವಿಗೆ ರಸವು. ಅಪ್ಪಿಗೆ ಓಷಧಿಗಳು ರಸವು ; ಏಕೆಂದರೆ ಗಿಡಮರಗಳು ಅಪ್ಪಿನ ಪರಿಣಾಮವು. ಆ (ಗಿಡಮರ)ಗಳಿಗೆ ಪುರುಷನು ರಸವು; ಏಕೆಂದರೆ ಪುರುಷನು ಅನ್ನದ ಪರಿಣಾಮವಾಗಿರುತ್ತಾನೆ[2]. ಆ (ಪುರುಷ)ನಿಗೂ ವಾಕ್ಕು

---

1. ಮಹಾಭೂತಗಳಿಗೆ ಎಂದು ಅರ್ಥವಲ್ಲ ಎಂಬುದನ್ನು ಈ ವಿಶೇಷಣವು ತಿಳಿಸುತ್ತದೆ.

2. ಅನ್ನರಸದ ಕಾರ್ಯಗಳಲ್ಲಿ ಮುಖ್ಯನಾಗಿರುತ್ತಾದ್ದರಿಂದ ಪುರುಷನನ್ನೇ ಹೇಳಿದೆ ; ತೈ. ಭಾ. ೨-೧ (ಭಾ. ಭಾ. ೧೧೬)ವನ್ನು ನೋಡಿ.

ರಸವು. ಪುರುಷನ ಅವಯವಗಳಲ್ಲಿ ವಾಕ್ಕು ಸಾರಿಷ್ಠವಲ್ಲವೆ? ಆದ್ದರಿಂದ ವಾಕ್ಕು ಪುರುಷನ ರಸವೆನಿಸುತ್ತದೆ. ಆ ವಾಕ್ಕಿಗೂ ಋಕ್ಕು ರಸವು, ಸಾರತರ ವಾದದ್ದು. ಋಕ್ಕಿಗೆ ಸಾಮವು ರಸವು, (ಅದಕ್ಕಿಂತ) ಸಾರತರವಾದದ್ದು. ಆ ಸಾಮಕ್ಕೂ ಉದ್ಗೀಥವು, ಪ್ರಕೃತವಾಗಿರುವ ಓಂಕಾರವು[1], (ರಸವು)[2], ಸಾರತರವಾದದ್ದು.

## ಓಂಕಾರವು ರಸತಮವಾದದ್ದು

(ಉಪನಿಷತ್ತು)

**ಸ ಏಷ ರಸಾನಾಗ್ಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದುದ್ಗೀಥಃ ॥ ೩ ॥**

೩. ಉದ್ಗೀಥವೆಂಬ ಆ ಇದು ರಸಗಳಿಗೆಲ್ಲ ರಸತಮವು, ಪರಮವು, ಪರಾರ್ಧ್ಯವು, ಎಂಟನೆಯದು.

(ಭಾಷ್ಯ)

೯. ಏವಂ ಸ ಏಷ ಉದ್ಗೀಥಾಖ್ಯಃ ಓಂಕಾರಃ ಭೂತಾದೀನಾಮ್ ಉತ್ತರೋತ್ತರರಸಾನಾಮ್ ಅತಿಶಯೇನ ರಸಃ ರಸತಮಃ। ಪರಮಃ ಪರಮಾತ್ಮ ಪ್ರತೀಕತ್ವಾತ್। ಪರಾರ್ಧ್ಯಃ। ಅರ್ಧಂ ಸ್ಥಾನಮ್। ಪರಂ ಚ ತದರ್ಧಂ ಚ ಪರಾರ್ಧಮ್। ತದರ್ಹತೀತಿ ಪರಾರ್ಧ್ಯಃ ಪರಮಾತ್ಮಸ್ಥಾನಾರ್ಹಃ। ಪರ ಮಾತ್ಮವತ್ ಉಪಾಸ್ಯತ್ವಾತ್ ಇತ್ಯಭಿಪ್ರಾಯಃ। ಅಷ್ಟಮಃ ಪೃಥಿವ್ಯಾದಿರಸ ಸಂಖ್ಯಾಯಾಂ ಯತ್ ಉದ್ಗೀಥಃ ಯ ಉದ್ಗೀಥಃ ॥

(ಭಾಷ್ಯಾರ್ಥ)

ಹೀಗೆ, ಈ ಉದ್ಗೀಥವೆಂಬ ಹೆಸರಿನ ಓಂಕಾರವು ಒಂದಕ್ಕಿಂತ ಮುಂದಿನ ಮತ್ತೊಂದು (ಹೆಚ್ಚಿನ) ರಸವಾಗಿರುವ ಭೂತಾದಿಗಳೆಂಬ (ರಸ)ಗಳಿಗೆಲ್ಲಕ್ಕಿಂತಲೂ ಮಿಗಿಲಾಗಿ ರಸವಾಗಿರುವದರಿಂದ **ರಸತಮವು**[3], **ಪರಮವು**, ಏಕೆಂದರೆ (ಪರಮಾತ್ಮನಿಗೆ ಪ್ರತೀಕವಾಗಿರುತ್ತದೆ). **ಪರಾರ್ಧ್ಯವು**—ಇಲ್ಲಿ ಅರ್ಧವೆಂದರೆ

---

1. ಉದ್ಗೀಥವು ಇಲ್ಲಿ ಪ್ರಕೃತವಾಗಿಲ್ಲ, ಉದ್ಗೀಥದ ಅವಯವವಾದ ಓಂಕಾರವೇ ಉಪಾಸ್ಯವಾದ್ದರಿಂದ ಪ್ರಕೃತವಾಗಿದೆ. ಆದ್ದರಿಂದ ಉದ್ಗೀಥವೆಂಬ ಶಬ್ದದಿಂದ ಅದನ್ನೇ ಇಲ್ಲಿ ಹಿಡಿಯಬೇಕು – ಎಂದು ಭಾವ.

2 ಈ ಮಾತು ಇಲ್ಲಿ ಮೂಲದಲ್ಲಿದ್ದು ಬರೆದವರು ಮರೆತು ಅದನ್ನು ಕೈಬಿಟ್ಟಿರ ಬಹುದೆಂದು ಕಾಣುತ್ತದೆ.

3. ಇದು ಬರಿಯ ಉದ್ಗೀಥಸ್ತುತಿಯಲ್ಲ, ಏಕೆಂದರೆ ಅಪೂರ್ವವಾಗಿ ಇದನ್ನು ವಿಧಿಸಿದೆ; ಆದ್ದರಿಂದ ಉಪಾಸೀತ (೧-೧-೧) ಎಂದು ವಿಧಿಸಿರುವ ಓಂಕಾರಕ್ಕೆ ರಸತಮತ್ವ ವೆಂಬ ಗುಣವನ್ನು ವಿಧಿಸಿದೆ ಎಂದು ತಿಳಿಯಬೇಕು. ಸೂ. ಭಾ. ೩-೪-೨೧ (ಭಾ. ಭಾ. ೪೬೩).

ಸ್ಥಾನವು; ಪರವಾದ ಅರ್ಥವು, ಪರಾರ್ಥವು; ಅದಕ್ಕೆ ತಕ್ಕದ್ದಾಗಿರುವದರಿಂದ ಪರಾರ್ಥ್ಯವು—ಪರಮಾತ್ಮನ ಸ್ಥಾನಕ್ಕೆ ಯೋಗ್ಯವಾದದ್ದು, ಏಕೆಂದರೆ ಪರಮಾತ್ಮನಂತೆ ಉಪಾಸ್ಯವಾಗಿದೆ ಎಂದು ಅಭಿಪ್ರಾಯ. (ಯದುದ್ಗೀಥಃ= ಯ ಉದ್ಗೀಥಃ) ಈ ಉದ್ಗೀಥವೆಂಬುದು ಪೃಥಿವಿಯೇ ಮುಂತಾದವುಗಳ ಸಂಖ್ಯೆಯಲ್ಲಿ[1] ಎಂಟನೆಯದು.

## ಓಂಕಾರವು ಸರ್ವಕಾಮಾಪ್ತಿಗುಣಕವು

(ಉಪನಿಷತ್ತು)

**ಕತಮಾ ಕತಮರ್ಕ್ಕತಮತ್ ಕತಮತ್ ಸಾಮ ಕತಮಃ ಕತಮ ಉದ್ಗೀಥ ಇತಿ ವಿಮೃಷ್ಟಂ ಭವತಿ ॥ ೪ ॥**

೪. ಯಾವಯಾವದು ಋಕ್ಕು, ಯಾವಯಾವದು ಸಾಮವು, ಯಾವಯಾವದು ಉದ್ಗೀಥವು ಎಂದು ವಿಮರ್ಶೆಮಾಡಬೇಕಾಗಿದೆ.

(ಭಾಷ್ಯ)

೧೦. ವಾಚ ಋಗ್ರಸಃ ಇತ್ಯುಕ್ತಮ್। ಕತಮಾ ಸಾ ಋಕ್? ಕತಮತ್ ತತ್ ಸಾಮ? ಕತಮೋ ವಾ ಸ ಉದ್ಗೀಥಃ? ಕತಮಾ ಕತಮಾ? ಇತಿ ವೀಪ್ಸಾ ಆದರಾರ್ಥಾ। ನನು "ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್" (ಪಾ. ಸೂ. ೫-೩-೯೩)[2]। ನ ಹಿ ಅತ್ರ ಋಗ್ಜಾತಿಬಹುತ್ವಮ್। ಕಥಂ ಡತಮಚ್ಪ್ರಯೋಗಃ? ನೈಷ ದೋಷಃ। ಜಾತೌ ಪರಿಪ್ರಶ್ನಃ ಜಾತಿಪರಿಪ್ರಶ್ನಃ ಇತ್ಯೇತಸ್ಮಿನ್ ವಿಗ್ರಹೇ ಜಾತೌ ಋಗ್ವ್ಯಕ್ತೀನಾಂ ಬಹುತ್ವೋಪಪತ್ತೇಃ। ನ ತು ಜಾತೇಃ ಪರಿಪ್ರಶ್ನಃ ಇತಿ ವಿಗೃಹ್ಯತೇ। ನನು ಜಾತೇಃ ಪರಿಪ್ರಶ್ನಃ ಇತ್ಯಸ್ಮಿನ್ ವಿಗ್ರಹೇ 'ಕತಮಃ ಕಠಃ?' ಇತ್ಯಾದ್ಯುದಾಹರಣಮ್ ಉಪಪನ್ನಮ್। ಜಾತೌ ಪರಿಪ್ರಶ್ನಃ ಇತ್ಯತ್ರ ತು ನ ಯುಜ್ಯತೇ। ತತ್ರಾಪಿ ಕಠಾದಿಜಾತಾವೇವ ವ್ಯಕ್ತಿಬಹುತ್ವಾಭಿಪ್ರಾಯೇಣ ಪರಿಪ್ರಶ್ನಃ ಇತ್ಯದೋಷಃ। ಯದಿ ಜಾತೇಃ ಪರಿಪ್ರಶ್ನಃ ಸ್ಯಾತ್ 'ಕತಮಾ ಕತಮಾ ಋಕ್' ಇತ್ಯಾದೌ ಉಪಸಂಖ್ಯಾನಂ ಕರ್ತವ್ಯಂ ಸ್ಯಾತ್। ವಿಮೃಷ್ಟಂ ಭವತಿ ವಿಮರ್ಶಃ ಕೃತೋ ಭವತಿ। ವಿಮರ್ಶೇ ಹಿ ಕೃತೇ ಸತಿ ಪ್ರತಿವಚನೋಕ್ತಿಃ ಉಪಪನ್ನಾ[3] ॥

---

1. ಭೂತಗಳಿಗೆ ಪೃಥಿವಿಯು ರಸವು ಎಂದು ಹೇಳಿರುವ ಪೃಥಿವಿಯಿಂದ ಎಣಿಸಿದರೆ ಎಂದರ್ಥ.

2. 'ಇತಿ ಡತಮಚ್ಪ್ರತ್ಯಯ ಇಷ್ಯಃ' ಎಂಬ ಹೆಚ್ಚಿನ ಪಾಠವು (ಅ॥ ವಾ॥) ಬೇಕಿಲ್ಲ.

3. ಅಚ್ಚಿನ ಪುಸ್ತಕದಲ್ಲಿ ಮುಂದಿನ ಕಂಡಿಕೆಯ ಕೆಳಗಿರುವ ಈ ವಾಕ್ಯವನ್ನು ಇಲ್ಲಿಗೇ ಸೇರಿಸಿಕೊಳ್ಳಬೇಕು.

(ಭಾಷ್ಯಾರ್ಥ)

"ವಾಕ್ಕಿಗೆ ಋಕ್ಕು ರಸವು....." (೧-೧-೩) ಎಂದು ಹೇಳಿದೆ(ಯಷ್ಟೆ, (ಅಲ್ಲಿ) ಆ ಋಕ್ಕೆಂಬುದು ಯಾವದು ? ಆ ಸಾಮವೆಂಬುದು ಯಾವದು ? ಆ ಉದ್ಗೀಥವೆಂಬುದಾದರೂ ಯಾವದು ? 'ಕತಮಾ ಕತಮಾ' (ಯಾವಯಾವದು) ಎಂಬ ವೀಪ್ಸೆಯು ಆದರಕ್ಕಾಗಿ (ಬಂದಿದೆ).

(ಆಕ್ಷೇಪ) :- "ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್" (ಪಾ. ಸೂ. ೫-೩-೯೩) ಬಹಳ ಜಾತಿಗಳೊಳಗೆ (ಒಂದು ಜಾತಿಯ ನಿರ್ಣಯ ಕ್ಕಾಗಿ) ಪರಿಪ್ರಶ್ನೆಯುಂಟಾದಲ್ಲಿ ಡತಮಚ್(ಪ್ರತ್ಯಯವು ಬರುವದು ಎಂದು ವ್ಯಾಕರಣಸೂತ್ರವಿದೆ. ಆದರೆ ) ಇಲ್ಲಿ ಋಗ್ಜಾತಿಗಳು ಬಹಳವಿಲ್ಲವಲ್ಲ[1] ! ಡತಮಚ್‌ಪ್ರತ್ಯಯವನ್ನು ಪ್ರಯೋಗಿಸಿರುವದು ಹೇಗೆ (ಸರಿ) ?

(ಪರಿಹಾರ) :- ಇದೇನೂ ತಪ್ಪಲ್ಲ. 'ಜಾತೌ ಪರಿಪ್ರಶ್ನಃ ಜಾತಿ ಪರಿಪ್ರಶ್ನಃ' (ಜಾತಿಯಲ್ಲಿ ಒಂದು ವ್ಯಕ್ತಿಯ ನಿರ್ಧಾರಣಕ್ಕಾಗಿ ಮಾಡುವ ಪರಿಪ್ರಶ್ನೆಯೇ ಜಾತಿಪರಿಪ್ರಶ್ನೆಯು) ಎಂದು (ಈ ಸಮಾಸಕ್ಕೆ) ವಿಗ್ರಹವನ್ನು (ಮಾಡಿ)ದಲ್ಲಿ ಜಾತಿಯಲ್ಲಿ ಋಗ್ವ್ಯಕ್ತಿಗಳು ಬಹಳವಾಗಿರಬಹುದಾಗಿದೆ[2]. (ಇಷ್ಟೇ) ಹೊರತು 'ಜಾತೇಃ ಪರಿಪ್ರಶ್ನಃ' (ಜಾತಿಯ ಪರಿಪ್ರಶ್ನೆಯು) ಎಂದು ವಿಗ್ರಹ ವನ್ನು ಮಾಡತಕ್ಕದ್ದಲ್ಲ[3].

(ಆಕ್ಷೇಪ) :- 'ಜಾತೇಃ ಪರಿಪ್ರಶ್ನಃ' ಎಂಬೀ ವಿಗ್ರಹವಿದ್ದರೇ 'ಕತಮಃ ಕಠಃ ? (ಕಠನು ಯಾವನು ?) ಎಂದು ಮುಂತಾಗಿರುವ ಉದಾಹರಣೆಯು ಹೊಂದುತ್ತದೆ.[4] 'ಜಾತೌ ಪರಿಪ್ರಶ್ನಃ' ಎಂಬಲ್ಲಿಯಾದರೋ ಯುಕ್ತವಾಗುವ ದಿಲ್ಲವಲ್ಲ !

(ಪರಿಹಾರ) :- ಅಲ್ಲಿಯೂ ಕಠವೇ ಮುಂತಾದ ಜಾತಿಯೊಳಗೇ ವ್ಯಕ್ತಿ ಗಳು ಬಹಳವಾಗಿವೆ ಎಂಬ ಅಭಿಪ್ರಾಯದಿಂದ ಪರಿಪ್ರಶ್ನೆ(ಯಾಗಿದೆ)ಯಾದ್ದ

---

1. ಇದು ಉಪಲಕ್ಷಣ. ಹೀಗೆಯೇ ಸಾಮಜಾತಿಗಳೂ ಉದ್ಗೀಥಜಾತಿಗಳೂ ಬಹಳವಿಲ್ಲವಲ್ಲ ! -ಎಂದೂ ಈ ಆಕ್ಷೇಪವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

2. ಆಯಾ ಜಾತಿಯ ಬಹಳ ವ್ಯಕ್ತಿಗಳ ನಡುವೆ ಒಂದು ವ್ಯಕ್ತಿಯನ್ನು ನಿರ್ಣ ಯಿಸುವದಕ್ಕಾಗಿ ಪರಿಪ್ರಶ್ನೆಯಿರುವಲ್ಲಿ ಎಂದು ಸೂತ್ರಭಾಗಕ್ಕೆ ಅರ್ಥವೆಂದು ಭಾವ.

3. ಹಾಗೆ ಮಾಡಿಕೊಂಡರೆ ಮಾತ್ರ ನಿಮ್ಮ ಆಕ್ಷೇಪವು ಹೊಂದುತ್ತದೆ ಎಂದು ಭಾವ.

4. ಪಾತಂಜಲಭಾಷ್ಯದಲ್ಲಿ 'ಕತಮಃ ಕಠಃ ?' ಎಂಬ ಉದಾಹರಣೆಯಿದೆ. ಕಠ ಎಂಬುದು ಚರಣವನ್ನು (ಶಾಖೆಯನ್ನು) ತಿಳಿಸುವದರಿಂದ ಜಾತಿ ಎನಿಸುವದು. ಆದ್ದರಿಂದ ಸೂತ್ರವು ಜಾತಿಗೆ ಮಾತ್ರ ಅನ್ವಯಿಸುತ್ತದೆ ಎಂಬುದಕ್ಕೆ ಆ ಉದಾಹರಣೆಯು ಸೂಚಕ ವಲ್ಲವೆ ? -ಎಂದು ಆಕ್ಷೇಪ.

ರಿಂದ (ಯಾವ) ದೋಷವೂ ಇಲ್ಲ.[1] 'ಜಾತೇಃ ಪರಿಪ್ರಶ್ನಃ' ಎಂದೇ (ಅಲ್ಲಿ ವಿಗ್ರಹವಾದರೆ) 'ಕತಮಾ ಕತಮರ್ಕ್' ಮುಂತಾದವುಗಳ ಉಪಸಂಖ್ಯಾನವನ್ನು ಮಾಡಿಕೊಳ್ಳಬೇಕಾಗುವದು.[2]

(ಹೀಗೆಂದು) ವಿಮರ್ಶವನ್ನು ಮಾಡಬೇಕಾಗಿದೆ; ವಿಮರ್ಶೆಮಾಡಿದರಲ್ಲವೆ, ಪ್ರತಿವಚನವನ್ನು ಹೇಳುವದು ಯುಕ್ತ ?

(ಉಪನಿಷತ್ತು)

**ವಾಗೇವರ್ಕ್ಪ್ರಾಣಃ ಸಾಮೋಮಿತ್ಯೇತದಕ್ಷರಮುದ್ಗೀಥಃ ।**
**ತದ್ವಾ ಏತನ್ಮಿಥುನಂ ಯದ್ ವಾಕ್ಚ ಪ್ರಾಣಶ್ಚರ್ಕ್ಚ ಸಾಮ ಚ ॥ ೫ ॥**

೫. ವಾಕ್ಕೇ ಋಕ್ಕು, ಪ್ರಾಣವು ಸಾಮವು; ಓಮೆಂಬೀ ಅಕ್ಷರವು ಉದ್ಗೀಧವು. ಆ ಇದೇ ಮಿಥುನವು; ವಾಕ್ಕೂ ಪ್ರಾಣವೂ, ಋಕ್ಕೂ ಸಾಮವೂ.

## ಓಂಕಾರದಲ್ಲಿ ಋಕ್ಸಾಮಗಳ ಮಿಥುನ

(ಭಾಷ್ಯ)

೧೧. ವಾಗೇವರ್ಕ್ ಪ್ರಾಣಃ ಸಾಮೇತಿ। ವಾಗೃಚೋರೇಕತ್ವೇಽಪಿ ನಾಷ್ಟಮತ್ವವ್ಯಾಘಾತಃ। ಪೂರ್ವಸ್ಮಾತ್ ವಾಕ್ಯಾನ್ತರತ್ವಾತ್। ಆಪ್ತಗುಣಸಿದ್ಧಯೇ ಹಿ ಓಮಿತ್ಯೇತದಕ್ಷರಮುದ್ಗೀಧಃ[3] ಇತಿ। ವಾಕ್ಪ್ರಾಣೌ ಋಕ್ಸಾಮಯೋನೀ ಇತಿ

---

1. ಕರಜಾತಿಗೆ ಸೇರಿದ ಅನೇಕ ವ್ಯಕ್ತಿಗಳಲ್ಲಿ ಯಾವನು ? –ಎಂದೇ ಉದಾಹರಣೆಯ ಪ್ರಶ್ನೆಗೆ ಅರ್ಥ. ಆದ್ದರಿಂದ ಅಲ್ಲಿಯೂ 'ಜಾತೌ ಪರಿಪ್ರಶ್ನೇ' ಎಂದೇ ವಿಗ್ರಹ ಎಂದು ಭಾವ. "ಕಿಂ ಯತ್ತದೋ ನಿರ್ಧಾರಣೇ ದ್ವಯೋರೇಕಸ್ಯ ಡತರಚ್" ಪಾ. ಸೂ. (೫–೩–೯೨) ಎಂಬ ಸೂತ್ರವಾದ ಬಳಿಕ ಈ ಸೂತ್ರವು ಬಂದಿದೆ. ಕಿಂ ಯತ್ ತತ್ –ಇವುಗಳಿಗೆ ಡತರಚ್‌ಪ್ರತ್ಯಯವು ಇಬ್ಬರಲ್ಲೊಬ್ಬನು ಎಂದರ್ಥವಿರುವಾಗ ಬರುವದು ಎಂದು ಆ ಸೂತ್ರಕ್ಕೆ ಅರ್ಥ. ಕತರಃ, ಯತರಃ, ತತರಃ –ಎಂಬಿವು ಅದಕ್ಕೆ ಉದಾಹರಣೆಗಳು. ಆ ಸೂತ್ರದಲ್ಲಿ 'ದ್ವಯೋಃ' ಎಂಬ ಮಾತು ಬೇಕಿಲ್ಲ; ಈ ಸೂತ್ರದಲ್ಲಿ ಜಾತಿಪರಿಪ್ರಶ್ನೇ ಎಂಬ ಮಾತೂ ಬೇಕಿಲ್ಲ– ಎಂದು ಕೈಯಟರು ಬರೆದಿರುತ್ತಾರೆ. 'ಕತಮ ಏಷಾಂ ಪಾಚಕಃ, ಶೂರಃ ದೇವದತ್ತಃ–' ಎಂದು ಕ್ರಿಯೆ, ಗುಣ, ಸಂಜ್ಞೆ –ಇವುಗಳಿಗೂ ಉದಾಹರಣೆಗಳನ್ನು ಕೊಡಬಹುದಾಗಿರುವದರಿಂದ ಜಾತಿಯನ್ನು ನಿರ್ಧಾರಣೆಮಾಡುವಾಗಲೇ ಡತಮಚ್‌ಪ್ರತ್ಯಯವು ಬರುವದೆಂಬ ನಿಯಮವೇನೂ ಇಲ್ಲ ಎಂಬುದು ಅವರ ಅಭಿಪ್ರಾಯ. ಆ ಪಕ್ಷದಲ್ಲಂತೂ ಪ್ರಕೃತಪೂರ್ವಪಕ್ಷಕ್ಕೆ ಅವಕಾಶವೇ ಇರುವದಿಲ್ಲ.

2. ಎಂದರೆ ಈ ಉದಾಹರಣೆಗಳಿಗೂ ಅನ್ವಯಿಸುವಂತೆ ಸೂತ್ರಕ್ಕೆ ಹೆಚ್ಚಿನ ವಾಕ್ಯವನ್ನು ಸೇರಿಸಿಕೊಳ್ಳಬೇಕಾಗುವದು.

3. ಇಲ್ಲಿರುವ ಪಾಠಾಂತರಗಳ ವಿಚಾರಕ್ಕೆ ಅನುವಾದದ ಟಿಪ್ಪಣಿಯನ್ನು ನೋಡಿರಿ.

'ವಾಗೇವರ್ಕ್ ಪ್ರಾಣಃ ಸಾಮ' ಇತ್ಯುಚ್ಯತೇ । ಯಥಾಕ್ರಮಮ್ ಋಕ್ಸಾಮ ಯೋರ್ನ್ಯೋರ್ಹಿ ವಾಕ್ಪ್ರಾಣಯೋರ್ಗ್ರಹಣೇ ಹಿ ಸರ್ವಾಸಾಮ್ ಋಚಾಂ ಸರ್ವೇಷಾಂ ಚ ಸಾಮ್ನಾಮ್ ಅವರೋಧಃ ಕೃತಃ ಸ್ಯಾತ್ । ಸರ್ವರ್ಕ್ಸಾಮಾವ ರೋಧೇ ಚ ಋಕ್ಸಾಮಸಾಧ್ಯಾನಾಂ ಚ ಸರ್ವಕರ್ಮಣಾಮ್ ಅವರೋಧಃ ಕೃತಃ ಸ್ಯಾತ್ । ತದವರೋಧೇ ಚ ಸರ್ವೇ ಕಾಮಾ ಅವರುದ್ಧಾಃ ಸ್ಯುಃ । ಓಮಿತ್ಯೇತದಕ್ಷರಮುದ್ಗೀಥಃ ಇತಿ ಭಕ್ತ್ಯಾಶಙ್ಕಾ ನಿವರ್ತ್ಯತೇ । ತದ್ವಾ ಏತತ್ ಇತಿ ಮಿಥುನಂ ನಿರ್ದಿಶ್ಯತೇ । ಕಿಂ ತನ್ಮಿಥುನಮಿತಿ ? ಆಹ । ಯದ್ ವಾಕ್ಚ ಪ್ರಾಣಶ್ಚ ಸರ್ವರ್ಕ್ಸಾಮಕಾರಣಭೂತೌ ಮಿಥುನಮ್ । ಋಕ್ಚ ಸಾಮ ಚ ಇತಿ ಋಕ್ಸಾಮಕಾರಣೌ ಋಕ್ಸಾಮಶಬ್ದೋಕ್ತೌ ಇತ್ಯರ್ಥಃ । ನ ತು ಸ್ವತನ್ತ್ರಮ್[1] ಋಕ್ಚ ಸಾಮ ಚ ಮಿಥುನಮ್। ಅನ್ಯಥಾ ಹಿ ವಾಕ್ ಪ್ರಾಣಶ್ಚೈಕಂ ಮಿಥುನಮ್, ಋಕ್ಚ ಸಾಮ ಚ ಅಪರಂ ಮಿಥುನಮ್[2] ಇತಿ ದ್ವೇ ಮಿಥುನೇ ಸ್ಯಾತಾಮ್ । ತಥಾ ಚ 'ತದ್ವಾ ಏತನ್ಮಿಥುನಮ್[3]' ಇತ್ಯೇಕವಚನನಿರ್ದೇಶೋಽನುಪಪನ್ನಃ ಸ್ಯಾತ್ । ತಸ್ಮಾತ್ ಋಕ್ಸಾಮಯೋರ್ನ್ಯೋಃ ವಾಕ್ಪ್ರಾಣಯೋರೇವ ಮಿಥುನತ್ವಮ್ ॥

(ಭಾಷ್ಯಾರ್ಥ)

ವಾಕ್ಕೇ ಋಕ್ಕು, ಪ್ರಾಣವು ಸಾಮವು. (ಇಲ್ಲಿ) ವಾಗ್ಗೃಕ್ಕುಗಳು ಒಂದೇ (ಎಂದು ಹೇಳಿದ್ದರೂ ಉದ್ಗೀಥವು) ಎಂಟನೆಯದೆಂಬುದಕ್ಕೆ ವಿರೋಧವಿಲ್ಲ[4]. ಏಕೆಂದರೆ ಇದು ಹಿಂದಿನ (ವಾಕ್ಯ)ಕ್ಕಿಂತ ಬೇರೆ ಒಂದು ವಾಕ್ಯವಾಗಿದೆ[5]. ಓಮ್ ಎಂಬೀ ಅಕ್ಷರವು ಉದ್ಗೀಥವು ಎಂಬುದು (ಇಲ್ಲಿ) ಆಪ್ತಿಗುಣದ ಸಿದ್ಧಿಗಾಗಿ

1. 'ಸ್ವತನ್ತ್ರೇ', 'ಸ್ವಾತನ್ತ್ರ್ಯೇಣ' (ವಾ॥) ಎಂಬ ಪಾಠಾಂತರಗಳು ಬೇಕಿಲ್ಲ.

2. 'ವಾಕ್ಚ ಪ್ರಾಣಶ್ಚ ಇತ್ಯೇಕಂ ಮಿಥುನಮ್ ಋಕ್ಚ ಸಾಮಚಾಪರಂ ಮಿಥುನಮ್' (ಆ॥), 'ವಾಕ್ಪ್ರಾಣಶ್ಚ ಇತ್ಯೇಕಂ ಮಿಥುನಮ್, ಋಕ್ಸಾಮ ಚಾಪರಮ್' (ವಾ॥), "ವಾಕ್ಪ್ರಾಣಶ್ಚೇತ್ಯೇಕಂ ಮಿಥುನಮ್, ಋಕ್ಸಾಮ ಚ ಪರಮ್" (ಅ॥) ಎಂದು ಈ ವಾಕ್ಯಕ್ಕೆ ಬೇರೆ ಪಾಠಗಳೂ ಇವೆ.

3. ಈ ವಾ॥ ಪಾಠವೇ ತದೇತನ್ಮಿಥುನಮ್ ಎಂಬುದಕ್ಕಿಂತ ಮೇಲು.

4. ಹಿಂದಿನ ಕಂಡಿಕೆಯಲ್ಲಿ ವಾಕ್ಕಿಗೆ ಋಕ್ಕು ರಸವು ಎಂದು ವಾಗೃಕ್ಕುಗಳನು ಬೇರೆಬೇರೆಯಾಗಿ ಹಿಡಿದಿರುವದರಿಂದ ಉದ್ಗೀಥವು ಎಂಟನೆಯದೆಂದದ್ದು ಸರಿಯಾಯಿತು ; ಇಲ್ಲಿ 'ವಾಕ್ಕೇ ಋಕ್ಕು' ಎಂದದ್ದರಿಂದ ಏಳನೆಯದಾಯಿತಲ್ಲ ! –ಎಂಬ ಶಂಕೆಗೆ ಪರಿಹಾರ ವಿದು.

5. ಮತ್ತೊಂದು ವಿಷಯವನ್ನು ಹೇಳುವದಕ್ಕೆ ಬಂದ ವಾಕ್ಯವಾಗಿದೆ.

(ಬಂದಿರುತ್ತದೆ)[1]. ವಾಕ್ಪ್ರಾಣಗಳು ಋಕ್ಸಾಮಗಳಿಗೆ ಕಾರಣವಾಗಿರುವದರಿಂದ 'ವಾಕ್ಕೇ ಋಕ್ಕು, ಪ್ರಾಣವು ಸಾಮ' -ಎಂದು ಹೇಳಿರುತ್ತದೆ.[2] ಯಥಾಕ್ರಮವಾಗಿ ಋಕ್ಸಾಮಗಳಿಗೆ ಕಾರಣವಾಗಿರುವ ವಾಕ್ಪ್ರಾಣಗಳನ್ನು ಗ್ರಹಿಸಿದರಲ್ಲವೆ, ಎಲ್ಲಾ ಋಕ್ಕುಗಳನ್ನೂ ಎಲ್ಲಾ ಸಾಮಗಳನ್ನೂ ಒಳಗೊಂಡಂತೆ ಆಗುವದು[3] ? ಎಲ್ಲಾ ಋಕ್ಸಾಮಗಳನ್ನೂ ಒಳಗೊಂಡರೆ ಋಕ್ಸಾಮಸಾಧ್ಯವಾಗಿರುವ ಎಲ್ಲಾ ಕರ್ಮಗಳನ್ನೂ ಒಳಗೊಂಡಂತೆ ಆಗುವದು[4]; ಅವುಗಳನ್ನು ಒಳಗೊಂಡರೆ ಎಲ್ಲಾ ಕರ್ಮಗಳನ್ನೂ ಒಳಗೊಂಡಂತೆ ಆಗುವದು. (ಅಲ್ಲವೆ)[5]?

---

1. 'ಓಮಿತ್ಯೇತದಕ್ಷರಮುದ್ಗೀಥ ಇತಿ' ಎಂಬ ವಾಕ್ಯವು ಭಾಷ್ಯಕ್ಕೆ ಸೇರಿದ್ದೆಂದು ಮುದ್ರಿತ ಆ|| ಪಾಠವನ್ನು ಹಿಡಿದು ಕನ್ನಡಿಸಿದೆ. ಆದರೆ ಭಾಷ್ಯದಲ್ಲಿ ಈ ವಾಕ್ಯವನ್ನು ಮತ್ತೊಮ್ಮೆ ಮುಂದೆ ತೆಗೆದುಕೊಂಡೇ ವ್ಯಾಖ್ಯಾನಮಾಡಿರುವದರಿಂದ ಮೂಲಭಾಷ್ಯದಲ್ಲಿ ಈ ವಾಕ್ಯವು ಇಲ್ಲಿಯೂ ಇತ್ತೆ ? -ಎಂಬುದು ವಿಮರ್ಶನೀಯವಾಗಿದೆ. ವಾ|| ಪಾಠದಲ್ಲಿ ಪ್ರಾಣಃ ಸಾಮೇತಿ ಎಂದಿರದೆ ಪ್ರಾಣಃ ಸಾಮ ಓಮಿತ್ಯೇತದಕ್ಷರಮುದ್ಗೀಥಃ ಎಂಬ ವಾಕ್ಯವನ್ನು ಕೊಟ್ಟಿದೆ, ಪೂರ್ವಸ್ಮಾತ್ ವಾಕ್ಯಾನ್ತರತ್ವಾತ್ | ಎಂದು ಒಂದು ವಾಕ್ಯವನ್ನು ಮಾಡಿ 'ಆಪ್ತಿಗುಣಸಿದ್ಧಯೇ ಹಿ ಓಮಿತ್ಯೇತದಕ್ಷರಮುದ್ಗೀಥಃ ಇತಿ' ಎಂಬ ಪಾಠವನ್ನು ಸ್ವೀಕರಿಸಿದೆ. ಆ ಪಾಠದಲ್ಲಿ ಇದು ವಿವರಣಕ್ಕೆ ಸೇರಿದ ವಾಕ್ಯವೆನ್ನಬೇಕಾಗುವದು. ಈ ವಾಕ್ಯವನ್ನೇ ಕೈಬಿಟ್ಟು 'ಆಪ್ತಿಗುಣಸಿದ್ಧಯೇ' ಎಂಬಲ್ಲಿಗೇ ವಾಕ್ಯಸಮಾಪ್ತಿಯನ್ನು ಮಾಡಿರುವ ಪಾಠಾಂತರವನ್ನೂ ಆ|| ಪುಸ್ತಕದಲ್ಲಿ ತೋರಿಸಿದೆ. ಆ ಪಾಠದಲ್ಲಿ- ಏಳನೆಯ ಕಂಡಿಕೆಯಲ್ಲಿ ಕಾಮಾಪ್ತಿ ಎಂಬ ಫಲವನ್ನು ಹೇಳುವದಕ್ಕಾಗಿ ಹೊರಟಿರುವದರಿಂದ ರಸತಮತ್ವಗುಣವನ್ನು ಹೇಳಿದ ವಾಕ್ಯಕಿಂತ ಈ ವಾಕ್ಯವು ಬೇರೆ ಎಂದು ಸುಲಭವಾಗಿ ಸಂಬಂಧವನ್ನು ಕಲ್ಪಿಸಬಹುದಾಗುತ್ತದೆ.

2. ವಾಕ್ಕಿನಿಂದ ಋಕ್ಕು ಆಗಿದೆ, ಪ್ರಾಣ(ಬಲ)ದಿಂದ ಸಾಮಗಾನವಾಗುತ್ತದೆ; ಆದ್ದರಿಂದ ವಾಕ್ಕನ್ನು ಋಕ್ಕು ಎಂದೂ ಪ್ರಾಣವನ್ನು ಸಾಮವೆಂದೂ ಕರೆದಿದೆ ಎಂದರ್ಥ.

3. ಋಕ್ಛಬ್ದವಾಚ್ಯವಾಗಿರುವದು ವಾಕ್ಕೇ, ಸಾಮಶಬ್ದವಾಚ್ಯವಾದದ್ದು ಪ್ರಾಣವೇ -ಎಂದು ಹಿಡಿದರೆ ವಾಕ್ಕಿನಿಂದಾಗುವ ಎಲ್ಲಾ ಋಕ್ಕುಗಳನ್ನೂ ಪ್ರಾಣದಿಂದಾಗುವ ಎಲ್ಲಾ ಸಾಮಗಳನ್ನೂ ಹೇಳಿದಂತೆ ಆಗುವದು ಎಂದರ್ಥ. ಸಾಮಾನ್ಯಗ್ರಹಣವಾದರೆ ಜಾತಿಪರಿಪ್ರಶ್ನವೇ ಆಯಿತಲ್ಲ! ಹಿಂದಿನ ಮಂತ್ರದಲ್ಲಿ ಅದನ್ನು ಖಂಡಿಸಿದ್ದೇಕೆ ? -ಎಂದರೆ ಅಲ್ಲಿ ಋಗಾದಿಗಳಲ್ಲಿ ಒಂದೊಂದರಲ್ಲಿಯೂ ಭೇದವನ್ನು ಅಂಗೀಕರಿಸುವ ಷಷ್ಠೀಸಮಾಸಪಕ್ಷವನ್ನು ಖಂಡಿಸಿದೆಯೇ ಹೊರತು ಅವುಗಳಲ್ಲಿ ಪ್ರತಿಯೊಂದೂ ಒಂದೊಂದು ಎಂದು ಒಪ್ಪಿ ಅನೇಕವಾಗಿರುವ ಋಕ್ಸಾಮೋದ್ಗೀಥಜಾತಿಗಳೊಳಗೆ ಒಂದೊಂದನ್ನು ನಿರ್ಧರಿಸುವದಕ್ಕಾಗಿ ಷಷ್ಠೀಸಮಾಸವನ್ನವಲಂಬಿಸುವ ಪಕ್ಷವನ್ನು ಖಂಡಿಸಿಲ್ಲ -ಎಂದು ಆ|| ಗಿ|| ಟೀಕಾ

4. ಋಕ್ಸಾಮಗಳು ಎಲ್ಲಾ ಕರ್ಮಗಳಿಗೂ ಬೇಕಾದ್ದರಿಂದ ವಾಕ್ಪ್ರಾಣಗ್ರಹಣದಿಂದ ಕರ್ಮಗಳೆಲ್ಲವನ್ನೂ ಗ್ರಹಿಸಿದಂತೆ ಆಗುವದು.

5. ಕರ್ಮದಿಂದಲೇ ಕಾಮಾವಾಪ್ತಿಯಾಗಬೇಕಾಗಿರುವದರಿಂದ ಸರ್ವಕರ್ಮಗ್ರಹಣದಿಂದ ಸರ್ವಕಾಮಾವಾಪ್ತಿಯನ್ನು ಗ್ರಹಿಸಿದಂತೆ ಆಗುವದು. ಉದ್ಗೀಥಾವಯವವಾದ ಓಂಕಾರದಿಂದ ಮುಂದಿನ ಕಂಡಿಕೆಯಲ್ಲಿ ಹೇಳಿರುವಂತೆ ಅದರ ಉಪಾಸನೆಯಿಂದ ಸರ್ವಕಾಮಾವಾಪ್ತಿಯು ಸಿದ್ಧವಾಗುವದು.

ಓಮೆಂಬೀ ಅಕ್ಷರವು ಉದ್ಗೀಥವು ಎಂದದ್ದರಿಂದ (ಸಾಮ)ಭಕ್ತಿಯನ್ನೆ (ಉದ್ಗೀಥವೆಂದಿದೆ ಎಂಬ) ಆಶಂಕೆಯನ್ನು ತೊಲಗಿಸಿದಂತೆ ಆಗಿದೆ.[1]

'ಆ ಇದೇ ಎಂದು ಮಿಥುನವನ್ನು ನಿರ್ದೇಶವಮಾಡಿರುತ್ತದೆ. ಆ ಮಿಥುನವು ಯಾವದು? ಎಂದರೆ (ಶ್ರುತಿ) ಹೇಳುತ್ತದೆ: ವಾಕ್ಕೂ ಋಕ್ಕೂ, ಎಲ್ಲಾ ಋಕ್ಕುಗಳಿಗೂ ಸಾಮಗಳಿಗೂ ಕಾರಣಭೂತವಾದ (ವಾಕ್ಪ್ರಾಣಗಳೇ ಈ) ಮಿಥುನವು. 'ಋಕ್ಕೂ ಸಾಮವೂ' ಎಂದರೆ ಋಕ್ಪ್ರಾಣಶಬ್ದಗಳಿಂದ ಉಕ್ತವಾಗಿರುವ (ವಾಕ್ಪ್ರಾಣಗಳು) ಎಂದರ್ಥ. (ಇಷ್ಟೇ) ಹೊರತು ಋಕ್ಕೂ ಸಾಮವೂ ಸ್ವತಂತ್ರವಾಗಿಯೇ ಮಿಥುನವು (ಎಂದೇನೂ ಅಭಿಪ್ರಾಯ)ವಲ್ಲ. ಏಕೆಂದರೆ ವಾಕ್ಕೂ ಪ್ರಾಣವೂ ಎಂಬುದೊಂದು ಮಿಥುನ, ಋಕ್ಕೂ ಸಾಮವೂ ಎಂಬುದು ಮತ್ತೊಂದು ಮಿಥುನ – ಎಂದು ಎರಡು ಮಿಥುನಗಳಾಗುವವು. ಹಾಗಾದರೆ 'ಆ ಇದೇ ಮಿಥುನವು'[2] ಎಂದು ಏಕವಚನದಿಂದ ನಿರ್ದೇಶಮಾಡಿರುವದು ವ್ಯರ್ಥವಾಗುವದು. ಆದ್ದರಿಂದ ಋಕ್ಸಾಮಗಳಿಗೆ ಕಾರಣವಾಗಿರುವ ವಾಕ್ಪ್ರಾಣಗಳೇ (ಇಲ್ಲಿ) ಮಿಥುನವು.[3]

(ಉಪನಿಷತ್ತು)

**ತದೇತನ್ಮಿಥುನಮೋಮಿತ್ಯೇತಸ್ಮಿನ್ನಕ್ಷರೇ ಸಗ್ಂಸೃಜ್ಯತೇ ಯದಾ ವೈ ಮಿಥುನೌ ಸಮಾಗಚ್ಛತ ಆಪಯತೋ ವೈ ತಾವನ್ಯೋನ್ಯಸ್ಯ ಕಾಮಮ್ ॥ ೬ ॥**

೬. ಆ ಈ ಮಿಥುನವು ಓಮ್ ಎಂಬೀ ಅಕ್ಷರದಲ್ಲಿ ಸೇರಿಕೊಂಡಿರುತ್ತದೆ. ಯಾವಾಗ ಮಿಥುನರು ಕೂಡುವರೋ' (ಆಗ) ಅವರು ಒಬ್ಬರೊಬ್ಬರ ಕಾಮವನ್ನು ಪಡೆಯಿಸುತ್ತಾರಷ್ಟೆ.

## ಓಂಕಾರಕ್ಕೆ ಮಿಥುನಸಂಬಂಧದಿಂದಾಗಿರುವ ಫಲ

(ಭಾಷ್ಯ)

೧೨. ತದೇತತ್ ಏವಂಲಕ್ಷಣಂ ಮಿಥುನಮ್ ಓಮಿತ್ಯೇತಸ್ಮಿನ್ ಅಕ್ಷರೇ

1. ಇಲ್ಲಿರುವ ಉದ್ಗೀಥವು ಉದ್ಗೀಥವೆಂಬ ಸಾಮಭಕ್ತಿಯಲ್ಲ; ಪ್ರಕೃತವಾಗಿರುವ ಉದ್ಗೀಥಾವಯವವಾದ ಓಂಕಾರವೇ.

2. 'ತದೇತನ್ಮಿಥುನಮ್' ಎಂಬ ಅ॥ ಪಾಠಕ್ಕೆ ಆ ಈ ಮಿಥುನವು ಎಂದರ್ಥ; ಆದರೆ ಅಗ ಮುಂದಿನ ಕಂಡಿಕೆಯ ಪರಾಮರ್ಶವನ್ನು ಅನವಶ್ಯವಾಗಿ ಕಲ್ಪಿಸಬೇಕಾಗುವದು.

3. ಆದ್ದರಿಂದ ಋಕ್ಕೂ ಸಾಮವೂ ಎಂದು ಹೇಳಿದ ವಾಕ್ಪ್ರಾಣಗಳೆಂಬ ಇದೇ ಮಿಥುನ ಎಂದೇ ವಾಕ್ಯಾರ್ಥವೆಂದು ಭಾವ.

ಸಂಸೃಜ್ಯತೇ। ಏವಂ ಸರ್ವಕಾಮಾಪ್ತಿ[1]ಗುಣವಿಶಿಷ್ಟಂ ಮಿಥುನಮ್ ಓಂಕಾರೇ ಸಂಸೃಷ್ಟಂ ವಿದ್ಯತ ಇತಿ ಓಂಕಾರಸ್ಯ ಸರ್ವಕಾಮಾಪ್ತಿಗುಣವತ್ತ್ವಂ ಸಿದ್ಧಮ್[2]। ವಾಙ್ಮಯತ್ವಮ್ ಓಂಕಾರಸ್ಯ ಪ್ರಾಣನಿಷ್ಪಾದ್ಯತ್ವಂ ಚ ಮಿಥುನೇನ ಸಂಸೃಷ್ಟತ್ವಮ್। ಮಿಥುನಸ್ಯ ಕಾಮಾಪಯಿತೃತ್ವಂ ಪ್ರಸಿದ್ಧಮ್ ಇತಿ ದೃಷ್ಟಾನ್ತ ಉಚ್ಯತೇ। ಯಥಾ ಲೋಕೇ ಮಿಥುನೌ ಮಿಥುನಾವಯವೌ ಸ್ತ್ರೀಪುಂಸೌ ಯದಾ ಸಮಾಗಚ್ಛತೋ ಗ್ರಾಮ್ಯಧರ್ಮತಯಾ ಸಂಯುಜ್ಯೇಯಾತಾಮ್, ತದಾ ಆಪಯತಃ ಪ್ರಾಪಯತಃ ಅನ್ಯೋನ್ಯಸ್ಯ ಇತರೇತರಸ್ಯ ತೌ ಕಾಮಮ್। ತಥಾ[3] ಸ್ವಾತ್ಮಾನುಪ್ರವಿಷ್ಟೇನ ಮಿಥುನೇನ ಸರ್ವಕಾಮಾಪ್ತಿಗುಣವತ್ತ್ವಮ್ ಓಂಕಾರಸ್ಯ ಸಿದ್ಧಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆ ಈ ಇಂಥ ಸ್ವರೂಪದ[4] ಮಿಥುನವು ಓಮ್ ಎಂಬೀ ಅಕ್ಷರದಲ್ಲಿ ಸೇರಿಕೊಂಡಿರುತ್ತದೆ. ಹೀಗೆ ಸರ್ವಕಾಮಾಪ್ತಿ ಎಂಬ ಗುಣದಿಂದೊಡಗೂಡಿದ ಮಿಥುನವು ಓಂಕಾರದಲ್ಲಿ ಸೇರಿಕೊಂಡಿರುತ್ತದೆಯಾದ್ದರಿಂದ ಓಂಕಾರವು ಸರ್ವಕಾಮಾಪ್ತಿ ಎಂಬ ಗುಣಗಳುಳ್ಳದ್ದೆಂದು ಏರ್ಪಡುತ್ತದೆ. ಓಂಕಾರದಲ್ಲಿ ಮಿಥುನವು ಸೇರಿಕೊಂಡಿರುವದು ಎಂದರೆ (ಅದು) ವಾಙ್ಮಯವಾಗಿರುವದು ಮತ್ತು ಪ್ರಾಣದಿಂದುಂಟಾಗತಕ್ಕದ್ದಾಗಿರುವದು ಎಂಬುದೇ.

ಮಿಥುನಕ್ಕೆ ಕಾಮವನ್ನು ಪಡೆಯಿಸುವದೆಂಬ (ಗುಣವು) ಪ್ರಸಿದ್ಧವಾಗಿದೆ ಎಂದು (ತಿಳಿಸುವದಕ್ಕಾಗಿ ಶ್ರುತಿಯು) ದೃಷ್ಟಾಂತವನ್ನು ಹೇಳುತ್ತದೆ: ಹೇಗೆ ಲೋಕದಲ್ಲಿ ಮಿಥುನರಾದ ಎಂದರೆ ಮಿಥುನದ ಅವಯವಗಳಾದ[5] ಸ್ತ್ರೀಪುರುಷರು ಯಾವಾಗ ಕೂಡುವರೋ ಗ್ರಾಮ್ಯಧರ್ಮದಿಂದ ಸಂಯುಕ್ತರಾಗುವರೋ ಆಗ ಅವರು ಒಬ್ಬರೊಬ್ಬರ ಕಾಮವನ್ನು ಪಡೆಯಿಸುತ್ತಾರೋ ಹಾಗೆ ತನ್ನ ಸ್ವರೂಪದಲ್ಲಿ ಒಳಹೊಕ್ಕಿರುವ ಮಿಥುನದಿಂದ ಸರ್ವಕಾಮಾಪ್ತಿ ಎಂಬ ಗುಣವು ಓಂಕಾರಕ್ಕೆ ಸಿದ್ಧವಾಗಿರುತ್ತದೆ ಎಂದು ಅಭಿಪ್ರಾಯ.

(ಉಪನಿಷತ್ತು)

**ಆಪಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತೇ ॥ ೭ ॥**

---

1. 'ಕಾಮಾವಾಪ್ತಿ' ಎಂಬುದಕ್ಕಿಂತ ಈ ಪಾಠವು ಮೇಲು.
2. 'ಪ್ರಸಿದ್ಧಮ್' ಎಂಬ ಪಾಠದಲ್ಲಿ ಪ್ರ॥ ಹೆಚ್ಚು.
3. ತಥಾ ಚ ಎಂಬುದಕ್ಕಿಂತ ಈ ಚಶಬ್ದರಹಿತಪಾಠವೇ ಮೇಲು.
4. ವಾಕ್ಪ್ರಾಣಾತ್ಮಕವಾದ.
5. ಮಿಥುನಗಳು ಎರಡಿಲ್ಲವಾದ್ದರಿಂದ ಮಿಥುನೌ ಎಂಬ ದ್ವಿವಚನಕ್ಕೆ ಈ ಅರ್ಥವನ್ನು ಮಾಡಿದೆ.

೭. ಹೀಗೆಂದು ಅರಿತುಕೊಂಡು ಯಾವನು ಈ ಉದ್ಗೀಥವೆಂಬ ಅಕ್ಷರವನ್ನು ಉಪಾಸಿಸುತ್ತಾನೋ ಅವನು ಕಾಮುಗಳನ್ನು ಪಡೆಯಿಸುವವನಾಗುವನು.

## ಓಂಕಾರೋಪಾಸಕನಿಗೆ ಸರ್ವಕಾಮಪ್ರಾಪಯಿತೃತ್ವಫಲ

(ಭಾಷ್ಯ)

೧೩. ತದುಪಾಸಕೋಽಪಿ ಉದ್ಗಾತಾ ತದ್ಧರ್ಮಾ ಭವತೀತ್ಯಾಹ । ಆಪಯಿತಾ ಹ ವೈ ಕಾಮಾನಾಂ ಯಜಮಾನಸ್ಯ ಭವತಿ ಯ ಏತದಕ್ಷರಮ್ ಏವಂ (ವಿದ್ವಾನ್)[1] ಆಪ್ತಿಗುಣವದುದ್ಗೀಥಮ್ ಉಪಾಸ್ತೇ । ತಸ್ಯ ಏತದ್ ಯಥೋಕ್ತಂ ಫಲಮ್ ಇತ್ಯರ್ಥಃ । "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ. ಬ್ರಾ. ೧೦-೬-೨-೨೦) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಅದನ್ನು ಉಪಾಸನೆಮಾಡುವ ಉದ್ಗಾತೃವೂ ಅದರ (ಈ) ಧರ್ಮವುಳ್ಳವನಾಗುತ್ತಾನೆ ಎಂದು (ಶ್ರುತಿ) ಹೇಳುತ್ತಿದೆ. ಯಜಮಾನನ ಕಾಮುಗಳನ್ನೂ ಪಡೆಯಿಸುವವನಾಗುತ್ತಾನೆ; ಯಾವನು ಈ ಅಕ್ಷರವನ್ನು ಹೀಗೆಂದು ಅರಿತುಕೊಂಡು ಆಪ್ತಿಗುಣವುಳ್ಳ ಉದ್ಗೀಥವನ್ನು ಉಪಾಸನೆಮಾಡುವನೋ ಅವನಿಗೆ ಈ ಮೇಲೆ ಹೇಳಿದ ಫಲವು (ಆಗುವದು) ಎಂದರ್ಥ. "ಆತನನ್ನು ಹೇಗೆಹೇಗೆ ಉಪಾಸನೆಮಾಡುವರೋ ಅದೇ ಆಗುವದು" (ಶತ. ಬ್ರಾ. ೧೦-೬-೨-೨೦) ಎಂಬ ಶ್ರುತಿಯು (ಇದಕ್ಕೆ) ಪ್ರಮಾಣವು.

## ಓಂಕಾರವು ಸಮೃದ್ಧಿಗುಣವುಳ್ಳದ್ದು

(ಉಪನಿಷತ್ತು)

**ತದ್ವಾ ಏತದನುಜ್ಞಾಕ್ಷರಂ ಯದ್ಧಿ ಕಿಂಚಾನುಜಾನಾತ್ಯೋಮಿತ್ಯೇವ ತದಾ ಹ್ಯೇಷೋ ಏವ ಸಮೃದ್ಧಿರ್ಯದನುಜ್ಞಾ ಸಮರ್ಧಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತೇ ॥ ೮ ॥**

೮. ಆ ಇದು ಅನುಜ್ಞಾಕ್ಷರವು. ಯಾವದೊಂದಿಷ್ಟನ್ನು ಅನುಜ್ಞೆಮಾಡುವರೋ ಆಗ ಓಮ್ ಎಂದೇ ಹೇಳುತ್ತಾರೆ. ಮತ್ತು

---

1. ಉಪನಿಷತ್ತಿನಲ್ಲಿರುವ ಈ ಶಬ್ದವು ಇಲ್ಲಿ ಭಾಷ್ಯದಲ್ಲಿ ಲೇಖಕರ ಕೈತಪ್ಪಿನಿಂದ ಬಿಟ್ಟುಹೋಗಿರಬಹುದು.

ಅನುಜ್ಞೆ ಎಂಬಿದೇ ಸಮೃದ್ಧಿಯು. ಯಾವನು ಹೀಗೆಂದು ಅರಿತು ಕೊಂಡು ಉದ್ಗೀಥವೆಂಬ ಈ ಅಕ್ಷರವನ್ನು ಉಪಾಸನೆಮಾಡುವನೋ ಅವನು ಕಾಮುಗಳನ್ನು ಸಮೃದ್ಧಿಗೊಳಿಸುವವನಾಗುವನು.

## ಸಮೃದ್ಧಿಗುಣಕೋಪಾಸನೆಯ ಫಲ

(ಭಾಷ್ಯ)

೧೪. ಸಮೃದ್ಧಿಗುಣವಾಂಶ್ಚ ಓಂಕಾರಃ। ಕಥಮ್ ? ತದ್ವಾ ಏತತ್ ಪ್ರಕೃತಮ್ ಅನುಜ್ಞಾಕ್ಷರಮ್ । ಅನುಜ್ಞಾ ಚ ಸಾ ಅಕ್ಷರಂ ಚ ತತ್ । ಅನುಜ್ಞಾ ಅನುಮತಿರೋಂಕಾರಃ ಇತ್ಯರ್ಥಃ। ಕಥಮನುಜ್ಞಾ ಇತಿ ? ಆಹ ಶ್ರುತಿರೇವ। ಯದ್ ಹಿ ಕಿಂ ಚ ಯತ್ಕಿಂಚ ಲೋಕೇ ಜ್ಞಾನಂ ಧನಂ ವಾ ಅನುಜಾನಾತಿ ವಿದ್ವಾನ್ ಧನೀ ವಾ ತತ್ರ ಅನುಮತಿಂ ಕುರ್ವನ್ ಓಮಿತ್ಯೇವ ತದಾಹ । ತಥಾ ಚ ವೇದೇ "ತ್ರಯಸ್ತ್ರಿಂಶದಿತ್ಯೋಮಿತಿ ಹೋವಾಚ" (ಬೃ. ೩-೯-೧) ಇತ್ಯಾದಿ । ತಥಾ ಚ ಲೋಕೇಽಪಿ 'ತವೇದಂ ಧನಂ ಗೃಹ್ಣಾಮಿ' ಇತ್ಯುಕ್ತಃ 'ಓಮ್' ಇತ್ಯೇವಾಹ[1] । ಅತಃ ಏಷಾ ಉ ಏವ ಏಷೈವ ಸಮೃದ್ಧಿಃ ಯದನುಜ್ಞಾ । ಯಾ ಅನುಜ್ಞಾ ಸಾ ಸಮೃದ್ಧಿಃ । ತನ್ಮೂಲ ತ್ವಾತ್ ಅನುಜ್ಞಾಯಾಃ। ಸಮೃದ್ಧೋ ಹಿ ಓಮ್ ! ಇತ್ಯನುಜ್ಞಾಂ ದದಾತಿ । ತಸ್ಮಾತ್ ಸಮೃದ್ಧಿಗುಣವಾನ್ ಓಂಕಾರಃ ಇತ್ಯರ್ಥಃ। ಸಮೃದ್ಧಿಗುಣೋಪಾಸಕ ತ್ವಾತ್ ತದ್ಧರ್ಮಾ ಸನ್ ಸಮರ್ಧಯಿತಾ ಹ ವೈ ಕಾಮಾನಾಂ ಯಜ ಮಾನಸ್ಯ ಭವತಿ ಯ ಏತದೇವಂ ವಿದ್ವಾನ್ ಅಕ್ಷರಮ್ ಉದ್ಗೀಥಮ್ ಉಪಾಸ್ತೇ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಓಂಕಾರವು ಸಮೃದ್ಧಿಗುಣವುಳ್ಳದ್ದೂ (ಆಗಿರುತ್ತದೆ). ಹೇಗೆಂದರೆ, ಆ ಈ ಪ್ರಕೃತವಾದ ( ಓಂಕಾರವು ) ಅನುಜ್ಞಾಕ್ಷರವು, ಅದು ಅನುಜ್ಞೆಯಾದ ಅಕ್ಷರವು. ಓಂಕಾರವು ಅನುಜ್ಞೆ ಎಂದರೆ ಒಪ್ಪಿಗೆಯು ಎಂದರ್ಥ. (ಅದು) ಅನುಜ್ಞೆ ಎಂಬುದು ಹೇಗೆ? ಎಂದರೆ ಶ್ರುತಿಯೇ ಹೇಳುತ್ತದೆ: ಹೇಗೆಂದರೆ ಯಾವ ದೊಂದಿಷ್ಟನ್ನು ಲೋಕದಲ್ಲಿ ಜ್ಞಾನವನ್ನೇ ಆಗಲಿ, ಧನವನ್ನೇ ಆಗಲಿ, ಯಾವ ದನ್ನೇ ಜ್ಞಾನಿಯು ಅಥವಾ ಧನವಂತನು ಅನುಜ್ಞೆಯನ್ನು ಮಾಡುವನೋ ಆಗ ಅಲ್ಲಿ ಅನುಮತಿಯನ್ನು ಕೊಡುವದಕ್ಕಾಗಿ ಓಮ್ ! ಎಂದೇ ಹೇಳುತ್ತಾನೆ. ಆದ್ದರಿಂದಲೇ ವೇದದಲ್ಲಿ "ದೇವತೆಗಳು ಮೂವತ್ತು ಮೂರು ಎನ್ನಲು ಓಮ್ !

---

1. ಈ ಆ॥ ವಾ॥ ಪಾಠವೇ ಮೇಲು.

ಎಂದನು" (ಬೃ. ೩-೯-೧) ಎಂದು ಮಂತ್ರಾಗಿ[1] (ಪ್ರಯುಕ್ತವಾಗಿರುತ್ತದೆ). ಆದ್ದರಿಂದಲೇ ಲೋಕದಲ್ಲಿ 'ಈ ನಿನ್ನ ಧನವನ್ನು ತೆಗೆದುಕೊಳ್ಳುತ್ತೇನೆ' ಎಂದು ಹೇಳಿದರೆ 'ಓಮ್!' ಎನ್ನುತ್ತಾನೆ[2]. ಆದ್ದರಿಂದ (ಏಷಾ ಉ ಏವ = ಏಷೈವ) ಈ ಅನುಜ್ಞೆ ಎಂಬುದೇ ಸಮೃದ್ಧಿಯು, ಅನುಜ್ಞೆ ಎನ್ನುವರಲ್ಲ, ಅದು ಸಮೃದ್ಧಿಯೇ; ಏಕೆಂದರೆ ಅನುಜ್ಞೆಯು ಆ (ಸಮೃದ್ಧಿಯ) ಕಾರಣದಿಂದ (ಆಗುತ್ತದೆ). ಸಮೃದ್ಧನಾಗಿರುವವನಲ್ಲವೆ, ಓಮ್ ! -ಎಂದು ಅನುಜ್ಞೆಯನ್ನು ಕೊಡುತ್ತಾನೆ ? ಆದ್ದರಿಂದ ಓಂಕಾರವು ಸಮೃದ್ಧಿ ಎಂಬ ಗುಣವುಳ್ಳದ್ದು ಎಂದರ್ಥ.

ಸಮೃದ್ಧಿಗುಣವುಳ್ಳ (ಓಂಕಾರವನ್ನು) ಉಪಾಸನೆಮಾಡುವದರಿಂದ ಆ ಧರ್ಮವುಳ್ಳವನಾಗಿ ಯಜಮಾನನಿಗೆ ಕಾಮಗಳನ್ನು ಸಮೃದ್ಧಿಗೊಳಿಸುವವನಾಗುವನು. 'ಯಾವ (ಉದ್ಗಾತೃವು) ಹೀಗೆಂದು ಅರಿತುಕೊಂಡು ಉದ್ಗೀಥವೆಂಬ ಅಕ್ಷರವನ್ನು ಉಪಾಸನೆಮಾಡುವನೋ' ಎಂದು ಮಂತ್ರಾಗಿರುವ (ಮಂತ್ರಭಾಗವನ್ನು) ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).

## ಓಂಕಾರದ ಸ್ತುತಿ

(ಉಪನಿಷತ್ತು)

**ತೇನೇಯಂ ತ್ರಯೀ ವಿದ್ಯಾ ವರ್ತತ ಓಮಿತ್ಯಾಶ್ರಾವಯತ್ಯೋಮಿತಿ ಶಗ್ಂಸತ್ಯೋಮಿತ್ಯುದ್ಗಾಯತ್ಯೇತಸ್ಯೈವಾಕ್ಷರಸ್ಯಾಪಚಿತ್ಯೈ ಮಹಿಮ್ನಾ ರಸೇನ ॥ ೯ ॥**

೯. ಅದರಿಂದ ಈ ತ್ರಯೀವಿದ್ಯೆಯು ನಡೆಯುತ್ತದೆ. ಓಮ್! ಎಂದು ಆಶ್ರವಣಮಾಡುತ್ತಾನೆ; ಓಮ್ ! ಎಂದು ಶಂಸನಮಾಡುತ್ತಾನೆ; ಓಮ್ ! ಎಂದು ಉದ್ಗಾನಮಾಡುತ್ತಾನೆ. (ಇದೆಲ್ಲ) ಈ ಅಕ್ಷರದ ಅಪಚಿತಿಗೇ. ಮಹಿಮೆಯಿಂದಲೂ ರಸದಿಂದಲೂ (ವಿದ್ಯೆಯು ನಡೆಯುತ್ತದೆ).

---

1. ಯಾಜ್ಞವಲ್ಕ್ಯನನ್ನು ವಿದಗ್ಧಶಾಕಲ್ಯನು ದೇವತೆಗಳು ಎಷ್ಟು ? ಎಂದು ಕೇಳಲು ಮೂವತ್ತು ಮೂರು ಎಂದು ಅವನು ಉತ್ತರವನ್ನು ಕೊಟ್ಟನು ; ಶಾಕಲ್ಯನು ಅದಕ್ಕೆ ಓಮ್ (ಸರಿ) ಎಂದು ಒಪ್ಪಿಗೆಯನ್ನು ಸೂಚಿಸಿದನು. ಈ ಉದಾಹೃತಕಂಡಿಕೆಯಲ್ಲಿ ಓಮ್ ! ಎಂಬುದನ್ನು ಒಪ್ಪಿಗೆಯನ್ನು ತಿಳಿಸುವದಕ್ಕೆ ಬಹಳ ಸಲ ಪ್ರಯೋಗಿಸಿದೆ.

2. ವೇದದಲ್ಲಿಯೇ ಅಲ್ಲದೆ ಸಾಧಾರಣಸಂಸ್ಕೃತಭಾಷೆಯಲ್ಲಿಯೂ ಈ ಅರ್ಥದಲ್ಲಿ ಓಂಕಾರಕ್ಕೆ ಪ್ರಯೋಗವಿದೆ.

## ವೈದಿಕಕರ್ಮವೆಲ್ಲ ಓಂಕಾರಪೂರ್ವಕವೇ

(ಭಾಷ್ಯ)

೧೫. ಅಥ ಇದಾನೀಮ್ ಅಕ್ಷರಂ ಸ್ತೌತಿ ಉಪಾಸ್ಯತ್ವಾತ್ ಪ್ರರೋಚನಾರ್ಥಮ್। ಕಥಮ್ ? ತೇನ ಅಕ್ಷರೇಣ ಪ್ರಕೃತೇನ ಇಯಮ್ ಋಗ್ವೇದಾದಿಲಕ್ಷಣಾ ತ್ರಯೀ ವಿದ್ಯಾ। ತ್ರಯೀವಿದ್ಯಾವಿಹಿತಂ ಕರ್ಮ ಇತ್ಯರ್ಥಃ। ನ ಹಿ ತ್ರಯೀವಿದ್ಯೈವ ಆಶ್ರಾವಣಾದಿಭಿರ್ವರ್ತತೇ। ಕರ್ಮ ತು ತಥಾ ಪ್ರವರ್ತತ ಇತಿ ಪ್ರಸಿದ್ಧಮ್। ಕಥಮ್ ? ಓಮಿತಿ ಆಶ್ರಾವಯತಿ ಓಮಿತಿ ಶಂಸತಿ ಓಮಿತಿ ಉದ್ಗಾಯತಿ ಇತಿ। ಲಿಙ್ಗಾಚ್ಚ ಸೋಮಯಾಗೇ ಇತಿ ಗಮ್ಯತೇ। ತಚ್ಚ ಕರ್ಮ ಏತಸ್ಯೈವ ಅಕ್ಷರಸ್ಯ ಅಪಚಿತ್ಯೈ ಪೂಜಾರ್ಥಮ್। ಪರಮಾತ್ಮಪ್ರತೀಕಂ ಹಿ ತತ್। ತದಪಚಿತಿಃ ಪರಮಾತ್ಮನ ಏವ ಸಾ[1]। "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" (ಗೀ. ೧೮-೪೬) ಇತಿ ಸ್ಮೃತೇಃ। ಮಹಿಮ್ನಾ ರಸೇನ । ಕಿಂ ಚ ಏತಸ್ಯೈವ ಅಕ್ಷರಸ್ಯ ಮಹಿಮ್ನಾ ಮಹತ್ತ್ವೇನ ಋತ್ವಿಗ್ಯಜಮಾನಾದಿಪ್ರಾಣೈಃ ಇತ್ಯರ್ಥಃ । ತಥಾ ಏತಸ್ಯೈವ ಅಕ್ಷರಸ್ಯ ರಸೇನ ವ್ರೀಹಿಯವಾದಿರಸನಿರ್ವೃತ್ತೇನ ಹವಿಷಾ ಇತ್ಯರ್ಥಃ। ಯಾಗಹೋಮಾದಿ ಅಕ್ಷರೇಣ ಕ್ರಿಯತೇ। ತಚ್ಚ ಆದಿತ್ಯಮ್ ಉಪತಿಷ್ಠತೇ। ತತೋ ವೃಷ್ಟ್ಯಾದಿಕ್ರಮೇಣ ಪ್ರಾಣಃ ಅನ್ನಂ ಚ ಜಾಯತೇ। ಪ್ರಾಣೈಃ ಅನ್ನೇನ ಚ ಯಜ್ಞಸ್ತಾಯತೇ । ಅತ ಉಚ್ಯತೇ ಅಕ್ಷರಸ್ಯ ಮಹಿಮ್ನಾ ರಸೇನ ಇತಿ ॥

(ಭಾಷ್ಯಾರ್ಥ)

ಇನ್ನು ಈಗ (ಈ) ಅಕ್ಷರವನ್ನು ಸ್ತೋತ್ರಮಾಡಲಾಗುತ್ತದೆ ; ಏಕೆಂದರೆ (ಅದೇ) ಉಪಾಸ್ಯವಾಗಿದೆಯಾಗಿ (ಅದರಲ್ಲಿ) ಅಭಿರುಚಿಯನ್ನುಂಟುಮಾಡುವದಕ್ಕಾಗಿ (ಅದನ್ನು ಹೊಗಳಬೇಕಾಗಿದೆ). ಹೇಗೆಂದರೆ ಪ್ರಕೃತವಾದ ಈ ಅಕ್ಷರದಿಂದ ಈ ಋಗ್ವೇದವೇ ಮುಂತಾದ ರೂಪದ ತ್ರಯೀವಿದ್ಯೆಯು, ಎಂದರೆ ತ್ರಯೀವಿದ್ಯೆಯಲ್ಲಿ ವಿಹಿತವಾಗಿರುವ ಕರ್ಮವು ಎಂದರ್ಥ. ಏಕೆಂದರೆ, ಆಶ್ರವಣವೇ ಮುಂತಾದವುಗಳಿಂದ ತ್ರಯೀವಿದ್ಯೆಯೇ ನಡೆಯುವದಿಲ್ಲ; (ವಿದ್ಯಾವಿಹಿತವಾದ) ಕರ್ಮವಾದರೆ ಹಾಗೆ ನಡೆಯುತ್ತದೆ ಎಂಬುದು ಪ್ರಸಿದ್ಧ. ಅದು ಹೇಗೆಂದರೆ, ಓಮ್ ! -ಎಂದು ಆಶ್ರವಣಮಾಡುತ್ತಾನೆ, ಓಮ್ ! -ಎಂದು ಶಂಸನಮಾಡುತ್ತಾನೆ, ಓಮ್ ! -ಎಂದು ಉದ್ಗಾನಮಾಡುತ್ತಾನೆ -ಎಂಬ (ಈ) ಲಿಂಗದಿಂದ ಸೋಮಯಾಗವು[2] ಎಂದು ತಿಳಿಯಬೇಕಾಗಿದೆ.

---

1. ಸ್ಯಾತ್ ಎಂಬ ಆ॥ ಆ॥ ಪಾಠವು ಅನವಶ್ಯ.

2. ತೈ. ೧-೮ನ್ನು ನೋಡಿರಿ. ಅಧ್ವರ್ಯು, ಹೋತೃ, ಉದ್ಗಾತೃ- ಇವರು ಒಟ್ಟು ಸೇರಿದ ಕರ್ಮಗಳನ್ನು ಇಲ್ಲಿ ಹೇಳಿರುವದರಿಂದ ಅಗ್ನಿಷ್ಟೋಮಾದಿಸೋಮಯಾಗವನ್ನೇ ಇಲ್ಲಿ ಹೇಳಿದೆಯೆಂದು ಗೊತ್ತಾಗುತ್ತದೆ ಎಂದರ್ಥ.

ಆ ಕರ್ಮವುಕೂಡ ಈ ಅಕ್ಷರದ ಅಪಚಿತಿಗಾಗಿಯೇ, ಪೂಜೆಗಾಗಿಯೇ. ಏಕೆಂದರೆ ಈ (ಅಕ್ಷರವು) ಪರಮಾತ್ಮನಿಗೆ ಪ್ರತೀಕವು; ಇದರ ಆ ಅಪಚಿತಿ ಎಂಬುದು ಪರಮಾತ್ಮನ (ಅಪಚಿತಿ)ಯೇ. "ತನ್ನ ಕರ್ಮದಿಂದ ಆ (ಪರಮಾತ್ಮನನ್ನು) ಅಭ್ಯರ್ಚನೆಮಾಡಿದರೆ ಮಾನವನು ಸಿದ್ಧಿಯನ್ನು ಹೊಂದುತ್ತಾನೆ" (ಗೀ. ೧೮-೪೬) ಎಂಬ ಸ್ಮೃತಿಯಿಂದ (ಇದು ಸಿದ್ಧವಾಗುತ್ತದೆ)[1].

'ಮಹಿಮೆಯಿಂದಲೂ ರಸದಿಂದಲೂ'[2]. ಮತ್ತು ಇದೇ ಅಕ್ಷರದ ಮಹಿಮೆಯಿಂದಲೂ ಮಹತ್ತ್ವದಿಂದಲೂ, ಎಂದರೆ ಋತ್ವಿಜರು. ಯಜಮಾನ– ಮುಂತಾದವರ ಪ್ರಾಣಗಳಿಂದ ಎಂದರ್ಥ. ಹಾಗೂ ಇದೇ ಅಕ್ಷರದ ರಸದಿಂದಲೂ ಎಂದರೆ ವ್ರೀಹಿಯವಾದಿರೂಪದಿಂದ ಆಗಿರುವ ಹವಿಸ್ಸಿನಿಂದಲೂ ಎಂದರ್ಥ. (ಇವುಗಳಿಂದ) ಯಾಗಹೋಮಾದಿಗಳು (ಓಂಕಾರವೆಂಬೀ) ಅಕ್ಷರದ (ಸಹಾಯ)ದಿಂದ ಮಾಡಲ್ಪಡುತ್ತದೆ[3]. ಅದು ಆದಿತ್ಯನನ್ನು ಹೋಗಿ ಸೇರುತ್ತದೆ. ಅದರಿಂದ ವೃಷ್ಟ್ಯಾದಿಕ್ರಮದಿಂದ ಪ್ರಾಣವೂ ಅನ್ನವೂ ಉಂಟಾಗುತ್ತದೆ[4]. (ಆ) ಪ್ರಾಣಗಳಿಂದಲೂ ಅನ್ನದಿಂದಲೂ ಯಜ್ಞವನ್ನು ಮಾಡುತ್ತಾರೆ. ಆದ್ದರಿಂದ ಅಕ್ಷರದ ಮಹಿಮೆಯಿಂದಲೂ ರಸದಿಂದಲೂ (ನಡೆಯುತ್ತದೆ) ಎಂದು ಹೇಳಿದೆ[5].

## ಓಂಕಾರೋಪಾಸನಾಸಮುಚ್ಚಿತಕರ್ಮವು ವೀರ್ಯವತ್ತರ

(ಉಪನಿಷತ್ತು)

**ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ । ನಾನಾ ತು ವಿದ್ಯಾ ಚಾವಿದ್ಯಾ ಚ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತೀತಿ ಖಲ್ವೇತಸ್ಯೈವಾಕ್ಷರಸ್ಯೋಪವ್ಯಾಖ್ಯಾನಂ ಭವತಿ ॥೧೦॥**

---

1. ಕರ್ಮಕ್ಕೆ ಓಂಕಾರವು ಬೇಕಾಗಿರುವದರಿಂದ ಓಂಕಾರದ ಮೂಲಕವಾಗಿ ಪರಮೇಶ್ವರನ ಆರಾಧನೆಯಾದಂತಾಯಿತು. ಆದ್ದರಿಂದ ಇಲ್ಲಿ ಓಂಕಾರವನ್ನು ಹೊಗಳಿರುವದು ಪರಮಾತ್ಮನನ್ನೇ ಗೌರವಿಸಿದಂತೆ –ಎಂದು ಭಾವ.

2. ಈ ಪ್ರತೀಕವು ಮಾ॥ ಪಾಠದಲ್ಲಿಲ್ಲ. ಇದಿಲ್ಲದಿದ್ದರೂ ಕಿಂಚ ಎಂಬ ಮಾತೇ ಮುಂದಿನ ವಾಕ್ಯಕ್ಕೆ ಅವತರಣಿಕೆಯಾಗುತ್ತದೆ.

3. ಗೀ. ೧೭–೨೪ನ್ನು ನೋಡಿರಿ.

4. ಈ ಅಭಿಪ್ರಾಯಕ್ಕೆ ಮನು. ೩–೭೬ನ್ನು ನೋಡಿರಿ.

5. ಓಂಕಾರಪೂರ್ವಕವಾಗಿ ಮಾಡಿದ ಯಜ್ಞದಿಂದಲೇ ಪ್ರಾಣಗಳೂ ಅನ್ನವೂ ಉಂಟಾಗಿ ಮತ್ತೆ ಯಜ್ಞಕ್ಕೆ ಉಪಕರಣವಾಗುವವಾದ್ದರಿಂದ ಓಂಕಾರದ ಮಹಿಮೆಯಿಂದಲೂ ರಸದಿಂದಲೂ ಕರ್ಮವಾಗುತ್ತದೆ ಎಂದಿದೆ ಎಂದು ಅಭಿಪ್ರಾಯ.

೧೦. ಅದರಿಂದ ಯಾವನು ಇದನ್ನು ಹೀಗೆಂದು ಅರಿತು ಕೊಂಡಿರುವನೋ (ಅವನು), ಮತ್ತು ಯಾವನು ಅರಿತುಕೊಂಡಿಲ್ಲವೋ (ಅವನು-ಹೀಗೆ) ಇಬ್ಬರೂ (ಕರ್ಮವನ್ನು) ಮಾಡುತ್ತಾರೆ. ವಿದ್ಯೆಯೂ ಅವಿದ್ಯೆಯೂ ನಾನಾ ಆಗಿಯೇ (ಇರುತ್ತವೆ). ಯಾವದನ್ನು ವಿದ್ಯೆಯಿಂದ ಮಾಡುತ್ತಾನೋ ಶ್ರದ್ಧೆಯಿಂದಲೂ ಉಪನಿಷತ್ತಿನಿಂದಲೂ (ಮಾಡುತ್ತಾನೋ) ಅದೇ ವೀರ್ಯವತ್ತರವಾಗಿರುತ್ತದೆ. ಹೀಗೆಂಬುದೇ ಈ ಅಕ್ಷರದ ಉಪವ್ಯಾಖ್ಯಾನವಾಗಿರುತ್ತದೆ.

## ಅಕ್ಷರವಿಜ್ಞಾನದಿಂದಾಗುವ ಫಲ

(ಭಾಷ್ಯ)

೧೬. ತತ್ರ ಅಕ್ಷರವಿಜ್ಞಾನವತಃ ಕರ್ಮ ಕರ್ತವ್ಯಮಿತಿ ಸ್ಥಿತಮ್ ಆಕ್ಷಿಪತಿ । ತೇನ ಅಕ್ಷರೇಣ ಉಭೌ ಕುರುತಃ ಯಶ್ಚೈತದಕ್ಷರಮ್ ಏವಂ ಯಥಾ ವ್ಯಾಖ್ಯಾತಂ[1] ವೇದ ಯಶ್ಚ ಕರ್ಮಮಾತ್ರವಿತ್ ಅಕ್ಷರಯಾಥಾತ್ಮ್ಯಂ ನ ವೇದ ತೌ ಉಭೌ ಕುರುತಃ ಕರ್ಮ । ತಯೋಶ್ಚ ಕರ್ಮಸಾಮರ್ಥ್ಯಾದೇವ ಫಲಂ ಸ್ಯಾತ್ ಕಿಂ ತತ್ರ ಅಕ್ಷರಯಾಥಾತ್ಮ್ಯವಿಜ್ಞಾನೇನ ಇತಿ ? ದೃಷ್ಟಂ ಹಿ ಲೋಕೇ ಹರೀತಕೀಂ ಭಕ್ಷಯತೋಃ ತದ್ರಸಾಭಿಜ್ಞೇತರಯೋಃ ವಿರೇಚನಮ್ । ನೈವಮ್ । ಯಸ್ಮಾತ್ ನಾನಾ ತು ವಿದ್ಯಾ ಚ ಅವಿದ್ಯಾ ಚ । ಭಿನ್ನೇ ಹಿ ವಿದ್ಯಾವಿದ್ಯೇ । ತುಶಬ್ದಃ ಪಕ್ಷವ್ಯಾವೃತ್ತ್ಯರ್ಥಃ । ನೋಂಕಾರಸ್ಯ ಕರ್ಮಾಙ್ಗತ್ವಮಾತ್ರವಿಜ್ಞಾನಮೇವ ರಸತಮಾಪ್ತಿಸಮೃದ್ಧಿಗುಣವದ್ವಿಜ್ಞಾನಮ್ ಕಿಂ ತರ್ಹಿ ತತೋಽಭ್ಯಧಿಕಮ್ । ತಸ್ಮಾತ್ ತದಙ್ಗಾಧಿಕ್ಯಾತ್ ತತ್ಫಲಾಧಿಕ್ಯಂ ಯುಕ್ತಮ್ ಇತ್ಯಭಿಪ್ರಾಯಃ । ದೃಷ್ಟಂ ಹಿ ಲೋಕೇ ವಣಿಕ್ಶಬರಯೋಃ ಪದ್ಮರಾಗಾದಿಮಣಿವಿಕ್ರಯೇ ವಣಿಜೋ ವಿಜ್ಞಾನಾಧಿಕ್ಯಾತ್ ಫಲಾಧಿಕ್ಯಮ್ । ತಸ್ಮಾತ್ ಯದೇವ ವಿದ್ಯಯಾ ವಿಜ್ಞಾನೇನ ಯುಕ್ತಃ ಸನ್ ಕರೋತಿ ಕರ್ಮಶ್ರದ್ಧಯಾ ಶ್ರದ್ಧಧಾನಶ್ಚ ಸನ್ ಉಪನಿಷದಾ ಯೋಗೇನ ಯುಕ್ತಶ್ಚ ಇತ್ಯರ್ಥಃ । ತದೇವ ಕರ್ಮ ವೀರ್ಯವತ್ತರಮ್ ಅವಿದ್ವತ್ಕರ್ಮಣೋಽಧಿಕಫಲಂ ಭವತೀತಿ ॥

(ಭಾಷ್ಯಾರ್ಥ)

ಇಲ್ಲಿ (ಈ) ಅಕ್ಷರದ ವಿಜ್ಞಾನವಿರುವವನಾಗಿ ಕರ್ಮವನ್ನು ಮಾಡಬೇಕು ಎಂದು ಸಿದ್ಧವಾಯಿತಷ್ಟೆ[2]. (ಇದನ್ನು) ಆಕ್ಷೇಪಿಸಲಾಗುತ್ತದೆ. ಆ ಅಕ್ಷರದಿಂದ ಇಬ್ಬರೂ- (ಇಲ್ಲಿ) ವಿವರಿಸಿರುವಂತೆ ಯಾವನು ಹೀಗೆಂದು ಅರಿತಿರುವನೋ,

1. ಈ ವಾ॥ ಪಾಠವೇ 'ವ್ಯಾಖ್ಯಾತಮ್' ಎಂಬ ಪಾಠಕ್ಕಿಂತ ಮೇಲು.

2 ಹಿಂದಿನ ಕಂಡಿಕೆಯಲ್ಲಿ ತ್ರಯೀವಿದ್ಯೆಗೆ ಅಂಗವಾಗಿ ಓಂಕಾರವಿಜ್ಞಾನವನ್ನು ಹೊಗಳಿರು-ವದರಿಂದ ಹೀಗೆಂದು ಸಿದ್ಧವಾಗಿರುತ್ತದೆ.

ಮತ್ತು ಯಾವನು ಕರ್ಮವೊಂದನ್ನೇ ಅರಿತಿರುವವನಾಗಿ ಅಕ್ಷರದ ತತ್ತ್ವವನ್ನು ಅರಿತಿರುವದಿಲ್ಲವೋ, ಆ ಇಬ್ಬರೂ– ಕರ್ಮವನ್ನು ಮಾಡುತ್ತಾರೆ. ಅವರಿಬ್ಬರಿಗೂ ಕರ್ಮದ ಸಾಮರ್ಥ್ಯದಿಂದಲೇ ಫಲವಾಗುವದು. ಇಲ್ಲಿ ಅಕ್ಷರದ ತತ್ತ್ವವನ್ನು ಅರಿತುಕೊಳ್ಳುವದರಿಂದ (ಆಗಬೇಕಾಗಿರು)ವದೇನು ? ಅಳಲೆ ಕಾಯಿಯನ್ನು ತಿನ್ನುವವರಿಗೆ– ಅದರ ರಸದ ವಿಜ್ಞಾನವಿರುವವನು, (ಅದಿಲ್ಲದ) ಮತ್ತೊಬ್ಬನು, ಇಬ್ಬರಿಗೂ– ಭೇದಿಯಾಗುವದು ಕಂಡಿದೆಯಲ್ಲ[1] !

(ಪರಿಹಾರ):– ಹಾಗಲ್ಲ. ಏಕೆಂದರೆ ವಿದ್ಯಾವಿದ್ಯೆಗಳು ನಾನಾ (ಆಗಿಯೇ) ಇರುತ್ತವೆ ; ವಿದ್ಯಾವಿದ್ಯೆಗಳು ಬೇರೆಬೇರೆಯೇ ಅಲ್ಲವೆ ? (ಮೂಲದಲ್ಲಿರುವ) ತುಶಬ್ದವು (ಪೂರ್ವ)ಪಕ್ಷವನ್ನು ತಳ್ಳಿಹಾಕುವದಕ್ಕೆ (ಬಂದಿದೆ). ಓಂಕಾರವು ಕರ್ಮಾಂಗಮಾತ್ರವೆಂಬ ಅರಿವೇ (ಅದು) ರಸತಮಾಪ್ತಿಸಮೃದ್ಧಿಗುಣವುಳ್ಳದ್ದೆಂಬ ಅರಿವಲ್ಲ , ಮತ್ತೇನೆಂದರೆ ಅದಕ್ಕಿಂತ ಹೆಚ್ಚಾದದ್ದು[2]. ಆದ್ದರಿಂದ ಆ (ಕರ್ಮದ) ಅಂಗವು ಹೆಚ್ಚಾಗಿರುವದರಿಂದ ಅದರ ಫಲವೂ ಹೆಚ್ಚಾಗಬೇಕೆಂಬುದು ಯುಕ್ತ ಎಂದು ಅಭಿಪ್ರಾಯ. ಲೋಕದಲ್ಲಿ ವೈಶ್ಯನು ಬೇಡರವನು– ಇಬ್ಬರೂ ಪದ್ಮರಾಗವೇ ಮುಂತಾದ ರತ್ನಗಳನ್ನು ಮಾರುವದರಲ್ಲಿ ವೈಶ್ಯನಿಗೆ ತಿಳಿವಳಿಕೆಯು ಹೆಚ್ಚಾಗಿರುವದರಿಂದ ಫಲವೂ ಹೆಚ್ಚಾಗಿರುವದೆಂಬುದು ಕಂಡಿದೆಯಲ್ಲವೆ[3] ?

ಆದ್ದರಿಂದ ಯಾವ ಕರ್ಮವನ್ನು ವಿದ್ಯೆಯಿಂದ ಎಂದರೆ (ಗುಣ)ವಿಜ್ಞಾನದಿಂದ ಕೂಡಿದವನಾಗಿ ಮಾಡುತ್ತಾನೋ ಶ್ರದ್ಧೆಯಿಂದ ಶ್ರದ್ಧೆಯುಳ್ಳವನಾಗಿ ಉಪನಿಷತ್ತಿನಿಂದಲೂ ಎಂದರೆ ಯೋಗದಿಂದಲೂ ಕೂಡಿ (ಮಾಡಿರುತ್ತಾನೋ) ಎಂದರ್ಥ. ಆ ಕರ್ಮವೇ ವೀರ್ಯವತ್ತರವಾಗಿರುತ್ತದೆ, ಅಜ್ಞನ ಕರ್ಮಕ್ಕಿಂತಲೂ ಹೆಚ್ಚಿನ ಫಲವುಳ್ಳದ್ದಾಗಿರುತ್ತದೆ.

## ಉಪಾಸಕನಲ್ಲದವನಿಗೂ ಕರ್ಮದಲ್ಲಿ ಅಧಿಕಾರ

(ಭಾಷ್ಯ)

೧೭. ವಿದ್ವತ್ಕರ್ಮಣೋ ವೀರ್ಯವತ್ತರತ್ವವಚನಾತ್[4] ಅವಿದುಷೋಽಪಿ

---

1. ಇಲ್ಲಿ ಅಳಲೆಕಾಯಿ ಎಂಬ ಪದಾರ್ಥವೇ ತನ್ನ ಅರಿವನ್ನು ಬಯಸದೆ ಫಲವನ್ನು ಕೊಡುವದು ಕಂಡಿದೆಯಲ್ಲವೆ ?– ಎಂದು ಭಾವ

2. ಅಜ್ಞನಿಗೆ ಬರಿಯ ಅಕ್ಷರವು ಕರ್ಮಕ್ಕೆ ಅಂಗ, ವಿಜ್ಞಾನವುಳ್ಳವನಿಗೆ ವಿಜ್ಞಾನಸಹಿತವಾದ ಓಂಕಾರವು ಅಂಗ.

3. ಈ ಉದಾಹರಣೆಯಲ್ಲಿ ವಿಜ್ಞಾನವೇ ಮಾರಾಟವೆಂಬ ಕರ್ಮಕ್ಕೆ ಅಂಗವಾಗಿದೆ, ಅಳಲೆಕಾಯಿಯ ದೃಷ್ಟಾಂತದಲ್ಲಿ ತಿಳಿವಳಿಕೆಯೇ ಭಕ್ಷಣಾಂಗವಲ್ಲ– ಎಂದು ಭಾವ.

4. 'ವೀರ್ಯವತ್ತರ' ಎಂಬುದಕ್ಕಿಂತ ಈ ಪಾಠವೇ ಮೇಲು ; ಅಥವಾ ವೀರ್ಯವತ್ತರ ಎಂಬುದನ್ನೇ ಭಾವಪ್ರಧಾನವಾದ ಪ್ರಯೋಗವೆಂದು ಎಣಿಸಿದರೆ ಅವಕ್ಕೂ ಇದೇ ಅರ್ಥವು ಲಭಿಸುತ್ತದೆ.

ಕರ್ಮ ವೀರ್ಯವದೇವ ಭವತಿ ಇತ್ಯಭಿಪ್ರಾಯಃ । ನ ಚ ಅವಿದುಷಃ ಕರ್ಮಣಿ ಅನಧಿಕಾರಃ । ಔಷಸ್ತ್ಯೇ ಕಾಣ್ಡೇ ಅವಿದುಷಾಮಪಿ ಆರ್ತ್ವಿಜ್ಯದರ್ಶನಾತ್ ॥

(ಭಾಷ್ಯಾರ್ಥ)

ಉಪಾಸಕನ ಕರ್ಮವು ವೀರ್ಯವತ್ತರವೆಂದು ಹೇಳಿರುವದರಿಂದ ಅಜ್ಞಾನಾದವನ ಕರ್ಮವೂ ವೀರ್ಯವತ್ತೇ ಆಗಿರುತ್ತದೆ ಎಂದು ಅಭಿಪ್ರಾಯ. (ಹೀಗಲ್ಲದೆ ಉಪಾಸನೆಯ) ಅರಿವಿಲ್ಲದವನಿಗೆ ಕರ್ಮದಲ್ಲಿ ಅಧಿಕಾರವಿಲ್ಲ ಎನ್ನಲಾಗದು. ಏಕೆಂದರೆ ಔಷಸ್ತ್ಯಕಾಂಡದಲ್ಲಿ ಅಜ್ಞರೂ ಋತ್ವಿಜರಾಗಿದ್ದದ್ದು ಕಂಡುಬರುತ್ತದೆ[1].

## ಗುಣತ್ರಯವಿಶಿಷ್ಟವೆಂದು ವಿಧಿಸಿರುವ ಒಂದೇ ಉಪಾಸನೆಯಿದು

(ಭಾಷ್ಯ)

೧೮. ರಸತಮಾಪ್ತಿಸಮೃದ್ಧಿಗುಣವದಕ್ಷರಮ್ ಇತ್ಯೇಕಮುಪಾಸನಮ್ । ಮಧ್ಯೇ ಪ್ರಯತ್ನಾನ್ತರಾದರ್ಶನಾತ್ । ಅನೇಕೈರ್ಹಿ ವಿಶೇಷಣೈರನೇಕಧಾ ಉಪಾಸ್ಯತ್ವಾತ್ ॥

(ಭಾಷ್ಯಾರ್ಥ)

ರಸತಮತ್ವ, ಆಪ್ತಿ, ಸಮೃದ್ಧಿ- ಎಂಬ ಗುಣಗಳುಳ್ಳದ್ದು (ಈ) ಅಕ್ಷರವು ಎಂದು (ಚಿಂತಿಸಬೇಕೆಂದು ಇಲ್ಲಿ) ಒಂದೇ ಉಪಾಸನೆಯು (ವಿಹಿತವಾಗಿರುತ್ತದೆ). ಏಕೆಂದರೆ ನಡುವೆ ಮತ್ತೊಂದು (ವಿಧಿಯ) ಪ್ರಯತ್ನವು ಕಂಡುಬಂದಿರುವದಿಲ್ಲ[2]. ಅನೇಕವಿಶೇಷಣಗಳಿಂದ ಅನೇಕಬಗೆಯಿಂದ ಉಪಾಸ್ಯ

---

1. ಏಕೆಂದರೆ ಉಷಸ್ತಿಯಿಂದ ವಿದ್ಯೆಯನ್ನು ಕಲಿತುಕೊಳ್ಳುವದಕ್ಕಿಂತ ಮೊದಲೇ ಆ ಋತ್ವಿಜರನ್ನು ರಾಜನು ವರಣಮಾಡಿದ್ದನು, ೧-೧೧ರಲ್ಲಿರುವದರ ಪರಾಮರ್ಶವಿದು.

2. ರಸತಮಗುಣದ ವಿಷಯದ ಉಪಾಸನೆಯೊಂದು ಬೇರೆ, ಅದಕ್ಕೆ ಉಪಾಸನೆಗನುಗುಣವಾಗಿ ಫಲವನ್ನು ಕಲ್ಪಿಸಬೇಕು; ಆಪ್ತಿ, ಸಮೃದ್ಧಿ- ಎಂಬ ಎರಡು ಗುಣಗಳ ಉಪಾಸನೆಗಳಿಗೂ ಬೇರೆಬೇರೆಯ ಫಲವನ್ನು ಹೇಳಿರುವದರಿಂದ ಅವೆರಡೂ ಬೇರೆಬೇರೆಯ ಉಪಾಸನೆಗಳೇ- ಎಂಬ ಪಕ್ಷವನ್ನು ತಳ್ಳಿಹಾಕುವದಕ್ಕಾಗಿ ಹೀಗೆಂದು ಬರೆದಿದೆ. ಉಪಾಸೀತ ಎಂಬ ಒಂದೇ ವಿಧಿಯಿದೆ ; ಎರಡು ಕಡೆ ಫಲಶ್ರುತಿಯಿದ್ದರೂ ಅರ್ಥವಾದದಲ್ಲಿರುವ ಫಲಾಂಶವನ್ನು ಅದಕ್ಕೂ ಅನ್ವಯಿಸಬಹುದಾದ್ದರಿಂದ ಬೇರೆಬೇರೆ ವಿಧಿಗಳನ್ನು ಕಲ್ಪಿಸುವದು ವ್ಯರ್ಥ ಎಂಬುದು ಆ॥ ಗಿ॥ ಟೀಕೆಯ ಆಶಯ. ಉಪಾಸ್ಯವು ಒಂದೇ ಆಗಿರುವದರಿಂದಲೂ ಒಂದೇ ವಿಧಿವಿಭಕ್ತಿಯಿರುವದರಿಂದಲೂ ಅನೇಕಗುಣಗಳಿಂದೊಡಗೂಡಿದ ಒಂದೇ ಉಪಾಸನೆಯಿದೆಂದು ತಿಳಿಯಬೇಕು ; ಫಲಶ್ರುತಿಯು ಆಯಾ ಗುಣವಿಜ್ಞಾನಕ್ಕೆ ಆಗುವ ಅಂಗಫಲವನ್ನು ತಿಳಿಸುವದೆಂದೋ ಪ್ರಧಾನೋಪಾಸನೆಗೇ ಸೇರಿದ್ದೆಂದೋ ಕಲ್ಪಿಸಬಹುದು- ಎಂಬುದು ಭಾಷ್ಯಾಭಿಪ್ರಾಯವೆಂದು ತೋರುತ್ತದೆ.

ವಾಗಿರುವದಲ್ಲವೆ ?[1]

(ಭಾಷ್ಯ)

೧೯. ಖಲ್ವೇತಸ್ಯೈವ ಪ್ರಕೃತಸ್ಯ ಉದ್ಗೀಥಾಖ್ಯಸ್ಯ ಅಕ್ಷರಸ್ಯ ಉಪ ವ್ಯಾಖ್ಯಾನಂ ಭವತಿ ॥

(ಭಾಷ್ಯಾರ್ಥ)

(ಹೀಗೆಂಬಿದು) ಪ್ರಕೃತವಾಗಿರುವ[2] ಉದ್ಗೀಥವೆಂಬ ಹೆಸರಿನ ಇದೇ ಅಕ್ಷರದ ಉಪವ್ಯಾಖ್ಯಾನವಾಗಿರುತ್ತದೆ

---

# ಒಂದನೆಯ ಅಧ್ಯಾಯ-ಎರಡನೆಯ ಖಂಡ

(ಪ್ರಾಣಾದಿತ್ಯದೃಷ್ಟಿಗಳಿಂದ ಓಂಕಾರೋಪಾಸನೆ)

## ದೇವತೆಗಳು ಉದ್ಗೀಥವನ್ನು ಅನುಷ್ಠಾನಮಾಡಿದ್ದು

(ಉಪನಿಷತ್ತು)

**ದೇವಾಸುರಾ ಹ ವೈ ಯತ್ರ ಸಂಯೇತಿರ ಉಭಯೇ ಪ್ರಾಜಾಪತ್ಯಾಸ್ತದ್ಧ ದೇವಾ ಉದ್ಗೀಥಮಾಜಹ್ರುರನೇನೈನಾನಭಿಭವಿಷ್ಯಾಮ ಇತಿ ॥ ೧ ॥**

೧. ದೇವಾಸುರರಿಬ್ಬರು ಪ್ರಾಜಾಪತ್ಯರೂ ಎಲ್ಲಿ ಸಂಯತ್ನ ಮಾಡಿದರೋ ಅಲ್ಲಿ ದೇವತೆಗಳು 'ಇದರಿಂದ ಇವರನ್ನು ಗೆಲ್ಲುವ' ಎಂದು ಉದ್ಗೀಥವನ್ನು (ಅನುಷ್ಠಾನಕ್ಕೆ) ಕೈಕೊಂಡರು.

### ಕಥೆಯ ಅಭಿಪ್ರಾಯ

(ಭಾಷ್ಯ)

೨೦. ದೇವಾಸುರಾ ದೇವಾಶ್ಚಾಸುರಾಶ್ಚ। ದೇವಾಃ ದೀವ್ಯತೇರ್ದ್ಯೋತನಾರ್ಥಸ್ಯ। ಶಾಸ್ತ್ರೋದ್ಭಾಸಿತಾ ಇನ್ದ್ರಿಯವೃತ್ತಯಃ। ಅಸುರಾಃ ತದ್ವಿಪರೀತಾಃ

1. ವ್ಯಾಖ್ಯಾನದಂತೆ ಇದು ಮುಂದಿನ ವಾಕ್ಯಕ್ಕೆ ಸಂಬಂಧಿಸಿದೆ. ನಾವು ಮಾಡಿರುವ ಯೋಜನೆಯಲ್ಲಿ ಒಂದೇ ಉಪಾಸ್ಯವನ್ನು ಮೂರು ವಿಧವಾಗಿ ಉಪಾಸನೆಮಾಡಬೇಕೆಂಬುದು ಉಪಕ್ರಮೋಪಸಂಹಾರಗಳಿಂದ ಗೊತ್ತಾಗುತ್ತಿರುವಲ್ಲಿ ಮೂರು ಬಗೆಯ ಉಪಾಸನೆಗಳನ್ನು ಕಲ್ಪಿಸುವದು ಅನ್ಯಾಯ– ಎಂಬ ವಿಶೇಷಾಭಿಪ್ರಾಯವು ಹೊರಡುತ್ತದೆ. ಸೂ. ಭಾ. ೧–೧–೩೧ರ ನ್ಯಾಯವನ್ನು ಅನುಸರಿಸಿದಂತೆಯೂ ಆಗುತ್ತದೆ.

2. 'ತಸ್ಯೋಪವ್ಯಾಖ್ಯಾನಮ್' (೧–೧–೧) ಎಂದು ಉದ್ಗೀಥೋಂಕಾರದ ವ್ಯಾಖ್ಯಾನವು ಪ್ರಕೃತವಾಗಿತ್ತಲ್ಲ, ಅದನ್ನು ಇಲ್ಲಿ ಉಪಸಂಹಾರಮಾಡಿದೆ ಎಂಬುದನ್ನು ಏತಸ್ಯೈವ ಎಂಬ ಪ್ರಕೃತಪರಾಮರ್ಶಕಸರ್ವನಾಮವು ಸೂಚಿಸುತ್ತದೆ ಎಂದು ಭಾವ. ಓಂಕಾರೋಪಾಸನೆಯನ್ನೇ ಬೇರೆಬೇರೆಯ ಪ್ರಕಾರಗಳಿಂದ ಮಾಡಬೇಕೆಂದು ವಿಧಿಸಿದೆ ಎಂಬುದಕ್ಕೆ ಈ ಉಪಸಂಹಾರವೂ ಒಂದು ಲಿಂಗವಾಗಿರುತ್ತದೆ.

ಸ್ವೇಷ್ವೇವ ಅಸುಷು ವಿಷ್ವಗ್ವಿಷಯಾಸು ಪ್ರಾಣನಕ್ರಿಯಾಸು ರಮಣಾತ್ ಸ್ವಾಭಾವಿಕ್ಯಃ ತಮಆತ್ಮಿಕಾ ಇನ್ದ್ರಿಯವೃತ್ತಯ ಏವ । ಹ ವಾ ಇತಿ ಪೂರ್ವವೃತ್ತೋದ್ಭಾಸಕೌ ನಿಪಾತೌ । ಯತ್ರ ಯಸ್ಮಿನ್ ನಿಮಿತ್ತೇ ಇತರೇತರವಿಷಯಾಪಹಾರಲಕ್ಷಣೇ ಸಂಯೇತಿರೇ । ಸಂಪೂರ್ವಸ್ಯ ಯತತೇಃ ಸಙ್ಗ್ರಾಮಾರ್ಥತ್ವಮ್ ಇತಿ ಸಙ್ಗ್ರಾಮಂ ಕೃತವನ್ತಃ ಇತ್ಯರ್ಥಃ । ಶಾಸ್ತ್ರೀಯಪ್ರಕಾಶವೃತ್ತ್ಯಭಿಭವನಾಯ ಪ್ರವೃತ್ತಾಃ ಸ್ವಾಭಾವಿಕ್ಯಃ ತಮೋರೂಪಾ ಇನ್ದ್ರಿಯವೃತ್ತಯೋಽಸುರಾಃ । ತಥಾ ತದ್ವಿಪರೀತಾಃ ಶಾಸ್ತ್ರಾರ್ಥವಿಷಯವಿವೇಕಜ್ಯೋತಿರಾತ್ಮಾನೋ ದೇವಾಃ ಸ್ವಾಭಾವಿಕತಮೋರೂಪಾಸುರಾಭಿಭವನಾಯ ಪ್ರವೃತ್ತಾಃ । ಇತಿ ಅನ್ಯೋನ್ಯಾಭಿಭವೋದ್ಭವರೂಪಃ ಸಙ್ಗ್ರಾಮ ಇವ ಸರ್ವಪ್ರಾಣಿಷು ಪ್ರತಿದೇಹಂ ದೇವಾಸುರಸಙ್ಗ್ರಾಮೋಽನಾದಿಕಾಲಪ್ರವೃತ್ತಃ ಇತ್ಯಭಿಪ್ರಾಯಃ । ಸ ಇಹ ಶ್ರುತ್ಯಾ ಆಖ್ಯಾಯಿಕಾರೂಪೇಣ ಧರ್ಮಾಧರ್ಮೋತ್ಪತ್ತಿವಿವೇಕವಿಜ್ಞಾನಾಯ ಕಥ್ಯತೇ ಪ್ರಾಣವಿಶುದ್ಧಿವಿಜ್ಞಾನವಿಧಿಪರತಯಾ ॥

(ಭಾಷ್ಯಾರ್ಥ)

ದೇವಾಸುರರು ಎಂದರೆ ದೇವತೆಗಳೂ ಅಸುರರೂ (ಎಂದರ್ಥ. ದೇವತೆಗಳು ಎಂಬುದು) ಬೆಳಗುವದು ಎಂಬರ್ಥದ ದಿವ್ ಧಾತುವಿನ (ರೂಪವು). ದೇವತೆಗಳು ಎಂದರೆ (ಇಲ್ಲಿ) ಶಾಸ್ತ್ರಪ್ರಕಾಶಿತವಾದ ಇಂದ್ರಿಯವೃತ್ತಿಗಳು. ಅಸುರರು ಎಂದರೆ ಅದಕ್ಕೆ ವಿಪರೀತವಾಗಿರುವ (ಇಂದ್ರಿಯವೃತ್ತಿಗಳು) ; ತಮ್ಮತಮ್ಮ ಅಸುಗಳಲ್ಲಿಯೇ ಎಂದರೆ ಸುತ್ತಲೂ ಇರುವ ವಿಷಯಗಳಲ್ಲಾಗುವ ಪ್ರಾಣನ ಕ್ರಿಯೆಗಳಲ್ಲಿಯೇ[1] ರತರಾಗಿರುವದರಿಂದ ಸ್ವಾಭಾವಿಕವಾದ ತಮೋರೂಪವಾದ ಇಂದ್ರಿಯವೃತ್ತಿಗಳೇ (ಅಸುರರು).[2] ಹ ವೈ ಎಂಬಿವು ಹಿಂದೆ ನಡೆದದ್ದನ್ನು ತಿಳಿಸುವ ನಿಪಾತಗಳು. (ಅವರು) ಎಲ್ಲಿ ಎಂದರೆ ಒಬ್ಬರೊಬ್ಬರ ವಿಷಯವನ್ನು ಅಪಹರಿಸುವದೆಂಬ ಯಾವ ನಿಮಿತ್ತದಲ್ಲಿ[3] ಸಂಯತ್ನಮಾಡಿದರೋ—ಸಮ್ ಎಂಬ

---

1. ಆಚ್ಚಿನಲ್ಲಿರುವ 'ಪ್ರಾಣನಕ್ರಿಯಾಸು' ಎಂಬುದು 'ಪ್ರಾಣಕ್ರಿಯಾಸು' ಎಂದಿದ್ದರೆ ಪ್ರಾಣಗಳ ವ್ಯಾಪಾರದಲ್ಲಿ ಎಂದು ಸರಳವಾಗಿ ಅರ್ಥವಾಗುವಂತೆ ಕನ್ನಡಿಸಬಹುದಾಗುತ್ತಿತ್ತು.

2. ಇಂದ್ರಿಯಗಳು ತಮ್ಮತಮ್ಮ ವಿಷಯದಲ್ಲಿಯೇ ಪ್ರವರ್ತಿಸುವ ವ್ಯಾಪಾರವೇ ಅಸು ; ಆ ಅಸುವಿನಲ್ಲಿ ರತರಾಗಿರುವದರಿಂದ ತಮೋರೂಪವೃತ್ತಿಗಳು ಅಸುರರೆನಿಸುವವು; ಶಾಸ್ತ್ರಪ್ರಕಾಶಿತವಾದ ಇಂದ್ರಿಯವೃತ್ತಿಗಳು ಹಾಗಿಲ್ಲದ್ದರಿಂದ ದೇವತೆಗಳು.

3. ದೇವತೆಗಳು ಅಸುರರ ವಿಷಯವನ್ನು ಅಪಹರಿಸಿ ಶಾಸ್ತ್ರೀಯವಾದ ಸಂಸ್ಕಾರ ವ್ಯಾಪಾರವನ್ನು ಎಬ್ಬಿಸಬೇಕೆಂದೂ ಅಸುರರು ಅದನ್ನು ತಪ್ಪಿಸಿ ವಿಷಯಭೋಗದಲ್ಲಿ ತೊಡಗಿಸಬೇಕೆಂಬ ತಮೋವೃತ್ತಿಗಳನ್ನು ಎಬ್ಬಿಸಬೇಕೆಂದೂ ಪ್ರಯತ್ನಿಸುವದೇ ಯುದ್ಧನಿಮಿತ್ತ ಎಂದರ್ಥ.

(ಉಪಸರ್ಗ)ಪೂರ್ವಕವಾದ ಯತ್ (ಧಾತು)ವಿಗೆ ಸಂಗ್ರಾಮ ಎಂಬ ಅರ್ಥವಿರುವದರಿಂದ (ಸಂಯತ್ನವನ್ನು ಮಾಡಿದರೋ)- ಸಂಗ್ರಾಮವನ್ನು ಮಾಡಿದರೋ ಎಂದರ್ಥ.

ಶಾಸ್ತ್ರೀಯವಾದ ಸಾತ್ತ್ವಿಕವೃತ್ತಿಗಳನ್ನು ವಶಗೊಳಿಸಿಕೊಳ್ಳುವದಕ್ಕೆ ತೊಡಗಿದ ಸ್ವಾಭಾವಿಕವಾದ ತಮೋರೂಪವಾದ ಇಂದ್ರಿಯವೃತ್ತಿಗಳು ಅಸುರರು, ಹೀಗೆಯೇ ಇದಕ್ಕೆ ವಿಪರೀತವಾಗಿ ಶಾಸ್ತ್ರಾರ್ಥವಿಷಯವನ್ನು ವಿವೇಚಿಸುವ ಬೆಳಕಿನ ರೂಪದ (ವೃತ್ತಿಗಳು) ದೇವತೆಗಳು. (ಅವರು) ಸ್ವಾಭಾವಿಕವಾದ ತಮೋರೂಪರಾದ ಅಸುರರನ್ನು ವಶಗೊಳಿಸುವದಕ್ಕೆ ತೊಡಗಿರುವರು. ಹೀಗೆ ಒಬ್ಬರನ್ನೊಬ್ಬರು ವಶಗೊಳಿಸಿಕೊಂಡು ಮೇಲಕ್ಕೇಳುವ ರೂಪ ವಾ ಸ (ವ್ಯಾಪಾರವು) ಸಂಗ್ರಾಮದಂತೆ (ಇರುತ್ತದೆ). ಎಲ್ಲಾ ಪ್ರಾಣಿಗಳಲ್ಲಿಯೂ ಪ್ರತಿದೇಹದಲ್ಲಿಯೂ (ಈ) ದೇವಾಸುರಸಂಗ್ರಾಮವು ಅನಾದಿಕಾಲದಿಂದ ಪ್ರವೃತ್ತವಾಗಿರುತ್ತದೆ ಎಂದು ಅಭಿಪ್ರಾಯ. ಇದನ್ನು ಆಖ್ಯಾಯಿಕೆಯ ರೂಪದಿಂದ ಶ್ರುತಿಯು ಧರ್ಮಾಧರ್ಮಗಳುಂಟಾಗುವದು (ಹೇಗೆಂಬ) ವಿವೇಕವಿಜ್ಞಾನ(ವಾಗುವ)ದಕ್ಕಾಗಿ[1] ಪ್ರಾಣವು ವಿಶುದ್ಧವಾಗಿರುವದೆಂಬ ವಿಜ್ಞಾನವನ್ನು ವಿಧಿಸುವ ತಾತ್ಪರ್ಯದಿಂದ[2] ಇಲ್ಲಿ ಉಕ್ತವಾಗಿರುತ್ತದೆ.

## ದೇವತೆಗಳು ಉದ್ಗೀಥೋಪಾಸನೆಯನ್ನು ಕೈಕೊಂಡದ್ದು

(ಭಾಷ್ಯ)

೨೧ ಅತಃ ಉಭಯೇಽಪಿ ದೇವಾಸುರಾಃ ಪ್ರಜಾಪತೇರಪತ್ಯಾನಿ ಇತಿ ಪ್ರಾಜಾಪತ್ಯಾಃ। ಪ್ರಜಾಪತಿಃ ಕರ್ಮಜ್ಞಾನಾಧಿಕೃತಃ ಪುರುಷಃ। "ಪುರುಷ ಏವೋಕ್ಥಮಯಮೇವ ಮಹಾನ್ ಪ್ರಜಾಪತಿಃ" (ಐ. ಆ. ೨-೧-೨) ಇತಿ ಶ್ರುತ್ಯನ್ತರಾತ್। ತಸ್ಯ ಹಿ ಶಾಸ್ತ್ರೀಯಾಃ ಸ್ವಾಭಾವಿಕ್ಯಶ್ಚ ಕರಣವೃತ್ತಯಃ ವಿರುದ್ಧಾಃ ಅಪತ್ಯಾನೀವ। ತದುದ್ಭವತ್ವಾತ್। ತತ್ ತತ್ರ ಉತ್ಕರ್ಷಾಪಕರ್ಷಲಕ್ಷಣನಿಮಿತ್ತೇ ಹ ದೇವಾಃ ಉದ್ಗೀಥಮ್ ಉದ್ಗೀಥಭಕ್ತ್ಯುಪಲಕ್ಷಿತಮ್ ಔದ್ಗಾತ್ರಂ ಕರ್ಮ ಆಜಹ್ರುಃ ಆಹೃತವನ್ತಃ। ತಸ್ಯಾಪಿ ಕೇವಲಸ್ಯ ಆಹರಣಾಸಂಭವಾತ್ ಜ್ಯೋತಿಷ್ಟೋಮಾದಿ ಆಹೃತವನ್ತಃ ಇತ್ಯಭಿಪ್ರಾಯಃ। ತತ್ ಕಿಮರ್ಥಮಾಜಹ್ರುರಿತಿ? ಉಚ್ಯತೇ ಅನೇನ ಕರ್ಮಣಾ ಏನಾನ್ ಅಸುರಾನ್ ಅಭಿಭವಿಷ್ಯಾಮಃ ಇತ್ಯೇವಮಭಿಪ್ರಾಯಾಃ ಸನ್ತಃ॥

---

1. ಇಂದ್ರಿಯಗಳು ವಿಷಯಗಳಿಂದ ಹಿಮ್ಮೆಟ್ಟಿದರೆ ಧರ್ಮವೂ ಅವುಗಳಲ್ಲಿಯೇ ರತವಾದರೆ ಪಾಪವೂ ಆಗುವವೆಂದು ತಿಳಿಸುವದಕ್ಕಾಗಿ.

2. ಪ್ರಾಣವು ವಿಶುದ್ಧವು ಎಂಬ ಉಪಾಸನೆಯನ್ನು ವಿಧಿಸುವದಕ್ಕಾಗಿ ಇಂದ್ರಿಯಗಳ ಸ್ವಭಾವವನ್ನು ಅನುವಾದಮಾಡಿಕೊಂಡಿದೆ.

(ಭಾಷ್ಯಾರ್ಥ)

ಆದ್ದರಿಂದ ದೇವಾಸುರರಿಬ್ಬರೂ ಪ್ರಜಾಪತಿಯ ಮಕ್ಕಳಾದ್ದರಿಂದ[1] ಪ್ರಾಜಾಪತ್ಯರು. ಪ್ರಜಾಪತಿ ಎಂದರೆ ಕರ್ಮಜ್ಞಾನಗಳಲ್ಲಿ ಅಧಿಕಾರವುಳ್ಳ ಪುರುಷನು[2]; "ಪುರುಷನು ಉಕ್ಥವು, ಇವನೇ ದೊಡ್ಡ ಪ್ರಜಾಪತಿಯು" (ಐ. ಆ. ೨-೧-೨) ಎಂಬ ಮತ್ತೊಂದು ಶ್ರುತಿಯಿಂದ (ಅವನು ಪ್ರಜಾಪತಿ ಎಂದು ಸಿದ್ಧವಾಗುತ್ತದೆ). ಅವನಿಗಲ್ಲವೆ, ಶಾಸ್ತ್ರೀಯವಾದ ಮತ್ತು ಸ್ವಾಭಾವಿಕವಾದ ಕರಣವೃತ್ತಿಗಳು (ಒಂದಕ್ಕೊಂದು) ವಿರುದ್ಧವಾಗಿರುವ ಮಕ್ಕಳಂತೆ ಇವೆ? ಏಕೆಂದರೆ ಅವನಿಂದ (ಅವು) ಹುಟ್ಟುವವು.

(ತತ್ = ತತ್ರ) ಹೆಚ್ಚಿಗೆ, ಕೀಳ್ಮೆ –ಎಂಬ ರೂಪವಾದ ನಿಮಿತ್ತದಲ್ಲಿ[3] ದೇವತೆಗಳು ಉದ್ಗೀಥವನ್ನು– ಉದ್ಗೀಥಭಕ್ತಿಯಿಂದ ಉಪಲಕ್ಷಿತವಾದ ಔದ್ಗಾತ್ರ ಕರ್ಮವನ್ನು[4]— ಕೈಕೊಂಡರು, ಸ್ವೀಕರಿಸಿದರು (ಎಂದರ್ಥ); ಬರಿಯ ಆ (ಔದ್ಗಾತ್ರಕರ್ಮವನ್ನು) ಕೈಕೊಳ್ಳುವದುಕೂಡ ಆಗಲಾರದಾದ್ದರಿಂದ ಜ್ಯೋತಿಷ್ಟೋಮಾದಿ(ಕರ್ಮವನ್ನು)[5] ಕೈಕೊಂಡರು ಎಂದು ಅಭಿಪ್ರಾಯ. ಅದನ್ನು ಏತಕ್ಕೆ ಕೈಕೊಂಡರು ? ಎಂದರೆ (ಶ್ರುತಿ) ಹೇಳುತ್ತಿದೆ. ಈ ಕರ್ಮದಿಂದ ಈ ಅಸುರರನ್ನು ಗೆಲ್ಲುವೆವು ಎಂಬ ಅಭಿಪ್ರಾಯವುಳ್ಳವರಾಗಿ (ಕೈಕೊಂಡರು).

## ಘ್ರಾಣದೃಷ್ಟಿಯಿಂದ ಉದ್ಗೀಥೋಪಾಸನೆಮಾಡಿದ್ದು

(ಉಪನಿಷತ್ತು)

**ತೇ ಹ ನಾಸಿಕ್ಯಂ ಪ್ರಾಣಮುದ್ಗೀಥಮುಪಾಸಾಂಚಕ್ರಿರೇ ತಗ್ಂ ಹಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಜಿಘ್ರತಿ ಸುರಭಿ ಚ ದುರ್ಗನ್ಧಿ ಚ ಪಾಪ್ಮನಾ ಹ್ಯೇಷ ವಿದ್ಧಃ ॥ ೨ ॥**

---

1. ಅವನಿಂದ ಹುಟ್ಟುವರಾದ್ದರಿಂದ.

2. ಏಕೆಂದರೆ ಕರ್ಮೋಪಾಸನೆಗಳಿಂದ ಅವನೇ ಪ್ರಜಾಪತಿಯಾಗಲು ತಕ್ಕವನಾಗಿರುತ್ತಾನೆ.

3. ಒಬ್ಬರನ್ನೊಬ್ಬರು ಕೆಳಕ್ಕೆ ತುಳಿದುಹಾಕಿ ತಾವು ಮೇಲಕ್ಕೆ ಏಳುವದೆಂಬ ಈ ಸಂಗ್ರಾಮದಲ್ಲಿ.

4. ಉದ್ಗೀಥವೆಂಬುದು ಸಾಮದ ಒಂದಾನೊಂದು ಭಕ್ತಿಯು, ಅವಯವವು. ಅದಿಷ್ಟನ್ನೇ ಯಾವನೂ ಸ್ವತಂತ್ರವಾಗಿ ಹಾಡುವದಿಲ್ಲ, ಉದ್ಗಾತೃವಾಗಿ ಹಾಡುತ್ತಾನಾದ್ದರಿಂದ ಇಲ್ಲಿ ಉದ್ಗೀಥವೆಂದರೆ ಉದ್ಗಾತೃವಿನ ಕರ್ಮವು ಎಂದೇ ಅಭಿಪ್ರಾಯ.

5. ಬರಿಯ ಔದ್ಗಾತ್ರಕರ್ಮವು ಸ್ವತಂತ್ರವಾಗಿರುವದಿಲ್ಲ; ಯಜ್ಞದಲ್ಲಿಯೇ ಬರುತ್ತದೆ. ಆದ್ದರಿಂದ ಔದ್ಗಾತ್ರಕರ್ಮವು ಬರುವ ಜ್ಯೋತಿಷ್ಟೋಮಾದಿಯಜ್ಞವನ್ನು ಸ್ವೀಕರಿಸಿದರು ಎಂದರ್ಥ. ಈ ಖಂಡದಲ್ಲಿ ಉದ್ಗೀಥಾವಯವವಾದ ಓಂಕಾರವನ್ನು ಪ್ರಾಣ, ಆದಿತ್ಯ –ಎಂದು ಉಪಾಸನೆಮಾಡಬೇಕೆಂದು ವಿಧಿಸಲಾಗುವದು. ಆ ಉದ್ಗೀಥವು ಔದ್ಗಾತ್ರಕರ್ಮದಲ್ಲಿ ಸೇರಿರುತ್ತದೆ; ಅದು ಜ್ಯೋತಿಷ್ಟೋಮಾದಿಯಜ್ಞದಲ್ಲಿಯೇ ಇರುತ್ತದೆಯಾದ್ದರಿಂದ ಉದ್ಗೀಥವೆಂದರೆ ಜ್ಯೋತಿಷ್ಟೋಮಾದಿಕರ್ಮವೆಂದೇ ಅರ್ಥ.

೨. ಆ (ದೇವತೆಗಳು) ನಾಸಿಕ್ಯಪ್ರಾಣವೆಂದು ಉದ್ಗೀಥವನ್ನು ಉಪಾಸನೆಮಾಡಿದರು. ಅದನ್ನು ಅಸುರರು ಪಾಪದಿಂದ ಹೊಡೆದರು. ಆದ್ದರಿಂದ ಸುವಾಸನೆಯುಳ್ಳದ್ದನ್ನೂ ದುರ್ಗಂಧಿಯನ್ನೂ (ಅದು) ಮೂಸುತ್ತದೆ. ಏಕೆಂದರೆ ಇದು ಪಾಪದಿಂದ ವಿದ್ಧವಷ್ಟೆ?

## ಘ್ರಾಣವು ಪಾಪವಿದ್ಧವಾಗಿರುತ್ತದೆ

### (ಭಾಷ್ಯ)

೨೨. ಯದಾ ಚ ತದುದ್ಗೀಥಂ ಕರ್ಮ ಆಜಿಹೀರ್ಷವಃ ತದಾ ತೇ ಹ ದೇವಾಃ ನಾಸಿಕ್ಯಂ ನಾಸಿಕಾಯಾಂ ಭವಂ ಚೇತನಾವನ್ತಂ ಘ್ರಾಣಂ[1] ಪ್ರಾಣಮ್ ಉದ್ಗೀಥಕರ್ತಾರಮ್ ಉದ್ಗಾತಾರಮ್ ಉದ್ಗೀಥಭಕ್ತ್ಯಾ ಉಪಾಸಾಂಚಕ್ರಿರೇ ಉಪಾಸನಂ ಕೃತವನ್ತಃ ಇತ್ಯರ್ಥಃ । ನಾಸಿಕ್ಯಪ್ರಾಣದೃಷ್ಟ್ಯಾ ಉದ್ಗೀಥಾಖ್ಯಮ್ ಅಕ್ಷರಮ್ ಓಂಕಾರಮ್ ಉಪಾಸಾಂಚಕ್ರಿರೇ ಇತ್ಯರ್ಥಃ। ಏವಂ ಹಿ ಪ್ರಕೃತಾರ್ಥಪರಿತ್ಯಾಗಃ, ಅಪ್ರಕೃತಾರ್ಥೋಪಾದಾನಂ ಚ ನ ಕೃತಂ ಸ್ಯಾತ್ । 'ಖಲ್ವೇತಸ್ಯೈವ ಅಕ್ಷರಸ್ಯ' ಇತಿ ಓಂಕಾರೋ ಹಿ ಉಪಾಸ್ಯತಯಾ ಪ್ರಕೃತಃ। ನನು ಉದ್ಗೀಥೋಪಲಕ್ಷಿತಂ ಕರ್ಮ ಆಹೃತವನ್ತಃ ಇತ್ಯವೋಚಃ ಇದಾನೀಮೇವ[2] । ಕಥಂ ನಾಸಿಕ್ಯಪ್ರಾಣದೃಷ್ಟ್ಯಾ[3] ಓಂಕಾರಮ್ ಉಪಾಸಾಂಚಕ್ರಿರೇ ಇತ್ಯಾತ್ಥ ? ನೈಷ ದೋಷಃ। ಉದ್ಗೀಥಕರ್ಮಣ್ಯೇವ ಹಿ ತತ್ಕರ್ತೃಪ್ರಾಣದೇವತಾದೃಷ್ಟ್ಯಾ ಉದ್ಗೀಥಭಕ್ತ್ಯವಯವಶ್ಚ ಓಂಕಾರಃ[4] ಉಪಾಸ್ಯತ್ವೇನ ವಿವಕ್ಷಿತಃ ನ ಸ್ವತನ್ತ್ರಃ। ಅತಃ ತಾದರ್ಥ್ಯೇನ ಕರ್ಮ ಆಹೃತವನ್ತಃ ಇತಿ ಯುಕ್ತಮೇವೋಕ್ತಮ್ । ತಮೇವಂ ದೇವೈರ್ವೃತಮ್ ಉದ್ಗಾತಾರಂ ಹ ಅಸುರಾಃ ಸ್ವಾಭಾವಿಕತಮಆತ್ಮಾನಃ ಜ್ಯೋತೀರೂಪಂ ನಾಸಿಕ್ಯಂ ಪ್ರಾಣಂ ದೇವಂ ಸ್ವೋತ್ಥೇನ[5] ಪಾಪ್ಮನಾ ಅಧರ್ಮಾಸಙ್ಗರೂಪೇಣ ವಿವಿಧುಃ ವಿದ್ಧವನ್ತಃ, ಸಂಸರ್ಗಂ ಕೃತವನ್ತಃ ಇತ್ಯರ್ಥಃ। ಸ ಹಿ ನಾಸಿಕ್ಯಃ ಪ್ರಾಣಃ ಕಲ್ಯಾಣಗನ್ಧ

---

1. ಇಲ್ಲಿರುವದು ಅ॥ ಪಾಠ; ಘ್ರಾಣಪ್ರಾಣಮ್ ಎಂದೂ ಪಾಠಾಂತರವಿದೆ. 'ಪ್ರಾಣಂ ಚೇತನಾವನ್ತಂ ಘ್ರಾಣಮ್' ಎಂದು ವಾ॥ ಅ॥ ಪಾಠ.

2. 'ಇದಾನೀಮೇವಂ' ಎಂದು ವಾ॥ ಅ॥ಗಳ ಪಾಠ.

3. ಇದರ ಮುಂದೆ 'ಉದ್ಗೀಥಾಖ್ಯಮಕ್ಷರಮ್' ಎಂದು ಹೆಚ್ಚಾಗಿ ಅ॥ ವಾ॥ ಪಾಠದಲ್ಲಿದೆ.

4. ಇಲ್ಲಿ ಭಕ್ತ್ಯವಯವಶ್ಚ ಎಂಬಲ್ಲಿರುವ ಚಕಾರವು ಬೇಕಿಲ್ಲ, ಅಥವಾ ತು ಶಬ್ದಾರ್ಥದಲ್ಲಿ ಉಪಯುಕ್ತವಾಗಿದೆ ಎಂದು ಭಾವಿಸಬೇಕು. ಅದನ್ನು ನಾವು ಕನ್ನಡಿಸಿಲ್ಲ.

5. 'ಸ್ವೇನ' ಎಂದು ಅ॥, 'ಸ್ವಕೀಯೇನ' ಎಂದು ವಾ॥ ; ಅರ್ಥವೇನೂ ಬೇರೆಯಾಗುವದಿಲ್ಲ.

ಗ್ರಹಣಾಭಿಮಾನಾಸಙ್ಗಾಭಿಭೂತವಿವೇಕವಿಜ್ಞಾನೋ ಬಭೂವ । ಸ ತೇನ ದೋಷೇಣ ಪಾಪ್ಮಸಂಸರ್ಗೀ ಬಭೂವ । ತದಿದಮುಕ್ತಮ್ ಅಸುರಾಃ ಪಾಪ್ಮನಾ ವಿವಿಧುರಿತಿ । ಯಸ್ಮಾತ್ ಆಸುರೇಣ ಪಾಪ್ಮನಾ ವಿದ್ಧಃ, ತಸ್ಮಾತ್ ತೇನ ಪಾಪ್ಮನಾ ಪ್ರೇರಿತಃ ಘ್ರಾಣಃ ಪ್ರಾಣಃ[1] ದುರ್ಗನ್ಧಿ[2]ಗ್ರಾಹಕಃ ಪ್ರಾಣಿನಾಮ್। ಅತಃ ತೇನ ಉಭಯಂ ಜಿಘ್ರತಿ ಲೋಕಃ ಸುರಭಿ ಚ ದುರ್ಗನ್ಧಿ ಚ। ಪಾಪ್ಮನಾ ಹಿ ಏಷ ಯಸ್ಮಾತ್ ವಿದ್ಧಃ। ಉಭಯಗ್ರಹಣಮ್ ಅವಿವಕ್ಷಿತಮ್ । "ಯಸ್ಯೋಭಯಂ ಹವಿರಾರ್ತಿಮಾರ್ಛತಿ" (ತೈ. ಬ್ರಾ. ೩-೭-೧) ಇತಿ ಯದ್ವತ್ । "ಯದೇವೇದಮಪ್ರತಿರೂಪಂ ಜಿಘ್ರತಿ" (ಬೃ. ೧-೩-೩) ಇತಿ ಸಮಾನಪ್ರಕರಣ ಶ್ರುತೇಃ ॥

(ಭಾಷ್ಯಾರ್ಥ)

ಯಾವಾಗ ಆ ಉದ್ಗೀಥಕರ್ಮವನ್ನು ಕೈಕೊಳ್ಳುವದರಲ್ಲಿದ್ದರೋ ಆಗ ಆ ದೇವತೆಗಳು ನಾಸಿಕ್ಯನಾದ ಮೂಗಿನಲ್ಲಿದ್ದ ಚೇತನಾವಂತನಾದ[3] ಘ್ರಾಣನೆಂಬ ಪ್ರಾಣನನ್ನಾಗಿ[4] ಉದ್ಗೀಥವನ್ನು ಉದ್ಗೀಥಕರ್ತೃವನ್ನು ಉದ್ಗಾತೃವನ್ನು ಉದ್ಗೀಥಭಕ್ತಿಯಿಂದ ಉಪಾಸನೆಮಾಡಿದರು.[5] ನಾಸಿಕ್ಯಪ್ರಾಣದೃಷ್ಟಿಯಿಂದ ಉದ್ಗೀಥವೆಂಬ ಹೆಸರಿನ ಅಕ್ಷರವಾದ ಓಂಕಾರವನ್ನು ಉಪಾಸನೆಮಾಡಿದರು ಎಂದರ್ಥ. ಹೀಗೆ (ಅರ್ಥಮಾಡಿದರೇ) ಪ್ರಕೃತವಾದ ಅರ್ಥವನ್ನು ಬಿಟ್ಟು ಅಪ್ರಕೃತವಾದ ಅರ್ಥವನ್ನು ಸ್ವೀಕರಿಸಿದಂತೆ ಆಗುವದಿಲ್ಲ.[6] 'ಖಲ್ವೇತಸ್ಯೈವಾಕ್ಷರಸ್ಯ' (ಇದೇ ಅಕ್ಷರದ ಉಪವ್ಯಾಖ್ಯಾನವಾಗಿರುತ್ತದೆ) ಎಂದು ಓಂಕಾರವೇ ಅಲ್ಲವೆ, ಉಪಾಸ್ಯವಾಗಿ ಪ್ರಕೃತವಾಗಿರುವದು ?

(ಆಕ್ಷೇಪ) :– ಉದ್ಗೀಥೋಪಲಕ್ಷಿತವಾದ ಕರ್ಮವನ್ನು ಕೈಕೊಂಡರು ಎಂದು (ನೀನೇ) ಈಗತಾನೆ[7] ಹೇಳಿದೆಯಲ್ಲ! ನಾಸಿಕ್ಯಪ್ರಾಣನ ದೃಷ್ಟಿಯಿಂದ

---

1. 'ಘ್ರಾಣಪ್ರಾಣಃ' ಎಂದು ಪಾ॥

2. 'ದುರ್ಗನ್ಧಗ್ರಾಹಕಃ' ಎಂದು ವಾ॥ ಅ॥ 3. ದೇವತಾರೂಪನಾದ.

4. ಇದು ಆ॥ ಪಾರದ ಅರ್ಥ. ವಾ॥ ಪಾಠದಂತೆ ಆವರೆ 'ಪ್ರಾಣನನ್ನು ಎಂದರೆ ಚೇತನಾವಂತನಾದ ಘ್ರಾಣನನ್ನಾಗಿ' ಎಂದು ಕನ್ನಡಿಸಿಕೊಳ್ಳಬೇಕಾಗುವದು.

5. ಘ್ರಾಣವೇ ಉದ್ಗೀಥಕರ್ತೃ ಎಂದು ಭಾವಿಸಿ ಅದರ ದೃಷ್ಟಿಯಿಂದ ಓಂಕಾರವನ್ನು ಉಪಾಸನೆಮಾಡಿದರು ಎಂದರ್ಥ. ಮುಂದಿನ ಭಾಷ್ಯವಾಕ್ಯದಲ್ಲಿ ಇದನ್ನು ಸ್ಪಷ್ಟಗೊಳಿಸಿದೆ.

6. ಘ್ರಾಣಾದಿಗಳ ಉಪಾಸನೆಯು ಪ್ರಕೃತವಲ್ಲ, ಓಂಕಾರದ ಉಪಾಸನೆಯು ಪ್ರಕೃತ. ಅದ್ದರಿಂದ ಘ್ರಾಣಪ್ರಾಣವನ್ನು ಉದ್ಗೀಥವೆಂದು ಉಪಾಸನೆಮಾಡಿದರು ಎಂಬಿದು ಸರಿಯಾದ ಅರ್ಥವಲ್ಲ. ಸೂ. ಭಾ. ೪-೧-೬ನ್ನು ನೋಡಿ.

7. 'ಇದಾನೀಮೇವಂ' ಎಂಬ ವಾ॥ ಅ॥ ಪಾಠಕ್ಕೆ (ನೀನೇ) ಹೇಳಿದೆಯಲ್ಲ; ಈಗ ನಾಸಿಕ್ಯಪ್ರಾಣದೃಷ್ಟಿಯಿಂದ ಓಂಕಾರವನ್ನು ಉಪಾಸನೆಮಾಡಿದರು –ಎಂದಿಂತು ಹೇಗೆ ಹೇಳುತ್ತಿರುವೆ? –ಎಂದು ಅನುವಾದ.

ಓಂಕಾರವನ್ನು[1] ಉಪಾಸನೆಮಾಡಿದರು ಎಂದು (ಈಗ) ಹೇಳುತ್ತಿರುವೆಯಲ್ಲ! (ಇದು) ಹೇಗೆ (ಸರಿ)?

(ಪರಿಹಾರ) :- ಇದು ದೋಷವಲ್ಲ. ಉದ್ಗೀಥಕರ್ಮದಲ್ಲಿಯೇ ಅಲ್ಲವೆ, ಅದರ ಕರ್ತೃವಾದ ಪ್ರಾಣದೇವತೆಯ ದೃಷ್ಟಿಯಿಂದ ಉದ್ಗೀಥಭಕ್ತಿಯ ಅವಯವವಾದ ಓಂಕಾರವು ಉಪಾಸ್ಯವೆಂದು ವಿವಕ್ಷಿತವಾಗಿದೆ, ಸ್ವತಂತ್ರವಾದ (ಓಂಕಾರವು ಉಪಾಸ್ಯವೆಂದೇನೂ ವಿವಕ್ಷಿತ)ವಾಗಿಲ್ಲವಲ್ಲ! ಆದ್ದರಿಂದ ಅದಕ್ಕಾಗಿ[2] ಕರ್ಮವನ್ನು ಕೈಕೊಂಡರು ಎಂದು ಹೇಳಿದ್ದು ಯುಕ್ತವೇ.

ಹೀಗೆ ದೇವತೆಗಳು ವರಿಸಿದ (ಆ) ಉದ್ಗಾತೃವನ್ನು ಸ್ವಾಭಾವಿಕತಮೋರೂಪರಾದ ಅಸುರರು, (ಆ) ಜ್ಯೋತೀರೂಪನಾದ ನಾಸಿಕ್ಯಪ್ರಾಣನೆಂಬ ದೇವತೆಯನ್ನು ತಮ್ಮದಾದ ಅಧರ್ಮಾಸಂಗರೂಪವಾದ ಪಾಪದಿಂದ ಹೊಡೆದರು, ಹೊಡೆದವರಾದರು, (ಅದಕ್ಕೆ) ಸಂಬಂಧಿಸಿದರು ಎಂದರ್ಥ. ಏಕೆಂದರೆ ಆ ನಾಸಿಕ್ಯಪ್ರಾಣನು ಉತ್ತಮವಾದ ಗಂಧವನ್ನು ಗ್ರಹಿಸುವ ಅಭಿಮಾನವೆಂಬ ಆಸಂಗದಿಂದ ವಿವೇಕವಿಜ್ಞಾನವನ್ನು ಕಳೆದುಕೊಂಡವನಾದನು. ಅವನು ಆ ದೋಷದಿಂದ ಪಾಪಸಂಸರ್ಗಿಯಾದನು. ಆ ಇದನ್ನೇ ಅಸುರರು ಪಾಪದಿಂದ ಹೊಡೆದರು ಎಂದು ಹೇಳಿರುತ್ತದೆ. ಹೀಗೆ ಆಸುರಪಾಪದಿಂದ ವಿದ್ಧನಾದನಷ್ಟೆ, ಆದ್ದರಿಂದ ಆ ಪಾಪದಿಂದ ಪ್ರೇರಿತನಾಗಿ ಘ್ರಾಣಪ್ರಾಣನು ಪ್ರಾಣಿಗಳಿಗೆ ದುರ್ಗಂಧಿ(ವಸ್ತು)ವನ್ನು[3] ಗ್ರಹಿಸಿಕೊಡುವವ(ನಾಗಿರುತ್ತಾನೆ). ಆದ್ದರಿಂದ ಜನವು ಆ (ಪ್ರಾಣ)ನಿಂದ ಸುವಾಸನೆಯುಳ್ಳದ್ದನ್ನೂ ದುರ್ಗಂಧವುಳ್ಳದ್ದನ್ನೂ ಎರಡನ್ನೂ ಮೂಸಿ(ತಿಳಿಯು)ತ್ತಿದೆ. (ಹಿ= ಯಸ್ಮಾತ್) ಏಕೆಂದರೆ ಇವನು ಪಾಪದಿಂದ ಹೊಡೆಯಲ್ಪಟ್ಟಿರುತ್ತಾನೆ. (ಇಲ್ಲಿ) ಎರಡನ್ನೂ ಗ್ರಹಿಸುವದೆಂಬುದು ವಿವಕ್ಷಿತವಲ್ಲ.[4] "ಯಾವನ ಎರಡು ಹವಿಸ್ಸೂ ನಾಶವನ್ನು ಹೊಂದುವದೋ" (ತೈ. ಬ್ರಾ. ೩-೭-೧) ಎಂಬಲ್ಲಿ ಹೇಗೋ ಹಾಗೆಯೇ ಇದು.[5] "ಈ ಆನನು

---

1. ವಾ|| ಆ|| ಪಾರಗಳಂತೆ 'ಉದ್ಗೀಥವೆಂಬ ಹೆಸರಿನ ಅಕ್ಷರವಾದ ಓಂಕಾರವನ್ನು' ಎಂದು ಕನ್ನಡಿಸಬೇಕು. ಆ|| ಪಾರದಲ್ಲಿಯೂ ಇದೇ ಅಭಿಪ್ರೇತವಾಗಿದೆ.

2. ಆ ಓಂಕಾರದ ಉಪಾಸನೆಗಾಗಿ.

3. 'ದುರ್ಗನ್ಧಗ್ರಾಹಕಃ' ಎಂಬ ವಾ|| ಆ|| ಪಾರಕ್ಕೆ ಕೆಟ್ಟ ವಾಸನೆಯನ್ನು ಗ್ರಹಿಸಿ ಕೊಡುವವ(ನಾಗಿರುತ್ತಾನೆ) -ಎಂದು ಅರ್ಥ.

4. ದುರ್ಗಂಧವುಳ್ಳದ್ದನ್ನೆ ಮೂಸುತ್ತದೆ ಎಂಬುದೊಂದೇ ವಿವಕ್ಷಿತ.

5. ಒಂದೇ ಹವಿಸ್ಸಿಗೆ ಕಾಗೆ ಮುಂತಾದವುಗಳ ಸಂಬಂಧದಿಂದ ಭ್ರಂಶವಾದರೂ ಪ್ರಾಯಶ್ಚಿತ್ತವುಂಟು. ಆದರೂ ಎರಡು ಹವಿಸ್ಸುಗಳಿಗೆ ಭ್ರಂಶವಾದರೆ ಎಂದು ಪ್ರಾಯಶ್ಚಿತ್ತವನ್ನು ವಿಧಿಸಿದೆ. ಅಲ್ಲಿ ಎರಡು ಎಂಬಿದು ಅವಿವಕ್ಷಿತ ಎಂದು ಮೀಮಾಂಸದಲ್ಲಿ ನಿಶ್ಚಯಿಸಿದೆ. ಶಾ. ಭಾ. ೬-೪-೩೩ನ್ನು ನೋಡಿ.

ಗುಣವಾದದ್ದನ್ನು ಮೂಸುತ್ತಾನಲ್ಲ, ಇದೇ" (ಆ ಪಾಪವು, ಬೃ. ೧-೩-೩) ಎಂಬ ಸಮಾನಪ್ರಕರಣದ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).[1]

## ವಾಗಾದಿದೃಷ್ಟಿಯಿಂದ ಉಪಾಸನೆಮಾಡಿದ್ದು

(ಉಪನಿಷತ್ತು)

**ಅಥ ಹ ವಾಚಮುದ್ಗೀಥಮುಪಾಸಾಂಚಕ್ರಿರೇ ತಾಗ್ಂ ಹಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತಯೋಭಯಂ ವದತಿ ಸತ್ಯಂ ಚಾನೃತಂ ಚ ಪಾಪ್ಮನಾ ಹ್ಯೇಷಾ ವಿದ್ಧಾ ॥ ೩ ॥**

**ಅಥ ಹ ಚಕ್ಷುರುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಪಶ್ಯತಿ ದರ್ಶನೀಯಂ ಚಾದರ್ಶನೀಯಂ ಚ ಪಾಪ್ಮನಾ ಹ್ಯೇತದ್ ವಿದ್ಧಮ್ ॥ ೪ ॥**

**ಅಥ ಹ ಶ್ರೋತ್ರಮುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ ತೇನೋಭಯಗ್ಂ ಶೃಣೋತಿ ಶ್ರವಣೀಯಂ ಚಾಶ್ರವಣೀಯಂ ಚ ಪಾಪ್ಮನಾ ಹ್ಯೇತದ್ ವಿದ್ಧಮ್ ॥ ೫ ॥**

**ಅಥ ಹ ಮನ ಉದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ ತೇನೋಭಯಗ್ಂ ಸಂಕಲ್ಪತೇ ಸಂಕಲ್ಪನೀಯಂ ಚಾಸಂಕಲ್ಪನೀಯಂ ಚ ಪಾಪ್ಮನಾ ಹ್ಯೇತದ್ ವಿದ್ಧಮ್ ॥ ೬ ॥**

೩. ಆಗ ಅವರು ವಾಕ್ಕೆಂದು ಉದ್ಗೀಥವನ್ನು ಉಪಾಸನೆ ಮಾಡಿದರು. ಅದನ್ನು ಅಸುರರು ಪಾಪದಿಂದ ಹೊಡೆದರು. ಆದ್ದರಿಂದ ಅದರಿಂದ ಸತ್ಯವನ್ನೂ ಅನೃತವನ್ನೂ ಎರಡನ್ನೂ (ಜನವು) ಹೇಳುತ್ತದೆ. ಅದು ಪಾಪದಿಂದ ವಿದ್ಧವಷ್ಟೆ ?

೪. ಆಗ ಚಕ್ಷುಸ್ಸೆಂದು ಉದ್ಗೀಥವನ್ನು ಉಪಾಸನೆಮಾಡಿದರು. ಅದನ್ನು ಅಸುರರು ಪಾಪದಿಂದ ಹೊಡೆದರು. ಆದ್ದರಿಂದ ಅದರಿಂದ (ಜನವು) ನೋಡತಕ್ಕದ್ದು, ನೋಡಬಾರದ್ದು– (ಈ) ಎರಡನ್ನೂ ಕಾಣುತ್ತದೆ. ಅದು ಪಾಪದಿಂದ ವಿದ್ಧವಷ್ಟೆ ?

---

1. ಬೃಹದಾರಣ್ಯಕದಲ್ಲಿ ಒಳ್ಳೆಯ ವಾಸನೆಯ ಗ್ರಹಣವನ್ನು ಹೇಳಿಯೇ ಇಲ್ಲ ; ಆದ್ದರಿಂದ ಈ ಸಮಾಖ್ಯೆಯೂ ಈ ವ್ಯಾಖ್ಯಾನಕ್ಕೆ ಪ್ರಮಾಣವೆಂದು ಭಾವ.

೫. ಆಗ ಶ್ರೋತ್ರವೆಂದು ಉದ್ಗೀಥವನ್ನು ಉಪಾಸನೆ ಮಾಡಿದರು. ಅದನ್ನು ಅಸುರರು ಪಾಪದಿಂದ ಹೊಡೆದರು. ಆದ್ದರಿಂದ ಅದರಿಂದ ಕೇಳತಕ್ಕದ್ದು, ಕೇಳಬಾರದ್ದು- (ಈ) ಎರಡನ್ನೂ ಕೇಳುತ್ತಾನೆ. ಅದು ಪಾಪದಿಂದ ವಿದ್ಧವಷ್ಟೆ ?

೬. ಆಗ ಮನಸ್ಸೆಂದು ಉದ್ಗೀಥವನ್ನು ಉಪಾಸನೆಮಾಡಿದರು. ಅದನ್ನು ಅಸುರರು ಪಾಪದಿಂದ ಹೊಡೆದರು. ಆದ್ದರಿಂದ ಅದರಿಂದ ಸಂಕಲ್ಪಿಸತಕ್ಕದ್ದು, ಸಂಕಲ್ಪಿಸಬಾರದ್ದು- (ಈ) ಎರಡನ್ನೂ ಸಂಕಲ್ಪಿಸುತ್ತಾನೆ ; ಅದು ಪಾಪದಿಂದ ವಿದ್ಧವಷ್ಟೆ ?

(ಭಾಷ್ಯ)

೨೩. ಮುಖ್ಯಪ್ರಾಣಸ್ಯ ಉಪಾಸ್ಯತ್ವಾಯ ತದ್ವಿಶುದ್ಧತ್ವಾನುಭವಾರ್ಥೋಽಯಂ ವಿಚಾರಃ ಶ್ರುತ್ಯಾ ಪ್ರವರ್ತಿತಃ । ಅತಃ ಚಕ್ಷುರಾದಿದೇವತಾಃ ಕ್ರಮೇಣ ವಿಚಾರ್ಯ ಆಸುರೇಣ ಪಾಪ್ಮನಾ ವಿದ್ಧಾ ಇತಿ ಅಪೋಹ್ಯನ್ತೇ । ಸಮಾನಮನ್ಯತ್ "ಅಥ ಹ ವಾಚಂ - ಚಕ್ಷುಃ . ಶ್ರೋತ್ರಂ . ಮನಃ" ಇತ್ಯಾದಿ । ಅನುಕ್ತಾ ಅಪಿ ಅನ್ಯಾಃ ತ್ವಗ್ರಸನಾದಿದೇವತಾ ದ್ರಷ್ಟವ್ಯಾಃ । "ಏವಮು ಖಲ್ವೇತಾ ದೇವತಾಃ ಪಾಪ್ಮಭಿಃ -" ( ಬೃ. ೧-೩-೬ ) ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

ಮುಖ್ಯಪ್ರಾಣನೇ ಉಪಾಸ್ಯನೆಂಬುದನ್ನು[1] (ತಿಳಿಸು)ವದಕ್ಕಾಗಿ ಅವನು ವಿಶುದ್ಧನೆಂದು ಅನುಭವಕ್ಕೆ (ತಂದುಕೊಡು)ವದಕ್ಕಾಗಿ[2] ಈ ವಿಚಾರವನ್ನು ಶ್ರುತಿಯು ಮಾಡಿರುತ್ತದೆ. ಆದ್ದರಿಂದ ಚಕ್ಷುರಾದಿದೇವತೆಗಳನ್ನು ಕ್ರಮವಾಗಿ ವಿಚಾರಮಾಡಿ ಆಸುರಪಾಪ್ಮದಿಂದ ವಿದ್ಧವಾಗಿವೆ ಎಂದು (ಅವನ್ನು) ಒತ್ತರಿಸಿದೆ. "ಅಥ ವಾಚಂ... ಚಕ್ಷುಃ... ಶ್ರೋತ್ರಮ್.... ಮನಃ" ಮುಂತಾದ ಮಿಕ್ಕದ್ದೆಲ್ಲವೂ (ಹಿಂದಿನ ವಾಕ್ಯಕ್ಕೆ) ಸಮಾನವಾಗಿರುತ್ತದೆ[3] (ಇಲ್ಲಿ) ಹೇಳದೆ ಇರುವ ತ್ವಕ್ಕು, ರಸನೆ- ಮುಂತಾದ ಮಿಕ್ಕ ದೇವತೆಗಳನ್ನೂ (ಹೀಗೆಯೇ ಪಾಪವಿದ್ಧ

1. ಮುಖ್ಯಪ್ರಾಣದೃಷ್ಟಿಯಿಂದಲೇ ಉದ್ಗೀಥವು ಉಪಾಸ್ಯವೆಂದು ಎಂದರ್ಥ ; ಹಿಂದಿನ ಭಾ. ಭಾ. ದಲ್ಲಿ ಇದನ್ನು ಸ್ಫುಟಗೊಳಿಸಿರುತ್ತದೆ.

2. ಬೃಹದಾರಣ್ಯಕ, ಛಾಂದೋಗ್ಯ - ಈ ಎರಡರಲ್ಲಿಯೂ ಪ್ರಾಣನು ವಿಶುದ್ಧನೆಂದೇ ಉಪಾಸನೆಮಾಡಬೇಕೆಂದು ಹೇಳಿದ್ದರೂ ಇವೆರಡೂ ಒಂದೇ ಬಗೆಯ ಉಪಾಸನೆಗಳಲ್ಲವೆಂಬುದನ್ನು ಸೂ. ಭಾ. ೩-೩-೭ ರಲ್ಲಿ ನಿಶ್ಚಯಿಸಿದೆ.

3. ಆದ್ದರಿಂದ ಆ ಗ್ರಂಥಭಾಗಕ್ಕೆ ಮತ್ತೆ ವ್ಯಾಖ್ಯಾನವನ್ನು ಮಾಡಬೇಕಾದದ್ದಿಲ್ಲ.

ವೆಂದು) ತಿಳಿಯಬೇಕು[1]; ಏಕೆಂದರೆ "ಹೀಗೆಯೇ ಈ ದೇವತೆಗಳನ್ನು ಪಾಪಗಳಿಂದ (ಸಂಬದ್ಧರನ್ನಾಗಿ ಮಾಡಿದರು)" (ಬೃ. ೧-೩-೭) ಎಂದು ಶ್ರುತ್ಯಂತರವಿದೆ.

## ಪ್ರಾಣದೃಷ್ಟಿಯಿಂದ ಉಪಾಸನೆ

(ಉಪನಿಷತ್ತು)

**ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ ತಗ್ಂ ಹಾಸುರಾ ಋತ್ವಾ ವಿದಧ್ವಂಸುರ್ಯಥಾಶ್ಮಾನಮಾಖಣಮೃತ್ವಾ ವಿಧ್ವಗ್ಂಸೇತೈವಮ್ ॥ ೭ ॥**

೭. ಇನ್ನು ಈ ಮುಖ್ಯಪ್ರಾಣನಿದಾನಲ್ಲ, ಅವನೆಂದೇ ಉದ್ಗೀಥವನ್ನು ಉಪಾಸನೆಮಾಡಿದರು. ಅವನನ್ನು ಸೇರಿ ಅಸುರರು ಹೇಗೆ ಆಖಣವಾದ ಕಲ್ಲನ್ನು ಸೇರಿದರೆ (ಮಣ್ಣುಗೊಂಬೆ) ನಾಶವಾಗುವದೋ ಹಾಗೆ ವಿಧ್ವಸ್ತರಾದರು.

## ಅಸುರರು ಪ್ರಾಣನಿಂದ ಧ್ವಸ್ತರಾದದ್ದು

(ಭಾಷ್ಯ)

೨೪. ಆಸುರೇಣ ಪಾಪ್ಮನಾ ವಿದ್ಧತ್ವಾತ್ ಘ್ರಾಣಾದಿ[2]ದೇವತಾ ಅಪೋಹ್ಯ ಅಥ ಅನನ್ತರಂ ಹ ಯಃ ಏವ ಅಯಂ ಪ್ರಸಿದ್ಧಃ ಮುಖೇ ಭವಃ ಮುಖ್ಯಃ ಪ್ರಾಣಃ ತಮ್ ಉದ್ಗೀಥಮ್ ಉಪಾಸಾಂಚಕ್ರಿರೇ ತಂ ಹಾಸುರಾಃ ಪೂರ್ವವತ್ ಋತ್ವಾ ಪ್ರಾಪ್ಯ ವಿದಧ್ವಂಸುಃ ವಿನಷ್ಟಾಃ ಅಭಿಪ್ರಾಯಮಾತ್ರೇಣ ಅಕೃತ್ವಾ ಕಿಂಚಿದಪಿ ಪ್ರಾಣಸ್ಯ। ಕಥಂ ವಿನಷ್ಟಾ ಇತಿ? ಅತ್ರ ದೃಷ್ಟಾನ್ತಮಾಹ । ಯಥಾ ಲೋಕೇ ಅಶ್ಮಾನಮ್ ಆಖಣಂ ನ ಶಕ್ಯತೇ ಖನಿತುಂ ಕುದ್ದಾಲಾದಿಭಿರಪಿ ಭೇತ್ತುಂ ನ ಶಕ್ಯಃ। (ಅಖಣಃ)[3] ಅಖಣ ಏವ ಆಖಣಃ। ತಮ್ ಋತ್ವಾ ಸಾಮರ್ಥ್ಯಾತ್ ಲೋಷ್ಟಃ ಪಾಂಸುಪಿಣ್ಡಃ। ಶ್ರುತ್ಯನ್ತರಾಚ್ಚ। ಅಶ್ಮನಿ ಕ್ಷಿಪ್ತೋ ಅಶ್ಮಭೇದನಾಭಿಪ್ರಾಯೇಣ ತಸ್ಯ ಅಶ್ಮನಃ ಕಿಂಚಿದಪಿ ಅಕೃತ್ವಾ ಸ್ವಯಂ ವಿಧ್ವಂಸೇತ ವಿದೀರ್ಯೇತ, ಏವಂ ವಿದಧ್ವಂಸುಃ ಇತ್ಯರ್ಥಃ। ಏವಂ ವಿಶುದ್ಧೋಽಸುರೈಃ ಅಧರ್ಷಿತತ್ವಾತ್ ಪ್ರಾಣಃ ಇತಿ[4] ॥

---

1. ಆದರಿಂದ ಮುಖ್ಯಪ್ರಾಣನೊಬ್ಬನೇ ವಿಶುದ್ಧನು ಎಂಬುದು ನಿಶ್ಚಯವಾಗುತ್ತದೆ.
2. 'ಪ್ರಾಣಾದಿ' ಎಂದು ಪಾ॥
3. ಇಲ್ಲಿ ಈ ಮಾತು ಅವಶ್ಯ. ವಾ॥ ಅ॥ ಮ॥ ಪಾಠಗಳಲ್ಲಿ "ಟಙ್ಕೈಶ್ಚ ಭೇತ್ತುಂ ನ ಶಕ್ಯಃ ಅಖನಃ ಅಖನ ಏವ ಆಖಣಃ ತಂ ಋತ್ವಾ" ಎಂದಿದೆ.
4. ವಾ॥ ಅ॥ ಮೈ॥ ಪಾಠಗಳಂತೆ ಈ ವಾಕ್ಯವನ್ನು ಇಲ್ಲಿಗೆ ಸೇರಿಸಿಕೊಂಡಿದೆ; ಇದೇ ವ್ಯಾಖ್ಯಾನಕ್ಕೆ ಹೊಂದುಗೆಯಾಗಿದೆ.

(ಭಾಷ್ಯಾರ್ಥ)

ಆಸುರ(ಪಾಪ)ದಿಂದ ವಿದ್ಧರಾಗಿರುವದರಿಂದ ಪ್ರಾಣಾದಿದೇವತೆಗಳನ್ನು ಒತ್ತರಿಸಿ ಇನ್ನು ಆಮೇಲೆ ಮುಖದಲ್ಲಿರುವ ಈ ಪ್ರಸಿದ್ಧನಾದ ಮುಖ್ಯಪ್ರಾಣ ನಿದಾನಲ್ಲ, ಅವನೆಂದು ಉದ್ಗೀಥವನ್ನು ಉಪಾಸನೆಮಾಡಿದರು. ಅವನನ್ನು ಅಸುರರು ಮೊದಲಿನಂತೆಯೇ ಸೇರಿ ಹೊಂದಿ (ತಮ್ಮ ಆ) ಅಭಿಪ್ರಾಯಮಾತ್ರ ದಿಂದಲೇ[1] ಪ್ರಾಣನಿಗೆ ಏನನ್ನೂ ಮಾಡದೆ ವಿಧ್ವಸ್ತರಾದರು, ವಿನಷ್ಟರಾದರು.

ಹೇಗೆ ವಿನಷ್ಟರಾದರು? ಎಂಬುದಕ್ಕೆ (ಶ್ರುತಿಯು) ದೃಷ್ಟಾಂತವನ್ನು ಹೇಳುತ್ತಿದೆ. ಹೇಗೆ ಲೋಕದಲ್ಲಿ ಆಖಣವಾದ (ಕಲ್ಲನ್ನು)- ಗುದ್ದಲಿ ಮುಂತಾದವುಗಳಿಂದಲೂ ಒಡೆಯುವದಕ್ಕೆ ಆಗದಾದ್ದರಿಂದ[2] ಅಖಣ(ವೆನಿಸುವದು); ಅಖಣವೇ ಆಖಣ (ಎಂದು ಸ್ವಾರ್ಥಪ್ರತ್ಯಯವು ಬಂದಿದೆ). ಅದನ್ನು- ಸೇರಿದರೆ; ಹೆಂಟೆಯು, ಮಣ್ಣುಮುದ್ದೆಯು (ಸೇರಿದರೆ ಎಂದು) ಸಾಮರ್ಥ್ಯದಿಂದ (ಇಟ್ಟುಕೊಳ್ಳಬೇಕು)[3]; ಮತ್ತೊಂದು ಶ್ರುತಿಯಿರುವದರಿಂದಲೂ[4] (ಹೀಗೆಂದು ಇಟ್ಟುಕೊಳ್ಳಬೇಕು). ಕಲ್ಲು(ಬಂಡೆಯು) ಮೇಲೆ, ಕಲ್ಲು(ಬಂಡೆಯನ್ನು) ಒಡೆಯುವ ಅಭಿಪ್ರಾಯದಿಂದ, ಎಸೆದ (ಮಣ್ಣುಹೆಂಟೆಯು) ಆ ಕಲ್ಲಿಗೆ ಏನನ್ನೂ ಮಾಡಲಾರದೆ ತಾನೇ ನಾಶವಾಗುವದೋ ಹುಡಿಯಾಗುವದೋ ಹಾಗೆ ನಷ್ಟವಾದರು ಎಂದರ್ಥ. ಹೀಗೆ ಅಸುರರಿಂದ ತೊಂದರೆಗೆ ಸಿಕ್ಕಿಸಿಕೊಳ್ಳುವದಕ್ಕಾಗಲಿಲ್ಲವಾದ್ದರಿಂದ ಪ್ರಾಣನು ವಿಶುದ್ಧನು (ಎಂದು ಸಿದ್ಧವಾಯಿತು).

## ಪ್ರಾಣೋಪಾಸಕನಿಗೆ ಫಲ

(ಉಪನಿಷತ್ತು)

**ಯಥಾಶ್ಮಾನಮಾಖಣಮೃತ್ವಾ[5] ವಿಧ್ವಗ್ಂಸತ ಏವಗ್ಂ ಹೈವ ಸ ವಿಧ್ವಗ್ಂಸತೇ ಯ ಏವಂವಿದಿ ಪಾಪಂ ಕಾಮಯತೇ ಯಶ್ಚೈನಮಭಿದಾಸತಿ ಸ ಏಷೋಽಶ್ಮಾಖಣಃ ॥ ೮ ॥**

---

1. ಇಲ್ಲಿ ಅಭಿಪ್ರಾಯವೆಂದರೆ ಹೋಗಿಮುಟ್ಟುವದು.

2. "ಉಳಿಗಳಿಂದ ಕತ್ತರಿಸುವದಕ್ಕೂ ಆಗದಾದ್ದರಿಂದ ಅಖನವೆನಿಸುವದು; ಅಖನವೇ ಆಖಣ (ಎಂದು) ಸ್ವಾರ್ಥಪ್ರತ್ಯಯವು ಬಂದಿದೆ. ಅದನ್ನು-ಸೇರಿದರೆ" -ಎಂದು ವಾ॥ ಅ॥ ಪಾಠಗಳಿಗೆ ಅರ್ಥ.

3. ಏಕೆಂದರೆ ಮಣ್ಣೇ ಕಲ್ಲಿಗೆ ತಗುಲಿದರೆ ಪುಡಿಯಾಗುವದು.

4. ಸಮಾನಪ್ರಕರಣದ ಬೃಹದಾರಣ್ಯಕವಾಕ್ಯದಲ್ಲಿ (೧-೩-೭) ಲೋಷ್ಟಃ ಎಂಬ ಮಾತು ಇದ್ದೂ ಇದೆ.

5. ಆ॥ ಪಾಠದಲ್ಲಿ 'ಏವಂ' ಎಂದೇ ಕಂಡಿಕೆಯು ಪ್ರಾರಂಭವಾಗಿರುತ್ತದೆಯಾದರೂ ಭಾಷ್ಯದಲ್ಲಿ ಅದನ್ನು ಹಿಡಿದಿಲ್ಲವೆಂಬ ಕಾರಣದಿಂದ ಮಿಕ್ಕ ಮುದ್ರಿತಪುಸ್ತಕಗಳ ಪಾಠವನ್ನೆ ನಾವೂ ಅನುಸರಿಸಿದೇವೆ.

೮. ಹೇಗೆ ಆಖಣವಾದ ಕಲ್ಲು(ಬಂಡೆಯನ್ನು) ಸೇರಿದರೆ (ಮಣ್ಣುಹೆಂಟೆಯು) ವಿಧ್ವಸ್ತವಾಗುವದೋ ಹಾಗೆಯೇ ಯಾವನು ಹೀಗೆಂದರಿತಿರುವವನಲ್ಲಿ ಕೆಟ್ಟದ್ದನ್ನು ಇಚ್ಛಿಸುತ್ತಾನೋ, ಮತ್ತು ಯಾವನು ಇವನನ್ನು ತೊಂದರೆಗೊಳಿಸುತ್ತಾನೋ ಅವನು ವಿಧ್ವಸ್ತನಾಗುವನು. ಆ ಇವನು ಅಶ್ಮಾಖಣನು.

## ಪ್ರಾಣಸಾಕ್ಷಾತ್ಕಾರವುಳ್ಳವನಿಗೆ ಯಾರೂ ಕೇಡನ್ನು ಮಾಡಲಾರರು

(ಭಾಷ್ಯ)

೨೫. ಏವಂವಿದಃ ಪ್ರಾಣಾತ್ಮಭೂತಸ್ಯ ಇದಂ ಫಲಮಾಹ। ಯಥಾಽಶ್ಮಾನಮಿತ್ಯೇಷ ಏವ ದೃಷ್ಟಾನ್ತಃ। ಏವಂ ಹೈವ ಸ ವಿಧ್ವಂಸತೇ ವಿನಶ್ಯತಿ। ಕೋಽಸಾವಿತಿ? ಆಹ। ಯ ಏವಂವಿದಿ ಯಥೋಕ್ತಪ್ರಾಣವಿದಿ ಪಾಪಂ ತದನರ್ಹಂ ಕರ್ತುಂ ಕಾಮಯತೇ ಇಚ್ಛತಿ, ಯಶ್ಚಾಪಿ ಏನಮ್ ಅಭಿದಾಸತಿ ಹಿನಸ್ತಿ ಪ್ರಾಣವಿದಂ ಪ್ರತಿ ಆಕ್ರೋಶತಾಡನಾದಿ ಪ್ರಯುಙ್ಕ್ತೇ ಸೋಽಪಿ ಏವಮೇವ ವಿಧ್ವಂಸತೇ ಇತ್ಯರ್ಥಃ। ಯಸ್ಮಾತ್ ಸ ಏಷ ಪ್ರಾಣವಿತ್ ಪ್ರಾಣಭೂತತ್ವಾತ್ ಅಶ್ಮಾಖಣ ಇವ ಅಶ್ಮಾಖಣಃ ಅಧರ್ಷಣೀಯಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಂದು ಅರಿತುಕೊಂಡು ಪ್ರಾಣಸ್ವರೂಪನೇ ಆಗಿರುವವನಿಗೆ[1] ಈ ಫಲವನ್ನು (ಶ್ರುತಿ) ಹೇಳುತ್ತಿದೆ. "ಹೇಗೆ ಕಲ್ಲು(ಬಂಡೆಯನ್ನು) .. " ಎಂಬಿದೇ ದೃಷ್ಟಾಂತವು[2]. ಹೀಗೆಯೇ ಅವನು ವಿಧ್ವಸ್ತನಾಗುತ್ತಾನೆ. (ವಿಧ್ವಸ್ತನಾಗುವನೆಂಬ) ಅವನು ಯಾರು ? ಎಂದರೆ (ಶ್ರುತಿ) ಹೇಳುತ್ತದೆ. ಯಾವನು ಹೀಗೆಂದರಿತಿರುವವನಲ್ಲಿ, ಮೇಲೆ ಹೇಳಿರುವಂಥ ಪ್ರಾಣೋಪಾಸಕನಲ್ಲಿ[3] ಕೆಟ್ಟ

---

1. ಈ ವಾಕ್ಯಕ್ಕೆ ಹಿಂದೆ ಆ॥ ಪಾರದಲ್ಲಿ 'ಏವಂ ವಿಶುದ್ಧಃ ಅಸುರೈರಧರ್ಷಿತತ್ವಾತ್ ಪ್ರಾಣಃ ಇತಿ' ಎಂಬ ವಾಕ್ಯವನ್ನು ಸೇರಿಸಿಕೊಂಡಿದೆ. ಆಗ "ಹೀಗೆ ಅಸುರರಿಂದ ತೊಂದರೆಗೆ ಸಿಕ್ಕಿಸಿಕೊಳ್ಳುವದಕ್ಕಾಗಲಿಲ್ಲವಾದ್ದರಿಂದ ಪ್ರಾಣನು ವಿಶುದ್ಧನು ಎಂದಿಂತು ಅರಿತುಕೊಂಡು ಪ್ರಾಣಸ್ವರೂಪನೇ ಆಗಿರುವವನಿಗೆ" ಎಂದು ಕನ್ನಡಿಸಬೇಕು. ಹೇಗೇ ಆಗಲಿ, ಪ್ರಾಣೋಪಾಸನೆಯಿಂದ ಪ್ರಾಣಸಾಕ್ಷಾತ್ಕಾರವನ್ನು ಹೊಂದಿರುವವನಿಗೆ ಎಂಬಿದೇ ವಿವಕ್ಷಿತಾರ್ಥ. ಬೃ. ಭಾ ೧-೩-೯ (ಭಾ. ಭಾ. ೬೭), ೧-೩-೨೮ (ಭಾ. ಭಾ. ೯೬)ನ್ನು ನೋಡಿ.

2. ಹಿಂದೆ ಮುಖ್ಯಪ್ರಾಣನಿಂದ ಅಸುರರು ವಿಧ್ವಸ್ತರಾದದ್ದಕ್ಕೆ ಕೊಟ್ಟಿದ್ದ ಕಲ್ಲುಬಂಡೆಯ ದೃಷ್ಟಾಂತವನ್ನೇ ಇಲ್ಲಿಯೂ ಕೊಟ್ಟಿದೆ ಎಂದರ್ಥ.

3. ಅಸುರರಿಗೆ ವಿಷಯನಾಗದೆ ವಿಶುದ್ಧನಾಗಿರುವ ಪ್ರಾಣನೇ ನಾನು ಎಂಬ ಸಾಕ್ಷಾತ್ಕಾರವನ್ನು ಪಡೆದಿರುವವನಲ್ಲಿ ಎಂದರ್ಥ.

ದ್ದನ್ನು ಅವನಿಗೆ ತಕ್ಕದ್ದಲ್ಲದ (ಕೇಡನ್ನು) ಮಾಡುವದಕ್ಕೆ ಇಚ್ಛಿಸುತ್ತಾನೋ ಮತ್ತು ಯಾವನು ಇವನನ್ನು ತೊಂದರೆಗೊಳಿಸುವನೋ ಹಿಂಸಿಸುತ್ತಾನೋ, (ಈ) ಪ್ರಾಣೋಪಾಸಕನ ಮೇಲೆ ಬಯ್ಯುವದು, ಹೊಡೆಯುವದು–ಮುಂತಾದದ್ದನ್ನು ಪ್ರಯೋಗಿಸುವನೋ ಅವನೂ ಹೀಗೆಯೇ ನಾಶವಾಗುತ್ತಾನೆ ಎಂದರ್ಥ. ಏಕೆಂದರೆ ಆ ಈ ಪ್ರಾಣೋಪಾಸಕನು ಪ್ರಾಣಸ್ವರೂಪನಾಗಿರುವದರಿಂದ ಅಶ್ಮಾಖಣದಂತೆ ಇರುತ್ತಾನಾದ್ದರಿಂದ ಅಶ್ಮಾಖಣವು, (ಒಡೆಯುವದಕ್ಕಾಗದ ಕಲ್ಲುಬಂಡೆಯು), ತೊಂದರೆಗೀಡಾಗದವನು ಎಂದರ್ಥ.[1]

## ಘ್ರಾಣಪ್ರಾಣನಿಗೂ ಮುಖ್ಯಪ್ರಾಣನಿಗೂ ತಾರತಮ್ಯ

(ಭಾಷ್ಯ)

೨೬. ನನು ನಾಸಿಕ್ಯೋಽಪಿ ಪ್ರಾಣಃ ವಾಯ್ವಾತ್ಮಾ ಯಥಾ ಮುಖ್ಯಃ ತತ್ರ ನಾಸಿಕ್ಯಃ ಪ್ರಾಣಃ ಪಾಪ್ಮನಾ ವಿದ್ಧಃ ಪ್ರಾಣ ಏವ ಸನ್ ನ ಮುಖ್ಯಃ ಕಥಮ್ ? ನೈಷ ದೋಷಃ । ನಾಸಿಕ್ಯಸ್ತು ಸ್ಥಾನಕರಣವೈಗುಣ್ಯಾತ್[2] ವಿದ್ಧಃ ವಾಯ್ವಾತ್ಮಾಪಿ ಸನ್, ಮುಖ್ಯಸ್ತು ತದಸಂಭವಾತ್[3] ಸ್ಥಾನದೇವತಾಬಲೀಯಸ್ತ್ವಾತ್ ನ ವಿದ್ಧಃ ಇತಿ ಯುಕ್ತಮ್। ಯಥಾ ವಾಸ್ಯಾದಯಃ ಶಿಕ್ಷಾವತ್ಪುರುಷಾಶ್ರಯಾಃ ಕಾರ್ಯವಿಶೇಷಂ ಕುರ್ವನ್ತಿ ನಾನ್ಯಹಸ್ತಗತಾಃ ತದ್ವತ್ ದೋಷವದ್ಘ್ರಾಣಸಚಿವತ್ವಾತ್ ವಿದ್ಧಾ ಘ್ರಾಣದೇವತಾ ನ ಮುಖ್ಯಾ[4] ॥

(ಭಾಷ್ಯಾರ್ಥ)

(ಆಕ್ಷೇಪ):– ನಾಸಿಕ್ಯಪ್ರಾಣನೂ ಮುಖ್ಯ(ಪ್ರಾಣ)ನಂತೆ ವಾಯ್ವಾತ್ಮನೇ ; ಇವರೊಳಗೆ ನಾಸಿಕ್ಯಪ್ರಾಣನು ಪ್ರಾಣನೇ ಆದರೂ ಪಾಪದಿಂದ ವಿದ್ಧನು, ಮುಖ್ಯ(ಪ್ರಾಣನು ಮಾತ್ರ ಪಾಪವಿದ್ಧ)ನಲ್ಲ –ಎಂಬುದು ಹೇಗೆ (ಹೊಂದುತ್ತದೆ) ?

(ಪರಿಹಾರ) :– ಇದೇನೂ ದೋಷವಲ್ಲ. ನಾಸಿಕ್ಯನೇನೋ ವಾಯುರೂಪನೇ ಆದರೂ ಸ್ಥಾನಕರಣದ ವೈಗುಣ್ಯದಿಂದ[5] (ಪಾಪ)ವಿದ್ಧ(ನಾಗಿರುತ್ತಾನೆ) ; ಮುಖ್ಯಪ್ರಾಣನೋ ಎಂದರೆ ಅದು (ಅವನಲ್ಲಿ) ಸಂಭವಿಸುವದಿಲ್ಲ

---

1. ಆದ್ದರಿಂದ ಇವನಿಗೆ ಯಾರೂ ತೊಂದರೆಯನ್ನು ಮಾಡುವದಕ್ಕೆ ಆಗುವದಿಲ್ಲ ಎಂದರ್ಥ.
2. ಇದರ ಮುಂದೆ ವಾ॥ಅ॥ಗಳಲ್ಲಿರುವ 'ಅಸುರೈಃ ಪಾಪ್ಮನಾ' ಎಂಬುದು ಬೇಕಿಲ್ಲ.
3. ಈ ವೈ॥ ವಾ॥ ಪಾಠವೇ ವ್ಯಾಖ್ಯಾನಸಮ್ಮತವಾಗಿರುತ್ತದೆ.
4. ಮುಖ್ಯಃ ಎಂಬಿದನ್ನು ಹೀಗೆಂದು ತಿದ್ದಿಕೊಂಡಿದೆ.
5. ಸ್ಥಾನದಿಂದಾದ ಕರಣದೋಷದಿಂದ.

ವಾದ್ದರಿಂದ[1] ಸ್ಥಾನದೇವತೆಯು ಹೆಚ್ಚು ಪ್ರಬಲವಾಗಿರುವದರಿಂದ ವಿದ್ಧನಾಗಿರುವದಿಲ್ಲ -ಎಂಬುದು ಯುಕ್ತವಾಗಿರುತ್ತದೆ. ಹೇಗೆ ಬಾಚಿಯೇ ಮುಂತಾದವುಗಳು ಕುಶಲರಾದ ಪುರುಷರನ್ನು ಆಶ್ರಯಿಸಿದ್ದಾಗ ಕಾರ್ಯವಿಶೇಷವನ್ನು ಮಾಡುತ್ತವೆಯೋ ಮತ್ತೊಬ್ಬರ ಕೈಯಲ್ಲಿದ್ದಾಗ (ಮಾಡಲಾರದೆ) ಇರುವವೋ ಅದರಂತೆ ದೋಷವುಳ್ಳ ಘ್ರಾಣದ ಜೊತೆಯಲ್ಲಿರುವದರಿಂದ ಘ್ರಾಣದೇವತೆಯು ವಿದ್ಧವಾಗಿರುತ್ತದೆ,[2] ಮುಖ್ಯ(ಪ್ರಾಣದೇವತೆಯು ವಿದ್ಧ)ವಾಗಿರುವದಿಲ್ಲ.

## ಮುಖ್ಯಪ್ರಾಣನು ವಿಶುದ್ಧನು

(ಉಪನಿಷತ್ತು)

**ನೈವೈತೇನ ಸುರಭಿ ನ ದುರ್ಗನ್ಧಿ ವಿಜಾನಾತ್ಯಪಹತಪಾಪ್ಮಾ ಹ್ಯೇಷ ತೇನ ಯದಶ್ನಾತಿ ಯತ್ ಪಿಬತಿ ತೇನೇತರಾನ್ ಪ್ರಾಣಾನವತಿ । ಏತಮು ಏವಾನ್ತತೋಽವಿತ್ತ್ವೋತ್ಕ್ರಾಮತಿ ವ್ಯಾದದಾತ್ಯೇವಾನ್ತತಃ ಇತಿ ॥ ೯ ॥**

೯. ಇವನಿಂದ ಸುವಾಸನೆಯುಳ್ಳದ್ದನ್ನಾಗಲಿ ದುರ್ವಾಸನೆಯುಳ್ಳದ್ದನ್ನಾಗಲಿ ಅರಿಯುವದೇ ಇಲ್ಲ. ಇವನು ಅಪಹತಪಾಪ್ಮನಷ್ಟೆ? ಇವನಿಂದ ಯಾವದನ್ನು ತಿನ್ನುತ್ತಾನೋ ಯಾವದನ್ನು ಕುಡಿಯುತ್ತಾನೋ ಅದರಿಂದ ಉಳಿದ ಪ್ರಾಣಗಳನ್ನು ಕಾಪಾಡುತ್ತಾನೆ. ಕೊನೆಗೆ ಇವನನ್ನು ಪಡೆಯದೆಯೇ ಉತ್ಕ್ರಾಂತನಾಗುತ್ತಾನೆ, ಕೊನೆಗೆ (ಬಾಯಿ)ತೆರೆದುಕೊಂಡೇ ಇರುತ್ತಾನೆ.

## ಪ್ರಾಣನು ಪಾಪರಹಿತನು

(ಭಾಷ್ಯ)

೨೭. **ಯಸ್ಮಾತ್ ನ ವಿದ್ಧೋಽಸುರೈರ್ಮುಖ್ಯಃ ತಸ್ಮಾತ್ ನೈವ ಏತೇನ ಸುರಭಿ ದುರ್ಗನ್ಧಿ ವಾ ವಿಜಾನಾತಿ[3] ಘ್ರಾಣೇನೈವ ತದುಭಯಂ**

---

1. ಸ್ಥಾನದಿಂದಾದ ಕರಣದೋಷವು ಇಲ್ಲವಾದ್ದರಿಂದ ಎಂದರ್ಥ.

2. ಘ್ರಾಣಸ್ಥಾನವೇ ಪಾಪವೇಧಕ್ಕೆ ಕಾರಣವೇ ಹೊರತು ಪ್ರಾಣದೇವತೆಯ ಸ್ವರೂಪವಲ್ಲ ಎಂದು ಅಭಿಪ್ರಾಯ.

3 ವಾ॥ ಆ॥ ಪಾಠಗಳಲ್ಲಿರುವ 'ಲೋಕಃ' ಎಂಬುದು ಆ॥ ಪಾಠದಲ್ಲಿ ಕೊನೆಯಲ್ಲಿಯೇ ಇದೆ. ಎರಡು ಪಾಠವೂ ಆಗಬಹುದು.

ವಿಜಾನಾತಿ ಲೋಕಃ । ಅತಶ್ಚ ಪಾಪ್ಮಕಾರ್ಯಾದರ್ಶನಾತ್ ಅಪಹತಪಾಪ್ಮಾ ಅಪಹತೋ ವಿನಾಶಿತಃ ಅಪನೀತಃ ಪಾಪ್ಮಾ ಯಸ್ಮಾತ್ ಸೋಽಯಮ್ ಅಪಹತಪಾಪ್ಮಾ ಹಿ ಏಷಃ । ವಿಶುದ್ಧಃ ಇತ್ಯರ್ಥಃ ॥

(ಭಾಷ್ಯಾರ್ಥ)

ಮುಖ್ಯನು (ಹೀಗೆ) ಅಸುರರಿಂದ ವಿಧ್ವನಾಗಲಿಲ್ಲವಷ್ಟೆ, ಆದ್ದರಿಂದ ಇವನಿಂದ ಸುವಾಸನೆಯುಳ್ಳದ್ದನ್ನಾಗಲಿ ದುರ್ವಾಸನೆಯುಳ್ಳದ್ದನ್ನಾಗಲಿ ಜನವು ಅರಿಯುವದೇ ಇಲ್ಲ, ಘ್ರಾಣದಿಂದಲೇ ಅವೆರಡನ್ನೂ ಅರಿಯುತ್ತಿದೆ. ಆದ್ದರಿಂದಲೇ ಪಾಪದ ಕಾರ್ಯವು ಕಾಣಬರದೆ ಇರುವದರಿಂದಲೇ ಇವನು ಅಪಹತಪಾಪ್ಮನು. ಯಾವನಿಂದ ಪಾಪವು ಅಪಹತವಾಗಿದೆಯೋ ನಾಶವಾಗಿರುತ್ತದೆಯೋ ಆ ಈ (ಪ್ರಾಣನು) ಅಪಹತಪಾಪ್ಮನು, ವಿಶುದ್ಧನು ಎಂದರ್ಥ.

## ಮುಖ್ಯಪ್ರಾಣನು ಸರ್ವಾರ್ಥವಾಗಿರುವದರಿಂದಲೂ ಶುದ್ಧನು

(ಭಾಷ್ಯ)

೨೮. ಯಸ್ಮಾಚ್ಚ ಆತ್ಮಂಭರಯಃ ಕಲ್ಯಾಣಾದ್ಯಾಸಙ್ಗವತ್ತ್ವಾತ್ ಘ್ರಾಣಾದಯಃ । ನ ತಥಾ ಆತ್ಮಂಭರಿರ್ಮುಖ್ಯಃ, ಕಿಂ ತರ್ಹಿ ಸರ್ವಾರ್ಥಃ । ಕಥಮಿತಿ ? ಉಚ್ಯತೇ । ತೇನ ಮುಖ್ಯೇನ ಯತ್ ಅಶ್ನಾತಿ ಯತ್ಪಿಬತಿ ಲೋಕಃ ತೇನ ಅಶಿತೇನ ಪೀತೇನ ಚ ಇತರಾನ್ ಘ್ರಾಣಾದೀನ್ ಅವತಿ ಪಾಲಯತಿ । ತೇನ ಹಿ ತೇಷಾಂ ಸ್ಥಿತಿರ್ಭವತಿ ಇತ್ಯರ್ಥಃ । ಅತಃ ಸರ್ವಂಭರಃ ಪ್ರಾಣಃ । ಅತೋ ವಿಶುದ್ಧಃ । ಕಥಂ ಪುನರ್ಮುಖ್ಯಾಶಿತಪೀತಾಭ್ಯಾಂ ಸ್ಥಿತಿರೇಷಾಂ[1] ಗಮ್ಯತ ಇತಿ ? ಉಚ್ಯತೇ । ಏತಮ್ ಉ ಏವ ಮುಖ್ಯಂ ಪ್ರಾಣಂ ಮುಖ್ಯಪ್ರಾಣಸ್ಯ ವೃತ್ತಿಮ್ ಅನ್ನಪಾನೇ ಇತ್ಯರ್ಥಃ । ಅನ್ತತಃ ಅನ್ತೇ ಮರಣಕಾಲೇ ಅವಿತ್ತ್ವಾ ಅಲಬ್ಧ್ವಾ ಉತ್ಕ್ರಾಮತಿ । ಘ್ರಾಣಾದಿಪ್ರಾಣಸಮುದಾಯಃ ಇತ್ಯರ್ಥಃ । ಅಪ್ರಾಣೋ ಹಿ ನ ಶಕ್ನೋತಿ ಅಶಿತುಂ ಪಾತುಂ ವಾ । ತೇನ ತದಾ ಉತ್ಕ್ರಾನ್ತಿಃ ಪ್ರಸಿದ್ಧಾ ಘ್ರಾಣಾದಿಕಲಾಪಸ್ಯ । ದೃಶ್ಯತೇ ಹಿ ಉತ್ಕ್ರಾನ್ತೌ ಪ್ರಾಣಸ್ಯ ಆಶಿಶಿಷಾ । ಅತಃ ವ್ಯಾದದಾತ್ಯೇವ ಅಸ್ಯ ವಿದಾರಣಂ ಕರೋತಿ ಇತ್ಯರ್ಥಃ । ತದ್ ಹಿ ಅನ್ನಾಲಾಭೇ ಉತ್ಕ್ರಾನ್ತಸ್ಯ ಲಿಙ್ಗಮ್ ॥

(ಭಾಷ್ಯಾರ್ಥ)

ಮತ್ತು ಘ್ರಾಣಾದಿಗಳು ಒಳ್ಳೆಯ (ವಾಸನೆಯೇ) ಮುಂತಾದವುಗಳ ಆಸಂಗವುಳ್ಳವಾದ್ದರಿಂದ ಆತ್ಮಂಭರಿಗಳಾಗಿರುತ್ತವೆಯಲ್ಲ, ಹಾಗೆ ಮುಖ್ಯ

1. 'ಇತರೇಷಾಮ್' ಅ॥ ವಾ॥

(ಪ್ರಾಣ)ನು ಆತ್ಮಂಭರಿಯಲ್ಲ. ಮತ್ತೇನೆಂದರೆ ಎಲ್ಲರಿಗಾಗಿಯೂ (ಇರತಕ್ಕವನು). ಹೇಗೆಂದರೆ (ಶ್ರುತಿ) ಹೇಳುತ್ತದೆ. ಆ ಮುಖ್ಯ(ಪ್ರಾಣ)ನಿಂದ ಯಾವದನ್ನು ಜನವು ತಿನ್ನುತ್ತದೆಯೋ ಯಾವದನ್ನು ಕುಡಿಯುತ್ತದೆಯೋ ಆ ತಿಂದದ್ದರಿಂದಲೂ ಮತ್ತು ಕುಡಿದದ್ದರಿಂದಲೂ ಉಳಿದ ಘ್ರಾಣಾದಿಗಳನ್ನು ಕಾಪಾಡುತ್ತಾನೆ, ಪಾಲಿಸುತ್ತಾನೆ. ಆದರಿಂದಲೇ ಅಲ್ಲವೆ, ಅವರ ಸ್ಥಿತಿಯು ಉಂಟಾಗಿರುತ್ತದೆ ? -ಎಂದರ್ಥ. ಆದ್ದರಿಂದ ಪ್ರಾಣನು ಎಲ್ಲರನ್ನೂ ಕಾಪಾಡುವವನು, ಆದ್ದರಿಂದ ವಿಶುದ್ಧನು.

(ಪ್ರಶ್ನೆ) :- ಇನ್ನು ಮುಖ್ಯ(ಪ್ರಾಣ)ನು ತಿಂದು ಕುಡಿದ (ಪದಾರ್ಥ)ಗಳಿಂದ ಅವರ[1] ಸ್ಥಿತಿಯಾಗುತ್ತದೆ ಎಂದು ಹೇಗೆ ಗೊತ್ತಾಗುತ್ತದೆ ?

(ಉತ್ತರ) - ಹೇಳುತ್ತೇವೆ. ಈ ಮುಖ್ಯಪ್ರಾಣನನ್ನೇ, (ಈ) ಮುಖ್ಯಪ್ರಾಣನ ವೃತ್ತಿಯನ್ನೇ, ಅನ್ನಪಾನಗಳನ್ನೇ[2] ಎಂದರ್ಥ. ಕೊನೆಯಲ್ಲಿ ಕೊನೆಯ ಮರಣಕಾಲದಲ್ಲಿ ಪಡೆಯದೆಯೇ ಹೊಂದದಿರುವದರಿಂದಲೇ ಉತ್ಕ್ರಾಂತವಾಗುತ್ತದೆ, ಘ್ರಾಣಾದಿಪ್ರಾಣಗಳ ಸಮುದಾಯವು (ಹೊರಟುಹೋಗುತ್ತದೆ) ಎಂದರ್ಥ. ಪ್ರಾಣವಿಲ್ಲದವನು ತಿನ್ನುವದಕ್ಕಾಗಲಿ ಕುಡಿಯುವದಕ್ಕಾಗಲಿ ಶಕ್ತನಾಗಿರುವದಿಲ್ಲವಷ್ಟೆ ? ಆದರಿಂದ ಆಗ ಘ್ರಾಣಾದಿಸಮುದಾಯವು ಉತ್ಕ್ರಾಂತವಾಗುತ್ತದೆ ಎಂಬುದು ಪ್ರಸಿದ್ಧ(ವಾಗಿರುತ್ತದೆ). ಪ್ರಾಣವು ಉತ್ಕ್ರಾಂತವಾಗುವಾಗ ತಿನ್ನುವ ಇಚ್ಛೆಯು ಕಂಡುಬರುತ್ತದೆಯಲ್ಲವೆ ? ಏಕೆಂದರೆ ತೆಗೆದುಕೊಂಡೇ ಇರುತ್ತಾನೆ, ಬಾಯಿಬಿಟ್ಟುಕೊಂಡೇ ಇರುತ್ತಾನೆ ಎಂದರ್ಥ. ಅನ್ನವು ಸಿಕ್ಕದೆ ಉತ್ಕ್ರಾಂತನಾದನೆಂಬುದಕ್ಕೆ ಅದು ಗುರುತಷ್ಟೆ ?

## ಪ್ರಾಣನಿಗೆ ಆಂಗಿರಸತ್ವಾದಿಗುಣವಿಧಾನ

(ಉಪನಿಷತ್ತು)

**ತꣳಹಾಙ್ಗಿರಾ ಉದ್ಗೀಥಮುಪಾಸಾಂಚಕ್ರ ಏತಮು ಏವಾಙ್ಗಿರಸಂ ಮನ್ಯನ್ತೇಽಙ್ಗಾನಾಂ ಯದ್ರಸಃ ॥೧೦॥**

೧೦. ಅವನನ್ನು ಅಂಗಿರಸ್ಸು (ಆಂಗಿರಸನೆಂಬ ಗುಣದಿಂದೊಡಗೂಡಿದವನೆಂದು) ಉದ್ಗೀಥವನ್ನು ಉಪಾಸನೆಮಾಡಿದನು. ಇವನನ್ನೇ ಆಂಗಿರಸನೆಂದು ತಿಳಿಯುತ್ತಾರೆ, ಏಕೆಂದರೆ ಅಂಗಗಳ ರಸವು.

1. ಆ ದೇವತೆಗಳ.
2. ಮುಖ್ಯಪ್ರಾಣನ ಮೂಲಕ ಪಡೆಯಬೇಕಾದ ಅನ್ನಪಾನಗಳನ್ನೇ ಎಂದರ್ಥ.

## ಪ್ರಾಣನು ಆಂಗಿರಸನೆಂಬ ಭಾವನೆ: ವೃತ್ತಿಕಾರರ ಮತ

(ಭಾಷ್ಯ)

೨೯. ತಗ್ಂ[1] ಹ ಅಙ್ಗಿರಾಃ । ತಂ ಮುಖ್ಯಂ ಪ್ರಾಣಂ ಹ ಅಙ್ಗಿರಾಃ ಇತ್ಯೇವಂಗುಣಮ್ ಉದ್ಗೀಥಮ್ ಉಪಾಸಾಂಚಕ್ರೇ ಉಪಾಸನಂ ಕೃತವಾನ್ ಬಕೋ ದಾಲ್ಭ್ಯಃ ಇತಿ ವಕ್ಷ್ಯಮಾಣೇನ ಸಂಬಧ್ಯತೇ । ತಥಾ ಬೃಹಸ್ಪತಿ ರಿತಿ ಆಯಾಸ್ಯ ಇತಿ ಚ ಉಪಾಸಾಂಚಕ್ರೇ ಬಕಃ ಇತ್ಯೇವಂ[2] ಸಂಬನ್ಧಂ ಕೃತವನ್ತಃ ಕೇಚಿತ್ । ಏತಮು ಏವಾಙ್ಗಿರಸಮ್ ಬೃಹಸ್ಪತಿಮ್ ಆಯಾಸ್ಯಮ್ ಪ್ರಾಣಂ ಮನ್ಯನ್ತೇ ಇತಿ ವಚನಾತ್ ॥

(ಭಾಷ್ಯಾರ್ಥ)

ತಗ್ಂ ಹ ಅಙ್ಗಿರಾಃ (ಎಂಬ ಕಂಡಿಕೆಯ ಅಭಿಪ್ರಾಯವೇನೆಂದರೆ), ಆ ಮುಖ್ಯಪ್ರಾಣನನ್ನು ಅಂಗಿರಸ್ಸು ಎಂಬೀ ಗುಣದಿಂದ (ಕೂಡಿದವನೆಂದು ಭಾವಿಸಿ) ಉದ್ಗೀಥವನ್ನು ಬಕನು ಉಪಾಸನೆಮಾಡಿದನು, ಉಪಾಸನೆಯನ್ನು ಮಾಡಿದನು ಎಂದು ಮುಂದೆ (೧೩ನೆಯ ಕಂಡಿಕೆಯಲ್ಲಿ) ಹೇಳುವ (ಬಕ ಶಬ್ದದೊಡನೆ) ಸಂಬಂಧವನ್ನು ಮಾಡಿಕೊಳ್ಳಬೇಕು. ಹೀಗೆಯೇ 'ಬೃಹಸ್ಪತಿ' ಎಂದೂ 'ಆಯಾಸ್ಯ'ನೆಂದೂ ಬಕನು ಉಪಾಸನೆಮಾಡಿದನು- ಎಂದಿಂತು ಕೆಲವರು ಸಂಬಂಧವನ್ನು ಮಾಡಿರುತ್ತಾರೆ. 'ಈತನನ್ನೇ ಆಂಗಿರಸನೆಂದೂ. . ಬೃಹಸ್ಪತಿಯೆಂದೂ .... ಆಯಾಸ್ಯನೆಂದೂ ತಿಳಿಯುವರು' ಎಂಬ (ಮುಂದಿನ ಶ್ರುತಿ)ವಚನದ ಆಧಾರದಿಂದ (ಹೀಗೆ ಅವರು ಸಂಬಂಧವನ್ನು ಮಾಡಿರುತ್ತಾರೆ).

## ಸಿದ್ಧಾಂತ: ಅಂಗಿರಃಪ್ರಭೃತಿಗಳೇ ಇಲ್ಲಿ ಉಪಾಸಕರು

(ಭಾಷ್ಯ)

೩೦. ಭವತ್ಯೇವಂ ಯಥಾಶ್ರುತಾಸಂಭವೇ । ಸಂಭವತಿ ತು ಯಥಾಶ್ರುತಮ್ ಋಷಿಚೋದನಾಯಾಮಪಿ । ಶ್ರುತ್ಯನ್ತರವತ್ । "ತಸ್ಮಾಚ್ಛತರ್ಚಿನ ಇತ್ಯಾಚಕ್ಷತ ಏತಮೇವ ಸನ್ತಮ್ ಋಷಿಮಪಿ" (ಐ. ಆ. ೨-೨-೧), ತಥಾ ಮಾಧ್ಯಮಾಃ, ಗೃತ್ಸ್ನಮದಃ, ವಿಶ್ವಾಮಿತ್ರಃ, ವಾಮದೇವಃ, ಅತ್ರಿಃ- ಇತ್ಯಾದಿ ಋಷೀನೇವ ಪ್ರಾಣಮ್ ಆಪಾದಯತಿ ಶ್ರುತಿಃ । ತಥಾ ಏತಾನಪಿ[3] ಋಷೀನ್

---

1. ಇದು ಪ್ರತೀಕವಾದ್ದರಿಂದ 'ತಗ್ಂ ಹಾಙ್ಗಿರಾಃ' ಎಂದಿರಬೇಕು.
2. 'ಇತ್ಯೇವ' ಎಂಬುದಕ್ಕಿಂತ ಈ ಪಾ|| ಪಾಠವು ಮೇಲು.
3. 'ತಾನಪಿ' ಎಂಬ ಪಾ|| ಅ|| ಪಾಠಕ್ಕಿಂತ ಇದು ಮೇಲು.

ಪ್ರಾಣೋಪಾಸಕಾನ್ ಅಙ್ಗಿರೋಬೃಹಸ್ಪತ್ಯಾಯಾಸ್ಯಾನ್ ಪ್ರಾಣಂ ಕರೋತಿ ಅಭೇದವಿಜ್ಞಾನಾಯ। "ಪ್ರಾಣೋ ಹ ಪಿತಾ ಪ್ರಾಣೋ ಮಾತಾ" (೭-೧೫-೧) ಇತ್ಯಾದಿವಚ್ಚ। ತಸ್ಮಾತ್ ಋಷಿರಙ್ಗಿರಾ ನಾಮ ಪ್ರಾಣ ಏವ ಸನ್ ಆತ್ಮಾನಮ್ ಆಙ್ಗಿರಸಂ ಪ್ರಾಣಮ್ ಉದ್ಗೀಥಮ್ ಉಪಾಸಾಂಚಕ್ರೇ ಇತ್ಯೇತತ್। ಯತ್ ಯಸ್ಮಾತ್ ಸಃ ಅಙ್ಗಾನಾಂ ಪ್ರಾಣಃ ಸನ್ ರಸಃ, ತೇನ ಅಸೌ ಆಙ್ಗಿರಸಃ ॥

(ಭಾಷ್ಯಾರ್ಥ)

ಯಥಾಶ್ರುತವಾಗಿ (ಅರ್ಥವು) ಹೊಂದದೆ ಇದ್ದರೆ ಹೀಗೆ ಆಗಬಹುದು. ಆದರೆ (ಇದು) ಋಷಿಚೋದನೆಯೇ (ಎಂಬ ಪಕ್ಷ)ದಲ್ಲಿಯೂ ಯಥಾಶ್ರುತವಾಗಿಯೇ ಹೊಂದುತ್ತದೆ. ಬೇರೊಂದು ಶ್ರುತಿಯಂತೆ(ಯೇ ಇದು): "ಆದ್ದರಿಂದ ಈ (ಪ್ರಾಣನೇ) ಆಗಿರುವ ಋಷಿಯನ್ನು ಶತರ್ಚಿಗಳು ಎನ್ನುವರು" (ಐ. ಆ. ೨-೨-೧)[1] ಇದರಂತೆ 'ಮಾಧ್ಯಮರು', 'ಗೃತ್ಸಮದ', 'ವಿಶ್ವಾಮಿತ್ರ', 'ವಾಮದೇವ', 'ಅತ್ರಿ'– ಮೊದಲಾದ[2] ಋಷಿಗಳನ್ನೇ (ಆ) ಶ್ರುತಿಯು ಪ್ರಾಣನನ್ನಾಗಿ (ಮಾಡಿ) ಈ ಶ್ರುತಿ (ಹೇಳಿ)ರುತ್ತದೆ. ಅದರಂತೆಯೇ ಈ ಅಂಗಿರಸ್ಸು, ಬೃಹಸ್ಪತಿ, ಆಯಾಸ್ಯ– ಎಂಬ ಪ್ರಾಣೋಪಾಸಕರಾದ ಋಷಿಗಳನ್ನು ಅಭೇದ (ರೂಪದಿಂದ) ಉಪಾಸನೆಮಾಡುವದಕ್ಕಾಗಿ ಪ್ರಾಣನನ್ನಾಗಿ (ಮಾಡಿ ಹೇಳು)

---

1. ಶತರ್ಚಿಗಳು ಎಂದರೆ ಋಗ್ವೇದದ ಪ್ರಥಮಮಂಡಲವನ್ನು ಕಂಡುಹಿಡಿದ ಋಷಿಗಳು, ಈ ಪ್ರಾಣನು ಕಾರ್ಯಕರಣಸಂಘಾತರೂಪವಾದ ಪುರುಷನನ್ನು ನೂರುವರ್ಷಗಳವರೆಗೆ ಪೂಜ್ಯನನ್ನಾಗಿ ಮಾಡುವದರಿಂದ ಇವನನ್ನೂ ಆ ಋಷಿಗಳನ್ನೂ ಶತರ್ಚಿಗಳು ಎಂದು ಕರೆಯುವರು ಎಂದರ್ಥ. ಭಾಷ್ಯದಲ್ಲಿ 'ಋಷಿಮಪಿ' ಎಂದಿರುವದು ಎಲ್ಲಾ ಋಷಿಗಳಿಗೂ ಪ್ರತ್ಯೇಕವಾಗಿ ಶತರ್ಚಿಶಬ್ದವು ಅನ್ವಯಿಸುವದೆಂದು ತಿಳಿಸುವದಕ್ಕೆ. ಮುಂದೆ 'ಅತ್ರಿಃ' ಎಂಬ ಏಕವಚನಪ್ರಯೋಗವನ್ನೂ ಹೀಗೆಯೇ ತಿಳಿಯಬೇಕು.

2. 'ಮಾಧ್ಯಮರು' ಎಂದರೆ ಮೊದಲನೆಯ ಮತ್ತು ಮತ್ತು ಕೊನೆಯ ಮಂಡಲಗಳ ನಡುವೆ ಇರುವ ಮಂಡಲಗಳ ದ್ರಷ್ಟೃಗಳಾದ ಋಷಿಗಳು; ಸರ್ವಜಗತ್ತನ್ನೂ ತನ್ನೊಳಗೆ ಧರಿಸಿರುವದರಿಂದ ಪ್ರಾಣನು ಮಾಧ್ಯಮನು. ಗೃತ್ಸಮದನೆಂಬ ಋಷಿಯು ಎರಡನೆಯ ಮಂಡಲದ ಋಷಿ. ಪ್ರಾಣವು ರೇತೋವಿಸರ್ಗಕ್ಕೆ ಕಾರಣವಾಗಿರುವದರಿಂದ ಗೃತ್ಸ, ಅಪಾನವು ಮದಕ್ಕೆ ಕಾರಣವಾಗಿರುವದರಿಂದ ಮದವು; ಹೀಗೆ ಪ್ರಾಣನೂ ಗೃತ್ಸಮದನು. ವಿಶ್ವಾಮಿತ್ರನು ಮೂರನೆಯ ಮಂಡಲಕ್ಕೆ ದ್ರಷ್ಟೃ; ಭೋಕ್ತೃವಾದ ಪ್ರಾಣನಿಗೆ ಎಲ್ಲವೂ ಮಿತ್ರರೂಪವಾಗಿರುವದರಿಂದ ಅವನೂ, ವಿಶ್ವಾಮಿತ್ರ. ವಾಮದೇವನು ನಾಲ್ಕನೆಯ ಮಂಡಲದ ದ್ರಷ್ಟೃ; ಪ್ರಾಣನು ವಾಗಾದಿಗಳಿಗೆ ಸಂಭಜನೀಯನಾಗಿರುವ ದೇವನಾಗಿರುವದರಿಂದ ವಾಮದೇವನು. ಅತ್ರಿಗಳು ಐದನೆಯ ಮಂಡಲದ ದ್ರಷ್ಟೃಗಳು; ಎಲ್ಲವನ್ನೂ ಪಾಪಗಳಿಂದ ತ್ರಾಣಮಾಡುವದರಿಂದ (ಕಾಪಾಡುವದರಿಂದ) ಪ್ರಾಣನೂ ಅತ್ರಿಗಳು. 'ಮುಂತಾದ' ಎಂಬ ಮಾತಿನಿಂದ ಆರಣ್ಯಕದ ಅಧ್ಯಾಯದ ಎರಡನೆಯ ಖಂಡದಲ್ಲಿ ಹೇಳಿರುವ ಭರದ್ವಾಜ, ವಸಿಷ್ಠ –ಮುಂತಾದ ಋಷಿಗಳನ್ನೂ ಗ್ರಹಿಸಬೇಕು.

ತ್ತಿದೆ (ಎನ್ನುವದು ಯುಕ್ತ). "ಪ್ರಾಣನೇ ತಂದೆ, ಪ್ರಾಣನೇ ತಾಯಿ" (೭-೧೫-೧) ಎಂಬಂತೆಯೂ[1] (ಇದನ್ನು ತಾದಾತ್ಮ್ಯಬೋಧಕವೆಂದು ತಿಳಿಯಬೇಕು). ಆದ್ದರಿಂದ ಅಂಗಿರಸ್ಸೆಂಬ ಋಷಿಯು ಪ್ರಾಣನೇ ಆಗಿ[2] ತನ್ನನ್ನು ಅಂಗಿರಸ್ಸೆಂಬ ಪ್ರಾಣನೆಂದು (ಭಾವಿಸಿ) ಉದ್ಗೀಥವನ್ನು (ಆ ದೃಷ್ಟಿಯಿಂದ) ಉಪಾಸನೆಮಾಡಿದನು ಎಂದು (ವಾಕ್ಯಕ್ಕೆ) ತಾತ್ಪರ್ಯ. ಅವನು ಅಂಗಗಳಿಗೆ ಪ್ರಾಣನಾಗಿ ರಸವಾಗಿರುವನಷ್ಟೆ, ಆದ್ದರಿಂದ ಅವನು[3] ಆಂಗಿರಸನು.[4]

(ಉಪನಿಷತ್ತು)

**ತೇನ ತಗ್ಂ ಹ ಬೃಹಸ್ಪತಿರುದ್ಗೀಥಮುಪಾಸಾಂಚಕ್ರ ಏತಮು ಏವ ಬೃಹಸ್ಪತಿಂ ಮನ್ಯನ್ತೇ ವಾಗ್ಘಿ ಬೃಹತೀ ತಸ್ಯಾ ಏಷ ಪತಿಃ ॥**

**ತೇನ ತಗ್ಂ ಹಾಯಾಸ್ಯ ಉದ್ಗೀಥಮುಪಾಸಾಂ ಚಕ್ರ ಏತಮು ಏವಾಯಾಸ್ಯಂ ಮನ್ಯನ್ತ ಆಸ್ಯಾದ್ ಯದಯತೇ ॥ ೧೨ ॥**

೧೧. ಅದರಿಂದಲೇ ಅವನನ್ನು ಬೃಹಸ್ಪತಿಯು (ಬೃಹಸ್ಪತಿಗುಣಯುಕ್ತನೆಂದೆಣಿಸಿ) ಉದ್ಗೀಥವನ್ನು ಉಪಾಸನೆಮಾಡಿದನು. ಇವನನ್ನೇ ಬೃಹಸ್ಪತಿಯೆಂದು ತಿಳಿಯುತ್ತಾರೆ. ವಾಕ್ಕೇ ಅಲ್ಲವೆ, ಬೃಹತಿಯು? ಅದಕ್ಕೆ ಇವನು ಪತಿಯು.

೧೨. ಅದರಿಂದಲೇ ಅವನನ್ನು ಆಯಾಸ್ಯನು (ಆಯಾಸ್ಯಗುಣಯುಕ್ತನೆಂದೆಣಿಸಿ) ಉದ್ಗೀಥವನ್ನು ಉಪಾಸನೆಮಾಡಿದನು. ಇವನನ್ನೇ ಆಯಾಸ್ಯನೆಂದು ತಿಳಿಯುತ್ತಾರೆ; ಏಕೆಂದರೆ ಆಸ್ಯದಿಂದ ಬರುತ್ತಾನೆ.

---

1. ಪ್ರಾಣನು ಸರ್ವಾತ್ಮನಾದ್ದರಿಂದ ಪ್ರಾಣನೇ ತಂದೆ, ಪ್ರಾಣನೇ ತಾಯಿ; ಇದರಂತೆ ಪ್ರಾಣನೇ ಈ ಋಷಿಗಳು ಎಂದರ್ಥ

2. ಪ್ರಾಣಸಾಕ್ಷಾತ್ಕಾರವನ್ನು ಹೊಂದಿ.

3. ಪ್ರಾಣನು.

4. ಅಂಗಿರಸ್ಸೆಂದೇ ಋಷಿಯ ಹೆಸರು, ಇಲ್ಲಿ ಆಂಗಿರಸಃ ಎಂದಿರುವದು ಅದೇ ಶಬ್ದಕ್ಕೆ ಸ್ವಾರ್ಥದಲ್ಲಿ ತದ್ಧಿತಪ್ರತ್ಯಯವನ್ನು ಪಡೆದ ಅದೇ ಶಬ್ದದ ರೂಪಾಂತರ. ಭಾಷ್ಯದಲ್ಲಿ ಮಿಕ್ಕ ಕಡೆಗಳಲ್ಲೆಲ್ಲ ಅಂಗಿರಸ್ಸೆಂದೇ ಪ್ರಯೋಗವಿದ್ದರೂ ಬೃಹದಾರಣ್ಯಕದ ಸಮಾನ ಪ್ರಕರಣದಲ್ಲಿ ಆಂಗಿರಸನೆಂದೇ ಪ್ರಯೋಗಿಸಿರುವದರಿಂದ ಈ ಶ್ರುತಿಯಲ್ಲಿಯೂ ಆಂಗಿರಸಂ ಮನ್ಯನ್ತೇ ಎಂಬಲ್ಲಿ ಆಂಗಿರಸಶಬ್ದವನ್ನೇ ಪ್ರಯೋಗಿಸಿದೆ ಎಂದು ಭಾಷ್ಯಕಾರರು ಭಾವಿಸಿರಬೇಕೆಂದು ತೋರುತ್ತದೆ. 'ತೇನಾಸೌ ಅಙ್ಗಿರಸಃ' ಎಂಬ ವಾ॥ ಪಾಠವು ಸರಿಯಲ್ಲವೆಂಬುದು ಸ್ಪಷ್ಟ.

## ಬೃಹಸ್ಪತ್ಯಾಯಾಸ್ಯರ ಪ್ರಾಣೋಪಾಸನೆ

(ಭಾಷ್ಯ)

೩೧. ತಥಾ ವಾಚೋ ಬೃಹತ್ಯಾಃ ಪತಿಃ, ತೇನ ಅಸೌ ಬೃಹಸ್ಪತಿಃ। ತಥಾ ಯತ್ ಯಸ್ಮಾತ್ ಆಸ್ಯಾತ್ ಅಯತೇ ನಿರ್ಗಚ್ಛತಿ ತೇನ ಆಯಾಸ್ಯಃ। ಋಷಿಃ ಪ್ರಾಣ ಏವ ಸನ್ ಇತ್ಯರ್ಥಃ। ತಥಾ ಅನ್ಯೋಽಪಿ ಉಪಾಸಕಃ ಆತ್ಮಾನಮೇವ ಆಙ್ಗಿರಸಾದಿಗುಣಂ ಪ್ರಾಣಮ್ ಉದ್ಗೀಥಮ್ ಉಪಾಸೀತ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಯೇ ವಾಕ್ಕೆಂಬ ಬೃಹತಿಗೆ ಪತಿಯಷ್ಟೆ.[1] ಆದರಿಂದ ಈ ಪ್ರಾಣನು ಬೃಹಸ್ಪತಿಯು. ಹೀಗೆಯೇ ಆಸ್ಯದಿಂದ ಬರುತ್ತಾನೆ, (ಮುಖದಿಂದ) ಹೊರಟು ಬರುತ್ತಾನಷ್ಟೆ; ಆದರಿಂದ ಆಯಾಸ್ಯನು. ಋಷಿಯು ಪ್ರಾಣನೇ ಆಗಿ (ಉಪಾಸನೆಮಾಡಿದನು) ಎಂದರ್ಥ.

ಹೀಗೆಯೇ ಬೇರೆಯ ಉಪಾಸಕನೂ ತನ್ನನ್ನೇ ಆಂಗಿರಸಾದಿಗುಣವುಳ್ಳ ಪ್ರಾಣನೆಂದು[2] (ಭಾವಿಸಿಕೊಂಡು) ಉದ್ಗೀಥವನ್ನು (ಈ ದೃಷ್ಟಿಯಿಂದ) ಉಪಾಸನೆಮಾಡಬೇಕು ಎಂದರ್ಥ.[3]

(ಉಪನಿಷತ್ತು)

**ತೇನ ತಗ್ಂ ಹ ಬಕೋ ದಾಲ್ಭ್ಯೋ ವಿದಾಂಚಕಾರ। ಸ ಹ ನೈಮಿಶೀಯಾನಾಮುದ್ಗಾತಾ ಬಭೂವ ಸ ಹ ಸ್ಮೈಭ್ಯಃ ಕಾಮಾನಾಗಾಯತಿ ॥ ೧೩ ॥**

೧೩. ಆದರಿಂದಲೇ ಬಕದಾಲ್ಭ್ಯನು ಅವನನ್ನು ಅರಿತುಕೊಂಡನು. ಅವನು ನೈಮಿಶೀಯರಿಗೆ ಉದ್ಗಾತನಾಗಿದ್ದನು; ಅವನು ಅವರಿಗೆ ಕಾಮುಗಳನ್ನು ಆಗಾನಮಾಡಿಕೊಟ್ಟನು.

---

1. ಬೃ. ಭಾ. ೧-೩-೨೦ (ಭಾ. ಭಾ. ೮೨) ರಲ್ಲಿ ಬೃಹಸ್ಪತಿಶಬ್ದದ ನಿರ್ವಚನವನ್ನು ಮಾಡಿರುವದನ್ನು ನೋಡಿರಿ.

2. ಪ್ರಾಣನು ಆಂಗಿರಸನೆಂಬುದನ್ನು ಬೃ. ಭಾ. ೧-೩-೧೯ (ಭಾ. ಭಾ. ೭೯) ರಲ್ಲಿ ವಿವರಿಸಿರುವದನ್ನು ನೋಡಿ.

3. ಇಲ್ಲಿ ಆಯಾ ಋಷಿಗಳು ಹೀಗೆಂದು ಉಪಾಸನೆಮಾಡಿದರೆಂದು ತಿಳಿಸಿರುವದು ಬರಿಯ ಅರ್ಥವಾದವಲ್ಲ, ಇದು ವಿಧಿಯೇ ಎಂದು ಭಾವ.

## ಬಕನು ಯಜಮಾನರಿಗೆ ಫಲವನ್ನು ಗಾನಮಾಡಿದ್ದು

(ಭಾಷ್ಯ)

೩೨ ನ ಕೇವಲಮ್ ಅಙ್ಗಿರಃಪ್ರಭೃತಯಃ ಉಪಾಸಾಂಚಕ್ರಿರೇ । ತಂ ಹ ಬಕೋ ನಾಮ ದಲ್ಭ್ಯಸ್ಯ[1] ಅಪತ್ಯಂ ದಾಲ್ಭ್ಯಃ ವಿದಾಂಚಕಾರ ಯಥಾ ದರ್ಶಿತಂ ಪ್ರಾಣಂ ವಿಜ್ಞಾತವಾನ್ । ವಿದಿತ್ವಾ ಚ ಸ ಹ ನೈಮಿಶೀಯಾನಾಂ ಸತ್ರಿಣಾಮ್ ಉದ್ಗಾತಾ ಬಭೂವ । ಸ ಚ ಪ್ರಾಣವಿಜ್ಞಾನಸಾಮರ್ಥ್ಯಾತ್ ಏಭ್ಯಃ ನೈಮಿಶೀಯೇಭ್ಯಃ ಕಾಮಾನ್ ಆಗಾಯತಿ ಸ್ಮ ಹ ಆಗೀತವಾನ್ ಕಿಲ ಇತ್ಯರ್ಥಃ ॥

(ಭಾಷ್ಯಾರ್ಥ)

ಅಂಗಿರಸ್ಸೇ ಮೊದಲಾದವರು ಮಾತ್ರವೇ (ಪ್ರಾಣನನ್ನು ಹೀಗೆ) ಉಪಾಸನೆ ಮಾಡಲಿಲ್ಲ[2]. ಅವನನ್ನು ಬಕನೆಂಬ ಹೆಸರಿನ ದಾಲ್ಭ್ಯನು, ದಲ್ಭ್ಯನ ಮಗನು, ಅರಿತುಕೊಂಡನು. ಮೇಲೆ ತಿಳಿಸಿರುವಂತೆ ಪ್ರಾಣನನ್ನು ಉಪಾಸನೆಮಾಡಿ (ಸಾಕ್ಷಾತ್ಕರಿಸಿಕೊಂಡನು. ಹಾಗೆ) ಅರಿತುಕೊಂಡು ಅವನು ನೈಮಿಶೀಯರೆಂಬ ಸತ್ರಿಗಳಿಗೆ ಉದ್ಗಾತೃವಾಗಿದ್ದನು. ಮತ್ತು ಅವನು (ಈ) ಪ್ರಾಣೋಪಾಸನೆಯ ಬಲದಿಂದ ಅವರಿಗೆ ಅಂದರೆ ನೈಮಿಶೀಯರಿಗೆ ಕಾಮಗಳನ್ನು ಗಾನಮಾಡಿ ಕೊಟ್ಟನು,[3] ಹಾಡಿ (ಫಲವನ್ನು ತರಿಸಿ)ಕೊಡುವನಾದನು.

## ಅಂಗಿರಸ್ತ್ವಾದಿಗುಣೋಪಾಸನೆಗೆ ಫಲ

(ಉಪನಿಷತ್ತು)

**ಆಗಾತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನ ಕ್ಷರಮುದ್ಗೀಥಮುಪಾಸ್ತ ಇತ್ಯಧ್ಯಾತ್ಮಮ್　　॥ ೧೪ ॥**

೧೪. ಯಾವನು ಹೀಗೆಂದು ಅರಿತುಕೊಂಡು ಈ ಉದ್ಗೀಥ ವೆಂಬ ಅಕ್ಷರವನ್ನು ಉಪಾಸನೆಮಾಡುವನೋ ಅವನು ಕಾಮಗಳನ್ನು ಆಗಾನಮಾಡುವನಾಗುವನು. ಹೀಗೆ ಅಧ್ಯಾತ್ಮ(ವಾದ ಉಪಾಸನೆ ಮುಗಿಯಿತು).

---

1. 'ದಲ್ಭಸ್ಯ' ಎಂದು ಪಾ॥ ಪಾಠ

2. ಬೇಕಾದವರೂ ಉಪಾಸನೆಮಾಡಿದರೆ ಫಲವುಂಟೆಂಬುದಕ್ಕೆ ಲಿಂಗವಿದು.

3. ಉದ್ಗಾತೃವೇ ಈ ಉಪಾಸನೆಗೆ ಅಧಿಕಾರಿ, ಅವನು ಫಲವನ್ನು ಯಜಮಾನನಿಗೂ ಆಗಾನಮಾಡಬಹುದು ಎಂದು ಅಭಿಪ್ರಾಯ. ಅಂಗಾವಬದ್ಧೋಪಾಸನೆಗಳಿಗೆ ಋತ್ವಿಜರೇ ಅಧಿಕಾರಿಗಳು ಎಂಬ ವಿಷಯಕ್ಕೆ ಸೂ. ಭಾ. ೩-೪-೪೫ರಲ್ಲಿರುವ ಚರ್ಚೆಯನ್ನು ನೋಡಿ.

## ಉಪಾಸಕನಿಗಾಗುವ ಫಲ

(ಭಾಷ್ಯ)

೩೩. ತಥಾ ಅನ್ಯೋಽಪಿ ಉದ್ಗಾತಾ ಆಗಾತಾ ಹ ವೈ ಕಾಮಾನಾಂ ಭವತಿ ಯ ಏತತ್ ಏವಂ[1] ವಿದ್ವಾನ್ ಯಥೋಕ್ತಗುಣಂ ಪ್ರಾಣಮ್ ಅಕ್ಷರಮ್ ಉದ್ಗೀಥಮ್ ಉಪಾಸ್ತೇ, ತಸ್ಯ ಏತದ್ ದೃಷ್ಟಂ ಫಲಮ್ ಉಕ್ತಮ್ । ಪ್ರಾಣಾತ್ಮಭಾವಸ್ತು ಅದೃಷ್ಟಮ್, "ದೇವೋ ಭೂತ್ವಾ ದೇವಾನಪ್ಯೇತಿ" (ಬೃ. ೪-೧-೨. ) ಇತಿ ಶ್ರುತ್ಯನ್ತರಾತ್ ಸಿದ್ಧಮೇವ ಇತ್ಯಭಿಪ್ರಾಯಃ । ಇತಿ ಅಧ್ಯಾತ್ಮಮ್ ಏತತ್ ಆತ್ಮವಿಷಯಮ್ ಉದ್ಗೀಥೋಪಾಸನಮ್ ಇತಿ ಉಕ್ತೋಪಸಂಹಾರಃ ಅಧಿದೈವತೋದ್ಗೀಥೋಪಾಸನೇ ವಕ್ಷ್ಯಮಾಣೇ ಬುದ್ಧಿಸಮಾಧಾನಾರ್ಥಃ ॥

(ಭಾಷ್ಯಾರ್ಥ)

ಹೀಗೆಯೇ ಇನ್ನೊಬ್ಬ ಉದ್ಗಾತೃವಾದರೂ ಕಾಮಗಳ ಆಗಾನವನ್ನು ಮಾಡ (ಬಲ್ಲವ)ನೇ ಆಗುವನು. ಯಾವನು ಹೀಗೆಂದು ಅರಿತುಕೊಂಡು ಮೇಲೆ ಹೇಳಿದ ಗುಣಗಳುಳ್ಳ ಪ್ರಾಣನೆಂದು ಈ ಉದ್ಗೀಥವೆಂಬ ಅಕ್ಷರವನ್ನು[2] ಉಪಾಸನೆಮಾಡುತ್ತಾನೋ ಅವನಿಗೆ ಇದು ದೃಷ್ಟಫಲವು. ಪ್ರಾಣಾತ್ಮಭಾವರೂಪವಾದ ಅದೃಷ್ಟಫಲವಾದರೋ[3] "ದೇವನೇ ಆಗಿ ದೇವತೆಗಳನ್ನು ಸೇರಿಕೊಳ್ಳುವನು" (ಬೃ. ೪-೧-೨ರಿಂದ ೭) ಎಂಬ ಬೇರೊಂದು ಶ್ರುತಿಯಿಂದ ಸಿದ್ಧವೇ ಎಂದು ಅಭಿಪ್ರಾಯ.

ಹೀಗೆ ಅಧ್ಯಾತ್ಮವು, ಇದು ಆತ್ಮವಿಷಯವಾದ[4] ಉದ್ಗೀಥೋಪಾಸನೆ ಎಂದು ( ಇ ದು ವ ರೆ ಗೆ ) ಹೇಳಿದ್ದನ್ನು ಉಪಸಂಹಾರಮಾಡಿರುವದು ಮುಂದೆ ಹೇಳಲಾಗುವ ಅಧಿದೈವತವಾದ ಉದ್ಗೀಥೋಪಾಸನೆಯಲ್ಲಿ ಬುದ್ಧಿಯನ್ನು ನಿಲ್ಲಿಸುವದಕ್ಕಾಗಿ[5].

---

1. ಇಲ್ಲಿ ಏತದೇವಮ್ ಎಂದಿರುವ ಈ ಪಾ॥ ಅ॥ ಪಾಠವೇ ಮೇಲು.

2. ಓಂಕಾರವನ್ನೇ ಪ್ರಾಣದೃಷ್ಟಿಯಿಂದ ಉಪಾಸನೆಮಾಡಬೇಕೆಂಬುದು ಇಲ್ಲಿ ಸ್ಪಷ್ಟವಾಗಿದೆ.

3. ಸತ್ತ ಬಳಿಕ ಪರಲೋಕದಲ್ಲಿ ಆಗುವ ಫಲವು ಎಂದರ್ಥ.

4. ಶರೀರದಲ್ಲಿ ಪ್ರಾಣವಿಷಯವಾದ, ಪ್ರಾಣದೃಷ್ಟಿಯಿಂದ ಚಿಂತಿಸುವ- ಎಂದರ್ಥ.

5. ಮುಂದೆ ಹೇಳಲಿರುವ ಅಧಿದೈವತವಾದ ಆದಿತ್ಯದೃಷ್ಟಿಯ- ಉದ್ಗೀಥೋಪಾಸನೆಯ ಕಡೆಗೆ ಮನಸ್ಸನ್ನು ಎಳೆಯುವದಕ್ಕಾಗಿ 'ಇಲ್ಲಿಗೆ ಅಧ್ಯಾತ್ಮೋಪಾಸನೆ ಮುಗಿಯಿತು' ಎಂದು ಉಪಸಂಹಾರಮಾಡಿರುತ್ತದೆ.

# ಒಂದನೆಯ ಅಧ್ಯಾಯ - ಮೂರನೆಯ ಖಂಡ

( ಉದ್ಗೀಥೋಪಾಸನೆ ಮುಂದುವರಿದದ್ದು )

## ಆದಿತ್ಯದೃಷ್ಟಿಯಿಂದ ಉದ್ಗೀಥೋಪಾಸನೆ

(ಉಪನಿಷತ್ತು)

**ಅಥಾಧಿದೈವತಂ ಯ ಏವಾಸೌ ತಪತಿ ತಮುದ್ಗೀಥಮುಪಾ ಸೀತೋದ್ಯನ್ ವಾ ಏಷ ಪ್ರಜಾಭ್ಯ ಉದ್ಗಾಯತಿ । ಉದ್ಯಗ್ಂ ಸ್ತಮೋ ಭಯಮಪಹನ್ತ್ಯಪಹನ್ತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ ॥ ೧ ॥**

೧. ಇನ್ನು ಅಧಿದೈವತವು. ಅಗೋ, ಆ ತಪಿಸುತ್ತಿರುವನಲ್ಲ, ಅವನೆಂದೇ ಉದ್ಗೀಥವನ್ನು ಉಪಾಸನೆಮಾಡಬೇಕು. ಉದಯಿಸು ವಾಗ ಇವನು ಪ್ರಜೆಗಳಿಗೆ ಉದ್ಗಾನಮಾಡುತ್ತಾನೆ, ಉದಯಿಸು ವಾಗಲೆ ತಮಸ್ಸನ್ನೂ ಭಯವನ್ನೂ ನಾಶಗೊಳಿಸುತ್ತಾನೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ತಮಸ್ಸಿನ ಭಯವನ್ನು ನಾಶಗೊಳಿಸುವವನಾಗುವನು.

### ಆದಿತ್ಯನು ಉದ್ಗೀಥವು

(ಭಾಷ್ಯ)

೩೪. ಅಥ ಅನನ್ತರಮ್ ಅಧಿದೈವತಂ ದೇವತಾವಿಷಯಮ್ ಉದ್ಗೀಥೋ ಪಾಸನಂ ಪ್ರಸ್ತುತಮ್ ಇತ್ಯರ್ಥಃ । ಅನೇಕಧಾ ಉಪಾಸ್ಯತ್ವಾತ್ ಉದ್ಗೀಥಸ್ಯ । ಯ ಏವಾಸೌ ಆದಿತ್ಯಃ ತಪತಿ ತಮ್ ಉದ್ಗೀಥಮ್ ಉಪಾಸೀತ । ಆದಿತ್ಯ ದೃಷ್ಟ್ಯಾ ಉದ್ಗೀಥಮ್ ಉಪಾಸೀತ ಇತ್ಯರ್ಥಃ । 'ತಮ್ ಉದ್ಗೀಥಮ್' ಇತಿ ಉದ್ಗೀಥಶಬ್ದೋಽಕ್ಷರವಾಚೀ ಸನ್ ಕಥಮ್ ಆದಿತ್ಯೇ ವರ್ತತ ಇತಿ? ಉಚ್ಯತೇ । ಉದ್ಯನ್ ಉದ್ಗಚ್ಛನ್ ವಾ ಏಷ ಪ್ರಜಾಭ್ಯಃ ಪ್ರಜಾರ್ಥಮ್ ಉದ್ಗಾಯತಿ ಪ್ರಜಾನಾಮ್ ಅನ್ನೋತ್ಪತ್ತ್ಯರ್ಥಮ್ । ನ ಹಿ ಅನುದ್ಯತಿ ತಸ್ಮಿನ್ ವ್ರೀಹ್ಯಾದೇಃ ಪಕ್ತಿಃ[1] ಸ್ಯಾತ್ । ಅತ ಉದ್ಗಾಯತೀವ ಉದ್ಗಾಯತಿ । ಯಥೈವ ಉದ್ಗಾತಾ ಅನ್ನಾರ್ಥಮ್ । ಅತಃ ಉದ್ಗೀಥಃ ಸವಿತಾ ಇತ್ಯರ್ಥಃ । ಕಿಂ ಚ ಉದ್ಯನ್ ನೈಶಂ ತಮಃ ತಜ್ಜಂ ಚ ಭಯಂ ಪ್ರಾಣಿನಾಮ್ ಅಪಹನ್ತಿ ತಮ್ ಏವಂಗುಣಂ

1. 'ನಿಷ್ಪತ್ತಿಃ' ಎಂಬ ಪಾ|| ಆ|| ಪಾಠಕ್ಕಿಂತ ಇನೇ ವೇಲು.

ಸವಿತಾರಂ ಯೋ ವೇದ ಸಃ ಅಪಹನ್ತಾ ನಾಶಯಿತಾ ಹ ವೈ ಭಯಸ್ಯ ಜನ್ಮ ಮರಣಾದಿಲಕ್ಷಣಸ್ಯ ಆತ್ಮನಃ ತಮಸಶ್ಚ ತತ್ಕಾರಣಸ್ಯ ಅಜ್ಞಾನಲಕ್ಷಣಸ್ಯ ಭವತಿ ॥

(ಭಾಷ್ಯಾರ್ಥ)

ಇನ್ನು (ಅಧ್ಯಾತ್ಮವಾದ) ಬಳಿಕ ಅಧಿದೈವತವು, ದೇವತಾವಿಷಯವಾದ ಉದ್ಗೀಥೋಪಾಸನೆಯು ಪ್ರಾರಂಭವಾಗಿರುತ್ತದೆ ಎಂದರ್ಥ. ಏಕೆಂದರೆ ಉದ್ಗೀಥವು ಅನೇಕಪ್ರಕಾರದಿಂದ ಉಪಾಸನೆಮಾಡತಕ್ಕದ್ದಾಗಿರುತ್ತದೆ[1]. ಅಗೊ, ಆ ಆದಿತ್ಯನು ತಪಿಸುತ್ತಿರುವನಲ್ಲ, ಅವನೆಂದೇ ಉದ್ಗೀಥವನ್ನು ಉಪಾಸನೆಮಾಡಬೇಕು. ಆದಿತ್ಯದೃಷ್ಟಿಯಿಂದ ಉದ್ಗೀಥವನ್ನು ಉಪಾಸನೆಮಾಡಬೇಕು ಎಂದರ್ಥ.

(ಆಕ್ಷೇಪ) .– ತಮ್ ಉದ್ಗೀಥಮ್ (ಅವನೆಂದು ಉದ್ಗೀಥವನ್ನು) ಎಂದು (ಹೇಳಿದೆಯಲ್ಲ), ಉದ್ಗೀಥಶಬ್ದವು ಅಕ್ಷರವಾಚಕವಾಗಿರುತ್ತದೆಯಾಗಿ ಆದಿತ್ಯನಲ್ಲಿ (ಅದಕ್ಕೆ) ಹೇಗೆ ಪ್ರವೃತ್ತಿ[2]?

(ಪರಿಹಾರ) .– ಇದಕ್ಕೆ (ಶ್ರುತಿ) ಹೇಳುತ್ತದೆ : ಉದಯಿಸುವಾಗಲೆ ಮೇಲಕ್ಕೇಳುವಾಗಲೆ ಇವನು ಪ್ರಜೆಗಳಿಗೆ, ಪ್ರಜೆಗಳಿಗೋಸ್ಕರ ಪ್ರಜೆಗಳಿಗೆ ಅನ್ನವುಂಟಾಗುವದಕ್ಕಾಗಿ ಉದ್ಗಾನಮಾಡುತ್ತಾನೆ. ಅವನು ಉದಯಿಸದೆ ಇದ್ದರೆ ಬತ್ತವೇ ಮುಂತಾದವು ಪಕ್ವವಾಗಲಾರವಷ್ಟೆ ? ಆದ್ದರಿಂದ ಉದ್ಗಾನಮಾಡುತ್ತಾನೆ ಎಂದರೆ ಉದ್ಗಾನಮಾಡುವವನಂತೆ (ಉದಯಿಸುತ್ತಾನೆ)[3]. ಉದ್ಗಾತೃವು ಹೇಗೆ ಅನ್ನಕ್ಕಾಗಿ (ಉದ್ಗಾನಮಾಡುತ್ತಾನೋ) ಹಾಗೆಯೇ (ಇವನೂ ಉದ್ಗಾನ ಮಾಡುತ್ತಾನೆ). ಆದ್ದರಿಂದ ಸೂರ್ಯನು ಉದ್ಗೀಥವು ಎಂದರ್ಥ.

ಮತ್ತು ಉದಯಿಸುವಾಗ ರಾತ್ರಿಯ ತಮಸ್ಸನ್ನೂ ಪ್ರಾಣಿಗಳಿಗೆ ಅದರಿಂದಾಗುವ ಭಯವನ್ನೂ ನಾಶಗೊಳಿಸುತ್ತಾನೆ. ಈ ಗುಣವುಳ್ಳ[4] ಸೂರ್ಯನನ್ನು

---

1. ಉದ್ಗೀಥೋಪಾಸನೆಯೇ ಪ್ರಾರಂಭವಾಗಿದ್ದು ಉದ್ಗೀಥವನ್ನು ಬಗೆಬಗೆಯಿಂದ ಉಪಾಸನೆಮಾಡಬೇಕೆಂದು ಈವರೆಗೆ ಹೇಳಿದ್ದಾಗಿದೆ. ಹಿಂದಿನ ಪ್ರಕರಣದಲ್ಲಿ ಆಧ್ಯಾತ್ಮ ವಿಷಯಕವಾದ ಉಪಾಸನೆಯಾಯಿತು ಎಂದು ಅದರ ಉಪಾಸನೆಯನ್ನೇ ಹೇಳಿದೆ; ಆದ್ದರಿಂದ ಈಗ ಪ್ರಕಾರಾಂತರದಿಂದ ಎಂದರೆ ಅಧಿದೈವತವಿಷಯವಾಗಿ ಆದಿತ್ಯದೃಷ್ಟಿಯಿಂದ ಉಪಾಸನೆಯನ್ನು ಹೇಳುವದಕ್ಕೇ ಇಲ್ಲಿ ಅಥಶಬ್ದವನ್ನು ಪ್ರಯೋಗಿಸಿದೆ, ಉಪಾಸ್ಯಾಂತರವನ್ನು ಹೇಳುವದಕ್ಕಲ್ಲ.

2. ಆದಿತ್ಯದೃಷ್ಟಿಯಿಂದ ಉದ್ಗೀಥವನ್ನು ಉಪಾಸನೆಮಾಡುವದಕ್ಕೆ ಆದಿತ್ಯನಲ್ಲಿಯೂ ಉದ್ಗೀಥತ್ವವನ್ನು ಹೇಗಾದರೂ ಸಂಪಾದನಮಾಡಬೇಕಲ್ಲವೆ ?– ಎಂದು ಆಕ್ಷೇಪ.

3 ಉದ್ಗಾತೃವು ಅನ್ನಕ್ಕಾಗಿ ಉದ್ಗಾನಮಾಡುತ್ತಾನಷ್ಟೆ, ಸೂರ್ಯನೂ ಹಾಗೆಯೇ ಅನ್ನಕ್ಕಾಗಿ ಉದಯಿಸುತ್ತಾನೆ. ಉದಯವೇ ಅವನ ಉದ್ಗಾನವು.

4. ತಮಸ್ಸನ್ನೂ ಅದರಿಂದಾದ ಭಯವನ್ನೂ ನಾಶಗೊಳಿಸುವದೆಂಬ ಗುಣವುಳ್ಳ.

ಯಾವನು ಅರಿತುಕೊಂಡಿರುವನೋ[1] ಅವನು ಹುಟ್ಟು ಸಾವು ಮುಂತಾದ ರೂಪದ ಭಯವನ್ನು ಮತ್ತು ಅದಕ್ಕೆ ಕಾರಣವಾದ ತನ್ನ ಅಜ್ಞಾನರೂಪವಾದ ತಮಸ್ಸನ್ನು ನಾಶಗೊಳಿಸುವವನಾಗುತ್ತಾನೆ[2].

# ಪ್ರಾಣಾದಿತ್ಯರಿಗೆ ತತ್ತ್ವತಃ ಅಭೇದ

(ಉಪನಿಷತ್ತು)

**ಸಮಾನ ಉ ಏವಾಯಂ ಚಾಸೌ ಚೋಷ್ಣೋಽಯಮುಷ್ಣೋಽಸೌ ಸ್ವರ ಇತೀಮಮಾಚಕ್ಷತೇ ಸ್ವರ ಇತಿ ಪ್ರತ್ಯಾಸ್ವರ ಇತ್ಯಮುಂ ತಸ್ಮಾದ್ ವಾ ಏತಮಿಮಮಮುಂ ಚೋದ್ಗೀಥಮುಪಾಸೀತ ॥೨**

೨. ಇವನೂ ಅವನೂ ಸಮಾನವೇ. ಇವನು ಉಷ್ಣನು, ಅವನೂ ಉಷ್ಣನೇ. ಇವನನ್ನು ಸ್ವರವೆಂದು ಕರೆಯುವರು ; ಅವನನ್ನು ಸ್ವರವೆಂದೂ ಪ್ರತ್ಯಾಸ್ವರವೆಂದೂ (ಕರೆಯುವರು). ಆದ್ದರಿಂದ ಇವನೆಂದೂ ಅವನೆಂದೂ ಉದ್ಗೀಥವನ್ನು ಉಪಾಸನೆಮಾಡಬೇಕು.

## ಪ್ರಾಣಾದಿತ್ಯರ ಉಪಾಸನೆಯು ಒಂದೇ

(ಭಾಷ್ಯ)

೩೫. ಯದ್ಯಪಿ ಸ್ಥಾನಭೇದಾತ್ ಪ್ರಾಣಾದಿತ್ಯಾ ಭಿನ್ನಾವಿವ ಲಕ್ಷ್ಯೇತೇ ತಥಾಪಿ ನ ಸತತ್ತ್ವಭೇದಸ್ತಯೋಃ । ಕಥಮ್ ? ಸಮಾನ ಉ ಏವ ತುಲ್ಯ ಏವ ಪ್ರಾಣಃ ಸವಿತ್ರಾ ಗುಣತಃ ಸವಿತಾ ಚ ಪ್ರಾಣೇನ । ಯಸ್ಮಾತ್ ಉಷ್ಣೋಽಯಂ ಪ್ರಾಣಃ, ಉಷ್ಣಶ್ಚಾಸೌ ಸವಿತಾ । ಕಿಂ ಚ ಸ್ವರಃ ಇತಿ ಇಮಂ ಪ್ರಾಣಮ್ ಆಚಕ್ಷತೇ ಕಥಯನ್ತಿ ತಥಾ ಸ್ವರ ಇತಿ ಪ್ರತ್ಯಾಸ್ವರಃ ಇತಿ ಚ ಅಮುಂ ಸವಿತಾರಮ್ । ಯಸ್ಮಾತ್ ಪ್ರಾಣಃ ಸ್ವರತ್ಯೇವ ನ ಪುನಃ ಮೃತಃ ಪ್ರತ್ಯಾಗಚ್ಛತಿ । ಸವಿತಾ ತು ಅಸ್ತಮ್ ಇತ್ವಾ ಪುನರಪಿ ಅಹನ್ಯಹನಿ ಪ್ರತ್ಯಾಗಚ್ಛತಿ । ಅತಃ ಪ್ರತ್ಯಾಸ್ವರಃ । ಅಸ್ಮಾತ್ ಗುಣತಃ ನಾಮತಶ್ಚ ಸಮಾನೌ ಇತರೇತರಂ ಪ್ರಾಣಾದಿತ್ಯಾ । ಅತಃ ಸತತ್ತ್ವಾಭೇದಾತ್[3] ಏತಂ ಪ್ರಾಣಮ್ ಇಮಮ್ ಅಮುಂ ಚ ಆದಿತ್ಯಮ್ ಉದ್ಗೀಥಮ್ ಉಪಾಸೀತ ॥

---

1. ಈ ಗುಣದ ಆದಿತ್ಯನೆಂಬ ದೃಷ್ಟಿಯಿಂದ ಉದ್ಗೀಥವನ್ನು ಉಪಾಸನೆ ಮಾಡುವನೋ.

2. ಅವನಿಗೆ ಕ್ರಮಮುಕ್ತಿಯಾಗುವದು ಎಂದರ್ಥ.

3. ತತ್ತ್ವಾಭೇದಾತ್ ಎಂಬ ಆ॥ ವಾ॥ ಪಾಠದಲ್ಲಿ ಸ ಬಿಟ್ಟುಹೋಗಿದೆ

(ಭಾಷ್ಯಾರ್ಥ)

ಸ್ಥಾನಗಳು ಬೇರೆ(ಬೇರೆ)ಯಾಗಿರುವದರಿಂದ ಪ್ರಾಣಾದಿತ್ಯರು ಬೇರೆಬೇರೆ ಎಂದು ಕಂಡುಬರುತ್ತಾರೆ, ನಿಜ ಆದರೂ ಅದು ಅವರಿಬ್ಬರಿಗೂ (ಇರುವ) ತತ್ತ್ವದ ಭೇದವಿಲ್ಲ. ಹೇಗೆಂದರೆ, ಸಮಾನವೂ[1] ಪ್ರಾಣನು ಸೂರ್ಯನಿಗೂ ಸೂರ್ಯನು ಪ್ರಾಣನಿಗೂ ಗುಣದಿಂದ[2] ಸಮಾನವೂ (ಆಗಿರುತ್ತಾರೆ). ಹೇಗೆಂದರೆ ಈ ಪ್ರಾಣನು ಉಷ್ಣವು, ಆ ಸೂರ್ಯನೂ ಉಷ್ಣವೇ. ಮತ್ತು ಈ ಪ್ರಾಣನನ್ನು ಸ್ವರವೆಂದು ಕರೆಯುವರು, (ಹಾಗೆಂದು) ಹೆಸರಿಸುತ್ತಾರೆ ; ಆ ಸೂರ್ಯನನ್ನು ಸ್ವರವೆಂದೂ ಪ್ರತ್ಯಾಸ್ವರವೆಂದೂ (ಕರೆಯುವರು) , ಏಕೆಂದರೆ ಪ್ರಾಣನು (ಸ್ವರತಿ) ಹೋಗುತ್ತಾನೆಯೇ ಹೊರತು ಮತ್ತೆ ಸತ್ತಬಳಿಕ ಹಾಸಕ್ಕೆ ಬರುವದಿಲ್ಲ, ಸೂರ್ಯನೋ ಎಂದರೆ ಅಸ್ತಮಯವಾದ ಬಳಿಕ ದಿನದಿನವೂ ಮತ್ತೂ ಹಿಂದಕ್ಕೆ ಬರುತ್ತಾನೆ. ಆದ್ದರಿಂದ (ಅವನು) ಪ್ರತ್ಯಾಸ್ವರನು, ಈ ಗುಣದಿಂದಲೂ ನಾಮದಿಂದಲೂ ಪ್ರಾಣಾದಿತ್ಯರು ಒಬ್ಬರಿಗೊಬ್ಬರು ಸಮಾನರು, ಆದ್ದರಿಂದ ತತ್ತ್ವವು[3] ಅಭಿನ್ನವಾಗಿರುವದರಿಂದ ಈ ಪ್ರಾಣನೆಂದೂ ಆ ಆದಿತ್ಯನೆಂದೂ ಉದ್ಗೀಥವನ್ನು ಉಪಾಸನೆಮಾಡಬೇಕು.

## ವ್ಯಾನದೃಷ್ಟಿಯಿಂದ ಉದ್ಗೀಥೋಪಾಸನೆ

(ಉಪನಿಷತ್ತು)

**ಅಥ ಖಲು ವ್ಯಾನಮೇವೋದ್ಗೀಥಮುಪಾಸೀತ ಯದ್ವೈ ಪ್ರಾಣಿತಿ ಸ ಪ್ರಾಣೋ ಯದಪಾನಿತಿ ಸೋಽಪಾನಃ । ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನೋ ಯೋ ವ್ಯಾನಃ ಸಾ ವಾಕ್ । ತಸ್ಮಾದಪ್ರಾಣನ್ನನಪಾನನ್ ವಾಚಮಭಿವ್ಯಾಹರತಿ ॥೩॥**

೩. ಇನ್ನು ವ್ಯಾನವೆಂದು ಉದ್ಗೀಥವನ್ನು ಉಪಾಸನೆಮಾಡಬೇಕು. ಪ್ರಾಣನವನ್ನು ಮಾಡುತ್ತಾನಲ್ಲ, ಅದೇ ಪ್ರಾಣವು ; ಅಪಾನನವನ್ನು ಮಾಡುತ್ತಾನಲ್ಲ, ಅದೇ ಅಪಾನವು. ಇನ್ನು ಪ್ರಾಣಾಪಾನಗಳ ಸಂಧಿಯಿದೆಯಷ್ಟೆ, ಅದೇ ವ್ಯಾನವು. ವ್ಯಾನವೆಂಬುದಿದೆಯಲ್ಲ, ಅದು

---

1. ಉಶಬ್ದವು ಅಪಿ ಎಂಬರ್ಥದ್ದು ; ಸಮಾನವೂ ಎಂದದ್ದರಿಂದ ಸ್ಥಾನಭೇದದಿಂದ ಭೇದವೂ ಇದೆ ಎಂದಂತಾಯಿತು.

2. ಗುಣತಃ ಎಂದಾದಮೇಲೆ ನಾಮತಃ ಎಂಬುದೂ ಭಾಷ್ಯದಲ್ಲಿದ್ದು ಕೈಬಿಟ್ಟು ಹೋಗಿದೆಯೋ ವಿಚಾರಣೀಯವಾಗಿದೆ. ಗುಣತಃ ಸಾಮ್ಯಂ ಸಾಧಯತಿ, ನಾಮತಃ ಸಾಮ್ಯಂ ಸಂಗಿರತೇ — ಎಂದು ಆ॥ ಟೀ॥

3. ಸತತ್ತ್ವ, ತತ್ತ್ವ — ಇವೆರಡು ಶಬ್ದಗಳಿಗೂ ಒಂದೇ ಅರ್ಥ.

ವಾಕ್ಕು; ಆದ್ದರಿಂದ ಪ್ರಾಣನವನ್ನು ಮಾಡದೆ ಅಪಾನನವನ್ನು ಮಾಡದೆ ವಾಕ್ಕನ್ನು ಹೇಳುತ್ತಾನೆ.

## ವ್ಯಾನಸ್ವರೂಪನಿರೂಪಣೆ

(ಭಾಷ್ಯ)

೩೬. ಅಥ ಖಲು ಇತಿ ಪ್ರಕಾರಾನ್ತರೇಣ ಉಪಾಸನಮ್ ಉದ್ಗೀಥಸ್ಯೋಚ್ಯತೇ । ವ್ಯಾನಮೇವ ವಕ್ಷ್ಯಮಾಣಲಕ್ಷಣಂ ಪ್ರಾಣಸ್ಯೈವ ವೃತ್ತಿವಿಶೇಷಮ್ ಉದ್ಗೀಥಮ್ ಉಪಾಸೀತ । ಅಧುನಾ ತತ್ಸತತ್ತ್ವಂ[1] ನಿರೂಪ್ಯತೇ । ಯದ್ ವೈ ಪುರುಷಃ ಪ್ರಾಣಿತಿ ಮುಖನಾಸಿಕಾಭ್ಯಾಂ ವಾಯುಂ ಬಹಿರ್ನಿಃಸಾರಯತಿ ಸ ಪ್ರಾಣಾಖ್ಯೋ ವಾಯೋರ್ವೃತ್ತಿವಿಶೇಷಃ । ಯದಪಾನಿತಿ ಅಪಶ್ವಸಿತಿ ತಾಭ್ಯಾಮೇವ ಅನ್ತರಾಕರ್ಷತಿ ವಾಯುಮ್, ಸೋಽಪಾನಃ ಅಪಾನಾಖ್ಯಾ ವೃತ್ತಿಃ। ತತಃ ಕಿಮಿತಿ ? ಉಚ್ಯತೇ । ಅಥ ಯ ಉಕ್ತಲಕ್ಷಣಯೋಃ ಪ್ರಾಣಾಪಾನಯೋಃ ಸಂಧಿಃ ತಯೋರನ್ತರಾ ವೃತ್ತಿವಿಶೇಷಃ ಸ ವ್ಯಾನಃ । ಯಃ ಸಾಂಖ್ಯಾದಿಶಾಸ್ತ್ರಪ್ರಸಿದ್ಧಃ ಶ್ರುತ್ಯಾ ವಿಶೇಷನಿರೂಪಣಾತ್ ನಾಸೌ ವ್ಯಾನ ಇತ್ಯಭಿಪ್ರಾಯಃ । ಕಸ್ಮಾತ್ ಪುನಃ ಪ್ರಾಣಾಪಾನೌ ಹಿತ್ವಾ ಮಹತಾ ಆಯಾಸೇನ ವ್ಯಾನಸ್ಯೈವ ಉಪಾಸನಮುಚ್ಯತೇ ? ವೀರ್ಯವತ್ಕರ್ಮಹೇತುತ್ವಾತ್ । ಕಥಂ ವೀರ್ಯವತ್ಕರ್ಮಹೇತುತ್ವಮಿತಿ ? ಆಹ । ಯೋ ವ್ಯಾನಃ ಸಾ ವಾಕ್ । ವ್ಯಾನಕಾರ್ಯತ್ವಾದ್ ವಾಚಃ । ಯಸ್ಮಾದ್ ವ್ಯಾನನಿರ್ವರ್ತ್ಯಾ ವಾಕ್ ತಸ್ಮಾತ್ ಅಪ್ರಾಣನ್ ಅನಪಾನನ್ ಪ್ರಾಣಾಪಾನವ್ಯಾಪಾರೌ ಅಕುರ್ವನ್ ವಾಚಮ್ ಅಭಿವ್ಯಾಹರತಿ ಉಚ್ಚಾರಯತಿ ಲೋಕಃ ॥

(ಭಾಷ್ಯಾರ್ಥ)

'ಅಥ ಖಲು' ಎಂದು ಮತ್ತೊಂದು ಪ್ರಕಾರದಿಂದ ಉದ್ಗೀಥದ ಉಪಾಸನೆಯನ್ನು (ಮಾಡಬೇಕೆಂದು) ಹೇಳಿರುತ್ತದೆ. ವ್ಯಾನವೆಂದು, ಮುಂದೆ ಹೇಳುವ ಸ್ವರೂಪದ (ಮುಖ್ಯ)ಪ್ರಾಣದ್ದೇ (ಆದ) ವೃತ್ತಿವಿಶೇಷವೆಂದು ಉದ್ಗೀಥವನ್ನು ಉಪಾಸನೆಮಾಡಬೇಕು. ಈಗ ಅದರ ತತ್ತ್ವವನ್ನು (ಶ್ರುತಿ) ಹೇಳುತ್ತದೆ. ಪುರುಷನು ಪ್ರಾಣನವನ್ನು ಮಾಡುತ್ತಾನಲ್ಲ, ಮುಖನಾಸಿಕಗಳಿಂದ ವಾಯುವನ್ನು ಹೊರಕ್ಕೆ ಬಿಡುತ್ತಾನಲ್ಲ, ಅದು ವಾಯುವಿನ **ಪ್ರಾಣ**ವೆಂಬ ವೃತ್ತಿವಿಶೇಷವು ; ಇನ್ನು ಅಪಾನನವನ್ನು ಮಾಡುತ್ತಾನಲ್ಲ, ಹಿಂದಕ್ಕೆ ಉಸಿರೆಳೆದುಕೊಳ್ಳುತ್ತಾನಲ್ಲ, ಆ (ಎರಡರ) ಮೂಲಕವೇ ವಾಯುವನ್ನು ಒಳಕ್ಕೆಳೆದುಕೊಳ್ಳುತ್ತಾನಲ್ಲ, ಅದು

1. 'ತಸ್ಯ ತತ್ತ್ವಮ್' ಎಂಬ ಪಾಠಾಂತರವೇನೂ ಅವಶ್ಯವಿಲ್ಲ; ಆಪ. ಯಾರೋ ಲೇಖಕರು ಮಾರ್ಪಡಿಸಿಕೊಂಡ ಪಾಠವಿರಬಹುದೆಂತ ಕಾಣುತ್ತದೆ.

ಅಪಾನವು, **ಅಪಾನ**ವೆಂಬ ವೃತ್ತಿಯು. ಇದರಿಂದೇನು[1]? ಎಂದರೆ (ಶ್ರುತಿ) ಹೇಳುತ್ತದೆ. ಇನ್ನು ಮೇಲೆ ಹೇಳಿದ ಸ್ವರೂಪದ ಪ್ರಾಣಾಪಾನಗಳ ನಡುವೆಯಿದೆಯಲ್ಲ, ಅವುಗಳ ನಡುವಿನ ವೃತ್ತಿವಿಶೇಷವಿದೆಯಲ್ಲ, ಅದು ವ್ಯಾನವು. **ಸಾಂಖ್ಯರೇ ಮೊದಲಾದವರ ಶಾಸ್ತ್ರದಲ್ಲಿ**[2] ಪ್ರಸಿದ್ಧವಾಗಿರುತ್ತದೆಯಲ್ಲ, ಅದು– ಶ್ರುತಿಯಲ್ಲಿ (ಈ) ವಿಶೇಷವನ್ನು ತಿಳಿಸಿರುವದರಿಂದ– ವ್ಯಾನವಲ್ಲ ಎಂದು ಅಭಿಪ್ರಾಯ.

(ಪ್ರಶ್ನೆ) :– ಹಾಗಾದರೆ ಪ್ರಾಣಾಪಾನ(ವೃತ್ತಿ)ಗಳನ್ನು ಬಿಟ್ಟು (ಇಷ್ಟೊಂದು) ಹೆಚ್ಚಿನ ಆಯಾಸದಿಂದ ವ್ಯಾನದ ಉಪಾಸನೆಯನ್ನೇ ಹೇಳಿರುವದೇಕೆ[3] ?

(ಉತ್ತರ).– ಏಕೆಂದರೆ (ಅದು) ವೀರ್ಯವತ್ಕರ್ಮಕ್ಕೆ ಕಾರಣವಾಗಿರುತ್ತದೆ. (ಅದು) ವೀರ್ಯವತ್ಕರ್ಮಕ್ಕೆ ಕಾರಣವೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ. ವ್ಯಾನವೆಂಬುದಿದೆಯಲ್ಲ, ಅದೇ ವಾಕ್ಕು, ಏಕೆಂದರೆ ವಾಕ್ಕು ವ್ಯಾನದಿಂದಲೇ ಆಗುತ್ತದೆ ವಾಕ್ಕು ವ್ಯಾನದಿಂದಲೇ ಆಗುವದಲ್ಲ, ಆದ್ದರಿಂದಲೇ ಪ್ರಾಣನವನ್ನು ಮಾಡದೆ, ಅಪಾನನವನ್ನು ಮಾಡದೆ ಪ್ರಾಣಾಪಾನವ್ಯಾಪಾರಗಳನ್ನು ಮಾಡದೆಯೇ[4] ಮನುಷ್ಯನು ವಾಕ್ಕನ್ನು ಹೇಳುತ್ತಾನೆ, ನುಡಿಯುತ್ತಾನೆ.

(ಉಪನಿಷತ್ತು)

**ಯಾ ವಾಕ್ ಸರ್ಕ್ತಸ್ಮಾದಪ್ರಾಣನ್ನನಪಾನನ್ನೃಚಮಭಿವ್ಯಾಹರತಿ ಯರ್ಕ್ತತ್ ಸಾಮ ತಸ್ಮಾದಪ್ರಾಣನ್ನನಪಾನನ್ ಸಾಮ ಗಾಯತಿ ಯತ್ ಸಾಮ ಸ ಉದ್ಗೀಥಸ್ತಸ್ಮಾದಪ್ರಾಣನ್ನನಪಾನನ್ನುದ್ಗಾಯತಿ ॥ ೪ ॥**

೪. ವಾಕ್ಕೆಂಬುದಿದೆಯಲ್ಲ, ಅದು ಋಕ್ಕು ; ಆದ್ದರಿಂದ ಪ್ರಾಣನಮಾಡದೆ ಅಪಾನನಮಾಡದೆ ಋಕ್ಕನ್ನು ಹೇಳುತ್ತಾನೆ. ಋಕ್ಕೆಂಬುದಿದೆಯಲ್ಲ, ಅದೇ ಸಾಮವು ; ಆದ್ದರಿಂದ ಪ್ರಾಣನ

---

1. ಪ್ರಾಣಾಪಾನಗಳೇನೂ ಪ್ರಕೃತವಲ್ಲವಷ್ಟೆ ; ಅವುಗಳ ತತ್ತ್ವನಿರೂಪಣದಿಂದ ಪ್ರಕೃತವಾದ ವ್ಯಾನಕ್ಕೇನು ಬಂತು ?– ಎಂದು ಆಕ್ಷೇಪ.

2. ಸಾಂಖ್ಯರು, ಯೋಗಿಗಳು– ಮೊದಲಾದವರು ಸಂಧಿ, ಸ್ಕಂಧ, ಮರ್ಮ ಪ್ರದೇಶಗಳು– ಇವುಗಳಲ್ಲಿರುವ ವೃತ್ತಿಯೇ ವ್ಯಾನವು ಎಂದು ಹೇಳುತ್ತಾರಷ್ಟೆ, ಅದನ್ನು ಇಲ್ಲಿ ತಿರಸ್ಕರಿಸಿದೆ. ಆ॥ ಟೀ॥

3 ಪ್ರಾಣಾಪಾನಗಳೂ ಪ್ರಾಣವೃತ್ತಿಗಳೇ ಆಗಿರುವಲ್ಲಿ ಅವುಗಳನ್ನು ಬಿಟ್ಟು ವ್ಯಾನದವರೆಗೆ ಹೋಗಿ ಅದರ ಉಪಾಸನೆಯನ್ನು ವಿಧಿಸುವ ಆಯಾಸವನ್ನೇಕೆ ಶ್ರುತಿ ತೆಗೆದುಕೊಂಡಿತು ?

4. ಉಸಿರುಕಟ್ಟಿಯೇ.

ಮಾಡದೆ ಅಪಾನನಮಾಡದೆ ಸಾಮವನ್ನು ಗಾನಮಾಡುತ್ತಾನೆ. ಸಾಮವೆಂಬುದಿದೆಯಲ್ಲ, ಅದೇ ಉದ್ಗೀಥವು ; ಆದ್ದರಿಂದ ಪ್ರಾಣನ ಮಾಡದೆ ಅಪಾನನಮಾಡದೆ ಉದ್ಗಾನಮಾಡುತ್ತಾನೆ.

## ಉದ್ಗೀಥವು ವ್ಯಾನದಿಂದಾಗುತ್ತದೆ

(ಭಾಷ್ಯ)

೩೭. ತಥಾ ವಾಗ್ವಿಶೇಷಾಮ್ ಋಚಮ್, ಋಕ್ಸಂಸ್ಥಂ ಚ ಸಾಮ ಸಾಮಾವಯವಂ ಚ ಉದ್ಗೀಥಮ್ ಅಪ್ರಾಣನ್, ಅನಪಾನನ್ ವ್ಯಾನೇನೈವ ನಿರ್ವರ್ತಯತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆಯೇ ವಾಗ್ವಿಶೇಷವಾದ ಋಕ್ಕನ್ನೂ, ಋಕ್ಕಿನಲ್ಲಿ ನಿಂತಿರುವ ಸಾಮ ವನ್ನೂ ಸಾಮಾವಯವಾದ ಉದ್ಗೀಥವನ್ನೂ ಪ್ರಾಣನಮಾಡದೆ ಅಪಾನನಮಾಡದೆ ವ್ಯಾನದಿಂದಲೇ ಉಂಟುಮಾಡುತ್ತಾನೆ ಎಂದು ಅಭಿಪ್ರಾಯವು.

(ಉಪನಿಷತ್ತು)

**ಅತೋ ಯಾನ್ಯನ್ಯಾನಿ ವೀರ್ಯವನ್ತಿ ಕರ್ಮಾಣಿ ಯಥಾಽಗ್ನೇ ರ್ಮನ್ಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನ ಮಪ್ರಾಣನ್ನನಪಾನಂಸ್ತಾನಿ ಕರೋತ್ಯೇತಸ್ಯ ಹೇತೋರ್ವ್ಯಾನ ಮೇವೋದ್ಗೀಥಮುಪಾಸೀತ　　॥ ೫ ॥**

೫. ಇದಕ್ಕಿಂತಲೂ ಬೇರೆಯಾದ ವೀರ್ಯವಂತವಾದ ಕರ್ಮ ಗಳಿರುವವಲ್ಲ- ಉದಾಹರಣೆಗೆ ಅಗ್ನಿಯನ್ನು ಕಡೆದು ತೆಗೆಯುವದು, ಆಜಿಯನ್ನು ಓಡಿ (ಮುಟ್ಟುವದು), ಗಟ್ಟಿಯಾದ ಬಿಲ್ಲನ್ನು ಬಗ್ಗಿಸು ವದು- ಅವುಗಳನ್ನೂ ಪ್ರಾಣನಮಾಡದೆ ಅಪಾನನಮಾಡದೆ ಮಾಡು ತ್ತಾನೆ. ಈ ಹೇತುವಿನಿಂದ ವ್ಯಾನವೆಂದೇ ಉದ್ಗೀಥವನ್ನು ಉಪಾಸನೆ ಮಾಡಬೇಕು.

## ವ್ಯಾನದೃಷ್ಟಿಯ ಉಪಾಸನೆಯ ಉಪಸಂಹಾರ

(ಭಾಷ್ಯ)

೩೮. ನ ಕೇವಲಂ ವಾಗಾದ್ಯಭಿವ್ಯಾಹರಣಮೇವ ಅತೋಽಸ್ಮಾತ್ ಅನ್ಯಾನ್ಯಪಿ ಯಾನಿ ವೀರ್ಯವನ್ತಿ ಕರ್ಮಾಣಿ ಪ್ರಯತ್ನಾಧಿಕ್ಯನಿರ್ವರ್ತ್ಯಾನಿ

ಯಥಾ ಅಗ್ನೇರ್ಮನ್ಥನಮ್, ಆಜೇರ್ಮರ್ಯಾದಾಯಾಃ ಸರಣಂ ಧಾವನಮ್, ದೃಢಸ್ಯ ಧನುಷಃ ಆಯಮನಮ್ ಆಕರ್ಷಣಮ್, ಅಪ್ರಾಣನ್ ಅನಪಾನನ್ ತಾನಿ ಕರೋತಿ । ಅತೋ ವಿಶಿಷ್ಟೋ ವ್ಯಾನಃ ಪ್ರಾಣಾದಿವೃತ್ತಿಭ್ಯಃ । ವಿಶಿಷ್ಟಸ್ಯ ಉಪಾಸನಂ ಜ್ಯಾಯಃ । ಫಲವತ್ತ್ವಾತ್ ರಾಜೋಪಾಸನವತ್ । ಏತಸ್ಯ ಹೇತೋಃ ಏತಸ್ಮಾತ್ ಕಾರಣಾತ್ ವ್ಯಾನಮೇವ ಉದ್ಗೀಥಮ್ ಉಪಾಸೀತ, ನಾನ್ಯತ್ ವೃತ್ತ್ಯನ್ತರಮ್ । ಕರ್ಮ ವೀರ್ಯವತ್ತರತ್ವಂ ಫಲಮ್ ॥

(ಭಾಷ್ಯಾರ್ಥ)

ವಾಗಾದಿಗಳನ್ನು ನುಡಿಯುವದು ಮಾತ್ರವಲ್ಲ, ಇದಕ್ಕಿಂತಲೂ ಈ (ವಾಗಾದಿಗಳ ಉಚ್ಚಾರಣೆ)ಗಿಂತಲೂ ಬೇರೆಯಾಗಿ ವೀರ್ಯವಂತವಾದ ಹೆಚ್ಚಿನ ಪ್ರಯತ್ನದಿಂದ ಮಾಡಬೇಕಾಗಿರುವ ಕರ್ಮಗಳಿರುವವಲ್ಲ- ಉದಾಹರಣೆಗೆ ಅಗ್ನಿಯನ್ನು ಕಡೆದು (ತೆಗೆಯು)ವದು, (ಓಟದ ಜೂಜಿನಲ್ಲಿ) ಆಜಿಯನ್ನು ಎಂದರೆ ಎಲ್ಲೆಯನ್ನು ಓಡಿ (ಮುಟ್ಟುವದು, ಅದನ್ನು ಸೇರುವವರೆಗೂ) ಧಾವಿಸುವದು, ಗಟ್ಟಿಯಾದ ಬಿಲ್ಲನ್ನು ಬಗ್ಗಿಸುವದು, ಸೆಳೆದು (ಕೂಡಿಸುವದು)-ಅವುಗಳನ್ನೂ ಪ್ರಾಣನಮಾಡದೆ ಅಪಾನನಮಾಡದೆ ಮಾಡುತ್ತಾನೆ ಆದ್ದರಿಂದ ಪ್ರಾಣಾದಿವೃತ್ತಿಗಳಿಗಿಂತಲೂ ವ್ಯಾನವು ಹೆಚ್ಚಿನದು. ಹೆಚ್ಚಿನ (ವಸ್ತುವನ್ನು) ಉಪಾಸನೆಮಾಡುವದೇ ಮೇಲು, ಏಕೆಂದರೆ ರಾಜೋಪಾಸನೆಯಂತೆ (ಅದು) ಫಲಪ್ರದವಾಗಿರುತ್ತದೆ.

ಈ ಹೇತುವಿನಿಂದ ಈ ಕಾರಣದಿಂದ ವ್ಯಾನವೆಂದೇ ಉದ್ಗೀಥವನ್ನು ಉಪಾಸನೆಮಾಡಬೇಕೇ ಹೊರತು ಮತ್ತೊಂದು ವೃತ್ತಿಯೆಂದು (ಉಪಾಸನೆಮಾಡ) ಬಾರದು. (ಇದಕ್ಕೆ) ಕರ್ಮವು ವೀರ್ಯವತ್ತರವಾಗಿರುವದೇ ಫಲವು

## ಉದ್ಗೀಥಾಕ್ಷರಗಳ ಉಪಾಸನೆ

(ಉಪನಿಷತ್ತು)

**ಅಥ ಖಲೂದ್ಗೀಥಾಕ್ಷರಾಣ್ಯುಪಾಸೀತೋದ್ಗೀಥ ಇತಿ ಪ್ರಾಣ ಏವೋತ್ ಪ್ರಾಣೇನ ಹ್ಯುತ್ತಿಷ್ಠತಿ ವಾಗ್ಗೀರ್ವಾಚೋ ಹ ಗಿರ ಇತ್ಯಾಚಕ್ಷತೇಽನ್ನಂ ಥಮನ್ನೇ ಹೀದಗ್ಂ ಸರ್ವಗ್ಂ ಸ್ಥಿತಮ್॥೬**

೬. ಇನ್ನು ಉದ್ಗೀಥ ಎಂಬ ಉದ್ಗೀಥಾಕ್ಷರಗಳನ್ನು ಉಪಾಸನೆಮಾಡಬೇಕು. ಪ್ರಾಣವೇ ಉತ್ ; ಏಕೆಂದರೆ ಪ್ರಾಣದಿಂದಲೇ ಮೇಲಕ್ಕೇಳುತ್ತಾನೆ, ವಾಕ್ಕು ಗೀ ; ವಾಕ್ಕುಗಳನ್ನು ಗಿರಃ ಎನ್ನುತ್ತಾರಲ್ಲವೆ ? ಅನ್ನವೇ ಥ, ಏಕೆಂದರೆ ಅನ್ನದಲ್ಲಿಯೇ ಇದೆಲ್ಲವೂ ಸ್ಥಿತವಾಗಿರುತ್ತದೆ.

## ಪ್ರಾಣಾದಿಗಳಿಂದು ಅಕ್ಷರಗಳ ಉಪಾಸನೆ

(ಭಾಷ್ಯ)

೪೯. ಅಥ ಅಧುನಾ ಖಲು ಉದ್ಗೀಥಾಕ್ಷರಾಣಿ ಉಪಾಸೀತ। ಭಕ್ತ್ಯಕ್ಷರಾಣಿ ಮಾ ಭೂವನ್ ಇತ್ಯತೋ ವಿಶಿನಷ್ಟಿ ಉದ್ ಗೀ ಥ ಇತಿ । ಉದ್ಗೀಥನಾಮಾಕ್ಷರಾಣಿ ಇತ್ಯರ್ಥಃ। ನಾಮಾಕ್ಷರೋಪಾಸನೇಽಪಿ ನಾಮವತ ಏವ ಉಪಾಸನಂ ಕೃತಂ ಭವೇತ್ ಅಮುಕಮಿಶ್ರಾ ಇತಿ ಯದ್ವತ್। ಪ್ರಾಣ ಏವ ಉತ್। ಉತ್ ಇತ್ಯಸ್ಮಿನ್ ಅಕ್ಷರೇ ಪ್ರಾಣದೃಷ್ಟಿಃ। ಕಥಂ ಪ್ರಾಣಸ್ಯ ಉತ್ತ್ವಮ್ ಇತಿ ? ಆಹ। ಪ್ರಾಣೇನ ಹಿ ಉತ್ತಿಷ್ಠತಿ ಸರ್ವಃ। ಅಪ್ರಾಣಸ್ಯ ಅವಸಾದದರ್ಶನಾತ್। ಅತೋಽಸ್ತಿ ಉದಃ ಪ್ರಾಣಸ್ಯ ಚ ಸಾಮಾನ್ಯಮ್। ವಾಕ್ ಗೀಃ। ವಾಚೋ ಹ ಗಿರಃ ಇತ್ಯಾಚಕ್ಷತೇ ಶಿಷ್ಟಾಃ। ತಥಾ ಅನ್ನಂ ಥಮ್। ಅನ್ನೇ ಹಿ ಇದಂ ಸರ್ವಂ ಸ್ಥಿತಮ್। ಅತೋಽಸ್ತಿ ಅನ್ನಸ್ಯ ಥಾಕ್ಷರಸ್ಯ ಚ ಸಾಮಾನ್ಯಮ್॥

(ಭಾಷ್ಯಾರ್ಥ)

ಇನ್ನು ಈಗ ಉದ್ಗೀಥಾಕ್ಷರಗಳನ್ನು ಉಪಾಸನೆಮಾಡಬೇಕು. (ಸಾಮ) ಭಕ್ತಿಯ ಅಕ್ಷರಗಳೆಂದಾಗಬಾರದು ಎಂದು 'ಉದ್ ಗೀ ಥ ಎಂಬ' ಎಂಬ ವಿಶೇಷಣವನ್ನು ಕೊಟ್ಟಿರುತ್ತದೆ[1]. ಉದ್ಗೀಥನಾಮದ ಅಕ್ಷರಗಳನ್ನು (ಉಪಾಸನೆ ಮಾಡಬೇಕು) ಎಂದರ್ಥ. ನಾಮಾಕ್ಷರೋಪಾಸನೆಗಳನ್ನು ಉಪಾಸನೆಮಾಡಿದರೂ ಇಂಥ ಮಿಶ್ರರು ಎಂದರೆ ಹೇಗೋ ಹಾಗೆ[2] ನಾಮವಂತ(ವಸ್ತುವಿನ) ಉಪಾಸನೆಯನ್ನೇ ಮಾಡಿದಂತೆ ಆಗುವದು.

ಪ್ರಾಣವೇ ಉತ್; ಉತ್ ಎಂಬೀ ಅಕ್ಷರದಲ್ಲಿ ಪ್ರಾಣದೃಷ್ಟಿ(ಯನ್ನು ಮಾಡಬೇಕು ಎಂದರ್ಥ). ಪ್ರಾಣವು ಉತ್ ಎಂಬುದು ಹೇಗೆ[3]? ಎಂದರೆ ಶ್ರುತಿ ಹೇಳುತ್ತದೆ. ಪ್ರಾಣದಿಂದಲೇ ಅಲ್ಲವೆ, ಪ್ರತಿಯೊಬ್ಬನೂ ಮೇಲಕ್ಕೇಳುತ್ತಾನೆ (ಉತ್ತಿಷ್ಠತಿ) ? ಏಕೆಂದರೆ ಪ್ರಾಣವಿಲ್ಲದವನು ಕುಸಿದುಬೀಳುವದು ಕಂಡುಬಂದಿದೆ. ಆದ್ದರಿಂದ ಉತ್ (ಎಂಬ ಅಕ್ಷರ)ಕ್ಕೂ ಪ್ರಾಣಕ್ಕೂ ಹೋಲಿಕೆಯಿದೆ. ವಾಕ್ಕೇ ಗೀ. ವಾಕ್ಕುಗಳನ್ನು 'ಗಿರಃ' ಎಂದು ಶಿಷ್ಟರು ಕರೆಯುತ್ತಾರಲ್ಲವೆ ?

---

1. ಉತ್ ಗೀ ಥ ಎಂಬೀ ಅಕ್ಷರಗಳನ್ನೇ ಉಪಾಸನೆಮಾಡಬೇಕು, ಉದ್ಗಾತೃವು ಹಾಡುವ ಉದ್ಗೀಥವೆಂಬ ಸಾಮಭಕ್ತಿಯ ಅಕ್ಷರಗಳನ್ನಲ್ಲ ಎಂಬಿದು ಶ್ರುತಿಯ ಅಭಿಪ್ರಾಯ.

2. ಕೃಷ್ಣಮಿಶ್ರ, ವಾಚಸ್ಪತಿಮಿಶ್ರ -ಎಂಬಂತೆ ಗೌರವಾರ್ಥವಲ್ಲಿ ಆಯಾ ಹೆಸರಿಗೆ ಮಿಶ್ರಶಬ್ದವನ್ನು ಸೇರಿಸುತ್ತಾರೆ. ಹಾಗೆಯೇ ಇಲ್ಲಿ ಉತ್, ಗೀ -ಮುಂತಾದ ಅಕ್ಷರಗಳ ಉಪಾಸನೆಯಿಂದಲೂ ಉದ್ಗೀಥದ ಉಪಾಸನೆಯೇ ಆಗುತ್ತದೆ.

3. ಯಾವ ಹೋಲಿಕೆಯಿರುವದರಿಂದ ಉತ್ ಎಂಬಕ್ಷರವನ್ನು ಪ್ರಾಣದೃಷ್ಟಿಯಿಂದ ಉಪಾಸನೆಮಾಡಬೇಕು ?

ಹೀಗೆಯೇ ಅನ್ನವು ಥ ; ಏಕೆಂದರೆ ಇದೆಲ್ಲವೂ ಅನ್ನದಲ್ಲಿ ಸ್ಥಿತವಾಗಿ (ನಿಂತಿರು) ತ್ತದೆ[1]. ಆದ್ದರಿಂದ ಅನ್ನಕ್ಕೂ ಥ ಎಂಬಕ್ಷರಕ್ಕೂ ಹೋಲಿಕೆಯಿದೆ.

## ಉದ್ಗೀಥಾಕ್ಷರೋಪಾಸನೆಯ ಫಲ

(ಉಪನಿಷತ್ತು)

**ದ್ಯೌರೇವೋದನ್ತರಿಕ್ಷಂ ಗೀಃ ಪೃಥಿವೀ ಥಮಾದಿತ್ಯ ಏವೋ ದ್ವಾಯುರ್ಗೀರಗ್ನಿಸ್ಥಗ್‍ಂ ಸಾಮವೇದ ಏವೋದ್ಯಜುರ್ವೇದೋ ಗೀರ್ಋಗ್ವೇದಸ್ಥಂ ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನನ್ನಾದೋ ಭವತಿ ಯ ಏತಾನ್ಯೇವಂ ವಿದ್ವಾನುದ್ಗೀಥಾಕ್ಷರಾಣ್ಯುಪಾಸ್ತ ಉದ್ಗೀಥ ಇತಿ ॥ ೭ ॥**

೭. ದ್ಯುಲೋಕವೇ ಉತ್, ಅಂತರಿಕ್ಷವೇ ಗೀ, ಪೃಥಿವಿಯೇ ಥ. ಆದಿತ್ಯನೇ ಉತ್, ವಾಯುವೇ ಗೀ, ಅಗ್ನಿಯೇ ಥ. ಸಾಮವೇದವೇ ಉತ್, ಯಜುರ್ವೇದವೇ ಗೀ, ಋಗ್ವೇದವೇ ಥ. ಯಾವನು ಹೀಗೆಂದು ಅರಿತುಕೊಂಡು ಉತ್, ಗೀ, ಥ - ಎಂಬೀ ಉದ್ಗೀಥಾಕ್ಷರಗಳನ್ನು ಉಪಾಸನೆಮಾಡುತ್ತಾನೋ ಅವನಿಗೆ ವಾಕ್ಕು, ವಾಕ್ಕಿನ ದೋಹವಿದೆ ಯಲ್ಲ ಅದನ್ನು (ಹಾಲು)ಕರೆಯುವವು ; (ಅವನು) ಅನ್ನವಂತನೂ ಅನ್ನಾದನೂ ಆಗುವನು.

## ಉದ್ಗೀಥಾಕ್ಷರಗಳ ಉಪಾಸನಾಪ್ರಕಾರಾಂತರಗಳು

(ಭಾಷ್ಯ)

೪೦. **ತ್ರಯಾಣಾಂ ಶ್ರುತ್ಯುಕ್ತಾನಿ ಸಾಮಾನ್ಯಾನಿ । ತಾನಿ ತೇನ ಅನು ರೂಪೇಣ ಶೇಷೇಷ್ವಪಿ ದ್ರಷ್ಟವ್ಯಾನಿ । ದ್ಯೌರೇವ ಉತ್ । ಉಚ್ಚೈಃ ಸ್ಥಾನಾತ್ । ಅನ್ತರಿಕ್ಷಂ ಗೀಃ ಗಿರಣಾತ್ ಲೋಕಾನಾಮ್ । ಪೃಥಿವೀ ಥಮ್ । ಪ್ರಾಣಿ ಸ್ಥಾನಾತ್ । ಆದಿತ್ಯ ಏವ ಉತ್ । ಊರ್ಧ್ವತ್ವಾತ್ । ವಾಯುರ್ಗೀಃ । ಅಗ್ನ್ಯಾದೀನಾಂ ಗಿರಣಾತ್ । ಅಗ್ನಿಃ ಥಮ್ । ಯಾಜ್ಞೀಯಕರ್ಮಾವಸ್ಥಾನಾತ್ । ಸಾಮವೇದ ಏವ ಉತ್ । ಸ್ವರ್ಗಸಂಸ್ತುತತ್ವಾತ್ । ಯಜುರ್ವೇದೋ ಗೀಃ । ಯಜುಷಾಂ ಪ್ರತ್ತಸ್ಯ ಹವಿಷಃ ದೇವತಾನಾಂ ಗಿರಣಾತ್ । ಋಗ್ವೇದಃ ಥಮ್ । ಋಚಿ ಅಧ್ಯೂಢತ್ವಾತ್ ಸಾಮ್ನಃ ॥**

---

1. **ಉತ್ತಿಷ್ಠತಿ, ಗೀಃ, ಸ್ಥಿತಮ್ - ಎಂಬೀ ಶಬ್ದಗಳಲ್ಲಿ ಉತ್, ಗೀ, ಥ -ಎಂಬ ಅಕ್ಷರಗಳಿರುವಹಾಗೆ ಪ್ರಾಣ, ವಾಕ್ಕು, ಅನ್ನ - ಇವುಗಳಿಗೂ ಆಯಾ ಅಕ್ಷರಗಳಿಗೂ ಇರುವ ಹೋಲಿಕೆ**

(ಭಾಷ್ಯಾರ್ಥ)

ಮೂರಕ್ಕೆ[1] ಹೋಲಿಕೆಗಳನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಅವುಗಳನ್ನು ಅದಕ್ಕೆ ಅನುರೂಪವಾಗಿ ಮಿಕ್ಕವುಗಳಲ್ಲಿಯೂ ಕಲ್ಪಿಸಿಕೊಳ್ಳಬೇಕು[2]. (ಹೇಗೆಂದರೆ), ದ್ಯುಲೋಕವೇ ಉತ್ ಏಕೆಂದರೆ (ಅದು) ಉಚ್ಚವಾಗಿರುತ್ತದೆ[3]. ಅಂತರಿಕ್ಷವೇ ಗೀ, ಏಕೆಂದರೆ (ಅದು) ಲೋಕಗಳನ್ನು ಗಿರಣಮಾಡುತ್ತದೆ[4]. ಪೃಥಿವಿಯೇ ಥ, ಏಕೆಂದರೆ ಅದು ಪ್ರಾಣಿಗಳಿಗೆ ಸ್ಥಾನವಾಗಿದೆ. ಆದಿತ್ಯನೇ ಉತ್; ಏಕೆಂದರೆ (ಅವನು) ಊರ್ಧ್ವದಲ್ಲಿರುತ್ತಾನೆ[5]. ವಾಯುವು ಗೀ; ಅಗ್ನ್ಯಾದಿಗಳನ್ನು (ಅದು) ಗಿರಣಮಾಡುತ್ತದೆ[6]. ಅಗ್ನಿಯು ಥ; ಏಕೆಂದರೆ ಯಜ್ಞದ ಕರ್ಮಕ್ಕೆ (ಅದು) ಸ್ಥಾನವಾಗಿರುತ್ತದೆ. ಸಾಮವೇದವೇ ಉತ್; ಏಕೆಂದರೆ (ಅದನ್ನು) ಸ್ವರ್ಗವೆಂದು (ಶ್ರುತಿಯಲ್ಲಿ) ಹೊಗಳಿದೆ[7]. ಯಜುರ್ವೇದವೇ ಗೀ, ಏಕೆಂದರೆ ಯಜುಸ್ಸಿನಿಂದ[8] ಕೊಟ್ಟ ಹವಿಸ್ಸನ್ನು ದೇವತೆಗಳು ಗಿರಣಮಾಡುತ್ತಾರೆ. ಋಗ್ವೇದವೇ ಥ, ಏಕೆಂದರೆ ಸಾಮವು ಋಕ್ಕಿನಲ್ಲಿ ನಿಂತಿರುತ್ತದೆ[9].

## ಉದ್ಗೀಥಾಕ್ಷರೋಪಾಸನೆಯ ಫಲ

(ಭಾಷ್ಯ)

೪೧. ಉದ್ಗೀಥಾಕ್ಷರೋಪಾಸನಫಲಮ್ ಅಧುನಾ ಉಚ್ಯತೇ । ದುಗ್ಧೇ ದೋಗ್ಧಿ ಅಸ್ಮೈ ಸಾಧಕಾಯ । ಕಾ ಸಾ ? ವಾಕ್ । ಕಮ್ ? ದೋಹಮ್ । ಕೋಽಸೌ ದೋಹ ಇತಿ ? ಆಹ । ಯೋ ವಾಚೋ ದೋಹಃ । ಋಗ್ವೇದಾದಿಶಬ್ದಸಾಧ್ಯಂ ಫಲಮ್ ಇತ್ಯಭಿಪ್ರಾಯಃ । ತದ್ ವಾಚೋ ದೋಹಃ । ತಂ

---

1. ಪ್ರಾಣಾದಿತ್ರಯಕ್ಕೆ.
2. ಶ್ರುತಿಯಲ್ಲಿ ಹೇಳಿರುವದು ಮಿಕ್ಕದ್ದಕ್ಕೂ ಉಪಲಕ್ಷಣವಾಗಿ ಎಂದು ಭಾವ.
3. ಸ್ವರ್ಗಲೋಕವು ಎಲ್ಲಕ್ಕೂ ಉಚ್ಚ, ಮೇಲಿನದು; ಆದ್ದರಿಂದ ಅದಕ್ಕೆ ಉಕಾರದ ಹೋಲಿಕೆಯಿದೆ
4. ಆಕಾಶದಲ್ಲಿ ಎಲ್ಲಾ ಲೋಕಗಳೂ ಇರುವದರಿಂದ ಅದು ಅವನ್ನು ಗಿರಣಮಾಡಿದಂತೆ, ನುಂಗಿದಂತೆ, ಇರುತ್ತದೆ.
5. ಮೇಲೆ ಇರುತ್ತಾನೆ.
6 ವಾಯುವು ಅಗ್ನ್ಯಾದಿಗಳನ್ನು ಗಿರಣಮಾಡುತ್ತಾನೆಂಬುದು ಮುಂದೆ ನಾಲ್ಕನೆಯ ಅಧ್ಯಾಯದಲ್ಲಿರುವ ಸಂವರ್ಗವಿದ್ಯೆಯಿಂದ ಗೊತ್ತಾಗುವದು.
7. "ಸ್ವರ್ಗೋ ವೈ ಲೋಕಃ ಸಾಮವೇದಃ" ಎಂಬ ಶ್ರುತಿಯನ್ನು ೧-೮-೫ರಲ್ಲಿ ಉದಾಹರಿಸಿದೆ.
8. ಸ್ವಾಹಾಸ್ವಧಾದಿಗಳಿಂದ.
9. ಸ್ಥಿತವಾಗಿರುತ್ತದೆ, ನಿಂತಿರುತ್ತದೆ. ಅಧ್ಯೋಥವಮ್ ಎಂಬ ಭಾಷ್ಯದ ಪದವು ಈ ಅಧ್ಯಾಯದ ಆರನೆಯ ಖಂಡವನ್ನು ಸೂಚಿಸುತ್ತದೆ.

ಸ್ವಯಮೇವ ವಾಕ್ ದೋಗ್ಧಿ ಆತ್ಮಾನಮೇವ ದೋಗ್ಧಿ । ಕಿಂ ಚ ಅನ್ನವಾನ್ ಪ್ರಭೂತಾನ್ನಃ, ಅನ್ನಾದಶ್ಚ ದೀಪ್ತಾಗ್ನಿಃ ಭವತಿ ಯ ಏತಾನಿ ಯಥೋಕ್ತಾನಿ ಏವಂ ಯಥೋಕ್ತಗುಣಾನಿ ಉದ್ಗೀಥಾಕ್ಷರಾಣಿ ವಿದ್ವಾನ್ ಸನ್ ಉಪಾಸ್ತೇ ಉದ್ ಗೀ ಥ ಇತಿ ॥

(ಭಾಷ್ಯಾರ್ಥ)

ಈಗ ಉದ್ಗೀಥಾಕ್ಷರಗಳ ಉಪಾಸನೆಯ ಫಲವನ್ನು ಹೇಳಲಾಗುತ್ತದೆ. ಈ ಸಾಧಕನಿಗೆ ದುಗ್ಧೇ (ಹಾಲು) ಕರೆಯುತ್ತದೆ ಯಾವದದು ? ವಾಕ್ಕು. ಯಾವದನ್ನು ಕರೆಯುತ್ತದೆ ? ದೋಹವನ್ನು ಆ ದೋಹವು ಯಾವದು ? ವಾಕ್ಕಿನ ದೋಹವಿದೆಯಲ್ಲ, (ಅದನ್ನು ಕರೆಯುತ್ತದೆ). ಋಗ್ವೇದವೇ ಮುಂತಾದ ಶಬ್ದದಿಂದ ಸಾಧಿಸಬೇಕಾದ ಫಲವು ಎಂದು ಅಭಿಪ್ರಾಯ. ಅದೇ ವಾಕ್ಕಿನ ದೋಹವು , ಅದನ್ನು ವಾಕ್ಕು ತಾನೇ ಕರೆಯುತ್ತದೆ, ತನ್ನನ್ನು (ತಾನೇ) ಕರೆದುಕೊಳ್ಳುತ್ತದೆ[1]. ಇದಲ್ಲದೆ ಅನ್ನವಂತನೂ ಹೆಚ್ಚಿನ ಅನ್ನವುಳ್ಳವನೂ ಅನ್ನಾದನೂ ಎಂದರೆ ದೀಪ್ತಾಗ್ನಿಯೂ ಆಗುತ್ತಾನೆ. ಯಾವನು ಈ ಮೇಲೆ ಹೇಳಿದ ಉದ್ಗೀಥದ ಅಕ್ಷರಗಳನ್ನೂ ಮೇಲೆ ಹೇಳಿದ ಗುಣಗಳುಳ್ಳವೆಂದು ಉತ್ **ಗೀ ಥ** -ಎಂದು ಅರಿತುಕೊಂಡು ಉಪಾಸನೆಮಾಡುತ್ತಾನೋ (ಅವನಿಗೆ ಈ ಫಲವಾಗುತ್ತದೆ).

## ಆಶೀಃಸಮೃದ್ಧಿಗೆ ಉಪಾಸನೆಗಳು

(ಉಪನಿಷತ್ತು)

**ಅಥ ಖಲ್ವಾಶೀಃಸಮೃದ್ಧಿರುಪಸರಣಾನೀತ್ಯುಪಾಸೀತ ಯೇನ ಸಾಮ್ನಾ ಸ್ತೋಷ್ಯನ್ ಸ್ಯಾತ್ ತತ್ಸಾಮೋಪಧಾವೇತ್ ॥ ೮ ॥**

೮. ಇನ್ನು ಆಶೀಃಸಮೃದ್ಧಿಯನ್ನು (ಹೇಳಲಾಗುತ್ತದೆ). ಉಪಸರಣಗಳಿವು. ಹೀಗೆಂದು ಉಪಾಸನೆಮಾಡಬೇಕು. ಯಾವ ಸಾಮದಿಂದ ಸ್ತೋತ್ರಮಾಡಲಿರುವನೋ ಆ ಸಾಮವನ್ನು ಬಳಿಸಾರಬೇಕು.

## ಸಾಮದ ಉಪಾಸನೆ

(ಭಾಷ್ಯ)

೪೨. ಅಥ ಖಲು ಇದಾನೀಮ್ ಆಶೀಃಸಮೃದ್ಧಿಃ ಆಶಿಷಃ ಕಾಮಸ್ಯ ಸಮೃದ್ಧಿಃ ಯಥಾ ಭವೇತ್ ತದುಚ್ಯತ ಇತಿ ವಾಕ್ಯಶೇಷಃ । ಉಪಸರಣಾನಿ ಉಪಸರ್ತವ್ಯಾನಿ ಉಪಗನ್ತವ್ಯಾನಿ ಧ್ಯೇಯಾನಿ ಇತ್ಯರ್ಥಃ । ಕಥಮ್ ? ಇತ್ಯುಪಾಸೀತ

1. ಅನಾಯಾಸದಿಂದ ಕೊಡುತ್ತದೆ ಎಂದರ್ಥ.

ಏವಮ್ ಉಪಾಸೀತ । ತದ್ ಯಥಾ ಯೇನ ಸಾಮ್ನಾ ಯೇನ ಸಾಮವಿಶೇಷೇಣ ಸ್ತೋಷ್ಯನ್ ಸ್ತುತಿಂ ಕರಿಷ್ಯನ್ ಸ್ಯಾತ್ ಭವೇತ್ ಉದ್ಗಾತಾ ತತ್ಸಾಮ ಉಪಧಾವೇತ್ ಉಪಸರೇತ್ ಚಿನ್ತಯೇತ್ ಉತ್ಪತ್ತ್ಯಾದಿಭಿಃ ॥

(ಭಾಷ್ಯಾರ್ಥ)

ಇನ್ನು ಈಗ ಆಶೀಃಸಮೃದ್ಧಿಯು, ಆಶಿಸ್ಸಿನ ಎಂದರೆ ಕಾಮದ ಸಮೃದ್ಧಿಯು ಹೇಗಾದೀತೋ ಅದನ್ನು 'ಹೇಳಲಾಗುವದು' ಎಂದು ವಾಕ್ಯಶೇಷವು. ಉಪಸರಣ(ಗಳಿವು), ಉಪಸರಣಮಾಡತಕ್ಕವು, ಬಳಿಸಾರತಕ್ಕವು, ಧ್ಯೇಯಗಳು ಎಂದರ್ಥ. ಹೇಗೆ ? ಎಂದರೆ ಹೀಗೆಂದು ಉಪಾಸನೆಮಾಡಬೇಕು :

ಅದು ಹೇಗೆಂದರೆ, ಯಾವ ಸಾಮದಿಂದ ಯಾವದೊಂದು (ಗೊತ್ತಾದ) ಸಾಮದಿಂದ ಉದ್ಗಾತೃವು ಸ್ತೋತ್ರಮಾಡಲಿರುವನೋ ಸ್ತುತಿಯನ್ನು ಮಾಡುವೆನೆಂದಿರುವನೋ (ಸ್ಯಾತ್=ಭವೇತ್) ಆ ಸಾಮವನ್ನು ಬಳಿಸಾರಬೇಕು, ಉಪಸರಣಮಾಡಬೇಕು, ಉತ್ಪತ್ತಿಯೇ ಮುಂತಾದವುಗಳಿಂದ ಚಿಂತನೆಮಾಡಬೇಕು[1].

(ಉಪನಿಷತ್ತು)

**ಯಸ್ಯಾಮೃಚಿ ತಾಮೃಚಂ ಯದಾರ್ಷೇಯಂ ತಮೃಷಿಂ ಯಾಂ ದೇವತಾಮಭಿಷ್ಟೋಷ್ಯನ್ ಸ್ಯಾತ್ ತಾಂ ದೇವತಾಮುಪಧಾವೇತ್ ॥ ೯ ॥**

೯. ಯಾವ ಋಕ್ಕಿನಲ್ಲಿರುವದೋ ಆ ಋಕ್ಕನ್ನು, ಯಾವ ಆರ್ಷೇಯವೋ ಆ ಋಷಿಯನ್ನು, ಯಾವ ದೇವತೆಯನ್ನು ಅಭಿಷ್ಟುತಿ ಮಾಡಲಿರುವನೋ ಆ ದೇವತೆಯನ್ನು ಬಳಿಸಾರಬೇಕು.

## ಸಾಮದ ಋಕ್ಕು, ಋಷಿ – ಮುಂತಾದವುಗಳ ಉಪಾಸನೆ

(ಭಾಷ್ಯ)

೪೩. ಯಸ್ಯಾಂ ಋಚಿ ತತ್ ಸಾಮ ತಾಂ ಚ ಋಚಮ್ ಉಪಧಾವೇತ್ ದೇವತಾದಿಭಿಃ । ಯದಾರ್ಷೇಯಂ ಸಾಮ ತಂ ಚ ಋಷಿಮ್ । ಯಾಂ ದೇವತಾಮ್ ಅಭಿಷ್ಟೋಷ್ಯನ್ ಸ್ಯಾತ್ ತಾಂ ದೇವತಾಮ್ ಉಪಧಾವೇತ್ ॥

---

1. ಅದು ಯಾವ ಋಕ್ಕಿನಿಂದ ಹುಟ್ಟಿದೆ, ಯಾವ ಛಂದಸ್ಸಿನದು, ಯಾವ ದೇವತೆಯದು– ಎಂದುಮುಂತಾಗಿ ಎಂದರ್ಥ. ಇದನ್ನು ಮುಂದಿನ ಕಂಡಿಕೆಗಳಲ್ಲಿ ಸ್ಪಷ್ಟಪಡಿಸಿದೆ.

(ಭಾಷ್ಯಾರ್ಥ)

ಆ ಸಾಮವು ಯಾವ ಋಕ್ಕಿನಲ್ಲಿರುವದೋ ಆ ಋಕ್ಕನ್ನು ದೇವತಾದಿಗಳಿಂದ ಬಳಿಸಾರಬೇಕು. ಸಾಮವು ಯಾವ ಆರ್ಷೇಯವೋ ಆ ಋಷಿಯನ್ನೂ ಯಾವ ದೇವತೆಯನ್ನು ಸ್ತುತಿಮಾಡಬೇಕೆಂಬ ಅಭಿಪ್ರಾಯವುಳ್ಳವನೋ ಆ ದೇವತೆಯನ್ನೂ ಬಳಿಸಾರಬೇಕು.

**ಯೇನ ಚ್ಛನ್ದಸಾ ಸ್ತೋಷ್ಯನ್ ಸ್ಯಾತ್ ತಚ್ಛನ್ದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ ತಗ್ಂ ಸ್ತೋಮಮುಪಧಾವೇತ್** ॥ ೧೦ ॥

೧೦. ಯಾವ ಛಂದಸ್ಸಿನಿಂದ ಸ್ತೋತ್ರಮಾಡಲಿರುವನೋ ಆ ಛಂದಸ್ಸನ್ನು ಬಳಿಸಾರಬೇಕು. ಯಾವ ಸ್ತೋಮದಿಂದ ಸ್ತೋತ್ರಮಾಡಲಿರುವನೋ ಆ ಸ್ತೋಮವನ್ನು ಬಳಿಸಾರಬೇಕು.

## ಛಂದಸ್ಸಿನ ಉಪಾಸನೆ

(ಭಾಷ್ಯ)

೪೪. ಯೇನ ಛನ್ದಸಾ ಗಾಯತ್ರ್ಯಾದಿನಾ ಸ್ತೋಷ್ಯನ್ ಸ್ಯಾತ್ ತಚ್ಛನ್ದ ಉಪಧಾವೇತ್ । ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ । ಸ್ತೋಮಾಙ್ಗಫಲಸ್ಯ ಕರ್ತೃಗಾಮಿತ್ವಾತ್ ಆತ್ಮನೇಪದಂ ಸ್ತೋಷ್ಯಮಾಣ ಇತಿ । ತಂ ಸ್ತೋಮಮ್ ಉಪಧಾವೇತ್ ॥

(ಭಾಷ್ಯಾರ್ಥ)

ಗಾಯತ್ರಿಯೇ ಮುಂತಾದ[1] ಯಾವ ಛಂದಸ್ಸಿನಿಂದ ಸ್ತೋತ್ರಮಾಡಲಿರುವನೋ ಆ ಛಂದಸ್ಸನ್ನು ಬಳಿಸಾರಬೇಕು. ಯಾವ ಸ್ತೋಮದಿಂದ[2] ಸ್ತೋತ್ರಮಾಡಲಿರುವನೋ- ಸ್ತೋಮವೆಂಬ ಅಂಗದ ಫಲವು ಕರ್ತೃಗಾಮಿಯಾದ್ದರಿಂದ 'ಸ್ತೋಷ್ಯಮಾಣಃ' ಎಂದು (ಇಲ್ಲಿ) ಆತ್ಮನೇಪದವನ್ನು (ಪ್ರಯೋಗಿಸಿದೆ)-[3] ಆ ಸ್ತೋಮವನ್ನು ಬಳಿಸಾರಬೇಕು.

---

1. ಗಾಯತ್ರಿಯೇ ಮುಂತಾದ ಎಂದರೆ ಉಷ್ಣಿಕ್, ಅನುಷ್ಟುಪ್, ಬೃಹತೀ- ಮುಂತಾದ ಛಂದಸ್ಸುಗಳು. 2. ಸೋಮಯಾಗದಲ್ಲಿ ಸ್ತೋತ್ರಸಂಖ್ಯಾವಿಶೇಷಗಳಿಗೆ ಸ್ತೋಮಗಳೆಂದು ಹೆಸರು. ತ್ರಿವೃತ್, ಪಞ್ಚದಶ, ಸಪ್ತದಶ, ಏಕವಿಂಶ- ಎಂದು ಮುಂತಾಗಿ ಒಂಬತ್ತು ಪ್ರಕಾರದ ಸ್ತೋಮಗಳು ಪ್ರಸಿದ್ಧವಾಗಿರುತ್ತವೆ. ಹದಿನೈದು, ಹದಿನೇಳು, ಇಪ್ಪತ್ತೊಂದು- ಇವುಗಳು ಋಕ್ಸಂಖ್ಯೆಗಳು. ಪರಿಶಿಷ್ಟವನ್ನು ನೋಡಿ.

3. ಈ ಉಪಾಸನೆಗಳ ಫಲವೆಲ್ಲ ಯಜಮಾನನಿಗೇ ಸೇರತಕ್ಕವು ಎಂಬುದನ್ನು ಸ್ತೋಷ್ಯನ್ ಎಂಬ ಪರಸ್ಮೈಪದವು ತಿಳಿಸುತ್ತದೆ, ಛಂದಸ್ಸಿನ ಉಪಾಸನೆಯು ಮಾತ್ರ ಉದ್ಗಾತೃವಿಗೇ ಎಂಬುದನ್ನು ಆತ್ಮನೇಪದವು ಸೂಚಿಸುತ್ತದೆ. ಪಾ. ಸೂ. ೧-೩-೭೨ನ್ನು ನೋಡಿ.

(ಉಪನಿಷತ್ತು)

**ಯಾಂ ದಿಶಮಭಿಷ್ಟೋಷ್ಯನ್ ಸ್ಯಾತ್ತಾಂ ದಿಶಮುಪಧಾವೇತ್ ॥**

೧೧. ಯಾವ ದಿಕ್ಕನ್ನು ಸ್ತೋತ್ರಮಾಡಲಿರುವನೋ ಆ ದಿಕ್ಕನ್ನು ಬಳಿಸಾರಬೇಕು.

## ದಿಕ್ಕಿನ ಉಪಾಸನೆ

(ಭಾಷ್ಯ)

೪೫. ಯಾಂ ದಿಶಮ್ ಅಭಿಷ್ಟೋಷ್ಯನ್ ಸ್ಯಾತ್ ತಾಂ ದಿಶಮ್ ಉಪಧಾವೇತ್ ಅಧಿಷ್ಠಾತ್ರಾದಿಭಿಃ ॥

(ಭಾಷ್ಯಾರ್ಥ)

ಯಾವ ದಿಕ್ಕನ್ನು ಸ್ತೋತ್ರಮಾಡಲಿರುವನೋ ಆ ದಿಕ್ಕನ್ನು ಅಧಿಷ್ಠಾತೃ (ದೇವತೆ)[1] ಮುಂತಾದವುಗಳಿಂದೊಡಗೂಡಿ ಬಳಿಸಾರಬೇಕು.

## ಆಶೀಃಸಮೃದ್ಧ್ಯುಪಾಸನೆಯ ಫಲ

(ಉಪನಿಷತ್ತು)

**ಆತ್ಮಾನಮನ್ತತ ಉಪಸೃತ್ಯ ಸ್ತುವೀತ ಕಾಮಂ ಧ್ಯಾಯನ್ನಪ್ರಮತ್ತೋಽಭ್ಯಾಶೋ ಹ ಯದಸ್ಮೈ ಸ ಕಾಮಃ ಸಮೃಧ್ಯೇತ ಯತ್ಕಾಮಃ ಸ್ತುವೀತೇತಿ ಯತ್ಕಾಮಃ ಸ್ತುವೀತೇತಿ ॥ ೧೨ ॥**

೧೨. ಕೊನೆಗೆ ಆತ್ಮನನ್ನು ಬಳಿಸಾರಿ ಕಾಮವನ್ನು ಧ್ಯಾನಿಸುತ್ತಾ ಅಪ್ರಮತ್ತನಾಗಿ ಧ್ಯಾನಿಸಬೇಕು. ಯಾವ ಕಾಮದಿಂದ ಸ್ತುತಿಸುವನೋ ಆ ಕಾಮವು ಅಭ್ಯಾಶವಾಗಿ ಸಮೃದ್ಧವಾಗುವದು ; ಯಾವ ಕಾಮದಿಂದ ಸ್ತುತಿಸುವನೋ (ಆ ಕಾಮವು ಸಮೃದ್ಧವಾಗುವದು).

## ಸ್ತೋತ್ರಮಾಡುವ ಕ್ರಮ

(ಭಾಷ್ಯ)

೪೬. ಆತ್ಮಾನಮ್ ಉದ್ಗಾತಾ ಸ್ವಂ[2] ರೂಪಂ ಗೋತ್ರನಾಮಾದಿಭಿಃ ।

---

1. ಆಯಾ ದಿಕ್ಕುಗಳ ಅಧಿಷ್ಠಾತೃದೇವತೆಗಳು ಮುಂತಾದವರನ್ನು ಎಂದರ್ಥ. ಆಯಾ ದಿಕ್ಕಿನಲ್ಲಿರುವ ಅಸಾಧಾರಣಧರ್ಮಗಳನ್ನೂ "ಮುಂತಾದ" ಎಂಬ ಶಬ್ದದಿಂದ ತೆಗೆದುಕೊಳ್ಳಬೇಕೆಂದು ಟೀಕೆ.

2. ಈ ಅ॥ ವಾ॥ ಪಾಠವೇ ಮೇಲು.

ಸಾಮಾದಿಕ್ರಮೇಣ[1] ಸ್ವಂ ಚಾಽಽತ್ಮಾನಮ್ ಅನ್ತತೋ ಅನ್ತೇ ಉಪಸೃತ್ಯ ಸ್ತುವೀತ । ಕಾಮಂ ಧ್ಯಾಯನ್ ಅಪ್ರಮತ್ತಃ ಸ್ವರೋಷ್ಮವ್ಯಞ್ಜನಾದಿಭ್ಯಃ ಪ್ರಮಾದಮಕುರ್ವನ್ । ತತಃ ಅಭ್ಯಾಶಃ ಕ್ಷಿಪ್ರಮೇವ ಹ ಯತ್ ಯತ್ರ ಅಸ್ಮೈ ಏವಂ ವಿದೇ ಸ ಕಾಮಃ ಸಮೃಧ್ಯೇತ ಸಮೃದ್ಧಿಂ ಗಚ್ಛೇತ್ । ಕೋಽಸೌ ? ಯತ್ಕಾಮಃ । ಯಃ ಕಾಮೋಽಸ್ಯ ಸೋಽಯಂ ಯತ್ಕಾಮಃ ಸನ್ ಸ್ತುವೀತ ಇತಿ । ದ್ವಿರುಕ್ತಿರಾದರಾರ್ಥಾ ॥

(ಭಾಷ್ಯಾರ್ಥ)

ಉದ್ಗಾತೃವು ಆತ್ಮನನ್ನು ಎಂದರೆ ತನ್ನ ರೂಪವನ್ನು ಗೋತ್ರ, ನಾಮ -ಮುಂತಾದವುಗಳೊಡನೆ[2] -ಸಾಮಾದಿಕ್ರಮದಿಂದ[3] ತನ್ನನ್ನು ಕೊನೆಗೆ ಕೊನೆಯಲ್ಲಿ ಬಳಿಸಾರಿ ಸ್ತೋತ್ರಮಾಡಬೇಕು. (ತನ್ನ) ಕಾಮವನ್ನು ಚಿಂತಿಸಿಕೊಳ್ಳುತ್ತಾ ಅಪ್ರಮತ್ತನಾಗಿ; ಸ್ವರಗಳು, ಊಷ್ಮಗಳು, ವ್ಯಂಜನಗಳು – ಮುಂತಾದವುಗಳಲ್ಲಿ ಪ್ರಮಾದವನ್ನು ಮಾಡದೆ[4] (ಸ್ತೋತ್ರಮಾಡಬೇಕು )

ಆದರಿಂದ ಅಭ್ಯಾಶವಾಗಿ ಕ್ಷಿಪ್ರವಾಗಿಯೇ (ಯತ್ = ಯತ್ರ) ಎಲ್ಲಿ[5] (ಸ್ತೋತ್ರಮಾಡುವನೋ ಅಲ್ಲಿ), ಇವನಿಗೆ ಹೀಗೆಂದು ಅರಿತಿರುವವನಿಗೆ, ಆ ಕಾಮವು ಸಮೃದ್ಧವಾಗುವದು, ಸಮೃದ್ಧಿಯನ್ನು ಪಡೆಯುವದು. ಅದು ಯಾವ (ಕಾಮವು) ? ಎಂದರೆ ಯಾವ ಕಾಮದಿಂದ – ಯಾವದು ಇವನಿಗೆ ಕಾಮವೋ ಅದನ್ನುಳ್ಳವನಾದ್ದರಿಂದ ಇವನನ್ನು ಯತ್ಕಾಮನು ಎಂದಿದೆ. ಹೀಗೆ ಯಾವ ಕಾಮವುಳ್ಳವನಾಗಿ- ಸ್ತೋತ್ರಮಾಡುವನೋ (ಅದು ಸಮೃದ್ಧವಾಗುವದು. ಯತ್ಕಾಮಃ ಸ್ತುವೀತ ಎಂಬ) ದ್ವಿರುಕ್ತಿಯು ಆದರಕ್ಕಾಗಿ ಬಂದಿರುತ್ತದೆ.

---

1. 'ಸಾಮಾದೀನ್' ಎಂಬುದಕ್ಕಿಂತ ಈ ಪಾಠವು ಮೇಲು.

2. ಮುಂತಾದವೆಂದರೆ ವರ್ಣಾಶ್ರಮಾದಿಗಳು ಎಂದು ಟೀಕೆ.

3. ಸಾಮ, ಋಕ್ಕು, ಆರ್ಷೇಯ, ದೇವತೆ, ಛಂದಸ್ಸು, ಸ್ತೋಮ, ದಿಕ್ಕು- ಹೀಗೆ ಒಂದಾಗುತ್ತಲೊಂದನ್ನು ಉಪಾಸನೆಮಾಡಿದ ಬಳಿಕ.

4. ಎಚ್ಚರಿಕೆಯಿಂದ. 5. ಯಾವ ಕರ್ಮದಲ್ಲಿ.

# ಒಂದನೆಯ ಅಧ್ಯಾಯ -ನಾಲ್ಕನೆಯ ಖಂಡ

(ಉದ್ಗೀಥೋಪಾಸನೆ ಮುಂದುವರಿದದ್ದು)

## ಅಮೃತಾಭಯಗುಣವಿಶಿಷ್ಟವೆಂದು ಉದ್ಗೀಥೋಪಾಸನೆ

(ಉಪನಿಷತ್ತು)

**ಓಮಿತ್ಯೇದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಮ್ ॥ ೧ ॥**

೧. ಓಮ್ ಎಂಬೀ ಅಕ್ಷರ(ರೂಪವಾದ) ಉದ್ಗೀಥವನ್ನು ಉಪಾಸನೆಮಾಡಬೇಕು ; ಏಕೆಂದರೆ ಓಮ್ ಎಂದೇ ಉದ್ಗಾನ ಮಾಡುತ್ತಾನೆ. ಅದರ ಉಪವ್ಯಾಖ್ಯಾನವು (ಪ್ರಾರಂಭವಾಗಿದೆ).

### ಈ ಖಂಡದ ಸಂಬಂಧ

(ಭಾಷ್ಯ)

೪೭. ಓಮಿತ್ಯೇತದಿತ್ಯಾದಿ । ಪ್ರಕೃತಸ್ಯ ಅಕ್ಷರಸ್ಯ ಪುನರುಪಾದಾನಮ್ ಉದ್ಗೀಥಾಕ್ಷರಾದ್ಯುಪಾಸನಾಂತರಿತತ್ವಾತ್ ಅನ್ಯತ್ರ ಪ್ರಸಙ್ಗೋ ಮಾ ಭೂತ್ ಇತ್ಯೇವಮರ್ಥಮ್ । ಪ್ರಕೃತಸ್ಯೈವ ಅಕ್ಷರಸ್ಯ ಅಮೃತಾಭಯ ಗುಣವಿಶಿಷ್ಟಸ್ಯ ಉಪಾಸನಮ್ ವಿಧಾತವ್ಯಮ್ ಇತ್ಯಾರಮ್ಭಃ । ಓಮಿತ್ಯಾದಿ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

'ಓಮಿತ್ಯೇತತ್' ಮುಂತಾದ (ಗ್ರಂಥದ ಸಂಬಂಧವೇನೆಂದರೆ) : ಪ್ರಕೃತವಾದ (ಓಮ್ ಎಂಬ) ಅಕ್ಷರವನ್ನು ಮತ್ತೆ (ಹೆಸರಿಸಿ) ತೆಗೆದುಕೊಂಡಿರುವದೇಕೆಂದರೆ ಉದ್ಗೀಥದ ಅಕ್ಷರಗಳೇ ಮುಂತಾದವುಗಳ ಉಪಾಸನೆಗಳು ನಡುವೆ ಬಂದದ್ದರಿಂದ ಮತ್ತೊಂದರ (ವಿಷಯವಿದೆಂಬ) ಪ್ರಸಂಗವು ಆಗದಿರಲಿ ಎಂಬುದಕ್ಕಾಗಿ. ಪ್ರಕೃತ ವಾಗಿರುವ ಇದೇ ಅಕ್ಷರವನ್ನು ಅಮೃತ, ಅಭಯ– ಎಂಬ ಗುಣವಿಶಿಷ್ಟವೆಂದು ಉಪಾಸನೆಮಾಡಬೇಕೆಂದು ವಿಧಾನಮಾಡುವದಕ್ಕಾಗಿ (ಇದನ್ನು) ಆರಂಭಿಸಿದೆ. ಓಮ್ ಎಂಬಿದೇ ಮುಂತಾದ (ಗ್ರಂಥವನ್ನು ೧–೧–೧ರಲ್ಲಿ) ವ್ಯಾಖ್ಯಾನಮಾಡಿ ದ್ದಾಗಿದೆ.

(ಉಪನಿಷತ್ತು)

**ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಗ್ಂ ಸ್ತೇ ಛನ್ದೋಭಿರಾಚ್ಛಾದಯನ್ ಯದೇಭಿರಾಚ್ಛಾದಯಗ್ಂ ಸ್ತಚ್ಛನ್ದಸಾಂ ಛನ್ದಸ್ತ್ವಮ್ ॥ ೨ ॥**

೨. ದೇವತೆಗಳು ಮೃತ್ಯುವಿಗೆ ಅಂಜಿಕೊಂಡು ತ್ರಯೀವಿದ್ಯೆಯನ್ನು ಪ್ರವೇಶಿಸಿದರು. ಅವರು ಛಂದಸ್ಸುಗಳಿಂದ ಮುಚ್ಚಿಕೊಂಡರು. ಇವುಗಳಿಂದ ಮುಚ್ಚಿಕೊಂಡರಷ್ಟೆ, ಅದೇ ಛಂದಸ್ಸುಗಳ ಛಂದಸ್ತ್ವವು.

## ದೇವತೆಗಳು ಕರ್ಮವನ್ನು ಮರೆಹೊಕ್ಕದ್ದು

(ಭಾಷ್ಯ)

೪೫. ದೇವಾ ವೈ ಮೃತ್ಯೋರ್ಮಾರಕಾದ್ ಬಿಭ್ಯತಃ। ಕಿಂ ಕೃತವನ್ತಃ ಇತಿ ? ಉಚ್ಯತೇ। ತ್ರಯೀಂ ವಿದ್ಯಾಂ ತ್ರಯೀವಿಹಿತಂ ಕರ್ಮ ಪ್ರಾವಿಶನ್ ಪ್ರವಿಷ್ಟವನ್ತಃ । ವೈದಿಕಂ ಕರ್ಮ ಪ್ರಾರಬ್ಧವನ್ತಃ ಇತ್ಯರ್ಥಃ। ತನ್ಮೃತ್ಯೋಸ್ತ್ರಾಣಂ ಮನ್ಯಮಾನಾಃ। ಕಿಂ ಚ ತೇ ಕರ್ಮಣಿ ಅವಿನಿಯುಕ್ತೈಃ ಛನ್ದೋಭಿಃ ಮನ್ತ್ರೈರ್ಜಪಹೋಮಾದಿ ಕುರ್ವನ್ತಃ ಆತ್ಮಾನಂ ಕರ್ಮಾನ್ತರೇಷು ಅಚ್ಛಾದಯನ್ ಛಾದಿತವನ್ತಃ । ಯತ್ ಯಸ್ಮಾತ್ ಏಭಿರ್ಮನ್ತ್ರೈಃ ಛಾದಯನ್ ತತ್ ತಸ್ಮಾತ್ ಛನ್ದಸಾಂ ಮನ್ತ್ರಾಣಾಂ ಛಾದನಾತ್ ಛನ್ದಸ್ತ್ವಂ ಪ್ರಸಿದ್ಧಮೇವ ॥

(ಭಾಷ್ಯಾರ್ಥ)

ದೇವತೆಗಳಿದಾರಷ್ಟೆ, (ಅವರು) ಮೃತ್ಯುವಿಗೆ ಮಾರಕಕ್ಕೆ[1] ಅಂಜಿ- ಏನು ಮಾಡಿದರು ? ಎಂದರೆ (ಶ್ರುತಿ) ಹೇಳುತ್ತದೆ- ತ್ರಯೀವಿದ್ಯೆಯನ್ನು ತ್ರಯೀ ವಿಹಿತವಾದ ಕರ್ಮವನ್ನು[2] ಪ್ರವೇಶಿಸಿದರು, ಒಳಹೊಕ್ಕರು, ವೈದಿಕಕರ್ಮವನ್ನು -ಅದು ಮೃತ್ಯುವಿನಿಂದ ರಕ್ಷಿಸುವದೆಂದು ಭಾವಿಸಿಕೊಂಡವರಾಗಿ- (ಮಾಡುವದಕ್ಕೆ) ಪ್ರಾರಂಭಿಸಿದರು ಎಂದರ್ಥ. ಮತ್ತು ಅವರು ಕರ್ಮದಲ್ಲಿ ವಿನಿಯೋಗವಾಗದ ಛಂದಸ್ಸುಗಳಿಂದ ಮಂತ್ರಗಳಿಂದ ಜಪಹೋಮಾದಿಗಳನ್ನು ಮಾಡುತ್ತಾ ಬೇರೆಯ ಕರ್ಮಗಳಲ್ಲಿ ತಮ್ಮನ್ನು ಮುಚ್ಚಿಕೊಂಡರು,[3] ಮುಚ್ಚಿಕೊಂಡವರಾದರು. (ಯತ್ =ಯಸ್ಮಾತ್ ಹೀಗೆ) ಈ ಮಂತ್ರಗಳಿಂದ ಮುಚ್ಚಿಕೊಂಡರಷ್ಟೆ, (ತತ್=ತಸ್ಮಾತ್)

---

1. ಅಸುರಪಾಪಬುದ್ಧಿಗೆ.

2. ಕರ್ಮದಿಂದ ಸ್ವಾಭಾವಿಕವಾದ ಜ್ಞಾನಕರ್ಮಗಳಿಗೆ ಕಾರಣವಾದ ಮೃತ್ಯುವು ನಾಶವಾಗುತ್ತದೆ ಎಂದು ಕರ್ಮವನ್ನು ಪ್ರವೇಶಿಸಿದರು ಎಂದರ್ಥ.

3. ಯಾವ ಕರ್ಮವನ್ನು ಮಾಡುತ್ತಾರೋ ಆ ಕರ್ಮಗಳಲ್ಲಿ ವಿನಿಯೋಗವಾಗದಿರುವ ಮಂತ್ರಗಳನ್ನು ಜಪಾದಿಗಳಿಗೆ ವಿನಿಯೋಗಿಸಿಕೊಂಡರು ಎಂದರ್ಥ.

ಆದ್ದರಿಂದ ಛಂದಸ್ಸುಗಳು ಆಚ್ಛಾದನೆಮಾಡುವದರಿಂದ (ಅವುಗಳಿಗೆ) ಛಂದಸ್ತ್ವವು ಪ್ರಸಿದ್ಧವೇ (ಆಗಿದೆ).[1]

(ಉಪನಿಷತ್ತು)

**ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇ ದೇವಂ ಪರ್ಯಪಶ್ಯದೃಚಿ ಸಾಮ್ನಿ ಯಜುಷಿ। ತೇ ನು ವಿತ್ತ್ವೋ ರ್ಧ್ವಾ**[2] **ಋಚಃ ಸಾಮ್ನೋ ಯಜುಷಃ ಸ್ವರಮೇವ ಪ್ರಾವಿಶನ್ ॥೩॥**

೩. ಅವರನ್ನು ಅಲ್ಲಿ- ಋಕ್ಕಿನಲ್ಲಿ, ಸಾಮದಲ್ಲಿ, ಯಜುಸ್ಸಿನಲ್ಲಿ -ಮೃತ್ಯುವು ಹೇಗೆ ಮೀನನ್ನು ನೀರಿನಲ್ಲಿ ಕಾಣುತ್ತಾನೋ (ಹಾಗೆ) ಕಂಡುಕೊಂಡನು. ಅವರು ಅರಿತುಕೊಂಡು ಋಕ್ಕಿನಿಂದಲೂ ಸಾಮ ದಿಂದಲೂ ಯಜುಸ್ಸಿನಿಂದಲೂ ಮೇಲಕ್ಕೆದ್ದು ಸ್ವರವನ್ನೇ ಪ್ರವೇಶ ಮಾಡಿದರು.

## ದೇವತೆಗಳು ಓಂಕಾರವನ್ನು ಪ್ರವೇಶಿಸಿದ್ದು

(ಭಾಷ್ಯ)

೪೯ ತಾನ್(ಉ)[3] ತತ್ರ ದೇವಾನ್ ಕರ್ಮಪರಾನ್ ಮೃತ್ಯುಃ ಯಥಾ ಲೋಕೇ ಮತ್ಸ್ಯಘಾತಕೋ ಮತ್ಸ್ಯಮ್ ಉದಕೇ ನಾತಿಗಮ್ಭೀರೇ ಪರಿಪಶ್ಯೇತ್ ಬಡಿಶೋದಕಸ್ರಾವೋಪಾಯಸಾಧ್ಯಂ ಮನ್ಯಮಾನಃ, ಏವಂ ಪರ್ಯಪಶ್ಯತ್ ದೃಷ್ಟವಾನ್ ಮೃತ್ಯುಃ ಕರ್ಮಕ್ಷಯೋಪಾಯೇನ ಸಾಧ್ಯಾನ್ ದೇವಾನ್ ಮೇನೇ ಇತ್ಯರ್ಥಃ। ಕ್ವಾಸೌ ದೇವಾನ್ ದದರ್ಶೇತಿ ? ಉಚ್ಯತೇ। ಋಚಿ, ಸಾಮ್ನಿ, ಯಜುಷಿ। ಋಗ್ಯಜುಃಸಾಮಸಂಬನ್ಧಿಕರ್ಮಣಿ ಇತ್ಯರ್ಥಃ। ತೇ ನು ದೇವಾಃ ವೈದಿಕೇನ ಕರ್ಮಣಾ ಸಂಸ್ಕೃತಾಃ ಶುದ್ಧಾತ್ಮಾನಃ ಸನ್ತೋ ಮೃತ್ಯೋಶ್ಚಿಕೀರ್ಷಿತಂ ವಿದಿತವನ್ತಃ। ವಿದಿತ್ವಾ ಚ ತೇ ಊರ್ಧ್ವಾಃ ವ್ಯಾವೃತ್ತಾಃ ಕರ್ಮಭ್ಯಃ ಋಚಃ ಸಾಮ್ನಃ, ಯಜುಷಃ। ಋಗ್ಯಜುಃಸಾಮಸಂಬದ್ಧಾತ್ ಕರ್ಮಣಃ ಅಭ್ಯುತ್ಥಾಯ ಇತ್ಯರ್ಥಃ। ತೇನ ಕರ್ಮಣಾ ಮೃತ್ಯುಭಯಾಪಗಮಂ ಪ್ರತಿ ನಿರಾಶಾಃ ತತ್ ಅಪಾಸ್ಯ ಅಮೃತಾಭಯಗುಣಮ್ ಅಕ್ಷರಂ ಸ್ವರಂ ಸ್ವರಶಬ್ದಿತಂ ಪ್ರಾವಿಶನ್ನಿವ[4] ಪ್ರವಿಷ್ಟವನ್ತಃ। ಓಂಕಾರೋಪಾಸನಪರಾಃ ಸಂವೃತ್ತಾಃ। ಏವಶಬ್ದಃ ಅವಧಾರ

---

1. ಮೃತ್ಯುವಿಗೆ ದೂರವಾಗಿರುವಂತೆ ಮಂತ್ರಗಳು ಸಾಧಕನನ್ನು ಮುಚ್ಚುತ್ತವೆ ಯಾದ್ದರಿಂದ ಅವಕ್ಕೆ ಛಂದಸ್ಸುಗಳೆಂಬ ಹೆಸರು ಬಂದಿದೆ ಎಂದಭಿಪ್ರಾಯ.

2. "ವಿದಿತ್ವೋರ್ಧ್ವಾಃ" ಎಂದು ಆ॥ ವಾ॥ ಪಾಠ ; ಭಾಷ್ಯದಲ್ಲಿ ವಿತ್ತ್ವಾ ಎಂಬ ಪಾಠವೇ ಪರಾಮೃಷ್ಟವಾಗಿಲ್ಲದ್ದರಿಂದ ಅದೇ ಸರಿಯೆ ? ವಿಮರ್ಶಿಸಬೇಕಾದದ್ದಿದೆ.

3. ಈ ಮಾತು ಇಲ್ಲಿ ಬಿಟ್ಟುಹೋಗಿದೆ.

4. ಪ್ರಾವಿಶನ್ನೇವ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

ಣಾರ್ಥಃ ಸನ್ ಸಮುಚ್ಚಯಪ್ರತಿಷೇಧಾರ್ಥಃ। ತದುಪಾಸನಪರಾಃ ಸಂವೃತ್ತಾ ಇತ್ಯರ್ಥಃ ॥

(ಭಾಷ್ಯಾರ್ಥ)

ಅವರನ್ನು, ಅಲ್ಲಿ[1] ಕರ್ಮಪರರಾದ ದೇವತೆಗಳನ್ನು ಮೃತ್ಯುವು– ಹೇಗೆ ಲೋಕದಲ್ಲಿ ಮೀನುಗಳನ್ನು (ಹಿಡಿದು) ಕೊಲ್ಲುವವನು, ಮೀನನ್ನು ಬಹಳ ಆಳವಿಲ್ಲದ ನೀರಿನಲ್ಲಿ, ಮೀನುಗಾಳ, ನೀರನ್ನು ಸೋಸಿಹಾಕುವದು ಎಂಬ ಉಪಾಯದಿಂದ (ಅದನ್ನು ಹಿಡಿಯುವದು) ಸಾಧ್ಯವೆಂದು ತಿಳಿದು ಕಂಡುಹಿಡಿದು ಕೊಳ್ಳುವನೋ ಹಾಗೆ ಮೃತ್ಯುವು– ಕಂಡುಕೊಂಡನು, ಕಂಡುಕೊಂಡವನಾದನು. ಕರ್ಮಕ್ಷಯವೆಂಬ ಉಪಾಯದಿಂದ ದೇವತೆಗಳನ್ನು (ಹಿಡಿಯುವದು) ಸಾಧ್ಯ ವೆಂದು ತಿಳಿದುಕೊಂಡನು ಎಂದರ್ಥ ಅವನು ದೇವತೆಗಳನ್ನು ಎಲ್ಲಿ ಕಂಡು ಕೊಂಡನು ?– ಎಂದರೆ (ಶ್ರುತಿ) ಹೇಳುತ್ತದೆ · ಋಕ್ಕಿನಲ್ಲಿ, ಸಾಮದಲ್ಲಿ, ಯಜುಸ್ಸಿ ನಲ್ಲಿ (ಕಂಡುಕೊಂಡನು) . ಋಗ್ಯಜುಃಸಾಮಗಳಿಗೆ ಸಂಬದ್ಧವಾದ ಕರ್ಮದಲ್ಲಿ ಎಂದರ್ಥ.

ಆ ದೇವತೆಗಳು, ವೈದಿಕಕರ್ಮದಿಂದ ಸಂಸ್ಕೃತರಾಗಿ ಶುದ್ಧರಾಗಿದ್ದದ್ದರಿಂದ[2] ಮೃತ್ಯುವು (ಮುಂದೆ) ಮಾಡಲೆಳಸಿರುವದನ್ನು ಅರಿತುಕೊಂಡರು (ಹಾಗೆ) ಅರಿತುಕೊಂಡು (ಅವರು) ಕರ್ಮಗಳಿಂದ,[3] ಋಕ್ಕಿನಿಂದಲೂ ಸಾಮದಿಂದಲೂ ಯಜುಸ್ಸಿನಿಂದಲೂ ಮೇಲಕ್ಕೆದ್ದು ಋಗ್ಯಜುಃಸಾಮಗಳಿಗೆ ಸಂಬದ್ಧವಾದ ಕರ್ಮ ವನ್ನು ಬಿಟ್ಟೆದ್ದು ಎಂದರ್ಥ ಆ ಕರ್ಮದಿಂದ ಮೃತ್ಯುಭಯವು ಹೋಗುವ ದೆಂಬುದರಲ್ಲಿ ನಿರಾಶರಾಗಿ ಅದನ್ನು ಬಿಟ್ಟು ಅಮೃತಾಭಯಗುಣವುಳ್ಳ ಅಕ್ಷರವನ್ನು ಸ್ವರಶಬ್ದವಾಚ್ಯವಾದ (ಓಂಕಾರವನ್ನು) ಪ್ರವೇಶಮಾಡಿದಂತೆ. ಒಳಹೊಕ್ಕರು,

1. ವೈದಿಕಕರ್ಮವನ್ನು ಮಾಡುತ್ತಿರುವಲ್ಲ ಎಂದರ್ಥ.

2 ವೈದಿಕಕರ್ಮವು ಕ್ಷಯವಾಗುವದು ಎಂದದ್ದರಿಂದ ಅದು ಮುಮುಕ್ಷುಗಳಿಗೆ ಬೇಕಿಲ್ಲವೆಂದು ತಿಳಿಯಬಾರದೆಂಬುದಕ್ಕಾಗಿ ಈ ಫಲವನ್ನು ಇಲ್ಲಿ ತಿಳಿಸಿದೆ.

3. ಇಲ್ಲಿ ಕರ್ಮಭ್ಯಃ ಎಂಬ ಪಾಠವನ್ನು ಟೀಕೆಯಲ್ಲಿ ಅಂಗೀಕರಿಸಿದೆ, ಎಲ್ಲಾ ಕರ್ಮಗಳನ್ನೂ ಬಿಟ್ಟಿದ್ದರು_ ಎಂದು ತಿಳಿಸುವದಕ್ಕೆ ಬಹುವಚನವು ಬಂದಿದೆ ಎಂದು ಅಲ್ಲಿ ಬರೆದಿದೆ. ಆದರೆ ಮೂಲದಲ್ಲಿ ಕರ್ಮಶಬ್ದವೇ ಇಲ್ಲದ್ದರಿಂದ "ಯಜುಷಃ" ಮುಂತಾದ ವಾಕ್ಯಕ್ಕೆ ಯಜುಸ್ಸೇ ಮುಂತಾದದಕ್ಕೆ ಸಂಬಂಧಪಟ್ಟ ಕರ್ಮವನ್ನು ಬಿಟ್ಟೆದ್ದು ಎಂದರ್ಥ ಎಂದೇ ಭಾಷ್ಯಕ್ಕೆ ಅಭಿಪ್ರಾಯವು ಸ್ವರಸವಾಗಿದೆ. ಆದ್ದರಿಂದ ಇಲ್ಲಿಯೂ ಕರ್ಮಣಃ ಎಂದೇ ಇದ್ದಿರಬಹುದೆ ?_ ಎಂಬುದು ಯೋಚಿಸತಕ್ಕದ್ದಾಗಿದೆ.

4. ಓಂಕಾರವನ್ನು ಪ್ರವೇಶಿಸಿದರು, ಎಂದರೆ ಅದನ್ನೇ ಒಳಹೊಕ್ಕು ಅದರಲ್ಲಿ ಒಂದಾ ದಂತೆ ಆದರು ಎಂಬ ಅರ್ಥಸ್ವಾರಸ್ಯವು ಬರುವದಕ್ಕೆ ಇದ ಎಂದಿರುವದೇ ಹೊಂದುತ್ತದೆ. ತೈ. ಭಾ. ೧_೪ ಛಾ. ಭಾ. ೨೮ ನೋಡಿ.

ಓಂಕಾರೋಪಾಸನಾಪರರಾದರು ಇಲ್ಲಿ ಏವಶಬ್ದವು ಅವಧಾರಣಾರ್ಥವಾಗಿರುವದರಿಂದ ಸಮುಚ್ಚಯವನ್ನು[1] ಪ್ರತಿಷೇಧಮಾಡುವದಕ್ಕೆ (ಬಂದಿದೆ). ಅದರ ಉಪಾಸನೆಯಲ್ಲಿಯೇ ತತ್ಪರರಾದವರು ಎಂದರ್ಥ.

(ಉಪನಿಷತ್ತು)

**ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾತಿಸ್ವರತ್ಯೇವಗ್ಂ ಸಾಮೈವಂ ಯಜುರೇಷ ಉ ಸ್ವರೋ ಯದೇತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭಯಾ ಅಭವನ್ ॥ ೪ ॥**

೪. ಯಾವಾಗ ಋಕ್ಕನ್ನು ಪಡೆದುಕೊಳ್ಳುವನೋ, (ಆಗ) ಓಮೆಂದೇ ಅತಿಸ್ವರವನ್ನು ಮಾಡುತ್ತಾನೆ. ಹೀಗೆಯೇ ಸಾಮವನ್ನು (ಪಡೆದುಕೊಳ್ಳುವಾಗ), ಹೀಗೆಯೇ ಯಜುಸ್ಸನ್ನು (ಪಡೆದುಕೊಳ್ಳುವಾಗ). ಈ ಅಕ್ಷರವೆಂಬುದಿದೆಯಲ್ಲ, ಇದೇ ಸ್ವರವು. ಇದು ಅಮೃತವು, ಅಭಯವು. ಇದನ್ನು ಪ್ರವೇಶಿಸಿ ದೇವತೆಗಳು ಅಮೃತರೂ ಅಭಯರೂ ಆದರು.

## ಓಮೆಂಬುದು ಸ್ವರವು ಹೇಗೆ ?

(ಭಾಷ್ಯ)

೫೦. ಕಥಂ ಪುನಃ ಸ್ವರಶಬ್ದವಾಚ್ಯತ್ವಮ್ ಅಕ್ಷರಸ್ಯೇತಿ ? ಉಚ್ಯತೇ । ಯದಾ ವೈ ಋಚಮ್ ಆಪ್ನೋತಿ ಓಮಿತ್ಯೇವ ಅತಿಸ್ವರತಿ । ಏವಂ ಸಾಮ, ಏವಂ ಯಜುಃ । ಏಷ ಉ ಸ್ವರಃ । ಕೋಽಸೌ ? ಯದೇತದಕ್ಷರಮ್ । ಏತದಮೃತಮ್, ಅಭಯಮ್ । ತತ್ ಪ್ರವಿಶ್ಯ ಯಥಾಗುಣಮೇವ ಅಮೃತಾ ಅಭಯಾಶ್ಚ ಅಭವನ್ ದೇವಾಃ ॥

(ಭಾಷ್ಯಾರ್ಥ)

(ಈ) ಅಕ್ಷರವು ಸ್ವರಶಬ್ದದಿಂದ ಹೇಳಲ್ಪಡತಕ್ಕದ್ದು ಎಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ. ಯಾವಾಗ ಋಕ್ಕನ್ನು (ಅಧ್ಯಯನದಿಂದ) ಪಡೆದುಕೊಳ್ಳುವನೋ ಆಗ ಓಮ್ ಎಂದೇ ಅತಿಸ್ವರವನ್ನು ಮಾಡುತ್ತಾನೆ.[2] ಹೀಗೆಯೇ ಸಾಮವನ್ನು (ಪಡೆದುಕೊಳ್ಳುವಾಗ), ಹೀಗೆಯೇ ಯಜುಸ್ಸನ್ನು (ಪಡೆದುಕೊಳ್ಳು

---

1. ಓಂಕಾರವನ್ನೇ ಪ್ರವೇಶಿಸಿದರು ಎಂದರೆ ಕರ್ಮವನ್ನು ಬಿಟ್ಟು ಅದನ್ನೇ ಸೇವಿಸಿದರು ಎಂದು ಸಮುಚ್ಚಯನಿಷೇಧ.

2. ಅತ್ಯಾದರದಿಂದ ಉಚ್ಚರಿಸುತ್ತಾನೆ.

ವಾಗ ಅತಿಸ್ವರವನ್ನು ಮಾಡುತ್ತಾನೆ). ಮತ್ತು ಇದೇ ಸ್ವರವು. (ಇದೇ ಎಂದರೆ) ಯಾವದದು ? ಎಂದರೆ ಈ (ಓಮ್ ಎಂಬ) ಅಕ್ಷರವಿದೆಯಲ್ಲ ಅದು. ಇದು ಅಮೃತವು, ಅಭಯವು ಇದನ್ನು ಪ್ರವೇಶಿಸಿ ಗುಣಕ್ಕೆ ತಕ್ಕಂತೆಯೇ[1] ದೇವತೆಗಳು ಅಮೃತರೂ ಅಭಯರೂ ಆದರು.

## ಅಮೃತಾಭಯಗುಣೋಂಕಾರೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಗ್ಂ ಸ್ವರಮಮೃತಮಭಯಂ ಪ್ರವಿಶತಿ ತತ್ ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ ॥ ೫ ॥**

೫. ಯಾವನು ಈ ಅಕ್ಷರವನ್ನು ಹೀಗೆಂದು ಅರಿತುಕೊಂಡು ಸ್ತೋತ್ರಮಾಡುವನೋ ಅವನು ಅಮೃತವೂ ಅಭಯವೂ ಆದ ಇದೇ ಅಕ್ಷರವೆಂಬ ಸ್ವರವನ್ನು ಪ್ರವೇಶಿಸುತ್ತಾನೆ. ಇದನ್ನು ಒಳಹೊಕ್ಕು ದೇವತೆಗಳು ಎಂಥ ಅಮೃತರಾದರೋ ಅಂಥ ಅಮೃತನಾಗುತ್ತಾನೆ.

### ಈ ಓಂಕಾರೋಪಾಸನೆಗೆ ಫಲ

(ಭಾಷ್ಯ)

೫೧. ಸ ಯೋಽನ್ಯೋಽಪಿ ದೇವವದೇವ ಏತದಕ್ಷರಮ್ ಏವಮ್ ಅಮೃತಾಭಯಗುಣಂ[2] ವಿದ್ವಾನ್ ಪ್ರಣೌತಿ ಸ್ತೌತಿ । ಉಪಾಸನಮೇವಾತ್ರ ಸ್ತುತಿರಭಿಪ್ರೇತಾ । ಸ ತಥೈವ ಏತದೇವ ಅಕ್ಷರಂ ಸ್ವರಮ್ ಅಮೃತಮಭಯಂ ಪ್ರವಿಶತಿ । ತತ್ ಪ್ರವಿಶ್ಯ ಚ ರಾಜಕುಲಂ ಪ್ರವಿಷ್ಟಾನಾಮಿವ ರಾಜ್ಞೋಽನ್ತರಙ್ಗಬಹಿರಙ್ಗತಾವತ್ ನ ಪರಸ್ಯ ಬ್ರಹ್ಮಣೋಽನ್ತರಙ್ಗಬಹಿರಙ್ಗತಾವಿಶೇಷಃ । ಕಿಂ ತರ್ಹಿ ಯದಮೃತಾ ದೇವಾಃ, ಯೇನ ಅಮೃತತ್ವೇನ ಯದಮೃತಾ ಅಭೂವನ್ ತೇನೈವ ಅಮೃತತ್ವೇನ ವಿಶಿಷ್ಟಃ, ತದಮೃತೋ ಭವತಿ । ನ ನ್ಯೂನತಾ ನಾಪ್ಯಧಿಕತಾ ಅಮೃತತ್ವೇ ಇತ್ಯರ್ಥಃ ॥

---

1. ಅಮೃತಾಭಯಗುಣವುಳ್ಳದ್ದೆಂದು ಉಪಾಸನೆಮಾಡಿದ್ದಕ್ಕೆ ತಕ್ಕಂತೆಯೇ ಎಂದರ್ಥ. **ಹೇಗೆಹೇಗೆ** ಉಪಾಸನೆಮಾಡಿದರೆ ಹಾಗೆಹಾಗೆ ಫಲವಾಗುವದೆಂಬ ಶತಪಥಬ್ರಾಹ್ಮಣದ **ಸೂಚನೆ** ಇಲ್ಲಿದೆ.

2. "ಅಮೃತಮಭಯಗುಣಂ" ಎಂಬುದಕ್ಕಿಂತ ಈ ಪಾಠವು ಮೇಲು.

(ಭಾಷ್ಯಾರ್ಥ)

ಮತ್ತೆ ಬೇರೆ ಯಾವನು ದೇವತೆಗಳಂತೆಯೇ ಈ ಅಕ್ಷರವನ್ನು ಹೀಗೆಂದು ಅಮೃತಾಭಯಗುಣವುಳ್ಳದ್ದೆಂದು ಅರಿತುಕೊಂಡು (ಪ್ರಣೌತಿ = ಸ್ತೌತಿ) ಸ್ತೋತ್ರ ಮಾಡುವನೋ ಇಲ್ಲಿ ಸ್ತುತಿ ಎಂದರೆ ಉಪಾಸನೆಯೆಂದೇ ಅಭಿಪ್ರಾಯ[1] — ಅವನೂ[2] ಹಾಗೆಯೇ ಅಮೃತವೂ ಅಭಯವೂ ಆದ ಈ ಅಕ್ಷರವೆಂಬ ಸ್ವರವನ್ನೇ ಪ್ರವೇಶಿಸುತ್ತಾನೆ ಇದನ್ನು ಪ್ರವೇಶಿಸಿ– ರಾಜನ ಅರಮನೆಯನ್ನು ಹೊಕ್ಕವರಿಗೆ ಅಂತರಂಗ, ಬಹಿರಂಗ– ಎಂಬ (ತಾರತಮ್ಯವಿರು)ವಂತೆ ಪರಬ್ರಹ್ಮಕ್ಕೆ ಅಂತರಂಗ ಬಹಿರಂಗಗಳೆಂಬ ವಿಶೇಷವಿರುವದಿಲ್ಲ[3], ಮತ್ತೇನೆಂದರೆ– **ದೇವತೆಗಳು (ಯದಮೃತಾಃ) ಯಾವ ಅಮೃತತ್ವದಿಂದ ಅಮೃತರಾದರೋ, ಅದೇ ಅಮೃತತ್ವದಿಂದಲೇ ಕೂಡಿ ಅಮೃತನಾಗುತ್ತಾನೆ. (ಅವನ) ಅಮೃತತ್ವದಲ್ಲಿ ಕಡಿಮೆಯೂ ಇರುವದಿಲ್ಲ, ಹೆಚ್ಚಿಗೆಯೂ ಇರುವದಿಲ್ಲ ಎಂದರ್ಥ.**[4]

---

# ಒಂದನೆಯ ಅಧ್ಯಾಯ-ಐದನೆಯ ಖಂಡ

(ಉದ್ಗೀಥೋಪಾಸನೆ ಮುಂದುವರಿದದ್ದು)

## ಓಂಕಾರದಲ್ಲಿ ಪ್ರಾಣರಶ್ಮಿಭೇದವಿಶಿಷ್ಟದೃಷ್ಟಿ

(ಉಪನಿಷತ್ತು)

**ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥಃ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ ॥ ೧ ॥**

---

1. ಏಕೆಂದರೆ ಇಲ್ಲಿ ಸ್ತೋತ್ರವು, ಸಾಮಗಾನವು, ಪ್ರಕೃತವಲ್ಲ, ಉಪಾಸನೆಯೇ ಪ್ರಕೃತ.

2. ದೇವತೆಗಳು ಮಹಾಮಹಿಮರಾದ್ದರಿಂದ ಅವರಿಗೆ ದಕ್ಕಿದ ಅಮೃತತ್ವವು ನಮಗೆ ದಕ್ಕೀತೆ?– ಎಂಬ ಶಂಕೆಗೆ ಪರಿಹಾರವಿದು. ಉಪಾಸನೆ ಮುಖ್ಯ, ಉಪಾಸಕರ ಮಹಿಮೆಯಲ್ಲ ಎಂದು ಭಾವ

3. ಅರಮನೆಯನ್ನು ಹೊಕ್ಕವರೆಲ್ಲರೂ ರಾಜನ ಅಂತರಂಗದವರಾಗಿರುವದಿಲ್ಲ, ಹಾಗೆಯೇ ಬ್ರಹ್ಮದ ವಿಷಯಕ್ಕೂ ಇರಬಹುದಲ್ಲ' ಎಂಬ ಶಂಕೆಯ ಪರಿಹಾರಕ್ಕೆ ಇದನ್ನು ಹೇಳಿದೆ

4. ಓಂಕಾರವನ್ನು ಬ್ರಹ್ಮದೃಷ್ಟಿಯಿಂದಲೇ ಉಪಾಸನೆಮಾಡುವವರಿಂದಲೂ ಬ್ರಹ್ಮದಲ್ಲಿ ಯಾವ ತಾರತಮ್ಯವೂ ಇಲ್ಲವಾದ್ದರಿಂದಲೂ ಈ ಉಪಾಸನೆಯಲ್ಲಿಯೂ ತಾರತಮ್ಯವಿಲ್ಲ. ಉಪಾಸನೆಯ ತಾರತಮ್ಯದಿಂದಲೇ ಫಲತಾರತಮ್ಯವೇ ಹೊರತು ಬ್ರಹ್ಮದ ಸ್ವಭಾವದಿಂದಲ್ಲ. ಎಂದು ಭಾವ.

೧. ಇನ್ನು ಉದ್ಗೀಥವೆಂಬುದಿದೆಯಲ್ಲ, ಅದೇ ಪ್ರಣವವು ; ಪ್ರಣವವೆಂಬುದಿದೆಯಲ್ಲ, ಅದೇ ಉದ್ಗೀಥವು. ಆ ಆದಿತ್ಯನೇ ಉದ್ಗೀಥವು, ಅವನೇ ಪ್ರಣವವು. ಅವನು ಓಮ್ ! ಎಂದಲ್ಲವೆ, ಸ್ವರಮಾಡುತ್ತಾ ಬರುತ್ತಾನೆ?

## ಈ ಖಂಡದ ಸಂಬಂಧ

(ಭಾಷ್ಯ)

೫೨ ಪ್ರಾಣಾದಿತ್ಯದೃಷ್ಟಿವಿಶಿಷ್ಟಸ್ಯ ಉದ್ಗೀಥಸ್ಯ ಉಪಾಸನಮ್ ಉಕ್ತಮೇವಾನೂದ್ಯ ಪ್ರಣವೋದ್ಗೀಥಯೋರೇಕತ್ವಂ ಕೃತ್ವಾ ತಸ್ಮಿನ್ ಪ್ರಾಣರಶ್ಮಿಭೇದಗುಣವಿಶಿಷ್ಟದೃಷ್ಟ್ಯಾ ಅಕ್ಷರಸ್ಯೋಪಾಸನಮ್ ಅನೇಕಪುತ್ರಫಲಮ್ ಇದಾನೀಂ ವಕ್ತವ್ಯಮ್ ಇತ್ಯಾರಭ್ಯತೇ ॥

(ಭಾಷ್ಯಾರ್ಥ)

ಪ್ರಾಣ, ಆದಿತ್ಯ- ಎಂಬ ದೃಷ್ಟಿಯಿಂದೊಡಗೂಡಿದ ಉದ್ಗೀಥದ ಉಪಾಸನೆಯನ್ನು ಹೇಳಿತಷ್ಟೆ ? (ಅದನ್ನೇ) ಅನುವಾದಮಾಡಿಕೊಂಡು[1] ಪ್ರಣವೋದ್ಗೀಥಗಳನ್ನು ಒಂದಾಗಿ ಮಾಡಿಕೊಂಡು ಅದರಲ್ಲಿ ಪ್ರಾಣರಶ್ಮಿಭೇದವೆಂಬ ಗುಣದಿಂದೊಡಗೂಡಿದ್ದು ಎಂಬ ದೃಷ್ಟಿಯಿಂದ (ಈ) ಅಕ್ಷರದ ಉಪಾಸನೆಮಾಡುವದು ಅನೇಕಪುತ್ರ(ಪ್ರಾಪ್ತಿ ಎಂಬ) ಫಲವನ್ನು ಕೊಡುವದೆಂದು ಈಗ ಹೇಳುವದಕ್ಕೆ (ಈ ಖಂಡವನ್ನು) ಆರಂಭಿಸಿದೆ.

## ಆದಿತ್ಯನೇ ಉದ್ಗೀಥ, ಪ್ರಣವ

(ಭಾಷ್ಯ)

೫೩. ಅಥ ಖಲು ಯ ಉದ್ಗೀಥಃ ಸ ಪ್ರಣವೋ ಬಹ್ವೃಚಾನಾಮ್ । ಯಶ್ಚ ಪ್ರಣವಸ್ತೇಷಾಮ್, ಸ ಏವ ಛಾನ್ದೋಗ್ಯೇ ಉದ್ಗೀಥಶಬ್ದವಾಚ್ಯಃ । ಅಸೌ ವಾ ಆದಿತ್ಯ ಉದ್ಗೀಥಃ । ಏಷ ಪ್ರಣವಃ । ಪ್ರಣವಶಬ್ದವಾಚ್ಯೋಽಪಿ ಸ ಏವ ಬಹ್ವೃಚಾನಾಮ್ ನಾನ್ಯಃ । ಉದ್ಗೀಥಃ ಆದಿತ್ಯಃ ಕಥಮ್ ? ಉದ್ಗೀಥಾಖ್ಯಮ್ ಅಕ್ಷರಮ್ ಓಮಿತಿ ಏತತ್ ಏಷ ಹಿ ಯಸ್ಮಾತ್ ಸ್ವರನ್ ಉಚ್ಚಾರಯನ್ । ಅನೇಕಾರ್ಥತ್ವಾತ್ ಧಾತೂನಾಮ್ । ಅಥವಾ ಸ್ವರನ್ ಗಚ್ಛನ್ ಏತಿ । ಅತಃ ಅಸೌ ಉದ್ಗೀಥಃ ಸವಿತಾ ॥

---

1. ಮೂರನೆಯ ಖಂಡದಲ್ಲಿ ಹೇಳಿದ ಪ್ರಾಣಾದಿತ್ಯದೃಷ್ಟಿಯ ಉಪಾಸನೆಗಿಂತಲೂ ಈ ಉಪಾಸನೆಗೆ ಹೆಚ್ಚಿನ ಫಲವೆಂದು ತಿಳಿಸುವದಕ್ಕಾಗಿ ಅದನ್ನು ಅನುವಾದಮಾಡಿಕೊಂಡಿರುತ್ತದೆ.

(ಭಾಷ್ಯಾರ್ಥ)

ಇನ್ನು ಉದ್ಗೀಥವೆಂಬುದಿದೆಯಲ್ಲ, ಅದು ಬಹ್ವೃಚರ[1] ಪ್ರಣವವು ; ಅವರ ಪ್ರಣವವೆಂಬುದಿದೆಯಲ್ಲ, ಅದೇ ಛಾಂದೋಗ್ಯದಲ್ಲಿ ಉದ್ಗೀಥಶಬ್ದವಾಚ್ಯ(ವಾಗಿರುವದು). ಈ ಆದಿತ್ಯನೇ ಉದ್ಗೀಥವು , ಇವನೇ ಪ್ರಣವವು, ಬಹ್ವೃಚರ ಪ್ರಣವಶಬ್ದವಾಚ್ಯನೂ, ಇವನೇ ಮತ್ತೊಂದಲ್ಲ.

ಆದಿತ್ಯನು ಉದ್ಗೀಥವೆಂಬುದು ಹೇಗೆ ? ಎಂದರೆ, ಉದ್ಗೀಥವೆಂಬ ಹೆಸರಿನ ಅಕ್ಷರವನ್ನು, ಓಮ್ ಎಂಬುದನ್ನು ಇವನು ಸ್ವರಮಾಡುತ್ತಾ, ಉಚ್ಚರಿಸುತ್ತಾ (ಬರುತ್ತಾನಲ್ಲವೆ ? ಆದ್ದರಿಂದ ಇವನು ಉದ್ಗೀಥನು). ಧಾತುಗಳಿಗೆ ಅನೇಕಾರ್ಥಗಳಿರುವದರಿಂದ (ಸ್ವರ್ ಧಾತುವಿಗೆ ಉಚ್ಚರಿಸು ಎಂಬರ್ಥವೂ ಇರಬಹುದಾಗಿದೆ). ಅಥವಾ ಸ್ವರಮಾಡುತ್ತಾ ಎಂದರ ನಡೆಯುತ್ತಾ ಬರುತ್ತಾನೆ.[2] ಆದ್ದರಿಂದ ಈ ಸೂರ್ಯನು ಉದ್ಗೀಥವು.

## ಆದಿತ್ಯನನ್ನೂ ರಶ್ಮಿಗಳನ್ನೂ ಬೇರೆಯೆಂದು ಚಿಂತಿಸುವದು

(ಉಪನಿಷತ್ತು)

**ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮ ತ್ವಮೇಕೋಽಸೀತಿ ಹ ಕೌಷೀತಕಿಃ ಪುತ್ರಮುವಾಚ ರಶ್ಮೀಗ್ಂಸ್ತ್ವಂ ಪರ್ಯಾವರ್ತಯಾದ್ ಬಹವೋ ವೈ ತೇ ಭವಿಷ್ಯನ್ತೀತ್ಯಧಿದೈವತಮ್ ॥೨**

೨. "ಇವನನ್ನೇ ನಾನು ಅಭಿಗಾನಮಾಡಿರುತ್ತೇನೆ. ಆದ್ದರಿಂದ ನನಗೆ ನೀನೊಬ್ಬನೇ ಆಗಿರುತ್ತೀಯೆ. ನೀನು ರಶ್ಮಿಗಳನ್ನು ಪರ್ಯಾವೃತ್ತಿಮಾಡು, ನಿನಗೆ ಬಹುಜನ (ಮಕ್ಕಳೀ) ಆಗುವರು'' ಎಂದು ಕೌಷೀತಕಿಯು ಪುತ್ರನಿಗೆ ಹೇಳಿದನು. ಇದು ಅಧಿದೈವತವು.

---

1. ಋಗ್ವೇದಿಗಳ ಎಂದರ್ಥ, ಏಕೆಂದರೆ ಅವರು ಋಕ್ಕುಗಳನ್ನೇ ಬಹುವಾಗಿ ಅಧ್ಯಯನಮಾಡುವರು.

2. ಸ್ವರ್‌ಧಾತುವಿಗೆ ಗತ್ಯರ್ಥ (ನಡೆ ಎಂಬರ್ಥ)ವನ್ನು ವ್ಯಾಕರಣದಲ್ಲಿ ಹೇಳಿದ್ದರೂ ಉಚ್ಚರಿಸುತ್ತಾ ಎಂಬರ್ಥವನ್ನು ಪ್ರಕೃತಕ್ಕೆ ಹೊಂದುವಂತೆ ಮಾಡಬಹುದು, ಏಕೆಂದರೆ ಧಾತುಗಳಿಗೆ ಅನೇಕಾರ್ಥಗಳಿರುವವೆಂದು ವೈಯಾಕರಣರೂ ಒಪ್ಪಿರುತ್ತಾರೆ ಎಂದು ಮೊದಲನೆಯ ವ್ಯಾಖ್ಯಾನ. ಸೂರ್ಯನು ಸಂಚರಿಸುತ್ತಾ ಬರುತ್ತಿರುವದು, ಜೀವರುಗಳ ಪ್ರವೃತ್ತಿಗಳಿಗೆ ಓಮ್ ಎಂದು ಅನುಜ್ಞೆಕೊಡುವಂತಿದೆ; ಆದ್ದರಿಂದ ಗಚ್ಛನ್ (ನಡೆಯುತ್ತಾ) ಎಂದೇ ಅರ್ಥಮಾಡಬಹುದು ಎಂದು ಈಗಿನ ವ್ಯಾಖ್ಯಾನ.

# ರಶ್ಮಿಭೇದಚಿಂತನವಿಧಾನ

(ಭಾಷ್ಯ)

೫೪. ತಮ್ ಏತಮ್ ಉ ಏವ ಅಹಮ್ ಅಭ್ಯಗಾಸಿಷಮ್ ಆಭಿಮುಖ್ಯೇನ ಗೀತವಾನಸ್ಮಿ । ಆದಿತ್ಯರಶ್ಮ್ಯಭೇದಂ ಕೃತ್ವಾ ಧ್ಯಾನಂ ಕೃತವಾನಸ್ಮಿ ಇತ್ಯರ್ಥಃ । ಯತಃ,[1] ತಸ್ಮಾತ್ ಕಾರಣಾತ್ ಮಮ ತ್ವಮೇಕೋಽಸಿ ಪುತ್ರ ಇತಿ ಹ ಕೌಷೀತಕಿಃ ಕುಷೀತಕಸ್ಯ ಅಪತ್ಯಂ ಕೌಷೀತಕಿಃ ಪುತ್ರಮುವಾಚ ಉಕ್ತವಾನ್ । ಅತಃ ರಶ್ಮೀನ್ ಆದಿತ್ಯಂ ಚ ಭೇದೇನ ತ್ವಂ ಪರ್ಯಾವರ್ತಯಾತ್ ಪರ್ಯಾವರ್ತಯ ಇತ್ಯರ್ಥಃ । ತ್ವಂ ಯೋಗಾತ್ । ಏವಂ ಬಹವೋ ವೈ ತೇ ತವ ಪುತ್ರಾ ಭವಿಷ್ಯನ್ತಿ । ಇತ್ಯಧಿದೈವತಮ್ ॥

(ಭಾಷ್ಯಾರ್ಥ)

"ಆ ಇವನನ್ನೇ ನಾನು ಅಭಿಗಾನಮಾಡಿರುತ್ತೇನೆ, ಆಭಿಮುಖ್ಯದಿಂದ ಗಾನಮಾಡಿರುತ್ತೇನೆ. ಆದಿತ್ಯನಿಗೂ ರಶ್ಮಿಗಳಿಗೂ ಅಭೇದವನ್ನು ಇಟ್ಟುಕೊಂಡು ಧ್ಯಾನಮಾಡಿರುತ್ತೇನೆ ಎಂದರ್ಥ (ಹೀಗೆ ಮಾಡಿರುವೆ)ನಷ್ಟೆ, ಆ ಕಾರಣದಿಂದ ನನಗೆ ನೀನೊಬ್ಬನೇ ಮಗನಾಗಿರುವೆ" ಎಂದು ಕೌಷೀತಕಿಯು, ಕುಷೀತಕನ ಮಗನಾದ ಕೌಷೀತಕಿಯು, ಮಗನಿಗೆ (ಉವಾಚ=ಉಕ್ತವಾನ್) ಹೇಳಿದನು. "ಆದ್ದರಿಂದ ರಶ್ಮಿಗಳನ್ನೂ ಆದಿತ್ಯನನ್ನೂ ಬೇರೆಬೇರೆ ಎಂದು ನೀನು (ಪರ್ಯಾವರ್ತಯಾತ್=ಪರ್ಯಾವರ್ತಯ) ಪರ್ಯಾವರ್ತನೆಮಾಡು[2] ಎಂದರ್ಥ. (ಇಲ್ಲಿ ಪರ್ಯಾವರ್ತಯ ಎಂದೇ ಏಕೆ ಪದಚ್ಛೇದಮಾಡಿಕೊಳ್ಳಬೇಕೆಂದರೆ) ತ್ವಂ ಎಂಬ (ಮಧ್ಯಮಪುರುಷದ) ಸಂಬಂಧವಿದೆ.[3] ಹಾಗಾದರೆ (ತೇ=ತವ) ನಿನಗೆ ಬಹುಪುತ್ರರೇ ಆಗುವರು" ಇದು ಅಧಿದೈವತವು.[4]

---

1 ಮೂಲದಲ್ಲಿ ತೇನ ಎಂದಿಲ್ಲವಾಗಿ "ಯತಃ' ಎಂಬ ಪಾಠವನ್ನೇ ನಾವು ಇಟ್ಟುಕೊಂಡಿದೇವೆ, ಇದು ತಸ್ಮಾತ್ ಎಂಬುದಕ್ಕೆ ಸಂಬಂಧವನ್ನು ತೋರಿಸುವದಕ್ಕೆ ಭಾಷ್ಯದಲ್ಲಿ ಬರೆದದ್ದೆಂದು ಭಾವಿಸಬಹುದು.

2. ಆವೃತ್ತಿಮಾಡು ಎಂದರ್ಥ ಉಪಾಸನೆಗಳಲ್ಲಿ ಪ್ರತ್ಯಯವನ್ನು ಮತ್ತೆಮತ್ತೆ ಆವೃತ್ತಿಮಾಡಬೇಕೆಂಬುದಕ್ಕೆ ಇದೊಂದು ಗುರುತು. ಸೂ. ಭಾ. ೪-೧-೧, ಛಾ ಭಾ. ೫೦೬ನ್ನು ನೋಡಿ.

3. ಪ್ರಥಮಪುರುಷವಿಲ್ಲವಾದ್ದರಿಂದ ಪರ್ಯಾವರ್ತಯಾತ್= ಆವೃತ್ತಿಮಾಡಲಿ ಎಂಬುದಕ್ಕೆ ಅನ್ವಯವಾಗುವದಿಲ್ಲ.

4 ಇದು ಅಧಿದೈವತೋಪಾಸನೆ; ಮುಂದಿನ ಕಂಡಿಕೆಯಲ್ಲಿ ಅಧ್ಯಾತ್ಮೋಪಾಸನೆಯನ್ನು ಹೇಳಲಾಗುವದು.

## ಮುಖ್ಯಪ್ರಾಣವನ್ನೂ ಪ್ರಾಣಗಳನ್ನೂ ಬೇರೆಬೇರೆ ಎಂದು ಚಿಂತಿಸುವದು

(ಉಪನಿಷತ್ತು)

**ಅಥಾಧ್ಯಾತ್ಮಂ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥ ಮುಪಾಸೀತೋಮಿತಿ ಹ್ಯೇಷ ಸ್ವರನ್ನೇತಿ　　॥ ೩ ॥**

೩. ಇನ್ನು ಅಧ್ಯಾತ್ಮವು. ಈ ಮುಖ್ಯಪ್ರಾಣನಿದಾನಲ್ಲ, ಅವನನ್ನೇ ಉದ್ಗೀಥವೆಂದು ಉಪಾಸನೆಮಾಡಬೇಕು. ಇವನು ಓಮೆಂದು ಸ್ವರಮಾಡುತ್ತಾ ಬರುತ್ತಾನಲ್ಲವೆ ?

## ಪ್ರಾಣವೇ ಉದ್ಗೀಥವೆಂಬ ಉಪಾಸನೆ

(ಭಾಷ್ಯ)

೫೫. ಅಥ ಅನನ್ತರಮ್ ಅಧ್ಯಾತ್ಮಮ್ ಉಚ್ಯತೇ । ಯ ಏವಾಯಂ ಮುಖ್ಯಃ ಪ್ರಾಣಃ ತಮ್ ಉದ್ಗೀಥಮುಪಾಸೀತ ಇತ್ಯಾದಿಪೂರ್ವವತ್ । ತಥಾ ಓಮಿತಿ ಹಿ ಏಷ ಪ್ರಾಣೋಽಪಿ ಸ್ವರನ್ನೇತಿ । ಓಮಿತಿ ಹಿ ಅನುಜ್ಞಾಂ ಕುರ್ವನ್ನಿವ ವಾಗಾದಿಪ್ರವೃತ್ತ್ಯರ್ಥಮ್ ಏತೀತ್ಯರ್ಥಃ । ನ ಹಿ ಮರಣಕಾಲೇ ಮುಮೂರ್ಷೋಃ ಸಮೀಪಸ್ಥಾಃ ಪ್ರಾಣಸ್ಯ ಓಂಕರಣಂ ಶೃಣ್ವನ್ತೀತಿ । ಏತತ್ ಸಾಮಾನ್ಯಾತ್ ಆದಿತ್ಯೇಽಪಿ ಓಂಕರಣಮ್ ಅನುಜ್ಞಾಮಾತ್ರಂ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಇನ್ನು (ಅಧಿದೈವತವಾದ) ಬಳಿಕ ಅಧ್ಯಾತ್ಮದ (ಉಪಾಸನೆ)ಯನ್ನು ಹೇಳಲಾಗುವದು. ಈ ಮುಖ್ಯಪ್ರಾಣವಿದೆಯಲ್ಲ, ಇದನ್ನೇ ಉದ್ಗೀಥವೆಂದು ಉಪಾಸನೆ ಮಾಡಬೇಕು– ಎಂದುಮುಂತಾಗಿರುವದನ್ನು ಹಿಂದಿನ (ಕಂಡಿಕೆ)ಯಂತೆ ವ್ಯಾಖ್ಯಾನ ಮಾಡಿಕೊಳ್ಳಬೇಕು. ಹಾಗೆಯೇ[1] ಈ ಪ್ರಾಣವೂ ಸ್ವರಮಾಡುತ್ತಾ ವಾಗಾದಿಗಳ ಪ್ರವೃತ್ತಿಗಾಗಿ ಓಮ್ ! ಎಂದು ಅನುಜ್ಞೆಯನ್ನು ಕೊಡುತ್ತಿರುವವನಂತೆಯೇ ಬರುತ್ತಾರೆ ಎಂದರ್ಥ. ಮರಣಕಾಲದಲ್ಲಿ ಸಾಯಲಿರುವವನ ಹತ್ತಿರವಿರುವವರಿಗೆ ಪ್ರಾಣವು ಓಂಕಾರ(ವನ್ನುಚ್ಚಾರ)ಮಾಡುವದು ಕೇಳಬರುವದಿಲ್ಲವಷ್ಟೆ ?[2] ಇದಕ್ಕೆ

1. ಸೂರ್ಯನಂತೆಯೇ.

2. ಆದ್ದರಿಂದ ಪ್ರಾಣವು "ಓಮೆಂದು ಸ್ವರಮಾಡುತ್ತದೆ" ಎಂದರೆ ಅನುಜ್ಞೆಕೊಡುತ್ತದೆ, ವಾಗಾದಿಪ್ರವೃತ್ತಿಗಳಿಗೆ ಸಹಾಯಮಾಡುತ್ತದೆ ; ಪ್ರಾಣಾಶ್ರಯದಿಂದಲೇ ವಾಗಾದಿಗಳು ತಮ್ಮತಮ್ಮ ಕಾರ್ಯದಲ್ಲಿ ತೊಡಗುತ್ತವೆ ಎಂದರ್ಥ. ಪ್ರಾಣವು ಓಮ್ ಎಂದುಚ್ಚರಿಸುವದು ವಾಗಾದಿಗಳ ಪ್ರವೃತ್ತಿಗೆ ಅನುಜ್ಞೆಕೊಡುವದಕ್ಕೆಂದೇ ತಿಳಿಯಬೇಕು. ಸುಮ್ಮನೆ ಓಂಕಾರೋಚ್ಚಾರಣೆಮಾಡುವದರಿಂದ ಅದಕ್ಕೆ ಉದ್ಗೀಥತ್ವವಿಲ್ಲ- ಎಂದು ಅಭಿಪ್ರಾಯ.

ಸಮಾನವಾಗಿರುವದರಿಂದ ಆದಿತ್ಯನಲ್ಲಿಯೂ ಓಂಕರಣವು ಅನುಜ್ಞಾಮಾತ್ರವೇ[1] ಎಂದು ತಿಳಿಯಬೇಕು.

(ಉಪನಿಷತ್ತು)

**ಏತದು ಹ ಸ್ಮಾಹ ಕೌಷೀತಕಿಃ ಪುತ್ರಮುವಾಚ ಪ್ರಾಣಾಗ್ಂಸ್ತ್ವಂ ಭೂಮಾನಮಭಿಗಾಯತಾದ್ಬಹವೋ ವೈ ಮೇ ಭವಿಷ್ಯನ್ತೀತಿ ॥**

೪. "ಇವನನ್ನೇ ನಾನು ಅಭಿಗಾನಮಾಡಿರುತ್ತೇನೆ; ಆದ್ದರಿಂದ ನನಗೆ ನೀನೊಬ್ಬನೇ ಆಗಿರುತ್ತೀಯೆ. ನೀನು 'ನನಗೆ ಬಹು ಪುತ್ರರಾಗಲಿ!' ಎಂದು ಪ್ರಾಣಗಳನ್ನು ಭೂಮವೆಂದು ಅಭಿಗಾನ ಮಾಡು'' ಎಂದು ಕೌಷೀತಕಿಯು ಪುತ್ರನಿಗೆ ಹೇಳಿದನು.

## ಪ್ರಾಣಭೇದಚಿಂತನವಿಧಾನ

(ಭಾಷ್ಯ)

೫೭. ಏತದು ಏವಾಹಮಭ್ಯಗಾಸಿಷಮ್ ಇತ್ಯಾದಿ ಪೂರ್ವವದೇವ । ಅತೋ ವಾಗಾದೀನ್ ಮುಖ್ಯಂ ಚ ಪ್ರಾಣಂ ಭೇದಗುಣವಿಶಿಷ್ಟಮುದ್ಗೀಥಂ ಪಶ್ಯನ್ ಭೂಮಾನಂ ಮನಸಾ ಅಭಿಗಾಯತಾತ್ । ಪೂರ್ವವತ್ 'ಆವರ್ತಯ' ಇತ್ಯರ್ಥಃ । ಬಹವೋ ವೈ ಮೇ ಮಮ ಪುತ್ರಾ ಭವಿಷ್ಯನ್ತೀತ್ಯೇವಮಭಿಪ್ರಾಯಃ ಸನ್ ಇತ್ಯರ್ಥಃ । ಪ್ರಾಣಾದಿತ್ಯೈಕತ್ವೋದ್ಗೀಥದೃಷ್ಟೇಃ ಏಕಪುತ್ರತ್ವಫಲದೋಷೇಣ ಅಪೋದಿತತ್ವಾತ್ ರಶ್ಮಿಪ್ರಾಣಭೇದದೃಷ್ಟೇಃ ಕರ್ತವ್ಯತಾ ಚೋದ್ಯತೇ ಅಸ್ಮಿನ್ ಖಣ್ಡೇ[2] ಬಹುಪುತ್ರಫಲತ್ವಾರ್ಥಮ್ ॥

(ಭಾಷ್ಯಾರ್ಥ)

'ಏತದು ಏವಾಹಮಭ್ಯಗಾಸಿಷಮ್' ಮುಂತಾದದ್ದನ್ನು ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು) ಆದ್ದರಿಂದ ವಾಗಾದಿಗಳನ್ನು ಭೇದಗುಣ ವಿಶಿಷ್ಟನಾದ ಮುಖ್ಯಪ್ರಾಣನನ್ನು ಉದ್ಗೀಥವೆಂದು ತಿಳಿದು[3] ಭೂಮವೆಂದು[4]

1. ಇಲ್ಲಿ ಮಾತ್ರಶಬ್ದವನ್ನುಪಯೋಗಿಸಿರುವದರಿಂದಲೂ ಸಮೀಪಸ್ಥರು ಓಂಕರಣವನ್ನು "ಕೇಳುವದಿಲ್ಲ" ಎಂದು ಹೇಳಿರುವದರಿಂದಲೂ ಉಚ್ಚಾರಣವೆಂಬರ್ಥದಲ್ಲಿ ತಾತ್ಪರ್ಯವಿಲ್ಲ; ಆದಿತ್ಯನು ಜನರ ಪ್ರವೃತ್ತಿಗೂ ಪ್ರಾಣವು ವಾಗಾದಿಪ್ರವೃತ್ತಿಗೂ ಅನುಜ್ಞೆಯನ್ನೀಯುವದೇ ಸ್ವರಮಾಡುವದೆಂಬ ಓಂಕರಣವು ಎಂದು ಭಾಷ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬೇಕೆಂದು ತೋರುತ್ತದೆ. ಆದರೆ ಟೀಕೆಯಲ್ಲಿ ಹೀಗಿಲ್ಲ.

2. ಕಾಣ್ಡೇ ಎಂಬ ಆ॥ ಪಾಠವು ಅಚ್ಚಿನ ತಪ್ಪು

3. ಭಾವಿಸಿಕೊಂಡು.

4. ಬಹುತ್ವದಿಂದೊಡಗೂಡಿದ.

ಮನಸ್ಸಿನಿಂದ ಅಭಿಗಾನಮಾಡು ; (ಮೇ-ಮಮ) ನನಗೆ ಬಹಳ ಜನ ಮಕ್ಕಳಾಗಲಿ ಎಂಬ ಅಭಿಪ್ರಾಯದಿಂದ (ಅಭಿಗಾನಮಾಡು) ಎಂದರ್ಥ (ಇಲ್ಲಿಯೂ) ಹಿಂದಿನಂತೆ ಆವೃತ್ತಿಮಾಡು ಎಂದೇ ಅರ್ಥ.[1] ಪ್ರಾಣಾದಿತ್ಯರನ್ನು ಒಂದೆಂದು ತಿಳಿಯುವ ಉದ್ಗೀಥದೃಷ್ಟಿಯನ್ನು ಏಕಪುತ್ರತ್ವವೆಂಬ ಫಲವನ್ನು (ಮಾತ್ರ) ಕೊಡತಕ್ಕದ್ದೆಂಬ ದೋಷವಿರುವದೆಂದು ನಿಂದಿಸಿರುವದರಿಂದ ರಶ್ಮಿಗಳನ್ನೂ ಪ್ರಾಣಗಳನ್ನೂ ಬೇರೆಬೇರೆ ಎಂಬ ದೃಷ್ಟಿಯನ್ನು ಬಹುಪುತ್ರರೆಂಬ ಫಲಕ್ಕಾಗಿ ಮಾಡಬೇಕೆಂದು[2] ಈ ಖಂಡದಲ್ಲಿ ವಿಹಿತವಾಗಿರುತ್ತದೆ

## ಪ್ರಣವೋದ್ಗೀಥೈಕತ್ವದರ್ಶನದ ಫಲ

(ಉಪನಿಷತ್ತು)

**ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ ಇತಿ ಹೋತೃಷದನಾದ್ಧೈವಾಪಿ ದುರುದ್ಗೀತಮನು ಸಮಾಹರತೀತ್ಯನುಸಮಾಹರತೀತಿ　　॥ ೫ ॥**

೫. ಇನ್ನು ಉದ್ಗೀಥವೆಂಬುದಿದೆಯಲ್ಲ, ಅದೇ ಪ್ರಣವವು ; ಪ್ರಣವವೆಂಬುದಿದೆಯಲ್ಲ, ಅದೇ ಉದ್ಗೀಥವು. ಹೋತೃಷದನದಿಂದ ದುರುದ್ಗೀತವನ್ನು ಕೂಡ ಸರಿಪಡಿಸಿಕೊಳ್ಳುತ್ತಾನೆ, ಸರಿಪಡಿಸಿ ಕೊಳ್ಳುತ್ತಾನೆ.

(ಭಾಷ್ಯ)

೫೭. 'ಅಥ ಖಲು ಯ ಉದ್ಗೀಥ' ಇತ್ಯಾದಿ । ಪ್ರಣವೋದ್ಗೀಥೈಕತ್ವ ದರ್ಶನಮುಕ್ತಮ್ । ತಸ್ಯೈತತ್ ಫಲಮುಚ್ಯತೇ । ಹೋತೃಷದನಾತ್ । ಹೋತಾ ಯತ್ರಸ್ಥಃ ಶಂಸತಿ ತತ್ಸ್ಥಾನಂ ಹೋತೃಷದನಮ್ । ಹೌತ್ರಾತ್ ಕರ್ಮಣಃ ಸಮ್ಯಕ್ಪ್ರಯುಕ್ತಾತ್ ಇತ್ಯರ್ಥಃ । ನ ಹಿ ದೇಶಮಾತ್ರಾತ್ ಫಲಮಾಹರ್ತುಂ ಶಕ್ಯಮ್ । ಕಿಂ ತತ್? ಹ ಏವಾಪಿ ದುರುದ್ಗೀತಂ ದುಷ್ಟಮುದ್ಗೀತಮ್ ಉದ್ಗಾನಂ ಕೃತಮ್ ಉದ್ಗಾತ್ರಾ ಸ್ವಕರ್ಮಣಿ ಕ್ಷತಂ ಕೃತಮ್ ಇತ್ಯರ್ಥಃ । ತದನು ಸಮಾ ಹರತಿ । ಅನುಸಂಧತ್ತೇ ಇತ್ಯರ್ಥಃ । ಚಿಕಿತ್ಸಯೇವ ಧಾತುವೈಷಮ್ಯಸಮಾಕರಣ ಮಿತಿ ॥

---

1. ಮೂಲದಲ್ಲಿರುವ "ಅಭಿಗಾನಮಾಡಲಿ!" ಎಂಬುದನ್ನು ಮಧ್ಯಮಪುರುಷಕ್ಕೆ ತಿರುಗಿಸಿಕೊಂಡೇ ಎಂದು ಅರ್ಥ.

2. ರಶ್ಮಿಭೇದದೃಷ್ಟಿ, ಪ್ರಾಣಭೇದದೃಷ್ಟಿ- ಎಂದರೆ ರಶ್ಮಿಗಳು ಬೇರೆಬೇರೆ, ಪ್ರಾಣಗಳು ಬೇರೆಬೇರೆ- ಎಂಬುದಿಷ್ಟೇ ಅಲ್ಲ ; ಆದಿತ್ಯನೂ ರಶ್ಮಿಗಳೂ ಬೇರೆ, ಮುಖ್ಯಪ್ರಾಣನೂ ವಾಗಾದಿ ಗಳೂ ಬೇರೆ ಎಂದಿಟ್ಟುಕೊಂಡೇ ಉಪಾಸನೆಮಾಡಬೇಕೆಂದು ಇಲ್ಲಿ ವಿವಕ್ಷಿತವೆಂಬುದು ಭಾಷ್ಯದಿಂದ ವ್ಯಕ್ತವಾಗುತ್ತದೆ.

(ಭಾಷ್ಯಾರ್ಥ)

'ಅಥ ಖಲು ಯ ಉದ್ಗೀಥಃ' ಮುಂತಾದ (ಗ್ರಂಥದ ಅಭಿಪ್ರಾಯ ವೇನೆಂದರೆ) ಪ್ರಣವೋದ್ಗೀಥಗಳು ಒಂದೇ ಎಂಬ ದರ್ಶನವನ್ನು (೫-೧-೧) ಹೇಳಲಾಗಿದೆಯಷ್ಟೆ, ಅದಕ್ಕೆ (ಇಲ್ಲಿ) ಫಲವನ್ನು ಹೇಳಲಾಗುತ್ತದೆ.

ಹೋತೃಷದನದಿಂದ ಹೋತೃವು ಎಲ್ಲಿದ್ದುಕೊಂಡು ಶಸ್ತ್ರವನ್ನು ಹೇಳು ತ್ತಾನೋ,[1] ಆ ಸ್ಥಾನವು ಹೋತೃಷದನವು (ಅಲ್ಲಿರುವ, ಎಂದರೆ)- ಸರಿಯಾಗಿ ಪ್ರಯೋಗಿಸಿದ ಹೌತ್ರಕರ್ಮದಿಂದ ಎಂದರ್ಥ. ಏಕೆಂದರೆ (ಹೋತೃಷದನವೆಂಬ) ಸ್ಥಾನಮಾತ್ರದಿಂದ ಫಲವನ್ನು ತಂದುಕೊಳ್ಳುವದು ಶಕ್ಯವಲ್ಲ ಆ (ಫಲವು) ಯಾವದು ? ಎಂದರೆ, (ದುರುದ್ಗೀತವನ್ನು) ಕೂಡ- ದುಷ್ಟವಾಗಿ ಉದ್ಗೀತವಾದದ್ದು, ಉದ್ಗಾನಮಾಡಿದ್ದು ದುರುದ್ಗೀತವು. (ಅದನ್ನು ಕೂಡ)- ಉದ್ಗಾತೃವು ತನ್ನ ಕರ್ಮದಲ್ಲಿ (ಮಾಡಿಕೊಂಡ) ಕೊರತೆಯನ್ನು (ಕೂಡ) ಎಂದರ್ಥ ಅನುಸಮಾ ಹರಣಮಾಡಿಕೊಳ್ಳುತ್ತಾನೆ, ಸರಿಪಡಿಸಿಕೊಳ್ಳುತ್ತಾನೆ ಎಂದರ್ಥ.[2] ಚಿಕಿತ್ಸೆಯಿಂದ (ಶರೀರದ) ಧಾತುಗಳ ವೈಷಮ್ಯವನ್ನು ಸರಿಪಡಿಸಿಕೊಳ್ಳುವಂತೆ(ಯೇ ಇದು).

---

# ಒಂದನೆಯ ಅಧ್ಯಾಯ-ಆರನೆಯ ಖಂಡ

(ಉದ್ಗೀಥೋಪಾಸನೆ, ಮುಂದುವರಿದದ್ದು)

## ಉದ್ಗೀಥದ ಅಧಿದೈವಿಕಾಂಗೋಪಾಸನೆಗಳು

(ಉಪನಿಷತ್ತು)

**ಇಯಮೇವರ್ಗಗ್ನಿಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತ ಇಯಮೇವ ಸಾಗ್ನಿರಮಸ್ತತ್ಸಾಮ ॥ ೧ ॥**

---

1. ಗಾನವಿಲ್ಲದೆ ಮೂರು ಸ್ವರಗಳನ್ನು ಬಿಟ್ಟು ಏಕಸ್ವರದಿಂದ ಋಕ್ಕುಗಳನ್ನು ಪಠಿಸಿ ಮಾಡುವ ದೇವತಾಸ್ತುತಿಗೆ 'ಶಸ್ತ್ರ'ವೆಂದು ಹೆಸರು , ಶಂಸತಿ ಎಂಬ ಕ್ರಿಯಾಪದವು ಇದನ್ನೇ ಹೇಳುತ್ತದೆ.

2. ಸಾಮವೇದದಲ್ಲಿ ಹೇಳಿರುವ ಈ ಪ್ರತ್ಯಯಕ್ಕೂ ಋಗ್ವೇದದಲ್ಲಿ ಹೇಳಿರುವ ಕರ್ಮಕ್ಕೂ ಸಂಬಂಧವಿದೆ ಎಂದದ್ದು ಉದ್ಗೀಥಾದಿಪ್ರತ್ಯಯಗಳನ್ನು ಎಲ್ಲಾ ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕೆಂಬುದಕ್ಕೆ ಒಂದು ಗುರುತು_ ಎಂಬ ಪೂರ್ವಪಕ್ಷವನ್ನು ಸೂ. ೩-೩-೩ರಲ್ಲಿ ತೆಗೆದು ೩-೩-೬೫ರಲ್ಲಿ ತಳ್ಳಿಹಾಕಿದೆ.

೧. ಈ (ಪೃಥಿವಿ)ಯೇ ಋಕ್ಕು, ಅಗ್ನಿಯು ಸಾಮ. ಆ ಈ ಸಾಮವು ಋಕ್ಕಿನ ಮೇಲೆ ಏರಿಕೊಂಡಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ) ಮೇಲೆಯೇ ಸಾಮವನ್ನು ಗಾನಮಾಡುತ್ತಾರೆ. ಈ (ಪೃಥಿವಿ)ಯೇ ಸಾ, ಅಗ್ನಿಯೇ ಅಮ. ಅದು ಸಾಮ.

## ಪೃಥಿವ್ಯಗ್ನಿದೃಷ್ಟಿಯಿಂದ ಋಕ್ಸಾಮಗಳ ಉಪಾಸನೆ

(ಭಾಷ್ಯ)

೫೮. ಅಥೇದಾನೀಂ ಸರ್ವಫಲಸಂಪತ್ತ್ಯರ್ಥಮ್ ಉದ್ಗೀಥಸ್ಯ ಉಪಾಸನಾಸ್ತರಂ ವಿಧಿತ್ಸ್ಯತೇ । ಇಯಮೇವ ಪೃಥಿವೀ ಋಕ್ । ಋಚಿ ಪೃಥಿವೀದೃಷ್ಟಿಃ ಕಾರ್ಯಾ । ತಥಾ ಅಗ್ನಿಃ ಸಾಮ । ಸಾಮ್ನಿ ಅಗ್ನಿದೃಷ್ಟಿಃ । ಕಥಂ ಪೃಥಿವ್ಯಗ್ನ್ಯೋಃ ಋಕ್ಸಾಮತ್ವಮಿತಿ ? ಉಚ್ಯತೇ । ತದೇತತ್[1] ಅಗ್ನ್ಯಾಖ್ಯಂ ಸಾಮ ಏತಸ್ಯಾಂ ಪೃಥಿವ್ಯಾಮ್ ಋಚಿ ಅಧ್ಯೂಢಮ್ ಅಧಿಗತಮ್ । ಉಪರಿಭಾವೇನ ಸ್ಥಿತಮ್ ಇತ್ಯರ್ಥಃ । ಋಚೀವ ಸಾಮ । ತಸ್ಮಾತ್ ಅತ ಏವ ಕಾರಣಾತ್ ಋಚಿ ಅಧ್ಯೂಢಮೇವ ಸಾಮ ಗೀಯತೇ ಇದಾನೀಮಪಿ ಸಾಮಗೈಃ । ಯಥಾ ಚ ಋಕ್ಸಾಮನೀ ನಾತ್ಯನ್ತಂ ಭಿನ್ನೇ ಅನ್ಯೋಽನ್ಯಮ್, ತಥಾ ಏತೌ ಪೃಥಿವ್ಯಗ್ನೀ । ಕಥಮ್ ? ಇಯಮೇವ ಪೃಥಿವೀ ಸಾ ಸಾಮನಾಮಾರ್ಧಶಬ್ದವಾಚ್ಯಾ । ಇತರಾರ್ಧಶಬ್ದವಾಚ್ಯಃ ಅಗ್ನಿಃ ಅಮಃ । ತದೇತತ್ ಪೃಥಿವ್ಯಗ್ನಿದ್ವಯಂ ಸಾಮ್ನೈಕಶಬ್ದಾಭಿಧೇಯತ್ವಮಾಪನ್ನಂ ಸಾಮ । ತಸ್ಮಾತ್ ನಾನ್ಯೋನ್ಯಂ ಭಿನ್ನಂ ಪೃಥಿವ್ಯಗ್ನಿದ್ವಯಂ ನಿತ್ಯಸಂಶ್ಲಿಷ್ಟಮ್ ಋಕ್ಸಾಮನೀ ಇವ । ತಸ್ಮಾಚ್ಚ ಪೃಥಿವ್ಯಗ್ನ್ಯೋಃ ಋಕ್ಸಾಮತ್ವಮ್ ಇತ್ಯರ್ಥಃ । ಸಾಮಾಕ್ಷರಯೋಃ ಪೃಥಿವ್ಯಗ್ನಿದೃಷ್ಟಿವಿಧಾನಾರ್ಥಮ್ 'ಇಯಮೇವ ಸಾ ಅಗ್ನಿರಮಃ' ಇತಿ ಕೇಚಿತ್ ॥

(ಭಾಷ್ಯಾರ್ಥ)

ಇನ್ನು ಈಗ ಸರ್ವಫಲವೂ ಉಂಟಾಗುವದಕ್ಕಾಗಿ ಉದ್ಗೀಥದ ಮತ್ತೊಂದು ಉಪಾಸನೆಯನ್ನು ಹೇಳಲಾಗುತ್ತದೆ. ಈ ಪೃಥಿವಿಯೇ ಋಕ್ಕು, ಋಕ್ಕಿನಲ್ಲಿ ಪೃಥಿವೀದೃಷ್ಟಿಯನ್ನು ಮಾಡಬೇಕು. ಇದರಂತೆ ಅಗ್ನಿಯೇ ಸಾಮವು; ಸಾಮದಲ್ಲಿ ಅಗ್ನಿದೃಷ್ಟಿ(ಯನ್ನು ಮಾಡಬೇಕು).[2] ಪೃಥಿವ್ಯಗ್ನಿಗಳು ಋಕ್ಸಾಮಗಳೆಂಬುದು

1. ಅಚ್ಚಿನ ಮೂಲದಲ್ಲಿ "ತದೇತತ್" ಎಂದು ಮತ್ತೊಂದು ಸಲ ಇರುವದು ಬೇಕಿಲ್ಲ. ಅ॥ ವಾ॥ ಪಾಠದಲ್ಲಿ ಇಲ್ಲವೂ ಇಲ್ಲ.

2. ಋಕ್ಸಾಮಗಳು ಕರ್ಮಾಂಗವಾಗಿರುವದರಿಂದ ಅವುಗಳಲ್ಲಿ ಪೃಥಿವ್ಯಗ್ನಿಗಳ ದೃಷ್ಟಿಯನ್ನು ಮಾಡಬೇಕು ; ಪೃಥಿವ್ಯಗ್ನಿಗಳಲ್ಲಿ ಋಕ್ಸಾಮಗಳ ದೃಷ್ಟಿಯನ್ನು ಮಾಡಬೇಕು ಎಂಬುದು ಇಲ್ಲಿ ವಿವಕ್ಷಿತವಲ್ಲ. ಆದ್ದರಿಂದ ಋಕ್ಕು ಈ ಪೃಥಿವಿಯೇ ಎಂದು ಅವಧಾರಣೆ ವ ಋಕ್ಕೇ ಎಂದು ಮಾಡಿಲ್ಲ. ಇದರಿಂದ ಕರ್ಮಾಂಗಸಂಸ್ಕಾರವಾಗುತ್ತದೆ. ಸೂ. ಭಾ. ೪-೧-೬.

ಹೇಗೆ ?- ಎಂದರೆ (ಶ್ರುತಿ) ಹೇಳುತ್ತದೆ. ಆ ಇದು, ಅಗ್ನಿ ಎಂಬ ಸಾಮವು ಈ ಪೃಥಿವಿಯೆಂಬ ಋಕ್ಕಿನ ಮೇಲೆ ಏರಿಕೊಂಡಿರುತ್ತದೆ. (ಅಧ್ಯೂಢಮ್ ಎಂದರೆ) ಮೇಲಕ್ಕೆ ಹೋಗಿರುತ್ತದೆ, ಋಕ್ಕಿನ ಮೇಲೆ ಸಾಮವಿರುವಂತೆ ಮೇಲಿನದಾಗಿದ್ದು ಕೊಂಡಿರುತ್ತದೆ ಎಂದರ್ಥ ಆದ್ದರಿಂದ ಈ ಕಾರಣದಿಂದಲೇ ಈಗಲೂ ಸಾಮಗರು ಋಕ್ಕಿನ ಮೇಲೇರಿದ ಸಾಮವನ್ನೇ ಗಾನಮಾಡುತ್ತಾರೆ[1] :

ಹೇಗೆ ಋಕ್ಸಾಮಗಳು ಒಂದಕ್ಕಿಂತ ಒಂದು ಅತ್ಯಂತವಾಗಿ ಭಿನ್ನವಾಗಿಲ್ಲವೋ, ಈ ಪೃಥಿವ್ಯಗ್ನಿಗಳೂ ಹಾಗೆಯೇ (ಭಿನ್ನವಲ್ಲ). ಹೇಗೆಂದರೆ, ಈ ಪೃಥಿವಿಯೇ ಸಾ, ಸಾಮವೆಂಬ ಹೆಸರಿನ ಅರ್ಧವಾದ ಶಬ್ದಕ್ಕೆ ವಾಚ್ಯವು , ಅಗ್ನಿಯು ಅಮವು, ಮತ್ತೊಂದು ಅರ್ಧಶಬ್ದಕ್ಕೆ ವಾಚ್ಯವಾಗಿದೆ ಅದು, ಆ ಈ ಪೃಥಿವ್ಯಗ್ನಿಗಳೆಂಬ ಜೋಡಿಯು ಸಾಮವೆಂಬ ಒಂದೇ ಶಬ್ದಕ್ಕೆ ಅಭಿಧೇಯವಾಗಿರುವದರಿಂದ ಸಾಮವು. ಆದ್ದರಿಂದ ಪೃಥಿವ್ಯಗ್ನಿಗಳೆಂಬ ಜೋಡಿಯು ಋಕ್ಸಾಮಗಳಂತೆ ನಿತ್ಯಸಂಬದ್ಧವಾಗಿರುವದರಿಂದ ಒಂದಕ್ಕೊಂದು ಭಿನ್ನವಲ್ಲ ಆದ್ದರಿಂದಲೂ[2] ಪೃಥಿವ್ಯಗ್ನಿಗಳು ಋಕ್ಸಾಮಗಳು ಎಂದರ್ಥ.

ಸಾಮಾಕ್ಷರಗಳಲ್ಲಿ ಪೃಥಿವ್ಯಗ್ನಿದೃಷ್ಟಿಯನ್ನು (ಮಾಡಬೇಕೆಂದು) ವಿಧಿಸುವದಕ್ಕೋಸ್ಕರ 'ಈ (ಪೃಥಿವಿಯೇ) ಸಾ, ಅಗ್ನಿಯು ಅಮ' ಎಂದು (ಹೇಳಿದೆ) ಎಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ[3]

(ಉಪನಿಷತ್ತು)

**ಅನ್ತರಿಕ್ಷಮೇವರ್ಗ್ವಾಯುಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇಽನ್ತರಿಕ್ಷಮೇವ ಸಾ ವಾಯುರಮಸ್ತತ್ಸಾಮ ॥ ೨ ॥**

---

1. ಋಕ್ಕನ್ನೇ ಅಲ್ಲವೆ, ಸಾಮವಾಗಿ ಗಾನಮಾಡುವರು ? ಋಕ್ಕು ಆಧಾರವೆಂದೂ ಸಾಮವು ಆಧೇಯವೆಂದೂ ತಿಳಿಯುವದಕ್ಕೆ ಇದೇ ಗಮಕವು ಎಂದು ಅಭಿಪ್ರಾಯ.

2. ಒಂದೇ ಶಬ್ದಕ್ಕೆ ಅಭಿಧೇಯವಾಗಿದ್ದುಕೊಂಡಿರುವದರಿಂದಲೇ ಅಲ್ಲದೆ, ಆ ಕಾರಣದಿಂದ ಅವು ಒಂದಕ್ಕೊಂದು ಸಂಬದ್ಧವಾಗಿರುವದರಿಂದಲೂ ಎಂದರ್ಥ.

3. ಸಾ, ಅಮ- ಎಂಬಿವುಗಳಿಗೆ ಪೃಥಿವಿ, ಅಗ್ನಿ- ಇವು ವಾಚ್ಯಗಳೆಂದು ಮೊದಲು ವ್ಯಾಖ್ಯಾನಮಾಡಿತ್ತು. ಅಲ್ಲಿ ಪೃಥಿವ್ಯಗ್ನಿಗಳು ಋಕ್ಸಾಮಗಳೆಂಬುದಕ್ಕೆ ಅದನ್ನು ಹೇತುವಾಗಿ ಎಣಿಸಿತ್ತು. ಈ ಎರಡನೆಯ ವ್ಯಾಖ್ಯಾನಕ್ಕೆ "ಸಾಮ" ಎಂಬುದರಲ್ಲಿರುವ ಸಾ ಎಂಬಕ್ಷರದಲ್ಲಿ ಪೃಥಿವೀದೃಷ್ಟಿಯನ್ನೂ ಅಮ ಎಂಬುದರಲ್ಲಿ ಅಗ್ನಿದೃಷ್ಟಿಯನ್ನೂ ಮಾಡಬೇಕು ಎಂದು ವಿಧಿಸಿದೆ ಎಂದು ಅಭಿಪ್ರಾಯ. ಈ ಪಕ್ಷವನ್ನು ತಿರಸ್ಕರಿಸಿಲ್ಲವಾದ್ದರಿಂದ ಭಾಷ್ಯದಲ್ಲಿ ಇದನ್ನೂ ಒಪ್ಪಿದಂತೆ ಆಗಿದೆ.

೨. ಅಂತರಿಕ್ಷವೇ ಋಕ್ಕು, ವಾಯುವೇ ಸಾಮ. ಆ ಈ (ಸಾಮವು) ಈ ಋಕ್ಕಿನಮೇಲೆ ಏರಿಕೊಂಡಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ) ಮೇಲೆಯೇ ಸಾಮವು ಗಾನಮಾಡಲ್ಪಡುತ್ತದೆ. ಅಂತರಿಕ್ಷವೇ ಸಾ. ವಾಯುವು ಅಮ ; ಅದು ಸಾಮವು.

## ಅಂತರಿಕ್ಷವಾಯುಗಳೆಂದು ಋಕ್ಸಾಮಗಳ ಉಪಾಸನೆ

(ಭಾಷ್ಯ)

೫೫. ಅನ್ತರಿಕ್ಷಮೇವ ಋಕ್ ವಾಯುಃ ಸಾಮ ಇತ್ಯಾದಿಪೂರ್ವವತ್ ॥

(ಭಾಷ್ಯಾರ್ಥ)

ಅಂತರಿಕ್ಷವೇ ಋಕ್ಕು, ವಾಯುವೇ ಸಾಮ– ಎಂಬುದೇ ಮುಂತಾದ (ಗ್ರಂಥವನ್ನು) ಹಿಂದಿನ (ಕಂಡಿಕೆ)ಯಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).

## ದ್ಯುಲೋಕಾದಿತ್ಯರೆಂದು ಋಕ್ಸಾಮಗಳ ಉಪಾಸನೆ

(ಉಪನಿಷತ್ತು)

**ದ್ಯೌರೇವರ್ಗಾದಿತ್ಯಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ ದ್ಯೌರೇವ ಸಾಽಽದಿತ್ಯೋಽಮಸ್ತತ್ಸಾಮ ॥ ೩ ॥**

೩. ದ್ಯುಲೋಕವೇ ಋಕ್ಕು, ಆದಿತ್ಯನೇ ಸಾಮವು. ಆ ಈ ಸಾಮವು ಈ ಋಕ್ಕಿನಮೇಲೆ ಏರಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ)ಮೇಲೆಯೇ ಸಾಮವು ಗಾನಮಾಡಲ್ಪಡುತ್ತದೆ. ದ್ಯುಲೋಕವೇ ಸಾ, ಆದಿತ್ಯನೇ ಅಮ ; ಅದು ಸಾಮವು.[1]

(ಉಪನಿಷತ್ತು)

**ನಕ್ಷತ್ರಾಣ್ಯೇವರ್ಕ್ಚನ್ದ್ರಮಾಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚನ್ದ್ರಮಾ ಅಮಸ್ತತ್ಸಾಮ ॥ ೪ ॥**

---

1. ಈ ವಾಕ್ಯಕ್ಕೆ ಅರ್ಥವನ್ನು ಹಿಂದಿನಂತೆಯೇ ಮಾಡಿಕೊಳ್ಳಬೇಕೆಂದು ಆಚಾರ್ಯರು ಬಿಟ್ಟುಬಿಟ್ಟಿರುತ್ತಾರೆ. ಇದನ್ನು ತಿಳಿಸುವವಕ್ಕೆ ನಾವು ತಲೆಬರಹವನ್ನು ಉಪನಿಷತ್ತಿನ ಮೇಲೆಯೇ ಬರೆದಿರುತ್ತೇವೆ. ಮುಂದೆಯೂ ಹೀಗೆಯೇ ತಿಳಿದುಕೊಳ್ಳಬೇಕು.

೪. ನಕ್ಷತ್ರಗಳೇ ಋಕ್ಕು, ಚಂದ್ರನೇ ಸಾಮವು. ಆ ಈ ಸಾಮವು, ಈ ಋಕ್ಕಿನ ಮೇಲೆ ಏರಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ)ಮೇಲೆಯೇ ಸಾಮವು ಗಾನಮಾಡಲ್ಪಡುತ್ತದೆ. ನಕ್ಷತ್ರಗಳೇ ಸಾ, ಚಂದ್ರನೇ ಅಮ. ಅದು ಸಾಮವು.

## ನಕ್ಷತ್ರಚಂದ್ರರೆಂದು ಋಕ್ಸಾಮೋಪಾಸನೆ

(ಭಾಷ್ಯ)

೬೦ ನಕ್ಷತ್ರಾಣಾಮಧಿಪತಿಶ್ಚನ್ದ್ರಮಾಃ । ಅತಃ ಸ ಸಾಮ ॥

(ಭಾಷ್ಯಾರ್ಥ)

ನಕ್ಷತ್ರಗಳಿಗೆ ಚಂದ್ರನು ಅಧಿಪತಿಯು. ಆದ್ದರಿಂದ ಅವನು ಸಾಮವು (ಎಂದಿದೆ).

(ಉಪನಿಷತ್ತು)

**ಅಥ ಯದೇತದಾದಿತ್ಯಸ್ಯ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ ॥ ೫ ॥**

೫. ಇನ್ನು ಈ ಆದಿತ್ಯನ ಬಿಳಿಯ ಭಾಸವಿದೆಯಲ್ಲ, ಅದೇ ಋಕ್ಕು ; ಇನ್ನು ನೀಲವಾಗಿ ಪರಕೃಷ್ಣವಾಗಿದೆಯಲ್ಲ, ಅದು ಸಾಮ. ಆ ಈ ಸಾಮವು ಈ ಋಕ್ಕಿನಮೇಲೆ ಏರಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ)ಮೇಲೆ ಸಾಮವು ಗಾನಮಾಡಲ್ಪಡುತ್ತದೆ.[1]

## ಆದಿತ್ಯನ ಶುಕ್ಲಕೃಷ್ಣಕಾಂತಿಗಳೆಂದು ಋಕ್ಸಾಮಗಳ ಉಪಾಸನೆ

(ಭಾಷ್ಯ)

೬೧. ಅಥ ಯದೇತತ್ ಆದಿತ್ಯಸ್ಯ ಶುಕ್ಲಂ ಭಾಃ ಶುಕ್ಲಾ ದೀಪ್ತಿಃ ಸೈವ **ಋಕ್** । ಅಥ ಯದಾದಿತ್ಯೇ ನೀಲಂ ಪರಃ ಕೃಷ್ಣಂ ಪರಃ ಅತಿಶಯೇನ ಕಾರ್ಷ್ಣ್ಯಂ **ತತ್ ಸಾಮ** । ತದ್ಧಿ ಏಕಾನ್ತಸಮಾಹಿತದೃಷ್ಟೇರ್ದೃಶ್ಯತೇ ॥

---

1. ಮುಂದಿನ ಕಂಡಿಕೆಯಲ್ಲಿ ಈ ಉಪಾಸನೆಯ ಅವಶಿಷ್ಟಭಾಗವಿದೆ.

(ಭಾಷ್ಯಾರ್ಥ)

ಇನ್ನು ಈ ಆದಿತ್ಯನ ಬಿಳಿಯ ಭಾಸವಿದೆಯಲ್ಲ, ಬಿಳಿಯ ಕಾಂತಿಯಿದೆಯಲ್ಲ, ಅದೇ ಋಕ್ಕು. ಇನ್ನು ಆದಿತ್ಯನಲ್ಲಿ ನೀಲವಾಗಿ ಪರಕೃಷ್ಣವಾದ (ಭಾಸವಿದೆಯಲ್ಲ) -ಪರವೆಂದರೆ ಅತಿಶಯವಾದ ಕಪ್ಪು (ಕಾಂತಿಯಿದೆಯಲ್ಲ)- ಅದು ಸಾಮವು. ಆ (ಕೃಷ್ಣಕಾಂತಿಯು) ಒಂದೇಸಮನೆ ನೆಟ್ಟ ದೃಷ್ಟಿಯವರಿಗೆ ಕಾಣುತ್ತದೆಯಲ್ಲವೆ[1] ?

## ಆದಿತ್ಯಾಂತರ್ಗತಪುರುಷನ ದೃಷ್ಟಿಯಿಂದ ಉಪಾಸನೆ

(ಉಪನಿಷತ್ತು)

**ಅಥ ಯದೇನ್ವೈತದಾದಿತ್ಯಸ್ಯ ಶುಕ್ಲಂ ಭಾಃ ಸೈವ ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮುಸ್ತತ್ಸಾಮಾಥ ಯ ಏಷೋಽನ್ತ ರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರು ರ್ಹಿರಣ್ಯಕೇಶ ಆಪ್ರಣಖಾತ್ ಸರ್ವ ಏವ ಸುವರ್ಣಃ ॥ ೬ ॥**

೬. ಇನ್ನು ಆದಿತ್ಯನ ಈ ಬಿಳಿಯ ಭಾಸವಿದೆಯಲ್ಲ, ಇದೇ ಸಾ ; ಇನ್ನು ನೀಲವಾಗಿರುವ ಪರಕೃಷ್ಣವಾದ (ಭಾಸವಿದೆಯಲ್ಲ), ಅದು ಅಮವು. ಅದು ಸಾಮವು. ಇನ್ನು ಆದಿತ್ಯನೊಳಗೆ ಈ ಹಿರಣ್ಮಯನಾದ ಪುರುಷನು ಕಾಣುತ್ತಿರುವನಲ್ಲ, ಹಿರಣ್ಯಶ್ಮಶ್ರುವಾಗಿ, ಹಿರಣ್ಯಕೇಶನಾಗಿ, ಪ್ರಣಖದವರೆಗೂ ಎಲ್ಲವೂ ಸುವರ್ಣವೇ ಆಗಿರುತ್ತಾನಲ್ಲ—[2]

### ಆದಿತ್ಯಪುರುಷನ ವರ್ಣನೆ

(ಭಾಷ್ಯ)

೬.೨. ತೇ ಏವೈತೇ ಭಾಸೌ ಶುಕ್ಲಕೃಷ್ಣತ್ವೇ ಸಾ ಚ ಅಮಶ್ಚ ಸಾಮ । ಅಥ ಯ ಏಷಃ ಅನ್ತರಾದಿತ್ಯೇ ಆದಿತ್ಯಸ್ಯಾನ್ತಃ ಮಧ್ಯೇ ಹಿರಣ್ಮಯಃ ಹಿರಣ್ಮಯ ಇವ ಹಿರಣ್ಮಯಃ । ನ ಹಿ ಸುವರ್ಣವಿಕಾರತ್ವಂ ದೇವಸ್ಯ ಸಂಭವತಿ । ಋಕ್ಸಾಮ ಗೇಷ್ಣತ್ವಾಪಹತಪಾಪ್ಮತ್ವಾಸಂಭವಾತ್ । ನ ಹಿ ಸೌವರ್ಣೇ ಅಚೇತನೇ ಪಾಪ್ಮಾದಿ ಪ್ರಾಪ್ತಿರಸ್ತಿ, ಯೇನ ಪ್ರತಿಷಿಧ್ಯೇತ । ಚಾಕ್ಷುಷೇ ಚ ಅಗ್ರಹಣಾತ್ । ಅತಃ ಲುಪ್ತೋಪಮ ಏವ ಹಿರಣ್ಮಯಶಬ್ದಃ । ಜ್ಯೋತಿರ್ಮಯಃ ಇತ್ಯರ್ಥಃ । ಉತ್ತರೇ

---

1. ಶಾಸ್ತ್ರಸಂಸ್ಕೃತದೃಷ್ಟಿಯನ್ನೇ ಇಲ್ಲಿ ಸಮಾಹಿತದೃಷ್ಟಿ ಎಂದಿದೆ ಎಂದು ಆ॥ ಗೀ॥ ಟೀಕೆ.

2. ಈ ವಾಕ್ಯವು ಮುಂಗಿನ ಕಂಡಿಕೆಯಲ್ಲಿ ಪೂರ್ಣವಾಗುವದು.

ಷ್ವಪಿ ಸಮಾನಾ ಯೋಜನಾ। ಪುರುಷಃ ಪುರಿ ಶಯನಾತ್। ಪೂರಯತಿ ವಾ ಸ್ವೇನಾತ್ಮನಾ ಜಗತ್ ಇತಿ। ದೃಶ್ಯತೇ ನಿವೃತ್ತಚಕ್ಷುರ್ಭಿಃ, ಸಮಾಹಿತಚೇತೋಭಿಃ ಬ್ರಹ್ಮಚರ್ಯಾದಿಸಾಧನಾಪೇಕ್ಷ್ಯೈಃ[1]। ತೇಜಸ್ವಿನೋಽಪಿ ಶ್ಮಶ್ರುಕೇಶಾದಯಃ ಕೃಷ್ಣಾಃ ಸ್ಯುಃ ಇತ್ಯತೋ ವಿಶಿನಷ್ಟಿ। ಹಿರಣ್ಯಶ್ಮಶ್ರುರ್ಹಿರಣ್ಯಕೇಶಃ ಇತಿ। ಜ್ಯೋತಿರ್ಮಯಾನ್ಯೇವಾಸ್ಯ ಶ್ಮಶ್ರೂಣಿ ಕೇಶಾಶ್ಚ ಇತ್ಯರ್ಥಃ। ಆಪ್ರಣಖಾತ್। ಪ್ರಣಖಃ ನಖಾಗ್ರಮ್। ನಖಾಗ್ರೇಣ ಸಹ ಸರ್ವಃ ಸುವರ್ಣ ಇವ ಭಾರೂಪ ಇತ್ಯರ್ಥಃ॥

(ಭಾಷ್ಯಾರ್ಥ)

ಅದೇ ಈ ಶುಕ್ಲಕೃಷ್ಣಭಾಸಗಳೇ ಸಾ, ಮತ್ತು ಅಮ- (ಎಂದಾಗಿ) ಸಾಮವಾಗಿರುತ್ತವೆ.[2]

ಇನ್ನು[3] (ಅನ್ತರಾದಿತ್ಯೇ= ಆದಿತ್ಯಸ್ಯಾನ್ತಃ ಮಧ್ಯೇ) ಆದಿತ್ಯನ ಒಳಗೆ ಹಿರಣ್ಮಯನಾದ—ಹಿರಣ್ಮಯನಂತೆ ಇರುವವನು ಹಿರಣ್ಮಯನು (ಎಂದು ಉಪಮಾರ್ಥವನ್ನು ತೆಗೆದುಕೊಳ್ಳಬೇಕು). ಏಕೆಂದರೆ ದೇವನಿಗೆ[4] ಸುವರ್ಣವಿಕಾರತ್ವವೆಂಬುದು ಸಂಭವಿಸುವಹಾಗಿಲ್ಲ, ಏಕೆಂದರೆ (ಮುಂದೆ ಹೇಳಿರುವ) ಋಕ್ಸಾಮಗಳು ಗೇಷ್ಣು ಎಂಬುದೂ ಅಪಹತಪಾಪ್ಮನು ಎಂಬುದೂ (ಆಗ) ಹೊಂದುವದಿಲ್ಲ. ಹೇಗೆಂದರೆ ಅಚೇತನನಾದ ಸುವರ್ಣದ ವಿಕಾರದಲ್ಲಿ ಪಾಪವೇ ಮುಂತಾದವುಗಳ ಪ್ರಸಕ್ತಿಯೇ ಇಲ್ಲ, ಇದ್ದರಲ್ಲವೆ, (ಅವನ್ನು) ಇಲ್ಲವೆನ್ನುವದು? ಚಾಕ್ಷುಷ(ಪುರುಷ)ನಲ್ಲಿ (ಸುವರ್ಣವಿಕಾರತ್ವವು) ಕಾಣಬರುವದೂ ಇಲ್ಲ. ಆದ್ದರಿಂದ (ಹಿರಣ್ಮಯನಂತೆ ಇರುವವನು ಎಂದು) ಹಿರಣ್ಮಯಶಬ್ದದಲ್ಲಿ ಉಪಮೆಯು ಲುಪ್ತವಾಗಿದೆ ಎಂದೇ (ತಿಳಿಯಬೇಕು) — ಜ್ಯೋತಿರ್ಮಯನಾದ ಎಂದರ್ಥ. ಮುಂದಿನ (ವಿಶೇಷಣಗಳಲ್ಲಿಯೂ) ಇದಕ್ಕೆ ಸಮವಾಗಿಯೇ ಹೊಂದಿಸಬೇಕು, (ಹಿರಣ್ಮಯನಾದ) ಪುರುಷನು- ಪುರದಲ್ಲಿ[5] ಇರುವವನಿಂದ (ಪುರುಷನು). ಅಥವಾ ತನ್ನ ಸ್ವರೂಪದಿಂದ ಜಗತ್ತನ್ನು ತುಂಬಿಕೊಂಡಿರುತ್ತಾನಾದ್ದರಿಂದ[6] (ಪುರುಷನು)—

---

1 ಇದು ಮಾ॥ ಪಾಠ, ಆ॥ ಪಾಠವು "ಸಾಧನಾಪೇಕ್ಷಮ್" ಎಂದಿದೆ

2. ಈ ವಾಕ್ಯವು ಹಿಂದಿನ ಶುಕ್ಲಕೃಷ್ಣಕಾಂತಿಗಳ ಉಪಾಸನೆಯ ವಾಕ್ಯಶೇಷವು

3 ಇಲ್ಲಿಯವರೆಗೂ ಅಂಗೋಪಾಸನೆಯನ್ನು ಹೇಳಿದೆ, ಈಗ ಪ್ರಧಾನೋಪಾಸನೆಯನ್ನೂ ಹೇಳಲಾಗುತ್ತದೆ ಎಂದು ಟೀಕೆ.

4. ಪರಮೇಶ್ವರನಿಗೆ ಎಂದರ್ಥ. ಈ ಖಂಡದಲ್ಲಿ ಆದಿತ್ಯನೊಳಗೂ ಕಣ್ಣಿನೊಳಗೂ ಇರುವನೆಂದು ವರ್ಣಿಸಿರುವ ಪುರುಷನು ಪರಮೇಶ್ವರನೇ ಎಂಬುದಕ್ಕೆ ಸೂ.ಭಾ ೧-೧-೨೦, ೨೧ನ್ನು ನೋಡಿರಿ.

5. ಆದಿತ್ಯಶರೀರದಲ್ಲಿ, ಅಥವಾ ಆ ಶರೀರದೊಳಗಿನ ಹೃದಯದಲ್ಲಿ.

6. ತನ್ನದೇ ಆಗಿರುವ ಪರಮಾತ್ಮರೂಪದಿಂದ ಸರ್ವಗತನಾಗಿರುವದರಿಂದ.

ಚಕ್ಷುಸ್ಸನ್ನು ಹಿಂತಿರುಗಿಸಿಕೊಂಡು, ಬ್ರಹ್ಮಚರ್ಯವೇ ಮುಂತಾದ ಸಾಧನಗಳಿಂದೊಡಗೂಡಿ, ಸಮಾಹಿತಚಿತ್ತರಾಗಿರುವವರಿಗೆ ಕಾಣಬರುತ್ತಾನಷ್ಟೆ (ಎಂದರ್ಥ).

ತೇಜಸ್ವಿಯಾಗಿದ್ದರೂ ಗಡ್ಡ ಮೈಗೂದಲು ಮುಂತಾದವು ಕಪ್ಪಾಗಿರಬಹುದು, ಆದ್ದರಿಂದ 'ಹಿರಣ್ಯಶ್ಮಶ್ರುವಾಗಿ, ಹಿರಣ್ಯಕೇಶನಾಗಿ' ಎಂಬ ವಿಶೇಷಣಗಳನ್ನು ಕೊಟ್ಟಿರುತ್ತದೆ ಅವನ ಗಡ್ಡದ ಕೂದಲುಗಳೂ ಮೈಗೂದಲುಗಳೂ ಜ್ಯೋತಿರ್ಮಯವಾಗಿಯೇ ಇರುತ್ತವೆ ಎಂದರ್ಥ. ಪ್ರಣಖದವರೆಗೂ-ಪ್ರಣಖವೆಂದರೆ ಉಗುರಿನ ತುದಿ, ಉಗುರಿನ ತುದಿಯೂ ಸೇರಿ ಎಲ್ಲವೂ ಸುವರ್ಣದಂತೆ ಥಳಗುಟ್ಟುತ್ತಿರುವ ರೂಪದವನು ಎಂದರ್ಥ.

(ಉಪನಿಷತ್ತು)

**ತಸ್ಯ ಯಥಾ ಕಪ್ಯಾಸಂ ಪುಣ್ಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ ॥ ೭ ॥**

೭. ಅವನಿಗೆ ಕಪ್ಯಾಸದಂತಿರುವ ಪುಂಡರೀಕವಿರುವದಲ್ಲ, ಹಾಗೆ ಅಕ್ಷಿಗಳು. ಅವನಿಗೆ ಉತ್ ಎಂದು ಹೆಸರು, ಆ ಇವನು ಸರ್ವಪಾಪಗಳನ್ನು (ಬಿಟ್ಟು) ಮೇಲಕ್ಕೆದ್ದವನು. ಯಾವನು ಹೀಗೆಂದು ಅರಿತಿರುವನೋ ಅವನು ಎಲ್ಲಾ ಪಾಪಗಳನ್ನೂ ಬಿಟ್ಟೇಳುವನು.

(ಭಾಷ್ಯ)

೬೩ ತಸ್ಯ ಏವಂ ಸರ್ವತಃ ಸುವರ್ಣವರ್ಣಸ್ಯಾಪಿ ಅಕ್ಷ್ಣೋರ್ವಿಶೇಷಃ। ಕಥಮ್? ತಸ್ಯ ಯಥಾ ಕಪೇಃ ಮರ್ಕಟಸ್ಯ ಆಸಃ ಕಪ್ಯಾಸಃ। ಆಸೇರುಪವೇಶನಾರ್ಥಸ್ಯ ಕರಣೇ ಘಞ್। ಕಪಿಪೃಷ್ಠಾನ್ತಃ ಯೇನ ಉಪವಿಶತಿ। ಕಪ್ಯಾಸ ಇವ ಪುಣ್ಡರೀಕಮ್ ಅತ್ಯನ್ತತೇಜಸ್ವಿ ಏವಮ್ ಅಸ್ಯ[1] ದೇವಸ್ಯ ಅಕ್ಷಿಣೀ। ಉಪಮಿತೋಪಮಾನತ್ವಾತ್ ನ ಹೀನೋಪಮಾ। ತಸ್ಯ ಏವಂಗುಣವಿಶಿಷ್ಟಸ್ಯ ಗೌಣಮಿದಂ ನಾಮ ಉತ್ ಇತಿ। ಕಥಂ ಗೌಣತ್ವಮ್? ಸ ಏಷ ದೇವಃ ಸರ್ವೇಭ್ಯಃ ಪಾಪ್ಮಭ್ಯಃ ಪಾಪ್ಮನಾ ಸಹ ತತ್ಕಾರ್ಯೇಭ್ಯಃ ಇತ್ಯರ್ಥಃ। "ಯ ಆತ್ಮಾಪಹತಪಾಪ್ಮಾ" (೮-೭-೧) ಇತ್ಯಾದಿ ವಕ್ಷ್ಯತಿ। ಉದಿತಃ ಉತ್ ಇತಃ। ಉದ್ಗತಃ ಇತ್ಯರ್ಥಃ। ಅತೋಽಸೌ ಉನ್ನಾಮಾ। ತಮ್ ಏವಂ ಗುಣಸಂಪನ್ನಮ್ ಉನ್ನಾಮಾನಂ ಯಥೋಕ್ತೇನ ಪ್ರಕಾರೇಣ ಯೋ ವೇದ ಸೋಽಪಿ ಏವಮೇವ ಉದೇತಿ ಉದ್ಗಚ್ಛತಿ ಸರ್ವೇಭ್ಯಃ ಪಾಪ್ಮಭ್ಯಃ। ಹ ವೈ ಇತ್ಯವಧಾರಣಾರ್ಥೌ ನಿಪಾತೌ। ಉದೇತ್ಯೇವ ಇತ್ಯರ್ಥಃ ॥

---

1. ಆ॥ ಪಾಠದಲ್ಲಿ "ಅಸ್ಯ" ಎಂಬ ಮಾತಿದೆ; ವಾ॥ ತೆ॥ ಪಾಠಗಳಲ್ಲಿ ಇದು ಇಲ್ಲ.

(ಭಾಷ್ಯಾರ್ಥ)

ಈಗ ಅವನು ಎಲ್ಲಾ ಕಡೆಯಲ್ಲಿಯೂ ಸುವರ್ಣವರ್ಣದವನಾದರೂ (ಅವನ) ಕಣ್ಣುಗಳಲ್ಲಿ ವಿಶೇಷ ಹೇಗೆಂದರೆ, ಅವನಿಗೆ—ಕಪಿಯ ಎಂದರೆ ಕೋತಿಯ ಆಸವು (ಕಪ್ಯಾಸವು. ಇಲ್ಲಿ) ಕೂತುಕೊಳ್ಳು ಎಂಬರ್ಥದ ಆಸ್(ಧಾತು)ವಿಗೆ ಕರಣಾರ್ಥದಲ್ಲಿ ಘಞ್‌ಪ್ರತ್ಯಯವು ಬಂದು (ಆಸ ಎಂಬ ರೂಪವಾಗಿರುತ್ತದೆ)[1], (ಕಪಿಯು) ಯಾವದರಿಂದ ಕುಳಿತುಕೊಳ್ಳುವದೋ ಆ ಕಪಿಪೃಷ್ಠದ ಕೊನೆಯು (ಕಪ್ಯಾಸವೆನಿಸುವದು)—ಕಪ್ಯಾಸದಂತಿರುವ ಪುಂಡರೀಕವು ಹೇಗೆ ಅತ್ಯಂತಕಾಂತಿಯುಕ್ತವಾಗಿರುವದೋ ಹಾಗೆ ಈ ದೇವನ ಅಕ್ಷಿಗಳು[2] (ಇವೆ ಎಂಬರ್ಥ ಇದು) ಉಪಮಿತೋಪಮೆಯಾದ್ದರಿಂದ[3] (ಇದು) ಹೀನೋಪಮೆಯಲ್ಲ.

ಈ ಗುಣಗಳುಳ್ಳ ಅವನಿಗೆ ಉತ್ ಎಂಬ ಗೌಣನಾಮ(ವಿದೆ). (ಇದು) ಗೌಣವೆಂಬುದು ಹೇಗೆ? ಎಂದರೆ, ಆ ಈ ದೇವನು ಎಲ್ಲಾ ಪಾಪಗಳನ್ನೂ—ಪಾಪದಿಂದೊಡಗೂಡಿದ ಅದರ ಕಾರ್ಯಗಳನ್ನೂ[4] ಎಂದರ್ಥ. "ಯಾವನು ಅಪಹತಪಾಪ್ಮನಾದ ಆತ್ಮನೋ" (೮-೭-೧) ಎಂದು ಮುಂತಾಗಿ ಮುಂದೆ (ಶ್ರುತಿ) ಹೇಳುವದಲ್ಲವೆ[5]?– ಉದಿತನಾಗಿರುತ್ತಾನೆ (ಉತ್ ಇತಃ ಬಿಟ್ಟು ಮೇಲಕ್ಕೆದ್ದಿರುತ್ತಾನೆ), ಮೀರಿರುತ್ತಾನೆ ಎಂದರ್ಥ ಆದ್ದರಿಂದ ಅವನಿಗೆ ಉತ್ ಎಂದು ಹೆಸರು[6] ಇಂಥ ಗುಣದಿಂದೊಡಗೂಡಿರುವ ಆ ಉನ್ನಾಮಕ(ದೇವ)ನನ್ನು ಮೇಲೆ ಹೇಳಿದ ಪ್ರಕಾರದಿಂದ ಯಾವನು ಅರಿತುಕೊಂಡಿರುವನೋ[7] ಅವನೂ ಹೀಗೆಯೇ[8] ಎಲ್ಲಾ ಪಾಪಗಳನ್ನೂ ಬಿಟ್ಟೇಳುವನು, ಮೀರುವನು. ಹ ವೈ ಎಂಬ ನಿಪಾತಗಳು ಅವಧಾರಣೆಗೆ (ಬಂದಿವೆ), ಮೀರಿಯೇ ಮೀರುತ್ತಾನೆ ಎಂದರ್ಥ.

---

1. ಭಾವಾರ್ಥದಲ್ಲಿ ಘಞ್ ಬಂದಿದ್ದರೆ ಕುಳಿತುಕೊಳ್ಳುವಿಕೆ ಎಂದರ್ಥವಾಗುತ್ತಿತ್ತು; 'ಆಸ್ಯತೇ ಅನೇನ ಇತ್ಯಾಸಃ' ಎಂದು ಕರಣಾರ್ಥದಲ್ಲಿ ಬಂದಿದೆಯಾದ್ದರಿಂದ ಕುಳಿತುಕೊಳ್ಳುವ ಸಾಧನ ಎಂದರ್ಥ.

2. ಕೆಂದಾವರೆಯಂತೆ ಕೆಂಪಗಿರುವ ಕಂಗಳು ಎಂದರ್ಥ.

3. ಕಣ್ಣುಗಳನ್ನು ನೇರಾಗಿ ಕಪ್ಯಾಸಕ್ಕೆ ಹೋಲಿಸದೆ ಕೆಂದಾವರೆಗೆ– ಕಪ್ಯಾಸದಂಥ ಪುಂಡರೀಕಕ್ಕೆ– ಹೋಲಿಸಿರುವದರಿಂದ.

4. ಜನ್ಮದುಃಖಾದಿಗಳನ್ನೂ.

5. ಆ ನಿರ್ಗುಣಬ್ರಹ್ಮವನ್ನೇ ಇಲ್ಲಿ ಆದಿತ್ಯಸ್ಥನೆಂದು ಉಪಾಸನೆಗಾಗಿ ಹೇಳಿದೆ, ರೂಪರಹಿತನಾದ ಪರಮೇಶ್ವರನಿಗೂ ಇಚ್ಛಾವಶದಿಂದ ಸಾಧಕಾನುಗ್ರಹಾರ್ಥವಾಗಿ ಮಾಯಾಮಯರೂಪವು ಇರಬಹುದಾಗಿದೆ (ಸೂ. ಭಾ. ೧-೧ ೨೦, ಭಾ ಭಾ. ೧೧೪, ೧೧೫).

6. ಪಾಪಗಳನ್ನು ಬಿಟ್ಟೆದ್ದಿರುತ್ತಾನೆ (ಉದಿತಃ), ಆದ್ದರಿಂದ ಉತ್ ಎಂಬ ಗುಣಕ್ಕೆ ಅನುಗುಣವಾದ ನಾಮವಿದೆ.

7. ಉಪಾಸನೆಮಾಡಿರುವನೋ.

8. ಉನ್ನಾಮಕದೇವನಂತೆಯೇ.

(ಉಪನಿಷತ್ತು)

**ತಸ್ಯರ್ಕ್ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಸ್ತಸ್ಮಾತ್ತ್ವೇವೋದ್ಗಾತೈತಸ್ಯ ಹಿ ಗಾತಾ ಸ ಏಷ ಯೇ ಚಾಮುಷ್ಮಾತ್ ಪರಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚೇತ್ಯಧಿದೈವತಮ್ ॥ ೮ ॥**

೮. ಅವನಿಗೆ ಋಕ್ಕೂ ಸಾಮವೂ ಗೇಷ್ಣಗಳು; ಆದ್ದರಿಂದ ಉದ್ಗೀಥನು. ಆದ್ದರಿಂದಲೇ ಉದ್ಗಾತೃ(ವು ಉದ್ಗಾತೃವೆನಿಸುತ್ತಾನೆ). ಇವನನ್ನು ಉದ್ಗಾನಮಾಡುವವನಲ್ಲವೆ? ಆ ಇವನು ಆ (ಆದಿತ್ಯನಿಂದ) ಆಚಿನ ಲೋಕಗಳಿವೆಯಲ್ಲ, ಅವುಗಳನ್ನೂ ದೇವಕಾಮಗಳನ್ನೂ ಈಶನಮಾಡುತ್ತಾನೆ. ಹೀಗೆ ಅಧಿದೈವತವು.

(ಭಾಷ್ಯ)

೬೪. ತಸ್ಯ ಉದ್ಗೀಥತ್ವಂ ದೇವಸ್ಯ ಆದಿತ್ಯಾದೀನಾಮಿವ ವಿವಕ್ಷಿತ್ವಾ[1] ಆಹ। ತಸ್ಯ ಋಕ್ಚ ಸಾಮ ಚ ಗೇಷ್ಣೌ। ಪೃಥಿವ್ಯಾದ್ಯುಕ್ತಲಕ್ಷಣೇ ಪರ್ವಣೀ। ಸರ್ವಾತ್ಮಾ ಹಿ ದೇವಃ। ಪರಾಪರಲೋಕಕಾಮೇಶಿತೃತ್ವಾತ್ ಉಪಪದ್ಯತೇ ಪೃಥಿವ್ಯಗ್ನ್ಯಾದ್ಯೃಕ್ಸಾಮಗೇಷ್ಣತ್ವಮ್[2]। ಸರ್ವಯೋನಿತ್ವಾಚ್ಚ। ಯತ ಏವಮ್ ಉನ್ನಾಮಾ ಚ ಅಸೌ ಋಕ್ಸಾಮಗೇಷ್ಣಶ್ಚ ತಸ್ಮಾತ್ ಋಕ್ಸಾಮಗೇಷ್ಣತ್ವಪ್ರಾಪ್ತಮ್[3] ಉದ್ಗೀಥತ್ವಮುಚ್ಯತೇ ಪರೋಕ್ಷೇಣ। ಪರೋಕ್ಷಪ್ರಿಯತ್ವಾತ್ ದೇವಸ್ಯ ತಸ್ಮಾದುದ್ಗೀಥಃ ಇತಿ। ತಸ್ಮಾತ್ತ್ವೇವ ಹೇತೋಃ ಉದಂ ಗಾಯತೀತಿ ಉದ್ಗಾತಾ। ಯಸ್ಮಾದ್ ಹಿ ಏತಸ್ಯ ಯಥೋಕ್ತಸ್ಯ ಉನ್ನಾಮ್ನಃ ಗಾತಾಽಸೌ, ಅತೋ ಯುಕ್ತಾ ಉದ್ಗಾತಾ ಇತಿ ನಾಮಪ್ರಸಿದ್ಧಿರುದ್ಗಾತುಃ। ಸ ಏಷ ದೇವಃ ಉನ್ನಾಮಾ ಯೇ ಚ ಅಮುಷ್ಮಾತ್ ಆದಿತ್ಯಾತ್ ಪರಾಞ್ಚಃ ಪರಾಕ್ಅಞ್ಚನಾತ್ ಊರ್ಧ್ವಾ ಲೋಕಾಃ, ತೇಷಾಂ ಲೋಕಾನಾಂ ಚ ಈಷ್ಟೇ। ನ ಕೇವಲಮ್ ಈಶಿತೃತ್ವಮೇವ। ಚಶಬ್ದಾತ್ ಧಾರಯತಿ ಚ। "ಸ ದಾಧಾರ ಪೃಥಿವೀಂ ದ್ಯಾಮುತೇಮಾಮ್" (ಋ ಸಂ ಮಂ ೧೦ ೧೨೧-೧) ಇತಿ ಮನ್ತ್ರವರ್ಣಾತ್। ಕಿಂ ಚ ದೇವಕಾಮಾನಾಮ್ ಈಷ್ಟೇ। ಇತ್ಯೇತತ್ ಅಧಿದೈವತಂ ದೇವತಾವಿಷಯಂ ದೇವಸ್ಯ ಉದ್ಗೀಥಸ್ಯ ಸ್ವರೂಪಮ್ ಉಕ್ತಮ್ ॥

---

1. "ವಿವಕ್ಷಿತತ್ವಾತ್" ಎಂಬುದಕ್ಕಿಂತ ಈ ವಾ॥ ತೆ॥ ಪಾಠವೇ ಮೇಲು.
2. "ಪೃಥಿವ್ಯಗ್ನ್ಯೃಕ್ಸಾಮಗೇಷ್ಣತ್ವಮ್" ಎಂಬ ಆ॥ ಪಾಠಕ್ಕಿಂತ ಇದೇ ಮೇಲು.
3. ಈ ಪಾಠದ ವಿಷಯಕ್ಕೆ ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಆದಿತ್ಯಾದಿಗಳಂತೆ ಆ ದೇವನಿಗೂ ಉದ್ಗೀಥತ್ವವನ್ನು ಹೇಳಬೇಕೆಂದು[1] (ಶ್ರುತಿ ಹೀಗೆಂದು) ಹೇಳುತ್ತಿದೆ. ಅವನಿಗೆ ಪೃಥಿವ್ಯಾದಿರೂಪದಿಂದ ಹೇಳಿದ ಋಕ್ಸಾಮವೂ ಗೇಷ್ಣಗಳು, ದೇವನು ಸರ್ವಾತ್ಮನಲ್ಲವೆ[2] ? ಆಚಿನ, ಈಚಿನ– ಲೋಕಗಳಿಗೂ ಕಾಮಗಳಿಗೂ ಒಡೆಯನಾದ್ದರಿಂದ[3] (ಅವನಿಗೆ) ಪೃಥಿವ್ಯಗ್ನ್ಯಾದಿರೂಪದ ಋಕ್ಸಾಮಗಳು ಗೇಷ್ಣಗಳೆಂಬುದು ಯುಕ್ತವಾಗಿರುತ್ತದೆ ಎಲ್ಲಕ್ಕೂ ಕಾರಣನಾಗಿರುವದರಿಂದಲೂ (ಇದು ಹೊಂದುತ್ತದೆ)[4] ಹೀಗೆ ಇವನು ಉನ್ನಾಮಕನಾಗಿಯೂ ಋಕ್ಸಾಮಗೇಷ್ಣನಾಗಿಯೂ ಇರುವನಷ್ಟೆ, ಆದ್ದರಿಂದ–ಋಕ್ಸಾಮಗೇಷ್ಣತ್ವದಿಂದ ಪ್ರಾಪ್ತವಾದ[5] ಉದ್ಗೀಥತ್ವವನ್ನು–'ತಸ್ಮಾದುದ್ಗೀಥಃ' (ಆದ್ದರಿಂದ ಉದ್ಗೀಥನು) ಎಂದು ಪರೋಕ್ಷವಾಗಿ ಹೇಳಿರುತ್ತದೆ, ಏಕೆಂದರೆ ದೇವನು ಪರೋಕ್ಷಪ್ರಿಯನಾಗಿರುತ್ತಾನೆ[6]

---

1. ಉದ್ಗೀಥವನ್ನು ಆದಿತ್ಯಪುರುಷನ ದೃಷ್ಟಿಯಿಂದ ಉಪಾಸನೆಮಾಡಬೇಕೆಂದು ತಿಳಿಸುವದಕ್ಕೋಸ್ಕರ ಈ ಪುರುಷನು ಉದ್ಗೀಥನೆಂದು ತಿಳಿಸುವದಕ್ಕಾಗಿ ಎಂದರ್ಥ.

2 ಸರ್ವಾತ್ಮನಾದ್ದರಿಂದ ಪೃಥಿವ್ಯಾದಿರೂಪದ ಋಕ್ಸಾಮಗಳು ಎಂದು ಅರ್ಥಮಾಡಬೇಕು, ಋಕ್ಸಾಮಗಳು ಮಾತ್ರ ಅವನಿಗೆ ಗೇಷ್ಣಗಳೆಂದರೆ ಪರಿಚ್ಛಿನ್ನನೆಂದಂತೆ ಆದೀತು.

3. ಬರಿಯ ಋಕ್ಸಾಮಗಳು ಮಾತ್ರ ಅವನಿಗೆ ಗೇಷ್ಣಗಳೆಂದರೆ ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಅವನು ಆಳುತ್ತಾನೆಂಬುದು ಹೊಂದುತ್ತಿರಲಿಲ್ಲ, ಆದರೆ ವಾಕ್ಯಶೇಷದಲ್ಲಿ ಹಾಗೆಂದೇ ಹೇಳಿದೆ. ಆದ್ದರಿಂದಲೂ ಪೃಥಿವ್ಯಾದ್ಯಾತ್ಮಕ ಋಕ್ಸಾಮಗಳೇ ಇಲ್ಲಿ ವಿವಕ್ಷಿತ.

4. ಸರ್ವಕ್ಕೂ ಕಾರಣನಾಗಿರುವದರಿಂದ ಅವನು ಸರ್ವಾತ್ಮಕನೆಂಬುದು ಯುಕ್ತವು ; ಆದ್ದರಿಂದಲೂ ಪೃಥಿವ್ಯಾದಿಗಳೇ ಇಲ್ಲಿ ಗೇಷ್ಣಗಳೆಂದು ಹೇಳಿದೆ ಎಂಬುದು ಯುಕ್ತವೆಂದು ಭಾವ. ಹಿಂದೆ ಅಂಗೋಪಾಸನೆಗಳನ್ನು ಹೇಳಿರುವದು ಇಲ್ಲಿಗೆ ಉಪಯೋಗವಾಗಲೆಂಬ ವಿವಕ್ಷೆಯಿಂದಲೇ.

5. ಇಲ್ಲಿ ಭಾಷ್ಯಮೂಲದಲ್ಲಿ ಏನೋ ಹೆಚ್ಚುಕಡಿಮೆಯಾಗಿರುವಂತೆ ತೋರುತ್ತದೆ. ಉನ್ನಾಮಕನೂ ಋಕ್ಸಾಮಗೇಷ್ಣನೂ ಆಗಿರುವದರಿಂದ ಎಂದು ಬಾಯಿಬಿಟ್ಟು ಹೇಳಿ ಉದ್ಗೀಥನೆಂಬ ನಾಮವು ಋಕ್ಸಾಮಗೇಷ್ಣತ್ವದಿಂದ ಪ್ರಾಪ್ತವಾಯಿತೆಂಬುದು ಸರಿಯಾಗಲಾರದು. ಹೀಗೆಯೇ "ಋಕ್ಸಾಮಗೇಷ್ಣತ್ವೇ ಪ್ರಾಪ್ತೇ" ಎಂಬ ಆ॥ ವಾ॥ ತೆ॥ ಪಾಠಗಳೂ ಹೊಂದುವಂತಿಲ್ಲ; ಆ॥ ಪಾಠವೇ ಟೀಕೆಗೆ ಸಮ್ಮತವೆಂಬಂತಿದೆ. ಉತ್ ಎಂಬ ನಾಮ, ಋಕ್ಸಾಮಗೇಷ್ಣತ್ವ– ಇವೆರಡನ್ನೂ ಹೇಳುವ ಹೆಸರಿರಬೇಕಾದರೂ ಉದ್ಗೀಥ ಎಂಬ ಪರೋಕ್ಷನಾಮವನ್ನೇ ಆ ಅರ್ಥದಲ್ಲಿ ಉಪಯೋಗಿಸಿದೆ ಎಂಬರ್ಥದ ವಾಕ್ಯವು ಇಲ್ಲಿರಬೇಕಾಗಿತ್ತೆಂದು ತೋರುತ್ತದೆ.

6. ಆ ದೇವತೆಗಳಿಗೆಲ್ಲ ಪರೋಕ್ಷಪ್ರಿಯತ್ವವಿದೆ ; ಐ.ಭಾ. ೧-೩-೧೪ನ್ನು ನೋಡಿ.

ಅದೇ ಕಾರಣದಿಂದಲೇ (ಉದ್ಗಾತೃವು) ಉತ್ತನ್ನು ಗಾನಮಾಡುತ್ತಾನಾದ್ದರಿಂದ ಉದ್ಗಾತೃ(ವೆಂದು ಕರೆಸಿಕೊಳ್ಳುತ್ತಾನೆ) ಈ ಮೇಲೆ ಹೇಳಿದ ಉನ್ನಾಮಕ (ದೇವ)ನನ್ನು ಗಾನಮಾಡುತ್ತಾನಲ್ಲವೆ, ಅವನು? ಆದ್ದರಿಂದ ಉದ್ಗಾತೃವಿಗೆ 'ಉದ್ಗಾತೃ' ಎಂಬ ಹೆಸರು ಪ್ರಸಿದ್ಧವಾಗಿರುವದು ಯುಕ್ತವಾಗಿರುತ್ತದೆ

ಉನ್ನಾಮಕನಾದ ಆ ಈ ದೇವನು, ಆ ಆದಿತ್ಯನಿಂದ ಆಚೆಯ—(ಸೂರ್ಯನ) ಆಚೆಗೆ ಹೋಗಿರುವವರಿಂದ(ಲೋಕಗಳನ್ನು) ಪರಾಞ್ಚಃ (ಎಂದಿವೆ)—ಮೇಲಿನ ಲೋಕಗಳಿವೆಯಲ್ಲ, ಆ ಲೋಕಗಳನ್ನು ಈಶನಮಾಡುತ್ತಾನೆ (ಆಳುತ್ತಾನೆ), (ಅವುಗಳನ್ನು) ಆಳುತ್ತಾನೆಂಬುದಿಷ್ಟೇ ಅಲ್ಲ, (ಊ ಎಂಬರ್ಥದ ಚಶಬ್ದವಿರುವದರಿಂದ (ಅವುಗಳನ್ನು) ಧರಿಸಿಯೂ ಇರುತ್ತಾನೆ (ಎಂದು ಸೇರಿಸಿಕೊಳ್ಳಬೇಕು) "ಅವನು ಪೃಥಿವಿಯನ್ನೂ ಈ ದ್ಯುಲೋಕವನ್ನೂ ಧರಿಸಿರುತ್ತಾನೆ" (ಋ ಸಂ ಮಂ. ೧೦-೧೦-೧೨೧-೧) ಎಂದು ಮುಂತಾಗಿರುವ ಮಂತ್ರವರ್ಣದಿಂದ (ಇದು ಸಿದ್ಧವಾಗಿರುತ್ತದೆ)[1] ಮತ್ತು ದೇವತೆಗಳ ಕಾಮಗಳನ್ನೂ ಈಶನ ಮಾಡುತ್ತಾನೆ.[2]

ಹೀಗೆ ಅಧಿದೈವತವು, ಉದ್ಗೀಥದೇವನ ದೇವತಾವಿಷಯವಾದ ಸ್ವರೂಪವನ್ನು ಹೇಳಿದ್ದಾಯಿತು.[3]

---

# ಒಂಬತನೆಯ ಅಧ್ಯಾಯ - ಏಳನೆಯ ಖಂಡ

(ಉದ್ಗೀಥೋಪಾಸನೆ, ಮುಂದುವರಿದದ್ದು)

## ಆಧ್ಯಾತ್ಮಿಕಾಂಗೋಪಾಸನೆಗಳು

(ಉಪನಿಷತ್ತು)

**ಅಥಾಧ್ಯಾತ್ಮಂ ವಾಗೇವರ್ಕ್ಪ್ರಾಣಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ । ವಾಗೇವ ಸಾ ಪ್ರಾಣೋಽಮಸ್ತತ್ಸಾಮ ॥ ೧ ॥**

---

1. ದ್ಯುಲೋಕವು ಆದಿತ್ಯನಿಂದಾಚೆಗೆ ಇದೆ ಅದನ್ನು ಆದಿತ್ಯಪುರುಷನು ತನ್ನ ಅಧೀನದಲ್ಲಿಟ್ಟುಕೊಂಡು ಅದಕ್ಕೆ ಆಧಾರವಾಗಿರುತ್ತಾನೆಂಬುದಕ್ಕೆ ಈ ಋಕ್ಕು ಪ್ರಮಾಣವು
2. ಅವರ ಕಾಮಗಳನ್ನೆಲ್ಲ ನೆರವೇರಿಸುತ್ತಾನೆ.
3. ಇನ್ನುಮುಂದೆ ಅಧ್ಯಾತ್ಮರೂಪವನ್ನು ಹೇಳಲಾಗುವದು ಎಂದು ಭಾವ

೧. ಇನ್ನು ಅಧ್ಯಾತ್ಮವು. ವಾಕ್ಕೇ ಋಕ್ಕು, ಪ್ರಾಣವು ಸಾಮವು. ಆ ಈ ಸಾಮವು ಈ ಋಕ್ಕಿನ ಮೇಲೆ ಏರಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ)ಮೇಲೆಯೇ ಸಾಮವು ಗಾನಮಾಡಲ್ಪಡುತ್ತದೆ. ವಾಕ್ಕೇ ಸಾ, ಪ್ರಾಣವೇ ಅಮ. ಅದು ಸಾಮವು.

## ವಾಗ್ಪ್ರಾಣಗಳೆಂದು ಋಕ್ಸಾಮಗಳ ಉಪಾಸನೆ

(ಭಾಷ್ಯ)

೭೫. ಅಥ ಅಧುನಾ ಅಧ್ಯಾತ್ಮಮ್ ಉಚ್ಯತೇ। ವಾಗೇವ ಋಕ್ ಪ್ರಾಣಃ ಸಾಮ। ಅಧರೋಪರಿಸ್ಥಾನತ್ವಸಾಮಾನ್ಯಾತ್। ಪ್ರಾಣೋ ಘ್ರಾಣಮುಚ್ಯತೇ। ಸಹ ವಾಯುನಾ। ವಾಗೇವ ಸಾ ಪ್ರಾಣೋಽಮಃ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಇನ್ನು ಈಗ ಅಧ್ಯಾತ್ಮ(ಸ್ವರೂಪವನ್ನು) ಹೇಳಲಾಗುವದು. ವಾಕ್ಕೇ ಋಕ್ಕು, ಪ್ರಾಣವು ಸಾಮ, ಏಕೆಂದರೆ ಕೆಳಗೆ, ಮೇಲೆ ಇರುವದೆಂಬುದು (ಎರಡಕ್ಕೂ) ಸಮಾನವಾಗಿದೆ[1] ಪ್ರಾಣವೆಂದರೆ (ಇಲ್ಲಿ) ವಾಯುವಿನಿಂದೊಡಗೂಡಿದ ಘ್ರಾಣವು ವಾಕ್ಕೇ ಸಾ, ಪ್ರಾಣವು ಅಮ- ಎಂಬುದೇ ಮುಂತಾದದ್ದನ್ನು ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).

(ಉಪನಿಷತ್ತು)

**ಚಕ್ಷುರೇವರ್ಗಾತ್ಮಾ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ। ಚಕ್ಷುರೇವ ಸಾಽಽತ್ಮಾಮಸ್ತತ್ಸಾಮ ॥ ೨ ॥**

೨. ಚಕ್ಷುಸ್ಸೇ ಋಕ್ಕು, ಆತ್ಮನೇ ಸಾಮ ; ಆ ಈ ಸಾಮವು ಈ ಋಕ್ಕಿನಮೇಲೆ ಏರಿಕೊಂಡಿರುತ್ತದೆ. ಆದ್ದರಿಂದ ಋಕ್ಕಿನ (ಆಧಾರದ)ಮೇಲೆ ಸಾಮವು ಗಾನಮಾಡಲ್ಪಡುತ್ತದೆ. ಚಕ್ಷುಸ್ಸೇ ಸಾ, ಆತ್ಮವು ಅಮ. ಅದು ಸಾಮವು.

## ಚಕ್ಷುಶ್ಛಾಯಾತ್ಮಗಳೆಂದು ಉಪಾಸನೆ

(ಭಾಷ್ಯ)

೭೬. ಚಕ್ಷುರೇವ ಋಕ್, ಆತ್ಮಾ ಸಾಮ, ಆತ್ಮಾ ಇತಿ ಛಾಯಾತ್ಮಾ। ತತ್ಸ್ಥತ್ವಾತ್ ಸಾಮ ॥

---

1. ಋಕ್ಕು ಆಧಾರ, ಸಾಮವು ಆಧೇಯ, ಇದರಂತೆ ವಾಕ್ಕು ಕೆಳಗೆ, ಘ್ರಾಣವು ಮೇಲೆ.

(ಭಾಷ್ಯಾರ್ಥ)

ಚಕ್ಷುಸ್ಸೇ ಋಕ್ಕು, ಆತ್ಮವು ಸಾಮ. (ಇಲ್ಲಿ) ಆತ್ಮವೆಂದರೆ ಛಾಯಾತ್ಮವು. ಆ (ಚಕ್ಷುಸ್ಸಿ)ನಲ್ಲಿರುವದರಿಂದ (ಅದು) ಸಾಮವು.

(ಉಪನಿಷತ್ತು)

**ಶ್ರೋತ್ರಮೇವರ್ಙ್ಮನಃ ಸಾಮ ತದೇತದೇತಸ್ಯಾಮೃಚ್ಯ ಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ। ಶ್ರೋತ್ರಮೇವ ಸಾ ಮನೋಽಮಸ್ತತ್ಸಾಮ ॥ ೩ ॥**

೩. ಶ್ರೋತ್ರವೇ ಋಕ್ಕು, ಮನಸ್ಸು ಸಾಮ, ಆ ಈ ಸಾಮವು ಈ ಋಕ್ಕಿನಮೇಲೆ ಏರಿಕೊಂಡಿರುತ್ತದೆ; ಆದ್ದರಿಂದ ಋಕ್ಕಿನ (ಆಧಾರದ)ಮೇಲೆ ಸಾಮವು ಗಾನಮಾಡಲ್ಪಡುತ್ತದೆ. ಶ್ರೋತ್ರವೇ ಸಾ, ಮನಸ್ಸು ಅಮ; ಅದು ಸಾಮವು.

## ಶ್ರೋತ್ರಮನಸ್ಸುಗಳಿಂದ ಉಪಾಸನೆ

(ಭಾಷ್ಯ)

೬೭. ಶ್ರೋತ್ರಮೇವ ಋಕ್, ಮನಃ ಸಾಮ। ಶ್ರೋತ್ರಸ್ಯ ಅಧಿಷ್ಠಾತೃತ್ವಾತ್ ಮನಸಃ ಸಾಮತ್ವಮ್ ॥

(ಭಾಷ್ಯಾರ್ಥ)

ಶ್ರೋತ್ರವೇ ಋಕ್ಕು, ಮನಸ್ಸು ಸಾಮ. ಶ್ರೋತ್ರಕ್ಕೆ ಮನಸ್ಸು ಅಧಿಷ್ಠಾತೃ[1]ವಾದ್ದರಿಂದ ಮನಸ್ಸು ಸಾಮವು.

(ಉಪನಿಷತ್ತು)

**ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ ಸಾಮ ತದೇತದೇತಸ್ಯಾಮೃಚ್ಯಧ್ಯೂಢಗ್ಂ ಸಾಮ ತಸ್ಮಾದೃಚ್ಯಧ್ಯೂಢಗ್ಂ ಸಾಮ ಗೀಯತೇ। ಅಥ ಯದೇವೈತ ದಕ್ಷ್ಣಃ ಶುಕ್ಲಂ ಭಾಃ ಸೈವ ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮ ॥ ೪ ॥**

೪. ಇನ್ನು ಈ ಕಣ್ಣಿನ ಬಿಳಿಯ ಭಾಸವಿದೆಯಲ್ಲ, ಅದೇ ಋಕ್ಕು; ಇನ್ನು ನೀಲವಾಗಿ ಪರಕೃಷ್ಣವಾದ (ಭಾಸ)ವಿದೆಯಲ್ಲ,

1. ಮನಸ್ಸಿನ ಸಹಾಯವಿಲ್ಲದೆ ಶ್ರೋತ್ರವು ಕೇಳಲಾರದು.

ಅದು ಸಾಮವು. ಆ ಈ ಸಾಮವು ಈ ಋಕ್ಕಿನ ಮೇಲೆ ಏರಿಕೊಂಡಿರುತ್ತದೆ; ಆದ್ದರಿಂದ ಋಕ್ಕಿನ (ಆಧಾರದ) ಮೇಲೆ ಸಾಮವು ಗಾನಮಾಡಲ್ಪಡುತ್ತದೆ. ಇನ್ನು ಈ ಕಣ್ಣಿನ ಬಿಳಿಯ ಭಾಸವಿದೆಯಲ್ಲ. ಅದೇ ಸಾ; ಇನ್ನು ನೀಲವಾಗಿ ಪರಕೃಷ್ಣವಾಗಿದೆಯಲ್ಲ, ಅದು ಅಮ, ಅಮ ಸಾಮವು.

### ಕಣ್ಣಿನ ಶುಕ್ಲಕೃಷ್ಣಕಾಂತಿಗಳಿಂದು ಉಪಾಸನೆ

(ಭಾಷ್ಯ)

೭೮. ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥಯನ್ನೀಲಂ ಪರಃ ಕೃಷ್ಣಮ್ ಆದಿತ್ಯೇ ಇವ ದೃಕ್ಶಕ್ತ್ಯಧಿಷ್ಠಾನಮ್, ತತ್ಸಾಮ ॥

(ಭಾಷ್ಯಾರ್ಥ)

ಈ ಕಣ್ಣಿನ ಬಿಳಿಯ ಭಾಸವಿದೆಯಲ್ಲ, ಅದೇ ಋಕ್ಕು, ಇನ್ನು ಆದಿತ್ಯನಲ್ಲಿರುವಂತೆ[1] ನೀಲವಾಗಿರುವ ಪರಕೃಷ್ಣವಾಗಿ, ನೋಡುವ ಶಕ್ತಿಗೆ ಅಧಿಷ್ಠಾನವಾಗಿರುವ ಭಾಸವಿದೆಯಲ್ಲ, ಅದು ಸಾಮವು

## ಅಕ್ಷ್ಯಂತರ್ಗತಪುರುಷನೆಂದು ಉದ್ಗೀಥದ ಉಪಾಸನೆ

(ಉಪನಿಷತ್ತು)

**ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಸೈವ ರ್ಕ್ತತ್ಸಾಮ ತದುಕ್ಥಂ ತದ್ಯಜುಸ್ತದ್ ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯನ್ನಾಮ ತನ್ನಾಮ ॥ ೫ ॥**

೫. ಇನ್ನು ಅಕ್ಷಿಯೊಳಗೆ ಈ ಪುರುಷನು ಕಾಣುತ್ತಿರುವನಲ್ಲ, ಅದೇ ಋಕ್ಕು, ಅದೇ ಸಾಮವು, ಅದೇ ಉಕ್ಥವು, ಅದೇ ಯಜುಸ್ಸು, ಅದೇ ಬ್ರಹ್ಮವು. ಆ ಇವನಿಗೆ ಅವನಿಗೆ ಯಾವದು ರೂಪವೋ ಅದೇ ರೂಪವು; ಅವನಿಗೆ ಯಾವವು ಗೇಣ್ಣುಗಳೋ ಅವೇ ಗೇಣ್ಣುಗಳು; ಯಾವದು ಹೆಸರೋ ಅದೇ ಹೆಸರು.

---

1. ಭಾ. ಭಾ. ೬ರಲ್ಲಿ ಹೇಳಿರುವಂತೆ ಎಂದರ್ಥ.

## ಅಕ್ಷಿಪುರುಷನಿಗೂ ಆದಿತ್ಯಪುರುಷನ ರೂಪವೇ

(ಭಾಷ್ಯ)

೬೯. ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಪೂರ್ವವತ್ ಸೈವ ಋಕ್ ಅಧ್ಯಾತ್ಮಂ ವಾಗಾದ್ಯಾಃ ಪೃಥಿವ್ಯಾದ್ಯಾ ಚ ಅಧಿದೈವತಮ್ । ಪ್ರಸಿದ್ಧಾ ಚ ಋಕ್ ಪಾದಬದ್ಧಾಕ್ಷರಾತ್ಮಿಕಾ । ತಥಾ ಸಾಮ । ಉಕ್ಥಸಾಹಚರ್ಯಾದ್ವಾ ಸ್ತೋತ್ರಂ ಸಾಮ ಋಕ್ ಶಸ್ತ್ರಂ ಉಕ್ಥಾದನ್ಯತ್[1] । ತಥಾ ಯಜುಃ ಸ್ವಾಹಾಸ್ವಧಾವಷಡಾದಿ ಸರ್ವಮೇವ ವಾಗ್ಯಜುಃ । ತತ್ ಸ ಏವ । ಸರ್ವಾತ್ಮಕತ್ವಾತ್ ಸರ್ವಯೋನಿತ್ವಾಚ್ಚ ಇತಿ ಹಿ ಅವೋಚಾಮ । ಋಗಾದಿ ಪ್ರಕರಣಾತ್ ತದ್ ಬ್ರಹ್ಮ ಇತಿ ತ್ರಯೋ ವೇದಾಃ । ತಸ್ಯೈತಸ್ಯ ಚಾಕ್ಷುಷಸ್ಯ ಪುರುಷಸ್ಯ ತದೇವ ರೂಪಮ್ ಅತಿದಿಶ್ಯತೇ । ಕಿಂ ತತ್ ? ಯತ್ ಅಮುಷ್ಯ ಆದಿತ್ಯಪುರುಷಸ್ಯ ಹಿರಣ್ಮಯ ಇತ್ಯಾದಿ ಯದಧಿದೈವತಮುಕ್ತಮ್ । ಯೌ ಅಮುಷ್ಯ ಗೇಷ್ಣೌ ಪರ್ವಣೀ ತಾವೇವ ಅಸ್ಯಾಪಿ ಚಾಕ್ಷುಷಸ್ಯ ಗೇಷ್ಣೌ । ಯಚ್ಚಾಮುಷ್ಯನಾಮ ಉತ್ ಇತಿ ಉದ್ಗೀಥ ಇತಿ ಚ ತದೇವಾಸ್ಯ ನಾಮ । ಸ್ಥಾನಭೇದಾತ್, ರೂಪಗುಣನಾಮಾತಿದೇಶಾತ್, ಈಶಿತೃತ್ವವಿಷಯಭೇದವ್ಯಪದೇಶಾಚ್ಚ ಆದಿತ್ಯಚಾಕ್ಷುಷಯೋರ್ಭೇದಃ ಇತಿ ಚೇತ್ । ನ । 'ಅಮುನಾ (೧-೭-೭) ಅನೇನೈವ' (೧-೭-೮) ಇತಿ ಏಕಸ್ಯ ಉಭಯಾತ್ಮತ್ವಪ್ರಾಪ್ತ್ಯನುಪಪತ್ತೇಃ । ದ್ವಿಧಾಭಾವೇನ ಉಪಪದ್ಯತ ಇತಿ ಚೇತ್ । ವಕ್ಷ್ಯತಿ ಹಿ "ಸ ಏಕಧಾ ಭವತಿ ತ್ರಿಧಾ ಭವತಿ" (ಛಾಂ. ೭-೨೬-೨) ಇತ್ಯಾದಿ । ನ । ಚೇತನಸ್ಯೈಕಸ್ಯ ನಿರವಯವತ್ವಾತ್ ದ್ವಿಧಾಭಾವಾನುಪಪತ್ತೇಃ । ತಸ್ಮಾತ್ ಅಧ್ಯಾತ್ಮಾಧಿದೈವತಯೋರೇಕತ್ವಮೇವ । ಯತ್ತು ರೂಪಾದ್ಯತಿದೇಶೋ ಭೇದಕಾರಣಮ್ ಅವೋಚಃ । ನ ತದ್ಭೇದಾವಗಮಾಯ ಕಿಂ ತರ್ಹಿ ಸ್ಥಾನಭೇದಾತ್ ಭೇದಾಶಙ್ಕಾ ಮಾ ಭೂತ್ ಇತ್ಯೇವಮರ್ಥಮ್ ॥

(ಭಾಷ್ಯಾರ್ಥ)

ಇನ್ನು[2] ಅಕ್ಷಿಯೊಳಗೆ ಈ ಪುರುಷನು ಹಿಂದೆ ಹೇಳಿದಂತೆ ಕಾಣುತ್ತಿರುವನಲ್ಲ,[3] ಅವನೇ ಋಕ್ಕು, ಅಧ್ಯಾತ್ಮವಾಗಿ ವಾಗಾದಿಯಾದ[4] ಅಧಿದೈವತವಾಗಿ ಪೃಥಿವ್ಯಾದಿಯಾದ,[5] ಮತ್ತು ಪ್ರಸಿದ್ಧವಾಗಿರುವ ಪಾದಬದ್ಧವಾಗಿರುವ ಅಕ್ಷರಗಳ

1. ಈ ಪಾ॥ ಅ॥ ತೆ॥ ಪಾಠವೇ ಸರಿಯಾದದ್ದು.

2. ಅಂಗೋಪಾಸನೆಗಳು ಮುಗಿದು ಪ್ರಧಾನೋಪಾಸನೆಯನ್ನು ಹೇಳಬೇಕಾಗಿರುವದರಿಂದ.

3. ಭಾ. ಭಾ. ೬೨ರಲ್ಲಿ ವಿವರಿಸಿರುವಂತೆ ಸಮಾಹಿತಚಿತ್ತರಿಗೆ ಕಾಣಿಸುತ್ತಿರುವನಲ್ಲ ಎಂದರ್ಥ.

4. ಅಂಗೋಪಾಸನೆಗಳಲ್ಲಿ ಋಕ್ಕೆಂದು ಹೇಳಿದ್ದ ವಾಗಾದಿಗಳನ್ನು ಇಲ್ಲಿ ಋಕ್ಕೆಂದು ತಿಳಿಸಿದೆ.

5. ಅಧಿದೈವತವಾಗಿ ಹೇಳಿದ್ದ ಪೃಥಿವ್ಯಾದಿಗಳನ್ನು ಇಲ್ಲಿ ಋಕ್ಶಬ್ದದಿಂದ ಗ್ರಹಿಸಬೇಕು.

ರೂಪವಾಗಿರುವ ಋಕ್ಕು (ಅವನೇ)[1]. ಹೀಗೆಯೇ ಸಾಮವು[2] ಅಥವಾ ಉಕ್ಥ ದೊಡನೆ (ಋಕ್ಕಿನೊಡನೆ) ಇರುವದರಿಂದ[3] ಸ್ತೋತ್ರವೇ ಸಾಮವು, ಋಕ್ಕು ಎಂದರೆ ಉಕ್ಥಕ್ಕಿಂತ ಬೇರೆಯಾದ ಶಸ್ತ್ರವು[4]. ಹೀಗೆಯೇ ಯಜುಸ್ಸು ಎಂದರೆ ಸ್ವಾಹಾ ಸ್ವಧಾ ವಷಟ್ ಮುಂತಾದ ವಾಕ್ಕೆಲ್ಲವೂ ಯಜುಸ್ಸು. ಅದು ಅವನೇ. ಏಕೆಂದರೆ (ದೇವನು) ಸರ್ವಾತ್ಮಕನೂ ಸರ್ವಕಾರಣನೂ ಆಗಿರುತ್ತಾನೆ ಎಂದು ಹಿಂದೆ ಹೇಳಿರುತ್ತೇವೆ[5]. ಋಗಾದಿಗಳ ಪ್ರಕರಣವಾಗಿರುವದರಿಂದ ಅವನೇ ಬ್ರಹ್ಮವು ಎಂದರೆ ಮೂರು ವೇದಗಳು (ಎಂದರ್ಥ) [6]

ಆ ಈ ಚಾಕ್ಷುಷಪುರುಷನಿಗೆ ಅದೇ ರೂಪವನ್ನು ಅತಿದೇಶಮಾಡಿಕೊಳ್ಳಬೇಕು. ಅದು ಯಾವದು? ಆ ಆದಿತ್ಯಪುರುಷನಿಗೆ ಹಿರಣ್ಮಯನು ಎಂದು ಮುಂತಾಗಿ ಅಧಿದೈವತವಾಗಿ ಹೇಳಿತ್ತಲ್ಲ, (ಅದನ್ನೇ). ಅವನಿಗೆ ಯಾವವು ಗೇಷ್ಣಗಳೋ ಗೇಷ್ಣಗಳೋ ಅವೇ ಈ ಚಾಕ್ಷುಷ(ಪುರುಷನಿಗೂ) ಗೇಷ್ಣಗಳು ಮತ್ತು ಅವನಿಗೆ ಉತ್ ಮತ್ತು ಉದ್ಗೀಥ ಎಂಬ ಹೆಸರಿತ್ತಷ್ಟೆ, ಅದೇ ಇವನಿಗೂ ಹೆಸರು.

ಸ್ಥಾನವು ಬೇರೆಯಾಗಿರುವದರಿಂದಲೂ ರೂಪಗುಣನಾಮಗಳನ್ನೂ ಅತಿದೇಶ ಮಾಡಿಕೊಂಡಿರುವದರಿಂದಲೂ ಈಶಿತೃತ್ವಕ್ಕೆ ವಿಷಯಗಳು ಬೇರೆಬೇರೆಯಾಗಿರುವದರಿಂದಲೂ ಆದಿತ್ಯಚಾಕ್ಷುಷ(ಪುರುಷರಿಗೆ) ಭೇದವೇ ಎಂದರೆ ಹಾಗಲ್ಲ. ಏಕೆಂದರೆ 'ಅಮುನಾ' (ಆ ಪುರುಷನಾಗಿಯೇ ೧-೭-೭), 'ಅನೇನೈವ' (ಇವನಾಗಿಯೇ ೧-೭-೮) ಎಂದು (ಹೇಳಿರುವದರಿಂದ) ಒಬ್ಬನಿಗೇ ಎರಡು ಸ್ವರೂಪಗಳ ಪ್ರಾಪ್ತಿಯು ಹೊಂದದೆಹೋಗುತ್ತದೆ.[7]

---

1 ಶಬ್ದಾತ್ಮಕವಾದ ಋಕ್ಕನ್ನೂ ಗ್ರಹಿಸಬೇಕು. ಋಕ್ಕೆಂದರೆ ಇಲ್ಲಿ ಇವೆಲ್ಲವನ್ನೂ ಗ್ರಹಿಸಬೇಕೇ ಹೊರತು ಬರಿಯ ಶಬ್ದಮಾತ್ರವನ್ನಲ್ಲ

2. ಋಕ್ಕಿನಂತೆಯೇ ಸಾಮಶಬ್ದಕ್ಕೂ ಅರ್ಥವನ್ನು ಮಾಡಿಕೊಳ್ಳಬೇಕು ಎಂದಭಿಪ್ರಾಯ

3 ಇದು ಋಕ್ಕೆಂಬ ಶಬ್ದಕ್ಕೆ ಮತ್ತೊಂದು ವ್ಯಾಖ್ಯಾನವನ್ನು ಮಾಡುವದಕ್ಕೆ ಹೇತು.

4. ಉಕ್ಥವೆಂಬ ಶಸ್ತ್ರದೊಡನೆ ಸಾಮವನ್ನು ಹೇಳಿರುವದರಿಂದ ಋಕ್ಕು ಎಂದರೆ ಉಕ್ಥವನ್ನು ಉಳಿದ ಶಸ್ತ್ರಗಳೆಂದೂ ಸಾಮವೆಂದರೆ ಸ್ತೋತ್ರವೆಂದೂ ಅರ್ಥಮಾಡಬಹುದು ಎಂದರ್ಥ.

5. ಪರಮಾತ್ಮನು ಸರ್ವಕಾರಣನೂ ಸರ್ವಾತ್ಮನೂ ಆಗಿರುವದರಿಂದ ಅವನಿಗೆ ಪೃಥಿವ್ಯಾದಿಗಳು ಗೇಷ್ಣವೆಂದು ಒಪ್ಪುತ್ತದೆ ಎಂದು ಹಿಂದೆ ಆರನೆಯ ಕಂಡಿಕೆಯ ವ್ಯಾಖ್ಯಾನದಲ್ಲಿ (ಛಾ.ಭಾ. ೬ನೆಯದರಲ್ಲಿ) ಹೇಳಿತ್ತು. ಆದ್ದರಿಂದ ಇಲ್ಲಿಯೂ ಸರ್ವವೂ ಗೇಷ್ಣವೆಂಬುದಕ್ಕೇ ಇದನ್ನು ಹೇತುವಾಗಿ ತೆಗೆದುಕೊಳ್ಳುವದು ಯುಕ್ತ. ಆದಕಾರಣ ಇದು ಮೊದಲನೆಯ ವ್ಯಾಖ್ಯಾನಕ್ಕೇ ಒಪ್ಪುತ್ತದೆ.

6. ಇಲ್ಲಿ ಎರಡನೆಯ ವ್ಯಾಖ್ಯಾನವನ್ನಿಟ್ಟುಕೊಂಡಿದೆ. ಬ್ರಹ್ಮವೆಂದರೆ ವೇದ ಸಾಮಾನ್ಯವು, ಋಗಾದಿಗಳನ್ನು ಬೇರೆಯಾಗಿ ಹೇಳಿರುವದು ಬ್ರಾಹ್ಮಣಪರಿವ್ರಾಜಕನ್ಯಾಯದಿಂದ.

7 ಒಬ್ಬನೇ ಇಬ್ಬರು ಪುರುಷರಾಗಬೇಕಾಗುತ್ತದೆ ಎಂಬ ಅನಿಷ್ಟವನ್ನು ಇಲ್ಲಿ ಹೇಳಿದೆ.

(ಶಂಕೆ) .- ಎರಡು ರೂಪವಾಗಿ ಆಗುವದರಿಂದ (ಅದೂ) ಹೊಂದಬಹುದಲ್ಲ! "ಅವನು ಒಂದು ಒಗೆಯಾಗುತ್ತಾನೆ, ಮೂರು ಬಗೆಯಾಗುತ್ತಾನೆ" (ಛಾಂ. ೭-೨೬-೨) ಎಂದು ಮುಂದೆ (ಶ್ರುತಿ) ಹೇಳಿದೆಯಷ್ಟೆ[1] ?

(ಪರಿಹಾರ) :- ಹಾಗಲ್ಲ. ಏಕೆಂದರೆ ಚೇತನವು ನಿರವಯವವಾದ್ದರಿಂದ[2] ತಾನೊಂದೇ ಎರಡಾಗಿ ಆಗಲಾರದು. ಆದ್ದರಿಂದ ಅಧ್ಯಾತ್ಮ, ಆಧಿದೈವತ (-ಈ ಇಬ್ಬರು ಪುರುಷರೂ ಒಬ್ಬನೇ. ಇನ್ನು ರೂಪಾದಿಗಳ ಅತಿದೇಶವನ್ನು ಮಾಡಿರುವದು (ಅವರಿಬ್ಬರೂ) ಬೇರೆಯೆನ್ನುವದಕ್ಕೆ ಕಾರಣವೆಂದು ಹೇಳಿದೆಯಷ್ಟೆ, ಅದು ಭೇದವನ್ನು ನಿಶ್ಚಯಿಸಿ (ತಿಳಿಸು)ವದಕ್ಕಲ್ಲ, ಮತ್ತೇನೆಂದರೆ ಸ್ಥಾನಗಳು ಬೇರೆಬೇರೆಯಾಗಿರುವದರಿಂದ (ಇಬ್ಬರೂ) ಬೇರೆ ಎಂಬ ಶಂಕೆಯುಂಟಾಗದಿರಲೆಂದು.[3]

(ಉಪನಿಷತ್ತು)

**ಸ ಏಷ ಯೇ ಚೈತಸ್ಮಾದರ್ವಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ(ಣಾಂ) ಚೇತಿ ತದ್ಯ ಇಮೇ ವೀಣಾಯಾಂ ಗಾಯನ್ತ್ಯೇತಂ ತೇ ಗಾಯನ್ತಿ ತಸ್ಮಾತ್ತೇ ಧನಸನಯಃ ॥ ೬ ॥**

೬. ಆ ಈತನು ಇವನಿಗಿಂತ ಇದಕ್ಕಿಂತ ಈಚಿನ ಲೋಕಗಳಿವೆಯಲ್ಲ, ಅವುಗಳನ್ನೂ ಮನುಷ್ಯಕಾಮಗಳನ್ನೂ ಆಳುತ್ತಿರುವನು. ಆದ್ದರಿಂದ ಈ ವೀಣೆಯಲ್ಲಿ ಹಾಡುತ್ತಿರುವರಲ್ಲ, ಅವರು ಇವನನ್ನೇ ಹಾಡುತ್ತಿರುತ್ತಾರೆ; ಆದ್ದರಿಂದ ಅವರು ಧನಸನಿಗಳಾಗಿರುತ್ತಾರೆ.

(ಭಾಷ್ಯ)

೭೦. ಸ ಏಷ ಚಾಕ್ಷುಷಃ ಪುರುಷಃ ಯೇ ಚ ಏತಸ್ಮಾತ್ ಆಧ್ಯಾತ್ಮಿಕಾತ್ ಆತ್ಮನಃ ಅರ್ವಾಞ್ಚಃ ಅರ್ವಾಗ್ಗತಾಃ ಲೋಕಾಃ ತೇಷಾಂ ಚ ಈಷ್ಟೇ ಮನುಷ್ಯಸಂಬನ್ಧಿನಾಂ ಚ ಕಾಮಾನಾಮ್। ತತ್ ತಸ್ಮಾತ್ ಯೇ ಇಮೇ ವೀಣಾಯಾಂ ಗಾಯನ್ತಿ ಗಾಯಕಾಃ ತ ಏತಮೇವ ಗಾಯನ್ತಿ। ಯಸ್ಮಾತ್ ಈಶ್ವರಂ ಗಾಯನ್ತಿ ತಸ್ಮಾತ್ ತೇ ಧನಸನಯಃ ಧನಲಾಭಯುಕ್ತಾಃ। ಧನವನ್ತ ಇತ್ಯರ್ಥಃ ॥

---

1. ಆದ್ದರಿಂದ ಉಕ್ತಾನಿಷ್ಟಪ್ರಾಪ್ತಿಯಾಗುವದಿಲ್ಲವಲ್ಲ '- ಎಂದು ಶಂಕೆ.

2. ಉದಾಹೃತಸ್ಥಲದಲ್ಲಿ ಶರೀರಗಳು ಅನೇಕವಾಗಿ ಆಗುವವೆಂದು ಹೇಳಿದೆ, ಆದರೆ ಪುರುಷನು ಚೇತನನಾಗಿರುವದರಿಂದ ಅವನು ಹಾಗೆ ಎರಡಾಗಲಾರನು.

3. ಈ ಚರ್ಚೆಯನ್ನು ಸೂ. ಭಾ. ೧-೧-೨೦, ೨೧ರಲ್ಲಿ ಮಾಡಿರುವವನ್ನು ಇಲ್ಲಿ ಮನದಂದುಕೊಳ್ಳಬೇಕು.

(ಭಾಷ್ಯಾರ್ಥ)

ಆ ಈ ಚಾಕ್ಷುಷಪುರುಷನು ಈ ಆಧ್ಯಾತ್ಮಿಕನಾದ ಆತ್ಮನ ಈಚಿನ ಕೆಳಗೆ ಇರುವ ಲೋಕಗಳಿವೆಯಲ್ಲ, ಅವುಗಳನ್ನೂ ಮನುಷ್ಯಸಂಬಂಧಿಗಳಾದ ಕಾಮಗಳನ್ನೂ ಆಳುತ್ತಿರುವನು (ತತ್=ತಸ್ಮಾತ್) ಆದ್ದರಿಂದ ಇವರು ಈ ಗಾಯಕರು ವೀಣೆಯಲ್ಲಿ ಹಾಡುತ್ತಿರುವರಲ್ಲ,[1] ಅವರು ಇವನನ್ನೇ ಹಾಡುತ್ತಿರುತ್ತಾರೆ (ಹೀಗೆ) ಈಶ್ವರನನ್ನೇ (ಹೊಗಳಿ) ಹಾಡುತ್ತಾರಷ್ಟೆ, ಆದ್ದರಿಂದ ಅವರು ಧನಸಂಗರು, ಧನಲಾಭಯುಕ್ತರಾಗಿರುತ್ತಾರೆ, ಧನವಂತರಾಗಿರುತ್ತಾರೆ ಎಂದರ್ಥ

## ಆದಿತ್ಯಾಕ್ಷಿಪುರುಷೋಪಾಸನೆಗೆ ಫಲ

(ಉಪನಿಷತ್ತು)

**ಅಥ ಯ ಏತದೇವಂ ವಿದ್ವಾನ್ ಸಾಮ ಗಾಯತ್ಯುಭೌ ಸ ಗಾಯತಿ ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ ಪರಾಞ್ಚೋ ಲೋಕಾಸ್ತಾಗ್‌ಂ ಶ್ಚಾಪ್ನೋತಿ ದೇವಕಾಮಾಗ್‌ಂಶ್ಚ ॥**

**ಅಥಾನೇನೈವ ಯೇ ಚೈತಸ್ಮಾದರ್ವಾಞ್ಚೋ ಲೋಕಾಸ್ತಾಗ್‌ಂಶ್ಚಾಪ್ನೋತಿ ಮನುಷ್ಯಕಾಮಾಗ್‌ಂಶ್ಚ ತಸ್ಮಾದು ಹೈವಂ ವಿದುದ್ಗಾತಾ ಬ್ರೂಯಾತ್ ॥ ೮ ॥**

**ಕಂ ತೇ ಕಾಮಮಾಗಾಯಾನೀತ್ಯೇಷ ಹ್ಯೇವ ಕಾಮಾಗಾನಸ್ಯೇಷ್ಟೇ ಯ ಏವಂ ವಿದ್ವಾನ್ ಸಾಮ ಗಾಯತಿ ಸಾಮ ಗಾಯತಿ ॥ ೯ ॥**

೭. ಇನ್ನು ಯಾವನು ಇದನ್ನು ಹೀಗೆಂದು ಅರಿತುಕೊಂಡು ಸಾಮವನ್ನು ಗಾನಮಾಡುತ್ತಾನೋ ಅವನು (ಈ) ಇಬ್ಬರನ್ನೂ ಗಾನಮಾಡಿದವನಾಗುತ್ತಾನೆ. ಅವನು ಆತನಾಗಿಯೇ, ಆ ಇವನು, ಅವನಿಗಿಂತ ಆಚಿನ ಲೋಕಗಳಿವೆಯಲ್ಲ, ಅವನ್ನೂ ದೇವಕಾಮಗಳನ್ನೂ ಪಡೆದುಕೊಳ್ಳುತ್ತಾನೆ ;

೮-೯. ಇನ್ನು ಇವನಾಗಿಯೇ, ಇವನಿಗಿಂತ ಈಚಿನ ಲೋಕಗಳಿರುತ್ತವೆಯಲ್ಲ, ಅವನ್ನೂ ಮನುಷ್ಯಕಾಮಗಳನ್ನೂ ಪಡೆದುಕೊಳ್ಳುತ್ತಾನೆ. ಆದ್ದರಿಂದಲೇ ಹೀಗೆಂದರಿತ ಉದ್ಗಾತೃವು 'ನಿನಗೆ ಯಾವ ಕಾಮವನ್ನು ಗಾನಮಾಡಲಿ?' ಎಂದು ನುಡಿಯಬೇಕು.

1. ವೀಣೆಯನ್ನು ಬಾರಿಸಿಕೊಂಡು ಹಾಡುತ್ತಿರುವರಲ್ಲ- ಎಂದರ್ಥ.

ಯಾವನು ಹೀಗೆಂದರಿತು ಸಾಮವನ್ನು ಗಾನಮಾಡುತ್ತಾನೋ, ಅವನೇ ಕಾಮಾಗಾನಕ್ಕೆ ಶಕ್ತನಾಗಿರುತ್ತಾನೆ, (ಯಾವನು) ಸಾಮ ಗಾನ ಮಾಡುತ್ತಾನೋ ಅವನೇ ಶಕ್ತನಾಗಿರುತ್ತಾನೆ.

## ಆದಿತ್ಯಚಾಕ್ಷುಷರೂಪದಿಂದ ಸರ್ವಲೋಕಕಾಮಾಪ್ತಿ

(ಭಾಷ್ಯ)

೭೧ ಅಥ ಯ ಏತದೇವಂ ವಿದ್ವಾನ್ ಯಥೋಕ್ತಂ ದೇವಮ್ ಉದ್ಗೀಥಂ ವಿದ್ವಾನ್ ಸಾಮ ಗಾಯತಿ ಉಭೌ ಸ ಗಾಯತಿ ಚಾಕ್ಷುಷಮ್ ಆದಿತ್ಯಂ ಚ । ತಸ್ಯ ಏವಂವಿದಃ ಫಲಮುಚ್ಯತೇ । ಸಃ ಅಮುನೈವ ಆದಿತ್ಯೇನ । ಸ ಏಷಃ ಯೇ ಚ ಅಮುಷ್ಮಾತ್ ಪರಾಞ್ಚೋ ಲೋಕಾಃ ತಾಂಶ್ಚ ಆಪ್ನೋತಿ । ಆದಿತ್ಯಾನ್ತರ್ಗತ ದೇವೋ ಭೂತ್ವೇತ್ಯರ್ಥಃ । ದೇವಕಾಮಾಂಶ್ಚ । ಅಥ ಅನೇನೈವ ಚಾಕ್ಷುಷೇಣೈವ ಯೇ ಚ ಏತಸ್ಮಾದರ್ವಾಞ್ಚೋ ಲೋಕಾಃ ತಾಂಶ್ಚ ಆಪ್ನೋತಿ । ಮನುಷ್ಯ ಕಾಮಾಂಶ್ಚ । ಚಾಕ್ಷುಷೋ ಭೂತ್ವಾ ಇತ್ಯರ್ಥಃ ॥

(ಭಾಷ್ಯಾರ್ಥ)

ಇನ್ನು ಯಾವನು ಇದನ್ನು ಹೀಗೆಂದು ಅರಿತುಕೊಂಡು ಮೇಲೆ ಹೇಳಿದ ದೇವನೆಂದು ಉದ್ಗೀಥವನ್ನು ಅರಿತುಕೊಂಡು ಸಾಮವನ್ನು ಗಾನಮಾಡುತ್ತಾನೋ ಅವನು ಇಬ್ಬರನ್ನೂ ಚಾಕ್ಷುಷ(ಪುರುಷ)ನನ್ನೂ ಆದಿತ್ಯ(ಪುರುಷ)ನನ್ನೂ ಗಾನ ಮಾಡಿದವನಾಗುತ್ತಾನೆ.

ಹೀಗೆಂದು ಅರಿತುಕೊಂಡ ಅವನಿಗೆ ಫಲವನ್ನು ಹೇಳಲಾಗುತ್ತದೆ, ಅವನು ಈ ಆದಿತ್ಯನಾಗಿಯೇ, (ತಾನೂ) ಆದಿತ್ಯಾಂತರ್ಗತನಾದ ದೇವನಾಗಿ ಎಂದರ್ಥ ; ಆ ಇವನು[1] ಆ (ಆದಿತ್ಯನ) ಆಚೆಗಿರುವ ಲೋಕಗಳಿವೆಯಲ್ಲ, ಅವನ್ನೂ, ದೇವ ಕಾಮಗಳನ್ನೂ ಪಡೆಯುಕೊಳ್ಳುತ್ತಾನೆ. ಇನ್ನು[2] ಈ ಚಾಕ್ಷುಷಪುರುಷನಾಗಿಯೇ (ತಾನೂ) ಚಾಕ್ಷುಷ(ಪುರುಷ)ನಾಗಿಯೇ ಎಂದರ್ಥ, ಈತನಿಗಿಂತ ಈಚಿನ ಲೋಕಗಳಿವೆಯಲ್ಲ, ಅವನ್ನೂ ಮನುಷ್ಯಕಾಮಗಳನ್ನೂ ಪಡೆದುಕೊಳ್ಳುತ್ತಾನೆ.

1. ಉಪಾಸ್ಯನಾದ ಪರಮೇಶ್ವರನೇ ತಾನೆಂಬ ಸಾಕ್ಷಾತ್ಕಾರವನ್ನು ಪಡೆದು ಅವನನ್ನೇ ಸೇರಿರುವ ಈ ಉಪಾಸಕನು ಎಂದರ್ಥ. ಸಾಕ್ಷಾತ್ಕಾರದಿಂದ ಉಪಾಸನೆಯ ಫಲವು ದೊರೆಯುವವೆಂಬುದಕ್ಕೆ ಸೂ. ಭಾ. ೪-೪-೨೫ (ಭಾ. ಭಾ. ೪೨೯)ನ್ನು ನೋಡಿ

2. ಅಥ (ಇನ್ನು) ಎಂಬ ಮಾತಿಗೆ ಆದಿತ್ಯನಾದ ಬಳಿಕ ಎಂಬ ಆನಂತರ್ಯಾರ್ಥ ವಿಲ್ಲ, ಆದಿತ್ಯಪುರುಷನಾದಂತೆಯೇ ಎಂದರ್ಥ. ಈ ಆಧಾರದಿಂದಲೇ ಹಿಂದೆ ಭಾ.ಭಾ. ೬೯ರಲ್ಲಿ ಒಬ್ಬನೇ ಎರಡು ರೂಪವಾಗಲಾರನು ಎಂದು ಹೇಳಿದ್ದದ್ದು.

## ಆದಿತ್ಯಚಾಕ್ಷುಷವಿದ್ಯೆಯನ್ನು ಬಲ್ಲ ಉದ್ಗಾತೃವಿನ ಮಹಿಮೆ

(ಭಾಷ್ಯ)

೭೨. ತಸ್ಮಾತ್ ಉ ಹ ಏವಂವಿತ್ ಉದ್ಗಾತಾ ಬ್ರೂಯಾತ್ ಯಜಮಾನಮ್ ಕಿಮ್ ಇಷ್ಟಂ ತೇ ತವ ಕಾಮಮ್ ಆಗಾಯಾನಿ ? ಇತಿ । ಏಷ ಹಿ ಯಸ್ಮಾತ್ ಉದ್ಗಾತಾ ಕಾಮಾಗಾನಸ್ಯ ಉದ್ಗಾನೇನ ಕಾಮಂ ಸಂಪಾದಯಿತುಮ್ ಈಷ್ಟೇ ಸಮರ್ಥಃ ಇತ್ಯರ್ಥಃ। ಕೋಽಸೌ ? ಯ ಏವಂ ವಿದ್ವಾನ್ ಸಾಮ ಗಾಯತಿ । ದ್ವಿರುಕ್ತಿಃ ಉಪಾಸನಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಆದ್ದರಿಂದಲೇ ಹೀಗೆಂದರಿತ ಉದ್ಗಾತೃವು ಯಜಮಾನನನ್ನು 'ನಿನಗೆ ಇಷ್ಟವಾದ ಯಾವ ಕಾಮವನ್ನು ಗಾನಮಾಡಲಿ ?" ಎಂದು ಕೇಳಬೇಕು. (ಹಿ= ಯಸ್ಮಾತ್) ಏಕೆಂದರೆ ಈ ಉದ್ಗಾತೃವು ಕಾಮಾಗಾನಕ್ಕೆ ಉದ್ಗಾನದಿಂದ ಕಾಮವನ್ನು ಸಂಪಾದಿಸಿ ಕೊಡುವದಕ್ಕೆ ಶಕ್ತನಾಗಿರುತ್ತಾನೆ, ಸಮರ್ಥನಾಗಿರುತ್ತಾನೆ ಯಾರವನು ? ಯಾವನು ಹೀಗೆಂದು ಅರಿತುಕೊಂಡು ಸಾಮವನ್ನು ಗಾನಮಾಡುತ್ತಾನೋ (ಅವನು. ಸಾಮ ಗಾಯತಿ ಎಂದು) ಎರಡು ಸಲ ಹೇಳಿರುವದು (ಈ) ಉಪಾಸನೆಯು ಸಮಾಪ್ತವಾಯಿತೆಂದು (ತಿಳಿಸು)ವದಕ್ಕೆ.

---

# ಒಂದನೆಯ ಅಧ್ಯಾಯ - ಎಂಟನೆಯ ಖಂಡ

## (ಉದ್ಗೀಥೋಪಾಸನೆ ಪ್ರಕಾರಾಂತರ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೭೩. ಅನೇಕಧಾ ಉಪಾಸ್ಯತ್ವಾತ್ ಅಕ್ಷರಸ್ಯ ಪ್ರಕಾರಾನ್ತರೇಣ ಪರೋವರೀಯಸ್ತ್ವಗುಣಫಲಮ್ ಉಪಾಸನಾನ್ತರಮ್ ಆನಿನಾಯ। ಇತಿಹಾಸಸ್ತು ಸುಖಾವಬೋಧನಾರ್ಥಃ ॥

(ಭಾಷ್ಯಾರ್ಥ)

(ಉದ್ಗೀಥಾವಯವವಾದ ಈ) ಅಕ್ಷರವನ್ನು ಅನೇಕ ಪ್ರಕಾರದಿಂದ ಉಪಾಸನೆಮಾಡತಕ್ಕದ್ದಾದ್ದರಿಂದ ಮತ್ತೊಂದು ಪ್ರಕಾರದಿಂದ, ಪರೋವರೀಯಸ್ತ್ವ

ಗುಣವೆಂಬ ಫಲವುಳ್ಳ ಇನ್ನೊಂದು ಉಪಾಸನೆಯನ್ನು[1] (ಶ್ರುತಿಯು ಇಲ್ಲಿ) ತಂದಿಟ್ಟಿದೆ. (ಇಲ್ಲಿರುವ) ಕಥೆಯೊ, ಎಂದರೆ (ವಿಷಯವು) ಸುಲಭವಾಗಿ ತಿಳಿಯುವದಕ್ಕಾಗಿ (ಬಂದಿದೆ).

## ಶಿಲಕಾದಿಗಳ ಸಂವಾದಕ್ಕೆ ಅವತರಣಿಕೆ

(ಉಪನಿಷತ್ತು)

**ತ್ರಯೋ ಹೋದ್ಗೀಥೇ ಕುಶಲಾ ಬಭೂವುಃ ಶಿಲಕಃ ಶಾಲಾವತ್ಯ ಶ್ಚೈಕಿತಾಯನೋ ದಾಲ್ಭ್ಯಃ ಪ್ರವಾಹಣೋ ಜೈವಲಿರಿತಿ ತೇ ಹೋಚುರುದ್ಗೀಥೇ ವೈ ಕುಶಲಾಃ ಸ್ಮೋ ಹನ್ತೋದ್ಗೀಥೇ ಕಥಾಂ ವದಾಮ ಇತಿ ॥ ೧ ॥**

೧. ಶಿಲಕ ಶಾಲಾವತ್ಯ, ಚೈಕಿತಾಯನ ದಾಲ್ಭ್ಯ, ಪ್ರವಾಹಣ ಜೈವಲಿ -ಎಂದು ಉದ್ಗೀಥದಲ್ಲಿ ಕುಶಲರಾದ ಮೂವರಿದ್ದರು. ಅವರು ಇಂತೆಂದರು : 'ಉದ್ಗೀಥದಲ್ಲಿ ಕುಶಲರಿದೇವಷ್ಟೆ, ಉದ್ಗೀಥದಲ್ಲಿ ಕಥೆಯನ್ನು ವಾದಮಾಡೋಣ ! '

(ಭಾಷ್ಯ)

೭೪ ತ್ರಯಃ ತ್ರಿಸಂಖ್ಯಾಕಾಃ । ಹ ಇತಿ ಐತಿಹ್ಯಾರ್ಥಃ । ಉದ್ಗೀಥೇ ಉದ್ಗೀಥಜ್ಞಾನಂ ಪ್ರತಿ । ಕುಶಲಾಃ ನಿಪುಣಾ ಬಭೂವುಃ । ಕಸ್ಮಿಂಶ್ಚಿತ್ ದೇಶೇ ಕಾಲೇ ಚ ನಿಮಿತ್ತೇ ವಾ ಸಮೇತಾನಾಮ್ ಇತ್ಯಭಿಪ್ರಾಯಃ । ನ ಹಿ ಸರ್ವಸ್ಮಿನ್ ಜಗತಿ ತ್ರಯಾಣಾಮೇವ ಕೌಶಲಮ್ ಉದ್ಗೀಥಾದಿವಿಜ್ಞಾನೇ । ಶ್ರೂಯನ್ತೇ ಹಿ ಉಷಸ್ತಿಜಾನಶ್ರುತಿಕೈಕೇಯಪ್ರಭೃತಯಃ ಸರ್ವಜ್ಞಕಲ್ಪಾಃ । ಕೇ ತೇ ತ್ರಯ ಇತಿ ? ಆಹ । ಶಿಲಕೋ ನಾಮತಃ । ಶಲಾವತೋಽಪತ್ಯಂ ಶಾಲಾವತ್ಯಃ । ಚಿಕಿತಾಯನಸ್ಯ ಅಪತ್ಯಂ ಚೈಕಿತಾಯನಃ । ದಲ್ಭಗೋತ್ರೋ ದಾಲ್ಭ್ಯಃ । ದ್ವ್ಯಾಮುಷ್ಯಾಯಣೋ ವಾ । ಪ್ರವಾಹಣೋ ನಾಮತಃ । ಜೀವಲಸ್ಯ ಅಪತ್ಯಂ ಜೈವಲಿಃ । ಇತಿ ಏತೇ ತ್ರಯಃ । ತೇ ಹ ಊಚುರನ್ಯೋನ್ಯಮ್ । ಉದ್ಗೀಥೇ ವೈ ಕುಶಲಾಃ ನಿಪುಣಾಃ ಇತಿ ಪ್ರಸಿದ್ಧಾಃ ಸ್ಮಃ । ಅತಃ ಹನ್ತ ಯದ್ಯನುಮತಿರ್ಭವತಾಮ್ ಉದ್ಗೀಥೇ ಉದ್ಗೀಥಜ್ಞಾನನಿಮಿತ್ತಾಂ ಕಥಾಂ ವಿಚಾರಣಾಂ ಪಕ್ಷಪ್ರತಿಪಕ್ಷೋಪ

---

1. ಹಿಂದಿನ ಉಪಾಸನೆಯಂತೆ ಇಲ್ಲಿಯೂ ಪರಮಾತ್ಮದೃಷ್ಟಿಯನ್ನು ಉದ್ಗೀಥದಲ್ಲಿ ಹಾಕಿ ಉಪಾಸನೆಮಾಡುವ ಪ್ರಕಾರವನ್ನೇ ಹೇಳಿದ್ದರೂ ಪರಮಾತ್ಮನ ವಿಶೇಷಣಗಳಾದ ಗುಣಗಳು ಬೇರೆಬೇರೆಯಾಗಿರುವದರಿಂದ ಇವೆರಡೂ ಬೇರೆಬೇರೆಯ ಉಪಾಸನೆಗಳೇ ಎಂದು ಸೂ.ಭಾ. ೩-೩-೭, ಛಾ.ಭಾ ೩೨೯ರಲ್ಲಿ ತಿಳಿಸಿಕೊಟ್ಟಿದೆ.

ನ್ಯಾಸೇನ ವದಾಮಃ ವಾದಂ ಕುರ್ಮಃ ಇತ್ಯರ್ಥಃ । ತಥಾ ಚ ತದ್ವಿದ್ಯಸಂವಾದೇ ವಿಪರೀತಗ್ರಹಣನಾಶಃ, ಅಪೂರ್ವವಿಜ್ಞಾನೋಪಜನಃ, ಸಂಶಯನಿವೃತ್ತಿಶ್ಚ ಇತ್ಯತಃ ತದ್ವಿದ್ಯಸಂಯೋಗಃ ಕರ್ತವ್ಯಃ ಇತಿ ಚ ಇತಿಹಾಸಪ್ರಯೋಜನಮ್ । ದೃಶ್ಯತೇ ಹಿ ಶಿಲಕಾದೀನಾಮ್ ॥

(ಭಾಷ್ಯಾರ್ಥ)

ಮೂವರು, ಮೂರು ಸಂಖ್ಯೆಯವರು- ಹ ಎಂಬುದು (ಹಿಂದಿನ ಕಾಲದಲ್ಲಿ) ಹೀಗೆ ನಡೆಯಿತೆಂದು (ತಿಳಿಸು)ವದಕ್ಕಾಗಿ (ಬಂದದ್ದು)[1] – ಉದ್ಗೀಥದಲ್ಲಿ, ಉದ್ಗೀಥ ಜ್ಞಾನದಲ್ಲಿ ಕುಶಲರಿದ್ದರು, ಜಾಣರಾಗಿದ್ದರು (ಎಂದರ್ಥ). ಯಾವದೋ ಒಂದು ದೇಶದಲ್ಲಿ, ಕಾಲದಲ್ಲಿ ಅಥವಾ ನಿಮಿತ್ತದಿಂದ ಒಟ್ಟುಗೂಡಿದವರಲ್ಲಿ (ಮೂವರು ಕುಶಲರಿದ್ದರು) ಎಂದು ಅಭಿಪ್ರಾಯ ಏಕೆಂದರೆ ಇಡಿಯ ಜಗತ್ತಿನಲ್ಲಿ ಮೂವರಿಗೆ ಮಾತ್ರವೇ ಉದ್ಗೀಥಾದಿವಿಜ್ಞಾನದಲ್ಲಿ ಕೌಶಲ(ವಿತ್ತು) ಎಂದಾಗಲಾರದು. ಉಷಸ್ತಿ, ಜಾನಶ್ರುತಿ, ಕೈಕೇಯ[2] – ಮೊದಲಾದ ಸರ್ವಜ್ಞಕಲ್ಪರನ್ನು ಶ್ರುತಿಯಲ್ಲಿ ಹೇಳಿದೆಯಲ್ಲವೆ ?

ಆ ಮೂವರು ಯಾರು ? ಎಂದರೆ (ಶ್ರುತಿ) ಹೇಳುತ್ತದೆ. ಶಿಲಕನೆಂಬುದು (ಅವನ) ಹೆಸರು , ಶಲಾವತನ ಮಗನು ಶಾಲಾವತ್ಯನು. ಚಿಕಿತಾಯನನ ಮಗನು ಚೈಕಿತಾಯನನು , ದಲ್ಭಗೋತ್ರದವನಾದ್ದರಿಂದ ದಾಲ್ಭ್ಯನು. ಅಥವಾ (ಈ ಚೈಕಿತಾಯನ ದಾಲ್ಭ್ಯನು) ದ್ವ್ಯಾಮುಷ್ಯಾಯಣನು[3] (ಎಂದೂ ವ್ಯಾಖ್ಯಾನಮಾಡಬಹುದು). ಪ್ರವಾಹಣ(ನೆಂಬುದು ಮೂರನೆಯವನ) ಹೆಸರು , ಜೀವಲನ ಮಗನಾದ್ದರಿಂದ (ಅವನು) ಜೈವಲನು. ಹೀಗೆ ಮೂವರು (ಕುಶಲರಿದ್ದರು)

ಅವರು ಒಬ್ಬರೊಡನೊಬ್ಬರು ಹೀಗೆಂದುಕೊಂಡರು · "ಉದ್ಗೀಥದಲ್ಲಿ ಕುಶಲರೆಂದು (ವೈ=ಪ್ರಸಿದ್ಧಾಃ) ಪ್ರಸಿದ್ಧರಾಗಿರುವೆವಷ್ಟೆ, ಆದ್ದರಿಂದ (ಹಂತ=ಯದ್ಯನುಮತಿರ್ಭವತಾಮ್) ತಾವು ಒಪ್ಪುವದಾದರೆ, ಉದ್ಗೀಥದಲ್ಲಿ ಎಂದರೆ ಉದ್ಗೀಥ ಜ್ಞಾನನಿಮಿತ್ತವಾಗಿ ಕಥೆಯನ್ನು[4] ವಿಚಾರವನ್ನು ಪಕ್ಷಪ್ರತಿಪಕ್ಷಗಳನ್ನು ಹೇಳುವ

1. ಉಪನಿಷತ್ತಿನ ಅನುವಾದದಲ್ಲಿ ಈ ಹ ಎಂಬುದನ್ನು ಅನುವಾದಮಾಡದೆ ಬಿಟ್ಟುಬಿಟ್ಟಿದೆ ಮುಂದೆಯೂ ಹೀಗೆಂದೇ ತಿಳಿಯಬೇಕು

2. ಉಷಸ್ತಿಯ ಕಥೆಯು ಮುಂದಿನ ಖಂಡದಲ್ಲಿ ಬರುವದು, ಜಾನಶ್ರುತಿಯ ಕಥೆಯು ಸಂವರ್ಗವಿದ್ಯೆಯ ವಿಷಯದಲ್ಲಿ ೪_೧ರಲ್ಲಿ ಬಂದಿದೆ; ಕೈಕೇಯನ ಕಥೆಯು ವೈಶ್ವಾನರ ವಿದ್ಯೆಯ ವಿಷಯದಲ್ಲಿ ೫_೧೧ರಲ್ಲಿ ಬಂದಿದೆ. ಇವರೆಲ್ಲರೂ ಬೇರೆಬೇರೆಯ ವಿದ್ಯೆಯಲ್ಲಿ ನಿಪುಣರೇ , ಆದ್ದರಿಂದ ಪ್ರಕೃತದಲ್ಲಿ ಹೇಳಿರುವದು ಒಂದಾನೊಂದು ಸಂದರ್ಭಕ್ಕೆ ಮಾತ್ರ ಸೇರಿದ್ದು ಎನ್ನಬೇಕು.

3. ಒಬ್ಬನ ಮಗನು, ಇನ್ನೊಬ್ಬನಿಗೆ ದತ್ತು– ಹೀಗೆ ಎರಡು ಗೋತ್ರಕ್ಕೆ ಸೇರಿದವನು.

4. ಚರ್ಚೆಯನ್ನು. ವಾದ, ಜಲ್ಪ, ವಿತಂಡಾ - ಇವೆಲ್ಲ ಕಥೆಗಳೆಂದು, ಚರ್ಚಾಭೇದಗಳೆಂದು, ನೈಯಾಯಿಕರ ಸಮಯ.

ಮೂಲಕ (ಚರ್ಚೆಯನ್ನು) ಹೇಳಿ ವಾದಮಾಡೋಣ !" ಹೀಗಾದರೆ ತದ್ವಿದ್ಯರೊಡನೆ ಸಂವಾದಮಾಡುವದರಿಂದ ತಪ್ಪುತಿಳಿವಳಿಕೆಯ ನಾಶವೂ, ಹೊಸ ತಿಳಿವಳಿಕೆಯುಂಟಾಗುವದೂ, ಸಂಶಯವು ತೊಲಗುವದೂ (ಆಗುತ್ತದೆ). ಆದ್ದರಿಂದ ತದ್ವಿದ್ಯರೊಡನೆ ಸೇರುವದನ್ನು (ಸಾಧನ)ಮಾಡಬೇಕು.[1] ಎಂಬಿದೂ ಕಥೆಯ ಪ್ರಯೋಜನವು. ಶಿಲಕಾದಿಗಳು (ಹೀಗೆ) ಸೇರಿದರು[2] ಎಂದು ಇಲ್ಲಿ ಕಂಡುಬರುತ್ತದೆಯಷ್ಟೆ ?

(ಉಪನಿಷತ್ತು)

**ತಥೇತಿ ಹ ಸಮುಪವಿವಿಶುಃ ಸ ಹ ಪ್ರವಾಹಣೋ ಜೈವಲಿರುವಾಚ ಭಗವನ್ತಾವಗ್ರೇ ವದತಾಂ ಬ್ರಾಹ್ಮಣಯೋರ್ವದತೋರ್ವಾಚಗ್ಂ ಶ್ರೋಷ್ಯಾಮೀತಿ ॥ ೨ ॥**

೨. ಹಾಗೇ ಆಗಲೆಂದು ಅವರು ಕುಳಿತುಕೊಂಡರು. ಆ ಪ್ರವಾಹಣ ಜೈವಲಿಯು ಇಂತೆಂದನು: 'ಭಗವಂತರಾದ (ತಾವಿಬ್ಬರೇ) ಮೊದಲು ವಾದಮಾಡಿರಿ ; ಬ್ರಾಹ್ಮಣರು ವಾಕ್ಕನ್ನು ಹೇಳುತ್ತಿರುವಲ್ಲಿ ಕೇಳುತ್ತಿರುವೆನು.'

(ಭಾಷ್ಯ)

೭೫. ತಥೇತ್ಯುಕ್ತ್ವಾ ತೇ ಸಮುಪವಿವಿಶುಃ ಹ ಉಪವಿಷ್ಟವನ್ತಃ ಕಿಲ । ತತ್ರ ರಾಜ್ಞಃ ಪ್ರಾಗಲ್ಭ್ಯೋಪಪತ್ತೇಃ ಸ ಹ ಪ್ರವಾಹಣೋ ಜೈವಲಿರುವಾಚ ಇತರೌ । ಭಗವನ್ತೌ ಪೂಜಾವನ್ತೌ ಅಗ್ರೇ ಪೂರ್ವಂ ವದತಾಮ್ । ಬ್ರಾಹ್ಮಣಯೋಃ ಇತಿ ಲಿಙ್ಗಾತ್ ರಾಜಾಽಸೌ । ಯುವಯೋರ್ಬ್ರಾಹ್ಮಣಯೋಃ ವದತೋಃ ವಾಚಂ ಶ್ರೋಷ್ಯಾಮಿ । ಅರ್ಥರಹಿತಾಮ್ ಇತ್ಯಪರೇ । ವಾಚಮ್ ಇತಿ ವಿಶೇಷಣಾತ್ ॥

---

1 ಸಂವಾದವೆಂದರೆ ಸಮಯಬಂಧದಿಂದ ವಾದವನ್ನು ಮಾಡುವದು. ನ್ಯಾ. ಸೂ. ೪_೨_೪೭ರ ಸೂಚನೆಯಿದು ನ್ಯಾಯಭಾಷ್ಯದಲ್ಲಿ 'ಸಂವಾದದಿಂದ ಪ್ರಜ್ಞಾಪರಿಪಾಕವಾಗುತ್ತದೆ; ಎಂದರೆ ಸಂಶಯವನ್ನು ಕತ್ತರಿಸಿಕೊಳ್ಳುವದು, ತಿಳಿಯದಿದ್ದದ್ದನ್ನು ತಿಳಿದುಕೊಳ್ಳುವದು, ನಿಶ್ಚಿತವಾದದ್ದನ್ನು ಒಪ್ಪುವದು_ ಎಂದು ಬರೆದಿದೆ. ಬೃ ಭಾ. ೩_೧_೧ (ಭಾ.ಭಾ ೨)ರಲ್ಲಿಯೂ ಇದನ್ನು ಸೂಚಿಸಿದೆ.

2. ಶಿಲಕಾದಿಗಳು ಸ್ವತಃ ಕುಶಲರಾದರೂ ತದ್ವಿದ್ಯರೊಡನೆ ಜ್ಞಾನಾಭಿವೃದ್ಧಿಗಾಗಿ ಸೇರಿ ಚರ್ಚೆಮಾಡಿದರು ಎಂದು ಇಲ್ಲಿ ಹೇಳಿರುವದು ಕಂಡುಬರುತ್ತದೆ. ಆದ್ದರಿಂದ ಕಥೆಯನ್ನು ಹೇಳಿರುವದು ಸುಲಭವಾಗಿ ತಿಳಿಯುವದಕ್ಕೆ ಮಾತ್ರವೇ ಅಲ್ಲ, ಈ ಪ್ರಯೋಜನವನ್ನು ಸೂಚಿಸುವದಕ್ಕೂ ಅದು ಬಂದಿದೆ.

(ಭಾಷ್ಯಾರ್ಥ)

ಹಾಗೇ ಆಗಲೆಂದು ಅವರು ಕುಳಿತುಕೊಂಡರಂತೆ, ಕುಳಿತುಕೊಂಡವರಾದ ರಂತೆ ಅವರಲ್ಲಿ ರಾಜನಿಗೆ ಪ್ರಾಗಲ್ಭ್ಯವು ಯುಕ್ತವಾದ್ದರಿಂದ[1] ಆ ಪ್ರವಾಹಣ ಜೈವಲಿಯು ಮಿಕ್ಕಿಬ್ಬರನ್ನು ಕುರಿತು ಇಂತೆಂದನು: ಭಗವಂತರಾ... ಪೂಜ್ಯರಾದ ತಾವು ಮೊದಲು ಮುಂಚಿತವಾಗಿ ಮಾತನಾಡಿರಿ 'ಬ್ರಾಹ್ಮಣರಾದ (ತಾವು)' ಎಂಬ (ಹೇಳಿರುವದರ) ಸಾಮರ್ಥ್ಯದಿಂದ ಇವನು ರಾಜನು (ಎಂದು ನಿಶ್ಚಯಿಸಬಹುದು). ಬ್ರಾಹ್ಮಣರಾದ ತಾವು ಮಾತನಾಡುತ್ತಿರುವಲ್ಲಿ ನಿಮ್ಮ ಮಾತನ್ನು ಕೇಳುತ್ತಿರುವೆನು. ಅರ್ಥರಹಿತವಾದ (ಮಾತನ್ನು) ಕೇಳುತ್ತಿರುವೆನು – ಎಂದು ಕೆಲವರು (ವ್ಯಾಖ್ಯಾನ ಮಾಡಿರುತ್ತಾರೆ) 'ವಾಚವಮ್' (ಮಾತನ್ನು) ಎಂಬ ವಿಶೇಷಣವಿರುವದರಿಂದ[2] (ಅವರು ಈ ಅರ್ಥವನ್ನು ತೆಗೆದಿರುತ್ತಾರೆ)

## ಶಿಲಕನ ಪ್ರಶ್ನೆ : ಸಾಮಕ್ಕೆ ಗತಿ ಯಾವದು?

(ಉಪನಿಷತ್ತು)

**ಸ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚ ಹನ್ತ ತ್ವಾ ಪೃಚ್ಛಾನೀತಿ ಪೃಚ್ಛೇತಿ ಹೋವಾಚ ॥ ೩ ॥**

೩. ಆ ಶಿಲಕಶಾಲಾವತ್ಯನು ಚೈಕಿತಾಯನ ದಾಲ್ಭ್ಯನನ್ನು (ಹೀಗೆಂದು) ಕೇಳಿದನು : 'ನಿನ್ನನ್ನು (ನಾನು) ಕೇಳಲೆ?' (ಅವನು) 'ಕೇಳು!' ಎಂದನು.

## ಶಿಲಕನು ಪ್ರಶ್ನೆಮಾಡುವದಕ್ಕೆ ಅನುಮತಿಪಡೆದದ್ದು

(ಭಾಷ್ಯ)

೩೬. ಉಕ್ತಯೋಃ ಸ ಹ ಶಿಲಕಃ ಶಾಲಾವತ್ಯಃ ಚೈಕಿತಾಯನಂ ದಾಲ್ಭ್ಯಮ್ ಉವಾಚ । ಹನ್ತ ಯದಿ ಅನುಮಂಸ್ಯಸೇ ತ್ವಾ ತ್ವಾಂ ಪೃಚ್ಛಾನಿ ಇತ್ಯುಕ್ತಃ ಇತರಃ ಪೃಚ್ಛ ಇತಿ ಹೋವಾಚ ॥

(ಭಾಷ್ಯಾರ್ಥ)

(ಹೀಗೆಂದು ರಾಜನು) ಹೇಳಲಾಗಿ (ಅವರೊಳಗೆ) ಶಿಲಕ ಶಾಲಾವತ್ಯನು ಚೈಕಿತಾಯನದಾಲ್ಭ್ಯನನ್ನು ಕುರಿತು (ಹೀಗೆಂದು) ಕೇಳಿದನು. (ಹನ್ತ=) ನೀನು

---

1. ಜೈವಲಿಯು ಹೇಳಿದಂತೆ ಮಿಕ್ಕ ಇಬ್ಬರೂ ಏಕೆ ಕೇಳಿದರು?– ಎಂಬ ಶಂಕೆಗೆ ಸಮಾಧಾನವಿದು.

2. ಇಲ್ಲದಿದ್ದರೆ "ವದತೋಃ" ಎಂಬಷ್ಟೇ ಇದ್ದರೂ ಸಾಕಾಗುತ್ತಿತ್ತು ಎಂದು ಅವರ ಭಾವ.

ಒಪ್ಪುವದಾದರೆ, (ತ್ವಾ=ತ್ವಾಮ್) ನಿನ್ನನ್ನು ಕೇಳುವೆನು ಹೀಗೆನ್ನಲು (ಅವನು) ಕೇಳು ಎಂದನು.

## ಪೂ. ಪ. ಉದ್ಗೀಥಕ್ಕೆ ಕೊನೆಯ ಆಶ್ರಯವು ಸ್ವರ್ಗ

(ಉಪನಿಷತ್ತು)

**ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ ಸ್ವರಸ್ಯ ಕಾ ಗತಿ ರಿತಿ ಪ್ರಾಣ ಇತಿ ಹೋವಾಚ ಪ್ರಾಣಸ್ಯ ಕಾ ಗತಿರಿತ್ಯನ್ನಮಿತಿ ಹೋವಾಚಾನ್ನಸ್ಯ ಕಾ ಗತಿರಿತ್ಯಾಪ ಇತಿ ಹೋವಾಚ ॥ ೪ ॥**

**ಅಪಾಂ ಕಾ ಗತಿರಿತ್ಯಸೌ ಲೋಕ ಇತಿ ಹೋವಾಚಾಮುಷ್ಯ ಲೋಕಸ್ಯ ಕಾ ಗತಿರಿತಿ ನ ಸ್ವರ್ಗಂ ಲೋಕಮತಿನಯೇದಿತಿ ಹೋವಾಚ ಸ್ವರ್ಗಂ ವಯಂ ಲೋಕಗ್ಂ ಸಾಮಾಭಿಸಂಸ್ಥಾಪ ಯಾಮಃ ಸ್ವರ್ಗಸಗ್ಂಸ್ತಾವಗ್ಂ ಹಿ ಸಾಮೇತಿ ॥ ೫ ॥**

೪. 'ಸಾಮಕ್ಕೆ ಗತಿ ಯಾವದು ?' ಸ್ವರವು ಎಂದನು. 'ಸ್ವರಕ್ಕೆ ಗತಿ ಯಾವದು ?' ಪ್ರಾಣವು ಎಂದನು. 'ಪ್ರಾಣಕ್ಕೆ ಗತಿ ಯಾವದು ?' ಅನ್ನವು ಎಂದನು. 'ಅನ್ನಕ್ಕೆ ಗತಿ ಯಾವದು ?' ಅಪ್ಪು ಎಂದನು.

೫. 'ಅಪ್ಪಿಗೆ ಗತಿ ಯಾವದು ?' ಆ ಲೋಕವು ಎಂದನು. 'ಆ ಲೋಕಕ್ಕೆ ಗತಿ ಯಾವದು ?' (ಎಂದು ಕೇಳಲು) 'ಸ್ವರ್ಗವನ್ನು ದಾಟಿಸಲಾಗದು ; ಸ್ವರ್ಗಲೋಕವನ್ನೇ ನಾವು ಸಾಮವೆಂದು ನಿಲ್ಲಿಸುತ್ತೇವೆ. ಸ್ವರ್ಗಸಂಸ್ತಾವವಲ್ಲವೆ, ಸಾಮವು ?' ಎಂದನು.

## ಉದ್ಗೀಥಕ್ಕೆ ಕೊನೆಯ ಗತಿ ಯಾವದೆಂಬದಕ್ಕೆ ಸಂವಾದ

(ಭಾಷ್ಯ)

೭೭. ಲಬ್ಧಾನುಮತಿರಾಹ। ಕಾ ಸಾಮ್ನಃ, ಪ್ರಕೃತತ್ವಾತ್ ಉದ್ಗೀಥಸ್ಯ। ಉದ್ಗೀಥೋ ಹಿ ಅತ್ರ ಉಪಾಸ್ಯತ್ವೇನ ಪ್ರಕೃತಃ। ಪರೋವರೀಯಾಂಸಮ್ ಉದ್ಗೀಥಮ್ ಇತಿ ಚ ವಕ್ಷ್ಯತಿ। ಗತಿಃ ಆಶ್ರಯಃ। ಪರಾಯಣಮ್ ಇತ್ಯೇತತ್। ಏವಂ ಪೃಷ್ಟೋ ದಾಲ್ಭ್ಯ ಉವಾಚ ಸ್ವರ ಇತಿ। ಸ್ವರಾತ್ಮಕತ್ವಾತ್ ಸಾಮ್ನಃ। ಯೋ ಯದಾತ್ಮಕಃ ಸ ತದ್ಗತಿಸ್ತದಾಶ್ರಯಶ್ಚ ಭವತೀತಿ ಯುಕ್ತಮ್। ಮೃದಾಶ್ರಯ ಇವ ಘಟಾದಿಃ। ಸ್ವರಸ್ಯ ಕಾ ಗತಿರಿತಿ ? ಪ್ರಾಣ ಇತಿ ಹೋವಾಚ। ಪ್ರಾಣನಿಷ್ಪಾದ್ಯೋ ಹಿ ಸ್ವರಃ। ತಸ್ಮಾತ್ ಸ್ವರಸ್ಯ ಪ್ರಾಣೋ ಗತಿಃ ಪ್ರಾಣಸ್ಯ ಕಾ ಗತಿ

ರಿತಿ ? ಅನ್ನಮ್ ಇತಿ ಹೋವಾಚ । ಅನ್ನಾವಷ್ಟಮ್ಭೋ ಹಿ ಪ್ರಾಣಃ । "ಶುಷ್ಯತಿ ವೈ ಪ್ರಾಣ ಋತೇಽನ್ನಾತ್" (ಬೃ. ೫-೧೨-೧) ಇತಿ ಶ್ರುತೇಃ। "ಅನ್ನಂ ದಾಮ" (ಬೃ. ೨-೨-೧) ಇತಿ ಚ । ಅನ್ನಸ್ಯ ಕಾ ಗತಿರಿತಿ ? ಆಪ ಇತಿ ಹೋವಾಚ । ಅಪ್ಸಂಭವತ್ವಾತ್ ಅನ್ನಸ್ಯ ॥

(ಭಾಷ್ಯಾರ್ಥ)

(ಹೀಗೆ) ಅನುಮತಿಯನ್ನು ಪಡೆದು (ಶಿಲಕನು) ಕೇಳುತ್ತಾನೆ. ಸಾಮಕ್ಕೆ ಯಾವದು (ಗತಿ)? ಎಂಬಲ್ಲಿ ಸಾಮಕ್ಕೆ (ಎಂದರೆ) ಉದ್ಗೀಥಕ್ಕೆ (ಎಂದರ್ಥ), ಏಕೆಂದರೆ (ಉದ್ಗೀಥವೇ) ಪ್ರಕೃತವಾಗಿರುತ್ತದೆ. ಉದ್ಗೀಥವಲ್ಲವೆ, ಇಲ್ಲಿ ಉಪಾಸ್ಯ ವಾಗಿ ಪ್ರಕೃತವಾಗಿರುವದು ? "ಪರೋವರೀಯಸಾದ ಉದ್ಗೀಥವನ್ನು" (ಯಾವನು ಉಪಾಸನೆಮಾಡುತ್ತಾನೋ ) ಎಂದು ಮುಂದೆ (೧-೯-೨) ಹೇಳಿಯೂ ಇದೆ. ಗತಿ ಎಂದರೆ ಆಶ್ರಯವು ; ಪರಾಯಣವು (ಯಾವದು ?) ಎಂದರ್ಥ. ಹೀಗೆಂದು ಕೇಳಲು ದಾಲ್ಭ್ಯನು 'ಸ್ವರವು' (ಗತಿಯು) ಎಂದನು ಏಕೆಂದರೆ ಸಾಮವು ಸ್ವರಾ ತ್ಮಕವಾಗಿರುತ್ತದೆ.[1] ಯಾವದು ಯಾವ ಸ್ವರೂಪದ್ದಾಗಿರುವದೋ ಅದು ಆ ಗತಿ ಯುಳ್ಳದ್ದು- ಘಟಾದಿಯು ಮಣ್ಣೆಂಬ ಆಶ್ರಯವುಳ್ಳದ್ದಾಗಿರುವಂತೆ – ಆ ಆಶ್ರಯ ವುಳ್ಳದ್ದು ಆಗಿರುತ್ತದೆ ಎಂಬುದು ಯುಕ್ತವು.

'ಸ್ವರಕ್ಕೆ ಗತಿ ಯಾವದು ?' ಎಂದು (ಕೇಳಲು) ಪ್ರಾಣವು (ಗತಿಯು) ಎಂದನು. ಪ್ರಾಣದಿಂದ ಉಂಟಾಗತಕ್ಕದ್ದಲ್ಲವೆ, ಸ್ವರವು ? ಆದ್ದರಿಂದ ಸ್ವರಕ್ಕೆ ಪ್ರಾಣವೇ ಗತಿ 'ಪ್ರಾಣಕ್ಕೆ ಗತಿ ಯಾವದು ?' ಎಂದು (ಕೇಳಲು) ಅನ್ನವು (ಗತಿ) ಎಂದನು. ಪ್ರಾಣವು ಅನ್ನವನ್ನು ಆಶ್ರಯಿಸಿರುತ್ತದೆಯಲ್ಲವೆ ? "ಅನ್ನವಿಲ್ಲದಿದ್ದರೆ ಪ್ರಾಣವು ಒಣಗಿಹೋಗುತ್ತದೆಯಷ್ಟೆ ?" (ಬೃ. ೫-೧೨-೧) ಎಂದೂ "ಅನ್ನವೇ ಹಗ್ಗವು" (ಬೃ. ೨-೨-೧) ಎಂದೂ ಶ್ರುತಿಯಿರುವದರಿಂದ (ಇದು ಸಿದ್ಧವಾಗುತ್ತದೆ). "ಅನ್ನಕ್ಕೆ ಗತಿ ಯಾವದು ?" ಎಂದು (ಕೇಳಲು) ಅಪ್ಪು ಎಂದನು , ಏಕೆಂದರೆ ಅನ್ನವು ಅಪ್ಪಿನಿಂದಾಗಿರುತ್ತದೆ.[2]

## ದಾಲ್ಭ್ಯನ ಸಿದ್ಧಾಂತ: ಸ್ವರ್ಗವೇ ಉದ್ಗೀಥಕ್ಕೆ ಗತಿ

(ಭಾಷ್ಯ)

೫. ಅಪಾಂ ಕಾ ಗತಿರಿತಿ ? ಅಸೌ ಲೋಕ ಇತಿ ಹೋವಾಚ । ಅಮುಷ್ಮಾದ್ ಹಿ ಲೋಕಾದ್ ವೃಷ್ಟಿಃ ಸಂಭವತಿ। ಅಮುಷ್ಯ ಲೋಕಸ್ಯ ಕಾ ಗತಿ

1. ಧ್ವನ್ಯಾತ್ಮಕವಾಗಿರುತ್ತದೆ. ಸರಿಗಮಪದನಿ ಎಂಬ ಪ್ರಸಿದ್ಧಸ್ವರಗಳನ್ನು ಸಾಮ ವೇದಿಗಳು "ಯಮ"ಗಳೆಂದು ಕರೆಯುತ್ತಾರೆ, ಅವಕ್ಕೆ ಕ್ರಮವಾಗಿ ಕ್ರುಷ್ಟ, ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಮನ್ದ್ರ, ಅತಿಸ್ವಾರ್ಯ- ಎಂದು ಹೆಸರಿಟ್ಟುಕೊಂಡಿದ್ದಾರೆ.

2 ೬-೨-೪ನ್ನು ನೋಡಿ.

ರಿತಿ ಪೃಷ್ಟಃ ದಾಲ್ಭ್ಯ ಉವಾಚ। ಸ್ವರ್ಗಮ್ ಅಮುಂ ಲೋಕಮ್ ಅತೀತ್ಯ ಆಶ್ರಯಾನ್ತರಂ ಸಾಮ ನ ನಯೇತ್ ಕಶ್ಚಿತ್ ಇತಿ ಹ ಉವಾಚ ಆಹ। ಅತಃ ವಯಮಪಿ ಸ್ವರ್ಗಂ ಲೋಕಂ ಸಾಮ ಅಭಿಸಂಸ್ಥಾಪಯಾಮಃ। ಸ್ವರ್ಗಲೋಕ ಪ್ರತಿಷ್ಠಂ ಸಾಮ ಜಾನೀಮಃ ಇತ್ಯರ್ಥಃ। ಸ್ವರ್ಗಸಂಸ್ತಾವಂ ಸ್ವರ್ಗತ್ವೇನ ಸಂಸ್ತವನಂ ಸಂಸ್ತಾವಃ ಯಸ್ಯ ತತ್ ಸಾಮ ಸ್ವರ್ಗಸಂಸ್ತಾವಮ್ ಹಿ ಯಸ್ಮಾತ್। "ಸ್ವರ್ಗೋ ವೈ ಲೋಕಃ ಸಾಮವೇದಃ" ( ? ) ಇತಿ ಹಿ ಶ್ರುತಿಃ[1]॥

(ಭಾಷ್ಯಾರ್ಥ)

'ಅಪ್ಪಿಗೆ ಗತಿ ಯಾವದು ?' ಎಂದು (ಕೇಳಲು) ಆ ಲೋಕವು ಎಂದನು. ಆ ಲೋಕದಿಂದ ಮಳೆಯಾಗುತ್ತದೆಯಲ್ಲವೆ ? (ಆದ್ದರಿಂದ ಅದೇ ಗತಿ). 'ಆ ಲೋಕಕ್ಕೆ ಗತಿ ಯಾವದು ?' ಎಂದು ಕೇಳಲು ದಾಲ್ಭ್ಯನಿಂತೆಂದನು, ಸ್ವರ್ಗವೆಂಬ ಆ ಲೋಕವನ್ನು ದಾಟಿ ಸಾಮವನ್ನು ಮತ್ತೊಂದು ಆಶ್ರಯಕ್ಕೆ ಯಾವನೂ ಒಯ್ಯಲಾರನು ಆದ್ದರಿಂದ ನಾವೂ ಸ್ವರ್ಗಲೋಕವನ್ನೇ ಸಾಮವೆಂದು ನಿಲ್ಲಿಸುವೆವು, ಸಾಮವು ಸ್ವರ್ಗಲೋಕದಲ್ಲಿಯೇ ನಿಂತಿದೆ ಎಂದು ತಿಳಿಯುತ್ತೇವೆ ಎಂದರ್ಥ. ಸಾಮವು ಸ್ವರ್ಗಸಂಸ್ತಾವವಲ್ಲವೆ? ಸ್ವರ್ಗವೆಂದು ಸಂಸ್ತುತಿಮಾಡುವದೆಂಬ ಸಂಸ್ತಾವವು ಯಾವದಕ್ಕಿದೆಯೋ ಆ ಸಾಮವು ಸ್ವರ್ಗಸಂಸ್ತಾವವು. (ಹಿ= ಯಸ್ಮಾತ್) "ಸ್ವರ್ಗಲೋಕವೇ ಸಾಮವೇದವಷ್ಟೆ ?" (?) ಎಂದು ಶ್ರುತಿ

## ಪೂ. ಪ. ಉದ್ಗೀಥಕ್ಕೆ ಕೊನೆಯ ಆಶ್ರಯವು ಪೃಥಿವಿ

(ಉಪನಿಷತ್ತು)

**ತಗ್ಂ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯ ಮುವಾಚಾಪ್ರತಿಷ್ಠಿತಂ ವೈ ಕಿಲ ತೇ ದಾಲ್ಭ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾ ತೇ ವಿಪತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ॥ ೬ ॥**

೬. ಶಿಲಕ ಶಾಲಾವತ್ಯನು ಆ ಚೈಕಿತಾಯನ ದಾಲ್ಭ್ಯನನ್ನು ಕುರಿತು ಇಂತೆಂದನು: 'ದಾಲ್ಭ್ಯನೆ, ನಿನ್ನ ಸಾಮವು ಅಪ್ರತಿಷ್ಠಿತವಲ್ಲ. ಯಾವನಾದರೂ ಈಗ ನಿನ್ನ ತಲೆಯು ಬೀಳಲಿ !' ಎಂದರೆ, ನಿನ್ನ ತಲೆಯು ಬಿದ್ದುಹೋದೀತು !'

---

1. ಇತಿ ಶ್ರುತಿಃ ಎಂಬುದನ್ನು ಬಿಟ್ಟು ಈ ಪಾಠವನ್ನಿಟ್ಟುಕೊಂಡಿದೆ, ಇತಿ ಶ್ರುತೇಃ ಎಂಬ ಪಾಠವೂ ಆಗಬಹುದು.

## ದಾಲ್ಭ್ಯಮತದ ನಿಂದೆ

(ಭಾಷ್ಯ)

೭೯. ತಮ್ ಇತರಃ ಶಿಲಕಃ ಶಾಲಾವತ್ಯಃ ಚೈಕಿತಾಯನಂ ದಾಲ್ಭ್ಯಮ್ ಉವಾಚ । ಅಪ್ರತಿಷ್ಠಿತಮ್ ಅಸಂಸ್ಥಿತಮ್ । ಪರೋವರೀಯಸ್ತ್ವೇನ ಅಸಮಾಪ್ತ ಗತಿ ಸಾಮ ಇತ್ಯರ್ಥಃ । ವೈ ಇತಿ ಆಗಮಂ ಸ್ಮಾರಯತಿ ಕಿಲ ಇತಿ ಚ । ದಾಲ್ಭ್ಯ ತೇ ತವ ಸಾಮ । ಯಸ್ತು ಅಸಹಿಷ್ಣುಃ ಸಾಮವಿತ್ ಏತರ್ಹಿ ಏತಸ್ಮಿನ್ ಕಾಲೇ ಬ್ರೂಯಾತ್ ಕಶ್ಚಿತ್ ವಿಪರೀತವಿಜ್ಞಾನಮ್ ಅಪ್ರತಿಷ್ಠಿತಂ ಸಾಮ ಪ್ರತಿಷ್ಠಿತ ಮಿತ್ಯೇವಂವಾದಾಪರಾಧಿನೋ ಮೂರ್ಧಾ ಶಿರಃ ತೇ ವಿಪತಿಷ್ಯತಿ ವಿಸ್ಪಷ್ಟಂ ಪತಿ ಷ್ಯತಿ ಇತಿ । ಏವಮುಕ್ತಸ್ಯ ಅಪರಾಧಿನಃ ತಥೈವ ತದ್ ವಿಪತೇತ್ ನ ಸಂಶಯಃ । ನ ತ್ವಹಂ ಬ್ರವೀಮಿ ಇತ್ಯಭಿಪ್ರಾಯಃ । ನನು ಮೂರ್ಧಪಾತಾರ್ಹಂ ಚೇತ್ ಅಪ ರಾಧಂ ಕೃತವಾನ್ ಅತಃ ಪರೇಣಾನುಕ್ತಸ್ಯಾಪಿ ಪತೇನ್ಮೂರ್ಧಾ । ನ ಚೇದ ಪರಾಧೀ ಉಕ್ತಸ್ಯಾಪಿ ನೈವ ಪತತಿ । ಅನ್ಯಥಾ ಅಕೃತಾಭ್ಯಾಗಮಃ ಕೃತನಾಶಶ್ಚ ಸ್ಯಾತಾಮ್ । ನೈಷ ದೋಷಃ । ಕೃತಸ್ಯ ಕರ್ಮಣಃ ಶುಭಾಶುಭಸ್ಯ ಫಲಪ್ರಾಪ್ತೇಃ ದೇಶಕಾಲನಿಮಿತ್ತಾಪೇಕ್ಷತ್ವಾತ್ । ತತ್ರೈವಂ ಸತಿ ಮೂರ್ಧಪಾತನಿಮಿತ್ತಸ್ಯಾಪಿ ಅಜ್ಞಾನಸ್ಯ ಪರಾಭಿವ್ಯಾಹಾರನಿಮಿತ್ತಾಪೇಕ್ಷತ್ವಮ್ ಇತಿ ॥

(ಭಾಷ್ಯಾರ್ಥ)

(ಅ) ಇನ್ನೊಬ್ಬನಾದ ಶಿಲಕಶಾಲಾವತ್ಯನು ಆ ಚೈಕಿತಾಯನ ದಾಲ್ಭ್ಯನನ್ನು ಕುರಿತು ಇಂತೆಂದನು . ಅಪ್ರತಿಷ್ಠಿತವು, ನಿಲುಗಡೆಯಿಲ್ಲದ್ದು , (ನಿನ್ನ) ಸಾಮವು ಪರೋವರೀಯಸ್ತ್ವವೆಂಬ ಕೊನೆಗಾಣದಿರುವ ಗತಿಯುಳ್ಳದ್ದು ಎಂದರ್ಥ. ವೈ ಎಂಬೂ ಕಿಲ (ಅಲ್ಲವೆ ?) ಎಂಬು ಆಗಮವನ್ನು ನೆನಪಿಗೆ ತಂದಿರುತ್ತಾನೆ. ದಾಲ್ಭ್ಯನೆ, (ತೇ-ತವ) ನಿನ್ನ ಸಾಮವು (ಅಪ್ರತಿಷ್ಠಿತವಾದದ್ದಲ್ಲವೆ ?)

ಸಾಮವನ್ನು ಬಲ್ಲವನು ಯಾವನು ( ಇವನ್ನು ) ತಡೆದುಕೊಳ್ಳಲಾರದೆ, 'ಈಗ ಈ ಕಾಲದಲ್ಲಿ ವಿಪರೀತವಿಜ್ಞಾನವುಳ್ಳ, ಅಪ್ರತಿಷ್ಠಿತಸಾಮವನ್ನು ಪ್ರತಿಷ್ಠಿತವೆಂಬ ಈ ವಾದದ ಅಪರಾಧವುಳ್ಳ ನಿನ್ನ ಮೂರ್ಧವು ತಲೆಯು, ಬೀಳಲಿ, ಬಿದ್ದುಬಿಡಲಿ! ಎಂದರೆ, ಹೀಗೆ ಹೇಳಿಸಿಕೊಂಡ ಅಪರಾಧಿಯಾದ (ನಿನಗೆ) ಹಾಗೆಯೇ ಆ (ನಿನ್ನ ತಲೆಯು) ಬಿದ್ದುಬಿಟ್ಟೀತು, ಸಂಶಯವಿಲ್ಲ ! ಆದರೆ ನಾನು ಹಾಗೆನ್ನುವದಿಲ್ಲ ಎಂದು ಅಭಿಪ್ರಾಯ

(ಆಕ್ಷೇಪ) .– ತಲೆ ಬೀಳುವ ತಪ್ಪನ್ನು ಮಾಡಿರುವನಾದರೆ, ಆಗ ಮತ್ತೊಬ್ಬನು ಹೇಳದೆ ಇದ್ದರೂ ತಲೆ ಬೀಳುವದು , ತಪ್ಪುಮಾಡಿಲ್ಲವಾದರೆ, (ಹಾಗೆಂದು) ಹೇಳಿದರೂ ಬೀಳಲೇ ಆರದು ಹೀಗಲ್ಲದಿದ್ದರೆ ಮಾಡದೆಇದ್ದದ್ದರ (ಫಲವು) ಬರುವದೂ ಮಾಡಿದ್ದರ ನಾಶವೂ ಆಗಬೇಕಾಗುವದಲ್ಲ[1] !

---

1 ಕರ್ಮಕ್ಕೆ ಫಲವಾಗಬೇಕು, ಕರ್ಮವಿಲ್ಲದೆ ಆಗಬಾರದು- ಅಲ್ಲವೆ ?

(ಪರಿಹಾರ) :- ಈ ದೋಷವಿಲ್ಲ. ಏಕೆಂದರೆ ಮಾಡಿದ ಒಳ್ಳೆಯ ಕೆಟ್ಟ ಕರ್ಮಕ್ಕೆ ಫಲವು ಆಗುವದಕ್ಕೆ ದೇಶಕಾಲನಿಮಿತ್ತಾದಿಗಳ ಅಪೇಕ್ಷೆಯಿರುತ್ತದೆ.[1] ಇದು ಹೀಗಿರುವದರಿಂದ ತಲೆಬೀಳುವದಕ್ಕೆ ನಿಮಿತ್ತವಾದ ಆ ಜ್ಞಾನವೂ[2] ಮತ್ತೊಬ್ಬರು ಹೇಳುವದೆಂಬ ನಿಮಿತ್ತವನ್ನು ಅಪೇಕ್ಷಿಸಿಯೇ (ಫಲಪ್ರದವಾಗ) ಬಹುದಾಗಿದೆ

(ಉಪನಿಷತ್ತು)

**ಹನ್ತಾಹಮೇತದ್ಭಗವತೋ[3] ವೇದಾನೀತಿ ವಿದ್ಧೀತಿ ಹೋವಾ ಚಾಮುಷ್ಯ ಲೋಕಸ್ಯ ಕಾ ಗತಿರಿತ್ಯಯಂ ಲೋಕ ಇತಿ ಹೋವಾ ಚಾಸ್ಯ ಲೋಕಸ್ಯ ಕಾ ಗತಿರಿತಿ ನ ಪ್ರತಿಷ್ಠಾಂ ಲೋಕಮತಿ ನಯೇದಿತಿ ಹೋವಾಚ ಪ್ರತಿಷ್ಠಾಂ ವಯಂ ಲೋಕಗ್‌ಂ ಸಾಮಾಭಿಸಗ್‌ಂಸ್ಥಾಪಯಾಮಃ ಪ್ರತಿಷ್ಠಾಸಗ್‌ಂಸ್ಥಾವಗ್‌ಂ ಹಿ ಸಾಮೇತಿ ॥ ೭ ॥**

೭. ‘(ಹಾಗಾದರೆ) ನಾನು ಇದನ್ನು ಭಗವಂತನಿಂದ ತಿಳಿದು ಕೊಳ್ಳೋಣವೆ?’ ಎನ್ನಲು ‘ತಿಳಿದುಕೊ’ ಎಂದನು. ‘ಆ ಲೋಕಕ್ಕೆ ಗತಿ ಯಾವದು?’ ಎಂದು (ಕೇಳಲು) ‘ಈ ಲೋಕವು’ ಎಂದನು. ‘ಈ ಲೋಕಕ್ಕೆ ಗತಿ ಯಾವದು?’ ಎಂದು (ಕೇಳಲು) ‘ಪ್ರತಿಷ್ಠೆಯ ಲೋಕವನ್ನು ದಾಟಿ (ಸಾಮವನ್ನು) ಒಯ್ಯಲಾಗದು ; ಪ್ರತಿಷ್ಠೆಯ ಲೋಕವನ್ನೇ ನಾವು ಸಾಮವೆಂದು ನಿಲ್ಲಿಸುವೆವು. ಸಾಮವು ಪ್ರತಿಷ್ಠಾಸಂಸ್ತಾವವಲ್ಲವೆ?’ ಎಂದನು.

## ಪೂ.ಪ. ಶಾಲಾವತ್ಯನ ಸಿದ್ಧಾಂತ: ಪೃಥ್ವಿಯೇ ಗತಿ

(ಭಾಷ್ಯ)

೮೦. ಏವಮುಕ್ತೋ ದಾಲ್ಭ್ಯ ಆಹ । ಹನ್ತ ಅಹಮೇತದ್ ಭಗವತಃ ವೇದಾನಿ ಯತ್ಪ್ರತಿಷ್ಠಂ ಸಾಮ । ಇತ್ಯುಕ್ತಃ ಪ್ರತ್ಯುವಾಚ ಶಾಲಾವತ್ಯಃ । ವಿದ್ಧಿ ಇತಿ ಹೋವಾಚ । ಅಮುಷ್ಯ ಲೋಕಸ್ಯ ಕಾ ಗತಿರಿತಿ ಪೃಷ್ಟಃ ದಾಲ್ಭ್ಯೇನ ಶಾಲಾ

---

1. ಬೃ ಭಾ. ೧-೪-೧೦ (ಭಾ. ಭಾ. ೧೬೯) ದೇವತೆ, ಕಾಲ, ಈಶ್ವರ- ಮುಂತಾದ ನಿಮಿತ್ತಗಳನ್ನು ಬಯಸಿಯೇ ಕರ್ಮವು ಫಲವನ್ನು ಕೊಡುತ್ತದೆ ಎಂದು ನಿರ್ಧರಿಸಿರುವದನ್ನು ನೋಡಿ.

2. ಅಪರಾಧವೂ.

3. ಉಪನಿಷತ್ತಿನಲ್ಲಿಯೂ ಭಾಷ್ಯದಲ್ಲಿಯೂ “ಭಗವತ್ತಃ” ಎಂದು ಪಾಠಾಂತರವಿದೆ ; ಇದಕ್ಕನುಗುಣವಾಗಿ “ಭಗವತ್ತಃ ಭಗವತಃ” ಎಂದು ವಾ॥ ಪಾಠದಲ್ಲಿ ಭಾಷ್ಯವಿದೆ. ಆದರೆ “ಭಗವತ್ತಃ” ಎಂಬ ಹೆಚ್ಚಿಗೆಯ ಶಬ್ದವೊಂದು ಮೂಲಕೋಶಗಳಲ್ಲಿದ್ದಂತೆ ಕಾಣುವದಿಲ್ಲ, ಆದಕ್ಕೆ ಆ॥ ತೆ॥ ಅ॥ ಪಾಠಗಳ ಬೆಂಬಲವಿಲ್ಲ.

ವತ್ಯಃ ಅಯಂ ಲೋಕಃ ಇತಿ ಹೋವಾಚ । ಅಯಂ ಹಿ ಲೋಕೋ ಯಾಗದಾನ ಹೋಮಾದಿಭಿರಮುಂ ಲೋಕಂ ಪುಷ್ಯತೀತಿ । "ಅತಃ ಪ್ರದಾನಂ ದೇವಾ ಉಪಜೀವನ್ತಿ" ( ? )[1] ಇತಿ ಹಿ ಶ್ರುತಯಃ । ಪ್ರತ್ಯಕ್ಷಂ ಹಿ ಸರ್ವಭೂತಾನಾಂ ಧರಣೀ ಪ್ರತಿಷ್ಠಾ ಇತಿ । ಅತಃ ಸಾಮ್ನೋಽಪಿ ಅಯಂ ಲೋಕಃ ಪ್ರತಿಷ್ಠೈವ ಇತಿ ಯುಕ್ತಮ್ । ಅಸ್ಯ ಲೋಕಸ್ಯ ಕಾ ಗತಿರಿತ್ಯುಕ್ತಃ ಆಹ ಶಾಲಾವತ್ಯಃ । ನ ಪ್ರತಿಷ್ಠಾಮ್ ಇಮಂ ಲೋಕಮ್ ಅತೀತ್ಯ ನಯೇತ್ ಸಾಮ ಕಶ್ಚಿತ್ । ಅತೋ ವಯಂ ಪ್ರತಿಷ್ಠಾಂ ಲೋಕಂ ಸಾಮ ಅಭಿಸಂಸ್ಥಾಪಯಾಮಃ । ಯಸ್ಮಾತ್ ಪ್ರತಿಷ್ಠಾಸಂಸ್ತಾವಂ ಹಿ, ಪ್ರತಿಷ್ಠಾತ್ವೇನ ಸಂಸ್ತುತಂ ಸಾಮ, ಇತ್ಯರ್ಥಃ। "ಇಯಂ ವೈ ರಥನ್ತರಮ್" (ತಾಂ ಬ್ರಾ. ೧೮-೬-೧೧) ಇತಿ ಚ ಶ್ರುತಿಃ[2] ॥

(ಭಾಷ್ಯಾರ್ಥ)

ಹೀಗೆನ್ನಲು ದಾಲ್ಭ್ಯನೆಂದನು . "ಸಾಮವು ಏತರಲ್ಲಿ ಪ್ರತಿಷ್ಠಿತವಾಗಿದೆ ಎಂಬಿದನ್ನು ಭಗವಂತ(ನಾದ ನಿನ್ನಿಂದ) ತಿಳಿಯೋಣವೆ ?" ಹೀಗೆನ್ನಲು ಶಾಲಾವತ್ಯನು 'ತಿಳಿದುಕೊ' ಎಂದು ಉತ್ತರವನ್ನು ಕೊಟ್ಟನು. 'ಆ ಲೋಕಕ್ಕೆ ಗತಿ ಯಾವದು ?' ಎಂದು ದಾಲ್ಭ್ಯನು ಕೇಳಿದ್ದಕ್ಕೆ ಶಾಲಾವತ್ಯನು 'ಈ ಲೋಕವು' ಎಂದು ಉತ್ತರವನ್ನು ಕೊಟ್ಟನು ಈ ಲೋಕವು ಯಾಗದಾನಹೋಮಾದಿಗಳಿಂದ ಆ ಲೋಕವನ್ನು ಪೋಷಿಸುತ್ತಿದೆಯಲ್ಲವೆ ? (ಆದ್ದರಿಂದ ಅದಕ್ಕೆ ಇದು ಪ್ರತಿಷ್ಠೆ). ಇಲ್ಲಿಂದ ಕೊಟ್ಟದ್ದನ್ನು ದೇವತೆಗಳು ಉಪಜೀವಿಸಿಕೊಂಡಿರುತ್ತಾರೆ ಎಂದಲ್ಲವೆ, ಶ್ರುತಿಗಳು[3]? ಭೂಮಿಯು ಸರ್ವಭೂತಗಳಿಗೂ ಪ್ರತಿಷ್ಠೆ ಎಂಬುದು ಪ್ರತ್ಯಕ್ಷವಾಗಿದೆ. ಆದ್ದರಿಂದ ಸಾಮಕ್ಕೂ ಈ ಲೋಕವು ಪ್ರತಿಷ್ಠೆಯೇ ಎಂಬುದು ಯುಕ್ತವು.

'ಈ ಲೋಕಕ್ಕೆ ಗತಿ ಯಾವದು ?' ಎಂದು ಕೇಳಲು ಶಾಲಾವತ್ಯನು ಹೇಳುತ್ತಾನೆ. ಪ್ರತಿಷ್ಠೆಯಾದ ಈ ಲೋಕವನ್ನು ದಾಟಿ ಸಾಮವನ್ನು ಯಾವನೂ (ಮತ್ತೊಂದಾಶ್ರಯಕ್ಕೆ) ಒಯ್ಯಲಾರನು. ಆದ್ದರಿಂದ ನಾವು ಪ್ರತಿಷ್ಠಾಲೋಕವನ್ನೇ ಸಾಮ(ಕ್ಕೆ ಕೊನೆ ಎಂದು) ನಿಲ್ಲಿಸುತ್ತೇವೆ. (ಹಿ- ಯಸ್ಮಾತ್) ಸಾಮವು ಪ್ರತಿಷ್ಠಾಸಂಸ್ತಾವವಲ್ಲವೆ, ಪ್ರತಿಷ್ಠೆ ಎಂದು ಸಂಸ್ತುತವಾಗಿದೆಯಲ್ಲವೆ ? "ಈ ಭೂಮಿಯೇ ರಥಂತರವು" (ತಾಂ.ಬ್ರಾ. ೧೮-೬-೧೧) ಎಂದು ಶ್ರುತಿಯೂ ಇದೆ.

---

1. ಇದು ಯಾವ ಶ್ರುತಿಯೋ ಗೊತ್ತಾಗಲಿಲ್ಲ, ತೈ. ಬ್ರಾ. ೨ ೨-೧೧ರಲ್ಲಿ ಈ ಅರ್ಥದ ವಾಕ್ಯವಿದೆ. ಇಲ್ಲಿರುವದು ಶ್ರುತಿಯ ಅರ್ಥಮಾತ್ರವಿದ್ದರೂ ಇರಬಹುದು.

2. ಐ. ಬ್ರಾ. ೩-೬-೧ರಲ್ಲಿ ಇಯಂ ವೈ ಪೃಥಿವೀ ರಥನ್ತರಮ್ ಎಂಬ ವಾಕ್ಯವಿದೆ.

3. 'ಶ್ರುತಯಃ' ಶ್ರುತಿಗಳು ಎಂದು ಬಹುವಚನವಿರುವದರಿಂದ ಇಲ್ಲಿರುವದು ಶ್ರುತ್ಯ- -ಮಾತ್ರವೆಂದು ಗೊತ್ತುಮಾಡಬಹುದೆಂದು ತೋರುತ್ತದೆ.

# ಸಿದ್ಧಾಂತ: ಪರಮಾತ್ಮನೇ ಉದ್ಗೀಥಕ್ಕೆ ಗತಿ

(ಉಪನಿಷತ್ತು)

**ತಗ್ಂ ಹ ಪ್ರವಾಹಣೋ ಜೈವಲಿರುವಾಚಾನ್ತವದ್ವೈ ಕಿಲ ತೇ ಶಾಲಾವತ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾ ತೇ ವಿಪ ತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ಹನ್ತಾಽಹಮೇತದ್ಭಗ ವತೋ ವೇದಾನೀತಿ ವಿದ್ಧೀತಿ ಹೋವಾಚ ॥ ೮ ॥**

೮. ಅವನನ್ನು ಕುರಿತು ಪ್ರವಾಹಣಜೈವಲಿಯು ಇಂತೆಂದನು: "ಶಾಲಾವತ್ಯನೆ, ನಿನ್ನ ಸಾಮವು ಅಂತವುಳ್ಳದ್ದಲ್ಲ! ಯಾವನಾದರೂ ಈಗ 'ನಿನ್ನ ತಲೆಯು ಬೀಳಲಿ!' ಎಂದರೆ, ನಿನ್ನ ತಲೆಯು ಬಿದ್ದು ಹೋದೀತು!" (ಹಾಗಾದರೆ) 'ನಾನು ಇದನ್ನು ಭಗವಂತನಿಂದ ತಿಳಿದುಕೊಳ್ಳೋಣವೆ?' ಎನ್ನಲು 'ತಿಳಿದುಕೊ' ಎಂದನು.

## ಶಾಲಾವತ್ಯಮತದ ನಿಂದೆ

(ಭಾಷ್ಯ)

೮೧. ತಮೇವಮ್ ಉಕ್ತವನ್ತಂ ಪ್ರವಾಹಣೋ ಜೈವಲಿರುವಾಚ 'ಅನ್ತ ವದ್ವೈ ಕಿಲ ತೇ ಶಾಲಾವತ್ಯ ಸಾಮ' ಇತ್ಯಾದಿ ಪೂರ್ವವತ್ । ತತಃ ಶಾಲಾವತ್ಯ ಆಹ । ಹನ್ತಾಹಮ್ ಏತದ್ ಭಗವತೋ ವೇದಾನೀತಿ । ವಿದ್ಧೀತಿ ಹೋವಾಚ ಇತರೋಽನುಜ್ಞಾತಃ ಪ್ರಾಹ ॥

(ಭಾಷ್ಯಾರ್ಥ)

ಹೀಗೆಂದು ಹೇಳಲು ಅವನನ್ನು ಕುರಿತು ಪ್ರವಾಹಣಜೈವಲಿಯು "ಶಾಲಾ ವತ್ಯನೆ, ನಿನ್ನ ಸಾಮವು ಅಂತವುಳ್ಳದ್ದಲ್ಲವೆ?" ಎಂದು ಮುಂತಾಗಿರುವ (ವಾಕ್ಯ ವನ್ನು) ಮೊದಲಿನಂತೆ (ವ್ಯಾಖ್ಯಾನಮಾಡಬೇಕು). ಆಗ ಶಾಲಾವತ್ಯನು ಹೇಳು ತ್ತಾನೆ. "ನಾನು ಭಗವಂತನಿಂದ ಇದನ್ನೆ ತಿಳಿದುಕೊಳ್ಳೋಣವೆ?" (ಅವನು "ತಿಳಿದುಕೊ!" ಎಂದನು (ಆ) ಇನ್ನೊಬ್ಬನು ಅನುಮತಿಯನ್ನು ಪಡೆದು ಇಂತೆಂದನು[1].

---

1. ಈ ವಾಕ್ಯವು ಮುಂದಿನ ಕಂಡಿಕೆಯ ಭಾಷ್ಯಕ್ಕೆ ಸಂಬಂಧಿಸಿಕೊಳ್ಳತಕ್ಕದ್ದು

# ಒಂದನೆಯ ಅಧ್ಯಾಯ-ಒಂಬತ್ತನೆಯ ಖಂಡ

(ಉದ್ಗೀಥೋಪಾಸನೆ ಮುಂದುವರಿದದ್ದು)

(ಉಪನಿಷತ್ತು)

**ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತ ಆಕಾಶಂ ಪ್ರತ್ಯಸ್ತಂ ಯನ್ತ್ಯಾಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್ ॥ ೧ ॥**

೧. 'ಈ ಲೋಕಕ್ಕೆ ಗತಿ ಯಾವದು ?' (ಅವನು) ಇಂತೆಂದನು. ಆಕಾಶವೇ (ಗತಿ). ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ಆಕಾಶದಲ್ಲಿಯೇ ಪ್ರತ್ಯಸ್ತಮಯವಾಗುತ್ತವೆ. ಆಕಾಶವೇ ಇವುಗಳಿಗಿಂತ ದೊಡ್ಡದು. ಆಕಾಶವೇ ಪರಾಯಣವು.

## ಜೈವಲಿಯ ಸಿದ್ಧಾಂತ: ಪರಮಾತ್ಮನೇ ಉದ್ಗೀಥಕ್ಕೆ ಆಶ್ರಯ

(ಭಾಷ್ಯ)

೮೨. ಅಸ್ಯ ಲೋಕಸ್ಯ ಕಾ ಗತಿರಿತಿ ? ಆಕಾಶ ಇತಿ ಹೋವಾಚ ಪ್ರವಾಹಣಃ । ಆಕಾಶಃ ಇತಿ ಪರ ಆತ್ಮಾ । "ಆಕಾಶೋ ವೈ ನಾಮ" (೮-೧೪-೧) ಇತಿ ಶ್ರುತೇಃ । ತಸ್ಯ ಹಿ ಕರ್ಮ ಸರ್ವಭೂತೋತ್ಪಾದಕತ್ವಮ್ । ತಸ್ಮಿನ್ನೇವ ಹಿ ಭೂತಪ್ರಲಯಃ । "ತತ್ತೇಜೋಽಸೃಜತ" (೬-೨-೩), "ತೇಜಃ ಪರಸ್ಯಾಂ ದೇವತಾಯಾಮ್" (೬-೮-೬) ಇತಿ ಹಿ ವಕ್ಷ್ಯತಿ । ಸರ್ವಾಣಿ ಹ ವೈ ಇಮಾನಿ ಭೂತಾನಿ ಸ್ಥಾವರಜಙ್ಗಮಾನಿ ಆಕಾಶಾದೇವ ಸಮುತ್ಪದ್ಯನ್ತೇ ತೇಜೋಽಬನ್ನಾದಿಕ್ರಮೇಣ । ಸಾಮರ್ಥ್ಯಾತ್ ಆಕಾಶಂ ಪ್ರತಿ ಅಸ್ತಂ ಯನ್ತಿ । ಪ್ರಲಯ ಕಾಲೇ ತೇನೈವ ವಿಪರೀತಕ್ರಮೇಣ । ಹಿ ಯಸ್ಮಾತ್ ಆಕಾಶ ಏವ ಏಭ್ಯಃ ಸರ್ವೇಭ್ಯೋ ಭೂತೇಭ್ಯಃ ಜ್ಯಾಯಾನ್ ಮಹತ್ತರಃ । ಅತಃ ಸ ಸರ್ವೇಷಾಂ ಭೂತಾನಾಂ ಪರಮ್ ಅಯನಂ ಪರಾಯಣಂ ಪ್ರತಿಷ್ಠಾ । ತ್ರಿಷ್ವಪಿ ಕಾಲೇಷು ಇತ್ಯರ್ಥಃ ॥

(ಭಾಷ್ಯಾರ್ಥ)

'ಈ ಲೋಕಕ್ಕೆ ಗತಿ ಯಾವದು ?' ಎಂದು (ಕೇಳಲು) ಪ್ರವಾಹಣನು ಆಕಾಶವು ಎಂದನು. ಇಲ್ಲಿ ಆಕಾಶವೆಂದರೆ ಪರಮಾತ್ಮನೇ, ಏಕೆಂದರೆ 'ಆಕಾಶ

ವೆಂಬುದೇ (ನಾಮರೂಪಗಳನ್ನು ನಿರ್ವಹಿಸುವದು)" (೮-೧೪-೧) ಎಂದು (ಮುಂದೆ) ಶ್ರುತಿಯಿದೆ. ಸರ್ವಭೂತಗಳನ್ನೂ ಉಂಟುಮಾಡುವದು ಅವನ ಕರ್ಮವಲ್ಲವೆ?[1] ಅವನಲ್ಲಿಯೇ ಅಲ್ಲವೆ, ಭೂತಗಳು ಪ್ರಲಯವಾಗುವದು? "ಅದು ತೇಜಸ್ಸನ್ನು ಸೃಷ್ಟಿಸಿತು" (೬-೨-೩), "ತೇಜಸ್ಸು ಪರದೇವತೆಯಲ್ಲಿ" (ಲಯವಾಗುವದು)[2] (೬-೮-೬) ಎಂದಲ್ಲವೆ, (ಶ್ರುತಿ) ಮುಂದೆ ಹೇಳಿರುವದು? ಈ ಸ್ಥಾವರ ಜಂಗಮಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ತೇಜಸ್ಸು, ಅಪ್ಪು, ಅನ್ನ -ಮುಂತಾದ ಕ್ರಮದಿಂದ[3] (ಎಂದು) ಸಾಮರ್ಥ್ಯದಿಂದ (ಕಲ್ಪಿಸಬೇಕು).[4] ಆಕಾಶದಲ್ಲಿಯೇ ಪ್ರಲಯಕಾಲದಲ್ಲಿ ಅದೇ ವಿಪರೀತಕ್ರಮದಿಂದ[5] ಲಯವಾಗುತ್ತವೆ. ಆಕಾಶವೇ ಈ ಸರ್ವಭೂತಗಳಿಗಿಂತಲೂ ದೊಡ್ಡದಷ್ಟೆ, ಹೆಚ್ಚು ವ್ಯಾಪಕವಷ್ಟೆ? ಆದ್ದರಿಂದ ಅದು ಎಲ್ಲಾ ಭೂತಗಳಿಗೂ ಪರಾಯಣವು, ಹೆಚ್ಚಿನ ಅಯನವು, ಮೂರು ಕಾಲಗಳಲ್ಲಿಯೂ[6] ಪ್ರತಿಷ್ಠೆಯಾಗಿರುತ್ತದೆ ಎಂದರ್ಥ.

## ಉದ್ಗೀಥವು ಪರೋವರೀಯವೆಂದು ಉಪಾಸನೆ

(ಉಪನಿಷತ್ತು)

**ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನನ್ತಃ ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾ**

---

1. ಇಲ್ಲಿ ಉದ್ಗೀಥದಲ್ಲಿ ಆಕಾಶದೃಷ್ಟಿಯನ್ನು ಮಾಡಬೇಕೆಂದು ವಿಧಿಸಿದೆಯಷ್ಟೆ; ಈ ಆಕಾಶವೆಂಬುದು ಪರಮಾತ್ಮನೇ ಎಂಬುದಕ್ಕೆ ಹೇತುಗಳನ್ನು ಇಲ್ಲಿಂದ ಮುಂದೆ ಕೊಟ್ಟಿರುತ್ತವೆ. ಸೂ. ಭಾ ೧-೧ ೨೨ರಲ್ಲಿ ಈ ವಿಷಯವನ್ನು ಚರ್ಚಿಸಿವೆ ಸರ್ವಭೂತಗಳನ್ನು ಎಂಬುದನ್ನು ಯಥಾಶ್ರುತವಾಗಿ ಹಿಡಿದರೆ ಪರಮಾತ್ಮನೇ ಎಂದು ಅರ್ಥಮಾಡಬೇಕಾಗುತ್ತದೆ-ಎಂದು ಭಾವ.

2. ತೇಜಸ್ಸು ಎಂಬುದು ಇಲ್ಲಿ ದೇಹಬೀಜಭೂತವಾದ ಸರ್ವಭೂತಗಳನ್ನೂ ಹೇಳುತ್ತದೆ ಸೂ ಭಾ ೪-೨-೫ನ್ನು ನೋಡಿ.

3. ಛಾಂದೋಗ್ಯದಲ್ಲಿ ತೇಜಸ್ಸನ್ನು ಮೊದಲು ಹೇಳಿರುವದನ್ನು ಲೆಕ್ಕಕ್ಕೆ ತಂದುಕೊಂಡು ಹೀಗೆಂದಿದೆ, ಸರ್ವಶ್ರುತಿಗಳಿಗೂ ಏಕವಾಕ್ಯತೆಯಿರುವದಕ್ಕಾಗಿ ಆಕಾಶಾದಿಕ್ರಮದಿಂದ ಎಂದೇ ಅರ್ಥಮಾಡಬೇಕು. ಸೂ ಭಾ. ೨-೩-೬ (ಭಾ. ಭಾ ೯೬)ನ್ನು ನೋಡಿ.

4. ಪ್ರಕೃತಶ್ರುತಿಯಲ್ಲಿ "ಬ್ರಹ್ಮದಿಂದಲೇ" ಎಂದಿದ್ದರೂ ಆಕಾಶಾದಿಭೂತೋತ್ಪತ್ತಿಕ್ರಮದಿಂದ ಎಂದೇ ಅರ್ಥವನ್ನು ಮಾಡಬೇಕೆಂಬುದಕ್ಕೆ ಸೂ.ಭಾ. ೨-೩ ೧೩ (ಭಾ.ಭಾ. ೧೧೩)ನ್ನು ನೋಡಿ. "ಆಕಾಶಾದೇವ" ಎಂಬುದಕ್ಕೆ ಆಕಾಶವೇ ಮುಂತಾದವುಗಳ ರೂಪದಲ್ಲಿದ್ದುಕೊಂಡಿರುವ ಪರಮಾತ್ಮನಿಂದಲೇ ಎಂದರ್ಥ.

5. ಸೂ. ಭಾ. ೨-೩-೧೪ರಲ್ಲಿ ಲಯವು ವಿಪರೀತಕ್ರಮದಲ್ಲಿಯೇ ಆಗುತ್ತದೆ ಎಂಬುದನ್ನು ಸಾಧಿಸಿದೆ.

6. ಕಾರ್ಯವು ಕಾರಣವನ್ನು ಮೂರು ಕಾಲದಲ್ಲಿಯೂ ಬಿಟ್ಟಿರುವದಿಲ್ಲ ಸೂ. ಭಾ ೨ ೧-೭ (ಭಾ. ಭಾ. ೪೨೦), ೨-೧-೯ (ಭಾ. ಭಾ. ೪೨೩), ೨-೧-೧೬ (ಭಾ.ಭಾ. ೪೪೪).

**ರ್ಜ್ಞಯತಿ ಯ ಏತದೇವಂ ವಿದ್ವಾನ್ ಪರೋವರೀಯಾಗ್ಂಸ ಮುದ್ಗೀಥಮುಪಾಸ್ತೇ ॥ ೨ ॥**

೨. ಆ ಇದು ಪರೋವರೀಯವಾದ ಉದ್ಗೀಥವು. ಆ ಇದು ಅನಂತವು. ಯಾವನು ಹೀಗೆ ಹೀಗೆಂದರಿತು ಪರೋವರೀಯವೆಂದು ಉದ್ಗೀಥವನ್ನು ಉಪಾಸನೆಮಾಡುತ್ತಾನೋ, ಅವನಿಗೆ ಪರೋವರೀಯ ವಾಗುವದು ; (ಅವನು) ಪರೋವರೀಯವಾದ ಲೋಕಗಳನ್ನೇ ಗೆದ್ದುಕೊಳ್ಳುವನು.

## ಉದ್ಗೀಥವನ್ನು ಪರೋವರೀಯವೆಂದು ಉಪಾಸನೆಮಾಡಿದರೆ ಫಲ

೮೩. ಯಸ್ಮಾತ್ (ಸ ಏಷಃ)[1] ಪರಂಪರಂ ವರೀಯಃ ವರೀಯಸೋಽಪಿ ಏಷ ವರಃ। ಪರಶ್ಚ ವರೀಯಾಂಶ್ಚ ಪರೋವರೀಯಾನ್ ಉದ್ಗೀಥಃ। ಪರಮಾತ್ಮಾ ಸಂಪನ್ನಃ ಇತ್ಯರ್ಥಃ। ಅತ ಏವ ಸ ಏಷಃ ಅನನ್ತಃ ಅವಿದ್ಯಮಾನಾನ್ತಃ। ತಮೇತಂ ಪರೋವರೀಯಾಂಸಂ ಪರಮಾತ್ಮಭೂತಮ್ ಅನನ್ತಮ್ ಯಃ[2] ಏವಂ ವಿದ್ವಾನ್ ಪರೋವರೀಯಾಂಸಮ್ ಉದ್ಗೀಥಮ್ ಉಪಾಸ್ತೇ। ತಸ್ಯೈತತ್ ಫಲಮ್ ಆಹ। ಪರೋವರೀಯಃ ಪರಂಪರಂ ವರೀಯಃ। ವಿಶಿಷ್ಟತರಂ ಜೀವನಂ ಹ ಅಸ್ಯ ವಿದುಷೋ ಭವತಿ। ದೃಷ್ಟಂ ಫಲಮ್। ಅದೃಷ್ಟಂ ಚ ಪರೋವರೀಯಸಃ ಉತ್ತರೋತ್ತರವಿಶಿಷ್ಟತರಾನೇವ ಬ್ರಹ್ಮಾಕಾಶಾನ್ತಾನ್ ಜಯತಿ ಯ ಏತದೇವಂ ವಿದ್ವಾನ್ ಉದ್ಗೀಥಮ್ ಉಪಾಸ್ತೇ ॥

(ಭಾಷ್ಯಾರ್ಥ)

ಹೀಗೆ ಆ ಈತನು ಮುಂದುಮುಂದಕ್ಕೆ ವರೀಯಾಂಸವು, ವರೀಯಾಂಸನಿಗಿಂತಲೂ ವರವು , ಪರನೂ ವರೀಯಾಂಸನೂ ಆಗಿರುವದರಿಂದ ಪರಮಾತ್ಮನೆಂದು ಸಂಪಾದಿತವಾಗಿರುವ[3] (ಈ) ಉದ್ಗೀಥವು ಪರೋವರೀಯವು ಎಂದರ್ಥ. ಆದ್ದರಿಂದಲೇ ಆ ಈ (ಉದ್ಗೀಥವು) ಅನಂತವು, ಅಂತವಿಲ್ಲದ್ದು ಆ ಈ ಪರೋವರೀಯವಾಗಿ ಪರಮಾತ್ಮನಾಗಿರುವ (ಉದ್ಗೀಥವನ್ನು ಪರೋವರೀಯವು ಅನಂತವು ಎಂದು ಇಂತು ಅರಿತುಕೊಂಡು ಉದ್ಗೀಥವನ್ನು ಯಾವನು ಉಪಾಸನೆಮಾಡುತ್ತಾನೋ,

---

1. ಈ ಮಾತುಗಳು ಕೈಬಿಟ್ಟುಹೋಗಿರುವಂತೆ ಕಾಣುತ್ತದೆ.
2. ಇಲ್ಲಿ ಈ ಮಾತು ಇರಬೇಕು.
3. ಹಾಗೆಂದು ಉಪಾಸನೆಮಾಡಿರುವ.

ಅವನಿಗೆ ಇದು ಫಲ: ಪರೋವರೀಯವು, ಮುಂದುಮುಂದಕ್ಕೆ ವರೀಯವಾದ ವಿಶಿಷ್ಟತರವಾದ ಜೀವನವು ಈ ಉಪಾಸಕನಿಗೆ ಆಗುವದು ; (ಇದು) ದೃಷ್ಟಫಲವು ಅದೃಷ್ಟ(ಫಲ)ವಾದರೋ (ಇದು): ಪರೋವರೀಯವಾದ ಒಂದಕ್ಕಿಂತ ಒಂದು ವಿಶಿಷ್ಟತರವೇ ಆಗಿರುವ ಬ್ರಹ್ಮವೆಂಬ ಆಕಾಶದವರೆಗಿನ ಲೋಕಗಳನ್ನು- ಯಾವನು ಹೀಗೆಂದರಿತು ಹೀಗೆ ಈ ಉಪಾಸನೆಮಾಡುವನೋ ಅವನು – ಗೆದ್ದುಕೊಳ್ಳುವನು.

(ಉಪನಿಷತ್ತು)

**ತಗ್ಂ ಹೈತಮತಿಧನ್ವಾ ಶೌನಕ ಉದರಶಾಣ್ಡಿಲ್ಯಾಯೋಕ್ತ್ವೋವಾಚ ಯಾವತ್ತ ಏನಂ ಪ್ರಜಾಯಾಮುದ್ಗೀಥಂ ವೇದಿಷ್ಯನ್ತೇ ಪರೋವರೀಯೋ ಹೈಭ್ಯಸ್ತಾವದಸ್ಮಿಲ್ಲೋಕೇ ಜೀವನಂ ಭವಿಷ್ಯತಿ ॥ ೩ ॥**

**ತಥಾಮುಷ್ಮಿಲ್ಲೋಕೇ ಲೋಕ ಇತಿ ಸ ಯ ಏತಮೇವಂ[1] ವಿದ್ವಾನುಪಾಸ್ತೇ ಪರೋವರೀಯ ಏವ ಹಾಸ್ಯಾಸ್ಮಿಲ್ಲೋಕೇ ಜೀವನಂ ಭವತಿ ತಥಾಮುಷ್ಮಿಲ್ಲೋಕೇ ಲೋಕ ಇತಿ ಲೋಕೇ ಲೋಕ ಇತಿ ॥ ೪ ॥**

೩. ಆ ಇದನ್ನು ಅತಿಧನ್ವ ಶೌನಕನು ಉದರಶಾಂಡಿಲ್ಯನಿಗೆ ಹೇಳಿ ಇಂತೆಂದನು : 'ನಿನ್ನ ಪ್ರಜೆಯಲ್ಲಿ ಎಲ್ಲಿಯುವರೆಗೆ ಈ ಉದ್ಗೀಥವನ್ನು ಅರಿತಿರುವರೋ ಅಲ್ಲಿಯುವರೆಗೆ ಅವರಿಗೆ ಪರೋವರೀಯವಾದ ಜೀವನವು ಆಗುತ್ತಿರುವದು.

೪. ಹಾಗೂ ಆ ಲೋಕದಲ್ಲಿಯೂ ಲೋಕವು (ಆಗುವದು).' ಯಾವನು ಇದನ್ನು ಹೀಗೆಂದರಿತು ಉಪಾಸನೆಮಾಡುವನೋ ಅವನಿಗೆ ಈ ಲೋಕದಲ್ಲಿ ಪರೋವರೀಯವಾದ ಜೀವನವೇ ಆಗುವದು ; ಹಾಗೂ ಆ ಲೋಕದಲ್ಲಿಯೂ ಲೋಕವು (ಆಗುವದು), ಲೋಕದಲ್ಲಿಯೂ ಲೋಕ(ವಾಗುವದು).

## ವಿದ್ಯಾಫಲಶ್ರುತಿ, ಶೌನಕವಾಕ್ಯ

(ಭಾಷ್ಯ)

೮೪. ಕಿಂ ಚ ತಮೇತಮ್ ಉದ್ಗೀಥಂ ವಿದ್ವಾನ್ ಅತಿಧನ್ವಾ ನಾಮತಃ ಶುನಕಸ್ಯಾಪತ್ಯಂ ಶೌನಕಃ ಉದರಶಾಣ್ಡಿಲ್ಯಾಯ ಶಿಷ್ಯಾಯ ಏತಮ್ ಉದ್ಗೀಥ

1. "ಏತದೇವಂ" ಎಂಬುವದಕ್ಕಿಂತ ಈ ಪಾಠವೇ ಮೇಲು.

ದರ್ಶನಮ್ ಉಕ್ತ್ವಾ ಉವಾಚ । ಯಾವತ್ ತೇ ತವ ಪ್ರಜಾಯಾಮ್ । ಪ್ರಜಾ ಸನ್ತತೌ ಇತ್ಯರ್ಥಃ । ಏನಮ್ ಉದ್ಗೀಥಂ ತ್ವತ್ಸನ್ತತಿಜಾ ವೇದಿಷ್ಯನ್ತೇ ಜ್ಞಾಸ್ಯನ್ತಿ ತಾವನ್ತಂ ಕಾಲಂ ಪರೋವರಿಯೋ ಹ ಏಭ್ಯಃ ಪ್ರಸಿದ್ಧೇಭ್ಯೋ ಲೌಕಿಕಜೀವ ನೇಭ್ಯಃ ಉತ್ತರೋತ್ತರವಿಶಿಷ್ಟತರಂ ಜೀವನಂ ತೇಭ್ಯೋ ಭವಿಷ್ಯತಿ । ತಥಾ ಅದೃಷ್ಟೇಽಪಿ ಪರಲೋಕೇ ಅಮುಷ್ಮಿನ್ ಪರೋವರೀಯಾನ್ ಲೋಕೋ ಭವಿ ಷ್ಯತಿ । ಇತ್ಯುಕ್ತವಾನ್ ಶಾಣ್ಡಿಲ್ಯಾಯ ಅತಿಧನ್ವಾ ಶೌನಕಃ ॥

ಸ್ಯಾದೇತತ್ ಫಲಂ ಪೂರ್ವೇಷಾಂ ಮಹಾಭಾಗ್ಯಾನಾಮ್ ನೈವಂ ಯುಗೀನಾನಾಮ್ ಇತ್ಯಾಶಙ್ಕಾನಿವೃತ್ತಯೇ ಆಹ । ಸ ಯಃ ಕಶ್ಚಿತ್ ಏತಮ್[1] ಏವಂ ವಿದ್ವಾನ್ ಉದ್ಗೀಥಮ್ ಏತರ್ಹಿ ಉಪಾಸ್ತೇ ತಸ್ಯಾಪಿ ಏವಮೇವ ಪರೋವರೀಯ ಏವ ಹ ಅಸ್ಯ ಅಸ್ಮಿನ್ ಲೋಕೇ ಜೀವನಂ ಭವತಿ । ತಥಾ ಅಮುಷ್ಮಿನ್ ಲೋಕೇ ಲೋಕಃ ಇತಿ । ಲೋಕೇ ಲೋಕ ಇತಿ ॥

(ಭಾಷ್ಯಾರ್ಥ)

ಮತ್ತು[2] ಆ ಈ ಉದ್ಗೀಥವನ್ನು ಉಪಾಸನೆಮಾಡಿದ್ದ ಅತಿಧನ್ವನೆಂಬ ಹೆಸರಿನ ಶೌನಕನು, ಶುನಕನ ಮಗನು, ಉದರಶಾಂಡಿಲ್ಯನೆಂಬ ಶಿಷ್ಯನಿಗೆ ಈ ಉದ್ಗೀಥದರ್ಶನವನ್ನು ಹೇಳಿಕೊಟ್ಟು ಇಂತೆಂದನು: ಎಲ್ಲಿಯವರೆಗೆ (ತೇ=ತವ) ನಿನ್ನ ಪ್ರಜೆಯಲ್ಲಿ ಎಂದರೆ, ಪ್ರಜಾಸಂತತಿಯಲ್ಲಿ ಎಂದರ್ಥ ನಿನ್ನ ಸಂತತಿಯಲ್ಲಿ ಹುಟ್ಟಿದವರು (ಎಲ್ಲಿಯವರೆಗೆ) ಈ ಉದ್ಗೀಥವನ್ನು (ವೇದಿಷ್ಯನ್ತೇ=ಜ್ಞಾಸ್ಯನ್ತಿ) ಉಪಾಸನೆಮಾಡಿಕೊಂಡಿರುವರೋ ಅಷ್ಟು ಕಾಲದವರೆಗೆ ಈ ಲೌಕಿಕಜೀವನ ದಲ್ಲಿ ಪ್ರಸಿದ್ಧರಾಗಿರುವವರಿಗಿಂತ ಮುಂದುಮುಂದಕ್ಕೆ ವಿಶಿಷ್ಟತರವಾದ ಜೀವನವು ಅವರಿಗೆ ಆಗುತ್ತಿರುವದು. ಹಾಗೂ ಅದೃಷ್ಟವಾದ ಆ ಪರಲೋಕದಲ್ಲಿಯೂ ಪರೋವರೀಯವಾದ ಲೋಕವು ಆಗುತ್ತಿರುವದು ಎಂದು ಶಾಂಡಿಲ್ಯನಿಗೆ ಅತಿಧನ್ವ ಶೌನಕನು ಹೇಳಿದನು.

**ಈ ಫಲವು ಮಹಾಭಾಗ್ಯವಂತರಾದ ಹಿಂದಿನ (ಕಾಲದ)ವರಿಗೆ ಆಗಿರಬಹುದು ; ಈ ಯುಗದವರಿಗೆ ಆಗಲಾರದು ಎಂಬೀ ಆಶಂಕೆ ಯನ್ನು ತೊಲಗಿಸುವದಕ್ಕಾಗಿ (ಶ್ರುತಿಯು ಹೀಗೆಂದು) ಹೇಳುತ್ತಿದೆ.**

---

1. ಏತತ್ ಎಂಬುದಕ್ಕಿಂತ ಈ ಪಾಠವೇ ಮೇಲು

2. ಉದ್ಗೀಥೋಪಾಸಕನಿಗೆ ಆಗುವ ಫಲವು ನಿಯತವು. ಯಾರುಯಾರು ಇದನ್ನು ಮಾಡುವರೋ ಅವರಿಗೆಲ್ಲ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಉತ್ತರೋತ್ತರವಾಗಿ ಹೆಚ್ಚಿನ ಸೌಖ್ಯವೇ ಆಗುತ್ತಿರುವದು– ಎಂಬುವನ್ನು ತಿಳಿಸುವದಕ್ಕೆ ಈ ಶೌನಕವಾಕ್ಯವನ್ನು ಉದಾಹರಿಸಿದೆ ಎಂದು ಭಾವ.

ಯಾವನೇ ಆಗಲಿ, ಇದನ್ನು ಹೀಗೆಂದರಿತು ಉದ್ಗೀಥವನ್ನು ಈಗಲೂ ಉಪಾಸನೆ ಮಾಡಿದರೆ, ಅವನಿಗೂ ಹೀಗೆಯೇ ಪರೋವರೀಯವಾಗಿಯೇ ಈ ಲೋಕದಲ್ಲಿ ಜೀವನವು ಆಗುವದು, ಹಾಗೂ ಆ ಲೋಕದಲ್ಲಿ (ಪರೋವರೀಯವಾದ) ಲೋಕವೂ[1] (ಆಗುತ್ತದೆ. ಆ) ಲೋಕದಲ್ಲಿ (ಪರೋವರೀಯವಾದ) ಲೋಕವೂ (ಆಗುತ್ತದೆ).[2]

---

# ಒಂದನೆಯ ಅಧ್ಯಾಯ-ಹತ್ತನೆಯ ಖಂಡ

(ಪ್ರಾಸಂಗಿಕವಾಗಿ ಪ್ರಸ್ತಾವಾದಿಗಳ ಉಪಾಸನೆ)

## ಉಷಸ್ತಿಯು ಯಜ್ಞಶಾಲೆಗೆ ಬಂದದ್ದು

(ಉಪನಿಷತ್ತು)

**ಮಟಚೀಹತೇಷು ಕುರುಷ್ವಾಟಿಕ್ಯಾ ಸಹ ಜಾಯಯೋಷಸ್ತಿರ್ಹ ಚಾಕ್ರಾಯಣ ಇಭ್ಯಗ್ರಾಮೇ ಪ್ರದ್ರಾಣಕ ಉವಾಸ ॥ ೧ ॥**

೧. ಮಟಚೀಹತವಾದ ಕುರುದೇಶದಲ್ಲಿ ಆಟಿಕಿಯಾದ ಹೆಂಡತಿಯೊಡನೆ ಉಷಸ್ತಿ ಚಾಕ್ರಾಯಣನು ಇಭ್ಯಗ್ರಾಮದಲ್ಲಿ ಪ್ರದ್ರಾಣಕನಾಗಿ ವಾಸಮಾಡಿಕೊಂಡಿದ್ದನು.

### ಗ್ರಂಥದ ಸಂಬಂಧ

(ಭಾಷ್ಯ)

ಅ೫. ಉದ್ಗೀಥೋಪಾಸನಪ್ರಸಙ್ಗೇನ ಪ್ರಸ್ತಾವಪ್ರತಿಹಾರವಿಷಯಮಪಿ ಉಪಾಸನಂ ವಕ್ತವ್ಯಮ್ ಇತಿ ಇದಮಾರಭ್ಯತೇ । ಆಖ್ಯಾಯಿಕಾ ತು ಸುಖಾವಬೋಧನಾರ್ಥಾ ॥

---

1. ಇದು ಅರ್ಥವಾದವು. ಆದ್ದರಿಂದ ಪರೋವರೀಯವೆಂದು ಉದ್ಗೀಥವನ್ನು ಉಪಾಸನೆಮಾಡಬೇಕು- ಎಂದು ಅಭಿಪ್ರಾಯ

2. ಈ ಉಪಾಸನೆಯು ಮುಗಿಯಿತೆಂಬುದನ್ನು ತಿಳಿಸುವದಕ್ಕೆ ಈ ದ್ವಿರುಕ್ತಿ ಬಂದಿದೆ. ಹಿಂದೆ ಹೇಳಿರುವ ಹಿರಣ್ಯಶ್ಮಶ್ರುತ್ವಾದಿವಿಶಿಷ್ಟೋದ್ಗೀಥೋಪಾಸನೆಗಿಂತ ಈ ಉಪಾಸನೆಯು ಬೇರೆ ಎಂಬುದನ್ನು ಸೂ. ಭಾ. ೩-೩-೭ (ಭಾ. ಭಾ. ೩೨೯)ರಲ್ಲಿ ತಿಳಿಸಿಕೊಟ್ಟಿದೆ. ಗುಣವಿಶೇಷಗಳು ಬೇರೆಬೇರೆಯಾಗಿರುವದರಿಂದ ಇವೆರಡನ್ನೂ ಕೂಡಿಸಿ ಉಪಾಸನೆಮಾಡತಕ್ಕದ್ದಲ್ಲ

(ಭಾಷ್ಯಾರ್ಥ)

ಉದ್ಗೀಥೋಪಾಸನೆಯ ಪ್ರಸಂಗದಿಂದ ಪ್ರಸ್ತಾವ, ಪ್ರತೀಹಾರ[1]– (ಇವುಗಳ) ವಿಷಯದ ಉಪಾಸನೆಯನ್ನು ಹೇಳಬೇಕೆಂದು ಇದನ್ನು ಆರಂಭಿಸಿದೆ. ಕಥೆಯಾದರೋ ಸುಲಭವಾಗಿ ತಿಳಿಯುವದಕ್ಕೆ ಹೇಳಿದ್ದು.[2]

## ಉಷಸ್ತಿಯ ದಾರಿದ್ರ್ಯಸ್ಥಿತಿ

(ಭಾಷ್ಯ)

೮೬. ಮಟಚೀಹತೇಷು । ಮಟಚ್ಯಃ ಅಶನಯಃ ತಾಭಿರ್ಹತೇಷು ನಾಶಿತೇಷು ಕುರುಷು ಕುರುಸಸ್ಯೇಷು ಇತ್ಯರ್ಥಃ । ತತೋ ದುರ್ಭಿಕ್ಷೇ ಜಾತೇ ಆಟಿಕ್ಯಾ ಅನುಪಜಾತಪಯೋಧರಾದಿಸ್ತ್ರೀವ್ಯಞ್ಜನಯಾ ಸಹ ಜಾಯಯಾ ಉಷಸ್ತಿಃ ಹ ನಾಮತಃ । ಚಕ್ರಸ್ಯ ಅಪತ್ಯಂ ಚಾಕ್ರಾಯಣಃ ಇಭಃ ಹಸ್ತೀ । ತಮ್ ಅರ್ಹತೀತಿ ಇಭ್ಯಃ । ಈಶ್ವರಃ ಹಸ್ತ್ಯಾರೋಹೋ ವಾ । ತಸ್ಯ ಗ್ರಾಮಃ ಇಭ್ಯಗ್ರಾಮಃ । ತಸ್ಮಿನ್ । ಪ್ರದ್ರಾಣಕಃ ಅನ್ನಾಲಾಭಾತ್ । ದ್ರಾ ಕುತ್ಸಾಯಾಂ ಗತೌ । ಕುತ್ಸಿತಾಂ ಗತಿಂ ಗತಃ । ಅನ್ತ್ಯಾವಸ್ಥಾಂ ಪ್ರಾಪ್ತಃ ಇತ್ಯರ್ಥಃ । ಉವಾಸ ಉಷಿತವಾನ್ ಕಸ್ಯಚಿದ್ ಗೃಹಮ್ ಆಶ್ರಿತ್ಯ ॥

(ಭಾಷ್ಯಾರ್ಥ)

ಮಟಚೀಹತವಾದ – ಮಟಚಿಗಳು ಎಂದರೆ ಸಿಡಿಲುಗಳು[3]; ಅವುಗಳಿಂದ ಕುರುದೇಶವು ಎಂದರೇ ಕುರುದೇಶದ ಸಸ್ಯಗಳು ಎಂದರ್ಥ, (ಅವು) ಹತವಾಗಿರಲು, ನಾಶವಾಗಿರಲು, ಅದರಿಂದ ದುರ್ಭಿಕ್ಷವುಂಟಾಗಲಾಗಿ ಆಟಕಿಯಾದ ಮೊಲೆಯೇ ಮುಂತಾದ ಸ್ತ್ರೀವ್ಯಂಜನವು (ಇನ್ನೂ) ಉಂಟಾಗದಿದ್ದ[4] ಹೆಂಡತಿಯೊಡನೆ ಉಷಸ್ತಿ ಎಂಬ ಹೆಸರಿನ ಚಾಕ್ರಾಯಣನು, ಚಕ್ರನ ಮಗನು, (ಇಭ್ಯಗ್ರಾಮದಲ್ಲಿ) –ಇಭವೆಂದರೆ ಆನೆ, ಅದಕ್ಕೆ ತಕ್ಕವನು ಇಭ್ಯನು, ಒಡೆಯನು ಅಥವಾ ಮಾವಟಿಗನು. ಅವನ ಗ್ರಾಮವು ಇಭ್ಯಗ್ರಾಮವು, ಅದರಲ್ಲಿ–ಪ್ರದ್ರಾಣಕನಾಗಿ ದ್ರಾ ಕುತ್ಸಾಯಾಂ ಗತೌ (ಎಂಬ ಧಾತುವಿನಿಂದ ಈ ಶಬ್ದವು ಬಂದಿದೆ), ಕುತ್ಸಿತಗತಿಯನ್ನು

---

1. ಸಾಮಭೇದಗಳು, ಸಾಮಭಕ್ತಿಗಳು–ಮುಂತಾದವುಗಳ ವಿವರವನ್ನು ಪರಿಶಿಷ್ಟದಲ್ಲಿ ವಿವರಿಸಿದೆ.

2. ಕಥೆಯಲ್ಲಿ ಉಷಸ್ತಿಯ ದರಿದ್ರಾವಸ್ಥೆಯನ್ನು ವರ್ಣಿಸಿರುವದರಿಂದ ಜ್ಞಾನಿಯಾದವನು ಆಪತ್ತಿನಲ್ಲಿ ಅನನ್ನವನ್ನು ತಿಂದರೂ ಪಾಪವಾಗುವದಿಲ್ಲ ಎಂಬುದು ಸುಲಭವಾಗಿ ತಿಳಿಯುತ್ತದೆ.

3. ಆಲಿಕಲ್ಲುಗಳು ಎಂದೇ ಅರ್ಥವಿರಬಹುದು.

4. ಸಣ್ಣ ಹುಡುಗಿಯಾದ.

ಹೊಂದಿ, (ತೀರ)ಕೊನೆಯ ಗತಿಯನ್ನು ಹೊಂದಿ[1] ಎಂದರ್ಥ, ವಾಸಮಾಡಿ ಕೊಂಡಿದ್ದನು, ಯಾವನೋ ಒಬ್ಬನ ಮನೆಯನ್ನು ಆಶ್ರಯಿಸಿಕೊಂಡು (ವಾಸವಾಗಿದ್ದನು).

(ಉಪನಿಷತ್ತು)

**ಸ ಹೇಭ್ಯಂ ಕುಲ್ಮಾಷಾನ್ ಖಾದನ್ತಂ ಬಿಭಿಕ್ಷೇ ತಗ್ಂ ಹೋವಾಚ । ನೇತೋಽನ್ಯೇ ವಿದ್ಯನ್ತೇ । ಯಚ್ಚ ಯೇ ಮ ಇಮ ಉಪನಿಹಿತಾಃ ಇತಿ ॥ ೨ ॥**

೨. ಅವನು ಕುಲ್ಮಾಷವನ್ನು ತಿನ್ನುತ್ತಿರುವ ಮಾವಟಿಗನನ್ನು ಬೇಡಿದನು. (ಮಾವಟಿಗನು) ಅವನನ್ನು ಕುರಿತು ಇಂತೆಂದನು; 'ಇಗೊ, ಈ ಬಡಿಸಿಕೊಂಡಿರುವ ಈ ನನ್ನದಿದೆಯಲ್ಲ, ಇದಕ್ಕಿಂತ ಬೇರೆಯಿಲ್ಲ.'

## ಮಾವಟಿಗನನ್ನು ಹುರುಳಿಬೇಡಿದ್ದು, ಅವನ ಉತ್ತರ

(ಭಾಷ್ಯ)

೮೭. ಸ ಅನ್ನಾರ್ಥಮ್ ಅಟನ್ ಇಭ್ಯಂ ಕುಲ್ಮಾಷಾನ್ ಕುತ್ಸಿತಾನ್ ಮಾಷಾನ್ ಖಾದನ್ತಂ ಭಕ್ಷಯನ್ತಂ ಯದೃಚ್ಛಯಾ ಉಪಲಭ್ಯ ಬಿಭಿಕ್ಷೇ ಯಾಚಿತವಾನ್ । ತಮ್ ಉಷಸ್ತಿಂ ಹ ಉವಾಚ ಇಭ್ಯಃ । ನ ಇತಃ ಅಸ್ಮಾತ್ ಮಯಾ ಭಕ್ಷ್ಯಮಾಣಾತ್ ಉಚ್ಛಿಷ್ಟರಾಶೇಃ ಕುಲ್ಮಾಷಾ ಅನ್ಯೇ ನ ವಿದ್ಯನ್ತೇ । ಯಚ್ಚ ಯೇ ರಾಶೌ ಮೇ ಮಮ ಉಪನಿಹಿತಾಃ ಪ್ರಕ್ಷಿಪ್ತಾಃ ಇಮೇ ಭಾಜನೇ । ಕಿಂ ಕರೋಮಿ ?

(ಭಾಷ್ಯಾರ್ಥ)

ಅನ್ನಕ್ಕಾಗಿ ಅಲೆಯುತ್ತಿದ್ದ ಅವನು ಕುಲ್ಮಾಷವನ್ನು ಕುತ್ಸಿತವಾದ ಮಾಷವನ್ನು[2] ತಿನ್ನುತ್ತಿದ್ದ ಮಾವಟಿಗನನ್ನು ಯದೃಚ್ಛೆಯಿಂದ ಕಂಡು ಬೇಡಿದನು, (ಅದನ್ನು) ಯಾಚಿಸಿದನು. (ಆ) ಮಾವಟಿಗನು ಆ ಉಷಸ್ತಿಯನ್ನು ಕುರಿತು ನಾನು ತಿನ್ನುತ್ತಿರುವ (ಇತಃ=ಅಸ್ಮಾತ್) ಈ ಉಚ್ಛಿಷ್ಟರಾಶಿಗಿಂತ ಬೇರೆಯಾದ

---

1. ಸಾಯುವ ಸ್ಥಿತಿಯನ್ನು ಹೊಂದಿ ಎಂದರ್ಥ.

2. ಕುಲ್ಮಾಷವೆಂದರೆ ಈಗ ಹುರುಳಿ ಎಂದೇ ಅರ್ಥವಾಗುತ್ತದೆ; ಕುತ್ಸಿತವಾದ ಮಾಷ ಎಂಬ ವಿಗ್ರಹವಾಕ್ಯದ ಅಕ್ಷರಾರ್ಥವನ್ನು ಹಿಡಿದರೆ ಉದ್ದಿನ ಜಾತಿಯ ಕೀಳುಧಾನ್ಯ ಎಂಬರ್ಥವು ತೋರುತ್ತದೆ.

ಕುಲ್ಮಾಷವು ಇರುವದಿಲ್ಲ. ಈ (ಮೇ=ಮಮ) ನನ್ನ ರಾಶಿಯಲ್ಲಿರುವದೋ ಎಂದರೆ ಇದನ್ನು ಪಾತ್ರೆಯಲ್ಲಿ (ಊಟಕ್ಕೆ ಉಪನಿಹಿತಾಃ=ಪ್ರಕ್ಷಿಪ್ತಾಃ) ಹಾಕಿ ಕೊಂಡಿರುತ್ತೇನಲ್ಲ ! ಏನು ಮಾಡಲಿ ?

(ಉಪನಿಷತ್ತು)

**ಏತೇಷಾಂ ಮೇ ದೇಹೀತಿ ಹೋವಾಚ ತಾನಸ್ಮೈ ಪ್ರದದೌ ಹನ್ತಾನುಪಾನಮಿತ್ಯುಚ್ಛಿಷ್ಟಂ ವೈ ಮೇ ಪೀತಗ್ಂ ಸ್ಯಾದಿತಿ ಹೋವಾಚ ॥೩॥**

೩. 'ಇದರಲ್ಲಿ(ಯೇ) ನನಗೆ ಕೊಡು' ಎಂದನು. ಅದನ್ನು ಇವನಿಗೆ ಕೊಟ್ಟನು. 'ಹಾಗಾದರೆ (ಇಗೋ), ಅನುಪಾನವು !' ಎನ್ನಲು '(ಅದನ್ನು) ಕುಡಿದರೆ ನನಗೆ ಎಂಜಲಾದೀತು!' ಎಂದನು.

## ಹುರುಳಿಯನ್ನು ತೆಗೆದುಕೊಂಡು ಕುಡಿಯುವ ನೀರನ್ನು ಒಲ್ಲೆನೆಂದದ್ದು

(ಭಾಷ್ಯ)

೮೮. ಇತ್ಯುಕ್ತಃ ಪ್ರತ್ಯುವಾಚ ಉಷಸ್ತಿಃ[1] । ಏತೇಷಾಮ್ ಏತಾನ್ ಇತ್ಯರ್ಥಃ । ಮೇ ಮಹ್ಯಂ ದೇಹಿ ಇತಿ ಹ ಉವಾಚ । ತಾನ್ ಸ ಇಭ್ಯಃ ಅಸ್ಮೈ ಉಷಸ್ತಯೇ ಪ್ರದದೌ ಪ್ರದತ್ತವಾನ್ । ಅನುಪಾನಾಯ[2] ಸಮೀಪಸ್ಥಮ್ ಉದಕಂ ಚ ಗೃಹೀತ್ವಾ ಉವಾಚ । ಹನ್ತ ಗೃಹಾಣ ಅನುಪಾನಂ ಇತ್ಯುಕ್ತಃ ಪ್ರತ್ಯುವಾಚ । ಉಚ್ಛಿಷ್ಟಂ ವೈ ಮೇ ಮಮ ಇದಮ್ ಉದಕಂ ಪೀತಂ ಸ್ಯಾತ್ । ಯದಿ ಪಾಸ್ಯಾಮಿ ॥

(ಭಾಷ್ಯಾರ್ಥ)

ಹೀಗೆನ್ನಲು ಉಷಸ್ತಿಯು (ಅದಕ್ಕೆ) ಪ್ರತಿಯಾಗಿ ಇಂತೆಂದನು : (ಮೇ= ಮಹ್ಯಮ್) ನನಗೆ ಇದರಲ್ಲಿಯೇ - ಇದನ್ನೇ ಎಂದರ್ಥ ; ಕೊಡು ಎಂದನು. ಅದನ್ನು ಆ ಮಾವಟಿಗನು ಈ ಉಷಸ್ತಿಗೆ (ಪ್ರದದೌ=ಪ್ರದತ್ತವಾನ್) ಕೊಟ್ಟನು. ಅನುಪಾನಕ್ಕಾಗಿ ಹತ್ತಿರದಲ್ಲಿದ್ದ ನೀರನ್ನೂ ತೆಗೆದುಕೊಂಡು 'ಹಾಗಾದರೆ ಅನು

---

1. ಈ ವಾಕ್ಯವನ್ನು ಅಚ್ಚಿನ ಪುಸ್ತಕದಲ್ಲಿ ಹಿಂದಿನ ಕಂಡಿಕೆಯ ಭಾಷ್ಯಕ್ಕೇ ಸೇರಿಸಲಾಗಿದೆ. ಆದರೆ ಅರ್ಥಾನುಸಾರವಾಗಿ ಇಲ್ಲಿಗೇ ಹೊಂದುತ್ತದೆ. ಮುಂದಿನ ಕಂಡಿಕೆಯ ಅವತರಣಿಕೆಯನ್ನೂ ಹೀಗೆಯೇ ತಿಳಿಯಬೇಕು.

2. "ಅನುಪಾನೀಯಂ" ಎಂಬುದಕ್ಕಿಂತ ಈ ಪಾಠವೇ ಮೇಲು.

ಪಾನವನ್ನು ತೆಗೆದುಕೊ!' ಎನ್ನಲು (ಉಷಸ್ತಿಯು ಹೀಗೆ) ಪ್ರತ್ಯುತ್ತರವಿತ್ತನು! ಇದನ್ನು (ಪೀತಮ್=ಯದಿ ಪಾಸ್ಯಾಮಿ) ಕುಡಿದೆನಾದರೆ ಈ ಉದಕವು (ಮೇ= ಮಮ) ನನಗೆ ಎಂಜಲಾದೀತು !

(ಉಪನಿಷತ್ತು)

**ನ ಸ್ವಿದೇತೇಽಪ್ಯುಚ್ಛಿಷ್ಟಾ ಇತಿ ನ ವಾ ಅಜೀವಿಷ್ಯಮಿಮಾನಖಾದ ನ್ನಿತಿ ಹೋವಾಚ ಕಾಮೋ ಮ ಉದಪಾನಮಿತಿ[1] ॥ ೪ ॥**

೪. 'ಇದೂ ಎಂಜಲಲ್ಲವೆ?' 'ಇದನ್ನು ತಿನ್ನದಿದ್ದರೆ ಬದುಕುತ್ತ ಲೇ ಇರಲಿಲ್ಲ. (ಆದರೆ) ಉದಪಾನವು ನನಗೆ ಕಾಮವು' ಎಂದನು.

(ಭಾಷ್ಯ)

೮. ಇತ್ಯುಕ್ತವನ್ತಂ ಪ್ರತ್ಯುವಾಚ ಇತರಃ । ಕಿಂ ನ ಸ್ವಿತ್ ಏತೇ ಕುಲ್ಮಾಷಾ ಅಪಿ ಉಚ್ಛಿಷ್ಟಾಃ ? ಇತ್ಯುಕ್ತಃ ಆಹ ಉಷಸ್ತಿಃ । ನ ವೈ ಅಜೀವಿಷ್ಯಂ ನೈವ[2] ಜೀವಿಷ್ಯಾಮಿ ಇಮಾನ್ ಕುಲ್ಮಾಷಾನ್ ಅಖಾದನ್ ಅಭಕ್ಷಯನ್ ಇತಿ ಹೋವಾಚ । ಕಾಮಂ ಇಚ್ಛಾತಃ ಮೇ ಮಮ ಉದಕಪಾನಂ ಲಭ್ಯತೇ ಇತ್ಯರ್ಥಃ । ಅತಶ್ಚ ಏತಾಮ್ ಅವಸ್ಥಾಂ ಪ್ರಾಪ್ತಸ್ಯ ವಿದ್ಯಾಧರ್ಮಯಶೋವತಃ ಸ್ವಾತ್ಮ ಪರೋಪಕಾರಸಮರ್ಥಸ್ಯ ಏತದಪಿ ಕರ್ಮ ಕುರ್ವತೋ ನ ಆಗಃಸ್ಪರ್ಶಃ[3] ಇತ್ಯಭಿಪ್ರಾಯಃ । ತಸ್ಯಾಪಿ ಜೀವಿತಂ ಪ್ರತಿ ಉಪಾಯಾನ್ತರೇ ಅಜುಗುಪ್ಸಿತೇ ಸತಿ ಜುಗುಪ್ಸಿತಮ್ ಏತತ್ಕರ್ಮ ದೋಷಾಯ । ಜ್ಞಾನಾವಲೇಪೇನ ಕುರ್ವತೋ ನರಕಪಾತಃ ಸ್ಯಾದೇವ ಇತ್ಯಭಿಪ್ರಾಯಃ । ಪ್ರದ್ರಾಣಕಶಬ್ದಶ್ರವಣಾತ್ ॥

(ಭಾಷ್ಯಾರ್ಥ)

ಹೀಗೆ ಹೇಳಿದ (ಉಷಸ್ತಿಗೆ ಆ) ಇನ್ನೊಬ್ಬ(ನಾದ ಮಾವಟಿಗ)ನು ಪ್ರತಿ ಯಾಗಿ ಹೀಗೆಂದನು. ಈ ಹುರುಳಿಯೂ ಎಂಜಲಲ್ಲವೆ? ಹೀಗೆನ್ನಲು ಉಷಸ್ತಿ ಹೇಳುತ್ತಾನೆ. "ಈ ಹುರುಳಿಯನ್ನು ತಿನ್ನದಿದ್ದರೆ ನಾನು ಬದುಕುವಂತೆಯೇ ಇರಲಿಲ್ಲ, (ಆದರೆ) ನೀರಿನ (ಅನು)ಪಾನವು (ಮೇ= ಮಮ) ಕಾಮವು, ಇಚ್ಛೆಯಿಂದಲೇ ದೊರಕುತ್ತದೆ."

**ಇದರಿಂದ ಇಂಥ ಅವಸ್ಥೆಯನ್ನು ಪಡೆದಿರುವಲ್ಲಿ ವಿದ್ಯಾಧರ್ಮ ಕೀರ್ತಿಯುಳ್ಳವನಾಗಿ ತನಗೂ ಮತ್ತೊಬ್ಬರಿಗೂ ಉಪಕಾರಮಾಡ**

---

1. "ಉದಕಪಾನಮಿತಿ" ಎಂಬ ಪಾಠವೂ ಉಂಟು; ಭಾಷ್ಯದಲ್ಲಿ "ಉದಕಪಾನಂ" ಎಂದೇ ಇದೆ. ಆದರೆ ಸೂತ್ರಭಾಷ್ಯದಲ್ಲಿ "ಉದಪಾನಂ" ಎಂಬ ಪಾಠವನ್ನೇ ಗ್ರಹಿಸಿದೆ.

2. ಇದು ವಾ॥ ಪಾಠ.

3. 'ಅಘಸ್ಪರ್ಶಃ' (ಪಾಪದ ಸೋಂಕು) ಎಂದು ವಾ॥ ಪಾಠ.

**ಬಲ್ಲವನಿಗೆ ಈ ಕರ್ಮವನ್ನೂ ಮಾಡಿದರೂ ತಪ್ಪು ಸೋಂಕದು ಎಂದು ಅಭಿಪ್ರಾಯ. ಇಂಥವನಿಗೂ ಬದುಕಿರುವದಕ್ಕೆ ಜುಗುಪ್ಸಿತವಲ್ಲದ ಬೇರೊಂದು ಉಪಾಯವು ಇರುವಲ್ಲಿ, ಜುಗುಪ್ಸಿತವಾದ ಈ ಕರ್ಮವು ದೋಷ(ಫಲಕ)ವೇ (ಆಗುವದು). ಜ್ಞಾನದ ಗರ್ವದಿಂದ ಮಾಡಿದವನಿಗೆ ನರಕಪಾತವು ಆಗಿಯೇತೀರುವದು -ಎಂದು ಅಭಿಪ್ರಾಯ.**[1]
ಏಕೆಂದರೆ (ಇಲ್ಲಿ) ಪ್ರದ್ರಾಣಕಶಬ್ದವು ಶ್ರುತಿಯಲ್ಲಿದೆ.[2]

(ಉಪನಿಷತ್ತು)

**ಸ ಹ ಖಾದಿತ್ವಾತಿಶೇಷಾಞ್ಜಾಯಾಯಾ ಆಜಹಾರ ಸಾಗ್ರ ಏವ ಸುಭಿಕ್ಷಾ ಬಭೂವ ತಾನ್ ಪ್ರತಿಗೃಹ್ಯ ನಿದಧೌ ॥ ೫ ॥**

೫. (ಅವನ್ನು) ಅವನು ತಿಂದು ಉಳಿದದ್ದನ್ನು ಹೆಂಡತಿಗೆ ಕೊಟ್ಟನು. ಆಕೆಯು ಮೊದಲೇ ಸುಭಿಕ್ಷೆಯಾಗಿದ್ದಳು ; ಅದನ್ನು ತೆಗೆದುಕೊಂಡು ಇಟ್ಟಳು.

ತಿಂದು ಮಿಕ್ಕ ಹುರುಳಿಯನ್ನು ಹೆಂಡತಿ ಇಟ್ಟುಕೊಂಡಿದ್ದು

(ಭಾಷ್ಯ)

೯೦. ತಾಂಶ್ಚ ಸ ಖಾದಿತ್ವಾ ಅತಿಶೇಷಾನ್ ಅತಿಶಿಷ್ಟಾನ್ ಜಾಯಾಯೈ ಕಾರುಣ್ಯಾತ್ ಆಜಹಾರ । ಸಾ ಆಟಿಕೀ ಅಗ್ರೇ ಏವ ಕುಲ್ಮಾಷಪ್ರಾಪ್ತೇಃ ಸುಭಿಕ್ಷಾ ಶೋಭನಭಿಕ್ಷಾ। ಲಬ್ಧಾನ್ನಾ ಇತ್ಯೇತತ್। ಬಭೂವ ಸಂವೃತ್ತಾ । ತಥಾಪಿ ಸ್ತ್ರೀಸ್ವಾಭಾವ್ಯಾತ್ ಅನವಜ್ಞಾಯ ತಾನ್ ಕುಲ್ಮಾಷಾನ್ ಪತ್ಯುರ್ಹಸ್ತಾತ್ ಪ್ರತಿಗೃಹ್ಯ ನಿದಧೌ ನಿಕ್ಷಿಪ್ತವತೀ ॥

(ಭಾಷ್ಯಾರ್ಥ)

ಮತ್ತು ಅದನ್ನು ತಿಂದು ಉಳಿದದ್ದನ್ನು ಮಿಕ್ಕದ್ದನ್ನು ಹೆಂಡತಿಗೆ ಕರುಣೆಯಿಂದ ತಂದುಕೊಟ್ಟನು. ಆಟಿಕಿಯು ಕುಲ್ಮಾಷವು ದೊರಕುವ ಮೊದಲೇ ಸುಭಿಕ್ಷೆಯಾಗಿದ್ದಳು, ಒಳ್ಳೆಯ ಭಿಕ್ಷವುಳ್ಳವಳಾಗಿದ್ದಳು ; ಅನ್ನ ದೊರಕಿದವಳಾಗಿ

---

1. ಜ್ಞಾನಿಯು ಯಥೇಷ್ಟಚೇಷ್ಟೆಯನ್ನು ಮಾಡುವದಕ್ಕೆ ಇಲ್ಲಿ ಅನುಮತಿಯಿಲ್ಲ ಎಂದು ಭಾವ ಸೂ. ಭಾ. ೩-೪-೨೮ (ಭಾ. ಭಾ. ೪೨೭).

2. ಉಷಸ್ತಿಯು ಬರಗಾಲದಲ್ಲಿ ಹಸಿವಿನಿಂದ ಕಂಗೆಟ್ಟು ಅನ್ನಕ್ಕಾಗಿ ಅಲೆದಾಡುವ ಆಪದ್ದಶೆಗೆ ಬಂದಿದ್ದನೆಂದು ತಿಳಿಸುವದಕ್ಕೆಂದೇ ಪ್ರದ್ರಾಣಕಶಬ್ದವನ್ನು ಶ್ರುತಿಯಲ್ಲಿ ಪ್ರಯೋಗಿಸಿದೆ -ಎಂದು ಅಭಿಪ್ರಾಯ.

ದ್ದಳು ಎಂದು ತಾತ್ಪರ್ಯ. ಆದರೂ ಸ್ತ್ರೀಸ್ವಾಭಾವ್ಯದಿಂದ[1] ಆ ಕುಲ್ಮಾಷವನ್ನು ಅನಾದರಮಾಡದೆ ಪತಿಯ ಕೈಯಿಂದ ತೆಗೆದುಕೊಂಡು ಇಟ್ಟುಕೊಂಡಳು, (ಒಂದು ಕಡೆಯಲ್ಲಿ) ಇಟ್ಟಿದ್ದಳು.

(ಉಪನಿಷತ್ತು)

**ಸ ಹ ಪ್ರಾತಃ ಸಂಜಿಹಾನ ಉವಾಚ ಯದ್ಬತಾನ್ನಸ್ಯ ಲಭೇಮಹಿ ಲಭೇಮಹಿ ಧನಮಾತ್ರಾಗ್‌ಂ ರಾಜಾಸೌ ಯಕ್ಷ್ಯತೇ ಸ ಮಾ ಸರ್ವೈರಾರ್ತ್ವಿಜ್ಯೈರ್ವೃಣೀತೇತಿ ॥ ೬ ॥**

೬. ಅವನು ಬೆಳಗ್ಗೆ ಬಿಟ್ಟಕೂಡಲೆ ಇಂತೆಂದನು : 'ಅಯ್ಯೋ! ಅನ್ನವು ನಮಗೆ ದೊರೆಯುವದಾದರೆ, ಧನಮಾತ್ರೆಯೂ ನಮಗೆ ಸಿಕ್ಕೀತು. ಈ ರಾಜನು ಯಾಗಮಾಡುವನು ; ಅವನು ನನ್ನನ್ನು ಎಲ್ಲಾ ಆರ್ತ್ವಿಜ್ಯಗಳಿಂದಲೂ ವರಣಮಾಡಿಯಾನು !'

## ಉಷಸ್ತಿಯು ಅನ್ನಕ್ಕಾಗಿ ಹಂಬಲಿಸಿದ್ದು

(ಭಾಷ್ಯ)

೯೧. ಸ ತಸ್ಯಾಃ ಕರ್ಮ ಜಾನನ್ ಪ್ರಾತಃ ಉಷಃಕಾಲೇ ಸಂಜಿಹಾನಃ ಶಯನಂ ನಿದ್ರಾಂ ವಾ ಪರಿತ್ಯಜನ್ ಉವಾಚ ಪತ್ನ್ಯಾಃ ಶೃಣ್ವನ್ತ್ಯಾಃ । ಯತ್ ಯದಿ ಬತ ಇತಿ ಖಿದ್ಯಮಾನಃ । ಅನ್ನಸ್ಯ ಸ್ತೋಕಂ ಲಭೇಮಹಿ ತದ್ ಭುಕ್ತ್ವಾ ಅನ್ನಂ ಸಮರ್ಥಾ[2] ಗತ್ವಾ ಲಭೇಮಹಿ ಧನಮಾತ್ರಾಂ ಧನಸ್ಯ ಅಲ್ಪಮ್ । ತತಃ ಅಸ್ಮಾಕಂ ಜೀವನಂ ಭವಿಷ್ಯತೀತಿ । ಧನಲಾಭೇ ಚ ಕಾರಣಮಾಹ । ರಾಜಾ ಅಸೌ ನಾತಿದೂರೇ ಸ್ಥಾನೇ ಯಕ್ಷ್ಯತೇ । ಯಜಮಾನತ್ವಾತ್ ತಸ್ಯ ಆತ್ಮನೇ ಪದಮ್ । ಸ ಚ ರಾಜಾ ಮಾ ಮಾಂ ಪಾತ್ರಮ್ ಉಪಲಭ್ಯ ಸರ್ವೈಃ ಆರ್ತ್ವಿಜ್ಯೈಃ ಋತ್ವಿಕ್ಕರ್ಮಭಿಃ । ಋತ್ವಿಕ್ಕರ್ಮಪ್ರಯೋಜನಾಯ ಇತ್ಯರ್ಥಃ । ವೃಣೀತ ಇತಿ ॥

(ಭಾಷ್ಯಾರ್ಥ)

ಅವನು ಆಕೆಯ ಕೆಲಸವನ್ನು ಅರಿತವನಾಗಿ[3] ಬೆಳಗ್ಗೆ ಉಷಃಕಾಲದಲ್ಲಿ (ಸಂಜಿಹಾನಃ= ಪರಿತ್ಯಜನ್) ಹಾಸಿಗೆಯನ್ನು ಅಥವಾ ನಿದ್ರೆಯನ್ನು ಬಿಟ್ಟವನಾಗಿ,

---

1. ಹೆಂಗಸರು ಸ್ವಭಾವದಿಂದ ಪದಾರ್ಥಗಳನ್ನು ಜೋಪಾನವಾಗಿ ಇಟ್ಟುಕೊಂಡಿರುತ್ತಾರೆಂಬುದು ಭಾವ. ಗಂಡನು ಹೇಳಿದಂತೆ ಕೇಳುವದು ಸ್ತ್ರೀಯರ ಸ್ವಭಾವ ಎಂದು ಟೀಕೆ.

2. ಸಮರ್ಥೋ ಎಂದು ಅಚ್ಚಿನಲ್ಲಿರುವದು 'ಸಮರ್ಥಾ' ಎಂಬುದಕ್ಕೆ ಬರ್ದಿರಬಹುದು; **ಏಕೆಂದರೆ ಮಿಕ್ಕ** ಕಡೆಗಳಲ್ಲೆಲ್ಲ ಇಲ್ಲಿ ಬಹುವಚನವೇ ಇದೆ.

3. ಅವಳು ಹುರುಳಿಯನ್ನು ಇಟ್ಟಿದ್ದಾಳೆಂದು ತಿಳಿದಿದ್ದರಿಂದ.

ಹೆಂಡತಿ ಕೇಳುತ್ತಿರಲು ಇಂತೆಂದನು : "ಅಯ್ಯೋ ! ಎಂದು ಖೇದಗೊಂಡವನಾಗಿ (ದ್ಧನೆಂಬುದನ್ನು ತಿಳಿಸುವದಕ್ಕೆ), ಒಂದಿಷ್ಟು ಅನ್ನವು ನಮಗೆ ಸಿಕ್ಕಿದರೆ ಆಗ ಅನ್ನವನ್ನುಂಡು ಸಮರ್ಥನಾಗಿ ಧನಮಾತ್ರೆಯನ್ನು ಒಂದಿಷ್ಟು ಧನವನ್ನು ಪಡೆದು ಕೊಂಡೇವು; ಅದರಿಂದ ನಮಗೆ ಜೀವನವು ಆದೀತು !" ಧನವು ಸಿಕ್ಕುವದಕ್ಕೆ ಕಾರಣವನ್ನೂ (ಹೀಗೆಂದು) ತಿಳಿಸಿದನು: "ಇಗೊ, ದೂರವೇನೂ ಇಲ್ಲ (ಈ) ಸ್ಥಲದಲ್ಲಿಯೇ ಈ ರಾಜನು ಯಾಗಮಾಡುವನು. (ಮೂಲದಲ್ಲಿ ಯಕ್ಷ್ಯತೇ ಎಂದು) ಆತ್ಮನೇಪದವನ್ನು ಉಪಯೋಗಿಸಿರುವದು (ರಾಜನು) ಯಜಮಾನ ನಾದ್ದರಿಂದ.[1] ಆ ರಾಜನು ಪಾತ್ರನಾದ ನನ್ನನ್ನು ಕಂಡು ಎಲ್ಲಾ ಆರ್ತ್ವಿಜ್ಯ ಗಳಿಂದಲೂ (ಎಲ್ಲಾ) ಋತ್ವಿಕ್ಕರ್ಮಗಳಿಂದಲೂ (ಎಂದರ್ಥ). ಋತ್ವಿಕ್ಕುಗಳ ಕರ್ಮದ ಪ್ರಯೋಜನಕ್ಕಾಗಿ (ನನ್ನನ್ನು) ವರಣಮಾಡಿಯಾನು !"

(ಉಪನಿಷತ್ತು)

**ತಂ ಜಾಯೋವಾಚ ಹನ್ತ ಪತ ಇಮ ಏವ ಕುಲ್ಮಾಷಾ ಇತಿ ತಾನ್ ಖಾದಿತ್ವಾಮುಂ ಯಜ್ಞಂ ವಿತತಮೇಯಾಯ ॥ ೭ ॥**

೭. ಅವನನ್ನು ಹೆಂಡತಿಯು 'ಹಾಗಾದರೆ, ಪತಿಯೆ, ಇದೇ ಕುಲ್ಮಾಷವು' ಎಂದಳು. ಅದನ್ನು ತಿಂದು ನಡೆಯುತ್ತಿದ್ದ ಯಜ್ಞಕ್ಕೆ ಬಂದನು.

## ಹೆಂಡತಿಯು ಕೊಟ್ಟ ಹುರುಳಿಯನ್ನು ತಿಂದು ತೆರಳಿದ್ದು

(ಭಾಷ್ಯ)

೯೨. ಏವಮ್ ಉಕ್ತವನ್ತಂ ಜಾಯಾ ಉವಾಚ। ಹನ್ತ ಗೃಹಾಣ ಹೇ ಪತೇ ಇಮೇ ಏವ ಯೇ ಮದ್ಧಸ್ತೇ ವಿನಿಕ್ಷಿಪ್ತಾಃ ತ್ವಯಾ ಕುಲ್ಮಾಷಾಃ ಇತಿ। ತಾನ್ ಖಾದಿತ್ವಾ ಅಮುಂ ಯಜ್ಞಂ ರಾಜ್ಞೋವಿತತಂ ವಿಸ್ತಾರಿತಮ್ ಋತ್ವಿಗ್ಭಿಃ ಏಯಾಯ ॥

(ಭಾಷ್ಯಾರ್ಥ)

ಹೀಗೆಂದ (ಪತಿ)ಯನ್ನು ಕುರಿತು ಹೆಂಡತಿಯು "ಹಾಗಾದರೆ ಎಲೈ ಪತಿಯೆ, ತೆಗೆದುಕೊ. ಇದೇ ನೀನು ನನ್ನ ಕೈಯಲ್ಲಿಟ್ಟ ಕುಲ್ಮಾಷವು !" ಎಂದಳು. ಅದನ್ನು ತಿಂದು ಋತ್ವಿಜರು (ವಿತತಮ್=ವಿಸ್ತಾರಿತಮ್) ವಿಸ್ತಾರವಾಗಿ ನಡೆಯಿಸುತ್ತಿದ್ದ ಆ ರಾಜನ ಆ ಯಜ್ಞದ ಬಳಿಗೆ ಬಂದನು.

---

1. ಯಜಮಾನನು ತನಗಾಗಿ ಯಾಗಮಾಡಿಕೊಳ್ಳುವನು ಎಂಬುದನ್ನು ಆತ್ಮನೇಪದವು ಸೂಚಿಸುತ್ತದೆ ಎಂದು ಅಭಿಪ್ರಾಯ.

# ಉಷಸ್ತಿಯು ಪ್ರಸ್ತೋತೃವಿಗೆ ಹೇಳಿದ್ದು

(ಉಪನಿಷತ್ತು)

**ತತ್ರೋದ್ಗಾತೄನಾಸ್ತಾವೇ ಸ್ತೋಷ್ಯಮಾಣಾನುಪೋಪವಿವೇಶ ಸ ಹ ಪ್ರಸ್ತೋತಾರಮುವಾಚ ॥ ೮ ॥**

**ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದ ವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ॥ ೯ ॥**

೮. ಅಲ್ಲಿ ಆಸ್ತಾವದಲ್ಲಿ ಸ್ತೋತ್ರಮಾಡಲಿರುವ ಉದ್ಗಾತೃಗಳ ಬಳಿಯಲ್ಲಿ ಕುಳಿತುಕೊಂಡನು. ಅವನು ಪ್ರಸ್ತೋತೃವನ್ನು ಕುರಿತು ಇಂತೆಂದನು :

೯. 'ಪ್ರಸ್ತೋತೃವೆ, ಯಾವ ದೇವತೆಯು ಪ್ರಸ್ತಾವಕ್ಕೆ ಅನ್ವಾಯತ್ತವಾಗಿರುವದೋ ಅದನ್ನು ಅರಿಯದೆ ಪ್ರಸ್ತಾವಮಾಡುವೆಯಾದರೆ, ನಿನ್ನ ತಲೆಯು ಬೀಳಲಿ !'

## ಪ್ರಸ್ತಾವದೇವತೆ ಯಾವದು ?

(ಭಾಷ್ಯ)

೯೩. ತತ್ರ ಚ ಗತ್ವಾ ಉದ್ಗಾತೄನ್ ಉದ್ಗಾತೃಪುರುಷಾನ್ ಆಗತ್ಯ[1] ಸ್ತುವನ್ತಿ ಅಸ್ಮಿನ್ ಇತಿ ಆಸ್ತಾವಃ । ತಸ್ಮಿನ್ ಆಸ್ತಾವೇ ಸ್ತೋಷ್ಯಮಾಣಾನ್ ಉಪ ಉಪವಿವೇಶ ಸಮೀಪೇ ಉಪವಿಷ್ಟಸ್ತೇಷಾಮ್ ಇತ್ಯರ್ಥಃ । ಉಪವಿಶ್ಯ ಚ ಸ ಹ ಪ್ರಸ್ತೋತಾರಮ್ ಉವಾಚ । ಹೇ ಪ್ರಸ್ತೋತಃ ಇತಿ ಆಮನ್ತ್ರ್ಯ ಅಭಿಮುಖೀಕರಣಾಯ । ಯಾ ದೇವತಾ ಪ್ರಸ್ತಾವಂ ಪ್ರಸ್ತಾವಭಕ್ತಿಮ್ ಅನುಗತಾ ಅನ್ವಾಯತ್ತಾ ತಾಂ ಚೇತ್ ದೇವತಾಂ ಪ್ರಸ್ತಾವಭಕ್ತೇಃ ಅವಿದ್ವಾನ್ ಸನ್ ಪ್ರಸ್ತೋಷ್ಯಸಿ । ವಿದುಷೋ ಮಮ ಸಮೀಪೇ । ತತ್ಪರೋಕ್ಷೇಽಪಿ ಚೇತ್ ವಿಪತೇತ್ ತಸ್ಯ ಮೂರ್ಧಾ ಕರ್ಮಮಾತ್ರವಿದಾಮ್ ಅನಧಿಕಾರ ಏವ ಕರ್ಮಣಿ ಸ್ಯಾತ್ । ತಚ್ಚ ಅನಿಷ್ಟಮ್ । ಅವಿದುಷಾಮಪಿ ಕರ್ಮದರ್ಶನಾತ್ । ದಕ್ಷಿಣಮಾರ್ಗಶ್ರುತೇಶ್ಚ । ಅನಧಿಕಾರೇ ಚ ಅವಿದುಷಾಮ್, ಉತ್ತರ ಏವೈಕೋ ಮಾರ್ಗಃ ಶ್ರೂಯೇತ । ನ ಚ ಸ್ಮಾರ್ತಕರ್ಮನಿಮಿತ್ತ ಏವ ದಕ್ಷಿಣಃ ಪನ್ಥಾಃ । "ಯಜ್ಞೇನ ದಾನೇನ" (ಬೃ. ೬-೨-೧೬) ಇತಿ ಶ್ರುತೇಃ । "ತಥೋಕ್ತಸ್ಯ ಮಯಾ" (೧-೧೧-೫,೭,೯)

1. ಇದರ ಮುಂದಿನ ಆ॥ ಎಂಬ ವಾ॥ ಪಾಠವು ಬೇಕಿಲ್ಲ.

ಇತಿ ಚ ವಿಶೇಷಣಾತ್ ವಿದ್ವತ್ಸಮಕ್ಷಮೇವ ಕರ್ಮಣಿ ಅನಧಿಕಾರೋ ನ ಸರ್ವತ್ರ ಅಗ್ನಿಹೋತ್ರಸ್ಮಾರ್ತಕರ್ಮಾಧ್ಯಯನಾದಿಷು ಚ । ಅನುಜ್ಞಾಯಾಸ್ತತ್ರ ತತ್ರ ದರ್ಶನಾತ್ ಕರ್ಮಮಾತ್ರವಿದಾಮಪಿ ಅಧಿಕಾರಃ ಸಿದ್ಧಃ ಕರ್ಮಣೀತಿ । ಮೂರ್ಧಾ ತೇ ವಿಪತಿಷ್ಯತೀತಿ ॥

(ಭಾಷ್ಯಾರ್ಥ)

ಅಲ್ಲಿಗೆ ಹೋಗಿ ಆಸ್ತಾವದಲ್ಲಿ- ಅಲ್ಲಿ ಬಂದು ಸ್ತೋತ್ರಮಾಡುತ್ತಾರಾದ್ದರಿಂದ (ಆ ಸ್ಥಾನಕ್ಕೆ) ಆಸ್ತಾವವೆಂದು ಹೆಸರು. ಆ ಆಸ್ತಾವದಲ್ಲಿ- ಸ್ತೋತ್ರಮಾಡಲಿರುವ ಉದ್ಗಾತೃಗಳ ಉದ್ಗಾತೃಪುರುಷರುಗಳ[1] (ಉಪ=ಅವರ) ಬಳಿಯಲ್ಲಿ ಅವರ ಹತ್ತಿರದಲ್ಲಿ ಕೂತುಕೊಂಡನು ಕುಳಿತವನಾದನು. (ಹಾಗೆ) ಕುಳಿತುಕೊಂಡು ಅವನು ಪ್ರಸ್ತೋತೃವನ್ನು- ಎಲೈ ಪ್ರಸ್ತೋತೃವೆ, ಎಂದು (ಅವನನ್ನು) ತನ್ನ ಕಡೆಗೆ ತಿರುಗಿಸಿಕೊಳ್ಳುವದಕ್ಕಾಗಿ (ಕೂಗಿ) ಕರೆದು- ಇಂತೆಂದನು. ಯಾವ ದೇವತೆಯು ಪ್ರಸ್ತಾವಕ್ಕೆ, ಪ್ರಸ್ತಾವಭಕ್ತಿಗೆ ಅನ್ವಾಯತ್ತವಾಗಿರುವದೋ, (ಅದನ್ನು) ಅನುಸರಿಸಿಕೊಂಡಿರುವದೋ. ಆ ಪ್ರಸ್ತಾವಭಕ್ತಿಯ ದೇವತೆಯನ್ನು ಅರಿತುಕೊಳ್ಳದೆಯಿರುವವನಾಗಿ ಪ್ರಸ್ತಾವಮಾಡುವೆಯಾದರೆ- ವಿದ್ವಾಂಸನಾದ ನನ್ನ ಸಮೀಪದಲ್ಲಿ (ಪ್ರಸ್ತಾವಮಾಡುವೆಯಾದರೆ ಎಂದು ಅರ್ಥ. ಏಕೆಂದರೆ) ಅವನ ಪರೋಕ್ಷದಲ್ಲಿಯೂ ಅವನ ತಲೆ ಬೀಳುವದಾದರೆ ಬರಿಯ ಕರ್ಮವನ್ನು ತಿಳಿದವರಿಗೆ[2] ಕರ್ಮದಲ್ಲಿ ಅನಧಿಕಾರವೇ ಎಂದಾದೀತು. ಆದರೆ ಅದು ಒಪ್ಪತಕ್ಕದ್ದಲ್ಲ. ಏಕೆಂದರೆ ಉಪಾಸಕರಲ್ಲದವರಲ್ಲಿಯೂ ಕರ್ಮವು ಕಂಡುಬರುತ್ತದೆ[3].

ದಕ್ಷಿಣಮಾರ್ಗಶ್ರುತಿಯಿರುವದರಿಂದಲೂ (ಕೇವಲ ಕರ್ಮಜ್ಞರಿಗೆ ಅಧಿಕಾರವಿದೆ ಎಂದು ಒಪ್ಪಬೇಕು. ಇದರ ವಿವರ)· ಅಜ್ಞಾನಿಗಳಿಗೆ[4] (ಕರ್ಮದಲ್ಲಿ) ಅಧಿಕಾರವಿಲ್ಲವೆಂದಾಗಿದ್ದರೆ, ಉತ್ತರಮಾರ್ಗವೊಂದನ್ನೇ ಶ್ರುತಿಯಲ್ಲಿ ಹೇಳಬೇಕಾಗಿತ್ತು.[5] ದಕ್ಷಿಣಮಾರ್ಗವು ಸ್ಮಾರ್ತಕರ್ಮನಿಮಿತ್ತವೇ ಎನ್ನುವದಕ್ಕೂ ಇಲ್ಲ.

---

1. ಗಾನಮಾಡುವವರೆಲ್ಲರನ್ನೂ ಇಲ್ಲಿ ಉದ್ಗಾತೃಗಳೆಂದಿದೆ, ಬರಿಯ ಉದ್ಗಾತೃವನ್ನೇ ಅಲ್ಲ ಉದ್ಗಾತೃಪುರುಷರೆಂದರೆ ಉದ್ಗಾತೃವಿನ ಕಡೆಯವರು.

2. ಉಪಾಸನೆಯನ್ನು ಅರಿಯದವರಿಗೆ.

3. ಉಪಾಸಕರಲ್ಲದವರನ್ನು ಇಲ್ಲಿ ರಾಜನು ವರಣಮಾಡಿದ್ದು ಕಂಡುಬರುತ್ತದೆ ; ಲೋಕದಲ್ಲಿಯೂ ಉಪಾಸಕರಲ್ಲದ ಕೇವಲ ಕರ್ಮಜ್ಞರು ಋತ್ವಿಜರಾಗಿರುವದು ಕಂಡುಬರುತ್ತದೆ.

4. ಕೇವಲ ಕರ್ಮಜ್ಞರಿಗೆ.

5. ಏಕೆಂದರೆ ಉಪಾಸಕರಿಗೆಲ್ಲ ಉತ್ತರಮಾರ್ಗವೇ ವಿಹಿತವಾಗಿರುತ್ತದೆ ; ಆದ್ದರಿಂದ ಕರ್ಮಕ್ಕೆ ದಕ್ಷಿಣಮಾರ್ಗಗತಿಯನ್ನು ಫಲವೆಂದು ಶ್ರುತಿಯಲ್ಲಿ ಹೇಳಿರುವದರಿಂದಲೇ ಕೇವಲ ಕರ್ಮಜ್ಞರಿಗೆ ಕರ್ಮಾಧಿಕಾರವುಂಟೆಂದಾಗುತ್ತದೆ.

ಏಕೆಂದರೆ "ಯಜ್ಞದಿಂದಲೂ ದಾನದಿಂದಲೂ (ಧೂಮಮಾರ್ಗವನ್ನು ಸೇರುತ್ತಾರೆ)" (ಬೃ.೬–೨–೧೬) ಎಂದು ಶ್ರುತಿಯಿದೆ.[1] "ಹಾಗೆ ನಾನು ಹೇಳಿದ್ದರೆ (ನಿನ್ನ ತಲೆಯು ಬಿದ್ದುಹೋಗುತ್ತಿತ್ತು)" (೧–೧೧–೫, ೭, ೯) ಎಂದು ವಿಶೇಷಣ ವಿರುವದರಿಂದಲೂ[2] ಜ್ಞಾನಿಗಳ ಸಮಕ್ಷದಲ್ಲಿಯೇ (ಇತರರಿಗೆ) ಅನಧಿಕಾರರೇ ಹೊರತು ಅಗ್ನಿಹೋತ್ರ, ಸ್ಮಾರ್ತಕರ್ಮ, ಅಧ್ಯಯನ– ಮುಂತಾದ ಯಾವ ಕರ್ಮದಲ್ಲಿಯೂ (ಅವರಿಗೆ ಅಧಿಕಾರವಿಲ್ಲ) ಎನ್ನುವದಕ್ಕಿಲ್ಲ. ಅನುಜ್ಞೆ ಯಿತ್ತಿರುವದು ಅಲ್ಲಲ್ಲಿ ಕಂಡುಬರುವದರಿಂದಲೂ[3] ಬರಿಯ ಕರ್ಮವನ್ನು ಅರಿತು ಕೊಂಡಿರುವವರಿಗೂ ಕರ್ಮದಲ್ಲಿ ಅಧಿಕಾರವು ಸಿದ್ಧ(ವಾಗುತ್ತದೆ. ಆದ್ದರಿಂದ ನನ್ನ ಸಮೀಪದಲ್ಲಿ ಪ್ರಸ್ತಾವಮಾಡುವೆಯಾದರೆ[4])– ನಿನ್ನ ತಲೆಯು ಬೀಳಲಿ! (ಎಂದೇ ಅರ್ಥ).

## ಉಷಸ್ತಿಯು ಉದ್ಗಾತೃಪ್ರತಿಹರ್ತೃಗಳಿಗೆ ಹೇಳಿದ್ದು

(ಉಪನಿಷತ್ತು)

**ಏವಮೇವೋದ್ಗಾತಾರಮುವಾಚೋದ್ಗಾತರ್ಯಾ ದೇವತೋ ದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ॥ ೧೦ ॥**

**ಏವಮೇವ ಪ್ರತಿಹರ್ತಾರಮುವಾಚ ಪ್ರತಿಹರ್ತರ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ತೇ ಹ ಸಮಾರತಾಸ್ತೂಷ್ಣೀ ಮಾಸಾಂಚಕ್ರಿರೇ ॥ ೧೧ ॥**

೧೦. ಹೀಗೆಯೇ ಉದ್ಗಾತೃವನ್ನು ಕುರಿತು 'ಉದ್ಗಾತೃವೆ, ಯಾವ ದೇವತೆಯು ಉದ್ಗೀಥಕ್ಕೆ ಅನ್ವಾಯತ್ತವಾಗಿರುವದೋ, ಅದನ್ನು ಅರಿಯದೆ ಉದ್ಗಾನಮಾಡುವೆಯಾದರೆ ನಿನ್ನ ತಲೆಯು ಬೀಳಲಿ!' ಎಂದನು.

---

1. ಈ ಯಜ್ಞಾದಿಗಳು ಶ್ರೌತಕರ್ಮಗಳು ; ಪಂಚಮಹಾಯಜ್ಞವಾಪೀಕೂಪ ತಟಾಕಾದಿನಿರ್ಮಾಣ– ಮುಂತಾದ ಸ್ಮಾರ್ತಕರ್ಮಗಳಲ್ಲ

2. ಹಾಗೆ ಹೇಳದೆ ಇದ್ದರೆ ಬೀಳುತ್ತಿರಲಿಲ್ಲವೆಂಬ ಭಾವವಿದ್ದದ್ದರಿಂದಲೇ ಇಲ್ಲಿ ಮತ್ತೆ ಮತ್ತೆ ಈ ವಿಶೇಷಣವನ್ನು ಕೊಟ್ಟಿದೆ ಎಂದು ಭಾವ.

3. ಇಲ್ಲಿಯೇ ಮುಂದೆ ಉಷಸ್ತಿಯು ಪ್ರಸ್ತೋತೃವಿಗೆ ಅನುಜ್ಞೆಕೊಟ್ಟಿರುವದು ಕಂಡುಬರುತ್ತದೆ.

4. ನನ್ನ ಅನುಜ್ಞೆಯಿಲ್ಲದೆ ಜ್ಞಾನಿಯಾದ ನನ್ನೆದುರಿಗೆ ಪ್ರಸ್ತಾವಮಾಡುವೆಯಾದರೆ ಎಂದರ್ಥ.

೧೧. ಹೀಗೆಯೇ ಪ್ರತಿಹರ್ತೃವನ್ನು ಕುರಿತು 'ಪ್ರತಿಹರ್ತೃವೆ, ಯಾವ ದೇವತೆಯು ಪ್ರತಿಹಾರಕ್ಕೆ ಅನ್ವಾಯತ್ತವಾಗಿರುವದೋ ಅದನ್ನರಿಯದೆ ಪ್ರತಿಹರಣಮಾಡುವೆಯಾದರೆ ನಿನ್ನ ತಲೆಯು ಬೀಳಲಿ !' ಎಂದನು. ಅವರು ಸಮಾರತರಾಗಿ ಸುಮ್ಮನೆ ಕೂತು ಕೊಂಡುಬಿಟ್ಟರು !

ಪ್ರಶ್ನೆ : ಉದ್ಗಾನಪ್ರತಿಹಾರಗಳಿಗೆ ದೇವತೆ ಯಾವದು ?

(ಭಾಷ್ಯ)

೯೪. ಏವಮೇವ ಉದ್ಗಾತಾರಂ ಪ್ರತಿಹರ್ತಾರಮ್ ಉವಾಚ ಇತ್ಯಾದಿ ಸಮಾನಮನ್ಯತ್ । ತೇ ಪ್ರಸ್ತೋತ್ರಾದಯಃ ಕರ್ಮಭ್ಯಃ ಸಮಾರತಾಃ ಉಪರತಾಃ ಸನ್ತಃ ಮೂರ್ಧಪಾತಭಯಾತ್ ತೂಷ್ಣೀಮಾಸಾಂಚಕ್ರಿರೇ ಅನ್ಯಚ್ಚ ಅಕುರ್ವನ್ತಃ। ಅರ್ಥಿತ್ವಾತ್ ॥

(ಭಾಷ್ಯಾರ್ಥ)

ಹೀಗೆಯೇ ಉದ್ಗಾತೃವನ್ನೂ ಪ್ರತಿಹರ್ತೃವನ್ನೂ ಕುರಿತು ಹೇಳಿದನು-ಎಂದು ಮುಂತಾಗಿರುವದು ಉಳಿದ (ಗ್ರಂಥವು ಹಿಂದಿನ ಗ್ರಂಥಕ್ಕೆ) ಸಮಾನವಾಗಿದೆ ಆ ಪ್ರಸ್ತೋತ್ರಾದಿಗಳು ಸಮಾರತರಾಗಿ (ತಮ್ಮ) ತಲೆಯು ಬಿದ್ದೀತೆಂಬ ಅಂಜಿಕೆಯಿಂದ (ಕರ್ಮವನ್ನು) ಬಿಟ್ಟವರಾಗಿ ; ಅರ್ಥಿಗಳಾಗಿದ್ದದ್ದರಿಂದ[1] ಮತ್ತೇನನ್ನೂ ಮಾಡದೆ ಸುಮ್ಮನೆ ಕುಳಿತ್ತಿದ್ದರು.

---

# ಒಂದನೆಯ ಅಧ್ಯಾಯ-ಹನ್ನೊಂದನೆಯ ಖಂಡ

(ಪ್ರಸ್ತಾವಪ್ರತೀಹಾರಗಳ ಉಪಾಸನೆ)

## ರಾಜನು ಉಷಸ್ತಿಯನ್ನು ಆರ್ತ್ವಿಜ್ಯಗಳಿಗೆ ವರಿಸಿದ್ದು

(ಉಪನಿಷತ್ತು)

**ಅಥ ಹೈನಂ ಯಜಮಾನ ಉವಾಚ ಭಗವನ್ತಂ ವಾ ಅಹಂ ವಿವಿದಿಷಾಣೀತ್ಯುಷಸ್ತಿರಸ್ಮಿ ಚಾಕ್ರಾಯಣ ಇತಿ ಹೋವಾಚ ॥೧॥**

೧. ಆಗ ಇವನನ್ನು ಕುರಿತು ಯಜಮಾನನು 'ಭಗವಂತನಾದ (ನಿನ್ನನ್ನು) ನಾನು ತಿಳಿಯಲಿಚ್ಛಿಸುವೆನು' ಎಂದನು. ಇವನು 'ಉಷಸ್ತಿ ಚಾಕ್ರಾಯಣನಾಗಿರುವೆನು' ಎಂದನು.

---

1. ದಕ್ಷಿಣೆಯನ್ನು ಬಯಸಿಬಂದವರಾದ್ದರಿಂದ.

## ರಾಜನು ಬಂದವನು ಉಷಸ್ತಿ ಎಂದು ತಿಳಿದುಕೊಂಡದ್ದು

(ಭಾಷ್ಯ)

೯೫. ಅಥ ಅನನ್ತರಂ ಹ ಏನಮ್ ಉಷಸ್ತಿಂ ಯಜಮಾನಃ ರಾಜಾ ಉವಾಚ ಭಗವನ್ತಂ ವೈ ಪೂಜಾವನ್ತಂ ಅಹಂ ವಿವಿದಿಷಾಣಿ ವೇದಿತುಮ್ ಇಚ್ಛಾಮಿ । ಇತ್ಯುಕ್ತಃ ಉಷಸ್ತಿರಸ್ಮಿ ಚಾಕ್ರಾಯಣಃ ತವಾಪಿ ಶ್ರೋತ್ರಪಥಮ್ ಆಗತೋ ಯದಿ ಇತಿ ಹ ಉವಾಚ ಉಕ್ತವಾನ್ ॥

(ಭಾಷ್ಯಾರ್ಥ)

ಆಗ ಆ ಬಳಿಕ ಈ ಉಷಸ್ತಿಯನ್ನು ಯಜಮಾನನಾದ ರಾಜನು "ಭಗವಂತನಾದ ಪೂಜ್ಯನಾದ ನಿನ್ನನ್ನು ನಾನು ತಿಳಿಯಲಿಚ್ಛಿಸುವೆನು, ಯಾರೆಂದು ತಿಳಿಯ ಬಯಸುತ್ತೇನೆ" ಎಂದನು ಹೀಗೆನ್ನಲು "ಉಷಸ್ತಿಚಾಕ್ರಾಯಣನಿರುವೆನು, ನಿನ್ನ ಕಿವಿಗೂ (ನನ್ನ ಹೆಸರು) ಬಿದ್ದಿರಬಹುದು" ಎಂದು (ಉವಾಚ=ಉಕ್ತವಾನ್) ಹೇಳಿದನು.

(ಉಪನಿಷತ್ತು)

**ಸ ಹೋವಾಚ ಭಗವನ್ತಂ ವಾ ಅಹಮೇಭಿಃ ಸರ್ವೈರಾರ್ತ್ವಿಜ್ಯೈಃ ಪರ್ಯೈಷಿಷಂ ಭಗವತೋ ವಾ ಅಹಮವಿತ್ತ್ಯಾಽನ್ಯಾನವೃಷಿ ॥ ೨ ॥**

**ಭಗವಾಗ್ಂಸ್ತ್ವೇವ ಮೇ ಸರ್ವೈರಾರ್ತ್ವಿಜ್ಯೈರಿತಿ ತಥೇತ್ಯಥ ತರ್ಹ್ಯೇತ ಏವ ಸಮತಿಸೃಷ್ಟಾಃ ಸ್ತುವತಾಂ ಯಾವತ್ತ್ವೇಭ್ಯೋ ಧನಂ ದದ್ಯಾಸ್ತಾವನ್ಮಮ ದದ್ಯಾ ಇತಿ ತಥೇತಿ ಹ ಯಜಮಾನ ಉವಾಚ ॥ ೩ ॥**

೨. ಅವನಿಂತೆಂದನು : 'ಭಗವಂತನನ್ನೇ ನಾನು ಈ ಎಲ್ಲಾ ಆರ್ತ್ವಿಜ್ಯಗಳಿಂದಲೂ ಹುಡುಕಿಸಿದೆನು. ಭಗವಂತನನ್ನು ಪಡೆಯದೆ ನಾನು ಮತ್ತೊಬ್ಬರನ್ನು ವರಣಮಾಡಿದೆನು.

೩. 'ಭಗವಂತನೇ ನನಗೆ ಸರ್ವಾರ್ತ್ವಿಜ್ಯಗಳಿಂದಲೂ (ಆಗಬೇಕು)' ಎನ್ನಲು, 'ಹಾಗೇ ಆಗಲಿ. ಇನ್ನು ಈಗ ಇವರೇ ಸಮತಿಸೃಷ್ಟರಾಗಿ ಸ್ತೋತ್ರಮಾಡಲಿ ! ಆದರೆ ಇವರಿಗೆ ಎಷ್ಟು ಧನವನ್ನು ಕೊಡುತ್ತೀಯೋ ಅಷ್ಟನ್ನು ನನಗೆ ಕೊಡಬೇಕು' ಎಂದನು. 'ಹಾಗೇ ಆಗಲಿ !' ಎಂದು ಯಜಮಾನನು ನುಡಿದನು.

## ಉಪಸ್ತಿಯನ್ನು ವರಿಸಿದ್ದು, ಅವನು ಋತ್ವಿಜರಿಗೆ ಸ್ತೋತ್ರಮಾಡಲು ಅನುಮತಿಕೊಟ್ಟದ್ದು

(ಭಾಷ್ಯ)

೯೬. ಸ ಹ ಯಜಮಾನ ಉವಾಚ । ಸತ್ಯಮೇವಮ್ । ಅಹಂ ಭಗವನ್ತಂ ಬಹುಗುಣಮ್ ಅಶ್ರೌಷಮ್ । ಸರ್ವೈಶ್ಚ ಋತ್ವಿಕ್ಕರ್ಮಭಿಃ ಆರ್ತ್ವಿಜ್ಯೈಃ ಪರ್ಯೈಷಿಷಂ ಪರ್ಯೇಷಣಂ ಕೃತವಾನಸ್ಮಿ । ಅನ್ವಿಷ್ಯ ಭಗವತೋ ವಾ ಅಹಮ್ ಅವಿತ್ತ್ವಾ ಅಲಾಭೇನ ಅನ್ಯಾನ್ ಇಮಾನ್ ಅವೃಷಿ ವೃತವಾನಸ್ಮಿ । ಅದ್ಯಾಪಿ ಭಗವಾಂಸ್ತ್ವೇವ ಮೇ ಮಮ ಸರ್ವೈಃ ಆರ್ತ್ವಿಜ್ಯೈಃ ಋತ್ವಿಕ್ಕರ್ಮಾರ್ಥಮ್ ಅಸ್ತು । ಇತ್ಯುಕ್ತಃ ತಥಾ ಇತ್ಯಾಹ ಉಷಸ್ತಿಃ ಕಿಂ ತು ಅಥ ಏವಂ ತರ್ಹಿ ಏತೇ ಏವ ತ್ವಯಾ ಪೂರ್ವಂ ವೃತಾಃ ಮಯಾ ಸಮತಿಸೃಷ್ಟಾಃ ಮಯಾ ಸಮ್ಯಕ್ ಪ್ರಸನ್ನೇನ ಅನುಜ್ಞಾತಾಃ ಸನ್ತಃ ಸ್ತುವತಾಮ್ । ತ್ವಯಾ ತು ಏತತ್ ಕಾರ್ಯಮ್ । ಯಾವತ್ತು ಏಭ್ಯಃ ಪ್ರಸ್ತೋತ್ರಾದಿಭ್ಯಃ ಸರ್ವೇಭ್ಯೋ ಧನಂ ದದ್ಯಾಃ ಪ್ರಯಚ್ಛಸಿ, ತಾವನ್ಮಮ ದದ್ಯಾಃ । ಇತ್ಯುಕ್ತಃ ತಥಾ ಇತಿ ಹ ಯಜಮಾನ ಉವಾಚ ॥

(ಭಾಷ್ಯಾರ್ಥ)

ಆ ಯಜಮಾನನು "ನಿಜ, ಹೀಗೆಯೇ, ಬಹುಗುಣಯುಕ್ತನೆಂದು ಕೇಳಿರುವೆನು. ಭಗವಂತನಾದ ನಿನ್ನನ್ನು ಎಲ್ಲಾ ಆರ್ತ್ವಿಜ್ಯಗಳಿಂದಲೂ ಎಲ್ಲಾ ಋತ್ವಿಕ್ಕರ್ಮಗಳಿಂದಲೂ[1] ನಾನು (ಪರ್ಯೈಷಿಷಮ್=ಪರ್ಯೇಷಣಂ ಕೃತವಾನಸ್ಮಿ) ಹುಡುಕಿಸಿರುತ್ತೇನೆ. ಹುಡುಕಿಸಿದರೂ ಭಗವಂತನನ್ನು ಪಡೆಯಲಾರದೆ (ತಾವು) ದೊರಕದೆ ಇದ್ದದ್ದರಿಂದ ಈ ಬೇರೆಯವರನ್ನು ನಾನು ವರಣ ಮಾಡಿರುತ್ತೇನೆ, ಆರಿಸಿಕೊಂಡಿರುತ್ತೇನೆ.

ಈಗಲೂ ಭಗವಂತನಾದ (ನೀನೇ ಮೇ=ಮಮ) ನನಗೆ ಎಲ್ಲಾ ಆರ್ತ್ವಿಜ್ಯಗಳಿಂದಲೂ (ಎಲ್ಲಾ) ಋತ್ವಿಕ್ಕರ್ಮಗಳಿಂದಲೂ ಆಗಬೇಕು'' ಎನ್ನಲು ಉಷಸ್ತಿಯು "ಹಾಗೇ (ಆಗಲಿ), ಆದರೆ ಈಗ ಹೀಗಾದರೆ ನೀನು ಮೊದಲು ವರಣ ಮಾಡಿರುವ ಇವರೇ ನಾನು ನನ್ನಿಂದ ಸಮತಿಸೃಷ್ಟರಾಗಿ, ನಾನು ಪೂರ್ಣವಾಗಿ ಪ್ರಸನ್ನನಾಗಿ ಅನುಜ್ಞೆಮಾಡಿರುತ್ತೇನಾಗಿ (ನನ್ನಪ್ಪಣೆಯಿಂದ) ಸ್ತೋತ್ರಮಾಡಲಿ ! ಆದರೆ ನೀನು ಇದನ್ನು ಮಾಡಬೇಕು. ಈ ಪ್ರಸ್ತೋತೃವೇ ಮುಂತಾದವರಿಗೆಲ್ಲ ಎಷ್ಟು ಧನವನ್ನು (ದದ್ಯಾಃ=ಪ್ರಯಚ್ಛಸಿ) ಕೊಡುವೆಯೋ ಅಷ್ಟನ್ನೇ ನನಗೆ ಕೊಡಬೇಕು !'' ಎನ್ನಲು ಯಜಮಾನನು "ಹಾಗೇ ಆಗಲಿ !'' ಎಂದನು.

---

1. ಎಲ್ಲಾ ಆರ್ತ್ವಿಜ್ಯಗಳನ್ನೂ ತಮಗೆ ಕೊಡಬೇಕೆಂದು ಎಂದರ್ಥ.

# ಪ್ರಸ್ತಾವದೇವತೆಯ ನಿರ್ಣಯ

(ಉಪನಿಷತ್ತು)

**ಅಥ ಹೈನಂ ಪ್ರಸ್ತೋತೋಪಸಸಾದ ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ ಕತಮಾ ಸಾ ದೇವತೇತಿ ॥ ೪ ॥**

**ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ .ತಾಂ ಚೇದವಿದ್ವಾನ್ ಪ್ರಾಸ್ತೋಷ್ಯೋ ಮೂರ್ಧಾ ತೇ ವ್ಯಪತಿಷ್ಯತ್ ತಥೋಕ್ತಸ್ಯ ಮಯೇತಿ ॥ ೫ ॥**

೪. ಇನ್ನು ಇವನನ್ನು ಪ್ರಸ್ತೋತೃವು ಬಳಿಸಾರಿ 'ಪ್ರಸ್ತೋತೃವೆ, ಯಾವ ದೇವತೆಯು ಪ್ರಸ್ತಾವಕ್ಕೆ ಅನ್ವಾಯತ್ತವಾಗಿದೆಯೋ ಅದನ್ನರಿಯದೆ ಪ್ರಸ್ತಾವಮಾಡುವೆಯಾದರೆ ನಿನ್ನ ತಲೆ ಬೀಳಲಿ -ಎಂದು ನನಗೆ ಭಗವಂತನಾದ (ನೀನು) ಹೇಳಿದೆಯಷ್ಟೆ, ಆ ದೇವತೆ ಯಾವದು ?' ಎಂದು (ಕೇಳಿದನು).

೫. (ಅವನು) 'ಪ್ರಾಣನೇ (ಆ ದೇವತೆ). ಈ ಭೂತಗಳೆಲ್ಲ ಪ್ರಾಣನನ್ನೇ ಒಳಹೊಗುತ್ತವೆ, ಪ್ರಾಣನನ್ನೇ ಬಿಟ್ಟು ಈಚೆಗೆ ಬರುತ್ತವೆ. ಆ (ಈ) ದೇವತೆ ಪ್ರಾಣಕ್ಕೆ ಅನ್ವಾಯತ್ತವಾಗಿರುತ್ತದೆ; ಅದನ್ನು ಅರಿಯದೆ (ನೀನು) ಪ್ರಸ್ತಾವಮಾಡಿದ್ದರೆ, ನಾನು ಹಾಗೆಂದು ಹೇಳಿದಾಗ ನಿನ್ನ ತಲೆ ಬಿದ್ದುಹೋಗುತ್ತಿತ್ತು' ಎಂದನು.

## ಪ್ರಾಣನೇ ಪ್ರಸ್ತಾವದೇವತೆ

(ಭಾಷ್ಯ)

೯೭. ಅಥ ಹ ಏನಮ್ ಔಷಸ್ತ್ಯಂ ವಚಃ ಶ್ರುತ್ವಾ ಪ್ರಸ್ತೋತಾ ಉಪಸಸಾದ। ಉಷಸ್ತಿಂ ವಿನಯೇನ ಉಪಜಗಾಮ। ಪ್ರಸ್ತೋತಃ ಯಾ ದೇವತಾ ಇತ್ಯಾದಿ ಮಾ ಮಾಂ ಭಗವಾನ್ ಅವೋಚತ್ ಪೂರ್ವಮ್, ಕತಮಾ ಸಾ ದೇವತಾ ಯಾ ಪ್ರಸ್ತಾವಭಕ್ತಿಮ್ ಅನ್ವಾಯತ್ತಾ? ಇತಿ ಪೃಷ್ಟಃ ಪ್ರಾಣಃ ಇತಿ ಹ

ಉವಾಚ ಯುಕ್ತಂ ಪ್ರಸ್ತಾವಸ್ಯ ಪ್ರಾಣೋ ದೇವತಾ ಇತಿ । ಕಥಮ್ ? ಸರ್ವಾಣಿ ಸ್ಥಾವರಜಙ್ಗಮಾನಿ ಭೂತಾನಿ ಪ್ರಾಣಮೇವ ಅಭಿಸಂವಿಶನ್ತಿ ಪ್ರಲಯಕಾಲೇ । ಪ್ರಾಣಮ್ ಅಭಿಲಕ್ಷಯಿತ್ವಾ ಪ್ರಾಣಾತ್ಮನೈವ[1] ಉಜ್ಜಿಹತೇ ಪ್ರಾಣಾದೇವ ಉದ್ಗಚ್ಛನ್ತಿ ಇತ್ಯರ್ಥಃ । ಉತ್ಪತ್ತಿಕಾಲೇ । ಅತಃ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ । ತಾಂ ಚೇತ್ ಅವಿದ್ವಾನ್ ತ್ವಂ ಪ್ರಾಸ್ತೋಷ್ಯಃ ಪ್ರಸ್ತವನಂ ಪ್ರಸ್ತಾವಭಕ್ತಿಂ ಕೃತವಾನಸಿ ಯದಿ, ಮೂರ್ಧಾ ಶಿರಃ ತೇ ವ್ಯಪತಿಷ್ಯತ್ ವಿಪತಿತಮ್ ಅಭವಿಷ್ಯತ್ । ತಥೋಕ್ತಸ್ಯ ಮಯಾ ತತ್ಕಾಲೇ ಮೂರ್ಧಾ ತೇ ವಿಪತಿಷ್ಯತೀತಿ । ಅತಸ್ತ್ವಯಾ ಸಾಧು ಕೃತಮ್ ಮಯಾ ನಿಷಿದ್ಧಃ ಕರ್ಮಣೋ ಯದುಪರಮಮ್ ಅಕಾರ್ಷೀಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಇನ್ನು ಉಷಸ್ತಿಯ ಮಾತನ್ನು ಕೇಳಿದ ಪ್ರಸ್ತೋತೃವು ಇವನನ್ನು ಬಳಿಸಾರಿದನು, ವಿನಯದಿಂದ (ಶಿಷ್ಯನಾಗಿ) ಉಷಸ್ತಿಯ ಬಳಿಗೆ ಬಂದನು. " 'ಪ್ರಸ್ತೋತೃವೆ, ಯಾವ (ದೇವತೆಯು)' ಎಂದು ಮುಂತಾಗಿ (ಮಾ-ಮಾಮ್) ನನಗೆ ಮೊದಲು ಭಗವಂತನಾದ ನೀನು ಹೇಳಿದೆಯಷ್ಟೆ. ಪ್ರಸ್ತಾವಭಕ್ತಿಗೆ ಅನ್ವಾಯತ್ತವಾಗಿರುವ ಆ ದೇವತೆ ಯಾವದು ?" ಎಂದು ಕೇಳಿದನು

(ಹೀಗೆಂದು) ಕೇಳಲು ಪ್ರಾಣನೇ[2] (ಆ ದೇವತೆ) ಎಂದನು ಪ್ರಸ್ತಾವಕ್ಕೆ ಪ್ರಾಣನೇ ದೇವತೆ ಎಂಬುದು ಯುಕ್ತವಾಗಿದೆ. ಹೇಗೆಂದರೆ ಸ್ಥಾವರಜಂಗಮ ಭೂತಗಳು ಪ್ರಲಯಕಾಲದಲ್ಲಿ (ಅಭಿಸಂವಿಶನ್ತಿ=) ಪ್ರಾಣನನ್ನು ಅಭಿಲಕ್ಷಿಸಿಕೊಂಡು ಪ್ರಾಣರೂಪದಿಂದಲೇ (ಸೇರಿಕೊಳ್ಳುತ್ತವೆ, ಪ್ರಾಣನನ್ನೇ ಅಭಿಲಕ್ಷಿಸಿಕೊಂಡು[3] ಅಭ್ಯುಜ್ಜಿಹತೇ) ಪ್ರಾಣನಿಂದಲೇ ಉತ್ಪತ್ತಿಕಾಲದಲ್ಲಿ ಮೇಲಕ್ಕೆದ್ದು ಬರುತ್ತವೆ ಎಂದರ್ಥ, ಆದ್ದರಿಂದ ಆ ಈ ದೇವತೆಯು ಪ್ರಸ್ತಾವಕ್ಕೆ ಅನ್ವಾಯತ್ತವಾಗಿರುತ್ತದೆ. ಆ (ದೇವತೆ)ಯನ್ನು ಅರಿಯದೆಯೇ ನೀನು ಪ್ರಸ್ತೋತ್ರಮಾಡಿದ್ದರೆ, ಪ್ರಸ್ತಾವಭಕ್ತಿಯನ್ನು ಪ್ರಸ್ತವನಮಾಡಿದ್ದರೆ ನಿನ್ನ ಶಿರಸ್ಸು ಬಿದ್ದುಹೋಗುತ್ತಿತ್ತು, ನಾನು

---

1. ಅನುವಾದದ ಟಿಪ್ಪಣಿಯನ್ನು ನೋಡಿ.

2 ಇಲ್ಲಿ ಪ್ರಾಣನೆಂದರೆ ಬ್ರಹ್ಮವೇ ಎಂದು ಸೂ. ಭಾ ೧-೧-೨೩ರಲ್ಲಿ ನಿರ್ಣಯವಾಗಿರುತ್ತದೆ. ಟೀಕೆಯಲ್ಲಿಯೂ ಹಾಗೆಂದೇ ಬರೆದಿದೆ. ಆದರೆ ಭಾಷ್ಯದಲ್ಲಿ ಬ್ರಹ್ಮ, ಈಶ್ವರ, ದೇವ- ಎಂಬಂಥ ಮಾತಿನಿಂದ ಇದನ್ನು ಏತಕ್ಕೆ ಸೂಚಿಸಿಲ್ಲವೆಂಬುದು ವಿಚಾರಣೀಯವಾಗಿದೆ.

3 ಮೂಲಭಾಷ್ಯದಲ್ಲಿ ಏನೋ ಹೆಚ್ಚುಕಡಿಮೆಯಾಗಿರುವಂತೆ ಕಾಣುತ್ತದೆ. "ಪ್ರಾಣಾತ್ಮನ ಏವ ಉಜ್ಜಿಹತೇ" ಎಂದಿರಬೇಕೋ ಏನೊ, ನಾವು ಪ್ರಾಣಾತ್ಮನೈವ ಎಂಬುದನ್ನು ಟೀಕೆಗನುಸಾರವಾಗಿ ಹಿಂಪಕ್ಕೆ ಸಂವಿಶನ್ತಿ ಎಂಬುದಕ್ಕೆ ಅನ್ವಯಿಸಿ "ಪ್ರಾಣಮೇವಾಭಿಲಕ್ಷ್ಯ ಉಜ್ಜಿಹತೇ" ಎಂಬ ವಾಕ್ಯವು ಮುಂದೆ ಇರಬೇಕೆಂದು ಕಲ್ಪಿಸಿರುತ್ತೇವೆ. ಏಕೆಂದರೆ 'ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ' ಎಂದು ಎರಡು ಕಡೆಯಲ್ಲಿಯೂ 'ಅಭಿ' ಇದೆ.

ಹಾಗೆಂದು ಹೇಳಿದಾಗ ಎಂದರೆ 'ನಿನ್ನ ತಲೆಯು ಬೀಳಲಿ !' ಎಂದು ಹೇಳಿದೆನಲ್ಲ, ಆ ಕಾಲವಲ್ಲಿಯೇ (ಬಿದ್ದುಹೋಗುತ್ತಿತ್ತು). ಆದ್ದರಿಂದ ನಾನು ಬೇಡವೆನ್ನುತ್ತಿಲೂ ನೀನು ಕರ್ಮವನ್ನು ಬಿಟ್ಟುಬಿಟ್ಟಿಯಲ್ಲ, ಅದು ಒಳ್ಳೆಯದನ್ನೇ ಮಾಡಿದ್ದಾಯಿತು ಎಂದು ಅಭಿಪ್ರಾಯ

## ಉದ್ಗಾತೃದೇವತೆಯ ನಿರ್ಣಯ

(ಉಪನಿಷತ್ತು)

**ಅಥ ಹೈನಮುದ್ಗಾತೋಪಸಸಾದೋದ್ಗಾತರ್ಯಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ ಕತಮಾ ಸಾ ದೇವತೇತಿ ॥ ೬ ॥**

**ಆದಿತ್ಯ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾದಿತ್ಯಮುಚ್ಚೈಃ ಸನ್ತಂ ಗಾಯನ್ತಿ ಸೈಷಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದಗಾಸ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ॥ ೭ ॥**

೬. ಇನ್ನು ಇವನನ್ನು ಉದ್ಗಾತೃವು ಬಳಿಸಾರಿ 'ಉದ್ಗಾತೃವೆ, ಯಾವ ದೇವತೆಯು ಉದ್ಗೀಥಕ್ಕೆ ಅನ್ವಾಯತ್ತವಾಗಿರುವದೋ ಅದನ್ನರಿಯದೆ ಉದ್ಗಾನಮಾಡಿದರೆ ನಿನ್ನ ತಲೆಯು ಬೀಳಲಿ !– ಎಂದು ನನಗೆ ಭಗವಂತನಾದ (ನೀನು) ಹೇಳಿದೆಯಲ್ಲ, ಆ ದೇವತೆ ಯಾವದು ?' ಎಂದು (ಕೇಳಿದನು).

೭. (ಅವನು) 'ಆದಿತ್ಯನೇ (ಆ ದೇವತೆ). ಈ ಭೂತಗಳೆಲ್ಲವೂ ಆದಿತ್ಯನು ಮೇಲೆ ಇರುವಾಗ ಉಚ್ಚವಾಗಿ ಗಾನಮಾಡುತ್ತವೆ. ಆ ಈ ದೇವತೆಯು ಉದ್ಗೀಥಕ್ಕೆ ಅನ್ವಾಯತ್ತವಾಗಿರುತ್ತದೆ ; ಅದನ್ನರಿಯದೆ ಉದ್ಗಾನಮಾಡಿದ್ದೆಯಾದರೆ ನಾನು ಹಾಗೆಂದು ಹೇಳಿದಾಗ ನಿನ್ನ ತಲೆ ಬಿದ್ದುಹೋಗುತ್ತಿತ್ತು !' ಎಂದನು.

### ಆದಿತ್ಯನೇ ಉದ್ಗೀಥದೇವತೆ

(ಭಾಷ್ಯ)

೯೮. ತಥಾ ಉದ್ಗಾತಾ ಪಪ್ರಚ್ಛ ಕತಮಾ ಸಾ ಉದ್ಗೀಥಭಕ್ತಿಮ್ ಅನುಗತಾ ಅನ್ವಾಯತ್ತಾ ದೇವತಾ ? ಇತಿ ಪೃಷ್ಟಃ ಆದಿತ್ಯ ಇತಿ ಹೋವಾಚ ।

ಸರ್ವಾಣಿ ಹ ವಾ ಇಮಾನಿ ಭೂತಾನಿ ಆದಿತ್ಯಮ್ ಉಚ್ಚೈಃ ಊರ್ಧ್ವಂ ಸನ್ತಂ ಗಾಯನ್ತಿ ಶಬ್ದಯನ್ತಿ। ಸ್ತುವನ್ತಿ ಇತ್ಯಭಿಪ್ರಾಯಃ। ಉಚ್ಛಬ್ದಸಾಮಾನ್ಯಾತ್ ಪ್ರಶಬ್ದಸಾಮಾನ್ಯಾದಿವ ಪ್ರಾಣಃ। ಅತಃ। ಸೈಷಾ ದೇವತಾ ಇತ್ಯಾದಿ ಪೂರ್ವವತ್॥

(ಭಾಷ್ಯಾರ್ಥ)

ಹೀಗೆಯೇ ಉದ್ಗಾತೃವು "ಉದ್ಗೀಥಭಕ್ತಿಗೆ ಅನ್ವಾಯತ್ತವಾಗಿರುವ (ಅದನ್ನು) ಅನುಸರಿಸಿಕೊಂಡು ಬಂದಿರುವ ಆ ದೇವತೆ ಯಾವದು?" ಎಂದು ಕೇಳಲು ಆದಿತ್ಯನೇ (ಆ ದೇವತೆಯು) ಈ ಭೂತಗಳೆಲ್ಲವೂ ಆದಿತ್ಯನು ಉಚ್ಚನಾಗಿ ಮೇಲುಗಡೆ ಇರುವಾಗ (ಅವನನ್ನು) ಗಾನಮಾಡುತ್ತವೆ, ಶಬ್ದಮಾಡುತ್ತವೆ, ಸ್ತೋತ್ರಮಾಡುತ್ತವೆ ಎಂದು ಅಭಿಪ್ರಾಯ ಪ್ರಶಬ್ದಸಾಮಾನ್ಯದಿಂದ ಪ್ರಾಣನು (ಪ್ರಸ್ತಾವಕ್ಕೆ ದೇವತೆಯಾಗಿರು)ವಂತೆ ಉಚ್ಛಬ್ದಸಾಮಾನ್ಯನಾಗಿರುವವರಿಂದ (ಆದಿತ್ಯನು ಉದ್ಗೀಥಕ್ಕೆ ದೇವತೆ), ಆದ್ದರಿಂದ 'ಆ ಈ ದೇವತೆಯು' ಎಂದು ಮುಂತಾಗಿರುವದನ್ನು ಹಿಂದಿನ (ಗ್ರಂಥ)ವಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).

## ಪ್ರತಿಹಾರದೇವತೆಯ ನಿರ್ಣಯ

(ಉಪನಿಷತ್ತು)

**ಅಥ ಹೈನಂ ಪ್ರತಿಹರ್ತೋಪಸಸಾದ ಪ್ರತಿಹರ್ತರ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ ಕತಮಾ ಸಾ ದೇವತೇತಿ ॥೮॥**

**ಅನ್ನಮಿತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯನ್ನಮೇವ ಪ್ರತಿಹರಮಾಣಾನಿ ಜೀವನ್ತಿ ಸೈಷಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತ್ಯಹರಿಷ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ತಥೋಕ್ತಸ್ಯ ಮಯೇತಿ॥**

೮ ಇನ್ನು ಇವನನ್ನು ಪ್ರತಿಹರ್ತೃವು ಬಳಿಸಾರಿ 'ಪ್ರತಿಹರ್ತೃವೆ, ಯಾವ ದೇವತೆಯು ಪ್ರತಿಹಾರಕ್ಕೆ ಅನ್ವಾಯತ್ತವಾಗಿರುವದೋ ಅದನ್ನರಿಯದೆ ಪ್ರತಿಹರಣಮಾಡುವೆಯಾದರ ನಿನ್ನ ತಲೆ ಬೀಳಲಿ!- ಎಂದು ನನಗೆ ಭಗವಂತನಾದ (ನೀನು) ಹೇಳಿದೆಯಲ್ಲ, ಆ ದೇವತೆ ಯಾವದು?' ಎಂದು (ಕೇಳಿದನು).

೯. (ಅವನು) 'ಅನ್ನವೇ (ಆ ದೇವತೆ), ಈ ಭೂತಗಳೆಲ್ಲವೂ ಅನ್ನವನ್ನೇ ಪ್ರತಿಹರಣಮಾಡಿಕೊಂಡು ಜೀವಿಸುತ್ತವೆ. ಆ ಈ ದೇವತೆ

ಯು ಪ್ರತಿಹಾರಕ್ಕೆ ಅನ್ವಾಯತ್ತವಾಗಿರುತ್ತದೆ ; ಅದನ್ನರಿಯದೆ ಪ್ರತಿಹರಣಮಾಡದ್ದೆಯಾದರೆ, ನಾನು ಹಾಗೆಂದು ಹೇಳಿದಾಗ ನಿನ್ನ ತಲೆ ಬಿದ್ದುಹೋಗುತ್ತಿತ್ತು !' ಎಂದನು.

## ಅನ್ನವೇ ಪ್ರತಿಹಾರದೇವತೆ

(ಭಾಷ್ಯ)

೯೯. ಏವಮೇವ ಅಥ ಹ ಏನಂ ಪ್ರತಿಹರ್ತಾ ಉಪಸಸಾದ ಕತಮಾ ಸಾ ದೇವತಾ ಪ್ರತಿಹಾರಮ್ ಅನ್ವಾಯತ್ತಾ? ಇತಿ ಪೃಷ್ಟಃ ಅನ್ನಮ್ ಇತಿ ಹೋವಾಚ । ಸರ್ವಾಣಿ ಹ ವಾ ಇಮಾನಿ ಭೂತಾನಿ ಅನ್ನಮೇವ ಆತ್ಮಾನಂ ಪ್ರತಿ ಸರ್ವತಃ ಪ್ರತಿಹರಮಾಣಾನಿ ಜೀವನ್ತಿ । ಸೈಷಾ ದೇವತಾ ಪ್ರತಿಶಬ್ದಸಾಮಾನ್ಯಾತ್ ಪ್ರತಿಹಾರಭಕ್ತಿಮ್ ಅನುಗತಾ । ಸಮಾನಮನ್ಯತ್ ತಥೋಕ್ತಸ್ಯ ಮಯಾ ಇತಿ ॥

(ಭಾಷ್ಯಾರ್ಥ)

ಹೀಗೆಯೇ ಇನ್ನು ಇವನನ್ನು ಪ್ರತಿಹರ್ತನು ಬಳಿಸಾರಿ "ಪ್ರತಿಹಾರಕ್ಕೆ ಅನ್ವಾಯತ್ತವಾಗಿರುವ ಆ ದೇವತೆ ಯಾವದು ?" ಎಂದು ಕೇಳಲು ಅನ್ನವೇ (ಆ ದೇವತೆ) ಈ ಭೂತಗಳೆಲ್ಲವೂ ಅನ್ನವನ್ನೇ ತಮ್ಮ ಕಡೆಗೆ ಎಲ್ಲಾ ಕಡೆಯಿಂದಲೂ (ಪ್ರತಿಹರಮಾಣಾಃ) ತಂದುಕೊಂಡು ಬದುಕಿರುತ್ತವೆ. ಆ ಈ ದೇವತೆಯು ಪ್ರತಿಶಬ್ದಸಾಮಾನ್ಯವಿರುವದರಿಂದ ಪ್ರತಿಹಾರಭಕ್ತಿಯನ್ನು ಅನುಸರಿಸಿಕೊಂಡಿರುವದು 'ನಾನು ಹಾಗೆಂದು ಹೇಳಿದಾಗ' ಎಂಬುದು (ಮುಂತಾಗಿ) ಮಿಕ್ಕದ್ದು (ಹಿಂದಿನ ಗ್ರಂಥಕ್ಕೆ) ಸಮಾನವು

## ಉಪಾಸನೆಯೂ ಫಲವೂ

(ಭಾಷ್ಯ)

೧೦೦. ಪ್ರಸ್ತಾವೋದ್ಗೀಥಪ್ರತಿಹಾರಭಕ್ತೀಃ ಪ್ರಾಣಾದಿತ್ಯಾನ್ನದೃಷ್ಟ್ಯಾ ಉಪಾಸೀತ ಇತಿ ಸಮುದಾಯಾರ್ಥಃ । ಪ್ರಾಣಾದ್ಯಾಪತ್ತಿಃ ಕರ್ಮಸಮೃದ್ಧಿರ್ವಾ ಫಲಮ್ ಇತಿ ॥

(ಭಾಷ್ಯಾರ್ಥ)

ಪ್ರಸ್ತಾವ, ಉದ್ಗೀಥ, ಪ್ರತಿಹಾರ- ಈ ಭಕ್ತಿಗಳನ್ನು ಪ್ರಾಣ,[1] ಆದಿತ್ಯ, ಅನ್ನ- ಇವುಗಳ ದೃಷ್ಟಿಯಿಂದ ಉಪಾಸನೆಮಾಡಬೇಕು ಎಂಬುದು ಒಟ್ಟರ್ಥ.

1. ಇಲ್ಲಿಕೂಡ ಈ ಭಾಷ್ಯದಲ್ಲಿ ಪರಮಾತ್ಮವಾಚಕಶಬ್ದವನ್ನು ಪ್ರಯೋಗಿಸಿಲ್ಲವೇಕೆ ?- ಎಂಬುದು ವಿಚಾರಣೀಯವಾಗಿದೆ. ಆದಿತ್ಯಾನ್ನಗಳನ್ನು ದೇವತೆಗಳಾಗಿ ಹೇಳಿರುವ ಸಂನಿಧಿಯಲ್ಲಿದ್ದರೂ ವಾಕ್ಯಶೇಷದಿಂದ ಬ್ರಹ್ಮವೆಂದೇ ನಿರ್ಣಯಿಸಬೇಕು ಎಂದು ಸೂ. ಭಾ ವಲ್ಲಿ ಬರೆದಿದೆ.

ಪ್ರಾಣಾದಿದೇವತೆಗಳ (ಭಾವವನ್ನು) ಪಡೆಯುವದೋ ಕರ್ಮಸಮೃದ್ಧಿಯೋ[1] ಫಲವು.

---

# ಒಂದನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಅನ್ನಾರ್ಥವಾಗಿ ಉದ್ಗೀಥ)

## ಶೌವಉದ್ಗೀಥಕ್ಕೆ ಅವತರಣಿಕೆ

(ಉಪನಿಷತ್ತು)

**ಅಥಾತಃ ಶೌವ ಉದ್ಗೀಥಸ್ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಸ್ವಾಧ್ಯಾಯಮುದ್ವವ್ರಾಜ ॥ ೧ ॥**

೧. ಇನ್ನು ಆದ್ದರಿಂದ ಶೌವಉದ್ಗೀಥವು ಅಲ್ಲಿ ಬಕದಾಲ್ಭ್ಯನು ಮತ್ತು ಗ್ಲಾವ ಮೈತ್ರೇಯನು ಸ್ವಾಧ್ಯಾಯಕ್ಕಾಗಿ ಹೊರಟನು.

## ಋಷಿಯು ಸ್ವಾಧ್ಯಾಯಕ್ಕೆ ಹೊರಟದ್ದು

(ಭಾಷ್ಯ)

೧೧೧. ಅತೀತೇ ಖಣ್ಡೇ ಅನ್ನಪ್ರಾಪ್ತಿನಿಮಿತ್ತಾ ಕಷ್ಟಾವಸ್ಥಾ ಉಕ್ತಾ ಉಚ್ಛಿಷ್ಟೋಚ್ಛಿಷ್ಟಪರ್ಯುಷಿತಭಕ್ಷಣಲಕ್ಷಣಾ । ಸಾ ಮಾ ಭೂತ್ ಇತಿ ಅನ್ನಲಾಭಾಯ ಅಥ ಅನನ್ತರಂ ಶೌವಃ ಶ್ವಭಿರ್ದೃಷ್ಟಃ ಉದ್ಗೀಥಃ ಉದ್ಗಾನಂ ಸಾಮ ಅತಃ ಪ್ರಸ್ತೂಯತೇ । ತತ್ ತತ್ರ ಹ ಕಿಲ ಬಕೋ ನಾಮತಃ । ದಲ್ಭಸ್ಯ ಅಪತ್ಯಂ ದಾಲ್ಭ್ಯಃ । ಗ್ಲಾವೋ ವಾ ನಾಮತಃ । ಮಿತ್ರಾಯಾಶ್ಚ ಅಪತ್ಯಂ ಮೈತ್ರೇಯಃ । ವಾಶಬ್ದಶ್ಚಾರ್ಥೇ । ದ್ವ್ಯಾಮುಷ್ಯಾಯಣೋ ಹಿ ಅಸೌ । ವಸ್ತುವಿಷಯೇ ಕ್ರಿಯಾಸ್ವಿವ ವಿಕಲ್ಪಾನುಪಪತ್ತೇಃ । ದ್ವಿನಾಮಾ ದ್ವಿಗೋತ್ರಃ ಇತ್ಯಾದಿ ಹಿ ಸ್ಮೃತಿಃ । ದೃಶ್ಯತೇ ಚ ಉಭಯತಃ ಪಿಣ್ಡಭಾಕ್ತ್ವಮ್ । ಉದ್ಗೀಥೇ ಬದ್ಧಚಿತ್ತತ್ವಾತ್ ಋಷೌ ಅನಾದರಾದ್ ವಾ । ವಾಶಬ್ದಃ ಸ್ವಾಧ್ಯಾಯಾರ್ಥಃ । ಸ್ವಾಧ್ಯಾಯಂ ಕರ್ತುಂ ಗ್ರಾಮಾದ್ ಬಹಿಃ ಉದ್ವವ್ರಾಜ ಉದ್ಗತವಾನ್ ವಿವಿಕ್ತದೇಶಸ್ಥೋದಕಾಭ್ಯಾಶಮ್ । 'ಉದ್ವವ್ರಾಜ,' 'ಪ್ರತಿಪಾಲಯಾಂಚಕಾರ' (೧-೧೨-೩) ಇತಿ ಚ ಏಕವಚನಾತ್

---

1. ಉಪಾಸನೆಯ ಉತ್ಕರ್ಷದಿಂದ ದೇವತಾಸಾಯುಜ್ಯವು ದೊರಕುವದು, ಹಾಗಿಲ್ಲದಿದ್ದರೆ ಮಾಡಿದ ಯಜ್ಞವು ವೀರ್ಯವತ್ತರವಾಗಿ ತನ್ನ ಫಲವನ್ನು ಕೊಡುವದು_ ಎಂದು ಅಭಿಪ್ರಾಯ.

ಲಿಙ್ಗಾತ್ ಏಕೋಽಸೌ ಋಷಿಃ । ಶ್ವೋದ್ಗೀಥಕಾಲಪ್ರತಿಪಾಲನಾತ್ ಋಷೇಃ ಸ್ವಾಧ್ಯಾಯಕರಣಮ್ ಅನ್ನಕಾಮನಯಾ ಇತಿ ಲಕ್ಷ್ಯತೇಽಭಿಪ್ರಾಯೋಽತಃ[1] ॥

(ಭಾಷ್ಯಾರ್ಥ)

ಆಗಿಹೋದ ಖಂಡದಲ್ಲಿ ಅನ್ನವು ದೊರಕದ ನಿಮಿತ್ತದಿಂದಾದ, ಉಚ್ಛಿಷ್ಟೋಚ್ಛಿಷ್ಟಪರ್ಯುಷಿತವನ್ನು ತಿನ್ನುವದೆಂಬ ರೂಪದ ಕಷ್ಟದ ಅವಸ್ಥೆಯನ್ನು ಹೇಳಿದೆ. ಆ (ಅವಸ್ಥೆಯು) ಆಗದಿರಲೆಂದು ಅನ್ನಲಾಭಕ್ಕೋಸ್ಕರ ಇನ್ನು ಅನಂತರದಲ್ಲಿ ಶೌವ ಎಂದರೆ ನಾಯಿಗಳು ಕಂಡುಹಿಡಿದ ಉದ್ಗೀಥವನ್ನು ಉದ್ಗಾನವನ್ನು ಸಾಮವನ್ನು, ಆದ್ದರಿಂದ[2] ಪ್ರಾರಂಭಿಸಿರುತ್ತದೆ.

(ತತ್=ತತ್ರ) ಅಲ್ಲಿ ಬಕನೆಂಬ ಹೆಸರಿನವನೂ ದಲ್ಭನ ಮಗನಾದ್ದರಿಂದ ದಾಲ್ಭ್ಯನೂ, ಗ್ಲಾವನೆಂಬ ಹೆಸರಿನವನೂ ಮಿತ್ರೆಯ ಮಗನಾದ್ದರಿಂದ ಮೈತ್ರೇಯನೂ- ಇಲ್ಲಿ ವಾ ಎಂಬ ಶಬ್ದವು ಚಶಬ್ದದ ಅರ್ಥದಲ್ಲಿ (ಬಂದಿದೆ). ಇವನು ದ್ವ್ಯಾಮುಷ್ಯಾಯಣನೇ[3], ಏಕೆಂದರೆ **ಕ್ರಿಯೆಗಳಲ್ಲಿರಬಹುದಾಗಿರುವಂತೆ ವಸ್ತುವಿನಲ್ಲಿ ವಿಕಲ್ಪವು ಇರಲಾರದು.**[4] (ಅವನು) 'ಎರಡು ಹೆಸರಿನವನು, ಎರಡು ಗೋತ್ರದವನು' (?) ಎಂದು ಮುಂತಾಗಿ ಸ್ಮೃತಿಯಿದೆಯಲ್ಲವೆ ? ಎರಡು (ಗೋತ್ರದಲ್ಲಿಯೂ ಇವನಿಂದ) ಪಿಂಡವು ದೊರೆಯುವದು ಕಂಡೂ ಇರುತ್ತದೆ.[5] ಉದ್ಗೀಥದಲ್ಲಿ ಚಿತ್ತವು ನಿಂತುಬಿಟ್ಟದ್ದರಿಂದ ಋಷಿಯಲ್ಲಿ ಆದರವಿಲ್ಲದ್ದರಿಂದ ವಾಶಬ್ದವು ಸ್ವಾಧ್ಯಾಯಾರ್ಥವಾಗಿ[6] (ಬಂದಿದೆ ಎಂದೂ ಹೇಳಬಹುದು).

ಸ್ವಾಧ್ಯಾಯವನ್ನು ಮಾಡುವದಕ್ಕೆಂದು ಊರಿನ ಹೊರಕ್ಕೆ ವಿವಿಕ್ತದೇಶದಲ್ಲಿರುವ ನೀರಿನ ಬಳಿಗೆ (ಉದ್ವವ್ರಾಜ=ಉದ್ಗತವಾನ್) ಹೊರಟುಬಂದನು. ಉದ್ವವ್ರಾಜ (ಹೊರಟನು), ಎಂದೂ ಪ್ರತಿಪಾಲಯಾಂಚಕಾರ (ಕಾದುಕೊಂಡಿದ್ದನು)

---

1. ಈ ಪಾಠವೇ ಮೇಲೆಂದು ಗಣಿಸಿದೆ.

2. "ಇನ್ನುಮುಂದೆ" ಎಂದೂ ಕನ್ನಡಿಸಬಹುದಾಗಿತ್ತು, ಆದರೆ "ಅಥಾತಃ" ಎಂದಿರುವ ಕಡೆಯಲ್ಲೆಲ್ಲಿ ಅತಃಶಬ್ದಕ್ಕೆ ಹೇತ್ವರ್ಥವನ್ನು ಹೇಳುವದೇ ರೂಢಿ; ಇಲ್ಲಿ ಹೇಳಿಯೂ ಇದೆ

3 ಇಬ್ಬರಿಗೂ ಪುತ್ರನು, ಒಬ್ಬನು ಜನಕನು, ಒಬ್ಬನು ದತ್ತುವಿನ ತಂದೆ

4. ಕರ್ಮವನ್ನು ಹೀಗೂ ಮಾಡಬಹುದು ಹಾಗೂ ಮಾಡಬಹುದು, ಆದರೆ ಒಂದು ವಸ್ತು ಹೀಗೂ ಇರಬಹುದು, ಹಾಗೂ ಇರಬಹುದು- ಎಂಬುದು ಸಲ್ಲದು

5. ಇಬ್ಬರ ಆಸ್ತಿಯಲ್ಲಿಯೂ ಇವನಿಗೆ ಭಾಗವು ಬರಬಹುದು, ಇಬ್ಬರಿಗೂ ಇವನು ಪಿಂಡವನ್ನು ಕೊಡುವದಕ್ಕೆ ಅಧಿಕಾರಿಯು ಎಂಬುದು ಆಚಾರದಲ್ಲಿ ಕಂಡುಬರುತ್ತದೆ.

6. ವಿಕಲ್ಪವನ್ನು ಹೇಳಬೇಕೆಂಬ ಅಭಿಪ್ರಾಯದಿಂದ ವಾಶಬ್ದವನ್ನು ಪ್ರಯೋಗಿಸಿಲ್ಲ, ಋಷಿಯೇನೂ ಮುಖ್ಯವಲ್ಲ, ಉಪಾಸನೆಯೇ ಮುಖ್ಯ ಎಂಬ ಅಭಿಪ್ರಾಯದಿಂದ ಪ್ರಯೋಗಿಸಿದೆ ಎಂದೂ ಈ ವಾಕ್ಯಕ್ಕೆ ಅರ್ಥಮಾಡಬಹುದು ಎಂದು ಅಭಿಪ್ರಾಯ. ಋಷಿಯು ಒಬ್ಬನೇ ಎಂಬುದು ಸಂದರ್ಭದಿಂದಲೇ ನಿಶ್ಚಯವಾಗುತ್ತದೆ- ಎಂಬುದು ಇಲ್ಲಿ ಸ್ಪಷ್ಟವಾಗಿದೆ.

ಎಂದೂ ಏಕವಚನವಿರುವದೆಂಬ ಲಿಂಗವಿರುವದರಿಂದ ಇವನು ಒಬ್ಬನೇ ಋಷಿ (ಎಂದು ಗೊತ್ತಾಗುತ್ತದೆ)[1] ಶೌವ ಉದ್ಗೀಥವಾಗುವದನ್ನು ಕಾದುಕೊಂಡಿದ್ದದ್ದರಿಂದ (ಇವನು) ಅಧ್ಯಯನಮಾಡುತ್ತಿದ್ದದ್ದು ಅನ್ನಕಾಮನೆಯಿಂದ ಎಂಬ ಅಭಿಪ್ರಾಯವು ಇದರಿಂದ ಕಾಣಬರುತ್ತದೆ.

(ಉಪನಿಷತ್ತು)

**ತಸ್ಮೈ ಶ್ವಾ ಶ್ವೇತಃ ಪ್ರಾದುರ್ಬಭೂವ ತಮನ್ಯೇ ಶ್ವಾನಃ ಉಪಸಮೇತ್ಯೋಚುರನ್ನಂ ನೋ ಭಗವಾನಾಗಾಯತ್ವಶನಾಯಾಮ ವಾ ಇತಿ ॥ ೨ ॥**

೨. ಅವನಿಗೆ ಬಿಳಿಯ ನಾಯಿ ಕಾಣಿಸಿಕೊಂಡಿತು. ಅದರ ಬಳಿಗೆ ಬೇರೆ ನಾಯಿಗಳು ಬಂದು 'ನಮಗೆ ಭಗವಂತನಾದ (ನೀನು) ಅನ್ನವನ್ನು ಆಗಾನಮಾಡಬೇಕು! ನಮಗೆ ಹಸಿವಾಗಿದೆ!' ಎಂದವು.

## ಬಿಳಿಯ ನಾಯಿಯನ್ನು
## ಮಿಕ್ಕ ನಾಯಿಗಳು ಅನ್ನಾಗಾನಕ್ಕೆ ಪ್ರಾರ್ಥಿಸಿದ್ದು

(ಭಾಷ್ಯ)

೧೧೨ ಸ್ವಾಧ್ಯಾಯೇನ ತೋಷಿತಾ ದೇವತಾ ಋಷಿರ್ವಾ ಶ್ವರೂಪಂ ಗೃಹೀತ್ವಾ ಶ್ವಾ ಶ್ವೇತಃ ಸನ್ ತಸ್ಮೈ ಋಷಯೇ ತದನುಗ್ರಹಾರ್ಥಂ ಪ್ರಾದುರ್ಬಭೂವ ಪ್ರಾದುಶ್ಚಕಾರ। ತಮ್ ಅನ್ಯೇ ಶುಕ್ಲಂ ಶ್ವಾನಂ ಕ್ಷುಲ್ಲಕಾಃ ಶ್ವಾನಃ ಉಪಸಮೇತ್ಯ ಊಚುಃ ಉಕ್ತವನ್ತಃ। ಅನ್ನಂ ನಃ ಅಸ್ಮಭ್ಯಂ ಭಗವಾನ್ ಆಗಾಯತು ಆಗಾನೇನ ನಿಷ್ಪಾದಯತು ಇತ್ಯರ್ಥಃ। ಮುಖ್ಯಪ್ರಾಣಂ[2] ವಾಗಾದಯೋ ವಾ ಪ್ರಾಣಮನು ಅನ್ನಭುಜಃ। ಸ್ವಾಧ್ಯಾಯಪರಿತೋಷಿತಾಃ[3] ಸನ್ತಃ ಅನುಗೃಹ್ಣೀಯುರೇನಂ ಶ್ವರೂಪಮ್[4] ಆದಾಯ ಇತಿ ಯುಕ್ತಮ್ ಏವಂ ಪ್ರತಿಪತ್ತುಮ್। ಅಶನಾಯಾಮ ವೈ ಬುಭುಕ್ಷಿತಾಃ ಸ್ಮೋ ವೈ ಇತಿ ॥

---

1. ಹಿಂದ ಹೇಳಿದ ಎರಡು ಹೆಸರುಗಳೂ ಒಬ್ಬನವೇ ಎಂಬುದನ್ನು ಈ ಏಕವಚನವು ಸೂಚಿಸುತ್ತದೆ ಎಂದರ್ಥ

2. "ಮುಖ್ಯಪ್ರಾಣವಾಗಾದಯೋ ವಾ" ಎಂಬ ವಾ॥ ತೆ॥ ಪಾಠಗಳಿಗಿಂತ ಈ ಪಾಠವೇ ಮೇಲು.

3 ಈ ಮಾತಿನ ಹಿಂದೆ "ತೇ" ಎಂದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

4 'ಸ್ವರೂಪಮ್" ಎಂಬುದು ಅಚ್ಚಿನ ತಪ್ಪು.

(ಭಾಷ್ಯಾರ್ಥ)

ಅಧ್ಯಯನದಿಂದ ತೋಷಿತನಾದ ಯಾವನಾದರೊಬ್ಬ ದೇವನೋ ಋಷಿಯೋ[1] ನಾಯಿಯ ರೂಪವನ್ನು ಧರಿಸಿಕೊಂಡು ಬಿಳಿಯ ನಾಯಿಯಾಗಿ ಆ ಋಷಿಗೆ ಅವನನ್ನು ಅನುಗ್ರಹಿಸುವುದಕ್ಕಾಗಿ (ಪ್ರಾದುರ್ಬಭೂವ=ಪ್ರಾದುಷ್ಕಾರ) ಹೊರತೋರಿಕೊಂಡನು ಆ ಬಿಳಿಯ ನಾಯಿಯನ್ನು ಬೇರೆಯ ಸಣ್ಣಪುಟ್ಟ ನಾಯಿಗಳು ಬಳಿಸಾರಿ ಇಂತೆಂದವು, ಹೀಗೆಂದವು. "ಅನ್ನವನ್ನು (ನಃ=ಅಸ್ಮಭ್ಯಮ್) ನಮಗಾಗಿ ಭಗವಂತನಾದ ನೀನು ಆಗಾನವಮಾಡಿಕೊಡಬೇಕು, ಆಗಾನಮಾಡುವದರಿಂದ ಉಂಟುಮಾಡಿಕೊಡಬೇಕು" (ಎಂದರು) ಎಂದರ್ಥ ಅಥವಾ ಪ್ರಾಣನನ್ನನುಸರಿಸಿ ಅನ್ನವನ್ನು ಭುಂಜಿಸುವ ವಾಗಾದಿಗಳು[2] ಮುಖ್ಯಪ್ರಾಣನನ್ನು ಬಳಿಸಾರಿ (ಹೀಗೆಂದರು ಎಂದು ಅರ್ಥ ಅವರು), ಅಧ್ಯಯನದಿಂದ ಪರಿತುಷ್ಟರಾಗಿ ನಾಯಿಯ ರೂಪವನ್ನು ತೆಗೆದುಕೊಂಡು ಇವನನ್ನು ಅನುಗ್ರಹಿಸಿದ್ದಾರು ಎಂದಿಂತು ತಿಳಿಯುವದು ಯುಕ್ತವು[3] ಆ ಸಣ್ಣ ನಾಯಿಗಳು ಮತ್ತೇನೆಂದವೆಂದರೆ), "ಹಸಿವುಳ್ಳವರಾಗಿರುತ್ತೇವೆ, ಹಸಿವಿನಿಂದ ಬಳಲುತ್ತಿದೇವೆಯಲ್ಲ!" (ಎಂದವು).

(ಉಪನಿಷತ್ತು)

**ತಾನ್ ಹೋವಾಚೇಹೈವ ಮಾ ಪ್ರಾತರುಪಸಮೀಯಾತೇತಿ ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಪ್ರತಿಪಾಲಯಾಂಚಕಾರ ॥ ೩ ॥**

೩. (ಆ ಬಿಳಿಯ ನಾಯಿ) ಅವುಗಳನ್ನು ಕುರಿತು 'ಇಲ್ಲಿಯೇ ಬೆಳಗ್ಗೆ ನನ್ನ ಬಳಿಗೆ ಬನ್ನಿರಿ!' ಎಂದಿತು. ಅಲ್ಲಿ ಬಕದಾಲ್ಭ್ಯನು ಮತ್ತು ಗ್ಲಾವಮೈತ್ರೇಯನು ಪ್ರತಿಪಾಲನೆಮಾಡಿಕೊಂಡಿದ್ದನು.

## ಋಷಿಯು ಶೌವ ಉದ್ಗೀಥಕ್ಕಾಗಿ ಕಾದುಕೊಂಡಿದ್ದುದ್ದು

(ಭಾಷ್ಯ)

೧೦೩. ಏವಮುಕ್ತೋ ಶ್ವಾ ಶ್ವೇತ ಉವಾಚ ತಾನ್ ಕ್ಷುಲ್ಲಕಾನ್ ಶುನಃ । ಇಹೈವ ಅಸ್ಮಿನ್ನೇವ ದೇಶೇ ಮಾ ಮಾಂ ಪ್ರಾತಃ ಪ್ರಾತಃಕಾಲೇ ಉಪಸಮೀಯಾತ

1. ಏಕೆಂದರೆ ಬರಿಯ ನಾಯಿಗೆ ಸಾಮಗಾನವು ಬರುವದಿಲ್ಲ

2. ವಾಗಾದಿಗಳು ಮುಖ್ಯಪ್ರಾಣನ ಮೂಲಕನೇ ಅನ್ನವನ್ನು ಪಡೆದು ತೃಪ್ತವಾಗುವವೆನ್ನುವದಕ್ಕೆ ಬೃ. ಭಾ. ೧-೩-೧೮ (ಭಾ. ಭಾ. ೭೭)ನ್ನು ನೋಡಿ.

3. ಇಲ್ಲಿಯೂ ಪ್ರಾಣಾದಿದೇವತೆಗಳನ್ನೇ ತೆಗೆದುಕೊಳ್ಳುವದು ಯುಕ್ತ, ಏಕೆಂದರೆ **ಸಾಮಾನ್ಯ**ರಿಗೆ ಅನ್ನಾಗಾನಶಕ್ತಿಯಿಲ್ಲ, ಮುಖ್ಯಪ್ರಾಣನು ಅನ್ನಾಗಾನವನ್ನು ಮಾಡಿದನೆಂಬ **ಅರ್ಥವಾದವೂ** ಇದೆ.

ಎಂದೂ ಏಕವಚನವಿರುವದೆಂಬ ಲಿಂಗವಿರುವದರಿಂದ ಇವನು ಒಬ್ಬನೇ ಋಷಿ (ಎಂದು ಗೊತ್ತಾಗುತ್ತದೆ)[1] ಶೌವ ಉದ್ಗೀಥವಾಗುವದನ್ನು ಕಾದುಕೊಂಡಿದ್ದದ್ದರಿಂದ (ಇವನು) ಅಧ್ಯಯನಮಾಡುತ್ತಿದ್ದದ್ದು ಅನ್ನಕಾಮನೆಯಿಂದ ಎಂಬ ಅಭಿಪ್ರಾಯವು ಅದರಿಂದ ಕಾಣಬರುತ್ತದೆ.

(ಉಪನಿಷತ್ತು)

**ತಸ್ಮೈ ಶ್ವಾ ಶ್ವೇತಃ ಪ್ರಾದುರ್ಬಭೂವ ತಮನ್ಯೇ ಶ್ವಾನಃ ಉಪಸಮೇತ್ಯೋಚುರನ್ನಂ ನೋ ಭಗವಾನಾಗಾಯತ್ವಶನಾಯಾಮ ವಾ ಇತಿ ॥ ೨ ॥**

೨. ಅವನಿಗೆ ಬಿಳಿಯ ನಾಯಿ ಕಾಣಿಸಿಕೊಂಡಿತು. ಅದರ ಬಳಿಗೆ ಬೇರೆ ನಾಯಿಗಳು ಬಂದು 'ನಮಗೆ ಭಗವಂತನಾದ (ನೀನು) ಅನ್ನವನ್ನು ಆಗಾನಮಾಡಬೇಕು! ನಮಗೆ ಹಸಿವಾಗಿದೆ!' ಎಂದವು.

## ಬಿಳಿಯ ನಾಯಿಯನ್ನು ಮಿಕ್ಕ ನಾಯಿಗಳು ಅನ್ನಾಗಾನಕ್ಕೆ ಪ್ರಾರ್ಥಿಸಿದ್ದು

(ಭಾಷ್ಯ)

೧೦೨ ಸ್ವಾಧ್ಯಾಯೇನ ತೋಷಿತಾ ದೇವತಾ ಋಷಿರ್ವಾ ಶ್ವರೂಪಂ ಗೃಹೀತ್ವಾ ಶ್ವಾ ಶ್ವೇತಃ ಸನ್ ತಸ್ಮೈ ಋಷಯೇ ತದನುಗ್ರಹಾರ್ಥಂ ಪ್ರಾದುರ್ಬಭೂವ ಪ್ರಾದುಶ್ಚಕಾರ। ತಮ್ ಅನ್ಯೇ ಶುಕ್ಲಂ ಶ್ವಾನಂ ಕ್ಷುಲ್ಲಕಾಃ ಶ್ವಾನಃ ಉಪಸಮೇತ್ಯ ಊಚುಃ ಉಕ್ತವನ್ತಃ । ಅನ್ನಂ ನಃ ಅಸ್ಮಭ್ಯಂ ಭಗವಾನ್ ಆಗಾಯತು ಆಗಾನೇನ ನಿಷ್ಪಾದಯತು ಇತ್ಯರ್ಥಃ । ಮುಖ್ಯಪ್ರಾಣಂ[2] ವಾಗಾದಯೋ ವಾ ಪ್ರಾಣಮನು ಅನ್ನಭುಜಃ । ಸ್ವಾಧ್ಯಾಯಪರಿತೋಷಿತಾಃ[3] ಸನ್ತಃ ಅನುಗೃಹ್ಣೀಯುರೇನಂ ಶ್ವರೂಪಮ್[4] ಆದಾಯ ಇತಿ ಯುಕ್ತಮ್ ಏವಂ ಪ್ರತಿಪತ್ತುಮ್ । ಅಶನಾಯಾಮ ವೈ ಬುಭುಕ್ಷಿತಾಃ ಸ್ಮೋ ವೈ ಇತಿ ॥

---

1 ಹಿಂದೆ ಹೇಳಿದ ಎರಡು ಹೆಸರುಗಳೂ ಒಬ್ಬನವೇ ಎಂಬುದನ್ನು ಈ ಏಕವಚನವು ಸೂಚಿಸುತ್ತದೆ ಎಂದರ್ಥ.

2. "ಮುಖ್ಯಪ್ರಾಣವಾಗಾದಯೋ ವಾ" ಎಂಬ ವಾ॥ ತೆ॥ ಪಾಠಗಳಿಗಿಂತ ಈ ಪಾಠವೇ ಮೇಲು.

3. ಈ ಮಾತಿನ ಹಿಂದೆ "ತೇ" ಎಂದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

4 'ಸ್ವರೂಪಮ್" ಎಂಬುದು ಅಚ್ಚಿನ ತಪ್ಪು.

(ಭಾಷ್ಯಾರ್ಥ)

ಅಧ್ಯಯನದಿಂದ ತೋಷಿತನಾದ ಯಾವನಾದರೊಬ್ಬ ದೇವನೋ ಋಷಿಯೋ[1] ನಾಯಿಯ ರೂಪವನ್ನು ಧರಿಸಿಕೊಂಡು ಬಿಳಿಯ ನಾಯಿಯಾಗಿ ಆ ಋಷಿಗೆ ಅವನನ್ನು ಅನುಗ್ರಹಿಸುವದಕ್ಕಾಗಿ (ಪ್ರಾದುಬಭೂವ=ಪ್ರಾದುಷ್ಕಾರ) ಹೊರತೋರಿಕೊಂಡನು ಆ ಬಿಳಿಯ ನಾಯಿಯನ್ನು ಬೇರೆಯ ಸಣ್ಣಪುಟ್ಟ ನಾಯಿಗಳು ಬಳಿಸಾರಿ ಇಂತೆಂದವು, ಹೀಗೆಂದವು. "ಅನ್ನವನ್ನು (ನಃ=ಅಸ್ಮಭ್ಯಮ್) ನಮಗಾಗಿ ಭಗವಂತನಾದ ನೀನು ಆಗಾನವಮಾಡಿಕೊಡಬೇಕು, ಆಗಾನಮಾಡುವದರಿಂದ ಉಂಟುಮಾಡಿಕೊಡಬೇಕು" (ಎಂದರು) ಎಂದರ್ಥ. ಅಥವಾ ಪ್ರಾಣನನ್ನನುಸರಿಸಿ ಅನ್ನವನ್ನು ಭುಂಜಿಸುವ ವಾಗಾದಿಗಳು[2] ಮುಖ್ಯಪ್ರಾಣನನ್ನು ಬಳಿಸಾರಿ (ಹೀಗೆಂದರು ಎಂದು ಅರ್ಥ ಅವರು), ಅಧ್ಯಯನದಿಂದ ಪರಿತುಷ್ಟರಾಗಿ ನಾಯಿಯ ರೂಪವನ್ನು ತೆಗೆದುಕೊಂಡು ಇವನನ್ನು ಅನುಗ್ರಹಿಸಿದ್ದಾರು ಎಂದಿಂತು ತಿಳಿಯುವದು ಯುಕ್ತವು[3] ಆ ಸಣ್ಣ ನಾಯಿಗಳು ಮತ್ತೇನೆಂದವೆಂದರೆ), "ಹಸಿವುಳ್ಳವರಾಗಿರುತ್ತೇವೆ, ಹಸಿವಿನಿಂದ ಬಳಲುತ್ತಿದೇವೆಯಲ್ಲ!" (ಎಂದವು)

(ಉಪನಿಷತ್ತು)

**ತಾನ್ ಹೋವಾಚೇಹೈವ ಮಾ ಪ್ರಾತರುಪಸಮೀಯಾತೇತಿ ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಪ್ರತಿಪಾಲಯಾಂಚಕಾರ ॥ ೩ ॥**

೩. (ಆ ಬಿಳಿಯ ನಾಯಿ) ಅವುಗಳನ್ನು ಕುರಿತು 'ಇಲ್ಲಿಯೇ ಬೆಳಗ್ಗೆ ನನ್ನ ಬಳಿಗೆ ಬನ್ನಿರಿ!' ಎಂದಿತು. ಅಲ್ಲಿ ಬಕದಾಲ್ಭ್ಯನು ಮತ್ತು ಗ್ಲಾವಮೈತ್ರೇಯನು ಪ್ರತಿಪಾಲನೆಮಾಡಿಕೊಂಡಿದ್ದನು.

## ಋಷಿಯು ಶ್ವಾವ ಉದ್ಗೀಥಕ್ಕಾಗಿ ಕಾದುಕೊಂಡಿದ್ದದ್ದು

(ಭಾಷ್ಯ)

೧೦೩. ಏವಮುಕ್ತೋ ಶ್ವಾ ಶ್ವೇತ ಉವಾಚ ತಾನ್ ಕ್ಷುಲ್ಲಕಾನ್ ಶುನಃ। ಇಹೈವ ಅಸ್ಮಿನ್ನೇವ ದೇಶೇ ಮಾ ಮಾಂ ಪ್ರಾತಃ ಪ್ರಾತಃಕಾಲೇ ಉಪಸಮಾಯಾತ

---

1. ಏಕೆಂದರೆ ಬರಿಯ ನಾಯಿಗೆ ಸಾಮಗಾನವು ಬರುವದಿಲ್ಲ.

2. ವಾಗಾದಿಗಳು ಮುಖ್ಯಪ್ರಾಣನ ಮೂಲಕವೇ ಅನ್ನವನ್ನು ಪಡೆದು ತೃಪ್ತವಾಗುವವೆನ್ನುವದಕ್ಕೆ ಬೃ. ಭಾ. ೧-೩-೧೮ (ಭಾ. ಭಾ ೭೭)ನ್ನು ನೋಡಿ.

3. ಇಲ್ಲಿಯೂ ಪ್ರಾಣಾದಿದೇವತೆಗಳನ್ನೇ ತೆಗೆದುಕೊಳ್ಳುವದು ಯುಕ್ತ, ಏಕೆಂದರೆ **ಸಾಮಾನ್ಯರಿಗೆ** ಅನ್ನಾಗಾನಶಕ್ತಿಯಿಲ್ಲ; ಮುಖ್ಯಪ್ರಾಣನು ಅನ್ನಾಗಾನವನ್ನು ಮಾಡಿದನೆಂಬ **ಅರ್ಥವಾದವೂ** ಇದೆ.

ಇತಿ। ದೈರ್ಘ್ಯಂ ಛಾನ್ದಸಮ್ ಉಪಸಮಿಾಯಾತ ಇತಿ। ಪ್ರಮಾದಪಾಠೋ ವಾ। ಪ್ರಾತಃಕಾಲಕರಣಂ ತತ್ಕಾಲ ಏವ ಕರ್ತವ್ಯಾರ್ಥಮ್ । ಅನ್ನದಸ್ಯ ವಾ ಸವಿತುಃ ಅಪರಾಹ್ಣೇ ಅನಾಭಿಮುಖ್ಯಾತ್ । ತತ್ ತತ್ರೈವ ಹ ಬಕೋ ದಾಲ್ಭ್ಯಃ ಗ್ಲಾವೋ ವಾ ಮೈತ್ರೇಯ ಋಷಿಃ ಪ್ರತಿಪಾಲಯಾಂಚಕಾರ ಪ್ರತೀಕ್ಷಣಂ ಕೃತ ವಾನ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆನ್ನಲು ಬಿಳಿಯ ನಾಯಿ ಆ ಸಣ್ಣಪುಟ್ಟ ನಾಯಿಗಳನ್ನು ಕುರಿತು ಇಲ್ಲಿಯೇ ಈ ಸ್ಥಲದಲ್ಲಿಯೇ (ಮಾ=ಮಾಮ್) ನನ್ನನ್ನು ಬೆಳಗ್ಗೆ ಬಂದು ಸೇರಿರಿ. 'ಸಮಿಾಯಾತ' ಎಂಬ ದೀರ್ಘಸ್ವರದ (ಪಾಠವು) ವೈದಿಕ(ಪ್ರಯೋಗವು), ಅಥವಾ ತಪ್ಪುಪಾಠವು. ಪ್ರಾತಃಕಾಲವನ್ನು ಗೊತ್ತುಮಾಡಿರುವದು ಆ ಕಾಲದಲ್ಲಿಯೇ (ಈ ಗಾನವನ್ನು) ಮಾಡಬೇಕೆಂದು (ವಿಧಿಸು)ವದಕ್ಕಾಗಿ, ಅಥವಾ ಅನ್ನವನ್ನು ಕೊಡುವ ಸೂರ್ಯನು ಅಪರಾಹ್ಣದಲ್ಲಿ ಎದುರಿಗಿರುವದಿಲ್ಲವಾದ್ದರಿಂದ. (ತತ್=ತತ್ರೈವ) ಅಲ್ಲಿಯೇ ಬಕದಾಲ್ಭ್ಯನು ಮತ್ತು ಗ್ಲಾವಮೈತ್ರೇಯ(ನೆಂಬ ಮತ್ತೊಂದು ಹೆಸರಿನ ಆ) ಋಷಿಯು ಪ್ರತಿಪಾಲನೆಮಾಡಿಕೊಂಡಿದ್ದನು, (ಅವರ ಬರವನ್ನು) ನಿರೀಕ್ಷಿಸಿಕೊಂಡಿದ್ದನು

## ನಾಯಿಗಳು ಉದ್ಗೀಥವನ್ನು ಗಾನಮಾಡಿದ್ದು

(ಉಪನಿಷತ್ತು)

**ತೇ ಹ ಯಥೈವೇದಂ ಬಹಿಷ್ಪವಮಾನೇನ ಸ್ತೋಷ್ಯಮಾಣಾಃ ಸಗ್ಂರಬ್ಧಾಃ ಸರ್ಪನ್ತೀತ್ಯೇವಮಾಸಸೃಪುಸ್ತೇ ಹ ಸಮುಪ ವಿಶ್ಯ ಹಿಂ ಚಕ್ರುಃ ॥ ೪ ॥**

೪. ಅವು ಹೇಗೆ ಇಲ್ಲಿ ಬಹಿಷ್ಪವಮಾನದಿಂದ ಸ್ತೋತ್ರ ಮಾಡಲಿರುವವರು ಸೇರಿಕೊಂಡು ನಡೆಯುತ್ತಿರುವರೋ, ಹಾಗೆಯೇ ನಡೆದವು. ಅವು ಕುಳಿತುಕೊಂಡು ಹಿಂಕರಿಸಿದವು.

## ನಾಯಿಗಳು ಉದ್ಗಾನಕ್ಕೆ ಸಜ್ಜಾದದ್ದು

(ಭಾಷ್ಯ)

೧೦೪. ತೇ ಶ್ವಾನಃ ತತ್ರೈವ ಆಗತ್ಯ ಋಷೇಃ ಸಮಕ್ಷಂ ಯಥೈವ ಇಹ ಕರ್ಮಣಿ ಬಹಿಷ್ಪವಮಾನೇನ ಸ್ತೋತ್ರೇಣ ಸ್ತೋಷ್ಯಮಾಣಾಃ ಉದ್ಗಾತೃ

ಪುರುಷಾಃ ಸಂರಬ್ಧಾಃ ಸಲ್ಲಗ್ನಾ ಅನ್ಯೋನ್ಯಮೇವ ಸರ್ಪನ್ತಿ[1] ಏವಂ ಮುಖೇನ ಅನ್ಯೋನ್ಯಸ್ಯ ಪುಚ್ಛಂ ಗೃಹೀತ್ವಾ ಅನಸೃಪುಃ ಅಸೃಪ್ತವನ್ತಃ । ಪರಿಭ್ರಮಣಂ ಕೃತವನ್ತಃ ಇತ್ಯರ್ಥಃ । ಏವಂ ಸಂಸೃಪ್ಯ ಸಮುಪವಿಶ್ಯ ಉಪವಿಷ್ಟಾಃ ಸನ್ತಃ ಹಿಂಚಕ್ರುಃ ಹಿಂಕಾರಂ ಕೃತವನ್ತಃ ॥

(ಭಾಷ್ಯಾರ್ಥ)

ಆ ನಾಯಿಗಳು ಅಲ್ಲಿಗೆ ಬಂದು (ಆ) ಋಷಿಯ ಎದುರಿಗೆ ಹೇಗೆ ಇಲ್ಲಿ, ಕರ್ಮದಲ್ಲಿ, ಬಹಿಷ್ಪವಮಾನಸ್ತೋತ್ರದಿಂದ ಸ್ತೋತ್ರಮಾಡಲಿರುವ[2] ಉದ್ಗಾತೃಪುರುಷರು[3] ಸೇರಿಕೊಂಡು ಒಬ್ಬರನ್ನೊಬ್ಬರು ಮುಟ್ಟಿಕೊಂಡು ಸೇರಿಕೊಂಡು, ಒಬ್ಬರನ್ನೊಬ್ಬರು ಮುಟ್ಟಿಕೊಂಡು ನಡೆಯುತ್ತಿರುವರೋ ಹಾಗೆ ಬಾಯಿಯಿಂದ ಒಂದು ಮತ್ತೊಂದರ ಬಾಲವನ್ನು ಕಚ್ಚಿಕೊಂಡು ನಡೆದವು, ಹೋದವು, ಸುತ್ತಿದವು ಎಂದರ್ಥ. ಅವು ಹೀಗೆ ಸುತ್ತಿದಬಳಿಕ ಕುಳಿತುಕೊಂಡು ಕುಳಿತುಕೊಂಡವುಗಳಾಗಿ ಹಿಂಕರಿಸಿದವು, ಹಿಂಕಾರವನ್ನು ಮಾಡಿದವು.

# ಶೌವ ಉದ್ಗೀಥ

(ಉಪನಿಷತ್ತು)

**ಓ೩ಮದಾ೩ಮೋ೩ಂ೩ಪಿಬಾ೩ಮೋ೩ಂ೩ ದೇವೋ ವರುಣಃ ಪ್ರಜಾಪತಿಃ ಸವಿತಾ೨ಽನ್ನಮಿಹಾ೨ಹರದನ್ನಪತೇ೩ಽನ್ನಮಿಹಾ೨ಹರಾ೨ಹರೋ೩ಮಿತಿ ॥ ೫ ॥**

೫. ಓಮ್! ನಾವು ಉಣ್ಣುವಂತಾಗಲಿ! ಓಮ್! ನಾವು ಕುಡಿಯುವಂತಾಗಲಿ! ಓಮ್! ದೇವವರುಣನು, ಪ್ರಜಾಪತಿಯು, ಸವಿತೃವು ಅನ್ನವನ್ನು ಇಲ್ಲಿಗೆ ತಂದುಕೊಡಲಿ! ಅನ್ನಪತಿಯೇ ಅನ್ನವನ್ನು ಇಲ್ಲಿಗೆ ತಂದುಕೊಡು! ತಂದುಕೊಡು, ಓಮ್!

---

1. ಟೀಕೆಯಲ್ಲಿ "ಸರ್ಪನ್ತಿ ಇತಿ ಶೇಷಃ" ಎಂದಿರುವುದರಿಂದ ಆ॥ಗಿ॥ಗಳು "ಸರ್ಪನ್ತಿ" ಇಲ್ಲದ ಪಾಠವನ್ನು ಅಂಗೀಕರಿಸಿದ್ದರೆಂದು ಕಲ್ಪಿಸುವುದಕ್ಕೆಡೆಯಿದೆ. ಆದರೆ ತೈ॥ ಪಾಠದಲ್ಲಿ "ಅನ್ಯೋನ್ಯಮೇವ ಸರ್ಪನ್ತಿ" ಎಂದೇ ಇರುವುದರಿಂದಲೂ ಉಪನಿಷತ್ತಿನಲ್ಲಿಯೂ "ಸರ್ಪನ್ತಿ" ಶಬ್ದವಿರುವುದರಿಂದಲೂ ನಾವು ಈ ಪಾಠವನ್ನೇ ಸ್ವೀಕರಿಸಿದ್ದೇವೆ.

2. ಸ್ತೋತ್ರಗಳ ವಿಚಾರಕ್ಕೆ ಪರಿಶಿಷ್ಟವನ್ನು ನೋಡಿರಿ. ಜ್ಯೋತಿಷ್ಟೋಮಾದಿಗಳಲ್ಲಿ ಸ್ತೋತ್ರಮಾಡಬೇಕಾದ ಬಹಿಷ್ಪವಮಾನಸ್ತೋತ್ರದಲ್ಲಿ ಉದ್ಗಾತೃಗಳು "ಉಪಾಸ್ಮೈ ಗಾಯತ", "ದವಿದ್ಯುತತ್ಯ", "ಪವಸ್ವ"– ಎಂಬ ತ್ರ್ಯೃಚಗಳಲ್ಲಿರುವ ಒಂಬತ್ತು ಋಕ್ಕುಗಳನ್ನು ಗಾನಮಾಡುತ್ತಾರೆ. ಐ. ಬ್ರಾ. ೧೧–ಅನ್ನು ನೋಡಿರಿ.

3. ಉದ್ಗಾತೃಪುರುಷರು ಎಂದರೆ ಇಲ್ಲಿ ಅಧ್ವರ್ಯು ಮೊದಲಾಗಿ ಯಜಮಾನಪರ್ಯಂತವಾಗಿ ಎಂದರ್ಥ ಎಂದು ಟೀಕೆ.

# ಅನ್ನಕ್ಕಾಗಿ ಮಾಡುವ ಗಾನ

(ಭಾಷ್ಯ)

೧೦೫ ಓಮ್ ಅದಾಮ, ಓಂ ಪಿಬಾಮ, ಓಂ ದೇವಃ ದ್ಯೋತನಾತ್ । ವರುಣಃ ವರ್ಷಣಾತ್ ಜಗತಃ । ಪ್ರಜಾಪತಿಃ ಪಾಲನಾತ್ ಪ್ರಜಾನಾಮ್ । ಸವಿತಾ ಪ್ರಸವಿತೃತ್ವಾತ್ ಸರ್ವಸ್ಯ । ಆದಿತ್ಯ ಉಚ್ಯತೇ ಏತೈಃ ಪರ್ಯಾಯೈಃ । ಸ ಏವಂಭೂತಃ ಆದಿತ್ಯಃ ಅನ್ನಮ್ ಅಸ್ಮಭ್ಯಮ್ ಇಹ ಆಹರತ್ ಆಹರತು ಇತಿ । ತೇ ಏವಂ ಹಿಂಕೃತ್ವಾ ಪುನರಪ್ಯೂಚುಃ । ಸ ತ್ವಂ ಹೇ ಅನ್ನಪತೇ । ಸ ಹಿ ಸರ್ವಸ್ಯ ಅನ್ನಸ್ಯ ಪ್ರಸವಿತೃತ್ವಾತ್ ಪತಿಃ । ನ ಹಿ ತತ್ಪಾಕೇನ ವಿನಾ ಪ್ರಸೂತಮ್[1] ಅನ್ನಮ್ ಅಣುಮಾತ್ರಮಪಿ ಜಾಯತೇ ಪ್ರಾಣಿನಾಮ್ । ಅತೋಽನ್ನಪತಿಃ । ಹೇ ಅನ್ನಪತೇ । ಅನ್ನಮ್ ಅಸ್ಮಭ್ಯಮ್ ಇಹ ಆಹರ, ಆಹರ ! ಇತಿ । ಅಭ್ಯಾಸ ಆದರಾರ್ಥಃ ಓಮ್ ! ಇತಿ ॥

(ಭಾಷ್ಯಾರ್ಥ)

ಓಮ್ ! ನಾವು ಉಣ್ಣುವಂತಾಗಲಿ ! ಓಮ್ ! ನಾವು ಕುಡಿಯುವಂತಾಗಲಿ! ಹೊಳೆಯುತ್ತಿರುವದರಿಂದ ದೇವನು, ಜಗತ್ತಿಗೆ ಮಳೆಗರೆಯುವದರಿಂದ[2] ವರುಣನು, ಪ್ರಜೆಗಳನ್ನು ಕಾಪಾಡುತ್ತಿರುವದರಿಂದ ಪ್ರಜಾಪತಿಯು, ಎಲ್ಲವನ್ನೂ ಉಂಟುಮಾಡುವದರಿಂದ ಸವಿತೃ ಈ ಪರ್ಯಾಯಗಳಿಂದ ಆದಿತ್ಯನನ್ನೇ ಹೇಳಿದು ತ್ತದೆ. ಆ ಇಂಥ ಆದಿತ್ಯನು ಅನ್ನವನ್ನು ನಮಗಾಗಿ ಇಲ್ಲಿಗೆ (ಆಹರತ್- ಆಹರತು) ತಂದುಕೊಡಲಿ !

ಅವು ಹೀಗೆ ಹಿಂಕರಿಸಿ[3] ಮತ್ತೆ ಹೀಗೆಂದವು ಆ ನೀನು, ಎಲೈ ಅನ್ನಪತಿಯೆ- ಆ (ಆದಿತ್ಯನೇ) ಅಲ್ಲವೆ, ಪ್ರತಿಯೊಬ್ಬನಿಗೂ ಅನ್ನವನ್ನುಂಟುಮಾಡುತ್ತಿರುವದರಿಂದ (ಅನ್ನಕ್ಕೆ) ಪತಿಯು ? ಅವನಿಂದ ಪಾಕವಾಗದೆ ಹುಟ್ಟಿದ[4] ಅನ್ನವು ಒಂದಿಷ್ಟೂ

1 "ಪ್ರಭೂತಮ್" ಎಂದೂ ಪಾಠ, ಅನುವಾದದ ಟಿಪ್ಪಣಿಯನ್ನು ನೋಡಿ.

2. "ವರಣಾತ್" ಎಂದೂ ಪಾಠವಿದೆ, ಜಗತ್ತೆಲ್ಲವೂ ಅವನನ್ನು ವರಿಸುವದರಿಂದ ಎಂದು ಅದಕ್ಕೆ ಅರ್ಥ.

3. ಈ ಸ್ತೋತ್ರಕ್ಕೆ ಹಿಂಕಾರವೆಂದು ಹೆಸರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಹಿಂಕಾರಸ್ವರೂಪಮಾಹ- ಎಂದು ಟೀಕೆ.

4. "ಪ್ರಭೂತಮ್" ಎಂಬ ಆ॥ ಪಾಠಕ್ಕೆ ಹೆಚ್ಚಿನ ಎಂದರ್ಥ. ಆ ಪಾಠವಾಗಲಿ "ಪ್ರಸೂತಮ್" ಎಂಬ ವಾ॥ತೆ॥ ಪಾಠವಾಗಲಿ ಅಣುಮಾತ್ರಮಪಿ ಎಂಬುದಕ್ಕೆ ಅಷ್ಟು ಹೊಂದಿಕೆ ಯಾಗಿಲ್ಲವಾದರೂ ಆದಿತ್ಯನ ಅನುಗ್ರಹವಿಲ್ಲದೆ ಅಣುಮಾತ್ರವೂ ಆಹಾರವುಂಟಾಗಲಾರದು- ಎಂಬುದಕ್ಕೆ "ಪ್ರಸೂತಮ್" ಎಂಬ ಪಾಠವೇ ಹತ್ತಿರವಾಗಿದೆ.

ಪ್ರಾಣಗಳಿಗೆ ಉಂಟಾಗಲಾರದಷ್ಟೆ? ಆದ್ದರಿಂದ (ಅವನು) ಅನ್ನಪತಿಯು. ಎಲೈ ಅನ್ನಪತಿಯೆ,— ಅನ್ನವನ್ನು ನಮಗಾಗಿ ಇಲ್ಲಿ 'ತಂದುಕೊಡು! ತಂದುಕೊಡು!' ಎಂದು ಮತ್ತೆ ಹೇಳಿರುವದು ಆದರಕ್ಕಾಗಿ. ಓಮ್! ಎಂದು[1] (ನುಡಿದವು).

---

# ಒಂದನೆಯ ಅಧ್ಯಾಯ-ಹದಿಮೂರನೆಯ ಖಂಡ

## ( ಸ್ತೋಭೋಪಾಸನೆಗಳು )

## ಈ ಗ್ರಂಥದ ಸಂಬಂಧ

(ಭಾಷ್ಯ)

೧೨೬. ಭಕ್ತಿವಿಷಯೋಪಾಸನಂ ಸಾಮಾವಯವಸಂಬದ್ಧಮ್ ಇತ್ಯತಃ ಸಾಮಾವಯವಾಂತರಸ್ತೋಭಾಕ್ಷರವಿಷಯಾಣ್ಯುಪಾಸನಾಂತರಾಣಿ ಸಂಹತಾನ್ಯುಪದಿಶ್ಯಂತೇ ಅನಂತರಮ್ । ತೇಷಾಂ ಸಾಮಾವಯವಸಂಬದ್ಧತ್ವಾವಿಶೇಷಾತ್ ॥

(ಭಾಷ್ಯಾರ್ಥ)

ಭಕ್ತಿಗಳ ವಿಷಯದ ಉಪಾಸನೆಯು ಸಾಮದ ಅವಯವಕ್ಕೆ ಸಂಬದ್ಧವಾಗಿರುವದರಿಂದ ಅದಾದ ಬಳಿಕ ಮತ್ತೊಂದು ಅವಯವವಾದ ಸ್ತೋಭಾಕ್ಷರವಿಷಯಕ[2]ವಾದ ಬೇರೆಯ ಉಪಾಸನೆಗಳನ್ನು ಒಟ್ಟುಗೂಡಿಸಿ ಇಲ್ಲಿ ಹೇಳಲಾಗುತ್ತದೆ, ಏಕೆಂದರೆ ಆ (ಸ್ತೋಭಗಳೂ) ಸಾಮಾವಯವಸಂಬದ್ಧವಾಗಿವೆ ಎಂಬುದು ಸಮಾನವಾಗಿರುತ್ತದೆ.

## ಸ್ತೋಭಾಕ್ಷರಗಳ ಉಪಾಸನೆ

(ಉಪನಿಷತ್ತು)

**ಅಯಂ ವಾವ ಲೋಕೋ ಹಾಉಕಾರೋ ವಾಯುರ್ಹಾಇಕಾರಶ್ಚಂದ್ರಮಾ ಅಥಕಾರಃ । ಆತ್ಮೇಹಕಾರೋಽಗ್ನಿರೀಕಾರಃ ॥ ೧ ॥**

೧. ಈ ಲೋಕವೇ ಹಾಉಕಾರವು; ವಾಯುವು ಹಾಇಕಾರವು; ಚಂದ್ರನು ಅಥಕಾರವು; ಆತ್ಮನು ಇಹಕಾರವು; ಅಗ್ನಿಯು ಈಕಾರವು.

---

1. ಇತಿ ಎಂಬುದು ಉಪಾಸನೆಯು ಮುಗಿಯಿತು ಎಂಬುವನ್ನು ಸೂಚಿಸುತ್ತದೆ ಎಂದು ಟೀಕೆ. ವಾಕ್ಯಪೂರ್ತಿಯನ್ನೂ ಇದೇ ಮಾತು ಸೂಚಿಸುತ್ತದೆ.

2. ಸ್ತೋಭವೆಂದರೆ ಗಾನಕ್ಕಾಗಿ ಸಾಮವೇದಿಗಳು ಹಾಕಿಕೊಂಡಿರುವ ಅರ್ಥಶೂನ್ಯವಾದ ಅಕ್ಷರವಿಶೇಷ.

## ಹಾವುಕಾರಾದಿಪಂಚಸ್ತೋಭಗಳ ಉಪಾಸನೆ

(ಭಾಷ್ಯ)

೧೦೭ ಅಯಂ ವಾವ ಅಯಮೇವ ಲೋಕಃ ಹಾಉಕಾರಃ ಸ್ತೋಭಃ ರಥನ್ತರೇ ಸಾಮ್ನಿ ಪ್ರಸಿದ್ಧಃ । "ಇಯಂ ವೈ ರಥನ್ತರಮ್" (ತಾಂ ಬ್ರಾ. ೧೮-೬-೧೧) ಇತ್ಯಸ್ಮಾತ್ ಸಂಬನ್ಧಸಾಮಾನ್ಯಾತ್ ಹಾಉಕಾರಸ್ತೋಭೋಽಯಂ ಲೋಕಃ ಇತ್ಯೇವಮ್ ಉಪಾಸೀತ । ವಾಯುರ್ಹಾಇಕಾರಃ । ವಾಮದೇವ್ಯೇ ಸಾಮನಿ ಹಾಇಕಾರಃ ಪ್ರಸಿದ್ಧಃ । ವಾಯ್ವಪ್ಸಂಬನ್ಧಶ್ಚ ವಾಮದೇವ್ಯಸ್ಯ ಸಾಮ್ನೋ ಯೋನಿಃ ಇತ್ಯಸ್ಮಾತ್ ಸಾಮಾನ್ಯಾತ್ ಹಾಇಕಾರಂ ವಾಯುದೃಷ್ಟ್ಯಾ ಉಪಾಸೀತ । ಚನ್ದ್ರಮಾ ಅಥಕಾರಃ । ಚನ್ದ್ರದೃಷ್ಟ್ಯಾ ಅಥಕಾರಮುಪಾಸೀತ । ಅನ್ನೇ ಹಿ ಇದಂ ಸ್ಥಿತಮ್ । ಅನ್ನಾತ್ಮಾ ಚನ್ದ್ರಃ । ಥಕಾರಾಕಾರಸಾಮಾನ್ಯಾಚ್ಚ । ಆತ್ಮಾ ಇಹಕಾರಃ । ಇಹ ಇತಿ ಸ್ತೋಭಃ । ಪ್ರತ್ಯಕ್ಷೋ ಹಿ ಆತ್ಮಾ ಇಹ ಇತಿ ವ್ಯಪದಿಶ್ಯತೇ । ಇಹೇತಿ ಚ ಸ್ತೋಭಃ । ತತ್ಸಾಮಾನ್ಯಾತ್ । ಅಗ್ನಿರೀಕಾರಃ । ಈನಿಧನಾನಿ ಚ ಆಗ್ನೇಯಾನಿ ಸರ್ವಾಣಿ ಸಾಮಾನೀತ್ಯತಃ ತತ್ಸಾಮಾನ್ಯಾತ್ ॥

(ಭಾಷ್ಯಾರ್ಥ)

(ಅಯಂವಾವ-ಅಯಮೇವ) ಈ ಲೋಕವೇ **ಹಾಉಕಾರವು, ರಥಂತರ ಸಾಮದಲ್ಲಿ**[1] ಪ್ರಸಿದ್ಧವಾಗಿರುವ ಸ್ತೋಭವು. ಈ (ಭೂಮಿಯೇ) ರಥಂತರವು (ಎಂದು ಶ್ರುತಿಯಿದೆ) ಈ ಸಂಬಂಧದ ಸಾಮಾನ್ಯದಿಂದ[2] ಹಾಉಕಾರವೆಂಬ ಸ್ತೋಭವು ಈ ಲೋಕವು ಎಂದಿಂತು ಉಪಾಸನೆಮಾಡಬೇಕು[3] ವಾಯು **ಹಾಇಕಾರವು, ವಾಮದೇವ್ಯ ಸಾಮದಲ್ಲಿ ಹಾಇಕಾರವು** ಪ್ರಸಿದ್ಧವಾಗಿರುತ್ತದೆ ವಾಯು, ಅಪ್ಪು- ಇವುಗಳ ಸಂಬಂಧವೇ ವಾಮದೇವ್ಯಸಾಮಕ್ಕೆ ಕಾರಣವು[4] ಎಂಬೀ ಸಾಮಾನ್ಯದಿಂದ ಹಾಇಕಾರವನ್ನು ವಾಯುವೆಂಬ ದೃಷ್ಟಿಯಿಂದ ಉಪಾ

---

1 ಸಾಮಗಳ ಹೆಸರುಗಳನ್ನು ಕುರಿತು ಪರಿಶಿಷ್ಟದಲ್ಲಿ ವಿವರಣವನ್ನು ಕೊಟ್ಟಿದೆ

2. ರಥಂತರವನ್ನು ಭೂಮಿಯೆಂದು ಶ್ರುತಿಯಲ್ಲಿ ಕರೆದಿದೆ ; ರಥಂತರದಲ್ಲಿ ಹಾಉಕಾರವಿದೆ. ಹೀಗೆ ರಥಂತರಸಂಬಂಧವೆಂಬ ಹೋಲಿಕೆಯಿಂದ ಹಾಉಕಾರವನ್ನು ಭೂಮಿಯೆಂದು ಉಪಾಸನೆಮಾಡಬೇಕು ಎಂದರ್ಥ.

3 ಇಲ್ಲಿ ಕರ್ಮಾಂಗವಾಗಿರುವ ಸಾಮಸ್ತೋಭಗಳಲ್ಲಿ ಭೂಮಿ ಮುಂತಾದ ದೃಷ್ಟಿಯನ್ನಿಡಬೇಕೆಂದು ವಿಧಿಸಿದೆ.

4. ಮೈಥುನೇಚ್ಛೆಯುಳ್ಳ ಅಪ್ಪನ್ನು ವಾಯುವು ಹಿಂಗೂಡಿದ್ದರಿಂದ ವಾಮದೇವ್ಯ ಸಾಮವು ಉಂಟಾಯಿತೆಂದು ಶ್ರುತಿ. ಆ. ಗ್ರಿ. ಹಾಇಕಾರವು ವಾಮದೇವ್ಯದಲ್ಲಿರುವದರಿಂದಲೂ ವಾಮದೇವಕ್ಕೆ ವಾಯುಸಂಬಂಧವಿರುವದರಿಂದಲೂ ಈ ಸಂಬಂಧದ ಹೋಲಿಕೆಯಿಂದ ಹಾಇಕಾರವನ್ನು ವಾಯುವೆಂದು ಉಪಾಸನೆಮಾಡಬೇಕು ಎಂದು ಭಾವ.

ಸನೆಮಾಡಬೇಕು. ಚಂದ್ರನು **ಅಥಕಾರವು**, ಚಂದ್ರದೃಷ್ಟಿಯಿಂದ ಅಥಕಾರವನ್ನು ಉಪಾಸನೆಮಾಡಬೇಕು. ಅನ್ನದಲ್ಲಲ್ಲವೆ, ಇದು ಸ್ಥಿತವಾಗಿದೆ[1] ? ಚಂದ್ರನು ಅನ್ನಾತ್ಮನಾಗಿರುತ್ತಾನೆ[2]. ಥಕಾರ, ಅಕಾರ– ಇವು ಸಮಾನವಾಗಿರುವದರಿಂದಲೂ (ಹೀಗೆಂದು ಉಪಾಸನೆಮಾಡಬೇಕು)[3]. ಆತ್ಮನು **ಇಹಕಾರವು**. ಇಹ ಎಂಬುದು (ಒಂದು) ಸ್ತೋಭ(ದ ಹೆಸರು). ಪ್ರತ್ಯಕ್ಷನಾದ ಆತ್ಮನಲ್ಲವೆ, ಇಹ ಎನ್ನಿಸಿಕೊಳ್ಳುತ್ತಾನೆ? ಸ್ತೋಭವೂ ಇಹ (ಎನ್ನಿಸಿಕೊಂಡಿದೆ)[4]. ಈ ಸಾಮಾನ್ಯದಿಂದ (ಇಹಕಾರವು ಆತ್ಮನು ಎಂದು ಉಪಾಸನೆಮಾಡಬೇಕು). ಅಗ್ನಿಯು ಈಕಾರವು. **ಆಗ್ನೇಯಸಾಮಂ**ಗಳೆಲ್ಲವೂ ಈನಿಧನರಾಗಿರುತ್ತವೆ[5]. ಆದ್ದರಿಂದ (ಈಸ್ತೋಭವನ್ನು ಅಗ್ನಿ ಎಂದು ಉಪಾಸನೆಮಾಡಬೇಕು)

(ಉಪನಿಷತ್ತು)

**ಆದಿತ್ಯ ಊಕಾರೋ ನಿಹವ ಏಕಾರೋ ವಿಶ್ವೇದೇವಾ ಔಹೋಇಕಾರಃ ಪ್ರಜಾಪತಿರ್ಹಿಂಕಾರಃ ಪ್ರಾಣಃ ಸ್ವರೋಽನ್ನಂ ಯಾ ವಾಗ್ವಿರಾಟ್ ॥ ೨॥**

೨. ಆದಿತ್ಯನು ಊಕಾರವು ; ನಿಹವವು ಏಕಾರವು ; ವಿಶ್ವೇದೇವತೆಗಳು ಔಹೋಇಕಾರವು ; ಪ್ರಜಾಪತಿಯು ಹಿಂಕಾರವು ; ಅನ್ನವು ಯಾ ; ವಾಕ್ಕು ವಿರಾಜನು.

## ಊಕಾರಾದಿಸ್ತೋಭಗಳ ಉಪಾಸನೆ

(ಭಾಷ್ಯ)

೧೦೮. ಆದಿತ್ಯಃ ಊಕಾರಃ। **ಉಚ್ಚೈರೂರ್ಧ್ವಂ** ಸನ್ತಮ್ ಆದಿತ್ಯಂ ಗಾಯನ್ತಿ[6] । ಊಕಾರಶ್ಚಾಯಂ ಸ್ತೋಭಃ। ಆದಿತ್ಯದೈವತ್ಯೇ ವಾ[7] ಸಾಮ್ನಿ

1 ಇದೆಲ್ಲವೂ ಅನ್ನದಲ್ಲಿ ಸ್ಥಿತವಾಗಿವೆ, ಅನ್ನವನ್ನಾಶ್ರಯಿಸಿಕೊಂಡು ಇರುತ್ತದೆ.

2 ಚಂದ್ರನು ಸಸ್ಯಗಳಿಗೆ ಪತಿಯಾದ್ದರಿಂದ ಅನ್ನಾತ್ಮಕನು, ಅಥವಾ ಆದಿತ್ಯ, ಚಂದ್ರ– ಇವರು ಅತ್ತೃ, ಅನ್ನ– ಇವುಗಳ ಸ್ವರೂಪವೆಂದು ಶ್ರುತಿಪ್ರಸಿದ್ಧಿ.

3. ಥಕಾರವು ಸ್ಥಿತವೆಂಬ ಮಾತಿನಲ್ಲಿಯೂ ಅಥಕಾರದಲ್ಲಿಯೂ ಇವೆ; ಅಕಾರವು ಅನ್ನವಾಗಿರುವ ಚಂದ್ರನಲ್ಲಿಯೂ ಅಥಕಾರದಲ್ಲಿಯೂ ಇದೆ. ಈ ಹೋಲಿಕೆಯಿಂದ ಎಂದು ಆ. ಗಿ.

4. ಮೊದಲು ಅಪ್ರತ್ಯಕ್ಷನಾಗಿದ್ದು ಆಬಳಿಕ ಪ್ರತ್ಯಕ್ಷನಾದವನನ್ನು ಇಹ ಎನ್ನುತ್ತಾರೆ ಎಂದು ಆ ಗಿ. ಎಲ್ಲಕ್ಕಿಂತಲೂ ಪ್ರತ್ಯಕ್ಷನಾಗಿರುವದರಿಂದ ಆತ್ಮನು ಇಹ ಎನ್ನಿಸಿಕೊಳ್ಳುವದಕ್ಕೆ ತಕ್ಕವನು. "ಇಹೈವ ಖಲು" ಎಂದು ಪ್ರ. ಶ್ರುತಿ; ಸ್ತೋಭವೂ ಇಹ ಎನ್ನಿಸಿಕೊಂಡಿದೆ. ಆದ್ದರಿಂದ ಎಂದು ಹೋಲಿಕೆಯನ್ನು ಇಲ್ಲಿ ಹೇಳಿದೆ ಎಂದು ತೋರುತ್ತದೆ.

5. ಈಕಾರದಲ್ಲಿ ಕೊನೆಗಂಡಿವೆ

6. ಇದರ ಮುಂದಿನ ಇತಿ ಬೇಡವೆಂದು ಬಿಟ್ಟಿದೆ.

7. ವಾ ಇಲ್ಲದ ಪಾಠಕ್ಕಿಂತ ಇದು ಮೇಲು.

ಸ್ತೋಭಃ ಇತಿ ಆದಿತ್ಯ ಊಕಾರಃ। ನಿಹವಃ ಇತ್ಯಾಹ್ವಾನಮ್। ಏಕಾರಃ ಸ್ತೋಭಃ। ಏಹಿ ಇತಿ ಚ ಆಹ್ವಯನ್ತೀತಿ ತತ್ಸಾಮಾನ್ಯಾತ್ ವಿಶ್ವೇದೇವಾ ಔಹೋಇ[1]ಕಾರಃ। ವೈಶ್ವದೇವ್ಯೇ ಸಾಮ್ನಿ ಸ್ತೋಭಸ್ಯ ದರ್ಶನಾತ್। ಪ್ರಜಾಪತಿರ್ಹಿಂಕಾರಃ। ಅನಿರುಕ್ತತ್ವಾತ್। ಹಿಂಕಾರಸ್ಯ ಚ ಅವ್ಯಕ್ತತ್ವಾತ್। ಪ್ರಾಣಃ ಸ್ವರಃ। ಸ್ವರ ಇತಿ ಸ್ತೋಭಃ। ಪ್ರಾಣಸ್ಯ ಚ ಸ್ವರಹೇತುತ್ವಸಾಮಾನ್ಯಾತ್। ಅನ್ನಂ ಯಾ। ಯಾ ಇತಿ ಸ್ತೋಭೋಽನ್ನಮ್। ಅನ್ನೇನ ಹಿ ಇದಂ ಯಾತಿ ಇತ್ಯತಃ ತತ್ಸಾಮಾನ್ಯಾತ್। ವಾಗಿತಿ ಸ್ತೋಭೋ ವಿರಾಟ್। ಅನ್ನಂ ದೇವತಾವಿಶೇಷೋ ವಾ। ವೈರಾಜೇ ಸಾಮ್ನಿ ಸ್ತೋಭದರ್ಶನಾತ್॥

(ಭಾಷ್ಯಾರ್ಥ)

ಆದಿತ್ಯನು ಊಕಾರವು ಮೇಲುಗಡೆ ಇರುವ ಆದಿತ್ಯನನ್ನು ಉಚ್ಚನಾಗಿ ಗಾನಮಾಡುತ್ತಾರೆ ಈ ಸ್ತೋಭವೂ ಊಕಾರವಾಗಿದೆ ಅಥವಾ ಆದಿತ್ಯದೇವತಾಕವಾದ ಸಾಮದಲ್ಲಿ (ಈ) ಸ್ತೋಭವು (ಇದೆ)ಯಾದ್ದರಿಂದ ಆದಿತ್ಯನು ಊಕಾರವು[2] ನಿಹವ ಎಂದರೆ ಕರೆಯುವುದು, ಏಕಾರವು ಸ್ತೋಭವು. ಏಹಿ (!) (ಬಾ!) ಎಂದು ಕರೆಯುತ್ತಾರಾದ್ದರಿಂದ ಆ ಸಾದೃಶ್ಯದಿಂದ (ಸ್ತೋಭವನ್ನು ನಿಹವ ಎಂದು ಉಪಾಸನೆಮಾಡಬೇಕು) ವಿಶ್ವೇದೇವತೆಗಳು ಔಹೋಇಕಾರವು, ಏಕೆಂದರೆ ವೈಶ್ವದೇವ್ಯಸಾಮದಲ್ಲಿ (ಈ) ಸ್ತೋಭವು ಕಾಣಬರುತ್ತದೆ ಪ್ರಜಾಪತಿಯು ಹಿಂಕಾರವು ಏಕೆಂದರೆ (ಅವನು) ಅನಿರುಕ್ತನಾಗಿರುತ್ತಾನೆ[3] ಹಿಂಕಾರವೂ ಅವ್ಯಕ್ತವಾಗಿರುತ್ತದೆ[4] ಪ್ರಾಣವು ಸ್ವರವು ಸ್ವರ ಎಂಬುದು (ಒಂದು) ಸ್ತೋಭವು, ಪ್ರಾಣನೂ ಸ್ವರಕ್ಕೆ ಕಾರಣವಾಗಿರುತ್ತಾನೆಂಬ ಹೋಲಿಕೆಯಿಂದ[5] (ಸ್ತೋಭವನ್ನು ಸ್ವರವೆಂದು ಉಪಾಸನೆಮಾಡಬೇಕು) ಅನ್ನವು ಯಾ. ಯಾ ಎಂಬ ಸ್ತೋಭವು ಅನ್ನ(ವು ಎಂದು ಉಪಾಸನೆಮಾಡಬೇಕು) ಅನ್ನದಿಂದಲೇ ಅಲ್ಲವೆ, ಈ ಜಗತ್ತು (ಯಾತಿ=) ಹೋಗುತ್ತಿದೆ? ಆದ್ದರಿಂದ ಈ ಸಾಮಾನ್ಯರಿಂದ (ಹೀಗೆಂದು ಉಪಾಸನೆಮಾಡಬೇಕು) ವಾಕ್ ಎಂಬ ಸ್ತೋಭವು ವಿರಾಜ (ಎಂದರೆ) ಅನ್ನವು, ಅಥವಾ ದೇವತಾವಿಶೇಷವು (ವಿರಾಟ್ಪುರುಷನು ಎಂದು ಉಪಾಸನೆಮಾಡಬೇಕು). ಏಕೆಂದರೆ ವೈರಾಜಸಾಮದಲ್ಲಿ (ಈ) ಸ್ತೋಭವು ಕಾಣಬರುತ್ತದೆ.

---

1. "ಔಹೋಯಿ" ಎಂದೂ ಪಾಠ.

2. ಊಕಾರಸ್ತೋಭವನ್ನು ಆದಿತ್ಯನೆಂದು ಉಪಾಸನೆಮಾಡಬೇಕು.

3. ಕಪ್ಪು, ಹಸರು- ಎಂದು ಮುಂತಾಗಿ ಗೊತ್ತುಪಡಿಸಿ ಹೇಳಲಾಗದ್ದರಿಂದ ಎಂದು ಟೀಕೆ. ಸಮಷ್ಟಿರೂಪನಾದ್ದರಿಂದ ಒಂದು ವಸ್ತುವನ್ನು ಮತ್ತೊಂದರಿಂದ ಬಿಡಿಸಿ ಗೊತ್ತುಪಡಿಸುವಂತೆ ವಿಂಗಡಿಸಿ ತಿಳಿಸಲಿಕ್ಕಾಗದವನು ಎಂದೂ ವಿವರಿಸಬಹುದು.

4. ಹಿಂ ಎಂಬುದು ವ್ಯಕ್ತವಾಗಿ ಉಚ್ಚರಿಸುವ ಸ್ತೋಭವಲ್ಲ.

5. ಪ್ರಾಣನ ಬಲದಿಂದಲೇ ಸ್ವರವು ಕೇಳಿಸುವಂತೆ ಆಗುತ್ತದೆ.

(ಉಪನಿಷತ್ತು)

**ಅನಿರುಕ್ತಸ್ತ್ರಯೋದಶಃ ಸ್ತೋಭಃ ಸಂಚರೋ ಹುಂಕಾರಃ ॥೩॥**

೩. ಹದಿಮೂರನೆಯದಾದ ಹುಂಕಾರವು ಸಂಚರವಾದ ಅನಿರುಕ್ತವು.

## ಹುಂಕಾರದ ಉಪಾಸನೆ

(ಭಾಷ್ಯ)

೧೧೯. ಅನಿರುಕ್ತಃ ಅವ್ಯಕ್ತತ್ವಾತ್ ಇದಂ ಚ ಇದಂ ಚ ಇತಿ ನಿರ್ವಕ್ತುಂ ನ ಶಕ್ಯತ ಇತ್ಯತಃ ಸಂಚರಃ ವಿಕಲ್ಪ್ಯಮಾನಸ್ವರೂಪಃ ಇತ್ಯರ್ಥಃ। ಕೋಽಸೌ ಇತಿ ? ಆಹ। ತ್ರಯೋದಶಃ ಸ್ತೋಭ ಹುಂಕಾರಃ। ಅವ್ಯಕ್ತೋ ಹಿ ಅಯಮ್। ಅತೋಽನಿರುಕ್ತವಿಶೇಷ ಏವ ಉಪಾಸ್ಯ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅನಿರುಕ್ತವು, ಎಂದರೆ ಅವ್ಯಕ್ತವಾಗಿರುವದರಿಂದ ಇದೂ ಇದೂ ಎಂದು ನಿರ್ವಚನಮಾಡುವದಕ್ಕೆ ಆಗದಂಥದ್ದು, ಆದ್ದರಿಂದ ಸಂಚರವು, (ಎರಡು ಬಗೆಯಾಗಿ) ವಿಕಲ್ಪಿಸಬಹುದಾದ[1] ಸ್ವರೂಪವುಳ್ಳದ್ದು ಎಂದರ್ಥ. ಅದು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ ಹದಿಮೂರನೆಯ ಸ್ತೋಭವಾದ[2] ಹುಂಕಾರವು. ಅದು ಅವ್ಯಕ್ತವಲ್ಲವೆ ? ಆದ್ದರಿಂದ ಅದನ್ನು ಇಂಥದ್ದೆಂದು ನಿರ್ವಚನಮಾಡದ ಸ್ವರೂಪದಿಂದಲೇ ಉಪಾಸನೆಮಾಡಬೇಕು[3] ಎಂದು ಅಭಿಪ್ರಾಯ.

## ಸ್ತೋಭಾಕ್ಷರೋಪಾಸನೆಯ ಫಲ

(ಉಪನಿಷತ್ತು)

**ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನನ್ನಾದೋ ಭವತಿ ಯ ಏತಾಮೇವಗ್ಂ ಸಾಮ್ನಾಮುಪನಿಷದಂ ವೇದೋಪನಿಷದಂ ವೇದ ॥ ೪ ॥**

---

1. ಹುಂಕಾರೋ ಹುಕಾರೋ ವಾ —ಎಂದು ಇದಕ್ಕೆ ಶಾಖಾಭೇದದಿಂದ ವಿಕಲ್ಪಿತ ರೂಪಗಳಿವೆ.

2 ಇದುವರೆಗೆ ಹನ್ನೆರಡು ಸ್ತೋಭಗಳನ್ನು ಹೇಳಿರುವದರಿಂದ ಇದು ಹದಿಮೂರನೆಯದು

3. ಅನಿರುಕ್ತವು ಕಾರಣಾತ್ಮನು ಎಂದು ಈ ಸ್ತೋಭವನ್ನು ಉಪಾಸನೆಮಾಡಬೇಕು, ಏಕೆಂದರೆ ಈ ಸ್ತೋಭವೂ ಶಾಖಾಭೇದದಿಂದ ಬಗೆಬಗೆಯಾಗಿ ವಿಕಲ್ಪಿತವಾಗಿರುತ್ತದೆ ಎಂಬ ಹೋಲಿಕೆಯಿದೆ ಎಂದು ಟೀಕೆ.

೪. ಯಾವನು ಹೀಗೆಂದು ಈ ಸಾಮಗಳ ಉಪನಿಷತ್ತನ್ನು ಅರಿತುಕೊಳ್ಳುವನೋ, ಉಪನಿಷತ್ತನ್ನು ಅರಿತುಕೊಳ್ಳುವನೋ, ಅವನಿಗೆ ವಾಕ್ಕು, ವಾಕ್ಕಿನ ದೋಹವಿದೆಯಲ್ಲ, ಅದನ್ನು ಕರೆಯುವದು. ಅನ್ನವಂತನೂ ಅನ್ನಾದನೂ ಆಗುವನು.

## ಒಟ್ಟು ಉಪಾಸನೆಗೆ ಫಲ

(ಭಾಷ್ಯ)

೧೧೦ ಸ್ತೋಭಾಕ್ಷರೋಪಾಸನಾಫಲಮ್ ಆಹ । ದುಗ್ಧೇಽಸ್ಮೈ ವಾಗ್ದೋಹಮ್ ಇತ್ಯಾದಿ ಉಕ್ತಾರ್ಥಮ್ । ಯ ಏತಾಮೇವಂ ಯಥೋಕ್ತಲಕ್ಷಣಾಂ ಸಾಮ್ನಾಂ ಸಾಮಾವಯವಸ್ತೋಭಾಕ್ಷರವಿಷಯಾಮ್ ಉಪನಿಷದಂ ದರ್ಶನಂ ವೇದ, ತಸ್ಯೈತದ್ ಯಥೋಕ್ತಂ ಫಲಮ್ ಇತ್ಯರ್ಥಃ । ದ್ವಿರಭ್ಯಾಸಃ ಅಧ್ಯಾಯಪರಿಸಮಾಪ್ತ್ಯರ್ಥಃ । ಸಾಮಾವಯವವಿಷಯೋಪಾಸನಾವಿಶೇಷಪರಿಸಮಾಪ್ತ್ಯರ್ಥೋ ವಾ[1] । ಇತಿ ॥

(ಭಾಷಾರ್ಥ)

ಸ್ತೋಭಾಕ್ಷರಗಳ ಉಪಾಸನೆಯ ಫಲವನ್ನು (ಶ್ರುತಿ) ಹೇಳುತ್ತಿದೆ. "ಅವನಿಗೆ ವಾಕ್ಕು ವಾಕ್ಕಿನ ದೋಹವಿದೆಯಲ್ಲ (ಅದನ್ನು) ಕರೆಯುವದು" ಎಂದು ಮುಂತಾಗಿರುವದರ ಅರ್ಥವನ್ನು ಹಿಂದೆ (೧-೩-೭ರಲ್ಲಿ) ಹೇಳಿರುತ್ತದೆ ಯಾವನು ಈ (ವರೆಗೆ) ಹೇಳಿರುವ ಲಕ್ಷಣದ, ಸಾಮಗಳ ಎಂದರೆ ಸಾಮಾವಯವವಾದ ಸ್ತೋಭಾಕ್ಷರಗಳ ವಿಷಯವಾದ, ಉಪನಿಷತ್ತನ್ನು ಎಂದರೆ ಉಪಾಸನೆಯನ್ನು ಅರಿತುಕೊಳ್ಳುವನೋ, ಅವನಿಗೆ ಈ ಮೇಲೆ ಹೇಳಿರುವ ಫಲವು (ಆಗುವದು) ಎಂದರ್ಥ

(ಉಪನಿಷದಂ ವೇದ, ಉಪನಿಷದಂ ವೇದ ಎಂದು) ಎರಡು ಸಲ ಮತ್ತೆ ಹೇಳಿರುವದು ಅಧ್ಯಾಯವು ಮುಗಿಯಿತೆಂಬುದಕ್ಕೆ ಅಥವಾ ಸಾಮಾವಯವ ವಿಶೇಷವಿಷಯವಾದ ಉಪಾಸನಾವಿಶೇಷವು ಮುಗಿಯಿತೆಂಬುದಕ್ಕೆ[2].

---

1. ಇಲ್ಲಿ ಉಪನಿಷನ್ಮೂಲದಲ್ಲಿ "ವೇದೇತಿ" ಎಂದೂ ಭಾಷ್ಯದಲ್ಲಿ "ಸಮಾಪ್ತ್ಯರ್ಥ ಇತಿಶಬ್ದಃ" ಎಂದೂ ವಾ॥ ತೆ॥ ಪಾಠ. ಅನುವಾದದ ಟಿಪ್ಪಣಿಯನ್ನು ನೋಡಿ.

2. ಇತಿಶಬ್ದವಿರುವ ಮೂಲವನ್ನಿಟ್ಟುಕೊಂಡರೆ ಉಪಾಸನೆಯು ಮುಗಿಯಿತೆಂಬುದಕ್ಕೆ ಇತಿಶಬ್ದವು ಬಂದಿದೆ ಎಂದರ್ಥಮಾಡಬೇಕಾಗುವದು ; ಆದರೆ ಆ ಪಕ್ಷದಲ್ಲಿ ಅಧ್ಯಾಯವನ್ನು ಮುಗಿಸಿದಮೇಲೆ ಉಪಾಸನಾಸಮಾಪ್ತಿಯನ್ನು ಸೂಚಿಸಿದ್ದು ಅಷ್ಟು ಸಮಂಜಸವಾಗುವದಿಲ್ಲ.

# ಒಂದನೆಯ ಅಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಮುಖ್ಯವಾಗಿ ಉದ್ಗೀಥಾವಯವವಾದ ಓಂಕಾರದ ಉಪಾಸನೆಗಳೂ ಸ್ತೋಭಗಳ ಉಪಾಸನೆಗಳೂ ಇರುತ್ತವೆ. ಇಲ್ಲಿರುವ ಸಂಖ್ಯೆಗಳು ಕ್ರಮವಾಗಿ ಖಂಡ, ಕಂಡಿಕೆ- ಇವನ್ನು ಸೂಚಿಸುವವು.

## ಒಂದನೆಯ ಖಂಡ

೧-೮. ಪೃಥ್ವಿ, ಅಪ್ಪು, ಸಸ್ಯಗಳು, ಪುರುಷ, ವಾಕ್ಕು, ಋಕ್ಕು, ಸಾಮ, ಉದ್ಗೀಥ- ಇವುಗಳಲ್ಲಿ ಹಿಂದಿನದರ ರಸವು ಮುಂದಿನದು ; ಆದ್ದರಿಂದ ಉದ್ಗೀಥವು, ಎಂದರೆ ಅದರ ಅವಯವವಾದ ಓಂಕಾರವು ರಸಗಳಲ್ಲೆಲ್ಲ ರಸತಮವು, ವಾಕ್ಕೆಂಬ ಋಕ್ಕಾರಣ, ಪ್ರಾಣ ವೆಂಬ ಸಾಮಕಾರಣ - ಇವೆರಡೂ ಸೇರಿದ ಮಿಥುನವು ಓಂಕಾರದಲ್ಲಿ ಸೇರಿಕೊಂಡಿರುತ್ತವೆ. ದಂಪತಿಗಳು ಕೂಟದಿಂದ ತಮ್ಮ ತಮ್ಮ ಕಾಮವನ್ನು ಪಡೆಯುವಂತೆ, ಓಂಕಾರವು ಆಪ್ತಿ ಗುಣವುಳ್ಳದ್ದೆಂದು ಉಪಾಸನೆಮಾಡಿದಾತನಿಗೂ ಕಾಮಗಳ ಆಪ್ತಿಯಾಗುವದು. ಓಂಕಾರವು ಅನುಜ್ಞಾಕ್ಷರವಾಗಿರುವದರಿಂದ ಸಮೃದ್ಧಿಗುಣವುಳ್ಳದ್ದೂ ಆಗಿದೆ.

೯-೧೦. ವೇದೋಕ್ತಕರ್ಮವೆಲ್ಲವೂ ಓಂಕಾರಪೂರ್ವಕವಾಗಿಯೇ ನಡೆಯುತ್ತದೆ ; ಕರ್ಮದಲ್ಲಿರುವ ಋತ್ವಿಗ್ಯಜಮಾನರೇ ಮುಂತಾದವರು ಇದರ ಮಹಿಮೆ, ವ್ರೀಹಿಯವಾದಿಗಳು ಇದರ ರಸವು. ಆದ್ದರಿಂದ ಕರ್ಮವು ಸಫಲವಾಗುತ್ತದೆ. ಈ ಅಕ್ಷರದ ರಸತಮತ್ವ, ಆಪ್ತಿ, ಸಮೃದ್ಧಿ - ಎಂಬ ಗುಣಗಳೆಂಬ ಗುಣಗಳನ್ನು ಅರಿತುಕೊಂಡು ಕರ್ಮವನ್ನು ಮಾಡುವವನ ಕರ್ಮವು ಸಾಮಾನ್ಯರ ಕರ್ಮಕ್ಕಿಂತಲೂ ವೀರ್ಯವತ್ತರವಾಗುವದು.

## ಎರಡನೆಯ ಖಂಡ

೧-೭. ದೇವಾಸುರರ ಸಂಗ್ರಾಮದಲ್ಲಿ ದೇವತೆಗಳು ಜ್ಯೋತಿಷ್ಟೋಮಾದಿಕರ್ಮದಲ್ಲಿ ಬರುವ ಔದ್ಗಾತ್ರಕರ್ಮವನ್ನು ಸ್ವೀಕರಿಸಿದರು. ಅವರು ಅನುಕ್ರಮದಿಂದ ಘ್ರಾಣ, ವಾಕ್ಕು, ಚಕ್ಷು, ಶ್ರೋತ್ರ, ಮನಸ್ಸು - ಈ ಮುಂತಾದ ದೇವತೆಗಳ ದೃಷ್ಟಿಯಿಂದ ಉದ್ಗೀಥಾವಯವ ವಾದ ಓಂಕಾರವನ್ನು ಉಪಾಸನೆಮಾಡಿದರು ; ಆದರೆ ಅಸುರರು ಆ ದೇವತೆಗಳನ್ನು ಅಧರ್ಮಾ ಸಂಗರೂಪವಾದ ಪಾಪಸಂಬದ್ಧರಾಗಿಮಾಡಿದರು. ಆಗ ದೇವತೆಗಳು ಆ ಘ್ರಾಣಾದಿದೇವತೆ ಗಳನ್ನು ಕೈಬಿಟ್ಟು ಮುಖ್ಯಪ್ರಾಣದೃಷ್ಟಿಯಿಂದಲೇ ಓಂಕಾರವನ್ನು ಉಪಾಸನೆಮಾಡಿದರು. ಅಸುರರು ಆ ಪ್ರಾಣನಮೇಲೆ ಬೀಳುವದಕ್ಕೆ ಯತ್ನಿಸುತ್ತಿರುವಲ್ಲಿ ಕಲ್ಲುಬಂಡೆಯಮೇಲೆ ಬಿದ್ದ ಮಣ್ಣುಹೆಂಟೆಯಂತೆ ಪುಡಿಪುಡಿಯಾದರು.

೮-೯. ಆದ್ದರಿಂದ ಯಾವನು ಉದ್ಗೀಥೋಂಕಾರವನ್ನು ಪ್ರಾಣದೃಷ್ಟಿಯಿಂದ ಉಪಾ ಸನೆಮಾಡುವನೋ ಅವನ ವಿಷಯದಲ್ಲಿ ಕೆಟ್ಟದ್ದನ್ನಾಚರಿಸುವದಕ್ಕೆ ಹೋಗುವವನು ಕಲ್ಲು

ಬಂಡೆಯ ಮೇಲೆ ಬೀಳುವ ಮಣ್ಣುಹೆಂಟೆಯಂತೆ ವಿಧ್ವಸ್ತನಾಗುವನು. ಮುಖ್ಯಪ್ರಾಣನು ಯಾವ ಪಾಪಸಂಬಂಧವೂ ಇಲ್ಲದವನು, ತಾನು ತಿಂದು ಕುಡಿಯುವದರಿಂದಲೇ ಮಿಕ್ಕ ಪ್ರಾಣಗಳನ್ನು ಕಾಪಾಡುತ್ತಾನೆ.

೧೦-೧೪. ಈ ಮುಖ್ಯಪ್ರಾಣನನ್ನು ಅಂಗಿರಸ್ಸೆಂದು ಋಷಿಯು ಅಂಗಿರಸನು – ಅಂಗಗಳ ರಸವುಳ್ಳವನು – ಎಂಬ ಗುಣದಿಂದ ಕೂಡಿದವನೆಂದೂ, ಬೃಹಸ್ಪತಿಯು – ಬೃಹಸ್ಪತಿ, ದೊಡ್ಡದಾದ ವಾಕ್ಕಿನ ಪತಿ – ಎಂಬ ಗುಣದಿಂದ ಕೂಡಿದವನೆಂದೂ ಆಯಾಸ್ಯನು ಆಸ್ಯದಿಂದ ಬರುವವನು – ಎಂಬ ಗುಣದಿಂದ ಕೂಡಿದವನೆಂದೂ ಉಪಾಸನೆಮಾಡಿದನು. ಆದ್ದರಿಂದ ಪ್ರಾಣನಿಗೆ ಅಂಗಿರಸತ್ವಾದಿಗುಣಗಳಿರುವವೆಂದು ತಿಳಿಯಬೇಕು. ಬಕದಾಲ್ಭ್ಯನೆಂಬ ಋಷಿಯು ಮೇಲೆ ಹೇಳಿದಂಥ ಪ್ರಾಣವನ್ನು ಉಪಾಸನೆಮಾಡಿದ್ದರಿಂದ ನೈಮಿಷೀಯರಿಗೆ ಉದ್ಗಾತೃವಾಗಿದ್ದಾಗ ಅವರ ಕಾಮಗಳನ್ನೆಲ್ಲ ಆಗಾನಮಾಡಿಕೊಟ್ಟನು. ಹೀಗೆಂದೇ ಈ ಗುಣಗಳಿಂದೊಡಗೂಡಿ ಪ್ರಾಣನೆಂಬ ದೃಷ್ಟಿಯಿಂದ ಉದ್ಗೀಥೋಂಕಾರವನ್ನು ಯಾವನು ಉಪಾಸನೆಮಾಡುವನೋ ಅವನು ಕಾಮಗಳನ್ನು ಗಾನಮಾಡಬಲ್ಲವನಾಗುವನು, ಅವನಿಗೆ ಪ್ರಾಣಾತ್ಮಭಾವವೆಂಬ ಅದೃಷ್ಟಫಲವೂ ಆಗುವದು

ಇಲ್ಲಿಯವರೆಗೆ ಹೇಳಿದ್ದು ಅಧ್ಯಾತ್ಮವಾದ ಉದ್ಗೀಥೋಪಾಸನೆ

## ಮೂರನೆಯ ಖಂಡ

೧-೫. ಇನ್ನು ಅಧಿದೈವತವಾದ ಉದ್ಗೀಥೋಪಾಸನೆಯನ್ನು ಹೇಳಲಾಗುವದು.

ಆದಿತ್ಯದೃಷ್ಟಿಯಿಂದ ಉಪಾಸನೆಮಾಡಿದರೆ ಸಂಸಾರಭಯವೂ ಅದಕ್ಕೆ ಕಾರಣವಾದ ತಮಸ್ಸೂ ತೊಲಗುವವು. ಪ್ರಾಣನೂ ಆದಿತ್ಯನೂ ಉಷ್ಣಗುಣದಿಂದಲೂ ಸ್ವರ, ಪ್ರತ್ಯಾಸ್ವರ – ಎಂಬ ನಾಮದಿಂದಲೂ ಸಮಾನರಾಗಿರುತ್ತಾರೆ, ಆದ್ದರಿಂದ ಅವರಿಬ್ಬರ ದೃಷ್ಟಿಯಿಂದಲೂ ಉದ್ಗೀಥವನ್ನು ಉಪಾಸನೆಮಾಡಬೇಕು. ಪ್ರಾಣವೃತ್ತಿಯಾದ ವ್ಯಾನದ ದೃಷ್ಟಿಯಿಂದಲೂ ಉದ್ಗೀಥವನ್ನು ಉಪಾಸನೆಮಾಡಬೇಕು, ಏಕೆಂದರೆ ವ್ಯಾನದಿಂದಲೇ ವಾಕ್ಕನ್ನು ನಾವು ಉಚ್ಚಾರಣೆಮಾಡುತ್ತಾರೆ, ವೀರ್ಯವತ್ಕರ್ಮಗಳನ್ನು ಅದರಿಂದಲೇ ಮಾಡುತ್ತಾರೆ. ಈ ಉಪಾಸನೆಯಿಂದ ಕರ್ಮವು ವೀರ್ಯವತ್ತರವಾಗುವದು

೬-೭. ಇನ್ನು ಉದ್ಗೀಥವೆಂಬ ಹೆಸರಿನ ಅಕ್ಷರಗಳನ್ನು ಹೀಗೆ ಉಪಾಸನೆಮಾಡಬೇಕು. ಪ್ರಾಣದಿಂದ (ಉತ್ತಿಷ್ಠತಿ) ಮನುಷ್ಯನು ಮೇಲಕ್ಕೇಳುತ್ತಾನಾದ್ದರಿಂದ ಉತ್ ಎಂಬುದನ್ನು ಪ್ರಾಣನೆಂದು, ವಾಕ್ಕನ್ನು ಗಿರಃ ಎಂದು ಕರೆಯುವದರಿಂದ ಗೀ ಎಂಬುದನ್ನು ವಾಕ್ಕೆಂದು, ಅನ್ನದಲ್ಲಿ ಎಲ್ಲವೂ ಸ್ಥಿತವಾಗಿ (ಆಶ್ರಯಿಸಿರುವವಾಗಿ)ರುವದರಿಂದ ಥ ಎಂಬುದನ್ನು ಅನ್ನವೆಂದು ಉಪಾಸನೆಮಾಡಬೇಕು. ಇದರಂತೆ ಉತ್ತನ್ನು ದ್ಯುಲೋಕವೆಂದೂ ಗೀ ಎಂಬುದನ್ನು ಪೃಥಿವಿಯೆಂದೂ ಥ ಎಂಬುದನ್ನು ಆದಿತ್ಯನೆಂದೂ – ಉಪಾಸನೆಮಾಡಿದರೆ ವಾಗ್ದೋಹವನ್ನು ಎಂದರೆ ಋಗ್ವೇದಾದಿಶಬ್ದಸಾಧ್ಯವಾದ ಫಲವನ್ನು ವಾಕ್ಕು ಕೊಡುವದಲ್ಲದೆ ಉಪಾಸಕನು ಅನ್ನವಂತನೂ ಅನ್ನಾದನೂ ಆಗುವನು.

೮-೧೨. ಇನ್ನು ಕಾಮಸಮೃದ್ಧಿಗೆ ಮಾಡಬೇಕಾದದ್ದಿದು. ಯಾವ ಸಾಮದಿಂದ ಸ್ತೋತ್ರಮಾಡಲಿರುವನೋ ಆ ಸಾಮವನ್ನು ಚಿಂತಿಸಬೇಕು, ಯಾವ ಛಂದಸ್ಸಿನಿಂದ ಸ್ತೋತ್ರ

ಮಾಡಲಿರುವನೋ, ಯಾವ ಸ್ತೋಮದಿಂದ ಸ್ತೋತ್ರಮಾಡಲಿರುವನೋ ಆ ಛಂದಸ್ಸನ್ನೂ ಆ ಸ್ತೋಮವನ್ನೂ ಚಿಂತಿಸಬೇಕು, ಯಾವ ದಿಕ್ಕಿಗೆ ಸ್ತೋತ್ರಮಾಡಲಿರುವನೋ ಆ ದಿಕ್ಕನ್ನು ಚಿಂತಿಸಿಕೊಳ್ಳಬೇಕು ಕೊನೆಗೆ ತನ್ನನ್ನು ಗೋತ್ರನಾಮಾದಿಗಳಿಂದ ಚಿಂತಿಸಿಕೊಂಡು ತನ್ನ ಕಾಮವನ್ನು ನೆನಸಿಕೊಳ್ಳುತ್ತಾ ಸ್ತೋತ್ರಮಾಡಬೇಕು. ಯಾವ ಕಾಮವುಳ್ಳವನಾಗಿ ಸ್ತೋತ್ರ ಮಾಡುವನೋ ಆ ಕಾಮವು ಸಮೃದ್ಧವಾಗುವದು

## ನಾಲ್ಕನೆಯ ಖಂಡ

೧-೩ ದೇವತೆಗಳು ಮೃತ್ಯುವಿಗೆ ಅಂಜಿಕೊಂಡು ವೈದಿಕಕರ್ಮಗಳನ್ನು ಹೊಕ್ಕು ಬೇರೆ ಮಂತ್ರಗಳಿಂದಲೂ ತಮ್ಮನ್ನು ಆಚ್ಛಾದನೆಮಾಡಿಕೊಂಡರು, ಆದ್ದರಿಂದಲೇ ಆ ಮಂತ್ರಗಳು ಛಂದಸ್ಸು ಎಂಬ ಹೆಸರಿನಿಂದ ಪ್ರಸಿದ್ಧವಾದವು. ಮೃತ್ಯುವು ಋಗ್ಯಜುಃಸಾಮಗಳಲ್ಲಿ ಅವರಿರುವದನ್ನು ಕಂಡುಹಿಡಿದುಕೊಂಡನು, ಆದ್ದರಿಂದ ಅವರು ಕರ್ಮವನ್ನು ಬಿಟ್ಟು ಓಂಕಾರೋಪಾಸನೆಯನ್ನು ಕೈಕೊಂಡರು ಋಗ್ಯಜುಃಸಾಮಗಳನ್ನು ಪಠಿಸುಕೊಳ್ಳುವಾಗ ಓಂಕಾರವನ್ನೇ ಉಚ್ಚರಿಸುತ್ತಾರಲ್ಲವೆ? ಈ ಓಂಕಾರವು ಅಮೃತವೂ ಅಭಯವೂ ಆಗಿರುತ್ತದೆ, ಆದ್ದರಿಂದ ಇದನ್ನು ಪ್ರವೇಶಿಸಿದ ದೇವತೆಗಳೂ ಅಮೃತರೂ ಅಭಯರೂ ಆದರು

೫ ಈ ಗುಣಗಳಿಂದ ಕೂಡಿದ್ದೆಂದು ಯಾವನು ಈ ಅಕ್ಷರವನ್ನು ಉಪಾಸನೆಮಾಡುವನೋ ದೇವತೆಗಳಂತೆಯೇ ಅಮೃತನೂ ಅಭಯನೂ ಆಗುವನು

## ಐದನೆಯ ಖಂಡ

೧-೪ ಸಾಮವೇದಿಗಳ ಉದ್ಗೀಥೋಂಕಾರವೂ ಋಗ್ವೇದಿಗಳ ಪ್ರಣವವೂ ಒಂದೇ. ಆದಿತ್ಯನೇ ಉದ್ಗೀಥವು, ಅವನನ್ನು ಧ್ಯಾನಮಾಡಿದರೆ ಏಕಪುತ್ರಲಾಭವಾಗುವದು; ಆದರೆ ಆದಿತ್ಯನನ್ನೂ ರಶ್ಮಿಗಳನ್ನೂ ಭಿನ್ನವಾಗಿ ಉಪಾಸನೆಮಾಡಿದರೆ ಬಹುಪುತ್ರರು ಲಾಭವಾಗುವರು ಎಂದು ಕೌಷೀತಕಿಯು ತನ್ನ ಮಗನಿಗೆ ಹೇಳಿರುತ್ತಾನೆ ಇದು ಅಧಿದೈವತೋಪಾಸನೆಯು. ಇನ್ನು ಅಧ್ಯಾತ್ಮೋಪಾಸನೆ ಮುಖ್ಯಪ್ರಾಣದೃಷ್ಟಿಯಿಂದ ಉದ್ಗೀಥವನ್ನು ಉಪಾಸನೆಮಾಡಿದರೆ ಏಕಪುತ್ರಲಾಭವಾಗುವದು, ಆದರೆ ಈ ಪ್ರಾಣನನ್ನೂ ವಾಗಾದಿಪ್ರಾಣಗಳನ್ನೂ ಬೇರೆಯೆಂದೆಣಿಸಿ ಉಪಾಸನೆಮಾಡಿದರೆ ಬಹುಪುತ್ರಲಾಭವಾಗುವದು ಎಂದು ಕೌಷೀತಕಿಯು ಮಗನಿಗೆ ಹೇಳಿರುತ್ತಾನೆ ಆದ್ದರಿಂದ ಬಹುಪುತ್ರಲಾಭಕ್ಕಾಗಿ ರಶ್ಮಿಗಳನ್ನೂ ವಾಗಾದಿಪ್ರಾಣಗಳನ್ನೂ ಬೇರ್ಪಡಿಸಿಕೊಂಡು ಉಪಾಸನೆಮಾಡಬೇಕು

೫ ಪ್ರಣವೋದ್ಗೀಥಗಳನ್ನು ಒಂದೆಂದು ತಿಳಿದು ಮಾಡಿದ ಉಪಾಸನೆಯಿಂದ ಚೆನ್ನಾಗಿ ಪ್ರಯೋಗಿಸದ ಹೌತ್ರಕರ್ಮದಿಂದ ಉದ್ಗೀಥಗಾನದ ದೋಷವನ್ನೂ ಸರಿಪಡಿಸಿಕೊಳ್ಳಬಹುದೆಂಬ ಫಲವುಂಟಾಗುವದು

## ಆರನೆಯ ಖಂಡ

೧-೬ ಋಕ್ಕು ಪೃಥಿವಿ ಸಾಮವು ಅಗ್ನಿ. ಪೃಥಿವಿಯೇ ಸಾ, ಅಗ್ನಿಯೇ ಅಮ ಪೃಥಿವ್ಯಗ್ನಿಗಳು ಋಕ್ಸಾಮಗಳಂತೆ ನಿತ್ಯಸಂಬದ್ಧವಾಗಿವೆ ಇದರಂತೆ ಋಕ್ಕು ಅಂತರಿಕ್ಷವು

ವಾಯುವು ಸಾಮ; ಅವೂ ಹೀಗೆಯೇ ಸಂಬದ್ಧವಾಗಿವೆ. ಋಕ್ಕು ದ್ಯುಲೋಕವು, ಆದಿತ್ಯನು ಸಾಮವು; ನಕ್ಷತ್ರಗಳು ಋಕ್ಕು, ಚಂದ್ರನು ಸಾಮ, ಆದಿತ್ಯನ ಶುಕ್ಲಕಾಂತಿಯು ಋಕ್ಕು, ಹೆಚ್ಚಿನ ಕಪ್ಪುಕಾಂತಿಯು ಸಾಮ. ಹೀಗೆ ಋಕ್ಸಾಮಗಳಲ್ಲಿ ಪೃಥಿವ್ಯಾದಿದೃಷ್ಟಿಯನ್ನು ಮಾಡಿಕೊಳ್ಳಬೇಕು.

೬-೮. ಆದಿತ್ಯನಲ್ಲಿ ಚೈತನ್ಯಜ್ಯೋತಿರ್ಮಯನೂ ಜ್ಯೋತಿರ್ಮಯನಾದ ಸರ್ವಶರೀರವುಳ್ಳವನೂ ಬಹುಕೆಂಪಾದ ಕಣ್ಣುಳ್ಳವನೂ ಆದ ಪುರುಷನು ನಿವೃತ್ತೇಂದ್ರಿಯರೂ ಸಮಾಹಿತಚಿತ್ತರೂ ಬ್ರಹ್ಮಚರ್ಯಾದಿಸಾಧನಗಳುಳ್ಳವರೂ ಆದವರಿಗೆ ಕಾಣಬರುತ್ತಾನೆ. ಅವನಿಗೆ ಉತ್ ಎಂದು ಹೆಸರು, ಅವನು ಸರ್ವಪಾಪಗಳನ್ನೂ ಮೀರಿರುವನಾಗಿರುತ್ತಾನೆ. ಅವನಿಗೆ ಮೇಲೆ ವರ್ಣಿಸಿರುವ ಋಕ್ಸಾಮಗಳೇ ಗೇಷ್ಣಗಳು. ಹೀಗೆ (ಉದ್‌ಗೇಷ್ಣ)ನಾದ್ದರಿಂದ ಅವನನ್ನು ಉದ್ಗೀಥನೆಂಬ ಪರೋಕ್ಷನಾಮದಿಂದ ಕರೆಯುತ್ತಾರೆ. ಅವನನ್ನು ಗಾನಮಾಡುವವರಿಂದಲೇ ಋತ್ವಿಜನಿಗೆ 'ಉದ್ಗಾತೃ' ಎಂಬ ಹೆಸರು ಬಂದಿರುತ್ತದೆ. ಅವನು ಸೂರ್ಯನಿಂದಾಚೆಗಿರುವ ಲೋಕಗಳಿಗೂ ದೇವಕಾಮಗಳಿಗೂ ಒಡೆಯನು. ಇದು ಅಧಿದೈವತವಾಗಿ ಹೇಳಿದ್ದು.

## ಏಳನೆಯ ಖಂಡ

೧-೪. ಇನ್ನು ಅಧ್ಯಾತ್ಮವಾಗಿ ನೋಡಿದರೆ, ಋಕ್ಕು ವಾಕ್ಕು, ಸಾಮವು ಪ್ರಾಣವು, ಋಕ್ಕು ಚಕ್ಷುಸ್ಸು, ಸಾಮವು ಅಲ್ಲಿರುವ ಛಾಯಾತ್ಮ, ಋಕ್ಕು ಶ್ರೋತ್ರವು, ಸಾಮವು ಮನಸ್ಸು, ಋಕ್ಕು ಕಣ್ಣಿನ ಶುಕ್ಲಕಾಂತಿ, ಸಾಮವು ಕೃಷ್ಣಕಾಂತಿ. ಹೀಗೆ ಋಕ್ಸಾಮಗಳನ್ನು ಈ ದೃಷ್ಟಿಯಿಂದ ಕಾಣಬೇಕು.

೫-೬. 'ಚಕ್ಷುಸ್ಸಿನಲ್ಲಿರುವ ಪುರುಷನಿದ್ದಾನಲ್ಲ, ಅವನೇ ಋಕ್ಕು, ಸಾಮ, ಉಕ್ಥ, ಯಜುಸ್ಸು, ಮೂರು ವೇದಗಳು, ಏಕೆಂದರೆ ಸರ್ವಕಾರಣನೂ ಸರ್ವಾತ್ಮಕನೂ ಆಗಿರುತ್ತಾನೆ. ಇವನಿಗೂ ಆದಿತ್ಯಾಂತರ್ಗತಪುರುಷನ ರೂಪವೇ, ಅವನ ಗೇಷ್ಣಗಳೇ, ಅವನ ನಾಮವೇ. ಇವನು ಈ ಆಧ್ಯಾತ್ಮಿಕಾತ್ಮನಿಗಿಂತ ಕೆಳಕ್ಕೆ ಇರುವ ಲೋಕಗಳಿಗೂ ಮನುಷ್ಯಕಾಮಗಳಿಗೂ ಒಡೆಯನು.

೭-೮. ವೀಣೆಯಲ್ಲಿ ಗಾನಮಾಡುವವರು ಈ ಈಶ್ವರನನ್ನೇ ಗಾನಮಾಡುತ್ತಾರೆ. ಹೀಗೆಂದು ಈ ಉದ್ಗೀಥಪುರುಷನನ್ನರಿತು ಯಾವನು ಸಾಮಗಾನಮಾಡುತ್ತಾನೋ ಅವನು ಆದಿತ್ಯನಾಗಿ ಮೇಲಿನ ಲೋಕಗಳನ್ನೂ ದೇವಕಾಮಗಳನ್ನೂ ಪಡೆದುಕೊಳ್ಳುವನು; ಈ ಚಾಕ್ಷುಷಪುರುಷನಾಗಿ ಕೆಳಗಿನ ಲೋಕಗಳನ್ನೂ ಮನುಷ್ಯಕಾಮಗಳನ್ನೂ ಪಡೆದುಕೊಳ್ಳುವನು.

೮-೯. ಆದಿತ್ಯಚಕ್ಷುರಂತರ್ಗತನಾಗಿರುವ ಈ ಉದ್ಗೀಥಪುರುಷನನ್ನು ಹೀಗೆಂದರಿತಿರುವ ಉದ್ಗಾತೃವು ಕಾಮಗಾನಕ್ಕೆ ಸಮರ್ಥನು. ಅವನು ಯಜಮಾನನಿಗೆ ಯಾವ ಕಾಮವನ್ನಾದರೂ ಗಾನಮಾಡಿಕೊಡಬಲ್ಲನು.

**ಆದ್ದರಿಂದ ಓಂಕಾರವನ್ನು ಈ ಆದಿತ್ಯಚಕ್ಷುಃಪುರುಷನ ದೃಷ್ಟಿಯಿಂದ ಉಪಾಸನೆ ಮಾಡಬೇಕು.**

## ಎಂಟನೆಯ ಖಂಡ

೧-೨. ಉದ್ಗೀಥದಲ್ಲಿ ಜಾಣರಾದ ಶಿಲಕ ಶಾಲಾವತ್ಯ, ಚೈಕಿತಾಯನ ದಾಲ್ಭ್ಯ, ಪ್ರವಾಹಣ ಜೈವಲಿ ಎಂಬ ಮೂವರು ಒಂದು ಕಡೆ ಸೇರಿ ಉದ್ಗೀಥದ ವಿಷಯಕ್ಕೆ ಚರ್ಚೆ

ಯನ್ನು ಆರಂಭಿಸಿದರು. ರಾಜನಾದ ಪ್ರವಾಹಣ ಜೈವಲಿಯು ಮಿಕ್ಕ ಇಬ್ಬರು ಮೊದಲು ವಾದ ಮಾಡುವಂತೆ ಕೇಳಿಕೊಂಡನು

೩–೫ ಶಿಲಕ ಶಾಲಾವತ್ಯನು ಚೈಕಿತಾಯನ ದಾಲ್ಭ್ಯನನ್ನು "ಸಾಮಕ್ಕೆ ಎಂದರೆ ಉದ್ಗೀಥಕ್ಕೆ ಗತಿ ಯಾವದು" ಎಂದು ಕೇಳಲು ಅವನು 'ಸ್ವರವು' ಎಂದನು. "ಸ್ವರಕ್ಕೆ ಗತಿ ಯಾವದು" ಎಂದು ಶಿಲಕನು ಮತ್ತೆ ಕೇಳಲು 'ಪ್ರಾಣವು' ಎಂದನು, "ಪ್ರಾಣಕ್ಕೆ ಗತಿಯೊ" ಎಂದು ಕೇಳಿದ್ದಕ್ಕೆ 'ಅನ್ನವು' ಎಂದನು "ಅನ್ನಕ್ಕೊ" ಎಂದದ್ದಕ್ಕೆ 'ಅಪ್ಪು', "ಅಪ್ಪಿಗೊ" ಎಂದದ್ದಕ್ಕೆ 'ಆ ಲೋಕವು' ಎಂದನು. "ಆ ಲೋಕಕ್ಕೆ?" ಎಂದು ಶಿಲಕನು ಕೇಳಲು "ಸ್ವರ್ಗವನ್ನು ದಾಟಬಾರದು, ಸಾಮವೆ ದವು ಸ್ವರ್ಗವೇ ಎಂದು ಹೊಗಳುತ್ತಾರೆ" ಎಂದು ತನ್ನ ಸಿದ್ಧಾಂತವನ್ನು ನಿಲ್ಲಿಸಿದನು

೬–೭. ಆದರೆ ಶಿಲಕನು "ನಿನ್ನ ಸಾಮವು ಅಪ್ರತಿಷ್ಠಿತವಾಗಿದೆ. ಈಗ 'ನಿನ್ನ ತಲೆ ಬಿದ್ದುಹೋಗಲಿ' ಎಂದು ಯಾವನಾದರೂ ಬಲ್ಲ ಉಪಾಸಕನು ಹೇಳಿದರೆ ಅದು ಬಿದ್ದೇ ಹೋದೀತು!" ಎಂದನು ಆಗ ದಾಲ್ಭ್ಯನು "ಹಾಗಾದರೆ ತಾವು ಹೇಳಿಕೊಡಬೇಕು, ಆ ಲೋಕಕ್ಕೆ ಗತಿ ಯಾವದು" ಎಂದು ಕೇಳಿಕೊಂಡನು ಶಿಲಕನು ಆ ಲೋಕಕ್ಕೆ ಈ ಲೋಕವೇ ಗತಿ, ಇದು ಪ್ರತಿಷ್ಠಾರೂಪವಾಗಿರುವದರಿಂದ ಇದರ ಮುಂದಕ್ಕೆ ಇಲ್ಲ!" ಎಂದು ತನ್ನ ಸಿದ್ಧಾಂತವನ್ನು ನಿಲ್ಲಿಸಿದನು

೮ ಆಗ ಪ್ರವಾಹಣ ಜೈವಲಿಯು "ಶಾಲಾವತ್ಯನೆ, ನಿನ್ನ ಸಾಮವು ಅಂತವುಳ್ಳದ್ದು. ಆದ್ದರಿಂದ ಈಗ ನಿಜವಾದ ಉಪಾಸಕನೊಬ್ಬನು 'ನಿನ ತಲೆ ಬೀಳಲಿ' ಎಂದರೆ ಅದು ಬಿದ್ದೇ ಹೋದೀತು!" ಎಂದನು ಆಗ ಶಿಲಕನು "ಹಾಗಾದರೆ, ತಾವು ಹೇಳಿಕೊಡಬೇಕು!" ಎಂದು ಕೇಳಿಕೊಂಡನು

## ಒಂಬತ್ತನೆಯ ಖಂಡ

೧–೨ ಶಿಲಕನು "ಈ ಲೋಕಕ್ಕೆ ಗತಿ ಯಾವದು" ಎಂದು ಕೇಳಿಕೊಂಡದ್ದಕ್ಕೆ ಆಕಾಶವೇ ಅದಕ್ಕೆ ಗತಿಯು, ಆಕಾಶದಿಂದ ಸರ್ವಭೂತಗಳೂ ಹುಟ್ಟುತ್ತವೆ, ಆಕಾಶವನ್ನೇ ಬಂದುಸೇರುತ್ತವೆ, ಆಕಾಶವು ಇವೆಲ್ಲಕ್ಕಿಂತಲೂ ದೊಡ್ಡದು, ಆಕಾಶವೇ ಎಲ್ಲಕ್ಕೂ ಪರಾಯಣವು" ಎಂದು ಪರಮಾತ್ಮಾಕಾಶವೆಂದು ನಿರ್ಧರಿಸಿದನು

ಹೀಗೆ ಎಲ್ಲಕ್ಕಿಂತಲೂ ಹೆಚ್ಚಿನ ಪರಮಾಕಾಶವೆಂದು ಉಪಾಸನೆಮಾಡುವದು ಪರೋವರೀಯೋದ್ಗೀಥೋಪಾಸನವು ಹೀಗೆಂದು ಉಪಾಸನೆಮಾಡುವ ಉಪಾಸಕನಿಗೆ ಉತ್ತರೋತ್ತರವೃದ್ಧಿಯೂ ಉತ್ತರೋತ್ತರವಾಗಿ ವಿಶಿಷ್ಟವಾದ ಲೋಕಗಳ ಪ್ರಾಪ್ತಿಯೂ ಆಗುವದು

೩–೪. ಅತಿಧನ್ವಶೌನಕನೆಂಬವನು ಈ ಉದ್ಗೀಥವಿದ್ಯೆಯನ್ನು ಉದರ ಶಾಂಡಿಲ್ಯನಿಗೆ ತಿಳಿಸಿಕೊಟ್ಟು "ನಿನ್ನ ಸಂತತಿಯವರು ಈ ವಿದ್ಯೆಯನ್ನಿಟ್ಟುಕೊಂಡಿರುವವರೆಗೂ ಅವರಿಗೆ ಈ ಲೋಕದಲ್ಲಿ ಉತ್ತರೋತ್ತರಾಭಿವೃದ್ಧಿಯ ಜೀವನವು ಆಗುತ್ತಿರುವದು, ಆ ಲೋಕದಲ್ಲಿಯೂ ಆಗುತ್ತಿರುವದು" ಎಂದನಂತೆ ಯಾವನು ಈ ಪರೋವರೀಯಗುಣಕವಾದ ಉದ್ಗೀಥವನ್ನು ಹೀಗೆಂದು ಉಪಾಸನೆಮಾಡುತ್ತಿರುವನೋ ಅವನಿಗೆ ಈ ಲೋಕದಲ್ಲಿ ಉತ್ತರೋತ್ತರಾಭ್ಯುದಯವಾಗುವದು, ಆ ಲೋಕದಲ್ಲಿಯೂ ಪರೋವರೀಯಲೋಕವು ಸಿಕ್ಕುವದು.

ಆದ್ದರಿಂದ ಪರೋವರೀಯಗುಣವಿಶಿಷ್ಟವಾದ ಪರಮಾತ್ಮಾಕಾಶವೆಂದು ಉದ್ಗೀಥವನ್ನು ಉಪಾಸನೆಮಾಡಬೇಕು

## ಹತ್ತನೆಯ ಖಂಡ

**ಈ ಖಂಡದಲ್ಲಿ ಪ್ರಸಂಗವಶದಿಂದ ಪ್ರಸ್ತಾವಪ್ರತಿಹಾರಭಕ್ತಿಗಳ ಉಪಾಸನೆಯನ್ನು ಹೇಳಿದೆ**

೧-೭. ಕುರುದೇಶದಲ್ಲಿ ಬಹಳವಾಗಿ ಸಿಡಿಲು ಬಿದ್ದು ಪೈರುಪಚ್ಚೆಯೆಲ್ಲ ಹಾಳಾಗಿತ್ತು. ಆ ಕಾಲದಲ್ಲಿ ಉಷಸ್ತಿಚಾಕ್ರಾಯಣನು ಇನ್ನೂ ಹುಡುಗಿಯಾದ ತನ್ನ ಹೆಂಡತಿಯೊಡನೆ ಅಲ್ಲಲ್ಲಿ ಭಿಕ್ಷಾರ್ಥಿಯಾಗಿ ಅಲೆದಾಡುತ್ತಿದ್ದನು. ಅವನು ಹುರುಳಿಯನ್ನು ತಿನ್ನುತ್ತಿದ್ದ ಒಬ್ಬ ಮಾವಟಿಗನನ್ನು ಕಂಡು ಅನ್ನವನ್ನು ಕೇಳಲು ಅವನು 'ಈ ಪಾತ್ರೆಯಲ್ಲಿರುವುದೇ ಹೊರತು ಮತ್ತೆ ಬೇರೆ ಇಲ್ಲವಲ್ಲ'' ಎಂದನು. ಉಷಸ್ತಿಯು 'ಇದನ್ನೇ ಕೊಡು'' ಎಂದು ಹೇಳಲು ಮಾವಟಿಗನು ಕೊಟ್ಟು ಅನುಪಾನಕ್ಕೆ ನೀರನ್ನು ಕೊಡುವುದಕ್ಕೆ ಹೋದನು. ಆದರೆ ಚಾಕ್ರಾಯಣನು 'ಬೇಡ, ಅನ್ನವಿಲ್ಲದೆ, ಸಾಯುತ್ತಿದ್ದೆನಾದ್ದರಿಂದ ಉಚ್ಛಿಷ್ಟವಾದರೂ ಹುರುಳಿಯನ್ನು ತಿಂದೆನು, ಆದರೆ ಕುಡಿಯುವ ನೀರು ಎಲ್ಲಿಯಾದರೂ ದೊರಕುತ್ತದೆ' ಎಂದನು. ಅವನು ಆ ಹುರುಳಿಯನ್ನು ತಿಂದು ಉಳಿದದ್ದನ್ನು ಹೆಂಡತಿಗೆ ಕೊಟ್ಟನು, ಆದರೆ ಆಕೆಗೆ ಆಗಲೇ ಆಹಾರವು ದೊರೆತಿದ್ದುದರಿಂದ ಅದನ್ನು ಒಂದು ಕಡೆಯಲ್ಲಿಟ್ಟುಕೊಂಡಳು. ಮಾರನೆಯ ದಿನ ಬೆಳಗ್ಗೆ ಏಳುತ್ತಲೂ, ಅವನು 'ಅಯ್ಯೋ, ಒಂದಿಷ್ಟು ಅನ್ನವು ಸಿಕ್ಕಿದರೆ ತಿಂದು ಸ್ವಲ್ಪ ಧನವನ್ನು ಸಂಪಾದಿಸಿಕೊಳ್ಳಬಹುದಲ್ಲ! ಏಕೆಂದರೆ ಹತ್ತಿರದಲ್ಲಿಯೇ ರಾಜನು ಯಾಗಮಾಡುತ್ತಿರುವನು. ನನ್ನನ್ನು ಕಂಡರೆ ಎಲ್ಲಾ ಆರ್ತ್ವಿಜ್ಯಕ್ಕೂ ಕರೆದಾನು!'' ಎಂದನು. ಆಕೆಯು 'ಈ ಹುರುಳಿಹೊರತು ಮತ್ತೇನೂ ಇಲ್ಲ' ಎಂದು ಅವನಿಗೆ ಕೊಟ್ಟಳು. ಅವನು ಅದನ್ನೇ ತಿಂದು ಯಜ್ಞವಾಗುತ್ತಿದ್ದಲ್ಲಿಗೆ ಬಂದನು.

೮-೧೧. ಅವನು ಅಲ್ಲಿ ಉದ್ಗಾತೃಪುರುಷರು ಇರುವಲ್ಲಿ ಕುಳಿತು ಬಂದು ಪ್ರಸ್ತೋತೃವನ್ನು ಕುರಿತು 'ಎಲೈ ಪ್ರಸ್ತೋತೃವೆ, ಪ್ರಸ್ತಾವದೇವತೆಯನ್ನರಿಯದೆ ನನ್ನೆದುರಿಗೆ ಸ್ತೋತ್ರಮಾಡುವೆಯಾದರೆ ನಿನ್ನ ತಲೆ ಬಿದ್ದುಹೋಗಲಿ'' ಎಂದನು. ಹಾಗೆಯೇ, ಉದ್ಗಾತೃವನ್ನೂ ಪ್ರತಿಹರ್ತೃವನ್ನೂ "ಕುರಿತು ಉದ್ಗೀಥದೇವತೆಯನ್ನಾಗಲಿ ಪ್ರತಿಹಾರದೇವತೆಯನ್ನಾಗಲಿ ಅರಿಯದೆ ಸ್ತೋತ್ರಮಾಡಿದರೆ ನಿಮ್ಮ ತಲೆಯು ಬೀಳಲಿ!'' ಎಂದನು. ಅವರು ಮೂವರೂ ತಮ್ಮ ಕರ್ಮವನ್ನು ಮಾಡದೆ ಸುಮ್ಮನೆ ಕುಳಿತುಬಿಟ್ಟರು.

## ಹನ್ನೊಂದನೆಯ ಖಂಡ

೧-೩. ಆಗ ಯಜಮಾನನು 'ತಾವು ಯಾರು'' ಎಂದು ವಿಚಾರಿಸಿ ಉಷಸ್ತಿ ಚಾಕ್ರಾಯಣನೆಂಬ ಪ್ರಸಿದ್ಧಪುರುಷನೆಂದು ತಿಳಿದ ಕೂಡಲೆ ಅವನನ್ನು ಎಲ್ಲಾ ಆರ್ತ್ವಿಜ್ಯಗಳಿಗೂ ವರಣಮಾಡಿದನು. ಆದರೆ 'ಬೇಡ, ನನ್ನ ಅನುಮತಿಯಿಂದ ಇವರೇ ಸ್ತೋತ್ರಮಾಡಲಿ! ಇವರಿಗೆ ಕೊಡುವಷ್ಟು ಧನವನ್ನು ನನಗೂ ಕೊಡು!'' ಎಂದು ಉಷಸ್ತಿಯು ನುಡಿದನು.

೪-೫. ಆಗ ಪ್ರಸ್ತೋತೃವು, "ಪೂಜ್ಯರೆ, ಪ್ರಸ್ತಾವಭಕ್ತಿಯ ದೇವತೆ ಯಾವುದು, ನನಗೆ ಹೇಳಿಕೊಡಬೇಕು' ಎನಲು ಚಾಕ್ರಾಯಣನು "ಪ್ರಾಣನೆಂಬ ಪರಮಾತ್ಮನೇ ಆ ದೇವತೆ. ಈ ಎಲ್ಲಾ ಭೂತಗಳೂ ಪ್ರಾಣನಿಂದಲೇ ಹುಟ್ಟಿ ಪ್ರಾಣನನ್ನೇ ಸೇರುವವು. ಈ ದೇವತೆಯನ್ನರಿಯದೆ ನೀನು ಪ್ರಸ್ತಾವನವನ್ನು ಮಾಡಿದ್ದರೆ ನಿನ್ನ ತಲೆಯು ನನ್ನ ವಾಕ್ಯದಂತೆ ಬಿದ್ದುಹೋಗುತ್ತಿತ್ತು' ಎಂದನು.

೮-೯ ಇದರಂತೆ ಉದ್ಗಾತೃವು ಉದ್ಗೀಥದೇವತೆ ಯಾರೆಂದೂ ಪ್ರತಿಹರ್ತೃವು ಪ್ರತಿಹಾರದೇವತೆ ಯಾರೆಂದೂ ಕೇಳಿದರು. ಚಾಕ್ರಾಯಣನು ಆದಿತ್ಯನು ಉದ್ಗೀಥದೇವತೆ, ಅನ್ನವೇ ಪ್ರತಿಹಾರದೇವತೆ. ಏಕೆಂದರೆ ಮೇಲುಗಡೆ ಇರುವ ಸೂರ್ಯನನ್ನೇ ಉದ್ಗಾತೃಗಳು ಗಾನ ಮಾಡುತ್ತಾರೆ; ಭೂತಗಳೆಲ್ಲವೂ ಅನ್ನವನ್ನು ಪ್ರತಿಹಾರಮಾಡಿಕೊಂಡೇ ಜೀವಿಸಿವೆ' ಎಂದು ತಿಳಿಸಿಕೊಟ್ಟನು.

ಆದ್ದರಿಂದ ಉದ್ಗಾತೃಪುರುಷರು ಈ ದೇವತೆಗಳನ್ನು ಅರಿತು ಸ್ತೋತ್ರಮಾಡಬೇಕು, ಎಂದರೆ ಪ್ರಸ್ತಾವ, ಉದ್ಗೀಥ, ಪ್ರತಿಹಾರ ಎಂಬ ಸಾಮಭಾಗಗಳನ್ನು ಪ್ರಾಣ, ಆದಿತ್ಯ, ಅನ್ನ ಎಂಬ ದೃಷ್ಟಿಯಿಂದ ಉಪಾಸನೆಮಾಡಬೇಕು. ಇದಕ್ಕೆ ಕರ್ಮಸಮೃದ್ಧಿಯೂ ದೇವತಾಸಾಯುಜ್ಯವೂ ಫಲವು.

## ಹನ್ನೆರಡನೆಯ ಖಂಡ

**ಈ ಖಂಡದಲ್ಲಿ ಶೌವ ಉದ್ಗೀಥವನ್ನು ತಿಳಿಸಿಕೊಟ್ಟಿದೆ**

೧-೩ ಒಕದಾಲ್ಭ್ಯ, ಗ್ಲಾವಮೈತ್ರೇಯ ಎಂಬ ಹೆಸರಿನವನು ಸ್ವಾಧ್ಯಾಯಕ್ಕಾಗಿ ಊರ ಹೊರಕ್ಕೆ ಹೋದನು. ಅವನಿಗೆ ಒಂದಾನೊಂದು ದೇವತೆಯು ಪ್ರಸನ್ನವಾಗಿ ಬಿಳಿಯ ನಾಯಿಯ ರೂಪದಲ್ಲಿ ಕಾಣಿಸಿಕೊಂಡಿತು. ಅದರ ಸುತ್ತಲೂ ಸಣ್ಣಸಣ್ಣನಾಯಿಗಳಿದ್ದುವು, ಅವು 'ಭಗವಂತನೆ, ನಮಗೆ ಹಸಿವಾಗಿದೆ, ಅನ್ನವನ್ನು ಆಗಾನಮಾಡಿಕೊಡು'' ಎಂದು ಬೇಡಿಕೊಂಡವು. 'ನಾಳೆ, ಪ್ರಾತಃಕಾಲಕ್ಕೆ ಇಲ್ಲಿಗೆ ಬನ್ನಿರಿ, ಆಗಾನಮಾಡುತ್ತೇನೆ' ಎಂದು ಬಿಳಿಯ ನಾಯಿ ಹೇಳಿತು.

೪-೫ ಬ್ರಾಹ್ಮಣನು ಆ ಕಾಲಕ್ಕೆ ಸರಿಯಾಗಿ ಅದನ್ನು ನಿರೀಕ್ಷಿಸಿಕೊಂಡಿದ್ದನು. ನಾಯಿಗಳು ಅಲ್ಲಿಗೆ ಬಂದವು. ಬಹಿಷ್ಪವಮಾನದಿಂದ ಸ್ತೋತ್ರಮಾಡಲಿರುವವರು ಹೇಗೆ ಒಬ್ಬರನ್ನೊಬ್ಬರು ಮುಟ್ಟಿಕೊಂಡು ಸುತ್ತುವರೋ ಹಾಗೆಯೇ ನಾಯಿಗಳು ಸುತ್ತಿ ಕುಳಿತುಕೊಂಡು ಹಿಂಕಾರವನ್ನುಮಾಡಿ ಈ ಗಾನವನ್ನು ಮಾಡಿದವು (ಅದರ ಅರ್ಥ-ಇದು) "ಓಮ್! ನಾವು ಅನ್ನವನ್ನುಣ್ಣುವಂತಾಗಲಿ! ನೀರನ್ನು ಕುಡಿಯುವಂತೆ ಆಗಲಿ! ವರುಣ, ಪ್ರಜಾಪತಿ ಸವಿತೃ ಎಂಬ ಹೆಸರುಗಳುಳ್ಳ ಆದಿತ್ಯನು ನಮಗೆ ಅನ್ನವನ್ನು ತರಲಿ! ಅನ್ನಪತಿಯೆ, ಅನ್ನವನ್ನು ತಂದುಕೊಡು! ಓಮ್!

ಈ ಉದ್ಗಾನವು ಅನ್ನಫಲಕ್ಕಾಗಿ ಮಾಡತಕ್ಕದ್ದು

## ಹದಿಮೂರನೆಯ ಖಂಡ

**ಈ ಖಂಡದಲ್ಲಿ ಸಾಮಾವಯವವಾದ ಸ್ತೋಭಗಳ ಉಪಾಸನೆಯಿದೆ.**

೧-೩. ಹಾಉಕಾರವು ಈ ಲೋಕವು, ಹಾಇಕಾರವು ವಾಯು, ಅಥಕಾರವು ಚಂದ್ರನು; ಇಹಕಾರವು ಆತ್ಮನ, ಊಕಾರವು ಆತ್ಮನು, ಏಕಾರವು ಆಹ್ವಾನವು, ಔಹೋಇಕಾರವು ವಿಶ್ವೇದೇವತೆಗಳು, ಹಿಂಕಾರವು ಪ್ರಜಾಪತಿಯು, ಸ್ವರವು ಪ್ರಾಣವು, ಯಾ ಎಂಬುದು ಅನ್ನವು, ವಾಕ್ಕೆಂಬುದು ವಿರಾಟ್ ಇವುಗಳಿಗೆ ಹದಿಮೂರನೆಯದಾಗಿರುವ ಹುಂಕಾರವು ಅನಿರುಕ್ತವೂ ಸಂಚರವೂ ಆಗಿದೆ ಎಂದು ಉಪಾಸನೆಮಾಡಬೇಕು.

೪. ಹೀಗೆಂದು ಉಪಾಸನೆಮಾಡಿದವರಿಗೆ ವಾಕ್ಕು ತ್ರಯೀವಿದ್ಯೆಯ ಫಲವೆಂಬ ವಾಗ್ದೋಹವನ್ನು ಮಾಡುವುದು, ಅವನು ಅನ್ನವಂತನೂ ದೀಪ್ತಾಗ್ನಿಯೂ ಆಗುವನು

---

# ಎರಡನೆಯ ಅಧ್ಯಾಯ-ಒಂದನೆಯ ಖಂಡ

## (ಸಮಸ್ತಸಾಮದ ಉಪಾಸನೆ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೧೧ 'ಓಮಿತ್ಯೇತದಕ್ಷರಮ್' ಇತ್ಯಾದಿನಾ ಸಾಮಾವಯವವಿಷಯಮ್ ಉಪಾಸನಮ್ ಅನೇಕಫಲಮ್ ಉಪದಿಷ್ಟಮ್ । ಅನನ್ತರಂ ಚ ಸ್ತೋಭಾಕ್ಷರ ವಿಷಯಮ್ ಉಪಾಸನಮ್ ಉಕ್ತಮ್ । ಸರ್ವಥಾಽಪಿ ಸಾಮ್ನ್ಯೇಕದೇಶಸಂಬದ್ಧ ಮೇವ ತದಿತಿ ಅಥೇದಾನೀಂ ಸಮಸ್ತೇ ಸಾಮ್ನಿ ಸಮಸ್ತಸಾಮವಿಷಯಾಣಿ[1] ಉಪಾಸನಾನಿ ವಕ್ಷ್ಯಾಮಿ ಇತ್ಯಾರಭತೇ ಶ್ರುತಿಃ । ಯುಕ್ತಂ ಹಿ ಏಕದೇಶೋ ಪಾಸನಾನನ್ತರಮ್ ಏಕದೇಶಿವಿಷಯಮ್ ಉಪಾಸನಮ್ ಉಚ್ಯತ ಇತಿ ॥

(ಭಾಷ್ಯಾರ್ಥ)

'ಓಮ್ ಎಂಬೀ ಅಕ್ಷರವಾದ (ಉದ್ಗೀಥ)ವನ್ನು' (೧-೧-೧) ಎಂದು ಮುಂತಾಗಿರುವ (ಗ್ರಂಥ)ದಿಂದ ಸಾಮಾವಯವದ ವಿಷಯವಾದ ಅನೇಕ ಫಲ ಗಳುಳ್ಳ ಉಪಾಸನೆಯನ್ನು ತಿಳಿಸಿದ್ದಾಯಿತು. ಆಮೇಲೆ ಸ್ತೋಭಾಕ್ಷರಗಳ ವಿಷಯದ ಉಪಾಸನೆಯನ್ನು ಹೇಳಿದ್ದಾಯಿತು. ಹೇಗೂ ಅದು ಸಾಮದ ಒಂದು ಅವ ಯವಕ್ಕೆ ಸಂಬಂಧಪಟ್ಟದ್ದೇ ಆಗಿರುತ್ತದೆಯಾದ್ದರಿಂದ ಇನ್ನು ಈಗ ಸಮಸ್ತವಾದ ಸಾಮದಲ್ಲಿ ಸಮಸ್ತಸಾಮವಿಷಯಕವಾದ ಉಪಾಸನೆಗಳನ್ನು ಹೇಳೋಣ ಎಂದು ಶ್ರುತಿಯು ಆರಂಭಿಸಿರುತ್ತದೆ ಅವಯವದ ಉಪಾಸನೆಯನ್ನು (ಹೇಳಿದ) ಬಳಿಕ ಒಟ್ಟಿನ ವಿಷಯದ ಉಪಾಸನೆಯನ್ನು ಹೇಳುವದು ಯುಕ್ತವೇ ಅಷ್ಟೆ ?

## ಸಮಸ್ತಸಾಮದಲ್ಲಿ ಸಾಧುದೃಷ್ಟಿ

(ಉಪನಿಷತ್ತು)

**ಸಮಸ್ತಸ್ಯ ಖಲು ಸಾಮ್ನ ಉಪಾಸನಗ್ಂ ಸಾಧು ಯತ್ಖಲು ಸಾಧು ತತ್ ಸಾಮೇತ್ಯಾಚಕ್ಷತೇ ಯದಸಾಧು ತದಸಾಮೇತಿ ॥೧॥**

---

1 ಸಮಸ್ತೇ ಸಾಮ್ನಿ, ಸಮಸ್ತಸಾಮವಿಷಯಾಣಿ – ಎಂಬಿವೆರಡರಲ್ಲಿ ಒಂದೇ ಸಾಕೆಂದು ತೋರುತ್ತದೆ

೧. ಸಮಸ್ತವಾದ ಸಾಮದ ಉಪಾಸನೆಯು ಸಾಧು. ಯಾವದು ಸಾಧುವೋ ಅದನ್ನು ಸಾಮವೆನ್ನುವರು, ಯಾವದು ಒಳ್ಳೆಯದಲ್ಲವೋ ಅದನ್ನು ಅಸಾಮವೆನ್ನುವರು.

(ಭಾಷ್ಯ)

೧೧. ಸಮಸ್ತಸ್ಯ ಸರ್ವಾವಯವವಿಶಿಷ್ಟಸ್ಯ ಪಾಂಚಭಕ್ತಿಕಸ್ಯ ಸಾಪ್ತಭಕ್ತಿಕಸ್ಯ ಚ ಇತ್ಯರ್ಥಃ। ಖಲು ಇತಿ ವಾಕ್ಯಾಲಂಕಾರಾರ್ಥಃ। ಸಾಮ್ನಃ ಉಪಾಸನಂ ಸಾಧು। ಸಮಸ್ತೇ ಸಾಮ್ನಿ ಸಾಧುದೃಷ್ಟಿವಿಧಿಪರತ್ವಾತ್ ನ ಪೂರ್ವೋಪಾಸನನಿಂದಾರ್ಥತ್ವಂ ಸಾಧುಶಬ್ದಸ್ಯ। ನನು ಪೂರ್ವತ್ರ ಅವಿದ್ಯಮಾನಂ ಸಾಧುತ್ವಂ ಸಮಸ್ತೇ ಸಾಮ್ನಿ ಅಭಿಧೀಯತೇ। ನ। "ಸಾಧು ಸಾಮೇತ್ಯುಪಾಸ್ತೇ" (೨-೧-೪) ಇತ್ಯುಪಸಂಹಾರಾತ್। ಸಾಧುಶಬ್ದಃ ಶೋಭನವಾಚೀ। ಕಥಮ್ ಅವಗಮ್ಯತ ಇತಿ? ಆಹ। ಯತ್ ಖಲು ಲೋಕೇ ಸಾಧು ಶೋಭನಮ್ ಅನವದ್ಯಂ ಪ್ರಸಿದ್ಧಮ್, ತತ್ ಸಾಮ ಇತ್ಯಾಚಕ್ಷತೇ ಕುಶಲಾಃ। ಯತ್ ಅಸಾಧು ವಿಪರೀತಮ್, ತತ್ ಅಸಾಮ ಇತಿ ॥

(ಭಾಷ್ಯಾರ್ಥ)

ಸಮಸ್ತವಾದ- ಎಲ್ಲಾ ಅವಯವಗಳಿಂದಲೂ ಕೂಡಿದ ಎಂದರೆ ಐದು ಭಕ್ತಿಗಳು ಅಥವಾ ಏಳು ಭಕ್ತಿಗಳುಳ್ಳದ್ದರ ಎಂದರ್ಥ. ಖಲು ಎಂಬುದು ವಾಕ್ಯಾಲಂಕಾರಕ್ಕಾಗಿ (ಬಂದದ್ದು), (ಸಮಸ್ತ)ಸಾಮದ ಉಪಾಸನೆಯು ಸಾಧು. ಸಮಸ್ತವಾದ ಸಾಮದಲ್ಲಿ ಸಾಧುವೆಂಬ ದೃಷ್ಟಿಯನ್ನು ವಿಧಿಸುವದರಲ್ಲಿ (ಈ ವಾಕ್ಯಕ್ಕೆ) ತಾತ್ಪರ್ಯವಿರುವದರಿಂದ ಸಾಧುಶಬ್ದಕ್ಕೆ ಹಿಂದಿನ ಉಪಾಸನೆಗಳನ್ನು ನಿಂದಿಸುವದೆಂಬ ಪ್ರಯೋಜನವಿಲ್ಲ.[1]

(ಆಕ್ಷೇಪ):- ಹಿಂದಿ(ನ ಉಪಾಸನೆಗಳಲ್ಲಿ) ಇಲ್ಲದಿದ್ದ ಸಾಧುತ್ವವನ್ನು ಸಮಸ್ತಸಾಮದಲ್ಲಿ ಹೇಳಿದೆಯಲ್ಲವೆ ?

(ಪರಿಹಾರ).- ಹಾಗಲ್ಲ ಏಕೆಂದರೆ "ಸಾಮವು ಸಾಧುವೆಂದು (ಯಾವನು) ಉಪಾಸನೆಮಾಡುತ್ತಾನೋ" (೨-೧-೪) ಎಂದೇ[2] ಉಪಸಂಹಾರಮಾಡಿದೆ.

---

**1. ಸಾಮವೆಂದರೆ ಸಾಧು ಎಂದು ಉಪಾಸನೆಮಾಡಬೇಕು ಎಂಬುದರಲ್ಲಿ ತಾತ್ಪರ್ಯವೇ ಹೊರತು ಸಾಮದ ಏಕದೇಶದ ಉಪಾಸನೆಯು ಅಸಾಧುವೆಂಬುದರಲ್ಲೇನೂ ಈ ವಾಕ್ಯಕ್ಕೆ ತಾತ್ಪರ್ಯವಿಲ್ಲ.**

**2. ಈ ವಾಕ್ಯದಲ್ಲಿ ಸಾಮಸಾಮಾನ್ಯವನ್ನೇ ಸಾಧುವೆಂದು ಉಪಾಸನೆಮಾಡಬೇಕು ಎಂದೇ ಸ್ಫುಟವಾಗಿ ಹೇಳಿದೆ.**

ಸಾಧುಶಬ್ದವು ಒಳ್ಳೆಯದನ್ನು ಹೇಳುತ್ತದೆ (ಸಾಮದ ಉಪಾಸನೆಯು ಸಾಧು ಎಂಬುದು) ಹೇಗೆ ಗೊತ್ತಾಗುತ್ತದೆ? ಎಂದರೆ (ಶ್ರುತಿ) ಹೇಳುತ್ತದೆ ಲೋಕದಲ್ಲಿ ಯಾವದು ಸಾಧು, ಒಳ್ಳೆಯದು, ನಿರ್ದುಷ್ಟವು- ಎಂದು ಪ್ರಸಿದ್ಧ ವಾಗಿರುತ್ತದೆಯೋ ಅದನ್ನು ಬಲ್ಲವರು ಸಾಮ ಎಂದು ಕರೆಯುತ್ತಾರೆ, ಯಾವದು ಅಸಾಧುವೋ (ಅದಕ್ಕೆ) ವಿಪರೀತವಾಗಿರುವದೋ ಅದನ್ನು ಅಸಾಮ(ವೆನ್ನು ತ್ತಾರೆ)

## ಸಾಮಶಬ್ದಕ್ಕೆ ಸಾಧು ಎಂಬರ್ಥವಿದೆಯೆಂಬುದಕ್ಕೆ ಯುಕ್ತಿಗಳು

(ಉಪನಿಷತ್ತು)

**ತದುತಾಪ್ಯಾಹುಃ ಸಾಮ್ನೈನಮುಪಾಗಾದಿತಿ ಸಾಧುನೈನಮುಪಾಗಾದಿತ್ಯೇವ ತದಾಹುರಸಾಮ್ನೈನಮುಪಾಗಾದಿತ್ಯಸಾಧುನೈನಮುಪಾಗಾದಿತ್ಯೇವ ತದಾಹುಃ ॥ ೨ ॥**

೨. ಮತ್ತು ಅಲ್ಲಿ ಹೀಗೆಂದೂ ಹೇಳುತ್ತಾರೆ: ಇವನನ್ನು ಸಾಮದಿಂದ ಬಳಿಸಾರಿದನು ಎನ್ನುವರಷ್ಟೆ, ಸಾಧು(ಮಾರ್ಗ)ದಿಂದ ಇವನನ್ನು ಬಳಿಸಾರಿದನು ಎಂದೇ ಹಾಗೆ ಹೇಳುತ್ತಾರೆ. ಇವನನು ಅಸಾಮದಿಂದ ಬಳಿಸಾರಿದನು ಎನ್ನುವರಷ್ಟೆ, ಅಸಾಧು(ಮಾರ್ಗ) ದಿಂದ ಇವನನ್ನು ಬಳಿಸಾರಿದನು ಎಂದೇ ಹಾಗ ಹೇಳುತ್ತಾರೆ.

## ಸಾಮಕ್ಕೆ ಸಾಧುವೆಂಬರ್ಥವೆಂಬುದಕ್ಕೆ ಯುಕ್ತಿ

(ಭಾಷ್ಯ)

೧೧೩. ತತ್ ತತ್ರೈವ ಸಾಧ್ವಸಾಧುವಿವೇಕಕರಣೇ ಉತ ಅಪಿ ಆಹುಃ। ಸಾಮ್ನಾ ಏನಂ ರಾಜಾನಂ ಸಾಮನ್ತಂ ವಾ[1] ಉಪಾಗಾತ್ ಉಪಗತವಾನ್। ಕೋಽಸೌ? ಯತಃ ಅಸಾಧುತ್ವಪ್ರಾಪ್ತ್ಯಾಶಙ್ಕಾ ಸಃ ಇತ್ಯಭಿಪ್ರಾಯಃ। ಶೋಭನಾಭಿಪ್ರಾಯೇಣ ಸಾಧುನಾ ಏನಮ್ ಉಪಾಗಾತ್ ಇತ್ಯೇವ ತತ್ ತತ್ರ ಆಹುಃ ಲೌಕಿಕಾಃ। ಬನ್ಧನಾದ್ಯಸಾಧುಕಾರ್ಯಮ್ ಅಪಶ್ಯನ್ತಃ। ಯತ್ರ ಪುನರ್ವಿಪರ್ಯಯೇಣ ಬನ್ಧನಾದಿ ಅಸಾಧುಕಾರ್ಯಂ ಪಶ್ಯನ್ತಿ, ತತ್ರ ಅಸಾಮ್ನಾ ಏನಮ್ ಉಪಾಗಾತ್ ಇತಿ, ಅಸಾಧುನಾ ಏನಮ್ ಉಪಾಗಾತ್ ಇತ್ಯೇವ ತದಾಹುಃ ॥

---

1 ಚ ಎಂಬುದಕ್ಕಿಂತ ಈ ಪಾಠವೇ ಮೇಲು.

(ಭಾಷ್ಯಾರ್ಥ)

(ತತ್=ತತ್ರ) ಆ ಸಾಧು, ಅಸಾಧು – ಎಂಬಿವನ್ನು ವಿವೇಚಿಸುವಲ್ಲಿಯೇ ಹೀಗೆಂಮೂ ಹೇಳುತ್ತಾರೆ ಸಾಮದಿಂದ ಈ ರಾಜನನ್ನು ಅಥವಾ ಸಾಮಂತನನ್ನು ಬಳಿಸಾರಿದನು, ಹತ್ತಿರಕ್ಕೆ ಬಂದನು.[1] ಅವನು ಯಾರು ? (ಎಂದರೆ), ಯಾವನಿಂದ ಕೆಟ್ಟದ್ದುಂಟಾಗುವದೆಂಬ ಆಶಂಕೆಯಿರುವದೋ ಅವನು ಎಂದು ಅಭಿಪ್ರಾಯ. ಒಳ್ಳೆಯ ಅಭಿಪ್ರಾಯದ ಸಾಧು(ಮಾರ್ಗ)ದಿಂದ ಇವನನ್ನು ಬಳಿಸಾರಿದನು ಎಂದೇ – (ತತ್=ತತ್ರ) ಅಲ್ಲಿ ಬಂಧನವೇ ಮುಂತಾದ ಕೆಟ್ಟ ಕಾರ್ಯವನ್ನು ಕಾಣದೆ (ಇರುವವರಿಂದ) – ಲೋಕದ ಜನರು ಹೇಳುತ್ತಾರೆ.[2] ಆದರೆ ಎಲ್ಲಿ (ಇದಕ್ಕೆ) ವಿಪರೀತನಾಗಿ ಎಲ್ಲ ಬಂಧನಾದಿಯಾದ ಅಸಾಧುಕಾರ್ಯವನ್ನು ಕಾಣುವರೋ, ಅಲ್ಲಿ ಅಸಾಮದಿಂದ ಇವನನ್ನು ಬಳಿಸಾರಿದನು (ಎನ್ನುತ್ತಾರೆ) ; ಅಸಾಧು (ಮಾರ್ಗ)ದಿಂದ ಇವನನ್ನು ಬಳಿಸಾರಿದನು ಎಂದೇ ಹಾಗೆ ಹೇಳುತ್ತಾರೆ

(ಉಪನಿಷತ್ತು)

**ಅಥೋತಾಪ್ಯಾಹುಃ ಸಾಮ ನೋ ಬತೇತಿ ಯತ್ಸಾಧು ಭವತಿ ಸಾಧು ಬತೇತ್ಯೇವ ತದಾಹುರಸಾಮ ನೋ ಬತೇತಿ ಯದಸಾಧು ಭವತ್ಯಸಾಧು ಬತೇತ್ಯೇವ ತದಾಹುಃ ॥ ೩ ॥**

೩. ಮತ್ತು ಹೀಗೂ ಎನ್ನುತ್ತಾರೆ. ಯಾವದು ಸಾಧುವಾಗಿರುವದೋ, (ಅದನ್ನು) 'ಇದು ನಮಗೆ ಸಾಮವಪ್ಪ !' ಎನ್ನುವರು. 'ಸಾಧುವಪ್ಪ !' ಎಂದೇ ಹಾಗೆ ಹೇಳುತ್ತಾರೆ. ಯಾವದು ಅಸಾಧುವಾಗಿರುವದೋ (ಅದನ್ನು) 'ನಮಗೆ ಅಸಾಮವಪ್ಪ !' ಎಂದು ಹೇಳುತ್ತಾರೆ, 'ಅಸಾಧುವಪ್ಪ !' ಎಂದೇ ಹಾಗೆ ಹೇಳುತ್ತಾರೆ.

## ಸಾಮವೆಂದರೆ ಸಾಧು ಎನ್ನುವದಕ್ಕೆ ಮತ್ತೊಂದು ಯುಕ್ತಿ

(ಭಾಷ್ಯ)

೧೧೪. ಅಥ ಉತಾಪಿ ಆಹುಃ ಸ್ವಸಂವೇದ್ಯಮ್, ಸಾಮ ನಃ ಅಸ್ಮಾಕಂ ಬತ !– ಇತಿ ಅನುಕಮ್ಪಯನ್ತಃ । ಸಂವೃತ್ತಮ್ ಇತ್ಯಾಹುಃ । ಏತತ್ ತೈರುಕ್ತಂ

---

1. ಅವನ ವಿಷಯದಲ್ಲಿ ನಡೆದುಕೊಂಡನು ಎಂದರ್ಥ.

2. ಸಾಮಂತನು ರಾಜನ ವಿಷಯದಲ್ಲಿ ಅಥವಾ ರಾಜನು ಸಾಮಂತನ ವಿಷಯದಲ್ಲಿ ಸೆರೆಹಿಡಿಯುವದೇ ಮುಂತಾದ ಕೆಟ್ಟಮಾರ್ಗದಿಂದ ನಡೆದ ಕೊಂಡಾನೆಂಬ ಶಂಕೆಯಿರುವಾಗ ಹಾಗೆ ಮಾಡದಿದ್ದರೆ 'ಸಾಮದಿಂದ ನಡೆದುಕೊಂಡನು' ಎನ್ನುತ್ತಾರೆ, ಒಳ್ಳೆಯಮಾರ್ಗದಿಂದ ವರ್ತಿಸಿದನು ಎಂಬುದೇ ಅವರ ಅಭಿಪ್ರಾಯ.

ಭವತಿ ಯತ್ ಸಾಧು ಭವತಿ । ಸಾಧು ಬತ ಇತ್ಯೇವ ತದಾಹುಃ ವಿಪರ್ಯಯೇಣ ಜಾತೇ ಅಸಾಮ ನೋ ಬತ !– ಇತಿ ಯದಸಾಧು ಭವತಿ । ಅಸಾಧು ಬತ !– ಇತ್ಯೇವ ತದಾಹುಃ । ತಸ್ಮಾತ್ ಸಾಮಸಾಧುಶಬ್ದಯೋರೇಕಾರ್ಥತ್ವಂ ಸಿದ್ಧಮ್ ॥

(ಭಾಷ್ಯಾರ್ಥ)

ಮತ್ತು ಹೀಗೂ ತಮಗೇ ಗೊತ್ತಿರುವದನ್ನು ಅನ್ನುತ್ತಾರೆ 'ನಮಗೆ ಸಾಮ ನಾಯಿತಪ್ಪ!' ಎಂದು ಅನುಕಂಪೆಯನ್ನು ತೋರಿಸುತ್ತಾ (ಹೇಳುತ್ತಾರಷ್ಟೆ), ಯಾವದು ಒಳ್ಳೆಯದಾಗಿರುತ್ತದೆಯೋ ಅದನ್ನೇ ಅವರು (ಹಾಗೆಂದು) ಹೇಳುತ್ತಾರೆ 'ಸಾಧುವಪ್ಪ!' ಎಂದೇ ಅದನ್ನು (ಸಾಮವೆಂದು) ಹೇಳಿರುತ್ತಾರೆ. ಯಾವದು ಅಸಾಧುವಾಗಿರುತ್ತದೆಯೋ (ಅದನ್ನು) 'ನಮಗೆ ಅಸಾಮವಪ್ಪ' ಎನ್ನುತ್ತಾರೆ). 'ಅಸಾಧುವಪ್ಪ!' ಎಂದೇ ಅದನ್ನು (ಅಸಾಮವೆಂದು) ಹೇಳಿರುತ್ತಾರೆ[1]. ಆದ್ದರಿಂದ ಸಾಮಸಾಧುಶಬ್ದಗಳಿಗೆರಡಕ್ಕೂ ಒಂದೇ ಅರ್ಥವೆಂದು ಸಿದ್ಧವಾಯಿತು.[2]

## ಸಾಮವನ್ನು ಸಾಧುವೆಂದು ಉಪಾಸನೆಮಾಡಿದರೆ ಫಲ

(ಉಪನಿಷತ್ತು)

**ಸ ಯ ಏತದೇವಂ ವಿದ್ವಾನ್ ಸಾಧು ಸಾಮೇತ್ಯುಪಾಸ್ತೇಽಭ್ಯಾಶೋ ಹ ಯದೇನಗ್ಂ ಸಾಧವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ ॥ ೪ ॥**

೪. ಯಾವನು ಇದನ್ನು ಹೀಗೆಂದರಿತು ಸಾಮವನ್ನು ಸಾಧುವೆಂದು ಉಪಾಸನೆಮಾಡುತ್ತಾನೋ, ಅವನನ್ನು ಬೇಗನೆ ಸಾಧುಧರ್ಮಗಳು ಬಂದು ಸೇರುವವು, ಅವನಿಗೇ ಆಗುವವು.

(ಭಾಷ್ಯ)

೧೧೫ ಅತಃ ಸ ಯಃ ಕಶ್ಚಿತ್ ಸಾಧು ಸಾಮ ಇತಿ ಸಾಧುಗುಣವತ್ ಸಾಮ ಇತಿ ಉಪಾಸ್ತೇ (ಏತತ್ ಏವಂ[3]) ಸಮಸ್ತಂ ಸಾಮ ಸಾಧುಗುಣವತ್

1 ಅನುಭವದಲ್ಲಿ ತಮಗೆ ಒಳ್ಳೆಯದಾಯಿತೆಂದು ಕಂಡುಬಂದದ್ದನ್ನು ಸಾಮವೆಂದೂ ಕೆಟ್ಟದ್ದಾಯಿತೆಂದು ಕಂಡುಬಂದದ್ದನ್ನು ಅಸಾಮವೆಂದೂ ಕರೆಯುತ್ತಾರೆ

2. ಈ ಎರಡು ಅನ್ವಯವ್ಯತಿರೇಕಗಳ ಉದಾಹರಣೆಗಳಿಂದ ಸಾಮವೆಂದರೆ ಸಾಧುವೆಂದೇ ಆಯಿತು. 'ಇದು ಹೇಗೆ ಗೊತ್ತಾಗುತ್ತದೆ?' ಎಂದು ಭಾ. ಭೂ. ೧೧೨ರಲ್ಲಿ ಕೇಳಿದ್ದ ಪ್ರಶ್ನೆಗೆ ಉತ್ತರವನ್ನು ಇಲ್ಲಿಗೆ ಉಪಸಂಹಾರವನ್ನು ಮಾಡಿದಂತೆ ಆಯಿತು ಎಂದು ಭಾವ

3. ಈ ಮಾತುಗಳು ಇಲ್ಲಿ ಬಿಟ್ಟುಹೋಗಿವೆ, ಅಥವಾ ಇವುಗಳ ಅರ್ಥವನ್ನು ಮಾತ್ರ ಭಾಷ್ಯದಲ್ಲಿ ಮುಂದೆ ಬರೆದಿದೆ

ವಿದ್ವಾನ್, ತಸ್ಯ ಏತತ್ ಫಲಮ್ । ಅಭ್ಯಾಶೋ ಹ ಕ್ಷಿಪ್ರಂ ಹ । ಯತ್ ಇತಿ ಕ್ರಿಯಾವಿಶೇಷಣಾರ್ಥಮ್ । ಏನಮ್ ಉಪಾಸಕಂ ಸಾಧವಃ ಶೋಭನಾಃ ಧರ್ಮಾಃ ಶ್ರುತಿಸ್ಮೃತ್ಯವಿರುದ್ಧಾಃ ಆ ಚ ಗಚ್ಛೇಯುಃ ಆಗಚ್ಛೇಯುಶ್ಚ । ನ ಕೇವಲಮ್ ಆಗಚ್ಛೇಯುಃ, ಉಪ ಚ ನಮೇಯುಃ । ಉಪನಮೇಯುಶ್ಚ । ಭೋಗ್ಯತ್ವೇನ ಉಪತಿಷ್ಠೇಯುಃ ಇತ್ಯರ್ಥಃ ॥

(ಭಾಷ್ಯಾರ್ಥ)

ಆದ್ದರಿಂದ ಯಾವನೇ ಆಗಲಿ ಸಾಮವು ಸಾಧು ಎಂದು, ಸಾಮವು ಸಾಧು ಗುಣವುಳ್ಳದ್ದು ಎಂದು ಉಪಾಸನೆಮಾಡುತ್ತಾನೋ, (ಈ) ಸಮಸ್ತಸಾಮವನ್ನು ಸಾಧುಗುಣವುಳ್ಳದ್ದೆಂದು ಅ ರಿ ತು ಕೊ ೦ ಡು (ಯಾವನು ಉಪಾಸನೆಮಾಡು ತ್ತಾನೋ), ಅವನಿಗೆ ಇದು ಫಲವು (ಅಭ್ಯಾಶಃ=ಕ್ಷಿಪ್ರಮ್) ಬೇಗನೆಯೇ (ಇದಾ ಗುವಮ)- ಇಲ್ಲಿ ಯತ್ ಎಂಬುದು ಕ್ರಿಯಾವಿಶೇಷಣಕ್ಕಾಗಿ (ಪ್ರಯುಕ್ತವಾಗಿದೆ)[1]. ಈ ಉಪಾಸಕನನ್ನು ಸಾಧುವಾದ ಒಳ್ಳೆಯ ಧರ್ಮಗಳು, ಶ್ರುತಿಸ್ಮೃತಿಗಳಿಗೆ ವಿರುದ್ಧವಲ್ಲದ ಧರ್ಮಗಳು (ಆ ಚ ಗಚ್ಛೇಯುಃ ಆಗಚ್ಛೇಯುಶ್ಚ), ಬಂದುಸೇರು ವವು. ಬಂದುಸೇರುವವು ಎಂಬುದಿಷ್ಟೇ ಅಲ್ಲ, (ಉಪ ಚ ನಮೇಯುಃ=ಉಪ ನಮೇಯುಶ್ಚ) ಭೋಗ್ಯವಾಗಿಯೂ ಅವನಿಗೇ ಆಗುವವು ಎಂದರ್ಥ.

---

# ಎರಡನೆಯ ಅಧ್ಯಾಯ-ಎರಡನೆಯ ಖಂಡ

(ಪಂಚವಿಧಸಾಮಗಳ ಉಪಾಸನೆ)

## ಊರ್ಧ್ವಲೋಕಗಳ ದೃಷ್ಟಿಯಿಂದ ಉಪಾಸನೆ

(ಉಪನಿಷತ್ತು)

**ಲೋಕೇಷು ಪಞ್ಚವಿಧಗ್ಂ ಸಾಮೋಪಾಸೀತ ಪೃಥಿವೀ ಹಿಂಕಾರಃ । ಅಗ್ನಿಃ ಪ್ರಸ್ತಾವೋಽನ್ತರಿಕ್ಷಮುದ್ಗೀಥ ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತ್ಯೂರ್ಧ್ವೇಷು ॥ ೧ ॥**

೧. ಲೋಕಗಳಲ್ಲಿ ಐದು ಬಗೆಯ ಸಾಮವನ್ನು ಉಪಾಸನೆ ಮಾಡಬೇಕು. ಪೃಥಿವಿಯು ಹಿಂಕಾರವು, ಅಗ್ನಿಯು ಪ್ರಸ್ತಾವವು,

1. 'ಆಗಚ್ಛೇಯುರಿತಿ ಯತ್ ತತ್ ಕ್ಷಿಪ್ರಮೇವ' ಎಂದು ಕ್ರಿಯಾವಿಶೇಷಣಾರ್ಥ ದಲ್ಲಿ 'ಅಭ್ಯಾಶೋ ಹ ಯತ್' ಎಂದು ಪ್ರಯೋಗಿಸಿದೆ ಎಂದು ಅಭಿಪ್ರಾಯ.

ಅಂತರಿಕ್ಷವು ಉದ್ಗೀಥವು, ಆದಿತ್ಯನು ಪ್ರತಿಹಾರವು, ದ್ಯುಲೋಕವು ನಿಧನವು. ಹೀಗೆ ಊರ್ಧ್ವ(ಲೋಕ)ಗಳ (ವಿಷಯ)ದಲ್ಲಿ (ಉಪಾಸನೆಗಳು).

## ಸಮಸ್ತೋಪಾಸನೆಗಳಲ್ಲೆಲ್ಲ ಸಾಧುದೃಷ್ಟಿಯಿರಬೇಕು

(ಭಾಷ್ಯ)

೧೧೬. ಕಾನಿ ಪುನಸ್ತಾನಿ ಸಾಧುದೃಷ್ಟಿವಿಶಿಷ್ಟಾನಿ ಸಮಸ್ತಾನಿ ಸಾಮಾನಿ ಉಪಾಸ್ಯಾನೀತಿ ? ಇಮಾನಿ ತಾನಿ ಉಚ್ಯನ್ತೇ । ಲೋಕೇಷು ಪಞ್ಚವಿಧಮ್ ಇತ್ಯಾದೀನಿ । ನನು ಲೋಕಾದಿದೃಷ್ಟ್ಯಾ ತಾನಿ ಉಪಾಸ್ಯಾನಿ ಸಾಧುದೃಷ್ಟ್ಯಾ ಚ ಇತಿ ವಿರುದ್ಧಮ್ । ನ ಸಾಧ್ವರ್ಥಸ್ಯ ಲೋಕಾದಿಕಾರ್ಯೇಷು ಕಾರಣಸ್ಯ ಅನುಗತತ್ವಾತ್ । ಮೃದಾದಿವತ್ ಘಟಾದಿವಿಕಾರೇಷು । ಸಾಧುಶಬ್ದವಾಚ್ಯೋಽರ್ಥೋ ಧರ್ಮೋ ಬ್ರಹ್ಮ ವಾ ಸರ್ವಥಾಽಪಿ ಲೋಕಾದಿಕಾರ್ಯೇಷು ಅನುಗತಮ್ । ಅತಃ ಯಥಾ ಯತ್ರ ಘಟಾದಿದೃಷ್ಟಿಃ ಮೃದಾದಿದೃಷ್ಟ್ಯನುಗತ್ಯೈವ ಸಾ । ತಥಾ ಸಾಧುದೃಷ್ಟ್ಯನುಗತ್ಯೈವ ಲೋಕಾದಿದೃಷ್ಟಿಃ । ಧರ್ಮಾದಿಕಾರ್ಯತ್ವಾತ್ ಲೋಕಾದೀನಾಮ್ । ಯದ್ಯಪಿ ಕಾರಣತ್ವಮ್, ಅವಿಶಿಷ್ಟಂ ಬ್ರಹ್ಮಧರ್ಮಯೋಃ, ತಥಾಪಿ[1] ಧರ್ಮ ಏವ ಸಾಧುಶಬ್ದವಾಚ್ಯಃ ಇತಿ ಯುಕ್ತಮ್ । "ಸಾಧುಕಾರೀ ಸಾಧುರ್ಭವತಿ" (೪-೪-೫) ಇತಿ ಧರ್ಮವಿಷಯೇ ಸಾಧುಶಬ್ದಪ್ರಯೋಗಾತ್ । ನನು ಲೋಕಾದಿಕಾರ್ಯೇಷು ಕಾರಣಸ್ಯ ಅನುಗತತ್ವಾತ್ ಅರ್ಥಪ್ರಾಪ್ತೈವ ತದ್ದೃಷ್ಟಿಃ ಇತಿ "ಸಾಧು ಸಾಮೇತ್ಯುಪಾಸ್ತೇ" (೨-೧-೪) ಇತಿ ನ ವಕ್ತವ್ಯಮ್ । ನ । ಶಾಸ್ತ್ರಗಮ್ಯತ್ವಾತ್ ತದ್ದೃಷ್ಟೇಃ । ಸರ್ವತ್ರ ಹಿ ಶಾಸ್ತ್ರಪ್ರಾಪಿತಾ ಏವ ಧರ್ಮಾಃ ಉಪಾಸ್ಯಾಃ, ನ ವಿದ್ಯಮಾನಾ ಅಪಿ ಅಶಾಸ್ತ್ರೀಯಾಃ ॥

(ಭಾಷ್ಯಾರ್ಥ)

(ಪ್ರಶ್ನೆ) :- ಸಾಧುದೃಷ್ಟಿವಿಶಿಷ್ಟವಾಗಿರುವವೆಂದು ಉಪಾಸನೆ ಮಾಡಬೇಕಾದ ಆ ಸಮಸ್ತಸಾಮಗಳು ಯಾವವು ?

(ಉತ್ತರ) :- ಆ ಇವುಗಳನ್ನು ಹೇಳಲಾಗುತ್ತದೆ. ಲೋಕಗಳಲ್ಲಿ ಐದು ಬಗೆಯ (ಸಾಮವನ್ನು) ಎಂದು ಮುಂತಾಗಿ ಈ ಹೇಳಿರುವ (ಸಾಮಗಳೇ ಇವು).

---

1. 'ಧರ್ಮ ಏವ' ಇತ್ಯತ್ರ 'ತಥಾಪಿ' ಇತಿ ವಕ್ತವ್ಯಮ್ -ಎಂದು ಟೀಕೆಯಿರುವದರಿಂದ ಟೀಕಾಸಮ್ಮತವಾದ ಭಾಷ್ಯಪಾಠದಲ್ಲಿ ತಥಾಪಿ ಎಂಬುದು ಇರಲಿಲ್ಲವೆಂದು ಹೇಳಬೇಕಾಗಿದೆ.

(ಆಕ್ಷೇಪ) :– ಲೋಕಗಳೇ ಮುಂತಾದ ದೃಷ್ಟಿಯಿಂದ[1] ಇವನ್ನು ಉಪಾಸನೆ ಮಾಡಬೇಕು, ಸಾಧುದೃಷ್ಟಿಯಿಂದಲೂ ಉಪಾಸನೆಮಾಡಬೇಕು ಎಂಬುದು ವಿರುದ್ಧವಲ್ಲವೆ ?[2]

(ಪರಿಹಾರ) .– ಹಾಗಲ್ಲ, ಏಕೆಂದರೆ ಕಾರಣವಾದ ಸಾಧು ಎಂಬರ್ಥವು, ಮೃದಾದಿಗಳು ಘಟವೇ ಮುಂತಾದವುಗಳಲ್ಲಿ ಅನುಗತವಾಗಿರುವಂತೆ, ಲೋಕವೇ ಮುಂತಾದ ಕಾರ್ಯಗಳಲ್ಲಿ ಅನುಗತವಾಗಿರುತ್ತದೆ ಸಾಧುಶಬ್ದವಾಚ್ಯವಾದ ಪದಾರ್ಥವು ಧರ್ಮವಾಗಲಿ ಬ್ರಹ್ಮವಾಗಲಿ,[3] ಹೇಗೂ ಲೋಕವೇ ಮುಂತಾದ ಕಾರ್ಯಗಳಲ್ಲಿ (ಅದು) ಅನುಗತವಾಗಿಯೇ ಇರುತ್ತದೆ ಆದ್ದರಿಂದ ಹೇಗೆ ಏತರಲ್ಲಿ[4] ಘಟಾದಿದೃಷ್ಟಿಯಿರುವದೋ (ಅದರಲ್ಲಿ) ಆ (ದೃಷ್ಟಿಯು ಹೇಗೆ) ಮೃದಾದಿದೃಷ್ಟಿಗಳಿಂದ ಅನುಗತವಾಗಿಯೇ ಇರುವದೋ, ಹಾಗೆಯೇ (ಸಾಮಗಳಲ್ಲಿ ಮಾಡುವ) ಲೋಕಾದಿದೃಷ್ಟಿಯು ಸಾಧುದೃಷ್ಟಿಯಿಂದ ಅನುಗತವಾಗಿಯೇ ಇರುತ್ತದೆ, ಏಕೆಂದರೆ ಲೋಕಾದಿಗಳು ಧರ್ಮಾದಿಗಳ ಕಾರ್ಯವಾಗಿರುತ್ತವೆ.[5] ಬ್ರಹ್ಮವೂ ಧರ್ಮವೂ ಕಾರಣವೆಂಬುದು ಸಮಾನವಾಗಿದೆಯಾದರೂ ಧರ್ಮವೇ (ಇಲ್ಲಿ) ಸಾಧುಶಬ್ದವಾಚ್ಯವಾದದ್ದು ಎಂಬುದು ಯುಕ್ತವು.[6] ಏಕೆಂದರೆ "ಸಾಧು

---

1. ಲೋಕಗಳು, ವೃಷ್ಟಿ, ಅಪ್ಪು, ಋತುಗಳು, ಪಶುಗಳು, ಪ್ರಾಣಗಳು– ಇವುಗಳ ದೃಷ್ಟಿಯಿಂದ ಎಂದರ್ಥ, ಈ ಉಪಾಸನೆಗಳನ್ನೇ ಮುಂದಿನ ಕಂಡಿಕೆಗಳಲ್ಲಿ ವಿವರಿಸಿವೆ. ಮೂಲದಲ್ಲಿ ಲೋಕಗಳಲ್ಲಿ ಎಂದಿದ್ದರೂ ಲೋಕದೃಷ್ಟಿಯಿಂದ ಎಂದೇ ಅರ್ಥ ; ಏಕೆಂದರೆ ಇಲ್ಲಿ ಆಯಾ ದೃಷ್ಟಿವಿಧಾನವೇ ಪ್ರಕೃತ.

2 ಒಂದು ವಸ್ತು ಎರಡು ದೃಷ್ಟಿಗಳಿಗೆ ವಿಷಯವಾಗಿರುವದು ಹೇಗೆ ? ಘಟವು ಪಟವಾಗಲಾರದಷ್ಟೆ ?– ಎಂದು ಭಾವ.

3. ಸಾಧು ಎಂದರೆ ಒಳ್ಳೆಯ ಕರ್ಮವೆಂದಾಗಲಿ ಒಳ್ಳೆಯ ವಸ್ತುವೆಂದಾಗಲಿ ಅರ್ಥವನ್ನು ಮಾಡಬಹುದು.

4. ಯತ್ರ ಎಂದರೆ ಯಾವ ದೇವದತ್ತನೇ ಮುಂತಾದ ಪುರುಷನಲ್ಲಿ ಎಂದು ಟೀಕೆ ; ಈ ವ್ಯಾಖ್ಯಾನವು ಅನವಶ್ಯ, ಅನುಪಯುಕ್ತ. ಏಕೆಂದರೆ ವಸ್ತುವಿನಲ್ಲಿ ಮಾಡುವ ದೃಷ್ಟಿಯೇ ಇಲ್ಲಿ ಪ್ರಕೃತ, ಕರ್ತೃವೊಬ್ಬನಲ್ಲಿ ಎರಡು ದೃಷ್ಟಿಗಳಿರಬಹುದೆಂಬುದು ಪ್ರಕೃತವಲ್ಲ.

5. ಧರ್ಮವು ನಿಮಿತ್ತಕಾರಣ, ಬ್ರಹ್ಮವು ನಿಮಿತ್ತಕಾರಣವೂ ಉಪಾದಾನಕಾರಣವೂ ಆಗಿದೆ. ಮತ್ತೊಂದು ಬಗೆಯಿಂದ ನೋಡಿದರೆ ಬ್ರಹ್ಮದೃಷ್ಟಿಯೇ ಧರ್ಮದಲ್ಲಿಯೂ ಅನುಗತವಾಗಿದೆ ಎನ್ನಬಹುದು.

6. ಧರ್ಮವು ನಿಮಿತ್ತಕಾರಣವಾದರೂ ಕರ್ಮಾಪೂರ್ವಸಹಿತವಾದ ದಧಿಪಯಆದಿ ದ್ರವ್ಯಗಳೇ ಧರ್ಮವಾದ್ದರಿಂದ ಅದೂ ಉಪಾದಾನಕಾರಣವಾಗಿದೆ ಎಂದು ಟೀಕೆ. ಸಾಮವು ಕರ್ಮವಾಗಿರುವದರಿಂದ ಕರ್ಮರೂಪವಾದ ಧರ್ಮದ ದೃಷ್ಟಿಯು ಅದರಲ್ಲಿಯೂ ಅನುಗತವಾಗಿದೆ ಎಂಬುದು ಸ್ವಾಭಾವಿಕವಾಗಿದೆ; ಲೋಕಾದಿಗಳು ಧರ್ಮಕಾರ್ಯವಾಗಿರುವದರಿಂದಲೂ ಕರ್ಮದ ಅಪೇಕ್ಷೆಯಿಂದಲೇ ಬ್ರಹ್ಮವನ್ನು ಲೋಕಾದಿಗಳಿಗೆ ಕಾರಣವೆಂದು ಎಣಿಸಬೇಕಾಗಿರುವದರಿಂದಲೂ ಧರ್ಮಬುದ್ಧಿಯು ಅವುಗಳಲ್ಲಿಯೂ ಅನುಗತವಾಗಿರುವದು ವಿಶದವಲ್ಲ

ಕಾರಿಯಾದವನು ಸಾಧುವಾಗುವನು" (ಬೃ. ೪-೪-೫) ಎಂದು ಧರ್ಮದ ವಿಷಯ ದಲ್ಲಿಯೇ ಸಾಧುಶಬ್ದವನ್ನು (ಶ್ರುತಿಯಲ್ಲಿ) ಪ್ರಯೋಗಿಸಿರುತ್ತದೆ.[1]

(ಆಕ್ಷೇಪ) .- ಲೋಕಗಳೇ ಮುಂತಾದವುಗಳಲ್ಲಿ ಕಾರಣ(ವಾದ ಧರ್ಮ)ವು ಅನುಗತವೇ ಆಗಿರುವದರಿಂದ ಆ (ಕಾರಣ)ದೃಷ್ಟಿಯು ತಾನೇ ಪ್ರಾಪ್ತವಾಗಿರುವದ ರಿಂದ "ಸಾಧುವೆಂದು ಸಾಮವನ್ನು ಉಪಾಸನೆಮಾಡುವನೋ" (೨-೧-೪) ಎಂದು ಹೇಳಬೇಕಾದದ್ದೇ ಇಲ್ಲವಲ್ಲ!

(ಪರಿಹಾರ) .- ಹಾಗಲ್ಲ. ಏಕೆಂದರೆ ಆ (ಕಾರಣದ) ದೃಷ್ಟಿಯು ಶಾಸ್ತ್ರ ದಿಂದಲೇ ತಿಳಿಯಬರಬೇಕಾಗಿರುತ್ತದೆ. (ಇದರ ವಿವರ): ಎಲ್ಲೆಲ್ಲಿಯೂ ಶಾಸ್ತ್ರ ದಿಂದ ಬಂದೊದಗಿರುವ ಧರ್ಮಗಳನ್ನೇ ಉಪಾಸನೆಮಾಡಬೇಕೇ ಹೊರತು ಅಶಾಸ್ತ್ರೀಯವಾದ ಧರ್ಮಗಳು ಇದ್ದರೂ ಉಪಾಸನೆಮಾಡತಕ್ಕದ್ದಲ್ಲ.[2]

## ಕಂಡಿಕೆಯ ವ್ಯಾಖ್ಯಾನ

(ಭಾಷ್ಯ)

೧೧೭. ಲೋಕೇಷು ಪೃಥಿವ್ಯಾದಿಷು ಪಞ್ಚವಿಧಂ ಪಞ್ಚಭಕ್ತಿಭೇದೇನ ಪಞ್ಚಪ್ರಕಾರಂ ಸಾಧು ಸಮಸ್ತಂ ಸಾಮ ಉಪಾಸೀತ। ಕಥಮ್? ಪೃಥಿವೀ ಹಿಂಕಾರಃ। ಲೋಕೇಷು ಇತಿ ಯಾ ಸಪ್ತಮೀ ತಾಂ ಪ್ರಥಮಾತ್ವೇನ ವಿಪರಿ ಣಮಯ್ಯ ಪೃಥಿವೀದೃಷ್ಟ್ಯಾ ಹಿಂಕಾರೇ ಪೃಥಿವೀ ಹಿಂಕಾರಃ ಇತಿ ಉಪಾಸೀತ। ವ್ಯತ್ಯಸ್ಯ ವಾ ಸಪ್ತಮೀಶ್ರುತಿಂ ಲೋಕವಿಷಯಾಂ ಹಿಂಕಾರಾದಿಷು ಪೃಥಿವ್ಯಾದಿ ದೃಷ್ಟಿಂ ಕೃತ್ವಾ ಉಪಾಸೀತ। ತತ್ರ ಪೃಥಿವೀ ಹಿಂಕಾರಃ। ಪ್ರಾಥಮ್ಯಸಾ ಮಾನ್ಯಾತ್। ಅಗ್ನಿಃ ಪ್ರಸ್ತಾವಃ। ಅಗ್ನೌ ಹಿ ಕರ್ಮಾಣಿ ಪ್ರಸ್ತೂಯನ್ತೇ। ಪ್ರಸ್ತಾವಶ್ಚ ಭಕ್ತಿಃ। ಅನ್ತರಿಕ್ಷಮ್ ಉದ್ಗೀಥಃ। ಅನ್ತರಿಕ್ಷಂ ಹಿ ಗಗನಮ್। ಗಕಾರವಿಶಿಷ್ಟಶ್ಚ ಉದ್ಗೀಥಃ। ಆದಿತ್ಯಃ ಪ್ರತಿಹಾರಃ। ಪ್ರತಿಪ್ರಾಣಿ ಅಭಿ ಮುಖತ್ವಾತ್ ಮಾಂ ಪ್ರತಿ ಮಾಂ ಪ್ರತಿ ಇತಿ। ದ್ಯೌರ್ನಿಧನಮ್। ದಿವಿ ನಿಧೀಯನ್ತೇ ಹಿ ಇತೋ ಗತಾಃ। ಇತಿ ಊರ್ಧ್ವೇಷು ಊರ್ಧ್ವಗತೇಷು ಲೋಕ ದೃಷ್ಟ್ಯಾ ಸಾಮೋಪಾಸನಮ್ ॥

---

1. ಸಾಧುಕಾರೀ ಎಂಬಲ್ಲಿ ಸಾಧುಶಬ್ದಕ್ಕೆ ಬ್ರಹ್ಮಾರ್ಥವಿಲ್ಲ; ಏಕೆಂದರೆ ಬ್ರಹ್ಮವು ಅನುಷ್ಠೇಯವಲ್ಲ.

2. ಶಾಸ್ತ್ರದಲ್ಲಿ ಸ್ಪಷ್ಟವಾಗಿ ವಿಧಿಸಿರುವಂತೆ ಅನುಷ್ಠಾನಮಾಡಬೇಕೇ ಹೊರತು, ತಾನೇ ತೋರುವದನ್ನಲ್ಲ.

(ಭಾಷ್ಯಾರ್ಥ)

ಲೋಕಗಳಲ್ಲಿ ಎಂದರೆ ಪೃಥಿವ್ಯಾದಿಗಳಲ್ಲಿ ಐದು ಬಗೆಯ, ಐದು ಭಕ್ತಿವಿಶೇಷಗಳಿರುವದರಿಂದ[1] ಐದು ಪ್ರಕಾರವಾಗಿರುವ ಸಮಸ್ತಸಾಮವನ್ನು ಸಾಧುವೆಂದು ಉಪಾಸನೆಮಾಡಬೇಕು. ಹೇಗೆಂದರೆ, ಪೃಥಿವಿಯೇ ಹಿಂಕಾರವು. 'ಲೋಕಗಳಲ್ಲಿ' ಎಂಬ ಸಪ್ತಮೀ(ವಿಭಕ್ತಿ)ಯಿದೆಯಷ್ಟೆ, ಅದನ್ನು ಪ್ರಥಮಾವಿಭಕ್ತಿಯಾಗಿ ವಿಪರಿಣಾಮಮಾಡಿಕೊಂಡು, ಪೃಥಿವೀದೃಷ್ಟಿಯಿಂದ ಹಿಂಕಾರದಲ್ಲಿ, ಪೃಥಿವಿಯೇ ಹಿಂಕಾರವು ಎಂದು ಉಪಾಸನೆಮಾಡಬೇಕು.[2] ಅಥವಾ ಲೋಕವಿಷಯದಲ್ಲಿರುವ ಸಪ್ತಮೀಶ್ರುತಿಯನ್ನು ವ್ಯತ್ಯಾಸಮಾಡಿಕೊಂಡು ಹಿಂಕಾರಾದಿಗಳಲ್ಲಿ ಪೃಥಿವ್ಯಾದಿದೃಷ್ಟಿಯನ್ನು ಮಾಡಿಕೊಂಡು ಉಪಾಸನೆಮಾಡಬೇಕು.[3]

ಇಲ್ಲಿ ಪೃಥಿವಿಯೇ ಹಿಂಕಾರವು, ಏಕೆಂದರೆ ಒಂದನೆಯದಾಗಿರುವದೆಂಬುದು (ಎರಡಕ್ಕೂ) ಸಮಾನವು[4] ಅಗ್ನಿಯು ಪ್ರಸ್ತಾವವು, ಅಗ್ನಿಯಲ್ಲಲ್ಲವೆ, ಕರ್ಮಗಳು ಪ್ರಸ್ತುತವಾಗುವವು? ಭಕ್ತಿಯೂ ಪ್ರಸ್ತಾವವೇ.[5] ಅಂತರಿಕ್ಷವೇ ಉದ್ಗೀಥವು. ಅಂತರಿಕ್ಷವೆಂದರೆ ಗಗನವಷ್ಟೆ? ಉದ್ಗೀಥವೂ ಗಕಾರವಿಶಿಷ್ಟವಾಗಿರುತ್ತದೆ.[6] ಆದಿತ್ಯನೇ ಪ್ರತಿಹಾರವು, ಏಕೆಂದರೆ (ಆದಿತ್ಯನು) 'ನನಗೆ ಪ್ರತಿ, ನನಗೆ ಪ್ರತಿ'

---

1. ಗಾನಮಾಡುವ ಸಾಮಕ್ಕೆ ಐದು ಭಾಗಗಳು. ಮೊದಲು ಉದ್ಗಾತೃವು ಹೇಳುವದು ಹಿಂಕಾರವು, ಪ್ರಸ್ತೋತೃವು ಗಾನಮಾಡಬೇಕಾದ ಎರಡನೆಯ ಭಾಗವು ಪ್ರಸ್ತಾವವು; ಉದ್ಗಾತೃವು ಗಾನಮಾಡಬೇಕಾದ ಮೂರನೆಯ ಭಾಗವು ಉದ್ಗೀಥವು; ಪ್ರತಿಹರ್ತೃವು ಗಾನಮಾಡಬೇಕಾದ ನಾಲ್ಕನೆಯ ಭಾಗವು ಪ್ರತಿಹಾರವು, ಎಲ್ಲರೂ ಒಟ್ಟು ಸೇರಿ ಗಾನಮಾಡುವ ಐದನೆಯ ಭಾಗವು ನಿಧನವು. ಈ ಐದು ಭಕ್ತಿಗಳನ್ನು ಸಾಧುದೃಷ್ಟಿಯಿಂದಲೂ ಲೋಕದೃಷ್ಟಿಯಿಂದಲೂ ಉಪಾಸನೆಮಾಡಬೇಕು - ಎಂದರ್ಥ.

2. 'ಲೋಕೇಷು ಸಾಮ ಉಪಾಸೀತ' ಎಂಬುದನ್ನು 'ಲೋಕಾಃ ಸಾಮ ಇತ್ಯುಪಾಸೀತ' ಎಂಬ ವಾಕ್ಯವಾಗಿ ಮಾರ್ಪಡಿಸಿಕೊಂಡು ಅರ್ಥವನ್ನು ಮಾಡಬೇಕು ಎಂದರ್ಥ.

3. 'ಲೋಕೇಷು ಸಾಮ ಉಪಾಸೀತ' ಎಂಬುದನ್ನು 'ಲೋಕಾ ಇತಿ ಸಾಮಾನಿ ಉಪಾಸೀತ' ಎಂದು ಮಾರ್ಪಡಿಸಿ ತಿಳಿಯಬೇಕು ಎಂದರ್ಥ. ಈ ಎರಡು ಬಗೆಯಲ್ಲಿ ಮಾರ್ಪಡಿಸಿಕೊಳ್ಳುವದಕ್ಕೆ ಕಾರಣವು ಲೋಕಾದಿಗಳ ಉತ್ಕರ್ಷವೇ ಎಂದು ಬ್ರ. ಸೂ. ೪-೧-೫ರ ನ್ಯಾಯವನ್ನು ವ್ಯಾಖ್ಯಾನಕಾರರು ಹೇಳಿರುವದು ಸರಿಯಲ್ಲ; ಬ್ರ. ಸೂ. ೪-೧-೬ರಲ್ಲಿರುವ ನ್ಯಾಯವೇ ಇಲ್ಲಿ ಯುಕ್ತ. ಆ ಸೂತ್ರದ ಭಾಷ್ಯವನ್ನು (ಭಾ. ಭಾ. ೫೧೭, ೫೧೮) ನೋಡಿ.

4. ಹಿಂಕಾರವು ಸಾಮದಲ್ಲಿಯೂ ಪೃಥಿವಿಯು ಲೋಕಗಳಲ್ಲಿಯೂ ಒಂದನೆಯದು.

5. ಪ್ರಶಬ್ದವು ಎರಡಕ್ಕೂ ಸಮಾನವಾಗಿದೆ.

6. ಗಕಾರವು ಎರಡಕ್ಕೂ ಸಮಾನವಾಗಿದೆ. ಗಕಾರಸಾಮ್ಯದಿಂದ ಉಪಾಸನೆ, ಯಾವದಾದರೊಂದು ಹೋಲಿಕೆಯನ್ನು ನೆನಪಿಗೆ ತಂದುಕೊಂಡು ಉಪಾಸನೆಮಾಡಬೇಕು.

ಎಂದು ಪ್ರತಿಯೊಬ್ಬ ಜೀವನಿಗೂ ಅಭಿಮುಖವಾಗಿರುತ್ತಾನೆ.[1] ದ್ಯುಲೋಕವು ನಿಧನವು. ಇಲ್ಲಿಂದ ಹೋದವರು ದ್ಯುಲೋಕದಲ್ಲಿ ನಿಹಿತರಾಗುತ್ತಾರಷ್ಟೆ[2] ?

ಹೀಗೆ ಊರ್ಧ್ವವಾದ, ಮೇಲುಗಡೆಗಿರುವ (ಲೋಕ)ಗಳಲ್ಲಿ, ಲೋಕದೃಷ್ಟಿಯಿಂದ ಸಾಮೋಪಾಸನೆಯನ್ನು (ಹೇಳಿದ್ದಾಯಿತು).[3]

## ಆವೃತ್ತಲೋಕಗಳ ದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಅಥಾವೃತ್ತೇಷು ದ್ಯೌರ್ಹಿಂಕಾರ ಆದಿತ್ಯಃ ಪ್ರಸ್ತಾವೋಽನ್ತರಿಕ್ಷಮುದ್ಗೀಥೋಽಗ್ನಿಃ ಪ್ರತಿಹಾರಃ ಪೃಥಿವೀ ನಿಧನಮ್ ॥ ೨ ॥**

೨. ಇನ್ನು ಆವೃತ್ತ(ಲೋಕ)ಗಳಲ್ಲಿ: ದ್ಯುಲೋಕವು ಹಿಂಕಾರವು, ಆದಿತ್ಯನು ಪ್ರಸ್ತಾವವು, ಅಂತರಿಕ್ಷವು ಉದ್ಗೀಥವು. ಅಗ್ನಿಯು ಪ್ರತಿಹಾರವು, ಪೃಥಿವಿಯು ನಿಧನವು.

## ಹಿಂಕಾರಾದಿಗಳಲ್ಲಿ ದ್ಯುಲೋಕಾದಿದೃಷ್ಟಿ

(ಭಾಷ್ಯ)

೧೧೪. ಅಥ ಆವೃತ್ತೇಷು ಅವಾಙ್ಮುಖೇಷು ಪಞ್ಚವಿಧಮ್ ಉಚ್ಯತೇ ಸಾಮೋಪಾಸನಮ್। ಗತ್ಯಾಗತಿವಿಶಿಷ್ಟಾ ಹಿ ಲೋಕಾಃ। ಯಥಾ ತೇ ತಥಾ ದೃಷ್ಟ್ಯೈವ ಸಾಮೋಪಾಸನಂ ವಿಧೀಯತೇ ಯತಃ, ಅತಃ ಆವೃತ್ತೇಷು ಲೋಕೇಷು। ದ್ಯೌರ್ಹಿಂಕಾರಃ। ಪ್ರಾಥಮ್ಯಾತ್। ಆದಿತ್ಯಃ ಪ್ರಸ್ತಾವಃ। ಉದಿತೇ ಹಿ ಆದಿತ್ಯೇ ಪ್ರಸ್ತೂಯನ್ತೇ ಕರ್ಮಾಣಿ ಪ್ರಾಣಿನಾಮ್। ಅನ್ತರಿಕ್ಷಮ್ ಉದ್ಗೀಥಃ ಪೂರ್ವವತ್, ಅಗ್ನಿಃ ಪ್ರತಿಹಾರಃ। ಪ್ರಾಣಿಭಿಃ ಪ್ರತಿಹರಣಾತ್ ಅಗ್ನೇಃ। ಪೃಥಿವೀ ನಿಧನಮ್। ತತ ಆಗತಾನಾಮ್ ಇಹ ನಿಧನಾತ್ ॥

---

1. ಪ್ರತಿಶಬ್ದವು ಎರಡಕ್ಕೂ ಸಮಾನವಾಯಿತು. 'ಮಾಂ ಪ್ರತಿ ಮಾಂ ಪ್ರತಿ' ಎಂದು ಪ್ರತಿಯೊಬ್ಬರಿಗೂ ಆದಿತ್ಯನು ಎದುರಿಗೇ ಇರುವಂತೆ ಕಾಣಿಸುತ್ತಾನೆ. ಮುಂದೆ ೨-೯-೧ನ್ನು ನೋಡಿರಿ.

2 ನಿಧನಶಬ್ದವು ಎರಡಕ್ಕೂ ಸಮಾನವಾಯಿತು. ಇಲ್ಲಿ ವಚನದಿಂದಲೇ ಉಪಾಸನೆಯು ವಿಹಿತವಾಗಿದ್ದರೂ ಯಾವದಾದರೊಂದಿಷ್ಟು ಸಾಮಾನ್ಯವನ್ನು ತಿಳಿಸಿ ಉಪಾಸನೆಗೆ ಉಪಪತ್ತಿಯನ್ನು ತೋರಿಸಬೇಕೆಂದು ಕೆಲವು ಕಡೆ ಶಬ್ದಸಾಮಾನ್ಯವನ್ನು ತೋರಿಸಿದೆ.

(ಭಾಷ್ಯಾರ್ಥ)

ಇನ್ನು ಆವೃತ್ತವಾಗಿರುವ ಕೆಳಗಡೆ ಬಂದಿರುವ (ಲೋಕ)ಗಳ (ವಿಷಯ) ದಲ್ಲಿ ಐದು ಬಗೆಯ ಸಾಮೋಪಾಸನೆಯನ್ನು ಹೇಳಲಾಗುವದು ಏಕೆಂದರೆ ಲೋಕಗಳು ಗತ್ಯಾಗತಿವಿಶಿಷ್ಟವಾಗಿರುತ್ತವೆ. ಅವು ಹೇಗಿವೆಯೋ ಆ ದೃಷ್ಟಿ ಯಿಂದಲೇ ಸಾಮೋಪಾಸನೆಯನ್ನು ವಿಧಿಸಲಾಗುತ್ತದೆಯಷ್ಟೆ, ಅದರಿಂದ ಆವೃತ್ತ ಲೋಕಗಳಲ್ಲಿ (ಹೀಗೆ ಉಪಾಸನೆಮಾಡಬೇಕು) [1]

ದ್ಯು(ಲೋಕವು) ಹಿಂಕಾರವು, ಏಕೆಂದರೆ ಮೊದಲನೆದಾಗಿರುವದೆಂಬುದು (ಎರಡಕ್ಕೂ ಸಮಾನವಾಗಿರುತ್ತದೆ). ಆದಿತ್ಯನು ಪ್ರಸ್ತಾವವು, ಏಕೆಂದರೆ ಆದಿತ್ಯನು ಉದಯಿಸುತ್ತಲೂ ಪ್ರಾಣಿಗಳ ಕರ್ಮಗಳು ಪ್ರಸ್ತುತವಾಗುತ್ತವೆ. ಅಂತರಿಕ್ಷವು ಉದ್ಗೀಥವು ಎಂಬುದು ಹಿಂದಿನ (ಕಂಡಿಕೆಯ)ಂತೆಯೇ ಅಗ್ನಿಯು ಪ್ರತಿಹಾರವು, ಏಕೆಂದರೆ ಜೀವರು ಅಗ್ನಿಯನ್ನು ಪ್ರತಿಹರಣಮಾಡುತ್ತಾರೆ.[2] ಪೃಥಿವಿಯು ನಿಧನವು, ಏಕೆಂದರೆ ಅಲ್ಲಿಂದ ಬಂದವರು ಇಲ್ಲಿ ನಿಹಿತರಾಗುತ್ತಾರೆ.[3]

## ಲೋಕದೃಷ್ಟಿಯ ಉಪಾಸನೆಗೆ ಫಲ

(ಉಪನಿಷತ್ತು)

**ಕಲ್ಪನ್ತೇ ಹಾಸ್ಮೈ ಲೋಕಾ ಊರ್ಧ್ವಾಶ್ಚಾವೃತ್ತಾಶ್ಚ ಯ ಏತ ದೇವಂವಿದ್ವಾಁಲ್ಲೋಕೇಷು ಪಞ್ಚವಿಧಂ ಸಾಮೋಪಾಸ್ತೇ ॥ ೩ ॥**

೩. ಯಾವನು ಹೀಗೆಂದರಿತು ಲೋಕಗಳಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡುತ್ತಾನೋ ಅವನಿಗೆ ಊರ್ಧ್ವವಾದ ಮತ್ತು ಆವೃತ್ತವಾದ ಲೋಕಗಳು ಆಗುವವು.

(ಭಾಷ್ಯ)

೧೧೯. ಉಪಾಸನಫಲಮ್ । ಕಲ್ಪನ್ತೇ ಸಮರ್ಥಾ ಭವನ್ತಿ ಹ ಅಸ್ಮೈ ಲೋಕಾ ಊರ್ಧ್ವಾಶ್ಚ ಆವೃತ್ತಾಶ್ಚ ಗತ್ಯಾಗತಿವಿಶಿಷ್ಟಾ ಭೋಗ್ಯತ್ವೇನ ವ್ಯವ ತಿಷ್ಠನ್ತೇ ಇತ್ಯರ್ಥಃ। ಯ ಏತದೇವಂ ವಿದ್ವಾನ್ ಲೋಕೇಷು ಪಞ್ಚವಿಧಂ ಸಮಸ್ತಂ ಸಾಧು ಸಾಮ ಇತ್ಯುಪಾಸ್ತೇ ಇತಿ ಸರ್ವತ್ರ ಯೋಜನಾ ಪಞ್ಚವಿಧೇ ಸಪ್ತವಿಧೇ ಚ ॥

---

1. ಈ ಉಪಾಸನೆಯ ಪ್ರಕಾರವು ಹಿಂದೆ ಹೇಳಿದ್ದಕ್ಕೆ ವಿರುದ್ಧವಲ್ಲ, ಹಿಂದಿನ ಉಪಾ ಸನೆಗಳು ಮೇಲಿನ ಲೋಕಗಳಿಗೆ ಹೋಗುವದನ್ನನುಸರಿಸಿ ಉಕ್ತವಾಗಿವೆ, ಇಲ್ಲಿ ಈ ಕಡೆಗೆ ಇಳಿಯುವ ಕ್ರಮವನ್ನನುಸರಿಸಿ ಹೇಳಿದೆ.

2. ಅತ್ತಿತ್ತ ಒಯ್ಯುತ್ತಾರೆ.

3. ಈ ಕಂಡಿಕೆಯಲ್ಲಿಯೂ ಹಿಂದಿನಂತೆಯೇ ಹೋಲಿಕೆಗಳನ್ನು ಕಲ್ಪಿಸಿಕೊಳ್ಳಬೇಕು ಎಂದು ಅಭಿಪ್ರಾಯ.

(ಭಾಷ್ಯಾರ್ಥ)

(ಈ) ಉಪಾಸನೆಗೆ ಫಲವೇನೆಂದರೆ: ಇವನಿಗೆ ಊರ್ಧ್ವವಾದ ಮತ್ತು ಆವೃತ್ತವಾದ ಗತ್ಯಾಗತಿವಿಶಿಷ್ಟವಾದ ಲೋಕಗಳು ಆಗುವವು. ಭೋಗ್ಯವಾಗಿರುವವು ಎಂದರ್ಥ. ಯಾವನು ಇದನ್ನು ಹೀಗೆಂದರಿತು ಲೋಕಗಳ (ವಿಷಯ)ದಲ್ಲಿ ಐದು ಬಗೆಯ ಸಮಸ್ತಸಾಮವನ್ನು ಸಾಧುವೆಂದು ಹೀಗೆ ಉಪಾಸನೆಮಾಡುತ್ತಾನೋ[1] (ಅವನಿಗೆ ಈ ಫಲವು)– ಎಂದು ಐದು ಬಗೆಯ (ಸಾಮದ ವಿಷಯ) ದಲ್ಲಿಯೂ ಏಳು ಬಗೆಯ (ಸಾಮವಿಷಯ)ದಲ್ಲಿಯೂ ಎಲ್ಲಾ ಕಡೆಯಲ್ಲಿಯೂ (ಫಲವಾಕ್ಯವನ್ನು) ಹೊಂದಿಸಿಕೊಳ್ಳಬೇಕು.

---

# ಎರಡನೆಯ ಅಧ್ಯಾಯ-ಮೂರನೆಯ ಖಂಡ

(ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ವೃಷ್ಟಿದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ವೃಷ್ಟೌ ಪಞ್ಚವಿಧಗ್ಂ ಸಾಮೋಪಾಸೀತ ಪುರೋವಾತೋ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರ ಉದ್ಗೃಹ್ಣಾತಿ ತನ್ನಿಧನಮ್[2] ॥ ೧ ॥**

೧. ವೃಷ್ಟಿ(ವಿಷಯ)ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಮುಂಗಾಳಿಯು ಹಿಂಕಾರವು ; ಮೋಡವು ಹುಟ್ಟುತ್ತದೆಯಲ್ಲ, ಅದು ಪ್ರಸ್ತಾವವು ; ಮಳೆಗರೆಯುತ್ತದೆಯಲ್ಲ, ಅದು ಉದ್ಗೀಥವು ; ಮಿಂಚುತ್ತದೆಯಷ್ಟೆ, ಗುಡುಗುತ್ತದೆಯಷ್ಟೆ, ಅದು ಪ್ರತಿಹಾರವು ; ನಿಲ್ಲುತ್ತದೆಯಲ್ಲ, ಅದು ನಿಧನವು.

---

1. ಲೋಕದೃಷ್ಟಿಯಿಂದಲೂ ಸಾಧುದೃಷ್ಟಿಯಿಂದಲೂ ಉಪಾಸನೆಮಾಡುವನೋ ಎಂದರ್ಥ.

2. 'ಉದ್ಗೃಹ್ಣಾತಿ ತನ್ನಿಧನಮ್' ಎಂಬುದನ್ನು ಮಾ॥ ತೆ॥ ಪಾಠಗಳನ್ನನುಸರಿಸಿ ಈ ಕಂಡಿಕೆಗೇ ಸೇರಿಸಿಕೊಂಡಿದೆ.

# ವೃಷ್ಟಿದೃಷ್ಟಿಯ ಉಪಾಸನೆಗೆ ಹಿಂಕಾರಾದಿಗಳ ವಿನಿಯೋಗ

(ಭಾಷ್ಯ)

೧೨೦. ವೃಷ್ಟೌ ಪಞ್ಚವಿಧಂ ಸಾಮ ಉಪಾಸೀತ। ಲೋಕಸ್ಥಿತೇಃ ವೃಷ್ಟಿನಿಮಿತ್ತತ್ವಾತ್ ಆನನ್ತರ್ಯಮ್। ಪುರೋವಾತೋ ಹಿಂಕಾರಃ। ಪುರೋವಾತಾದ್ಯುದ್ಗ್ರಹಣಾನ್ತಾ ಹಿ ವೃಷ್ಟಿಃ। ಯಥಾ ಸಾಮ-ಹಿಂಕಾರಾದಿನಿಧನಾನ್ತಮ್। ಅತಃ ಪುರೋವಾತೋ ಹಿಂಕಾರಃ। ಪ್ರಾಥಮ್ಯಾತ್। ಮೇಘೋ ಜಾಯತೇ ಸ ಪ್ರಸ್ತಾವಃ। ಪ್ರಾವೃಷಿ ಮೇಘಜನನೇ ವೃಷ್ಟೇಃ ಪ್ರಸ್ತಾವಃ ಇತಿ ಹಿ ಪ್ರಸಿದ್ಧಿಃ। ವರ್ಷತಿ ಸ ಉದ್ಗೀಥಃ। ಶ್ರೈಷ್ಠ್ಯಾತ್। ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ। ಪ್ರತಿಹೃತತ್ವಾತ್। ಉದ್ಗೃಹ್ಣಾತಿ ತನ್ನಿಧನಮ್। ಸಮಾಪ್ತಿಸಾಮಾನ್ಯಾತ್ ॥

(ಭಾಷ್ಯಾರ್ಥ)

ವೃಷ್ಟಿಯ (ವಿಷಯ)ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಲೋಕಗಳಿರುವದಕ್ಕೆ ಮಳೆಯೇ ನಿಮಿತ್ತವಾಗಿರುವದರಿಂದ (ಈ ಉಪಾಸನೆಯನ್ನು (ಲೋಕಸಾಮೋಪಾಸನೆಯ) ಅನಂತರದಲ್ಲಿ (ಹೇಳಿದೆ).[1]

ಮುಂಗಾಳಿಯು ಹಿಂಕಾರವು, ಮುಂಗಾಳಿಯಿಂದ ಮೊದಲಾಗಿ ನಿಲುಗಡೆಯವರೆಗೂ ಅಲ್ಲವೆ, ವೃಷ್ಟಿಯೆಂಬುದು? ಸಾಮವು ಹಿಂಕಾರವು ಮೊದಲಾಗಿ ನಿಧನದವರೆಗೂ ಹೇಗೆ ಸಾಮ(ವೆನಿಸುವದೋ ಹಾಗೆಯೇ ಇದು). ಆದ್ದರಿಂದ ಮುಂಗಾಳಿಯೇ ಹಿಂಕಾರವು, ಏಕೆಂದರೆ (ಎರಡೂ) ಒಂದನೆಯ(ವಾಗಿವೆ). ಮೋಡವು ಹುಟ್ಟುತ್ತದೆಯಲ್ಲ, ಅದು ಪ್ರಸ್ತಾವವು, ಮಳೆಗಾಲದಲ್ಲಿ ಮೋಡವುಂಟಾಗಲು ಮಳೆಗೆ ಪ್ರಸ್ತಾವವು[2] ಎಂದಲ್ಲವೆ, ಪ್ರಸಿದ್ಧಿ? ಮಳೆಗರೆಯುತ್ತದೆಯಲ್ಲ, ಅದು ಉದ್ಗೀಥವು, ಏಕೆಂದರೆ (ಅವು) ಶ್ರೇಷ್ಠವಾಗಿರುತ್ತವೆ.[3] ಮಿಂಚುತ್ತದೆಯಷ್ಟೆ, ಗುಡುಗುತ್ತದೆಯಷ್ಟೆ, ಅದು ಪ್ರತಿಹಾರವು, ಏಕೆಂದರೆ (ಅವು) ಪ್ರತಿಹೃತವಾಗುತ್ತವೆ.[4] ನಿಲ್ಲುತ್ತದೆಯಲ್ಲ, ಅದು ನಿಧನವು; ಏಕೆಂದರೆ ಮುಗಿಯಿತು ಎಂಬುದು (ಎರಡಕ್ಕೂ) ಸಮಾನವಾಗಿರುತ್ತದೆ.[5]

---

1. ಉಪಾಸನೆಗಳ ಕ್ರಮಪಾಠಕ್ಕೂ ಒಂದು ಹೇತುವಿದೆ ಎಂದು ಭಾವ
2. ಪ್ರಾರಂಭವು.
3. ಮಳೆಗೆ ಮಳೆಗರೆಯುವದೇ ಶ್ರೇಷ್ಠ, ಸಾಮಕ್ಕೆ ಉದ್ಗೀಥಭಕ್ತಿಯೇ ಶ್ರೇಷ್ಠ.
4. ಅತ್ತಿತ್ತ ಚದರುತ್ತವೆ.
5. ಮಳೆನಿಲ್ಲುವದೆಂಬುದು ಅದಕ್ಕೆ ಕೊನೆ, ನಿಧನವೆಂಬ ಭಕ್ತಿಯ ಗಾನವು ಸಾಮಕ್ಕೆ ಕೊನೆ.

## ವೃಷ್ಟಿದೃಷ್ಟಿಯ ಉಪಾಸನೆಗೆ ಫಲ

(ಉಪನಿಷತ್ತು)

**ವರ್ಷತಿ ಹಾಽಸ್ಮೈ ವರ್ಷಯತಿ ಹ ಯ ಏತದೇವಂ ವಿದ್ವಾನ್ ವೃಷ್ಟೌ ಪಞ್ಚವಿಧಗ್ಂ ಸಾಮೋಪಾಸ್ತೇ ॥ ೨ ॥**

೨. ಯಾವನು ಹೀಗೆಂದರಿತು ವೃಷ್ಟಿಯ (ವಿಷಯ)ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡುತ್ತಾನೋ ಅವನಿಗೆ ಮಳೆಗರೆಯುತ್ತದೆ. ಅವನು ಮಳೆಗರೆಯಿಸುತ್ತಾನೆ.

(ಭಾಷ್ಯ)

೧೨೧ ಫಲಂ ಉಪಾಸನಸ್ಯ। ವರ್ಷತಿ ಹ ಅಸ್ಮೈ ಇಚ್ಛಾತಃ। ತಥಾ ವರ್ಷಯತಿ ಹ ಅಸತ್ಯಾಮಪಿ ವೃಷ್ಟೌ। ಯ ಏತತ್ ಇತ್ಯಾದಿ ಪೂರ್ವವತ್॥

(ಭಾಷ್ಯಾರ್ಥ)

(ಈ) ಉಪಾಸನೆಗೆ ಫಲವೇನೆಂದರೆ. ಇವನಿಗೆ ಇಚ್ಛೆಯಂತೆ ಮಳೆಗರೆಯುತ್ತದೆ. ಹಾಗೆಯೇ ಮಳೆಯಿಲ್ಲದಿದ್ದರೂ (ಇಚ್ಛೆಯನುಸಾರ) ಮಳೆಗರೆಯಿಸುತ್ತಾನೆ. 'ಯಾವನು ಹೀಗೆ(ಂದರಿತು)' ಮುಂತಾದ ವಾಕ್ಯವು ಹಿಂದಿನಂತೆ ವ್ಯಾಖ್ಯಾನಮಾಡಿ ಕೊಳ್ಳತಕ್ಕದ್ದು[1]।

---

# ಎರಡನೆಯ ಅಧ್ಯಾಯ-ನಾಲ್ಕನೆಯ ಖಂಡ

(ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ನೀರಿನ ದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಸರ್ವಾಸ್ವಪ್ಸು ಪಞ್ಚವಿಧಗ್ಂ ಸಾಮೋಪಾಸೀತ ಮೇಘೋ ಯತ್ ಸಂಪ್ಲವತೇ ಸ ಹಿಂಕಾರೋ ಯದ್ವರ್ಷತಿ ಸ ಪ್ರಸ್ತಾವೋ ಯಾಃ ಪ್ರಾಚ್ಯಃ ಸ್ಯನ್ದನ್ತೇ ಸ ಉದ್ಗೀಥೋ ಯಾಃ ಪ್ರತೀಚ್ಯಃ ಸ ಪ್ರತಿಹಾರಃ ಸಮುದ್ರೋ ನಿಧನಮ್ ॥ ೧ ॥**

---

1. ಹಿಂದಿನ ಖಂಡದ ೩ನೆಯ ಕಂಡಿಕೆಯ ಭಾಷ್ಯದಲ್ಲಿರುವಂತೆ.

೧. ಎಲ್ಲಾ ನೀರಿನಲ್ಲಿಯೂ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಮೋಡವು ಒಟ್ಟುಗೂಡುವದಲ್ಲ, ಅದು ಹಿಂಕಾರವು ; ಮಳೆಗರೆಯುವದಲ್ಲ, ಅದು ಪ್ರಸ್ತಾವವು ; ಪೂರ್ವಕ್ಕೆ ಹರಿಯುವವಲ್ಲ, ಅದು ಉದ್ಗೀಥವು ; ಪಶ್ಚಿಮಕ್ಕೆ (ಹರಿಯುವವಲ್ಲ), ಅದು ಪ್ರತಿಹಾರವು ; ಸಮುದ್ರವು ನಿಧನವು.

## ನೀರಿನ ದೃಷ್ಟಿಯು ಉಪಾಸನೆಗಳಿಗೆ ಹಿಂಕಾರಾದಿಗಳ ವಿನಿಯೋಗ

(ಭಾಷ್ಯ)

೧೨೨ ಸರ್ವಾಸು ಅಪ್ಸು ಪಞ್ಚವಿಧಂ ಸಾಮ ಉಪಾಸೀತ। ವೃಷ್ಟಿಪೂರ್ವಕತ್ವಾತ್ ಸರ್ವಾಸಾಮ್ ಅಪಾಮ್ ಆನನ್ತರ್ಯಮ್। ಮೇಘೋ ಯತ್ ಸಂಪ್ಲವತೇ । ಏಕೀಭಾವೇನ ಇತರೇತರಂ ಘನೀಭವತಿ ಮೇಘೋ ಯದಾ ಉನ್ನತಃ ತದಾ ಸಂಪ್ಲವತೇ ಇತ್ಯುಚ್ಯತೇ[1] । ತದಾ ಅಪಾಮ್ ಆರಮ್ಭಃ । ಸ ಹಿಂಕಾರಃ। ಯದ್ ವರ್ಷತಿ ಸ ಪ್ರಸ್ತಾವಃ। ಆಪಃ ಸರ್ವತೋ ವ್ಯಾಪ್ತುಂ ಪ್ರಸ್ತುತಾಃ। ಯಾಃ ಪ್ರಾಚ್ಯಃ ಸ್ಯನ್ದನ್ತೇ ಸ ಉದ್ಗೀಥಃ। ಶ್ರೈಷ್ಠ್ಯಾತ್ । ಯಾಃ ಪ್ರತೀಚ್ಯಃ ಸ ಪ್ರತಿಹಾರಃ। ಪ್ರತಿಶಬ್ದಸಾಮಾನ್ಯಾತ್। ಸಮುದ್ರೋ ನಿಧನಮ್। ತನ್ನಿಧನತ್ವಾತ್ ಅಪಾಮ್ ॥

(ಭಾಷ್ಯಾರ್ಥ)

'ಎಲ್ಲಾ ನೀರಿನಲ್ಲಿಯೂ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು' ಎಲ್ಲಾ ನೀರೂ ಮಳೆಯಿಂದಲೇ (ಆಗು)ವದರಿಂದ (ಈ ಉಪಾಸನೆಯನ್ನು ಮಳೆಯ ಉಪಾಸನೆಯಾದ) ಬಳಿಕ (ಹೇಳಿದೆ).

ಮೋಡವು ಒಟ್ಟುಗೂಡುವದಲ್ಲ, ಒಂದಕ್ಕೊಂದು (ಸೇರಿಕೊಂಡು) ಒಂದಾಗಿ ಗಟ್ಟಿಯಾಗುವದಲ್ಲ—ಯಾವಾಗ ಮೋಡವು ಎತ್ತರದಲ್ಲಿರುವದೋ, ಆಗ ಒಟ್ಟುಗೂಡಿತು ಎನಿಸುತ್ತದೆ—ಆಗ ನೀರು ಉಂಟಾಗುತ್ತದೆ, ಅದೇ ಹಿಂಕಾರವು. ಮಳೆಗರೆಯುವದಲ್ಲ, ಅದು ಪ್ರಸ್ತಾವವು, ನೀರು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಳ್ಳುವದಕ್ಕೆ ಪ್ರಸ್ತುತವಾಗುತ್ತದೆ ಪೂರ್ವಕ್ಕೆ (ನದಿಗಳು) ಹರಿಯುವವಲ್ಲ[2], ಅದು ಉದ್ಗೀಥವು, ಏಕೆಂದರೆ (ಎರಡೂ) ಶ್ರೇಷ್ಠ(ವಾಗಿರುತ್ತವೆ). ಪ್ರತೀಚಿಗೆ (ನದಿಗಳು) ಹರಿಯುವವಲ್ಲ[3], ಅದು ಪ್ರತಿಹಾರವು, ಏಕೆಂದರೆ ಪ್ರತಿಶಬ್ದವು

1. ಇಲ್ಲಿ 'ಮೇಘಃ' ಎಂದು ಆ॥ ಪಾಠದಲ್ಲಿರುವದು ಹೆಚ್ಚು, ಅಥವಾ ಅನ್ವಯಕ್ಕಾಗಿ ಭಾಷ್ಯಕಾರರು ಮತ್ತೆ ಬರೆದುಕೊಂಡಿದ್ದರೂ ಇರಬಹುದು.

2. ಗಂಗಾದಿನದಿಗಳು. 3. ನರ್ಮದಾದಿಗಳು.

(ಎರಡಕ್ಕೂ) ಸಮಾನವಾಗಿರುತ್ತದೆ. ಸಮುದ್ರವು ನಿಧನವು, ಏಕೆಂದರೆ (ನೀರಿಗೆ ಅದೇ) ನಿಧನವು.[1]

## ನೀರಿನ ದೃಷ್ಟಿಯ ಸಾಮೋಪಾಸನೆಗೆ ಫಲ

(ಉಪನಿಷತ್ತು)

**ನ ಹಾಪ್ಸು ಪ್ರೈತ್ಯಪ್ಸುಮಾನ್ ಭವತಿ ಯ ಏತದೇವಂ ವಿದ್ವಾನ್ ಸರ್ವಾಸ್ವಪ್ಸು ಪಞ್ಚವಿಧಗ್ಂ ಸಾಮೋಪಾಸ್ತೇ ॥ ೨ ॥**

೨. ಹೀಗೆಂದರಿತು ಎಲ್ಲಾ ನೀರಿನಲ್ಲಿಯೂ ಹೀಗೆ ಐದು ಬಗೆಯ ಸಾಮವನ್ನು ಯಾವನು ಉಪಾಸನೆಮಾಡುತ್ತಾನೋ ಅವನು ನೀರಿನಲ್ಲಿ ಸಾಯುವದಿಲ್ಲ, ನೀರುಳ್ಳವನೂ ಆಗುವನು.

(ಭಾಷ್ಯ)

೧೨೩. ನ ಹ ಅಪ್ಸು ಪ್ರೈತಿ । ನೇಚ್ಛತಿ ಚೇತ್ । ಅಪ್ಸುಮಾನ್ ಅಮ್ಮಾನ್ ಭವತಿ । ಫಲಮ್ ॥

(ಭಾಷ್ಯಾರ್ಥ)

ಅವನು ಇಚ್ಛಿಸದಿದ್ದರೆ[2] ನೀರಿನಲ್ಲಿ ಸಾಯುವದಿಲ್ಲ; (ಅಪ್ಸುಮಾನ್= ಅಮ್ಮಾನ್ ಯಥೇಚ್ಛವಾಗಿ) ನೀರುಳ್ಳವನೂ ಆಗುವನು[3] (ಎಂಬುದು ಉಪಾಸನೆಯ) ಫಲ.

---

# ಎರಡನೆಯ ಅಧ್ಯಾಯ-ಐದನೆಯ ಖಂಡ

(ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ಋತುಗಳ ದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಋತುಷು ಪಞ್ಚವಿಧಗ್ಂ ಸಾಮೋಪಾಸೀತ ವಸನ್ತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ ಪ್ರತಿಹಾರೋ ಹೇಮನ್ತೋ ನಿಧನಮ್ ॥ ೧ ॥**

---

1. ಅದರಲ್ಲಿಯೇ ಎಲ್ಲಾ ನೀರೂ ಹೋಗಿ ನಿಲ್ಲುತ್ತದೆಯಾದ್ದರಿಂದ ಅದೇ ಕೊನೆ.

2. ಬೇಕೆಂತಲೇ ಗಂಗಾದಿನದಿಗಳ ನೀರಿನಲ್ಲಿ ಬಿದ್ದು ಪ್ರಾಣಬಿಡುವ ವಾನಪ್ರಸ್ಥಾದಿಗಳಿಗೂ ಮರಣವಾಗುವದಿಲ್ಲವೆಂದಲ್ಲ- ಎಂದು ಭಾವ.

3. ನೀರಿಲ್ಲದ ಮರುಭೂಮಿಯೇ ಮುಂತಾದವುಗಳಲ್ಲಿಯೂ ಅವನಿಗೆ ನೀರಿರುವ ಪ್ರದೇಶಗಳು ಸಿಕ್ಕುವವು ಎಂದಭಿಪ್ರಾಯ.

೧. ಋತುಗಳ (ವಿಷಯ) ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ವಸಂತವು ಹಿಂಕಾರವು ; ಗ್ರೀಷ್ಮವು ಪ್ರಸ್ತಾವವು ; ವರ್ಷರ್ತುವೇ ಉದ್ಗೀಥವು ; ಶರತ್ತು ಪ್ರತಿಹಾರವು ; ಹೇಮಂತವು ನಿಧನವು.

(ಭಾಷ್ಯ)

೧೨೪. ಋತುಷು ಪಞ್ಚವಿಧಂ ಸಾಮ ಉಪಾಸೀತ । ಋತುವ್ಯವಸ್ಥಾಯಾ ಯಥೋಕ್ತಾಬ್ನಿಮಿತ್ತತ್ವಾತ್[1] ಆನನ್ತರ್ಯಮ್ । ವಸನ್ತೋ ಹಿಂಕಾರಃ । ಪ್ರಾಥಮ್ಯಾತ್ । ಗ್ರೀಷ್ಮಃ ಪ್ರಸ್ತಾವಃ । ಯವಾದಿಸಂಗ್ರಹಃ ಪ್ರಸ್ತೂಯತೇ ಹಿ ಪ್ರಾವೃಡರ್ಥಮ್ । ವರ್ಷಾ ಉದ್ಗೀಥಃ । ಪ್ರಾಧಾನ್ಯಾತ್ । ಶರತ್ ಪ್ರತಿಹಾರಃ । ರೋಗಿನಾಂ ಮೃತಾನಾಂ ಚ ಪ್ರತಿಹರಣಾತ್ । ಹೇಮನ್ತೋ ನಿಧನಮ್ । ಹೇಮನ್ತೇ[2] ನಿಧನಾತ್ ಪ್ರಾಣಿನಾಮ್ ॥

(ಭಾಷ್ಯಾರ್ಥ)

ಋತುಗಳ (ವಿಷಯ)ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆ ಮಾಡಬೇಕು. ಋತುಗಳ ವ್ಯವಸ್ಥೆಗೆ ಹಿಂದೆ ಹೇಳಿರುವ ನೀರೇ ನಿಮಿತ್ತವಾಗಿರುವದರಿಂದ (ಈ ಉಪಾಸನೆಯನ್ನು ಅದರ ಉಪಾಸನೆಯಾದ) ಬಳಿಕ (ಹೇಳಿದೆ).

ವಸಂತವು ಹಿಂಕಾರವು ; ಏಕೆಂದರೆ (ಇವೆರಡೂ) ಒಂದನೆಯವು[3] ಗ್ರೀಷ್ಮವು ಪ್ರಸ್ತಾವವು ; ಏಕೆಂದರೆ ಮಳೆಗಾಲಕ್ಕಾಗಿ (ಆಗ) ಜವೆಯೇ ಮುಂತಾದ (ದವಸ)ವನ್ನು ಕೂಡಿಹಾಕುವದು ಪ್ರಸ್ತುತವಾಗುತ್ತದೆ. ವರ್ಷರ್ತುವು ಉದ್ಗೀಥವು ; ಏಕೆಂದರೆ (ಎರಡೂ) ಮುಖ್ಯವಾಗಿವೆ. ಶರತ್ತು ಪ್ರತಿಹಾರವು , ಏಕೆಂದರೆ (ಅದು) ರೋಗಿಗಳನ್ನೂ ಸತ್ತವರನ್ನೂ ಪ್ರತಿಹರಣಮಾಡುತ್ತದೆ. ಹೇಮಂತವು ನಿಧನವು , ಏಕೆಂದರೆ ಚಳಿಗಾಲದಲ್ಲಿ ಪ್ರಾಣಿಗಳು ಸಾಯುತ್ತಾರೆ.[4]

---

1. 'ಅಮ್ಬುನಿಮಿತ್ತಾತ್' ಎಂದು ವಾ॥ ಪಾಠ; 'ಯಥೋಕ್ತಾಸ್ನಿಮಿತ್ತಾತ್' ಎಂದು ಆ॥ ಪಾಠ. ಇಲ್ಲಿ ಇಟ್ಟುಕೊಂಡಿರುವದು ತೆ॥ ಪಾಠ.

2. 'ನಿವಾತೇ' ಎಂದೇ ಅಚ್ಚಿನ ಪುಸ್ತಕದ ಪಾಠ , ಪ್ರಕೃತಕ್ಕೆ 'ಹೇಮನ್ತೇ' ಎಂದಿರಬೇಕೆಂದು ತಿದ್ದಿದೆ.

3. ವಸಂತವು ಋತುಗಳಲ್ಲಿ, ಹಿಂಕಾರವು ಭಕ್ತಿಗಳಲ್ಲಿ ಒಂದನೆಯದು.

4. ಪ್ರತಿಶಬ್ದಸಾಮಾನ್ಯದಿಂದಲೂ ಕೊನೆಯಾಗಿರುವದೆಂಬ ಸಾಮಾನ್ಯದಿಂದಲೂ ಕೊನೆಯ ಎರಡು ಋತುಗಳ ದೃಷ್ಟಿಯನ್ನು ಪ್ರತಿಹಾರನಿಧನಗಳಲ್ಲಿ ಮಾಡಬೇಕು ಎಂದು ಅಭಿಪ್ರಾಯ.

## ಋತುದೃಷ್ಟಿಯ ಸಾಮೋಪಾಸನೆಗೆ ಫಲ

(ಉಪನಿಷತ್ತು)

**ಕಲ್ಪನ್ತೇ ಹಾಸ್ಮಾ ಋತವ ಋತುಮಾನ್ ಭವತಿ ಯ ಏತದೇವಂ ವಿದ್ವಾನ್ ಋತುಷು ಪಞ್ಚವಿಧಗ್ಂ ಸಾಮೋಪಾಸ್ತೇ ॥ ೨ ॥**

೨. ಯಾವನು ಹೀಗೆಂದರಿತು ಋತುಗಳ (ವಿಷಯ)ದಲ್ಲಿ ಐದು ಬಗೆಯ ಉಪಾಸನೆಯನ್ನು ಮಾಡುತ್ತಾನೋ, ಅವನಿಗೆ ಋತುಗಳು ಆಗುವವು; ಅವನು ಋತುಮಂತನಾಗುವನು.

(ಭಾಷ್ಯ)

೧೨೫ ಫಲಮ್ । ಕಲ್ಪನ್ತೇ ಹ ಋತುವ್ಯವಸ್ಥಾನುರೂಪಂ ಭೋಗ್ಯತ್ವೇನ ಅಸ್ಮೈ ಉಪಾಸಕಾಯ ಋತವಃ । ಋತುಮಾನ್ ಆರ್ತವೈರ್ಭೋಗೈಃ ಸಂಪನ್ನೋ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಫಲ(ವೇನೆಂದರೆ). ಈ ಉಪಾಸಕನಿಗೆ ಋತುವ್ಯವಸ್ಥೆಗೆ ಅನುಗುಣವಾಗಿ ಋತುಗಳು ಭೋಗ್ಯವಾಗುವವು. ಇವನು ಋತುಮಂತನೂ ಆಗುವನು, ಋತುಗಳ ಭೋಗಗಳಿಂದ ಕೂಡಿದವನೂ ಆಗುವನು ಎಂದರ್ಥ.

---

# ಎರಡನೆಯ ಅಧ್ಯಾಯ-ಆರನೆಯ ಖಂಡ

(ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ಪಶುಗಳ ದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಪಶುಷು ಪಞ್ಚವಿಧಗ್ಂ ಸಾಮೋಪಾಸೀತಾಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಮ್ ॥ ೧ ॥**

೧. ಪಶುಗಳ (ವಿಷಯ)ದಲ್ಲಿ ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಹೆಣ್ಣಾಡು ಹಿಂಕಾರವು, ಕುರಿಗಳು ಪ್ರಸ್ತಾವವು; ಗೋಗಳು ಉದ್ಗೀಥವು; ಕುದುರೆಗಳು ಪ್ರತಿಹಾರವು; ಮನುಷ್ಯನು ನಿಧನವು.

(ಭಾಷ್ಯ)

೧೨೬ ಪಶುಷು ಪಞ್ಚವಿಧಂ ಸಾಮ ಉಪಾಸೀತ । ಸಮ್ಯಗ್ವೃತ್ತೇಷು ಋತುಷು ಪಶವ್ಯಃ ಕಾಲ ಇತಿ ಆನನ್ತರ್ಯಮ್ । ಅಜಾ ಹಿಂಕಾರಃ । ಪ್ರಾಧಾನ್ಯಾತ್ । ಪ್ರಾಥಮ್ಯಾದ್ ವಾ । "ಅಜಃ ಪಶೂನಾಂ ಪ್ರಥಮಃ" (?) ಇತಿ ಶ್ರುತೇಃ । ಅವಯಃ ಪ್ರಸ್ತಾವಃ । ಸಾಹಚರ್ಯದರ್ಶನಾತ್ ಅಜಾವೀನಾಮ್ । ಗಾವ ಉದ್ಗೀಥಃ । ಶ್ರೈಷ್ಠ್ಯಾತ್ । ಅಶ್ವಾಃ ಪ್ರತಿಹಾರಃ । ಪ್ರತಿಹರಣಾತ್ ಪುರುಷಾಣಾಮ್ । ಪುರುಷೋ ನಿಧನಮ್ । ಪುರುಷಾಶ್ರಯತ್ವಾತ್ ಪಶೂನಾಮ್ ॥

(ಭಾಷ್ಯಾರ್ಥ)

"ಪಶುಗಳ (ವಿಷಯ)ವಲ್ಲಿ ಐದು ಬಗೆಯ ಸಾಮವನ್ನು ಉಪಾಸನೆ ಮಾಡಬೇಕು." ಋತುಗಳು ಸರಿಯಾಗಿ ನಡೆದುಕೊಂಡರೆ ಪಶುಗಳಿಗೆ ತಕ್ಕ ಕಾಲವಾಗಿರುತ್ತದೆ ಆದ್ದರಿಂದ (ಋತೂಪಾಸನೆಯಾದ) ಬಳಿಕ (ಈ ಉಪಾಸನೆಯನ್ನು ಹೇಳಿದೆ)

ಹೆಣ್ಣಾಡು ಹಿಂಕಾರವು, ಏಕೆಂದರೆ (ಪಶುಗಳಲ್ಲಿ ಅದೇ) ಮುಖ್ಯವಾಗಿರುತ್ತದೆ.[1] ಅಥವಾ ಒಂದನೆಯದಾಗಿರುತ್ತದೆ, "ಆಡು ಪಶುಗಳಲ್ಲಿ ಒಂದನೆಯದು" ( ? ) ಎಂಬ ಶ್ರುತಿ(ಯಿಂದ ಇದು ಸಿದ್ಧವಾಗುತ್ತದೆ)[2] ಕುರಿಗಳು ಪ್ರಸ್ತಾವವು, (ಆಡುಗಳೂ ಕುರಿಗಳೂ) ಒಟ್ಟಿಗೆ (ಶ್ರುತಿಯಲ್ಲಿ ಪಠಿತವಾಗಿರುವದು) ಕಂಡುಬರುತ್ತದೆ.[3] ಗೋಗಳು ಉದ್ಗೀಥವು, ಏಕೆಂದರೆ (ಅವು) ಶ್ರೇಷ್ಠವಾಗಿರುತ್ತವೆ. ಕುದುರೆಗಳು ಪ್ರತಿಹಾರವು, ಏಕೆಂದರೆ ಮನುಷ್ಯರನ್ನು ಪ್ರತಿಹರಣಮಾಡುತ್ತವೆ.[4] ಪುರುಷನು ನಿಧನವು, ಏಕೆಂದರೆ ಪಶುಗಳು ಪುರುಷನನ್ನು ಆಶ್ರಯಿಸಿಕೊಂಡಿರುತ್ತವೆ.[5]

## ಪಶುಸಾಮೋಪಾಸನೆಗೆ ಫಲ

(ಉಪನಿಷತ್ತು)

**ಭವನ್ತಿ ಹಾಸ್ಯ ಪಶವಃ ಪಶುಮಾನ್ ಭವತಿ ಯ ಏತದೇವಂ ವಿದ್ವಾನ್ ಪಶುಷು ಪಞ್ಚವಿಧಗ್ಂ ಸಾಮೋಪಾಸ್ತೇ ॥ ೨ ॥**

---

1. ಯಜ್ಞಸಂಬಂಧವಿರುವದರಿಂದ ಅದಕ್ಕೆ ಪ್ರಾಧಾನ್ಯವಿದೆ.

2. ಶ್ರುತಿಯಲ್ಲಿ ಒಂದನೆಯದೆಂದು ಹೇಳಿರುವದರಿಂದ ಅದು ಒಂದನೆಯದು; "ಬ್ರಾಹ್ಮಣೋ ಮನುಷ್ಯಾಣಾಮಜಃ ಪಶೂನಾಂ ತಸ್ಮಾತ್ತೇ ಮುಖ್ಯಾ ಮುಖತೋ ಹ್ಯಸೃಜ್ಯನ್ತ" ಎಂದು ಶ್ರುತಿಯಿದೆಂದು ಆ ॥ ಗಿ ॥ ಟೀಕೆ.

3. 'ಅಜಾವಯಃ' ಎಂದು ಪುರುಷಸೂಕ್ತವೇ ಮುಂತಾದ ಕಡೆಗಳಲ್ಲಿ ಸಹಪಾಠವಿದೆ.

4. ಒಯ್ಯುತ್ತವೆ.

5. ನಿಧೀಯನ್ತೇಽಸ್ಮಿನ್ (ಇವನನ್ನಾಶ್ರಯಿಸಿಕೊಂಡಿವೆ) ಎಂಬ ವ್ಯುತ್ಪತ್ತಿಯಿಂದ ಪುರುಷನು ಪಶುಗಳಿಗೆ ನಿಧನವು.

೨. ಯಾವನು ಹೀಗೆ ಅರಿತುಕೊಂಡು ಪಶುಗಳ (ವಿಷಯ) ದಲ್ಲಿ ಐದು ಬಗೆಯ ಸಾಮವನ್ನು ಹೀಗೆ ಉಪಾಸನೆಮಾಡುತ್ತಾನೋ ಅವನಿಗೆ ಪಶುಗಳು ಆಗುತ್ತವೆ, (ಅವನು) ಪಶುಮಂತನೂ ಆಗುತ್ತಾನೆ.

(ಭಾಷ್ಯ)

೧೨೭. ಫಲಮ್ । ಭವನ್ತಿ ಹ ಅಸ್ಯ ಪಶವಃ ಪಶುಮಾನ್ ಭವತಿ, ಪಶುಫಲೈಶ್ಚ ಭೋಗಯಾಗಾದಿಭಿ[1]ರ್ಯುಜ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

(ಇದಕ್ಕೆ) ಫಲ(ವೇನೆಂದರೆ) ಇವನಿಗೆ ಪಶುಗಳಾಗುತ್ತವೆ, ಪಶುಫಲಗಳಾದ ಭೋಗ, ಯಾಗ[2]- ಮುಂತಾದವುಗಳಿಂದ ಕೂಡಿದವನೂ ಆಗುತ್ತಾನೆ ಎಂದರ್ಥ.

---

# ಎರಡನೆಯ ಅಧ್ಯಾಯ-ಏಳನೆಯ ಖಂಡ

(ಪಂಚವಿಧಸಾಮೋಪಾಸನೆ ಮುಂದುವರಿದದ್ದು)

## ಪ್ರಾಣದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಪ್ರಾಣೇಷು ಪಞ್ಚವಿಧಂ ಪರೋವರೀಯಃ ಸಾಮೋಪಾಸೀತ ಪ್ರಾಣೋ ಹಿಂಕಾರೋ ವಾಕ್ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರೋ ಮನೋ ನಿಧನಂ ಪರೋವರೀಯಾಗ್ಂಸಿ ವಾ ಏತಾನಿ ॥೧॥**

೧. ಪ್ರಾಣಗಳ (ವಿಷಯ)ದಲ್ಲಿ ಪರೋವರೀಯವೆಂದು ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಪ್ರಾಣವು ಹಿಂಕಾರವು; ವಾಕ್ಕು ಪ್ರಸ್ತಾವವು; ಚಕ್ಷುಸ್ಸು ಉದ್ಗೀಥವು; ಶ್ರೋತ್ರವು ಪ್ರತಿಹಾರವು; ಮನಸ್ಸು ನಿಧನವು. ಇವು ಪರೋವರೀಯಗಳಷ್ಟೆ?

1. 'ಭೋಗತ್ಯಾಗಾದಿಭಿಃ' ಎಂಬುದಕ್ಕಿಂತ ಈ ಪಾಠವು ಮೇಲು.
2. 'ಭೋಗತ್ಯಾಗಾದಿಭಿಃ' ಎಂಬ ಪಾಠಕ್ಕೆ ಭೋಗದಾನಾದಿಗಳಿಂದ ಎಂದು ಅರ್ಥ.

(ಭಾಷ್ಯ)

೧೨೮. ಪ್ರಾಣೇಷು ಪಞ್ಚವಿಧಂ ಪರೋವರೀಯಃ ಸಾಮ ಉಪಾಸೀತ । ಪರಂ ಪರಂ ವರೀಯಸ್ತ್ವಗುಣವತ್ಪ್ರಾಣದೃಷ್ಟಿವಿಶಿಷ್ಟಂ ಸಾಮ ಉಪಾಸೀತ ಇತ್ಯರ್ಥಃ । ಪ್ರಾಣೋ ಘ್ರಾಣಂ[1] ಹಿಂಕಾರಃ । ಉತ್ತರೋತ್ತರವರೀಯಸಾಂ ಪ್ರಾಥಮ್ಯಾತ್ । ವಾಕ್ ಪ್ರಸ್ತಾವಃ । ವಾಚಾ ಹಿ ಪ್ರಸ್ತೂಯತೇ ಸರ್ವಮ್ । ವಾಗ್ ವರೀಯಸೀ ಪ್ರಾಣಾತ್ । ಅಪ್ರಾಪ್ತಮಪಿ ಉಚ್ಯತೇ ವಾಚಾ, ಪ್ರಾಪ್ತಸ್ಯೈವ ತು ಗನ್ಧಸ್ಯ ಗ್ರಾಹಕಃ ಪ್ರಾಣಃ । ಚಕ್ಷುರುದ್ಗೀಥಃ । ವಾಚೋ ಬಹುತರಂ[2] ವಿಷಯಂ ಪ್ರಕಾಶಯತಿ ಚಕ್ಷುಃ । ಅತೋ ವರೀಯೋ ವಾಚ ಉದ್ಗೀಥಃ । ಶ್ರೈಷ್ಠ್ಯಾತ್ । ಶ್ರೋತ್ರಂ ಪ್ರತಿಹಾರಃ । ಪ್ರತಿಹೃತತ್ವಾತ್ । ವರೀಯಶ್ಚಕ್ಷುಷಃ । ಸರ್ವತಃ ಶ್ರವಣಾತ್ । ಮನೋ ನಿಧನಮ್ । ಮನಸಿ ಹಿ ನಿಧೀಯನ್ತೇ ಪುರುಷಸ್ಯ ಭೋಗ್ಯತ್ವೇನ ಸರ್ವೇನ್ದ್ರಿಯಾಹೃತಾ ವಿಷಯಾಃ । ವರೀಯಸ್ತ್ವಂ ಚ ಶ್ರೋತ್ರಾತ್ ಮನಸಃ ಸರ್ವೇನ್ದ್ರಿಯವಿಷಯವ್ಯಾಪಕತ್ವಾತ್ । ಅತೀನ್ದ್ರಿಯವಿಷಯೋಽಪಿ ಮನಸೋ ಗೋಚರ ಏವೇತಿ । ಯಥೋಕ್ತಹೇತುಭ್ಯಃ ಪರೋವರೀಯಾಂಸಿ ಪ್ರಾಣಾದೀನಿ ವೈ ಏತಾನಿ ॥

(ಭಾಷ್ಯಾರ್ಥ)

ಪ್ರಾಣಗಳಲ್ಲಿ[3] ಪರೋವರೀಯವೆಂದು, ಐದು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ಮುಂದೆಮುಂದೆ ಶ್ರೇಷ್ಠವಾಗಿರುವದೆಂಬ ಗುಣದಿಂದ ಕೂಡಿದ ಪ್ರಾಣಗಳ[4] ದೃಷ್ಟಿಯಿಂದೊಡಗೂಡಿದ ಸಾಮವನ್ನು ಉಪಾಸನೆಮಾಡಬೇಕು ಎಂದರ್ಥ. ಪ್ರಾಣವು ಎಂದರೆ ಘ್ರಾಣವು[5] ಹಿಂಕಾರವು, ಏಕೆಂದರೆ ಮುಂದುಮುಂದಕ್ಕೆ ಹೆಚ್ಚಿನವೆನಿಸಿದವುಗಳಲ್ಲಿ ಇದು ಮೊದಲನೆಯದು. ವಾಕ್ಕು ಪ್ರಸ್ತಾವವು, ವಾಕ್ಕಿನಿಂದಲ್ಲವೆ, ಎಲ್ಲವೂ ಪ್ರಸ್ತುತವಾಗುವದು ? ವಾಕ್ಕು (ಘ್ರಾಣ)ಪ್ರಾಣಕ್ಕಿಂತ ಹೆಚ್ಚಿನದು, ಏಕೆಂದರೆ ವಾಕ್ಕು ಪ್ರಾಪ್ತವಾಗಿಲ್ಲದ್ದನ್ನೂ ಹೇಳುತ್ತದೆ, ಆದರೆ (ಘ್ರಾಣ)ಪ್ರಾಣವು ಪ್ರಾಪ್ತವಾದ ಗಂಧವನ್ನು ಮಾತ್ರ ಗ್ರಹಿಸುತ್ತದೆ ಚಕ್ಷುಸ್ಸು ಉದ್ಗೀಥವು, ವಾಕ್ಕಿಗಿಂತ ಹೆಚ್ಚಾಗಿ ವಿಷಯವನ್ನು

1. ಪಾ॥ ಪಾಠದಲ್ಲಿ ಈ ಮಾತನ್ನು ಬಿಟ್ಟಿದೆ
2. 'ಬಹುತರ' ಎಂಬುದಕ್ಕಿಂತ ಈ ಪಾಠವೇ ಮೇಲು.
3. ಪಶುಗಳಿಂದಾದ ಹಾಲೇ ಮುಂತಾದವುಗಳಿಂದ ಪ್ರಾಣವು ನಿಂತಿರುವದರಿಂದ ಪಶುಸಾಮೋಪಾಸನೆಯಾದ ಬಳಿಕ ಈ ಉಪಾಸನೆಯನ್ನು ಹೇಳಿದೆ. ಆ॥ ಗಿ॥
4. ಸಾಮವನ್ನು ಪ್ರಾಣಗಳ ದೃಷ್ಟಿಯಿಂದ ಉಪಾಸನೆಮಾಡಬೇಕು, ಈ ಪ್ರಾಣಗಳ ಒಂದಕ್ಕಿಂತ ಒಂದು ಹೆಚ್ಚಿನವು ಎಂಬುದನ್ನು ಮನದಂದುಕೊಳ್ಳಬೇಕು ಎಂದರ್ಥ.
5. ಮುಖ್ಯಪ್ರಾಣವೇ ಪ್ರಾಣಗಳಲ್ಲಿ ಶ್ರೇಷ್ಠ. ಆದ್ದರಿಂದ ಹಿಂಕಾರಸ್ಥಾನದಲ್ಲಿರುವ ಪ್ರಾಣವೆಂದರೆ ಘ್ರಾಣವೇ. ಆ॥ ಗಿ॥

ತಿಳಿಸುವದರಿಂದ[1] ಚಕ್ಷುಸ್ಸು ವಾಕ್ಕಿಗಿಂತಲೂ ಹೆಚ್ಚಿನದಾಗಿರುವದು ; (ಇದು) ಉದ್ಗೀಥವು, ಏಕೆಂದರೆ ಶ್ರೇಷ್ಠವಾಗಿದೆ. ಶ್ರೋತ್ರವು ಪ್ರತಿಹಾರವು , ಏಕೆಂದರೆ (ಅದು) ಪ್ರತಿಹೃತವಾಗಿದೆ.[2] (ಇದು) ಚಕ್ಷುಸ್ಸಿಗಿಂತಲೂ ಹೆಚ್ಚಿನದು , ಏಕೆಂದರೆ ಎಲ್ಲಾ ಕಡೆಯಿಂದಲೂ ಕೇಳುತ್ತಾರೆ.[3] ಮನಸ್ಸು ನಿಧನವು , ಮನಸ್ಸಿನಲ್ಲಲ್ಲವೆ, ಎಲ್ಲಾ ಇಂದ್ರಿಯಗಳೂ ತಂದ ವಿಷಯಗಳು ಭೋಗ್ಯವಾಗಿ ನಿಲ್ಲುತ್ತವೆ ? ಮನಸ್ಸು ಶ್ರೋತ್ರಕ್ಕಿಂತಲೂ ಹೆಚ್ಚಿನದೆಂಬುದು ಎಲ್ಲಾ ಇಂದ್ರಿಯಗಳನ್ನೂ ವ್ಯಾಪಿಸಿರುವದರಿಂದ (ಸಿದ್ಧವಾಗುತ್ತದೆ) , ಅತೀಂದ್ರಿಯವಿಷಯವೂ ಮನಸ್ಸಿಗೆ ಗೋಚರವೇ (ಆಗಿರು)ವದಷ್ಟೆ ?

ಈ ಮೇಲೆ ಹೇಳಿದ ಕಾರಣಗಳಿಂದ ಈ (ಘ್ರಾಣ)ಪ್ರಾಣಾದಿಗಳು ಪರೋವರೀಯಾಂಸಗಳು.[4]

## ಪ್ರಾಣಸಾಮೋಪಾಸನೆಗೆ ಫಲ

(ಉಪನಿಷತ್ತು)

**ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾಞ್ಜಯತಿ ಯ ಏತದೇವಂ ವಿದ್ವಾನ್ ಪ್ರಾಣೇಷು ಪಞ್ಚ ವಿಧಂ ಪರೋವರೀಯಃ ಸಾಮೋಪಾಸ್ತ ಇತಿ ತು ಪಞ್ಚವಿಧಸ್ಯ ||**

೨. ಯಾವನು ಹೀಗೆಂದರಿತು ಪ್ರಾಣಗಳ (ವಿಷಯ)ದಲ್ಲಿ ಐದು ಬಗೆಯ ಪರೋವರೀಯಸಾಮವನ್ನು ಉಪಾಸನೆಮಾಡುತ್ತಾನೋ ಅವನಿಗೆ ಪರೋವರೀಯವಾಗುತ್ತದೆ ; (ಅವನು) ಪರೋವರೀಯವಾದ ಲೋಕಗಳನ್ನು ಗೆದ್ದುಕೊಳ್ಳುತ್ತಾನೆ. ಇದಾದರೆ ಪಂಚವಿಧ(ಸಾಮ)ದ (ಉಪಾಸನೆ).

---

1. ಹೆಚ್ಚು ವಿಶದವಾಗಿ ತಿಳಿಸಿಕೊಡುವವರಿಂದ ಎಂದರ್ಥ. ಬಾಯಲ್ಲಿ ಎಷ್ಟು ವರ್ಣಿಸಿದರೂ ಕಣ್ಣಿಗೆ ತೋರಿಸಿದಷ್ಟು ಸ್ಪಷ್ಟವಾದ ಜ್ಞಾನವಾಗುವದಿಲ್ಲ ಎಂದು ಅಭಿಪ್ರಾಯ.

2. ಪ್ರತಿಹೃತವಾಗಿದೆ ಎಂದರೇನೆಂಬುದು ತಿಳಿಯಲಿಲ್ಲ; ಪ್ರತಿಹರ್ತೃತ್ವಾತ್ ಎಂಬ ಪಾಠವಿದ್ದರೆ ಶಬ್ದವನ್ನು ತಂದುಕೊಡುವದರಿಂದ ಎಂದರ್ಥವಾಗುತ್ತಿತ್ತು ಆದರೆ ಮುಂದೆಯೂ ಹೀಗೆಯೇ ಭಾಷ್ಯವಿದೆ , ೨-೧೧-೧ರ ಭಾಷ್ಯವನ್ನು ನೋಡಿ

3 ಚಕ್ಷುಸ್ಸು ಕಣ್ಣ ಮುಂದೆ ಇರುವದನ್ನು ಮಾತ್ರ ಕಾಣಬಲ್ಲದು, ಶ್ರೋತ್ರಕ್ಕೆ ದಿಕ್ಕಿನ ನಿಯಮವಿಲ್ಲ.

4. ಒಂದಕ್ಕಿಂತ ಒಂದು ಹೆಚ್ಚಿನವುಗಳು, ಇವುಗಳ ದೃಷ್ಟಿಯಿಂದ ಸಾಮವನ್ನು ಉಪಾಸನೆಮಾಡಬೇಕು.

## ಉಪಾಸನೆಗೆ ಫಲವೂ ಪಂಚವಿಧಸಾಮೋಪಾಸನೆಯ ಉಪಸಂಹಾರವೂ

(ಭಾಷ್ಯ)

೧೨೯. ಏತದ್ದೃಷ್ಟ್ವಾ ವಿಶಿಷ್ಟಂ ಯಃ ಪರೋವರೀಯಃ ಸಾಮ ಉಪಾಸ್ತೇ ಪರೋವರೀಯೋ ಹ ಅಸ್ಯ ಜೀವನಂ ಭವತಿ ಇತಿ ಉಕ್ತಾರ್ಥಮ್ । ಇತಿ ತು ಪಞ್ಚವಿಧಸ್ಯ ಸಾಮ್ನ ಉಪಾಸನಮ್ ಉಕ್ತಮ್ ಇತಿ ಸಪ್ತವಿಧೇ ವಕ್ಷ್ಯಮಾಣವಿಷಯೇ ಬುದ್ಧಿಸಮಾಧಾನಾರ್ಥಮ್ । ನಿರಪೇಕ್ಷೋ ಹಿ ಪಞ್ಚವಿಧೇ ವಕ್ಷ್ಯಮಾಣೇ ಬುದ್ಧಿಂ ಸಮಾಧಿತ್ಸತಿ ॥

(ಭಾಷ್ಯಾರ್ಥ)

ಈ ದೃಷ್ಟಿಯಿಂದೊಡಗೂಡಿ ಯಾವನು ಪರೋವರೀಯಾಂಸವೆಂದು ಸಾಮವನ್ನು ಉಪಾಸನೆಮಾಡುತ್ತಾನೋ ಅವನಿಗೆ 'ಪರೋವರೀಯವಾದ ಜೀವನವಾಗುವದು' ಎಂಬುದಕ್ಕೆ ಹಿಂದೆ (೧-೯-೨ರಲ್ಲಿ) ಹೇಳಿದ್ದೇ ಅರ್ಥ.

"ಹೀಗೆಂದು ಹೇಳಿದ್ದು ಪಂಚವಿಧಸಾಮದ ಉಪಾಸನೆ" ಎಂಬುದು ಮುಂದೆ ಹೇಳಲಿರುವ ಸಪ್ತವಿಧವಾದ (ಸಾಮದ ಉಪಾಸನೆಯಲ್ಲಿ) ಬುದ್ಧಿಯನ್ನು ಸರಿಯಾಗಿಟ್ಟುಕೊಳ್ಳಲೆಂದು. ಪಂಚವಿಧದಲ್ಲಿ (ಇನ್ನು ಏನೂ ಹೇಳತಕ್ಕದ್ದಿಲ್ಲ ಎಂದರೆ) ನಿರಪೇಕ್ಷನಾದವನಲ್ಲವೆ, ಮುಂದೆ ಹೇಳುವದರಲ್ಲಿ ಬುದ್ಧಿಯನ್ನು ಸರಿಯಾಗಿಟ್ಟುಕೊಳ್ಳುವದು ?

---

# ಎರಡನೆಯ ಅಧ್ಯಾಯ-ಎಂಟನೆಯ ಖಂಡ

(ಸಪ್ತವಿಧಸಾಮೋಪಾಸನೆ ಮುಂದುವರಿದದ್ದು)

## ವಾಗ್ದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಅಥ ಸಪ್ತವಿಧಸ್ಯ ವಾಚಿ ಸಪ್ತವಿಧಗ್ಂ ಸಾಮೋಪಾಸೀತ ಯತ್ಕಿಂಚ ವಾಚೋ ಹುಮಿತಿ ಸ ಹಿಂಕಾರೋ ಯತ್ಪ್ರೇತಿ ಸ ಪ್ರಸ್ತಾವೋ ಯದೇತಿ ಸ ಆದಿಃ ॥ ೧ ॥**

**ಯದುದಿತಿ ಸ ಉದ್ಗೀಥೋ ಯತ್ಪ್ರತೀತಿ ಸ ಪ್ರತಿಹಾರೋ ಯದುಪೇತಿ ಸ ಉಪದ್ರವೋ ಯನ್ನೀತಿ ತನ್ನಿಧನಮ್ ॥ ೨ ॥**

೧. ಇನ್ನು ಸಪ್ತವಿಧ(ಸಾಮದ ಉಪಾಸನೆ). ವಾಕ್ಕಿನ (ವಿಷಯ)ದಲ್ಲಿ ಏಳು ಬಗೆಯ ಸಾಮವನ್ನು ಉಪಾಸನೆಮಾಡಬೇಕು. ವಾಕ್ಕಿನಲ್ಲಿ ಯಾವಯಾವದು ಹುಮ್! ಎಂದಿರುವದೋ ಅದು ಹಿಂಕಾರವು ; ಯಾವದು ಪ್ರ ಎಂದಿರುವದೋ ಅದು ಪ್ರಸ್ತಾವವು ; ಯಾವದು ಆ ಎಂದಿರುವದೋ ಅದು ಆದಿಯು.

೨. ಉತ್ ಎಂದಿರುವದಲ್ಲ, ಅದು ಉದ್ಗೀಥವು ; ಪ್ರತಿ ಎಂದಿರುವದಲ್ಲ, ಅದು ಪ್ರತಿಹಾರವು ; ಉಪ ಎಂದಿರುವದು ಉಪದ್ರವವು ; ನಿ ಎಂದಿರುವದಲ್ಲ, ಅದು ನಿಧನವು.

(ಭಾಷ್ಯ)

೧೩೦ ಅಥ ಅನನ್ತರಂ ಸಪ್ತವಿಧಸ್ಯ ಸಮಸ್ತಸ್ಯ ಸಾಮ್ನಃ ಉಪಾಸನಂ ಸಾಧು ಇದಮ್ ಆರಭ್ಯತೇ। ವಾಚಿ ಇತಿ ಸಪ್ತಮೀ ಪೂರ್ವವತ್ ವಾಗ್ದೃಷ್ಟಿ ವಿಶಿಷ್ಟಂ ಸಪ್ತವಿಧಂ ಸಾಮ ಉಪಾಸೀತ ಇತ್ಯರ್ಥಃ। ಯತ್ಕಿಂಚ ವಾಚಃ ಶಬ್ದಸ್ಯ ಹುಮಿತಿ[1] ಯೋ ವಿಶೇಷಃ ಸ ಹಿಂಕಾರಃ। ಹಕಾರಸಾಮಾನ್ಯಾತ್। ಯತ್ ಪ್ರ ಇತಿ ಶಬ್ದರೂಪಮ್, ಸ ಪ್ರಸ್ತಾವಃ। ಪ್ರಸಾಮಾನ್ಯಾತ್। ಯತ್ ಆ ಇತಿ ಸ ಆದಿಃ। ಆಕಾರಸಾಮಾನ್ಯಾತ್। ಆದಿರಿತಿ ಓಂಕಾರಃ। ಸರ್ವಾದಿತ್ವಾತ್। ಯದ್ ಉತ್ ಇತಿ ಸ ಉದ್ಗೀಥಃ। ಉತ್ಪೂರ್ವತ್ವಾತ್ ಉದ್ಗೀಥಸ್ಯ। ಯತ್ ಪ್ರತಿ ಇತಿ ಸ ಪ್ರತಿಹಾರಃ। ಪ್ರತಿಸಾಮಾನ್ಯಾತ್। ಯತ್ ಉಪ ಇತಿ ಸ ಉಪದ್ರವಃ। ಉಪೋಪಕ್ರಮತ್ವಾತ್ ಉಪದ್ರವಸ್ಯ। ಯತ್ ನಿ ಇತಿ ತನ್ನಿಧನಮ್। ನಿಶಬ್ದ ಸಾಮಾನ್ಯಾತ್ ॥

(ಭಾಷ್ಯಾರ್ಥ)

ಇನ್ನು (ಪಂಚವಿಧಸಾಮ)ವಾದ ಬಳಿಕ ಸಪ್ತವಿಧವಾದ ಸಮಸ್ತಸಾಮದ ಈ ಸಾಧೂ[2]ಪಾಸನೆಯನ್ನು ಆರಂಭಿಸಲಾಗುತ್ತದೆ. ವಾಚಿ ಎಂಬ ಸಪ್ತಮೀ (ವಿಭಕ್ತಿ)ಯನ್ನು ಹಿಂದೆ (೨-೨-೧ ಭಾ. ಭಾ. ೧೧೭ರಲ್ಲಿ ಹೇಳಿರು)ವಂತೆ (ವಿಪರಿ

1. ಇಲ್ಲಿ ಹಿಮ್ ಎಂದೇ ರಂಗರಾಮಾನುಜೀಯಪಾಠವಿದೆ, ಮೂಲದಲ್ಲಿಯೂ ಹಿಮ್ ಎಂದೇ ಇದ್ದಿತೆ? ಎಂಬುದು ವಿಚಾರಣೀಯವಾಗಿದೆ. ಅಚ್ಚಿನ ಪುಸ್ತಕಗಳಲ್ಲೆಲ್ಲ ಹುಮ್ ಎಂದೇ ಇದೆ.

2. ಇಲ್ಲಿಯೂ ಸಾಧುದೃಷ್ಟಿಯು ಹಿಂದಿನಂತೆಯೇ ಅನುಗತವಾಗಿದೆ ಎಂದು ಭಾವ.

ಣಾಮಮಾಡಬೇಕು). ವಾಗ್ದೃಷ್ಟಿಯಿಂದ ಕೂಡಿ ಸಪ್ತವಿಧಸಾಮವನ್ನು ಉಪಾಸನೆಮಾಡಬೇಕು ಎಂದರ್ಥ

ವಾಕ್ಕಿನಲ್ಲಿ ಎಂದರೆ ಶಬ್ದದಲ್ಲಿ ಯಾವಯಾವ ಹುಮ್ ಎಂಬ (ರೂಪ)ವಿಶೇಷ ವಿರುವದೋ ಅದು ಹಿಂಕಾರವು, ಏಕೆಂದರೆ ಹಕಾರವು (ಎರಡಕ್ಕೂ) ಸಮಾನ ವಾಗಿರುತ್ತದೆ. ಪ್ರ ಎಂಬ ಶಬ್ದವಿರುವದಲ್ಲ, ಅದು ಪ್ರಸ್ತಾವವು, ಏಕೆಂದರೆ ಪ್ರ ಎಂಬುದು (ಎರಡಕ್ಕೂ) ಸಮಾನವಾಗಿರುತ್ತದೆ ಆ ಎಂದಿರುವದಲ್ಲ, ಅದು ಆದಿಯು, ಏಕೆಂದರೆ ಆಕಾರವು ಸಮಾನವಾಗಿರುತ್ತದೆ. (ಇಲ್ಲಿ) ಆದಿ ಎಂದರೆ ಓಂಕಾರವು, ಏಕೆಂದರೆ ಅದು ಎಲ್ಲಕ್ಕೂ ಆದಿ.[1] ಉತ್ ಎಂದಿರುವದಲ್ಲ. ಅದು ಉದ್ಗೀಥವು, ಏಕೆಂದರೆ ಉದ್ಗೀಥ(ಶಬ್ದವಲ್ಲಿ) ಮೊದಲು ಉತ್ ಎಂಬುದಿದೆ. ಪ್ರತಿ ಎಂದಿರುವದಲ್ಲ, ಅದು ಪ್ರತಿಹಾರವು, ಏಕೆಂದರೆ 'ಪ್ರತಿ'ಯು ಸಮಾನ ವಾಗಿರುತ್ತದೆ. ಉಪ ಎಂದಿರುವದಲ್ಲ, ಅದು ಉಪದ್ರವವು[2], ಏಕೆಂದರೆ ಉಪದ್ರವ(ಶಬ್ದವು) ಉಪ ಎಂಬುದರಿಂದ ಮೊದಲಾಗಿರುತ್ತದೆ. ನಿ ಎಂಬುದಿರು ವದಲ್ಲ, ಅದು ನಿಧನವು, ಏಕೆಂದರೆ ನಿಶಬ್ದವು (ಎರಡಕ್ಕೂ) ಸಮಾನವಾಗಿರುತ್ತದೆ.

## ವಾಕ್ಸಾಮೋಪಾಸನೆಯ ಫಲ

(ಉಪನಿಷತ್ತು)

**ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾ ನನ್ನಾದೋ ಭವತಿ ಯ ಏತದೇವಂ ವಿದ್ವಾನ್ ವಾಚಿ ಸಪ್ತ ವಿಧಗ್ಂ ಸಾಮೋಪಾಸ್ತೇ ॥ ೩ ॥**

೩. ಯಾವನು ಹೀಗೆಂದರಿತು ವಾಕ್ಕಿನ (ವಿಷಯ)ದಲ್ಲಿ ಸಪ್ತವಿಧಸಾಮವನ್ನು ಹೀಗೆ ಉಪಾಸನೆಮಾಡುತ್ತಾನೋ ಅವನಿಗೆ ವಾಕ್ಕು ವಾಕ್ಕಿನ ದೋಹವಿರುವದಲ್ಲ, ಅದನ್ನು ಕರೆಯುವದು; (ಅವನು) ಅನ್ನವಂತನೂ ಅನ್ನಾದನೂ ಆಗುತ್ತಾನೆ.

(ಭಾಷ್ಯ)

೧೩೧. ದುಗ್ಧೇಽಸ್ಮೈ ಇತ್ಯಾದ್ಯುಕ್ತಾರ್ಥಮ್ ॥

(ಭಾಷ್ಯಾರ್ಥ)

ಇವನಿಗೆ (ವಾಕ್ಕು ದೋಹವನ್ನು) ಕರೆಯುವದು ಮುಂತಾದ ವಾಕ್ಯಕ್ಕೆ ಹಿಂದೆ (೧-೩-೭ರ ಭಾಷ್ಯದಲ್ಲಿರು)ವಂತೆ ಅರ್ಥ.

---

1. ಓಂಕಾರದಿಂದಲೇ ಮಿಕ್ಕ ಶಬ್ದಗಳೆಲ್ಲ ಉಂಟಾಗಿರುವವು.
2. ಉಪದ್ರವ ಎಂಬ ಭಕ್ತಿಯನ್ನು ಉದ್ಗಾತೃವೇ ಹಾಡುತ್ತಾನೆ.

# ಎರಡನೆಯ ಅಧ್ಯಾಯ - ಒಂಬತ್ತನೆಯ ಖಂಡ

(ಸಪ್ತವಿಧಸಾಮೋಪಾಸನೆ ಮುಂದುವರಿದದ್ದು)

## ಆದಿತ್ಯದೃಷ್ಟಿಯಿಂದ ಸಾಮೋಪಾಸನೆ

(ಉಪನಿಷತ್ತು)

**ಅಥ ಖಲ್ವಮುಮಾದಿತ್ಯಗ್ಂ ಸಪ್ತವಿಧಗ್ಂ ಸಾಮೋಪಾಸೀತ ಸರ್ವದಾ ಸಮಸ್ತೇನ ಸಾಮ ಮಾಂ ಪ್ರತಿ ಮಾಂ ಪ್ರತೀತಿ ಸರ್ವೇಣ ಸಮಸ್ತೇನ ಸಾಮ ॥ ೧ ॥**

೧. ಇನ್ನು ಆ ಆದಿತ್ಯನೆಂದು ಸಪ್ತವಿಧಸಾಮವನ್ನು ಉಪಾಸನೆ ಮಾಡಬೇಕು. (ಅವನು) ಯಾವಾಗಲೂ ಸಮನು ; ಆದ್ದರಿಂದ ಸಾಮವು. ನನ್ನ ಎದುರಿಗೆ, ನನ್ನ ಎದುರಿಗೆ ಎಂದು ಎಲ್ಲರಿಗೂ ಸಮ ; ಆದ್ದರಿಂದ ಸಾಮವು.

(ಭಾಷ್ಯ)

೧೩೨ ಅವಯವಮಾತ್ರೇ ಸಾಮ್ನಿ ಆದಿತ್ಯದೃಷ್ಟಿಃ ಪಞ್ಚವಿಧೇಷು ಉಕ್ತಾ ಪ್ರಥಮೇ ಚಾಧ್ಯಾಯೇ। ಅಥ ಇದಾನೀಂ ಖಲು ಅಮುಮ್ ಆದಿತ್ಯಂ ಸಮಸ್ತೇ ಸಾಮ್ನಿ ಅವಯವವಿಭಾಗಶಃ ಅಧ್ಯಸ್ಯ ಸಪ್ತವಿಧಂ ಸಾಮ ಉಪಾಸೀತ। ಕಥಂ ಪುನಃ ಸಾಮತ್ವಮ್ ಆದಿತ್ಯಸ್ಯ ಇತಿ ? ಉಚ್ಯತೇ। ಉದ್ಗೀಥತ್ವೇ ಹೇತುವತ್ ಆದಿತ್ಯಸ್ಯ ಸಾಮತ್ವೇ ಹೇತುಃ। ಕೋಽಸೌ ? ಸರ್ವದಾ ಸಮಃ। ವೃದ್ಧಿಕ್ಷಯಾಭಾವಾತ್। ತೇನ ಹೇತುನಾ ಸಾಮ ಆದಿತ್ಯಃ। ಮಾಂ ಪ್ರತಿ ಮಾಂ ಪ್ರತಿ ಇತಿ ತುಲ್ಯಾಂ ಬುದ್ಧಿಮ್ ಉತ್ಪಾದಯತಿ। ಅತಃ ಸರ್ವೇಣ ಸಮಃ। ಅತಃ ಸಾಮ। ಸಮತ್ವಾತ್ ಇತ್ಯರ್ಥಃ। ಉದ್ಗೀಥಭಕ್ತಿಸಾಮಾನ್ಯವಚನಾದೇವ ಲೋಕಾದಿಷು ಉಕ್ತಸಾಮಾನ್ಯಾತ್ ಹಿಂಕಾರಾದಿತ್ವಂ ಗಮ್ಯತೇ ಇತಿ ಹಿಂಕಾರಾದಿತ್ವೇ ಕಾರಣಂ ನೋಕ್ತಮ್। ಸಾಮತ್ವೇ ಪುನಃ ಸವಿತುಃ, ಅನುಕ್ತಂ ಕಾರಣಂ ನ ಸುಬೋಧಮ್ ಇತಿ ಸಮತ್ವಮುಕ್ತಮ್ ॥

(ಭಾಷ್ಯಾರ್ಥ)

ಅವಯವಮಾತ್ರವಾದ ಸಾಮದಲ್ಲಿ ಆದಿತ್ಯದೃಷ್ಟಿಯನ್ನು ಪಂಚವಿಧಸಾಮೋ(ಪಾಸನೆಗಳನ್ನು ಹೇಳು)ವಲ್ಲಿ (೨-೨-೧,೨)ಯೂ ಒಂದನೆಯ ಅಧ್ಯಾಯದಲ್ಲಿಯೂ

(೧-೩-೧, ೧-೧೩-೨) ಹೇಳಿತ್ತು.[1] ಇನ್ನು ಈಗ ಈ ಆದಿತ್ಯನನ್ನು ಸಮಸ್ತ ಸಾಮದಲ್ಲಿ (ಅವನ್ನು) ಅವಯವಗಳಾಗಿ ಹಂಚಿ ಅಧ್ಯಾಸಮಾಡಿಕೊಂಡು, ಏಳು ಬಗೆಯ ಸಾಮವನ್ನು ಉಪಾಸನೆಮಾಡಬೇಕು (ಎಂದು ಹೇಳಿರುತ್ತದೆ).

(ಪ್ರಶ್ನೆ):- ಆದಿತ್ಯನು ಸಾಮವೆಂಬುದು ಹೇಗೆ?

(ಉತ್ತರ):- ಹೇಳುತ್ತೇವೆ. (ಆದಿತ್ಯನು) ಉದ್ಗೀಥವೆಂಬುದಕ್ಕೆ ಹೇತು ವಿರುವಂತೆಯೇ[2] ಆದಿತ್ಯನು ಸಾಮವೆಂಬುದಕ್ಕೆ ಕಾರಣವಿದೆ[3] ಆ (ಕಾರಣವು) ಯಾವದು? (ಅವನು) ಯಾವಾಗಲೂ ಸಮನಾಗಿರುತ್ತಾನೆ, ಏಕೆಂದರೆ (ಅವನಿಗೆ) ವೃದ್ಧಿಕ್ಷಯಗಳಿರುವದಿಲ್ಲ. ಈ ಹೇತುವಿನಿಂದ ಆದಿತ್ಯನು ಸಾಮವು. (ಮತ್ತು) 'ನನ್ನ ಎದುರಿಗೆ', 'ನನ್ನ ಎದುರಿಗೆ - ಎಂಬ ಸಮಾನಬುದ್ಧಿಯನ್ನೇ (ಎಲ್ಲರಲ್ಲಿಯೂ) ಉಂಟುಮಾಡುತ್ತಿರುತ್ತಾನೆ, ಆದ್ದರಿಂದ ಪ್ರತಿಯೊಬ್ಬನಿಗೂ ಸಮನು. ಆದ್ದರಿಂದ ಸಮವಾಗಿರುವದರಿಂದ ಸಾಮ(ನಾಗಿರುತ್ತಾನೆ) ಎಂದರ್ಥ

ಉದ್ಗೀಥಭಕ್ತಿಗೆ ಸಾಮಾನ್ಯವನ್ನು ಹೇಳಿರುವದರಿಂದಲೇ ಲೋಕವೇ ಮುಂತಾದವುಗಳಲ್ಲಿ (ಆ) ಹೇಳಿದ ಸಾಮಾನ್ಯದಿಂದಲೇ (ಹಿಂಕಾರಾದಿಸ್ವರೂಪ)ವು (ಹೇಗೆಂಬುದು) ತಿಳಿಯಬರುತ್ತದೆಯಾದ್ದರಿಂದ (ಅವು) ಹಿಂಕಾರಾದಿಗಳು (ಹೇಗೆಂ)ಬುದಕ್ಕೆ ಕಾರಣವನ್ನು ಹೇಳಲಿಲ್ಲ.[4] ಆದರೆ ಸೂರ್ಯನು ಸಾಮವೆಂಬುದು

---

1. ಉದ್ಗೀಥವನ್ನು ಆದಿತ್ಯನೆಂದು ಉಪಾಸನೆಮಾಡಬೇಕು, ಊಕಾರಸ್ತೋಭವನ್ನು ಆದಿತ್ಯನೆಂದು ಉಪಾಸನೆಮಾಡಬೇಕು-ಎಂದು ಒಂದನೆಯ ಅಧ್ಯಾಯದಲ್ಲಿಯೂ ಪ್ರತಿಹಾರ ವೆಂಬ ಭಕ್ತಿಯನ್ನು ಆದಿತ್ಯನೆಂದು ಉಪಾಸನೆಮಾಡಬೇಕು, ಪ್ರಸ್ತಾವಭಕ್ತಿಯನ್ನು ಆದಿತ್ಯ ನೆಂದು ಉಪಾಸನೆಮಾಡಬೇಕು- ಎಂದು ಈ ಅಧ್ಯಾಯದಲ್ಲಿಯೂ ಹಿಂದೆ ಹೇಳಿತ್ತು, ಅದೆಲ್ಲ ಸಾಮದ ಅವಯವದ ಉಪಾಸನೆಯೇ ಎಂದರ್ಥ

2 'ಮೇಲುಗಡೆಯಿರುವ ಆದಿತ್ಯನನ್ನು ಕುರಿತು ಗಾನಮಾಡುತ್ತಾರೆ' ಎಂಬ ಹೇತು ವನ್ನು ಶ್ರುತಿಯಲ್ಲಿ ಹೇಳಿತ್ತು-ಎಂದು ಟೀಕೆ. ಅದು ಸರಿಯಲ್ಲ, ಏಕೆಂದರೆ ಆ ಹೋಲಿಕೆಯು ಭಾಷ್ಯಕಾರರು (೧-೧೩-೨) ಆದಿತ್ಯನು ಊಕಾರವೆಂಬುದಕ್ಕೆ ಹೇಳಿದ್ದು. ಶ್ರುತಿಯಲ್ಲಿ (೧-೩-೧ ರಲ್ಲಿ) ಉದಯವಾಗುತ್ತಲೇ ಇವನು ಪ್ರಜೆಗಳಿಗೆ ಅನ್ನೋತ್ಪತ್ತಿಗಾಗಿ ಉದ್ಗಾನ ಮಾಡುತ್ತಾನೆ ಎಂಬ ಹೇತುವನ್ನು ಕೊಟ್ಟಿದೆ

3 ಅಕ್ಷರರೂಪವಾದ ಉದ್ಗೀಥತ್ವವಿಲ್ಲದಿದ್ದರೂ ಅನುಗುಣವಾದ ಧರ್ಮದಿಂದ ಉದ್ಗೀಥತ್ವವಿದೆ ಎಂದು ಹೇಳಿದಂತೆಯೇ ಇಲ್ಲಿ ಸಮತ್ವವೆಂಬ ಧರ್ಮವನ್ನು ಹೇತುವಾಗಿ ಹೇಳಿದೆ ಎಂದು ಅಭಿಪ್ರಾಯ

4. ಉದ್ಗೀಥಭಕ್ತಿಗೆ ಸಾಮಾನ್ಯವನ್ನು ಹೇಳಿದ್ದರಿಂದಲೇ ಪೃಥಿವಿಯು ಹಿಂಕಾರವು ಎಂಬಲ್ಲಿ ಹಿಂಕಾರದಂತೆ ಅದು ಲೋಕಗಳಲ್ಲಿ ಮೊದಲನೆಯದು ಎಂಬುದು ತಾನೇ ಗೊತ್ತಾಗು ತ್ತದೆ, ಆದರೆ ಆದಿತ್ಯನಿಗೆ ಸಾಮತ್ವವೆಂಬುದು ಹಾಗೆ ಹೇಳದೆ ಗೊತ್ತಾಗಲಾರದು- ಎಂದರ್ಥ. 'ಆದಿತ್ಯನಿಗೆ ಊರ್ಧ್ವತ್ವವೆಂಬ ಸಾಮಾನ್ಯವು ಉದ್ಗೀಥಕ್ಕೆ ಇದೆ' ಎಂದು ಶ್ರುತಿ ಹೇಳಿದೆ, ಅದನ್ನನುಸರಿಸಿ ನಾವೂ ಪ್ರಾಥಮ್ಯಾದಿಗಳ ಸಾಮಾನ್ಯದಿಂದ ಹಿಂಕಾರಾದಿತ್ವಕ್ಕೆ ಹೇತುವೆಂದು ಹೇಳಿರುತ್ತೇವೆ. ಅದರಂತೆಯೇ ಆದಿತ್ಯಪ್ರಭೇದಗಳಿಗೂ ಹಿಂಕಾರಾದಿತ್ವವನ್ನು ತಿಳಿಯಬಹು ದೆಂದು ಶ್ರುತಿಯು ಕಾರಣವನ್ನು ಹೇಳಿಲ್ಲ' ಎಂಬ ಟೀಕಾವ್ಯಾಖ್ಯಾನವು ಸರಿಯಲ್ಲ. ಏಕೆಂದರೆ ಆದಿತ್ಯಪ್ರಭೇದಗಳಲ್ಲಿ ಶ್ರುತಿಯು ಸಾಮಾನ್ಯವನ್ನು ಹೇಳಿಯೇ ಇದೆ.

(ಹೇಗೆಂ)ಬುದಕ್ಕೆ ಕಾರಣವನ್ನು ಹೇಳದಿದ್ದರೆ ತಿಳಿಯಲಾರದು ಎಂದು ಸಮತ್ವ (ವೆಂಬ ಕಾರಣವನ್ನು ಇಲ್ಲಿ) ಹೇಳಿರುತ್ತಾರೆ.

(ಉಪನಿಷತ್ತು)

**ತಸ್ಮಿನ್ನಿಮಾನಿ ಸರ್ವಾಣಿ ಭೂತಾನ್ಯನ್ವಾಯತ್ತಾನೀತಿ ವಿದ್ಯಾತ್ತಸ್ಯ ಯತ್ಪುರೋದಯಾತ್ ಸ ಹಿಂಕಾರಸ್ತದಸ್ಯ ಪಶವೋಽನ್ವಾಯತ್ತಾ ಸ್ತಸ್ಮಾತ್ತೇ ಹಿಂಕುರ್ವನ್ತಿ ಹಿಂಕಾರಭಾಜಿನೋ ಹ್ಯೇತಸ್ಯ ಸಾಮ್ನಃ ॥ ೨ ॥**

೨. ಅವನಲ್ಲಿ ಈ ಭೂತಗಳೆಲ್ಲವೂ ಅನ್ವಾಯತ್ತವಾಗಿರುತ್ತವೆ ಎಂದು ತಿಳಿಯಬೇಕು. ಅವನಿಗೆ ಉದಯಕ್ಕಿಂತ ಮೊದಲಿದೆಯಲ್ಲ, ಅದು ಹಿಂಕಾರವು- ಈ (ಸಾಮದ) ಆ (ಭಕ್ತಿಗೆ) ಪಶುಗಳು ಅನ್ವಾಯತ್ತವಾಗಿರುವವು. ಆದ್ದರಿಂದ ಅವು ಹಿಂಕಾರವನ್ನು ಮಾಡುತ್ತಿರುತ್ತವೆ. ಈ ಸಾಮದ ಹಿಂಕಾರಕ್ಕೆ ಭಾಗಿಗಳಲ್ಲವೆ?

## ಆದಿತ್ಯಸಾಮದ ಹಿಂಕಾರ

(ಭಾಷ್ಯ)

೧೩೩ ತಸ್ಮಿನ್ ಆದಿತ್ಯೇ ಅವಯವವಿಭಾಗಶಃ ಇಮಾನಿ ವಕ್ಷ್ಯಮಾಣಾನಿ ಸರ್ವಾಣಿ ಭೂತಾನಿ ಅನ್ವಾಯತ್ತಾನಿ ಅನುಗತಾನಿ ಆದಿತ್ಯಮ್ ಉಪಜೀವ್ಯತ್ವೇನ ಇತಿ ವಿದ್ಯಾತ್ । ಕಥಮ್ ? ತಸ್ಯ ಆದಿತ್ಯಸ್ಯ ಯತ್ ಪುರಾ ಉದಯಾತ್ ಧರ್ಮರೂಪಮ್, ಸ ಹಿಂಕಾರೋ ಭಕ್ತಿಃ । ತತ್ರ ಇದಂ ಸಾಮಾನ್ಯಮ್ ಯತ್ ತಸ್ಯ ಹಿಂಕಾರಭಕ್ತಿರೂಪಮ್, ತದಸ್ಯ ಆದಿತ್ಯಸ್ಯ ಸಾಮ್ನಃ ಪಶವಃ ಗವಾದಯಃ ಅನ್ವಾಯತ್ತಾಃ ಅನುಗತಾಃ । ತದ್ಭಕ್ತಿರೂಪಮ್ ಉಪಜೀವನ್ತಿ ಇತ್ಯರ್ಥಃ । ಯಸ್ಮಾದೇವಮ್, ತಸ್ಮಾತ್ ತೇ ಹಿಂಕುರ್ವನ್ತಿ ಪಶವಃ ಪ್ರಾಗುದಯಾತ್ । ತಸ್ಮಾತ್ ಹಿಂಕಾರಭಾಜಿನೋ ಹಿ ಏತಸ್ಯ ಆದಿತ್ಯಾಖ್ಯಸ್ಯ ಸಾಮ್ನಃ । ತದ್ಭಕ್ತಿಭಜನಶೀಲತ್ವಾದ್ ಹಿ ತೇ ಏವಂ ವರ್ತನ್ತೇ ॥

(ಭಾಷ್ಯಾರ್ಥ)

ಆ ಆದಿತ್ಯನಲ್ಲಿ (ಆಯಾ) ಅವಯವಗಳನ್ನು ವಿಂಗಡಿಸಿಕೊಂಡು ಈ ಮುಂದೆ ಹೇಳುವ ಎಲ್ಲಾ ಭೂತಗಳೂ (ಅವಕ್ಕೆ) ಅನ್ವಾಯತ್ತವಾಗಿರುವವು, ಆದಿತ್ಯನೇ (ತಮಗೆ) ಉಪಜೀವ್ಯನೆಂದು ಅನುಸರಿಸಿಕೊಂಡಿರುವವು ಎಂದು ತಿಳಿಯಬೇಕು

ಹೇಗೆಂದರೆ, ಆ ಆದಿತ್ಯನ ಉದಯಕ್ಕಿಂತ ಮುಂಚಿನ ಧರ್ಮರೂಪವಿದೆಯಲ್ಲ,[1] ಅದು ಹಿಂಕಾರವೆಂಬ ಭಕ್ತಿಯು ಅಲ್ಲಿ (ಎರಡಕ್ಕೂ) ಸಾಮಾನ್ಯವೇನೆಂದರೆ[2] ಆ (ಸಾಮದ) ಹಿಂಕಾರವೆಂಬ ಭಕ್ತಿರೂಪವಾಗಿದೆಯಲ್ಲ, ಆ ಈ ಆದಿತ್ಯನೆಂಬ ಸಾಮದ (ಭಕ್ತಿಗೇ) ಪಶುಗಳು ಗೋವುಗಳೇ ಮುಂತಾದವು ಅನ್ವಾಯತ್ತವಾಗಿರುವವು, ಆ ಭಕ್ತಿಯ ರೂಪವನ್ನು ಉಪಜೀವಿಸಿಕೊಂಡಿರುತ್ತವೆ ಎಂದರ್ಥ. ಹೀಗಿರುವದರಿಂದಲೇ ಆ ಪಶುಗಳು ಉದಯವಾಗುವ ಮುಂಚೆ ಹಿಂಕರಿಸುತ್ತವೆ ಆದ್ದರಿಂದ (ಅವು) ಆದಿತ್ಯನೆಂಬ ಸಾಮದ ಹಿಂಕಾರಭಾಜಿಗಳೇ, ಆ ಭಕ್ತಿಯನ್ನು ಹೊಂದುವ ಸ್ವಭಾವದವಾದ್ದರಿಂದಲೇ, ಅವು ಹಾಗೆ ನಡೆದುಕೊಳ್ಳುತ್ತವೆ[3]

(ಉಪನಿಷತ್ತು)

**ಅಥ ಯತ್ ಪ್ರಥಮೋದಿತೇ ಸ ಪ್ರಸ್ತಾವಸ್ತದಸ್ಯ ಮನುಷ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರಸ್ತುತಿಕಾಮಾಃ ಪ್ರಶಗ್ಂಸಾಕಾಮಾಃ ಪ್ರಸ್ತಾವಭಾಜಿನೋ ಹ್ಯೇತಸ್ಯ ಸಾಮ್ನಃ ॥ ೩ ॥**

೩. ಇನ್ನು ಮೊದಲು ಉದಯವಾಗಲಿನ (ರೂಪ)ವಿದೆಯಲ್ಲ, ಅದು ಪ್ರಸ್ತಾವವು. ಅದರ ಆ (ಭಕ್ತಿಗೆ) ಮನುಷ್ಯರು ಅನ್ವಾಯತ್ತರು. ಆದ್ದರಿಂದ ಅವರು ಪ್ರಸ್ತುತಿಕಾಮರು, ಪ್ರಶಂಸಾಕಾಮರು; ಈ ಸಾಮದ ಪ್ರಸ್ತಾವಕ್ಕೆ ಭಾಗಿಗಳಲ್ಲವೆ?

## ಆದಿತ್ಯಸಾಮದ ಪ್ರಸ್ತಾವ

(ಭಾಷ್ಯ)

೧೩೪ ಅಥ ಯತ್ ಪ್ರಥಮೋದಿತೇ ಸವಿತ್ರುರೂಪಮ್, ತದಸ್ಯ ಆದಿತ್ಯಾಖ್ಯಸ್ಯ ಸಾಮ್ನಃ ಸ[4] ಪ್ರಸ್ತಾವಃ। ತದಸ್ಯ ಮನುಷ್ಯಾಃ ಅನ್ವಾಯತ್ತಾಃ ಪೂರ್ವ

---

1. ಸುಖಕರವಾಗಿರುವದರಿಂದ ಇದು ಧರ್ಮರೂಪವು, ಧರ್ಮನಿಯತವಾದ ರೂಪವು ಎಂದರ್ಥ— ಎಂದು ಟೀಕೆ. ಆದಿತ್ಯನು ಧರ್ಮಿ, ಅವನ ಧರ್ಮವಾಗಿರುವ ಉದಯಕ್ಕಿಂತ ಮುನ್ನಿನ ರೂಪವನ್ನು ಎಂದಿಷ್ಟೇ ಅರ್ಥವನ್ನು ಮಾಡಿದರೆ ಸಾಕೆಂದು ತೋರುತ್ತದೆ.

2. ಆದಿತ್ಯನ ಉದಯಕ್ಕಿಂತ ಮುನ್ನಿನ ರೂಪಕ್ಕೂ ಹಿಂಕಾರಕ್ಕೂ ಇಲ್ಲಿ ಸಾಮಾನ್ಯವನ್ನು ಹೇಳಿದೆ ಎಂಬುದು ಸ್ಪಷ್ಟವಾಗಿದೆ, ಇದರ ಆಧಾರದಿಂದಲೇ ನಾವು ಇಲ್ಲಿ ಸಾಮಾನ್ಯವನ್ನು ಶ್ರುತಿ ಹೇಳಲಿಲ್ಲ ಎಂಬ ಟೀಕೆಯು ಸಲ್ಲದೆಂದದ್ದು.

3. ಆದಿತ್ಯಸಾಮದ ಹಿಂಕಾರವು ಅವುಗಳ ಪಾಲಿಗೆ ಬಂದಿರುತ್ತದೆಯಾದ್ದರಿಂದ ಅವು ಮುಂಜಾವದಲ್ಲಿ ಹಿಂಕಾರವನ್ನು ಮಾಡುತ್ತವೆ ಎಂದರ್ಥ. ಮುಂದಿನ ಈ ಬಗೆಯ ವಾಕ್ಯಗಳಿಗೂ ಹೀಗೆಯೇ ಅಭಿಪ್ರಾಯ.

4 ಈ ಮಾತು ಕೆಲವು ಪಾಠಗಳಲ್ಲಿಲ್ಲದಿದ್ದರೂ ಬೇಕು, ಉಪನಿಷತ್ತಿನಲ್ಲಿದೆ.

ವತ್। ತಸ್ಮಾತ್ ತೇ ಪ್ರಸ್ತುತಿಂ ಪ್ರಶಂಸಾಂ ಕಾಮಯನ್ತೇ। ಯಸ್ಮಾತ್ ಪ್ರಸ್ತಾವಭಾಜಿನೋ ಹಿ ಏತಸ್ಯ ಸಾಮ್ನಃ ॥

(ಭಾಷ್ಯಾರ್ಥ)

ಇನ್ನು ಮೊದಲು ಉದಯವಾದಾಗಳಿನ ಸೂರ್ಯನ ರೂಪವಿದೆಯಲ್ಲ, ಅದು ಈ ಆದಿತ್ಯನೆಂಬ ಸಾಮದ ಪ್ರಸ್ತಾವವು ಈ (ಸಾಮದ) ಆ (ಭಕ್ತಿಗೆ) ಮನುಷ್ಯರು ಅನ್ವಾಯತ್ತವಾಗಿರುವರು –ಎಂಬುದಕ್ಕೆ ಹಿಂದಿನಂತೆ (ಅರ್ಥವನ್ನು ಮಾಡಿಕೊಳ್ಳಬೇಕು). ಆದ್ದರಿಂದ ಆ (ಮನುಷ್ಯರು) ಪ್ರಸ್ತುತಿಯನ್ನು ಎಂದರೆ ಪ್ರಶಂಸೆಯನ್ನು[1] ಬಯಸುತ್ತಾರೆ, ಏಕೆಂದರೆ ಈ ಸಾಮದ ಪ್ರಸ್ತಾವಕ್ಕೆ ಅವರು ಭಾಗಿಗಳು

(ಉಪನಿಷತ್ತು)

**ಅಥ ಯತ್ಸಂಗವವೇಲಾಯಾಗ್ಂ ಸ ಆದಿಸ್ತದಸ್ಯ ವಯಾಗ್ಂಸ್ಯನ್ವಾಯತ್ತಾನಿ ತಸ್ಮಾತ್ತಾನ್ಯನ್ತರಿಕ್ಷೇಽನಾರಮ್ಭಣಾನ್ಯಾದಾಯಾಽಽತ್ಮಾನಂ ಪರಿಪತನ್ತ್ಯಾದಿಭಾಜೀನಿ ಹ್ಯೇತಸ್ಯ ಸಾಮ್ನಃ ॥೪॥**

೪. ಇನ್ನು ಸಂಗವವೇಳೆಯಲ್ಲಿರುವುದಲ್ಲ, ಅದು ಆದಿಯು. ಅದರ ಆ (ಭಕ್ತಿಗೆ) ಪಕ್ಷಿಗಳು ಅನ್ವಾಯತ್ತವಾಗಿರುವವು. ಆದ್ದರಿಂದ ಅವು ಅಂತರಿಕ್ಷದಲ್ಲಿ ಆಲಂಬನವಿಲ್ಲದ ತಮ್ಮನ್ನೇ ತೆಗೆದುಕೊಂಡು (ಹೋಗಿ) ಹಾರಾಡುತ್ತವೆ; ಈ ಸಾಮದ ಆದಿಗೆ ಭಾಗಿಗಳಲ್ಲವೆ?

## ಆದಿತ್ಯಸಾಮದ ಆದಿ

(ಭಾಷ್ಯ)

೧೩೫. ಅಥ ಯತ್ ಸಂಗವವೇಲಾಯಾಂ ಗವಾಂ ರಶ್ಮೀನಾಂ ಸಂಗಮನಂ ಸಂಗವಃ। ಯಸ್ಯಾಂ ವೇಲಾಯಾಮ್, ಗವಾಂ ವಾ ವತ್ಸೈಃ ಸಹ, ಸಾ ಸಂಗವವೇಲಾ। ತಸ್ಮಿನ್ ಕಾಲೇ ಯತ್ ಸಾವಿತ್ರಂ ರೂಪಮ್, ಸ ಆದಿಃ ಭಕ್ತಿವಿಶೇಷ ಓಂಕಾರಃ। ತದಸ್ಯ ವಯಾಂಸಿ ಪಕ್ಷಿಣೋಽನ್ವಾಯತ್ತಾನಿ। ಯತ ಏವಮ್, ತಸ್ಮಾತ್ ತಾನಿ ವಯಾಂಸಿ ಅನ್ತರಿಕ್ಷೇ[2] ಅನಾರಮ್ಭಣಾನಿ ಅನಾಲಮ್ಬ

---

1. ಪ್ರಸ್ತುತಿಗೂ ಪ್ರಶಂಸೆಗೂ ಪ್ರತ್ಯಕ್ಷಪರೋಕ್ಷಕೃತಭೇದವಿದೆ ಎಂಬ **ಟೀಕೆ** ಅನವಶ್ಯ; ಭಾಷ್ಯದಲ್ಲಿ ಪ್ರಸ್ತುತಿಂ ಪ್ರಶಂಸಾಂ ಚ ಎಂದಿಲ್ಲವಾದ್ದರಿಂದ ಇವೆರಡಕ್ಕೂ ವ್ಯಾಖ್ಯಾನ ವ್ಯಾಖ್ಯೇಯಭಾವವಿದೆ ಎಂದೇ ತಿಳಿಯಬಹುದು.

2 'ಅನ್ತರಿಕ್ಷೇಣ ಅನ್ತರಿಕ್ಷೇ ಆರಂಬಣಾನಿ ಆಲಂಬನಾನಿ' ಎಂಬ ಪಾಠಾಂತರವು ಸರಿಯಲ್ಲ.

ನಾನಿ ಆತ್ಮಾನಮ್ ಆದಾಯ ಆತ್ಮಾನಮೇವ ಆಲಮ್ಬನತ್ವೇನ ಗೃಹೀತ್ವಾ ಪರಿಪತನ್ತಿ ಗಚ್ಛನ್ತಿ। ಅತಃ ಆಕಾರಸಾಮಾನ್ಯಾತ್ ಆದಿಭಕ್ತಿಭಾಜೀನಿ ಹಿ ಏತಸ್ಯ ಸಾಮ್ನಃ ॥

(ಭಾಷ್ಯಾರ್ಥ)

ಇನ್ನು ಸಂಗವವೇಳೆಯಲ್ಲಿ– ಗೋಗಳು ಎಂದರೆ ರಶ್ಮಿಗಳು ಒಟ್ಟುಗೂಡುವದೇ ಸಂಗವವು ಯಾವ ವೇಳೆಯಲ್ಲಾಗುವದೋ, ಅಥವಾ ಗೋಗಳು ಕರುಗಳೊಡನೆ (ಸೇರಿಕೊಳ್ಳುವದು ಯಾವ ವೇಳೆಯಲ್ಲಾಗುವದೋ) ಅದು ಸಂಗವವೇಳೆಯು. ಆ ಕಾಲದಲ್ಲಿರುವ– ಸೂರ್ಯನ ರೂಪವಿದೆಯಲ್ಲ ಅದು (ಆದಿತ್ಯಸಾಮದ) ಆದಿಯು, ಓಂಕಾರವೆಂಬ ಭಕ್ತಿವಿಶೇಷವು. ಈ ಸಾಮದ ಆ (ಭಕ್ತಿವಿಶೇಷಕ್ಕೆ ವಯಾಂಸಿ= ಪಕ್ಷಿಣಃ) ಪಕ್ಷಿಗಳು ಅನ್ವಾಯತ್ತವಾಗಿರುವವು. ಹೀಗಿರುವದಷ್ಟೆ, ಆದ್ದರಿಂದ ಆ ಪಕ್ಷಿಗಳು ಅಂತರಿಕ್ಷದಲ್ಲಿ (ಅನಾರಮ್ಬಣಾನಿ= ಅನಾಲಮ್ಬನಾನಿ) ಯಾವ ಆಲಂಬನವೂ ಇಲ್ಲದೆ ತಮ್ಮನ್ನೇ (ತಾವು) ತೆಗೆದುಕೊಂಡು, ತಮ್ಮನ್ನೇ ಆಲಂಬನವಾಗಿ ಮಾಡಿಕೊಂಡು ಹಾರಾಡುತ್ತವೆ, ಸಂಚರಿಸುತ್ತವೆ ಆದ್ದರಿಂದ (ಹೀಗೆ) ಆಕಾರವು ಸಮಾನವಾಗಿರುವದರಿಂದ ಈ ಸಾಮದ ಆದಿಭಕ್ತಿಗೆ ಅವು ಭಾಗಿಗಳಷ್ಟೆ.

(ಉಪನಿಷತ್ತು)

**ಅಥ ಯತ್ಸಂಪ್ರತಿ ಮಧ್ಯಂದಿನೇ ಸ ಉದ್ಗೀಥಸ್ತದಸ್ಯ ದೇವಾ ಅನ್ವಾಯತ್ತಾಸ್ತಸ್ಮಾತ್ತೇ ಸತ್ತಮಾಃ ಪ್ರಾಜಾಪತ್ಯಾನಾಮುದ್ಗೀಥಭಾಜಿನೋ ಹ್ಯೇತಸ್ಯ ಸಾಮ್ನಃ ॥ ೫ ॥**

೫. ಇನ್ನು ಸರಿಯಾದ ನಡುಹಗಲಿನಲ್ಲಿ(ರುವ ರೂಪ ವಿದೆಯಲ್ಲ, ಅದು ಉದ್ಗೀಥವು. ಇದರ ಆ (ಭಕ್ತಿಗೆ) ದೇವತೆಗಳು ಅನ್ವಾಯತ್ತರಾಗಿರುವರು. ಆದ್ದರಿಂದ ಅವರು ಪ್ರಾಜಾಪತ್ಯರಲ್ಲಿ ಸತ್ತಮರಾಗಿರುವರು. ಈ ಸಾಮದ ಉದ್ಗೀಥಕ್ಕೆ ಭಾಗಿಗಳಲ್ಲವೆ?

## ಆದಿತ್ಯಸಾಮದ ಉದ್ಗೀಥ

(ಭಾಷ್ಯ)

೧೩೬. ಅಥ ಯತ್ ಸಂಪ್ರತಿ ಮಧ್ಯಂದಿನೇ। ಋಜುಮಧ್ಯಂದಿನೇ ಇತ್ಯರ್ಥಃ। ಸ ಉದ್ಗೀಥಭಕ್ತಿಃ। ತದಸ್ಯ ದೇವಾ ಅನ್ವಾಯತ್ತಾಃ। ದ್ಯೋತನಾತಿಶಯಾತ್ ತತ್ಕಾಲೇ। ತಸ್ಮಾತ್ ತೇ ಸತ್ತಮಾಃ ವಿಶಿಷ್ಟತಮಾಃ ಪ್ರಾಜಾಪತ್ಯಾನಾಂ ಪ್ರಜಾಪತ್ಯಪತ್ಯಾನಾಮ್। ಉದ್ಗೀಥಭಾಜಿನೋ ಹಿ ಏತಸ್ಯ ಸಾಮ್ನಃ॥

(ಭಾಷ್ಯಾರ್ಥ)

ಇನ್ನು ಯಾವದು ಸರಿಯಾದ ನಡುಹಗಲಿನಲ್ಲಿ, ಎಂದರೆ ನೇರಾದ ನಡು ಹಗಲಿನಲ್ಲಿರುವದೋ ಎಂದರ್ಥ. ಅದು ಉದ್ಗೀಥಭಕ್ತಿಯು. ಈ (ಸಾಮದ) ಆ (ಭಕ್ತಿಗೆ) ದೇವತೆಗಳು ಅನ್ವಾಯತ್ತರಾಗಿರುತ್ತಾರೆ, ಏಕೆಂದರೆ ಆ ಕಾಲದಲ್ಲಿ (ಆದಿತ್ಯನು) ಮಿಗಿಲಾದ ದ್ಯುತಿಯುಳ್ಳವನಾಗಿರುತ್ತಾನೆ ಆದ್ದರಿಂದ ಆ (ದೇವತೆಗಳು) ಪ್ರಾಜಾಪತ್ಯರಲ್ಲಿ, ಪ್ರಜಾಪತಿಯ ಸಂತತಿಯವರಲ್ಲಿ, ಸತ್ತಮರು, ವಿಶಿಷ್ಟತಮರು, ಈ ಸಾಮದ ಉದ್ಗೀಥಕ್ಕೆ ಭಾಗಿಗಳಲ್ಲವೆ[1] ?

(ಉಪನಿಷತ್ತು)

**ಅಥ ಯದೂರ್ಧ್ವಂ ಮಧ್ಯಂದಿನಾತ್ ಪ್ರಾಗಪರಾಹ್ಣಾತ್ ಸ ಪ್ರತಿಹಾರಸ್ತದಸ್ಯ ಗರ್ಭಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರತಿಹೃತಾ ನಾವಪದ್ಯನ್ತೇ ಪ್ರತಿಹಾರಭಾಜಿನೋ ಹ್ಯೇತಸ್ಯ ಸಾಮ್ನಃ ॥೬॥**

೬. ಇನ್ನು ನಡುಹಗಲಿನ ಮೇಲೆ ಅಪರಾಹ್ಣಕ್ಕೆ ಮುಂಚೆ (ಇರುವದಲ್ಲ), ಅದು ಪ್ರತಿಹಾರವು ಇದರ ಆ (ಭಕ್ತಿಗೆ) ಗರ್ಭಗಳು ಅನ್ವಾಯತ್ತವಾಗಿರುತ್ತವೆ. ಆದ್ದರಿಂದ ಪ್ರತಿಹೃತವಾದರೆ ಕೆಳಕೆ ಬೀಳುವದಿಲ್ಲ. (ಅವು) ಈ ಸಾಮದ ಪ್ರತಿಹಾರಕ್ಕೆ ಭಾಗಿಗಳಲ್ಲವೆ ?

## ಆದಿತ್ಯಸಾಮದ ಪ್ರತಿಹಾರ

(ಭಾಷ್ಯ)

೧೩೭ ಅಥ ಯತ್ ಊರ್ಧ್ವಂ ಮಧ್ಯಂದಿನಾತ್ ಪ್ರಾಗ್ ಅಪರಾಹ್ಣಾತ್ ಯದ್ರೂಪಂ ಸವಿತುಃ, ಸ ಪ್ರತಿಹಾರಃ। ತದಸ್ಯ ಗರ್ಭಾಃ ಅನ್ವಾಯತ್ತಾಃ। ಅತಃ ತೇ ಸವಿತುಃ ಪ್ರತಿಹಾರಭಕ್ತಿರೂಪೇಣ ಊರ್ಧ್ವಂ ಪ್ರತಿಹೃತಾಃ ಸನ್ತಃ ನಾವಪದ್ಯನ್ತೇ ನಾಧಃಪತನ್ತಿ। ತದ್ದ್ವಾರೇ ಸತ್ಯಪಿ ಇತ್ಯರ್ಥಃ। ಯತಃ ಪ್ರತಿಹಾರಭಾಜಿನೋ ಹಿ ಏತಸ್ಯ ಸಾಮ್ನೋ ಗರ್ಭಾಃ ॥

(ಭಾಷ್ಯಾರ್ಥ)

ಇನ್ನು ನಡುಹಗಲಾದಮೇಲೆ ಅಪರಾಹ್ಣಕ್ಕೆ ಮುಂಚೆ ಇರುವ (ಸೂರ್ಯನ) ರೂಪವಿದೆಯಲ್ಲ, ಅದು ಪ್ರತಿಹಾರ(ಭಕ್ತಿಯು). ಈ (ಸಾಮದ) ಆ (ಭಕ್ತಿಗೆ) ಗರ್ಭಗಳು ಅನ್ವಾಯತ್ತವಾಗಿರುತ್ತವೆ ಆದ್ದರಿಂದ ಅವು ಸೂರ್ಯನ ಪ್ರತಿಹಾರ

---

1 ಆದ್ದರಿಂದ ಉದ್ಗೀಥದಂತೆ ಅವರೂ ಶ್ರೇಷ್ಠರಾಗಿರುತ್ತಾರೆ.

ಭಕ್ತಿರೂಪದಿಂದ ಮೇಲಕ್ಕೆ ಪ್ರತಿಹೃತವಾಗಿರುವದರಿಂದ, ಆ (ಬೀಳುವ) ದ್ವಾರವು ಇದ್ದರೂ (ನಾವಪದ್ಯನ್ತೇ = ನಾಧಃಪತನ್ತಿ) ಕೆಳಕ್ಕೆ ಬೀಳದೆ ಇರುವವು ಎಂದರ್ಥ, ಏಕೆಂದರೆ ಗರ್ಭಗಳು ಈ ಸಾಮದ ಪ್ರತಿಹಾರಕ್ಕೆ ಭಾಗಿಗಳಲ್ಲವೆ ?

(ಉಪನಿಷತ್ತು)

**ಅಥ ಯದೂರ್ಧ್ವಮಪರಾಹ್ಣಾತ್ ಪ್ರಾಗಸ್ತಮಯಾತ್ ಸ ಉಪದ್ರವಸ್ತದಸ್ಯಾರಣ್ಯಾಃ ಅನ್ವಾಯತ್ತಾಸ್ತಸ್ಮಾತ್ತೇ ಪುರುಷಂ ದೃಷ್ಟ್ವಾ ಕಕ್ಷಗ್ಂ ಶ್ವಭ್ರಮಿತ್ಯುಪದ್ರವನ್ತ್ಯುಪದ್ರವಭಾಜಿನೋ ಹ್ಯೇತಸ್ಯ ಸಾಮ್ನಃ ॥ ೭ ॥**

೭. ಇನ್ನು ಅಪರಾಹ್ಣದ ಮೇಲೆ ಅಸ್ತಮಯಕ್ಕೆ ಮುಂಚೆ (ಇರುವದಿದೆ)ಯಲ್ಲ, ಅದು ಉಪದ್ರವವು. ಇದರ ಆ (ಭಕ್ತಿಗೆ) ಆರಣ್ಯಗಳು ಅನ್ವಾಯತ್ತವಾಗುವವು. ಆದ್ದರಿಂದ ಅವು ಪುರುಷನನ್ನು ಕಂಡರೆ ಕಕ್ಷವನ್ನು ಶ್ವಭ್ರವೆಂದು ಓಡುತ್ತವೆ. ಈ ಸಾಮದ ಉಪದ್ರವಕ್ಕೆ ಭಾಗಿಗಳಲ್ಲವೆ ?

## ಆದಿತ್ಯಸಾಮದ ಉಪದ್ರವ

(ಭಾಷ್ಯ)

೧೩೮. ಅಥ ಯದೂರ್ಧ್ವಮಪರಾಹ್ಣಾತ್ ಪ್ರಾಕ್ ಅಸ್ತಮಯಾತ್ ಸ ಉಪದ್ರವಃ। ತದಸ್ಯ ಆರಣ್ಯಾಃ ಪಶವಃ ಅನ್ವಾಯತ್ತಾಃ। ತಸ್ಮಾತ್ ತೇ ಪುರುಷಂ ದೃಷ್ಟ್ವಾ ಭೀತಾಃ ಕಕ್ಷಮ್ ಅರಣ್ಯಂ ಶ್ವಭ್ರಂ ಭಯಶೂನ್ಯಮಿತಿ ಉಪದ್ರವನ್ತಿ ಉಪಗಚ್ಛನ್ತಿ ದೃಷ್ಟ್ವಾ ಉಪದ್ರವಣಾತ್ ಉಪದ್ರವಭಾಜಿನೋ ಹಿ ಏತಸ್ಯ ಸಾಮ್ನಃ ॥

(ಭಾಷ್ಯಾರ್ಥ)

ಇನ್ನು ಅಪರಾಹ್ಣವಾದ ಮೇಲೆ ಅಸ್ತಮಯಕ್ಕೆ ಮುಂಚೆ (ಇರುವ ರೂಪ) ವಿದೆಯಲ್ಲ, ಅದು ಉಪದ್ರವವು. ಈ (ಸಾಮದ) ಆ (ಭಕ್ತಿಗೆ) ಆರಣ್ಯಪಶುಗಳು ಅನ್ವಾಯತ್ತವಾಗಿರುವವು. ಆದ್ದರಿಂದಲೇ ಅವು ಮನುಷ್ಯನನ್ನು ಕಂಡರೆ ಅಂಜಿಕೊಂಡು ಕಕ್ಷವನ್ನು ಅರಣ್ಯವನ್ನು ಕುರಿತು ಶ್ವಭ್ರವೆಂದು[1] ಭಯರಹಿತವಾದ (ಪ್ರದೇಶವೆಂದು) ಓಡಿಹೋಗುತ್ತವೆ. ಕಂಡು ಓಡುವದರಿಂದ (ಉಪದ್ರವಣಾತ್) ಈ ಸಾಮದ ಉಪದ್ರವಕ್ಕೆ ಭಾಗಿಗಳಷ್ಟೆ.

---

1. 'ಕಕ್ಷಂ ಶ್ವಭ್ರಮಿತಿ' ಎಂಬುದನ್ನು ಹುಲ್ಲುಬಣವೆ, ಗುಂಡಿ– ಮುಂತಾದ ಪ್ರದೇಶವನ್ನ ಕುರಿತು ಎಂದೂ ಅರ್ಥಮಾಡಬಹುದಾಗಿತ್ತೆಂದು ತೋರುತ್ತದೆ.

(ಉಪನಿಷತ್ತು)

**ಅಥ ಯತ್ಪ್ರಥಮಾಸ್ತಮಿತೇ ತನ್ನಿಧನಂ ತದಸ್ಯ ಪಿತರೋಽನ್ವಾಯತ್ತಾಸ್ತಸ್ಮಾತ್ತಾನ್ನಿದಧತಿ ನಿಧನಭಾಜಿನೋ ಹ್ಯೇತಸ್ಯ ಸಾಮ್ನ ಏವಂ ಖಲ್ವಮುಮಾದಿತ್ಯಗ್ಂ ಸಪ್ತವಿಧಗ್ಂ ಸಾಮೋಪಾಸ್ತೇ ॥**

೮. ಇನ್ನು ಪ್ರಥಮಾಸ್ತಮಿತ(ಕಾಲದಲ್ಲಿರುವ ಸೂರ್ಯನ ರೂಪವಿದೆಯಲ್ಲ) ಅದು, ನಿಧನವು. ಇದರ ಆ (ಭಕ್ತಿಗೆ) ಪಿತೃಗಳು ಅನ್ವಾಯತ್ತರು. ಆದ್ದರಿಂದ ಅವರನ್ನು ಇಡುತ್ತಾರೆ. ಈ ಸಾಮದ ನಿಧನಕ್ಕೆ ಭಾಗಿಗಳಲ್ಲವೆ? ಹೀಗೆ ಈ ಆದಿತ್ಯನೆಂದು ಸಪ್ತವಿಧಸಾಮವನ್ನು ಉಪಾಸನೆಮಾಡಬೇಕು.

## ಆದಿತ್ಯಸಾಮದ ನಿಧನವು

(ಭಾಷ್ಯ)

೧೩೯. ಅಥ ಯತ್ ಪ್ರಥಮಾಸ್ತಮಿತೇ ಅದರ್ಶನಂ ಜಿಗಮಿಷತಿ ಸವಿತರಿ, ತನ್ನಿಧನಮ್। ತದಸ್ಯ ಪಿತರೋಽನ್ವಾಯತ್ತಾಃ। ತಸ್ಮಾತ್ ತಾನ್ ನಿದಧತಿ, ಪಿತೃಪಿತಾಮಹಪ್ರಪಿತಾಮಹರೂಪೇಣ ದರ್ಭೇಷು ನಿಕ್ಷಿಪನ್ತಿ ತಾನ್। ತದರ್ಥಂ ಪಿಣ್ಡಾನ್ ವಾ ಸ್ಥಾಪಯನ್ತಿ। ನಿಧನಸಂಬನ್ಧಾತ್ ನಿಧನಭಾಜಿನೋ ಹಿ ಏತಸ್ಯ ಸಾಮ್ನಃ ಪಿತರಃ। ಏವಮ್ ಅವಯವಶಃ ಸಪ್ತಧಾ ವಿಭಕ್ತಂ ಖಲು ಅಮುಮಾದಿತ್ಯಂ ಸಪ್ತವಿಧಂ ಸಾಮ ಉಪಾಸ್ತೇ ಯಃ ತಸ್ಯ ತದಾಪತ್ತಿಃ ಫಲಮ್ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

ಇನ್ನು ಪ್ರಥಮಾಸ್ತಮಿತ(ಕಾಲ)ದಲ್ಲಿ, ಸೂರ್ಯನು ಅಸ್ತವಾಗುವದರಲ್ಲಿರುವ (ರೂಪ)ವಿದೆಯಲ್ಲ, ಅದು ನಿಧನವು. ಈ (ಸಾಮದ) ಆ (ಭಕ್ತಿಗೆ) ಪಿತೃಗಳು ಅನ್ವಾಯತ್ತರಾಗಿರುವರು. ಆದ್ದರಿಂದ ಅವರನ್ನು (ನಿದಧತಿ) ಇಡುತ್ತಾರೆ; ಪಿತೃ, ಪಿತಾಮಹ, ಪ್ರಪಿತಾಮಹರೂಪದಿಂದ ಅವರನ್ನು ದರ್ಭೆಗಳ ಮೇಲೆ ಇಡುತ್ತಾರೆ, ಅಥವಾ ಅವರಿಗಾಗಿ ಪಿಂಡಗಳನ್ನು ಇಡುತ್ತಾರೆ (ಎಂದರ್ಥ). ಹೀಗೆ ನಿಧನ ಸಂಬಂಧವಿರುವದರಿಂದ ಈ ಸಾಮದ ನಿಧನಕ್ಕೆ ಪಿತೃಗಳು ಭಾಗಿಗಳಾಗಿರುವರಷ್ಟೆ?

ಹೀಗೆ ಅವಯುವಶಃ ಏಳು ಬಗೆಯಾಗಿ ವಿಭಕ್ತವಾಗಿರುವ ಈ ಆದಿತ್ಯನೆಂದು ಸಪ್ತವಿಧಸಾಮವನ್ನು ಯಾವನು ಉಪಾಸನೆಮಾಡುವನೋ[1] ಅವನಿಗೆ ಆ ಸ್ವರೂಪವನ್ನು ಪಡೆಯುವದು ಫಲವು ಎಂದು ವಾಕ್ಯಶೇಷವು.

---

# ಎರಡನೆಯ ಅಧ್ಯಾಯ - ಹತ್ತನೆಯ ಖಂಡ

## (ಸಪ್ತವಿಧಸಾಮೋಪಾಸನೆ ಮುಂದುವರೆದದ್ದು)

## ಅತಿಮೃತ್ಯುಸಾಮೋಪಾಸನೆ

(ಉಪನಿಷತ್ತು)

**ಅಥ ಖಲ್ವಾತ್ಮಸಂಮಿತಮತಿಮೃತ್ಯು ಸಪ್ತವಿಧಗ್ಂ ಸಾಮೋಪಾಸೀತ ಹಿಂಕಾರ ಇತಿ ತ್ರ್ಯಕ್ಷರಂ ಪ್ರಸ್ತಾವ ಇತಿ ತ್ರ್ಯಕ್ಷರಂ ತತ್ಸಮಮ್ ॥ ೧ ॥**

೧. ಇನ್ನು ಆತ್ಮಸಂಮಿತವಾದ ಅತಿಮೃತ್ಯುವಾದ ಸಪ್ತವಿಧಸಾಮವನ್ನು ಉಪಾಸನೆಮಾಡಬೇಕು, ಹಿಂಕಾರ ಎಂಬುದು ಮೂರಕ್ಷರದ್ದು ; ಪ್ರಸ್ತಾವ ಎಂಬುದು ಮೂರಕ್ಷರದ್ದು. ಅದು ಸಮವಾಗಿದೆ.

### ಹಿಂಕಾರಕ್ಕೆ ಪ್ರಸ್ತಾವವು ಸಮ

(ಭಾಷ್ಯ)

೧೪೦. ಮೃತ್ಯುರಾದಿತ್ಯಃ। ಅಹೋರಾತ್ರಾದಿಕಾಲೇನ ಜಗತಃ ಪ್ರಮಾಪಯಿತೃತ್ವಾತ್। ತಸ್ಯ ಅತಿತರಣಾಯ ಇದಂ ಸಾಮೋಪಾಸನಂ ಉಪದಿಶ್ಯತೇ। ಅಥ ಖಲು ಆನನ್ತರಮ್ ಆದಿತ್ಯಮೃತ್ಯುವಿಷಯಸಾಮೋಪಾಸನಸ್ಯ ಆತ್ಮ

---

1. 'ಆದಿತ್ಯಂ ಸಪ್ತವಿಧಂ ಸಾಮೋಪಾಸೀತ' ಎಂಬಲ್ಲಿ ದ್ವಿತೀಯಾವಿಭಕ್ತಿಯು ಆದಿತ್ಯಶಬ್ದಕ್ಕೂ ಸಾಮಶಬ್ದಕ್ಕೂ ಸಮಾನವಾಗಿದೆಯಾದರೂ 'ಸಾಮ್ನಃ ಸಾಧು ಉಪಾಸನಂ' (೨-೧-೧), 'ಅಥ ಸಪ್ತವಿಧಸ್ಯ' (೨-೮-೧) ಎಂದು ಸಾಮೋಪಾಸನೆಯನ್ನೇ ಉಪಕ್ರಮದಲ್ಲಿ ಹೇಳಿರುವದರಿಂದ ಇಲ್ಲಿಯೂ ಅದಕ್ಕೆ ಅನುಗಣವಾಗಿ ಆದಿತ್ಯನೆಂದು ಸಾಮವನ್ನು ಉಪಾಸನೆ ಮಾಡಬೇಕು ಎಂಬುದೇ ವಿವಕ್ಷಿತವೆಂದು ನಿಶ್ಚಯಿಸಬೇಕು. ಸಾಮವು ಕರ್ಮಾಂಗವಾಗಿರುವದರಿಂದ ಹಾಗಲ್ಲದ ಆದಿತ್ಯದೃಷ್ಟಿಯನ್ನೇ ಮಾಡಬೇಕೆಂಬುದೇ ಇಲ್ಲಿ ವಿಧಿಸಿರುತ್ತದೆ ಎಂದು ಸೂ. ಭಾ. ೪-೧-೬ (ಭಾ. ಭಾ ೫೧೮) ರಲ್ಲಿ ನಿರ್ಣಯಿಸಿದೆ.

ಸಂಮಿತಂ ಸ್ವಾವಯವತುಲ್ಯತಯಾ ಸಂಮಿತಮ್[1], ಪರಮಾತ್ಮತುಲ್ಯತಯಾ ವಾ ಸಂಮಿತಮ್ ಅತಿಮೃತ್ಯು ಮೃತ್ಯುಜಯಹೇತುತ್ವಾತ್ । ಯಥಾ ಪ್ರಥಮೇ ಅಧ್ಯಾಯೇ ಉದ್ಗೀಥಭಕ್ತಿನಾಮಾಕ್ಷರಾಣಿ ಉದ್ಗೀಥ ಇತಿ ಉಪಾಸ್ಯತ್ವೇನ ಉಕ್ತಾನಿ ತಥಾ ಇಹ ಸಾಮ್ನಃ ಸಪ್ತವಿಧಭಕ್ತಿನಾಮಾಕ್ಷರಾಣಿ ಸಮಾಹೃತ್ಯ ತ್ರಿಭಿಸ್ತ್ರಿಭಿಃ ಸಮತಯಾ ಸಾಮತ್ವಂ ಪರಿಕಲ್ಪ್ಯ ಉಪಾಸ್ಯತ್ವೇನ ಉಚ್ಯಸ್ತೇ। ತದುಪಾಸನಂ ಮೃತ್ಯುಗೋಚರಾಕ್ಷರಸಂಖ್ಯಾಸಾಮಾನ್ಯೇನ ಮೃತ್ಯುಂ ಪ್ರಾಪ್ಯ ತದತಿರಿಕ್ತಾಕ್ಷರೇಣ ತಸ್ಯ ಆದಿತ್ಯಸ್ಯ ಮೃತ್ಯೋಃ ಅತಿಕ್ರಮಣಾಯೈವ ಸಂಕ್ರಮಣಂ ಕಲ್ಪಯತಿ। ಅತಿಮೃತ್ಯು ಸಪ್ತವಿಧಂ ಸಾಮ ಉಪಾಸೀತ ಮೃತ್ಯುಮ್ ಅತಿಕ್ರಾನ್ತಮ್ ಅತಿರಿಕ್ತಾಕ್ಷರಸಂಖ್ಯಯಾ ಇತಿ ಅತಿಮೃತ್ಯು ಸಾಮ। ತಸ್ಯ ಪ್ರಥಮಭಕ್ತಿನಾಮಾಕ್ಷರಾಣಿ ಹಿಂಕಾರಃ ಇತ್ಯತಃ[2] ತ್ರ್ಯಕ್ಷರಂ ಭಕ್ತಿನಾಮ। ಪ್ರಸ್ತಾವಃ ಇತಿ ಚ ಭಕ್ತೇಃ ತ್ರ್ಯಕ್ಷರಮೇವ ನಾಮ। ತತ್ ಪೂರ್ವೇಣ ಸಮಮ್ ॥

(ಭಾಷ್ಯಾರ್ಥ)

ಮೃತ್ಯು ಎಂದರೆ ಆದಿತ್ಯನು. ಅಹೋರಾತ್ರವೇ ಮುಂತಾದ[3] ಕಾಲದಿಂದ ಜಗತ್ತನ್ನು ಸಾಯಿಸುವದರಿಂದ (ಅವನು ಮೃತ್ಯುವು) ಅವನನ್ನು ದಾಟುವದಕ್ಕೆ ಈ ಸಾಮೋಪಾಸನವನ್ನು ಉಪದೇಶಿಸಿರುತ್ತದೆ

ಇನ್ನು ಎಂದರೆ ಆದಿತ್ಯನೆಂಬ ಮೃತ್ಯುವಿನ ವಿಷಯದ ಸಾಮೋಪಾಸನೆ (ಯನ್ನು ತಿಳಿಸಿದ) ಬಳಿಕ[4] ಆತ್ಮಸಂಮಿತವಾದ ತನ್ನ ಅವಯವಗಳು ಸಮಾನವಾಗಿರುವದರಿಂದ[5] ಸಂಮಿತವಾಗಿರುವ, ಅಥವಾ ಪರಮಾತ್ಮನಿಗೆ ಸಮವಾಗಿರುವದರಿಂದ[6] (ಆತ್ಮ)ಸಂಮಿತವಾಗಿರುವ- ಅತಿಮೃತ್ಯುವಾದ, ಮೃತ್ಯುವನ್ನು ಗೆದ್ದುಕೊಳ್ಳುವದಕ್ಕೆ ಕಾರಣವಾಗಿರುವದರಿಂದ (ಅತಿಮೃತ್ಯುವೆನಿಸಿರುವ – ಹೇಗೆ ಒಂದನೆಯ ಅಧ್ಯಾಯದಲ್ಲಿ(೧-೩-೬ರಲ್ಲಿ) ಉದ್ಗೀಥ –ಎಂಬ ಉದ್ಗೀಥಭಕ್ತಿಯ

---

1. ಅಚ್ಚಿನ ಪುಸ್ತಕಗಳಲ್ಲಿ ಮಿತಮ್ ಎಂದಿಷ್ಟೇ ಇದೆಯಾದರೂ ಇದು ವಿಗ್ರಹವಾಕ್ಯವಾಗಿರುವದರಿಂದ ಮುಂದಿನ ವಾಕ್ಯದಂತೆ ಇಲ್ಲಿಯೂ 'ಸಂಮಿತಮ್' ಎಂಬ ಪಾಠವೇ ಸರಿಯೆಂದು ಅಂಗೀಕರಿಸಿದೇವೆ.

2. 'ಇತ್ಯೇತತ್' ಎಂಬುದಕ್ಕಿಂತ ಈ ಪಾಠವು ಮೇಲು.

3. ಅಹೋರಾತ್ರ, ಮಾಸ, ಅಯನ, ಸಂವತ್ಸರ- ಎಂಬ ರೂಪದ ಎಂದರ್ಥ

4. ಹಿಂದಿನ ಕಂಡಿಕೆಯ ಆದಿತ್ಯೋಪಾಸನೆಯನ್ನು ಹೇಳಿದ ಬಳಿಕ.

5. ಹಿಂಕಾರ, ಪ್ರಸ್ತಾವ- ಇವೆರಡೂ ಮೂರಕ್ಷರವಾಗಿ ಸಮವಾಗಿವೆ; ಹೀಗೆ ಭಕ್ತಿಯ ಅವಯವಗಳು ಸಮವಾಗಿರುವದರಿಂದ ಆತ್ಮಸಂಮಿತವಾಯಿತು.

6. ಪರಮಾತ್ಮಜ್ಞಾನವು ಮೃತ್ಯುವನ್ನು ಬಾಧಿಸಿ ಮುಮುಕ್ಷುವನ್ನು, ಮೃತ್ಯುವನ್ನು ಮೀರುವಂತೆ ಹೇಗೆ ಮಾಡುತ್ತದೆಯೋ ಹಾಗೆ ಈ ಉಪಾಸನೆಯೂ ಆದಿತ್ಯಮೃತ್ಯುವನ್ನು ಮೀರುವಂತೆ ಮಾಡುವದರಿಂದ ಆತ್ಮಸಂಮಿತವು.

ನಾಮಾಕ್ಷರಗಳನ್ನು ಉಪಾಸನೆಮಾಡಬೇಕೆಂದು ಹೇಳಲಾಯಿತೋ[1] ಹಾಗೆಯೇ ಇಲ್ಲಿ ಏಳು ವಿಧವಾದ ಭಕ್ತಿಗಳ ನಾಮಾಕ್ಷರಗಳನ್ನು ಸೇರಿಸಿಕೊಂಡು[2] (ಅವು) ಮೂರುಮೂರಾಗಿ ಸಮವಾಗಿರುವದರಿಂದ ಸಾಮವೆಂದು ಕಲ್ಪಿಸಿ ಉಪಾಸನೆಮಾಡಬೇಕೆಂದು ಹೇಳಿದೆ. ಅವುಗಳ ಉಪಾಸನೆಯಿಂದ ಮೃತ್ಯುವಿಷಯಕವಾದ ಅಕ್ಷರಸಂಖ್ಯೆಯ ಸಾಮಾನ್ಯ[3]ವಿರುವದರಿಂದ ಆ ಮೃತ್ಯುವನ್ನು ಪಡೆದು, ಅವಕ್ಕಿಂತ ಹೆಚ್ಚಿನ (ಸಂಖ್ಯೆಯ) ಅಕ್ಷರದಿಂದ ಆ ಆದಿತ್ಯನೆಂಬ ಮೃತ್ಯುವನ್ನು ಅತಿಕ್ರಮಿಸುವದಕ್ಕಾಗಿಯೇ ಸಂಕ್ರಮಣವನ್ನು ಕಲ್ಪಿಸಿರುತ್ತದೆ.[4] (ಹೀಗೆ) ಅತಿಮೃತ್ಯುವಾದ-ಸಪ್ತವಿಧಸಾಮವನ್ನು ಉಪಾಸನೆಮಾಡಬೇಕು. ಹೆಚ್ಚಿನ ಅಕ್ಷರಸಂಖ್ಯೆಯಿಂದ ಮೃತ್ಯುವನ್ನು ಅತಿಕ್ರಮಿಸುವದರಿಂದ ಸಾಮವು ಅತಿಮೃತ್ಯುವು.

ಆ (ಸಾಮದ) ಮೊದಲನೆಯ ಭಕ್ತಿಯ ನಾಮಾಕ್ಷರಗಳು ಹಿಂ, ಕಾ, ರ-ಎಂಬಿವು, ಆದ್ದರಿಂದ (ಈ) ಭಕ್ತಿಯ ನಾಮವು ಮೂರಕ್ಷರದ್ದು. ಪ್ರಸ್ತಾವ ಎಂಬ ಭಕ್ತಿಯ ನಾಮವೂ ಮೂರಕ್ಷರದ್ದೇ. ಅದು ಹಿಂದಿನದಕ್ಕೆ ಸಮವು.

(ಉಪನಿಷತ್ತು)

**ಆದಿರಿತಿ ದ್ವ್ಯಕ್ಷರಂ ಪ್ರತಿಹಾರ ಇತಿ ಚತುರಕ್ಷರಂ ತತ್ ಇಹೈಕಂ ತತ್ಸಮಮ್ ॥ ೨ ॥**

೨. ಆದಿ ಎಂಬುದು ಎರಡಕ್ಷರದ್ದು; ಪ್ರತಿಹಾರ ಎಂಬುದು ನಾಲ್ಕಕ್ಷರದ್ದು. ಅದರಿಂದ ಇಲ್ಲಿ ಒಂದನ್ನು (ಸೇರಿಸಿಕೊಳ್ಳಬೇಕು), ಅದು ಸಮವು.

## ಆದಿಗೆ ಪ್ರತಿಹಾರವು ಸಮ

(ಭಾಷ್ಯ)

೧೪೧. ಆದಿಃ ಇತಿ ದ್ವ್ಯಕ್ಷರಮ್ । ಸಪ್ತವಿಧಸ್ಯ ಸಾಮ್ನಃ ಸಂಖ್ಯಾಪೂರಣಃ ಓಂಕಾರಃ ಆದಿರಿತ್ಯುಚ್ಯತೇ । ಪ್ರತಿಹಾರಃ ಇತಿ ಚತುರಕ್ಷರಮ್ । ತತಃ ಇಹ ಏಕಮ್ ಅಕ್ಷರಮ್ ಅವಚ್ಛಿದ್ಯ ಆದ್ಯಕ್ಷರಯೋಃ ಪ್ರಕ್ಷಿಪ್ಯತೇ । ತೇನ ತತ್ ಸಮಮೇವ ಭವತಿ ॥

1. ನಾಮಾಕ್ಷರವನ್ನು ಉಪಾಸನೆಮಾಡಿದರೆ ನಾಮಿಯನ್ನೇ ಉಪಾಸನೆಮಾಡಿದಂತೆ ಎಂದು ಆ ಕಂಡಿಕೆಯಲ್ಲಿ ಹೇಳಿದೆ.

2. ಒಂದರ ನಾಮಾಕ್ಷರಗಳು ಹೆಚ್ಚಾಗಿದ್ದರೆ ಕಡಿಮೆಯಿರುವದಕ್ಕೆ ಹೆಚ್ಚಿಗೆಯ ಅಕ್ಷರವನ್ನು ತಂದು ಜೋಡಿಸಿಕೊಳ್ಳುವದರಿಂದ ಎಂದರ್ಥ. ಮುಂದಿನ ಕಂಡಿಕೆಯನ್ನು ನೋಡಿ.

3. ಇಪ್ಪತ್ತೊಂದೆಂಬುದು ಮೃತ್ಯುವಾದ ಆದಿತ್ಯನ ಸಂಖ್ಯೆ; ಐದನೆಯ ಕಂಡಿಕೆಯ ಭಾಷ್ಯವನ್ನು ನೋಡಿ.

4. ಸಾಧನವಾದ ಉಪಾಸನೆಯನ್ನು ಉಪದೇಶಿಸಿದೆ.

(ಭಾಷ್ಯಾರ್ಥ)

ಆದಿ ಎಂಬುದು ಎರಡಕ್ಷರದ್ದು ; ಸಪ್ತವಿಧಸಾಮದ ಸಂಖ್ಯೆಯನ್ನು ಪೂರಣ ಮಾಡುವ[1] ಓಂಕಾರವನ್ನು ಆದಿ ಎಂದಿದೆ. ಪ್ರತಿಹಾರವೆಂಬುದು ನಾಲ್ಕಕ್ಷರದ್ದು. ಅದರಿಂದ ಇಲ್ಲಿಗೆ ಒಂದು ಅಕ್ಷರವನ್ನು (ಕಿತ್ತು)ತೆಗೆದುಕೊಂಡು ಆದಿಯ (ನಾಮದ) ಅಕ್ಷರಗಳಲ್ಲಿ ಸೇರಿಸಿಕೊಳ್ಳಬೇಕು. ಅದರಿಂದ ಅದು (ಇದಕ್ಕೆ) ಸಮವೇ ಆಗುತ್ತದೆ.[2]

(ಉಪನಿಷತ್ತು)

**ಉದ್ಗೀಥ ಇತಿ ತ್ರ್ಯಕ್ಷರಮುಪದ್ರವ ಇತಿ ಚತುರಕ್ಷರಂ ತ್ರಿಭಿ ಸ್ತ್ರಿಭಿಃ ಸಮಂ ಭವತ್ಯಕ್ಷರಮತಿಶಿಷ್ಯತೇ ತ್ರ್ಯಕ್ಷರಂ ತತ್ ಸಮಮ್ ॥ ೩ ॥**

೩. ಉದ್ಗೀಥವೆಂಬುದು ಮೂರಕ್ಷರದ್ದು, ಉಪದ್ರವವೆಂಬುದು ನಾಲ್ಕಕ್ಷರದ್ದು. ಮೂರುಮೂರಾದರೆ ಸಮವಾಗುತ್ತದೆ. (ಒಂದು) ಅಕ್ಷರವುಳಿಯುತ್ತದೆ. ಅದು ಮೂರಕ್ಷರದ್ದು, ಅದು ಸಮ(ವಾಗುವದು).

## ಉದ್ಗೀಥವು ಉಪದ್ರವಕ್ಕೆ ಸಮ

(ಭಾಷ್ಯ)

೧೪೨. ಉದ್ಗೀಥಃ ಇತಿ ತ್ರ್ಯಕ್ಷರಮ್ । ಉಪದ್ರವಃ ಇತಿ ಚತುರಕ್ಷರಮ್ । ತ್ರಿಭಿಸ್ತ್ರಿಭಿಃ ಸಮಂ ಭವತಿ । ಅಕ್ಷರಮ್ ಅತಿಶಿಷ್ಯತೇ ಅತಿರಿಚ್ಯತೇ । ತೇನ ವೈಷಮ್ಯೇ ಪ್ರಾಪ್ತೇ ಸಾಮ್ನಃ ಸಮತ್ವಕರಣಾಯ ಆಹ । ತದೇಕಮಪಿ ಸತ್ ಅಕ್ಷರಮ್ ಇತಿ ತ್ರ್ಯಕ್ಷರಮೇವ ಭವತಿ । ಅತಃ ತತ್ ಸಮಮ್ ॥

(ಭಾಷ್ಯಾರ್ಥ)

ಉದ್ಗೀಥವೆಂಬುದು ಮೂರಕ್ಷರದ್ದು , ಉಪದ್ರವ ಎಂಬುದು ನಾಲ್ಕಕ್ಷರದ್ದು. ಮೂರುಮೂರಾದರೆ[3] ಸಮವಾಗುತ್ತದೆ. (ಒಂದು) ಅಕ್ಷರವು ಉಳಿದಿರುತ್ತದೆ.

---

1. ಓಂಕಾರವು ಗಾನಕ್ರಮದಲ್ಲಿ ಏಳನೆಯದೆಂದು ಅರ್ಥವಲ್ಲ, ಭಕ್ತಿಗಳು ಏಳೆಂಬುದನ್ನು ತೋರಿಸುವಾಗ ಉಪದ್ರವ, ಓಂಕಾರ– ಇವೂ ಬೇಕಾಗುವವು. ಏಳೆಂಬ ಸಂಖ್ಯೆಯನ್ನು ಪೂರ್ಣಮಾಡುವ ಓಂಕಾರಕ್ಕೆ ಆದಿ ಎಂಬ ಹೆಸರಿದೆ ಎಂದರ್ಥ.

2. ಆದಿ, ಪ್ರತಿಹಾರ– ಎಂದಿರುವಲ್ಲಿ ಆದಿಪ್ರ, ತಿಹಾರ– ಎಂದು ಅಕ್ಷರಗಳನ್ನು ವಿಂಗಡಿಸಿಕೊಂಡರೆ ಒಂದು ಭಕ್ತಿಯು ಇನ್ನೊಂದಕ್ಕೆ ಸಮವೇ ಆಗುತ್ತದೆ.

3. ಉದ್ಗೀಥ, ಉಪದ್ರ– ಹೀಗೆ ಮೂರುಮೂರನ್ನು ತೆಗೆದುಕೊಂಡರೆ ಎಂದರ್ಥ.

ಹೆಚ್ಚಾಗಿರುತ್ತದೆ. ಅದರಿಂದ ವೈಷಮ್ಯವು ಬಂದೊದಗಲಾಗಿ ಸಮತ್ವಕ್ಕಾಗಿ (ಶ್ರುತಿ) ಹೇಳುತ್ತದೆ. ಅದು ಒಂದೇ ಆದರೂ ಅಕ್ಷರಮ್ ಎಂಬ (ಅದರ ಹೆಸರು) ಮೂರಕ್ಷರದ್ದೇ ಆಗಿರುತ್ತದೆ.[1] ಆದ್ದರಿಂದ ಅದು ಸಮವು.

(ಉಪನಿಷತ್ತು)

**ನಿಧನಮಿತಿ ತ್ರ್ಯಕ್ಷರಂ ತತ್ಸಮಮೇವ ಭವತಿ ತಾನಿ ಹ ವಾ ಏತಾನಿ ದ್ವಾವಿಂಶತಿರಕ್ಷರಾಣಿ ॥ ೪ ॥**

೪. ನಿಧನವೆಂಬುದು ಮೂರಕ್ಷರದ್ದು ; ಅದು ಸಮವಾಗಿಯೇ ಇದೆ. ಆ ಇವು ಇಪ್ಪತ್ತೆರಡಕ್ಷರಗಳು.

## ನಿಧನವೂ ಸೇರಿದರೆ ನಾಮಾಕ್ಷರಗಳು ಇಪ್ಪತ್ತೆರಡು

(ಭಾಷ್ಯ)

೧೪೩. ನಿಧನಮಿತಿ ತ್ರ್ಯಕ್ಷರಂ ತತ್ ಸಮಮೇವ ಭವತಿ। ಏವಮ್ ತ್ರ್ಯಕ್ಷರಸಮತಯಾ ಸಾಮತ್ವಂ ಸಂಪಾದ್ಯ ಯಥಾಪ್ರಾಪ್ತಾನ್ಯೇವ ಅಕ್ಷರಾಣಿ ಸಂಖ್ಯಾಯನ್ತೇ। ತಾನಿ ಹ ವಾ ಏತಾನಿ ಸಪ್ತಭಕ್ತಿನಾಮಾಕ್ಷರಾಣಿ ದ್ವಾವಿಂಶತಿಃ ॥

(ಭಾಷ್ಯಾರ್ಥ)

ನಿಧನವೆಂಬುದು ಮೂರಕ್ಷರದ್ದು, ಅದು ಸಮವಾಗಿಯೇ ಇದೆ.[2] ಹೀಗೆ ಮೂರಕ್ಷರದ ಸಮತೆಯಿಂದ ಸಾಮತ್ವವನ್ನು ಸಂಪಾದನೆಮಾಡಿ[3] ಯಥಾಪ್ರಾಪ್ತವಾದ ಅಕ್ಷರಗಳನ್ನೇ (ಶ್ರುತಿಯು) ಎಣಿಸಿ ಹೇಳುತ್ತದೆ. ಆ ಈ ಏಳು ಭಕ್ತಿಗಳ ನಾಮಾಕ್ಷರಗಳು ಇಪ್ಪತ್ತೆರಡು.[4]

---

1. ವ ಎಂಬ ಉಳಿದ ಅಕ್ಷರವು ಒಂದೇ ಆದರೂ ಅದರ ಅಕ್ಷರವೆಂಬ ನಾಮದಲ್ಲಿ ಮೂರಕ್ಷರಗಳಿರುವದರಿಂದ ಅದೂ ಸಮವೇ.

2. ಮೂರಕ್ಷರವೇ ಅದರಲ್ಲಿರುವದರಿಂದ ಅದು ಸಮವೇ.

3. ಮೂರುಮೂರಾಗಿ ವಿಂಗಡಿಸಿದರೆ ಅಕ್ಷರಗಳು ಸಮವಾಗುವದರಿಂದ ಇದು ಸಾಮವು ಎಂದು ಸಮತ್ವದಿಂದ ಸಾಮತ್ವವನ್ನು ಸಂಪಾದನೆಮಾಡಿ ಎಂದರ್ಥ. ಇಲ್ಲಿ ಅಕ್ಷರ- ಎಂಬ ಮೂರಕ್ಷರಗಳನ್ನು ಸೇರಿಸಿದರೆ ಭಕ್ತ್ಯಕ್ಷರಗಳು ಸಮವಾಗುವವು.

4. ಭಕ್ತಿಯಲ್ಲಿರುವ ಅಕ್ಷರಗಳನ್ನೇ ಎಣಿಸಿದರೆ ಇಪ್ಪತ್ತೆರಡಾಗುವವು; ಇಲ್ಲಿ ಅಕ್ಷರ ಎಂದು ಮೂರನ್ನು ಎಣಿಸಿಕೊಂಡಿಲ್ಲ. ವ ಎಂಬುದನ್ನು ಒಂದೇ ಅಕ್ಷರವಾಗಿ ಎಣಿಸಿವೆ. ಯಥಾಪ್ರಾಪ್ತವಾದ ಎಂಬ ವಿಶೇಷಣಕ್ಕೆ ಇದ್ದಂತೆಯೇ ಕಾಣುವ (ಅಕ್ಷರಗಳು) ಎಂದರ್ಥ.

# ಉಪಾಸನೆಗೆ ಅತಿಮೃತ್ಯುಪ್ರಾಪ್ತಿಫಲ

(ಉಪನಿಷತ್ತು)

**ಏಕವಿಗ್‌ಂಶತ್ಯಾದಿತ್ಯಾದಿತ್ಯಮಾಪ್ನೋತ್ಯೇಕವಿಗ್‌ಂಶೋ ವಾ ಇತೋಽಸಾವಾದಿತ್ಯೋ ದ್ವಾವಿಗ್‌ಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಮ್ ॥ ೫ ॥**

೫. ಇಪ್ಪತ್ತೊಂದರಿಂದ ಆದಿತ್ಯನನ್ನು ಪಡೆಯುತ್ತಾನೆ; ಇಲ್ಲಿಂದ ಆ ಆದಿತ್ಯನು ಇಪ್ಪತ್ತೊಂದನೆಯವನಷ್ಟೆ? ಇಪ್ಪತ್ತೆರಡನೆಯದರಿಂದ ಆದಿತ್ಯನಿಂದಾಚೆಗಿರುವ (ಲೋಕವನ್ನು) ಗೆದ್ದುಕೊಳ್ಳುತ್ತಾನೆ. ಅದೇ ನಾಕವು, ಅದೇ ವಿಶೋಕವು.

## ಅತಿಮೃತ್ಯೂಪಾಸನೆಯ ಫಲವು, ಅತಿಮೃತ್ಯುಪ್ರಾಪ್ತಿಯೇ

(ಭಾಷ್ಯ)

೧೪೪. ತತ್ರ ಏಕವಿಂಶತ್ಯಕ್ಷರಸಂಖ್ಯಯಾ ಆದಿತ್ಯಮ್ ಆಪ್ನೋತಿ ಮೃತ್ಯುಮ್। ಯಸ್ಮಾತ್ ಏಕವಿಂಶ ಇತಃ ಅಸ್ಮಾಲ್ಲೋಕಾತ್ ಅಸೌ ಆದಿತ್ಯಃ ಸಂಖ್ಯಯಾ। "ದ್ವಾದಶ ಮಾಸಾಃ ಪಞ್ಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಗ್‌ಂಶಃ" (ಐ. ಬ್ರಾ. ೪-೫, ತಾಂ. ಬ್ರಾ. ೧೦-೧-೧೦) ಇತಿ ಶ್ರುತೇಃ। ಅತಿಶಿಷ್ಟೇನ ದ್ವಾವಿಂಶೇನ ಅಕ್ಷರೇಣ ಪರಂ ಮೃತ್ಯೋಃ ಆದಿತ್ಯಾತ್ ಜಯತಿ ಆಪ್ನೋತಿ ಇತ್ಯರ್ಥಃ। ಯಚ್ಚ ತದಾದಿತ್ಯಾತ್ ಪರಂ ಕಿಂ ತತ್? ನಾಕಮ್। ಕಮ್ ಇತಿ ಸುಖಮ್। ತಸ್ಯ ಪ್ರತಿಷೇಧಃ ಅಕಮ್। ತನ್ನ ಭವತೀತಿ ನಾಕಮ್। ಕಮೇವ ಇತ್ಯರ್ಥಃ। ಮೃತ್ಯುವಿಷಯತ್ವಾತ್ ದುಃಖಸ್ಯ। ವಿಶೋಕಂ ಚ ತತ್ ವಿಗತಶೋಕಮ್। ಮಾನಸದುಃಖರಹಿತಮ್ ಇತ್ಯರ್ಥಃ। ತತ್ ಆಪ್ನೋತಿ ॥

(ಭಾಷ್ಯಾರ್ಥ)

ಇಲ್ಲಿ ಇಪ್ಪತ್ತೊಂದೆಂಬ ಅಕ್ಷರಸಂಖ್ಯೆಯಿಂದ[1] ಆದಿತ್ಯನೆಂಬ ಮೃತ್ಯುವನ್ನು ಪಡೆದುಕೊಳ್ಳುತ್ತಾನೆ. ಏಕೆಂದರೆ ಆ ಆದಿತ್ಯನು ಇಲ್ಲಿಂದ, ಈ ಲೋಕದಿಂದ, ಸಂಖ್ಯೆಯಲ್ಲಿ ಇಪ್ಪತ್ತೊಂದನೆಯವನಷ್ಟೆ? ಏಕೆಂದರೆ "ಹನ್ನೆರಡು ತಿಂಗಳುಗಳು, ಐದು ಋತುಗಳು[2], ಈ ಲೋಕಗಳು ಮೂರು, ಆ ಆದಿತ್ಯನು ಇಪ್ಪತ್ತೊಂದನೆಯವನು" (ಐ. ಬ್ರಾ. ೪-೫, ತಾಂ. ಬ್ರಾ. ೧೦-೧-೧೦) ಎಂದು ಶ್ರುತಿಯಿದೆ.

---

1. ೩×೭=೨೧ ಎಂಬೀ ಸಾಮನಾಮಾಕ್ಷರಸಂಖ್ಯೆಯಿಂದ.
2. ಹೇಮಂತಶಿಶಿರಗಳನ್ನು ಒಂದೇ ಎಂದು ಎಣಿಸಿದರೆ ಐದು ಋತುಗಳಾಗುವವು.

ಉಳಿಯುವ ಇಪ್ಪತ್ತೆರಡನೆಯ ಅಕ್ಷರದಿಂದ ಮೃತ್ಯುವಾದ ಆದಿತ್ಯನಿಗಿಂತ ಆಚಿನ (ಲೋಕ)ವನ್ನು ಗೆದ್ದುಕೊಳ್ಳುತ್ತಾನೆ, ಪಡೆದುಕೊಳ್ಳುತ್ತಾನೆ –ಎಂದರ್ಥ.

ಆದಿತ್ಯನಿಂದಾಚೆಗೆ ಇರುವದಲ್ಲ, ಅದು ಯಾವದು ? ಎಂದರೆ ನಾಕವು. ಕ– ಎಂದರೆ ಸುಖವು, ಅದಲ್ಲದ್ದು ಅಕ, ಆ (ಅಕ)ವಲ್ಲದ್ದು ನಾಕವು ಕವೇ, ಆಗಿರುತ್ತದೆ. ಏಕೆಂದರೆ ದುಃಖವು ಮೃತ್ಯುವಿಷಯವಾದದ್ದು.[1] ಆ (ಲೋಕವು) ವಿಶೋಕವೂ (ಆಗಿದೆ), ಶೋಕವಿಲ್ಲದ್ದು, ಮಾನಸದುಃಖವಿಲ್ಲದ್ದು ಎಂದರ್ಥ.[2] ಅದನ್ನು ಪಡೆದುಕೊಳ್ಳುತ್ತಾನೆ ಎಂದು (ಅಭಿಪ್ರಾಯ).

(ಉಪನಿಷತ್ತು)

**ಆಪ್ನೋತಿ ಹಾದಿತ್ಯಸ್ಯ ಜಯಂ ಪರೋ ಹಾಸ್ಯಾದಿತ್ಯಜಯಾಜ್ಜಯೋ ಭವತಿ ಯ ಏತದೇವಂ ವಿದ್ವಾನಾತ್ಮಸಂಮಿತಮತಿಮೃತ್ಯು ಸಪ್ತವಿಧಗ್ಂ ಸಾಮೋಪಾಸ್ತೇ ಸಾಮೋಪಾಸ್ತೇ ॥ ೬ ॥**

೬. ಯಾವನು ಇದನ್ನು ಹೀಗೆಂದರಿತು ಆತ್ಮಸಂಮಿತವಾದ ಅತಿಮೃತ್ಯುವಾದ ಸಪ್ತವಿಧಸಾಮುವನ್ನು ಉಪಾಸನೆಮಾಡುವನೋ, ಸಾಮುವನ್ನು ಉಪಾಸನೆಮಾಡುವನೋ (ಅವನು) ಆದಿತ್ಯನ ಜಯವನ್ನು ಪಡೆದುಕೊಳ್ಳುವನು, ಆದಿತ್ಯಜಯಕ್ಕಿಂತಲೂ ಹೆಚ್ಚಿನ ಜಯವು ಇವನಿಗಾಗುವದು.

ಒಟ್ಟರ್ಥ

(ಭಾಷ್ಯ)

೧೪೫. ಉಕ್ತಸ್ಯೈವ ಪಿಣ್ಡಿತಾರ್ಥಮಾಹ। ಏಕವಿಂಶತಿಸಂಖ್ಯಯಾ ಆದಿತ್ಯಸ್ಯ ಜಯಮಾಪ್ನೋತಿ[3]। ಪರೋ ಹ ಅಸ್ಯ ಏವಂವಿದಃ ಆದಿತ್ಯಜಯಾತ್ ಮೃತ್ಯುಗೋಚರಾತ್ ಪರೋ ಜಯೋ ಭವತಿ। ದ್ವಾವಿಂಶತ್ಯಕ್ಷರಸಂಖ್ಯಯಾ ಇತ್ಯರ್ಥಃ। ಯ ಏತದೇವಂ ವಿದ್ವಾನ್ ಇತ್ಯಾದ್ಯುಕ್ತಾರ್ಥಮ್। ತಸ್ಯ ಏತತ್ ಯಥೋಕ್ತಂ ಫಲಮಿತಿ। ದ್ವಿರಭ್ಯಾಸಃ ಸಾಪ್ತವಿಧ್ಯಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

(ಮೇಲೆ) ಹೇಳಿರುವದಕ್ಕೇ ಒಟ್ಟರ್ಥವನ್ನು (ಶ್ರುತಿ) ಹೇಳುತ್ತದೆ: ಇಪ್ಪತ್ತೊಂದೆಂಬ ಸಂಖ್ಯೆಯಿಂದ ಆದಿತ್ಯನ ಜಯವನ್ನು ಪಡೆದುಕೊಳ್ಳುತ್ತಾನೆ. ಹೀಗೆಂದು

1. ಈ ಆದಿತ್ಯನ ಅಹೋರಾತ್ರಗಳಿಂದ ಜನರಿಗೆ ದುಃಖವಾಗುತ್ತದೆ ಎಂದರ್ಥ.
2. ಇದೇ ಬ್ರಹ್ಮಲೋಕವು.
3. 'ಜಯಮನು' ಎಂಬ ಪಾ॥ ಪಾಠಕ್ಕಿಂತ ಈ ಆ॥ ಪಾಠವೇ ಮೇಲು.

ಅರಿತಿರುವವನಿಗೆ ಮೃತ್ಯುಗೋಚರವಾದ ಆದಿತ್ಯಜಯಕ್ಕಿಂತಲೂ ಹೆಚ್ಚಿನ ಜಯವೂ ಆಗುತ್ತದೆ, ಇಪ್ಪತ್ತೆರಡೆಂಬ ಅಕ್ಷರಸಂಖ್ಯೆಯಿಂದ (ಇದಾಗುತ್ತದೆ) ಎಂದರ್ಥ. (ಯ ಏತದೇವಂ ವಿದ್ವಾನ್) 'ಯಾವನು ಹೀಗೆಂದರಿತು ' ಮುಂತಾದದ್ದಕ್ಕೆ ಹಿಂದೆ ಹೇಳಿದರ್ಥವೇ, (ಯಾವನು ಹೀಗೆ ಉಪಾಸನೆಮಾಡುವನೋ) ಅವನಿಗೆ ಈ ಮೇಲೆ ಹೇಳಿದ ಫಲವು (ಆಗುವದು ಎಂದರ್ಥ). ಸಾಮೋಪಾಸ್ತೇ (ಎಂಬ) ದ್ವಿರುಕ್ತಿಯು ಸಪ್ತವಿಧ(ಸಾಮೋಪಾಸನೆಯ) ಸಮಾಪ್ತಿಗಾಗಿ (ಬಂದಿದೆ)

---

# ಎರಡನೆಯ ಅಧ್ಯಾಯ-ಹನ್ನೊಂದನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ಗಾಯತ್ರ ಸಾಮದ ಉಪಾಸನೆ

(ಉಪನಿಷತ್ತು)

**ಮನೋ ಹಿಂಕಾರೋ ವಾಕ್ ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರಃ ಪ್ರಾಣೋ ನಿಧನಮೇತದ್ ಗಾಯತ್ರಂ ಪ್ರಾಣೇಷು ಪ್ರೋತಮ್ ॥ ೧ ॥**

೧. ಮನಸ್ಸು ಹಿಂಕಾರವು, ವಾಕ್ಕು ಪ್ರಸ್ತಾವವು, ಚಕ್ಷುಸ್ಸು ಉದ್ಗೀಥವು, ಶ್ರೋತ್ರವು ಪ್ರತಿಹಾರವು, ಪ್ರಾಣವು ನಿಧನವು. ಈ ಗಾಯತ್ರವು ಪ್ರಾಣಗಳಲ್ಲಿ ಪ್ರೋತ(ವಾಗಿರುತ್ತದೆ).

### ಈಗ ಹೇಳಲಿರುವ ಸಾಮೋಪಾಸನೆಗಳ ವಿಶೇಷ

(ಭಾಷ್ಯ)

೧೪೬. ವಿನಾ ನಾಮಗ್ರಹಣಂ ಪಞ್ಚವಿಧಸ್ಯ ಸಪ್ತವಿಧಸ್ಯ ಚ ಸಾಮ್ನಃ ಉಪಾಸನಮ್ ಉಕ್ತಮ್ । ಅಥ ಇದಾನೀಂ ಗಾಯತ್ರಾದಿನಾಮಗ್ರಹಣಪೂರ್ವಕಂ ವಿಶಿಷ್ಟಫಲಾನಿ ಸಾಮೋಪಾಸನಾನ್ತರಾಣಿ ಉಚ್ಯನ್ತೇ । ಯಥಾಕ್ರಮಂ ಗಾಯತ್ರಾದೀನಾಂ ಕರ್ಮಣಿ ಪ್ರಯೋಗಃ ತಥೈವ ॥

(ಭಾಷ್ಯಾರ್ಥ)

(ಸಾಮದ) ಹೆಸರನ್ನೆತ್ತಿ ಹೇಳದೆ ಐದು ಬಗೆಯ ಮತ್ತು ಏಳು ಬಗೆಯ ಸಾಮದ ಉಪಾಸನೆಯನ್ನು ಹೇಳಿದ್ದಾಯಿತು. ಇನ್ನು ಈಗ ಗಾಯತ್ರವೇ

ಮುಂತಾದ ಹೆಸರನ್ನಿತ್ತು ಆಯಾ ಫಲವುಳ್ಳ ಬೇರೆಯ ಸಾಮೋಪಾಸನೆಗಳನ್ನು ಹೇಳಲಾಗುತ್ತದೆ. ಗಾಯತ್ರವೇ ಮುಂತಾದವುಗಳಿಗೆ ಕರ್ಮದಲ್ಲಿ ಯಾವ ಕ್ರಮದಿಂದ ಪ್ರಯೋಗವಾಗುವದೋ ಹಾಗೆಯೇ[1] (ಈ ಉಪಾಸನೆಗಳನ್ನು ಹೇಳಲಾಗುವದು).

## ಗಾಯತ್ರಸಾಮದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೪೭. ಮನೋ ಹಿಂಕಾರಃ। ಮನಸಃ ಸರ್ವಕರಣವೃತ್ತೀನಾಂ ಪ್ರಾಥಮ್ಯಾತ್। ತದಾನನ್ತರ್ಯಾತ್ ವಾಕ್ ಪ್ರಸ್ತಾವಃ। ಚಕ್ಷುರುದ್ಗೀಥಃ। ಶ್ರೈಷ್ಠ್ಯಾತ್। ಶ್ರೋತ್ರಂ ಪ್ರತಿಹಾರಃ। ಪ್ರತಿಹೃತತ್ವಾತ್। ಪ್ರಾಣೋ ನಿಧನಮ್। ಯಥೋಕ್ತಾನಾಂ ಪ್ರಾಣೇ ನಿಧನಾತ್ ಸ್ವಾಪಕಾಲೇ। ಏತದ್ ಗಾಯತ್ರಂ ಸಾಮ ಪ್ರಾಣೇಷು ಪ್ರೋತಮ್। ಗಾಯತ್ರ್ಯಾಃ ಪ್ರಾಣಸಂಸ್ತುತತ್ವಾತ್ ॥

(ಭಾಷ್ಯಾರ್ಥ)

ಮನಸ್ಸು ಹಿಂಕಾರವು, ಏಕೆಂದರೆ ಮನಸ್ಸು ಕರಣವೃತ್ತಿಗಳಿಗೆಲ್ಲ ಮೊದಲನೆಯದಾಗಿದೆ. ಇದಾದ ಬಳಿಕ ಬರುವದರಿಂದ ವಾಕ್ಕು ಪ್ರಸ್ತಾವವು, ಚಕ್ಷುಸ್ಸು ಉದ್ಗೀಥವು, ಏಕೆಂದರೆ (ಅದು) ಶ್ರೇಷ್ಠವಾದದ್ದು. ಶ್ರೋತ್ರವು ಪ್ರತಿಹಾರವು, ಏಕೆಂದರೆ ಪ್ರತಿಹೃತವಾಗಿರುತ್ತದೆ.[2] ಪ್ರಾಣವು ನಿಧನವು, ಏಕೆಂದರೆ ಮೇಲೆ ಹೇಳಿದ (ಪ್ರಾಣಗಳು) ನಿದ್ರೆಯ ಕಾಲದಲ್ಲಿ (ಮುಖ್ಯ)ಪ್ರಾಣದಲ್ಲಿ ಇಡಲ್ಪಡುತ್ತವೆ.[3]

ಈ **ಗಾಯತ್ರಸಾಮ**ವು ಪ್ರಾಣಗಳಲ್ಲಿ ಹೆಣೆದುಕೊಂಡಿರುತ್ತದೆ[4], ಏಕೆಂದರೆ ಗಾಯತ್ರಿಯನ್ನು ಪ್ರಾಣ(ವೆಂದು ಶ್ರುತಿಯಲ್ಲಿ) ಹೊಗಳಿದೆ.[5]

## ಗಾಯತ್ರೋಪಾಸನದ ಫಲ

(ಉಪನಿಷತ್ತು)

**ಸ ಯ ಏವಮೇತದ್ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ ಸರ್ವಮಾಯುರೇತಿ ಜ್ಯೋಗ್ ಜೀವತಿ ಮಹಾನ್**

1 ಆ ಕ್ರಮದಿಂದಲೇ ಅವುಗಳ ಉಪಾಸನೆಯನ್ನು ಹೇಳುತ್ತದೆ ಎಂದರ್ಥ.

2. ಹಿಂದೆ ೨-೭-೧ರ ಭಾಷ್ಯ (ಭಾ. ಭಾ. ೧೨೪)ದಲ್ಲಿ ಪ್ರತಿಹೃತಶಬ್ದಕ್ಕೆ ಮಾಡಿರುವ ವ್ಯಾಖ್ಯಾನವನ್ನೂ ಅದರ ಅನುವಾದದ ಟಿಪ್ಪಣಿಯನ್ನೂ ನೋಡಿ.

3. ಪ್ರಾಣಂ ತರ್ಹಿ ವಾಗಪ್ಯೇತಿ (ಶತ ಬ್ರಾ. ೧೦-೩-೩-೬) ಮುಂತಾದ ಶ್ರುತಿಯೂ ಈ ಉಪನಿಷತ್ತಿನ ೪-೩-೩ರಲ್ಲಿರುವ ಶ್ರುತಿಯೂ ಇದಕ್ಕೆ ಪ್ರಮಾಣ.

4. ಪ್ರತಿಷ್ಠಿತವಾಗಿರುತ್ತದೆ

5. 'ಪ್ರಾಣೋ ವೈ ಗಾಯತ್ರೀ' ಎಂಬ (?) ಶ್ರುತಿಯು ಇದಕ್ಕೆ ಪ್ರಮಾಣ ಆ||೧|| ತಾಂ.ಬ್ರಾ. ೧೬-೧೬-೭ ಮತ್ತು ೧೯-೫-೧- ಇವುಗಳಲ್ಲಿ 'ಪ್ರಾಣೋ ಗಾಯತ್ರೀ' ಎಂದಿದೆ.

**ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಮಹಾಮನಾಃ ಸ್ಯಾತ್ ತದ್ ವ್ರತಮ್ ॥ ೨॥**

೨. ಯಾವನು ಹೀಗೆಂದರಿತು ಪ್ರಾಣಗಳಲ್ಲಿ ಪ್ರೋತವಾಗಿರುವ ಈ ಗಾಯತ್ರವನ್ನು ಅರಿತುಕೊಂಡಿರುವನೋ ಅವನು ಪ್ರಾಣಿಯಾಗಿರುವನು, ಆಯುಸ್ಸೆಲ್ಲವನ್ನೂ ಹೊಂದುವನು, ಚೆನ್ನಾಗಿ ಬಾಳುತ್ತಾನೆ, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ಮಹಾಮನಸ್ಕನಾಗಿರಬೇಕು ; ಇದು ವ್ರತವು.

(ಭಾಷ್ಯ)

೧೪೮ ಸ ಯ ಏವಮ್ ಏತದ್ ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ । ಅವಿಕಲಕರಣೋ ಭವತಿ ಇತ್ಯೇತತ್ । ಸರ್ವಮ್ ಆಯುಃ ಏತಿ । "ಶತಂ ವರ್ಷಾಣಿ ಸರ್ವಮಾಯುಃ ಪುರುಷಸ್ಯ" ( ? ) ಇತಿ ಶ್ರುತೇಃ । ಜ್ಯೋಕ್ ಉಜ್ಜ್ವಲಃ ಸನ್ ಜೀವತಿ । ಮಹಾನ್ ಭವತಿ ಪ್ರಜಾದಿಭಿಃ । ಮಹಾಂಶ್ಚ ಕೀರ್ತ್ಯಾ । ಗಾಯತ್ರೋಪಾಸಕಸ್ಯ ಏತತ್ ವ್ರತಂ ಭವತಿ ಯತ್ ಮಹಾಮನಸ್ತ್ವಮ್[1] । ಅಕ್ಷುದ್ರಚಿತ್ತಃ ಸ್ಯಾತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾವನು ಹೀಗೆ ಈ ಗಾಯತ್ರವು ಪ್ರಾಣಗಳಲ್ಲಿ ಪ್ರೋತವಾಗಿರುವದೆಂದು ಅರಿತುಕೊಂಡಿರುವನೋ ಅವನು ಪ್ರಾಣಿಯಾಗಿರುತ್ತಾನೆ, ನ್ಯೂನತೆಯಿಲ್ಲದ ಕರಣಗಳುಳ್ಳವನಾಗಿರುತ್ತಾನೆ ಎಂದು ತಾತ್ಪರ್ಯ. ಎಲ್ಲಾ ಆಯುಸ್ಸನ್ನೂ ಹೊಂದುತ್ತಾನೆ, 'ನೂರು ವರ್ಷಗಳೇ ಪುರುಷನ ಒಟ್ಟು ಆಯುಸ್ಸು' ( ? )[2] ಎಂದು ಶ್ರುತಿಯಿರುವದರಿಂದ (ಅಷ್ಟನ್ನು ಪಡೆದುಕೊಳ್ಳುತ್ತಾನೆ). ಚೆನ್ನಾಗಿ ಎಂದರೆ ಉಜ್ಜ್ವಲವಾಗಿ[3] ಬಾಳುತ್ತಾನೆ, ಪ್ರಜಾದಿಗಳಿಂದ ದೊಡ್ಡವನಾಗಿರುತ್ತಾನೆ, ಕೀರ್ತಿಯಿಂದಲೂ ದೊಡ್ಡವನಾಗಿರುತ್ತಾನೆ.

ಗಾಯತ್ರೋಪಾಸಕನಿಗೆ[4] 'ಮಹಾಮನನಾಗಿರಬೇಕು' ಎಂಬುದು ವ್ರತವು. ಕ್ಷುದ್ರಚಿತ್ತನಾಗಿರಬಾರದು ಎಂದು ಅರ್ಥ.

---

1 'ಮಹಾಮನಾಸ್ತ್ವಕ್ಷುದ್ರಚಿತ್ತಃ' ಎಂದು ಆ॥ ಪಾಠ. ವಾ॥ ಪಾಠದಲ್ಲಿ ತುಶಬ್ದವಿರುವ ಪಾಠವಿಲ್ಲ. ನಾವು ಒಪ್ಪಿರುವ ಪಾಠಕ್ಕೂ ಆಧಾರವಿದೆ.

2 'ಶತಾಯುರ್ವೈ ಪುರುಷಃ' ಇತಿ ಶ್ರುತೇರಿತ್ಯುಚ್ಯತೇ_ ಎಂದು ಟೀಕೆ.

3. ತನಗೂ ಮತ್ತೊಬ್ಬರಿಗೂ ಉಪಕಾರಸಮರ್ಥನಾಗಿರುವದೇ ಉಜ್ಜ್ವಲತ್ವವು. ಆ.ಗಿ.

4. ಗಾಯತ್ರಸಾಮದ ಹಿಂಕಾರಾದಿಗಳಲ್ಲಿ ಮನಆದಿದೃಷ್ಟಿಯನ್ನು ಇಟ್ಟು ಚಿಂತಿಸುವದೇ ಸಾಮದ ಉಪಾಸನೆ ಹೀಗೆಯೇ ಮುಂದೆಯೂ ತಿಳಿಯಬೇಕು.

# ಎರಡನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ರಥಂತರಸಾಮದ ಉಪಾಸನೆ

(ಉಪನಿಷತ್ತು)

**ಅಭಿಮನ್ಥತಿ ಸ ಹಿಂಕಾರೋ ಧೂಮೋ ಜಾಯತೇ ಸ ಪ್ರಸ್ತಾವೋ ಜ್ವಲತಿ ಸ ಉದ್ಗೀಥೋಽಙ್ಗಾರಾ ಭವನ್ತಿ ಸ ಪ್ರತಿಹಾರ ಉಪ ಶಾಮ್ಯತಿ ತನ್ನಿಧನಗ್‌ಂ ಸಗ್‌ಂಶಾಮ್ಯತಿ ತನ್ನಿಧನಮೇತ ದ್ರಥಂತರಮಗ್ನೌ ಪ್ರೋತಮ್ ॥ ೧ ॥**

೧. ಕಡೆಯುತ್ತಾರಲ್ಲ, ಅದು ಹಿಂಕಾರವು ; ಹೊಗೆ ಯುಂಟಾಗುತ್ತದೆಯಲ್ಲ, ಅದು ಪ್ರಸ್ತಾವವು ; ಉರಿಯುತ್ತದೆಯಲ್ಲ, ಅದು ಉದ್ಗೀಥವು ; ಕೆಂಡಗಳಾಗುತ್ತವೆಯಲ್ಲ, ಅದು ಪ್ರತಿಹಾರವು ; ಒಂದಿಷ್ಟು ಆರುವದಲ್ಲ, ಅದು ನಿಧನವು ; ಪೂರ ಆರುವದಲ್ಲ, ಅದು ನಿಧನವು. ಈ ರಥಂತರವು ಅಗ್ನಿಯಲ್ಲಿ ಪ್ರೋತವಾಗಿದೆ.

### ರಥಂತರಸಾಮದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೪೯. ಅಭಿಮನ್ಥತಿ ಸ ಹಿಂಕಾರಃ । ಪ್ರಾಥಮ್ಯಾತ್ । ಅಗ್ನೇರ್ಧೂಮೋ ಜಾಯತೇ ಸ ಪ್ರಸ್ತಾವಃ । ಆನನ್ತರ್ಯಾತ್ । ಜ್ವಲತಿ ಸ ಉದ್ಗೀಥಃ । ಹವಿಃ ಸಂಬನ್ಧಾತ್ ಶ್ರೈಷ್ಠ್ಯಂ ಜ್ವಲನಸ್ಯ । ಅಙ್ಗಾರಾ ಭವನ್ತಿ ಸ ಪ್ರತಿಹಾರಃ । ಅಙ್ಗಾರಾಣಾಂ ಪ್ರತಿಹೃತತ್ವಾತ್ । ಉಪಶಮಃ ಸಾವಶೇಷತ್ವಾತ್ ಅಗ್ನೇಃ, ಸಂಶಮಃ ನಿಃಶೇಷೋಪಶಮಃ । ಸಮಾಪ್ತಿಸಾಮಾನ್ಯಾತ್ ನಿಧನಮ್ । ಏತದ್ ರಥಂತರಮ್ ಅಗ್ನೌ ಪ್ರೋತಮ್ । ಮನ್ಥನೇ ಹಿ ಅಗ್ನಿರ್ಗೀಯತೇ ॥

(ಭಾಷ್ಯಾರ್ಥ)

ಕಡೆಯುತ್ತಾರಲ್ಲ[1], ಅದು ಹಿಂಕಾರವು ; ಏಕೆಂದರೆ ಮೊದಲನೆಯ ದಾಗಿದೆ. ಬೆಂಕಿಯಿಂದ ಹೊಗೆ ಉಂಟಾಗುತ್ತದೆಯಲ್ಲ, ಅದು ಪ್ರಸ್ತಾವವು,

---

1. ಸಮಗ್ರಪ್ರಾಣಗಳಿದ್ದವನೇ ಮಂಥನಕ್ಕೆ ಸಮರ್ಥನಾದ್ದರಿಂದ ಪ್ರಾಣದೃಷ್ಟಿಯಾದ ಬಳಿಕ ಈ ಮಂಥನಾದಿದೃಷ್ಟಿಯ ಉಪಾಸನೆಯನ್ನು ಹೇಳಿದೆ ಆ.ಗಿ.

ಏಕೆಂದರೆ (ಅದು ಪ್ರಸ್ತಾವದಂತೆ) ಆಮೇಲೆ (ಉಂಟಾಗುತ್ತದೆ). ಹೊತ್ತಿಕೊಳ್ಳು ತ್ತದೆಯಲ್ಲ, ಅದು **ಉದ್ಗೀಥವು** ; ಹವಿಸ್ಸಿನ ಸಂಬಂಧವಿರುವದರಿಂದ[1] ಉರಿಗೆ ಶ್ರೇಷ್ಠತ್ವ(ವಿದೆ). ಕೆಂಡಗಳಾಗುವದಲ್ಲ, ಅದು ಪ್ರತಿಹಾರವು , ಏಕೆಂದರೆ ಕೆಂಡ ಗಳು ಪ್ರತಿಹೃತವಾಗುತ್ತವೆ[2] ಉಪಶಮ ಎಂದರೆ ಕೆಂಡವು (ಒಂದಿಷ್ಟು) ಉಳಿದು ಕೊಂಡಿರುವಂತೆ (ಆರಿರುವದು) , ಸಂಶಮವೆಂದರೆ (ಸ್ವಲ್ಪವೂ) ಉಳಿಯದಂತೆ ಆರಿಬಿಡುವದು , ಸಮಾಪ್ತಿ ಎಂಬ ಹೋಲಿಕೆಯಿಂದ (ಆರುವದು) ನಿಧನವು.

ಈ **ರಥಂತರ(ಸಾಮ)ವು** ಅಗ್ನಿಯಲ್ಲಿ ಪ್ರೋತವಾಗಿರುತ್ತದೆ , ಅಗ್ನಿ ಯನ್ನು ಮಥನಮಾಡುವಾಗ (ಅದನ್ನು) ಗಾನಮಾಡುತ್ತಾರಲ್ಲವೆ [3]?

## ರಥಂತರೋಪಾಸನೆಗೆ ಫಲ

(ಭಾಷ್ಯಾರ್ಥ)

**ಸ ಯ ಏವಮೇತದ್ ರಥಂತರಮಗ್ನೌ ಪ್ರೋತಂ ವೇದ ಬ್ರಹ್ಮ ವರ್ಚಸ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ನ ಪ್ರತ್ಯಙ್ಙಗ್ನಿಮಾಚಾಮೇನ್ನ ನಿಷ್ಠೀವೇತ್ ತದ್ವ್ರತಮ್ ॥ ೨ ॥**

೨. ಯಾವನು ಈ ರಥಂತರವು ಅಗ್ನಿಯಲ್ಲಿ ಪ್ರೋತವಾಗಿದೆ ಎಂದು ಅರಿತುಕೊಂಡಿರುತ್ತಾನೋ ಅವನು ಬ್ರಹ್ಮವರ್ಚಸಿಯೂ ಅನ್ನಾದನೂ ಆಗಿರುವನು. ಆಯುಸ್ಸೆಲ್ಲವನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಬಾಳುವನು ; ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವ ನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗುವನು. ಅಗ್ನಿಯ ಮುಂಮುಗಡೆಯಲ್ಲಿ ಆಚಮನಮಾಡಬಾರದು, ಉಗುಳಬಾರದು , ಅದು ವ್ರತವು.

(ಭಾಷ್ಯ)

೧೫೦ ಸ ಯ ಇತ್ಯಾದಿ ಪೂರ್ವವತ್ । ಬ್ರಹ್ಮವರ್ಚಸೀ ವೃತ್ತಸ್ವಾಧ್ಯಾಯ ನಿಮಿತ್ತಂ ತೇಜೋ ಬ್ರಹ್ಮವರ್ಚಸಮ್ । ತೇಜಸ್ತು ಕೇವಲಂ ತ್ವಿಡ್ಭಾವಃ। ಅನ್ನಾದೋ ದೀಪ್ತಾಗ್ನಿಃ । ನ ಪ್ರತ್ಯಙ್ ಅಗ್ನೇರಭಿಮುಖಃ ನ ಆಚಾಮೇತ್, ನ ಭಕ್ಷಯೇತ್ ಕಿಂಚಿತ್ । ನ ನಿಷ್ಠೀವೇತ್ ಶ್ಲೇಷ್ಮನಿರಸನಂ ಚ ನ ಕುರ್ಯಾತ್ । ತದ್ ವ್ರತಮ್॥

1. ಹವಿಸ್ಸನ್ನು ಉರಿಯುವಾಗ ಹಾಕುತ್ತಾರೆ.
2. ಕೂಡಿಕೊಂಡಿರುತ್ತದೆ ಎಂದರ್ಥ.
3. ಮಥನಮಾಡುವಾಗ ಉದ್ಗಾತೃಗಳು ಈ ಸಾಮವನ್ನು ಉಪಯೋಗಿಸಬೇಕು.

(ಭಾಷ್ಯಾರ್ಥ)

"ಯಾವನು ." ಮುಂತಾದ (ಅರಿತುಕೊಂಡಿರುತ್ತಾನೋ ಎಂಬವರೆಗಿನ ಗ್ರಂಥಕ್ಕೆ) ಹಿಂದಿನಂತೆ (ಅರ್ಥ) ಬ್ರಹ್ಮವರ್ಚಸಿ(ಯಾಗುತ್ತಾನೆ) ಹಿಂದೆ ಆಗಿರುವ ಅಧ್ಯಯನನಿಮಿತ್ತದಿಂದ ಬಂದಿರುವ ತೇಜಸ್ಸು ಬ್ರಹ್ಮವರ್ಚಸವು, ತೇಜಸ್ಸೆಂದರೋ (ಬರಿಯ ಚರ್ಮ) ಕಾಂತಿಯು. ಅನ್ನಾದನು ಎಂದರೆ ದೀಪ್ತಾಗ್ನಿಯು. ಅಗ್ನಿಗೆ ಪ್ರತ್ಯಂಚವಾಗಿ ಎಂದರೆ ಅದರ ಎದುರಿಗೆ ಆಚಮಾನಮಾಡಬಾರದು, ಏನನ್ನೂ ತಿನ್ನಬಾರದು , ಉಗುಳಬಾರದು, ಶ್ಲೇಷ್ಮವನ್ನು ಹೊರತೆಗೆಯಲೂ ಬಾರದು. ಅದು (ಈ ಉಪಾಸಕನಿಗೆ) ವ್ರತವು.

---

# ಎರಡನೆಯ ಅಧ್ಯಾಯ-ಹದಿಮೂರನೆಯ ಖಂಡ

## (ಗಾಯತ್ರಾದಿಸಾಮಗಳ ಉಪಾಸನೆಗಳು)

## ವಾಮದೇವಸಾಮದ ಉಪಾಸನೆ

(ಉಪನಿಷತ್ತು)

**ಉಪಮನ್ತ್ರಯತೇ ಸ ಹಿಂಕಾರೋ ಜ್ಞಪಯತೇ ಸ ಪ್ರಸ್ತಾವಃ । ಸ್ತ್ರಿಯಾ ಸಹ ಶೇತೇ ಸ ಉದ್ಗೀಥಃ ಪ್ರತಿ ಸ್ತ್ರೀಂ ಸಹ ಶೇತೇ ಸ ಪ್ರತಿಹಾರಃ ಕಾಲಂ ಗಚ್ಛತಿ ತನ್ನಿಧನಂ ಪಾರಂ ಗಚ್ಛತಿ ತನ್ನಿಧನಮೇತದ್ವಾಮದೇವ್ಯಂ ಮಿಥುನೇ ಪ್ರೋತಮ್ ॥ ೧ ॥**

೧. ಕರೆಯುತ್ತಾನಲ್ಲ, ಅದು ಹಿಂಕಾರವು ; ತಿಳಿಸುತ್ತಾನಲ್ಲ, ಅದು ಪ್ರಸ್ತಾವವು ; ಸ್ತ್ರೀಯೊಡನೆ ಮಲಗುತ್ತಾನಲ್ಲ, ಅದು ಉದ್ಗೀಥವು ; ಸ್ತ್ರೀಗೆ ಪ್ರತಿಯಾಗಿ ಮಲಗುತ್ತಾನಲ್ಲ, ಅದು ಪ್ರತಿಹಾರವು , ಕಾಲಕ್ಕೆ ಸರಿಯಾಗಿ ಗಮನಮಾಡುತ್ತಾನಲ್ಲ, ಅದು ನಿಧನವು ; ಪಾರವನ್ನು ಹೊಂದುತ್ತಾನಲ್ಲ, ಅದು ನಿಧನವು. ಈ ವಾಮದೇವ್ಯವು, ಮಿಥುನದಲ್ಲಿ ಪ್ರೋತವಾಗಿರುತ್ತದೆ.

## ವಾಮದೇವಸಾಮದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೫೧. ಉಪಮನ್ತ್ರಯತೇ ಸಂಕೇತಂ ಕರೋತಿ । ಪ್ರಾಥಮ್ಯಾತ್ ಸ ಹಿಂಕಾರಃ । ಜ್ಞಪಯತೇ ತೋಷಯತಿ ಸ ಪ್ರಸ್ತಾವಃ । ಸಹಶಯನಮ್ ಏಕ

ಪರ್ಯಙ್ಕಗಮನಮ್, ಸ ಉದ್ಗೀಥಃ । ಶ್ರೈಷ್ಠ್ಯಾತ್ । ಪ್ರತಿ ಸ್ತ್ರೀಂ ಶಯನಂ ಸ್ತ್ರಿಯಾ ಅಭಿಮುಖೀಭಾವಃ । ಸ ಪ್ರತಿಹಾರಃ । ಕಾಲಂ ಗಚ್ಛತಿ ಮೈಥುನೇನ । ಪಾರಂ ಸಮಾಪ್ತಿಂ ಗಚ್ಛತಿ । ತನ್ನಿಧನಮ್ । ಏತದ್ವಾಮದೇವ್ಯಂ ಮಿಥುನೇ ಪ್ರೋತಮ್ ವಾಯ್ವಮ್ಬುಮಿಥುನಸಂಬನ್ಧಾತ್ ॥

(ಭಾಷ್ಯಾರ್ಥ)

ಕರೆಯುತ್ತಾನಲ್ಲ, ಸನ್ನೆಯನ್ನು ಮಾಡುತ್ತಾನಲ್ಲ, ಅದು ಮೊದಲನೆಯದಾದ್ದರಿಂದ ಹಿಂಕಾರವು. ತಿಳಿಸುತ್ತಾನಲ್ಲ, ಸಂತೋಷಪಡಿಸುತ್ತಾನಲ್ಲ, ಅದು ಪ್ರಸ್ತಾವವು. ಸಹಶಯನ ಎಂದರೆ ಒಂದೇ ಮಂಚದಮೇಲೆ ಇರುವದು ; ಅದು ಶ್ರೇಷ್ಠವಾಗಿರುವದರಿಂದ ಉದ್ಗೀಥವು. ಸ್ತ್ರೀಗೆ ಪ್ರತಿಯಾಗಿ ಮಲಗುತ್ತಾನಲ್ಲ, ಎದುರಾಗಿ ಮಲಗುವನಲ್ಲ, ಅದು ಪ್ರತಿಹಾರವು. ಕಾಲದಲ್ಲಿ ಮೈಥುನದಿಂದ ಬೆರೆಯುತ್ತಾನಲ್ಲ, ಪಾರವನ್ನು ಎಂದರೆ ಕೊನೆಯನ್ನು ಮುಟ್ಟುವನಲ್ಲ, ಅದು ನಿಧನವು. ಈ ವಾಮದೇವ್ಯ(ಸಾಮ)ವು ಮಿಥುನದಲ್ಲಿ ಪ್ರೋತವಾಗಿದೆ ; ಏಕೆಂದರೆ (ಅದಕ್ಕೆ) ವಾಯು, ಜಲ – ಎಂಬ ಮಿಥುನದ ಸಂಬಂಧವಿದೆ.[1]

## ವಾಮದೇವ್ಯೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತದ್ವಾಮದೇವ್ಯಂ ಮಿಥುನೇ ಪ್ರೋತಂ ವೇದ ಮಿಥುನೀ ಭವತಿ ಮಿಥುನಾನ್ಮಿಥುನಾತ್ ಪ್ರಜಾಯತೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ನ ಕಾಂಚನ ಪರಿಹರೇತ್ ತದ್ವ್ರತಮ್ ॥ ೨ ॥**

೨. ಯಾವನು ಈ ವಾಮದೇವ್ಯವು ಮಿಥುನದಲ್ಲಿ ಪ್ರೋತವಾಗಿದೆ ಎಂದು ತಿಳಿಯುವನೋ ಅವನು ಮಿಥುನವಾಗಿರುತ್ತಾನೆ. ಮಿಥುನದಿಂದ ಮಿಥುನದಿಂದ ಹುಟ್ಟುತ್ತಾನೆ. ಆಯುಸ್ಸೆಲ್ಲವನ್ನೂ ಪಡೆದುಕೊಳ್ಳುತ್ತಾನೆ, ಚೆನ್ನಾಗಿ ಜೀವಿಸುತ್ತಾನೆ, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗುತ್ತಾನೆ, ಕೀರ್ತಿಯಿಂದ ದೊಡ್ಡವನಾಗುತ್ತಾನೆ. ಯಾವಾಕೆಯನ್ನೂ ಬಿಡಬಾರದು, ಅದು ವ್ರತವು.

---

1. ವಾಯು, ಅಪ್ಪು – ಇವುಗಳ ಮಿಥುನಸಂಬಂಧದಿಂದ ವಾಮದೇವ್ಯವು ಹುಟ್ಟಿರುತ್ತದೆ. ೨॥ ಟೀ॥

(ಭಾಷ್ಯ)

೧೫೨. ಸ ಯ ಇತ್ಯಾದಿಪೂರ್ವವತ್ । ಮಿಥುನೀಭವತಿ। ಅವಿಧುರೋ ಭವತಿ ಇತ್ಯರ್ಥಃ। ಮಿಥುನಾತ್ ಪ್ರಜಾಯತೇ ಇತಿ ಅಮೋಘರೇತಸ್ತ್ವಮ್ ಉಚ್ಯತೇ। ನ ಕಾಂಚನ ಕಾಂಚಿದಪಿ ಸ್ತ್ರಿಯಂ ಸ್ವಾತ್ಮತಲ್ಪಪ್ರಾಪ್ತಾಂ ನ ಪರಿಹರೇತ್ ಸಮಾಗಮಾರ್ಥಿನೀಮ್ । ವಾಮದೇವ್ಯಸಾಮೋಪಾಸನಾಙ್ಗತ್ವೇನ ವಿಧಾನಾತ್ ಏತಸ್ಮಾದನ್ಯತ್ರ ಪ್ರತಿಷೇಧಸ್ಮೃತಯಃ। ವಚನಪ್ರಾಮಾಣ್ಯಾಚ್ಚ ಧರ್ಮಾವಗತೇಃ ನ ಪ್ರತಿಷೇಧಶಾಸ್ತ್ರೇಣ ಅಸ್ಯ ವಿರೋಧಃ ॥

(ಭಾಷ್ಯಾರ್ಥ)

"ಯಾವನು . " ಮುಂತಾದ ಗ್ರಂಥಕ್ಕೆ ಹಿಂದಿನಂತೆ (ವ್ಯಾಖ್ಯಾನ). ಮಿಥುನನಾಗಿರುತ್ತಾನೆ ಎಂದರೆ ವಿಧುರನಾಗದೆ ಇರುತ್ತಾನೆ ಎಂದರ್ಥ. ಮಿಥುನದಿಂದ ಮಿಥುನದಿಂದ ಹುಟ್ಟುತ್ತಾನೆ.[1] ಎಂದರೆ ಅಮೋಘರೇತಸ್ಕನಾಗಿರುತ್ತಾನೆ ಎಂದರ್ಥ.

ಯಾವಾಕೆಯನ್ನೂ ತನ್ನ ಹಾಸಿಗೆಯಬಳಿಗೆ ಬಂದು ಸಮಾಗಮವನ್ನು ಬಯಸುವ ಯಾವ ಸ್ತ್ರೀಯನ್ನೂ ಬಿಡಬಾರದು. (ಅದು ವ್ರತವು). ವಾಮದೇವ್ಯ ಸಾಮದ ಉಪಾಸನೆಗೆ ಅಂಗವಾಗಿ (ಇದನ್ನು) ವಿಧಿಸಿರುವದರಿಂದ ಪ್ರತಿಷೇಧ ಸ್ಮೃತಿಗಳು ಇದಕ್ಕಿಂತ ಬೇರೆಯ ಕಡೆಯಲ್ಲಿ (ಪ್ರಮಾಣವಾಗಿರುತ್ತವೆ), ವಚನ ಪ್ರಮಾಣದಿಂದಲೇ ಧರ್ಮನಿಶ್ಚಯವಾಗಬೇಕಾಗಿರುವದರಿಂದ ಪ್ರತಿಷೇಧಶಾಸ್ತ್ರಕ್ಕೆ ಇದು ವಿರುದ್ಧವಲ್ಲ.[2]

---

# ಎರಡನೆಯ ಅಧ್ಯಾಯ-ಹದಿನಾಲ್ಕನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ಬೃಹತ್ಸಾಮದ ಉಪಾಸನೆ

(ಉಪನಿಷತ್ತು)

**ಉದ್ಯನ್ ಹಿಂಕಾರ ಉದಿತಃ ಪ್ರಸ್ತಾವೋ ಮಧ್ಯಂದಿನ ಉದ್ಗೀಥೋಽಪರಾಹ್ಣಃ ಪ್ರತಿಹಾರೋಽಸ್ತಂ ಯನ್ನಿಧನಮೇತದ್ ಬೃಹದಾದಿತ್ಯೇ ಪ್ರೋತಮ್ ॥ ೧ ॥**

1. ಪ್ರತಿಯೊಂದು ಮಿಥುನಕರ್ಮದಿಂದಲೂ ಪುತ್ರವಂತನಾಗುತ್ತಾನೆ.
2. ಪ್ರತಿಷೇಧಶಾಸ್ತ್ರವು ಸಾಮಾನ್ಯ, ಇದು ಅದಕ್ಕೆ ಬಾಧಕವಾಗಿರುವ ವಿಶೇಷಶಾಸ್ತ್ರ ಎಂದು ಅಭಿಪ್ರಾಯ.

೧. ಉದಯಿಸುವಾಗ ಹಿಂಕಾರವು ; ಉದಿಸಿದಮೇಲೆ ಪ್ರಸ್ತಾವವು; ನಡುಹಗಲು ಉದ್ಗೀಥವು; ಅಪರಾಹ್ಣವು ಪ್ರತಿಹಾರವು, ಅಸ್ತವಾಗುವಾಗ ನಿಧನವು. ಈ ಬೃಹತ್ (ಸಾಮವು) ಆದಿತ್ಯನಲ್ಲಿ ಪ್ರೋತವಾಗಿರುತ್ತದೆ.

## ಬೃಹತ್ಸಾಮಭಕ್ತಿಗಳ ವಿನಿಯೋಗ

(ಭಾಷ್ಯ)

೧೫೩. ಉದ್ಯನ್ ಸವಿತಾ ಸ ಹಿಂಕಾರಃ । ಪ್ರಾಥಮ್ಯಾದ್ ದರ್ಶನಸ್ಯ । ಉದಿತಃ ಪ್ರಸ್ತಾವಃ । ಪ್ರಸ್ತವನಹೇತುತ್ವಾತ್ ಕರ್ಮಣಾಮ್ । ಮಧ್ಯಂದಿನ ಉದ್ಗೀಥಃ । ಶ್ರೈಷ್ಠ್ಯಾತ್ । ಅಪರಾಹ್ಣಃ ಪ್ರತಿಹಾರಃ । ಪಶ್ವಾದೀನಾಂ ಗೃಹಾನ್ ಪ್ರತಿ ಹರಣಾತ್ । ಯದಸ್ತಂ ಯನ್ ತನ್ನಿಧನಮ್ । ರಾತ್ರೌ ಗೃಹೇ ನಿಧಾನಾತ್ ಪ್ರಾಣಿನಾಮ್ । ಏತದ್ ಬೃಹತ್ ಆದಿತ್ಯೇ ಪ್ರೋತಮ್ । ಬೃಹತಃ ಆದಿತ್ಯ ದೈವತ್ಯತ್ವಾತ್ ॥

(ಭಾಷ್ಯಾರ್ಥ)

ಉದಯಿಸುವ ಸೂರ್ಯನಿದಾನಲ್ಲ, ಅವನು ಹಿಂಕಾರವು , ಏಕೆಂದರೆ (ಅವನ) ದರ್ಶನವೇ ಮೊದಲು. ಉದಿಸಿದಮೇಲೆ ಪ್ರಸ್ತಾವವು , ಏಕೆಂದರೆ ಕರ್ಮಗಳು ಪ್ರಸ್ತುತವಾಗುವದಕ್ಕೆ ಹೇತುವಾಗಿರುತ್ತಾನೆ. ನಡುಹಗಲು ಉದ್ಗೀಥವು , ಏಕೆಂದರೆ ಶ್ರೇಷ್ಠವಾಗಿರುತ್ತದೆ. ಅಪರಾಹ್ಣವು ಪ್ರತಿಹಾರವು , ಏಕೆಂದರೆ (ಆಗ) ಪಶ್ವಾದಿಗಳನ್ನು ಮನೆಗೆ ಪ್ರತಿಹರಣಮಾಡುತ್ತಾರೆ.[1] ಅಸ್ತವಾಗುತ್ತಾನಲ್ಲ, ಅದು ನಿಧನವು ; ಏಕೆಂದರೆ ಪ್ರಾಣಿಗಳು ಮನೆಯಲ್ಲಿಡಲ್ಪಡುತ್ತವೆ.

ಈ **ಬೃಹತ್ (ಸಾಮವು)** ಆದಿತ್ಯನಲ್ಲಿ[2] ಪ್ರೋತವಾಗಿರುತ್ತದೆ , ಏಕೆಂದರೆ ಬೃಹತ್ಸಾಮಕ್ಕೆ ಆದಿತ್ಯನೇ ದೇವತೆ.

## ಬೃಹತ್ಸಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತದ್ಬೃಹದಾದಿತ್ಯೇ ಪ್ರೋತಂ ವೇದ ತೇಜ ಸ್ವ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ**

---

1. ಒಯ್ಯುತ್ತಾರೆ.

2 ಆದಿತ್ಯನು ಪ್ರಜೋತ್ಪತ್ತಿಗೆ ಕಾರಣನಾಗಿರುವದರಿಂದ ಹಿಂದಿನ ಸಾಮುವಾದ ಬಳಿಕ ಈ ಸಾಮದ ಉಪಾಸನೆ ಬಂದಿದೆ ಎಂದು ಆ॥ ಗಿ॥

**ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ತಪನ್ತಂ ನ ನಿನ್ದೇತ್ ತದ್ವ್ರತಮ್ ॥ ೨ ॥**

೨. ಯಾವನು ಈ ಬೃಹತ್ಸಾಮವು ಆದಿತ್ಯನಲ್ಲಿ ಪ್ರೋತವೆಂದು ಅರಿತುಕೊಂಡಿರುವನೋ ಅವನು ತೇಜಸ್ವಿಯೂ ಅನ್ನಾದನೂ ಆಗುತ್ತಾನೆ, ಆಯುಸ್ಸೆಲ್ಲವನ್ನೂ ಪಡೆದುಕೊಳ್ಳುತ್ತಾನೆ, ಚೆನ್ನಾಗಿ ಬಾಳುತ್ತಾನೆ, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗುತ್ತಾನೆ, ಕೀರ್ತಿಯಿಂದಲೂ ದೊಡ್ಡವನಾಗುತ್ತಾನೆ. ತಪಿಸುತ್ತಿರುವ (ಸೂರ್ಯ)ನನ್ನು ನಿಂದಿಸಬಾರದು. ಅದು ವ್ರತವು.

(ಭಾಷ್ಯ)

೧೫೪. ಸ ಯ ಇತ್ಯಾದಿ ಪೂರ್ವವತ್ । ತಪನ್ತಂ ನ ನಿನ್ದೇತ್, ತದ್ವ್ರತಮ್ ॥

(ಭಾಷ್ಯಾರ್ಥ)

"ಯಾವನು-" ಮುಂತಾದ (ಗ್ರಂಥಕ್ಕೆ) ಹಿಂದಿನಂತೆ(ವ್ಯಾಖ್ಯಾನ). ತಪಿಸುತ್ತಿರುವ (ಸೂರ್ಯನನ್ನು) ನಿಂದಿಸಬಾರದು, ಅದು ವ್ರತವು.

---

# ಎರಡನೆಯ ಅಧ್ಯಾಯ-ಹದಿನೈದನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ವೈರೂಪಸಾಮದ ಉಪಾಸನೆ

(ಉಪನಿಷತ್ತು)

**ಅಭ್ರಾಣಿ ಸಂಪ್ಲವನ್ತೇ ಸ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ ಉದ್ಗೃಹ್ಣಾತಿ ತನ್ನಿಧನಮೇತದ್ವೈರೂಪಂ ಪರ್ಜನ್ಯೇ ಪ್ರೋತಮ್ ॥ ೧ ॥**

೧. ಅಭ್ರಗಳು ಒಟ್ಟುಗೂಡುತ್ತವೆಯಲ್ಲ, ಅದು ಹಿಂಕಾರವು ; ಮೇಘವಾಗುತ್ತದೆಯಲ್ಲ, ಅದು ಪ್ರಸ್ತಾವವು ; ಮಳೆಗರೆಯುತ್ತದೆ

ಯಲ್ಲ, ಅದು ಉದ್ಗೀಥವು ; ಮಿಂಚುತ್ತದೆಯಲ್ಲ, ಗುಡುಗುತ್ತದೆಯಲ್ಲ, ಅದು ಪ್ರತಿಹಾರವು. ನಿಲುಗಡೆಯಾಗುತ್ತದೆಯಲ್ಲ, ಅದು ನಿಧನವು. ಈ ವೈರೂಪ(ಸಾಮ)ವು ಮೋಡದಲ್ಲಿ ಪ್ರೋತವಾಗಿರುತ್ತದೆ.

## ವೈರೂಪಭಕ್ತಿಗಳ ವಿನಿಯೋಗ

(ಭಾಷ್ಯ)

೧೫೫. ಅಭ್ರಾಣಿ । ಅಬ್ಭರಣಾತ್ । ಮೇಘಃ । ಉದಕಸೇಕ್ತೃತ್ವಾತ್ । ಉಕ್ತಾರ್ಥಮ್ ಅನ್ಯತ್ । ಏತದ್ ವೈರೂಪಂ ನಾಮ ಸಾಮ ಪರ್ಜನ್ಯೇ ಪ್ರೋತಮ್ । ಅನೇಕರೂಪತ್ವಾತ್ ಅಭ್ರಾದಿಭಿಃ ಪರ್ಜನ್ಯಸ್ಯ ವೈರೂಪ್ಯಮ್ ॥

(ಭಾಷ್ಯಾರ್ಥ)

ನೀರನ್ನು ತುಂಬಿಕೊಂಡಿರುವದರಿಂದ (ಕಾರ್ಮೋಡಗಳು) ಅಭ್ರಗಳು ; ನೀರನ್ನು ಸುರಿಸುವದರಿಂದ (ಆಗಿನ ಮೋಡವು) ಮೇಘ(ವೆನಿಸುತ್ತದೆ). ಮಿಕ್ಕದ್ದೆಲ್ಲಕ್ಕೂ ಹಿಂದೆ ಹೇಳಿದಂತೆ ಅರ್ಥ.

ವೈರೂಪಸಾಮವು ಮೋಡದಲ್ಲಿ ಪ್ರೋತವಾಗಿರುತ್ತದೆ. ಅಭ್ರಗಳೇ ಮುಂತಾದ ಅನೇಕ ರೂಪ(ಗಳಿರುವದರಿಂದ) ಮೋಡಕ್ಕೆ ವೈರೂಪ್ಯವಿದೆ.

## ವೈರೂಪಸಾಮೋಪಾಸನೆಯ ಫಲ

(ಉಪನಿಷತ್ತು)

**ಸ ಯ ಏವಮೇತದ್ವೈರೂಪಂ ಪರ್ಜನ್ಯೇ ಪ್ರೋತಂ ವೇದ ವಿರೂಪಾಗ್ಂಶ್ಚ ಸುರೂಪಾಗ್ಂಶ್ಚ ಪಶೂನವರುನ್ಧೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ವರ್ಷನ್ತಂ ನ ನಿನ್ದೇತ್ ತದ್ವ್ರತಮ್ ॥ ೨ ॥**

೨. ಯಾವನು ಈ ವೈರೂಪ(ಸಾಮ)ವನ್ನು ಮೋಡದಲ್ಲಿ ಪ್ರೋತವಾಗಿರುವದೆಂದು ಅರಿತುಕೊಂಡಿರುವನೋ ಅವನು ವಿರೂಪವೂ ಸುರೂಪವೂ ಆಗಿರುವ ಪಶುಗಳನ್ನು ಕಟ್ಟುವನು, ಆಯುಸ್ಸನ್ನೆಲ್ಲ ಪಡೆದುಕೊಳ್ಳುವನು, ಚೆನ್ನಾಗಿ ಬಾಳುವನು, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು ; ಕೀರ್ತಿಯಿಂದಲೂ ದೊಡ್ಡವನಾಗಿರುವನು. ಮಳೆಗರೆಯುವ (ಮೋಡ)ವನ್ನು ನಿಂದಿಸಬಾರದು ; ಅದು ವ್ರತವು.

(ಭಾಷ್ಯ)

೧೫೬. ವಿರೂಪಾಂಶ್ಚ ಸುರೂಪಾಂಶ್ಚ ಅಜಾವಿಪ್ರಭೃತೀನ್ ಪಶೂನ್ ಅವರುನ್ಧೇ ಪ್ರಾಪ್ನೋತಿ ಇತ್ಯರ್ಥಃ । ವರ್ಷನ್ತಂ ನ ನಿನ್ದೇತ್ । ತದ್ ವ್ರತಮ್ ॥

(ಭಾಷ್ಯಾರ್ಥ)

ವಿರೂಪಗಳಾಗಿಯೂ[1] ಸುರೂಪಗಳಾಗಿಯೂ ಇರುವ ಆಡು ಕುರಿ ಮುಂತಾದ ಪಶುಗಳನ್ನು ಕಟ್ಟುವನು, ಎಂದರೆ ಪಡೆದುಕೊಳ್ಳುವನು ಎಂದರ್ಥ. ಮಳೆಗರೆಯುವ (ಮೋಡಗಳನ್ನು) ನಿಂದಿಸಬಾರದು ; ಅದು (ಈ ಸಾಮೋಪಾಸಕನಿಗೆ) ವ್ರತವು.

---

# ಎರಡನೆಯ ಅಧ್ಯಾಯ–ಹದಿನಾರನೆಯ ಖಂಡ

(ಗಾಯತ್ರ್ಯಾದಿಸಾಮಗಳ ಉಪಾಸನೆಗಳು)

## ವೈರಾಜಸಾಮದ ಉಪಾಸನೆ

(ಉಪನಿಷತ್ತು)

**ವಸನ್ತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ ಪ್ರತಿಹಾರೋ ಹೇಮನ್ತೋ ನಿಧನಮೇತದ್ ವೈರಾಜ ಮೃತುಷು ಪ್ರೋತಮ್ ॥ ೧ ॥**

೧. ವಸಂತವು ಹಿಂಕಾರವು ; ಗ್ರೀಷ್ಮವು ಪ್ರಸ್ತಾವವು ; ವರ್ಷರ್ತು ಉದ್ಗೀಥವು ; ಶರತ್ಕಾಲವು ಪ್ರತಿಹಾರವು ; ಹೇಮಂತವು ನಿಧನವು. ಈ ವೈರಾಜ(ಸಾಮವು) ಋತುಗಳಲ್ಲಿ ಪ್ರೋತವಾಗಿರುತ್ತದೆ.

## ವೈರಾಜಸಾಮದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೫೭. ವಸನ್ತೋ ಹಿಂಕಾರಃ । ಪ್ರಾಥಮ್ಯಾತ್ । ಗ್ರೀಷ್ಮಃ ಪ್ರಸ್ತಾವಃ ಇತ್ಯಾದಿ ಪೂರ್ವವತ್ ॥

---

1. ವಿಧವಿಧವಾದ ರೂಪಗಳುಳ್ಳವಾಗಿಯೂ.

(ಭಾಷ್ಯಾರ್ಥ)

ವಸಂತವು ಹಿಂಕಾರವು, ಏಕೆಂದರೆ ಮೊದಲನೆಯದಾಗಿದೆ ಗ್ರೀಷ್ಮವು ಪ್ರಸ್ತಾವವು- ಎಂದು ಮುಂತಾಗಿರುವದಕ್ಕೆ ಹಿಂದೆ (೨-೫ ಕಂಡಿಕೆ)ಯಂತೆ (ವ್ಯಾಖ್ಯಾನ).

## ವೈರಾಜಸಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತದ್ವೈರಾಜಮೃತುಷು ಪ್ರೋತಂ ವೇದ ವಿರಾಜತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ ಸರ್ವಮಾಯು ರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯರ್ತೂನ್ನ ನಿನ್ದೇತ್ತದ್ವ್ರತಮ್ ॥ ೨ ॥**

೨. (ಯಾವನು ಹೀಗೆ) ಈ ವೈರಾಜ(ಸಾಮವು) ಋತುಗಳಲ್ಲಿ ಪ್ರೋತವಾಗಿರುವದೆಂದು ಅರಿತುಕೊಂಡಿರುವನೋ ಅವನು ಪ್ರಜೆಯಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ವಿರಾಜಿಸುತ್ತಿರುವನು. ಆಯುಸ್ಸೆಲ್ಲವನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಬಾಳುವನು, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ಋತುಗಳನ್ನು ನಿಂದಿಸಬಾರದು, ಅದು ವ್ರತವು.

(ಭಾಷ್ಯ)

೧೫೮. ಏತದ್[1] ವೈರಾಜಮ್ ಋತುಷು ಪ್ರೋತಂ ವೇದ ವಿರಾಜತಿ ಋತುವತ್, ಯಥಾ ಋತವಃ ಆರ್ತವೈರ್ಧರ್ಮೈಃ ವಿರಾಜನ್ತೇ, ಏವಂ ಪ್ರಜಾದಿಭಿರ್ವಿದ್ವಾನ್ ಇತಿ। ಉಕ್ತಮನ್ಯತ್। ಋತೂನ್ನ ನಿನ್ದೇತ್। ತದ್ವ್ರತಮ್ ॥

(ಭಾಷ್ಯಾರ್ಥ)

(ಯಾವನು ಹೀಗೆ) ಈ **ವೈರಾಜ**(ಸಾಮವು) ಋತುಗಳಲ್ಲಿ ಪ್ರೋತವಾಗಿರುವದೆಂದು ಅರಿತುಕೊಂಡಿರುವನೋ (ಅವನು) ಋತುಗಳಂತೆ ವಿರಾಜಿಸುತ್ತಿರುವನು. ಹೇಗೆ ಋತುಗಳು (ಆಯಾ) ಋತುಧರ್ಮಗಳಿಂದ ವಿರಾಜಿಸುತ್ತಿರು

---

1. 'ಸ ಯ ಏವಂ' ಎಂಬ ಮಾತುಗಳು 'ಏತದ್' ಎಂಬುದರ ಹಿಂದೆ ಇದ್ದು ಬಿಟ್ಟು ಹೋಗಿವೆ, ಅಥವಾ ಅವನ್ನು ಸೇರಿಸಿಕೊಳ್ಳಬೇಕೆಂದು ಭಾಷ್ಯಕಾರರೇ ಬಿಟ್ಟುಬಿಟ್ಟಿದ್ದಾರೆ.

ವವೋ ಹಾಗೆಯೇ ಉಪಾಸಕನು ಪ್ರಜಾದಿಗಳಿಂದ (ವಿರಾಜಿಸುತ್ತಿರುವನು) ಎಂದು (ಅರ್ಥ) ಮಿಕ್ಕದ್ದ(ರ್ಥವ)ನ್ನು (ಹಿಂದೆ) ಹೇಳಿವೆ

(ಈ ಉಪಾಸಕನು) ಋತುಗಳನ್ನು ನಿಂದಿಸಬಾರದು. ಅದು (ಅವನಿಗೆ) ವ್ರತವು

---

# ಎರಡನೆಯ ಅಧ್ಯಾಯ-ಹದಿನೇಳನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ಶಕ್ವರೀಸಾಮದ ಉಪಾಸನೆ

(ಉಪನಿಷತ್ತು)

**ಪೃಥಿವೀ ಹಿಂಕಾರೋಽನ್ತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥೋ ದಿಶಃ ಪ್ರತಿಹಾರಃ ಸಮುದ್ರೋ ನಿಧನಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾಃ ॥ ೧ ॥**

೧. ಪೃಥಿವಿಯು ಹಿಂಕಾರವು ; ಅಂತರಿಕ್ಷವು ಪ್ರಸ್ತಾವವು ; ದ್ಯುಲೋಕವು ಉದ್ಗೀಥವು ; ದಿಕ್ಕುಗಳು ಪ್ರತಿಹಾರವು ; ಸಮುದ್ರವು ನಿಧನವು ; ಈ ಶಕ್ವರಿಯು ಲೋಕಗಳಲ್ಲಿ ಪ್ರೋತವಾಗಿದೆ.

## ಶಕ್ವರೀಸಾಮದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೫೯. ಪೃಥಿವೀ ಹಿಂಕಾರ ಇತ್ಯಾದಿ ಪೂರ್ವವತ್। ಶಕ್ವರ್ಯಃ ಇತಿ ನಿತ್ಯಂ ಬಹುವಚನಂ ರೇವತ್ಯ ಇವ। ಲೋಕೇಷು ಪ್ರೋತಾಃ ॥

(ಭಾಷ್ಯಾರ್ಥ)

ಪೃಥಿವಿಯು ಹಿಂಕಾರವು ಮುಂತಾದದ್ದು ಹಿಂದೆ (೨-೨-೧) ಹೇಳಿದಂತೆ (ತಿಳಿಯತಕ್ಕದ್ದು) ಶಕ್ವರ್ಯಃ ಎಂಬುದು (ಮುಂದಿನ ಖಂಡದಲ್ಲಿರುವ) ರೇವತ್ಯಃ ಎಂಬುದರಂತೆ ನಿತ್ಯಬಹುವಚನವು. (ಶಕ್ವರಿಯು) ಲೋಕಗಳಲ್ಲಿ ಪ್ರೋತ.

## ಶಕ್ವರೀಸಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾ ವೇದ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್**

**ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಲೋಕಾನ್ನ ನಿನ್ದೇತ್ ತದ್ವ್ರತಮ್ ॥ ೨ ॥**

೨. ಯಾವನು ಹೀಗೆ ಈ ಶಕ್ವರಿಯು ಲೋಕಗಳಲ್ಲಿ ಪ್ರೋತವಾಗಿದೆ ಎಂದು ಅರಿತುಕೊಂಡಿರುವನೋ ಅವನು ಲೋಕಿಯಾಗುವನು, ಆಯುಸ್ಸೆಲ್ಲವನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಬಾಳುವನು, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ಲೋಕಗಳನ್ನು ನಿಂದಿಸಬಾರದು, ಅದು ವ್ರತವು.

(ಭಾಷ್ಯ)

೧೬೦. ಲೋಕೀ ಭವತಿ। ಲೋಕಫಲೇನ ಯುಜ್ಯತ ಇತ್ಯರ್ಥಃ। ಲೋಕಾನ್ ನ ನಿನ್ದೇತ್। ತದ್ವ್ರತಮ್ ॥

(ಭಾಷ್ಯಾರ್ಥ)

ಲೋಕಿಯಾಗುವನು, ಲೋಕವೆಂಬ ಫಲದಿಂದ ಕೂಡಿಕೊಳ್ಳುವನು ಎಂದರ್ಥ. ಲೋಕಗಳನ್ನು ನಿಂದಿಸಬಾರದು, ಇದು (ಈ ಉಪಾಸಕನಿಗೆ) ವ್ರತವು

---

# ಎರಡನೆಯ ಅಧ್ಯಾಯ-ಹದಿನೆಂಟನೆಯ ಖಂಡ

(ಗಾಯತ್ರ್ಯಾದಿಸಾಮಗಳ ಉಪಾಸನೆಗಳು)

## ರೇವತೀಸಾಮದ ಉಪಾಸನೆ

(ಉಪನಿಷತ್ತು)

**ಅಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಮೇತಾ ರೇವತ್ಯಃ ಪಶುಷು ಪ್ರೋತಾಃ ॥ ೧ ॥**

೧. ಆಡುಗಳು ಹಿಂಕಾರವು ; ಕುರಿಗಳು ಪ್ರಸ್ತಾವವು ; ಗೋಗಳು ಉದ್ಗೀಥವು ; ಕುದುರೆಗಳು ಪ್ರತಿಹಾರವು ; ಮನುಷ್ಯನು ನಿಧನವು. ಈ ರೇವತಿಯು ಪಶುಗಳಲ್ಲಿ ಪ್ರೋತವು.

## ರೇವತೀಭಕ್ತಿಗಳ ವಿನಿಯೋಗ

(ಭಾಷ್ಯ)

೧೬೧. ಅಜಾ ಹಿಂಕಾರಃ ಇತ್ಯಾದಿ ಪೂರ್ವವತ್। ಪಶುಷು ಪ್ರೋತಾಃ ॥

(ಭಾಷ್ಯಾರ್ಥ)

ಆಡುಗಳು ಹಿಂಕಾರವು ಮುಂತಾದದ್ದು ಹಿಂದಿನ (೬ನೆಯ ಖಂಡದಂ)ತೆ. (ಈ ರೇವತೀಸಾಮವು) ಪಶುಗಳಲ್ಲಿ[1] ಪ್ರೋತ.

## ರೇವತ್ಯುಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತಾ ರೇವತ್ಯಃ ಪಶುಷು ಪ್ರೋತಾ ವೇದ ಪಶುಮಾನ್ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಪಶೂನ್ನ ನಿನ್ದೇತ್ತದ್ವ್ರತಮ್ ॥ ೨ ॥**

೨. ಯಾವನು ಹೀಗೆ ಈ ರೇವತಿಯು ಪಶುಗಳಲ್ಲಿ ಪ್ರೋತವೆಂದು ಅರಿತುಕೊಂಡಿರುವನೋ ಅವನು ಪಶುಗಳುಳ್ಳವನಾಗುವನು ; ಎಲ್ಲಾ ಆಯುಸ್ಸನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಜೀವಿಸಿರುವನು, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ಪಶುಗಳನ್ನು ನಿಂದಿಸಬಾರದು ; ಅದು ವ್ರತವು.

(ಭಾಷ್ಯ)

೧೬೨. ಪಶೂನ್ ನ ನಿನ್ದೇತ್। ತದ್ವ್ರತಮ್ ॥

(ಭಾಷ್ಯಾರ್ಥ)

ಪಶುಗಳನ್ನು ನಿಂದಿಸಬಾರದು. ಅದು (ಈ ಉಪಾಸಕನಿಗೆ) ವ್ರತವು.

---

1. 'ಪಶವೋ ವೈ ರೇವತೀಃ' ಎಂಬ ಶ್ರುತ್ಯಂತರವನ್ನು ಇಲ್ಲಿ ಟೀಕೆಯಲ್ಲಿ ಉದಾಹರಿಸಿದೆ. 'ರೇವತ್ಯಃ' ಎಂಬ ಪಾಠವು ತಾಂ. ಬ್ರಾ. ೧೩-೭-೩ರಲ್ಲಿದೆ.

# ಎರಡನೆಯ ಅಧ್ಯಾಯ
## -ಹತ್ತೊಂಬತ್ತನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ಯಜ್ಞಾಯಜ್ಞೀಯಸಾಮದ ಉಪಾಸನೆ

**ಲೋಮ ಹಿಂಕಾರಸ್ತ್ವಕ್ಪ್ರಸ್ತಾವೋ ಮಾಗ್ಂಸಮುದ್ಗೀಥೋಽಸ್ಥಿ ಪ್ರತಿಹಾರೋ ಮಜ್ಜಾ ನಿಧನಮೇತದ್ಯಜ್ಞಾಯಜ್ಞೀಯ ಮಂಗೇಷು ಪ್ರೋತಮ್ ॥ ೧ ॥**

೧. ಕೂದಲು ಹಿಂಕಾರವು, ಚರ್ಮವು ಪ್ರಸ್ತಾವವು, ಮಾಂಸವು ಉದ್ಗೀಥವು, ಮೂಳೆಯು ಪ್ರತಿಹಾರವು, ಮಜ್ಜೆಯು ನಿಧನವು. ಈ ಯಜ್ಞಾಯಜ್ಞೀಯವು ಅಂಗಗಳಲ್ಲಿ ಪ್ರೋತವಾಗಿದೆ.

### ಯಜ್ಞಾಯಜ್ಞೀಯದ ಭಕ್ತಿಗಳ ವಿನಿಯೋಗ

(ಭಾಷ್ಯ)

೧೬೩. ಲೋಮ ಹಿಂಕಾರಃ । ದೇಹಾವಯವಾನಾಂ ಪ್ರಾಥಮ್ಯಾತ್ । ತ್ವಕ್ ಪ್ರಸ್ತಾವಃ । ಆನನ್ತರ್ಯಾತ್ । ಮಾಂಸಮ್ ಉದ್ಗೀಥಃ । ಶ್ರೈಷ್ಠ್ಯಾತ್ । ಅಸ್ಥಿ ಪ್ರತಿಹಾರಃ । ಪ್ರತಿಹೃತತ್ವಾತ್ । ಮಜ್ಜಾ ನಿಧನಮ್ । ಆನ್ತ್ಯಾತ್ । ಏತದ್ ಯಜ್ಞಾಯಜ್ಞೀಯಂ ನಾಮ ಸಾಮ ದೇಹಾವಯವೇಷು ಪ್ರೋತಮ್ ॥

(ಭಾಷ್ಯಾರ್ಥ)

ಕೂದಲು ಹಿಂಕಾರವು, ಏಕೆಂದರೆ (ಅದು) ದೇಹದ ಅವಯವಗಳಲ್ಲಿ ಮೊದಲನೆಯದು. ಚರ್ಮವು ಪ್ರಸ್ತಾವವು, ಏಕೆಂದರೆ ಅದು (ಆ) ಬಳಿಕ (ಇರುತ್ತದೆ) ಮಾಂಸವು ಉದ್ಗೀಥವು, ಏಕೆಂದರೆ ಶ್ರೇಷ್ಠವಾಗಿರುತ್ತದೆ ಮೂಳೆಯು ಪ್ರತಿಹಾರವು, ಏಕೆಂದರೆ ಪ್ರತಿಹೃತವಾಗಿರುತ್ತದೆ[1] ಮಜ್ಜೆಯು ನಿಧನವು, ಏಕೆಂದರೆ (ಇದು) ಕೊನೆಯಲ್ಲಿದೆ.

ಈ ಯಜ್ಞಾಯಜ್ಞೀಯವೆಂಬ ಸಾಮವು ದೇಹದ ಅವಯವಗಳಲ್ಲಿ ಪ್ರೋತವು.

---

1. ಒಳಕ್ಕೆ ಸರಿದುಕೊಂಡಿದೆ ಎಂದರ್ಥವೆ ? ಟೀಕೆಯಲ್ಲಿ ಏನೂ ಹೇಳಿಲ್ಲ.

# ಯಜ್ಞಾಯಜ್ಞೀಯೋಪಾಸನೆಯ ಫಲ

(ಉಪನಿಷತ್ತು)

**ಸ ಯ ಏವಮೇತದ್ಯಜ್ಞಾಯಜ್ಞೀಯಮಙ್ಗೇಷು ಪ್ರೋತಂ ವೇದಾಙ್ಗೀ ಭವತಿ ನಾಙ್ಗೇನ ವಿಹೂರ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಸಂವತ್ಸರಂ ಮಜ್ಞೋ ನಾಶ್ನೀಯಾತ್ ತದ್ವ್ರತಂ ಮಜ್ಞೋ ನಾಶ್ನೀಯಾದಿತಿ ವಾ ॥ ೨ ॥**

೨. ಯಾವನು ಹೀಗೆ ಈ ಯಜ್ಞಾಯಜ್ಞೀಯವು ಅಂಗಗಳಲ್ಲಿ ಪ್ರೋತವಾಗಿರುವದೆಂದು ಅರಿತುಕೊಂಡಿರುವನೋ ಅವನು ಅಂಗಿಯಾಗುವನು ; ಅಂಗದಲ್ಲಿ ಕೊರತೆಯುಳ್ಳವನಾಗುವದಿಲ್ಲ. ಆಯುಸ್ಸನ್ನೆಲ್ಲ ಪಡೆದುಕೊಳ್ಳುವನು, ಚೆನ್ನಾಗಿ ಬಾಳುವನು. ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ವರ್ಷದವರೆಗೆ ಮಜ್ಜೆಗಳನ್ನು ತಿನ್ನಬಾರದು, ಅಥವಾ ಮಜ್ಜೆಗಳನ್ನು ತಿನ್ನಲೇಬಾರದು.

(ಭಾಷ್ಯ)

೧೬೪ ಅಙ್ಗೀ ಭವತಿ ಸಮಗ್ರಾಙ್ಗೋ ಭವತಿ ಇತ್ಯರ್ಥಃ । ನಾಙ್ಗೇನ ಹಸ್ತಪಾದಾದಿನಾ ವಿಹೂರ್ಛತಿ ನ ಕುಟಿಲೀ ಭವತಿ ಪಙ್ಗುಃ ಕುಣೀ (?) ವಾ ಇತ್ಯರ್ಥಃ । ಸಂವತ್ಸರಂ ಸಂವತ್ಸರಮಾತ್ರಂ ಮಜ್ಞೋ ಮಾಂಸಾನಿ ನಾಶ್ನೀಯಾತ್ ನ ಭಕ್ಷಯೇತ್ । ಬಹುವಚನಂ ಮತ್ಸ್ಯೋಪಲಕ್ಷಣಾರ್ಥಮ್ ಮಜ್ಞೋ ನಾಶ್ನೀಯಾತ್ ಸರ್ವದೈವ ನಾಶ್ನೀಯಾತ್ ಇತಿ ವಾ । ತದ್ ವ್ರತಮ್ ॥

(ಭಾಷ್ಯಾರ್ಥ)

ಅಂಗಿಯಾಗಿರುತ್ತಾನೆ, ಎಂದರೆ ಸಮಗ್ರವಾದ ಅಂಗಗಳುಳ್ಳವನಾಗಿರುತ್ತಾನೆ ಎಂದರ್ಥ. ಕೈಕಾಲು– ಮುಂತಾದ ಅಂಗಗಳ ಕೊರತೆಯುಳ್ಳವನಾಗಿರುವದಿಲ್ಲ, ವಕ್ರನಾಗಿರುವದಿಲ್ಲ , ಹೆಳವನಾಗಲಿ ಮೋಟನಾಗಲಿ[1] ಆಗಿರುವದಿಲ್ಲ ಎಂದರ್ಥ.

---

1. ಭಾಷ್ಯದಲ್ಲಿ 'ಕುಣೀ' ಎಂದಿದೆ ; ಆದರೆ ಕುಣಿ, ಕೂಣಿ ಎಂಬ ಎರಡು ಶಬ್ದಗಳು ಮಾತ್ರ ಸಂಸ್ಕೃತದಲ್ಲಿ ಮೋಟುಗೈಯನಿಗೆ ಇವೆ. ಭಾಷ್ಯದಲ್ಲಿರುವ ರೂಪವೂ ಇದೆಯೆ, ಅಥವಾ ಲೇಖಕಪ್ರಮಾದವೆ ? – ಎಂಬುದು ವಿಚಾರಣೀಯ. ಟೀಕೆಯಲ್ಲಿ ಇದಕ್ಕೆ ಶ್ಮಶ್ರುರಹಿತಃ ಎಂಬರ್ಥವಿದೆ !

ವರ್ಷದವರೆಗೆ (ಮಜ್ಞಃ=ಮಾಂಸಾನಿ) ಮಜ್ಜೆಗಳನ್ನು ಎಂದರೆ ಮಾಂಸಗಳನ್ನು[1] ತಿನ್ನಬಾರದು, ಭಕ್ಷಿಸಬಾರದು. (ಇಲ್ಲಿ ಮಜ್ಞಃ=ಎಂದು) ಬಹುವಚನವು ಮತ್ಸ್ಯವನ್ನು (ತಿನ್ನಬಾರದು ಎಂದು) ಉಪಲಕ್ಷಣಕ್ಕಾಗಿ (ಬಂದಿದೆ). ಅಥವಾ ಯಾವಾಗಲೂ ಮಾಂಸಗಳನ್ನು ತಿನ್ನಲೇಬಾರದು ಎಂದಾದರೂ (ಹೇಳಬಹುದು). ಇದು (ಉಪಾಸಕನಿಗೆ) ವ್ರತವು.

---

# ಎರಡನೆಯ ಅಧ್ಯಾಯ–ಇಪ್ಪತ್ತನೆಯ ಖಂಡ

(ಗಾಯತ್ರಾದಿಸಾಮಗಳ ಉಪಾಸನೆಗಳು)

## ರಾಜನಸಾಮದ ಉಪಾಸನೆ

(ಉಪನಿಷತ್ತು)

**ಅಗ್ನಿರ್ಹಿಂಕಾರೋ ವಾಯುಃ ಪ್ರಸ್ತಾವ ಆದಿತ್ಯ ಉದ್ಗೀಥೋ ನಕ್ಷತ್ರಾಣಿ ಪ್ರತಿಹಾರಶ್ಚನ್ದ್ರಮಾ ನಿಧನಮೇತದ್ರಾಜನಂ ದೇವತಾಸು ಪ್ರೋತಮ್ ॥ ೧ ॥**

೧. ಅಗ್ನಿಯು ಹಿಂಕಾರವು ; ವಾಯು ಪ್ರಸ್ತಾವವು ; ಆದಿತ್ಯನು ಉದ್ಗೀಥವು ; ನಕ್ಷತ್ರಗಳು ಪ್ರತಿಹಾರವು ; ಚಂದ್ರನು ನಿಧನವು. ಈ ರಾಜನವು ದೇವತೆಗಳಲ್ಲಿ ಪ್ರೋತವು.

## ರಾಜನಭಕ್ತಿಗಳ ವಿನಿಯೋಗ

(ಭಾಷ್ಯ)

೧೬೫. ಅಗ್ನಿರ್ಹಿಂಕಾರಃ। ಪ್ರಥಮಸ್ಥಾನತ್ವಾತ್। ವಾಯುಃ ಪ್ರಸ್ತಾವಃ। ಆನನ್ತರ್ಯಸಾಮಾನ್ಯಾತ್। ಆದಿತ್ಯ ಉದ್ಗೀಥಃ। ಶ್ರೈಷ್ಠ್ಯಾತ್। ನಕ್ಷತ್ರಾಣಿ ಪ್ರತಿಹಾರಃ। ಪ್ರತಿಹೃತತ್ವಾತ್। ಚನ್ದ್ರಮಾ ನಿಧನಮ್। ಕರ್ಮಿಣಾಂ ತನ್ನಿಧನಾತ್। ಏತದ್ ರಾಜನಂ ದೇವತಾಸು ಪ್ರೋತಮ್। ದೇವತಾನಾಂ ದೀಪ್ತಿಮತ್ತ್ವಾತ್ ॥

---

1. ಮಜ್ಜನ್‌ಶಬ್ದಕ್ಕೆ ದ್ವಿತೀಯಾ ಬಹುವಚನವು 'ಮಜ್ಞಃ' ಎಂದಾಗುತ್ತದೆ. ಮಜ್ಜೆ ಎಂಬಿದೇ ಈ ಶಬ್ದದ ಅರ್ಥವಿರುವಲ್ಲಿ ಮಾಂಸಗಳು ಎಂದು ಭಾಷ್ಯದಲ್ಲಿ ಏತಕ್ಕೆ ಅರ್ಥವನ್ನು ಕೊಟ್ಟಿದೆ ಎಂಬುದು ತಿಳಿಯಲಿಲ್ಲ.

(ಭಾಷ್ಯಾರ್ಥ)

ಅಗ್ನಿಯು ಹಿಂಕಾರವು, ಏಕೆಂದರೆ (ಅವನು) ಮೊದಲನೆಯ ಸ್ಥಾನದವನು.[1] ವಾಯುವು ಪ್ರಸ್ತಾವವು, ಏಕೆಂದರೆ ಆನಂತರ್ಯವು (ಎರಡಕ್ಕೂ) ಹೋಲಿಕೆ. ಆದಿತ್ಯನು ಉದ್ಗೀಥವು, ಏಕೆಂದರೆ ಶ್ರೇಷ್ಠನಾಗಿರುತ್ತಾನೆ. ನಕ್ಷತ್ರಗಳು ಪ್ರತಿಹಾರವು, ಏಕೆಂದರೆ ಪ್ರತಿಹೃತವಾಗಿವೆ[2]. ಚಂದ್ರನು ನಿಧನವು, ಏಕೆಂದರೆ ಕರ್ಮಿಗಳು ಅವನಲ್ಲಿಯೇ ನಿಲ್ಲುತ್ತಾರೆ

ಈ ರಾಜನ(ಸಾಮವು) ದೇವತೆಗಳಲ್ಲಿ ಪ್ರೋತವು, ಏಕೆಂದರೆ ದೇವತೆಗಳು ಪ್ರಕಾಶಯುಕ್ತರಾಗಿರುತ್ತಾರೆ[3].

## ರಾಜನಸಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತದ್ರಾಜನಂ ದೇವತಾಸು ಪ್ರೋತಂ ವೇದೈತಾಸಾಮೇವ ದೇವತಾನಾಗ್ಂ ಸಲೋಕತಾಗ್ಂ ಸಾರ್ಷ್ಟಿತಾಗ್ಂ ಸಾಯುಜ್ಯಂ ಗಚ್ಛತಿ ಸರ್ವಮಾಯುರೇತಿ ಜ್ಯೋಗ್ ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಬ್ರಾಹ್ಮಣಾನ್ನ ನಿನ್ದೇತ್ತದ್ವ್ರತಮ್ ॥ ೨ ॥**

೨. ಯಾವನು ಹೀಗೆ ಈ ರಾಜನವು ದೇವತೆಗಳಲ್ಲಿ ಪ್ರೋತವೆಂದು ಅರಿತುಕೊಂಡಿರುವನೋ ಅವನು ಇದೇ ದೇವತೆಗಳ ಸಲೋಕತೆಯನ್ನು, ಸಾರ್ಷ್ಟಿತ್ವವನ್ನು (ಅಥವಾ) ಸಾಯುಜ್ಯವನ್ನು ಪಡೆದುಕೊಳ್ಳುವನು ; ಎಲ್ಲಾ ಆಯುಸ್ಸನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಜೀವಿಸುವನು, ಪ್ರಜೆಯಿಂದಲೂ ಪಶುಗಳಿಂದಲೂ ದೊಡ್ಡವನಾಗಿರುವನು, ಕೀರ್ತಿಯಿಂದಲೂ ದೊಡ್ಡವನಾಗಿರುವನು. ಬ್ರಾಹ್ಮಣರನ್ನು ನಿಂದಿಸಬಾರದು ; ಅದು ವ್ರತವು.

## ರಾಜನೋಪಾಸನೆಗೆ ಫಲ

(ಭಾಷ್ಯ)

೧೬೬. ವಿದ್ವತ್ಫಲಮಾಹ। ಏತಾಸಾಮೇವ ಅಗ್ನ್ಯಾದೀನಾಂ ದೇವತಾನಾಂ ಸಲೋಕತಾಂ ಸಮಾನಲೋಕತಾಂ ಸಾರ್ಷ್ಟಿತಾಂ ಸಮಾನರ್ದ್ಧಿತ್ವಂ

1. ದೇವತೆಗಳಲ್ಲಿ ಅಗ್ನಿಯು ಮೊದಲಿನವನು, ವಿಷ್ಣುವು ಕೊನೆಯವನು– ಎಂದು ಬ್ರಾಹ್ಮಣವಾದ.

2. ಅವೆಲ್ಲವೂ ಆಕಾಶದಲ್ಲಿ ಒಟ್ಟಾಗಿ ಕಾಣಿಸುತ್ತವೆ.

3. ರಾಜನ ಎಂಬ ಶಬ್ದಕ್ಕೆ ಪ್ರಕಾಶವೆಂದೇ ಅರ್ಥ.

ಸಾಯುಜ್ಯಂ ಸಯುಗ್ಭಾವಮ್ ಏಕದೇಹದೇಹಿತ್ವಮ್ ಇತ್ಯೇತತ್ । ವಾ ಶಬ್ದೋಽತ್ರ ಲುಪ್ತೋ ದ್ರಷ್ಟವ್ಯಃ । ಸಲೋಕತಾಂ ವಾ ಇತ್ಯಾದಿ । ಭಾವನಾ ವಿಶೇಷತಃ ಫಲವಿಶೇಷೋಪಪತ್ತೇಃ । ಗಚ್ಛತಿ ಪ್ರಾಪ್ನೋತಿ । ಸಮುಚ್ಚಯಾನು ಪಪತ್ತೇಶ್ಚ । ಬ್ರಾಹ್ಮಣಾನ್ ನ ನಿಂದೇತ್ ತದ್ ವ್ರತಮ್ । "ಏತೇ ವೈ ದೇವಾಃ ಪ್ರತ್ಯಕ್ಷಂ ಯದ್ ಬ್ರಾಹ್ಮಣಾಃ" ( ? ) ಇತಿ ಶ್ರುತೇಃ ಬ್ರಾಹ್ಮಣನಿಂದಾ ದೇವತಾನಿಂದೈವ ಇತಿ ॥

(ಭಾಷ್ಯಾರ್ಥ)

(ಹೀಗೆಂದು) ಉಪಾಸನೆಮಾಡಿದವನಿಗೆ ಫಲವನ್ನು (ಶ್ರುತಿ) ಹೇಳುತ್ತದೆ. ಇದೇ ಅಗ್ನ್ಯಾದಿದೇವತೆಗಳ ಸಲೋಕತೆಯನ್ನು, ಎಂದರೆ ಸಮಾನವಾದ (ಒಂದೇ ಆಗಿರುವ) ಲೋಕವನ್ನು , ಸಾರ್ಷ್ಟಿತ್ವವನ್ನು ಎಂದರೆ ಸಮಾನವಾದ ಸಮೃದ್ಧಿ ಯನ್ನು , ಸಾಯುಜ್ಯವನ್ನು ಎಂದರೆ ಸೇರಿಕೊಂಡಿರುವಿಕೆಯನ್ನು, ಒಂದೇ ದೇಹಕ್ಕ (ಇಬ್ಬರೂ) ದೇಹಿಯಾಗಿರುವದನ್ನು ಎಂದರ್ಥ. ಇಲ್ಲಿ 'ಸಲೋಕತೆಯನ್ನಾಗಲಿ' ಎಂದು ಮುಂತಾಗಿ 'ವಾ' (ಆಗಲಿ) ಎಂಬ ಶಬ್ದವು ಲುಪ್ತವಾಗಿದೆಯೆಂದು ಇಟ್ಟು ಕೊಳ್ಳಬೇಕು. ಏಕೆಂದರೆ ಬೇರೆಬೇರೆಯ ಭಾವನೆಯಿಂದ (ಈ) ಬೇರೆಬೇರೆಯ ಫಲ ಗಳು ಉಂಟಾಗಬಹುದಾಗಿರುತ್ತದೆ. (ಆದ್ದರಿಂದ ಸಾಲೋಕ್ಯವನ್ನೋ ಸಾರ್ಷ್ಟಿ ತ್ವವನ್ನೋ ಸಾಯುಜ್ಯವನ್ನೋ) ಪಡೆದುಕೊಳ್ಳುವನು, ಹೊಂದುವನು (ಎಂದರ್ಥ). (ಈ ಎಲ್ಲಾ ಫಲಗಳೂ ಒಬ್ಬನಲ್ಲಿಯೇ) ನೇರಿರುವದು ಆಗಲಾರದಾದ್ದರಿಂದಲೂ[1] (ಹೀಗೆ ಅಧ್ಯಾಹಾರಮಾಡಿಕೊಳ್ಳಬೇಕು).

'(ಈ) ಬ್ರಾಹ್ಮಣರಿದಾರಲ್ಲ, ಇವರೇ ಪ್ರತ್ಯಕ್ಷದೇವರುಗಳು' ( ? ) ಎಂದು ಶ್ರುತಿಯಿರುವದರಿಂದ ಬ್ರಾಹ್ಮಣನಿಂದೆಯು ದೇವತೆನಿಂದೆಯೇ ಆಗಿರುವದರಿಂದ , ಬ್ರಾಹ್ಮಣರನ್ನು ನಿಂದೆಮಾಡಬಾರದು , ಇದು (ರಾಜನೋ ಪಾಸನೆಗೆ) ವ್ರತವು.

---

1. ಒಬ್ಬನೇ ಸಾಲೋಕ್ಯವನ್ನೂ ಸಾರ್ಷ್ಟಿತ್ವವನ್ನೂ ಸಾಯುಜ್ಯವನ್ನೂ ಏಕಕಾಲಕ್ಕೆ ಪಡೆ ದಿರುತ್ತಾನೆಂಬುದು ಅಸಾಧ್ಯ ಆದರೆ ಅವರವರ ಭಾವನೆಗೆ ತಕ್ಕಂತೆ ಅವರವರಿಗೆ ಸಾಲೋಕ್ಯಾದಿಗಳು ಆಗುವವೆಂದು ಫಲವಿಕಲ್ಪವನ್ನು ಒಪ್ಪಿದರೆ ಯಾವ ದೋಷವೂ ಇರುವದಿಲ್ಲ.

# ಎರಡನೆಯ ಅಧ್ಯಾಯ-

## ಇಪ್ಪತ್ತೊಂದನೆಯ ಖಂಡ

(ಸಾಮಸಮುದಾಯದ ಉಪಾಸನೆ)

## ಸಾಮಸಾಮಾನ್ಯದ ಉಪಾಸನೆ

(ಉಪನಿಷತ್ತು)

**ತ್ರಯೀವಿದ್ಯಾ ಹಿಂಕಾರಸ್ತ್ರಯ ಇಮೇ ಲೋಕಾಃ ಸ ಪ್ರಸ್ತಾವೋಽ ಗ್ನಿರ್ವಾಯುರಾದಿತ್ಯಃ ಸ ಉದ್ಗೀಥೋ ನಕ್ಷತ್ರಾಣಿ ವಯಾಗ್ಂಸಿ ಮರೀಚಯಃ ಸ ಪ್ರತಿಹಾರಃ ಸರ್ಪಾ ಗನ್ಧರ್ವಾ ಪಿತರಸ್ತನ್ನಿಧನ ಮೇತತ್ ಸಾಮ ಸರ್ವಸ್ಮಿನ್ ಪ್ರೋತಮ್ ‖ ೧ ‖**

೧. ತ್ರಯೀವಿದ್ಯೆಯು ಹಿಂಕಾರವು ; ಈ ಮೂರು ಲೋಕಗಳಿವೆಯಲ್ಲ, ಅದು ಪ್ರಸ್ತಾವವು ; ಅಗ್ನಿ. ವಾಯು, ಆದಿತ್ಯ (ಎಂಬ ದೇವತೆಗಳಿದಾರಲ್ಲ), ಅದೇ ಉದ್ಗೀಥವು , ನಕ್ಷತ್ರಗಳು, ಪಕ್ಷಿಗಳು, ಕಿರಣಗಳು (ಇವೆಯಲ್ಲ), ಅದು ಪ್ರತಿಹಾರವು ; ಸರ್ಪಗಳು, ಗಂಧರ್ವರು, ಪಿತೃಗಳು (ಇರುವರಲ್ಲ), ಅದು ನಿಧನವು. ಈ ಸಾಮವು ಎಲ್ಲದರಲ್ಲಿಯೂ ಪ್ರೋತವಾಗಿದೆ.

### ಸಾಮಸಾಮಾನ್ಯದ ಹಿಂಕಾರಾದಿಗಳಲ್ಲಿ ತ್ರಯೀವಿದ್ಯಾದಿದೃಷ್ಟಿ

(ಭಾಷ್ಯ)

೧೬೭ ತ್ರಯೀ ವಿದ್ಯಾ ಹಿಂಕಾರಃ। ಅಗ್ನ್ಯಾದಿಸಾಮ್ನಃ ಆನನ್ತರ್ಯಂ ತ್ರಯೀವಿದ್ಯಾಯಾಃ ಅಗ್ನ್ಯಾದಿಕಾರ್ಯತ್ವಶ್ರುತೇಃ। ಹಿಂಕಾರಃ ಪ್ರಾಥಮ್ಯಾತ್ ಸರ್ವಕರ್ತವ್ಯಾನಾಮ್। ತ್ರಯ ಇಮೇ ಲೋಕಾಃ ತತ್ಕಾರ್ಯತ್ವಾತ್ ಅನನ್ತರಾ ಇತಿ ಪ್ರಸ್ತಾವಃ। ಅಗ್ನ್ಯಾದೀನಾಮ್ ಉದ್ಗೀಥತ್ವಂ ಶ್ರೈಷ್ಠ್ಯಾತ್। ನಕ್ಷತ್ರಾದೀನಾಂ ಪ್ರತಿಹೃತತ್ವಾತ್ ಪ್ರತಿಹಾರತ್ವಮ್। ಸರ್ಪಾದೀನಾಂ ಧಕಾರಸಾಮಾನ್ಯಾತ್ ನಿಧನತ್ವಮ್। ಏತತ್ ಸಾಮ ನಾಮವಿಶೇಷಾಭಾವಾತ್ ಸಾಮಸಮುದಾಯಃ ಸಾಮಶಬ್ದಃ ಸರ್ವಸ್ಮಿನ್ ಪ್ರೋತಮ್। ತ್ರಯೀವಿದ್ಯಾದಿ ಹಿ ಸರ್ವಮ್। ತ್ರಯೀವಿದ್ಯಾದಿದೃಷ್ಟ್ಯಾ ಹಿಂಕಾರಾದಿಸಾಮಭಕ್ತಯ ಉಪಾಸ್ಯಾಃ। ಅತೀತೇಷ್ವಪಿ

ಸಾಮೋಪಾಸನೇಷು ಯೇಷು ಯೇಷು ಪ್ರೋತಂ ಯದ್ಯತ್ ಸಾಮ ತದ್ದೃಷ್ಟ್ಯಾ ತದುಪಾಸ್ಯಮ್ ಇತಿ। ಕರ್ಮಾಙ್ಗಾನಾಮ್ ದೃಷ್ಟಿವಿಶೇಷೇಣ ಆಜ್ಯಸ್ಯೇವ ಸಂಸ್ಕಾರ್ಯತ್ವಾತ್ ॥

(ಭಾಷ್ಯಾರ್ಥ)

'ತ್ರಯೀವಿದ್ಯೆಯೇ ಹಿಂಕಾರವು'. ಅಗ್ನ್ಯಾದಿ(ದೃಷ್ಟಿಯ) ಸಾಮವಾದ ಬಳಿಕ ತ್ರಯೀವಿದ್ಯೆಯು ಅಗ್ನ್ಯಾದಿಗಳ ಕಾರ್ಯವೆಂದು ಶ್ರುತಿಯಿರುವದರಿಂದ,[1] (ತ್ರಯೀವಿದ್ಯೆಯು) ಹಿಂಕಾರವು, ಏಕೆಂದರೆ ಎಲ್ಲಾ ಕರ್ಮಗಳಿಗೂ ಅದೇ ಮೊದಲನೆಯದು, ಈ ಮೂರು ಲೋಕಗಳು (ವಿದ್ಯೆಯ) ಕಾರ್ಯವಾಗಿರುವದರಿಂದ[2] ಆಮೇಲೆ (ಆಗಿರುವ)ನಾದ್ದರಿಂದ ಪ್ರಸ್ತಾವವು. ಅಗ್ನಿಯೇ ಮುಂತಾದವರು ಶ್ರೇಷ್ಠರಾಗಿರುವದರಿಂದ ಉದ್ಗೀಥವು ನಕ್ಷತ್ರಾದಿಗಳು ಪ್ರತಿಹೃತವಾಗಿರುವದರಿಂದ[3] ಪ್ರತಿಹಾರವು. ಸರ್ಪಾದಿಗಳಲ್ಲಿ ಧಕಾರಸಾಮಾನ್ಯವಿರುವದರಿಂದ (ಅವು) ನಿಧನವು.

ಈ ಸಾಮವು, ಗೊತ್ತಾದ ಹೆಸರಿಲ್ಲದ್ದರಿಂದ ಸಾಮಶಬ್ದವಾಚ್ಯವಾದ ಸಾಮಸಮುದಾಯವು, ಎಲ್ಲದರಲ್ಲಿಯೂ ಪ್ರೋತವಾಗಿದೆ. ತ್ರಯೀವಿದ್ಯೆಯೇ ಮುಂತಾದದ್ದೇ ಅಲ್ಲವೆ, ಸರ್ವವು[4] ?

ತ್ರಯೀವಿದ್ಯೆಯೇ ಮುಂತಾದ ದೃಷ್ಟಿಯಿಂದ ಹಿಂಕಾರವೇ ಮುಂತಾದ ಸಾಮಭಕ್ತಿಗಳನ್ನು ಉಪಾಸನೆಮಾಡಬೇಕು ಹಿಂದಿನ ಸಾಮೋಪಾಸನೆಗಳಲ್ಲಿಯೂ ಯಾವಯಾವ ಸಾಮವು ಯಾವಯಾವ (ವಸ್ತು)ಗಳಲ್ಲಿ ಪ್ರೋತವಾಗಿದೆಯೋ ಆಯಾ ದೃಷ್ಟಿಯಿಂದ ಅದನ್ನು ಉಪಾಸನೆಮಾಡಬೇಕು. ಏಕೆಂದರೆ ಆಜ್ಯವನ್ನು

---

1. ಅಗ್ನಿಯಿಂದ ಋಗ್ವೇದವೂ ವಾಯುವಿನಿಂದ ಯಜುರ್ವೇದವೂ ಆದಿತ್ಯನಿಂದ ಸಾಮವೇದವೂ ಉಂಟಾದವೆಂದು (ಐ. ಬ್ರಾ. ೨೫-೬) ಶ್ರುತಿಯಿವೆ ; ಮುಂದೆ ೪-೧೭-೨ ರಲ್ಲಿಯೂ ಹೀಗೆಂದಿವೆ.

2. ತ್ರಯೀವಿದ್ಯೆಯ ಬಲದಿಂದ ಮಾಡುವ ಕರ್ಮದಿಂದಲೇ ಪಡೆದುಕೊಳ್ಳತಕ್ಕವಾಗಿರುವದರಿಂದ.

3. ಒಟ್ಟಾಗಿರುವದರಿಂದ.

4. ಕರ್ಮಸಾಮಾನ್ಯವೂ ಅದಕ್ಕೆ ಬೇಕಾದ ಜ್ಞಾನವೂ ಅದರ ಫಲವೂ ಸರ್ವಶಬ್ದವಾಚ್ಯವಾಗಿದೆಯಾದರೂ ಇಲ್ಲಿ ವೈದಿಕಕರ್ಮಾದಿಗಳನ್ನು ಮಾತ್ರ ಸರ್ವವೆಂದಿದೆ. ಏಕೆಂದರೆ ಶಾಸ್ತ್ರವು ಪುಣ್ಯಕರ್ಮದಲ್ಲಿ ಮಾತ್ರವೇ ಆದರವುಳ್ಳದ್ದಾಗಿರುತ್ತದೆ. ಆದ್ದರಿಂದ ಸಾಮವನ್ನು ಈ ಸರ್ವದೃಷ್ಟಿಯಿಂದ ಉಪಾಸನೆಮಾಡಬೇಕು ಎಂದು ಅಭಿಪ್ರಾಯ.

(ಹೇಗೆ) ದೃಷ್ಟಿವಿಶೇಷದಿಂದ (ಸಂಸ್ಕಾರಮಾಡಿಕೊಳ್ಳಬೇಕಾಗಿರುವದೋ) ಹಾಗೆ ಕರ್ಮಾಂಗಗಳನ್ನು (ಈ ದೃಷ್ಟಿಗಳಿಂದ) ಸಂಸ್ಕಾರಮಾಡಿಕೊಳ್ಳಬೇಕಾಗಿದೆ[1].

## ಸರ್ವಸಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏವಮೇತತ್ ಸಾಮ ಸರ್ವಸ್ಮಿನ್ ಪ್ರೋತಂ ವೇದ ಸರ್ವಗ್‌ಂ ಹ ಭವತಿ ॥ ೨ ॥**

೨. ಯಾವನು ಈ ಸಾಮವು ಸರ್ವದಲ್ಲಿ ಪ್ರೋತವೆಂದು ಅರಿತುಕೊಂಡಿರುವನೋ ಅವನು ಸರ್ವವೂ ಆಗುತ್ತಾನೆ.

## ಸರ್ವಸಾಮೋಪಾಸನೆಯಿಂದ ಸರ್ವೈಶ್ವರ್ಯ

(ಭಾಷ್ಯ)

೧೬೮. ಸರ್ವವಿಷಯಸಾಮವಿದಃ ಫಲಮ್ । ಸರ್ವಂ ಹ ಭವತಿ ಸರ್ವೇಶ್ವರೋ ಭವತಿ ಇತ್ಯರ್ಥಃ । ನಿರುಪಚರಿತಸರ್ವಭಾವೇ ಹಿ ದಿಕ್ಸ್ಥೇಭ್ಯೋ ಬಲಿಪ್ರಾಪ್ತ್ಯನುಪಪತ್ತಿಃ ॥

(ಭಾಷ್ಯಾರ್ಥ)

ಸರ್ವವಿಷಯಸಾಮವನ್ನು ಅರಿತುಕೊಂಡಿರುವವನಿಗೆ ಫಲವನ್ನು (ಶ್ರುತಿ) ಹೇಳುತ್ತದೆ. 'ಸರ್ವವೂ ಆಗುತ್ತಾನೆ' ಎಂದರೆ ಸರ್ವೇಶ್ವರನಾಗುತ್ತಾನೆ ಎಂದರ್ಥ. **ನಿರುಪಚರಿತವಾಗಿ (ಮುಖ್ಯಾರ್ಥದಲ್ಲಿಯೇ) ಸರ್ವಭಾವವನ್ನು (ಪಡೆಯುತ್ತಾನೆ) ಎಂದಾದರೆ (೪ನೆಯ ಕಂಡಿಕೆಯಲ್ಲಿ ಹೇಳಿರುವಂತೆ) ದಿಕ್ಕುಗಳಲ್ಲಿರುವದರಿಂದ ಬಲಿಪ್ರಾಪ್ತಿಯಾಗುವದೆಂಬುದು ಹೊಂದಲಾರದಷ್ಟೆ ?**[2]

---

1. ಆಜ್ಯವನ್ನು ಪತ್ನಿಯು ನೋಡುವದರಿಂದ ಅದಕ್ಕೆ ಸಂಸ್ಕಾರವಾಗುತ್ತದೆ ಎಂದು ಶ್ರುತಿಯಲ್ಲಿದೆ. ಇದರಂತೆ ಇಲ್ಲಿಯೂ ಸಾಮಗಳೂ ಸಾಮವಿಶೇಷಗಳೂ ಸಾಮಾವಯವಗಳೂ ಕರ್ಮಾಂಗವಾಗಿರುವದರಿಂದ ಆಯಾ ದೃಷ್ಟಿರೂಪವಾದ ಉಪಾಸನೆಯಿಂದ ಅವು ಸಂಸ್ಕೃತವಾಗುತ್ತವೆ. ಇದರಿಂದ ಆಯಾ ಕರ್ಮವು ಸಮೃದ್ಧವಾಗುತ್ತದೆ, ಪಂಚವಿಧಸಾಮವೇ ಮುಂತಾದ ಉಪಾಸನೆಗಳು ಸ್ವತಂತ್ರವಾಗಿಯೇ ಫಲವನ್ನು ಕೊಡತಕ್ಕವಾದರೂ ಆಯಾ ಕರ್ಮಕ್ಕೆ ಅಧಿಕಾರಿಗಳಾದವರೇ ಅವಕ್ಕೂ ಅಧಿಕಾರಿಗಳಾದ್ದರಿಂದ ಅಲ್ಲಿಯೂ ಆಯಾ ಕರ್ಮದ ಅಪೂರ್ವಕ್ಕೆ ಬೇಕಾದ ಅಂಗವಾಗಿರುವದರಿಂದಲೇ ಫಲವುಂಟಾಗತ್ತದೆ-ಎಂದರ್ಥ. ಸೂ. ಭಾ. ೪-೧-೬ ಭಾ. ಭಾ. ೫೧೭.

2. ನಿಜವಾದ ಸರ್ವಭಾವವೇ ಆದರೆ ದಿಕ್ಕುಗಳಲ್ಲಿರುವವರೂ ತಾನೇ ಆಗುತ್ತಾನಾದ್ದರಿಂದ ಅವರಿಂದ ಬಲಿಯನ್ನು ಕೊಳ್ಳುವದೂ ಆಗಲಾರದು.

(ಉಪನಿಷತ್ತು)

**ತದೇಷ ಶ್ಲೋಕೋ ಯಾನಿ ಪಞ್ಚಧಾ ತ್ರೀಣಿ ತ್ರೀಣಿ ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ ॥ ೩ ॥**

೩. ಇಲ್ಲಿ ಈ ಶ್ಲೋಕವಿರುತ್ತದೆ. ಪಂಚವಿಧವಾಗಿರುವ ಮೂರುಮೂರು ಇವೆಯಲ್ಲ, ಅವಕ್ಕಿಂತ ಹೆಚ್ಚಿನದು ಮತ್ತೊಂದಿಲ್ಲ.

## ತ್ರಯೀವಿದ್ಯಾದಿಗಳಲ್ಲಿ ಎಲ್ಲವೂ ಅಡಕ

(ಭಾಷ್ಯ)

೧೬೯ ತತ್ ಏತಸ್ಮಿನ್ ಅರ್ಥೇ ಏಷ ಶ್ಲೋಕಃ ಮನ್ತ್ರೋಽಪಿ ಅಸ್ತಿ। ಯಾನಿ ಪಞ್ಚಧಾ ಪಞ್ಚಪ್ರಕಾರೇಣ ಹಿಂಕಾರಾದಿ ವಿಭಾಗೈಃ ಪ್ರೋಕ್ತಾನಿ ತ್ರೀಣಿ ತ್ರೀಣಿ ತ್ರಯೀವಿದ್ಯಾದೀನಿ ತೇಭ್ಯಃ ಪಞ್ಚತ್ರಿಕೇಭ್ಯಃ ಜ್ಯಾಯಃ ಮಹತ್ತರಂ ಪರಂ ಚ ವ್ಯತಿರಿಕ್ತಮ್ ಅನ್ಯತ್ ವಸ್ತ್ವನ್ತರಂ ನಾಸ್ತಿ ನ ವಿದ್ಯತೇ ಇತ್ಯರ್ಥಃ। ತತ್ರೈವ ಹಿ ಸರ್ವಸ್ಯ ಅನ್ತರ್ಭಾವಃ ॥

(ಭಾಷ್ಯಾರ್ಥ)

ಆ ಈ ಅರ್ಥದಲ್ಲಿ ಈ ಶ್ಲೋಕವು ಎಂದರೆ ಮಂತ್ರವೂ ಇರುತ್ತದೆ. ಪಂಚ ವಿಧವಾಗಿರುವ ಐದು ಪ್ರಕಾರವಾಗಿರುವ ಹಿಂಕಾರವೇ ಮುಂತಾದ ವಿಭಾಗಗಳಾಗಿ ಹೇಳಿರುವ ತ್ರಯೀವಿದ್ಯೆಯೇ ಮುಂತಾದ ಮೂರುಮೂರು (ಇವೆಯಲ್ಲ), ಅವುಗಳಿಗಿಂತ (ಆ) ಐದು ತ್ರಿಕಗಳಿಗಿಂತ ಹೆಚ್ಚಿನದು. ಇನ್ನು ದೊಡ್ಡದಾಗಿರುವದು ಪರವು (ಅವಕ್ಕಿಂತ) ಬೇರೆಯಾದದ್ದು ಮತ್ತೊಂದು ವಸ್ತ್ವಂತರವು ಇಲ್ಲ, ಇರುವದಿಲ್ಲ ಎಂದರ್ಥ. ಏಕೆಂದರೆ ಅದರಲ್ಲಿಯೇ ಎಲ್ಲವೂ ಅಡಕವಾಗಿರುತ್ತದೆ.

(ಉಪನಿಷತ್ತು)

**ಯಸ್ತದ್ವೇದ ಸ ವೇದ ಸರ್ವಗ್ಂ ಸರ್ವಾ ದಿಶೋ ಬಲಿಮಸ್ಮೈ ಹರನ್ತಿ ಸರ್ವಮಸ್ಮೀತ್ಯುಪಾಸೀತ ತದ್ವ್ರತಂ ತದ್ವ್ರತಮ್ ॥ ೪ ॥**

೪. ಯಾವನು ಇದನ್ನು ಅರಿತಿರುವನೋ ಅವನು ಎಲ್ಲವನ್ನೂ ಅರಿತಿರುವನು. ಸರ್ವದಿಕ್ಕುಗಳೂ ಅವನಿಗೆ ಬಲಿಯನ್ನು ತಂದೊಪ್ಪಿಸುವವು. ಸರ್ವವೂ ಆಗಿರುವೆನು ಎಂದು ಉಪಾಸನೆಮಾಡಬೇಕು. ಅದು ವ್ರತವು, ಅದು ವ್ರತವು.

## ಸಾಮೋಪಾಸಕನಿಗೆ ಸರ್ವದಿಕ್ಕುಗಳಿಂದಲೂ ಬಲಿಪ್ರಾಪ್ತಿ

(ಭಾಷ್ಯ)

೧೭೦. ಯಃ ತದ್ ಯಥೋಕ್ತಂ ಸರ್ವಾತ್ಮಕಂ ಸಾಮ ವೇದ ಸ ವೇದ ಸರ್ವಮ್। ಸರ್ವಜ್ಞೋ ಭವತಿ ಇತ್ಯರ್ಥಃ। ಸರ್ವಾ ದಿಶಃ ಸರ್ವದಿಕ್ಸ್ಥಾಃ ಅಸ್ಮೈ ಏವಂವಿದೇ ಬಲಿಂ ಭೋಗಂ ಹರನ್ತಿ ಪ್ರಾಪಯನ್ತಿ ಇತ್ಯರ್ಥಃ। ಸರ್ವ ಮಸ್ಮಿ ಭವಾಮಿ ಇತ್ಯೇವಮ್ ಏತತ್ ಸಾಮ ಉಪಾಸೀತ। ತಸ್ಯ ಏತದೇವ ವ್ರತಮ್। ದ್ವಿರುಕ್ತಿಃ ಸಾಮೋಪಾಸನಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಯಾವನು ಈ ಮೇಲೆ ಹೇಳಿದ ಸರ್ವಾತ್ಮಕವಾದ ಸಾಮವನ್ನು ಅರಿತುಕೊಂಡಿರುವನೋ ಅವನು ಎಲ್ಲವನ್ನೂ ಅರಿತುಕೊಂಡಿರುವನು, ಸರ್ವಜ್ಞನಾಗಿರುವನು ಎಂದರ್ಥ. ಸರ್ವದಿಕ್ಕುಗಳೂ ಎಲ್ಲಾ ದಿಕ್ಕುಗಳಲ್ಲಿರುವವರೂ ಹೀಗೆಂದರಿತಿರುವ ಅವನಿಗೆ ಬಲಿಯನ್ನು ಭೋಗವನ್ನು ತಂದೊಪ್ಪಿಸುವರು, ಪಡೆಯಿಸುವರು ಎಂದರ್ಥ.

ಸರ್ವವೂ (ಅಸ್ಮಿ=ಭವಾಮಿ) ಆಗಿರುವೆನು ಎಂದರಿತು ಈ ಸಾಮವನ್ನು ಉಪಾಸನೆಮಾಡಬೇಕು ಅವನಿಗೆ ಇದೇ ವ್ರತವು (ಇದೇ ವ್ರತವು ಎಂದು) ಎರಡು ಸಲ ಹೇಳಿರುವದು ಸಾಮೋಪಾಸನೆಯು ಮುಗಿಯಿತೆಂದು (ತಿಳಿಸುವದಕ್ಕೆ)[1].

---

# ಎರಡನೆಯ ಅಧ್ಯಾಯ-ಇಪ್ಪತ್ತೆರಡನೆಯ ಖಂಡ

(ಗಾನವಿಶೇಷಾದಿಗಳ ಉಪದೇಶ)

## ಗಾನವಿಶೇಷಾದಿಗಳು

(ಉಪನಿಷತ್ತು)

**ವಿನರ್ದಿ ಸಾಮ್ನೋ ವೃಣೇ ಪಶವ್ಯಮಿತ್ಯಗ್ನೇರುದ್ಗೀಥೋಽನಿರುಕ್ತಃ ಪ್ರಜಾಪತೇರ್ನಿರುಕ್ತಃ ಸೋಮಸ್ಯ ಮೃದು ಶ್ಲಕ್ಷ್ಣಂ ವಾಯೋಃ ಶ್ಲಕ್ಷ್ಣಂ ಬಲವದಿನ್ದ್ರಸ್ಯ ಕ್ರೌಞ್ಚಂ ಬೃಹಸ್ಪತೇರಪಧ್ವಾನ್ತಂ ವರುಣಸ್ಯ ತಾನ್ ಸರ್ವಾನೇವೋಪಸೇವೇತ ವಾರುಣಂ ತ್ವೇವ ವರ್ಜಯೇತ್ ॥ ೧ ॥**

---

1. ಇಲ್ಲಿಗೆ ಸಾಮಸಾಮಾನ್ಯದ ಉಪಾಸನೆಯು ಮುಗಿಯಿತು.

೧. ಸಾಮದ ವಿನರ್ದಿಯನ್ನು ವರಿಸುತ್ತೇನೆ; ಏಕೆಂದರೆ (ಅದು) ಪಶವ್ಯವು, ಅಗ್ನಿಯದೂ ಆಗಿರುವ ಉದ್ಗೀಥವು; ಅನಿರುಕ್ತವು, ಪ್ರಜಾಪತಿಯದು; ನಿರುಕ್ತವು ಸೋಮನದು; ಮೃದು ಶ್ಲಕ್ಷ್ಣವು ವಾಯುವಿನದು; ಬಲವತ್ತಾದದ್ದು ಇಂದ್ರನದು; ಕ್ರೌಂಚವು ಬೃಹಸ್ಪತಿಯದು; ಅಪಧ್ವಾಂತವು ವರುಣನದು. ಅವೆಲ್ಲವನ್ನೂ ಉಪಸೇವಿಸಬೇಕು, ಆದರೆ ವಾರುಣವೊಂದನ್ನೇ ಬಿಡಬೇಕು.

## ಗಾನಗಳ ವಿನಿಯೋಗ

(ಭಾಷ್ಯ)

೧-೧. ಸಾಮೋಪಾಸನಪ್ರಸಙ್ಗೇನ ಗಾನವಿಶೇಷಾದಿಸಂಪತ್ ಉದ್ಗಾತುರುಪದಿಶ್ಯತೇ। ಫಲವಿಶೇಷಸಂಬನ್ಧಾತ್ ವಿನರ್ದಿ ವಿಶಿಷ್ಟೋ ನರ್ದಃ ಸ್ವರವಿಶೇಷಃ ಋಷಭಕೂಜಿತಸಮಃ ಅಸ್ಯಾಸ್ತೀತಿ ವಿನರ್ದಿ ಗಾನಮ್ ಇತಿ ವಾಕ್ಯವಿಶೇಷಃ। ತಚ್ಚ ಸಾಮ್ನಃ ಸಂಬನ್ಧಿ ಪಶುಭ್ಯೋ ಹಿತಂ ಪಶವ್ಯಮ್ ಅಗ್ನೇಃ ಅಗ್ನಿದೇವತ್ಯಂ ಚ ಉದ್ಗೀಥಃ ಉದ್ಗಾನಮ್। ತತ್ ಅಹಮ್ ಏವಂವಿಶಿಷ್ಟಂ ವೃಣೇ ಪ್ರಾರ್ಥಯೇ। ಇತಿ ಕಶ್ಚಿತ್ ಯಜಮಾನಃ ಉದ್ಗಾತಾ ವಾ ಮನ್ಯತೇ। ಅನಿರುಕ್ತಃ ಅಮುಕಸಮಃ ಇತ್ಯವಿಶೇಷಿತಃ ಪ್ರಜಾಪತೇಃ ಪ್ರಜಾಪತಿದೇವತ್ಯಃ ಸ ಗಾನವಿಶೇಷಃ। ಆನಿರುಕ್ತ್ಯಾತ್ ಪ್ರಜಾಪತೇಃ। ನಿರುಕ್ತಃ ಸ್ಪಷ್ಟಃ। ಸೋಮಸ್ಯ ಸೋಮದೇವತ್ಯಃ ಸ ಉದ್ಗೀಥಃ ಇತ್ಯರ್ಥಃ। ಮೃದು ಶ್ಲಕ್ಷ್ಣಂ ಚ ಗಾನಂ ವಾಯೋಃ ವಾಯುದೇವತ್ಯಂ ತತ್। ಶ್ಲಕ್ಷ್ಣಂ ಬಲವಚ್ಚ ಪ್ರಯತ್ನಾಧಿಕ್ಯೋಪೇತಂ ಚ ಇನ್ದ್ರಸ್ಯ। ಐನ್ದ್ರಂ ತದ್ ಗಾನಮ್। ಕ್ರೌಞ್ಚಂ ಕ್ರೌಞ್ಚಪಕ್ಷಿನಿನಾದಸಮಂ ಬೃಹಸ್ಪತೇಃ ಬಾರ್ಹಸ್ಪತ್ಯಂ ತತ್। ಅಪಧ್ವಾನ್ತಂ ಭಿನ್ನಕಾಂಸ್ಯಸ್ವರಸಮಂ ವರುಣಸ್ಯ ಏತದ್ ಗಾನಮ್। ತಾನ್ ಸರ್ವಾನೇವ ಉಪಸೇವೇತ ಪ್ರಯುಞ್ಜೀತ। ವಾರುಣಂ ತ್ವೇವ ಏಕಂ ವರ್ಜಯೇತ್ ॥

(ಭಾಷ್ಯಾರ್ಥ)

ಸಾಮೋಪಾಸನೆಯ ಪ್ರಸಂಗದಿಂದ ಗಾನವಿಶೇಷಾದಿಗಳನ್ನು ಕೂಡಿಕೊಂಡಿರಬೇಕೆಂದು ಉದ್ಗಾತೃವಿಗೆ ಉಪದೇಶಿಸಿರುತ್ತದೆ. ಏಕೆಂದರೆ (ಇದಕ್ಕೆ) ಬೇರೆ ಬೇರೆಯ ಫಲಗಳು ಇರುತ್ತವೆ.[1]

---

1. ಮುಂದಿನ ಕಂಡಿಕೆಗಳಲ್ಲಿ ಫಲಗಳನ್ನು ಹೇಳಿರುತ್ತದೆಯಾದ್ದರಿಂದ ಹೇಗೆ ಗಾನಮಾಡಬೇಕೆಂದು ವಿಧಿಸಿದೆ ಎಂದು ತಿಳಿಯಬೇಕೆಂದರ್ಥ.

ವಿನರ್ದಿ ಎಂದರೆ ಒಂದು ಬಗೆಯ ನರ್ದವು, ಎತ್ತಿನ ಗುಟರಿಗೆ ಸಮವಾದ ಒಂದಾನೊಂದು ಸ್ವರವು, ಈ (ಗಾನಕ್ಕಿದೆಯಾದ್ದರಿಂದ) ಇದು ವಿನರ್ದಿ. (ವಿನರ್ದಿ ಎಂಬ) ಗಾನವನ್ನು ಎಂದು (ಈ) ವಾಕ್ಯಕ್ಕೆ ಸೇರಿಸಿಕೊಳ್ಳಬೇಕು. ಈ ಸಾಮ ಸಂಬಂಧಿಯಾದ (ಗಾನವು) ಪಶವ್ಯವು, ಪಶುಗಳಿಗೆ ಹಿತವಾದದ್ದು, ಮತ್ತು ಅಗ್ನಿಯದು ಎಂದರೆ ಅಗ್ನಿದೇವತಾಕವಾದ ಉದ್ಗೀಥವು, ಉದ್ಗಾನವು[1]. ಈ ವಿಶೇಷಣಗಳಿಂದೊಡಗೂಡಿದ ಈ (ಗಾನ)ವನ್ನು ನಾನು ವರಿಸುತ್ತೇನೆ, ಪ್ರಾರ್ಥಿಸುತ್ತೇನೆ – ಎಂದು ಯಾವನೋ ಒಬ್ಬ ಯಜಮಾನನು ಅಥವಾ ಉದ್ಗಾತೃವು ಭಾವಿಸುತ್ತಾನೆ[2]. ಅನಿರುಕ್ತವು ಎಂದರೆ ಇಂಥದಕ್ಕೆ ಸಮನಾದದ್ದೆಂಬ ವಿಶೇಷವನ್ನು ಹೇಳಲಾಗದಲ್ಲ, ಆ ಗಾನವಿಶೇಷವು. ಪ್ರಜಾಪತಿಯದು, ಪ್ರಜಾಪತಿದೇವತಾಕವಾದದ್ದು. ಏಕೆಂದರೆ ಪ್ರಜಾಪತಿಯು ಅನಿರುಕ್ತನಾಗಿರುತ್ತಾನೆ[3]. ನಿರುಕ್ತವು, ಎಂದರೆ ಸ್ಪಷ್ಟವಾದದ್ದು. ಆ ಉದ್ಗೀಥವು ಸೋಮನದು, ಸೋಮದೇವತಾಕವಾದದ್ದು ಎಂದರ್ಥ. ಮೃದುವಾಗಿಯೂ ನಯವಾಗಿಯೂ ಇರುವ ಗಾನವಿದೆಯಲ್ಲ, ಅದು ವಾಯುವಿನದು, ವಾಯುದೇವತಾಕವಾದದ್ದು. ನಯವಾಗಿಯೂ ಬಲವಾಗಿಯೂ ಎಂದರೆ ಹೆಚ್ಚಿನ ಪ್ರಯತ್ನದಿಂದ ಕೂಡಿರುವದೂ ಆಗಿರುವದಲ್ಲ, ಆ ಗಾನವು ಇಂದ್ರನದು, ಇಂದ್ರನಿಗೆ ಸಂಬಂಧಪಟ್ಟದ್ದು. ಕ್ರೌಂಚವು ಎಂದರೆ ಕ್ರೌಂಚಪಕ್ಷಿಯ ಧ್ವನಿಗೆ ಸಮವಾದದ್ದು ಬೃಹಸ್ಪತಿಯದು, ಅದು ಬೃಹಸ್ಪತಿಗೆ ಸಂಬಂಧಪಟ್ಟದ್ದು. ಅಪಧ್ವಾಂತವು ಎಂದರೆ ಒಡೆದ ಕಂಚಿನ ಧ್ವನಿಯಂತಿರುವದಲ್ಲ, ಆ ಗಾನವು ವರುಣನದು.

ಈ ಎಲ್ಲಾ (ಸಾಮಗಳನ್ನೂ) ಪ್ರಯೋಗಮಾಡಬೇಕು. ಆದರೆ ವಾರುಣವೊಂದನ್ನೇ ಬಿಟ್ಟುಬಿಡಬೇಕು.

## ಗಾನಮಾಡುವಾಗ ಫಲಾನುಸಂಧಾನ

(ಉಪನಿಷತ್ತು)

**ಅಮೃತತ್ವಂ ದೇವೇಭ್ಯ ಆಗಾಯಾನೀತ್ಯಾಗಾಯೇತ್ ಸ್ವಧಾಂ ಪಿತೃಭ್ಯ ಆಶಾಂ ಮನುಷ್ಯೇಭ್ಯಸ್ತೃಣೋದಕಂ ಪಶುಭ್ಯಃ**

---

1. ಉದ್ಗೀಥವೆಂದರೆ ಇಲ್ಲಿ ಉದ್ಗೀಥಭಕ್ತಿಯಲ್ಲ, ಉದ್ಗಾನಕ್ರಿಯೆ.

2. 'ವೃಣೇ' ವರಿಸುತ್ತೇನೆ ಎಂಬುದಕ್ಕೆ ಇಲ್ಲಿ ಕರ್ತೃಪದವನ್ನು ತಿಳಿಸಿಲ್ಲ; ಆದ್ದರಿಂದ ಫಲವನ್ನು ಬಯಸುವ ಯಜಮಾನನೋ ಅಥವಾ ಉದ್ಗಾತೃವೋ ಹೀಗೆಂದು ಅನುಸಂಧಾನ ಮಾಡಬೇಕು ಎಂದು ಶ್ರುತಿಗೆ ಅಭಿಪ್ರಾಯವನ್ನು ಹೇಳಬೇಕು. ಉಭಯಪಕ್ಷದಲ್ಲಿಯೂ ಇದು ಉದ್ಗಾತೃವಿಗೇ ಹೇಳಿದ್ದು.

3. ನೀಲಪೀತಾದಿಗಳೆಂದು ನಿಶ್ಚಯಿಸದೆ ಇರುವದರಿಂದ ಎಂದು ಟೀಕೆ. ಇದರ ಅಭಿಪ್ರಾಯವೇನೆಂಬುದು ತಿಳಿಯಲಿಲ್ಲ. ದೇವತಾವಿಶೇಷವಲ್ಲದೆ ಸಮಷ್ಟಿರೂಪನಾಗಿರುವದರಿಂದ ಎಂದು ಭಾಷ್ಯದ ಅಭಿಪ್ರಾಯವೆಂತ ತೋರುತ್ತದೆ.

**ಸ್ವರ್ಗಂ ಲೋಕಂ ಯಜಮಾನಾಯಾನ್ನಮಾತ್ಮನ ಆಗಾಯಾ ನೀತ್ಯೇತಾನಿ ಮನಸಾ ಧ್ಯಾಯನ್ನಪ್ರಮತ್ತಃ ಸ್ತುವೀತ ॥ ೨ ॥**

೨. ದೇವತೆಗಳಿಗೆ ಅಮೃತವನ್ನು ಆಗಾನಮಾಡುವೆನು ಎಂದು ಆಗಾನಮಾಡಬೇಕು. ಪಿತೃಗಳಿಗೆ ಸ್ವಧೆಯನ್ನೂ ಮನುಷ್ಯ ನಿಗೆ ಆಶೆಯನ್ನೂ ಪಶುಗಳಿಗೆ ಹುಲ್ಲುನೀರುಗಳನ್ನೂ ಯಜಮಾನನಿಗೆ ಸ್ವರ್ಗಲೋಕವನ್ನೂ ತನಗೆ ಅನ್ನವನ್ನೂ ಆಗಾನಮಾಡುವೆನು ಎಂದು ಇವನ್ನು ಮನಸ್ಸಿನಿಂದ ಧ್ಯಾನಮಾಡುತ್ತಾ ಅಪ್ರಮತ್ತನಾಗಿ ಸ್ತೋತ್ರ ಮಾಡಬೇಕು.

(ಭಾಷ್ಯ)

೧೭೨. ಅಮೃತತ್ವಂ ದೇವೇಭ್ಯ ಆಗಾಯಾನಿ ಸಾಧಯಾನಿ । ಸ್ವಧಾಂ ಪಿತೃಭ್ಯ ಆಗಾಯಾನಿ । ಆಶಾಂ ಮನುಷ್ಯೇಭ್ಯಃ । ಆಶಾಂ ಪ್ರಾರ್ಥನಾಮ್ । ಪ್ರಾರ್ಥಿತಮ್ ಇತ್ಯೇತತ್ । ತೃಣೋದಕಂ ಪಶುಭ್ಯಃ । ಸ್ವರ್ಗಂ ಲೋಕಂ ಯಜ ಮಾನಾಯ ಅನ್ನಮ್ ಆತ್ಮನೇ ಮಹ್ಯಮ್ ಆಗಾಯಾನಿ ಇತ್ಯೇತಾನಿ ಮನಸಾ ಧ್ಯಾಯನ್ ಚಿನ್ತಯನ್[1] ಅಪ್ರಮತ್ತಃ ಸ್ವರೋಷ್ಮವ್ಯಞ್ಜನಾದಿಭ್ಯಃ ಸ್ತುವೀತ ॥

(ಭಾಷ್ಯಾರ್ಥ)

ದೇವತೆಗಳಿಗೆ ಅಮೃತತ್ವವನ್ನು ಆಗಾನಮಾಡುವೆನು, ಸಾಧಿಸುವೆನು ಪಿತೃ ಗಳಿಗೆ ಸ್ವಧೆಯನ್ನು ಆಗಾನಮಾಡುವೆನು, ಮನುಷ್ಯರಿಗೆ ಆಶೆಯನ್ನು, ಪ್ರಾರ್ಥನೆ ಯನ್ನು, ಎಂದರೆ ಇಷ್ಟವಾದದ್ದನ್ನು ಎಂದು ಅಭಿಪ್ರಾಯ. ಪಶುಗಳಿಗೆ ಹುಲ್ಲು ನೀರುಗಳನ್ನು, ಯಜಮಾನನಿಗೆ ಸ್ವರ್ಗಲೋಕವನ್ನು, ನನಗೆ ಅನ್ನವನ್ನು ಆಗಾನ ಮಾಡುವೆನು–ಎಂದು ಇವುಗಳನ್ನು ಮನಸ್ಸಿನಿಂದ ಧ್ಯಾನಮಾಡುತ್ತಾ ಚಿಂತಿಸಿ ಕೊಳ್ಳುತ್ತಾ ಸ್ವರ, ಊಷ್ಮ, ವ್ಯಂಜನ– ಇವುಗಳ ವಿಷಯದಲ್ಲಿ ಎಚ್ಚರಿಕೆಯಿಂದ ಸ್ತೋತ್ರಮಾಡಬೇಕು.

## ಸ್ವರಾದಿಗಳ ಉಚ್ಚಾರವೂ ಅದರ ಫಲವೂ

(ಉಪನಿಷತ್ತು)

**ಸರ್ವೇ ಸ್ವರಾ ಇನ್ದ್ರಸ್ಯಾತ್ಮಾನಃ ಸರ್ವ ಊಷ್ಮಾಣಃ ಪ್ರಜಾ ಪತೇರಾತ್ಮಾನಃ ಸರ್ವೇ ಸ್ಪರ್ಶಾ ಮೃತ್ಯೋರಾತ್ಮಾನಸ್ತಂ ಯದಿ ಸ್ವರೇಷೂಪಾಲಭೇತೇನ್ದ್ರಗ್ಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿವಕ್ಷ್ಯತೀತ್ಯೇವಂ ಬ್ರೂಯಾತ್ ॥ ೩ ॥**

1. ಆಚ್ಚಿನ ಪುಸ್ತಕಗಳಲ್ಲಿ ಚಿನ್ತಯನ್ ಧ್ಯಾಯನ್ ಎಂದು ವ್ಯತ್ಕ್ರಮವಾಗಿ ಬಿದ್ದಿದೆ.

**ಅಥ ಯದ್ಯೇನಮೂಷ್ಮಸೂಪಾಲಭೇತ ಪ್ರಜಾಪತಿಗ್ಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಪೇಕ್ಷ್ಯತೀತ್ಯೇನಂ ಬ್ರೂಯಾದಥ ಯದ್ಯೇನಗ್ಂ ಸ್ಪರ್ಶೇಷೂಪಾಲಭೇತ ಮೃತ್ಯುಗ್ಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿ ಧಕ್ಷ್ಯತೀತ್ಯೇನಂ ಬ್ರೂಯಾತ್ ॥ ೪ ॥**

೩. ಸ್ವರಗಳೆಲ್ಲ ಇಂದ್ರನ ಆತ್ಮಗಳು, ಊಷ್ಮಗಳೆಲ್ಲ ಪ್ರಜಾಪತಿಯ ಆತ್ಮಗಳು, ಸ್ಪರ್ಶಗಳೆಲ್ಲ ಮೃತ್ಯುವಿನ ಆತ್ಮಗಳು. ಇವನ ಮೇಲೆ ಸ್ವರಗಳ (ವಿಷಯ)ದಲ್ಲಿ ತಪ್ಪುಹೊರಿಸಿದರೆ 'ಇಂದ್ರನನ್ನು ಶರಣುಹೊಕ್ಕಿರುತ್ತೇನೆ, ಅವನು ನಿನಗೆ ಹೇಳುವನು' ಎಂದು ಅವನಿಗೆ ಹೇಳಬೇಕು.

೪. ಇನ್ನು ಇವನ ಮೇಲೆ ಊಷ್ಮಗಳ(ವಿಷಯ)ದಲ್ಲಿ ತಪ್ಪನ್ನು ಹೊರಿಸಿದರೆ 'ಪ್ರಜಾಪತಿಯನ್ನು ಶರಣುಹೊಕ್ಕಿರುತ್ತೇನೆ, ಅವನು ನಿನ್ನನ್ನು ಪ್ರತಿಪೇಷಣಮಾಡುವನು' ಎಂದು ಅವನಿಗೆ ಹೇಳಬೇಕು. ಇನ್ನು ಇವನ ಮೇಲೆ ಸ್ಪರ್ಶಗಳ (ವಿಷಯ)ದಲ್ಲಿ ತಪ್ಪುಹೊರಿಸಿದರೆ, 'ಮೃತ್ಯುವನ್ನು ಶರಣುಹೊಕ್ಕಿರುವೆನು, ಅವನು ನಿನ್ನನ್ನು ಪ್ರತಿಧಕ್ಷಣ ಮಾಡುವನು' ಎಂದು ಅವನಿಗೆ ಹೇಳಬೇಕು.

(ಭಾಷ್ಯ)

೧೭೩. ಸರ್ವೇ ಸ್ವರಾ ಅಕಾರಾದಯಃ ಇನ್ದ್ರಸ್ಯ ಬಲಕರ್ಮಣಃ ಪ್ರಾಣಸ್ಯ ಆತ್ಮಾನಃ ದೇಹಾವಯವಸ್ಥಾನೀಯಾಃ । ಸರ್ವೇ ಊಷ್ಮಾಣಃ ಶಷಸಹಾದಯಃ ಪ್ರಜಾಪತೇರ್ವಿರಾಜಃ ಕಶ್ಯಪಸ್ಯ ವಾ ಆತ್ಮಾನಃ । ಸರ್ವೇ ಸ್ಪರ್ಶಾಃ ಕಾದಯೋ ವ್ಯಞ್ಜನಾನಿ ಮೃತ್ಯೋಃ ಆತ್ಮಾನಃ । ತಮ್ ಏವಂವಿದಮ್ ಉದ್ಗಾತಾರಂ ಯದಿ ಕಶ್ಚಿತ್ ಸ್ವರೇಷು ಉಪಾಲಭೇತ 'ಸ್ವರಸ್ತ್ವಯಾ ದುಷ್ಟಃ ಪ್ರಯುಕ್ತಃ' ಇತಿ, ಏವಮ್ ಉಪಾಲಬ್ಧಃ 'ಇನ್ದ್ರಂ ಪ್ರಾಣಮ್ ಈಶ್ವರಂ ಶರಣಮ್ ಆಶ್ರಯಂ ಪ್ರಪನ್ನೋಽಭೂವಂ ಸ್ವರಾನ್ ಪ್ರಯುಞ್ಜಾನೋಽಹಮ್ । ಸ ಇನ್ದ್ರಃ ಯತ್ತವ ವಕ್ತವ್ಯಂ ತ್ವಾ ತ್ವಾಂ ಪ್ರತಿ ವಕ್ಷ್ಯತಿ । ಸ ಏವ ದೇವ ಉತ್ತರಂ ದಾಸ್ಯತಿ' ಇತ್ಯೇನಂ ಬ್ರೂಯಾತ್ । ಅಥ ಯದಿ ಏನಮ್ ಊಷ್ಮಸು ತಥೈವ ಉಪಾಲಭೇತ, 'ಪ್ರಜಾಪತಿಂ ಶರಣಂ ಪ್ರಪನ್ನೋಽಭೂವಮ್ । ಸ ತ್ವಾ ಪ್ರತಿ ಪೇಕ್ಷ್ಯತಿ ಸಂಚೂರ್ಣಯಿಷ್ಯತಿ, ಇತ್ಯೇನಂ ಬ್ರೂಯಾತ್ । ಅಥ ಯದಿ ಏನಂ ಸ್ಪರ್ಶೇಷು ಉಪಾಲಭೇತ 'ಮೃತ್ಯುಂ ಶರಣಂ ಪ್ರಪನ್ನೋಽಭೂವಮ್, ಸ ತ್ವಾ ಪ್ರತಿ ಧಕ್ಷ್ಯತಿ ಭಸ್ಮೀಕರಿಷ್ಯತಿ' ಇತ್ಯೇನಂ ಬ್ರೂಯಾತ್ ॥

(ಭಾಷ್ಯಾರ್ಥ)

ಅಕಾರಾದಿಸ್ವರಗಳೆಲ್ಲ ಇಂದ್ರನ, ಬಲಕ್ರಿಯೆಯುಳ್ಳ ಪ್ರಾಣನ[1], ಆತ್ಮಗಳು, ದೇಹಾವಯವಗಳ ಸ್ಥಾನದಲ್ಲಿರುತ್ತವೆ. ಊಷ್ಮಗಳೆಲ್ಲ, ಎಂದರೆ ಶಷಸಹಾದಿಗಳು[2] ಪ್ರಜಾಪತಿಯ ಎಂದರೆ ವಿರಾಜನ ಅಥವಾ ಕಶ್ಯಪನ ಆತ್ಮಗಳು, ಸ್ಪರ್ಶಗಳೆಲ್ಲ ಎಂದರೆ ಕಕಾರಾದಿವ್ಯಂಜನಗಳು, ಮೃತ್ಯುವಿನ ಆತ್ಮಗಳು

ಹೀಗೆಂದು ಉಪಾಸನೆಮಾಡಿರುವ ಉದ್ಗಾತೃವಿನ ಮೇಲೆ ಯಾವದಾದರೂ ಸ್ವರಗಳ (ವಿಷಯ)ದಲ್ಲಿ ತಪ್ಪುಹೊರಿಸಿದರೆ, 'ನೀನು ಸ್ವರವನ್ನು ತಪ್ಪಾಗಿ ಪ್ರಯೋಗಿಸಿದೀಯೆ!' ಎಂದರೆ ಹೀಗೆ ತಪ್ಪುಹೊರಿಸಿಕೊಂಡ (ಉದ್ಗಾತೃವು) 'ಇಂದ್ರನನ್ನು, ಪ್ರಾಣನನ್ನು, ಈಶ್ವರನನ್ನು, ಸ್ವರಗಳನ್ನು ಪ್ರಯೋಗಿಸುವಾಗ ನಾನು ಶರಣುಹೊಕ್ಕಿರುತ್ತೇನೆ. ಆಶ್ರಯವಾಗಿಟ್ಟುಕೊಂಡಿರುತ್ತೇನೆ, ಆ ಇಂದ್ರನು ನಿನಗೆ ಏನು ಹೇಳಬೇಕೋ (ಅದನ್ನು) (ತ್ವಾ=ತ್ವಾಂ) ನಿನಗೆ ಹೇಳುವನು, ಆ ದೇವನೇ ನಿನಗೆ ಉತ್ತರವನ್ನು ಕೊಡುವನು' ಎಂದು ಅವನಿಗೆ ಹೇಳಬೇಕು. ಇನ್ನು ಹೀಗೆಯೇ ಇವನ ಮೇಲೆ ಊಷ್ಮಗಳ (ವಿಷಯ)ದಲ್ಲಿ ತಪ್ಪುಹೊರಿಸಿದರೆ 'ನಾನು ಪ್ರಜಾಪತಿಯನ್ನು ಶರಣುಹೊಕ್ಕಿರುತ್ತೇನೆ, ಅವನು ನಿನ್ನನ್ನು ಪ್ರತಿಪೇಷಣೆಮಾಡುವನು, ಹುಡಿಮಾಡುವನು' ಎಂದು ಅವನಿಗೆ ಹೇಳಬೇಕು. ಇನ್ನು ಇವನ ಮೇಲೆ ಸ್ಪರ್ಶಗಳ (ವಿಷಯ)ದಲ್ಲಿ ತಪ್ಪುಹೊರಿಸಿದರೆ ಮೃತ್ಯುವನ್ನು ಶರಣುಹೊಕ್ಕಿರುವೆನು, ಅವನು ನಿನ್ನನ್ನು ಪ್ರತಿಧಕ್ಷಣಮಾಡುವನು, ಬೂದಿಗೈಯುವನು – ಎಂದು ಅವನಿಗೆ ಹೇಳಬೇಕು

## ಸ್ವರಾದಿಗಳನ್ನು ಪ್ರಯೋಗಮಾಡುವ ರೀತಿ

(ಉಪನಿಷತ್ತು)

**ಸರ್ವೇ ಸ್ವರಾ ಘೋಷವನ್ತೋ ಬಲವನ್ತೋ ವಕ್ತವ್ಯಾ ಇನ್ದ್ರೇ ಬಲಂ ದದಾನೀತಿ ಸರ್ವ ಊಷ್ಮಾಣೋಽಗ್ರಸ್ತಾ ಅನಿರಸ್ತಾ ವಿವೃತಾ ವಕ್ತವ್ಯಾಃ ಪ್ರಜಾಪತೇರಾತ್ಮಾನಂ ಪರಿದದಾನೀತಿ ಸರ್ವೇ ಸ್ಪರ್ಶಾ ಲೇಶೇನಾನಭಿನಿಹಿತಾ ವಕ್ತವ್ಯಾ ಮೃತ್ಯೋರಾತ್ಮಾನಂ ಪರಿಹರಾಣೀತಿ ॥ ೫ ॥**

೫. ಸ್ವರಗಳನ್ನೆಲ್ಲ ಘೋಷದಿಂದಕೂಡಿಯೂ ಬಲವಾಗಿಯೂ ಹೇಳಬೇಕು ; ಇಂದ್ರನಿಗೆ ಬಲವನ್ನು ಕೊಡುವೆನು ಎಂದು (ಭಾವಿಸ

1. ಪ್ರಾಣನನ್ನು ಇಂದ್ರನೆಂದು ಕರೆದಿರುವದು ಬ್ರಾಹ್ಮಣಗಳಲ್ಲಿ ಕಂಡುಬರುತ್ತದೆ. ಐ. ಆ. ೨-೩-೭, ಬೃ. ಭಾ. ೧-೫-೧೨ (ಛಾ. ಭಾ ೨೨೧)– ಇವನ್ನು ನೋಡಿರಿ.

2. ಜಿಹ್ವಾಮೂಲೀಯ ಉಪಧ್ಮಾನೀಯಗಳನ್ನೂ ಇವಕ್ಕೆ ಸೇರಿಸಿರಬಹುದೆ? ಶಷಸಹಗಳ ಅವಾಂತರಭೇದಗಳನ್ನು ಆದಿಶಬ್ದದಿಂದ ತಿಳಿಯಬೇಕೆಂದು ಟೀಕೆ.

ಬೇಕು). ಊಷ್ಮಗಳನ್ನೆಲ್ಲ ನುಂಗದೆ ಹೊರಗೆ ಹಾಕದೆ ವಿವೃತವಾಗಿ ಹೇಳಬೇಕು; ಪ್ರಜಾಪತಿಗೆ ಆತ್ಮವನ್ನು ಕೊಡುವೆನು ಎಂದು (ಭಾವಿಸಬೇಕು). ಸ್ಪರ್ಶಗಳನ್ನೆಲ್ಲ ಸ್ವಲ್ಪವಾಗಿ ಅನಭಿನಿಹಿತವಾಗಿ ಹೇಳಬೇಕು, ನನ್ನನ್ನು ಮೃತ್ಯುವಿನಿಂದ ತಪ್ಪಿಸಿಕೊಳ್ಳುವೆನು ಎಂದು (ಭಾವಿಸಬೇಕು).

(ಭಾಷ್ಯ)

೧೭೪. ಯತ ಇನ್ದ್ರಾದ್ಯಾತ್ಮನಃ ಸ್ವರಾದಯಃ। ಅತಃ ಸರ್ವೇ ಸ್ವರಾಃ ಘೋಷವನ್ತೋ ಬಲವನ್ತೋ ವಕ್ತವ್ಯಾಃ। ತಥಾ ಅಹಮ್ ಇನ್ದ್ರೇ ಬಲಂ ದದಾನಿ ಬಲಮ್ ಆದಧಾನಿ ಇತಿ। ತಥಾ ಸರ್ವೇ ಊಷ್ಮಾಣಃ ಅಗ್ರಸ್ತಾಃ ಅನ್ತರಪ್ರವೇಶಿತಾಃ ಅನಿರಸ್ತಾಃ ಬಹಿರಪ್ರಕ್ಷಿಪ್ತಾಃ ವಿವೃತಾಃ ವಿವೃತ ಪ್ರಯತ್ನೋಪೇತಾಃ। ಪ್ರಜಾಪತೇಃ ಆತ್ಮಾನಂ ಪರಿದದಾನಿ ಪ್ರಯಚ್ಛಾನಿ ಇತಿ। ಸರ್ವೇ ಸ್ಪರ್ಶಾಃ ಲೇಶೇನ ಶನಕೈಃ ಅನಭಿನಿಹಿತಾಃ ಅನಭಿಕ್ಷಿಪ್ತಾಃ ವಕ್ತವ್ಯಾಃ। ಮೃತ್ಯೋಃ ಆತ್ಮಾನಂ ಬಾಲಾನಿವ ಶನಕೈಃ ಪರಿಹರದ್ಭಿರ್ಮೃತ್ಯೋರಾತ್ಮಾನಂ ಪರಿಹರಾಣಿ ಇತಿ ॥

(ಭಾಷ್ಯಾರ್ಥ)

(ಹೀಗೆ) ಸ್ವರವೇ ಮುಂತಾದ (ವರ್ಣ)ಗಳು ಇಂದ್ರಾದಿಗಳ ಆತ್ಮಗಳಾಗಿರುವವಷ್ಟೆ, ಆದ್ದರಿಂದ ಸ್ವರಗಳನ್ನೆಲ್ಲ ಘೋಷದಿಂದಲೂ ಬಲದಿಂದಲೂ ಕೂಡಿ ಉಚ್ಚರಿಸಬೇಕು. ಹಾಗೆ ಮಾಡುವದರಿಂದ ನಾನು ಇಂದ್ರನಿಗೆ ಬಲವನ್ನು ಕೊಡುವೆನು, ಬಲವನ್ನುಂಟುಮಾಡುವೆನು ಎಂದು (ಭಾವಿಸಬೇಕು). ಹೀಗೆಯೇ ಎಲ್ಲಾ ಊಷ್ಮಗಳನ್ನೂ ನುಂಗದೆ ಒಳಕ್ಕೆ ಹೊಗಿಸಿಕೊಳ್ಳದೆ, ಹೊರಗೆ ಹಾಕದೆ ಹೊರಕ್ಕೆ ದೂಡಿ (ಉಚ್ಚರಿಸದೆ) ವಿವೃತವಾಗಿ ವಿವೃತಪ್ರಯತ್ನದಿಂದೊಡಗೂಡಿ (ಉಚ್ಚರಿಸಬೇಕು). ಪ್ರಜಾಪತಿಗೆ ಆತ್ಮವನ್ನು[1] ಕೊಡುತ್ತಿರುವೆನು ಎಂದು (ಭಾವಿಸಬೇಕು), ಸ್ಪರ್ಶಗಳನ್ನೆಲ್ಲ ಸ್ವಲ್ಪವಾಗಿ, ಎಂದರೆ ಮೆಲ್ಲಗೆ ಅನಭಿನಿಹಿತವಾಗಿ ಎಂದರೆ ಒಂದಕ್ಕೊಂದನ್ನು ಕೂಡಿಸುವಂತೆ ಮಾಡದೆ ಉಚ್ಚರಿಸಬೇಕು. ಮೃತ್ಯುವಿನಿಂದ ಹುಡುಗರನ್ನು ಮೆಲ್ಲಗೆ (ಬಿಡಿಸಿಕೊಳ್ಳುವವರಂತೆ[2] ಮೃತ್ಯುವಿನಿಂದ ತನ್ನನ್ನು ಬಿಡಿಸಿಕೊಳ್ಳುತ್ತೇನೆಂದು (ಭಾವಿಸಬೇಕು)[3]

---

1. ಇದನ್ನು 'ನನ್ನನ್ನು ಕೊಟ್ಟುಕೊಳ್ಳುತ್ತಿರುವೆನು' ಎಂದೂ ಕನ್ನಡಿಸಬಹುದು.

2 ಹುಡುಗರು ಅಪಾಯದಲ್ಲಿದ್ದರೆ ಅವರನ್ನು ಹೇಗೆ ಮೆಲ್ಲಗೆ ಎಚ್ಚರಿಕೆಯಿಂದ ಬಿಡಿಸಿಕೊಳ್ಳುವರೋ ಹಾಗೆ ಎಂದರ್ಥ.

3. ಸ್ವರಾದಿಗಳನ್ನು ಉಚ್ಚರಿಸುವಾಗ ಎಚ್ಚರಿಕೆಯಿಂದ ಉಚ್ಚರಿಸಬೇಕು; ಹಾಗೆ ಮಾಡುವದರಿಂದ ಪ್ರಾಣ, ಪ್ರಜಾಪತಿ, ಮೃತ್ಯು– ಇವರು ಪ್ರಸನ್ನರಾಗುವರು ಎಂಬುದು ಅಭಿಪ್ರಾಯ.

# ಎರಡನೆಯ ಅಧ್ಯಾಯ–

## ಇಪ್ಪತ್ತುಮೂರನೆಯ ಖಂಡ

( ಓಂಕಾರೋಪಾಸನೆ )

## ಪ್ರಣವನಿಷ್ಠನಾದವನಿಗೆ ಅಮೃತತ್ವ

(ಉಪನಿಷತ್ತು)

**ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲ ವಾಸೀ ತೃತೀಯೋಽತ್ಯಂತಮಾತ್ಮಾನಮಾಚಾರ್ಯಕುಲೇಽವಸಾದ ಯನ್ ಸರ್ವ ಏತೇ ಪುಣ್ಯಲೋಕಾ ಭವಂತಿ ಬ್ರಹ್ಮಸಗ್ಂಸ್ಥೋಽ ಮೃತತ್ವಮೇತಿ ॥ ೧ ॥**

೧. ಧರ್ಮಸ್ಕಂಧಗಳು ಮೂರು. ಯಜ್ಞ, ಅಧ್ಯಯನ, ದಾನ– ಎಂಬುದು ಒಂದನೆಯದು. ತಪಸ್ಸೇ ಎರಡನೆಯದು. ಅತ್ಯಂತವಾಗಿ ಆಚಾರ್ಯಕುಲದಲ್ಲಿ ವಾಸಮಾಡಿಕೊಂಡು ತನ್ನನ್ನು ಸವೆಯಿಸಿಕೊಳ್ಳುವ ಬ್ರಹ್ಮಚಾರಿಯು ಮೂರನೆಯವನು. ಇವರೆಲ್ಲರೂ ಪುಣ್ಯಲೋಕರಾಗುವರು, ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುವನು.

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೭೫. ಓಂಕಾರಸ್ಯ ಉಪಾಸನವಿಧ್ಯರ್ಥಂ "ತ್ರಯೋ ಧರ್ಮಸ್ಕಂಧಾಃ" ಇತ್ಯಾದಿ ಆರಭ್ಯತೇ। ನೈವಂ ಮಂತವ್ಯಂ ಸಾಮಾವಯವಭೂತಸ್ಯೈವ ಉದ್ಗೀಥಾದಿ ಲಕ್ಷಣಸ್ಯ ಓಂಕಾರಸ್ಯ ಉಪಾಸನಾತ್ ಫಲಂ ಪ್ರಾಪ್ಯತ ಇತಿ। ಕಿಂ ತರ್ಹಿ। ಯತ್ ಸರ್ವೈರಪಿ ಸಾಮೋಪಾಸನೈಃ ಕರ್ಮಭಿಶ್ಚ ಅಪ್ರಾಪ್ಯಮ್, ತತ್ಫಲಮ್ ಅಮೃತತ್ವಂ ಕೇವಲಾತ್ ಓಂಕಾರೋಪಾಸನಾತ್ ಪ್ರಾಪ್ಯತ ಇತಿ। ತತ್ಸ್ತುತ್ಯರ್ಥಂ ಸಾಮ ಪ್ರಕರಣೇ ತದುಪನ್ಯಾಸಃ ॥

(ಭಾಷ್ಯಾರ್ಥ)

ಓಂಕಾರದ ಉಪಾಸನೆಯನ್ನು ವಿಧಿಸುವದಕ್ಕಾಗಿ "ತ್ರಯೋ ಧರ್ಮಸ್ಕಂಧಾಃ" ಎಂದುಮುಂತಾಗಿರುವದನ್ನು ಆರಂಭಿಸಲಾಗಿರುತ್ತದೆ ಸಾಮಾವಯವವಾಗಿರುವ

ಉದ್ಗೀಥಾವಿರೂಪದ ಓಂಕಾರದ ಉಪಾಸನೆಯಿಂದ ಮಾತ್ರವೇ[1] ಫಲವು ದೊರಕುತ್ತದೆ ಎಂದು ತಿಳಿಯಬಾರದು, ಮತ್ತೇನೆಂದರೆ ಸರ್ವಸಾಮೋಪಾಸನೆಗಳಿಂದಲೂ ಕರ್ಮಗಳಿಂದಲೂ ಅಪ್ರಾಪ್ಯವಾಗಿರುವ ಫಲವಿದೆಯಲ್ಲ, ಆ ಅಮೃತತ್ವವೆಂಬ ಫಲವೂ[2] ಕೇವಲ[3] ಓಂಕಾರದ ಉಪಾಸನೆಯಿಂದ ದೊರಕುತ್ತದೆ ಎಂದು (ತಿಳಿಯಬೇಕು)– ಎಂದು ಅದನ್ನು ಹೊಗಳುವದಕ್ಕಾಗಿ ಸಾಮಪ್ರಕರಣದಲ್ಲಿ[4] ಅದನ್ನು ಹೇಳಿರುತ್ತದೆ.

## ಪ್ರಣವಸಂಸ್ಥನಿಗೆ ಅಮೃತತ್ವ

(ಭಾಷ್ಯ)

೧೭೬ ತ್ರಯಃ ತ್ರಿಸಂಖ್ಯಾಕಾ ಧರ್ಮಸ್ಯ ಸ್ಕನ್ಧಾಃ ಧರ್ಮಸ್ಕನ್ಧಾಃ। ಧರ್ಮಪ್ರವಿಭಾಗಾಃ ಇತ್ಯರ್ಥಃ। ಕೇ ತೇ ಇತಿ ? ಆಹ। ಯಜ್ಞಃ ಅಗ್ನಿಹೋತ್ರಾದಿಃ, ಅಧ್ಯಯನಂ ಸನಿಯಮಸ್ಯ ಋಗಾದೇರಭ್ಯಾಸಃ, ದಾನಂ ಬಹಿರ್ವೇದಿ ಯಥಾಶಕ್ತಿ ದ್ರವ್ಯಸಂವಿಭಾಗೋ ಭಿಕ್ಷಮಾಣೇಭ್ಯಃ ಇತ್ಯೇಷ ಪ್ರಥಮೋ ಧರ್ಮಸ್ಕನ್ಧಃ। ಗೃಹಸ್ಥಸಮವೇತತ್ವಾತ್ ತನ್ನಿರ್ವರ್ತಕೇನ ಗೃಹಸ್ಥೇನ ನಿರ್ದಿಶ್ಯತೇ। ಪ್ರಥಮಃ ಏಕಃ ಇತ್ಯರ್ಥಃ। ದ್ವಿತೀಯತೃತೀಯಶ್ರವಣಾತ್ ನ ಆದ್ಯರ್ಥಃ। ತಪ ಏವ ದ್ವಿತೀಯಃ। ತಪಃ ಇತಿ ಕೃಚ್ಛ್ರಚಾನ್ದ್ರಾಯಣಾದಿ। ತದ್ವಾನ್ ತಾಪಸಃ ಪರಿವ್ರಾಡ್ವಾ । ನ ಬ್ರಹ್ಮಸಂಸ್ಥಃ। ಆಶ್ರಮಧರ್ಮಮಾತ್ರಸಂಸ್ಥಃ[5] । ಬ್ರಹ್ಮಸಂಸ್ಥಸ್ಯ ತು ಅಮೃತತ್ವಶ್ರವಣಾತ್ । ದ್ವಿತೀಯಃ ಧರ್ಮಸ್ಕನ್ಧಃ । ಬ್ರಹ್ಮಚಾರೀ ಆಚಾರ್ಯಕುಲೇ ವಸ್ತುಂ ಶೀಲಮ್ ಅಸ್ಯ ಇತಿ ಆಚಾರ್ಯಕುಲವಾಸೀ। ಅತ್ಯನ್ತಂ ಯಾವಜ್ಜೀವಮ್ ಆತ್ಮಾನಂ ನಿಯಮೈಃ ಆಚಾರ್ಯಕುಲೇ ಅವಸಾದಯನ್ ಕ್ಷಪಯನ್ ದೇಹಂ ತೃತೀಯೋ ಧರ್ಮಸ್ಕನ್ಧಃ। ಅತ್ಯನ್ತಮ್ ಇತ್ಯಾದಿವಿಶೇಷಣಾತ್ ನೈಷ್ಠಿಕ ಇತಿ ಗಮ್ಯತೇ। ಉಪಕುರ್ವಾಣಸ್ಯ ಸ್ವಾಧ್ಯಾಯಗ್ರಹಣಾರ್ಥತ್ವಾತ್ ನ ಪುಣ್ಯಲೋಕತ್ವಂ ಬ್ರಹ್ಮಚರ್ಯೇಣ । ಸರ್ವ ಏತೇ

---

1. ಈ ಉಪನಿಷತ್ತಿನ ಒಂದನೆಯ ಅಧ್ಯಾಯದಲ್ಲಿ ಉದ್ಗೀಥಾವಯವವಾಗಿರುವ ಓಂಕಾರವನ್ನು ಬಗೆಬಗೆಯಾಗಿ ಉಪಾಸನೆಮಾಡುವ ವಿಧಾನವನ್ನು ಹೇಳಿರುತ್ತದೆ. ಆ ಉಪಾಸನೆಗಳು ಉದ್ಗಾತೃವಿಗೆ ಮಾತ್ರ ಹೇಳಿದವುಗಳಾದ್ದರಿಂದ ಕರ್ಮಕ್ಕೆ ಸಂಬಂಧಪಟ್ಟಿರುತ್ತವೆ.

2. ಇನುವರೆಗೆ ಹೇಳಿರುವ ಯಾವ ಉಪಾಸನೆಗಾಗಲಿ ಯಾವ ಕರ್ಮಕ್ಕಾಗಲಿ ಅಮೃತತ್ವವು ಫಲವಲ್ಲ

3. ಕರ್ಮಕ್ಕೆ ಸಂಬಂಧವಿಲ್ಲದೆ ಸ್ವತಂತ್ರವಾಗಿರುವ.

4. ಪ್ರಕರಣವು ಸಾಮೋಪಾಸನೆಯದಾದರೂ ಕರ್ಮಕ್ಕೆ ಸಂಬಂಧಪಟ್ಟಿದ್ದರೂ ಓಂಕಾರವನ್ನು ಸ್ತುತಿಸುವದಕ್ಕಾಗಿ ಅದರ ಸ್ವತಂತ್ರೋಪಾಸನೆಯನ್ನು ಇಲ್ಲಿ ಪ್ರಾಸಂಗಿಕವಾಗಿ ಹೇಳಿದೆ. ಈ ಉಪಾಸನೆಯು ಸಾಮಪ್ರಕರಣಕ್ಕೇನೂ ಸೇರಿದ್ದಲ್ಲ ಎಂದು ಭಾವ.

5. ಅನುವಾದದ ಟಿಪ್ಪಣಿಯನ್ನು ನೋಡಿ.

ತ್ರಯೋಽಪಿ ಆಶ್ರಮಿಣಃ ಯಥೋಕ್ತೈರ್ಧರ್ಮೈಃ ಪುಣ್ಯಲೋಕಾ ಭವನ್ತಿ। ಪುಣ್ಯೋ ಲೋಕೋ ಯೇಷಾಂ ತ ಇಮೇ ಪುಣ್ಯಲೋಕಾಃ ಆಶ್ರಮಿಣೋ ಭವನ್ತಿ। ಅವಶಿಷ್ಟಸ್ತು ಅನುಕ್ತಃ ಪರಿವ್ರಾಟ್ ತುರೀಯಃ[1] ಬ್ರಹ್ಮಸಂಸ್ಥಃ ಬ್ರಹ್ಮಣಿ ಸಮ್ಯಕ್ಸ್ಥಿತಃ। ಸಃ ಅಮೃತತ್ವಂ ಪುಣ್ಯಲೋಕವಿಲಕ್ಷಣಮ್ ಅಮರಣಭಾವಮ್ ಆತ್ಯನ್ತಿಕಮ್ ಏತಿ। ನಾಪೇಕ್ಷಿಕಮ್ ದೇವಾದ್ಯಮೃತತ್ವವತ್। ಪುಣ್ಯಲೋಕಾತ್ ಪೃಥಕ್ ಅಮೃತತ್ವಸ್ಯ ವಿಭಾಗಕರಣಾತ್। ಯದಿ ಚ ಪುಣ್ಯಲೋಕಾತಿಶಯ ಮಾತ್ರಮ್ ಅಮೃತತ್ವಮ್। ಅಭವಿಷ್ಯತ್ ತತಃ ಪುಣ್ಯಲೋಕತ್ವಾದ್ ವಿಭಕ್ತಂ ನಾ ವಕ್ಷ್ಯತ್। ವಿಭಕ್ತೋಪದೇಶಾಚ್ಚ ಆತ್ಯನ್ತಿಕಮ್ ಅಮೃತತ್ವಮ್ ಇತಿ ಗಮ್ಯತೇ॥

(ಭಾಷ್ಯಾರ್ಥ)

ಮೂರು ಎಂದರೆ ಮೂರು ಸಂಖ್ಯೆಯ ಧರ್ಮಸ್ಕಂಧಗಳು—ಧರ್ಮದ ಸ್ಕಂಧ ಗಳು, ಧರ್ಮದ ಪ್ರವಿಭಾಗಗಳು (ಇವೆ) ಎಂದರ್ಥ. ಅವು ಯಾವವು? ಎಂದರೆ (ಶ್ರುತಿ) ಹೇಳುತ್ತದೆ. ಯಜ್ಞವು, ಎಂದರೆ ಅಗ್ನಿಹೋತ್ರವೇ ಮುಂತಾದದ್ದು, ಅಧ್ಯ ಯನವು, ಎಂದರೆ ನಿಯಮಸಹಿತವಾಗಿ ಋಗಾದಿಗಳನ್ನು ಅಭ್ಯಾಸಮಾಡುವದು[2], ದಾನವು ಎಂದರೆ ವೇದಿಯ ಹೊರಗೆ[3] ಬೇಡಿದವರಿಗೆ ಯಥಾಶಕ್ತಿಯಾಗಿ ದ್ರವ್ಯ ವನ್ನು ಹಂಚಿಕೊಡುವದು—ಎಂಬಿದು ಒಂದನೆಯ ಧರ್ಮಸ್ಕಂಧವು. (ಇದು) ಗೃಹಸ್ಥನಿಗೆ ಸಂಬಂಧಪಟ್ಟದ್ದಾದ್ದರಿಂದ (ಈ ಧರ್ಮವಿಭಾಗವನ್ನು) ಅದನ್ನು ಮಾಡುವ ಗೃಹಸ್ಥನಿಂದ (ಗೃಹಸ್ಥಾಶ್ರಮ ಎಂದು) ನಿರ್ದೇಶಮಾಡಿರುತ್ತದೆ. (ಈ ಆಶ್ರಮವು) ಪ್ರಥಮವು ಎಂದರೆ ಒಂದು ಎಂದರ್ಥ, ಮೊದಲನೆಯದು ಎಂದರ್ಥವಲ್ಲ, ಏಕೆಂದರೆ (ಮುಂದೆ) ಎರಡನೆಯದು, ಮೂರನೆಯದು ಎಂದು ಶ್ರುತಿಯಲ್ಲಿದೆ[4] ತಪಸ್ಸೇ ಎರಡನೆಯದು ತಪಸ್ಸು ಎಂದರೆ ಕೃಚ್ಛ್ರಚಾಂದ್ರಾಯಣಾದಿಗಳು, ಅವನ್ನುಳ್ಳ ವನು ತಾಪಸನು, ಅಥವಾ (ಇಲ್ಲಿ ತಪಸ್ಸು ಎಂದರೆ) ಆಶ್ರಮಧರ್ಮಮಾತ್ರದಲ್ಲಿರುವ

---

1. ಈ ಮಾತು ವಾ॥ ಅ॥ ಪುಸ್ತಕಗಳಲ್ಲಿದೆ, ಇದು ಇಲ್ಲದಿದ್ದರೂ ಸಾಗುತ್ತದೆ.

2. ಗೃಹಸ್ಥನಿಗೂ ನಿಯಮದಿಂದ ವೇದಾಭ್ಯಾಸವನ್ನು ಮಾಡುವನೆಂಬ, ಬ್ರಹ್ಮಯಜ್ಞ ವನ್ನು ಮಾಡುವದೆಂಬ ಧರ್ಮವಿದೆ.

3. ವೇದಿಯಲ್ಲಿ ಕೊಡುವ ದಕ್ಷಿಣೆಯು ಯಜ್ಞಾಂಗವು, ಆದ್ದರಿಂದ ಯಜ್ಞದ ವೇದಿಯಲ್ಲಲ್ಲದೆ ಕೊಡುವದನ್ನೇ ಇಲ್ಲಿ ದಾನವೆಂದಿದೆ.

4. ವಾನಪ್ರಸ್ಥವು ಎರಡನೆಯದು, ಆಚಾರ್ಯಕುಲವಾಸಿತ್ವವು ಮೂರನೆಯದು–ಎಂದಿರುವದರಿಂದ ಇಲ್ಲಿ ಆಶ್ರಮಗಳ ಕ್ರಮವನ್ನು ಹೇಳಿಲ್ಲ, ಆದ್ದರಿಂದ ಗೃಹಸ್ಥಾಶ್ರಮವು ಪ್ರಥಮವು, ಎಂದರೆ ಒಂದು ಎಂದಿಷ್ಟೇ ಅರ್ಥ. ಮೂರು ಆಶ್ರಮಗಳು ಯಾವವೆಂಬುದನ್ನು ಅನುವಾದಮಾಡುವದು ಮಾತ್ರ ಇಲ್ಲಿ ವಿವಕ್ಷಿತ- ಎಂದರ್ಥ.

ಪರಿವ್ರಾಜಕನು[1], ಬ್ರಹ್ಮಸಂಸ್ಥನಲ್ಲ, ಏಕೆಂದರೆ ಬ್ರಹ್ಮಸಂಸ್ಥನಿಗಾದರೋ ಅಮೃತತ್ವ (ಫಲವೆಂದು) ಶ್ರುತಿಯಲ್ಲಿ (ಬೇರೆಯಾಗಿ) ಹೇಳಿದೆ[2]. (ಇದು) ಎರಡನೆಯ ಸ್ಕಂಧವು. ಅತ್ಯಂತವಾಗಿ ಎಂದರೆ ಜೀವವಿರುವವರೆಗೂ ನಿಯಮಗಳಿಂದ ತನ್ನನ್ನು ಸವೆಯಿಸಿಕೊಳ್ಳುತ್ತಿರುವವನು, ದೇಹವನ್ನು ಕ್ಷಯಗೊಳಿಸುತ್ತಿರುವ ಆಚಾರ್ಯನ ಮನೆಯಲ್ಲಿಯೇ ವಾಸಮಾಡುವ ಸ್ವಭಾವದವನಾದ ಆಚಾರ್ಯಕುಲವಾಸಿಯು ಮೂರನೆಯ ಸ್ಕಂಧವು (ಇಲ್ಲಿ) ಅತ್ಯಂತವಾಗಿ ಎಂದು ಮುಂತಾಗಿರುವ ವಿಶೇಷಣದಿಂದ ನೈಷ್ಠಿಕಬ್ರಹ್ಮಚಾರಿ ಎಂದು ಗೊತ್ತಾಗುತ್ತದೆ. ಉಪಕುರ್ವಾಣ (ಬ್ರಹ್ಮಚಾರಿಯಾಗಿ) ಸ್ವಾಧ್ಯಾಯಗ್ರಹಣಕ್ಕಾಗಿ (ಬ್ರಹ್ಮಚಾರಿಯಾಗಿರುವದರಿಂದ) (ಅವನಿಗೆ) ಬ್ರಹ್ಮಚರ್ಯದಿಂದ ಪುಣ್ಯಲೋಕ(ಫಲವಿಲ್ಲ).

ಇವರೆಲ್ಲರೂ, (ಈ) ಮೂರು ಆಶ್ರಮದವರೂ (ಈ) ಮೇಲೆ ಹೇಳಿರುವ ಧರ್ಮಗಳಿಂದ ಪುಣ್ಯಲೋಕರಾಗುವರು, ಪುಣ್ಯವಾದ ಲೋಕ ಯಾರಿಗೆ ಇರುವದೋ ಆ ಈ (ಮೂವರು) ಆಶ್ರಮಿಗಳು ಪುಣ್ಯಲೋಕರಾಗುವರು[3]. ಇನ್ನು ಉಳಿದ (ಈವರೆಗೆ) ಹೇಳದಿರುವ **ಪರಿವ್ರಾಜಕನು**[4] ಬ್ರಹ್ಮಸಂಸ್ಥನು, ಎಂದರೆ ಬ್ರಹ್ಮದಲ್ಲಿ ಚೆನ್ನಾಗಿ ನೆಲೆನಿಂತವನು (ಇದಾನಷ್ಟೆ), ಅವನು ಪುಣ್ಯಲೋಕಕ್ಕಿಂತ ವಿಲಕ್ಷಣವಾದ ಅಮೃತತ್ವವನ್ನು ಆತ್ಯಂತಿಕವಾದ ಅಮರಣಭಾವವನ್ನು[5] ಹೊಂದು

---

1. ಸಂನ್ಯಾಸಾಶ್ರಮರೂಪವಾದ ಪಾರಿವ್ರಾಜ್ಯವನ್ನು ಸ್ವೀಕರಿಸಿ ಯಜ್ಞೋಪವೀತ ದಂಡಕಮಂಡಲ್ವಾದಿಗಳನ್ನು ಧರಿಸುವವನು. ಇವನಿಗೆ ಬ್ರಹ್ಮಲೋಕಪ್ರಾಪ್ತಿಯಾಗುವದೆಂದು ಸ್ಮೃತಿ.ಬೃ. ೩-೫-೧ (ಭಾ.ಭಾ. ೬೦)ನ್ನು ನೋಡಿ. 'ಇಲ್ಲಿ ಪರಿವ್ರಾಡ್ವಾ ಆಶ್ರಮಧರ್ಮಮಾತ್ರಸಂಸ್ಥಃ । ನ ಬ್ರಹ್ಮಸಂಸ್ಥಃ । ಬ್ರಹ್ಮಸಂಸ್ಥಸ್ಯ ತು ' ಈ ಅನುಕ್ರಮದಲ್ಲಿ ಮೂಲವಲ್ಲಿ ವಾಕ್ಯಗಳಿರಬೇಕಾಗಿತ್ತೆಂದು ತೋರುತ್ತದೆ. 'ಅಥವಾ ಪರಿವ್ರಾಜಕನು' ಎಂಬಲ್ಲಿ ವಿಕಲ್ಪವನ್ನು ಹೇಳಬಾರದು, ವಾನಪ್ರಸ್ಥ ಮತ್ತು ಆಶ್ರಮಪರಿವ್ರಾಜಕ– ಇಬ್ಬರನ್ನೂ ತಂತ್ರದಿಂದ ಹೇಳಿದೆ ಎಂದು ಅರ್ಥವನ್ನು ಮಾಡಬೇಕು. ಹಾಗಿಲ್ಲದಿದ್ದರೆ ವಾನಪ್ರಸ್ಥಾಶ್ರಮವನ್ನು ಕೈಬಿಟ್ಟಂತೆ ಆದೀತು

2. ಹಿಂದಿನ ಆಶ್ರಮದವರಿಂದ ಬ್ರಹ್ಮಸಂಸ್ಥಪರಿವ್ರಾಜಕನನ್ನು ವಿಂಗಡಿಸಿಕೊಂಡು ಬ್ರಹ್ಮಸಂಸ್ಥೋಽಮೃತತ್ವಮೇತಿ ಎಂದು ಹೇಳಿದೆ ಎಂದರ್ಥ.

3. ಇಲ್ಲಿ ಪುಣ್ಯಲೋಕವೆಂದರೆ ಸ್ವರ್ಗಮಾತ್ರವಲ್ಲ; ಪಂಚಾಗ್ನ್ಯುಪಾಸನೆಯೇ ಮುಂತಾದವುಗಳಿಂದ ಉತ್ತರಮಾರ್ಗದ ಮೂಲಕ ಪಡೆಯುವ ಬ್ರಹ್ಮಲೋಕವೂ ಇದರಲ್ಲಿ ಸೇರಿದೆ. ಬೃ. ಭಾ. ೬–೨–೧೫ (ಭಾ. ಭಾ. ೪೪೭). ಬರಿಯ ಕರ್ಮಿಗಳಿಗೆ ಪಿತೃಲೋಕದ ಬೇರೆಯ ಫಲವಿದೆ (ಬೃ. ಭಾ. ೬–೨–೧೬ ಭಾ. ಭಾ. ೪೪೮).

4. ಮುಖ್ಯಪರಿವ್ರಾಜಕನಾದ ಪರಮಹಂಸನು.

5. ಅಮರಣನಾದ ಆತ್ಮನಲ್ಲಿಯೇ ಆತ್ಮರೂಪದಿಂದ ನಿಂತುಬಿಡುವ ಮೋಕ್ಷವನ್ನು ಎಂದರ್ಥ.

ತ್ತಾನೆ, ದೇವಾದಿಗಳನ್ನು (ಸೇರುವ) ಅಮೃತತ್ವದಂತೆ ಆಪೇಕ್ಷಿಕವಾದ ಅಮೃತತ್ವ ವ)ನ್ನಲ್ಲ.[1] ಏಕೆಂದರೆ ಪುಣ್ಯಲೋಕಕ್ಕಿಂತ ಬೇರೆಯೇ ಆಗಿ ಅಮೃತತ್ವವನ್ನು ವಿಂಗಡಮಾಡಿರುತ್ತದೆ. (ಇಲ್ಲಿ ಹೇಳಿರುವ) ಅಮೃತತ್ವವು ಪುಣ್ಯಲೋಕದ ಅತಿಶಯಮಾತ್ರವೇ ಆಗಿದ್ದರೆ, ಆಗ ಪುಣ್ಯಲೋಕದಿಂದ (ಅದನ್ನು) ವಿಂಗಡಿಸಿ ಹೇಳುತ್ತಿರಲಿಲ್ಲ. (ಆದರೆ) ವಿಂಗಡಿಸಿಯೇ ಹೇಳಿರುವದರಿಂದ (ಇದು) ಆತ್ಯಂತಿಕ ವಾದ ಅಮೃತತ್ವವೇ ಎಂದು ಗೊತ್ತಾಗುತ್ತದೆ [2]

## ಇಲ್ಲಿ ಫಲವನ್ನು ಹೇಳಿರುವದು ಪ್ರಣವಸ್ತುತಿಗಾಗಿಯೇ

(ಭಾಷ್ಯ)

೧೭೭. ಅತ್ರ ಚ ಆಶ್ರಮಧರ್ಮಫಲೋಪನ್ಯಾಸಃ ಪ್ರಣವಸೇವಾ ಸ್ತುತ್ಯರ್ಥಮ್, ನ ತತ್ಫಲವಿಧ್ಯರ್ಥಮ್[3] । ಸ್ತುತಯೇ ಚ ಪ್ರಣವಸೇವಾಯಾಃ, ಆಶ್ರಮಧರ್ಮಫಲವಿಧಯೇ ಚ ಇತಿ ಹಿ ಭಿದ್ಯೇತ ವಾಕ್ಯಮ್ । ತಸ್ಮಾತ್ ಸ್ಮೃತಿ ಪ್ರಸಿದ್ಧಾಶ್ರಮಫಲಾನುವಾದೇನ ಪ್ರಣವಸೇವಾಫಲಮ್ ಅಮೃತತ್ವಂ ಬ್ರುವನ್ ಪ್ರಣವಸೇವಾಂ ಸ್ತೌತಿ । ಯಥಾ ಪೂರ್ಣವರ್ಮಣಃ ಸೇವಾ ಭುಕ್ತಪರಿಧಾನಮಾತ್ರ ಫಲಾ, ರಾಜವರ್ಮಣಸ್ತು ಸೇವಾ ರಾಜ್ಯತುಲ್ಯಫಲಾ ಇತಿ, ತದ್ವತ್ । ಪ್ರಣವಶ್ಚ ತತ್ ಸತ್ಯಂ ಪರಂ ಬ್ರಹ್ಮ । ತತ್ಪ್ರತೀಕತ್ವಾತ್ । "ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್" (ಕ ೧-೨-೧೬) ಇತ್ಯಾದ್ಯಾಮ್ನಾನಾತ್ ಕಾರಕೇ ಯುಕ್ತಂ ತತ್ಸೇವಾತೋಽಮೃತತ್ವಮ್ ॥

(ಭಾಷ್ಯಾರ್ಥ)

ಇಲ್ಲಿ ಆಶ್ರಮಧರ್ಮಗಳಿಗೆ ಫಲವನ್ನು ಹೇಳಿರುವದು ಪ್ರಣವಸೇವೆಯನ್ನು ಹೊಗಳುವದಕ್ಕಾಗಿಯೇ ಹೊರತು ಅವುಗಳ ಫಲವನ್ನು ವಿಧಾನಮಾಡುವದಕ್ಕಲ್ಲ.[4] ಏಕೆಂದರೆ ಪ್ರಣವಸೇವೆಯನ್ನು ಹೊಗಳುವದಕ್ಕೂ (ಬಂದಿದೆ), ಆಶ್ರಮಧರ್ಮಗಳ

---

1 ಬ್ರಹ್ಮಲೋಕಾಂತವಾದ ದೇವಲೋಕಪ್ರಾಪ್ತಿಯೂ ಪ್ರಲಯಕಾಲದವರೆಗಿರುವದ ರಿಂದ ಅದೂ ಇತರ ಲೋಕಗಳ ಅಪೇಕ್ಷೆಯಿಂದ ಅಮೃತತ್ವವೆನಿಸುತ್ತದ. ಆದರೆ ಜ್ಞಾನ ವಿಲ್ಲದಿದ್ದರೆ ಬ್ರಹ್ಮಲೋಕದಿಂದಲೂ ಪುನರಾವೃತ್ತಿಯುಂಟು. ಇದನ್ನು ಬೃ. ಭಾ ೬-೨-೧೫ (ಭಾ ಭಾ ೪೫೦)ರಲ್ಲಿ ಹೇಳಿದೆ. ಇಲ್ಲಿಯೂ ಮುಂದೆ ೫-೧೦-೨ರ ಭಾಷ್ಯದಲ್ಲಿ ಹೀಗೆಂದೇ ಹೇಳಿದೆ.

2. ಅಮೃತತ್ವವೆಂದರೆ ಬ್ರಹ್ಮಲೋಕಪ್ರಾಪ್ತಿಯಾಗಿದ್ದರೆ ಮೊದಲನೆಯ ಮೂವರಿಗೆ ಪುಣ್ಯಲೋಕ, ಬ್ರಹ್ಮಸಂಸ್ಥನಿಗೆ ಅಮೃತತ್ವ- ಎಂದು ವಿಂಗಡಿಸಿಹೇಳುವದಕ್ಕೆ ಕಾರಣವಿರಲಿಲ್ಲ ಎಂದರ್ಥ.

3. ವಾ॥ ಪಾಠದಲ್ಲಿ ಸ್ತುತ್ಯರ್ಥಃ, ವಿಧ್ಯರ್ಥಃ- ಎಂದಿದೆ

4 ಇಂಥಿಂಥ ಆಶ್ರಮಕರ್ಮಕ್ಕೆ ಇಂಥಿಂಥ ಫಲ ಎಂದು ಹೇಳುವದಕ್ಕೆ ಬಂದಿಲ್ಲ.

ಫಲವನ್ನು ವಿಧಿಸುವದಕ್ಕೂ (ಬಂದಿದೆ) ಎಂದಾದರೆ ವಾಕ್ಯವು ಭಿನ್ನವಾಗುತ್ತದೆ[1] **ಆದ್ದರಿಂದ ಸ್ಮೃತಿಪ್ರಸಿದ್ಧವಾಗಿರುವ ಆಶ್ರಮಫಲಗಳನ್ನು ಅನುವಾದ ಮಾಡಿಕೊಂಡು, ಪ್ರಣವಸೇವೆಯ ಫಲವಾದ ಅಮೃತತ್ವವನ್ನು ಹೇಳುವದರಮೂಲಕ ಪ್ರಣವಸೇವೆಯನ್ನು ಹೊಗಳಿರುತ್ತದೆ.** - '**ಪೂರ್ಣವರ್ಮನ** ಸೇವೆಯು ಹೊಟ್ಟೆಬಟ್ಟೆಗಳಿಗೆ ಮಾತ್ರ (ಆಗುವ) ಫಲವುಳ್ಳದ್ದು. ಆದರೆ **ರಾಜವರ್ಮನ** ಸೇವೆಯು ರಾಜ್ಯಕ್ಕೆ ಸಮನಾದ ಫಲವುಳ್ಳದ್ದು' ಎಂಬ (ವಾಕ್ಯಕ್ಕೆ) ಹೇಗೋ ಹಾಗೆಯೇ (ಈ ವಾಕ್ಯಕ್ಕೂ ಅರ್ಥವು)[2] ಪ್ರಣವವು ಆ ಸತ್ಯವಾದ ಪರಬ್ರಹ್ಮವೇ, ಏಕೆಂದರೆ ಅದಕ್ಕೆ ಪ್ರತೀಕವಾಗಿರುತ್ತದೆ.[3] "ಈ ಅಕ್ಷರವೇ (ಅಪರ)ಬ್ರಹ್ಮವು, ಈ ಅಕ್ಷರವೇ ಪರಬ್ರಹ್ಮವು" (ಕ ೧-೨-೧೬) ಎಂದು ಕಾಠಕದಲ್ಲಿ ಪಠಿಸಿರುವದರಿಂದ ಅದರ ಸೇವೆಯಿಂದ ಅಮೃತತ್ವವಾಗುವದು ಯುಕ್ತ[4]

---

1. ಒಂದು ತಾತ್ಪರ್ಯವುಳ್ಳದ್ದು ಒಂದು ವಾಕ್ಯವು, ಹೀಗಿರುವಲ್ಲಿ ಎರಡು ತಾತ್ಪರ್ಯಗಳನ್ನು ಹೇಳುವದಾದರೆ ಇವನ್ನು ಅನವಶ್ಯವಾಗಿ ಎರಡು ವಾಕ್ಯಗಳೆಂದು ವಿಂಗಡಿಸಿದಂತೆ ಆಗುತ್ತದೆ. ಇದು ಮೀಮಾಂಸಾನ್ಯಾಯಕ್ಕೆ ವಿರುದ್ಧ ಹಿಂದೆ ಹೇಳಿದ್ದು ಮುಖ್ಯಬ್ರಹ್ಮಸಂಸ್ಥನಿಗೆ ನಿರಂಕುಶವಾದ ಅಮೃತತ್ವವಾಗುವದೆಂದು, ಇಲ್ಲಿ ಹೇಳಿರುವದು ಪ್ರಣವಪ್ರತೀಕೋಪಾಸಕನಿಗೆ ಕ್ರಮಮುಕ್ತಿಯಾಗುವದೆಂದು - ಎಂದು ಟೀಕೆಯಲ್ಲಿ ವಿಂಗಡಿಸಿದೆ ಆದರೆ ಪ್ರಕರಣದಲ್ಲಿ ಓಂಕಾರೋಪಾಸನೆಯು ವಿವಕ್ಷಿತವೆಂಬುದು ನಿರ್ವಿವಾದವಾಗಿರುವದರಿಂದ ಹೀಗೆ ವಾಕ್ಯಾರ್ಥವನ್ನು ವಿಂಗಡಿಸುವದು ಯುಕ್ತವೆಂತ ನಮಗೆ ತೋರುವದಿಲ್ಲ. ಪ್ರಣವಸೇವೆಯಿಂದ ಆತ್ಯಂತಿಕವಾದ ಅಮೃತತ್ವವಾಗುತ್ತದೆ ಎಂಬುದು ಜ್ಞಾನಕ್ಕೂ ಉಪಾಸನೆಗೂ ಸಮಾನ, ಮಿಕ್ಕ ಆಶ್ರಮಗಳಿಗೆ ಆಪೇಕ್ಷಿಕಾಮೃತತ್ವವೇ ಹೊರತು ಆತ್ಯಂತಿಕಾಮೃತತ್ವವಿಲ್ಲ ಎಂಬುದೇ ಸ್ತುತಿಯ ಅಭಿಪ್ರಾಯವೆಂದೇ ಇಲ್ಲಿ ವಾಕ್ಯಾರ್ಥ

2. ಈ ವಾಕ್ಯಕ್ಕೆ ಅರ್ಥವೇನೆಂಬುದನ್ನು ನಿಶ್ಚಯಿಸುವದು ಕಠಿನವಾಗಿದೆ. ಏಕೆಂದರೆ ಪಂಚಾಗ್ನಿವಿದ್ಯೆಯ ಗೃಹಸ್ಥರಿಗೂ ವಾನಪ್ರಸ್ಥರಿಗೂ ಪುಣ್ಯಲೋಕಪ್ರಾಪ್ತಿಯು ಶ್ರುತಿಸಿದ್ಧವೇ ಆಗಿದೆ, ನೈಷ್ಠಿಕಬ್ರಹ್ಮಚಾರಿಗಳಿಗೆ ಮಾತ್ರ ಸ್ಮೃತಿಸಿದ್ಧವಾಗಿದೆ ಬೃ ಭಾ. ೬-೨-೧೫ (ಭಾ. ಭಾ ೪೪೭)ನ್ನು ನೋಡಿ ಸ್ಮೃತಿಸಿದ್ಧವಾದದ್ದನ್ನು ಶ್ರುತಿಯು ಅನುವಾದಮಾಡಲಾರದಾದ್ದರಿಂದ ಸ್ಮೃತ್ಯನುಮಿತಶ್ರುತಿಸಿದ್ಧ ಎಂದು ಅರ್ಥಮಾಡಬೇಕೆಂದು ಟೀಕೆಯಲ್ಲಿದೆ, ಆದರೆ ಬೃಹದಾರಣ್ಯಕ ೬-೩-೧೨ರ ಭಾಷ್ಯ (ಭಾ. ಭಾ. ೪೫೮)ಕ್ಕೆ ಶ್ರುತಿಯು ಕಾಲತ್ರಯವಿಷಯಕವಾದ್ದರಿಂದ ಸ್ಮೃತಿಯನ್ನು ಅನುವಾದಮಾಡಬಹುದು ಎಂದು ಟೀಕೆಯಲ್ಲಿ ಬರೆದಿದೆ ಮೀಮಾಂಸಾಕುಶಲರೇ ಇದರ ನಿಶ್ಚಯವನ್ನು ಹೇಳಬೇಕಾಗಿದೆ

3. ಓಂಕಾರವು ಪ್ರತೀಕವೂ ಆಗಿದೆ, ಅಭಿಧಾನವೂ ಆಗಿದೆ, ಆದರೂ ಪ್ರಕೃತದಲ್ಲಿ ಪ್ರತೀಕವಾಗಿ ಉಪಾಸನೆಗೆಂದೇ ವಿಹಿತವಾಗಿರುವದರಿಂದ ಪ್ರತೀಕವೆಂದಿದೆ

4. ಓಂಕಾರವನ್ನು ಪರಬ್ರಹ್ಮಕ್ಕೆ ಪ್ರತೀಕವಾಗಿ ಉಪಾಸನೆಮಾಡಿದರೂ ಕ್ರಮಮುಕ್ತಿಯಾಗುವದೆಂದು ಪ್ರಶ್ನೋಪನಿಷತ್ತಿನಲ್ಲಿ ತಿಳಿಸಿದೆ. ಸೂ. ಭಾ ೪-೩-೧೩ (ಭಾ. ಭಾ ೨೫೨) ನ್ನು ನೋಡಿ. ಇಲ್ಲಿಯೂ ಅಮೃತತ್ವಫಲವನ್ನು ಹೇಳಿ ಸ್ತುತಿಸಿರುವದರಿಂದ ಈ ಉಪಾಸನೆಯೂ ಕ್ರಮಮುಕ್ತಿದಾಯಕವೆಂದು ತಿಳಿಯಬೇಕು

# ಚರ್ಚೆ : ಬ್ರಹ್ಮಸಂಸ್ಥನೆಂದರೆ ಯಾರು ?

## ವೃತ್ತಿಕಾರರ ಮತ : ಯಾವ ಆಶ್ರಮದವರಾದರೂ ಬ್ರಹ್ಮಸಂಸ್ಥರಾಗಿರಬಹುದು

(ಭಾಷ್ಯ)

೧೭೮. ಅತ್ರಾಹುಃ ಕೇಚಿತ್। ಚತುರ್ಣಾಮ್ ಆಶ್ರಮಿಣಾಮ್ ಅವಿಶೇಷೇಣ ಸ್ವಕರ್ಮಾನುಷ್ಠಾನಾತ್[1] ಪುಣ್ಯಲೋಕತಾ ಇಹೋಕ್ತಾ ಜ್ಞಾನವರ್ಜಿತಾನಾಮ್ "ಸರ್ವ ಏತೇ ಪುಣ್ಯಲೋಕಾ ಭವನ್ತಿ" ಇತಿ। ನಾತ್ರ ಪರಿವ್ರಾಟ್ ಅವಶೇಷಿತಃ। ಪರಿವ್ರಾಜಕಸ್ಯಾಪಿ ಜ್ಞಾನಂ ಯಮಾ ನಿಯಮಾಶ್ಚ ತಪ ಏವೇತಿ "ತಪ ಏವ ದ್ವಿತೀಯಃ" ಇತ್ಯತ್ರ ತಪಃಶಬ್ದೇನ ಪರಿವ್ರಾಟ್ತಾಪಸೌ ಗೃಹೀತೌ। ಅತಸ್ತೇಷಾಮೇವ ಚತುರ್ಣಾಂ ಯೋ ಬ್ರಹ್ಮಸಂಸ್ಥಃ ಪ್ರಣವಸೇವಕಃ ಸೋಽಮೃತತ್ವಮೇತಿ ಇತಿ। ಚತುರ್ಣಾಮ್ ಅಧಿಕೃತತ್ವಾವಿಶೇಷಾತ್, ಬ್ರಹ್ಮಸಂಸ್ಥತ್ವೇಽಪ್ರತಿಷೇಧಾಚ್ಚ। ಸ್ವಕರ್ಮಚ್ಛಿದ್ರೇ ಚ ಬ್ರಹ್ಮಸಂಸ್ಥತಾಯಾಂ ಸಾಮರ್ಥ್ಯೋಪಪತ್ತೇಃ। ನ ಚ ಯಮವರಾಹಾದಿಶಬ್ದವತ್ ಬ್ರಹ್ಮಸಂಸ್ಥಶಬ್ದಃ ಪರಿವ್ರಾಜಕೇ ರೂಢಃ। ಬ್ರಹ್ಮಣಿ ಸಂಸ್ಥಿತಿನಿಮಿತ್ತಮ್ ಉಪಾದಾಯ ಪ್ರವೃತ್ತತ್ವಾತ್। ನ ಹಿ ರೂಢಿಶಬ್ದಾ ನಿಮಿತ್ತಮ್ ಉಪಾದದತೇ। ಸರ್ವೇಷಾಂ ಚ ಬ್ರಹ್ಮಣಿ ಸ್ಥಿತಿರುಪಪದ್ಯತೇ[2]। ಯತ್ರಯತ್ರ ನಿಮಿತ್ತಮಸ್ತಿ ಬ್ರಹ್ಮಣಿ ಸಂಸ್ಥಿತಿಃ ತಸ್ಯತಸ್ಯ ನಿಮಿತ್ತವತೋ ವಾಚಕಂ ಸನ್ತಂ ಬ್ರಹ್ಮಸಂಸ್ಥಶಬ್ದಂ ಪರಿವ್ರಾಡೇಕವಿಷಯೇ ಸಂಕೋಚೇ ಕಾರಣಾಭಾವಾತ್ ನಿರೋದ್ಧುಮ್ ಅಯುಕ್ತಮ್। ನ ಚ ಪಾರಿವ್ರಾಜ್ಯಾಶ್ರಮಧರ್ಮಮಾತ್ರೇಣ ಅಮೃತತ್ವಮ್। ಜ್ಞಾನಾನರ್ಥಕ್ಯಪ್ರಸಙ್ಗಾತ್। ಪಾರಿವ್ರಾಜ್ಯಧರ್ಮಯುಕ್ತಮೇವ ಜ್ಞಾನಮ್ ಅಮೃತತ್ವಸಾಧನಮ್ ಇತಿ ಚೇತ್। ನ। ಆಶ್ರಮಧರ್ಮತ್ವಾವಿಶೇಷಾತ್। ಧರ್ಮೋ ವಾ ಜ್ಞಾನವಿಶಿಷ್ಟೋಽಮೃತತ್ವಸಾಧನಮ್ ಇತ್ಯೇತದಪಿ ಸರ್ವಾಶ್ರಮಧರ್ಮಾಣಾಮ್ ಅವಿಶಿಷ್ಟಮ್। ನ ಚ ವಚನಮಸ್ತಿ ಪರಿವ್ರಾಜಕಸ್ಯೈವ ಬ್ರಹ್ಮಸಂಸ್ಥಸ್ಯ ಮೋಕ್ಷಃ ನಾನ್ಯೇಷಾಮ್ ಇತಿ। ಜ್ಞಾನಾನ್ಮೋಕ್ಷ ಇತಿ ಚ ಸರ್ವೋಪನಿಷದಾಂ ಸಿದ್ಧಾನ್ತಃ। ತಸ್ಮಾತ್ ಯ ಏವ ಬ್ರಹ್ಮಸಂಸ್ಥಃ ಸ್ವಾಶ್ರಮವಿಹಿತಧರ್ಮವತಾಮ್, ಸೋಽಮೃತತ್ವಮೇತಿ ಇತಿ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು ಹೇಳುತ್ತಾರೇನೆಂದರೆ, "ಇವರೆಲ್ಲರೂ ಪುಣ್ಯಲೋಕದವರಾಗುತ್ತಾರೆ" ಎಂದು ಇಲ್ಲಿ ಜ್ಞಾನವಿಲ್ಲದ ನಾಲ್ಕು ಆಶ್ರಮದವರಿಗೂ ಸಮಾನವಾಗಿ

---

1. 'ಸ್ವಧರ್ಮಾನುಷ್ಠಾನಾತ್' ಎಂದು ವಾ॥ ಅ॥ ಪಾಠ.

2. 'ಸಂಸ್ಥಿತಿ' ಎಂಬೇ ಮೂಲದಲ್ಲಿದ್ದು ಸ್ಥಿತಿ ಎಂದು ಲೇಖಕರು ಬರೆದುಕೊಂಡಿರಬಹುದೆಂದು ತೋರುತ್ತದೆ.

ಯೇ ಸ್ವಧರ್ಮಾನುಷ್ಠಾನದಿಂದ ಪುಣ್ಯಲೋಕ(ಪ್ರಾಪ್ತಿಯನ್ನು) ಹೇಳಿರುತ್ತದೆ ಯೇ ಹೊರತು ಪರಿವ್ರಾಜಕನನ್ನು ಈ (ವಾಕ್ಯ)ದಲ್ಲಿ ಉಳಿಸಿಕೊಂಡಿರುವದಿಲ್ಲ. ಪರಿವ್ರಾಜಕನಿಗೂ ಜ್ಞಾನ, ಯಮ, ನಿಯಮ -(ಎಂಬ ಧರ್ಮಗಳು) ತಪಸ್ಸೇ ಆದ್ದರಿಂದ "ತಪಸ್ಸೇ ಎರಡನೆಯದು ಎಂಬೀ (ವಾಕ್ಯ)ದಲ್ಲಿ ಪರಿವ್ರಾಟ್ತಾಪಸ ರಿಬ್ಬರನ್ನೂ ಗ್ರಹಿಸಿದೆ ಆದ್ದರಿಂದ ಆ ನಾಲ್ಕರೊಳಗೇ ಯಾವನು ಬ್ರಹ್ಮಸಂಸ್ಥ ನೋ, ಪ್ರಣವನೇಪಕನೋ, ಅವನು ಅಮೃತತ್ವವನ್ನು ಹೊಂದುತ್ತಾನೆ ಎಂದು (ಅವರು ಹೇಳುವರು,[1] ಏಕೆಂದರೆ ನಾಲ್ಕು ಆಶ್ರಮದವರಿಗೂ (ಬ್ರಹ್ಮಸಂಸ್ಥತೆಗೆ) ಅಧಿಕಾರವಿರುತ್ತದೆ (ಯಾರನ್ನೂ ಅನಧಿಕಾರಿಗಳೆಂದು) ನಿಷೇಧಿಸಿಯೂ ಇರುವದಿಲ್ಲ (ಎಲ್ಲರೂ) ಸ್ವಕರ್ಮವನ್ನು ಮಾಡದೆ ಇರುವ ಕಾಲದಲ್ಲಿ ಬ್ರಹ್ಮಸಂಸ್ಥರಾಗಿರುವ ಸಾಮರ್ಥ್ಯವಿರಬಹುದಾಗಿದೆ[2] ಯವವರಾಹಾದಿಶಬ್ದಗಳಂತೆ ಬ್ರಹ್ಮಸಂಸ್ಥ ಎಂಬ ಶಬ್ದವು ಪರಿವ್ರಾಜಕನಲ್ಲಿಯೇ ರೂಢವಾಗಿರುವದೂ ಇಲ್ಲ[3], ಏಕೆಂದರೆ ಬ್ರಹ್ಮದಲ್ಲಿ ಸಂಸ್ಥಿತಿ (ನೆಲೆನಿಂತಿರುವದು) ಎಂಬ ನಿಮಿತ್ತವನ್ನು ತೆಗೆದು ಕೊಂಡೇ (ಅದು) ಪ್ರವೃತ್ತನಾಗಿರುತ್ತದೆ. ರೂಢಿಶಬ್ದಗಳು ನಿಮಿತ್ತವನ್ನು ತೆಗೆದು ಕೊಂಡು (ಪ್ರವೃತ್ತ)ವಾಗಿರುವದಿಲ್ಲವಷ್ಟೆ[4] ಎಲ್ಲರಿಗೂ ಬ್ರಹ್ಮದಲ್ಲಿ ನಿಂತಿರುವ ದೆಂಬುದು ಆಗಬಹುದಾಗಿದೆ ಯಾವಯಾವನಿಗೆ ಬ್ರಹ್ಮದಲ್ಲಿ ನೆಲೆನಿಂತಿರುವದೆಂಬ ನಿಮಿತ್ತವಿರುವದೋ ಆಯಾ ನಿಮಿತ್ತವುಳ್ಳ (ಆಶ್ರಮಿ)ಯನ್ನು ಹೇಳಬಹುದಾಗಿ ರುವ (ಈ) ಬ್ರಹ್ಮಸಂಸ್ಥಶಬ್ದವನ್ನು ಸಂಕೋಚಿಸಿ (ಹೇಳುವದಕ್ಕೆ) ಕಾರಣವಿರು ವದಿಲ್ಲವಾದ್ದರಿಂದ[5] (ಅದನ್ನು) ಪರಿವ್ರಾಜಕನಲ್ಲಿಯೇ ತಡೆಗಟ್ಟಿ (ಉಪಯೋಗಿಸು ವದು) ಯುಕ್ತವಲ್ಲ

---

1 ಗೀ. ಭಾ. ೩ನೆಯ ಅಧ್ಯಾಯದ ಅವತರಣಿಕೆಯಲ್ಲಿಯೂ ಹೀಗೆಯೇ ಜ್ಞಾನ ಕರ್ಮಸಮುಚ್ಚಯದಿಂದ ಮೋಕ್ಷವಾಗಬಹುದೆಂಬ ವೃತ್ತಿಕಾರಮತವನ್ನು ಅನುವಾದಮಾಡಿ ಕೊಂಡು ಖಂಡಿಸಿದೆ

2 ಅಧಿಕಾರಕ್ಕೆ ಕಾರಣವಾದ ಅರ್ಥಿತ್ವ, ಸಾಮರ್ಥ್ಯ, ಜ್ಞಾನ, ಅಪ್ರತಿಷಿದ್ಧತ್ವ -ಇವು ಎಲ್ಲರಿಗೂ ಇರುವದರಿಂದ ಎಲ್ಲರೂ ಅಧಿಕಾರಿಗಳೇ ಎಂದು ಭಾವ

3 ಜೈ. ಸೂ ೧-೩-೮, ೯ ಇವುಗಳ ಶಾಬರಭಾಷ್ಯದಲ್ಲಿ ಯವವರಾಹಾದಿಶಬ್ದಗಳನ್ನು ಶಿಷ್ಟರು ರೂಢಿಯಲ್ಲಿ ಯಾವ ಅರ್ಥದಲ್ಲಿ ಬಳಸುತ್ತಾರೋ ಅದೇ ಅವಕ್ಕೆ ಅರ್ಥ -ಎಂದು ನಿರ್ಣಯಿಸಿದೆ ಹೀಗೆ ಬ್ರಹ್ಮಸಂಸ್ಥನೆಂದರೆ ಇಂಥವನು ಎಂಬ ರೂಢ್ಯರ್ಥವು ಯಾವದೂ ಇಲ್ಲ- ಎಂದು ಅಭಿಪ್ರಾಯ.

4. ನಿಮಿತ್ತವನ್ನು ತೆಗೆದುಕೊಳ್ಳುವ ಶಬ್ದಗಳು ಯೌಗಿಕಶಬ್ದಗಳು; ಆದ್ದರಿಂದ ಬ್ರಹ್ಮಸಂಸ್ಥಶಬ್ದವೂ ಯೌಗಿಕವೇ ಎಂದು ಅಭಿಪ್ರಾಯ.

5. ವಾಚ್ಯಾರ್ಥವನ್ನೆಲ್ಲ ತೆಗೆದುಕೊಳ್ಳುವದಕ್ಕೆ ಅಡ್ಡಿ ಏನಾದರೂ ಇದ್ದರೆ ಸಂಕೋಚ ಮಾಡಿ ಅರ್ಥಮಾಡಿ ಹೇಳಬೇಕಾಗಿತ್ತು; ಇಲ್ಲಿ ಹಾಗೇನೂ ಇಲ್ಲ.

ಇದೂ ಅಲ್ಲದೆ ಪಾರಿವ್ರಾಜ್ಯಾಶ್ರಮದ ಧರ್ಮಮಾತ್ರದಿಂದಲೇ[1] ಅಮೃತತ್ವವು (ದೊರಕುತ್ತದೆ ಎನ್ನುವದಕ್ಕೆ ಬರುವದಿಲ್ಲ), ಏಕೆಂದರೆ (ಆಗ) ಜ್ಞಾನವು ವ್ಯರ್ಥವೆಂದಾಗುವದು. ಪಾರಿವ್ರಾಜ್ಯಧರ್ಮದಿಂದೊಡಗೂಡಿದ ಜ್ಞಾನವೇ ಅಮೃತತ್ವಕ್ಕೆ ಸಾಧನವು ಎಂದರೆ, (ಅದು ಸರಿ)ಯಲ್ಲ; ಏಕೆಂದರೆ ಆಶ್ರಮಧರ್ಮವೆಂಬ (ವಿಷಯದಲ್ಲಿ ಅದರಲ್ಲಿ ಯಾವ) ವಿಶೇಷವೂ ಇಲ್ಲ[2] (ಅಥವಾ ಆಶ್ರಮಧರ್ಮವೇ) ಜ್ಞಾನವಿಶಿಷ್ಟವಾದರೆ ಅಮೃತತ್ವಕ್ಕೆ ಸಾಧನ ಎಂದರೆ ಅದೂ ಸರ್ವಾಶ್ರಮಧರ್ಮಗಳಿಗೂ ಸಮಾನವಾಗಿರುತ್ತದೆ.[3] ಬ್ರಹ್ಮಸಂಸ್ಥನಾದ ಪರಿವ್ರಾಜಕನಿಗೊಬ್ಬನಿಗೇ ಮೋಕ್ಷವು ಮಿಕ್ಕ (ಆಶ್ರಮಿ)ಗಳಿಗಲ್ಲ ಎಂಬ ವಚನವೂ ಇಲ್ಲ[4] ಜ್ಞಾನದಿಂದ ಮೋಕ್ಷವು ಎಂಬುದು ಸರ್ವೋಪನಿಷತ್ತುಗಳ ಸಿದ್ಧಾಂತವಾಗಿರುತ್ತದೆ ಆದ್ದರಿಂದ ತಮ್ಮತಮ್ಮ ಆಶ್ರಮಧರ್ಮಗ(ಳನ್ನು ಮಾಡುತ್ತಿರು)ವವರೊಳಗೆ ಯಾವನು ಬ್ರಹ್ಮಸಂಸ್ಥನೋ ಅವನೇ ಅಮೃತತ್ವವನ್ನು ಹೊಂದುತ್ತಾನೆ (ಎಂದೇ ವಾಕ್ಯಾರ್ಥ)

## ಸಿದ್ಧಾಂತ: ಅದ್ವೈತಜ್ಞಾನಿಯಾದ ಪರಮಹಂಸನೇ ಬ್ರಹ್ಮಸಂಸ್ಥನು

(ಭಾಷ್ಯ)

೧೭೯. ನ । ಕರ್ಮನಿಮಿತ್ತವಿದ್ಯಾಪ್ರತ್ಯಯಯೋರ್ವಿರೋಧಾತ್ । ಕರ್ತ್ರಾದಿಕಾರಕಕ್ರಿಯಾಫಲಭೇದಪ್ರತ್ಯಯವತ್ತ್ವಂ ಹಿ ನಿಮಿತ್ತಮ್ ಉಪಾದಾಯ 'ಇದಂ ಕುರು, ಇದಂ ಮಾಕಾರ್ಷೀಃ' ಇತಿ ಕರ್ಮವಿಧಯಃ ಪ್ರವೃತ್ತಾಃ। ತಚ್ಚ ನಿಮಿತ್ತಂ ನ ಶಾಸ್ತ್ರಕೃತಮ್ । ಸರ್ವಪ್ರಾಣಿಷು ದರ್ಶನಾತ್ । "ಸದೇಕಮೇವಾದ್ವಿತೀಯಮ್"[5] (೬-೨-೧), "ಆತ್ಮೈವೇದಂ ಸರ್ವಮ್" (೭-೨೫-೨), "ಬ್ರಹ್ಮೈವೇದಂ ಸರ್ವಮ್" ( ? )[6] ಇತಿ ಶಾಸ್ತ್ರಜನ್ಯಃ ಪ್ರತ್ಯಯೋ

---

1 ಬರಿಯ ಸಂನ್ಯಾಸದಿಂದಲೇ, ಜ್ಞಾನವಿಲ್ಲದೆಯೇ.

2. ಎಲ್ಲಾ ಆಶ್ರಮಧರ್ಮಗಳೂ ಆಶ್ರಮಧರ್ಮಗಳೇ, ಆದ್ದರಿಂದ ಮಿಕ್ಕ ಧರ್ಮಗಳಿಂದೊಡಗೂಡಿದ ಜ್ಞಾನವು ಮೋಕ್ಷವನ್ನು ಕೊಡಲಾರದಾದರೆ ಪರಿವ್ರಾಜಕಧರ್ಮಸಹಿತವಾದದ್ದೂ ಕೊಡಲಾರದು.

3 ಯಾವ ಕರ್ಮದೊಡನೆ ಜ್ಞಾನವು ಸಮುಚ್ಚಿತವಾದರೆ ಅದರಿಂದ ಮೋಕ್ಷವಾಗುತ್ತದೆ ಎಂದೇನೂ ಶ್ರುತಿಯಲ್ಲಿ ಅವಧಾರಣೆಮಾಡಿಲ್ಲ, ಬ್ರಹ್ಮಸಂಸ್ಥನಿಗೆ ಆಗುತ್ತದೆ ಎಂದಿಷ್ಟೇ ಹೇಳಿದೆ. ಆದ್ದರಿಂದ ಆಶ್ರಮವು ಮುಖ್ಯವಲ್ಲ, ಜ್ಞಾನವೇ ಮುಖ್ಯ- ಎಂದು ಭಾವ.

4. ಬ್ರಹ್ಮಸಂಸ್ಥನಿಗೆ ಅಮೃತತ್ವವು ಎಂದಿಷ್ಟೇ ಶ್ರುತಿಯಲ್ಲಿದೆ.

5. ಇದು ಶ್ರುತಿಯ ಅರ್ಥಮಾತ್ರ.

6. ೬-೧-೪. ಇದು ಯಾವ ಶ್ರುತಿಯೆಂಬುದು ತಿಳಿಯದು. ಮುಂಡಕದಲ್ಲಿ 'ಬ್ರಹ್ಮೈವೇದಂ ವಿಶ್ವಮ್' ಎಂದಿದೆ. ತೈತ್ತಿರೀಯಾದಿಭಾಷ್ಯಗಳಲ್ಲಿಯೂ ಹೀಗೆ 'ಸರ್ವಮ್' ಎಂದೇ ಇರುವ ...ಕ್ಯವು ಭಾಷ್ಯದಲ್ಲಿ ಉದಾಹೃತವಾಗಿರುವದು ಕಂಡುಬರುತ್ತದೆ.

ವಿದ್ಯಾರೂಪಃ ಸ್ವಾಭಾವಿಕಂ ಕ್ರಿಯಾಕಾರಕಫಲಭೇದಪ್ರತ್ಯಯಂ ಕರ್ಮವಿಧಿ ನಿಮಿತ್ತಮ್ ಅನುಪಮೃದ್ಯ ನ ಜಾಯತೇ । ಭೇದಾಭೇದಪ್ರತ್ಯಯಯೋರ್ವಿರೋಧಾತ್ । ನ ಹಿ ತೈಮಿರಿಕದ್ವಿಚನ್ದ್ರಾದಿಭೇದಪ್ರತ್ಯಯಮ್ ಅನುಪಮೃದ್ಯ ತಿಮಿರಾಪಗಮೇ ಚನ್ದ್ರಾದ್ಯೇಕತ್ವಪ್ರತ್ಯಯ ಉಪಜಾಯತೇ ವಿದ್ಯಾವಿದ್ಯಾಪ್ರತ್ಯಯಯೋರ್ವಿರೋಧಾತ್ । ತತ್ರ ಏವಂ ಸತಿ ಯಂ ಭೇದಪ್ರತ್ಯಯಮ್ ಉಪಾದಾಯ ಕರ್ಮವಿಧಯಃ ಪ್ರವೃತ್ತಾಃ ಸ ಯಸ್ಯೋಪಮರ್ದಿತಃ 'ಸದೇಕಮೇವಾದ್ವಿತೀಯಮ್' (೬-೨-೧), 'ತತ್ಸತ್ಯಮ್' (೬-೮-೭), 'ವಿಕಾರಭೇದೋಽನೃತಮ್'[1] (೬-೧-೪) ಇತ್ಯೇತದ್ವಾಕ್ಯಪ್ರಮಾಣಜನಿತೇನ ಏಕತ್ವಪ್ರತ್ಯಯೇನ, ಸ ಸರ್ವಕರ್ಮಭ್ಯೋ ನಿವೃತ್ತಃ । ನಿಮಿತ್ತನಿವೃತ್ತೇಃ । ಸ ಚ ನಿವೃತ್ತಕರ್ಮಾ ಬ್ರಹ್ಮಸಂಸ್ಥ ಉಚ್ಯತೇ । ಸ ಚ ಪರಿವ್ರಾಡೇವ । ಅನ್ಯಸ್ಯ ಅಸಂಭವಾತ್ । ಅನ್ಯೋ ಹಿ ಅನಿವೃತ್ತಭೇದಪ್ರತ್ಯಯಃ । ಸೋಽನ್ಯತ್ ಪಶ್ಯನ್, ಶೃಣ್ವನ್, ಮನ್ವಾನೋ ವಿಜಾನನ್, ಇದಂ ಕೃತ್ವಾ ಇದಂ ಪ್ರಾಪ್ನುಯಾಮ್ ಇತಿ ಹಿ ಮನ್ಯತೇ । ತಸ್ಯ ಏವಂ ಕುರ್ವತೋ ನ ಬ್ರಹ್ಮಸಂಸ್ಥತಾ । ವಾಚಾರಮ್ಭಣಮಾತ್ರವಿಕಾರಾನೃತಾಭಿಸನ್ಧಿಪ್ರತ್ಯಯವತ್ತ್ವಾತ್ । ನ ಚ ಅಸತ್ಯಮ್ ಇತಿ ಉಪಮರ್ದಿತೇ ಭೇದಪ್ರತ್ಯಯೇ ಸತ್ಯಮಿದಮ್, ಅನೇನ ಕರ್ತವ್ಯಂ ಮಯಾ ಇತಿ ಪ್ರಮಾಣಪ್ರಮೇಯಬುದ್ಧಿರುತ್ಪದ್ಯತೇ[2] । ಆಕಾಶ ಇವ ತಲಮಲಬುದ್ಧಿರ್ವಿವೇಕಿನಃ । ಉಪಮರ್ದಿತೇಽಪಿ ಭೇದಪ್ರತ್ಯಯೇ ಕರ್ಮಭ್ಯೋ ನ ನಿವರ್ತತೇ ಚೇತ್ ಪ್ರಾಗಿವ ಭೇದಪ್ರತ್ಯಯಾನುಪಮರ್ದನಾತ್, ಏಕತ್ವಪ್ರತ್ಯಯವಿಧಾಯಕಂ ವಾಕ್ಯಮ್ ಅಪ್ರಮಾಣೀಕೃತಂ ಸ್ಯಾತ್ । ಅಭಕ್ಷ್ಯಭಕ್ಷಣಾದಿಪ್ರತಿಷೇಧವಾಕ್ಯಾನಾಂ ಪ್ರಾಮಾಣ್ಯವತ್ ಯುಕ್ತಮ್ ಏಕತ್ವವಾಕ್ಯಸ್ಯಾಪಿ ಪ್ರಾಮಾಣ್ಯಮ್ । ಸರ್ವೋಪನಿಷದಾಂ ತತ್ಪರತ್ವಾತ್ ॥

(ಭಾಷ್ಯಾರ್ಥ)

(ಇದು) ಸರಿಯಲ್ಲ. ಏಕೆಂದರೆ ಕರ್ಮನಿಮಿತ್ತಕ್ಕೂ ವಿದ್ಯಾಪ್ರತ್ಯಯಕ್ಕೂ ವಿರೋಧವಿದೆ. ಕರ್ತ್ರಾದಿಕಾರಕಗಳು, ಕ್ರಿಯೆ, ಫಲ- ಎಂಬ ಭೇದಪ್ರತ್ಯಯವುಳ್ಳವವಾಗಿರುವದೆಂಬ ನಿಮಿತ್ತವನ್ನು ತೆಗೆದುಕೊಂಡಲ್ಲವೆ, 'ಇದನ್ನು ಮಾಡು', 'ಇದನ್ನು ಮಾಡಬೇಡ' ಎಂಬ ಕರ್ಮವಿಧಿಗಳು ಪ್ರವೃತ್ತವಾಗಿವೆ? ಆದರೆ ಆ ನಿಮಿತ್ತವು ಶಾಸ್ತ್ರಕೃತವಲ್ಲ, ಏಕೆಂದರೆ ಎಲ್ಲಾ ಪ್ರಾಣಿಗಳಲ್ಲಿಯೂ ಅದು ಕಂಡು ಬರುತ್ತದೆ. 'ತನಗೆರಡನೆಯದಿಲ್ಲದ ಸತ್ತೊಂದೇ (ಇತ್ತು)' (೬-೨-೧), 'ಇದೆಲ್ಲವೂ ಆತ್ಮನೇ' (೭-೨೫-೨), 'ಇದೆಲ್ಲವೂ ಬ್ರಹ್ಮವೇ' (?) ಎಂಬ **ಶಾಸ್ತ್ರದಿಂದುಂಟಾ**

---

1. ಇದೂ ಶ್ರುತಿಯ ಅರ್ಥಮಾತ್ರವೇ
2. 'ಉಪಪದ್ಯತೇ' ಎಂಬ ಪಾಠವೂ ಉಂಟು. ಅನುವಾದದ ಟಿಪ್ಪಣಿಯನ್ನು ನೋಡಿ.

**ಗುವ ವಿದ್ಯಾರೂಪವಾದ ಪ್ರತ್ಯಯವು ಸ್ವಾಭಾವಿಕವಾದ**[1] **ಕ್ರಿಯಾ ಕಾರಕಫಲಗಳ ಭೇದದ ಪ್ರತ್ಯಯವೆಂಬ ಕರ್ಮವಿಧಿನಿಮಿತ್ತವನ್ನು ಅರೆದುಹಾಕದೆ ಹುಟ್ಟುವದಿಲ್ಲ.** ಏಕೆಂದರೆ ಭೇದ(ಪ್ರತ್ಯಯ), ಅಭೇದ ಪ್ರತ್ಯಯ- (ಇವು)ಗಳಿಗೆ ವಿರೋಧವಿರುತ್ತದೆ.[2] ಕಣ್ಣು ಪರೆಯವನಿಗೆ (ಉಂಟಾಗುವ) ಇಬ್ಬರು ಚಂದ್ರರೆಂಬುದೇ ಮುಂತಾದ[3] ಭೇದಪ್ರತ್ಯಯವನ್ನು ಅರೆದು ಹಾಕದೆ ಕಣ್ಣು ಪರೆಯು ಹೋದಬಳಿಕ ಚಂದ್ರನೇ ಮುಂತಾದದ್ದು ಒಂದೇ ಎಂಬ ಪ್ರತ್ಯಯವು ಉಂಟಾಗಲಾರದಷ್ಟೆ ? ಏಕೆಂದರೆ ವಿದ್ಯಾವಿದ್ಯಾಪ್ರತ್ಯಯಗಳಿಗೆ ವಿರೋಧವಿರುತ್ತದೆ.[4] **ಹೀಗಿರುವಲ್ಲಿ ಯಾವ ಭೇದಪ್ರತ್ಯಯವನ್ನು ತೆಗೆದು ಕೊಂಡು ಕರ್ಮವಿಧಿಗಳು**[5] **ಪ್ರವೃತ್ತವಾಗಿರುವವೋ, ಆ (ಭೇದ ಪ್ರತ್ಯಯವು) ಯಾವನಿಗೆ 'ತನಗೆರಡನೆಯದಿಲ್ಲದ ಸತ್ತೊಂದೇ (ಇತ್ತು)' (೬-೨-೧), 'ಅದೇ ಸತ್ಯವು' (೬-೮-೭ ), 'ವಿಕಾರಭೇದವು ಅನೃತವು' (೬-೧-೪) — ಎಂಬೀ ವಾಕ್ಯಪ್ರಮಾಣಜನಿತವಾದ ಏಕತ್ವಪ್ರತ್ಯಯ ದಿಂದ ಅರೆದುಹಾಕಲ್ಪಟ್ಟು (ನಾಶ)ವಾಗಿರುವದೋ, ಅವನು ಸರ್ವ ಕರ್ಮಗಳಿಂದಲೂ ನಿವೃತ್ತನಾಗಿರುತ್ತಾನೆ; ಏಕೆಂದರೆ (ಆ ಕರ್ಮಗಳ) ನಿಮಿತ್ತವು ತೊಲಗಿಹೋಗಿರುತ್ತದೆ.** ಆ (ನಿವೃತ್ತಕರ್ಮನೇ) ಬ್ರಹ್ಮ ಸಂಸ್ಥನೆನಿಸುತ್ತಾನೆ.[6]

ಅವನು ಪರಿವ್ರಾಜಕನೇ[7], ಏಕೆಂದರೆ ಮತ್ತೊಬ್ಬನಿಗೆ (ಬ್ರಹ್ಮಸಂಸ್ಥತ್ವವು) ಸಂಭವಿಸುವದಿಲ್ಲ. (ಇದರ ವಿವರ), (ಆ) ಮತ್ತೊಬ್ಬನು ಭೇದಪ್ರತ್ಯಯವು

---

1. ಅವಿದ್ಯೆಯಿರುವವರಿಗೆಲ್ಲ ಸ್ವಭಾವದಿಂದಿದ್ದುಕೊಂಡಿರುವ ಎಂದರ್ಥ, ಈ ಪ್ರತ್ಯಯವನ್ನು ಶಾಸ್ತ್ರವೇನೂ ಮಾಡಿಕೊಟ್ಟಿಲ್ಲವೆಂಬುದನ್ನು ಈ ವಿಶೇಷಣವು ಸೂಚಿಸುತ್ತದೆ.

2. ಆದ್ದರಿಂದ ಈ ಎರಡು ಪ್ರತ್ಯಯಗಳೂ ಒಬ್ಬನಲ್ಲಿಯೇ ಏಕಕಾಲಕ್ಕೆ ಇರುವದು ಸಾಧ್ಯವಿಲ್ಲ, ಎರಡು ಪ್ರತ್ಯಯಗಳೂ ಪ್ರತ್ಯಯಗಳೇ ಆದರೂ ಸ್ವಾಭಾವಿಕಪ್ರತ್ಯಯವೇ ಶಾಸ್ತ್ರಜನಿತಪ್ರತ್ಯಯದಿಂದ ಬಾಧಿತವಾಗಬೇಕು; ಏಕೆಂದರೆ ಸರಿಯಾದ ತಿಳಿವಳಿಕೆಯು ತಪ್ಪುತಿಳಿವನ್ನು, ಹೊಡೆದುಹಾಕುವದು ಯುಕ್ತ— ಎಂದು ಭಾವ.

3. ಕನಸಿನಲ್ಲಿ ತನಗಿಂತ ಬೇರೆಯಾಗಿ ಅನೇಕರಿರುವದು ಮುಂತಾದ ಭೇದಪ್ರತ್ಯಯ ವನ್ನು 'ಮುಂತಾದ' ಎಂಬ ಶಬ್ದದಿಂದ ಗ್ರಹಿಸಬೇಕು.

4. ವಿದ್ಯೆ, ಅವಿದ್ಯೆ— ಇವೆರಡೂ ಪ್ರತ್ಯಯಗಳೇ ಎಂಬುದನ್ನು ಇಲ್ಲಿ ದೃಷ್ಟಾಂತ ದಲ್ಲಿಯೂ ದಾರ್ಷ್ಟಾಂತಿಕದಲ್ಲಿಯೂ ಬಾಯಿಬಿಟ್ಟು ಹೇಳಿದೆ. ಇದು ವ್ಯಾಖ್ಯಾನಪ್ರಸ್ಥಾನಗಳ ಮೂಲಾವಿದ್ಯಾವಾದಕ್ಕೆ ವಿರುದ್ಧವಾಗಿದೆ ಎಂಬುದು ಸ್ಪಷ್ಟ.

5. ವಿಧಿಗಳು ಎಂಬುದನ್ನು ನಿಷೇಧಗಳಿಗೂ ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು; ಏಕೆಂದರೆ ಅವಕ್ಕೂ ಭೇದಪ್ರತ್ಯಯವೇ ನಿಮಿತ್ತವಾಗಿದೆ

6. ಬ್ರಹ್ಮಸಂಸ್ಥನು ಎಂದರೆ ಅದ್ವಿತೀಯಬ್ರಹ್ಮಸ್ವರೂಪದಲ್ಲಿ ನೆಲೆನಿಂತಿರುವವನೇ ಎಂದರ್ಥ. ವೃತ್ತಿಕಾರರ ಮತದಲ್ಲಿ ಬ್ರಹ್ಮೋಪಾಸಕನೇ ಬ್ರಹ್ಮಸಂಸ್ಥನು; ಆದ್ದರಿಂದ ಅವರಿಗೆ ಕರ್ಮಕ್ಕೂ ಬ್ರಹ್ಮಸಂಸ್ಥತ್ವಕ್ಕೂ ಯಾವ ವಿರೋಧವೂ ಇಲ್ಲ.

7. ಪರಮಹಂಸನೇ ಎಂದರ್ಥ.

ತೊಲಗದಿರುವದರಿಂದ ಮತ್ತೊಂದನ್ನು ಕಾಣುತ್ತಲೂ, ಕೇಳುತ್ತಲೂ, ಯೋಚಿಸುತ್ತಲೂ ಅರಿಯುತ್ತಲೂ[1] ಇದನ್ನು ಮಾಡಿ ಇದನ್ನು ಪಡೆದುಕೊಳ್ಳುವೆನು ಎಂದಲ್ಲವೆ, ಭಾವಿಸಿಕೊಂಡಿರುತ್ತಾನೆ? ಹೀಗೆ ಮಾಡುತ್ತಿರುವ[2] ಅವನಿಗೆ ಬ್ರಹ್ಮಸಂಸ್ಥತ್ವವು (ಸಂಭವಿಸ)ಲಾರದು, ಏಕೆಂದರೆ ವಾಚಾರಂಭಣಮಾತ್ರವಾಗಿರುವ ಕಾರ್ಯರೂಪವಾದ ಅನೃತದ ಅಭಿಸಂಧಿಯ ಪ್ರತ್ಯಯವು ಅವನಿಗೆ ಇರುತ್ತದೆ.[3] (ಇದು) ಅಸತ್ಯವು ಎಂದು ಭೇದಪ್ರತ್ಯಯವು ಅರೆದುಹಾಕಿ (ಅಳಿದು)ಹೋಗಿರುವಲ್ಲಿ, 'ಇದು ಸತ್ಯವು, ಇದರಿಂದ ಇದನ್ನು ನಾನು ಮಾಡಬೇಕಾದದ್ದು'- ಎಂಬ ಪ್ರಮಾಣಪ್ರಮೇಯಬುದ್ಧಿಯು- ಆಕಾಶದಲ್ಲಿ ತಲಮಲಿನತ್ವಬುದ್ಧಿಯು ಹೇಗೆ ವಿವೇಕಿಯಾದವನಿಗೆ[4] (ಉಂಟಾಗಲಾರದೋ ಹಾಗೆ)- (ಉಂಟಾಗ)ಲಾರದು. **ಭೇದಪ್ರತ್ಯಯವು ಅರದುಹಾಕಿ (ಅಳಿದು)ಹೋದಮೇಲೆಯೂ ಭೇದಪ್ರತ್ಯಯವು ಅಳಿಯುವ ಮುನ್ನಿನಂತೆಯೇ ಕರ್ಮಗಳಿಂದ ಹಿಮ್ಮೆಟ್ಟುವದಿಲ್ಲವಾದರೆ, ಏಕತ್ವಪ್ರತ್ಯಯವನ್ನುಂಟುಮಾಡುವ ವಾಕ್ಯವನ್ನು ಅಪ್ರಮಾಣವೆಂದೆಣಿಸಿದಂತೆ ಆಗುವದು.**[5] ಅಭಕ್ಷ್ಯಭಕ್ಷಣವೇ ಮುಂತಾದವನ್ನು ಪ್ರತಿಷೇಧಿಸುವ ವಾಕ್ಯಗಳಿಗೆ ಪ್ರಾಮಾಣ್ಯವಿರುವಂತೆ ಏಕತ್ವವಾಕ್ಯಕ್ಕೆ ಪ್ರಾಮಾಣ್ಯವಿರುವದು ಯುಕ್ತವು[6] ಏಕೆಂದರೆ ಎಲ್ಲಾ ಉಪನಿಷತ್ತುಗಳಿಗೂ ಅವರಲ್ಲಿ ತಾತ್ಪರ್ಯವಿರುತ್ತದೆ.[7]

---

1. ಅವಿದ್ಯಾಕೃತವಾದ ದ್ವೈತವಿರುವಲ್ಲಿಯೇ ವ್ಯವಹಾರವಿರುತ್ತದೆ, ಬೃ. ಭಾ. ೪-೩-೩೧ನ್ನು ನೋಡಿ.

2 ಮತ್ತೊಂದನ್ನು ನೋಡುತ್ತಲೂ ಅರಿಯುತ್ತಲೂ ಇರುವ ಎಂದರ್ಥ.

3 ಅನೃತವಾದ ದ್ವೈತದ ಅಭಿಸಂಧಿಯಿರುವವನಿಗೆ ಏಕತ್ವಪ್ರತ್ಯಯರೂಪವಾದ ಬ್ರಹ್ಮಸಂಸ್ಥತ್ವವು ಇರಲಾರದು. ಎರಡನೆಯದನ್ನು ಕಾಣದೆ ಕೇಳದೆ ಅರಿಯದೆ ಇರುವದೇ ಬ್ರಹ್ಮಸ್ಥಿತಿಯೆಂದು (೭-೨೪-೧) ಶ್ರುತಿಯು ಹೇಳಿಯೂ ಇದೆ.

4. ತಲಮಲಿನತ್ವವು ಬರಿಯ ತೋರಿಕೆಯೇ, ಆಕಾಶಕ್ಕೆ ನಿಜವಾಗಿ ಯಾವ ಬಣ್ಣವೂ ಇಲ್ಲ- ಎಂಬ ವಿವೇಕಿಗೆ ಎಂದರ್ಥ. ದೃಷ್ಟಾಂತದಲ್ಲಿಯೂ ಏಕತ್ವಪ್ರತ್ಯಯವುಳ್ಳ ವಿವೇಕಿಗೆ ಹೀಗೆಯೇ ತೋರಿಕೆಯ ಕ್ರಿಯಾಕಾರಕಫಲಭೇದವು ಸತ್ಯವೆಂಬ ಬುದ್ಧಿಯು ಉಂಟಾಗಲಾರದು ಎಂದು ಭಾವ.

5. ಕರ್ಮವಾಕ್ಯದಂತೆ ಬೋಧಕತ್ವವಿದ್ದರೂ ವಾಕ್ಯವನ್ನು ಅಪ್ರಮಾಣವೆನ್ನುವದು ಸರಿಯಲ್ಲ ಎಂದು ಭಾವ. ಬೃ. ಭಾ. ೨-೧-೨೦ (ಭಾ.ಭಾ. ೩೨೧)ನ್ನು ನೋಡಿ

6. ಕರ್ಮವಾಕ್ಯದಂತೆ ಬ್ರಹ್ಮವಾಕ್ಯವು ಪ್ರವರ್ತಕವಲ್ಲವಲ್ಲ !- ಎಂಬ ಶಂಕೆಗೆ ಪರಿಹಾರವಾಗಿ ಈ ಪ್ರತಿಷೇಧವಾಕ್ಯದ ದೃಷ್ಟಾಂತವನ್ನು ಕೊಟ್ಟಿದೆ. ಪ್ರತಿಷೇಧವಾಕ್ಯಕ್ಕೂ ಬ್ರಹ್ಮವಾಕ್ಯಕ್ಕೂ ಅನರ್ಥಕರವಾದ ಪ್ರವೃತ್ತಿಯಿಂದ ಹಿಮ್ಮೆಟ್ಟಿಸುವ ಪ್ರಾಮಾಣ್ಯವು ಸಮಾನವಾಗಿದೆ ಎಂದು ಭಾವ. ಬೃ. ಭಾ. ೧-೩-೧ (ಭಾ. ಭಾ. ೫೪, ೫೭)ರಲ್ಲಿ ಇದನ್ನು ಸ್ಪಷ್ಟಪಡಿಸಿದೆ.

7. ಏಕತ್ವವಾಕ್ಯವು ಅರ್ಥವಾದಮಾತ್ರವಾದ್ದರಿಂದ ಅದಕ್ಕೆ ಪ್ರಾಮಾಣ್ಯವಿಲ್ಲ ಎನ್ನುವಂತೆಯೂ ಇಲ್ಲ ; ಏಕೆಂದರೆ ಶ್ರುತಿಗಳೆಲ್ಲ ತಾತ್ಪರ್ಯದಿಂದ ಏಕತ್ವವನ್ನು ಹೇಳುತ್ತವೆ. ಐ. ಭಾ ಅವ. (ಭಾ ಭಾ. ೧೨).

## ಉಪನಿಷತ್ತುಗಳಿಗೆ ಏಕತ್ವಜ್ಞಾನದಲ್ಲಿ ತಾತ್ಪರ್ಯವಿದ್ದರೂ ಕರ್ಮವಾಕ್ಯಗಳಿಗೆ ಅಪ್ರಾಮಾಣ್ಯವಿಲ್ಲ

(ಭಾಷ್ಯ)

೧೮೦. ಕರ್ಮವಿಧೀನಾಮ್ ಅಪ್ರಾಮಾಣ್ಯಪ್ರಸಙ್ಗಃ ಇತಿ ಚೇತ್। ನ। ಅನುಪಮರ್ದಿತಭೇದಪ್ರತ್ಯಯವತ್ಪುರುಷವಿಷಯೇ ಪ್ರಾಮಾಣ್ಯೋಪಪತ್ತೇಃ ಸ್ವಪ್ನಾದಿಪ್ರತ್ಯಯ ಇವ ಪ್ರಾಕ್ ಪ್ರಬೋಧಾತ್। ವಿವೇಕಿನಾಮ್ ಅಕರಣಾತ್ ಕರ್ಮವಿಧಿಪ್ರಾಮಾಣ್ಯೋಚ್ಛೇದಃ ಇತಿ ಚೇತ್। ನ। ಕಾಮ್ಯವಿಧ್ಯನುಚ್ಛೇದ ದರ್ಶನಾತ್। ನ ಹಿ "ಕಾಮಾತ್ಮತಾ ನ ಪ್ರಶಸ್ತಾ" (ಮನು. ೨-೨) ಇತ್ಯೇವಂ ವಿಜ್ಞಾನವದ್ಭಿಃ ಕಾಮ್ಯಾನಿ ಕರ್ಮಾಣಿ ನಾನುಷ್ಠೀಯನ್ತ ಇತಿ ಕಾಮ್ಯಕರ್ಮ ವಿಧಯಃ ಉಚ್ಛಿದ್ಯನ್ತೇ। ಅನುಷ್ಠೀಯನ್ತ ಏವ ಕಾಮಿಭಿರಿತಿ। ತಥಾ ಬ್ರಹ್ಮ ಸಂಸ್ಥೈರ್ಬ್ರಹ್ಮವಿದ್ಭಿಃ ನಾನುಷ್ಠೀಯನ್ತೇ ಕರ್ಮಾಣಿ ಇತಿ ನ ತದ್ವಿಧಯ ಉಚ್ಛಿದ್ಯನ್ತೇ। ಅಬ್ರಹ್ಮವಿದ್ಭಿರನುಷ್ಠೀಯನ್ತ ಏವೇತಿ ॥

(ಭಾಷ್ಯಾರ್ಥ)

(ಆಕ್ಷೇಪ) :- (ಹೀಗಾದರೆ) ಕರ್ಮವಿಧಿಗಳು ಅಪ್ರಮಾಣವೆಂದಾಗ ಬೇಕಾಗುವದಲ್ಲ !

(ಪರಿಹಾರ) :- ಹಾಗಲ್ಲ, ಏಕೆಂದರೆ ನಾಶವಾಗದಿರುವ ಭೇದಪ್ರತ್ಯಯ ವುಳ್ಳ ಪುರುಷರ ವಿಷಯದಲ್ಲಿ (ಅವಕ್ಕೆ) ಪ್ರಾಮಾಣ್ಯವಿರಬಹುದಾಗಿದೆ [1] ಸ್ವಪ್ನಾದಿಪ್ರತ್ಯಯದಲ್ಲಿ ಎಚ್ಚರವಾಗುವವರೆಗೂ ಹೇಗೆ (ಪ್ರಾಮಾಣ್ಯವಿರುವದೋ ಹಾಗೆ).[2]

(ಆಕ್ಷೇಪ) :- ವಿವೇಕಿಗಳು (ಕರ್ಮಗಳನ್ನು) ಮಾಡದೆ ಇರುವದರಿಂದ ಕರ್ಮವಿಧಿಗಳ ಪ್ರಾಮಾಣ್ಯವು ಹಾಳಾಗುವದಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ ಕಾಮ್ಯವಿಧಿಯ (ಪ್ರಾಮಾಣ್ಯವು) ಹಾಳಾಗದೆ ಇರುವದು ಕಂಡುಬರುತ್ತಿದೆ. (ಇದರ ವಿವರ) : "ಕಾಮಾತ್ಮನಾಗಿರು ವದು ಪ್ರಶಸ್ತವಲ್ಲ" (ಮನು. ೨-೨) ಎಂಬೀ ಅರಿವು ಉಂಟಾಗಿರುವವರು ಕಾಮ್ಯ ಕರ್ಮಗಳನ್ನು ಮಾಡುವದಿಲ್ಲ ಎಂಬದರಿಂದ ಕಾಮ್ಯಕರ್ಮವಿಧಿಗಳು ಹಾಳಾಗು

1. ಕರ್ಮವಿಧಿಗಳು ಅಜ್ಞರ ವಿಷಯವೇ, ಜ್ಞಾನಿಗೆ ಅವು ಪ್ರಮಾಣವಲ್ಲ. ಗೀ. ಭಾ. ೧೮-೬೬ (ಭಾ ಭಾ ೫೯೬), ಸೂ. ಭಾ. ೩-೪-೧೬ (ಭಾ. ಭಾ. ೪೫೬) ನೋಡಿ.

2. ಪ್ರತ್ಯಕ್ಷಾದಿಪ್ರಮಾಣವ್ಯವಹಾರವೆಲ್ಲ ಆತ್ಮಜ್ಞಾನವಾಗುವವರೆಗೆ ಸ್ವಪ್ನಗತವ್ಯವ ಹಾರದಂತೆ. ಗೀ. ಭಾ. ೨-೬೯ (ಭಾ. ಭಾ ೧೨೯), ಸೂ. ಭಾ ೨-೧-೧೪ (ಭಾ. ಭಾ. ೪೩೬), ಸೂ. ಭಾ. ೪-೩-೧೪ (ಭಾ. ಭಾ. ೫೭೫)- ಇವನ್ನು ನೋಡಿ.

ವದಿಲ್ಲವಷ್ಟೆ ? ಏಕೆಂದರೆ (ಅವನ್ನು) ಕಾಮಿಗಳು ಮಾಡುತ್ತಲೇ ಇರುತ್ತಾರೆ.[1] (ಅಲ್ಲವೆ) ? ಅದರಂತೆ ಬ್ರಹ್ಮಸಂಸ್ಥರಾದ ಬ್ರಹ್ಮಜ್ಞಾನಿಗಳು (ನಿತ್ಯ)ಕರ್ಮಗಳನ್ನು ಮಾಡುವದಿಲ್ಲ ಎಂಬ ಕಾರಣದಿಂದ ಆ (ಕರ್ಮ)ವಿಧಿಗಳು ಹಾಳಾಗುವದಿಲ್ಲ, ಏಕೆಂದರೆ ಬ್ರಹ್ಮಜ್ಞಾನಿಗಳಲ್ಲದವರು (ಅವನ್ನು) ಮಾಡುತ್ತಲೇ ಇರುತ್ತಾರೆ.[2]

## ಏಕತ್ವಜ್ಞಾನಿಗೆ ಅಗ್ನಿಹೋತ್ರಾದಿಕರ್ಮಗಳಿಲ್ಲ

(ಭಾಷ್ಯ)

೧೮೧ ಪರಿವ್ರಾಜಕಾನಾಂ ಭಿಕ್ಷಾಚರಣಾದಿವತ್ ಉತ್ಪನ್ನೈಕತ್ವ ಪ್ರತ್ಯಯಾನಾಮಪಿ ಗೃಹಸ್ಥಾದೀನಾಮ್ ಅಗ್ನಿಹೋತ್ರಾದಿಕರ್ಮಾನಿವೃತ್ತಿಃ ಇತಿ ಚೇತ್। ನ। ಪ್ರಾಮಾಣ್ಯಚಿನ್ತಾಯಾಂ ಪುರುಷಪ್ರವೃತ್ತೇರದೃಷ್ಟಾನ್ತತ್ವಾತ್। ನ ಹಿ ನಾಭಿಚರೇತ್ ಇತಿ ಪ್ರತಿಷಿದ್ಧಮಪಿ ಅಭಿಚರಣಂ ಕಶ್ಚಿತ್ ಕುರ್ವನ್ ದೃಷ್ಟಃ ಇತಿ ಶತ್ರೌ ದ್ವೇಷರಹಿತೇನಾಪಿ ವಿವೇಕಿನಾ ಅಭಿಚರಣಂ ಕ್ರಿಯತೇ। ನ ಚ ಕರ್ಮವಿಧಿಪ್ರವೃತ್ತಿನಿಮಿತ್ತೇ ಭೇದಪ್ರತ್ಯಯೇ ಬಾಧಿತೇ ಅಗ್ನಿಹೋತ್ರಾದೌ ಪ್ರವರ್ತಕಂ ನಿಮಿತ್ತಮಸ್ತಿ ಪರಿವ್ರಾಜಕಸ್ಯೇವ ಭಿಕ್ಷಾಚರಣಾದೌ ಬುಭುಕ್ಷಾದಿ ಪ್ರವರ್ತಕಮ್। ಇಹಾಪಿ ಅಕರಣೇ ಪ್ರತ್ಯವಾಯಭಯಂ ಪ್ರವರ್ತಕಮ್ ಇತಿ ಚೇತ್ । ನ । ಭೇದಪ್ರತ್ಯಯವತೋಽಧಿಕೃತತ್ವಾತ್। ಭೇದಪ್ರತ್ಯಯವಾನ್ ಅನುಪಮರ್ದಿತಭೇದಬುದ್ಧಿರ್ವಿದ್ಯಯಾ ಯಃ ಸ ಕರ್ಮಣಿ ಅಧಿಕ್ರಿಯತ ಇತ್ಯವೋಚಾಮ। ಯೋ ಹಿ ಅಧಿಕೃತಃ ಕರ್ಮಣಿ, ತಸ್ಯ ತದಕರಣೇ ಪ್ರತ್ಯವಾಯಃ, ನ ನಿವೃತ್ತಾಧಿಕಾರಸ್ಯ। ಗೃಹಸ್ಥಸ್ಯೇವ ಬ್ರಹ್ಮಚಾರಿಣೋ ವಿಶೇಷ ಧರ್ಮಾನನುಷ್ಠಾನೇ। ಏವಂ ತರ್ಹಿ ಸರ್ವಃ ಸ್ವಾಶ್ರಮಸ್ಥಃ ಉತ್ಪನ್ನೈಕತ್ವ ಪ್ರತ್ಯಯಃ ಪರಿವ್ರಾಡ್ ಇತಿ ಚೇತ್। ನ। ಸ್ವಸ್ವಾಮಿತ್ವಭೇದಬುದ್ಧ್ಯನಿವೃತ್ತೇಃ। ಕರ್ಮಾರ್ಥತ್ವಾಚ್ಚ ಇತರಾಶ್ರಮಾಣಾಮ್ । "ಅಥ ಕರ್ಮ ಕುರ್ವೀಯ" (ಬೃ. ೧-೪-೧೭) ಇತಿ ಶ್ರುತೇಃ। ತಸ್ಮಾತ್ ಸ್ವಸ್ವಾಮಿತ್ವಾಭಾವಾತ್ ಭಿಕ್ಷುರೇಕ ಏವ ಪರಿವ್ರಾಟ್, ನ ಗೃಹಸ್ಥಾದಿಃ ॥

---

1. ಈ ದೃಷ್ಟಾಂತವನ್ನು ಬೃ.ಭಾ. ೪-೫-೧೫ (ಭಾ.ಭಾ. ೩೩೯)ರಲ್ಲಿಯೂ ಕೊಟ್ಟಿದೆ. ಇಲ್ಲಿ ಕಾಮ್ಯ, ನಿತ್ಯ- ಎಂಬ ಭೇದವು ಕಾಮಸ್ವಭಾವದಲ್ಲಿದೆಯೇ ಹೊರತು ನಿತ್ಯಕರ್ಮದಲ್ಲಿ ಕಾಮವೇ ಇಲ್ಲವೆಂಬ ಅಭಿಪ್ರಾಯವೇನೂ ಇಲ್ಲ ಎಂಬ ಭಾವವೂ ಅಡಗಿದೆ ಬೃ. ಭಾ. ೧-೩-೧ (ಭಾ. ಭಾ. ೫೫)ನ್ನು ನೋಡಿ. ಮನು. ೨-೨ರಲ್ಲಿ ವೈದಿಕಕರ್ಮವೆಲ್ಲವೂ ಕಾಮ್ಯವೇ ಎಂದು ಕಂಠರವದಿಂದ ಹೇಳಿಯೂ ಇದೆ.

2. ಏಕೆಂದರೆ ಅವರಿಗೆ ಕರ್ಮವಾಕ್ಯಗಳು ಪ್ರಮಾಣವೆಂದೇ ತೋರುತ್ತಿರುತ್ತದೆ. ೨-೧-೨೦ (ಭಾ. ಭಾ. ೩೨೩). ೪-೫-೧೫ (ಭಾ. ಭಾ. ೩೩೯), ಗೀ. ಭಾ. ೧೩-೨ (ಭಾ.ಭಾ. ೨೨೩) ಇವನ್ನು ನೋಡಿ.

(ಭಾಷ್ಯಾರ್ಥ)

(ಆಕ್ಷೇಪ) :- ಪರಿವ್ರಾಜಕರಿಗೆ ಭಿಕ್ಷಾಚರಣಾದಿಗಳು[1] (ಇದ್ದುಕೊಂಡಿರು)ವಂತೆ ಗೃಹಸ್ಥಾದಿಗಳಿಗೂ ಏಕತ್ವಪ್ರತ್ಯಯವುಂಟಾದ ಮೇಲೆ ಅಗ್ನಿಹೋತ್ರಾದಿ ಕರ್ಮಗಳು ತೊಲಗದೆ ಇದ್ದುಕೊಂಡಿರಬಹುದಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ ಪ್ರಾಮಾಣ್ಯವನ್ನು ಚಿಂತಿಸುವಲ್ಲಿ ಪುರುಷರ ಪ್ರವೃತ್ತಿಯು ದೃಷ್ಟಾಂತವಾಗಲಾರದು[2] 'ಅಭಿಚಾರಮಾಡಬಾರದು'[3] (?) ಎಂದು ಪ್ರತಿಷಿದ್ಧವಾಗಿರುವ ಅಭಿಚಾರವನ್ನೂ ಯಾವನೋ ಒಬ್ಬನು ಮಾಡುತ್ತಿರುವದು ಕಂಡುಬಂದರೆ ಶತ್ರುವಿನಲ್ಲಿ ದ್ವೇಷವಿಲ್ಲದ ವಿವೇಕಿಯೂ ಅಭಿಚಾರವನ್ನು ಮಾಡಲಾರನಷ್ಟೆ[4] ? ಕರ್ಮವಿಧಿಗೆ ನಿಮಿತ್ತವಾದ ಭೇದಪ್ರತ್ಯಯವು ಬಾಧಿತವಾದ ಮೇಲೆ ಪರಿವ್ರಾಜಕನಿಗೆ ಭಿಕ್ಷಾಚರಣೆಯೇ ಮುಂತಾದದ್ದಕ್ಕೆ ಹಸಿವು ಮುಂತಾದದ್ದು ನಿಮಿತ್ತವಾಗಿರುವಂತೆ, ಅಗ್ನಿಹೋತ್ರಾದಿಯಲ್ಲಿ ತೊಡಗುವಂತೆ ಮಾಡುವ ನಿಮಿತ್ತವು (ಯಾವದೂ) ಇರುವದೂ ಇಲ್ಲ[5]

(ಆಕ್ಷೇಪ) : ಇಲ್ಲಿಯೂ (ಅಗ್ನಿಹೋತ್ರಾದಿಕರ್ಮಗಳನ್ನು) ಮಾಡದಿದ್ದರೆ ಪ್ರತ್ಯವಾಯ(ವಾದೀತೆಂಬ) ಭಯವೇ ಪ್ರವರ್ತಕ(ವಾಗಬಹುದಲ್ಲ) !

(ಪರಿಹಾರ) - ಹಾಗಲ್ಲ ಏಕೆಂದರೆ ಭೇದಪ್ರತ್ಯಯವುಳ್ಳವನೇ (ಅದಕ್ಕೆ) ಅಧಿಕಾರಿ. (ಇದರ ವಿವರ) : ಭೇದಪ್ರತ್ಯಯವುಳ್ಳವನೂ ವಿದ್ಯೆಯಿಂದ ಭೇದ ಪ್ರತ್ಯಯವನ್ನು ಅರೆದುಹಾಕಿಕೊಳ್ಳದೆ ಇರುವವನೂ ಆಗಿರುವನಲ್ಲ, ಅವನೇ

---

1. ಏಕತ್ವಜ್ಞಾನಿಗೆ ಯಾವ ಪ್ರವೃತ್ತಿಯೂ ಇರಲಾರದೆಂಬುದು ಸರಿಯಲ್ಲ ; ಏಕೆಂದರೆ ಭಿಕ್ಷಾಚರಣಾದಿಗಳನ್ನು ನೀವೇ ಒಪ್ಪಿರುತ್ತೀರಿ- ಎಂದು ಪೂರ್ವಪಕ್ಷಿಯ ಭಾವ.

2. ಕರ್ಮಜ್ಞಾನಗಳ ಸಹಪ್ರವೃತ್ತಿಯು ಪ್ರಾಮಾಣಿಕವೆ, ಅಲ್ಲವೆ ?— ಎಂಬುದ ಪ್ರಕೃತಪ್ರಶ್ನೆ ಇದನ್ನು ಬಿಡಿಸುವದಕ್ಕೆ ಭಿಕ್ಷುಕನು ಭಿಕ್ಷಾಚರ್ಯವನ್ನು ಮಾಡುತ್ತಾನಲ್ಲ !- ಎಂದು ದೃಷ್ಟಾಂತವನ್ನು ಕೊಡುವದು ಈ ಪ್ರಶ್ನೆಗೇನೂ ಉತ್ತರವಾಗಲಾರದು.

3. ಹಿಂಸೆಮಾಡಬಾರದು ಎಂದು ವಿಧಿಯಿದೆ.

4. ದ್ವೇಷದಿಂದ ಅಭಿಚಾರಮಾಡುತ್ತಾನೆಯೇ ಹೊರತು ಶಾಸ್ತ್ರ[illegible]ಧಿಯಿಂದಲೇ ಅದನ್ನು ಮಾಡುವದಿಲ್ಲ ಎಂದರ್ಥ. (ಜೈ. ಸೂ ಶಾ ಭಾಷ್ಯ. ೧-೧-೨ನ್ನು ನೋಡಿ) ಹೀಗಿರುವದರಿಂದ ದೋಷಯುಕ್ತನು ಮಾಡುವ ಅಭಿಚಾರವನ್ನು ದೋಷರಹಿತನು ಮಾಡದೆ ಇರುವಂತೆ ಅವಿದ್ಯಾವಂತನು ಮಾಡುವ ಕರ್ಮವನ್ನು ಏಕತ್ವಜ್ಞಾನವುಳ್ಳವನೂ ಮಾಡುತ್ತಿರಬಹುದೆಂಬುದು ಸರಿಯಾಗಲಾರದು ಎಂದು ಭಾವ.

5. ಭಿಕ್ಷಾಚರಣವು ಕೇವಲದೋಷಪ್ರಯುಕ್ತ, ಶಾಸ್ತ್ರಪ್ರಯುಕ್ತವಲ್ಲ , ಅದು ನಿಯಮದಿಂದ ಮಾಡಲೇಬೇಕಾದದ್ದೂ ಅಲ್ಲ. ಇಲ್ಲಿ ಆದಿ ಎಂಬ ಶಬ್ದಕ್ಕೆ ಶೌಚಾದಿಗಳನ್ನೂ ಸೇರಿಸಿಕೊಳ್ಳಬೇಕು. ಬೃ. ಭಾ ೧ ೩ ೩ (ಭಾ ಭಾ. ೫೬) ಐ ಭಾ. ಅವ. (ಭಾ.ಭಾ. ೧೭) ರಲ್ಲಿ[illegible]ಯೂ ಭಿಕ್ಷಾಚರಣನಿಯಮವನ್ನು ಚರ್ಚಿಸಿದೆ.

ಕರ್ಮದಲ್ಲಿ ಅಧಿಕೃತ(ನಾಗಿರುತ್ತಾನೆ) ಎಂದು ಹೇಳಿರುತ್ತೇವೆ.[1] ಯಾವನು ಕರ್ಮದಲ್ಲಿ ಅಧಿಕಾರಿಯೋ ಅವನಿಗೇ, ಅದನ್ನು ಮಾಡದೆ ಇರುವದರಿಂದ ಪ್ರತ್ಯವಾಯ(ವಾಗುವದೇ) ಹೊರತು (ಕರ್ಮದಲ್ಲಿ) ಅಧಿಕಾರವು ತೊಲಗಿಹೋಗಿರುವವನಿಗಲ್ಲ.[2] ಗೃಹಸ್ಥನಿಗೆ ಬ್ರಹ್ಮಚಾರಿಯ ವಿಶೇಷಧರ್ಮಗಳನ್ನು ಅನುಷ್ಠಾನ ಮಾಡದಿದ್ದರೆ ಹೇಗೆ (ಪ್ರತ್ಯವಾಯವಿಲ್ಲವೋ ಹಾಗೆಯೇ ಇದು).[3]

(ಆಕ್ಷೇಪ) :- ಹೀಗಾದರೆ ತನ್ನತನ್ನ ಆಶ್ರಮದಲ್ಲಿರುವ ಪ್ರತಿಯೊಬ್ಬನೂ ಏಕತ್ವಪ್ರತ್ಯಯವುಂಟಾದರೆ ಪರಿವ್ರಾಜಕನೇ.[4]

(ಪರಿಹಾರ) .- ಹಾಗಲ್ಲ ಏಕೆಂದರೆ (ತಾನು) ಒಡೆಯನು, (ಇದು) ತನ್ನದು- ಎಂಬ ಬುದ್ಧಿಯು (ಅವನಿಗೆ) ತೊಲಗಿರುವದಿಲ್ಲ.[5] ಇದಲ್ಲದೆ ಉಳಿದ ಆಶ್ರಮಗಳು ಕರ್ಮಕ್ಕಾಗಿಯೇ (ಬೇಕಾಗಿರುತ್ತವೆ)[6] "ಇನ್ನು ಕರ್ಮವನ್ನು

---

1. ಭಾ ಭಾ. ೧೭೯ರಲ್ಲಿ ಹೇಳಿಪುತ್ತೇವೆ ಎಂದರ್ಥ.

2. ಕರ್ಮದ ಅಧಿಕಾರವಾಗಲಿ ಪ್ರತ್ಯವಾಯವಾಗಲಿ ಏಕತ್ವಜ್ಞಾನಿಗೆ ಇರುವಂತಿಲ್ಲ ಬೃ. ಭಾ. ೪ ೪-೬. (ಭಾ ಭಾ ೨೬೯).

3. ಒಂದು ಆಶ್ರಮದ ಕರ್ಮವನ್ನು ಮತ್ತೊಂದು ಆಶ್ರಮದವರು ಮಾಡದಿದ್ದರೆ ಪ್ರತ್ಯವಾಯವಾಗಲಾರದು . ಹಾಗೂ ಆಗುವದಾದರೆ ಎಲ್ಲರಿಗೂ ಪ್ರತ್ಯವಾಯವೇ ಆಗಬೇಕಾದೀತು ಎಂದರ್ಥ. ಗೀ. ಭಾ ೩-೧ (ಭಾ. ಭಾ ೧೪೨)ನ್ನು ನೋಡಿ. ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವುಂಟೆಂದು ಒಪ್ಪಿ ಹೀಗೆ ಹೇಳಿದೆ , ಕರ್ಮಾಭಾವವು ಭಾವರೂಪಪ್ರತ್ಯವಾಯಕ್ಕೆ ಕಾರಣವೇ ಅಲ್ಲವೆಂದು ಗೀ ಭಾ. ೩-೧ (ಭಾ ಭಾ. ೧೪೨), ಗೀ. ಭಾ ೪-೧೮ (ಭಾ. ಭಾ ೨೬೨), ತೈ. ಭಾ. ಭಾ. ೭- ಇವುಗಳಲ್ಲಿ ತೋರಿಸಿಕೊಟ್ಟಿದೆ.

4. ಬ್ರಹ್ಮಸಂಸ್ಥನೇ ಆಗಿರುವದರಿಂದ ಅವನು ಸಂನ್ಯಾಸವೆಂಬ ಆಶ್ರಮಾಂತರವನ್ನೇಕೆ ಪಡೆಯಬೇಕು ? ಅಷ್ಟರಿಂದಲೇ ಅವನಿಗೆ ಅಮೃತತ್ವವು ಪ್ರಾಪ್ತವಾಗಬೇಕಲ್ಲವೆ ?- ಎಂದು ಭಾವ.

5. ಗೃಹಸ್ಥಾಶ್ರಮದಲ್ಲಿಯೇ ಇರುತ್ತೇನೆಂಬ ಆಗ್ರಹಕ್ಕೆ ಕಾಮವೇ ಕಾರಣವು , ಆದರೆ ಏಕತ್ವಜ್ಞಾನಿಗೆ ಕಾಮವಿರುವಹಾಗಿಲ್ಲ ಎಂದರ್ಥ. ಐ. ಭಾ. ಭಾ. ೧೫ನ್ನು ನೋಡಿ.

6. ಬ್ರಹ್ಮಚರ್ಯವು ಗಾರ್ಹಸ್ಥ್ಯಕ್ಕಾಗಿಯೇ ಇದೆ. ನೈಷ್ಠಿಕಬ್ರಹ್ಮಚಾರಿ, ವಾನಪ್ರಸ್ಥ- ಇವರಿಗೂ ಒಂದಾನೊಂದು ಫಲವನ್ನು ಕೊಡುವ ಕರ್ಮವು ಬೇಕಾಗಿರುತ್ತದೆ ಎಂದು ಭಾವ. ಇಲ್ಲಿ ಜ್ಞಾನಿಯು ಇಂಥ ಆಶ್ರಮದಲ್ಲಿಯೇ ಇರಬೇಕೆಂಬ ಆಗ್ರಹವನ್ನು ಖಂಡಿಸಿದೆಯೇ ಹೊರತು ಪಾರಮಹಂಸ್ಯವೆಂಬುದು ಜ್ಞಾನಿಗೆ ಅವಶ್ಯವೇ ಎಂದೇನೂ ಪ್ರತಿಪಾದಿಸಿಲ್ಲ ಇತರ ಆಶ್ರಮದಲ್ಲಿರುವ ಜ್ಞಾನಿಗಳಿಗೆಲ್ಲ ಭಿಕ್ಷಾಚರಣವು ಅರ್ಥಪ್ರಾಪ್ತವಾಗುತ್ತದೆಯೆಂದೂ ಕಾರಣಾಂತರದಿಂದ ಗೃಹಸ್ಥಾಶ್ರಮಕರ್ಮಗಳನ್ನು ಯತ್ನವಿಲ್ಲದೆ ಮಾಡುತ್ತಿದ್ದರೂ ಜ್ಞಾನಿಗೆ ಕರ್ಮಸಂಬಂಧವೇ ಇಲ್ಲವೆಂದೂ ಐ. ಭಾ. ಭಾ. ೧೪, ೧೫ , ಗೀ. ಭಾ. ೪-೨೨ (ಭಾ ಭಾ. ೨೭೩, ೨೭೪, ೨೭೫)- ಇವುಗಳಲ್ಲಿ ತಿಳಿಸಿರುವದನ್ನು ನೋಡಿ.

ಮಾಡುವೆನು" (ಬೃ. ೧-೪-೧೭) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).[1] ಆದ್ದರಿಂದ ತಾನುತನ್ನದೆಂಬ ಭಾವವಿಲ್ಲದ್ದರಿಂದ ಭಿಕ್ಷುವೊಬ್ಬನೇ ಪರಿವ್ರಾಜಕನು[2], ಗೃಹಸ್ಥಾದಿಗಳಲ್ಲ.

## ಜ್ಞಾನಿಗೆ ಯಮನಿಯಮಾದಿಗಳು ಹೊಂದುವದು ಹೇಗೆ?

(ಭಾಷ್ಯ)

೧೮೨. ಏಕತ್ವಪ್ರತ್ಯಯವಿಧಿಜನಿತೇನ ಪ್ರತ್ಯಯೇನ ವಿಧಿನಿಮಿತ್ತಭೇದಪ್ರತ್ಯಯಸ್ಯ ಉಪಮರ್ದಿತತ್ವಾತ್ ಯಮನಿಯಮಾದ್ಯನುಪಪತ್ತಿಃ ಪರಿವ್ರಾಜಕಸ್ಯ ಇತಿ ಚೇತ್। ನ। ಬುಭುಕ್ಷಾದಿನಾ ಏಕತ್ವಪ್ರತ್ಯಯಾತ್ ಪ್ರಚ್ಯಾವಿತಸ್ಯ ಉಪಪತ್ತೇಃ। ನಿವೃತ್ತ್ಯರ್ಥತ್ವಾತ್। ನ ಚ ಪ್ರತಿಷಿದ್ಧಸೇವಾಪ್ರಾಪ್ತಿಃ। ಏಕತ್ವಪ್ರತ್ಯಯೋತ್ಪತ್ತೇಃ ಪ್ರಾಗೇವಾಪ್ರತಿಷಿದ್ಧತ್ವಾತ್। ನ ಹಿ ರಾತ್ರೌ ಕೂಪೇ ಕಣ್ಟಕೇ ವಾ ಪತಿತಃ ಉದಿತೇಽಪಿ ಸವಿತರಿ ಪತತಿ ತಸ್ಮಿನ್ನೇವ। ತಸ್ಮಾತ್ ಸಿದ್ಧಂ ನಿವೃತ್ತಕರ್ಮಾ ಭಿಕ್ಷುಕ ಏವ ಬ್ರಹ್ಮಸಂಸ್ಥಃ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) - ಏಕತ್ವಪ್ರತ್ಯಯವನ್ನುಂಟುಮಾಡುವ (ವಾಕ್ಯ)ದಿಂದಾದ ಪ್ರತ್ಯಯದಿಂದ ವಿಧಿಗೆ ನಿಮಿತ್ತವಾಗಿರುವ ಭೇದಪ್ರತ್ಯಯವು ಬಾಧಿತವಾಗಿರುವದರಿಂದ ಪರಿವ್ರಾಜಕನಿಗೆ ಯಮನಿಯಮಾದಿಗಳು ಹೊಂದುವದಿಲ್ಲವಲ್ಲ[3]!

(ಪರಿಹಾರ):- ಹಾಗಲ್ಲ. ಏಕೆಂದರೆ ಹಸಿವೇ ಮುಂತಾದ (ಕಾರಣ)ದಿಂದ ಏಕತ್ವಪ್ರತ್ಯಯದಿಂದ ಜಗುಳಿಬಿದ್ದವನಿಗೆ (ಅವು) ಆಗಬಹುದಾಗಿವೆ ಏಕೆಂದರೆ (ಅವು) ನಿವೃತ್ತಿಗಾಗಿ ಮಾಡತಕ್ಕವು.[4] (ಹೀಗಾದರೆ) ಪ್ರತಿಷಿದ್ಧ

---

1. ಇದು ಉಪಕುರ್ವಾಣಬ್ರಹ್ಮಚಾರಿಗೆ ಮಾತ್ರ ಅನ್ವಯಿಸುವ ಶ್ರುತಿಯಾಗಿದೆ. ಗೃಹಸ್ಥನು ಕರ್ಮಿ ಎಂಬುದು ಪ್ರಸಿದ್ಧವೇ ಆಗಿದೆ. ನೈಷ್ಠಿಕನು ಗುರುಶುಶ್ರೂಷೆಯನ್ನೂ ವಾನಪ್ರಸ್ಥತ್ರಿದಂಡಿಸಂನ್ಯಾಸಿಗಳು ತಪಉಪಾಸನೆಗಳನ್ನೂ ಬ್ರಹ್ಮಲೋಕಪ್ರಾಪ್ತಿಗಾಗಿ ಮಾಡುತ್ತಾರಾದ್ದರಿಂದ ಅವರ ಆಶ್ರಮಗಳಲ್ಲಿಯೂ ತಾನುತನ್ನದೆಂಬ ಭಾವವಿದೆ. ಬೃ ಭಾ ೬ ೨-೧೫ (ಛಾ.ಭಾ ೪೪೭)ನ್ನೂ ಈ ಉಪನಿಷತ್ತಿನ ೫-೯-೧೨ರ ಭಾಷ್ಯವನ್ನೂ ನೋಡಿ.

2 ಪರಮಹಂಸನಿಗೆ ಗೃಹಸ್ಥಕರ್ಮಗಳೂ ಇಲ್ಲ, ಬ್ರಹ್ಮಚಾರಿವಾನಪ್ರಸ್ಥತ್ರಿದಂಡಿಗಳ ಕರ್ಮಗಳೂ ಇಲ್ಲ, ಆದ್ದರಿಂದ ಅವನೊಬ್ಬನೇ ಮುಖ್ಯಾರ್ಥದಲ್ಲಿ ಪರಿವ್ರಾಜಕನು ಐ.ಛಾ. ಭಾ ೧೫ನ್ನು ನೋಡಿ

3 ಆದ್ದರಿಂದ ಅವನು ಶಾಸ್ತ್ರವನ್ನು ಮೀರಿ ಯಮಾದಿಗಳನ್ನು ಬಿಡಬಹುದು, ಸ್ವೇಚ್ಛಾಚಾರಿಯೂ ಆಗಬಹುದಲ್ಲ! ಎಂದು ಭಾವ.

4. ಯಮಾದಿಗಳು ಅನಾತ್ಮದಲ್ಲಾಗುವ ಪ್ರವೃತ್ತಿಯನ್ನು ತಪ್ಪಿಸುವದಕ್ಕಾಗಿ ಮಾಡಬೇಕಾದವುಗಳು, ಆದ್ದರಿಂದ ಜ್ಞಾನಕ್ಕೇ ಉಪಕಾರಕವಾಗಿವೆ ಬೃ. ಭಾ. ೪-೫-೧೫, ಛಾ ಭಾ. ೩೪೩. ಇಲ್ಲಿ ಯಮಾದಿಗಳನ್ನು ವಿಧಿಸಿದೆಯೆಂದಿಟ್ಟುಕೊಂಡರೂ ನಿಯಮವಿಧಿಯಾಗಬಹುದು ಎಂದು ವ್ಯಾವಹಾರಿಕದೃಷ್ಟಿಯಿಂದಲೂ (ಬೃ. ಭಾ. ೧-೪-೭, ಛಾ. ಭಾ. ೧೪೨), ಅನಾತ್ಮಪ್ರವೃತ್ತಿಯು ಅನರ್ಥಕರವೆಂಬ ನಿಶ್ಚಯದಿಂದಲೇ ಯಮಾದಿಗಳು ಜ್ಞಾನಿಗೆ ಅರ್ಥಪ್ರಾಪ್ತವಾಗಿರುವವೆಂದು (ಬೃ. ಭಾ. ೧-೪-೭ ಛಾ. ೧೩೮) ಪರಮಾರ್ಥದೃಷ್ಟಿಯಿಂದಲೂ ಉತ್ತರವನ್ನು ಹೇಳಿದಂತೆ ಆಗಿದೆ.

(ಕರ್ಮ)ವನ್ನು ಮಾಡಬಹುದೆಂದೇನೂ ಬಂದೊದಗುವದಿಲ್ಲ, ಏಕೆಂದರೆ ಏಕತ್ವ ಪ್ರತ್ಯಯವುಂಟಾಗುವ ಮೊದಲೇ (ಅದು ಶಾಸ್ತ್ರದಿಂದ) ಪ್ರತಿಷಿದ್ಧವಾಗಿರುತ್ತದೆ[1] ರಾತ್ರಿಯಲ್ಲಿ ಬಾವಿಯೊಳಗೋ ಮುಳ್ಳಿನಮೇಲೋ ಬೀಳುತ್ತಿದ್ದವನು, ಸೂರ್ಯನು ಉದಯಿಸಿದಮೇಲೂ ಅಲ್ಲಿಯೇ ಬೀಳಲಾರನಷ್ಟೆ.[2] **ಆದ್ದರಿಂದ ಕರ್ಮ (ಗಳನ್ನೆಲ್ಲ) ಬಿಟ್ಟ ಭಿಕ್ಷುಕನೇ ಬ್ರಹ್ಮಸಂಸ್ಥನು ಎಂದು ಸಿದ್ಧವಾಯಿತು.**[3]

## ಪೂರ್ವಪಕ್ಷಯುಕ್ತಿಗಳ ವಿಮರ್ಶೆ

(ಭಾಷ್ಯ)

೧೮೩ ಯತ್ಪುನರುಕ್ತಂ ಸರ್ವೇಷಾಂ ಜ್ಞಾನವರ್ಜಿತಾನಾಂ ಪುಣ್ಯಲೋಕತಾ ಇತಿ। ಸತ್ಯಮೇತತ್। ಯಚ್ಚೋಕ್ತಂ ತಪಃಶಬ್ದೇನ ಪರಿವ್ರಾಡಪ್ಯುಕ್ತಃ ಇತಿ। ಏತದಸತ್। ಕಸ್ಮಾತ್? ಪರಿವ್ರಾಜಕಸ್ಯೈವ (ನಿವೃತ್ತಭೇದಪ್ರತ್ಯಯಸ್ಯ)[4] ಬ್ರಹ್ಮಸಂಸ್ಥತಾಸಂಭವಾತ್। ಸ ಏವ ಹಿ ಅವಶೇಷಿತ ಇತಿ ಅವೋಚಾಮ। ಏಕತ್ವವಿಜ್ಞಾನವತೋಽಗ್ನಿಹೋತ್ರಾದಿವತ್ ತಪೋನಿವೃತ್ತೇಶ್ಚ। ಭೇದಬುದ್ಧಿಮತ ಏವ ಹಿ ತಪಃಕರ್ತವ್ಯತಾ ಸ್ಯಾತ್। ಏತೇನ ಕರ್ಮಚ್ಛಿದ್ರೇ ಬ್ರಹ್ಮಸಂಸ್ಥತಾನಾಸಾಮರ್ಥ್ಯಮ್, ಅಪ್ರತಿಷೇಧಶ್ಚ ಪ್ರತ್ಯುಕ್ತಃ। ತಥಾ ಜ್ಞಾನವಾನೇವ ನಿವೃತ್ತಕರ್ಮಾ ಪರಿವ್ರಾಟ್ ಇತಿ ಜ್ಞಾನವೈಯರ್ಥ್ಯಂ ಪ್ರತ್ಯುಕ್ತಮ್। ಯತ್ಪುನರುಕ್ತಂ ಯವವರಾಹಾದಿಶಬ್ದವತ್ ಪರಿವ್ರಾಜಕೇ ನ ರೂಢೋ ಬ್ರಹ್ಮಸಂಸ್ಥಶಬ್ದಃ ಇತಿ। ತತ್ ಪರಿಹೃತಮ್। ತಸ್ಯೈವ ಬ್ರಹ್ಮಸಂಸ್ಥತಾಸಂಭವಾತ್ ನಾನ್ಯಸ್ಯ ಇತಿ। ಯತ್ಪುನರುಕ್ತಂ ರೂಢಶಬ್ದಾಃ ನಿಮಿತ್ತಂ ನೋಪಾದದತ ಇತಿ। ತನ್ನ। ಗೃಹಸ್ಥತಕ್ಷಪರಿವ್ರಾಜಕಾದಿಶಬ್ದದರ್ಶನಾತ್। ಗೃಹಸ್ಥಿತಿಪಾರಿವ್ರಾಜ್ಯತಕ್ಷಣಾದಿನಿಮಿತ್ತೋಪಾದಾನಾ ಅಪಿ ಗೃಹಸ್ಥಪರಿವ್ರಾಜಕೌ ಆಶ್ರಮವಿಶೇಷೇ, ವಿಶಿಷ್ಟಜಾತಿಮತಿ ಚ ತಕ್ಷಾ ಇತಿ ರೂಢಾ ದೃಶ್ಯನ್ತೇ ಶಬ್ದಾಃ। ನ ಯತ್ರಯತ್ರ ತಾನಿ ನಿಮಿತ್ತಾನಿ ತತ್ರತತ್ರ ವರ್ತನ್ತೇ। ಪ್ರಸಿದ್ಧ್ಯಭಾವಾತ್। ತಥಾ ಇಹಾಪಿ ಬ್ರಹ್ಮಸಂಸ್ಥಶಬ್ದೋ

---

1 ಅಧರ್ಮವನ್ನು ಬಿಟ್ಟಮೇಲೆಯೇ ವಿಹಿತಕರ್ಮಕ್ಕೆ ಅಧಿಕಾರಿಯಾಗುತ್ತಾನೆ, ಆ ಕರ್ಮವನ್ನೂ ಸಂನ್ಯಾಸಮಾಡಿದವನಿಗೆ ಅದಕ್ಕಿಂತಲೂ ಕಡಿಮೆಯಾದ, ಮೊದಲೇ ಬಿಟ್ಟಿದ್ದ, ನಿಷಿದ್ಧಕರ್ಮವನ್ನು ಹೇಗೆ ಮಾಡಿಯಾನು ?

2 ಈ ದೃಷ್ಟಾಂತವನ್ನು ಐ. ಭಾ. ಭಾ. ೧೩ರಲ್ಲಿ ವಿಹಿತಕರ್ಮವನ್ನು ಬಿಡುವದಕ್ಕೆ ಪ್ರಯೋಜನವನ್ನು ಕೇಳಬಾರದೆಂಬುದಕ್ಕೆ ಉಪಯೋಗಿಸಿಕೊಂಡಿದೆ.

3. ಇಲ್ಲಿ ಜ್ಞಾನಿಯಾದ ಸಂನ್ಯಾಸಿಯೇ ಬ್ರಹ್ಮಸಂಸ್ಥನೆಂಬುದು ಪ್ರಕೃತ. ಆತ್ಮಜ್ಞಾನಾಂಗವಾಗಿ ಮುಮುಕ್ಷುಗಳೂ ಪಾರಿವ್ರಾಜ್ಯವನ್ನು ಮಾಡಬಹುದೆಂಬುದನ್ನು ಐ.ಭಾ.ಭಾ ೧೮ ಮುಂತಾದ ಕಡೆಗಳಲ್ಲಿ ಪ್ರತಿಪಾದಿಸಿದೆ.

4. ಇದು ವಾ॥ ಅ॥ ಪಾಠ, ಇದಿಲ್ಲದಿದ್ದರೂ ಸಾಗುತ್ತದೆ.

ನಿವೃತ್ತಸರ್ವಕರ್ಮತತ್ಸಾಧನಪರಿವ್ರಾಡೇಕವಿಷಯೇ ಅತ್ಯಾಶ್ರಮಿಣಿ ಪರಮಹಂಸಾಖ್ಯೇ ವೃತ್ತೋ[1] ಭವಿತುಮರ್ಹತಿ । ಮುಖ್ಯಾಮೃತತ್ವಫಲಶ್ರವಣಾತ್ ॥

(ಭಾಷ್ಯಾರ್ಥ)

ಇನ್ನು ಜ್ಞಾನರಹಿತರಾದ (ಆಶ್ರಮಿ)ಗಳಿಗೆಲ್ಲ ಪುಣ್ಯಲೋಕವೇ (ಆಗುವದು) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ನಿಜವೇ[2]. ಆದರೆ ತಪಃಶಬ್ದದಿಂದ ಪರಿವ್ರಾಜಕನನ್ನೂ ಹೇಳಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಸರಿಯಲ್ಲ, ಏಕೆ? ಎಂದರೆ ಪರಿವ್ರಾಜಕನೊಬ್ಬನೇ ಭೇದಪ್ರತ್ಯಯವು ತೊಲಗಿರುವವನಾದ್ದರಿಂದ[3] (ಅವನಿಗೆ) ಬ್ರಹ್ಮಸಂಸ್ಥತ್ವವು ಸಂಭವಿಸುವದರಿಂದ ಅವನನ್ನೇ ಉಳಿಸಿಕೊಂಡಿದೆ ಎಂದಲ್ಲವೆ, ನಾವು ಹೇಳಿರುತ್ತೇವೆ[4] ? ಏಕತ್ವವಿಜ್ಞಾನವುಳ್ಳವನಿಗೆ ಅಗ್ನಿಹೋತ್ರಾದಿಗಳಂತೆ[5] ತಪಸ್ಸೂ ನಿವೃತ್ತವಾಗಿರುವದರಿಂದಲೂ (ತಪಃಶಬ್ದದಿಂದ ಅವನನ್ನು ಹೇಳಿದೆಯೆಂಬುದು ಸರಿಯಲ್ಲ). ಭೇದಬುದ್ಧಿಯುಳ್ಳವನಿಗೇ ಅಲ್ಲವೆ, ತಪಸ್ಸೆಂಬುದು ಕರ್ತವ್ಯವಾಗಿರುತ್ತದೆ[6] ? ಇದರಿಂದ ಕರ್ಮವಿಲ್ಲದ ಸಂದಿನಲ್ಲಿ ಬ್ರಹ್ಮಸಂಸ್ಥನಾಗಿರಬಹುದೆಂಬುದಕ್ಕೂ (ಮಿಕ್ಕ ಆಶ್ರಮಿಗಳನ್ನು) ಪ್ರತಿಷೇಧಿಸಿಲ್ಲವೆಂಬುದಕ್ಕೂ ಪ್ರತಿಹೇಳಿದಂತೆ ಆಯಿತು[7] ಮತ್ತು ಜ್ಞಾನವುಳ್ಳವನಾಗಿ ಕರ್ಮ

---

1. 'ವೃತ್ತ ಇಹ' ಎಂಬ ಅಚ್ಚಿನ ಪಾಠದಲ್ಲಿ 'ಇಹ' ಹೆಚ್ಚು

2. ಆ ಪುಣ್ಯಲೋಕಭಾಗಿಗಳಲ್ಲಿ ಆಶ್ರಮಮಾತ್ರಶರಣನಾದ ಸಂನ್ಯಾಸಿಯೂ ಸೇರಿರುತ್ತಾನೆ, ಏಕೆಂದರೆ ಅವನಿಗೂ ಏಕತ್ವಜ್ಞಾನವಿರುವದಿಲ್ಲ.

3 ನಿವೃತ್ತಭೇದಪ್ರತ್ಯಯಸ್ಯ ಎಂಬುದರ ಅನುವಾದವಿದು, ಅದು ಇಲ್ಲದ ಆ॥ ಪಾಠಕ್ಕೂ ಇದೇ ಅಭಿಪ್ರಾಯ

4. ಅವನಿಗೂ ತಪಸ್ಸುಂಟೆಂಬುದು ಶ್ರುತಿಯ ಅಭಿಪ್ರಾಯವಾಗಿದ್ದರೆ ಅವನನ್ನು ಬೇರ್ಪಡಿಸಿ ಅಮೃತತ್ವವು ಅವನಿಗೆ ಆಗುತ್ತದೆ ಎಂದು ಹೇಳುತ್ತಿರಲಿಲ್ಲ, ಏಕತ್ವಜ್ಞಾನಿಗೆ ಕರ್ಮವು ಸಂಭವಿಸುವದೂ ಇಲ್ಲ ಆದ್ದರಿಂದ ಅವನನ್ನೇ ಉಳಿಸಿಕೊಂಡು ಬ್ರಹ್ಮಸಂಸ್ಥನೆಂದಿದೆ ಎಂದು ಭಾ. ಭಾ. ೧೭೪ರಲ್ಲಿ ಹೇಳಿದೆ.

5 ಗೃಹಸ್ಥನ ಧರ್ಮಗಳಂತೆ

6 ಈ ತಪಸ್ಸನ್ನು ನಾನು ಮಾಡಿ ಇಂಥ ಫಲವನ್ನು ಅನುಭವಿಸುವೆನು ಎಂಬ ಕ್ರಿಯಾಕಾರಕಫಲಭೇದಬುದ್ಧಿಯಿರುವ ವಾನಪ್ರಸ್ಥನಿಗೇ ತಪಸ್ಸು, ಪರಿವ್ರಾಜಕನಿಗೆ ಅಭೇದಬುದ್ಧಿಯು ಇರುವದಿಲ್ಲ.

7 ಏಕೆಂದರೆ ಕರ್ಮವಿದ್ದವನಿಗೆ ಬ್ರಹ್ಮಸಂಸ್ಥತೆ ಸಂಭವಿಸುವದಿಲ್ಲ, ಬ್ರಹ್ಮಸಂಸ್ಥನಿಗೆ ಕರ್ಮವು ಸಂಭವಿಸುವದಿಲ್ಲ, ಆದ್ದರಿಂದ ಕರ್ಮವಿಲ್ಲದ ಸಂದಿನಲ್ಲಿ ಬ್ರಹ್ಮಸಂಸ್ಥನಾಗುವದೆಂಬುದು ಅಸಂಭಾವಿತ. ಮಿಕ್ಕ ಆಶ್ರಮಗಳಿಗೆ ಪುಣ್ಯಲೋಕವನ್ನು ಹೇಳಿ ಅಮೃತತ್ವವನ್ನು ಬ್ರಹ್ಮಸಂಸ್ಥನಿಗೆ ಬೇರ್ಪಡಿಸಿ ಹೇಳಿರುವದರಿಂದಲೇ ಅವರಿಗೆ ಬ್ರಹ್ಮಸಂಸ್ಥತ್ವವಿಲ್ಲದಂತೆ ಆಗಿದೆ.

ವನ್ನು ಬಿಟ್ಟಿರುವವನೇ ಪರಿವ್ರಾಜಕನಾದ್ದರಿಂದ ಜ್ಞಾನವು ವ್ಯರ್ಥವೆಂಬ (ಪೂರ್ವಪಕ್ಷಕ್ಕೂ) ಪ್ರತ್ಯುತ್ತರವನ್ನು ಹೇಳಿದಂತೆ ಆಯಿತು.[1]

ಇನ್ನು ಯವವರಾಹಾದಿಶಬ್ದಗಳಂತೆ ಬ್ರಹ್ಮಸಂಸ್ಥಶಬ್ದವು ಪರಿವ್ರಾಜಕನಲ್ಲಿ ರೂಢವಲ್ಲ ಎಂದು (ಪೂರ್ವಪಕ್ಷಿ ಹೇಳಿದ್ದನಷ್ಟೆ), ಆ (ಪರಿವ್ರಾಜಕನಿಗೇ) ಬ್ರಹ್ಮಸಂಸ್ಥತ್ವವು ಸಂಭವಿಸುವದೇ ಹೊರತು ಮತ್ತೊಬ್ಬರಿಗಿಲ್ಲ ಎಂದು ಅದನ್ನು ಪರಿಹರಿಸಿದ್ದಾಗಿದೆ.[2] ಇನ್ನು ರೂಢಶಬ್ದಗಳು ನಿಮಿತ್ತವನ್ನು ಸ್ವೀಕರಿಸಿ (ಪ್ರವೃತ್ತವಾಗು)ವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ? ಅದು ಸರಿಯಲ್ಲ, ಏಕೆಂದರೆ ಗೃಹಸ್ಥ, ತಕ್ಷ, ಪರಿವ್ರಾಜಕ- ಮುಂತಾದ ಶಬ್ದಗಳು ಕಂಡುಬರುತ್ತವೆ, (ಇದರ ವಿವರ): ಮನೆಯಲ್ಲಿರುವದು, (ಮನೆಯನ್ನು ಬಿಟ್ಟು) ಹೊರಟುಹೋಗಿಬಿಡುವದು, ಕೆತ್ತುವದು- ಮುಂತಾದ ನಿಮಿತ್ತಗಳನ್ನು (ಈ) ಶಬ್ದಗಳು ತೆಗೆದುಕೊಳ್ಳುವವಾದರೂ ಗೃಹಸ್ಥಪರಿವ್ರಾಜಕ(ಶಬ್ದ)ಗಳು ಆಯಾ ಆಶ್ರಮಿಯಲ್ಲಿಯೂ ತಕ್ಷ ಎಂಬ (ಶಬ್ದವು) ಗೊತ್ತಾದ (ಒಂದು) ಜಾತಿಯುಳ್ಳ (ಬಡಗಿಯಲ್ಲಿ)ಯೂ ರೂಢ[3]ವಾಗಿರುವದೇ ಹೊರತು ಎಲ್ಲೆಲ್ಲಿ ಆ ನಿಮಿತ್ತಗಳಿವೆಯೋ ಅಲ್ಲೆಲ್ಲ ವರ್ತಿಸುವದಿಲ್ಲ, ಏಕೆಂದರೆ (ಹಾಗೆ) ಪ್ರಸಿದ್ಧಿಯಿಲ್ಲ.[4] ಹಾಗೆಯೇ ಇಲ್ಲಿಯೂ ಬ್ರಹ್ಮಸಂಸ್ಥಶಬ್ದವು ಸರ್ವ

---

1 ಜ್ಞಾನವಿಲ್ಲದ ಆಶ್ರಮಮಾತ್ರದವನಿಗೂ ಅಮೃತತ್ವವಾಗುವದೆಂದಿದ್ದರೆ ಜ್ಞಾನವು ವ್ಯರ್ಥವಾಗುತ್ತಿತ್ತು ಎಂದು ಭಾವ ಇಲ್ಲಿ ಬ್ರಹ್ಮಸಂಸ್ಥನು ಅಮೃತತ್ವವನ್ನು ಪಡೆಯುತ್ತಾನೆ ಎಂದಿರುವದು ಪ್ರಣವಾರ್ಥವಾದ ಬ್ರಹ್ಮವನ್ನು ಬಲ್ಲ ಜ್ಞಾನಿಯಾದ ಪರಮಹಂಸನ ವಿಷಯವೇ ಆದರೂ ಬ್ರಹ್ಮಸಂಸ್ಥತ್ವವನ್ನು ಹೊಗಳಿರುವದರಿಂದಲೇ ಅದು ಕರ್ತವ್ಯವೆಂದು ಹೇಳಿದಂತೆ ಆಗಿದೆ; ಈ ಕರ್ತವ್ಯತ್ವವು ಕರ್ತೃವಿಲ್ಲದೆ ಸಂಭವಿಸುವದಿಲ್ಲವಾದ್ದರಿಂದ ಅನಾತ್ಮಜ್ಞನಾದ ಮುಮುಕ್ಷುವೂ ಬ್ರಹ್ಮನಿಷ್ಠೆಯನ್ನು ಮಾಡುವದಕ್ಕೆ ಅಧಿಕಾರಿಯೆಂದಾಗುತ್ತಾನೆ ಆದ್ದರಿಂದ ಅಮೃತತ್ವಕಾಮನಾದವನು ಬ್ರಹ್ಮಸಂಸ್ಥನಾಗಬೇಕು, ಓಂಕಾರೋಪಾಸನೆಯನ್ನು ಮಾಡಬೇಕು- ಎಂದು ವಿಧಿಯು ಏರ್ಪಡುತ್ತದೆ ಮುಂದಿನ ಕಂಡಿಕೆಯಲ್ಲಿ ಓಂಕಾರವನ್ನು ಹೊಗಳಿರುವದಕ್ಕೂ ಅದೇ ಕಾರಣ. ಈ ನ್ಯಾಯವನ್ನು ಗೀ ಭಾ ೫-೧ (ಭಾ ಭಾ ೩೨೪)ರಲ್ಲಿ ಕಾಣಬಹುದು. ವಿವಿದಿಷುಗಳಿಗೂ ಸರ್ವಕರ್ಮಸಂನ್ಯಾಸಪೂರ್ವಕವಾಗಿ ಬ್ರಹ್ಮನಿಷ್ಠರಾಗಿರುವದು ವಿಹಿತವೆಂಬುದಕ್ಕೆ ಗೀ ಭಾ ೧೦ ೪೯ (ಭಾ ಭಾ ೫೫೨), ಗೀ ಭಾ ೧೮ ೫೦ರಿಂದ ೫೫ (ಭಾ ಭಾ. ೫೬೦ರಿಂದ ೫೬೨), ಬೃ. ಭಾ ೪ ೫-೧೫ ೬೨ ಭಾ. ೬೪೩, ೬೪೪) ಇವನ್ನು ನೋಡಿ.

2. ಮತ್ತೊಬ್ಬರಿಗೆ ಸಂಭವಿಸುವದಿಲ್ಲವಾದ್ದರಿಂದ ಬ್ರಹ್ಮಸಂಸ್ಥಶಬ್ದವು ರೂಢವಲ್ಲದಿದ್ದರೂ ಪರಿವ್ರಾಜಕನನ್ನೇ ಹೇಳುತ್ತದೆ.

3. ನಿರುಕ್ತದಲ್ಲಿ ತಕ್ಷಾ, ಪರಿವ್ರಾಜಕೋ, ಜೀವನೋ, ಭೂಮಿಜಃ ಎಂಬ ಶಬ್ದಗಳನ್ನು ಉದಾಹರಿಸಿದೆ ೧-೪.

4 ಮನೆಯಲ್ಲಿರುವದರಿಂದ ಬ್ರಹ್ಮಚಾರಿಯೂ ಗೃಹಸ್ಥನೆನಿಸಲಾರನು, ಮನೆಯನ್ನು ಬಿಟ್ಟು ದೂರದೇಶಕ್ಕೆ ಹೋಗಿರುವವನೂ ಪರಿವ್ರಾಜಕನಾಗುವದಿಲ್ಲ, ಮರವನ್ನು ಕೆತ್ತುವವರೆಲ್ಲ ಬಡಗಿಗಳೆನಿಸುವದಿಲ್ಲ ; ಈ ಶಬ್ದಗಳು ಇಂಥಿಂಥವರನ್ನೇ ಹೇಳುವವೆಂಬ ಪ್ರಸಿದ್ಧಿಯಿದೆ.

ಕರ್ಮಗಳನ್ನೂ ಅವುಗಳ ಸಾಧನಗಳನ್ನೂ ಬಿಟ್ಟ ಅತ್ಯಾಶ್ರಮಿಯಾದ[1] ಪರಮ ಹಂಸನೆಂಬ ಪರಿವ್ರಾಜಕನೊಬ್ಬನ ವಿಷಯದಲ್ಲಿಯೇ ವರ್ತಿಸುತ್ತದೆಯೆಂಬುದೇ ಯುಕ್ತವು[2]. ಏಕೆಂದರೆ ಇಲ್ಲಿ ಮುಖ್ಯಾಮೃತತ್ವವೆಂಬ ಫಲವನ್ನು ಶ್ರುತಿಯಲ್ಲಿ ಹೇಳಿರುತ್ತದೆ[3]

## ಪಾರಮಹಂಸ್ಯವೇ ವೇದೋಕ್ತಪಾರಿವ್ರಾಜ್ಯವು

(ಭಾಷ್ಯ)

೧೮೪ ಅತಶ್ಚ ಇದಮೇವೈಕಂ ವೇದೋಕ್ತಂ ಪಾರಿವ್ರಾಜ್ಯಮ್, ನ ಯಜ್ಞೋಪವೀತತ್ರಿದಣ್ಡಕಮಣ್ಡಲ್ವಾದಿಪರಿಗ್ರಹಃ (ಇತಿ)[4] । "ಮುಣ್ಡೋಽಪರಿಗ್ರಹೋಽಸಙ್ಗಃ" (ಜಾ ೫)[5] ಇತಿ ಚ ಶ್ರುತಿಃ[6] । "ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ" (ಶ್ವೇ ೬-೨೧) ಇತ್ಯಾದಿ ಚ ಶ್ವೇತಾಶ್ವತರೀಯೇ। "ನಿಸ್ತುತಿರ್ನಿರ್ನಮಸ್ಕಾರಃ" (ಮೋ ಧ ೨೪೨-೯),[7] ಇತ್ಯಾದಿಸ್ಮೃತಿಭ್ಯಶ್ಚ। "ತಸ್ಮಾತ್ ಕರ್ಮ ನ ಕುರ್ವನ್ತಿ ಯತಯಃ ಪಾರದರ್ಶಿನಃ" (ಮೋ. ಧ ೨೪೧-೭), "ತಸ್ಮಾದಲಿಙ್ಗೋ ಧರ್ಮಜ್ಞಃ" (ಅಶ್ವ. ४६-೫೧)[8], "ಅವ್ಯಕ್ತಲಿಙ್ಗಃ"[9] (ವ. ೧೦-೧೨) —ಇತ್ಯಾದಿ ಸ್ಮೃತಿಭ್ಯಶ್ಚ[10] ॥

1. ಪರಮಹಂಸನನ್ನು ಅತ್ಯಾಶ್ರಮಿ ಎಂದು ಕರೆದಿರುವದು ಸ್ಮಾರ್ತ-ಲಿಂಗವಿಲ್ಲವೆನ್ನುವದಕ್ಕೆ. ಬೃ ಭಾ ೩-೫-೧ (ಭಾ. ಭಾ ೫೬)ನ್ನು ನೋಡಿ.

2. ಇತರ ಯೋಗರೂಢವಾದ ಶಬ್ದಗಳಂತೆ ಇದೂ ಯಾವ ಸಂನ್ಯಾಸಿಯಲ್ಲಿ ಬ್ರಹ್ಮಸಂಸ್ಥತ್ವವು ಸಂಭವಿಸುವದೋ ಅವನಲ್ಲಿ ಮಾತ್ರ ವರ್ತಿಸುವದು ವಿರುದ್ಧವಲ್ಲ ಎಂದು ಅಭಿಪ್ರಾಯ.

3. ಪುಣ್ಯಲೋಕಗಳಿಂದ ಬೇರ್ಪಡಿಸಿರುವದರಿಂದ ಇದು ಮುಖ್ಯಾಮೃತತ್ತ್ವವೇ ಎಂದು ಹಿಂದೆ ನಿಶ್ಚಯಿಸಿದೆ, ಆ ಅಮೃತತ್ವವು ಮಿಕ್ಕ ಗೌಣಬ್ರಹ್ಮಸಂಸ್ಥರಿಗೆ- ಎಂದರೆ ಸುಮ್ಮನೆ ಯಾವ ಆಶ್ರಮದಲ್ಲಾದರೂ ಇದ್ದು ಪ್ರಣವಸೇವೆಮಾಡುವವರಿಗೆ- ದಕ್ಕಲಾರದು.

4. ಇಲ್ಲಿ ಇತಿಯು ಇಲ್ಲದಿದ್ದರೂ ಸಾಗುತ್ತಿತ್ತೆಂದು ತೋರುತ್ತದೆ

5. ಜಾಬಾಲದಲ್ಲಿ 'ಅಸಙ್ಗಃ' ಎಂಬ ಮಾತಿಲ್ಲ ; 'ಅಸಙ್ಗಃ' ಎಂಬುವೇ ಬೇರೊಂದು ಶ್ರುತಿಯ ವಾಕ್ಯವಾಗಿರಬಹುದೆ ?

6. ಈ ಮಾತನ್ನು ಟೀಕೆಯಲ್ಲಿ ಅನ್ವಯಿಸಿರುವಂತೆ ಮುಂದಿನ ವಾಕ್ಯಕ್ಕೆ ಜೋಡಿಸುವ ಕಾರಣವೇನೂ ಇಲ್ಲ

7 ನಿಸ್ತುತಿರ್ನಿರ್ನಮಸ್ಕಾರಃ ಪರಿತ್ಯಜ್ಯ ಶುಭಾಶುಭೇ । ಅರಣ್ಯೇ ವಿಚರೈಕಾಕೀ ಯೇನ ಕೇನಚಿದಾಶಿತಃ ॥ (ಮೋ ಧ. ೨೪೨-೯) ಎಂದು ಪೂರ್ಣಶ್ಲೋಕ.

8. ಅಚ್ಚಿನಭಾರತದಲ್ಲಿ 'ತಸ್ಮಾದಲಿಙ್ಗಧರ್ಮಜ್ಞೋ ಧರ್ಮತತ್ತ್ವಮುಪಾಚರೇತ್' ಎಂದಿದೆ. ಆದರೆ ಭಾಷ್ಯಕಾರರು 'ಅಲಿಙ್ಗೋ' ಎಂದೇ ಬರೆದಿರುತ್ತಾರೆ. ಬೃ ಭಾ ೩-೫-೧ (ಭಾ ಭಾ. ೫೬ ) ನೋಡಿ

9. ವಸಿಷ್ಠಸ್ಮೃತಿಯಲ್ಲಿ "ಅವ್ಯಕ್ತಲಿಙ್ಗೋಽವ್ಯಕ್ತಾಚಾರೋಽನುನ್ಮತ್ತ ಉನ್ಮತ್ತವೇಷಃ" ಎಂಬ ವಾಕ್ಯವಿದೆ. ಇದು ಅದೇ ಸ್ಮೃತಿಯಿಂದ ಆರಿಸಿದ್ದೊ, ಅಲ್ಲವೊ, ನಿಶ್ಚಯವಿಲ್ಲ.

10 ಇತ್ಯಾದಿಸ್ಮೃತಿಭ್ಯಶ್ಚ ಎಂಬುದು ಪುನರುಕ್ತಿಯಾಗಿದೆ.

(ಭಾಷ್ಯಾರ್ಥ)

**ಮತ್ತು ಈ ಕಾರಣದಿಂದಲೇ[1] ಇದೊಂದೇ ವೇದೋಕ್ತವಾದ ಪಾರಿವ್ರಾಜ್ಯವೇ ಹೊರತು ಯಜ್ಞೋಪವೀತ, ತ್ರಿದಂಡ, ಕಮಂಡಲು-ಮುಂತಾದವುಗಳನ್ನು ಪರಿಗ್ರಹಿಸುವದಲ್ಲ ಎಂದಾಗುತ್ತದೆ.**[2] "ಮುಂಡನು, ಅಪರಿಗ್ರಹನು, ಅಸಂಗನು" (ಜಾ ೫?) ಎಂದು ಶ್ರುತಿಯಿದೆ.[3] "ಅತ್ಯಾಶ್ರಮಿಗಳಿಗೆ ಪರಮಪವಿತ್ರವಾದ (ಈ ಜ್ಞಾನವನ್ನು ಹೇಳಿದನು)" (ಶ್ವೇ. ೬-೨೧) ಎಂದು ಶ್ವೇತಾಶ್ವತರೀಯದಲ್ಲಿಯೂ (ಹೇಳಿದೆ)[4] "ಸ್ತುತಿಯಿಲ್ಲದವನೂ ನಮಸ್ಕಾರವಿಲ್ಲದವನೂ" (ಮೋ. ಧ. ೨೪೨-೯)[5] "ಆದ್ದರಿಂದ[6] ಪಾರದರ್ಶಿಗಳಾದ ಯತಿಗಳು ಕರ್ಮವನ್ನು ಮಾಡುವದಿಲ್ಲ" (ಮೋ ಧ ೨೪೧-೭), "ಆದ್ದರಿಂದ ಅಲಿಂಗನೂ ಧರ್ಮಜ್ಞನೂ (ಆಗಿ ಧರ್ಮತತ್ತ್ವವನ್ನು ಆಚರಿಸಬೇಕು) "(ಅಶ್ವ. ೪೬-೫೧), "ಅವ್ಯಕ್ತಲಿಂಗನೂ " (ವ. ೧೦-೧೨)[7] -ಮುಂತಾದ ಸ್ಮೃತಿಗಳಿಂದಲೂ ಇದು (ಸಿದ್ಧವಾಗುತ್ತದೆ)[8]

---

1 ಜ್ಞಾನಿಯಾದ ಸರ್ವಕರ್ಮಸಂನ್ಯಾಸಿಯನ್ನೇ ಬ್ರಹ್ಮಸಂಸ್ಥನೆಂದೆಣಿಸಬೇಕಾಗಿರುವದರಿಂದಲೇ

2 ಏಕೆಂದರೆ ಯಜ್ಞೋಪವೀತಾದಿಗಳು ಕರ್ಮಾರ್ಥವಾಗಿರುತ್ತವೆ, ಭೇದಪ್ರತ್ಯಯವುಳ್ಳವನಿಗೆ ಮಾತ್ರ ಸಂಭವಿಸುತ್ತವೆ, ಅವನ್ನುಳ್ಳ ಸಂನ್ಯಾಸವು ಅಮೃತತ್ವಫಲವುಳ್ಳ ವೈದಿಕ ಸಂನ್ಯಾಸವಾಗಲಾರದು.

3. ಈ ಶ್ರುತಿಯಲ್ಲಿ ಸಂನ್ಯಾಸಿಗೆ ಯಾವ ಪರಿಗ್ರಹವೂ ಕರ್ಮವೂ ಇಲ್ಲವೆಂದು ಸ್ಪಷ್ಟವಾಗಿ ಹೇಳಿದೆ

4. ಜ್ಞಾನೋಪದೇಶಕ್ಕೆ ಅತ್ಯಾಶ್ರಮಿಗಳೇ ಮುಖ್ಯಾಧಿಕಾರಿಗಳೆಂದಾಯಿತು

5 ಸ್ತುತಿಯಿಲ್ಲದನೂ ನಮಸ್ಕಾರವಿಲ್ಲದವನೂ ಶುಭಾಶುಭವಿಲ್ಲದವನೂ ಆಗಿ ಯಾವದು ಸಿಕ್ಕಿದರೆ ಅದನ್ನು ತಿಂದುಕೊಂಡು ಅರಣ್ಯದಲ್ಲಿ ಸಂಚರಿಸು- ಎಂಬ ಉಪದೇಶವು ಎಂದಿಗೂ ತ್ರಿದಂಡಿಸಂನ್ಯಾಸಕ್ಕೆ ಹೊಂದುವದಿಲ್ಲ.

6. ಕರ್ಮವು ಬಂಧಕವೂ ಜ್ಞಾನವು ಮೋಕ್ಷದಾಯಕವೂ ಆಗಿರುವದರಿಂದ ಎಂದರ್ಥ, ಜ್ಞಾನಕರ್ಮಸಮುಚ್ಚಯಕಾರಿಗಳಾದ ಸಂನ್ಯಾಸಿಗಳಿಗೆ ಇದೂ ಹೊಂದುವದಿಲ್ಲ.

7 ದಂಭಕ್ಕಾಗಿ ಆಶ್ರಮಲಿಂಗವನ್ನು ತೋರಿಸಿಕೊಳ್ಳದೆ ಇರುವವನು, ಅದಂಭದಿಂದ ಶ್ರುತಿಸ್ಮೃತ್ಯುಕ್ತಲಿಂಗವುಳ್ಳವನು ಎಂದು ಟೀಕೆ, ಆದರೆ ಲಿಂಗವೆಂದರೆ ಸ್ಮಾರ್ತಸಂನ್ಯಾಸದ ಲಿಂಗವು, ಅದಿಲ್ಲದವನು- ಎಂದು ಸರಳವಾಗಿ ಅರ್ಥವಾಗುತ್ತದೆ ಬೃ. ಭಾ. ೩-೫-೧ (ಭಾ. ಭಾ. ೫೬)ರ ಬೆಂಬಲವೂ ಈ ಅರ್ಥಕ್ಕೇ ಇದೆ.

8. ಯಾವ ಪರಿಗ್ರಹವೂ ಇಲ್ಲದ ಜ್ಞಾನಯುಕ್ತಸರ್ವಕರ್ಮಸಂನ್ಯಾಸವೇ ವೇದೋಕ್ತ ಪಾರಿವ್ರಾಜ್ಯವೆಂದು ಸಿದ್ಧವಾಗುತ್ತದೆ ಎಂದರ್ಥ.

# ಏಕತ್ವಜ್ಞಾನಿಯೇ ಬ್ರಹ್ಮಸಂಸ್ಥನು

(ಭಾಷ್ಯ)

೧೮೫ ಯತ್ತು ಸಾಂಖ್ಯೈಃ ಕರ್ಮತ್ಯಾಗೋಽಭ್ಯುಪಗಮ್ಯತೇ । ಕ್ರಿಯಾಕಾರಕಫಲಭೇದಬುದ್ಧೇಃ ಸತ್ಯತ್ವಾಭ್ಯುಪಗಮಾತ್ ತನ್ಮೃಷಾ । ಯಚ್ಚ ಬೌದ್ಧೈಃ ಶೂನ್ಯತಾಭ್ಯುಪಗಮಾತ್ ಅಕರ್ತೃತ್ವಮಭ್ಯುಪಗಮ್ಯತೇ, ತದಪ್ಯಸತ್ । ತದಭ್ಯುಪಗನ್ತುಃ ಸತ್ತ್ವಾಭ್ಯುಪಗಮಾತ್ । ಯಚ್ಚ ಅಜ್ಞೈರಲಸತಯಾ ಅಕರ್ತೃತ್ವಾಭ್ಯುಪಗಮಃ, ನೋಽಸ್ಯಸತ್[1] । ಕಾರಕಬುದ್ಧೇರನಿವರ್ತಿತತ್ವಾತ್ ಪ್ರಮಾಣೇನ । ತಸ್ಮಾತ್ ವೇದಾನ್ತಪ್ರಮಾಣಜನಿತೈಕತ್ವಪ್ರತ್ಯಯವತ ಏವ ಕರ್ಮನಿವೃತ್ತಿಲಕ್ಷಣಂ ಪಾರಿವ್ರಾಜ್ಯಂ ಬ್ರಹ್ಮಸಂಸ್ಥತ್ವಂ ಚ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದರೆ ಸಾಂಖ್ಯರು ಕರ್ಮತ್ಯಾಗವನ್ನು ಒಪ್ಪಿರುವರಷ್ಟೆ, (ಅವರು) ಕ್ರಿಯಾಕಾರಕಫಲಗಳು ಬೇರೆಬೇರೆ ಎಂಬ ಬುದ್ಧಿಯು ಸತ್ಯವೆಂದು ಒಪ್ಪಿರುವದರಿಂದ ಅದು ತಪ್ಪೇ.[2] ಮತ್ತು ಬೌದ್ಧರು (ಆತ್ಮನು) ಶೂನ್ಯವೆಂದು ಒಪ್ಪಿರುವದರಿಂದ ಅಕರ್ತೃತ್ವವನ್ನು ಒಪ್ಪಿರುತ್ತಾರಲ್ಲ, ಅದೂ ಸರಿಯಲ್ಲ, ಏಕೆಂದರೆ ಅದನ್ನು ಒಪ್ಪಿರುವವನು ಇರುತ್ತಾನೆಂದು ಒಪ್ಪಲಾಗಿದೆ[3] ಇನ್ನು ಅಜ್ಞರಾದವರು ಆಲಸ್ಯದಿಂದ (ತಾವು) ಅಕರ್ತೃಗಳೆಂದು ಒಪ್ಪಿರುತ್ತಾರಲ್ಲ, ಅದೂ ತಪ್ಪೇ, ಏಕೆಂದರೆ (ಅವರಿಗೆ) ಕಾರಕಬುದ್ಧಿಯು ಪ್ರಮಾಣದಿಂದ (ಬಾಧಿತವಾಗಿ) ತೊಲಗಿರುವದಿಲ್ಲ[4] ಆದ್ದರಿಂದ ವೇದಾಂತಪ್ರಮಾಣದಿಂದ ಉಂಟಾದ ಏಕತ್ವಪ್ರತ್ಯಯವುಳ್ಳವನಿಗೇ ಕರ್ಮನಿವೃತ್ತಿರೂಪವಾದ ಪಾರಿವ್ರಾಜ್ಯವೂ ಬ್ರಹ್ಮಸಂಸ್ಥತ್ವವೂ (ಹೊಂದುತ್ತದೆ) ಎಂದು ಸಿದ್ಧವಾಯಿತು[5]

---

1 ಇದು ೮। ಪಾಠ ಭಾಷ್ಯವು ಏನೋ ಹೆಚ್ಚುಕಡಿಮೆಯಾಗಿರಬೇಕು. ಯಚ್ಚ. ಅಸನ್ ಎಂದೋ, ಅಥವಾ ತದಪ್ಯಸತ್ ಎಂದೋ ಇದ್ದರೆ ಚೆನ್ನ

2 ಪ್ರಕೃತಿಪುರುಷವಿವೇಕವಾದಮೇಲೂ ಕ್ರಿಯಾಕಾರಕಫಲಗಳು ಸತ್ಯವಾಗಿರುತ್ತವೆ ಎಂದೇ ಅವರು ಒಪ್ಪಿರುತ್ತಾರೆ ಆದ್ದರಿಂದ ವಿವೇಕಿಗೂ ಮತ್ತೆ ಅವಿವೇಕದಿಂದ ಕರ್ಮವು ಅಂಟಿಕೊಳ್ಳಬಹುದು.

3. ಶೂನ್ಯವನ್ನು ಒಪ್ಪಿರುವ ವಾದಿಗಳು ಇಲ್ಲದಿದ್ದರೆ ಆ ವಾದವೇ ಸಿದ್ಧಿಸುವದಿಲ್ಲ; ಅವರು ಇದ್ದರೆ ಅವರೇ ಕರ್ತೃಗಳಾಗಿ ಕರ್ಮವನ್ನು ಮಾಡುತ್ತಾರೆಂದು ಒಪ್ಪಬೇಕಾಗುವದು.

4. ಅಜ್ಞರಿಗೆ ಕರ್ತೃಕಾರಕವು ಸತ್ಯವೆಂಬ ಬುದ್ಧಿಯಿರುವದರಿಂದ ಕರ್ಮವನ್ನು ಬಿಡುವದೆಂಬುದೂ ಒಂದು ಕರ್ಮವೇ ಆಗುವದು. ಆದ್ದರಿಂದ ದೇಹಧಾರಿಯಾದವನು ಕರ್ಮವನ್ನು ಬಿಡುವದು ಆಗಲಾರದು. ಗೀ ೩-೫, ೧೮-೧೧.

೫. ಏಕತ್ವಪ್ರತ್ಯಯವುಳ್ಳವನಿಗೆ ತ್ರಿಕಾಲದಲ್ಲಿಯೂ ನಾನು ಕರ್ತೃವಲ್ಲ ಎಂದೇ ನಿಶ್ಚಯವಾಗಿರುತ್ತದೆ. ಸೂ. ಭಾ. ೪-೧-೧೩ (ಭಾ. ಭಾ. ೫೨೮).

# ಗೃಹಸ್ಥನೂ ಜ್ಞಾನಿಯಾದರೆ ಅವನಿಗೆ ಪಾರಿವ್ರಾಜ್ಯವು ಅರ್ಥಪ್ರಾಪ್ತ

(ಭಾಷ್ಯ)

೧೮೬. ಏತೇನ ಗೃಹಸ್ಥಸ್ಯ ಏಕತ್ವವಿಜ್ಞಾನೇ ಸತಿ ಪಾರಿವ್ರಾಜ್ಯಮ್ ಅರ್ಥಸಿದ್ಧಮ್ । ನನು ಅಗ್ನ್ಯುತ್ಸಾದನದೋಷಭಾಗ್ ಸ್ಯಾತ್ ಪರಿವ್ರಜನ್ । "ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ" (ತೈ ಸಂ. ೧-೫-೨) ಇತಿ ಶ್ರುತೇಃ । ನ । ದೈವೋತ್ಸಾದಿತತ್ವಾತ್ । ಉತ್ಸನ್ನ ಏವ ಹಿ ಸ ಏಕತ್ವ ದರ್ಶನೇ ಜಾತೇ "ಅಪಾಗಾದಗ್ನೇರಗ್ನಿತ್ವಮ್" (೬-೪-೧) ಇತಿ ಶ್ರುತೇಃ । ಅತೋ ನ ದೋಷಭಾಗ್ ಗೃಹಸ್ಥಃ ಪರಿವ್ರಜನ್ ಇತಿ ॥

(ಭಾಷ್ಯಾರ್ಥ)

ಇದರಿಂದ[1], ಗೃಹಸ್ಥನಿಗೆ ಏಕತ್ವವಿಜ್ಞಾನವುಂಟಾದರೆ ಪಾರಿವ್ರಾಜ್ಯವು ತಾನೆ ಸಿದ್ಧವಾಗುತ್ತದೆ[2].

(ಆಕ್ಷೇಪ) :- ಪರಿವ್ರಜನಮಾಡುವ (ಗೃಹಸ್ಥನು) ಅಗ್ನಿಯನ್ನು ನಾಶ ಮಾಡಿದ ದೋಷಕ್ಕೆ ಭಾಗಿಯಾಗುವದಿಲ್ಲವೆ ? "ಯಾವನು ಅಗ್ನಿಯನ್ನು ಬಿಟ್ಟು (ತೆರಳು)ವನೋ, ಅವನು ದೇವತೆಗಳ ವೀರರನ್ನು ಕೊಂದವನು" (ತೈ.ಸಂ. ೧-೫-೨) ಎಂದು ಶ್ರುತಿ(ಯಿದೆಯಲ್ಲ) !

(ಪರಿಹಾರ) :- ಹಾಗಲ್ಲ. ಏಕೆಂದರೆ ದೈವ(ವಶ)ದಿಂದ (ಅದು ತಾನೇ) ನಾಶವಾಗಿರುತ್ತದೆ. ಏಕತ್ವದರ್ಶನವು ಹುಟ್ಟಿದರೆ ಆ (ಅಗ್ನಿಯು ತಾನೇ) ನಾಶ ವಾಗಿರುವದಲ್ಲವೆ[3] ? "ಅಗ್ನಿಯ ಅಗ್ನಿತ್ವವು ಹೋಗಿಬಿಟ್ಟಿತು" (೬-೪-೧) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದ ಗೃಹಸ್ಥನು (ಜ್ಞಾನವಾದ ಬಳಿಕ) ಪರಿವ್ರಜನಮಾಡಿದರೆ ದೋಷಭಾಗಿಯಲ್ಲ.[4]

---

1. ಏಕತ್ವಜ್ಞಾನಿಗೆ ಭೇದಬುದ್ಧಿಯು ಇರುವದಿಲ್ಲವೆಂದಾದದ್ದರಿಂದ.

2 ಏಕೆಂದರೆ ಕರ್ಮಕ್ಕೆ ಭೇದಬುದ್ಧಿಯು ಅವಶ್ಯವಾಗಿರುತ್ತದೆ ಏಕತ್ವಬುದ್ಧಿಯಿರು ವವನಿಗೆ ಶಾಸ್ತ್ರವಿಧಿಯ ಅಪೇಕ್ಷೆಯಿಲ್ಲದೆಯೇ ಪಾರಿವ್ರಾಜ್ಯವು ಅರ್ಥಸಿದ್ಧವಾಯಿತು. ಬೃ. ಭಾ. ೪-೫-೧೫ (ಭಾ ಭಾ ೩೪೧), ಐ. ಭಾ ಭಾ. ೧೫.

3. ಅಗ್ನ್ಯುತ್ಸಾದನದೋಷಶ್ರುತಿಯು ಅಗ್ನಿಯು ಸತ್ಯವು, ಅದರಲ್ಲಿ ಹೋಮಮಾಡು ವದು ನನ್ನ ಕರ್ತವ್ಯವು ಎಂಬ ಭೇದಪ್ರತ್ಯಯವುಳ್ಳವನ ವಿಷಯವು ; ಏಕತ್ವಪ್ರತ್ಯಯವುಳ್ಳ ವನಿಗೆ ಎಲ್ಲವೂ ಬ್ರಹ್ಮವೇ ಆಗಿರುವದರಿಂದ ಆ ದೋಷವಿಲ್ಲ.

4. ಏಕೆಂದರೆ ಅವನಿಗೆ ದೋಷವೆಂಬುದೇ ಇಲ್ಲ, ಏಕತ್ವಪ್ರತ್ಯಯದಿಂದ ದೋಷ ಪ್ರತ್ಯಯವೂ ಬಾಧಿತವಾಗಿರುತ್ತದೆ.

## ಓಂಕಾರವು ಸರ್ವಸಾರ

(ಉಪನಿಷತ್ತು)

**ಪ್ರಜಾಪತಿರ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೀ ವಿದ್ಯಾ ಸಂಪ್ರಾಸ್ರವತ್ತಾಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾಸ್ರವನ್ತ ಭೂರ್ಭುವಃ ಸ್ವರಿತಿ ॥ ೨ ॥**

**ತಾನ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯ ಓಂಕಾರಃ ಸಂಪ್ರಾಸ್ರವತ್ತದ್ಯಥಾ ಶಙ್ಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇವಮೋಂಕಾರೇಣ ಸರ್ವಾ ವಾಕ್ಸಂತೃಣ್ಣೋಂಕಾರ ಏವೇದಗ್‍ಂ ಸರ್ವಮೋಂಕಾರ ಏವೇದಗ್‍ಂ ಸರ್ವಮ್ ॥ ೩ ॥**

೨. ಪ್ರಜಾಪತಿಯು ಲೋಕಗಳನ್ನು ಕುರಿತು ತಪಸ್ಸುಮಾಡಿದನು ; (ಹಾಗೆ) ತಪಸ್ಸುಮಾಡಿದ ಆ (ಲೋಕಗಳಿಂದ) ತ್ರಯೀ ವಿದ್ಯೆಯು ಹೊರಕ್ಕೆ ಬಂದಿತು. ಅದನ್ನು ಕುರಿತು ತಪಸ್ಸುಮಾಡಿದನು ; (ಹಾಗೆ) ತಪಸ್ಸುಮಾಡಿದ ಅದರಿಂದ ಭೂಃ, ಭುವಃ, ಸುವಃ- ಎಂಬೀ ಅಕ್ಷರಗಳು ಹೊರಕ್ಕೆ ಬಂದವು.

೩. ಅವನ್ನು ಕುರಿತು ತಪಸ್ಸುಮಾಡಿದನು ; (ಹಾಗೆ) ತಪಸ್ಸುಮಾಡಿದ ಅವುಗಳಿಂದ ಓಂಕಾರವು ಹೊರಕ್ಕೆ ಬಂದಿತು. ಹೇಗೆ ಶಂಕುವಿನಿಂದ ಪರ್ಣಗಳೆಲ್ಲ ಕೊರೆಯಲ್ಪಟ್ಟಿವೆಯೋ ಹಾಗೆಯೇ ಓಂಕಾರದಿಂದ ವಾಕ್ಕೆಲ್ಲವೂ ಕೊರೆಯಲ್ಪಟ್ಟಿದೆ. ಇದೆಲ್ಲವೂ ಓಂಕಾರವೇ, ಇದೆಲ್ಲವೂ ಓಂಕಾರವೇ.

## ವ್ಯಾಹೃತಿಗಳ ಅಭಿವ್ಯಕ್ತಿ

(ಭಾಷ್ಯ)

೧೮೭. ಯತ್ಸಂಸ್ಥೋಽಮೃತತ್ವಮೇತಿ ತನ್ನಿರೂಪಣಾರ್ಥಮ್ ಆಹ। ಪ್ರಜಾಪತಿಃ ವಿರಾಟ್, ಕಶ್ಯಪೋ ವಾ ಲೋಕಾನ್ ಉದ್ದಿಶ್ಯ ತೇಷು ಸಾರಜಿಘೃಕ್ಷಯಾ ಅಭ್ಯತಪತ್ ಅಭಿತಾಪಂ ಕೃತವಾನ್ । ಧ್ಯಾನಂ ತಪಃ ಕೃತವಾನ್ ಇತ್ಯರ್ಥಃ। ತೇಭ್ಯೋಽಭಿತಪ್ತೇಭ್ಯಃ ಸಾರಭೂತಾ ತ್ರಯೀ ವಿದ್ಯಾ ಸಂಪ್ರಾಸ್ರವತ್ ಪ್ರಜಾಪತೇರ್ಮನಸಿ ಪ್ರತ್ಯಭಾತ್ ಇತ್ಯರ್ಥಃ। ತಾಮ್ ಅಭ್ಯತಪತ್ ಪೂರ್ವವತ್। ತಸ್ಯಾ ಅಭಿತಪ್ತಾಯಾ ಏತಾನಿ ಅಕ್ಷರಾಣಿ ಸಂಪ್ರಾಸ್ರವನ್ತ ಭೂರ್ಭುವಃ ಸ್ವರಿತಿ ವ್ಯಾಹೃತಯಃ ॥

(ಭಾಷ್ಯಾರ್ಥ)

ಯಾವ (ಬ್ರಹ್ಮದಲ್ಲಿ) ನೆಲೆನಿಂತವನು ಅಮೃತನಾಗುವನೋ[1] ಅದನ್ನು ನಿರೂಪಣಮಾಡುವದಕ್ಕಾಗಿ (ಶ್ರುತಿ ಹೀಗೆಂದು) ಹೇಳುತ್ತದೆ.

ಪ್ರಜಾಪತಿಯು ಎಂದರೆ ವಿರಾಜನು ಅಥವಾ ಕಶ್ಯಪನು[2], ಲೋಕಗಳನ್ನು ಕುರಿತು, ಅವುಗಳಲ್ಲಿರುವ ಸಾರವನ್ನು ಗ್ರಹಿಸುವ ಇಚ್ಛೆಯಿಂದ ಅಭಿತಪಿಸಿದನು, ಅಭಿತಾಪವನ್ನು ಮಾಡಿದನು, ಧ್ಯಾನವೆಂಬ ತಪಸ್ಸನ್ನು ಮಾಡಿದನು ಎಂದರ್ಥ.[3] (ಹಾಗೆ) ತಪಸ್ಸುಮಾಡಲು ಅವುಗಳಿಂದ ಸಾರಭೂತವಾದ ತ್ರಯೀವಿದ್ಯೆಯು ಹೊರಕ್ಕೆ ಬಂದಿತು, ಪ್ರಜಾಪತಿಯ ಮನಸ್ಸಿನಲ್ಲಿ ಹೊಳೆಯಿತು ಎಂದರ್ಥ.[4] ಅದನ್ನು ಕುರಿತು ಅಭಿತಪಿಸಿದನು (ಎಂಬುದಕ್ಕೆ) ಮೊದಲಿನಂತೆ (ಅರ್ಥ). (ಹೀಗೆ) ತಪಸ್ಸುಮಾಡಲು ಆ (ವಿದ್ಯೆಯಿಂದ) ಈ ಅಕ್ಷರಗಳು, ಭೂಃ, ಭುವಃ ಸುವಃ ಎಂಬ ವ್ಯಾಹೃತಿಗಳು ಜಿನುಗಿಬಂದವು[5]

## ಓಂಕಾರದ ಅಭಿವ್ಯಕ್ತಿ

(ಭಾಷ್ಯ)

೧೮೮   ತಾನಿ ಅಕ್ಷರಾಣಿ ಅಭ್ಯತಪತ್। ತೇಭ್ಯಃ ಅಭಿತಪ್ತೇಭ್ಯ ಓಂಕಾರಃ ಸಂಪ್ರಾಸ್ರವತ್। ತದ್ ಬ್ರಹ್ಮ ಕೀದೃಶಮಿತಿ? ಆಹ। ತದ್ ಯಥಾ ಶಙ್ಕುನಾ ಪರ್ಣನಾಲೇನ ಸರ್ವಾಣಿ ಪರ್ಣಾನಿ ಪತ್ರಾವಯವಜಾತಾನಿ ಸಂತೃಣ್ಣಾನಿ ವಿದ್ಧಾನಿ। ವ್ಯಾಪ್ತಾನೀತ್ಯರ್ಥಃ। ಏವಮ್ ಓಂಕಾರೇಣ ಬ್ರಹ್ಮಣಾ ಪರಮಾತ್ಮನಃ ಪ್ರತೀಕಭೂತೇನ ಸರ್ವಾ ವಾಕ್ ಶಬ್ದಜಾತಂ ಸಂತೃಣ್ಣಾ। "ಅಕಾರೋ ವೈ ಸರ್ವಾ ವಾಕ್" (ಐ ಆ. ೨-೩-೭) ಇತ್ಯಾದಿಶ್ರುತೇಃ। ಪರಮಾತ್ಮವಿಕಾರಶ್ಚ

---

1. ಬ್ರಹ್ಮದ ಪ್ರತೀಕವಾದ ಓಂಕಾರವನ್ನೇ ಬ್ರಹ್ಮವೆಂದಿವೆ. ಓಂಕಾರದ ತತ್ತ್ವವಾದ ಬ್ರಹ್ಮದ ಜ್ಞಾನದಿಂದ ಸದ್ಯೋಮುಕ್ತಿಯಾದ ಅಮೃತತ್ತ್ವವಾಗುತ್ತದೆ ಎಂದು ಅದನ್ನು ಹೊಗಳಿ ಈ ಓಂಕಾರದ ಉಪಾಸನೆಯನ್ನು ವಿಧಿಸಲಾಗುತ್ತದೆ

2. ವಿರಾಟ್ಪುರುಷನು ಆದಿಪ್ರಜಾಪತಿ, ಕಶ್ಯಪಾದಿಗಳು ಅನಂತರದ ಪ್ರಜಾಪತಿಗಳು.

3. ಪ್ರಜಾಪತಿಗೆ ಹಿಂದಿನ ಜನ್ಮದ ವಾಸನೆಯಿಂದ ಜ್ಞಾನಕರ್ಮಗಳ ಫಲವಾಗಿ ಧ್ಯಾನ ತಪೋಮಾತ್ರದಿಂದಲೇ ತ್ರಯೀವಿದ್ಯೆಯು ಹೊಳೆಯಿತು; ಅವನು ಶರೀರಪ್ರಧಾನವಾದ ತಪಸ್ಸನ್ನು ಮಾಡಲಿಲ್ಲ.

4 ವೇದವು ಹುಟ್ಟಿತೆಂದು ಅರ್ಥವಲ್ಲ. ಹೀಗೆ ವೇದವ್ಯಾಹೃತಿಗಳೂ ಓಂಕಾರವೂ ತೋರಿಕೊಂಡಪ್ರಕಾರವನ್ನು ಐ. ಬ್ರಾ. ೨೫-೭-೮ರಲ್ಲಿಯೂ ಹೇಳಿದೆ ಅಲ್ಲಿ ಅಗ್ನಿವಾಯ್ವಾದಿತ್ಯರು ತೋರಿಕೊಂಡಬಳಿಕ ವೇದಗಳು ತೋರಿಕೊಂಡವೆಂದು ಹೇಳಿದೆ.

5. ಈ ವ್ಯಾಹೃತಿಗಳು ಮೂರು ವೇದಕ್ಕೂ ಸಾರವಾಗಿರುವವೆಂದು ಶತ. ಬ್ರಾ ೧೧-೫-೮-೩ ರಲ್ಲಿ ಹೇಳಿದೆ, ಅವುಗಳನ್ನು ಪ್ರಯೋಗಿಸಿದರೆ ಸರ್ವಪ್ರಾಯಶ್ಚಿತ್ತದಂತೆ ಎಂದು ಬ್ರಾಹ್ಮಣವಾದ

ನಾಮಧೇಯಮಾತ್ರಮ್ ಇತ್ಯತಃ ಓಂಕಾರ ಏವೇದಗ್ಂ ಸರ್ವಮಿತಿ। ದ್ವಿರಭ್ಯಾಸಃ ಆದರಾರ್ಥಃ। ಲೋಕಾದಿನಿಷ್ಪಾದನಕಥನಮ್ ಓಂಕಾರಸ್ತುತ್ಯರ್ಥಮಿತಿ ॥

(ಭಾಷ್ಯಾರ್ಥ)

ಆ ಅಕ್ಷರಗಳನ್ನು ಕುರಿತು ತಪಸ್ಸುಮಾಡಿದನು. ಹಾಗೆ ತಪಿಸಿದ ಅವುಗಳಿಂದ ಓಂಕಾರವು ಹೊರಕ್ಕೆ ಬಂದಿತು, (ಅದೇ ಬ್ರಹ್ಮವು)[1].

ಆ ಬ್ರಹ್ಮವು ಎಂಥದ್ದು ? ಎಂದರೆ (ಶ್ರುತಿ)ಹೇಳುತ್ತದೆ ಅದು ಹೇಗೆಂದರೆ (ಹೇಗೆ) ಶಂಕುವಿನಿಂದ, ಎಲೆಯು ನಾಳದಿಂದ, ವರ್ಣಗಳೆಲ್ಲ, ಎಲೆಯ ಅವಯವ (ಸಮೂಹಗಳೆಲ್ಲ) ಕೊರೆಯಲ್ಪಟ್ಟಿರುವವೋ, ಹೊಲಿದುಕೊಂಡಿರುವವೋ, ವ್ಯಾಪ್ತವಾಗಿರುವವೋ ಎಂದರ್ಥ ಹಾಗೆಯೇ ಪರಮಾತ್ಮನಿಗೆ ಪ್ರತೀಕವಾಗಿರುವ ಓಂಕಾರವೆಂಬ ಬ್ರಹ್ಮದಿಂದ ವಾಕ್ಕೆಲ್ಲವೂ ಶಬ್ದಜಾತವೆಲ್ಲವೂ ಕೊರೆಯಲ್ಪಟ್ಟಿರುವದು "ಅಕಾರವೇ ಎಲ್ಲಾ ವಾಕ್ಕು" (ಐ ಆ ೨-೩-೬೯) ಎಂದು ಮುಂತಾಗಿರುವ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ)[2]. ಪರಮಾತ್ಮನ ವಿಕಾರವು ನಾಮಧೇಯಮಾತ್ರವಾಗಿರುವದರಿಂದಲೂ ಇವೆಲ್ಲವೂ ಓಂಕಾರವೇ[3] (ಓಂಕಾರ ಏವೇದಂ ಸರ್ವಮ್ ಎಂದು) ಎರಡು ಸಲ ಹೇಳಿರುವದು. ಆದರಕ್ಕಾಗಿ[4] ಲೋಕಾದಿಗಳ(ಮೂಲಕ) ಹೊರತೋರಿಕೊಂಡಿತೆಂದು ಹೇಳಿರುವದು ಓಂಕಾರದ ಸ್ತುತಿಗಾಗಿ[5].

---

1. 'ತದ್ ಬ್ರಹ್ಮ' ಎಂಬುದನ್ನು ಮಧ್ಯಮಣಿನ್ಯಾಯದಿಂದ ಇಲ್ಲಿಗೂ ಅನ್ವಯಿಸಬಹುದು.

2. ಅಕಾರವೇ ಸರ್ವವಾಕ್ಕು ; ಅದು ಸ್ಪರ್ಶ, ಊಷ್ಮ,— ಇವುಗಳೊಡನೆ ಸೇರಿ ನಾನಾರೂಪವಾಗಿದೆ ಎಂದು ಶ್ರುತಿವಾಕ್ಯದ ಅರ್ಥ. ಓಂಕಾರದ ಅವಯವವಾದ ಅಕಾರವೇ ಎಲ್ಲಾ ಶಬ್ದರೂಪಗಳಾಗಿರುವದರಿಂದ ಓಂಕಾರವು ಸರ್ವಶಬ್ದರೂಪವಾಗಿದೆ ಎಂದು ಹೇಳಬಹುದು ಎಂದು ಭಾವ.

3 ಪರಮಾತ್ಮನ ಕಾರ್ಯವಾದದ್ದು ಯಾವದೂ ಪರಮಾತ್ಮನಿಗಿಂತ ವ್ಯತಿರಿಕ್ತವಾಗಿಲ್ಲದ್ದರಿಂದ ಬರಿಯ ನಾಮಧೇಯವೇ ಆದ್ದರಿಂದ ಓಂಕಾರವು ಪರಮಾತ್ಮನ ಹೆಸರಾದ್ದರಿಂದ ಅದು ಎಲ್ಲಕ್ಕೂ ಹೆಸರಾದಂತಾಯಿತು. ಅಭಿಧೇಯನಾದ ಪರಮಾತ್ಮನು ಅಭಿಧಾನವಾದ ಓಂಕಾರಾಧೀನವಾಗಿರುವದರಿಂದ ಓಂಕಾರವೇ ಎಲ್ಲವೂ. ಮಾಂ. ಭಾ. ಭಾ. ೪.

4. ಓಂಕಾರೋಪಾಸನೆಯಲ್ಲಿ ಆದರವನ್ನುಂಟುಮಾಡುವದಕ್ಕೆ ಎಂದರ್ಥ.

5 ಲೋಕಾದ್ಯುತ್ಪತ್ತಿಯೇನೂ ಪ್ರಕೃತವಲ್ಲ ; ಓಂಕಾರವು ಸರ್ವಸಾರವಾದ್ದರಿಂದ ಅದನ್ನು ಉಪಾಸನೆ ಮಾಡಬೇಕು ಎಂದು ಇಲ್ಲಿ ಓಂಕಾರವನ್ನು ಹೊಗಳಿದೆ.

# ಎರಡನೆಯ ಅಧ್ಯಾಯ-
# ಇಪ್ಪತ್ತನಾಲ್ಕನೆಯ ಖಂಡ

(ಸಾಮಹೋಮಮಂತ್ರೋತ್ಥಾನಗಳು)

## ಸಾಮಾದ್ಯುಪಾಯಗಳನ್ನು ಅರಿತುಕೊಂಡು ಯಜ್ಞವನ್ನು ಮಾಡಬೇಕು

(ಉಪನಿಷತ್ತು)

**ಬ್ರಹ್ಮವಾದಿನೋ ವದನ್ತಿ ಯದ್ವಸೂನಾಂ ಪ್ರಾತಃಸವನಗ್ಂ ರುದ್ರಾಣಾಂ ಮಾಧ್ಯನ್ದಿನಗ್ಂ ಸವನಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ ತೃತೀಯಸವನಮ್ ॥ ೧ ॥**

**ಕ್ವ ತರ್ಹಿ ಯಜಮಾನಸ್ಯ ಲೋಕ ಇತಿ ಸ ಯಸ್ತಂ ನ ವಿದ್ಯಾತ್ ಕಥಂ ಕುರ್ಯಾದಥ ವಿದ್ವಾನ್ ಕುರ್ಯಾತ್ ॥ ೨ ॥**

೧. ಬ್ರಹ್ಮವಾದಿಗಳು ಹೇಳುತ್ತಾರೇನೆಂದರೆ : ಪ್ರಾತಃಸವನವು ವಸುಗಳದ್ದು ; ಮಾಧ್ಯಂದಿನಸವನವು ರುದ್ರರದ್ದು ; ಮೂರನೆಯ ಸವನವು ಆದಿತ್ಯರದ್ದು, ಮತ್ತು ವಿಶ್ವೇದೇವರುಗಳದ್ದು.

೨. ಹಾಗಾದರೆ ಯಜಮಾನನ ಲೋಕವು ಎಲ್ಲಿ ? ಆ (ಲೋಕ) ವನ್ನು ಯಾವನು ಅರಿಯನೋ ಅವನು (ಯಜ್ಞವನ್ನು) ಹೇಗೆ ಮಾಡಿಯಾನು ? ಆದ್ದರಿಂದ ಅರಿತುಕೊಂಡು ಮಾಡಬೇಕು.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೪೯. ಸಾಮೋಪಾಸನಪ್ರಸಙ್ಗೇನ ಕರ್ಮಗುಣಭೂತತ್ವಾತ್ ನಿವರ್ತ್ಯ ಓಂಕಾರಂ ಪರಮಾತ್ಮಪ್ರತೀಕತ್ವಾತ್ ಅಮೃತತ್ವಹೇತುತ್ವೇನ ಮಹೀಕೃತ್ಯ ಪ್ರಕೃತಸ್ಯೈವ ಯಜ್ಞಸ್ಯ ಅಙ್ಗಭೂತಾನಿ ಸಾಮಹೋಮಮನ್ತ್ರೋತ್ಥಾನಾನಿ ಉಪದಿದಿಕ್ಷನ್ ಆಹ—

17

(ಭಾಷ್ಯಾರ್ಥ)

ಸಾಮೋಪಾಸನೆಯ ಪ್ರಸಂಗದಿಂದ, ಓಂಕಾರವನ್ನು ಕರ್ಮಗುಣಭೂತವಾಗಿರುವದೆಂಬುವದರಿಂದ ಬಿಡಿಸಿ[1] ಪರಮಾತ್ಮನಿಗೆ ಪ್ರತೀಕವಾಗಿರುವದರಿಂದ ಅಮೃತತ್ವಹೇತುವೆಂದು ದೊಡ್ಡದು ಮಾಡಿ (ಹೊಗಳಿ), ಪ್ರಕೃತವಾಗಿರುವ ಯಜ್ಞಕ್ಕೇ ಅಂಗವಾಗಿರುವ ಸಾಮಹೋಮ, ಮಂತ್ರೋತ್ಥಾನ- (ಇವು)ಗಳನ್ನು ಉಪದೇಶಿಸಬೇಕೆಂದು (ವೇದವು ಹೀಗೆಂದು) ಹೇಳುತ್ತಿದೆ:

## ಸವನಗಳು ವಸ್ವಾದಿಗಳಿಗೆ ಸೇರಿದವುಗಳು

(ಭಾಷ್ಯ)

೧೯೦. ಬ್ರಹ್ಮವಾದಿನೋ ವದನ್ತಿ। ಯತ್ ಪ್ರಾತಃಸವನಂ ಪ್ರಸಿದ್ಧಮ್, ತದ್ ವಸೂನಾಮ್। ತೈಶ್ಚ ಪ್ರಾತಃಸವನಸಂಬದ್ಧೋಽಯಂ ಲೋಕೋ ವಶೀಕೃತಃ ಪ್ರಾತಃಸವನೇಶಾನೈಃ। ತಥಾ ರುದ್ರೈಃ ಮಾಧ್ಯನ್ದಿನಸವನೇಶಾನೈಃ ಅನ್ತರಿಕ್ಷಲೋಕಃ। ಆದಿತ್ಯೈಶ್ಚ ವಿಶ್ವೇದೇವೈಶ್ಚ ತೃತೀಯಸವನೇಶಾನೈಃ ತೃತೀಯೋ ಲೋಕೋ ವಶೀಕೃತಃ । ಇತಿ ಯಜಮಾನಸ್ಯ ಲೋಕೋಽನ್ಯಃ ಪರಿಶಿಷ್ಟೋ ನ ವಿದ್ಯತೇ। ಅತಃ ಕ್ವ ತರ್ಹಿ ಯಜಮಾನಸ್ಯ ಲೋಕಃ, ಯದರ್ಥಂ ಯಜತೇ? ನ ಕ್ವಚಿಲ್ಲೋಕೋಽಸ್ತಿ ಇತ್ಯಭಿಪ್ರಾಯಃ । "ಲೋಕಾಯ ವೈ ಯಜತೇ ಯೋ ಯಜತೇ" ( ? ) ಇತಿ ಶ್ರುತೇಃ। ಲೋಕಾಭಾವೇ ಚ ನ ಯೋ ಯಜಮಾನಃ ತಂ ಲೋಕಸ್ವೀಕರಣೋಪಾಯಂ ಸಾಮಹೋಮಮನ್ತ್ರೋತ್ಥಾನಲಕ್ಷಣಂ ನ ವಿದ್ಯಾತ್ ನ ವಿಜಾನೀಯಾತ್ ಸೋಽಜ್ಞಃ ಕಥಂ ಕುರ್ಯಾತ್ ಯಜ್ಞಮ್? ನ ಕಥಂಚನ ತಸ್ಯ ಕರ್ತೃತ್ವಮ್ ಉಪಪದ್ಯತ ಇತ್ಯರ್ಥಃ॥

(ಭಾಷ್ಯಾರ್ಥ)

ಬ್ರಹ್ಮವಾದಿಗಳು ಹೇಳುತ್ತಾರೇನೆಂದರೆ, ಪ್ರಸಿದ್ಧವಾದ ಪ್ರಾತಃಸವನವಿದೆಯಷ್ಟೆ, ಅದು ವಸುಗಳದ್ದು, ಅವರು (ಆ) ಸವನಕ್ಕೆ ಒಡೆಯರಾದ್ದರಿಂದ ಪ್ರಾತಃಸವನಕ್ಕೆ ಸಂಬಂಧಪಟ್ಟಿರುವ ಈ ಲೋಕವನ್ನು ವಶೀಕರಿಸಿಕೊಂಡಿರುತ್ತಾರೆ. ಹೀಗೆಯೇ ಮಾಧ್ಯಂದಿನಸವನಕ್ಕೆ ಒಡೆಯರಾದ ರುದ್ರರು ಅಂತರಿಕ್ಷಲೋಕವನ್ನು (ವಶೀಕರಿಸಿಕೊಂಡಿರುತ್ತಾರೆ) ಆದಿತ್ಯರೂ ವಿಶ್ವೇದೇವತೆಗಳೂ ಮೂರನೆಯ ಸವನಕ್ಕೆ ಒಡೆಯರಾದ್ದರಿಂದ (ಅವರು) ಮೂರನೆಯ ಲೋಕವನ್ನು ವಶೀಕರಿಸಿಕೊಂಡಿರುತ್ತಾರೆ. ಹೀಗಿರುವದರಿಂದ ಯಜಮಾನನಿಗೆ ಮತ್ತೊಂದು ಲೋಕವು ಉಳಿದಿರುವದಿಲ್ಲ. ಆದ್ದರಿಂದ ಯಜಮಾನನ ಲೋಕವು ಎಲ್ಲಿ? ಅದಕ್ಕಿಲ್ಲವೆ,

---

1. ಹಿಂದೆ ಹೇಳಿದ ಸಾಮೋಪಾಸನೆಗಳು ಕರ್ಮಾಂಗವಾಗಿರುವಂತೆ ಓಂಕಾರವೂ ಕರ್ಮಾಂಗವೆಂದು ಬಂದೊದಗಿತಷ್ಟೆ; ಅದನ್ನು ತಪ್ಪಿಸಿ- ಎಂದರ್ಥ.

(ಅವನು) ಯಾಗಮಾಡುತ್ತಾನೆ? (ಅವನ) ಲೋಕವು ಎಲ್ಲಿಯೂ ಇರುವದೇ ಇಲ್ಲವಲ್ಲ! ಎಂದು ಅಭಿಪ್ರಾಯ. "ಯಾವನು ಯಾಗಮಾಡುತ್ತಾನೋ ಅವನು ಲೋಕಕ್ಕಾಗಿಯೇ ಯಾಗಮಾಡುತ್ತಾನೆ" ( ? ) ಎಂಬ ಶ್ರುತಿಯಿಂದ(ಲೋಕ ವಿರಬೇಕು)[1] ಲೋಕವು ಇಲ್ಲದಿರುವಲ್ಲಿ, ಯಾವ ಯಜಮಾನನು ಆ ಲೋಕವನ್ನು ಸ್ವೀಕರಿಸುವ, ಸಾಮಹೋಮಮಂತ್ರೋತ್ಥಾನರೂಪವಾದ ಉಪಾಯವನ್ನು ಅರಿಯನೋ ಆ ಅಜ್ಞನು, ಯಜ್ಞವನ್ನು ಹೇಗೆ ಮಾಡಿಯಾನು? ಅವನಿಗೆ ಹೇಗೂ ಕರ್ತೃತ್ವವು ಹೊಂದುಗಡೆಯಾಗುವದಿಲ್ಲ ಎಂದರ್ಥ

## ಕರ್ಮಮಾತ್ರವನ್ನು ತಿಳಿದವನಿಗೂ ಕರ್ತೃತ್ವವುಂಟು

(ಭಾಷ್ಯ)

೧೯೧ ಸಾಮಾದಿವಿಜ್ಞಾನಸ್ತುತಿಪರತ್ವಾತ್ ನ ಅವಿದುಷಃ ಕರ್ತೃತ್ವಂ ಕರ್ಮಮಾತ್ರವಿದಃ ಪ್ರತಿಷಿಧ್ಯತೇ । ಸ್ತುತಯೇ ಚ ಸಾಮಾದಿವಿಜ್ಞಾನಸ್ಯ, ಅವಿದ್ವತ್ಕರ್ತೃತ್ವಪ್ರತಿಷೇಧಾಯ ಚ ಇತಿ ಹಿ ಭಿದ್ಯೇತ ವಾಕ್ಯಮ್। ಆದ್ಯೇ ಚ ಔಷಸ್ತ್ಯೇ ಕಾಣ್ಡೇ ಅವಿದುಷೋಽಪಿ ಕರ್ಮಾಸ್ತೀತಿ ಹೇತುಮ್ ಅವೋಚಾಮ। ಅಥ ಏತದ್ ವಕ್ಷ್ಯಮಾಣಂ ಸಾಮಾದ್ಯುಪಾಯಂ ವಿದ್ವಾನ್ ಕುರ್ಯಾತ್ ॥

(ಭಾಷ್ಯಾರ್ಥ)

ಈ (ಶ್ರುತಿಯು) ಸಾಮವೇ ಮುಂತಾದವುಗಳ ವಿಜ್ಞಾನವನ್ನು ಹೊಗಳವದರಲ್ಲಿ ತಾತ್ಪರ್ಯವುಳ್ಳದ್ದಾದ್ದರಿಂದ ಕರ್ಮವೊಂದನ್ನೇ ಅರಿತಿರುವ ಅಜ್ಞನಿಗೆ ಕರ್ತೃತ್ವವನ್ನು ಇಲ್ಲವೆನ್ನುವದಿಲ್ಲ. ಏಕೆಂದರೆ (ಆ ಪಕ್ಷದಲ್ಲಿ) ಸಾಮಾದಿವಿಜ್ಞಾನವನ್ನು ಹೊಗಳುವದಕ್ಕೂ (ಇದು ಬಂದಿದೆ), ಅಜ್ಞನಿಗೆ ಕರ್ತೃತ್ವವನ್ನು ಪ್ರತಿಷೇಧಿಸುವದಕ್ಕೂ ಬಂದಿದೆ ಎಂದಾಗಿ ವಾಕ್ಯವು ಭಿನ್ನವಾಗುವದು[2] ಮೊದಲನೆಯ ಔಷಸ್ತ್ಯಕಾಂಡದಲ್ಲಿ[3] ಅಜ್ಞನಿಗೂ ಕರ್ಮ(ದಲ್ಲಿ ಅಧಿಕಾರ)ವುಂಟೆಂಬುದಕ್ಕೆ ಹೇತುವನ್ನು ಹೇಳಿರುತ್ತೇವೆ.

---

1. 'ಶ್ರುತಿಃ' ಎಂಬ ಪಾಠಾಂತರಕ್ಕೆ ಶ್ರುತಿಯಿದೆ ಎಂದಿಷ್ಟೇ ಅರ್ಥ. ಆಗ "ಆದ್ದರಿಂದ ಲೋಕಕ್ಕಾಗಿಯೇ ಯಜಮಾನನು ಯಜ್ಞವನ್ನು ಮಾಡುತ್ತಾನೆ" ಎಂದು ವಾಕ್ಯಶೇಷವನ್ನು ಸೇರಿಸಿಕೊಳ್ಳಬೇಕು.

2. ಆದರೆ ಏಕವಾಕ್ಯತೆಯು ಹೊಂದುತ್ತಿರುವಲ್ಲಿ ವಾಕ್ಯಭೇದವನ್ನು ಮಾಡುವದು ಯುಕ್ತವಲ್ಲವೆಂಬ ಮೀಮಾಂಸಕರ ನ್ಯಾಯವಿದೆ. ಆದ್ದರಿಂದ ಅಜ್ಞನಿಗೆ ಕರ್ತೃತ್ವವಿಲ್ಲವೆಂದೂ ಈ ವಾಕ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬಾರದು.

3. ಔಷಸ್ತ್ಯೇ ಕಾಣ್ಡೇ -ಎಂಬುದು ಔಷಸ್ತ್ಯೇ ಖಣ್ಡೇ ಎಂದಿರಬೇಕೆಂದು ತೋರುತ್ತದೆ. ಒಂದನೆಯ ಪ್ರಪಾಠಕದಲ್ಲಿ ಹತ್ತನೆಯ ಖಂಡದ ೯ನೆಯ ಕಂಡಿಕೆಯ ಭಾಷ್ಯ (ಭಾ. ಭಾ. ೯೬)ರಲ್ಲಿ ಉಪಾಸನಾಜ್ಞಾನವಿಲ್ಲದ ಅಜ್ಞರಿಗೂ ಕರ್ಮದಲ್ಲಿ ಅಧಿಕಾರವಿದೆ ಎಂದು ಹೇಳಿದೆ.

ಆದ್ದರಿಂದ ಈ ಮುಂದೆ ಹೇಳುವ ಸಾಮವೇ ಮುಂತಾದ ಉಪಾಯವನ್ನು ಅರಿತುಕೊಂಡು (ಯಜ್ಞವನ್ನು) ಮಾಡಬೇಕು.

## ಪ್ರಾತಃಸವನಲೋಕವನ್ನು ಪಡೆದುಕೊಳ್ಳುವ ಉಪಾಯ

(ಉಪನಿಷತ್ತು)

**ಪುರಾ ಪ್ರಾತರನುವಾಕಸ್ಯೋಪಾಕರಣಾಜ್ಜಘನೇನ ಗಾರ್ಹಪತ್ಯ ಸ್ಯೋದಙ್ಮುಖ ಉಪವಿಶ್ಯ ಸ ವಾಸವಗ್ಂ ಸಾಮಾಭಿಗಾಯತಿ॥೩॥**

**ಲೋ೩ಕದ್ವಾರಮಪಾವಾ೩ರ್ಣೂ೩೩ ಪಶ್ಯೇಮ ತ್ವಾ ವಯಗ್ಂ ರಾ೩೩೩೩೩ ಹುಂ೩ಮ್ ಆ೩೩ಜ್ಯಾ೩ಯೋ೩ ಆ೩೨೧೧೧ ಇತಿ ॥೪॥**

೩. ಪ್ರಾತರನುವಾಕದ ಉಪಾಕರಣಕ್ಕಿಂತ ಮುಂಚೆ ಗಾರ್ಹಪತ್ಯದ ಹಿಂಗಡೆಯಲ್ಲಿ ಉತ್ತರಕ್ಕೆ ಮುಖವಾಗಿ ಕುಳಿತುಕೊಂಡು ಅವನು ವಾಸವಸಾಮವನ್ನು (ಹೀಗೆ) ಅಭಿಗಾನಮಾಡಬೇಕು.

೪. 'ಲೋಕದ್ವಾರವನ್ನು ತೆರೆ! ನಿನ್ನನ್ನು ನಾವು ನೋಡುವಂತಾಗಲಿ! (ಅದು) ರಾಜ್ಯಕ್ಕೆ (ಆಗಲಿ)!'

## ಪೃಥಿವೀಲೋಕಪ್ರಾಪ್ತಿಗೆ ಸಾಮ

(ಭಾಷ್ಯ)

೧೯-೨. ಕಿಂ ತದ್ ವೇದ್ಯಮಿತಿ? ಆಹ। ಪುರಾ ಪೂರ್ವಂ ಪ್ರಾತರನುವಾಕಸ್ಯ ಶಸ್ತ್ರಸ್ಯ ಪ್ರಾರಮ್ಭಾತ್ ಜಘನೇನ ಗಾರ್ಹಪತ್ಯಸ್ಯ ಪಶ್ಚಾತ್ ಉದಙ್ಮುಖಃ ಸನ್ ಉಪವಿಶ್ಯ ಸ ವಾಸವಂ ವಸುದೈವತ್ಯಂ ಸಾಮ ಅಭಿಗಾಯತಿ। ಲೋಕದ್ವಾರಮ್ ಅಸ್ಯ ಪೃಥಿವೀಲೋಕಸ್ಯ ಪ್ರಾಪ್ತಯೇ ದ್ವಾರಮ್ ಅಪಾವೃಣು ಹೇ ಅಗ್ನೇ ತೇನ ದ್ವಾರೇಣ ಪಶ್ಯೇಮ ತ್ವಾ ತ್ವಾಂ ರಾಜ್ಯಾಯ ಇತಿ ॥

(ಭಾಷ್ಯಾರ್ಥ)

ಇಲ್ಲಿ ಅರಿತುಕೊಳ್ಳಬೇಕಾದದ್ದೆಂಬುದು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ಪ್ರಾತರನುವಾಕವಾದ ಶಸ್ತ್ರವು[1] ಮೊದಲಾಗುವ (ಪುರಾ=ಪೂರ್ವಂ)

---

1. ಅಧ್ವರ್ಯುವು 'ಅನುಬ್ರೂಹಿ' ಎಂದು ಕೇಳಿಕೊಂಡಮೇಲೆ ಹೋತೃವು ಹೇಳತಕ್ಕ ಶಸ್ತ್ರವಿಶೇಷವು 'ಪುರೋನುವಾಕ್ಯ'ವೆನಿಸುವದು. ಪ್ರಾತಃಸವನದಲ್ಲಿ ಅವನು ಹೇಳುವದಕ್ಕೆ ಆರಂಭಿಸುವ ಮುಂಚೆ ಈ ಸಾಮವನ್ನು ಹೇಳಬೇಕು.

ಮುಂಚೆಯೇ. ಗಾರ್ಹಪತ್ಯದ[1] ಹಿಂಗಡೆ ಹಿಂದುಗಡೆಯಲ್ಲಿ ಉತ್ತರಮುಖವಾಗಿ ಕುಳಿತುಕೊಂಡು ಅವನು ವಾಸವಸಾಮವನ್ನು, ವಸುಗಳೆಂಬ ದೇವತೆಗಳುಳ್ಳ (ಸಾಮವನ್ನು) ಅಭಿಗಾನಮಾಡಬೇಕು.

"ಲೋಕದ್ವಾರವನ್ನು ಎಂದರೆ ಈ ಪೃಥಿವೀಲೋಕದ ಪ್ರಾಪ್ತಿಗಾಗಿ (ದ್ವಾರವನ್ನು) ತೆರೆ. ಎಲೈ ಅಗ್ನಿಯೆ, (ತೆರೆ). ಆ ದ್ವಾರದಿಂದ (ತ್ವಾ=ತ್ವಾಮ್) ನಿನ್ನನ್ನು ನಾವು ಕಾಣುವಂತಾಗಲಿ! (ಅದು) ರಾಜ್ಯಕ್ಕೆ ಆಗಲಿ!"[2]

(ಉಪನಿಷತ್ತು)

**ಅಥ ಜುಹೋತಿ ನಮೋಽಗ್ನಯೇ ಪೃಥಿವೀಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿನ್ದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ॥ ೫ ॥**

**ಅತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಪಜಹಿ ಪರಿಘಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ವಸವಃ ಪ್ರಾತಃಸವನಗ್ಂ ಸಂಪ್ರಯಚ್ಛನ್ತಿ ॥ ೬ ॥**

೫-೬. ಇನ್ನು (ಹೀಗೆಂಬರ್ಥದ ಮಂತ್ರವನ್ನು ಹೇಳುತ್ತಾ) ಹೋಮಮಾಡಬೇಕು. 'ಪೃಥಿವೀಕ್ಷಿತನಾದ ಅಗ್ನಿಗೆ ನಮಸ್ಕಾರ! ಲೋಕಕ್ಷಿತನಿಗೆ (ನಮಸ್ಕಾರ)! ಯಜಮಾನನಾದ ನನ್ನನ್ನು ಲೋಕವನ್ನು ಪಡೆಯಿಸು. ಇದೇ ಯಜಮಾನನ ಲೋಕವು, ಇಲ್ಲಿ ಯಾಗ ಮಾಡುತ್ತಿರುವವನಾಗಿ ಆಯುಸ್ಸಾದ ಬಳಿಕ ಹೋಗಲಿರುವೆನು, ಸ್ವಾಹಾ!' 'ಪರಿಘವನ್ನು ತೆಗೆ' ಎಂದು ಎದ್ದೇಳಬೇಕು. ಅವನಿಗೆ ವಸುಗಳು ಪ್ರಾತಃಸವನವನ್ನು ಕೊಡುವರು.

## ಪೃಥಿವೀಲೋಕಪ್ರಾಪ್ತಿಗೆ ಹೋಮೋತ್ಥಾನಗಳು

(ಭಾಷ್ಯ)

೧೯೫. ಅಥ ಅನನ್ತರಂ ಜುಹೋತಿ ಅನೇನ ಮನ್ತ್ರೇಣ । "ನಮೋಽಗ್ನಯೇ ಪ್ರಹ್ವೀಭೂತಾಃ ತುಭ್ಯಂ ವಯಂ ಪೃಥಿವೀಕ್ಷಿತೇ ಪೃಥಿವೀನಿವಾಸಾಯ ಲೋಕಕ್ಷಿತೇ ಲೋಕನಿವಾಸಾಯ[3] । ಪೃಥಿವೀಲೋಕನಿವಾಸಾಯ ಇತ್ಯರ್ಥಃ

1. ಗಾರ್ಹಪತ್ಯಾಗ್ನಿಯೇ ಮುಖ್ಯವಾದದ್ದು; ಇದರಿಂದಲೇ ದಕ್ಷಿಣಾಗ್ನಿ, ಆಹವನೀಯಾಗ್ನಿ- ಎಂಬಿವುಗಳನ್ನು ಎತ್ತಿ ಆಯಾ ಸ್ಥಾನಗಳಲ್ಲಿ ಇಟ್ಟುಕೊಂಡಿರುತ್ತಾರೆ.

2. ಪೃಥಿವೀಲೋಕದ ಭೋಗವು ನಮಗೆ ಲಭಿಸಲಿ! -ಎಂದರ್ಥ.

3. ಇದು ಲೋಕಕ್ಷಿತೇ ಎಂಬುದರರ್ಥ; ಮುಂದಿರುವದು ವಾಕ್ಯಾರ್ಥ. ಅದ್ದರಿಂದ ಈ ಪಾಠವನ್ನು ಇಟ್ಟುಕೊಂಡಿದೆ.

ಲೋಕಂ ಮೇ ಮಹ್ಯಂ ಯಜಮಾನಾಯ ವಿನ್ದ ಲಭಸ್ವ। ಏಷ ವೈ ಮಮ ಯಜ ಮಾನಸ್ಯ ಲೋಕಃ। ಏತಾ ಗನ್ತಾ ಅಸ್ಮಿ ಅತ್ರ ಅಸ್ಮಿನ್ ಲೋಕೇ ಯಜ ಮಾನಃ ಅಹಂ ಆಯುಷಃ ಪರಸ್ತಾತ್ ಊರ್ಧ್ವಮ್। ಮೃತಃ ಸನ್ ಇತ್ಯರ್ಥಃ। ಸ್ವಾಹಾ! ಇತಿ ಜುಹೋತಿ। ಅಪಜಹಿ ಅಪನಯ ಪರಿಘಂ ಲೋಕದ್ವಾರಾರ್ಗಲಮ್ – ಇತಿ ಏತಂ[1] ಮನ್ತ್ರಮ್ ಉಕ್ತ್ವಾ ಉತ್ತಿಷ್ಠತಿ। ಏವಮ್ ಏತೈಃ ವಸುಭ್ಯಃ ಪ್ರಾತಃಸವನಸಂಬದ್ಧೋ ಲೋಕೋ ನಿಷ್ಕ್ರೀತಃ ಸ್ಯಾತ್। ತತಸ್ತೇ ಪ್ರಾತಃಸವನಂ ವಸವೋ ಯಜಮಾನಾಯ ಸಂಪ್ರಯಚ್ಛನ್ತಿ॥

(ಭಾಷ್ಯಾರ್ಥ)

ಇನ್ನು ಆ ಬಳಿಕ ಈ (ಅರ್ಥದ) ಮಂತ್ರದಿಂದ ಹೋಮಮಾಡಬೇಕು: ಅಗ್ನಿಗೆ, ಪೃಥಿವೀಕ್ಷಿತನಾದ ಪೃಥಿವಿಯಲ್ಲಿ ವಾಸಮಾಡಿಕೊಂಡಿರುವ, ಲೋಕ ಕ್ಷಿತನಾದ, ಲೋಕದಲ್ಲಿ ವಾಸಮಾಡಿಕೊಂಡಿರುವ- ಪೃಥಿವೀಲೋಕದಲ್ಲಿ ವಾಸ ಮಾಡಿಕೊಂಡಿರುವ ಎಂದು (ಒಟ್ಟು) ಅರ್ಥ. ಎಲೆ ಅಗ್ನಿಯೆ, ನಿನಗೆ ನಮಸ್ಕಾರ, ನಾವು ತಲೆಬಾಗುವೆವು ಎಂದರ್ಥ. ಯಜಮಾನನಾದ ನನಗೆ ಲೋಕವನ್ನು (ವಿನ್ದ=ಲಭಸ್ವ) ಪಡೆಯಿಸು! ಇದೇ ಯಜಮಾನನಾದ ನನ್ನ ಲೋಕವು ಇಲ್ಲಿ ಈ ಲೋಕದಲ್ಲಿ ಯಾಗಮಾಡುತ್ತಿರುವ ನಾನು ಆಯುಸ್ಸಾದ ಬಳಿಕ, ಆಮೇಲೆ, ಸತ್ತವನಾಗಿ ಎಂದರ್ಥ. (ಪೃಥಿವೀಲೋಕಕ್ಕೆ ಏತಾಸ್ಮಿ=ಗನ್ತಾಸ್ಮಿ) ಹೋಗು ವವನಿರುವೆನು! 'ಸ್ವಾಹಾ!' ಎಂದು ಹೋಮಮಾಡಬೇಕು.[2] 'ಪರಿಘವನ್ನು ಲೋಕದ್ವಾರದ ಅಗುಳಿಯನ್ನು ತೆಗೆ' ಎಂಬೀ (ಅರ್ಥದ) ಮಂತ್ರವನ್ನು ಹೇಳಿ ಏಳಬೇಕು.[3]

ಹೀಗೆ ಇವುಗಳಿಂದ[4] ಪ್ರಾತಃಸವನಸಂಬದ್ಧಲೋಕವು ವಸುಗಳಿಂದ ನಿಷ್ಕ್ರೀತವಾದದ್ದಾಗುವದು.[5] ಆಗ ಆ ವಸುಗಳು ಪ್ರಾತಃಸವನ(ಫಲ)ವನ್ನು ಯಜಮಾನನಿಗೆ ಕೊಡುವರು.

---

1. 'ಏವಂ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. ಸ್ವಾಹಾ' -ಎಂಬುದು ಹೋಮಮಂತ್ರದ ಕೊನೆಯನ್ನು ಸೂಚಿಸುವದು.

3 ಇದೇ ಉತ್ಥಾನಪ್ರಕಾರವು.

4. ಹೀಗೆ ಸಾಮಗಾನ, ಮಂತ್ರಪೂರ್ವಕಹೋಮ, ಮಂತ್ರಪೂರ್ವಕೋತ್ಥಾನ- ಇವುಗಳನ್ನು ಮಾಡುವದರಿಂದ ಎಂದರ್ಥ.

5. ಇವುಗಳಿಂದ ಕೊಂಡುಕೊಂಡು ತನ್ನದಾಗಿ ಮಾಡಿಕೊಂಡಂತೆ ಆಗುವದು.

# ಮಾಧ್ಯಂದಿನಸವನಪ್ರಾಪ್ತಿಗೆ ಉಪಾಯ

(ಉಪನಿಷತ್ತು)

**ಪುರಾ ಮಾಧ್ಯನ್ದಿನಸ್ಯ ಸವನಸ್ಯೋಪಾಕರಣಾಜ್ಜಘನೇನಾಗ್ನೀಧ್ರೀಯಸ್ಯೋದಙ್ಮುಖ ಉಪವಿಶ್ಯ ಸ ರೌದ್ರಗ್ಂ ಸಾಮಾಭಿಗಾಯತಿ ॥ ೭ ॥**

**ಲೋ೩ಕದ್ವಾರಮಪಾವಾ೩ರ್ಣೂ೩೩ ಪಶ್ಯೇಮ ತ್ವಾ ವಯಂ ವೈರಾ೩೩೩೩ ಹು೩ಮ್ ಆ೩೩ಜ್ಯಾ೩ಯೋ೩ ಆ೩೨೧೧೧ ಇತಿ ॥**

೭. ಮಾಧ್ಯಂದಿನಸವನದ[1] ಉಪಾಕರಣದ ಮುಂಚೆ ಆಗ್ನೀಧ್ರೀಯದ ಹಿಂಗಡೆಯಲ್ಲಿ ಉತ್ತರಮುಖವಾಗಿ ಕುಳಿತುಕೊಂಡು ಅವನು ರೌದ್ರಸಾಮವನ್ನು (ಹೀಗೆ) ಅಭಿಗಾನಮಾಡಬೇಕು.

೮. 'ಲೋಕದ್ವಾರವನ್ನು ತೆರೆ! ನಿನ್ನನ್ನು ನಾವು ನೋಡುವಂತಾಗಲಿ! (ಅದು) ವೈರಾಜ್ಯಕ್ಕೆ (ಆಗಲಿ)!'

## ಅಂತರಿಕ್ಷಲೋಕಪ್ರಾಪ್ತಿಗೆ ಹೋಮ

(ಭಾಷ್ಯ)

೯೪. ತಥಾ ಆಗ್ನೀಧ್ರೀಯಸ್ಯ ದಕ್ಷಿಣಾಗ್ನೇಃ ಜಘನೇನ ಉದಙ್ಮುಖ ಉಪವಿಶ್ಯ ಸ ರೌದ್ರಂ ಸಾಮ ಅಭಿಗಾಯತಿ ಯಜಮಾನಃ ರುದ್ರದೈವತ್ಯಂ ವೈರಾಜ್ಯಾಯ ॥

(ಭಾಷ್ಯಾರ್ಥ)

ಹೀಗೆಯೇ ಆಗ್ನೀಧ್ರೀಯದ ಎಂದರೆ ದಕ್ಷಿಣಾಗ್ನಿಯ ಹಿಂಗಡೆಯಲ್ಲಿ ಉತ್ತರಮುಖವಾಗಿ ಕುಳಿತುಕೊಂಡು ಅವನು ರೌದ್ರಸಾಮವನ್ನು, ಎಂದರೆ ರುದ್ರರನ್ನು ದೇವತೆಗಳಾಗಿ ಉಳ್ಳ (ಸಾಮ)ವನ್ನು **ವೈರಾಜ್ಯ**ಕ್ಕಾಗಿ ಅಭಿಗಾನಮಾಡಬೇಕು.

(ಉಪನಿಷತ್ತು)

**ಅಥ ಜುಹೋತಿ ನಮೋ ವಾಯವೇಽನ್ತರಿಕ್ಷಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿನ್ದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ॥ ೯ ॥**

**ಅತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಪಜಹಿ ಪರಿಘಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ರುದ್ರಾ ಮಾಧ್ಯನ್ದಿನಗ್ಂ ಸವನಗ್ಂ ಸಂಪ್ರಯಚ್ಛನ್ತಿ ॥ ೧೦ ॥**

---

1. ಇದು ಎರಡನೆಯ ಸವನವು. ಪರಿಶಿಷ್ಟವನ್ನು ನೋಡಿ. ಇಲ್ಲಿಯೂ ಪುರೋನು ವಾಕ್ಯದ ಪ್ರಾರಂಭದ ಮುಂಚೆ ಎಂದೇ ಅರ್ಥ. ಪ್ರತಿಯೊಂದು ಸವನಕ್ಕೂ ಶಸ್ತ್ರವಿರುತ್ತದೆ. ಅದು ಪ್ರಾರಂಭವಾಗುವ ಮುಂಚೆಯೇ ಯಜಮಾನನು ಗಾನಮಾಡಬೇಕು.

೯-೧೦. ಇನ್ನು (ಹೀಗೆಂಬರ್ಥದ ಮಂತ್ರವನ್ನು ಪಠಿಸುತ್ತಾ) ಹೋಮಮಾಡಬೇಕು: 'ಅಂತರಿಕ್ಷಕ್ಷಿತನಾದ ವಾಯುವಿಗೆ ನಮಸ್ಕಾರ, ಲೋಕಕ್ಷಿತನಿಗೆ (ನಮಸ್ಕಾರ) ! ಯಜಮಾನನಾದ ನನ್ನನ್ನು ಲೋಕವನ್ನು ಪಡೆಯಿಸು. ಇದೇ ಯಜಮಾನನ ಲೋಕವು. ಇಲ್ಲಿ ಯಾಗಮಾಡುತ್ತಿರುವವನಾಗಿ ಆಯುಸ್ಸಾದ ಬಳಿಕ ಹೋಗಲಿರುವೆನು. ಸ್ವಾಹಾ!' 'ಪರಿಘವನ್ನು ತೆಗೆ' ಎಂದು ಏಳಬೇಕು. ಅವನಿಗೆ ರುದ್ರರು ಮಾಧ್ಯಂದಿನಸವನವನ್ನು ಕೊಡುವರು.

### ಅಂತರಿಕ್ಷಲೋಕಕ್ಕೆ ಹೋಮೋತ್ಥಾನಗಳು

(ಭಾಷ್ಯ)

೧೯೫ ಅನ್ತರಿಕ್ಷಕ್ಷಿತ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಅಂತರಿಕ್ಷಕ್ಷಿತನಾದ ಎಂದು ಮುಂತಾಗಿರುವದು (ಹಿಂದಿನ ವಾಕ್ಯಕ್ಕೆ) ಸಮಾನವಾಗಿದೆ.

## ಮೂರನೆಯ ಸವನದ ಪ್ರಾಪ್ತಿಗೆ ಉಪಾಯ

(ಉಪನಿಷತ್ತು)

**ಪುರಾ ತೃತೀಯಸವನಸ್ಯೋಪಾಕರಣಾಜ್ಜಘನೇನಾಹವನೀಯಸ್ಯೋದಙ್ಮುಖ ಉಪವಿಶ್ಯ ಸ ಆದಿತ್ಯಗ್ಂ ಸ ವೈಶ್ವದೇವಗ್ಂ ಸಾಮಾಭಿಗಾಯತಿ ॥ ೧೧ ॥**

**ಲೋ೩ಕದ್ವಾರಮಪಾವಾ೩ರ್ಣೂ೩೩ ಪಶ್ಯೇಮ ತ್ವಾ ವಯಗ್ಂ ಸ್ವಾರಾ೩೩೩೩ ಹು೩ಮ್ ಆ೩೩ಜ್ಯಾ೩ಯೋ೩ ಆ೩೨೧೧೧ ಇತಿ ॥**

**ಆದಿತ್ಯಮಥ ವೈಶ್ವದೇವಂ ಲೋ೩ಕದ್ವಾರಮಪಾವಾ೩ರ್ಣೂ೩೩ ಪಶ್ಯೇಮ ತ್ವಾ ವಯಗ್ಂ ಸಾಮ್ರಾ೩೩೩೩ ಹು೩ಮ್ ಆ೩೩ಜ್ಯಾ೩ಯೋ೩ ಆ೩೨೧೧೧ ಇತಿ[1] ॥ ೧೩ ॥**

---

1. ತೈ॥ ಪಾಠದಲ್ಲಿ ಸಾಮಕ್ಕೆ ಹಾಕಿರುವ ಈ ಸ್ವರಸಂಖ್ಯೆಗಳು ಬೇರೆಯಾಗಿವೆ. ಇವುಗಳ ಅಧ್ಯಯನಕ್ರಮವು ನಮಗೆ ತಿಳಿಯದ್ದರಿಂದ ಇದರ ಕಾರಣವನ್ನು ನಿರ್ಧರಿಸುವದು ಆಗುವಂತಿಲ್ಲ. ನಾವು ಆ॥ ಪಾಠವನ್ನೇ ಅಂಗೀಕರಿಸಿರುತ್ತೇವೆ.

೧೧-೧೩. ಮೂರನೆಯ ಸವನದ ಉಪಾಕರಣದ ಮುಂಚೆ ಆಹವನೀಯದ ಹಿಂದೆ ಉತ್ತರಮುಖವಾಗಿ ಕುಳಿತು ಅವನು ಆದಿತ್ಯ (ದೇವತಾಕ)ವಾದ (ಸಾಮುವನ್ನು) ಅವನು ವೈಶ್ವದೇವ(ತಾಕವಾದ) ಸಾಮುವನ್ನು (ಹೀಗೆ) ಅಭಿಗಾನಮಾಡಬೇಕು. 'ಲೋಕದ್ವಾರವನ್ನು ತೆರೆ! ನಿನ್ನನ್ನು ನಾವು ನೋಡುವಂತಾಗಲಿ! (ಅದು) ಸ್ವಾರಾಜ್ಯ ಕ್ಕಾಗಲಿ!' ಎಂದು ಆದಿತ್ಯ(ಸಾಮುವನ್ನು ಗಾನಮಾಡಬೇಕು). ಇನ್ನು ವೈಶ್ವದೇವನನ್ನು 'ಲೋಕದ್ವಾರವನ್ನು ತೆರೆ! ನಿನ್ನನ್ನು ನೋಡುವಂತಾ ಗಲಿ! (ಅದು) ಸಾಮ್ರಾಜ್ಯಕ್ಕಾಗಲಿ' ಎಂದು (ಗಾನಮಾಡಬೇಕು).

## ದ್ಯುಲೋಕಪ್ರಾಪ್ತಿಗೆ ಸಾಮುಗಳು

(ಭಾಷ್ಯ)

೧೯೬ ತಥಾ ಆಹವನೀಯಸ್ಯ । ಉದಙ್ಮುಖ ಉಪವಿಶ್ಯ ಸ ಆದಿತ್ಯ ದೈವತ್ಯಮ್ ಆದಿತ್ಯಮ್, ವೈಶ್ವದೇವಂ ಚ ಸಾಮ ಅಭಿಗಾಯತಿ ಕ್ರಮೇಣ ಸ್ವಾರಾಜ್ಯಾಯ ಸಾಮ್ರಾಜ್ಯಾಯ (ಚ ?) ॥

(ಭಾಷ್ಯಾರ್ಥ)

ಹೀಗೆಯೇ ಆಹವನೀಯದ (ಹಿಂದುಗಡೆ) ಉತ್ತರಮುಖವಾಗಿ ಕುಳಿತು ಅವನು ಆದಿತ್ಯ(ಸಾಮುವನ್ನು) ಎಂದರೆ ಆದಿತ್ಯದೇವತಾಕವಾದ (ಸಾಮ)ವನ್ನು ಮತ್ತು ವಿಶ್ವೇದೇವತೆಗಳು ದೇವತೆಗಳಾಗಿರುವ (ಸಾಮ)ವನ್ನು ಅಭಿಗಾನಮಾಡ ಬೇಕು. (ಅವು) ಕ್ರಮವಾಗಿ ಸ್ವಾರಾಜ್ಯಕ್ಕೂ ಸಾಮ್ರಾಜ್ಯಕ್ಕೂ[1] (ಕಾರಣ ವಾಗುವವು).

(ಉಪನಿಷತ್ತು)

**ಅಥ ಜುಹೋತಿ ನಮ ಆದಿತ್ಯೇಭ್ಯಶ್ಚ ವಿಶ್ವೇಭ್ಯಶ್ಚ ದೇವೇಭ್ಯೋ ದಿವಿಕ್ಷಿದ್ಭ್ಯೋ ಲೋಕಕ್ಷಿದ್ಭ್ಯೋ ಲೋಕಂ ಮೋ ಯಜ ಮಾನಾಯ ವಿನ್ದತ ॥ ೧೪ ॥**

**ಏಷ ವೈ ಯಜಮಾನಸ್ಯ ಲೋಕ ಏತಾಸ್ಮ್ಯತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಪಹತ ಪರಿಘಮಿತ್ಯುಕ್ತ್ವೋ ತ್ತಿಷ್ಠತಿ ॥ ೧೫ ॥**

1. ದ್ಯುಲೋಕದಲ್ಲಿ ಸ್ವಾರಾಜ್ಯವೂ ಅದಕ್ಕಿಂತಲೂ ಹೆಚ್ಚಿನ ಸಾಮ್ರಾಜ್ಯವೂ ಈ ಸಾಮುಗಳಿಗೆ ಫಲವು.

೧೪-೧೫. ಇನ್ನು (ಹೀಗೆಂಬರ್ಥದ ಮಂತ್ರವನ್ನು ಪಠಿಸುತ್ತಾ) ಹೋಮಮಾಡಬೇಕು. 'ಆದಿತ್ಯರುಗಳಿಗೂ ವಿಶ್ವೇದೇವತೆಗಳಿಗೂ ನಮಸ್ಕಾರ; ದಿವಿಕ್ಷಿತರಿಗೆ ನಮಸ್ಕಾರ! ಲೋಕಕ್ಷಿತರಿಗೆ ನಮಸ್ಕಾರ! ಯಜಮಾನನಾದ ನನ್ನನ್ನು ಲೋಕವನ್ನು ಪಡೆಯಿಸಿರಿ! ಇದೇ ಯಜಮಾನನ ಲೋಕವು. ಇಲ್ಲಿ ಯಾಗಮಾಡುತ್ತಿರುವವನಾಗಿ ಆಯುಸ್ಸು ಮುಗಿದ ಬಳಿಕ (ಅಲ್ಲಿಗೆ) ಹೋಗುವೆನು! ಸ್ವಾಹಾ!' 'ಪರಿಘವನ್ನು ತೆಗೆಯಿರಿ!' ಎಂದು ಹೇಳಬೇಕು.

## ದ್ಯುಲೋಕಪ್ರಾಪ್ತಿಗೆ ಹೋಮೋತ್ಥಾನಗಳು

(ಭಾಷ್ಯ)

೧೯೭. ದಿವಿಕ್ಷಿದ್ಭ್ಯಃ ಇತ್ಯೇವಮಾದಿ ಸಮಾನಮನ್ಯತ್ । ವಿನ್ದತ, ಅಪಹತ ಇತಿ ಬಹುವಚನಮಾತ್ರಂ ವಿಶೇಷಃ ॥

(ಭಾಷ್ಯಾರ್ಥ)

ದಿವಿಕ್ಷಿತರಿಗೆ ಎಂಬಿದೇ ಮುಂತಾದ ಮಿಕ್ಕ (ಗ್ರಂಥವು ಹಿಂದಿನದಕ್ಕೆ) ಸಮಾನವು. ಪಡೆಯಿಸಿರಿ, ತೆಗೆಯಿರಿ- ಎಂದು ಬಹುವಚನ(ವಿರುವದು) ಮಾತ್ರ (ಇಲ್ಲಿ) ವಿಶೇಷ.

## ಈ ಸಾಮಾದಿಗಳು ಯಜಮಾನನ ಕರ್ಮ

(ಭಾಷ್ಯ)

೧೯೮. ಯಾಜಮಾನಂ ತ್ವೇತತ್ । ಏತಾಸ್ಮಿ, ಅತ್ರ ಯಜಮಾನಃ ಇತ್ಯಾದಿ ಲಿಙ್ಗಾತ್ ॥

(ಭಾಷ್ಯಾರ್ಥ)

ಈ (ಕರ್ಮ)ವಾದರೋ ಯಜಮಾನನದು.[1] ಏಕೆಂದರೆ 'ಹೋಗುವೆನು,' 'ಇಲ್ಲಿ ಯಾಗಮಾಡುತ್ತಿರುವವನಾಗಿ' ಮುಂತಾದ ಲಿಂಗವಿದೆ.

## ಸಾಮಹೋಮೋತ್ಥಾನಕರ್ಮದ ಉಪಸಂಹಾರ

(ಉಪನಿಷತ್ತು)

**ತಸ್ಮಾ ಆದಿತ್ಯಾಶ್ಚ ವಿಶ್ವೇ ಚ ದೇವಾಸ್ತೃತೀಯಸವನಗ್ಂ ಸಂಪ್ರಯಚ್ಛನ್ತ್ಯೇಷ ಹ ವೈ ಯಜ್ಞಸ್ಯ ಮಾತ್ರಾಂ ವೇದ ಯ ಏವಂ ವೇದ ಯ ಏವಂ ವೇದ ॥ ೧೬ ॥**

---

1 ಉದ್ಗಾತೃವಿನದಲ್ಲ.

೧೬. ಅವನಿಗೆ ಆದಿತ್ಯರೂ ವಿಶ್ವೇದೇವತೆಗಳೂ ಮೂರನೆಯ ಸವನವನ್ನು ಕೊಡುವರು. ಯಾವನು ಹೀಗೆಂದು ಅರಿತುಕೊಂಡಿರುವನೋ ಅವನೇ ಯಜ್ಞದ ಅಳತೆಯನ್ನು ಬಲ್ಲವನು, ಯಾವನು ಹೀಗೆಂದು ಅರಿತುಕೊಂಡಿರುವನೋ (ಅವನೇ ಬಲ್ಲವನು).

(ಭಾಷ್ಯ)

೧೯. ಏಷ ಹ ವೈ ಯಜಮಾನಃ ಏವಂವಿತ್[1] ಯಥೋಕ್ತಸ್ಯ ಸಾಮಾದೇರ್ವಿದ್ವಾನ್ ಯಜ್ಞಸ್ಯ ಮಾತ್ರಾಂ ಯಜ್ಞಯಾಥಾತ್ಮ್ಯಂ ವೇದ ಯಥೋಕ್ತಮ್ । ಯ ಏವಂ ವೇದ ಯ ಏವಂ ವೇದ ಇತಿ ದ್ವಿರುಕ್ತಿರಧ್ಯಾಯಪರಿಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಈ ಯಜಮಾನನೇ, ಮೇಲೆ ಹೇಳಿರುವ ಸಾಮಾದಿಗಳನ್ನು ಅರಿತುಕೊಂಡಿರುವಾತನೇ, ಯಜ್ಞದ ಅಳತೆಯನ್ನು, ಮೇಲೆ ಹೇಳಿದ ಯಜ್ಞದ ಯಾಥಾತ್ಮ್ಯವನ್ನು ಬಲ್ಲವನಾಗಿರುತ್ತಾನೆ. ಯಾವನು ಹೀಗೆಂದು ಅರಿತುಕೊಂಡಿರುವನೋ ಯಾವನು ಹೀಗೆಂದು ಅರಿತುಕೊಂಡಿರುವನೋ ಎಂಬ ದ್ವಿರುಕ್ತಿಯು ಅಧ್ಯಾಯವು ಮುಗಿಯಿತೆಂದು ತಿಳಿಸುವದಕ್ಕೆ (ಬಂದಿದೆ)

---

1. 'ಏವಂವಿತ್' ಎಂಬುದು ಮೂಲಭಾಷ್ಯದಲ್ಲಿತ್ತೋ ಇಲ್ಲವೋ, 'ಯ ಏವಂ ವೇದ' ಎಂದೇ ಇತ್ತೋ ತಿಳಿಯುವ ಹಾಗಿಲ್ಲ.

# ಎರಡನೆಯ ಅಧ್ಯಾಯದ ಸಾರ

ಈ ಅಧ್ಯಾಯದ ಗ್ರಂಥವು ಸುಸ್ಪಷ್ಟವಾಗಿರುವದರಿಂದ ಇದಕ್ಕೆ ಸಾರವನ್ನು ಬಹಳ ಸಂಕ್ಷಿಪ್ತವಾಗಿ ಬರೆದಿದೆ.

## ಒಂದನೆಯ ಖಂಡ

೧-೪. ಮುಂದೆ ಹೇಳುವ ಸಮಸ್ತಸಾಮಭಕ್ತಿಗಳ ವಿಷಯಕವಾದ ಸಾಮಗಳಲ್ಲಿ ಸಾಧುವೃಷ್ಟಿಯನ್ನು ಮಾಡಬೇಕು, ಆಯಾ ಸಂದರ್ಭದಲ್ಲಿ ವಿಧಿಸಿರುವ ದೃಷ್ಟಿಯನ್ನು ಮಾಡಬೇಕು.

## ಎರಡನೆಯ ಖಂಡ

೧-೩. ಪೃಥಿವಿ, ಅಗ್ನಿ, ಅಂತರಿಕ್ಷ, ಆದಿತ್ಯ, ದ್ಯುಲೋಕ- ಈ ದೃಷ್ಟಿಯಿಂದಲೂ ದ್ಯುಲೋಕ, ಆದಿತ್ಯ, ಅಂತರಿಕ್ಷ, ಅಗ್ನಿ, ಪೃಥಿವಿ- ಈ ದೃಷ್ಟಿಯಿಂದಲೂ ಸಾಮದ ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ- ಎಂಬ ಭಕ್ತಿಗಳನ್ನು ಉಪಾಸನೆಮಾಡಬೇಕು. ಉಪಾಸಕರಿಗೆ ಲೋಕಗಳು ದೊರಕುವವು.

ಖಂ. ೩ ಕಂ. ೧-೨. ಮುಂಗಾಳಿ, ಮೇಘ, ಮಳೆ, ಮಿಂಚು, ಗುಡುಗು- ಈ ದೃಷ್ಟಿಗಳಿಂದ ಹಿಂಕಾರಾದಿಗಳನ್ನು ಉಪಾಸನೆಮಾಡಿದರೆ ಇಚ್ಛೆಯಂತೆ ಮಳೆಯಾಗುವದು.

ಖಂ. ೪ ಕಂ. ೧-೨. ಮೋಡಗಳು ಒಟ್ಟಾಗುವದು, ಮಳೆ, ಪೂರ್ವಕ್ಕೆ ಹರಿಯುವ ನದಿ, ಪಶ್ಚಿಮಕ್ಕೆ ಹರಿಯುವ ನದಿ, ಸಮುದ್ರ- ಇವುಗಳ ದೃಷ್ಟಿಯಿಂದ ಉಪಾಸನೆಮಾಡಿದರೆ ನೀರಿನಲ್ಲಿ ಸಾವಿಲ್ಲ, ಹೆಚ್ಚಾಗಿ ನೀರಿನ ಲಾಭ.

ಖಂ. ೫ ಕಂ. ೧-೨. ವಸಂತ, ಗ್ರೀಷ್ಮ, ವರ್ಷಾಕಾಲ, ಶರತ್ಕಾಲ, ಹೇಮಂತ- ಇವುಗಳೆಂದು ಉಪಾಸನೆಮಾಡಿದರೆ ಋತುಗಳು ಭೋಗ್ಯಗಳಾಗುವವು.

ಖಂ. ೬ ಕಂ. ೧-೨. ಆಡು, ಕುರಿ, ಗೋವು, ಕುದುರೆ, ಮನುಷ್ಯ- ಈ ದೃಷ್ಟಿಗೆ ಪಶುಫಲ.

ಖಂ. ೭ ಕಂ. ೧-೨. ಪ್ರಾಣ, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು- ಈ ದೃಷ್ಟಿಗೆ ಉತ್ತರೋತ್ತರಾಭಿವೃದ್ಧಿ.

ಇನ್ನು ಮುಂದೆ ಹೇಳಿರುವವು ಸಪ್ತವಿಧಸಾಮೋಪಾಸನೆಗಳು.

ಖಂ. ೮ ಕಂ ೧-೩. ವಾಕ್ಕಿನಲ್ಲಿರುವ ಹುಂಕಾರವು ಹಿಂಕಾರವು, ಪ್ರ ಎಂಬುದು ಪ್ರಸ್ತಾವ, ಆ ಎಂಬುದು ಆದಿ (ಓಂಕಾರ), ಉತ್ ಎಂಬುದು ಉದ್ಗೀಥ, ಪ್ರತಿ ಎಂಬುದು ಪ್ರತಿಹಾರ, ಉಪ ಎಂಬುದು ಉಪದ್ರವ, ನಿ ಎಂಬುದು ನಿಧನ- ಎಂದು ಸಾಮದ ಸಪ್ತಭಕ್ತಿಗಳನ್ನುಪಾಸನೆಮಾಡಿದರೆ ವಾಕ್ಕಿನಿಂದಾಗುವ ಪೂರ್ಣಫಲ. ಅನ್ನವಂತನೂ ಅನ್ನಾದನೂ ಆಗುವನು.

## ಒಂಭತ್ತನೆಯ ಖಂಡ

೧-೮. ಸೂರ್ಯನ ಉದಯಕ್ಕಿಂತ ಮುನ್ನಿನ ರೂಪವು ಹಿಂಕಾರ, ಅದನ್ನು ಪಶುಗಳು ಉಪಜೀವಿಸಿಕೊಂಡಿರುವವು ಹುಟ್ಟಿದಾಗಿನ ರೂಪವು ಪ್ರಸ್ತಾವ, ಅವನ್ನು ಮನುಷ್ಯರು ಉಪಜೀವಿಸಿಕೊಂಡಿರುವರು. ಸಂಗವಕಾಲದ ರೂಪವು ಆದಿ, ಅದನ್ನು ಹಕ್ಕಿಗಳು ಉಪಜೀವಿಸಿಕೊಂಡಿರುವವು. ನಡುಹಗಲಿನ ರೂಪವು ಉದ್ಗೀಥವು, ಅದನ್ನು ದೇವತೆಗಳು ಉಪಜೀವಿಸಿರುವರು ಅಪರಾಹ್ಣಕ್ಕೆ ಮುನ್ನಿನ ರೂಪವು ಪ್ರತಿಹಾರವು, ಅದನ್ನು ಗರ್ಭಗಳು ಉಪಜೀವಿಸಿಕೊಂಡಿರುವವು ಅಪರಾಹ್ಣವಾದಮೇಲೆ ಸಂಜೆಯ ಮುನ್ನಿನ ರೂಪವು ಉಪದ್ರವವು; ಅದನ್ನು ಆರಣ್ಯಪಶುಗಳು ಉಪಜೀವಿಸಿಕೊಂಡಿರುವವು. ಸಂಜೆಯು ನಿಧನವು, ಅದನ್ನು ಪಿತೃಗಳು ಉಪಜೀವಿಸಿಕೊಂಡಿರುವರು. ಯಾವನು ಹೀಗೆ ಸಪ್ತವಿಧಾದಿತ್ಯದೃಷ್ಟಿಯಿಂದ ಸಾಮಭಕ್ತಿಗಳನ್ನು ಉಪಾಸನೆಮಾಡುವನೋ ಅವನಿಗೆ ಆದಿತ್ಯಪ್ರಾಪ್ತಿಯು ಫಲವು.

## ಹತ್ತನೆಯ ಖಂಡ

೧-೬. ಇಲ್ಲಿ ಸಪ್ತವಿಧಭಕ್ತಿಗಳ ಅಕ್ಷರಗಳನ್ನು ಮೂರುಮೂರಾಗಿ ವಿಂಗಡಿಸಿ ಉಪದ್ರವ ಎಂಬುದರಲ್ಲಿ ಮೂರನ್ನು ತೆಗೆದುಕೊಂಡು ಉಳಿಯುವದೂ ಅಕ್ಷರವೇ ಆದ್ದರಿಂದ ಅದೂ ಮೂರೇ ಆಯಿತು- ಎಲ್ಲವೂ ಸಮವಾಯಿತು, ಎಂದು ಭಾವಿಸಬೇಕು. ಇವುಗಳ ಅಕ್ಷರಗಳು ಇಪ್ಪತ್ತೆರಡಾಗುವವು. ಆದಿತ್ಯನು ಇಲ್ಲಿಂದ ಎಣಿಸಿದರೆ ಇಪ್ಪತ್ತೊಂದನೆಯವನಾಗುತ್ತಾನೆ, ಆದ್ದರಿಂದ ಇಪ್ಪತ್ತೆರಡಕ್ಷರಗಳ ಉಪಾಸನೆಯಿಂದ ಅತಿಮೃತ್ಯುವಾದ ಆದಿತ್ಯನಿಂದಾಚೆಯ ಲೋಕವನ್ನು ಜಯಿಸಿಕೊಳ್ಳುತ್ತಾನೆ.

### ಇಲ್ಲಿಂದ ಮುಂದಕ್ಕೆ ಗಾಯತ್ರಾದಿಸಾಮಭಕ್ತಿಗಳ ಉಪಾಸನೆ

ಖಂ. ೧೧ ಕಂ. ೧-೨. ಮನಸ್ಸು, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಪ್ರಾಣ- ಇವುಗಳ ದೃಷ್ಟಿಯಿಂದ ಗಾಯತ್ರಸಾಮದ ಭಕ್ತಿಗಳನ್ನು ಉಪಾಸನೆಮಾಡಿದರೆ ಪ್ರಾಣಗಳು ಪೂರ್ಣವಾಗಿ ಸರ್ವಾಯುಸ್ಸು ಫಲ.

ಖಂ. ೧೨ ಕಂ. ೧-೨. ಮಂಥನ, ಧೂಮ, ಜ್ವಾಲೆ, ಅಂಗಾರ, ಉಪಶಾಂತಿ, ಸಂಶಾಂತಿಗಳು- ಇವುಗಳ ದೃಷ್ಟಿಯಿಂದ ರಥಂತರಸಾಮವನ್ನು ಉಪಾಸಿಸಿದರೆ ಬ್ರಹ್ಮವರ್ಚಸ್ಸು, ಅನ್ನಾದತ್ವ, ಸರ್ವಾಯುಸ್ಸು.

ಖಂ. ೧೩ ಕಂ ೧-೨ ಉಪಮಂತ್ರಣಾದಿಗಳ ದೃಷ್ಟಿಯಿಂದ ವಾಮದೇವ್ಯಸಾಮವನ್ನು ಉಪಾಸನೆಮಾಡಿದರೆ ಅಮೋಘರೇತಸ್ತ್ವ.

### ಈ ಅಧ್ಯಾಯದಲ್ಲಿ ಮುಖ್ಯವಾಗಿ ಸಾಮೋಪಾಸನೆಗಳನ್ನೂ ಪ್ರಣವೋಪಾಸನೆಯನ್ನೂ ಹೇಳಿದೆ.

ಖಂ. ೧೪ ಕಂ. ೧-೨. ಉದಯಿಸುತ್ತಿರುವ ಸೂರ್ಯ ಮುಂತಾದ ದೃಷ್ಟಿಯಿಂದ ಬೃಹತ್ಸಾಮವನ್ನು ಉಪಾಸನೆಮಾಡಿದರೆ ತೇಜಸ್ವಿಯೂ ಅನ್ನಾದನೂ ಆಗುವನು, ಸರ್ವಾಯುಸ್ಸು, ಪ್ರಜೆ, ಕೀರ್ತಿ.

ಖಂ. ೧೫ ಕಂ. ೧-೨. ಅಭ್ರಾದಿಗಳ ದೃಷ್ಟಿಯಿಂದ ವೈರೂಪಸಾಮವನ್ನು ಉಪಾಸನೆ ಮಾಡಿದರೆ ಬಹುವಿಧಪಶುಪ್ರಾಪ್ತಿ, ಸರ್ವಾಯುಸ್ಸು, ಪ್ರಜೆ, ಕೀರ್ತಿ.

ಖಂ. ೧೬ ಕಂ. ೧-೨. ವಸಂತಾದಿಗಳ ದೃಷ್ಟಿಯಿಂದ ವೈರಾಜಸಾಮವನ್ನು ಉಪಾಸನೆ ಮಾಡಿದರೆ ಪ್ರಜಾದಿಗಳು ಫಲ.

ಖಂ. ೧೭ ಕಂ. ೧-೨. ಪೃಥಿವ್ಯಾದಿಗಳ ದೃಷ್ಟಿಯಿಂದ ಶಕ್ವರೀಸಾಮವನ್ನು ಉಪಾಸನೆ ಮಾಡಿದರೆ ಲೋಕ, ಆಯುಸ್ಸು, ಪ್ರಜಾದಿಗಳು.

ಖಂ. ೧೮ ಕಂ. ೧-೨. ಅಜಾದಿಗಳ ದೃಷ್ಟಿಯಿಂದ ರೇವತೀಸಾಮವನ್ನು ಉಪಾಸನೆ ಮಾಡಿದರೆ ಪಶ್ವಾದಿಗಳು.

ಖಂ. ೧೯ ಕಂ. ೧-೨. ಲೋಮಾದಿಗಳ ದೃಷ್ಟಿಯಿಂದ ಯಜ್ಞಾಯಜ್ಞೀಯಸಾಮವನ್ನು ಉಪಾಸನೆಮಾಡಿದರೆ ಅಂಗವು ವೈಕಲ್ಯವಿಲ್ಲದೆ ಇರುವದು.

ಖಂ. ೨೦ ಕಂ. ೧-೨. ಅಗ್ನ್ಯಾದಿಗಳ ದೃಷ್ಟಿಯಿಂದ ರಾಜನಸಾಮವನ್ನು ಉಪಾಸನೆ ಮಾಡಿದರೆ ದೇವತೆಗಳ ಸಾಲೋಕ್ಯಸಾರ್ಷ್ಟಿತ್ವವೂ ಆಯುರಾದಿಗಳೂ.

ಖಂ. ೨೧ ಕಂ. ೧-೪. ತ್ರಯೀವಿದ್ಯಾದಿಗಳ ದೃಷ್ಟಿಯಿಂದ ಸಾಮಸಮುದಾಯವನ್ನು ಉಪಾಸನೆಮಾಡಿದರೆ ಸರ್ವಾಪ್ತಿ.

ಮೇಲೆ ಹೇಳಿರುವವು ಭಕ್ತ್ಯುಪಾಸನೆಗಳು ಮಾತ್ರ. ಗಾಯತ್ರಾದಿಸಾಮಗಳು ಪ್ರಾಣಾದಿಗಳಲ್ಲಿ ಪ್ರೋತವೆಂದು ಶ್ರುತಿಯಲ್ಲಿ ಹೇಳಿರುವದರಿಂದ ಆಯಾ ಒಟ್ಟು ಸಾಮವನ್ನು ಆಯಾ ಪ್ರಾಣಾದಿಗಳ ದೃಷ್ಟಿಯಿಂದಲೂ ಉಪಾಸನೆಮಾಡತಕ್ಕದ್ದು.

## ಇಪ್ಪತ್ತೆರಡನೆಯ ಖಂಡ

ಇದರಲ್ಲಿ ಗಾನವಿಶೇಷಗಳು ಹೇಗೆ ಇರಬೇಕೆಂಬುದನ್ನೂ ವರ್ಣಾದಿಗಳನ್ನು ಹೇಗೆ ಉಚ್ಚರಿಸಬೇಕೆಂಬುದನ್ನೂ ಉದ್ಗಾತೃವಿಗೆ ಉಪದೇಶಿಸುತ್ತದೆ.

## ಇಪ್ಪತ್ತುಮೂರನೆಯ ಖಂಡ

೧. ನೈಷ್ಠಿಕಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ- ಇವರಿಗೆ ತಮ್ಮತಮ್ಮ ಧರ್ಮಗಳನ್ನು ಆಚರಿಸುವದರಿಂದ ಪುಣ್ಯಲೋಕಪ್ರಾಪ್ತಿಯಾಗುವದು, ಆದರೆ ಓಂಕಾರನಿಷ್ಠನಿಗೆ ಅಮೃತತ್ವವೇ ದೊರಕುವದು.

೨-೩. ಪ್ರಜಾಪತಿಯು ಲೋಕಗಳ ಸಾರವನ್ನು ಆಲೋಚಿಸಲಾಗಿ ಕ್ರಮಕ್ರಮವಾಗಿ ತ್ರಯೀವಿದ್ಯೆ, ವ್ಯಾಹೃತಿಗಳು, ಓಂಕಾರ- ಇವು ಜಿನುಗಿ ತೋರಿದವು. ಆದ್ದರಿಂದ ಓಂಕಾರವೇ ಸರ್ವವೂ ಆಗಿದೆ ಎಂದು ಉಪಾಸನೆಮಾಡಬೇಕು.

## ಇಪ್ಪತ್ತುನಾಲ್ಕನೆಯ ಖಂಡ

೧-೨. ಯಜ್ಞದ ಸವನಗಳು ಮೂರೂ ಕ್ರಮವಾಗಿ ವಸುಗಳು, ರುದ್ರರು, ಆದಿತ್ಯರು ಇವರುಗಳಿಗೆ ಸೇರಿರುತ್ತವೆ. ಆದ್ದರಿಂದ ಯಜಮಾನನು ಯಜ್ಞಫಲವಾದ ಲೋಕವನ್ನು ಪೂರ್ಣವಾಗಿ ಪಡೆದುಕೊಳ್ಳುವದಕ್ಕೆ ಆಯಾ ಸವನದ ಸಾಮ, ಹೋಮ, ಉತ್ಥಾನ- ಇವುಗಳನ್ನು ಅರಿತುಕೊಂಡಿರಬೇಕು.

೩-೧೬. ಇಂಥಿಂಥ ಸಾಮಗಳನ್ನು ಆಯಾ ಸವನದಲ್ಲಿ ಗಾನಮಾಡಿ, ಆಯಾ ಮಂತ್ರಗಳಿಂದ ಹೋಮವನ್ನೂ ಉತ್ಥಾನವನ್ನೂ ಆಚರಿಸಿದರೆ ಸವನದೇವತೆಗಳು ಸವನದ ಫಲವನ್ನು ಕೊಡುತ್ತಾರೆಂದು ಈ ಕಂಡಿಕೆಗಳಲ್ಲಿ ಹೇಳಿದೆ.

---

# ಮೂರನೆಯ ಅಧ್ಯಾಯ-ಒಂದನೆಯ ಖಂಡ

## (ಆದಿತ್ಯೋಪಾಸನೆ)

## ಅಧ್ಯಾಯದ ಸಂಬಂಧ

(ಭಾಷ್ಯ)

೨೦೦ 'ಅಸೌ ವಾ ಆದಿತ್ಯಃ' ಇತ್ಯಾದ್ಯಧ್ಯಾಯಾರಮ್ಭೇ ಸಂಬನ್ಧಃ। ಅತೀತಾನನ್ತರಾಧ್ಯಾಯಾನ್ತೇ ಉಕ್ತವಾನ್ 'ಯಜ್ಞಸ್ಯ ಮಾತ್ರಾಂ ವೇದ' ಇತಿ। ಯಜ್ಞವಿಷಯಾಣಿ ಚ ಸಾಮಹೋಮಮನ್ತ್ರೋತ್ಥಾನಾನಿ ವಿಶಿಷ್ಟಫಲಪ್ರಾಪ್ತಯೇ ಯಜ್ಞಾಙ್ಗಭೂತಾನಿ ಉಪದಿಷ್ಟಾನಿ। ಸರ್ವಯಜ್ಞಾನಾಂ ಚ ಕಾರ್ಯನಿರ್ವೃತ್ತಿರೂಪಃ ಸವಿತಾ ಮಹತ್ಯಾ ಶ್ರಿಯಾ ದೀಪ್ಯತೇ। ಸ ಏಷ ಸರ್ವಪ್ರಾಣಿಕರ್ಮಫಲಭೂತಃ ಪ್ರತ್ಯಕ್ಷಂ ಸರ್ವೈರುಪಜೀವ್ಯತೇ। ಅತಃ ಯಜ್ಞವ್ಯಪದೇಶಾನನ್ತರಂ ತತ್ಕಾರ್ಯಭೂತಸವಿತೃವಿಷಯಮ್ ಉಪಾಸನಂ ಸರ್ವಪುರುಷಾರ್ಥೇಭ್ಯಃ ಶ್ರೇಷ್ಠತಮಫಲಂ ವಿಧಾಸ್ಯಾಮೀತಿ ಏವಮ್ ಆರಭತೇ ಶ್ರುತಿಃ॥

(ಭಾಷ್ಯಾರ್ಥ)

'ಆ ಆದಿತ್ಯನೇ' ಎಂದು ಮುಂತಾಗಿರುವ ಅಧ್ಯಾಯಕ್ಕೆ ಸಂಬಂಧವೇನೆಂದರೆ. ಇದರ ಹಿಂದೆ ಆಗಿಹೋಗಿರುವ ಅಧ್ಯಾಯದ ಕೊನೆಯಲ್ಲಿ "(ಅವನೇ) ಯಜ್ಞದ ಅಳತೆಯನ್ನು ಬಲ್ಲನು" (೨-೨೪-೧೬) ಎಂದು ಹೇಳಿರುತ್ತದೆ. ಯಜ್ಞಕ್ಕೆ ಅಂಗವಾಗಿರುವ ಯಜ್ಞವಿಷಯಕವಾದ ಸಾಮ, ಹೋಮ, ಮನ್ತ್ರೋತ್ಥಾನ- ಇವುಗಳನ್ನೂ ಆಯಾ ವಿಶೇಷಫಲದ ಪ್ರಾಪ್ತಿಗಾಗಿ ತಿಳಿಸಿಕೊಟ್ಟಿರುತ್ತದೆ. ಎಲ್ಲಾ ಯಜ್ಞಗಳ ಕಾರ್ಯಸಿದ್ಧಿರೂಪನಾದ ಸೂರ್ಯನು ಮಹಾಶ್ರೀಯುಕ್ತನಾಗಿ ಹೊಳೆಯುತ್ತಿರುತ್ತಾನೆ. ಆ ಈ ಸರ್ವಪ್ರಾಣಿಗಳ ಕರ್ಮಕ್ಕೂ ಫಲಭೂತನಾಗಿರುವ (ಸೂರ್ಯನನ್ನು) ಪ್ರತ್ಯಕ್ಷನಾಗಿಯೇ ಎಲ್ಲರೂ ಉಪಜೀವಿಸಿಕೊಂಡಿರುತ್ತಾರೆ. ಆದ್ದರಿಂದ ಯಜ್ಞವನ್ನು ಹೇಳಿದ ಬಳಿಕ ಅದರ ಕಾರ್ಯವಾದ ಸವಿತೃವಿನ ವಿಷಯದ ಉಪಾಸನೆಯು ಸರ್ವಪುರುಷಾರ್ಥಗಳಿಗಿಂತಲೂ ಶ್ರೇಷ್ಠತಮಫಲ(ವುಳ್ಳದ್ದಾದ್ದರಿಂದ ಅದನ್ನು) ವಿಧಿಸೋಣವೆಂದು ಶ್ರುತಿಯು (ಇದನ್ನು) ಆರಂಭಿಸಿರುತ್ತದೆ

## ಆದಿತ್ಯನು ದೇವಮಧುವೆಂಬ ರೂಪಕ

(ಉಪನಿಷತ್ತು)

**ಅಸೌ ವಾ ಆದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽನ್ತರಿಕ್ಷಮಪೂಪೋ ಮರೀಚಯಃ ಪುತ್ರಾಃ ॥ ೧ ॥**

೧. ಆ ಆದಿತ್ಯನೇ ದೇವಮಧು, ಅದಕ್ಕೆ ದ್ಯು(ಲೋಕ)ವೇ ಅಡ್ಡ ಬಿದಿರು, ಅಂತರಿಕ್ಷವೇ ಜೇನುಹುಟ್ಟೆಯು, ಮರೀಚಿಗಳೇ ಮರಿಗಳು.

(ಭಾಷ್ಯ)

೨೦೧. 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿ। ದೇವಾನಾಂ ಮೋದನಾತ್ ಮಧ್ವಿವ ಮಧು ಅಸೌ ಆದಿತ್ಯಃ । ವಸ್ವಾದೀನಾಂ ಚ ಮೋದನ ಹೇತುತ್ವಂ ವಕ್ಷ್ಯತಿ ಸರ್ವಯಜ್ಞಫಲರೂಪತ್ವಾತ್ ಆದಿತ್ಯಸ್ಯ । ಕಥಂ ಮಧುತ್ವ ಮಿತಿ? ಆಹ। ತಸ್ಯ ಮಧುನಃ ದ್ಯೌರೇವ ಭ್ರಾಮರಸ್ಯೇವ ಮಧುನಃ ತಿರಶ್ಚೀನವಂಶಃ ತಿರಶ್ಚೀನಶ್ಚಾಸೌ ವಂಶಶ್ಚ ಇತಿ ತಿರಶ್ಚೀನವಂಶಃ । ತಿರ್ಯಗ್ಗತೇವ ಹಿ ದ್ಯೌರ್ಲಕ್ಷ್ಯತೇ । ಅನ್ತರಿಕ್ಷಂ ಚ ಮಧ್ವಪೂಪೋ ದ್ಯುವಂಶೇ ಲಗ್ನಃ ಸನ್ ಲಮ್ಬತ ಇವ । ಅತೋ ಮಧ್ವಪೂಪಸಾಮಾನ್ಯಾತ್ ಅನ್ತರಿಕ್ಷಂ ಮಧ್ವಪೂಪಃ। ಮಧುನಃ ಸವಿತುಃ ಆಶ್ರಯತ್ವಾಚ್ಚ । ಮರೀಚಯಃ ರಶ್ಮಯಃ, ರಶ್ಮಿಸ್ಥಾ ಆಪೋ ಭೌಮಾಃ ಸವಿತ್ರಾಕೃಷ್ಟಾಃ। "ಏತಾ ವಾ ಆಪಃ ಸ್ವರಾಜೋ ಯನ್ಮರೀಚಯಃ" (?) ಇತಿ ಹಿ ವಿಜ್ಞಾಯತೇ[1] । ತಾ ಅನ್ತರಿಕ್ಷಮಧ್ವಪೂಪಸ್ಥರಶ್ಮ್ಯನ್ತರ್ಗತತ್ವಾತ್ ಭ್ರಮರಬೀಜಭೂತಾಃ ಪುತ್ರಾ ಇವ ಹಿ ತಾ ಲಕ್ಷ್ಯನ್ತೇ ಇತಿ ಪುತ್ರಾ ಇವ ಪುತ್ರಾಃ। ಮಧ್ವಪೂಪನಾಡ್ಯನ್ತರ್ಗತಾ ಹಿ ಭ್ರಮರಪುತ್ರಾಃ ॥

(ಭಾಷ್ಯಾರ್ಥ)

'ಆ ಆದಿತ್ಯನೇ ದೇವಮಧು' ಮುಂತಾದ (ಕಂಡಿಕೆಯ ಸಂಬಂಧವೇನೆಂದರೆ): ದೇವತೆಗಳಿಗೆ (ಜೇನುತುಪ್ಪದಂತೆ) ಮೋದವನ್ನುಂಟುಮಾಡುತ್ತಿರುವದರಿಂದ ಮಧು, ಮಧುವಿನಂತಿರುವವನು. ಆದಿತ್ಯನು ಎಲ್ಲಾ ಯಜ್ಞಗಳಿಗೂ ಫಲವಾಗಿರುವದರಿಂದ ವಸ್ವಾದಿಗಳಿಗೆ ಸಂತೋಷಗೊಳಿಸುವ ಕಾರಣವಾಗಿರುತ್ತಾನೆ ಎಂದು ಮುಂದೆ[2] (ಶ್ರುತಿಯು) ಹೇಳುತ್ತದೆ. (ಅವನು) ಮಧುವೆಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ. ಆ ಮಧುವಿಗೆ ಆಕಾಶವೇ ಅಡ್ಡಬಿದಿರು– ಭ್ರಮರಗಳ ಮಧುವಿಗೆ ಹೇಗೆ(ಅಡ್ಡಬಿದಿರಿರುವದೋ ಹಾಗೆ)– ಅಡ್ಡಲಾಗಿರುವ ಬಿದಿರಾದ್ದರಿಂದ(ಅದು) ಅಡ್ಡಬಿದಿರು. ಆಕಾಶವು ಅಡ್ಡಡ್ಡಲಾಗಿರುವಂತೆ ಕಾಣುತ್ತಿದೆಯಲ್ಲವೆ ? ಅಂತರಿಕ್ಷವು ಜೇನುಹುಟ್ಟೆಯು , ಆಕಾಶವೆಂಬ ಬಿದಿರಿಗೆ ಸಿಕ್ಕಿಕೊಂಡು ಜೋತಾಡುತ್ತಿರುವಂತೆ ಇದೆ, ಆದ್ದರಿಂದ ಜೇನುಹುಟ್ಟೆಯ ಹೋಲಿಕೆಯಿರುವದರಿಂದ ಅಂತರಿಕ್ಷವು ಜೇನುಹುಟ್ಟೆಯು (ಎಂದಿದೆ) ಮಧುವಾಗಿರುವ ಸೂರ್ಯನಿಗೆ ಆಸರೆಯಾಗಿರುವದರಿಂದಲೂ (ಅದು ಹುಟ್ಟೆ), ಮರೀಚಿಗಳು ಎಂದರೆ ರಶ್ಮಿಗಳು ; ಭೂಮಿಯಿಂದ

1 ವಿಜ್ಞಾಯನ್ತೇ ಎಂಬುವನ್ನು ಹೀಗೆ ತಿದ್ದಿಕೊಂಡಿದೆ.

2 ಆರನೆಯ ಖಂಡದಿಂದ ಮುಂದಕ್ಕೆ ಇದನ್ನು ಹೇಳಲಾಗಿದೆ.

ಸೂರ್ಯನು ಸೆಳೆದುಕೊಂಡಿರುವ ರಶ್ಮಿಗತವಾಗಿರುವ ನೀರು (ಎಂದರ್ಥ). "ಸ್ವರಾಜನಾದ (ಸೂರ್ಯನ) ಮರೀಚಿಗಳಿವೆಯಲ್ಲ, ಇವೇ ನೀರು" (?) ಎಂದಲ್ಲವೆ, (ಶ್ರುತಿಯಿಂದ) ತಿಳಿದುಬರುತ್ತದೆ ? ಅಂತರಿಕ್ಷವೆಂಬ ಜೇನುಹುಟ್ಟಿಯಲ್ಲಿರುವ ರಶ್ಮಿಗಳಲ್ಲಿರುವದರಿಂದ ಆ (ನೀರು) ಭ್ರಮರಗಳಿಗೆ ಬೀಜವಾಗಿರುವ ಪುತ್ರರಂತೆ ಹಿತವಾಗಿ ಕಾಣಿಸುತ್ತವೆಯಾದ್ದರಿಂದ (ಅವನ್ನು) ಪುತ್ರರು, ಪುತ್ರರಂತಿರುವ (ಮರಿ)ಗಳು ಎಂದಿದೆ.[1] ಜೇನುಹುಟ್ಟಿಯ ನಾಡಿಗಳ ಒಳಗಲ್ಲವೆ, ಭ್ರಮರಪುತ್ರಗಳಿರುವದು ?

## ಒಂದನೆಯ ಅಮೃತರಸದ ಉತ್ಪತ್ತಿ

(ಉಪನಿಷತ್ತು)

**ತಸ್ಯ ಯೇಽಸ್ಯ ಪ್ರಾಞ್ಚೋ ರಶ್ಮಯಸ್ತಾ ಏವಾಸ್ಯ ಪ್ರಾಞ್ಚೋ ಮಧುನಾಡ್ಯಃ। ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾ ವಾ ಏತಾ ಋಚಃ ॥ ೨ ॥**

**ಏತಮೃಗ್ವೇದಮಭ್ಯತಪಗ್ಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಗ್ಂ ರಸೋಽಜಾಯತ ॥ ೩ ॥**

೨-೩. ಆ (ಸೂರ್ಯನ) ಪೂರ್ವದಿಕ್ಕಿನ ರಶ್ಮಿಗಳಿವೆಯಲ್ಲ, ಅವೇ ಈ (ಮಧುವಿಗೆ) ಪೂರ್ವದ ಮಧುನಾಡಿಗಳು; ಋಕ್ಕುಗಳೇ ಮಧುವನ್ನುಂಟುಮಾಡುವ (ಭ್ರಮರ)ಗಳು; ಋಗ್ವೇದವೇ ಹೂವು. ಆ ಅಪ್ಪೇ ಅಮೃತವು, ಆ ಈ ಋಕ್ಕುಗಳೆಂಬ (ಭ್ರಮರಗಳು) ಈ ಋಗ್ವೇದವನ್ನು ಅಭಿತಪಿಸಿದವು; ಹಾಗೆ ಅಭಿತಪ್ತವಾದ ಆ (ಋಗ್ವೇದದಿಂದಾದ) ಯಶಸ್ಸು, ತೇಜವು, ಇಂದ್ರಿಯವು, ವೀರ್ಯವು, ಅನ್ನಾದ್ಯವು ಎಂಬ ರಸವು ಉಂಟಾಯಿತು.

### ಋಕ್ಕುಗಳಿಂದ ಉಂಟಾಗುವ ರಸ

(ಭಾಷ್ಯ)

೨೦೨ ತಸ್ಯ ಸವಿತುರ್ಮಧ್ವಾಶ್ರಯಸ್ಯ ಮಧುನೋ ಯೇ ಪ್ರಾಞ್ಚಃ ಪ್ರಾಚ್ಯಾಂ ದಿಶಿ ಗತಾ ರಶ್ಮಯಃ ತಾ ಏವಾಸ್ಯ ಪ್ರಾಚ್ಯಃ ಪ್ರಾಗಞ್ಚನಾತ್

1. ಭ್ರಮರಬೀಜವಾಗಿರುವ ಮೊಟ್ಟೆಗಳು ಜೇನುಹುಟ್ಟಿಯ ರಂಧ್ರಗಳಲ್ಲಿರುತ್ತವೆ; ಈ ನೀರೂ ಅಂತರಿಕ್ಷವೆಂಬ ಹುಟ್ಟಿಯ ರಶ್ಮಿಗಳಲ್ಲಿರುತ್ತದೆ. ಅದ್ದರಿಂದ ಇವರಲ್ಲಿ ಭ್ರಮರಬೀಜ ದೃಷ್ಟಿಯನ್ನು ಮಾಡಬೇಕು ಎಂದರ್ಥ. ಆ. ಗಿ. ಟೀಕೆ.

ಮಧುನೋ ನಾಡ್ಯ ಇವ[1] । ಮಧುನಾಡ್ಯಃ । ಮಧ್ವಾಧಾರಚ್ಛಿದ್ರಾಣಿ ಇತ್ಯರ್ಥಃ । ತತ್ರ ಋಚ ಏವ ಮಧುಕೃತಃ । ಲೋಹಿತರೂಪಂ ಸವಿತ್ರಾಶ್ರಯಂ ಮಧು ಕುರ್ವನ್ತೀತಿ ಮಧುಕೃತಃ । ಭ್ರಮರಾ ಇವ ಯತೋ ರಸಾನ್ ಆದಾಯ ಮಧು ಕುರ್ವನ್ತಿ । ತತ್ಪುಷ್ಪಮಿವ ಪುಷ್ಪಮ್ ಋಗ್ವೇದ ಏವ । ತತ್ರ ಋಗ್ಬ್ರಾಹ್ಮಣಸಮುದಾಯಸ್ಯ ಋಗ್ವೇದಾಖ್ಯತ್ವಾತ್ ಶಬ್ದಮಾತ್ರಾಚ್ಚ ಭೋಗ್ಯರೂಪರಸನಿಸ್ರಾವಾಸಂಭವಾತ್ ಋಗ್ವೇದಶಬ್ದೇನ ಅತ್ರ ಋಗ್ವೇದವಿಹಿತಂ ಕರ್ಮ । ತತೋ ಹಿ ಕರ್ಮಫಲಭೂತಮಧುರಸನಿಸ್ರಾವಃ ಸಂಭವತಿ[2] । ಮಧುಕರೈರಿವ ಪುಷ್ಪಸ್ಥಾನೀಯಾತ್ ಋಗ್ವೇದವಿಹಿತಾತ್ ಕರ್ಮಣಃ ಅಪ ಆದಾಯ ಋಗ್ಭಿರ್ಮಧು ನಿರ್ವರ್ತ್ಯತೇ । ಕಾಸ್ತಾ ಆಪಃ ಇತಿ? ಆಹ । ತಾಃ ಕರ್ಮಣಿ ಪ್ರಯುಕ್ತಾ ಸೋಮಾಜ್ಯಪಯೋರೂಪಾ ಅಗ್ನೌ ಪ್ರಕ್ಷಿಪ್ತಾಃ ತತ್ಪಾಕಾಭಿನಿರ್ವೃತ್ತಾ ಅಮೃತಾಃ ಅಮೃತಾರ್ಥತ್ವಾತ್ ಅತ್ಯನ್ತರಸವತ್ಯಃ ಆಪೋ ಭವನ್ತಿ । ತದ್ರಸಾನ್ ಆದಾಯ ತಾ ವಾ ಏತಾ ಋಚಃ ಪುಷ್ಪೇಭ್ಯೋ ರಸಮಾದದಾನಾ ಇವ ಭ್ರಮರಾ ಋಚಃ ಏತಮ್ ಋಗ್ವೇದಮ್ ಋಗ್ವೇದವಿಹಿತಂ ಕರ್ಮ ಪುಷ್ಪಸ್ಥಾನೀಯಮ್ ಅಭ್ಯತಪನ್ ಅಭಿತಾಪಂ ಕೃತವತ್ಯ ಇವ ಏತಾ ಋಚಃ ಕರ್ಮಣಿ ಪ್ರಯುಕ್ತಾಃ । ಋಗ್ಭಿರ್ಹಿ ಮನ್ತ್ರೈಃ ಶಸ್ತ್ರಾದ್ಯಙ್ಗಭಾವಮುಪಗತೈಃ ಕ್ರಿಯಮಾಣಂ ಕರ್ಮ ಮಧುನಿರ್ವರ್ತಕಂ ರಸಂ ಮುಞ್ಚತೀತ್ಯುಪಪದ್ಯತೇ । ಪುಷ್ಪಾಣೀವ ಭ್ರಮರೈರಾಚೂಷ್ಯಮಾಣಾನಿ । ತದೇತದಾಹ । ತಸ್ಯ ಋಗ್ವೇದಸ್ಯ ಅಭಿತಪ್ತಸ್ಯ । ಕೋಽಸೌ ರಸಃ, ಯ ಋಙ್ಮಧುಕರಾಭಿತಾಪನಿಃಸೃತ ಇತಿ? ಉಚ್ಯತೇ । ಯಶೋ ವಿಶ್ರುತತ್ವಮ್ । ತೇಜಃ ದೇಹಗತಾ ದೀಪ್ತಿಃ । ಇನ್ದ್ರಿಯಂ ಸಾಮರ್ಥ್ಯೋಪೇತೈರಿನ್ದ್ರಿಯೈಃ ಅವೈಕಲ್ಯಮ್ । ವೀರ್ಯಂ ಸಾಮರ್ಥ್ಯಮ್ । ಬಲಮ್ ಇತ್ಯರ್ಥಃ । ಅನ್ನಾದ್ಯಮ್ । ಅನ್ನಂ ಚ ತತ್ ಆದ್ಯಂ ಚ ಯೇನ ಉಪಯುಜ್ಯಮಾನೇನ ಅಹನ್ಯಹನಿ ದೇವಾನಾಂ ಸ್ಥಿತಿಃ ಸ್ಯಾತ್ । ತದನ್ನಾದ್ಯಮ್ । ಏಷ ರಸೋಽಜಾಯತ ಯಾಗಾದಿಲಕ್ಷಣಾತ್ ಕರ್ಮಣಃ ॥

(ಭಾಷ್ಯಾರ್ಥ)

ಮಧುವಿಗೆ ಆಶ್ರಯವಾಗಿರುವ ಆ ಮಧುವಿನ, ಸೂರ್ಯನ[3], ಪೂರ್ವದಿಕ್ಕಿನ ಮೂಡಣದಿಕ್ಕಿಗೆ ಹರಿದಿರುವ ರಶ್ಮಿಗಳಿರುವವಲ್ಲ, ಅವೇ ಪೂರ್ವದ ಮಧು

---

1. ನಾಡ್ಯೋ ಮಧುನಾಡ್ಯ ಇವ - ಎಂಬುದನ್ನು ಭಿನ್ನಕ್ರಮದಿಂದ ಇಲ್ಲಿಗೆ ಸೇರಿಸಿಕೊಂಡಿದೆ. ಅಥವಾ ಆ ಪಾಠಕ್ಕೆ ಹೀಗೆ ಅನ್ವಯವೆಂದು ಭಾವಿಸಬೇಕು.

2. ಸಂಭವಾತ್ ಎಂಬ ಪಾಠವಲ್ಲಿ ಹಿ ಹೆಚ್ಚಾಗುತ್ತದೆಯಾದ್ದರಿಂದ ಹೀಗೆ ತಿದ್ದಿಕೊಂಡಿದೆ.

3. ಮುಂದೆ ಹೇಳುವ ಋಗ್ವೇದಾದಿಕರ್ಮಫಲವಾದ ಮಧುವಿಗೆ ಆಶ್ರಯನಾಗಿರುವವರಿಂದ ಸೂರ್ಯನನ್ನು ಮಧುವೆಂದಿದೆ ಎಂದು ಭಾವ.

ನಾಡಿಗಳು, ಮಧುವಿನ ನಾಡಿಗಳಂತೆ ಇರುವದರಿಂದ ಮಧುನಾಡಿಗಳು, ಮಧ್ವಾಧಾರವಾಗಿರುವ ರಂಧ್ರಗಳು[1] ಎಂದರ್ಥ.

ಇಲ್ಲಿ ಋಕ್ಕುಗಳೇ ಮಧುಕರಗಳು, ಏಕೆಂದರೆ ತುಂಬಿಗಳಂತೆ ಅವು ರಸಗಳನ್ನು ತಂದು ಸೂರ್ಯನನ್ನಾಶ್ರಯಿಸಿಕೊಂಡಿರುವ ಲೋಹಿತರೂಪವಾದ ಮಧುವನ್ನು ಮಾಡುತ್ತವೆ ಯಾವದರಿಂದ ರಸಗಳನ್ನು ತಂದು ಮಧುವನ್ನು ಮಾಡುತ್ತವೆಯೋ ಆ ಹೂವಿನಂತಿರುವದರಿಂದ ಹೂವಾಗಿರುವದು ಋಗ್ವೇದವೇ. ಈ (ವಾರದಲ್ಲಿ) ಋಗ್ಬ್ರಾಹ್ಮಣಗಳ[2] ಸಮುದಾಯವು ಋಗ್ವೇದವೆಂಬ ಹೆಸರಿನ ಶಬ್ದಮಾತ್ರವಾಗಿರುವದರಿಂದ (ಅದರಿಂದ) ಭೋಗ್ಯರೂಪವಾದ ರಸವು ಒಸರುವ ಸಂಭವವಿಲ್ಲದ್ದರಿಂದ ಋಗ್ವೇದವೆಂಬ ಶಬ್ದಕ್ಕೆ ಇಲ್ಲಿ ಋಗ್ವೇದವಿಹಿತವಾದ ಕರ್ಮ(ವನ್ನು ಗ್ರಹಿಸಬೇಕು), ಅದರಿಂದಲೇ ಅಲ್ಲವೆ, ಕರ್ಮಫಲವಾಗಿರುವ ಮಧುರಸವು ಒಸರುವ ಸಂಭವವಿದೆ[3] ? ಹೂವಿನಂತಿರುವ ಋಗ್ವೇದವಿಹಿತವಾದ ಕರ್ಮದಿಂದ ತುಂಬಿಗಳಂತೆ ಋಕ್ಕುಗಳು ಅಪ್ಪನ್ನು ತಂದು ಮಧುವನ್ನು ಉಂಟು ಮಾಡುತ್ತವೆ

ಆ ಅಪ್ಪು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. ಕರ್ಮದಲ್ಲಿ ಪ್ರಯೋಗಿಸಿದ ಸೋಮ, ಆಜ್ಯ, ಹಾಲು- ಎಂಬ ರೂಪದ, ಅಗ್ನಿಯಲ್ಲಿ ಹಾಕಿದ, ಆ ಅಪ್ಪು, ಆ (ಅಗ್ನಿಯ) ಪಾಕದಿಂದ ಅಡಿಗೆಯಾಗಿ ಅಮೃತವಾಗುತ್ತದೆ, ಅಮೃತವೆಂಬ ಫಲವನ್ನು ಕೊಡುವದರಿಂದ (ಅಮೃತವಾಗುತ್ತದೆ), ಅತ್ಯಂತರುಚಿಯುಳ್ಳದ್ದಾಗುತ್ತದೆ.

ಆ ರಸಗಳನ್ನು ತಂದು, ಹೂಗಳಿಂದ ರಸವನ್ನು ತರುವ ಭ್ರಮರಗಳಂತಿರುವ ಆ ಈ ಋಕ್ಕುಗಳು, ಹೂವಿನಂತಿರುವ ಈ ಋಗ್ವೇದವಿಹಿತವಾದ ಕರ್ಮವನ್ನು ಅಭಿತಪಿಸಿದವು, ಕರ್ಮದಲ್ಲಿ ಪ್ರಯುಕ್ತವಾದ ಈ ಋಕ್ಕುಗಳು[4] ಅಭಿತಾಪಗೊಳಿಸಿದಂತೆ (ವರ್ತಿಸಿದವು) ಋಕ್ಕುಗಳೆಂಬ ಮಂತ್ರಗಳು ಶಸ್ತ್ರವೇ ಮುಂತಾದ ಅಂಗಭಾವವನ್ನು ಹೊಂದಲು[5] ಮಾಡಿದ ಕರ್ಮವು ಮಧುವನ್ನುಂಟುಮಾಡುವ ತುಂಬಿ

1. ಜೇನುಗೂಡುಗಳು.

2. ಋಕ್ಕುಗಳು ಭ್ರಮರಗಳು, ಕರ್ಮವನ್ನು ವಿಧಿಸುವ ಋಗ್ಬ್ರಾಹ್ಮಣಗಳು ಹೂಗಳು- ಎಂದು ಯಥಾಶ್ರುತವಾಗಿ ಅರ್ಥಮಾಡಬೇಕು.

3. ಬರಿಯ ಶಬ್ದಪ್ರಯೋಗದಿಂದ ಈ ಫಲವಾಗಲಾರದು ಎಂದು ಅಭಿಪ್ರಾಯ.

4. ಕರ್ಮಕ್ಕೂ ಋಕ್ಕುಗಳಿಗೂ ಆಗುವ ಸಂಬಂಧವೇ ಅಭಿತಾಪವು.

5. ಪುರೋನುವಾಕ್ಯ, ಯಾಜ್ಯ, ಶಸ್ಯ- ಮುಂತಾದ ರೂಪದಿಂದ ಋಕ್ಕುಗಳು ಕರ್ಮಕ್ಕೆ ಅಂಗವಾಗಿರುತ್ತವೆ, ಹಾಗೆ ಋಕ್ಕುಗಳನ್ನು ಉಪಯೋಗಿಸಿದಾಗಲೆ ಕರ್ಮಗಳಿಂದ ಫಲವುಂಟಾಗುತ್ತದೆ.

ಗಳು ಹೀರುವಾಗ ಹೂಗಳಂತೆ ರಸವನ್ನು ಬಿಡುತ್ತದೆ ಎಂಬುದಲ್ಲವೆ, ಹೊಂದುತ್ತದೆ[1] ?

ಆ ಇದನ್ನು (ಶ್ರುತಿ) ಹೇಳುತ್ತಿದೆ (ಹೀಗೆ) ಅಭಿತಪ್ತವಾದ ಋಗ್ವೇದದಿಂದ (ರಸವುಂಟಾಯಿತು), ಋಕ್ಕುಗಳೆಂಬ ತುಂಬಿಗಳ ಅಭಿತಾಪದಿಂದ ಹೊರಹೊರಟ ಈ ರಸವೆಂಬುದು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ಯಶಸ್ಸು, ಎಂದರೆ ಹೆಸರುವಾಸಿ, ತೇಜಸ್ಸು, ಎಂದರೆ ದೇಹದಲ್ಲಿರುವ ಕಾಂತಿ, ಇಂದ್ರಿಯವು, ಎಂದರೆ ಸಾಮರ್ಥ್ಯದಿಂದೊಡಗೂಡಿ ಇಂದ್ರಿಯಗಳು ಊನವಾಗದೆ ಇರುವದು, ವೀರ್ಯವು, ಎಂದರೆ ಸಾಮರ್ಥ್ಯವು, ಬಲವು, ಅನ್ನಾದ್ಯವು– ಅನ್ನವೂ ಆದ್ಯವೂ ಆಗಿರತಕ್ಕದ್ದು, ದಿನದಿನವೂ ಯಾವದನ್ನು ಉಪಯೋಗಿಸಿದರೆ ದೇವತೆಗಳು ಇರುವದಕ್ಕಾಗುವದೋ ಅದು ಅನ್ನಾದ್ಯವು– ಈ ರಸವು ಯಾಗವೇ ಮುಂತಾದ ಕರ್ಮದಿಂದ ಉಂಟಾಯಿತು (ಎಂದರ್ಥ)[2]

(ಉಪನಿಷತ್ತು)

**ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಗ್ಂ ರೂಪಮ್ ॥ ೪ ॥**

೪. ಅದು ಹೊರಟುಹೋಯಿತು. ಅದು ಆದಿತ್ಯನನ್ನು ಹತ್ತಿರದಲ್ಲಿ ಆಶ್ರಯಿಸಿಕೊಂಡಿತು. ಆದಿತ್ಯನ ಕೆಂಪನೆಯ ರೂಪವಿದೆಯಲ್ಲ, ಇದೇ ಅದು.

## ಆದಿತ್ಯನಲ್ಲಿ ಕರ್ಮದಿಂದಾಗುವ ಪ್ರಥಮಾಮೃತ

(ಭಾಷ್ಯ)

೨೦೩. ಯಶಆದ್ಯನ್ನಾದ್ಯಪರ್ಯನ್ತಂ ತತ್ ವ್ಯಕ್ಷರತ್ ವಿಶೇಷೇಣ ಅಕ್ಷರತ್ ಅಗಮತ್ ಗತ್ವಾ ಚ ತದಾದಿತ್ಯಮ್ ಅಭಿತಃ ಪಾರ್ಶ್ವತಃ ಪೂರ್ವಭಾಗಂ ಸವಿತುಃ ಅಶ್ರಯತ್ ಆಶ್ರಿತವತ್ ಇತ್ಯರ್ಥಃ। ಅಮುಷ್ಮಿನ್ ಆದಿತ್ಯೇ ಸಂಚಿತಂ ಕರ್ಮಫಲಾಖ್ಯಮ್ ಮಧು ಭೋಕ್ಷ್ಯಾಮಹ ಇತ್ಯೇವಂ ಹಿ ಯಶಆದಿಲಕ್ಷಣಫಲಪ್ರಾಪ್ತಯೇ ಕರ್ಮಾಣಿ ಕ್ರಿಯನ್ತೇ ಮನುಷ್ಯೈಃ। ಕೇದಾರನಿಷ್ಪಾದನಮಿವ

---

1. ಯಶಸ್ತೇಜಆದಿರೂಪದ ರಸವು ಈ ಕರ್ಮದಿಂದ ಉಂಟಾಗಿ ಸೂರ್ಯನಲ್ಲಿಗೆ ಮುಟ್ಟಿದ ಬಳಿಕವೇ ಅಲ್ಲಿ ಮಧುವನ್ನುಂಟುಮಾಡುತ್ತದೆ. ಆ ಮಧುವಿಗೆ ಆಶ್ರಯನೆಂಬುದರಿಂದಲೇ ಸೂರ್ಯನನ್ನು ಇಲ್ಲಿ ಮಧುವೆಂದು ಭಾವಿಸಬೇಕೆಂದು ವಿಧಿಸಿರುವದು ಎಂದರ್ಥ.

2. ಋಗ್ವೇದದಿಂದ ಉಂಟಾಗುತ್ತದೆ ಎಂದರೆ ಋಗ್ವೇದದಿಂದ ಮಾಡುವ ಕರ್ಮದಿಂದ ಉಂಟಾಗುತ್ತದೆ ಎಂದೇ ಅರ್ಥವೆಂದು ಭಾಷ್ಯದಲ್ಲಿ ಹೇಳಿದ್ದು ಈ ಕಾರಣದಿಂದಲೇ.

ಕರ್ಷಕೈಃ। ತತ್ ಪ್ರತ್ಯಕ್ಷಂ ಪ್ರದರ್ಶ್ಯತೇ ಶ್ರದ್ಧಾಹೇತೋಃ। ತದ್ವಾ ಏತತ್ ।
ಕಿಮ್ ಏತತ್ ? ಯದೇತತ್ ಆದಿತ್ಯಸ್ಯ ಉದ್ಯತೋ ದೃಶ್ಯತೇ ರೋಹಿತಂ ರೂಪಮ್॥

(ಭಾಷ್ಯಾರ್ಥ)

ಯಶಸ್ಸೇ ಮೊದಲಾಗಿ ಅನ್ನಾದ್ಯದವರೆಗಿನ ಆ (ರಸವು ವ್ಯಕ್ಷರತ್=ವಿಶೇಷೇಣ ಅಕ್ಷರತ್) ವಿಶೇಷರೂಪದಿಂದ ಕ್ಷರಣಮಾಡಿತು ಎಂದರೆ ಹೋಯಿತು.[1] ಹೋಗಿ ಅದು ಆದಿತ್ಯನ ಹತ್ತಿರ (ಬಂದು) ಪಕ್ಕದಲ್ಲಿ ಸೂರ್ಯನ ಪೂರ್ವಭಾಗವನ್ನು (ಅಶ್ರಯತ್= ಆಶ್ರಿತವತ್) ಆಶ್ರಯಿಸಿಕೊಂಡಿತು[2] ಎಂದರ್ಥ. ಆ ಆದಿತ್ಯನಲ್ಲಿ ಕೂಡಿಹಾಕಿಕೊಂಡಿರುವ ಕರ್ಮಫಲವೆಂಬ ಮಧುವನ್ನು ಭುಂಜಿಸೋಣ ಎಂದಲ್ಲವೆ, ಯಶಸ್ಸೇ ಮುಂತಾದ ಫಲಪ್ರಾಪ್ತಿಗಾಗಿ, ಕರ್ಮಗಳನ್ನು ಬೇಸಾಯಗಾರರು ಗದ್ದೆಯನ್ನು ಮಾಡುವಂತೆ, ಮನುಷ್ಯರು ಮಾಡುತ್ತಾರೆ ? ಆ ಫಲವನ್ನು, ಶ್ರದ್ಧೆ ಯುಂಟಾಗಲೆಂಬ, ಕಾರಣದಿಂದ[3] ಪ್ರತ್ಯಕ್ಷವಾಗಿ ತೋರಿಸುತ್ತಾರೆ. ಇದೇ ಅದು. ಯಾವದದು ? ಎಂದರೆ ಉದಯಿಸುವ ಸೂರ್ಯನ ಕೆಂಪನೆಯ ರೂಪವಿದೆಯಲ್ಲ, (ಅದು).

---

# ಮೂರನೆಯ ಅಧ್ಯಾಯ-ಎರಡನೆಯ ಖಂಡ

(ಆದಿತ್ಯೋಪಾಸನೆ)

## ಎರಡನೆಯ ಅಮೃತದ ಉತ್ಪತ್ತಿ

(ಉಪನಿಷತ್ತು)

**ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧು ನಾಡ್ಯೋ ಯಜೂಗ್ಂಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ ॥೧॥**

**ತಾನಿ ವಾ ಏತಾನಿ ಯಜೂಗ್ಂಷ್ಯೇತಂ ಯಜುರ್ವೇದಮಭ್ಯ ತಪಗ್ಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯ ಮನ್ನಾದ್ಯಗ್ಂ ರಸೋಽಜಾಯತ ॥೨॥**

---

1. ಬಂದಾನೊಂದು ಅದೃಷ್ಟರೂಪದಿಂದ ಹೋಗುತ್ತದೆ ಎಂದರ್ಥ

2. ಇಲ್ಲಿ ಭೂತಕಾಲದ ರೂಪವನ್ನು ಪ್ರಯೋಗಿಸಿದ್ದರೂ ಆಶ್ರಯಿಸಿಕೊಂಡಿರುತ್ತವೆ ಎಂದೇ ಅರ್ಥ.

3. ಕರ್ಮಿಗಳಿಗೂ ಈ ಮಧುವಿದ್ಯೆಯ ಉಪಾಸಕರಿಗೂ ಸಾಧನದಲ್ಲಿ ಶ್ರದ್ಧೆಯುಂಟಾಗ ಲೆಂಬ ಉದ್ದೇಶದಿಂದ ಎಂದರ್ಥ.

೧-೨. ಇನ್ನು ಆ (ಸೂರ್ಯನ) ದಕ್ಷಿಣದಿಕ್ಕಿನ ರಶ್ಮಿಗಳಿವೆಯಲ್ಲ, ಅವೇ ಈ (ಮಧುವಿಗೆ) ದಕ್ಷಿಣದ ಮಧುನಾಡಿಗಳು ; ಯಜುಸ್ಸುಗಳೇ ಮಧುವನ್ನುಂಟುಮಾಡುವ (ಭ್ರಮರ)ಗಳು, ಯಜುರ್ವೇದವೇ ಹೂವು. ಆ ಅಪ್ಪೇ ಅಮೃತವು. ಆ ಈ ಯಜುಸ್ಸುಗಳು (ಎಂಬ ಭ್ರಮರಗಳು) ಈ ಯಜುರ್ವೇದವನ್ನು ಅಭಿತಪಿಸಿದವು. (ಹಾಗೆ) ಅಭಿತಪ್ತವಾದ ಆ (ಯಜುರ್ವೇದದಿಂದ) ಯಶಸ್ಸು, ತೇಜವು, ಇಂದ್ರಿಯವು, ವೀರ್ಯವು, ಅನ್ನಾದ್ಯವು- ಎಂಬ ರಸವು ಉಂಟಾಯಿತು.

## ಯಜುಸ್ಸುಗಳಿಂದ ಉಂಟಾಗುವ ರಸ

(ಭಾಷ್ಯ)

೨೦೪. ಅಥ ಯೇ ಅಸ್ಯ ದಕ್ಷಿಣಾ ರಶ್ಮಯ ಇತ್ಯಾದಿ ಸಮಾನಮ್ । ಯಜೂಂಷ್ಯೇವ ಮಧುಕೃತಃ ಯಜುರ್ವೇದವಿಹಿತೇ ಕರ್ಮಣಿ ಪ್ರಯುಕ್ತಾನಿ। ಪೂರ್ವವನ್ಮಧುಕೃತ ಇವ। ಯಜುರ್ವೇದವಿಹಿತಂ ಕರ್ಮ ಪುಷ್ಪಸ್ಥಾನೀಯಂ ಪುಷ್ಪಮ್ ಇತ್ಯುಚ್ಯತೇ । ತಾ ಏವ ಸೋಮಾದ್ಯಾ ಅಮೃತಾ ಆಪಃ। ತಾನಿ ವಾ ಏತಾನಿ ಯಜೂಂಷಿ ಏತಂ ಯಜುರ್ವೇದಮ್ ಅಭ್ಯತಪನ್ ಇತ್ಯೇವಮಾದಿ ಸರ್ವಂ ಸಮಾನಮ್ ॥

(ಭಾಷ್ಯಾರ್ಥ)

ಇನ್ನು ಇವನ ದಕ್ಷಿಣದ ರಶ್ಮಿಗಳಿರುವವಲ್ಲ –ಎಂಬುದೇ ಮುಂತಾದ ಗ್ರಂಥವು (ಹಿಂದಿನದಕ್ಕೆ) ಸಮಾನವು. ಯಜುರ್ವೇದವಿಹಿತವಾದ ಕರ್ಮದಲ್ಲಿ ಪ್ರಯೋಗಿಸಿದ ಯಜುಸ್ಸುಗಳೇ ಭ್ರಮರಗಳು, ಹಿಂದೆ ಹೇಳಿದಂತೆ ಭ್ರಮರಗಳಂತೆ (ಎಂದು ಅರ್ಥಮಾಡಿಕೊಳ್ಳಬೇಕು). ಯಜುರ್ವೇದದಲ್ಲಿ ವಿಹಿತವಾಗಿರುವ ಕರ್ಮವು ಪುಷ್ಪದಂತೆ ಇರುವದರಿಂದ ಪುಷ್ಪವು ಎಂದಿದೆ. ಸೋಮವೇ ಮುಂತಾದ ಅವುಗಳೇ ಅಮೃತವಾದ ಅಪ್ಪು. 'ಆ ಈ ಯಜುಸ್ಸುಗಳು ಈ ಯಜುರ್ವೇದವನ್ನು ಅಭಿತಪಿಸಿದವು' ಎಂದು ಮುಂತಾಗಿರುವವೆಲ್ಲವೂ (ಹಿಂದಿನ ಗ್ರಂಥಕ್ಕೆ) ಸಮಾನವು.

(ಉಪನಿಷತ್ತು)

**ತದ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಶುಕ್ಲಗ್ಂ ರೂಪಮ್ ॥ ೩ ॥**

೩. ಅದು ಹೊರಟುಹೋಯಿತು. ಅದು ಆದಿತ್ಯನ ಹತ್ತಿರದಲ್ಲಿ ಆಶ್ರಯಿಸಿಕೊಂಡಿತು. ಆದಿತ್ಯನ ಬಿಳಿಯ ರೂಪವಿದೆಯಲ್ಲ, ಇದೇ ಅದು.

## ಆದಿತ್ಯನಲ್ಲಿ ಉಂಟಾದ ಎರಡನೆಯ ಅಮೃತ

(ಭಾಷ್ಯ)

೨೦೫. ಮಧು ಏತತ್ ಆದಿತ್ಯಸ್ಯ ದೃಶ್ಯತೇ ಶುಕ್ಲಂ ರೂಪಮ್ ॥

(ಭಾಷ್ಯಾರ್ಥ)

ಈ ಮಧುವು ಆದಿತ್ಯನ ಬಿಳಿಯ ರೂಪವಾಗಿ ಕಾಣಿಸುತ್ತಿದೆ.

---

# ಮೂರನೆಯ ಅಧ್ಯಾಯ - ಮೂರನೆಯ ಖಂಡ

(ಆದಿತ್ಯೋಪಾಸನೆ)

## ಮೂರನೆಯ ಅಮೃತದ ಉತ್ಪತ್ತಿ

(ಉಪನಿಷತ್ತು)

**ಅಥ ಯೇಽಸ್ಯ ಪ್ರತ್ಯಞ್ಚೋ ರಶ್ಮಯಸ್ತಾ ಏವಾಸ್ಯ ಪ್ರತೀಚ್ಯೋ ಮಧುನಾಡ್ಯಃ ಸಾಮಾನ್ಯೇವ ಮಧುಕೃತಃ ಸಾಮವೇದ ಏವ ಪುಷ್ಪಂ ತಾ ಅಮೃತಾ ಆಪಃ ॥೧॥**

**ತಾನಿ ವಾ ಏತಾನಿ ಸಾಮಾನ್ಯೇತಗ್ಂ ಸಾಮವೇದಮಭ್ಯತಪಗ್ಂ ಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಗ್ಂ ರಸೋಽಜಾಯತ ॥೨॥**

೧-೨. ಇನ್ನು ಈತನ ಪಶ್ಚಿಮದಿಕ್ಕಿನ ರಶ್ಮಿಗಳಿವೆಯಲ್ಲ, ಅವೇ ಇದರ ಪಶ್ಚಿಮದ ಮಧುನಾಡಿಗಳು ; ಸಾಮಗಳೇ ಮಧುವನ್ನುಂಟುಮಾಡುವ (ಭ್ರಮರ)ಗಳು ; ಸಾಮವೇದವೇ ಹೂವು. ಆ ಅಪ್ಪೇ ಅಮೃತವು. ಆ ಈ ಸಾಮಗಳು ಈ ಸಾಮವೇದವನ್ನು ಅಭಿತಪಿಸಿದವು. (ಹಾಗೆ) ಅಭಿತಪ್ತವಾದ ಆ (ಸಾಮವೇದದಿಂದ) ಯಶಸ್ಸು, ತೇಜವು, ಇಂದ್ರಿಯವು, ವೀರ್ಯವು, ಅನ್ನಾದ್ಯವು- ಎಂಬ ರಸವು ಉಂಟಾಯಿತು.

## ಸಾಮಗಳಿಂದ ಉಂಟಾಗುವ ರಸ

(ಭಾಷ್ಯ)

೨೦೬. ಅಥ ಯೇಽಸ್ಯ ಪ್ರತ್ಯಞ್ಚೋ ರಶ್ಮಯಃ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

'ಇನ್ನು ಈತನ ಪಶ್ಚಿಮದಿಕ್ಕಿನ ರಶ್ಮಿಗಳಿವೆಯಲ್ಲ ' ಎಂದು ಮುಂತಾಗಿರುವ (ಗ್ರಂಥವು ಹಿಂದಿನ ಗ್ರಂಥಕ್ಕೆ) ಸಮಾನವು.

(ಉಪನಿಷತ್ತು)

**ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯತೇತದಾ ದಿತ್ಯಸ್ಯ ಕೃಷ್ಣಗ್ಂ ರೂಪಮ್ ॥ ೩ ॥**

೩. ಅದು ಹೊರಟುಹೋಯಿತು. ಅದು ಆದಿತ್ಯನನ್ನು ಹತ್ತಿರದಲ್ಲಿ ಆಶ್ರಯಿಸಿಕೊಂಡಿತು. ಆದಿತ್ಯನ ಕರಿಯ ರೂಪವಿದೆ ಯಲ್ಲ, ಇದೇ ಅದು.

## ಆದಿತ್ಯನಲ್ಲಿ ಉಂಟಾದ ಮೂರನೆಯ ಅಮೃತ

(ಭಾಷ್ಯ)

೨೦೭. ತಥಾ ಸಾಮ್ನಾಂ ಮಧು ಏತತ್ ಆದಿತ್ಯಸ್ಯ ಕೃಷ್ಣಂ ರೂಪಮ್ ॥

(ಭಾಷ್ಯಾರ್ಥ)

ಒೀಗೆಯೇ ಸಾಮಗಳ ಮಧುವು ಈ ಆದಿತ್ಯನ ಕರಿಯ ರೂಪವು

---

# ಮೂರನೆಯ ಅಧ್ಯಾಯ - ನಾಲ್ಕನೆಯ ಖಂಡ

(ಆದಿತ್ಯೋಪಾಸನೆ)

## ನಾಲ್ಕನೆಯ ಅಮೃತದ ಉತ್ಪತ್ತಿ

(ಉಪನಿಷತ್ತು)

**ಅಥ ಯೇಽಸ್ಯೋದಞ್ಚೋ ರಶ್ಮಯಸ್ತಾ ಏವಾಸ್ಯೋದೀಚ್ಯೋ ಮಧುನಾಡ್ಯೋಽಥರ್ವಾಙ್ಗಿರಸ ಏವ ಮಧುಕೃತ ಇತಿಹಾಸ ಪುರಾಣಂ ಪುಷ್ಪಂ ತಾ ಅಮೃತಾ ಆಪಃ ॥ ೧ ॥**

**ತೇ ವಾ ಏತೇಽಥರ್ವಾಙ್ಗಿರಸ ಏತದಿತಿಹಾಸಪುರಾಣಮಭ್ಯ ತಪಗ್ಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯ ಮನ್ನಾದ್ಯಗ್ಂ ರಸೋಽಜಾಯತ ॥ ೨ ॥**

೧-೨. ಇನ್ನು ಈತನ ಉತ್ತರರಶ್ಮಿಗಳಿವೆಯಲ್ಲ, ಅವೇ ಇದರ ಉತ್ತರಮಧುನಾಡಿಗಳು ; ಅಥರ್ವಾಂಗಿರಸ್ಸುಗಳೇ ಮಧುವನ್ನುಂಟು ಮಾಡುವ (ಭ್ರಮರ)ಗಳು ; ಇತಿಹಾಸಪುರಾಣವು ಹೂವು ; ಆ ಅಪ್ಪೇ ಅಮೃತವು. ಆ ಈ ಅಥರ್ವಾಂಗಿರಸಗಳು ಈ ಇತಿಹಾಸಪುರಾಣವನ್ನು ಅಭಿತಪಿಸಿದವು. (ಹಾಗೆ) ಅಭಿತಪ್ತವಾದ (ಅದರಿಂದ) ಯಶಸ್ಸು, ತೇಜವು, ಇಂದ್ರಿಯ, ವೀರ್ಯ, ಅನ್ನಾದ್ಯ- ಎಂಬ ರಸವು ಉಂಟಾಯಿತು.

## ಅಥರ್ವಾಙ್ಗಿರಸ್ಸುಗಳಿಂದಾಗುವ ರಸ

(ಭಾಷ್ಯ)

೨೦೮ 'ಅಥ ಯೇಽಸ್ಯ ಉದಞ್ಚೋ ರಶ್ಮಯಃ' ಇತ್ಯಾದಿ ಸಮಾನಮ್ । ಅಥರ್ವಾಙ್ಗಿರಸಃ ಅಥರ್ವಣಾ ಅಙ್ಗಿರಸಾ ಚ ದೃಷ್ಟಾ ಮನ್ತ್ರಾ ಅಥರ್ವಾಙ್ಗಿರಸಃ ಕರ್ಮಣಿ ಪ್ರಯುಕ್ತಾಃ ಮಧುಕೃತಃ। ಇತಿಹಾಸಪುರಾಣಂ ಪುಷ್ಪಮ್ ತಯೋಶ್ಚ ಇತಿಹಾಸಪುರಾಣಯೋಃ ಅಶ್ವಮೇಧೇ ಪಾರಿಪ್ಲವಾಸು ರಾತ್ರಿಷು ಕರ್ಮಾಙ್ಗತ್ವೇನ ವಿನಿಯೋಗಃ (ಪ್ರ)[1] ಸಿದ್ಧಃ ॥

(ಭಾಷ್ಯಾರ್ಥ)

'ಇನ್ನು ಈತನ ಉತ್ತರರಶ್ಮಿಗಳಿವೆಯಲ್ಲ' ಎಂಬಿದೇ ಮುಂತಾದದ್ದು (ಹಿಂದಿನ ಗ್ರಂಥಕ್ಕೆ) ಸಮಾನ(ವಾಗಿದೆ).

ಅಥರ್ವಾಂಗಿರಸ್ಸುಗಳು ಎಂದರೆ ಅಥರ್ವ, ಮತ್ತು ಅಂಗಿರಸ್ಸು- ಇವರು ಕಂಡುಹಿಡಿದ ಮಂತ್ರಗಳು ಕರ್ಮದಲ್ಲಿ ಪ್ರಯುಕ್ತವಾದ (ಆ ಮಂತ್ರಗಳೇ) ಮಧುವನ್ನುಂಟುಮಾಡುವ (ತುಂಬಿಗಳು). ಇತಿಹಾಸಪುರಾಣವು ಪುಷ್ಪವು ಆ ಇತಿಹಾಸ ಪುರಾಣಗಳನ್ನು ಅಶ್ವಮೇಧದಲ್ಲಿ ಪಾರಿಪ್ಲವದ ರಾತ್ರಿಗಳಲ್ಲಿ[2] ಕರ್ಮಾಂಗವಾಗಿ ವಿನಿಯೋಗಿಸುವದು ಪ್ರಸಿದ್ಧವಾಗಿದೆ

(ಉಪನಿಷತ್ತು)

**ತದ್ವಾ ಏತದಕ್ಷರಂ ತತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಪರಂ ಕೃಷ್ಣಂ ರೂಪಮ್ ॥೩॥**

---

1. ಇಲ್ಲಿ ಪ್ರ ಎಂಬ ಉಪಸರ್ಗವು ಬಿಟ್ಟುಹೋಗಿರಬಹುದೆಂದು ತೋರುತ್ತದೆ.
2. ಅಶ್ವಮೇಧಯಾಗದಲ್ಲಿ ಪುತ್ರಾಮಾತ್ಯಸಹಿತನಾದ ರಾಜನಿಗೆ ಹೇಳಬೇಕಾದ ಕಥೆಗಳನ್ನು ಪಾರಿಪ್ಲವವೆನ್ನುವರು. ಸೂ. ಭಾ. ೩ ೪-೨೩ (ಭಾ. ಭಾ. ೪೬೬) ನೋಡಿ

೩. ಅದು ಹೊರಟುಹೋಯಿತು. ಆದಿತ್ಯನನ್ನು ಹತ್ತಿರದಲ್ಲಿ ಆಶ್ರಯಿಸಿಕೊಂಡಿತು. ಆದಿತ್ಯನ ಪರಕೃಷ್ಣರೂಪವಿದೆಯಲ್ಲ, ಇದೇ ಅದು.

## ಆದಿತ್ಯನಲ್ಲಿ ಉಂಟಾಗಿರುವ ನಾಲ್ಕನೆಯ ಅಮೃತ

(ಭಾಷ್ಯ)

೩೧೯. ಮಧು ಏತದಾದಿತ್ಯಸ್ಯ ಪರಂ ಕೃಷ್ಣಂ ರೂಪಮ್। ಅತಿಶಯೇನ ಕೃಷ್ಣಮ್ ಇತ್ಯರ್ಥಃ ॥

(ಭಾಷ್ಯಾರ್ಥ)

(ಇಲ್ಲಿ) ಮಧು (ಯಾವದೆಂದರೆ) ಈ ಆದಿತ್ಯನ ಪರಕೃಷ್ಣರೂಪವು, ಹೆಚ್ಚಾಗಿ ಕಪ್ಪಾಗಿರುವ ರೂಪವಿದೆಯಲ್ಲ (ಅದು) ಎಂದರ್ಥ.

---

# ಮೂರನೆಯ ಅಧ್ಯಾಯ-ಐದನೆಯ ಖಂಡ

(ಆದಿತ್ಯೋಪಾಸನೆ)

## ಐದನೆಯ ಅಮೃತದ ಉತ್ಪತ್ತಿ

(ಉಪನಿಷತ್ತು)

**ಅಥ ಯೇಽಸ್ಯೋರ್ಧ್ವಾ ರಶ್ಮಯಸ್ತಾ ಏವಾಸ್ಯೋರ್ಧ್ವಾ ಮಧು ನಾಡ್ಯೋ ಗುಹ್ಯಾ ಏವಾದೇಶಾ ಮಧುಕೃತೋ ಬ್ರಹ್ಮೈವ ಪುಷ್ಪಂ ತಾ ಅಮೃತಾ ಆಪಃ ॥೧॥**

**ತೇ ವಾ ಏತೇ ಗುಹ್ಯಾ ಆದೇಶಾ ಏತದ್ಬ್ರಹ್ಮಾಭ್ಯತಪಗ್ಂ ಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇನ್ದ್ರಿಯಂ ವೀರ್ಯಮನ್ನಾದ್ಯಗ್ಂ ರಸೋಽಜಾಯತ ॥೨॥**

೧-೨. ಇನ್ನು ಈತನ ಮೇಲುಗಡೆಯ ರಶ್ಮಿಗಳಿರುವವಲ್ಲ, ಅವೇ ಮೇಲಿನ ಮಧುನಾಡಿಗಳು; ಗುಹ್ಯಾದೇಶಗಳೇ ಮಧುವನ್ನುಂಟು ಮಾಡುವ (ಭ್ರಮರ)ಗಳು; ಬ್ರಹ್ಮವೇ ಪುಷ್ಪವು, ಆ ಅಪ್ಪೇ

ಅಮೃತವು. ಆ ಈ ಗುಹ್ಯಾದೇಶಗಳು ಈ ಬ್ರಹ್ಮವನ್ನು ಅಭಿತಪಿಸಿದವು. (ಹಾಗೆ) ಅಭಿತಪ್ತವಾದ ಆ (ಬ್ರಹ್ಮ)ದಿಂದ ಯಶಸ್ಸು, ತೇಜ, ಇಂದ್ರಿಯ, ವೀರ್ಯ, ಅನ್ನಾದ್ಯ- ಎಂಬ ರಸವು ಉಂಟಾಯಿತು.

## ಗುಹ್ಯಾದೇಶಗಳಿಂದಾದ ರಸ

(ಭಾಷ್ಯ)

೨೧೦. ಅಥ ಯೇಽಸ್ಯ ಊರ್ಧ್ವಾ ರಶ್ಮಯ ಇತ್ಯಾದಿ ಸಮಾನಮ್। ಗುಹ್ಯಾ ಗೋಪ್ಯಾ ರಹಸ್ಯಾ ಏವ ಆದೇಶಾಃ ಲೋಕದ್ವಾರೀಯಾದಿವಿಧಯಃ, ಉಪಾಸನಾನಿ ಚ ಕರ್ಮಾಙ್ಗವಿಷಯಾಣಿ ಮಧುಕೃತಃ। ಬ್ರಹ್ಮೈವ ಶಬ್ದಾಧಿಕಾರಾತ್ ಪ್ರಣವಾಖ್ಯಂ ಪುಷ್ಪಮ್। ಸಮಾನಮನ್ಯತ್ ॥

(ಭಾಷ್ಯಾರ್ಥ)

'ಇನ್ನು ಈತನ ಮೇಲುಗಡೆಯಿರುವ ರಶ್ಮಿಗಳಿರುವವಲ್ಲ' ಎಂಬುದೇ ಮುಂತಾದದ್ದು (ಹಿಂದಿನ ಗ್ರಂಥಕ್ಕೆ) ಸಮಾನ(ವಾಗಿದೆ) ಗುಹ್ಯವಾದ, ಎಂದರೆ ಗೋಪ್ಯವಾಗಿರುವ, ಗುಟ್ಟಾಗಿರುವ ಆದೇಶಗಳೇ, ಎಂದರೆ ಲೋಕದ್ವಾರಕ್ಕೆ ಸಂಬಂಧಪಟ್ಟಿರುವದೇ ಮುಂತಾದ ವಿಧಿಗಳು[1] ಕರ್ಮಾಂಗವಿಷಯವಾದ ಉಪಾಸನಗಳೂ[2] (ಇಲ್ಲಿ) ಮಧುವನ್ನುಂಟುಮಾಡುವ (ತುಂಬಿಗಳು). ಬ್ರಹ್ಮವೇ ಎಂದರೆ (ಇದು) ಶಬ್ದದ ಪ್ರಕರಣವಾಗಿರುವದರಿಂದ ಪ್ರಣವವೆಂಬ (ಬ್ರಹ್ಮವೇ) ಹೂವು. ಮಿಕ್ಕದ್ದೆಲ್ಲವೂ ಸಮಾನವು.

(ಉಪನಿಷತ್ತು)

**ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಮಧ್ಯೇ ಕ್ಷೋಭತ ಇವ ॥ ೩ ॥**

೩. ಅದು ಹೊರಟುಹೋಯಿತು. ಅದು ಆದಿತ್ಯನನ್ನು ಹತ್ತಿರದಲ್ಲಿ ಆಶ್ರಯಿಸಿಕೊಂಡಿತು. ಆದಿತ್ಯನ ನಡುವೆ ಹರಿದಾಡುವಂತೆ ಕಾಣುತ್ತಿರುವದಲ್ಲ, ಇದೇ ಅದು.

---

1. ಹಿಂದಿನ ಅಧ್ಯಾಯದಲ್ಲಿ ೨೪ನೆಯ ಖಂಡದಲ್ಲಿ ಹೇಳಿರುವ ರಹಸ್ಯಗಳು.

2. ಇದುವರೆಗೆ ಸಾಮಾವಯವಗಳ ವಿಷಯವಾದ ಉಪಾಸನೆಗಳನ್ನು ಹೇಳಿದೆಯಷ್ಟೆ, ಅವೆಲ್ಲ ಗುಹ್ಯಾದೇಶಗಳೇ.

## ಆದಿತ್ಯನಲ್ಲಿ ಉಂಟಾಗಿರುವ ಐದನೆಯ ಅಮೃತ

(ಭಾಷ್ಯ)

೨೧೧. ಮಧು ಏತತ್ ಆದಿತ್ಯಸ್ಯ ಮಧ್ಯೇ ಕ್ಷೋಭತ ಇವ ಸಮಾಹಿತ ದೃಷ್ಟೇರ್ದೃಶ್ಯತೇ ಸಂಚಲತೀವ ॥

(ಭಾಷ್ಯಾರ್ಥ)

ಆದಿತ್ಯನ ನಡುವೆ ಹರಿದಾಡುತ್ತಿರುವಂತೆ ಚಲಿಸುತ್ತಿರುವಂತೆ ಅಲ್ಲಿಯೇ ನೆಟ್ಟ ದೃಷ್ಟಿಯವನಿಗೆ ಕಾಣಿಸುತ್ತದೆಯಲ್ಲ, ಇದೇ (ಆ) ಮಧು

## ಅಮೃತಗಳ ಸ್ತುತಿ

(ಉಪನಿಷತ್ತು)

**ತೇ ವಾ ಏತೇ ರಸಾನಾಗ್ಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾ ಹ್ಯಮೃತಾಸ್ತೇಷಾಮೇತಾನ್ಯಮೃತಾನಿ ॥ ೪ ॥**

೪. ಆ ಇವು ರಸಗಳ ರಸಗಳು. ವೇದಗಳು ರಸಗಳಷ್ಟೆ, ಅವುಗಳಿಗೆ ಇವು ರಸಗಳು ಆ ಇವು ಅಮೃತಗಳ ಅಮೃತಗಳು. ವೇದಗಳು ಅಮೃತಗಳಷ್ಟೆ, ಅವುಗಳಿಗೆ ಇವು ಅಮೃತಗಳು.

## ರೋಹಿತಾದಿಗಳ ಸ್ತುತಿಯ ದ್ವಾರದಿಂದ ಕರ್ಮಸ್ತುತಿ

(ಭಾಷ್ಯ)

೨೧೨ ತೇ ವಾ ಏತೇ ಯಥೋಕ್ತಾ ರೋಹಿತಾದಿರೂಪವಿಶೇಷಾಃ ರಸಾನಾಂ ರಸಾಃ। ಕೇಷಾಂ ರಸಾನಾಮಿತಿ ? ಆಹ। ವೇದಾ ಹಿ ಯಸ್ಮಾತ್ ಲೋಕನಿಷ್ಪನ್ನತ್ವಾತ್ ಸಾರಾಃ ಇತಿ ರಸಾಃ। ತೇಷಾಂ ರಸಾನಾಂ ಕರ್ಮಭಾವಮಾಪನ್ನಾನಾಮಪಿ ಏತೇ ರೋಹಿತಾದಿವಿಶೇಷಾಃ ರಸಾಃ। ಅತ್ಯಂತಸಾರಭೂತಾ ಇತ್ಯರ್ಥಃ। ತಥಾ ಅಮೃತಾನಾಮ್ ಅಮೃತಾನಿ। ವೇದಾ ಹಿ ಅಮೃತಾಃ ನಿತ್ಯತ್ವಾತ್। ತೇಷಾಮ್ ಏತಾನಿ ರೋಹಿತಾದೀನಿ ರೂಪಾಣಿ ಅಮೃತಾನಿ। ರಸಾನಾಂ ರಸಾ ಇತ್ಯಾದಿ ಕರ್ಮಸ್ತುತಿರೇಷಾ। ಯಸ್ಯೈವಂವಿಶಿಷ್ಟಾನಿ ಅಮೃತಾನಿ ಫಲಮಿತಿ ॥

(ಭಾಷ್ಯಾರ್ಥ)

ಆ ಈ ರೋಹಿತಾದಿರೂಪವಿಶೇಷಗಳು ರಸಗಳ ರಸಗಳು. ಯಾವ ರಸಗಳ (ರಸ)ಗಳು ? ಎಂದರೆ (ಶ್ರುತಿ) ಹೇಳುತ್ತದೆ. (ಹಿ= ಯಸ್ಮಾತ್) ವೇದಗಳು

ಲೋಕಗಳಿಂದ ಹೊರಟಿರುವದರಿಂದ[1] (ಅವುಗಳ) ಸಾರವಾಗಿರುತ್ತವೆಯಾಗಿ ರಸಗಳು ಕರ್ಮಭಾವವನ್ನು ಹೊಂದಿದ[2] ಆ ರಸಗಳಿಗೂ ಈ ಕೆಂಪು(ರೂಪ)ವೇ ಮುಂತಾದವುಗಳು ರಸಗಳು. ಅತ್ಯಂತಸಾರಭೂತವಾದವುಗಳು ಎಂದರ್ಥ ಮತ್ತು ಅಮೃತಗಳ ಅಮೃತಗಳು ವೇದಗಳು ನಿತ್ಯವಾಗಿರುವದರಿಂದ ಅಮೃತಗಳಷ್ಟೆ ? ಅವುಗಳಿಗೂ ಈ ಕೆಂಪು ಮುಂತಾದ ರೂಪವಿಶೇಷಗಳು ಅಮೃತಗಳು.

'ರಸಗಳಿಗೂ ರಸಗಳು' – ಎಂದು ಮುಂತಾಗಿ ಇಂಥ ವಿಶಿಷ್ಟವಾದ ಅಮೃತ ಫಲಗಳಿವೆ ಎಂದು –ಕರ್ಮವನ್ನು ಸ್ತುತಿಸ್ಯೆದಿರುವದಿದು

---

# ಮೂರನೆಯ ಅಧ್ಯಾಯ–ಆರನೆಯ ಖಂಡ

(ಆದಿತ್ಯೋಪಾಸನೆ)

## ವಸುಗಳಿಗೆ ಪ್ರಥಮಾಮೃತದಿಂದ ತೃಪ್ತಿ

(ಉಪನಿಷತ್ತು)

**ತದ್ಯತ್ಪ್ರಥಮಮಮೃತಂ ತದ್ವಸವ ಉಪಜೀವನ್ತ್ಯಗ್ನಿನಾ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ ॥೧॥**

೧. ಅವುಗಳೊಳಗೆ ಒಂದನೆಯ ಅಮೃತವಿದೆಯಲ್ಲ, ಅದನ್ನು ವಸುಗಳು ಅಗ್ನಿಮುಖರಾಗಿ ಉಪಜೀವಿಸಿಕೊಂಡಿರುತ್ತಾರೆ. ದೇವತೆಗಳು ಉಣ್ಣುವದಿಲ್ಲ, ಕುಡಿಯುವದಿಲ್ಲ ; ಈ ಅಮೃತವನ್ನೇ ಕಂಡು ತೃಪ್ತರಾಗುತ್ತಾರೆ.

(ಭಾಷ್ಯ)

೨೧೩. ತತ್ ತತ್ರ ಯತ್ ಪ್ರಥಮಮಮೃತಂ ರೋಹಿತರೂಪಲಕ್ಷಣಮ್, ತದ್ ವಸವಃ ಪ್ರಾತಃಸವನೇಶಾನಾಃ ಉಪಜೀವನ್ತಿ ಅಗ್ನಿನಾ ಮುಖೇನ ಅಗ್ನಿನಾ ಪ್ರಧಾನಭೂತೇನ। ಅಗ್ನಿಪ್ರಧಾನಾಃ ಸನ್ತ ಉಪಜೀವನ್ತಿ ಇತ್ಯರ್ಥಃ। "ಅನ್ನಾದ್ಯಂ

---

1 ೨-೨೩-೨ ರಲ್ಲಿ ಇದನ್ನು ಹೇಳಿದೆ.

2. ಕರ್ಮಾಂಗಭಾವವನ್ನು ಹೊಂದಿದ ಎಂದರ್ಥ. ಕರ್ಮಾಙ್ಗಭಾವಮಾಪನ್ನಾನಾಮ್ ಎಂದೇ ಮೂಲಭಾಷ್ಯದಲ್ಲಿದ್ದೀತೋ ಏನೋ.

ರಸೋಽಜಾಯತ" (೩-೨-೩.) ಇತಿ ವಚನಾತ್ ಕಬಲಗ್ರಾಹಮ್ ಅಶ್ನನ್ತಿ ಇತಿ ಪ್ರಾಪ್ತಮ್। ತತ್ ಪ್ರತಿಷಿಧ್ಯತೇ ನ ವೈ ದೇವಾಃ ಅಶ್ನನ್ತಿ ನ ಪಿಬನ್ತೀತಿ। ಕಥಂ ತರ್ಹಿ ಉಪಜೀವನ್ತೀತಿ ? ಉಚ್ಯತೇ। ಏತದೇವ ಹಿ ಯಥೋಕ್ತಮ್ ಅಮೃತಂ ರೋಹಿತಂ ರೂಪಂ ದೃಷ್ಟ್ವಾ ಉಪಲಭ್ಯ ಸರ್ವಕರಣೈಃ ಅನುಭೂಯ ತೃಪ್ಯನ್ತಿ। ದೃಶೇಃ ಸರ್ವಕರಣದ್ವಾರೋಪಲಬ್ಧ್ಯರ್ಥತ್ವಾತ್। ನನು ರೋಹಿತಂ ರೂಪಂ ದೃಷ್ಟ್ವಾ ಇತ್ಯುಕ್ತಮ್। ಕಥಮ್ ಅನ್ಯೇನ್ದ್ರಿಯವಿಷಯತ್ವಂ ರೂಪಸ್ಯೇತಿ ? ನ ಯಶಆದೀನಾಂ ಶ್ರೋತ್ರಾದಿಗಮ್ಯತ್ವಾತ್। ಶ್ರೋತ್ರಗ್ರಾಹ್ಯಂ ಯಶಃ। ತೇಜೋ ರೂಪಂ ಚಾಕ್ಷುಷಮ್। ಇನ್ದ್ರಿಯಂ ವಿಷಯಗ್ರಹಣಕಾರ್ಯಾನುಮೇಯಂ ಕರಣಸಾಮರ್ಥ್ಯಮ್। ವೀರ್ಯಂ ಬಲಂ ದೇಹಗತ ಉತ್ಸಾಹಃ ಪ್ರಾಣವತ್ತಾ। ಅನ್ನಾದ್ಯಂ ಪ್ರತ್ಯಹಮ್ ಉಪಜೀವ್ಯಮಾನಂ ಶರೀರಸ್ಥಿತಿಕರಂ ಯದ್ ಭವತಿ। ರಸೋ ಹಿ ಏವಮಾತ್ಮಕಃ ಸರ್ವಃ। ಯಂ ದೃಷ್ಟ್ವಾ ತೃಪ್ಯನ್ತಿ ಸರ್ವೇ। ದೇವಾ ದೃಷ್ಟ್ವಾ ತೃಪ್ಯನ್ತಿ ಇತಿ ಏತತ್ಸರ್ವಂ ಸ್ವಕರಣೈರನುಭೂಯ ತೃಪ್ಯನ್ತಿ ಇತ್ಯರ್ಥಃ। ಆದಿತ್ಯಸಂಶ್ರಯಾಃ ಸನ್ತೋ ವೈಗನ್ಧ್ಯಾದಿದೇಹಕರಣದೋಷರಹಿತಾಶ್ಚ ॥

(ಭಾಷ್ಯಾರ್ಥ)

(ತತ್-ತತ್ರ) ಅವುಗಳೊಳಗೆ ಕೆಂಪುಬಣ್ಣದ ಸ್ವರೂಪವುಳ್ಳ ಒಂದನೆಯ ಅಮೃತವಿದೆಯಲ್ಲ, ಅದನ್ನು ಪ್ರಾತಃಸವನಕ್ಕೆ ಒಡೆಯರಾದ ವಸುಗಳು ಉಪಜೀವಿಸಿ ಕೊಂಡಿರುತ್ತಾರೆ, ಅಗ್ನಿಮುಖರಾಗಿ ಎಂದರೆ ಅಗ್ನಿಯನ್ನೇ ಪ್ರಧಾನನನ್ನಾಗಿ ಮಾಡಿ ಕೊಂಡು, ಅಗ್ನಿಯನ್ನು ಮುಂದಾಳಾಗಿಮಾಡಿಕೊಂಡು ಉಪಜೀವಿಸುತ್ತಾರೆ ಎಂದರ್ಥ

'ಅನ್ನಾದ್ಯವೆಂಬ ರಸವು ಉಂಟಾಯಿತು' (೩-೨-೩ ) ಎಂದು ಹೇಳಿರು ವದರಿಂದ ತುತ್ತುಮಾಡಿ ತೆಗೆದುಕೊಂಡು ಊಟಮಾಡುತ್ತಾರೆ ಎಂದಾಯಿತಷ್ಟೆ, ಅದನ್ನು- ದೇವತೆಗಳು ಉಣ್ಣುವದೂ ಇಲ್ಲ, ಕುಡಿಯುವದೂ ಇಲ್ಲ ಎಂದು- (ಶ್ರುತಿಯು) ಅಲ್ಲಗಳೆಯುತ್ತದೆ ಹಾಗಾದರೆ (ಅವರು) ಮತ್ತೆ ಹೇಗೆ (ಅದನ್ನು) ಉಪಜೀವಿಸಿಕೊಂಡಿರುತ್ತಾರೆ ? ಎಂದರೆ (ಶ್ರುತಿ) ಹೇಳುತ್ತದೆ. ಮೇಲೆ ಹೇಳಿದ ಕೆಂಪುಬಣ್ಣವೆಂಬ ಈ ಅಮೃತವನ್ನೇ ಕಂಡು, ಸರ್ವಕರಣಗಳಿಂದಲೂ ಅನುಭವಿಸಿ, ತೃಪ್ತರಾಗುತ್ತಾರೆ (ಎಂದರ್ಥ) ಏಕೆಂದರೆ ದೃಶ್ (ನೋಡು ಎಂಬ ಧಾತುವಿಗೆ) ಎಲ್ಲಾ ಕರಣಗಳ ಮೂಲಕವೂ ಅನುಭವಿಸುವದು ಎಂದೇ ಅರ್ಥ.

(ಆಕ್ಷೇಪ) :- 'ರೋಹಿತರೂಪವನ್ನು ಕಂಡು' ಎಂದು ಹೇಳಿರುತ್ತದೆ ರೂಪವು ಮಿಕ್ಕ ಇಂದ್ರಿಯಗಳಿಗೂ ಹೇಗೆ ವಿಷಯ(ವಾದೀತು) ?

(ಪರಿಹಾರ) :– ಹಾಗಲ್ಲ ಏಕೆಂದರೆ ಯಶಸ್ಸೇ ಮುಂತಾದ ಶ್ರೋತ್ರಾದಿಗಳಿಂದ ಅರಿತುಕೊಳ್ಳತಕ್ಕವಾಗಿವೆ. ಯಶಸ್ಸು ಶ್ರೋತ್ರದಿಂದ ಗ್ರಹಿಸತಕ್ಕದ್ದು ; ತೇಜಸ್ಸೆಂಬ ರೂಪವು ಚಕ್ಷುಸ್ಸಿಗೆ ಸಂಬಂಧಪಟ್ಟದ್ದು ಇಂದ್ರಿಯವೆಂಬುದು ವಿಷಯಗಳನ್ನು ಗ್ರಹಿಸುವದೆಂಬ ಕಾರ್ಯದಿಂದ ಅನುಮೇಯಿಸಿ (ಅರಿತುಕೊಳ್ಳ)ಬೇಕಾಗಿರುವ ಕರಣಸಾಮರ್ಥ್ಯವು, ವೀರ್ಯವೆಂಬುದು ಬಲವು, ದೇಹದಲ್ಲಿರುವ ಉತ್ಸಾಹವು, ಪ್ರಾಣವುಳ್ಳವನಾಗಿರುವದು, ಅನ್ನಾದ್ಯವೆಂಬುದು ಪ್ರತಿದಿನವೂ ತಿಂದು ಜೀವಿಸಿದರೆ ಶರೀರವು ಇದ್ದುಕೊಂಡಿರುವದಕ್ಕೆ ಕಾರಣವಾಗಿರುವದಲ್ಲ, (ಅದು) ಈ ಎಲ್ಲಾ ರೂಪದಿಂದಲೂ ಇರುವದೇ ರಸವು, ಅದನ್ನು ಕಂಡು ಎಲ್ಲಾ (ದೇವತೆಗಳೂ) ತೃಪ್ತರಾಗುತ್ತಾರೆ (ಆದ್ದರಿಂದ) 'ದೇವತೆಗಳು ಕಂಡು ತೃಪ್ತರಾಗುತ್ತಾರೆ' ಎಂದರೆ ಇದೆಲ್ಲವನ್ನೂ ತಮ್ಮ ಕರಣಗಳಿಂದ ಅನುಭವಿಸಿ ತೃಪ್ತರಾಗುತ್ತಾರೆ ಎಂದರ್ಥ, ಆದಿತ್ಯನನ್ನು ಆಶ್ರಯಿಸಿಕೊಂಡವರಾಗಿ ದುರ್ಗಂಧವೇ ಮುಂತಾದ ದೇಹಕರಣಗಳ ದೋಷಗಳೂ ಇಲ್ಲದವರಾಗಿ (ಇದನ್ನು ಅನುಭವಿಸಿ ತೃಪ್ತರಾಗುತ್ತಿದಾರೆ ಎಂದರ್ಥ) [1]

(ಉಪನಿಷತ್ತು)

**ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ ॥**

೨. ಅವರು ಈ ರೂಪವನ್ನೇ ಅಭಿಸಂವೇಶನಮಾಡುತ್ತಾರೆ, ಈ ರೂಪದಿಂದಲೇ ಮೇಲಕ್ಕೇಳುತ್ತಾರೆ.

## ವಸುಗಳಿಗೆ ಪ್ರಾತಃಸವನಕಾಲದಲ್ಲಿ ಮಾತ್ರ ಭೋಗ

(ಭಾಷ್ಯ)

೨೧೪. ಕಿಂ ತೇ ನಿರುದ್ಯಮಾ ಅಮೃತಮ್ ಉಪಜೀವನ್ತಿ ? ನ। ಕಥಂ ತರ್ಹಿ, ಏತದೇವ ರೂಪಮ್ ಅಭಿಲಕ್ಷ್ಯ ಅಧುನಾ ಭೋಗಾವಸರೋ ನಾಸ್ಮಾಕಮ್ ಇತಿ ಬುದ್ಧ್ವಾ ಅಭಿಸಂವಿಶನ್ತಿ ಉದಾಸತೇ। ಯದಾ ಚೈ[2]ತಸ್ಯ ಅಮೃತಸ್ಯ ಭೋಗಾವಸರೋ ಭವೇತ್ ತದಾ ಏತಸ್ಮಾತ್ (ರೂಪಾತ್)[3] ಅಮೃತಾತ್। ಅಮೃತಭೋಗನಿಮಿತ್ತಮ್ ಇತ್ಯರ್ಥಃ। ಏತಸ್ಮಾತ್ ರೂಪಾತ್ ಉದ್ಯನ್ತಿ

---

1. ತಿಂದೂಕುಡಿದೂಮಾಡುವ ಜೀವರುಗಳಿಗೆ ದೇಹಕರಣಗಳ ದುರ್ವಾಸನೆಯೇ ಮುಂತಾದ ದೋಷಗಳಿರುವಂತೆ ವಸ್ವಾದಿಗಳಲ್ಲಿರುವದಿಲ್ಲ ಎಂಬುದು ವಾಕ್ಯಾರ್ಥ.
2. ಚಶಬ್ದವಿರುವ ಪಾಠವೇ ವಾಶಬ್ದಯುಕ್ತಪಾಠಕ್ಕಿಂತ ಮೇಲು.
3. ಅನುವಾದದ ಟಿಪ್ಪಣಿಯನ್ನು ನೋಡಿ.

ಉತ್ಸಾಹವನ್ತೋ ಭವನ್ತಿ ಇತ್ಯರ್ಥಃ। ನ ಹಿ ಅನುತ್ಸಾಹವತಾಮ್ ಅನನುತಿಷ್ಠ ತಾಮ್ ಅಲಸಾನಾಂ ಭೋಗಪ್ರಾಪ್ತಿಃ ಲೋಕೇ ದೃಷ್ಟಾ ॥

(ಭಾಷ್ಯಾರ್ಥ)

ಅವರು (ಯಾವ) ಪ್ರಯತ್ನವೂ ಇಲ್ಲದೆ ಅಮೃತವನ್ನು ಉಪಜೀವಿಸಿ ಕೊಂಡಿರುತ್ತಾರೇನು? ಎಂದರೆ ಇಲ್ಲ ಮತ್ತೆ ಹೇಗೆಂದರೆ, ಇದೇ ರೂಪವನ್ನು ಲಕ್ಷ್ಯದಲ್ಲಿಟ್ಟು, ಈಗ ನಮಗೆ ಭೋಗಕ್ಕೆ ಕಾಲವಲ್ಲವೆಂದು ಅರಿತುಕೊಂಡು[1] ಅಭಿಸಂವೇಶನಮಾಡುವರು, ಉದಾಸೀನರಾಗುತ್ತಾರೆ ಮತ್ತು ಯಾವಾಗ ಈ ಅಮೃತದ ಭೋಗದ ಕಾಲವು ಆಗುವದೋ, ಆಗ ಈ (ರೂಪದಿಂದ) ಅಮೃತದಿಂದ, (ಈ) ಅಮೃತಭೋಗದ ನಿಮಿತ್ತವಾಗಿ ಎಂದರ್ಥ.[2] ಈ ರೂಪ(ನಿಮಿತ್ತ)ದಿಂದ[3] ಮೇಲಕ್ಕೇಳುತ್ತಾರೆ, ಉತ್ಸಾಹವಂತರಾಗುತ್ತಾರೆ ಎಂದರ್ಥ. ಉತ್ಸಾಹವಿಲ್ಲದವ ರಿಗೆ, (ಏನೂ) ಮಾಡದೆ ಅಲಸರಾಗಿ ಇರುವವರಿಗೆ ಲೋಕದಲ್ಲಿ ಭೋಗವು ಪ್ರಾಪ್ತ ವಾಗುವದು ಕಂಡಿಲ್ಲವಷ್ಟೆ[4] ?

## ಪ್ರಥಮಾಮೃತೋಪಾಸಕನಿಗೆ ಫಲ

(ಉಪನಿಷತ್ತು)

**ಸ ಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ ರೂಪಾ ದುದೇತಿ ॥ ೩ ॥**

೩. ಯಾವನು ಈ ಅಮೃತವನ್ನು ಹೀಗೆಂದು ಅರಿತುಕೊಳ್ಳು ವನೋ, ಅವನು ವಸುಗಳಲ್ಲಿಯೇ ಒಂದಾಗಿ ಅಗ್ನಿಮುಖನಾಗಿಯೇ

---

1. ಅಭಿಸಂವಿಶನ್ತಿ ಎಂಬಲ್ಲಿ ಅಭಿ ಎಂಬ ಉಪಸರ್ಗದ ಬಲದಿಂದ, ತಮ್ಮತಮ್ಮ ಸವನದಕಾಲವು ಬರುವವರೆಗೂ ಸುಮ್ಮನಿರುತ್ತಾರೆ ಎಂಬರ್ಥವು ಹೊರಡುತ್ತದೆ ಎಂದು ಭಾವ.

2 ಇಲ್ಲಿ 'ಅಮೃತಾತ್ ಅಮೃತಭೋಗನಿಮಿತ್ತಮ್ ಇತ್ಯರ್ಥಃ।' ಎಂದಿಷ್ಟೇ ಇರು ವದರಿಂದ ಇಲ್ಲಿ ಅಮೃತವೆಂಬ ಮಾತಿನ ವ್ಯಾಖ್ಯಾನಮಾಡಿದೆ ಎಂತ ತೋರುತ್ತದೆ, ಆದರೆ ಉಪನಿಷತ್ತಿನಲ್ಲಿ ರೂಪಾತ್ ಎಂದೇ ಇದೆ, ಅಮೃತಾತ್ ಎಂದಿಲ್ಲ, ಆದ್ದರಿಂದ ಏತಸ್ಮಾತ್ ರೂಪಾತ್ ಅಮೃತಾತ್ ಎಂದು ಮೂಲಭಾಷ್ಯದಲ್ಲಿದ್ದ ಪಂಚಮೀವಿಭಕ್ತಿಯು ನಿಮಿತ್ತಾರ್ಥದಲ್ಲಿ ಬಂದಿದೆ ಎಂದು ಸೂಚಿಸುವದಕ್ಕೇ ಈ ವ್ಯಾಖ್ಯಾನಭಾಷ್ಯವು ಬಂದಿದೆ ಎಂದು ಕಲ್ಪಿಸಿದರೆ ಸಮಂಜಸವಾಗುತ್ತದೆ.

3. ಇದು ವ್ಯಾಖ್ಯಾನಮಾಡಿದ್ದರ ಅನುವಾದಮಾತ್ರ.

4. ಈ ಲೋಕಪ್ರಸಿದ್ಧಿಯಿಂದಲೂ ಅವರು ಆಗ ಉತ್ಸಾಹವಂತರಾಗುತ್ತಾರೆ ಎಂದು ಕಲ್ಪಿಸಬಹುದಾಗಿದೆ. , ಅದು ಶ್ರುತ್ಯನುಕೂಲವೂ ಆಗಿದೆ ಎಂದು ಭಾವ.

ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ. ಅವನು ಇದೇ ರೂಪವನ್ನು ಅಭಿಸಂವೇಶನಮಾಡುತ್ತಾನೆ. ಈ ರೂಪದಿಂದಲೇ ಮೇಲಕ್ಕೇಳುತ್ತಾನೆ.

## ಉಪಾಸನಾಪ್ರಕಾರವೂ ಫಲವೂ

(ಭಾಷ್ಯ)

೨೧೫. ಸ ಯಃ ಕಶ್ಚಿತ್ ಏತದೇವಂ ಯಥೋದಿತಮ್ ಋಙ್ಮಧುಕರತಾಪ ರಸಸಂಕ್ಷರಣಮ್ ಋಗ್ವೇದವಿಹಿತಕರ್ಮಪುಷ್ಪಾತ್ ತಸ್ಯ ಚ ಆದಿತ್ಯಸಂಶ್ರಯಣಂ ರೋಹಿತರೂಪತ್ವಂ ಚ ಅಮೃತಸ್ಯ ಪ್ರಾಚೀದಿಗ್ಗತರಶ್ಮಿನಾಡೀಸಂಸ್ಥತಾಂ ವಸುದೇವ ಭೋಗ್ಯತಾಂ ತದ್ವಿದಶ್ಚ ವಸುಭಿಃ ಸಹೈಕತಾಂ ಗತ್ವಾ ಅಗ್ನಿನಾ ಮುಖೇನ ಉಪ ಜೀವನಂ ದರ್ಶನಮಾತ್ರೇಣ ತೃಪ್ತಿಂ ಚ ಸ್ವಭೋಗಾವಸರೇ ಉದ್ಯಮನಂ ತತ್ಕಾಲಾ ಪಾಯೇ ಚ ಸಂವೇಶನಂ ವೇದ, ಸೋಽಪಿ ವಸುವತ್ ಸರ್ವಂ ತಥೈವ ಅನುಭವತಿ ॥

(ಭಾಷ್ಯಾರ್ಥ)

ಯಾವನು ಹೀಗೆ ಈ ಮೇಲೆ ಹೇಳಿದಂತೆ ಈ ಅಮೃತವನ್ನು—ಋಕ್ಕು ಗಳೆಂಬ ತುಂಬಿಗಳು ತಾಪಮಾಡುವದು, ಋಗ್ವೇದವಿಹಿತವಾದ ಕರ್ಮವೆಂಬ ಹೂವಿನಿಂದ ರಸವು ಜಿನುಗುವದು, ಅದು ಆದಿತ್ಯನನ್ನು ಆಶ್ರಯಿಸಿಕೊಂಡಿರುವದು, ಕೆಂಪುರೂಪದ್ದಾಗಿರುವದು, (ಆ) ಅಮೃತವು ಪೂರ್ವದಿಕ್ಕಿನಲ್ಲಿರುವ ರಶ್ಮಿಗಳೆಂಬ ನಾಡಿಗಳಲ್ಲಿರುವದು, ವಸುಗಳೆಂಬ ದೇವತೆಗಳಿಗೆ ಭೋಗ್ಯವಾಗಿರುವದು, ಅದನ್ನು ಅರಿತುಕೊಂಡ (ಉಪಾಸಕನು) ವಸುಗಳಲ್ಲಿ ಒಂದಾಗಿ ಅಗ್ನಿಮುಖವಾಗಿ (ಅಮೃತ ವನ್ನು) ಉಪಜೀವಿಸುವದು, (ಅದನ್ನು) ನೋಡಿದಮಾತ್ರದಿಂದಲೇ ತೃಪ್ತಿಯಾಗು ವದು, ತನ್ನ ಭೋಗದ ಕಾಲಕ್ಕೆ ಉತ್ಸಾಹಶೀಲನಾಗುವದು, ಆ ಕಾಲವು ಆಗಿ ಹೋಗಲು ಸುಮ್ಮನಾಗುವದು—(ಎಂಬಿದೆಲ್ಲವನ್ನೂ) ಉಪಾಸನೆಮಾಡುವನೋ ಅವನೂ ವಸುಗಳಂತೆ (ಈ) ಎಲ್ಲವನ್ನೂ ಹಾಗೆಯೇ[1] ಅನುಭವಿಸುವನು.

(ಉಪನಿಷತ್ತು)

**ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ವಸೂನಾಮೇವ ತಾವದಾಧಿಪತ್ಯಗ್ಂ ಸ್ವಾರಾಜ್ಯಂ ಪರ್ಯೇತಾ ॥**

೪. ಅವನು, ಎಲ್ಲಿಯವರೆಗೆ ಆದಿತ್ಯನು ಪೂರ್ವದಲ್ಲಿ ಮೂಡುತ್ತಿರುವನೋ, ಪಶ್ಚಿಮದಲ್ಲಿ ಮುಳುಗುತ್ತಿರುವನೋ, ಅಲ್ಲಿಯ ವರೆಗೆ ವಸುಗಳ ಆಧಿಪತ್ಯವನ್ನೇ, ಸ್ವಾರಾಜ್ಯವನ್ನೇ ಪಡೆಯುವನು.

---

1. ಈ ಭಾಷ್ಯಭಾಗದಲ್ಲಿ ವಸುಗಳ ವಿಷಯದಲ್ಲಿ ವರ್ಣಿಸಿರುವಂತೆಯೇ.

# ವಸುಸಾಯುಜ್ಯದ ಕಾಲಪರಿಮಾಣ

(ಭಾಷ್ಯ)

೨೧೬. ಕಿಯನ್ತಂ ಕಾಲಂ ವಿದ್ವಾನ್ ತದಮೃತಮ್ ಉಪಜೀವತೀತಿ? ಉಚ್ಯತೇ। ಸ ವಿದ್ವಾನ್ ಯಾವದಾದಿತ್ಯಃ ಪುರಸ್ತಾತ್ ಪ್ರಾಚ್ಯಾಂ ದಿಶಿ ಉದೇತಾ ಪಶ್ಚಾತ್ ಪ್ರತೀಚ್ಯಾಂ ಅಸ್ತಮೇತಾ ತಾವದ್ ವಸೂನಾಂ ಭೋಗಕಾಲಃ। ತಾವನ್ತಮೇವ ಕಾಲಂ ವಸೂನಾಮ್ ಆಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ಪರಿತೋ ಗನ್ತಾ ಭವತಿ ಇತ್ಯರ್ಥಃ। ಸ ಯಥಾ ಚನ್ದ್ರಮಣ್ಡಲಸ್ಥಃ ಕೇವಲ ಕರ್ಮೀ ಪರತನ್ತ್ರೋ ದೇವಾನಾಮ್ ಅನ್ನಭೂತಃ, ಕಿಂ ತರ್ಹಿ ಅಯಮ್ ಆಧಿಪತ್ಯಂ ಸ್ವಾರಾಜ್ಯಂ ಸ್ವರಾಡ್ಭಾವಂ ಚ ಅಧಿಗಚ್ಛತಿ ॥

(ಭಾಷ್ಯಾರ್ಥ)

ಆ ಅಮೃತಕಾಲವನ್ನು ಜ್ಞಾನಿಯು, ಎಷ್ಟುಕಾಲದವರೆಗೆ ಉಪಜೀವಿಸಿ ಕೊಂಡಿರುತ್ತಾನೆ?– ಎಂದರೆ (ಶ್ರುತಿ) ಹೇಳುತ್ತದೆ. ಆ ಜ್ಞಾನಿಯು ಎಲ್ಲಿಯವರೆಗೆ ಆದಿತ್ಯನು ಪೂರ್ವದಲ್ಲಿ ಮೂಡುತ್ತಿರುವನೋ (ಪಶ್ಚಾತ್= ಪ್ರತೀಚ್ಯಾಮ್) ಪಶ್ಚಿಮದಲ್ಲಿ ಮುಳುಗುತ್ತಿರುವನೋ ಅಲ್ಲಿಯವರೆಗೂ ವಸುಗಳಿಗೆ ಭೋಗಕಾಲವು[1], ಅಷ್ಟು ಕಾಲದವರೆಗೂ ವಸುಗಳ ಆಧಿಪತ್ಯವನ್ನೂ ಸ್ವಾರಾಜ್ಯವನ್ನೂ ಪಡೆಯುವನು, (ಪರ್ಯೇತಾ= ) ಎಲ್ಲಾ ಬಗೆಯಿಂದಲೂ ಪಡೆಯುವವನಾಗಿರುವನು ಎಂದರ್ಥ.

ಚಂದ್ರಮಂಡಲದಲ್ಲಿರುವ ಕೇವಲ ಕರ್ಮಿಯು ಹೇಗೆ ದೇವತೆಗಳಿಗೆ ಅನ್ನವಾಗಿದ್ದುಕೊಂಡು[2] ಪರತಂತ್ರನಾಗಿರುವನೋ ಹಾಗಲ್ಲ, ಮತ್ತೇನೆಂದರೆ ಇವನು ಆಧಿಪತ್ಯವನ್ನೂ ಸ್ವಾರಾಜ್ಯವನ್ನೂ ಸ್ವಯಂರಾಜನಾಗಿರುವಿಕೆಯನ್ನೂ ಪಡೆದು ಕೊಂಡಿರುತ್ತಾನೆ.[3]

---

1. ಅಲ್ಲಿಯವರೆಗೂ ಅವರು ಪ್ರಾತಃಸವನಕಾಂಡ ಅಮೃತಭೋಗವನ್ನು ಪಡೆಯುತ್ತಿರುವರು.

2. ಭೋಗ್ಯನಾಗಿದ್ದುಕೊಂಡು. ಇವನ್ನು ಮುಂದೆ ಪಂಚಾಗ್ನಿವಿದ್ಯೆಯಲ್ಲಿ (೫-೯-೪ ರಲ್ಲಿ) ತಿಳಿಸಲಾಗುವದು.

3. ಉಪಾಸಕರಿಗೆ ಸಿಕ್ಕುವ ಸಾಯುಜ್ಯವಿಚಾರಕ್ಕೆ ಸೂ ಭಾ ೪ ೪ ೯ನ್ನು ನೋಡಿ.

# ಮೂರನೆಯ ಅಧ್ಯಾಯ-ಏಳನೆಯ ಖಂಡ

(ಆದಿತ್ಯೋಪಾಸನೆ)

## ರುದ್ರನಿಗೆ ದ್ವಿತೀಯಾಮೃತದಿಂದ ತೃಪ್ತಿ

(ಉಪನಿಷತ್ತು)

**ಅಥ ಯದ್ ದ್ವಿತೀಯಮಮೃತಂ ತದ್ರುದ್ರಾ ಉಪಜೀವನ್ತೀ ನ್ದ್ರೇಣ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾ ಮೃತಂ ದೃಷ್ಟ್ವಾ ತೃಪ್ಯನ್ತಿ ॥ ೧ ॥**

**ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ ॥**

**ಸ ಯ ಏತದೇವಮಮೃತಂ ವೇದ ರುದ್ರಾಣಾಮೇವೈಕೋ ಭೂತ್ವೇನ್ದ್ರೇಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥**

೧. ಇನ್ನು ಎರಡನೆಯ ಅಮೃತವಿದೆಯಲ್ಲ, ಅದನ್ನು ರುದ್ರರು ಇಂದ್ರಮುಖರಾಗಿ ಉಪಜೀವಿಸಿಕೊಂಡಿರುತ್ತಾರೆ. ದೇವತೆಗಳು ಉಣ್ಣುವದಿಲ್ಲ, ಕುಡಿಯುವದಿಲ್ಲ; ಈ ಅಮೃತವನ್ನೇ ಕಂಡು ತೃಪ್ತ ರಾಗುತ್ತಾರೆ.

೨. ಅವರು ಈ ರೂಪವನ್ನೇ ಅಭಿಸಂವೇಶನಮಾಡುತ್ತಾರೆ, ಈ ರೂಪದಿಂದಲೇ ಮೇಲಕ್ಕೇಳುತ್ತಾರೆ.

೩. ಯಾವನು ಈ ಅಮೃತವನ್ನು ಹೀಗೆಂದು ಅರಿತುಕೊಳ್ಳು ವನೋ, ಅವನು ರುದ್ರರುಗಳಲ್ಲಿಯೇ ಒಂದಾಗಿ ಇಂದ್ರಮುಖನಾಗಿ ಯೇ ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ. ಅವನು ಇದೇ ರೂಪವನ್ನು ಅಭಿಸಂವೇಶನಮಾಡುತ್ತಾನೆ, ಈ ರೂಪದಿಂದಲೇ ಮೇಲಕ್ಕೇಳುತ್ತಾನೆ.

(ಭಾಷ್ಯ)

೨೧೭. ಅಥ ಯದ್ ದ್ವಿತೀಯಮಮೃತಂ ತದ್ರುದ್ರಾ ಉಪಜೀವನ್ತಿ- ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಇನ್ನು ಎರಡನೆಯ ಅಮೃತವಿದೆಯಲ್ಲ, ಅದನ್ನು ರುದ್ರರು ಉಪಜೀವಿಸಿ ಕೊಂಡಿರುತ್ತಾರೆ- ಎಂದು ಮುಂತಾಗಿರುವದು (ಹಿಂದಿನ ಗ್ರಂಥಕ್ಕೆ) ಸಮಾನವು.

(ಉಪನಿಷತ್ತು)

**ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ದ್ವಿಸ್ತಾವದ್ದಕ್ಷಿಣತ ಉದೇತೋತ್ತರತೋಽಸ್ತಮೇತಾ ರುದ್ರಾಣಾಮೇವ ತಾವದಾಧಿಪತ್ಯಗ್ಂ ಸ್ವಾರಾಜ್ಯಂ ಪರ್ಯೇತಾ ॥ ೪ ॥**

೪. ಅವನು ಎಲ್ಲಿಯುವರೆಗೆ ಆದಿತ್ಯನು ಪೂರ್ವದಲ್ಲಿ ಮೂಡುತ್ತಿರುವನೋ ಪಶ್ಚಿಮದಲ್ಲಿ ಮುಳುಗುತ್ತಿರುವನೋ ಅದರ ಎರಡರಷ್ಟು ಕಾಲ ದಕ್ಷಿಣದಲ್ಲಿ ಮೂಡುವನು, ಉತ್ತರದಲ್ಲಿ ಮುಳುಗುವನು. ಅಲ್ಲಿಯುವರೆಗೂ ರುದ್ರರುಗಳ ಆಧಿಪತ್ಯವನ್ನೇ ಸ್ವಾರಾಜ್ಯವನ್ನೇ ಪಡೆಯುವನು.

## ರುದ್ರಸಾಯುಜ್ಯದ ಕಾಲಪರಿಮಾಣ

(ಭಾಷ್ಯ)

೨೧೮ ಸ ಯಾವದಾದಿತ್ಯಃ ಪುರಸ್ತಾತ್ ಉದೇತಾ ಪಶ್ಚಾತ್ ಅಸ್ತಮೇತಾ ದ್ವಿಸ್ತಾವತ್ ತತೋ ದ್ವಿಗುಣಂ ಕಾಲಂ ದಕ್ಷಿಣತ ಉದೇತಾ ಉತ್ತರತೋಽಸ್ತಮೇತಾ। ರುದ್ರಾಣಾಂ ತಾವದ್ ಭೋಗಕಾಲಃ ॥

(ಭಾಷ್ಯಾರ್ಥ)

ಎಲ್ಲಿಯುವರೆಗೂ ಸೂರ್ಯನು ಪೂರ್ವದಲ್ಲಿ ಮೂಡುತ್ತಿರುವನೋ ಪಶ್ಚಿಮದಲ್ಲಿ ಮುಳುಗುತ್ತಿರುವನೋ– ಅದರ ಎರಡರಷ್ಟು, ಅದರ ದುಪ್ಪಟ್ಟುಕಾಲದವರೆಗೂ ದಕ್ಷಿಣದಲ್ಲಿ ಮೂಡುವನು, ಉತ್ತರದಲ್ಲಿ ಮುಳುಗುವನು. ರುದ್ರರುಗಳಿಗೆ ಅಲ್ಲಿಯವರೆಗೂ ಭೋಗಕಾಲ.

---

# ಮೂರನೆಯ ಅಧ್ಯಾಯ- ಎಂಟನೆಯ ಖಂಡ

(ಆದಿತ್ಯೋಪಾಸನೆ)

## ಮೂರನೆಯ ಅಮೃತದಿಂದ ಆದಿತ್ಯರಿಗೆ ತೃಪ್ತಿ

(ಉಪನಿಷತ್ತು)

**ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವನ್ತಿ ವರುಣೇನ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ ॥ ೧ ॥**

**ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ ॥ ಸ ಯ ಏತದೇವಾಮೃತಂ ವೇದಾऽऽದಿತ್ಯಾನಾಮೇವೈಕೋ ಭೂತ್ವಾ ವರುಣೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥ ಸ ಯಾವದಾದಿತ್ಯೋ ದಕ್ಷಿಣತ ಉದೇತೋತ್ತರತೋऽಸ್ತಮೇತಾ ದ್ವಿಸ್ತಾವತ್ ಪಶ್ಚಾದುದೇತಾ ಪುರಸ್ತಾದಸ್ತಮೇತಾऽऽದಿತ್ಯಾನಾಮೇವ ತಾವದಾಧಿಪತ್ಯಗ್ಂ ಸ್ವಾರಾಜ್ಯಂ ಪರ್ಯೇತಾ ॥ ೪ ॥**

೧. ಇನ್ನು ಮೂರನೆಯ ಅಮೃತವಿದೆಯಲ್ಲ, ಅದನ್ನು ಆದಿತ್ಯರು ವರುಣಮುಖರಾಗಿ ಉಪಜೀವಿಸಿಕೊಂಡಿರುತ್ತಾರೆ; ದೇವತೆಗಳು ಉಣ್ಣುವದಿಲ್ಲ, ಕುಡಿಯುವದಿಲ್ಲ; ಈ ಅಮೃತವನ್ನೇ ಕಂಡು ತೃಪ್ತರಾಗುತ್ತಾರೆ.

೨. ಅವರು ಈ ರೂಪವನ್ನೇ ಅಭಿಸಂವೇಶನಮಾಡುತ್ತಾರೆ, ಈ ರೂಪದಿಂದಲೇ ಮೇಲಕ್ಕೇಳುತ್ತಾರೆ.

೩. ಯಾವನು ಈ ಅಮೃತವನ್ನು ಹೀಗೆಂದು ಅರಿತುಕೊಳ್ಳುವನೋ ಅವನು ಆದಿತ್ಯರುಗಳಲ್ಲಿಯೇ ಒಂದಾಗಿ ವರುಣಮುಖನೇ ಆಗಿ ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ; ಅವನು ಇದೇ ರೂಪವನ್ನು ಅಭಿಸಂವೇಶನಮಾಡುತ್ತಾನೆ, ಈ ರೂಪದಿಂದಲೇ ಮೇಲುಕ್ಕೇಳುತ್ತಾನೆ.

೪. ಅವನು ಎಲ್ಲಿಯವರೆಗೆ ಆದಿತ್ಯನು ದಕ್ಷಿಣದಲ್ಲಿ ಮೂಡುತ್ತಿರುವನೋ ಉತ್ತರದಲ್ಲಿ ಮುಳುಗುತ್ತಿರುವನೋ- ಅದರ ಎರಡರಷ್ಟು ಕಾಲ ಪಶ್ಚಿಮದಲ್ಲಿ ಮೂಡುವನು, ಪೂರ್ವದಲ್ಲಿ ಮುಳುಗುವನು- ಅಲ್ಲಿಯವರೆಗೂ ಆದಿತ್ಯರ ಆಧಿಪತ್ಯವನ್ನೇ ಸ್ವಾರಾಜ್ಯವನ್ನೇ ಪಡೆಯುವನು.

---

# ಮೂರನೆಯ ಅಧ್ಯಾಯ-ಒಂಬತ್ತನೆಯ ಖಂಡ

(ಆದಿತ್ಯೋಪಾಸನೆ)

## ನಾಲ್ಕನೆಯ ಅಮೃತದಿಂದ ಮರುತ್ತರಿಗೆ ತೃಪ್ತಿ

(ಉಪನಿಷತ್ತು)

**ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವನ್ತಿ**

**ಸೋಮೇನ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತ ದೇವಾಮೃತಂ ದೃಷ್ಟ್ವಾ ತೃಪ್ಯನ್ತಿ ॥ ೧ ॥**

**ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ ॥**

**ಸ ಯ ಏತದೇವಮಮೃತಂ ವೇದ ಮರುತಾಮೇವೈಕೋ ಭೂತ್ವಾ ಸೋಮೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥**

**ಸ ಯಾವದಾದಿತ್ಯಃ ಪಶ್ಚಾದುದೇತಾ ಪುರಸ್ತಾದಸ್ತಮೇತಾ ದ್ವಿಸ್ತಾವದುತ್ತರತ ಉದೇತಾ ದಕ್ಷಿಣತೋಽಸ್ತಮೇತಾ ಮರುತಾಮೇವ ತಾವದಾಧಿಪತ್ಯಗ್ಂ ಸ್ವಾರಾಜ್ಯಂ ಪರ್ಯೇತಾ ॥ ೪ ॥**

೧. ಇನ್ನು ನಾಲ್ಕನೆಯ ಅಮೃತವಿದೆಯಲ್ಲ, ಅದನ್ನು ಮರುತ್ತರು ಸೋಮಮುಖರಾಗಿ ಉಪಜೀವಿಸಿಕೊಂಡಿರುತ್ತಾರೆ. ದೇವತೆಗಳು ಉಣ್ಣುವದಿಲ್ಲ, ಕುಡಿಯುವದಿಲ್ಲ ; ಈ ಅಮೃತವನ್ನೇ ಕಂಡು ತೃಪ್ತರಾಗುತ್ತಾರೆ.

೨. ಅವರು ಈ ರೂಪವನ್ನೇ ಅಭಿಸಂವೇಶನಮಾಡುತ್ತಾರೆ, ಈ ರೂಪದಿಂದಲೇ ಮೇಲಕ್ಕೇಳುತ್ತಾರೆ.

೩. ಯಾವನು ಈ ಅಮೃತವನ್ನೇ ಹೀಗೆಂದು ಅರಿತುಕೊಳ್ಳುವನೋ ಅವನು ಮರುತ್ತರುಗಳಲ್ಲಿಯೇ ಒಂದಾಗಿ ಸೋಮಮುಖನಾಗಿಯೇ ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ. ಅವನು ಇದೇ ರೂಪವನ್ನು ಅಭಿಸಂವೇಶನಮಾಡುತ್ತಾನೆ, ಈ ರೂಪದಿಂದಲೇ ಮೇಲಕ್ಕೇಳುತ್ತಾನೆ.

೪. ಅವನು ಎಲ್ಲಿಯವರೆಗೆ ಆದಿತ್ಯನು ಪಶ್ಚಿಮದಲ್ಲಿ ಮೂಡುತ್ತಿರುವನೋ ಪೂರ್ವದಲ್ಲಿ ಮುಳುಗುತ್ತಿರುವನೋ- ಅದರ ಎರಡರಷ್ಟು ಕಾಲ ಉತ್ತರದಲ್ಲಿ ಮೂಡುವನು, ದಕ್ಷಿಣದಲ್ಲಿ ಮುಳುಗುವನು. ಅಲ್ಲಿಯವರೆಗೂ ಮರುತ್ತರುಗಳ ಆಧಿಪತ್ಯವನ್ನೇ ಸ್ವಾರಾಜ್ಯವನ್ನೇ ಪಡೆಯುವನು.

---

# ಮೂರನೆಯ ಅಧ್ಯಾಯ-ಹತ್ತನೆಯ ಖಂಡ

(ಆದಿತ್ಯೋಪಾಸನೆ)

## ಐದನೆಯ ಅಮೃತದಿಂದ ಸಾಧ್ಯರಿಗೆ ತೃಪ್ತಿ

(ಉಪನಿಷತ್ತು)

**ಅಥ ಯತ್ಪಞ್ಚಮಮಮೃತಂ ತತ್ ಸಾಧ್ಯಾ ಉಪಜೀವನ್ತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತ ದೇವಾಮೃತಂ ದೃಷ್ಟ್ವಾ ತೃಪ್ಯನ್ತಿ ॥ ೧ ॥**

**ತ ಏತದೇವ ರೂಪಮಭಿಸಂವಿಶನ್ತ್ಯೇತಸ್ಮಾದ್ರೂಪಾದುದ್ಯನ್ತಿ ॥**

**ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥**

**ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾಽರ್ವಾಙ[1]ಸ್ತಮೇತಾ ಸಾಧ್ಯಾನಾ ಮೇವ ತಾವದಾಧಿಪತ್ಯಗ್ಂ ಸ್ವಾರಾಜ್ಯಂ ಪರ್ಯೇತಾ ॥ ೪ ॥**

೧. ಇನ್ನು ಐದನೆಯ ಅಮೃತವಿದೆಯಲ್ಲ, ಅದನ್ನು ಸಾಧ್ಯರು ಉಪಜೀವಿಸಿ ಬ್ರಹ್ಮಮುಖರಾಗಿ ಉಪಜೀವಿಸಿಕೊಂಡಿರುತ್ತಾರೆ. ದೇವತೆಗಳು ಉಣ್ಣುವದಿಲ್ಲ, ಕುಡಿಯುವದಿಲ್ಲ; ಈ ಅಮೃತವನ್ನೇ ಕಂಡು ತೃಪ್ತರಾಗುತ್ತಾರೆ.

೨. ಅವರು ಈ ರೂಪವನ್ನೇ ಅಭಿಸಂವೇಶನಮಾಡುತ್ತಾರೆ, ಈ ರೂಪದಿಂದಲೇ ಮೇಲಕ್ಕೇಳುತ್ತಾರೆ.

೩. ಯಾವನು ಈ ಅಮೃತವನ್ನೇ ಹೀಗೆಂದು ಅರಿತುಕೊಳ್ಳುವನೋ ಅವನು ಸಾಧ್ಯರುಗಳಲ್ಲಿಯೇ ಒಂದಾಗಿ ಬ್ರಹ್ಮಮುಖನಾಗಿಯೇ ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ. ಅವನು ಇದೇ ರೂಪವನ್ನು ಅಭಿಸಂವೇಶನಮಾಡುತ್ತಾನೆ, ಈ ರೂಪದಿಂದಲೇ ಮೇಲಕ್ಕೇಳುತ್ತಾನೆ.

---

1. ಇದು ಅವಾಕ್ ಎಂದಿರಬೇಕೆ ?

೪. ಅವನು ಎಲ್ಲಿಯವರೆಗೆ ಆದಿತ್ಯನು ಉತ್ತರದಲ್ಲಿ ಮೂಡು ವನೋ ದಕ್ಷಿಣದಲ್ಲಿ ಮುಳುಗುವನೋ- ಅದರ ಎರಡರಷ್ಟು ಕಾಲ ಮೇಲುಗಡೆ ಮೂಡುವನು, ಕೆಳಗಡೆ ಮುಳುಗುವನು- ಅಲ್ಲಿಯುವರೆಗೂ ಸಾಧ್ಯರ ಆಧಿಪತ್ಯವನ್ನೇ, ಸ್ವಾರಾಜ್ಯವನ್ನೇ ಪಡೆಯುವನು.

(ಭಾಷ್ಯ)

೨೧೯. ತಥಾ ಪಶ್ಚಾತ್, ಉತ್ತರತಃ, ಊರ್ಧ್ವಮ್ ಉದೇತಾ ವಿಪರ್ಯ ಯೇಣ ಅಸ್ತಮೇತಾ ॥

(ಭಾಷ್ಯಾರ್ಥ)

ಹೀಗೆಯೇ (ಅದರ ಎರಡರಷ್ಟು ಕಾಲ) ಪಶ್ಚಿಮದಲ್ಲಿ (ಖಂ ೮), ಉತ್ತರದಲ್ಲಿ (ಖಂ ೯), ಮೇಲುಗಡೆಯಲ್ಲಿ (ಖಂ ೧೦) ಮೂಡುವನು, (ಅದಕ್ಕೆ) ವಿಪರ್ಯಯ ವಾಗಿ[1] ಮುಳುಗುವನು.

## ಸೂರ್ಯೋದಯಾಸ್ತಮಯಗಳ ವಿಷಯಕ್ಕೆ ಚರ್ಚೆ

### ಆ ಕ್ಷೇ ಪ

(ಭಾಷ್ಯ)

೨೨೦. ಪೂರ್ವಸ್ಮಾತ್ ಪೂರ್ವಸ್ಮಾತ್ ದ್ವಿಗುಣೋತ್ತರೋತ್ತರೇಣ ಕಾಲೇನ ಇತಿ ಅಪೌರಾಣಂ ದರ್ಶನಮ್ । ಸವಿತುಶ್ಚತುರ್ದಿಶಮ್ ಇನ್ದ್ರಯಮವರುಣ ಸೋಮಪುರೀಷು ಉದಯಾಸ್ತಮಯಕಾಲಸ್ಯ ತುಲ್ಯತ್ವಂ ಹಿ ಪೌರಾಣಿಕೈ ರುಕ್ತಮ್ । ಮಾನಸೋತ್ತರಸ್ಯ ಮೂರ್ಧನಿ ಮೇರೋಃ ಪ್ರದಕ್ಷಿಣಾವೃತ್ತೇ ಸ್ತುಲ್ಯತ್ವಾತ್ ಇತಿ ॥

(ಭಾಷ್ಯಾರ್ಥ)

ಹಿಂದುಹಿಂದಿನದಕ್ಕಿಂತಲೂ ಮುಂದುಮುಂದಕ್ಕೆ ಎರಡರಷ್ಟು ಕಾಲ (ಉದ ಯಾಸ್ತಮಯಗಳಾಗುತ್ತಿರುವವು) ಎಂಬ ತಿಳಿವಳಿಕೆಯು ಪುರಾಣಕ್ಕೆ ವಿರುದ್ಧ ವಾಗಿರುತ್ತದೆ.[2] ಸೂರ್ಯನಿಗೆ ನಾಲ್ಕು ದಿಕ್ಕುಗಳಲ್ಲಿ (ಕ್ರಮವಾಗಿ) ಇಂದ್ರ, ಯಮ, ವರುಣ, ಸೋಮ- ಇವರ ಪುರಗಳಲ್ಲಿ ಉದಯಾಸ್ತಮಯಕಾಲವು ಸಮಾನ

---

1 ಪೂರ್ವದಲ್ಲಿ, ದಕ್ಷಿಣದಲ್ಲಿ, ಕೆಳಗಡೆ (ಮುಳುಗುವನು) ಎಂದು ಕ್ರಮವಾಗಿಟ್ಟು ಕೊಳ್ಳಬೇಕೆಂದರ್ಥ ಮುಂದುಮುಂದಿನ ಕಾಲವು ಹಿಂದುಹಿಂದಿನವರ ಎರಡರಷ್ಟು, ಅಷ್ಟಷ್ಟು ಕಾಲ ಉಪಾಸಕನಿಗೆ ಆದಿತ್ಯರ, ಮರುತ್ತರ ಮತ್ತು ಸಾಧ್ಯರ ಆಧಿಪತ್ಯಸ್ವಾರಾಜ್ಯಗಳು ದೊರಕುವವು ಎಂದೂ ಅಭಿಪ್ರಾಯ.

2. ಪುರಾಣವು ಶ್ರುತಿಗೆ ವಿರುದ್ಧವಾದರೆ ಅಪ್ರಮಾಣವೇ ಆದರೂ ಇವೆರಡನ್ನೂ ಹೊಂದಿಸಬಹುದಾದರೆ ಅದು ಪ್ರಮಾಣವೇ ಎಂದು ಭಾವ

ವಾಗಿರುತ್ತದೆ ಎಂದಲ್ಲವೆ, ಪೌರಾಣಿಕರು ಹೇಳಿರುತ್ತಾರೆ? ಮಾನಸಕ್ಕೆ ಉತ್ತರ ದಲ್ಲಿರುವ ಮೇರುವಿನ ಶಿಖರದ ಸುತ್ತಲೂ ತಿರುಗುತ್ತಿರುವ ದೂರವು ಒಂದೇ ಸಮನಾಗಿರುವದರಿಂದ (ಈ ಕಾಲವು ಎಲ್ಲೆಲ್ಲಿಯೂ ಸಮಾನವಾಗಿರುತ್ತದೆ ಎಂದಷ್ಟೆ, ಅವರ ಮತವು)? [1]

## ಪ ರಿ ಹಾ ರ

(ಭಾಷ್ಯ)

೨೨೧ ಅತ್ರೋಕ್ತಃ ಪರಿಹಾರ ಆಚಾರ್ಯೈಃ। ಅಮರಾವತ್ಯಾದೀನಾಂ ಪುರೀಣಾಂ ದ್ವಿಗುಣೋತ್ತರೋತ್ತರೇಣ ಕಾಲೇನ ಉದ್ವಾಸಃ ಸ್ಯಾತ್। ಉದಯಶ್ಚ ನಾಮ ಸವಿತುಸ್ತನ್ನಿವಾಸಿನಾಂ ಪ್ರಾಣಿನಾಂ ಚಕ್ಷುರ್ಗೋಚರಾಪತ್ತಿಃ, ತದತ್ಯಯಶ್ಚ ಅಸ್ತಮನಮ್। ನ ಪರಮಾರ್ಥತಃ ಉದಯಾಸ್ತಮನೇ ಸ್ತಃ। ತನ್ನಿವಾಸಿನಾಂ ಚ ಪ್ರಾಣಿನಾಮ್ ಅಭಾವೇ ತಾನ್ ಪ್ರತಿ ತೇನೈವ ಮಾರ್ಗೇಣ ಗಚ್ಛನ್ನಪಿ ನೈವೋದೇತಾ ನಾಸ್ತಮೇತಾ ಇತಿ ಚಕ್ಷುರ್ಗೋಚರಾಪತ್ತೇಸ್ತದತ್ಯಯಸ್ಯ ಚ ಅಭಾವಾತ್। ತಥಾ ಅಮರಾವತ್ಯಾಃ ಸಕಾಶಾತ್ ದ್ವಿಗುಣಂ ಕಾಲಂ ಸಂಯಮನೀ ಪುರೀ ವಸತಿ। ಅತಃ ತನ್ನಿವಾಸಿನಃ ಪ್ರಾಣಿನಃ ಪ್ರತಿ ದಕ್ಷಿಣತ ಇವ ಉದೇತಿ ಉತ್ತರತೋಽಸ್ತಮೇತಿ ಇತ್ಯುಚ್ಯತೇ ಲೋಕಬುದ್ಧಿಂ ಚ ಅಪೇಕ್ಷ್ಯ। ತಥಾ ಉತ್ತರಾಸ್ವಪಿ ಪುರೀಷು ಯೋಜನಾ। ಸರ್ವೇಷಾಂ ಚ ಮೇರುರುತ್ತರತೋ ಭವತಿ। ಯದಾ ಅಮರಾವತ್ಯಾಂ ಮಧ್ಯಾಹ್ನಗತಃ ಸವಿತಾ ತದಾ ಸಂಯಮನ್ಯಾಮ್ ಉದ್ಯನ್ ದೃಶ್ಯತೇ ತತ್ರ ಮಧ್ಯಾಹ್ನಗತೋ ವಾರುಣ್ಯಾಮ್ ಉದ್ಯನ್ ದೃಶ್ಯತೇ ತಥಾ ಉತ್ತರಸ್ಯಾಮ್। ಪ್ರದಕ್ಷಿಣಾವೃತ್ತೇಸ್ತುಲ್ಯತ್ವಾತ್। ಇಲಾವೃತವಾಸಿನಾಂ ಸರ್ವತಃ ಪರ್ವತ ಪ್ರಾಕಾರನಿವಾರಿತಾದಿತ್ಯರಶ್ಮೀನಾಂ ಸವಿತಾ ಊರ್ಧ್ವ ಇವ ಉದೇತಾ ಅರ್ವಾಗಸ್ತ[2]ಮೇತಾ ದೃಶ್ಯತೇ। ಪರ್ವತೋರ್ಧ್ವಚ್ಛಿದಪ್ರವೇಶಾತ್ ಸವಿತೃಪ್ರಕಾಶಸ್ಯ॥

(ಭಾಷ್ಯಾರ್ಥ)

ಇದಕ್ಕೆ **ಆಚಾರ್ಯರು**[3] ಹೇಳಿರುವ ಪರಿಹಾರ(ವೇನೆಂದರೆ), ಅಮರಾವತಿಯೇ ಮುಂತಾದ ಪುರಿಗಳಲ್ಲಿ ಮುಂದುಮುಂದಕ್ಕೆ ಎರಡರಷ್ಟು ಕಾಲದಲ್ಲಿ ಉದ್ವಾಸವಾಗುವದು.[4] ಸೂರ್ಯನ ಉದಯವು ಎಂದರೆ ಅಲ್ಲಿ ವಾಸವಾಗಿರುವ

---

1 ಇಲ್ಲಿ ವಿಷ್ಣುಪುರಾಣದ ಮತ್ತು ಲೈಂಗಪುರಾಣಗಳ ಸಮ್ಮತಿಯನ್ನು ಆ॥ ಗಿ॥ ಟೀಕೆಯಲ್ಲಿ ಕೊಟ್ಟಿದೆ. ಆಚಾರ್ಯರು ಯಾವ ಪುರಾಣವನ್ನು ಲಕ್ಷ್ಯದಲ್ಲಿಟ್ಟುಕೊಂಡಿದ್ದರೆಂಬುದನ್ನು ಗೊತ್ತುಮಾಡುವದು ಕಷ್ಟ.

2. ಇದು ಅವಾಕ್ ಎಂದಿರಬೇಕೆ ?

3. ದ್ರವಿಡಾಚಾರ್ಯರು. ಇವರ ವಿಷಯಕ್ಕೆ ಪೀಠಿಕೆಯನ್ನು ನೋಡಿ

4. ಸೂರ್ಯನ ಗತಿಯಾಗುವದು , ಅಲ್ಲಿ ನಿವಾಸಿಗಳೂ ಇಲ್ಲವಾಗುವದು.

ಪ್ರಾಣಿಗಳ ಕಣ್ಣಿಗೆ ಗೋಚರವಾಗುವದು, ಅದನ್ನು ಮೀರುವದೇ ಅಸ್ತಮಯವು; (ಇಷ್ಟೇ ಹೊರತು) ನಿಜವಾಗಿ ಉದಯಾಸ್ತಮಯಗಳು ಇರುವದಿಲ್ಲ.[1] (ಆದ್ದರಿಂದ) ಅಲ್ಲಿ ವಾಸವಾಗಿರುವ ಪ್ರಾಣಿಗಳು ಇಲ್ಲದಿದ್ದರೆ ಅವುಗಳನ್ನು ಅದೇ ಮಾರ್ಗದಿಂದ ದಾಟಿದರೂ (ಸೂರ್ಯನು ಅಲ್ಲಿ) ಉದಯವಾಗುವದೂ ಇಲ್ಲ, ಅಸ್ತಮಯವಾಗುವದೂ ಇಲ್ಲ[2], ಏಕೆಂದರೆ ಕಣ್ಣಿಗೆ ಗೋಚರವಾಗುವದು, ಅದನ್ನು ಮೀರುವದು (ಅಲ್ಲಿ) ಇರುವದೇ ಇಲ್ಲ[3] ಮತ್ತು ಅಮರಾವತಿಗಿಂತ ಸಂಯಮಿನೀಪುರಿಯ ಎರಡರಷ್ಟು ಕಾಲದ (ದೂರದಲ್ಲಿ) ಇರುತ್ತದೆ. ಆದ್ದರಿಂದ ಅಲ್ಲಿರುವ ಪ್ರಾಣಿಗಳಿಗೆ ದಕ್ಷಿಣದಿಂದ ಉದಯವಾದಂತೆ ಆಯಿತು, ಉತ್ತರದಿಂದ ಅಸ್ತಮಯ(ವಾದಂತೆ ಆಯಿತು) ಎಂದು ನಮ್ಮಗಳ ಬುದ್ಧಿಯ ಅಪೇಕ್ಷೆಯಿಂದ[4] ಹೇಳಿರುತ್ತದೆ. ಹೀಗೆಯೇ ಮುಂದಿನ ಪುರಿಗಳಿಗೂ (ಗ್ರಂಥವನ್ನು) ಹೊಂದಿಸಿಕೊಳ್ಳಬೇಕು.

ಎಲ್ಲರಿಗೂ ಮೇರು(ಪರ್ವತವು) ಉತ್ತರಕ್ಕೇ ಇರುತ್ತದೆ. ಅಮರಾವತಿಯಲ್ಲಿ ಸೂರ್ಯನು ನೆತ್ತಿಯಮೇಲಿರುವನಲ್ಲ, ಆಗ ಸಂಯಮಿನಿಯಲ್ಲಿ ಉದಯಿಸುವಂತೆ ಕಾಣುತ್ತಾನೆ, ಆ (ಸಂಯಮಿನಿ)ಯಲ್ಲಿ ನೆತ್ತಿಯಮೇಲಿರುವಾಗ ವಾರುಣಿಯಲ್ಲಿ ಉದಯಿಸುವಂತೆ ಕಾಣಿಸುತ್ತಾನೆ. ಹೀಗೆಯೇ (ವಾರುಣಿಯಲ್ಲಿ ನೆತ್ತಿಯಮೇಲಿರುವಾಗ) ಉತ್ತರದಲ್ಲಿರುವ (ವಿಭಾಪುರಿಯಲ್ಲಿಯೂ) ಉದಯಿಸುವಂತೆ ಕಾಣಿಸುತ್ತಾನೆ.[5] ಏಕೆಂದರೆ ಸುತ್ತುವ (ದೂರವು) ಸಮಾನವಾಗಿರುತ್ತದೆ. ಇಲಾವೃತದಲ್ಲಿ ವಾಸವಾಗಿರುವವರಿಗೆ ಸುತ್ತಲೂ ಪರ್ವತದ ಮೌಳಿಯಿಂದ ಸೂರ್ಯರಶ್ಮಿಗಳಿಗೆ ಅಡ್ಡಿಯಾಗಿರುವದರಿಂದ ಸೂರ್ಯನು ಮೇಲೆ ಉದಯಿಸುವಂತೆಯೂ ಕೆಳಗೆ ಅಸ್ತಮಯವಾಗುವಂತೆಯೂ ಕಾಣಿಸುತ್ತಾನೆ. ಏಕೆಂದರೆ ಪರ್ವತಗಳ ಮೇಲಿರುವ ಆಕಾಶಭಾಗದಿಂದ ಸೂರ್ಯನ ಪ್ರಕಾಶವು ಒಳಕ್ಕೆ ಬರಬೇಕಾಗಿರುತ್ತದೆ.[6]

---

1 ಐ. ಬ್ರಾ. ೧೪-೬ನ್ನು ನೋಡಿ.

2. ನಿವಾಸಿಗಳಿಲ್ಲದ್ದರಿಂದ ಅವರಿಗೆ ಆಗುತ್ತಿದ್ದ ಉದಯಾಸ್ತಮಯಗಳಿಲ್ಲವೆಂದಿದೆ-ಎಂಬರ್ಥ. ಆದ್ದರಿಂದ ಅಮರಾವತಿಯಲ್ಲಿ ಯಾರೂ ಇಲ್ಲದಿರುವಾಗ ಉದಯಾಸ್ತಮಯಗಳಿಲ್ಲದ್ದರಿಂದ ವಸುಗಳ ಭೋಗವೂ ಮುಗಿಯುವದು. ಹೀಗೆಯೇ ಮುಂದುಮುಂದಿನ ಪುರಗಳಲ್ಲಿ ಯಾರೂ ಇಲ್ಲದಿದ್ದರೆ ಅವರ ಎರಡರಷ್ಟು ಕಾಲವಾದ ಬಳಿಕ ರುದ್ರಾದಿಗಳ ಭೋಗವು ಮುಗಿಯುವದು

3. ವಿ. ಪು. ೨-೮-೧೪, ೧೫ನ್ನು ನೋಡಿ.

4. ನಮ್ಮ ದೃಷ್ಟಿಯಿಂದ ದಕ್ಷಿಣದಿಕ್ಕಿನಿಂದ ಉದಯವೇ ಹೊರತು ನಿಜವಾಗಿ ಸೂರ್ಯನು ಅಲ್ಲಿ ದಕ್ಷಿಣದಲ್ಲಿ ಉದಯಿಸುತ್ತಾನೆಂದಲ್ಲ; ಏಕೆಂದರೆ ಎಲ್ಲಿ ಉದಯಿಸುತ್ತಾನೋ ಅದೇ ಪೂರ್ವ.

5. ಇಲ್ಲಿ ಆ॥ ಗಿ॥ ಟೀಕೆಯಲ್ಲಿ ವಾಯುಪುರಾಣದಿಂದ ಪ್ರಮಾಣವಚನವನ್ನು ಉದಾಹರಿಸಿದೆ.

6. ಇಲ್ಲಿರುವ ವಿವರಗಳನ್ನು ಪೌರಾಣಿಕರಿಂದಲೇ ತಿಳಿದುಕೊಂಡು ಸರಿಯಾಗಿ ಮನದಟ್ಟು ಮಾಡಿಕೊಳ್ಳಬೇಕು.

## ಉಪಾಸಕನ ಫಲಭೋಗಕಾಲ

(ಭಾಷ್ಯ)

೨೨೨. ತಥಾ ಋಗಾದ್ಯಮೃತೋಪಜೀವಿನಾಮ್ ಅಮೃತಾನಾಂ ಚ ದ್ವಿಗುಣೋತ್ತರೋತ್ತರವೀರ್ಯವತ್ತ್ವಮ್ ಅನುಮೀಯತೇ ಭೋಗಕಾಲದ್ವೈಗುಣ್ಯಲಿಙ್ಗೇನ । ಉದ್ಗಮನಸಂವೇಶನಾದಿದೇವಾನಾಂ ರುದ್ರಾದೀನಾಂ ವಿದುಷಶ್ಚ ಸಮಾನಮ್ ॥

(ಭಾಷ್ಯಾರ್ಥ)

ಇದರಂತೆ[1] ಋಗಾದ್ಯಮೃತಗಳನ್ನು ಉಪಜೀವಿಸಿಕೊಂಡಿರುವವರಿಗೂ ಅಮೃತಗಳಿಗೂ (ಹಿಂದುಹಿಂದಿನದಕ್ಕಿಂತ) ಮುಂದುಮುಂದಿನದಕ್ಕೆ ಎರಡರಷ್ಟು ವೀರ್ಯವಿರುವದೆಂದು, ಭೋಗಕಾಲವು ಎರಡರಷ್ಟಾಗಿರುವದೆಂಬ ಲಿಂಗದಿಂದ ಅನುಮಾನಿಸಬೇಕಾಗಿರುತ್ತದೆ. (ಭೋಗಕ್ಕಾಗಿ) ಮೇಲಕ್ಕೇಳುವದು, ಸುಮ್ಮನಾಗುವದು- ಮುಂತಾದದ್ದು ರುದ್ರಾದಿಗಳಿಗೂ ಉಪಾಸಕರಿಗೂ ಸಮಾನವಾಗಿರುತ್ತದೆ[2].

---

# ಮೂರನೆಯ ಅಧ್ಯಾಯ-ಹನ್ನೊಂದನೆಯ ಖಂಡ

(ಆದಿತ್ಯೋಪಾಸನೆ)

## ಆದಿತ್ಯೋಪಾಸನೆಯ ಪರಮಫಲ

(ಉಪನಿಷತ್ತು)

**ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ನಾಸ್ತಮೇತ್ಯೈಕಲ ಏವ ಮಧ್ಯೇ ಸ್ಥಾತಾ ತದೇಷ ಶ್ಲೋಕಃ ॥ ೧ ॥**

೧. ಇನ್ನು ಆ ಬಳಿಕ ಮೇಲುಗಡೆ ಉದಯಿಸಿದವನು ಉದಯಿಸುವದೂ ಇಲ್ಲ; ಅಸ್ತವನ್ನು ಹೊಂದುವದೂ ಇಲ್ಲ. ಒಂಟಿಯಾಗಿಯೇ ನಡುವೆ ನಿಂತುಬಿಡುವನು. ಆ (ವಿಷಯ)ದಲ್ಲಿ ಈ ಶ್ಲೋಕವು (ಬಂದಿರುತ್ತದೆ):

---

1. ಭೋಗಕಾಲವು ದ್ವಿಗುಣವಾಗಿರುವಂತೆ.

2. ರುದ್ರಾದಿಗಳಿಗೆ ಆಗುವಂಥ ಭೋಗವೇ ಅವರ ಸಾಯುಜ್ಯವನ್ನು ಪಡೆದ ಉಪಾಸಕನಿಗೂ ಆಗುವದು.

## ಸೂರ್ಯನ ಉದಯಾಸ್ತಗಳು ನಿಲ್ಲುವ ಸ್ಥಿತಿ

(ಭಾಷ್ಯ)

೨೨೩. ಕೃತ್ವಾ ಏವಮುದಯಾಸ್ತಮನೇನ ಪ್ರಾಣಿನಾಂ ಸ್ವಕರ್ಮಫಲಭೋಗನಿಮಿತ್ತಮ್ ಅನುಗ್ರಹಮ್, ತತ್ಕರ್ಮಫಲೋಪಭೋಗಕ್ಷಯೇ ತಾನಿ ಪ್ರಾಣಿಜಾತಾನಿ ಆತ್ಮನಿ ಸಂಹೃತ್ಯ ಅಥ ತತಃ ತಸ್ಮಾತ್ ಅನನ್ತರಂ ಪ್ರಾಣ್ಯನುಗ್ರಹಕಾಲಾತ್ ಊರ್ಧ್ವಃ ಸನ್ ಆತ್ಮನಿ ಉದೇತ್ಯ ಉದ್ಗಮ್ಯ ಯಾನ್ ಪ್ರತ್ಯುದೇತಿ ತೇಷಾಂ ಪ್ರಾಣಿನಾಮ್ ಅಭಾವಾತ್ ಸ್ವಾತ್ಮಸ್ಥಃ ನೈವೋದೇತಾ ನಾಸ್ತಮೇತಾ। ಏಕಲಃ ಅದ್ವಿತೀಯಃ ಅನವಯವಃ ಮಧ್ಯೇ ಸ್ವಾತ್ಮನ್ಯೇವ ಸ್ಥಾತಾ ॥

(ಭಾಷಾರ್ಥ)

ಹೀಗೆ ಉದಯಾಸ್ತಮನ(ಕ್ರಿಯೆಗಳಿಂದ) ಪ್ರಾಣಿಗಳಿಗೆ ಅವರವರ ಕರ್ಮಫಲಭೋಗಕ್ಕಾಗಿ ಅನುಗ್ರಹವನ್ನು ಮಾಡಿ, ಅವರ ಕರ್ಮಫಲಭೋಗವು ಸವೆಯಲು ಆ ಪ್ರಾಣಿಸಮೂಹಗಳನ್ನು ತನ್ನಲ್ಲಿ ಉಪಸಂಹಾರಮಾಡಿಕೊಂಡು, ಇನ್ನು ಆ ಬಳಿಕ, ಆ ಪ್ರಾಣಿಗಳಿಗೆ ಅನುಗ್ರಹಿಸುವ ಕಾಲವಾದ ಮೇಲೆ[1] ಮೇಲುಗಡೆ ಇರುವವನಾಗಿ[2] ತನ್ನಲ್ಲಿಯೇ ಉದಯಿಸಿದವನಾಗಿ ಮೇಲಕ್ಕೇರಿದವನಾಗಿ[3] ಯಾರಿಗಾಗಿ ಉದಯಿಸಬೇಕೋ ಆ ಪ್ರಾಣಿಗಳು ಇಲ್ಲದ್ದರಿಂದ ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡವನಾಗಿ, ಉದಯಿಸುವದೂ ಇಲ್ಲ, ಅಸ್ತಮಯವಾಗುವದೂ ಇಲ್ಲ, ಒಬ್ಬನೇ ಅದ್ವಿತೀಯನಾಗಿ ನಿರವಯವನಾಗಿ ನಡುವೆ, ತನ್ನಲ್ಲಿಯೇ ಇದ್ದುಕೊಂಡುಬಿಡುವನು

## ಸೂರ್ಯನಲ್ಲಿ ಸಮಾಹಿತನಾಗಿದ್ದ ಉಪಾಸಕನ ವಚನಕ್ಕೆ ಅವತರಣಿಕೆ

(ಭಾಷ್ಯ)

೨೨೪. ತತ್ರ ಕಶ್ಚಿದ್ ವಿದ್ವಾನ್ ವಸ್ವಾದಿಸಮಾನಚರಣಃ ರೋಹಿತಾದ್ಯಮೃತಭೋಗಭಾಗೀ ಯಥೋಕ್ತಕ್ರಮೇಣ ಸ್ವಾತ್ಮಾನಂ ಸವಿತಾರಮ್ ಆತ್ಮತ್ವೇನ ಉಪೇತ್ಯ ಸಮಾಹಿತಃ ಸನ್ ಏತಂ ಮನ್ತ್ರಂ ದೃಷ್ಟ್ವಾ ಉತ್ಥಿತಃ ಅನ್ಯಸ್ಮೈ

---

1. ಹೀಗೆ ಪ್ರಾಣ್ಯನುಗ್ರಹವನ್ನು ಮಾಡುವ ಸಾವಿರ ಯುಗಗಳು ಕಳೆದ ಮೇಲೆ ಎಂದರ್ಥ. ಸೂ. ಭಾ ೩-೩-೩೨ (ಭಾ. ಭಾ. ೩೮೦)ನ್ನು ನೋಡಿ.

2. ಉತ್ಕೃಷ್ಟವಾದ ಬ್ರಹ್ಮಸ್ವರೂಪದಲ್ಲಿಯೇ ಇದ್ದುಕೊಂಡು ಎಂದರ್ಥ.

3. ಉದಯಾಸ್ತಮಯಗಳಿಲ್ಲದ ಕೈವಲ್ಯಸ್ವರೂಪದಲ್ಲಿದ್ದುಕೊಂಡು ಎಂದರ್ಥ. ತನ್ನ ಅಧಿಕಾರವು ಕಳೆದ ಬಳಿಕ ಸೂರ್ಯನು ಕೈವಲ್ಯವನ್ನೇ ಅನುಭವಿಸುತ್ತಾನೆ; ಉಪಾಸಕನೂ ಸೂರ್ಯಸಾಯುಜ್ಯವನ್ನು ಹೊಂದಿ ಕ್ರಮಮುಕ್ತಿಯನ್ನು ಪಡೆಯುತ್ತಾನೆ ಎಂದು ಆಶಯ.

ಪೃಷ್ಟವತೇ ಜಗಾದ। "ಯತಸ್ತ್ವಮ್ ಆಗತೋ ಬ್ರಹ್ಮಲೋಕಾತ್ ಕಿಂ ತತ್ರಾಪಿ ಅಹೋರಾತ್ರಾಭ್ಯಾಂ ಪರಿವರ್ತಮಾನಃ ಸವಿತಾ ಪ್ರಾಣಿನಾಮ್ ಆಯುಃ ಕ್ಷಪಯತಿ ಯಥೇಹ ಅಸ್ಮಾಕಮ್ ?" ಇತ್ಯೇವಂ ಪೃಷ್ಟಃ ಪ್ರತ್ಯಾಹ। ತತ್ ತತ್ರ ಯಥಾ ಪೃಷ್ಟೇ ಯಥೋಕ್ತೇ ಚ ಅರ್ಥೇ ಏಷ ಶ್ಲೋಕೋ ಭವತಿ ತೇನೋಕ್ತೋ ಯೋಗಿನಾ ಇತಿ ಶ್ರುತೇರ್ವಚನಮಿದಮ್ ॥

(ಭಾಷ್ಯಾರ್ಥ)

ಇಲ್ಲಿ ಯಾವನೋ ಒಬ್ಬ ಉಪಾಸಕನು ವಸುಗಳೇ ಮುಂತಾದ ಆಚಾರವುಳ್ಳವನಾಗಿ ಮೇಲೆ ಹೇಳಿದ ಕ್ರಮದಿಂದ[1] ರೋಹಿತವೇ ಮುಂತಾದ ಅಮೃತಗಳ ಭೋಗವನ್ನು ಪಡೆದು ತನ್ನ ಆತ್ಮನಾದ ಸೂರ್ಯನೇ ತಾನೆಂದು ಇಟ್ಟುಕೊಂಡು[2] ಸಮಾಹಿತನಾಗಿ (ಈ ಮುಂದೆ ಹೇಳುವ) ಮಂತ್ರವನ್ನು ಕಂಡುಹಿಡಿದು, (ಸಮಾಧಿಯಿಂದ) ಎದ್ದವನಾಗಿ[3] ಕೇಳಿದ ಮತ್ತೊಬ್ಬನಿಗೆ ಹೇಳಿವನು. "ನೀನು ಬ್ರಹ್ಮಲೋಕದಿಂದ ಬಂದಿರುವೆಯಷ್ಟೆ, ಅಲ್ಲಿಯೂ ಹಗಲುರಾತ್ರೆಗಳಿಂದ ಸುತ್ತುತ್ತಾ ಪ್ರಾಣಿಗಳ ಆಯುಸ್ಸನ್ನು, ಇಲ್ಲಿ ನಮ್ಮಗಳ (ಆಯುಸ್ಸನ್ನು ಕ್ಷಯಗೊಳಿಸುತ್ತಿರುವಂತೆಯೇ) ಕ್ಷಯಗೊಳಿಸುತ್ತಿರುವನೇನು ? –ಎಂದು ಕೇಳಲು (ಈ ಮಂತ್ರದಿಂದ) ಉತ್ತರವನ್ನು ಕೊಟ್ಟನು. (ತತ್= ತತ್ರ) ಅಲ್ಲಿ, (ಅವನು) ಕೇಳಿದ ಮತ್ತು ಮೇಲೆ ಹೇಳಿರುವ ಅರ್ಥದ (ವಿಷಯ)ದಲ್ಲಿ ಆ ಯೋಗಿಯು ಹೇಳಿದ ಈ ಶ್ಲೋಕವಿರುತ್ತದೆ ಎಂಬುದು ಶ್ರುತಿಯ ವಚನವು.

(ಉಪನಿಷತ್ತು)

**ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ ।**
**ದೇವಾಸ್ತೇನಾಹಗ್ಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೇತಿ ॥ ೨ ॥**

೨. ಅಲ್ಲಿ (ಇದು) ಇರುವದಿಲ್ಲ. (ಅಲ್ಲಿ) ಎಂದಿಗೂ ನಿಮ್ಲುಕ್ತನಾಗಲಿಲ್ಲ, ಉದಯಿಸಲೂ ಇಲ್ಲ. ದೇವತೆಗಳಿರ, ಆ ಸತ್ಯದಿಂದಲೇ ನಾನು ಬ್ರಹ್ಮಕ್ಕೆ ಎದುರಾಗದೆ ಇರುವಂತಾಗಲಿ !

## ಬ್ರಹ್ಮಲೋಕದ ವಿಷಯಕ್ಕೆ ಉಪಾಸಕನ ಅನುಭವ

(ಭಾಷ್ಯ)

೨೨೫. ನ ವೈ ತತ್ರ ಯತೋಽಹಂ ಬ್ರಹ್ಮಲೋಕಾತ್ ಆಗತಃ ತಸ್ಮಿನ್ ನ ವೈ ತತ್ರ ಏತದಸ್ತಿ ಯತ್ ಪೃಚ್ಛಸಿ। ನ ಹಿ ತತ್ರ ನಿಮ್ಲೋಚ ಅಸ್ತಮುಗಮತ್

1. ವಸ್ವಾದಿಕ್ರಮದಿಂದ.
2. ರೋಹಿತಾದ್ಯಮೃತಗಳಿಂದ ಕೂಡಿದ ಸೂರ್ಯನೇ ತಾನೆಂದು ಭಾವಿಸಿಕೊಂಡು.
3. ಸಮಾಧಿಯಲ್ಲಿ ಸೂರ್ಯಸಾಕ್ಷಾತ್ಕಾರವನ್ನು ಹೊಂದಿ ಎಚ್ಚತ್ತು.

ಸವಿತಾ ನ ಚ ಉದಿಯಾಯ ಉದ್ಗತಃ ಕುತಶ್ಚಿತ್ ಕದಾಚನ ಕಸ್ಮಿಂಶ್ಚಿದಪಿ ಕಾಲೇ ಇತಿ। ಉದಯಾಸ್ತಮಯವರ್ಜಿತೋ ಬ್ರಹ್ಮಲೋಕಃ ಇತ್ಯನುಪಪನ್ನಮ್ ಇತ್ಯುಕ್ತಃ ಶಪಥಮಿವ ಪ್ರತಿಪೇದೇ। ಹೇ ದೇವಾಃ ಸಾಕ್ಷಿಣೋ ಯೂಯಂ ಶೃಣುತ। ಯಥಾ ಮಯೋಕ್ತಂ ಸತ್ಯಂ ವಚಃ। ತೇನ ಸತ್ಯೇನ ಅಹಂ ಬ್ರಹ್ಮಣಾ ಬ್ರಹ್ಮಸ್ವರೂಪೇಣ ಮಾ॰ ವಿರಾಧಿಷಿ ಮಾ ವಿರುಧ್ಯೇಯಮ್। ಅಪ್ರಾಪ್ತಿರ್ಬ್ರಹ್ಮಣೋ ಮಮ ಮಾ ಭೂತ್ ಇತ್ಯರ್ಥಃ ॥

(ಭಾಷ್ಯಾರ್ಥ)

ನ ವೈ ತತ್ರ (ಎಂಬ ಕಂಡಿಕೆಯ ಅರ್ಥವೇನೆಂದರೆ), ಅಲ್ಲಿ ಯಾವ ಬ್ರಹ್ಮಲೋಕದಿಂದ ನಾನು ಬಂದಿರುವೆನೋ ಅಲ್ಲಿ, ನೀನು ಕೇಳಿದೆಯಲ್ಲ ಇದಿಲ್ಲ.[1] ಏಕೆಂದರೆ ಅಲ್ಲಿ ಸೂರ್ಯನು ಎಂದಿಗೂ ಯಾವ ಕಾಲದಲ್ಲಿಯೂ ನಿಮ್ಲುಕ್ತನಾಗಲಿಲ್ಲ, ಅಸ್ತಂಗತನಾಗಲೂ ಇಲ್ಲ, ಉದಯಿಸಲೂ ಇಲ್ಲ, ಹುಟ್ಟಲೂ ಇಲ್ಲ. ಬ್ರಹ್ಮಲೋಕವು ಉದಯಾಸ್ತಮಯರಹಿತವಾದದ್ದು ಎಂಬುದು ಹೊಂದುವದಿಲ್ಲವಲ್ಲ[2]! ಎಂದು (ಪೃಚ್ಛಕನು) ಕೇಳಲಾಗಿ (ಆ ಉಪಾಸಕನು) ಆಣೆಯಿಟ್ಟಂತೆ[3] ಹೀಗೆಂಬನು : ಎಲೈ ದೇವತೆಗಳಿರ, ನೀವು ಸಾಕ್ಷಿಗಳಾಗಿ (ಈ ಮಾತನ್ನು) ಕೇಳಿರಿ! ನಾನು ನಿಜವಾದ ಮಾತನ್ನೇ ಆಡಿದ್ದರೆ, ಆ ಸತ್ಯವಚನ(ಮಹಿಮೆ)ಯಿಂದ ನಾನು ಬ್ರಹ್ಮಕ್ಕೆ ಬ್ರಹ್ಮಸ್ವರೂಪಕ್ಕೆ (ಮಾ ವಿರಾಧಿಷಿ= ಮಾ ವಿರುಧ್ಯೇಯಮ್) ಎದುರಾಗದೆ ಇರುವಂತಾಗಲಿ ವಿರುದ್ಧನಾಗದೆ ಇರುವಂತಾಗಲಿ! ನನಗೆ ಬ್ರಹ್ಮದ ಅಪ್ರಾಪ್ತಿಯು ಆಗದಿರಲಿ !– ಎಂಬರ್ಥ.

(ಉಪನಿಷತ್ತು)

**ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ ॥ ೩ ॥**

೩. ಯಾವನು ಈ ಬ್ರಹ್ಮೋಪನಿಷತ್ತನ್ನು ಅರಿತುಕೊಳ್ಳುವನೋ, ಅವನಿಗೆ ಉದಯವಾಗುವದಿಲ್ಲ, ನಿಮ್ಲುಕ್ತನಾಗುವದೂ ಇಲ್ಲ ; ಅವನಿಗೆ ಯಾವಾಗಲೂ ಹಗಲೇ ಆಗಿರುತ್ತದೆ.

---

1. ಅಲ್ಲಿಯೂ ಉದಯಾಸ್ತಮಯಗಳಿಂದ ಜನರ ಆಯುಸ್ಸು ಸವೆಯುತ್ತಿರುವದೊ ? – ಎಂದು ಕೇಳಿದೆಯಲ್ಲ, ಇದು ಅಲ್ಲಿಲ್ಲ ಯಾವ ಪರಿಣಾಮವೂ ಇಲ್ಲದೆ ಆ ಲೋಕವು ಬ್ರಹ್ಮಕಲ್ಪದವರೆಗೂ ಇರುತ್ತದೆ ಎಂದು ಭಾವ.

2 ಅದೂ ಲೋಕವೇ ಆದ್ದರಿಂದ ಅಲ್ಲಿಯೂ ಉದಯಾಸ್ತಮಯಗಳಿರಬೇಕಲ್ಲ ! – ಎಂದು ಭಾವ.

3 ಶಪಥವೂ ಒಂದು ಪ್ರಮಾಣ, ಆದ್ದರಿಂದ ಇಲ್ಲಿ ಆ ಯೋಗಿಯು ಸತ್ಯವನ್ನೇ ಹೇಳಿದನ್ತಾನೆ ಎಂದು ಭಾವ. ಬೃ. ಭಾ. ೧–೩–೨೪ (ಭಾ. ಭಾ. ೮೮).

# ಮಧುವಿದ್ಯೆಗೆ ಕಾಲಾಪರಿಚ್ಛಿನ್ನಬ್ರಹ್ಮಪ್ರಾಪ್ತಿಯೇ ಫಲ

(ಭಾಷ್ಯ)

೨೨೬. ಸತ್ಯಂ ತೇನೋಕ್ತಮಿತ್ಯಾಹ ಶ್ರುತಿಃ। ನ ಹ ವಾ ಅಸ್ಮೈ। ಯಥೋಕ್ತಬ್ರಹ್ಮವಿದೇ ನೋದೇತಿ ನ ನಿಮ್ಲೋಚತಿ ನಾಸ್ತಮೇತಿ ಕಿಂತು। ಬ್ರಹ್ಮವಿದೇ ಅಸ್ಮೈ ಸಕೃದ್ದಿವಾ ಹೈವ ಸದೈವ ಅಹರ್ಭವತಿ ಸ್ವಯಂಜ್ಯೋತಿಷ್ಟ್ವಾದ್ ಯ ಏತಾಂ ಯಥೋಕ್ತಾಂ ಬ್ರಹ್ಮೋಪನಿಷದಂ ವೇದಗುಹ್ಯಂ ವೇದ। ಏವಂ ತನ್ತ್ರೇಣ ವಂಶಾದಿತ್ರಯಂ ಪ್ರತ್ಯಮೃತಸಂಬನ್ಧಂ ಚ ಯಚ್ಚ ಅನ್ಯದ್ ಅವೋಚಾಮ ಏವಂ ಜಾನಾತಿ ಇತ್ಯರ್ಥಃ। ವಿದ್ವಾನ್ ಉದಯಾಸ್ತಮಯಕಾಲಾಪರಿಚ್ಛೇದ್ಯಂ ನಿತ್ಯಮಜಂ ಬ್ರಹ್ಮ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಆ (ಉಪಾಸಕನು) ಹೇಳಿದ್ದು ಸತ್ಯವು ಎಂದು ಶ್ರುತಿ ಹೇಳುತ್ತಿದೆ: ಅವನಿಗೆ ಮೇಲೆ ಹೇಳಿರುವ ಬ್ರಹ್ಮವನ್ನು ಅರಿತುಕೊಂಡವನಿಗೆ ಉದಯವಾಗುವದೂ ಇಲ್ಲ, ನಿಮ್ಲುಕ್ತನಾಗುವದೂ ಇಲ್ಲ, ಅಸ್ತನಾಗುವದೂ ಇಲ್ಲ, ಮತ್ತೇನೆಂದರೆ ಈ ಬ್ರಹ್ಮಜ್ಞಾನಿಗೆ ಯಾವಾಗಲೂ ಹಗಲೇ ಆಗಿರುತ್ತದೆ, ಸ್ವಯಂಜ್ಯೋತಿಯಾಗಿರುವದರಿಂದ[1] (ಅವನಿಗೆ) ಎಂದೆಂದಿಗೂ ಹಗಲೇ ಆಗಿರುತ್ತದೆ ಯಾವನು ಈ ಬ್ರಹ್ಮೋಪನಿಷತ್ತನ್ನು, ವೇದದ ರಹಸ್ಯವನ್ನು[2] ಅರಿತುಕೊಂಡಿರುವನೋ, ಹೀಗೆ ತಂತ್ರದಿಂದ[3] ವಂಶವೇ ಮುಂತಾದ ಮೂರನ್ನೂ[4] ಒಂದೊಂದು ಅಮೃತಕ್ಕೂ (ದೇವತಾ)ಸಂಬಂಧವನ್ನು[5], ಇನ್ನೂ ಏನೇನು ಹೇಳಿರುವೆವೋ (ಅದೆಲ್ಲವನ್ನೂ)[6] ಹೀಗೆ ಅರಿತಿರುವನೋ (ಅವನಿಗೆ) ಎಂದರ್ಥ. ಉಪಾಸಕನು ಉದಯಾಸ್ತಮಯಕಾಲಗಳಿಂದ ಪರಿಚ್ಛಿನ್ನವಲ್ಲದ ನಿತ್ಯವಾದ ಅಜನಾದ ಬ್ರಹ್ಮವೇ ಆಗುವನು[7] ಎಂದರ್ಥ.

---

1. ಬ್ರಹ್ಮವು ಸೂರ್ಯಾದಿಗಳನ್ನು ಬೆಳಗುವ ಸ್ವಯಂಜ್ಯೋತಿಯಾಗಿರುವದರಿಂದ ಅವನು ಬ್ರಹ್ಮಸ್ವರೂಪನೇ ಆಗಿರುವಾಗ ಅವನಿಗೆ ಹಗಲುರಾತ್ರಿಗಳಿರುವದಿಲ್ಲ.

2. ಉಪಾಸನೆಯನ್ನು ಎಂದರ್ಥ. 3 ಏಕಕಾಲದಲ್ಲಿ

4. ಮಧುವಿನ ಅಡ್ಡಬಿದಿರು, ಜೇನುಹುಟ್ಟು, ಮಧುನಾಡಿ – ಇವನ್ನು

5. ಅಮೃತಗಳು ವಸುರುದ್ರಾದಿಗಳಿಗೆ ಅಮೃತವಾಗಿರುವದೆಂಬುವನ್ನು.

6. ವಸ್ವಾದಿಗಳೂ ಉಪಾಸಕನೂ ಈ ಅಮೃತಗಳನ್ನು ಅನುಭವಿಸುವ ಪ್ರಕಾರವೇ ಮುಂತಾದದ್ದನ್ನು.

7. ಕ್ರಮಮುಕ್ತಿಯನ್ನೇ ಪಡೆಯುವನು

## ಮಧುವಿದ್ಯೆಯ ಗುರುಪರಂಪರೆ

(ಉಪನಿಷತ್ತು)

**ತದ್ಧೈತದ್ ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿ ರ್ಮನವೇ ಮನುಃ ಪ್ರಜಾಭ್ಯಸ್ತದ್ಧೈತದುದ್ದಾಲಕಾಯಾಽಽರುಣ ಯೇ ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರೋವಾಚ ॥ ೪ ॥**

೪. ಆ ಇದನ್ನು ಬ್ರಹ್ಮನು ಪ್ರಜಾಪತಿಗೆ ಹೇಳಿದನು ; ಪ್ರಜಾ ಪತಿಯು ಮನುವಿಗೆ, ಮನುವು ಪ್ರಜೆಗಳಿಗೆ (ಹೇಳಿದನು). ಆ ಈ ಬ್ರಹ್ಮ(ವಿಜ್ಞಾನ)ವನ್ನು ಉದ್ದಾಲಕ ಆರುಣಿ ಎಂಬ ಜ್ಯೇಷ್ಠಪುತ್ರನಿಗೆ (ಅವನ) ತಂದೆಯು ಹೇಳಿದನು.

## ವಿದ್ಯೆಯ ಸ್ತುತಿ

(ಭಾಷ್ಯ)

೨೨೭ ತದ್ ಹ ಏತತ್ ಮಧುಜ್ಞಾನಮ್ ಬ್ರಹ್ಮಾ ಹಿರಣ್ಯಗರ್ಭಃ ವಿರಾಜೇ ಪ್ರಜಾಪತಯೇ ಉವಾಚ। ಸೋಽಪಿ ಮನವೇ। ಮನುಃ ಇಕ್ಷ್ವಾಕ್ವಾ ದ್ಯಾಭ್ಯಃ ಪ್ರಜಾಭ್ಯಃ ಪ್ರೋವಾಚ। ಇತಿ ವಿದ್ಯಾಂ ಸ್ತೌತಿ। ಬ್ರಹ್ಮಾದಿವಿಶಿಷ್ಟ ಕ್ರಮಾಗತಾ ಇತಿ। ಕಿಂ ಚ ತದ್ಧೈತತ್ ಮಧುಜ್ಞಾನಮ್ ಉದ್ದಾಲಕಾಯ ಆರುಣಯೇ ಪಿತಾ ಬ್ರಹ್ಮವಿಜ್ಞಾನಂ ಜ್ಯೇಷ್ಠಾಯ ಪುತ್ರಾಯ ಪ್ರೋವಾಚ ॥

(ಭಾಷ್ಯಾರ್ಥ)

ಆ ಈ ಮಧುಜ್ಞಾನವನ್ನು ಬ್ರಹ್ಮನು, ಹಿರಣ್ಯಗರ್ಭನು ಪ್ರಜಾಪತಿಗೆ ವಿರಾಜನಿಗೆ ಹೇಳಿದನು ಆ (ವಿರಾಜನೂ) ಮನುವಿಗೆ, ಮನುವು ಇಕ್ಷ್ವಾಕುವೇ ಮೊದಲಾದ ಪ್ರಜೆಗಳಿಗೆ ಹೇಳಿದನು ಎಂದು ವಿದ್ಯೆಯನ್ನು—'ಹೀಗೆ ಬ್ರಹ್ಮಾದಿ ಗಳೆಂಬ ಅಸಾಧಾರಣಕ್ರಮದಿಂದ (ಇದು) ಬಂದಿದೆ' ಎಂದು—ಹೊಗಳಿರುತ್ತದೆ.[1] ಮತ್ತು ಆ ಈ ಮಧುಜ್ಞಾನವನ್ನು ಉದ್ದಾಲಕ ಆರುಣಿ ಎಂಬ ಹಿರಿಯಮಗನಿಗೆ (ಅವನ) ತಂದೆಯು ಹೇಳಿಕೊಟ್ಟನು.

---

1. ವಿರಾಜನಿಗೆ ಈ ಉಪಾಸನೆಯು ಬೇಕಿಲ್ಲದಿದ್ದರೂ ಮನ್ವಾದಿಕ್ರಮದಿಂದ ಪ್ರಜೆಗಳಿಗೆ ಸಂಪ್ರದಾಯಾಗತವಾಗಿ ಬಂದದ್ದು ಎಂದು ಹೊಗಳಿದೆ ಎಂದರ್ಥ. ಮಧುವಿದ್ಯೆಯಲ್ಲಿ ಆದಿತ್ಯ ನಿಗೆ ಅಧಿಕಾರವಿಲ್ಲದಿದ್ದರೂ ಶುದ್ಧಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟು, ಆದ್ದರಿಂದ ಆದಿತ್ಯ ಸಾಯುಜ್ಯವನ್ನು ಪಡೆದವನಿಗೂ ಕ್ರಮಮುಕ್ತಿಯಾಗಬಹುದಾಗಿದೆ. ಸೂ. ಭಾ. ೧-೩-೩೩ (ಛಾ. ಭಾ ೩೦೩, ೩೦೧) ನೋಡಿರಿ.

# ಈ ವಿದ್ಯೆಯ ಉಪದೇಶಕ್ಕೆ ಅಧಿಕಾರಿಗಳು

(ಉಪನಿಷತ್ತು)

**ಇದಂ ವಾವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾತ್ ಪ್ರಣಾಯ್ಯಾಯ ವಾಽನ್ತೇವಾಸಿನೇ ॥ ೫ ॥**

**ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇಮಾಮದ್ಭಿಃ ಪರಿಗೃಹೀತಾಂ ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋ ಭೂಯ ಇತ್ಯೇತದೇವ ತತೋ ಭೂಯ ಇತಿ ॥ ೬ ॥**

೫. ಆ ಈ ಬ್ರಹ್ಮವನ್ನು ಜ್ಯೇಷ್ಠಪುತ್ರನಿಗೆ ತಂದೆಯು ಹೇಳಬೇಕು ; ಅಥವಾ ಪ್ರಣಾಯ್ಯನಾದ ಅಂತೇವಾಸಿಗೆ (ಹೇಳಬೇಕು).

೬. ಬೇರೆ ಯಾವನೊಬ್ಬನಿಗೂ—ಇವನಿಗೆ ಈ ನೀರಿನಿಂದ ಸುತ್ತುವರೆದಿರುವ ಧನಪೂರ್ಣವಾದ ಈ (ಪೃಥಿವಿಯನ್ನು) ಕೊಟ್ಟರೂ—(ಹೇಳ)ಬಾರದು. ಅದಕ್ಕಿಂತಲೂ ಇದೇ ಹೆಚ್ಚಿನದು ; ಅದಕ್ಕಿಂತ ಇದೇ ಹೆಚ್ಚಿನದು.

## ಜ್ಯೇಷ್ಠಪುತ್ರ, ಯೋಗ್ಯಶಿಷ್ಯ–ಇಬ್ಬರೇ ಅಧಿಕಾರಿಗಳು

(ಭಾಷ್ಯ)

೨೨೮. ಇದಂ ವಾವ ತತ್ ಯಥೋಕ್ತಮ್ ಅನ್ಯೋಽಪಿ ಜ್ಯೇಷ್ಠಾಯ ಪುತ್ರಾಯ ಸರ್ವಪ್ರಿಯಾರ್ಹಾಯ ಬ್ರಹ್ಮ ಪ್ರಬ್ರೂಯಾತ್। ಪ್ರಣಾಯ್ಯಾಯ ವಾ ಯೋಗ್ಯಾಯ ಅನ್ತೇವಾಸಿನೇ ಶಿಷ್ಯಾಯ। ನಾನ್ಯಸ್ಮೈ ಕಸ್ಮೈಚನ ಪ್ರಬ್ರೂಯಾತ್। ತೀರ್ಥದ್ವಯಮ್ ಅನುಜ್ಞಾತಮ್ ಅನೇಕೇಷಾಂ ಪ್ರಾಪ್ತಾನಾಂ ತೀರ್ಥಾನಾಮ್ ಆಚಾರ್ಯಾದೀನಾಮ್। ಕಸ್ಮಾತ್ ಪುನಸ್ತೀರ್ಥಸಂಕೋಚನಂ ವಿದ್ಯಾಯಾಃ ಕೃತಮಿತಿ ? ಆಹ। ಯದ್ಯಪಿ ಅಸ್ಮೈ ಆಚಾರ್ಯಾಯ ಇಮಾಂ ಕಶ್ಚಿತ್ ಪೃಥಿವೀಮ್ ಅದ್ಭಿಃ ಪರಿಗೃಹೀತಾಂ ಸಮುದ್ರಪರಿವೇಷ್ಟಿತಾಂ ಸಮಸ್ತಾಮಪಿ ದದ್ಯಾತ್ ಅಸ್ಯಾ ವಿದ್ಯಾಯಾ ನಿಷ್ಕ್ರಯಾರ್ಥಮ್ ಆಚಾರ್ಯಾಯ ಧನಸ್ಯ ಪೂರ್ಣಾಂ ಸಂಪನ್ನಾಂ ಭೋಗೋಪಕರಣೈಃ ನಾನಾವಸ್ಯ ನಿಷ್ಕ್ರಯಃ। ಯಸ್ಮಾತ್ ತತೋಽಪಿ ದಾನಾತ್ ಏತದೇವ ಯನ್ಮಧುವಿದ್ಯಾದಾನಂ ಭೂಯಃ ಬಹುತರಫಲಮ್ ಇತ್ಯರ್ಥಃ। ದ್ವಿರಭ್ಯಾಸ ಆದರಾರ್ಥಃ ॥

(ಭಾಷ್ಯಾರ್ಥ)

ಮೇಲೆ ಹೇಳಿರುವ ಆ ಈ ಬ್ರಹ್ಮವನ್ನು ಮತ್ತೊಬ್ಬ (ಆಚಾರ್ಯ)ನಾದರೂ ಎಲ್ಲಾ ಪ್ರಿಯ(ವಸ್ತುಗಳ ದಾನಕ್ಕೂ) ಪಾತ್ರನಾದ ಹಿರಿಯಮಗನಿಗೆ ಹೇಳ

ಬಹುದು, ಅಥವಾ ಪ್ರಣಾಯ್ಯನಾದ ಯೋಗ್ಯನಾದ ಅಂತೇವಾಸಿಗೆ ಶಿಷ್ಯನಿಗೆ ಹೇಳಬಹುದು.

ಬೇರೆ ಯಾವನಿಗೂ ಹೇಳಬಾರದು ಆಚಾರ್ಯನೇ ಮೊದಲಾಗಿ ಪ್ರಾಪ್ತವಾಗಿರುವ ಅನೇಕ ತೀರ್ಥಗಳಲ್ಲಿ[1] ಎರಡು ತೀರ್ಥಗಳನ್ನು (ಮಾತ್ರ ಇಲ್ಲಿ) ಆಗಬಹುದೆಂದಿದೆ. (ಈ) ವಿದ್ಯೆಗೆ ತೀರ್ಥಗಳನ್ನು ಸಂಕೋಚಮಾಡಿದ್ದೇಕೆ ? -ಎಂದರೆ (ಶ್ರುತಿ) ಹೇಳುತ್ತದೆ ಈ ಆಚಾರ್ಯನಿಗೆ ಯಾವನಾದರೊಬ್ಬನು ನೀರಿನಿಂದ ಸುತ್ತುವರೆದಿರುವ ಕಡಲಿನಿಂದ ಸುತ್ತುಗಟ್ಟಲ್ಪಟ್ಟಿರುವ ಈ[2] ಪೃಥಿವಿಯನ್ನು ಇಡಿಯ (ಭೂಮಿಯನ್ನೇ), ಈ ವಿದ್ಯೆಯ ನಿಷ್ಕ್ರಯಕ್ಕಾಗಿ ಧನಪೂರ್ಣವಾದ ಭೋಗೋಪಕರಣಗಳಿಂದ ಕೂಡಿರುವ (ಭೂಮಿಯನ್ನೇ) ಆಚಾರ್ಯನಿಗೆ ಕೊಡುತ್ತಾನಾದರೂ ಇದಕ್ಕೆ ಅದು ನಿಷ್ಕ್ರಯ(ವಾಗ)ಲಾರದು ಏಕೆಂದರೆ ಆ ದಾನಕ್ಕಿಂತಲೂ ಈ ಮಧುವಿದ್ಯಾದಾನವಿದೆಯಲ್ಲ, ಇದೇ ಹೆಚ್ಚಿನದು. ಹೆಚ್ಚಿನ ಫಲವುಳ್ಳದ್ದು ಎಂದರ್ಥ[3] (ಅದಕ್ಕಿಂತ ಇದೇ ಹೆಚ್ಚಿನದು ಎಂದು) ಎರಡುಸಲ ಹೇಳಿರುವದು ಆದರಕ್ಕಾಗಿ

---

# ಮೂರನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಗಾಯತ್ರೀಬ್ರಹ್ಮೋಪಾಸನೆ)

## ಗಾಯತ್ರೀಬ್ರಹ್ಮದ ಮಹಿಮೆ

(ಉಪನಿಷತ್ತು)

**ಗಾಯತ್ರೀ ವಾ ಇದಗ್ಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ ವಾಗ್ವಾ ಇದಗ್ಂ ಸರ್ವಂ ಭೂತಂ ಗಾಯತಿ ಚ ತ್ರಾಯತೇ ಚ ॥ ೧ ॥**

೧. ಇದು ಯಾವಯಾವದಿದೆಯೋ ಈ ಎಲ್ಲಾ ಭೂತವೂ ಗಾಯತ್ರಿಯೇ. ವಾಕ್ಕೇ ಗಾಯತ್ರಿ ; ವಾಕ್ಕೇ ಈ ಎಲ್ಲಾ ಭೂತವು. (ಅದು) ಹೇಳುತ್ತದೆ, ಕಾಪಾಡುತ್ತದೆ.

---

1 ಮುಂದೆ ೪-೨-೬ರ ಭಾಷ್ಯದಲ್ಲಿ ವಿದ್ಯೆಗೆ ಆರು ತೀರ್ಥಗಳು, ಆರು ಜನರು ಪಾತ್ರರು ಎಂದು ಹೇಳಿದೆ, ಅವರೊಳಗೆ.

2. 'ಇಮಾಮ್' ಎಂದಿಷ್ಟೇ ಹೇಳಿದರೂ ಈ ಭೂಮಿ ಎಂಬರ್ಥವು ವೇದದಲ್ಲಿರುತ್ತದೆ.

3. ಆದ್ದರಿಂದ ಧನದಾನವೇ ಮುಂತಾದವು ಇಲ್ಲಿ ವಿದ್ಯಾದಾನಕ್ಕೆ ಸಾಲವು ಎಂದಭಿಪ್ರಾಯ.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೪೯. ಯತ ಏವಮ್ ಅತಿಶಯಫಲೈಷಾ ಬ್ರಹ್ಮವಿದ್ಯಾ, ಅತಃ ಸಾ ಪ್ರಕಾರಾನ್ತರೇಣಾಪಿ ವಕ್ತವ್ಯಾ ಇತಿ 'ಗಾಯತ್ರೀ ವಾ' ಇತ್ಯಾದಿ ಆರಭ್ಯತೇ। ಗಾಯತ್ರ್ಯುಪಾಧಿದ್ವಾರೇಣ ಚ ಉಚ್ಯತೇ ಬ್ರಹ್ಮ। ಸರ್ವವಿಶೇಷರಹಿತಸ್ಯ ನೇತಿನೇತೀತ್ಯಾದಿವಿಶೇಷಣಪ್ರತಿಷೇಧಗಮ್ಯಸ್ಯ ದುರ್ಬೋಧತ್ವಾತ್। ಸತ್ಸು ಅನೇಕೇಷು ಛನ್ದಃಸು ಗಾಯತ್ರ್ಯಾ ಏವ ಬ್ರಹ್ಮಜ್ಞಾನದ್ವಾರತಯಾ ಉಪಾದಾನಂ ಪ್ರಾಧಾನ್ಯಾತ್। ಸೋಮಾಹರಣಾತ್ ಇತರಚ್ಛನ್ದೋಽಕ್ಷರಾಹರಣೇನ ಇತರಚ್ಛನ್ದೋವ್ಯಾಪ್ತ್ಯಾ ಚ ಸರ್ವಸವನವ್ಯಾಪಕತ್ವಾಚ್ಚ ಯಜ್ಞೇ ಪ್ರಾಧಾನ್ಯಂ ಗಾಯತ್ರ್ಯಾಃ। ಗಾಯತ್ರೀಸಾರತ್ವಾಚ್ಚ ಬ್ರಾಹ್ಮಣಸ್ಯ ಮಾತರಮಿವ ಹಿತ್ವಾ ಗುರುತರಾಂ ಗಾಯತ್ರೀಂ ತತೋಽನ್ಯದ್ ಗುರುತರಂ ನ ಪ್ರತಿಪದ್ಯತೇ ಯಥೋಕ್ತಂ ಬ್ರಹ್ಮಾಪೀತಿ। ತಸ್ಯಾಮ್ ಅತ್ಯನ್ತಗೌರವಸ್ಯ ಪ್ರಸಿದ್ಧತ್ವಾತ್। ಅತೋ ಗಾಯತ್ರೀಮುಖೇನೈವ ಬ್ರಹ್ಮೋಚ್ಯತೇ ॥

(ಭಾಷ್ಯಾರ್ಥ)

ಹೀಗೆ ಈ ಬ್ರಹ್ಮವಿದ್ಯೆಯು ಅತಿಶಯಫಲವುಳ್ಳದ್ದಾಗಿರುವದಷ್ಟೆ, ಆದ್ದರಿಂದ ಅದನ್ನು ಮತ್ತೊಂದು ಪ್ರಕಾರದಿಂದಲೂ ಹೇಳಬೇಕೆಂದು 'ಗಾಯತ್ರೀ ವಾ' ಮುಂತಾದದ್ದನ್ನು ಆರಂಭಿಸಿರುತ್ತದೆ

ಗಾಯತ್ರಿಯ ದ್ವಾರದಿಂದಲೇ ಬ್ರಹ್ಮವನ್ನು ಹೇಳಿರುತ್ತದೆ, ಏಕೆಂದರೆ ಯಾವ ವಿಶೇಷವೂ ಇಲ್ಲದೆ ನೇತಿನೇತಿ (ಹೀಗಲ್ಲ, ಹೀಗಲ್ಲ) ಎಂದು ಎಲ್ಲಾ ವಿಶೇಷಗಳನ್ನೂ ಅಲ್ಲಗಳೆಯುವದರಿಂದ ಅರಿತುಕೊಳ್ಳಬೇಕಾಗಿರುವ (ಬ್ರಹ್ಮವು) ಅರಿತುಕೊಳ್ಳಲ್ಪಡಕ್ಕೆ ಕಷ್ಟವಾಗಿರುತ್ತದೆ ಅನೇಕ ಛಂದಸ್ಸುಗಳು ಇದ್ದರೂ[1] ಗಾಯತ್ರಿಯನ್ನೇ ಬ್ರಹ್ಮಜ್ಞಾನಕ್ಕೆ ದ್ವಾರವೆಂದು ತೆಗೆದುಕೊಂಡಿರುವದು[2] (ಅದು) ಪ್ರಧಾನವಾಗಿರುವದರಿಂದ ಸೋಮವನ್ನು ತಂದದ್ದರಿಂದಲೂ[3] ಮಿಕ್ಕ ಛಂದಸ್ಸುಗಳ ಅಕ್ಷರಗಳನ್ನು ತಂದದ್ದರಿಂದಲೂ[4] ಇತರ ಛಂದಸ್ಸುಗಳನ್ನು ವ್ಯಾಪಿಸಿಕೊಂಡಿರುವದ

---

1. ಜಗತೀ, ತ್ರಿಷ್ಟುಪ್– ಮುಂತಾದ ಮಿಕ್ಕ ಛಂದಸ್ಸುಗಳಿದ್ದರೂ ಎಂದರ್ಥ.

2. ಬ್ರಹ್ಮವನ್ನು ಇದರ ಮೂಲಕವಾಗಿ ತಿಳಿಸುವದಕ್ಕೆ ಹೊರಟಿರುವದು.

3. ಸುಪರ್ಣಾಕಾರವಾಗಿ ಹೋಗಿ ದ್ಯುಲೋಕದಿಂದ ಗಾಯತ್ರಿಯು ತಂದಿತೆಂದು ಬ್ರಾಹ್ಮಣವಾದ ಐ. ಬ್ರಾ. ೧೩–೨.

4. ಜಗತೀಛಂದಸ್ಸು ಮೂರಕ್ಷರಗಳನ್ನೂ ತ್ರಿಷ್ಟುಪ್ಪು ಒಂದಕ್ಷರವನ್ನೂ ಬಿಟ್ಟುಬಿಟ್ಟು ಬಂದಿದ್ದವು, ಆ ಅಕ್ಷರವನ್ನು ಗಾಯತ್ರಿಯು ತೆಗೆದುಕೊಂಡುಬಂದಿತು. ಐ ಬ್ರಾ. ೧೩–೧, ೨.

ರಿಂದಲೂ ಎಲ್ಲಾ ಸವನಗಳನ್ನೂ ವ್ಯಾಪಿಸಿಕೊಂಡಿರುವದರಿಂದಲೂ[1] ಗಾಯತ್ರಿಗೆ ಯಜ್ಞದಲ್ಲಿ ಪ್ರಾಧಾನ್ಯವಿರುತ್ತದೆ, ಬ್ರಾಹ್ಮಣನಿಗೆ ಗಾಯತ್ರಿಯೇ ಸಾರವಾಗಿರುವದರಿಂದಲೂ[2] (ಅದನ್ನು ಬ್ರಹ್ಮದ್ವಾರವಾಗಿ ತೆಗೆದುಕೊಂಡಿರುತ್ತದೆ) ತಾಯಿಯಂತೆ ಗುರುತರವಾಗಿರುವ ಗಾಯತ್ರಿಯನ್ನು ಬಿಟ್ಟರೆ ಅದಕ್ಕಿಂತ ಹೆಚ್ಚಿನ (ಛಂದಸ್ಸು) ಮೇಲೆ ಹೇಳಿದ ಬ್ರಹ್ಮಕ್ಕೆ ದೊರೆಯಲಾರದಾದ್ದರಿಂದ (ಅದನ್ನೇ ತೆಗೆದುಕೊಂಡಿದೆ) ಏಕೆಂದರೆ ಇದರಲ್ಲಿ ಅತ್ಯಂತಗೌರವವು ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಗಾಯತ್ರಿಯ ದ್ವಾರದಿಂದಲೇ ಬ್ರಹ್ಮವನ್ನು ಹೇಳಿರುತ್ತದೆ[3]

## ಗಾಯತ್ರಿಯು ಸರ್ವಭೂತಾತ್ಮಕವಾಗಿರುತ್ತದೆ

(ಭಾಷ್ಯ)

೨೩೦. ಗಾಯತ್ರೀ ವಾ ಇತಿ। ಅವಧಾರಣಾರ್ಥೋ ವೈಶಬ್ದಃ। ಇದಂ ಸರ್ವಂ ಭೂತಂ ಪ್ರಾಣಿಜಾತಂ ಯತ್ ಕಿಂ ಚ ಸ್ಥಾವರಂ ಜಙ್ಗಮಂ ವಾ ತತ್ ಸರ್ವಂ ಗಾಯತ್ರ್ಯೇವ। ತಸ್ಯಾಃ ಛನ್ದೋಮಾತ್ರಾಯಾಃ ಸರ್ವಭೂತತ್ವಮ್ ಅನುಪಪನ್ನಮ್ ಇತಿ ಗಾಯತ್ರೀಕಾರಣಂ ವಾಚಂ ಶಬ್ದರೂಪಾಮ್ ಆಪಾದಯತಿ ಗಾಯತ್ರೀಮ್ 'ವಾಗ್ವೈ ಗಾಯತ್ರೀ' ಇತಿ। ವಾಗ್ವಾ ಇದಂ ಸರ್ವಂ ಭೂತಮ್। ಯಸ್ಮಾದ್ ವಾಕ್‌ಶಬ್ದರೂಪಾ ಸತೀ ಸರ್ವಂ ಭೂತಂ ಗಾಯತಿ ಶಬ್ದಯತಿ ಅಸೌ ಗೌಃ ಅಸೌ ಅಶ್ವಃ ಇತಿ ಚ। ತ್ರಾಯತೇ ಚ ರಕ್ಷತಿ 'ಅಮುಷ್ಮಾತ್ ಮಾ ಭೈಷೀಃ ಕಿಂ ತೇ ಭಯಮ್ ಉತ್ಥಿತಮ್'– ಇತ್ಯಾದಿನಾ ಸರ್ವತೋ ಭಯಾತ್ ನಿವರ್ತ್ಯಮಾನೋ ವಾಚಾ ತ್ರಾತಃ ಸ್ಯಾತ್। ಯದ್ ವಾಕ್ ಭೂತಂ ಗಾಯತಿ ಚ

---

1. ಸವನಗಳನ್ನೂ ಇತರ ಛಂದಸ್ಸುಗಳನ್ನೂ ಗಾಯತ್ರಿಯು ವ್ಯಾಪಿಸಿಕೊಂಡಿರುವ ಬಗೆಯನ್ನು ಐ ಬ್ರಾ. ೧೩ ೪ರಲ್ಲಿ ವರ್ಣಿಸಿದ ಹಿಂದಕ್ಕೆ ಗಾಯತ್ರಿ, ಜಗತೀ, ತ್ರಿಷ್ಟುಪ್ಪು –ಈ ಮೂರಕ್ಕೆ ನಾಲ್ಕುನಾಲ್ಕಕ್ಷರಗಳಿದ್ದವು, ಸೋಮಾಹರಣವಾದಮೇಲೆ ಗಾಯತ್ರಿಗೆ ಎಂಟಕ್ಷರವಾದವು, ಜಗತಿಗೆ ಒಂದು, ತ್ರಿಷ್ಟುಪ್ಪಿಗೆ ಮೂರು – ಹೀಗಾದವು ಆದರ ಗಾಯತ್ರಿಯು ಮಧ್ಯಾಹ್ನಸವನದಲ್ಲಿ ತನ್ನಕ್ಷರಗಳನ್ನು ಕೊಟ್ಟು ತ್ರಿಷ್ಟುಪ್ಪಿಗೆ ಎಂಟಕ್ಷರವನ್ನೂ ಸಾಯಂಸವನದಲ್ಲಿ ಜಗತಿಗೆ ಹನ್ನೊಂದನ್ನೂ ಕೊಟ್ಟದ್ದರಿಂದ ಈಗ ಗಾಯತ್ರಿಗೆ ಎಂಟು, ತ್ರಿಷ್ಟುಪ್ಪಿಗೆ ಹನ್ನೊಂದಕ್ಷರವೂ ಜಗತಿಗೆ ಹನ್ನೆರಡೂ ಅಕ್ಷರಗ ಳಿವೆ ಎಂದು ಅಲ್ಲಿ ಹೇಳಿದೆ

2 'ಗಾಯತ್ರೋ ವೈ ಬ್ರಾಹ್ಮಣಃ', 'ತ್ರೈಷ್ಟುಭೋ ವೈ ರಾಜನ್ಯಃ', 'ಜಾಗತೋ ವೈ ವೈಶ್ಯಃ' –ಎಂದು ಐ. ಬ್ರಾ. ೫ ೨.

3 ಇಲ್ಲಿ ಗಾಯತ್ರಿಯೆಂಬ ಕಾರ್ಯದ್ವಾರದಿಂದ ತದನುಗತವಾದ ಬ್ರಹ್ಮವನ್ನು ಉಪಾಸನೆಮಾಡಬೇಕೆಂದು ಹೇಳಿದೆ ಎಂದು ಸೂ ಭಾ ೧–೧-೨೫ (ಭಾ ಭಾ. ೧೩೧)ರಲ್ಲಿ ನಿರ್ಣಯಿಸಿದೆ. ಗಾಯತ್ರಿ ಎಂಬ ಹೆಸರಿನಿಂದ ಸಾಕ್ಷಾತ್ತಾಗಿ ಬ್ರಹ್ಮವನ್ನೇ ಉಪಾಸನೆಮಾಡಬೇಕೆಂದು ತಿಳಿಸಿದೆ ಎಂಬ ಮತ್ತೊಂದು ಪಕ್ಷವೂ ಅಲ್ಲಿ (ಭಾ. ಭಾ. ೧೩೨ರಲ್ಲಿ) ಇದೆ, ಆದರೆ ಅದನ್ನೇಕೆ ಇಲ್ಲಿ ಪರಾಮರ್ಶಿಸಿಲ್ಲವೋ ತಿಳಿಯದು.

ತ್ರಾಯತೇ ಚ ಗಾಯತ್ರ್ಯೇವ ತದ್ ಗಾಯತಿ ಚ ತ್ರಾಯತೇ ಚ। ವಾಚೋಽನನ್ಯತ್ವಾತ್ ಗಾಯತ್ರ್ಯಾಃ। ಗಾನಾತ್ ತ್ರಾಣಾಚ್ಚ ಗಾಯತ್ರ್ಯಾ ಗಾಯತ್ರೀತ್ವಮ್ ॥

(ಭಾಷ್ಯಾರ್ಥ)

'ಗಾಯತ್ರೀ ವೈ' ಎಂಬಲ್ಲಿ ವೈಶಬ್ದವು ಅವಧಾರಣಾರ್ಥಕವಾದದ್ದು. ಈ ಎಲ್ಲಾ ಭೂತವೂ ಪ್ರಾಣಿಸಮೂಹವೂ ಸ್ಥಾವರವಾಗಲಿ ಜಂಗಮವಾಗಲಿ ಯಾವ ಯಾವದಿದೆಯೋ ಅದೆಲ್ಲವೂ ಗಾಯತ್ರಿಯೇ ಬರಿಯ ಛಂದಸ್ಸಾಗಿರುವದರಿಂದ ಆ (ಗಾಯತ್ರಿಯು) ಎಲ್ಲಾ ಭೂತವೂ ಆಗಿರುವದು ಹೊಂದುವದಿಲ್ಲವಾದ್ದರಿಂದ ಗಾಯತ್ರಿಗೆ ಕಾರಣವಾಗಿರುವ ಶಬ್ದರೂಪವಾದ ವಾಕ್ಕನ್ನಾಗಿ ಗಾಯತ್ರಿಯನ್ನು ಮಾಡಿ 'ವಾಕ್ವೈ ಗಾಯತ್ರಿ' ಎಂದು (ಶ್ರುತಿ) ಹೇಳಿರುತ್ತದೆ ವಾಕ್ಕೇ ಈ ಎಲ್ಲಾ ಭೂತವೂ ಆಗಿದೆ, ಏಕೆಂದರೆ ವಾಕ್ಕು ಶಬ್ದರೂಪವಾಗಿರುವದಾದ್ದರಿಂದ ಎಲ್ಲಾ ಭೂತವನ್ನೂ ಇದು ಎತ್ತು, ಇದು ಕುದುರೆ–ಎಂದು (ಗಾಯತಿ) ಹೇಳುತ್ತದೆ, ಹೆಸರಿಸುತ್ತದೆ ಮತ್ತು (ಇದು ತ್ರಾಯತೇ=) ಕಾಪಾಡುತ್ತದೆ, ರಕ್ಷಿಸುತ್ತದೆ, "ಇವಕ್ಕೆ ಅಂಜದಿರು, ನಿನಗೇನು ಅಂಜಿಕೆ ಬಂದಿದೆ?" ಎಂದು ಮುಂತಾದ (ವಾಕ್ಯರೂಪ)ದಿಂದ ಯಾವ ಭಯವೂ ಇಲ್ಲದಂತೆ ಮಾಡುವದರಿಂದ ವಾಕ್ಕು ಅವನನ್ನು ಕಾಪಾಡಿದಂತೆ ಆಗುತ್ತದೆ. ವಾಕ್ಕು (ಹೀಗೆ) ಭೂತವನ್ನು (ಗಾಯತಿ) ಹೆಸರಿಸುತ್ತದೆ, ಮತ್ತು (ತ್ರಾಯತೇ) ಕಾಪಾಡುತ್ತದೆಯಷ್ಟೆ? ಹಾಗೆ ಹೆಸರಿಸುವದೂ ಕಾಪಾಡುವದೂ ಗಾಯತ್ರಿಯೇ (ಎನ್ನಬೇಕು), ಏಕೆಂದರೆ ಗಾಯತ್ರಿಯು ವಾಕ್ಕಿಗಿಂತ ಬೇರೆಯಲ್ಲ[1] (ಹೀಗೆ) ಗಾನ(ಹೆಸರಿಸು)ವದರಿಂದಲೂ, ತ್ರಾಣ(ಕಾಪಾಡು)ವದರಿಂದಲೂ ಗಾಯತ್ರಿಯು ಗಾಯತ್ರಿಯಾಗಿದೆ[2]

(ಉಪನಿಷತ್ತು)

**ಯಾ ವೈ ಸಾ ಗಾಯತ್ರೀಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಗ್ಂ ಹೀದಗ್ಂ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿಶೀಯತೇ ॥ ೨ ॥**

೨. ಆ ಗಾಯತ್ರಿಯಿದೆಯಲ್ಲ, ಈ ಪೃಥಿವಿಯೆಂಬುದೇ ಅದು. ಈ (ಪೃಥಿವಿ)ಯಲ್ಲಲ್ಲವೆ, ಸರ್ವಭೂತವೂ ಪ್ರತಿಷ್ಠಿತವಾಗಿದೆ? ಇದನ್ನೇ (ಅಲ್ಲವೆ), ಬಿಟ್ಟುಹೋಗುವದಿಲ್ಲ?

1. ವಾಗ್ರೂಪವಾದ ಕಾರಣಕ್ಕಿಂತ ಕಾರ್ಯವಾದ ಗಾಯತ್ರಿಯು ಬೇರೆಯಲ್ಲವಾದ್ದರಿಂದ ವಾಕ್ಕು ಹೆಸರಿಸುವದು, ಕಾಪಾಡುವದು– ಎಂದರೆ ಗಾಯತ್ರಿಯು ಹೆಸರಿಸುತ್ತದೆ, ಕಾಪಾಡುತ್ತದೆ ಎಂದೇ ಆಯಿತು.

2. ಇದು ಗಾಯತ್ರೀಶಬ್ದದ ನಿರ್ವಚನವು.

## ಗಾಯತ್ರಿಯು ಪೃಥಿವ್ಯಾತ್ಮಕ

(ಭಾಷ್ಯ)

೨೩೧. ಯಾ ವೈ ಸಾ ಏವಂಲಕ್ಷಣಾ ಸರ್ವಭೂತರೂಪಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ। ಕಥಂ ಪುನರಿಯಂ ಪೃಥಿವೀ ಗಾಯತ್ರೀತಿ ? ಉಚ್ಯತೇ। ಸರ್ವಭೂತಸಂಬನ್ಧಾತ್। ಕಥಂ ಸರ್ವಭೂತಸಂಬನ್ಧಃ ? ಅಸ್ಯಾಂ ಪೃಥಿವ್ಯಾಂ ಹಿ ಯಸ್ಮಾತ್ ಸರ್ವಂ ಸ್ಥಾವರಂ ಜಙ್ಗಮಂ ಚ ಭೂತಂ ಪ್ರತಿಷ್ಠಿತಮ್। ಏತಾಮೇವ ಪೃಥಿವೀಂ ನಾತಿಶೀಯತೇ ನಾತಿವರ್ತತೇ ಇತ್ಯೇತತ್। ಯಥಾ ಗಾನತ್ರಾಣಾಭ್ಯಾಂ ಭೂತಸಂಬನ್ಧೋ ಗಾಯತ್ರ್ಯಾಃ, ಏವಂ ಭೂತಪ್ರತಿಷ್ಠಾನಾತ್ ಭೂತಸಂಬದ್ಧಾ ಪೃಥಿವೀ। ಅತೋ ಗಾಯತ್ರೀ ಪೃಥಿವೀ ॥

(ಭಾಷ್ಯಾರ್ಥ)

ಈ ಸ್ವರೂಪದ, ಸರ್ವಭೂತರೂಪವಾಗಿರುವ, ಆ ಗಾಯತ್ರಿಯಿದೆಯಲ್ಲ, ಈ ಪೃಥಿವಿಯೆಂಬುದೇ ಆ (ಗಾಯತ್ರಿಯು) ಈ ಪೃಥಿವಿಯು ಆ ಗಾಯತ್ರಿ ಎಂಬುದು ಹೇಗೆ? ಎಂದರೆ (ಇದಕ್ಕೆ) ಸರ್ವಭೂತಸಂಬಂಧವಿರುವದರಿಂದ- (ಇದಕ್ಕೆ) ಸರ್ವಭೂತಗಳ ಸಂಬಂಧ(ವಿದೆ ಎಂಬುದು) ಹೇಗೆ? (ಹಿ= ಯಸ್ಮಾತ್) ಹೇಗೆಂದರೆ, ಈ ಪೃಥಿವಿಯಲ್ಲಿ ಸ್ಥಾವರವೂ ಜಂಗಮವೂ ಆಗಿರುವ ಎಲ್ಲಾ ಭೂತವೂ ಈ ಪೃಥಿವಿಯಲ್ಲಿಯೇ ಪ್ರತಿಷ್ಠಿತವಾಗಿವೆ, ಈ ಪೃಥಿವಿಯನ್ನೇ (ಆ ಭೂತವು) ಮೀರಿಹೋಗದೆ ಇರುತ್ತವೆ. ಹೇಗೆ (ಸರ್ವಭೂತಗಳ) ಗಾನತ್ರಾಣಗಳಿಂದ ಗಾಯತ್ರಿಗೆ ಭೂತಗಳ ಸಂಬಂಧ(ವಿರುತ್ತದೆಯೋ) ಹಾಗೆಯೇ ಭೂತಗಳು ಪ್ರತಿಷ್ಠಿತವಾಗಿರುವದರಿಂದ ಪೃಥಿವಿಯೂ ಭೂತಗಳ ಸಂಬಂಧವುಳ್ಳದ್ದಾಗಿದೆ ಆದ್ದರಿಂದ ಪೃಥಿವಿಯೇ ಗಾಯತ್ರಿ.[1]

(ಉಪನಿಷತ್ತು)

**ಯಾ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ ಪುರುಷೇ ಶರೀರಮಸ್ಮಿನ್ ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯನ್ತೇ ॥ ೩ ॥**

೩. ಆ ಪೃಥಿವಿಯಿದೆಯಲ್ಲ, ಈ ಪುರುಷನಲ್ಲಿರುವ ಶರೀರವೆಂಬುದೇ ಅದು. ಇದರಲ್ಲಿ ಪ್ರಾಣಗಳು ಪ್ರತಿಷ್ಠಿತ(ವಾಗಿರುತ್ತವೆ). ಇದನ್ನೇ ಬಿಟ್ಟುಹೋಗುವದಿಲ್ಲ.

---

1. ಭೂತಸಂಬಂಧವಿರುವದರಿಂದ ಪೃಥಿವಿಯು ಗಾಯತ್ರಿಯಾಯಿತು.

## ಗಾಯತ್ರೀಬ್ರಹ್ಮವು ಶರೀರಾತ್ಮಕ

(ಭಾಷ್ಯ)

೨.೨. ಯಾ ವೈ ಸಾ ಪೃಥಿವೀ ಗಾಯತ್ರೀ ಇಯಂ ವಾವ ಸಾ ಇದಮೇವ। ತತ್ ಕಿಮ್ ? ಯದಿದಮ್ ಅಸ್ಮಿನ್ ಪುರುಷೇ ಕಾರ್ಯಕರಣಸಂಘಾತೇ ಜೀವತಿ ಶರೀರಮ್ । ಪಾರ್ಥಿವತ್ವಾತ್ ಶರೀರಸ್ಯ । ಕಥಂ ಶರೀರಸ್ಯ ಗಾಯತ್ರೀತ್ವಮಿತಿ । ಉಚ್ಯತೇ। ಅಸ್ಮಿನ್ ಹಿ ಇಮೇ ಪ್ರಾಣಾ ಭೂತಶಬ್ದವಾಚ್ಯಾಃ ಪ್ರತಿಷ್ಠಿತಾಃ । ಅತಃ ಪೃಥಿವೀವತ್ ಭೂತಶಬ್ದವಾಚ್ಯಪ್ರಾಣಪ್ರತಿಷ್ಠಾನಾತ್ ಶರೀರಂ ಗಾಯತ್ರೀ। ಏತದೇವ ಯಸ್ಮಾತ್ ಶರೀರಂ ನಾತಿಶೀಯನ್ತೇ ಪ್ರಾಣಾಃ ॥

(ಭಾಷ್ಯಾರ್ಥ)

ಆ ಪೃಥಿವೀಗಾಯತ್ರಿಯಿದೆಯಲ್ಲ, ಇದೇ ಅದು. ಯಾವದದು ? ಈ ಪುರುಷನಲ್ಲಿ, ಎಂದರೆ ಬದುಕಿರುವ ಈ ಕಾರ್ಯಕರಣಸಂಘಾತದಲ್ಲಿ ಶರೀರವಿದೆ ಯಲ್ಲ (ಇದೇ). ಏಕೆಂದರೆ ಶರೀರವು ಪಾರ್ಥಿವವಾಗಿರುತ್ತದೆ[1] ಶರೀರವು ಗಾಯತ್ರಿ ಎಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ ಇದರಲ್ಲಿಯೇ ಅಲ್ಲವೆ, ಭೂತ ಶಬ್ದವಾಚ್ಯನಾದ ಪ್ರಾಣಗಳು ಪ್ರತಿಷ್ಠಿತವಾಗಿವೆ ? ಆದ್ದರಿಂದ ಪೃಥಿವಿಯಲ್ಲಿ ಭೂತಗಳು (ಹೇಗೋ) ಹಾಗೆ ಭೂತಶಬ್ದವಾಚ್ಯಗಳಾದ ಪ್ರಾಣಗಳು ಪ್ರತಿಷ್ಠಿತ ವಾಗಿರುವದರಿಂದ ಶರೀರವು ಗಾಯತ್ರಿಯು.[2] ಇದೇ ಶರೀರವನ್ನೇ ಪ್ರಾಣಗಳು ಮೀರಿಹೋಗದೆ ಇರುತ್ತವೆ.[3]

(ಉಪನಿಷತ್ತು)

**ಯದ್ವೈ ತತ್ ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನನ್ತಃಪುರುಷೇ ಹೃದಯಮಸ್ಮಿನ್ ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯನ್ತೇ ॥ ೪ ॥**

೪. ಪುರುಷನೊಳಗಿರುವ ಆ ಶರೀರವಿದೆಯಲ್ಲ, ಈ ಪುರುಷ ನೊಳಗಿರುವ ಹೃದಯವೆಂಬುದೇ ಅದು. ಇದರಲ್ಲಿಯಲ್ಲವೆ, ಪ್ರಾಣ ಗಳು ಪ್ರತಿಷ್ಠಿತವಾಗಿವೆ ? ಇದನ್ನೇ (ಅಲ್ಲವೆ), ಬಿಟ್ಟುಹೋಗದೆ ಇರುತ್ತವೆ ?

---

1. ಶರೀರವು ಪಾರ್ಥಿವವಾಗಿರುವದರಿಂದ ಅದೇ ಪೃಥಿವೀಗಾಯತ್ರಿಯು.

2. ಪೃಥಿವಿಯಲ್ಲಿ ಸ್ಥಾವರಜಂಗಮಗಳಂತೆ ಶರೀರದಲ್ಲಿರುವ ಭೂತಗಳು ಯಾವವು ?– ಎಂದರೆ ಪ್ರಾಣಗಳು.

3. ಆದ್ದರಿಂದ ಭೂತಸಂಬಂಧದಿಂದ ಶರೀರವೂ ಗಾಯತ್ರಿ.

## ಗಾಯತ್ರೀಬ್ರಹ್ಮವು ಹೃದಯಾತ್ಮಕ

(ಭಾಷ್ಯ)

೨೩೩. ಯದ್ವೈ ತತ್ ಪುರುಷೇ ಶರೀರಂ ಗಾಯತ್ರೀ ಇದಂ ವಾವ ತತ್ । ಯದಿದಮ್ ಅಸ್ಮಿನ್ ಅನ್ತರ್ಮಧ್ಯೇ ಪುರುಷೇ ಹೃದಯಂ ಪುಣ್ಡರೀಕಾಖ್ಯಮ್ । ಏತದ್ ಗಾಯತ್ರೀ । ಕಥಮಿತಿ ? ಆಹ । ಅಸ್ಮಿನ್ ಹಿ ಇಮೇ ಪ್ರಾಣಾಃ ಪ್ರತಿಷ್ಠಿತಾಃ । ಅತಃ ಶರೀರವದ್ ಗಾಯತ್ರೀ ಹೃದಯಮ್ । ಏತದೇವ ಚ ನಾತಿ ಶೀಯನ್ತೇ ಪ್ರಾಣಾಃ । "ಪ್ರಾಣೋ ಹ ಪಿತಾ ಪ್ರಾಣೋ ಮಾತಾ" (೭-೧೫-೧) ಇತಿ, "ಅಹಿಂಸನ್ ಸರ್ವಭೂತಾನಿ" (೮-೧೫-೧) ಇತಿ ಚ ಶ್ರುತೇರ್ಭೂತಶಬ್ದ ವಾಚ್ಯಾಃ ಪ್ರಾಣಾಃ ॥

(ಭಾಷ್ಯಾರ್ಥ)

ಪುರುಷನಲ್ಲಿರುವ ಆ ಶರೀರವೆಂಬ ಗಾಯತ್ರಿಯಿದೆಯಲ್ಲ, ಈ ಪುರುಷ ನೊಳಗೆ ಪುಂಡರೀಕವೆಂಬ ಹೆಸರಿನ ಹೃದಯವೇ ಅದು. ಇದು ಗಾಯತ್ರಿಯು. ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ. ಇದರಲ್ಲಲ್ಲವೆ, ಈ ಪ್ರಾಣಗಳು ಪ್ರತಿಷ್ಠಿತ ವಾಗಿವೆ ? ಆದ್ದರಿಂದ ಶರೀರದಂತೆ ಹೃದಯವೂ ಗಾಯತ್ರಿ ಇದನ್ನೇ ಪ್ರಾಣ ಗಳು ಮೀರಿಹೋಗದೆ ಇರುತ್ತವೆ. "ಪ್ರಾಣನೇ ಪಿತನು, ಪ್ರಾಣನೇ ಮಾತೆ" (೭-೧೫-೧) ಎಂದೂ, "ಯಾವ ಭೂತಗಳನ್ನೂ ಕೊಲ್ಲದೆ" (೮-೧೫-೧) ಎಂದೂ ಶ್ರುತಿಯಿರುವದರಿಂದ ಪ್ರಾಣಗಳು ಭೂತಶಬ್ದವಾಚ್ಯವಾಗಿರುತ್ತವೆ.[2]

(ಉಪನಿಷತ್ತು)

**ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯ ನೂಕ್ತಮ್ ॥ ೫ ॥**

೫. ಆ ಈ ಗಾಯತ್ರಿಯು ನಾಲ್ಕು ಪಾದಗಳುಳ್ಳದ್ದು, ಆರು ವಿಧವಾದದ್ದು. ಅಲ್ಲಿ ಇದು ಋಕ್ಕಿನಿಂದ ಹೇಳಲ್ಪಟ್ಟಿರುತ್ತದೆ.

## ಗಾಯತ್ರಿಯು ಚತುಷ್ಪಾದವುಳ್ಳದ್ದು, ಷಡ್ವಿಧ

(ಭಾಷ್ಯ)

೨೩೪. ಸೈಷಾ ಚತುಷ್ಪದಾ ಷಡಕ್ಷರಪದಾ[3] ಛನ್ದೋರೂಪಾ ಸತೀ ಭವತಿ ಗಾಯತ್ರೀ ಷಡ್ವಿಧಾ । ವಾಗ್ಭೂತಪೃಥಿವೀಶರೀರಹೃದಯಪ್ರಾಣರೂಪಾ

---

1. ಭೂತಶಬ್ದವಾಚ್ಯವಾದ ಪ್ರಾಣಗಳು ಇವರಲ್ಲಿ ಪ್ರತಿಷ್ಠಿತವಾಗಿರುವದರಿಂದ ಇದು ಗಾಯತ್ರಿ

2. ಪ್ರಾಣಗಳಿಗಿಂತ ವ್ಯತಿರಿಕ್ತವಾದ ತಂದೆತಾಯಿ ಮುಂತಾದ ಭೂತಗಳಿಲ್ಲ, ಪ್ರಾಣ ವಿಲ್ಲದ ಶರೀರವನ್ನು ಹಿಂಸೆಮಾಡುತ್ತಾರೆಂದರೆ ಅರ್ಥವಿಲ್ಲ. ಆದ್ದರಿಂದ ಪ್ರಾಣಗಳೇ ಭೂತ ಶಬ್ದವಾಚ್ಯವಾಗಿವೆ ಎಂದು ಶ್ರುತಿಪ್ರಮಾಣೋದಾಹರಣೆಯ ಭಾವ

3. ಷಡಕ್ಷರಪಾದಾ ಎಂದೂ ಪಾಠವಿದೆ.

ಸತೀ ಷಡ್ವಿಧಾ ಭವತಿ। ವಾಕ್ಪ್ರಾಣಯೋರನ್ಯಾರ್ಥನಿರ್ದಿಷ್ಟಯೋರಪಿ ಗಾಯತ್ರೀ ಪ್ರಕಾರತ್ವಮ್। ಅನ್ಯಥಾ ಷಡ್ವಿಧಸಂಖ್ಯಾಪೂರಣಾನುಪಪತ್ತೇಃ। ತದೇತಸ್ಮಿನ್ ಅರ್ಥೇ ಏತದ್ ಗಾಯತ್ರ್ಯಾಖ್ಯಂ ಬ್ರಹ್ಮ ಗಾಯತ್ರ್ಯನುಗತಂ ಗಾಯತ್ರೀಮುಖೇ ನೋಕ್ತಮ್ ಋಚಾಪಿ ಮನ್ತ್ರೇಣ ಅಭ್ಯನೂಕ್ತಂ ಪ್ರಕಾಶಿತಮ್ ॥

(ಭಾಷ್ಯಾರ್ಥ)

ಆ ಈ ಗಾಯತ್ರಿಯು ಛಂದೋರೂಪವಾಗಿರುವದಾಗಿ ನಾಲ್ಕು ಪಾದಗಳುಳ್ಳದ್ದು, ಅದು ಅಕ್ಷರಗಳ ನಾಲ್ಕು ಪಾದಗಳುಳ್ಳದ್ದಾಗಿರುತ್ತದೆ.[1] ಆರು ವಿಧವಾದದ್ದು, ವಾಕ್ಕು, ಭೂತ, ಪೃಥಿವಿ, ಶರೀರ, ಹೃದಯ, ಪ್ರಾಣ-ಎಂಬ ರೂಪದಲ್ಲಿ ಆರು ವಿಧವಾಗಿರುತ್ತದೆ ವಾಕ್ಕು, ಪ್ರಾಣ- ಇವುಗಳನ್ನು ಮತ್ತೊಂದಕ್ಕಾಗಿ ನಿರ್ದೇಶಮಾಡಿದೆಯಾದರೂ (ಇಲ್ಲಿ ಅವು) ಗಾಯತ್ರಿಯ ಪ್ರಕಾರಗಳೆಂದು (ಹಿಡಿಯಬೇಕು), ಏಕೆಂದರೆ ಹಾಗಿಲ್ಲದಿದ್ದರೆ ಆರು ವಿಧವೆಂಬ ಸಂಖ್ಯೆಯು ಪೂರಣವಾಗುವದಿಲ್ಲ.[2]

ಅಲ್ಲಿ, ಎಂದರೆ ಈ ಅರ್ಥದಲ್ಲಿ ಈ ಗಾಯತ್ರಿ ಎಂಬ -ಗಾಯತ್ರಿಯಲ್ಲಿ ಅನುಗತವಾಗಿರುವ, ಗಾಯತ್ರಿಯ ದ್ವಾರದಿಂದ ಹೇಳಿರುವ- ಬ್ರಹ್ಮವು ಋಕ್ಕಿನಿಂದ ಎಂದರೆ ಮಂತ್ರದಿಂದಲೂ (ಹೀಗೆಂದು) ಹೇಳಲ್ಪಟ್ಟಿರುತ್ತದೆ.

## ಗಾಯತ್ರೀಬ್ರಹ್ಮದ ಪರಮಾರ್ಥರೂಪ

(ಉಪನಿಷತ್ತು)

**ತಾವಾನಸ್ಯ ಮಹಿಮಾ ತತೋ ಜ್ಯಾಯಾಗ್ಂಶ್ಚ ಪೂರುಷಃ।**
**ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವೀತಿ ॥೬॥**

---

1. ಹೀಗೆಂದು ಉಪಾಸನೆಮಾಡಬೇಕು ಎಂದರ್ಥ. ಭೂತಾದಿಗಳೇ ನಾಲ್ಕುಪಾದಗಳು ಎಂದು ಸೂ. ಭಾ ೧-೧-೨೬ (ಭಾ. ಭಾ ೧೬) ಎಂದು ಹೇಳಿದೆ. ಆದರೆ ಅಲ್ಲಿ ಷಡ್ವಿಧವೆಂದರೆ ಏನೆಂದಿಟ್ಟುಕೊಂಡಿದೆ ಎಂಬುದು ಸ್ಪಷ್ಟವಾಗಿಲ್ಲ ಆರಕ್ಷರಗಳ ನಾಲ್ಕುಪಾದಗಳೆಂದು ಹೇಳಿರುವದು ವೃತ್ತಿಕಾರಮತವೆಂದೂ ಅದು ಅಪ್ರಸಿದ್ಧವೆಂದೂ ರತ್ನಪ್ರಭಾವ್ಯಾಖ್ಯಾನದಲ್ಲಿ ಬರೆದಿರುವದಕ್ಕೆ ಆಧಾರವೇನೆಂಬುದೂ ತಿಳಿದಿಲ್ಲ. ಭಾಮತೀಕಾರರೂ ಆರು ಅಕ್ಷರಗಳ ನಾಲ್ಕುಪಾದಗಳನ್ನು ಒಪ್ಪಿರುತ್ತಾರೆ.

2. ಗಾಯತ್ರಿಯು ಸರ್ವಭೂತಾತ್ಮಕವೆಂದು ತಿಳಿಸುವದಕ್ಕೆ ವಾಕ್ಕನ್ನೂ ಪೃಥಿವೀಹೃದಯಗಳು ಗಾಯತ್ರಿ ಎಂಬುದು ಹೇಗೆ ಎಂಬುದನ್ನು ಉಪಪಾದಿಸುವದಕ್ಕೆ ಪ್ರಾಣಗಳನ್ನೂ ಹೇಳಿದೆಯಾದರೂ ಇಲ್ಲಿ ಗಾಯತ್ರಿಯನ್ನು ಷಡ್ವಿಧವೆಂದು ಉಪಾಸನೆಮಾಡಬೇಕೆಂದು ಹೇಳಿರುವದು ಹೊಂದುವದಕ್ಕಾಗಿ ಅವೆರಡನ್ನೂ ಗಾಯತ್ರಿಯ ಪ್ರಕಾರಗಳೆಂದು ಎಣಿಸಬೇಕು. ಇಲ್ಲದಿದ್ದರೆ ಚತುರ್ವಿಧತ್ವವೇ ಆಗಿಬಿಡುತ್ತದೆ ಎಂದರ್ಥ.

೬. "ಇದರ ಮಹಿಮೆಯು ಅಷ್ಟು; ಆದರೆ ಪುರುಷನು ಅದಕ್ಕಿಂತಲೂ ದೊಡ್ಡವನು. ಎಲ್ಲಾ ಭೂತಗಳೂ ಇದರ ಪಾದವು, ಇದರ ಅಮೃತವಾದ ಮೂರು ಪಾದವು ದಿವದಲ್ಲಿರುವದು.

## ಪೂರ್ಣಬ್ರಹ್ಮವು ಸರ್ವಭೂತಾತೀತ

(ಭಾಷ್ಯ)

೨೩೫ ತಾವಾನ್ ಅಸ್ಯ ಗಾಯತ್ರ್ಯಾಖ್ಯಸ್ಯ ಬ್ರಹ್ಮಣಃ ಸಮಸ್ತಸ್ಯ ಮಹಿಮಾ ವಿಭೂತಿವಿಸ್ತಾರಃ । ಯಾವಾನ ಚತುಷ್ಪಾತ್ ಷಡ್ವಿಧಶ್ಚ ಬ್ರಹ್ಮಣೋ ವಿಕಾರಃ ಪಾದೋ ಗಾಯತ್ರೀತಿ ವ್ಯಾಖ್ಯಾತಃ, ಅತಃ ತಸ್ಮಾತ್ ವಿಕಾರಲಕ್ಷಣಾತ್ ಗಾಯತ್ರ್ಯಾಖ್ಯಾತ್ ವಾಚಾರಮ್ಭಣಮಾತ್ರಾತ್ ತತೋ ಜ್ಯಾಯಾನ್ ಮಹತ್ತರಶ್ಚ ಪರಮಾರ್ಥಸತ್ಯರೂಪೋಽವಿಕಾರಃ ಪೂರುಷಃ ಪುರುಷಃ ಸರ್ವಪೂರಣಾತ್ ಪುರುಷಃ ಪುರಿ ಶಯನಾಚ್ಚ । ತಸ್ಯಾಸ್ಯ ಪಾದಃ ಸರ್ವಾ ಸರ್ವಾಣಿ ಭೂತಾನಿ ತೇಜೋಽಬನ್ನಾದೀನಿ ಸ್ಥಾವರಜಙ್ಗಮಾನಿ । ತ್ರಿಪಾತ್ ತ್ರಯಃ ಪಾದಾ ಅಸ್ಯ ಸೋಽಯಂ ತ್ರಿಪಾತ್। ತ್ರಿಪಾದಮೃತಮ್ ಪುರುಷಾಖ್ಯಂ ಸಮಸ್ತಸ್ಯ ಗಾಯತ್ರ್ಯಾತ್ಮನೋ ದಿವಿ ದ್ಯೋತನವತಿ ಸ್ವಾತ್ಮನಿ ಅವಸ್ಥಿತಮ್ ಇತ್ಯರ್ಥಃ ಇತಿ ॥

(ಭಾಷ್ಯಾರ್ಥ)

ಈ ಗಾಯತ್ರಿ ಎಂಬ ಸಮಸ್ತ[1] ಬ್ರಹ್ಮದ ಮಹಿಮೆಯು, ಎಂದರೆ ವಿಭೂತಿಯು, ವಿಸ್ತಾರವು ಅಷ್ಟೇ, ಎಷ್ಟೆಂದರೆ ನಾಲ್ಕು ಪಾದಗಳುಳ್ಳದ್ದು, ಆರು ವಿಧಗಳುಳ್ಳದ್ದು ಎಂದು ಬ್ರಹ್ಮದ ವಿಕಾರವಾದ[2], (ಒಂದು) ಪಾದವಾದ ಗಾಯತ್ರಿಯನ್ನು ವಿವರಿಸಿದೆಯಲ್ಲ, (ಅಷ್ಟೇ).[3] ಆದ್ದರಿಂದ[4] ಆ ವಿಕಾರರೂಪವಾದ, ವಾಚಾರಂಭಣಮಾತ್ರವಾದ[5], ಅದಕ್ಕಿಂತಲೂ ಆ ಗಾಯತ್ರಿಗಿಂತಲೂ ಪರಮಾರ್ಥಸತ್ಯರೂಪನೂ ವಿಕಾರವಲ್ಲದವನೂ ಆದ (ಪೂರುಷಃ= ಪುರುಷಃ) ಪುರುಷನು, ಎಲ್ಲವನ್ನೂ ತುಂಬಿಕೊಂಡಿರುವವನಿಂದಲೂ ಪುರದಲ್ಲಿ ಇದ್ದುಕೊಂಡಿರುವದರಿಂದಲೂ[6] (ಪುರುಷನೆನಿಸಿಕೊಂಡಿರುವನು), ದೊಡ್ಡವನು ಮಹತ್ತರನಾಗಿರುವನು

---

1. ಚತುಷ್ಪಾದವುಳ್ಳದ್ದೂ ಷಡ್ವಿಧವೂ ಆಗಿರುವ ಒಟ್ಟು.
2 ಕಾರ್ಯವಾದ. 3. ಒಂದು ಪಾದವೇ, ಪೂರ್ಣವಲ್ಲ.
4. ಅದು ಅದರ ವಿಭೂತಿಮಾತ್ರವೇ, ಸ್ವರೂಪವಲ್ಲವಾದ್ದರಿಂದ.
5. ಬರಿಯಮಾತಿನಿಂದ ಹೇಳುವ, ಮಿಥ್ಯಾರೂಪವಾದ, ೬-೧ ೪ರ ಸೂಚನೆ.
6 ಚ ಎಂಬ ಪಾಠಕ್ಕೆ ಅನುವಾದವಿದು. 'ಶಯನಾದ್ ವಾ' ಎಂಬ ಪಾಠಕ್ಕೆ ಅಥವಾ ಪುರದಲ್ಲಿ ಮಲಗಿಕೊಂಡಿರುವವನಿಂದ ಎಂದು ಅರ್ಥಮಾಡಬೇಕು.

ಆ ಇವನ (ಒಂದು) ಪಾದವು, ಸರ್ವಭೂತಗಳು, ಸ್ಥಾವರಜಂಗಮಸಹಿತವಾದ ತೇಜೋಽಬನ್ನಾದಿಗಳು[1] (ಒಂದು ಪಾದವೇ) ತ್ರಿಪಾತ್–ಅದಕ್ಕೆ ಮೂರು ಪಾದಗಳಿರುವುದರಿಂದ ಅದು ತ್ರಿಪಾತ್ (ಎನ್ನಿಸಿಕೊಂಡಿದೆ)—(ಆ) ತ್ರಿಪಾತ್ತಾದ ಅಮೃತವು[2], ಸಮಸ್ತಗಾಯತ್ರ್ಯಾತ್ಮನ ಪುರುಷನೆಂಬ ಮೂರು ಪಾದದ ಅಮೃತವು. ದಿವದಲ್ಲಿ ಪ್ರಕಾಶವುಳ್ಳ ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿದೆ[3] ಎಂಬರ್ಥ, ಹೀಗೆಂದು (ಮಂತ್ರವಿದೆ)

## ಗಾಯತ್ರೀಬ್ರಹ್ಮವನ್ನು ಹೃದಯದಲ್ಲಿ ಧ್ಯಾನಿಸಬೇಕು

(ಉಪನಿಷತ್ತು)

**ಯದ್ವೈ ತದ್ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾದಾಕಾಶೋ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ೭ ॥**

**ಅಯಂ ವಾವ ಸ ಯೋಽಯಮನ್ತಃ ಪುರುಷ ಆಕಾಶೋ ಯೋ ವೈ ಸೋಽನ್ತಃಪುರುಷ ಆಕಾಶಃ ॥ ೮ ॥**

**ಅಯಂ ವಾವ ಸ ಯೋಽಯಮನ್ತರ್ಹೃದಯ ಆಕಾಶಸ್ತದೇತತ್ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಗ್ಂ ಶ್ರಿಯಂ ಲಭತೇ ಯ ಏವಂ ವೇದ ॥ ೯ ॥**

೭-೯. ಆ ಬ್ರಹ್ಮವೆಂಬುದಿದೆಯಲ್ಲ, ಪುರುಷನ ಹೊರಗಿನ ಆಕಾಶವೇ ಅದು. ಆ ಪುರುಷನ ಹೊರಗಿನ ಆಕಾಶವೆಂಬುದಿದೆಯಲ್ಲ, ಪುರುಷನ ಒಳಗಡೆಯಿರುವ ಈ ಆಕಾಶವೇ ಅದು. ಪುರುಷನೊಳಗಡೆ ಇರುವ ಆ ಆಕಾಶವೆಂಬುದಿದೆಯಲ್ಲ, ಹೃದಯದೊಳಗಡೆ ಇರುವ ಈ ಆಕಾಶವೇ ಅದು. ಆ ಇದು ಪೂರ್ಣವು, ಅಪ್ರವರ್ತಿಯು. ಯಾವನು

---

1. ಇಲ್ಲಿ ಆಕಾಶವಾಯುಗಳನ್ನು ಆದಿ ಎಂಬ ಪದದಿಂದ ಹಿಡಿಯಬೇಕು. ಆದರೆ ಈ ಉಪನಿಷತ್ತಿನಲ್ಲಿ ತೇಜೋಽಬನ್ನಗಳನ್ನು ಮಾತ್ರವೇ ಹೇಳಿರುವುದರಿಂದ 'ಆದಿ' ಎಂಬ ಮಾತು ಭಾಷ್ಯಮೂಲದಲ್ಲಿಲ್ಲದೆ ಇದ್ದರೂ ಇರಬಹುದು. ಆಗಲೂ ಸರ್ವಭೂತಗಳು ಎಂದೇ ಅರ್ಥ. ಇಲ್ಲಿ ಭೂತಶಬ್ದದಿಂದ ಪಂಚಭೂತಗಳನ್ನೇ ಅಲ್ಲದೆ ಕಾರ್ಯಕರಣಸಂಘಾತಾತ್ಮಕವಾದ ಭೂತಗಳನ್ನೂ ಹಿಡಿಯಬೇಕೆಂದು ಭಾಷ್ಯಕಾರರ ಮತ

2. ವಿಭೂತಿಯು ವಿಕಾರವುಳ್ಳದ್ದಾದ್ದರಿಂದ ಅವಿನಾಶಿಯಲ್ಲ, ಆದರೆ ಬ್ರಹ್ಮದ ಸ್ವರೂಪವು ಅಮೃತವು.

3 ದಿವಿ ಎಂದರೆ ದ್ಯುಲೋಕದಲ್ಲಿ ಎಂದರ್ಥವಲ್ಲ, ಚಿನ್ಮಾತ್ರವಾದ ಕೂಟಸ್ಥಸ್ವರೂಪದಲ್ಲಿ ಎಂದೇ ಅರ್ಥ.

ಹೀಗೆಂದು ಅರಿತುಕೊಳ್ಳುವನೋ ಅವನು ಪೂರ್ಣವಾದ ಅಪ್ರವರ್ತಿಯಾದ ಶ್ರೀಯನ್ನು ಪಡೆದುಕೊಳ್ಳುವನು.

## ಗಾಯತ್ರೀಬ್ರಹ್ಮವು ಹೃದಯಾಕಾಶವೇ

(ಭಾಷ್ಯ)

೩೩೬. ಯದ್ವೈ ತತ್ ತ್ರಿಪಾದಮಮೃತಂ ಗಾಯತ್ರೀಮುಖೇನೋಕ್ತಂ ಬ್ರಹ್ಮೇತಿ, ಇದಂ ವಾವ ತತ್ ಇದಮೇವ ತತ್ ಯೋಽಯಂ ಪ್ರಸಿದ್ಧಃ ಬಹಿರ್ಧಾ ಬಹಿಃ ಪುರುಷಾತ್ ಆಕಾಶಃ ಭೌತಿಕಃ। ಯೋ ವೈ ಸ ಬಹಿರ್ಧಾ ಪುರುಷಾತ್ ಆಕಾಶ ಉಕ್ತಃ, ಅಯಂ ವಾವ ಸಃ, ಯೋಽಯಮ್ ಅನ್ತಃಪುರುಷೇ ಶರೀರೇ ಆಕಾಶಃ। ಯೋ ವೈ ಸೋಽನ್ತಃಪುರುಷ ಆಕಾಶಃ ಅಯಂ ವಾವ ಸ ಯೋಽಯಮನ್ತರ್ಹೃದಯೇ ಹೃದಯಪುಣ್ಡರೀಕೇ ಆಕಾಶಃ[1] ॥

(ಭಾಷ್ಯಾರ್ಥ)

ಆ ಮೂರು ಪಾದಗಳ ಅಮೃತವೆಂದು ಗಾಯತ್ರೀದ್ವಾರದಿಂದ ತಿಳಿಸಿಕೊಟ್ಟಿರುವ ಬ್ರಹ್ಮವಿದೆಯಷ್ಟೆ, ಇದೇ ಅದು, ಪುರುಷನ ಹೊರಗಿರುವದೆಂದು ಪ್ರಸಿದ್ಧವಾಗಿರುವ ಈ ಭೌತಿಕವಾದ ಆಕಾಶವಿದೆಯಲ್ಲ, (ಇದೇ) ಪುರುಷನ ಹೊರಗಿರುವದೆಂದು ಹೇಳಿದ ಆ ಆಕಾಶವಿದೆಯಷ್ಟೆ, ಇದೇ ಅದು, ಪುರುಷನೊಳಗೆ ಶರೀರದೊಳಗೆ ಆಕಾಶವಿದೆಯಲ್ಲ, (ಇದೇ) ಪುರುಷನೊಳಗೆ ಇರುವ ಆ ಆಕಾಶವೆಂಬುದಿದೆಯಷ್ಟೆ, ಇದೇ ಅದು, ಈ ಹೃದಯದೊಳಗೆ ಹೃದಯಪುಂಡರೀಕದೊಳಗೆ (ಇರುವ) ಆಕಾಶವಿದೆಯಲ್ಲ, (ಇದೇ)

## ಒಂದೇ ಆಕಾಶದಲ್ಲಿ ಮೂರು ಭೇದಗಳನ್ನು ಹೇಳಿರುವದೇಕೆ?

(ಭಾಷ್ಯ)

೩೩೭. ಕಥಮೇಕಸ್ಯ ಸತಃ ಆಕಾಶಸ್ಯ ತ್ರಿಧಾ ಭೇದ ಇತಿ? ಉಚ್ಯತೇ। ಬಾಹ್ಯೇನ್ದ್ರಿಯವಿಷಯೇ ಜಾಗರಿತಸ್ಥಾನೇ ನಭಸಿ ದುಃಖಬಾಹುಲ್ಯಂ ದೃಶ್ಯತೇ। ತತೋಽನ್ತಃಶರೀರೇ ಸ್ವಪ್ನಸ್ಥಾನಭೂತೇ ಮನ್ದತರಂ ದುಃಖಂ ಭವತಿ ಸ್ವಪ್ನಾನ್ ಪಶ್ಯತಃ। ಹೃದಯಸ್ಥೇ ಪುನರ್ನಭಸಿ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ। ಅತಃ ಸರ್ವದುಃಖನಿವೃತ್ತಿರೂಪಮ್ ಆಕಾಶಂ ಸುಷುಪ್ತಸ್ಥಾನಮ್। ಅತೋ ಯುಕ್ತಮ್ ಏಕಸ್ಯಾಪಿ ತ್ರಿಧಾ ಭೇದಾನ್ವಾಖ್ಯಾನಮ್। ಬಹಿರ್ಧಾ ಪುರುಷಾತ್ ಆರಭ್ಯ ಆಕಾಶಸ್ಯ ಹೃದಯೇ ಸಂಕೋಚಕರಣಂ ಚೇತಃ ಸಮಾಧಾನಸ್ಥಾನಸ್ತುತಯೇ। ಯಥಾ "ತ್ರಯಾಣಾಮಪಿ ಲೋಕಾನಾಂ ಕುರು

1. ವಾಕ್ಯವು ಒಂದೇ ಆಗಿರುವದರಿಂದ ಮೂರು ಕಂಡಿಕೆಗಳ ಭಾಷ್ಯವನ್ನೂ ಒಟ್ಟು ಸೇರಿಸಿಕೊಂಡು ಅನುವಾದಮಾಡಿರುತ್ತದೆ.

ಕ್ಷೇತ್ರಂ ವಿಶಿಷ್ಯತೇ । ಅರ್ಧತಸ್ತು ಕುರುಕ್ಷೇತ್ರಮರ್ಧತಸ್ತು ಪೃಥೂದಕಮ್” (?) ಇತಿ ತದ್ವತ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಒಂದೇ ಆಗಿರುವ ಆಕಾಶಕ್ಕೆ ಮೂರು ಪ್ರಕಾರವಾದ ಭೇದವಿರುವದು ಹೇಗೆ?

**(ಪರಿಹಾರ) :- ಹೇಳುತ್ತೇವೆ. ಹೊರಗಿನ ಇಂದ್ರಿಯವಿಷಯಗಳುಳ್ಳ ಎಚ್ಚರದವಸ್ಥೆಯಲ್ಲಿರುವ ಆಕಾಶದಲ್ಲಿ ಬಹಳ ದುಃಖವು ಕಾಣಬರುತ್ತದೆ. ಅದಕ್ಕಿಂತಲೂ ಶರೀರದ ಒಳಗಡೆ ಇರುವ ಕನಸಿನವಸ್ಥೆಯ (ಆಕಾಶದಲ್ಲಿ) ಕನಸುಗಳನ್ನು ಕಾಣುತ್ತಿರುವವನಿಗೆ ಇನ್ನೂ ಕಡಿಮೆಯ ದುಃಖವಾಗುತ್ತದೆ.[1] ಇನ್ನು ಹೃದಯದಲ್ಲಿರುವ ಆಕಾಶದಲ್ಲಿ ಯಾವ ಕಾಮವನ್ನೂ ಬಯಸುವದಿಲ್ಲ, ಯಾವ ಕನಸನ್ನೂ ಕಾಣುವದಿಲ್ಲ[2]; ಆದ್ದರಿಂದ ಯಾವ ದುಃಖವೂ ಇಲ್ಲದ್ದು ಸುಷುಪ್ತಾವಸ್ಥೆಯ ಆಕಾಶವು.[3] ಆದ್ದರಿಂದ ಒಂದಕ್ಕೇ ಮೂರು ಬಗೆಯ ಭೇದಗಳನ್ನು ಹೇಳುವದು ಯುಕ್ತವೇ.[4]**

ಪುರುಷನ ಹೊರಗಿನ (ಆಕಾಶ)ದಿಂದ ಆರಂಭಿಸಿ ಆಕಾಶವನ್ನು ಹೃದಯದೊಳಗೆ ಸಂಕೋಚಗೊಳಿಸಿರುವದು ಚಿತ್ತಸಮಾಧಾನವನ್ನು ಮಾಡಿಕೊಳ್ಳಬೇಕಾಗಿರುವ (ಹೃದಯವೆಂಬ) ಸ್ಥಾನದ ಸ್ತುತಿಗಾಗಿ. ಹೇಗೆ “ಮೂರೂ ಲೋಕಗಳೊಳಗೆ ಕುರುಕ್ಷೇತ್ರವೇ ಹೆಚ್ಚಿನದು; (ಅದರಲ್ಲಿ) ಕುರುಕ್ಷೇತ್ರವು ಅರ್ಧ(ವಾದರೆ), ಪೃಥೂದಕವೇ ಅರ್ಧ” (?) ಎನ್ನುವರೋ ಹಾಗೆಯೇ ಇದು.[5]

---

1. ಇದು ಎಚ್ಚರದ ವ್ಯವಹಾರದ ದೃಷ್ಟಿಯಿಂದ ಹೇಳಿದ್ದು, ಎರಡೂ ಸ್ವಪ್ನವೇ ಎಂಬ ಶ್ರೌತದೃಷ್ಟಿಯಿಂದ ನೋಡಿದಾಗ ಶರೀರದೊಳಗಡೆ ಕನಸಾಗುವದೆಂಬುದೂ ಅಲ್ಲಿ ಕಡಿಮೆಯ ದುಃಖವಾಗುವದೆಂಬುದೂ ಬಾಧಿತವಾಗುತ್ತದೆ.

2. ಮಾಂ. ೫, ಮತ್ತು ಬೃ. ೪-೩-೧೯ರ ಸೂಚನೆ

3. ಮಾಂ. ಕಾ ಭಾ ೧-೨ (ಭಾ. ಭಾ. ೨೨)ರಲ್ಲಿ ಆಕಾಶೇ ಚ ಹೃದಿ ಎಂಬುವದರ ಭಾಷ್ಯವನ್ನೂ ತೈ. ಭಾ. ೨-೧ (ಛಾ.ಭಾ ೧೦೮)ರಲ್ಲಿ ವ್ಯೋಮಶಬ್ದವ್ಯಾಖ್ಯಾನವನ್ನೂ ನೋಡಿ.

4. ಒಂದೇ ಚಿದಾಕಾಶವು ಉಪಾಧಿಭೇದದಿಂದ ಮೂರುವಿಧವಾಗಿದೆ ಎಂದು ಭಾವ.

5. ಪೃಥೂದಕವು ಮೂರು ಲೋಕಗಳೊಳಗೇ ಸೇರಿದ್ದರೂ ಅದರ ಹೆಚ್ಚುಗಾರಿಕೆಯನ್ನು ತಿಳಿಸಲು ಅದನ್ನು ಬೇರೆ ಮಾಡಿರುವಂತೆ ಹೃದಯಾಕಾಶಸ್ಥಾನವನ್ನು ಹೊಗಳುವದಕ್ಕಾಗಿ ಆಕಾಶದೊಳಗೇ ಸೇರಿರುವ ಅದನ್ನು ಬೇರ್ಪಡಿಸಿದೆ ಎಂದು ಭಾವ. ಇಲ್ಲಿ ಹೃದಯಾಕಾಶವು ಪರಮಾರ್ಥವಾಗಿ ಬ್ರಹ್ಮವೇ ಆಗಿರುವದರಿಂದ, ವ್ಯಾವಹಾರಿಕವಾದ ಹೃದಯಾಕಾಶದಲ್ಲಿ ಅದನ್ನು ಉಪಾಸನೆಮಾಡಬೇಕು ಎಂಬುದರಲ್ಲಿ ತಾತ್ಪರ್ಯ.

## ಹಾರ್ದಾಕಾಶರೂಪವಾದ ಈ ಬ್ರಹ್ಮದ ಉಪಾಸನೆಯ ಫಲ

(ಭಾಷ್ಯ)

೨೩೮. ತದೇತದ್ ಹಾರ್ದಾಕಾಶಾಖ್ಯಂ ಬ್ರಹ್ಮ ಪೂರ್ಣಂ ಸರ್ವಗತಮ್। ನ ಹೃದಯಮಾತ್ರಪರಿಚ್ಛಿನ್ನಮಿತಿ ಮನ್ತವ್ಯಂ ಯದ್ಯಪಿ ಹೃದಯಾಕಾಶೇ ಚೇತಃ ಸಮಾಧೀಯತೇ। ಅಪ್ರವರ್ತಿ ನ ಕುತಶ್ಚಿತ್ ಕ್ವಚಿತ್ ಪ್ರವರ್ತಿತುಂ ಶೀಲಮ್ ಅಸ್ಯ ಇತ್ಯಪ್ರವರ್ತಿ ತತ್ ಅನುಚ್ಛಿತ್ತಿಧರ್ಮಕಮ್। ಯಥಾ ಅನ್ಯಾನಿ ಭೂತಾನಿ ಪರಿಚ್ಛಿನ್ನಾನಿ ಉಚ್ಛಿತ್ತಿಧರ್ಮಕಾಣಿ, ನ ತಥಾ ಹಾರ್ದಂ ನಭಃ। ಪೂರ್ಣಾಮ್ ಅಪ್ರವರ್ತಿನೀಮ್ ಅನುಚ್ಛೇದಾತ್ಮಿಕಾಂ ಶ್ರಿಯಂ ವಿಭೂತಿಂ ಗುಣಫಲಂ ಲಭತೇ ದೃಷ್ಟಮ್, ಯ ಏವಂ ಯಥೋಕ್ತಂ ಪೂರ್ಣಾಪ್ರವರ್ತಿಗುಣಂ ಬ್ರಹ್ಮ ವೇದ ಜಾನಾತಿ। ಇಹೈವ ಜೀವನ್ ತದ್ಭಾವಂ ಪ್ರತಿಪದ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ಹಾರ್ದಾಕಾಶವೆಂಬ ಬ್ರಹ್ಮವು[1] ಪೂರ್ಣವು, ಸರ್ವಗತ(ವಾಗಿದೆ), —ಹೃದಯಾಕಾಶದಲ್ಲಿ ಚಿತ್ತವನ್ನು ಸಮಾಧಾನಮಾಡಿಕೊಳ್ಳಬೇಕಾಗಿದೆಯಾದರೂ —ಹೃದಯದಷ್ಟೇ (ಅಳತೆಗೆ) ಕಟ್ಟುಬಿದ್ದಿರುವದೆಂದು ಭಾವಿಸಬಾರದು.[2] (ಇದು) ಅಪ್ರವರ್ತಿ, ಎಲ್ಲಿಂದಲೂ ಎಲ್ಲಿಗೂ ಪ್ರವರ್ತಿಸುವದು ಅದರ ಸ್ವಭಾವವಲ್ಲವಾದ್ದರಿಂದ ಅದು ಅಪ್ರವೃತ್ತಿ, ನಾಶವಿಲ್ಲದ ಧರ್ಮವುಳ್ಳದ್ದು. ಹೇಗೆ ಮಿಕ್ಕ ಭೂತಗಳು ಪರಿಚ್ಛಿನ್ನವಾಗಿದ್ದು ನಾಶವಾಗುವವೋ ಹಾಗಲ್ಲ, ಹಾರ್ದಾಕಾಶವು. ಪೂರ್ಣವೂ ಅಪ್ರವರ್ತಿಯೂ ಆಗಿರುವ—(ಅಪ್ರವೃತ್ತಿ ಎಂದರೆ) ನಾಶರಹಿತವಾದದ್ದು. (ಅಂಥ) —ಶ್ರೀಯನ್ನು ವಿಭೂತಿ ಎಂಬ ದೃಷ್ಟವಾದ[3] ಗುಣಫಲವನ್ನು—ಮೇಲೆ ಹೇಳಿದ ಪೂರ್ಣಾಪ್ರವರ್ತಿಗುಣಗಳುಳ್ಳ ಬ್ರಹ್ಮವನ್ನು ಯಾವನು ಹೀಗೆಂದು ಅರಿತುಕೊಳ್ಳುವನೋ ಉಪಾಸನೆಮಾಡುವನೋ (ಅವನು)— ಪಡೆದುಕೊಳ್ಳುತ್ತಾನೆ. ಇಲ್ಲಿಯೇ ಬದುಕಿರುವಾಗಲೇ ಅದರ ಭಾವವನ್ನು ಹೊಂದುತ್ತಾನೆ ಎಂದರ್ಥ.[4]

---

1. ಹಾರ್ದಾಕಾಶವೆಂದರೆ ಬ್ರಹ್ಮವೇ, ಏಕೆಂದರೆ ಸುಷುಪ್ತಿಯಲ್ಲಿ ಬ್ರಹ್ಮಕ್ಕಿಂತ ಬೇರೆ ಯಾವ ಯಾವ ಆಕಾಶವೂ ಇರುವದಿಲ್ಲ.

2. ಉಪಾಸನೆಗಾಗಿ ಹೃದಯಾಕಾಶವೆಂಬ ಸ್ಥಾನವನ್ನು ಹೇಳಿದ್ದರೂ ಸ್ವತಃ ಬ್ರಹ್ಮವು ಸರ್ವಗತವೇ ಎಂದರ್ಥ

3 ಎಂಥ ಗುಣದಿಂದ ಕೂಡಿದ್ದೆಂದು ಉಪಾಸನೆಮಾಡುವರೋ ಅಂಥ ಫಲವು ಲಭಿಸುವದು. ಈ ಫಲವು ಇಲ್ಲಿಯೇ ಕಾಣುವಂಥದ್ದಾದ್ದರಿಂದ ಇದನ್ನು ದೃಷ್ಟಫಲವೆಂದಿದೆ.

4. ಬದುಕಿರುವಾಗ ಉಪಾಸ್ಯದ ಸಾಕ್ಷಾತ್ಕಾರವಾದಬಳಿಕವೇ ಸತ್ತಬಳಿಕ ಅದರ ಸಾಯುಜ್ಯವು ದೊರಕುತ್ತದೆ. ಬೃ ಭಾ ೪-೧-೨ (ಛಾ ಭಾ ೧೪೫)ನ್ನು ನೋಡಿ. ಇಲ್ಲಿ ಹೇಳಿದ್ದು ಗುಣೋಪಾಸನೆಗೆ ಅನುಗುಣವಾದ ದೃಷ್ಟಫಲಮಾತ್ರ.

# ಮೂರನೆಯ ಅಧ್ಯಾಯ–
# ಹದಿಮೂರನೆಯ ಖಂಡ

(ಗಾಯತ್ರೀಬ್ರಹ್ಮದ ಅಂಗೋಪಾಸನೆಗಳು, ಪ್ರತೀಕೋಪಾಸನೆ)

## ಗಾಯತ್ರೀಬ್ರಹ್ಮದ ದ್ವಾರಪುರುಷರುಗಳ ಉಪಾಸನೆಗಳು

(ಉಪನಿಷತ್ತು)

**ತಸ್ಯ ಹ ವಾ ಏತಸ್ಯ ಹೃದಯಸ್ಯ ಪಞ್ಚ ದೇವಸುಷಯಃ ಸ ಯೋಽಸ್ಯ ಪ್ರಾಙ್ಸುಷಿಃ ಸ ಪ್ರಾಣಸ್ತಚ್ಚಕ್ಷುಃ ಸ ಆದಿತ್ಯ ಸ್ತದೇತತ್ತೇಜೋಽನ್ನಾದ್ಯಮಿತ್ಯುಪಾಸೀತ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ ॥೧॥**

೧. ಆ ಈ ಹೃದಯಕ್ಕೆ ಐದು ದೇವಸುಷಿಗಳು. ಇದಕ್ಕೆ ಪೂರ್ವದ ಆ ಸುಷಿಯಿದೆಯಲ್ಲ, ಅದೇ ಪ್ರಾಣವು, ಅದೇ ಚಕ್ಷುಸ್ಸು, ಅದೇ ಆದಿತ್ಯನು. ಆ ಇದನ್ನು ತೇಜಸ್ಸು, ಅನ್ನಾದ್ಯವು ಎಂದು ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ತೇಜಸ್ವಿಯೂ ಅನ್ನಾದನೂ ಆಗುವನು.

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೩೯. 'ತಸ್ಯ ಹ ವಾ' ಇತ್ಯಾದಿನಾ ಗಾಯತ್ರ್ಯಾಖ್ಯಸ್ಯ ಬ್ರಹ್ಮಣಃ ಉಪಾಸನಾಙ್ಗತ್ವೇನ ದ್ವಾರಪಾಲಾದಿಗುಣವಿಧಾನಾರ್ಥಮ್ ಆರಭ್ಯತೇ ಯಥಾ ಲೋಕೇ ದ್ವಾರಪಾಲಾಃ ರಾಜ್ಞಃ ಉಪಾಸನೇನ ವಶೀಕೃತಾಃ ರಾಜಪ್ರಾಪ್ತ್ಯರ್ಥಾ ಭವನ್ತಿ ತಥಾ ಇಹಾಪೀತಿ ॥

(ಭಾಷ್ಯಾರ್ಥ)

'ತಸ್ಯ ಹ ವಾ' ಎಂದು ಮುಂತಾಗಿರುವ (ಗ್ರಂಥಜಾತ)ದಿಂದ ಗಾಯತ್ರಿ ಎಂಬ ಬ್ರಹ್ಮದ ಉಪಾಸನೆಗೆ ಅಂಗವಾಗಿ ದ್ವಾರಪಾಲಕರೇ ಮುಂತಾದ ಗುಣವನ್ನು[1] ವಿಧಿಸುವದಕ್ಕಾಗಿ (ಈ ಮುಂದಿನ ಗ್ರಂಥವನ್ನು) ಆರಂಭಿಸಿರುತ್ತದೆ.

---

1. ಗಾಯತ್ರೀಬ್ರಹ್ಮದ ಉಪಾಸನೆಯು ಪೂರ್ಣವಾಗುವದಕ್ಕೆ ಹೃದಯದಲ್ಲಿರುವ ದ್ವಾರಪಾಲಕರೇ ಮುಂತಾದವರ ಉಪಾಸನೆಮಾಡಬೇಕು. ಆದ್ದರಿಂದ ಈ ಅಂಗೋಪಾಸನೆಗಳನ್ನು ಹೇಳಲಾಗುವದು.

ರಾಜನ ದ್ವಾರಪಾಲಕರನ್ನು ಉಪಾಸನೆಯಿಂದ ವಶಗೊಳಿಸಿಕೊಂಡರೆ ಹೇಗೆ (ಅವರು) ರಾಜನ ಪ್ರಾಪ್ತಿಗೆ (ಸಹಾಯಕ)ರಾಗುವರೋ ಹಾಗೆಯೇ ಇಲ್ಲಿಯೂ (ತಿಳಿಯಬೇಕು).[1]

## ಪೂರ್ವದ್ವಾರಪುರುಷನ ಉಪಾಸನೆ

(ಭಾಷ್ಯ)

೨೪೦ ತಸ್ಯ ಇತಿ ಪ್ರಕೃತಸ್ಯ ಹೃದಯಸ್ಯ ಇತ್ಯರ್ಥಃ। ಏತಸ್ಯ ಅನನ್ತರ ನಿರ್ದಿಷ್ಟಸ್ಯ ಪಞ್ಚ ಪಞ್ಚಸಂಖ್ಯಾಕಾಃ ದೇವಾನಾಂ ಸುಷಯಃ ದೇವಸುಷಯಃ ಸ್ವರ್ಗಲೋಕಪ್ರಾಪ್ತಿದ್ವಾರಚ್ಛಿದ್ರಾಣಿ, ದೇವೈಃ ಪ್ರಾಣಾದಿತ್ಯಾದಿಭಿಃ ರಕ್ಷ್ಯಮಾಣಾನಿ ಇತ್ಯತೋ ದೇವಸುಷಯಃ। ತಸ್ಯ ಸ್ವರ್ಗಲೋಕಭವನಸ್ಯ ಹೃದಯಸ್ಯ ಅಸ್ಯ ಯಃ ಪ್ರಾಙ್ಸುಷಿಃ ಪೂರ್ವಾಭಿಮುಖಸ್ಯ ಪ್ರಾಗ್ಗತಂ ಯಚ್ಛಿದ್ರಂ ದ್ವಾರಂ ಸ ಪ್ರಾಣಃ। ತತ್ಸ್ಥಃ ತೇನ ದ್ವಾರೇಣ ಯಃ ಸಂಚರತಿ ವಾಯುವಿಶೇಷಃ ಸ ಪ್ರಾಗ್ ಅನಿತೀತಿ ಪ್ರಾಣಃ। ತೇನೈವ ಸಂಬದ್ಧಮ್ ಅವ್ಯತಿರಿಕ್ತಂ ತಚ್ಚಕ್ಷುಃ। ತಥೈವ ಸ ಆದಿತ್ಯಃ। "ಆದಿತ್ಯೋ ಹ ವೈ ಬಾಹ್ಯಪ್ರಾಣಃ" (? ಪ್ರ. ೫)[2] ಇತಿ ಶ್ರುತೇಃ ಚಕ್ಷೂರೂಪ ಪ್ರತಿಷ್ಠಾಕ್ರಮೇಣ ಹೃದಿ ಸ್ಥಿತಃ। "ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ ಚಕ್ಷುಷಿ" (ಬೃ. ೩-೯-೨೦) ಇತ್ಯಾದಿ ಹಿ ವಾಜಸನೇಯಕೇ। ಪ್ರಾಣವಾಯುದೇವತೈವ ಹಿ ಏಕಾ ಚಕ್ಷುರಾದಿತ್ಯಶ್ಚ ಸಹಾಽಽಶ್ರಯೇಣ। ವಕ್ಷ್ಯತಿ ಚ ಪ್ರಾಣಾಯ ಸ್ವಾಹಾ ಇತಿ ಹುತಂ ಹವಿಃ ಸರ್ವಮೇತತ್ ತರ್ಪಯತೀತಿ। ತದೇತತ್ ಪ್ರಾಣಾಖ್ಯಂ ಸ್ವರ್ಗಲೋಕದ್ವಾರಪಾಲತ್ವಾತ್ ಬ್ರಹ್ಮ। ಸ್ವರ್ಗಲೋಕಂ ಪ್ರತಿಪಿತ್ಸುಃ ತೇಜಶ್ಚ[3] ಏತತ್ ಚಕ್ಷುರಾದಿತ್ಯಸ್ವರೂಪೇಣ, ಅನ್ನಾದತ್ವಾಚ್ಚ[4] ಸವಿತುಃ ತೇಜಃ, ಅನ್ನಾದ್ಯಮ್ ಇತ್ಯಾಭ್ಯಾಂ ಗುಣಾಭ್ಯಾಮ್ ಉಪಾಸೀತ। ತತಃ ತೇಜಸ್ವೀ ಅನ್ನಾದಶ್ಚ ಆಮಯಾವಿತ್ವರಹಿತೋ ಭವತಿ। ಯ ಏವಂವೇದ ತಸ್ಯೈತದ್ ಗುಣಫಲಮ್। ಉಪಾಸನೇನ ವಶೀಕೃತೋ ದ್ವಾರಪಃ ಸ್ವರ್ಗಲೋಕಪ್ರಾಪ್ತಿಹೇತುರ್ಭವತೀತಿ ಮುಖ್ಯಂ ಚ ಫಲಮ್ ॥

(ಭಾಷ್ಯಾರ್ಥ)

ಆ (ಹೃದಯಕ್ಕೆ) ಎಂದರೆ ಪ್ರಕೃತವಾದ ಹೃದಯಕ್ಕೆ ಎಂದರ್ಥ, ಈ ಎಂದರೆ ಈ ಹಿಂದೆಯೇ (ಹೇಳಿರುವ) ಹೃದಯಕ್ಕೆ,[5] ಐದುಐದುಸಂಖ್ಯೆಯ ದೇವ

---

1. ಹಾಗೆಯೇ ಈ ದ್ವಾರಪಾಲಕರು ಗಾಯತ್ರೀಬ್ರಹ್ಮಪ್ರಾಪ್ತಿಗೆ ಸಹಾಯಕರಾಗುತ್ತಾರೆ ಎಂದು ತಿಳಿಯಬೇಕು.

2. ಇದು ಪ್ರಶ್ನೋಪನಿಷತ್ತಿನ ವಾಕ್ಯವೋ ಮತ್ತೆಲ್ಲಿಯಾದರೂ ಇದೆಯೋ ತಿಳಿಯದು.

3. 'ತೇಜಸ್ತು' ಎಂಬ ಪಾಠವು ಬೇಕಿಲ್ಲ.

4 ಅನ್ನಾದ್ಯತ್ವಾಚ್ಚ ಎಂಬುದನ್ನು ಅನ್ನದತ್ವಾಚ್ಚ ಎಂದು ತಿದ್ದುಕೊಂಡಿದೆ.

5. ಭೂತಪೃಥಿವ್ಯಾದಿಕ್ರಮದಿಂದ ಗಾಯತ್ರೀಸಂಬದ್ಧವೆಂದು ಮೊದಲು ಹೇಳಿತ್ತಷ್ಟೆ, ಆ ಹೃದಯದಲ್ಲಿಯೇ ಗಾಯತ್ರೀಬ್ರಹ್ಮವನ್ನು ಉಪಾಸಮಾಡಬೇಕೆಂದು ಇದರ ಹಿಂದಿನ ಕಂಡಿ[illegible]ಲ್ಲಿ ಹೇಳಿತ್ತು; ಇವಕ್ಕೇ ಈಗ ದ್ವಾರಪಾಲಕರನ್ನು ಹೇಳುತ್ತಿರುವದು ಎಂದರ್ಥ.

ಸುಷಿಗಳು, ದೇವತೆಗಳ ಸುಷಿಗಳು, ಸ್ವರ್ಗಲೋಕವನ್ನು ಪಡೆಯುವದಕ್ಕೆ[1] ದ್ವಾರವಾಗಿರುವ ರಂಧ್ರಗಳು. (ಇವು) ದೇವತೆಗಳಾದ ಪ್ರಾಣ, ಆದಿತ್ಯ- ಮುಂತಾದವರು (ಇಲ್ಲಿ) ಕಾವಲಿರುವವರಿಂದ ದೇವಸುಷಿಗಳು.[2]

ಆ ಸ್ವರ್ಗಲೋಕದ ಭವನವಾದ[3] ಈ ಹೃದಯಕ್ಕೆ ಪೂರ್ವದಿಕ್ಕಿನ ಸುಷಿಯಿದೆಯಲ್ಲ, ಪೂರ್ವಕ್ಕೆ ತಿರುಗಿ ನಿಂತವನ ಪೂರ್ವದಲ್ಲಿರುವ ಛಿದ್ರವಿದೆಯಲ್ಲ[4], ದ್ವಾರವಿದೆಯಲ್ಲ, ಅದೇ ಪ್ರಾಣವು. ಅದರಲ್ಲಿದ್ದುಕೊಂಡು[5] ಆ ದ್ವಾರದಿಂದ ಸಂಚರಿಸುತ್ತಿರುವದಲ್ಲ, ಆ ವಾಯುವು (ಪ್ರ) ಮುಂದುಗಡೆಗೆ (ಅನಿತಿ) ಚಲಿಸುತ್ತದೆಯಾಗಿ 'ಪ್ರಾಣ'ವೆನಿಸಿರುತ್ತದೆ ಅದೇ (ಪ್ರಾಣಕ್ಕೆ) ಸಂಬದ್ಧವಾಗಿ ಅದಕ್ಕಿಂತ ಬೇರೆಯಲ್ಲದ್ದರಿಂದ[6], ಅದೇ ಚಕ್ಷುಸ್ಸು. ಹಾಗೆಯೇ[7] ಅದು ಆದಿತ್ಯನು. ಏಕೆಂದರೆ, "ಆದಿತ್ಯನೇ ಹೊರಗಿನ ಪ್ರಾಣವು" ( ? ಪ್ರ. ೫)[8] ಎಂದು ಶ್ರುತಿಯಿದೆ. (ಆ ಆದಿತ್ಯನು) ಚಕ್ಷುಸ್ಸು, ರೂಪ- ಇವುಗಳು (ಒಂದರಲ್ಲೊಂದು) ಪ್ರತಿಷ್ಠಿತವಾಗಿರುವ ಕ್ರಮದಿಂದ ಹೃದಯದಲ್ಲಿರುತ್ತಾನೆ.[9] "ಆ ಆದಿತ್ಯನು ಏತರಲ್ಲಿ ಪ್ರತಿಷ್ಠಿತನಾಗಿರು

---

1. ಸ್ವರ್ಗಲೋಕವೆಂದರೆ ಉಪಾಸ್ಯವಾದ ಬ್ರಹ್ಮ; ಮುಂದೆ ೬ನೆಯ ಕಂಡಿಕೆಯನ್ನು ನೋಡಿ.

2. ಬ್ರಹ್ಮಪ್ರಾಪ್ತಿಗೆ ದ್ವಾರವಾಗಿರುವದರಿಂದ ಸುಷಿಗಳು, ದೇವತೆಗಳು ಇಲ್ಲಿ ಕಾವಲಿರುವದರಿಂದ ದೇವಸುಷಿಗಳು- ಎಂದಿದೆ ಎಂದರ್ಥ

3. ಬ್ರಹ್ಮಸ್ಥಾನವಾದ ಎಂದರ್ಥ. ಅಲ್ಲಿಯೇ ಈ ಗಾಯತ್ರೀಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದು ಹಿಂದಿನ ಕಂಡಿಕೆಯಲ್ಲಿ ಹೇಳಿತ್ತು.

4. ಮನುಷ್ಯನು ತಿರುಗಿದಂತೆ ಅವನ ಹೃದಯವೂ ತಿರುಗುವದರಿಂದ ಅದಕ್ಕೆ ಪೂರ್ವದಿಕ್ಕಿನ ಸುಷಿ ಎಂದರೆ ಯಾವದನ್ನು ಗ್ರಹಿಸಬೇಕು ?- ಎಂಬ ಶಂಕೆಗೆ ಪರಿಹಾರವಿದು.

5. ಅದೇ ಪ್ರಾಣವು, ಆ ಸುಷಿಯಲ್ಲಿರುವ ವಾಯುವಿಶೇಷವೇ ಪ್ರಾಣವು ಎಂದರ್ಥ. 'ಮಂಚಿಕೆಗಳು ಕೂಗುತ್ತವೆ' ಎಂದಂತೆ ಲಕ್ಷಣೆಯಿಂದ ಅದೇ ಎಂಬ ಶಬ್ದವನ್ನು ಪ್ರಯೋಗಿಸಿದೆ

6. ಚಕ್ಷುಸ್ಸು ಪ್ರಾಣನಿಗಿಂತ ಅವ್ಯತಿರಿಕ್ತ; ಏಕೆಂದರೆ ಪ್ರಾಣನ ಬಲದಿಂದಲೇ ಅದು ವ್ಯಾಪಾರಮಾಡುತ್ತದೆ.

7. ಇದರಂತೆಯೇ ಆದಿತ್ಯನೂ ಪ್ರಾಣಕ್ಕಿಂತ ಅವ್ಯತಿರಿಕ್ತನು, ಬೇರೆಯಲ್ಲ ಎಂದರ್ಥ. ೪-೩-೧ನ್ನು ನೋಡಿ.

8. ಪ್ರಶ್ನೋಪನಿಷತ್ತಿನಲ್ಲಿ ಬಾಹ್ಯಪ್ರಾಣಃ ಎಂದಿಲ್ಲ, ಪ್ರಾಣಃ ಎಂದಿಷ್ಟೇ ಇದೆ; ಇದು ಅದರ ಅರ್ಥಮಾತ್ರವೊ, ಮತ್ತೆಲ್ಲಿಯಾದರೂ ಈ ವಾಕ್ಯವೇ ಇದೆಯೊ, ತಿಳಿಯದು.

9 ಆದಿತ್ಯನು ಕಾರಣವಾದ ಚಕ್ಷುಸ್ಸಿನಲ್ಲಿ ಚಕ್ಷುಸ್ಸು ತನ್ನ ಆರಂಭಕವಾದ ರೂಪಗಳಲ್ಲಿ, ರೂಪಗಳು ತಮ್ಮ ಆಕಾರದಿಂದ ಪರಿಣತವಾಗಿರುವ ಹೃದಯದಲ್ಲಿ ಈ ಕ್ರಮದಿಂದ ಎಂದರ್ಥ. ಇದನ್ನು ಮುಂದಿನ ವಾಕ್ಯದಿಂದ ಸಮರ್ಥಿಸಿದೆ.

ತ್ತಾನೆ? ಚಕ್ಷುಸ್ಸಿನಲ್ಲಿ" (ಬೃ. ೩-೯-೨೦) ಎಂದು ಮುಂತಾಗಿ[1] ವಾಜಸನೇಯ ದಲ್ಲಿದೆಯಲ್ಲವೆ? ಪ್ರಾಣವಾಯುದೇವತೆಯೊಂದೇ ಅಲ್ಲವೆ, ತನ್ನ ಆಶ್ರಯ ದಿಂದೊಡಗೂಡಿದೆ, ಚಕ್ಷುಸ್ಸೂ ಆದಿತ್ಯನೂ (ಆಗಿದೆ)[2] ? 'ಪ್ರಾಣಾಯ ಸ್ವಾಹಾ !' ಎಂದು ಹೋಮಮಾಡಿದ ಹವಿಸ್ಸು ಇದೆಲ್ಲಕ್ಕೂ ತೃಪ್ತಿಯನ್ನುಂಟುಮಾಡುತ್ತದೆ ಎಂದು ಮುಂದೆ (೫-೧೯-೨ರಲ್ಲಿ) ಹೇಳಿಯೂ ಇರುತ್ತದೆ.[3]

ಆ ಈ ಪ್ರಾಣನೆಂಬುದು ಸ್ವರ್ಗಲೋಕದ ದ್ವಾರಪಾಲನಾಗಿರುವದರಿಂದ ಬ್ರಹ್ಮವು.[4] ಸ್ವರ್ಗಲೋಕವನ್ನು ಪಡೆದುಕೊಳ್ಳಬೇಕೆನ್ನುವವನು-ಚಕ್ಷುರಾದಿತ್ಯರ ರೂಪದಿಂದ ಇದು ತೇಜಸ್ಸೂ (ಆಗಿದೆ), ಸೂರ್ಯನು ಅನ್ನಪ್ರದನಾಗಿರುವದರಿಂದ[5] ಅನ್ನಾದ್ಯವೂ (ಆಗಿದೆ. ಆದ್ದರಿಂದ) ತೇಜಸ್ಸು, ಅನ್ನಾದ್ಯವು ಎಂಬೀ (ಎರಡು) ಗುಣಗಳಿಂದ (ಕೂಡಿದ್ದೆಂದು ಈ ಬ್ರಹ್ಮವನ್ನು) ಉಪಾಸನೆಮಾಡಬೇಕು ಅದರಿಂದ ತೇಜಸ್ವಿಯೂ ಅನ್ನಾದನೂ ಎಂದರೆ ರೋಗರಹಿತನೂ ಆಗುತ್ತಾನೆ. ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಇದು ಗುಣಫಲವು[6] (ಈ) ಉಪಾಸನೆಯಿಂದ ವಶೀಕೃತನಾದ (ಈ) ದ್ವಾರಪಾಲಕನು ಸ್ವರ್ಗಲೋಕಪ್ರಾಪ್ತಿಗೆ ಕಾರಣನಾಗುತ್ತಾನೆ ಎಂಬ ಮುಖ್ಯಫಲವೂ (ಆಗುತ್ತದೆ).

(ಉಪನಿಷತ್ತು)

**ಅಥ ಯೋಽಸ್ಯ ದಕ್ಷಿಣಃ ಸುಷಿಃ ಸ ವ್ಯಾನಸ್ತಚ್ಛ್ರೋತ್ರಗ್ಂ ಸ ಚನ್ದ್ರಮಾಸ್ತದೇತಚ್ಛ್ರೀಶ್ಚ ಯಶಶ್ಚೇತ್ಯುಪಾಸೀತ ಶ್ರೀಮಾನ್ ಯಶಸ್ವೀ ಭವತಿ ಯ ಏವಂ ವೇದ ॥೨॥**

---

1. 'ಆದಿತ್ಯನು ಏತರಲ್ಲಿ ಪ್ರತಿಷ್ಠಿತನಾಗಿದಾನೆ? ಚಕ್ಷುಸ್ಸಿನಲ್ಲಿ, ಚಕ್ಷುಸ್ಸು ಏತರಲ್ಲಿ ಪ್ರತಿಷ್ಠಿತವಾಗಿದೆ? ರೂಪಗಳಲ್ಲಿ, ಏಕೆಂದರೆ ಚಕ್ಷುಸ್ಸಿನಿಂದಲೇ ರೂಪಗಳನ್ನು ನೋಡುತ್ತಾನೆ ರೂಪಗಳು ಏತರಲ್ಲಿ ಪ್ರತಿಷ್ಠಿತವಾಗಿವೆ? ಹೃದಯದಲ್ಲಿ ಹೃದಯದಲ್ಲಲ್ಲವೆ, ರೂಪಗಳನ್ನು ಅರಿಯುತ್ತಾನೆ? 'ಹೃದಯದಲ್ಲಿಯೇ ರೂಪಗಳು ಪ್ರತಿಷ್ಠಿತವಾಗಿವೆ' ಎಂಬುದು ಪೂರ್ಣವಾಕ್ಯ

2 ಅಧ್ಯಾತ್ಮವಾಗಿ ಪ್ರಾಣವೇ ಚಕ್ಷುಸ್ಸಾಗಿದೆ, ಅಧಿದೈವತವಾಗಿ ವಾಯುವೇ ಆದಿತ್ಯ ನಾಗಿದೆ; ಪ್ರಾಣವಾಯುಗಳೆರಡೂ ಒಂದೇ ದೇವತೆ.

3 ಪ್ರಾಣತೃಪ್ತಿಯಿಂದ ಚಕ್ಷುಸ್ಸು, ಆದಿತ್ಯ, ದ್ಯುಲೋಕದೇವತೆ, ಅನೆರಡರಿಂದ ಅಧಿ ಷ್ಠಿತವಾಗಿರುವದು - ಇವೆಲ್ಲಕ್ಕೂ ತೃಪ್ತಿಯಾಗುವದು ಎಂದು ಅಲ್ಲಿ ಹೇಳಿದೆ.

4. ಬ್ರಹ್ಮಪ್ರಾಪ್ತಿಗೆ ಕಾರಣವಾಗಿರುವದರಿಂದ ಪ್ರಾಣನನ್ನು ಬ್ರಹ್ಮವೆಂದಿದೆ

5. 'ಸವಿತುಶ್ಚ ಅನ್ನದತ್ವಂ ವೃಷ್ಟಿದ್ವಾರೇಣ ಆದಿತ್ಯಾಜ್ಜಾಯತೇ ವೃಷ್ಟಿರಿತ್ಯಾದೌ ದೃಷ್ಟಮ್ । ಅತಶ್ಚ ಅನ್ನಂ ಚ ತದಾದ್ಯಂ ಚೇತಿ ಗುಣಾಸ್ತದ್ವಿಶಿಷ್ಟತ್ವೇನಾಪಿ ಸವಿತೃರೂಪಂ ಪ್ರಾಣಾಖ್ಯಂ ಬ್ರಹ್ಮ ಧ್ಯಾನಾರ್ಹಮ್ ಇತ್ಯರ್ಥಃ' ಎಂಬ ವ್ಯಾಖ್ಯಾನದ ಬಲದಿಂದ ಮೂಲದ ಪಾಠವನ್ನು ಪೂರ್ವವಿಸಿಕೊಂಡು ಕನ್ನಡಿಸಿದೆ

6. ಈ ಎರಡು ಗುಣಗಳಿಂದ ಕೂಡಿದ್ದೆಂದು ಉಪಾಸನೆಮಾಡಿದ್ದರಿಂದ ಆದ ದೃಷ್ಟ ಫಲವು.

೨. ಇನ್ನು ಇದರ ದಕ್ಷಿಣಸುಷಿಯಿದೆಯಲ್ಲ, ಅದು ವ್ಯಾನವು; ಅದೇ ಶ್ರೋತ್ರವು, ಅದೇ ಚಂದ್ರನು. ಆ ಇದನ್ನು ಶ್ರೀಯೆಂದೂ ಯಶಸ್ಸೆಂದೂ ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಶ್ರೀಮಂತನೂ ಯಶಸ್ವಿಯೂ ಆಗುತ್ತಾನೆ.

## ದಕ್ಷಿಣದ್ವಾರಪಾಲನ ಉಪಾಸನೆ

(ಭಾಷ್ಯ)

೨೪೧. ಅಥ ಯೋಽಸ್ಯ ದಕ್ಷಿಣಃ ಸುಷಿಃ ತತ್ಸ್ಥೋ ವಾಯುವಿಶೇಷಃ ಸ ವೀರ್ಯವತ್ಕರ್ಮ ಕುರ್ವನ್ ವಿಗೃಹ್ಯ ವಾ ಪ್ರಾಣಾಪಾನೌ ನಾನಾ ವಾ ಅನಿತಿ ಇತಿ ವ್ಯಾನಃ । ತತ್ಸಂಬದ್ಧಮೇವ ಚ ತತ್ ಶ್ರೋತ್ರಮ್ ಇನ್ದ್ರಿಯಮ್ । ತಥಾ ಸ ಚನ್ದ್ರಮಾಃ "ಶ್ರೋತ್ರೇಣ ಸೃಷ್ಟಾ ದಿಶಶ್ಚ ಚನ್ದ್ರಮಾಶ್ಚ" (ಐ ಆ. ೧-೭) ಇತಿ ಶ್ರುತೇಃ । ಸಹಾಶ್ರಯೌ ಪೂರ್ವವತ್ । ತದೇತತ್ ಶ್ರೀಶ್ಚ ವಿಭೂತಿಃ ಶ್ರೋತ್ರಚನ್ದ್ರಮಸೋರ್ಜ್ಞಾನಾನ್ನಹೇತುತ್ವಮ್ । ಅತಸ್ತಾಭ್ಯಾಂ ಶ್ರೀತ್ವಮ್ । ಜ್ಞಾನಾನ್ನವತಶ್ಚ ಯಶಃ ಖ್ಯಾತಿರ್ಭವತೀತಿ ಯಶೋಹೇತುತ್ವಾತ್ ಯಶಸ್ತ್ವಮ್ । ಅತಃ ತಾಭ್ಯಾಂ ಗುಣಾಭ್ಯಾಮ್ ಉಪಾಸೀತ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಇನ್ನು ಈ (ಹೃದಯದ) ದಕ್ಷಿಣಸುಷಿಯಿರುವದಲ್ಲ, ಎಂದರೆ ಅದರಲ್ಲಿರುವ ವಾಯುವಿಶೇಷವಿರುವದಲ್ಲ, ಅದು (ವಿ= ) ವೀರ್ಯವತ್ಕರ್ಮವನ್ನು ಮಾಡುತ್ತಾ, ಅಥವಾ ಪ್ರಾಣಾಪಾನಗಳನ್ನು ಹಿಡಿದುಕೊಂಡು[1], ಅಥವಾ ವಿವಿಧವಾದ ಕಡೆಗಳಲ್ಲಿ (ಅನಿತಿ =) ವ್ಯಾಪಾರಮಾಡುವದರಿಂದ ವ್ಯಾನವು. (ವ್ಯಾನಕ್ಕೆ) ಸಂಬದ್ಧವಾಗಿಯೇ (ಇರುವದರಿಂದ) ಅದೇ ಶ್ರೋತ್ರವು, ಹಾಗೆಯೇ ಅದೇ ಚಂದ್ರನು. "(ಪುರುಷನ) ಶ್ರೋತ್ರದಿಂದ ದಿಕ್ಕುಗಳೂ ಚಂದ್ರನೂ ಸೃಷ್ಟರಾಗಿರುತ್ತಾರೆ" (ಐ. ಆ. ೧-೭) ಎಂದು ಶ್ರುತಿಯಿರುವದರಿಂದ (ಇವೆರಡೂ) ಆಶ್ರಯದೊಡನೆ (ಆ ವ್ಯಾನವೇ) ಎಂದು ಹಿಂದಿನಂತೆ ವ್ಯಾಖ್ಯಾನಮಾಡಬೇಕು.[2]

---

1. ನಡುವಿನ ವ್ಯಾನವು ಪ್ರಾಣಾಪಾನಗಳನ್ನು (ವಿಗೃಹ್ಯ) ಹಿಡಿದುಕೊಂಡಿರುವ ವ್ಯಾಪಾರವನ್ನು ಮಾಡುವದರಿಂದ ಶರೀರವು ಮೇಲಕ್ಕೆ ಅಥವಾ ಕೆಳಕ್ಕೆ ಹೋಗದೆ ಸಮಸ್ಥಿತಿಯಲ್ಲಿದ್ದುಕೊಂಡಿರುತ್ತದೆ.

2. ವ್ಯಾನದ ತೃಪ್ತಿಯಿಂದ ಶ್ರೋತ್ರ, ಚಂದ್ರ, ದಿಕ್ಕುಗಳು, ಅವುಗಳಿಂದ ಅಧಿಷ್ಠಿತವಾಗಿರುವವೆಲ್ಲವೂ ತೃಪ್ತವಾಗುವವು ಎಂದು ೫-೨೦-೨ರಲ್ಲಿ ಹೇಳಿದೆಯಾಪ್ಪರಿಂದ ವ್ಯಾನವೇ ಶ್ರೋತ್ರಚಂದ್ರಾದಿಗಳು ಎಂದು ವ್ಯಾಖ್ಯಾನಮಾಡಿಕೊಳ್ಳಬೇಕು.

ಆ ಇದು ಶ್ರೀ ಎಂದೂ ವಿಭೂತಿ ಎಂದೂ- ಶ್ರೋತ್ರಚಂದ್ರರು (ಕ್ರಮವಾಗಿ) ಜ್ಞಾನ, ಅನ್ನ- ಇವುಗಳಿಗೆ ಹೇತುವಾಗಿರುತ್ತಾರೆ. ಆದ್ದರಿಂದ ಅವುಗಳಿಂದ ಶ್ರೀತ್ವವುಂಟಾಗುತ್ತದೆ. ಜ್ಞಾನಾನ್ನಗಳಿರುವವನಿಗೆ ಯಶಸ್ಸು ಎಂದರೆ ಒಳ್ಳೆಯ ಹೆಸರು ಬರುತ್ತದೆಯಾದ್ದರಿಂದ (ಅವರು) ಯಶಸ್ಸಿಗೂ ಕಾರಣ(ರಾಗಿರುತ್ತಾರೆ). ಆದ್ದರಿಂದ (ವ್ಯಾನಬ್ರಹ್ಮವನ್ನು) ಆ ಗುಣಗಳಿರದರಿಂದಲೂ ಒಳಗೂಡಿದ್ದೆಂದು ಉಪಾಸನೆಮಾಡಬೇಕು- ಎಂಬಿದೇ ಮುಂತಾದದ್ದು (ಹಿಂದಿನದಕ್ಕೆ) ಸಮಾನವು.[1]

(ಉಪನಿಷತ್ತು)

**ಅಥ ಯೋಽಸ್ಯ ಪ್ರತ್ಯಙ್ಸುಷಿಃ ಸೋಽಪಾನಃ ಸಾ ವಾಕ್ ಸೋಽಗ್ನಿಸ್ತದೇತದ್ ಬ್ರಹ್ಮವರ್ಚಸಮನ್ನಾದ್ಯಮಿತ್ಯುಪಾಸೀತ ಬ್ರಹ್ಮವರ್ಚಸ್ಯನ್ನಾದೋ ಭವತಿ ಯ ಏವಂ ವೇದ ॥೩॥**

೩. ಇನ್ನು ಇವರ ಪಶ್ಚಿಮದ ಸುಷಿಯುರುವದಲ್ಲ, ಅದು ಅಪಾನವು, ಅದೇ ವಾಕ್ಕು, ಅದೇ ಅಗ್ನಿಯು. ಆ ಇದನ್ನು ಬ್ರಹ್ಮವರ್ಚಸವು, ಅನ್ನಾದ್ಯವು ಎಂದು ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತುಕೊಳ್ಳುತ್ತಾನೋ (ಅವನು) ಬ್ರಹ್ಮವರ್ಚಸಿಯೂ ಅನ್ನಾದನೂ ಆಗುತ್ತಾನೆ.

## ಪಶ್ಚಿಮದ್ವಾರಪಾಲನ ಉಪಾಸನೆ

(ಭಾಷ್ಯ)

೨೪೨. ಅಥ ಯೋಽಸ್ಯ ಪ್ರತ್ಯಙ್ಸುಷಿಃ ಪಶ್ಚಿಮಃ ತತ್ಸ್ಥೋ ವಾಯುವಿಶೇಷಃ ಸ ಮೂತ್ರಪುರೀಷಾದ್ಯಪನಯನ್ ಅಧೋಽನಿತಿ ಇತ್ಯಪಾನಃ। ಸಾ ತಥಾ[2] ವಾಕ್। ತತ್ಸಂಬನ್ಧಾತ್। ತಥಾ ಅಗ್ನಿಃ। ತದೇತದ್ ಬ್ರಹ್ಮವರ್ಚಸಮ್। ವೃತ್ತಸ್ವಾಧ್ಯಾಯನಿಮಿತ್ತಂ ತೇಜಃ ಬ್ರಹ್ಮವರ್ಚಸಮ್। ಅಗ್ನಿಸಂಬನ್ಧಾತ್ ವೃತ್ತಸ್ವಾಧ್ಯಾಯಸ್ಯ। ಅನ್ನಗ್ರಸನಹೇತುತ್ವಾತ್ ಅಪಾನಸ್ಯ ಅನ್ನಾದ್ಯತ್ವಮ್ ಸಮಾನಮ್ ಅನ್ಯತ್ ॥

(ಭಾಷ್ಯಾರ್ಥ)

ಇನ್ನು ಇದಕ್ಕೆ ಯಾವದು ಪಶ್ಚಿಮದ ಸುಷಿಯೋ, ಪಶ್ಚಿಮದಲ್ಲಿರುವ (ರಂಧ್ರವೋ), ಅದರಲ್ಲಿರುವ ವಾಯುವಿಶೇಷವೋ (ಎಂದರ್ಥ) ಅದು ಮೂತ್ರ

1 ಶ್ರೀಯಶಸ್ಸುಗಳು ಈ ಉಪಾಸನೆಯ ಗುಣಫಲವು, ಸ್ವರ್ಗಲೋಕಪ್ರಾಪ್ತಿಯು ಮುಖ್ಯಫಲವು ಎಂದು ವ್ಯಾಖ್ಯಾನಮಾಡಿಕೊಳ್ಳಬೇಕು ಎಂದು ಅಭಿಪ್ರಾಯ

2. ಇಲ್ಲಿ ತಥಾ ಎಂಬ ಮಾತು ಮೂಲಭಾಷ್ಯದಲ್ಲಿತ್ತೇ ? ಎಂಬುದು ಸಂಶಯಗ್ರಸ್ತ.

ಪುರೀಷವೇ ಮುಂತಾದದ್ದನ್ನು (ಅಪ) ತೆಗೆದುಕೊಂಡುಹೋಗುವದಕ್ಕೆ ಕೆಳಕ್ಕೆ (ಅನಿತಿ) ವ್ಯಾಪಾರಮಾಡುವದರಿಂದ ಅಪಾನವು. ಅದೇ ವಾಕ್ಕು ; ಏಕೆಂದರೆ ಅದಕ್ಕೆ ಸಂಬದ್ಧವಾಗಿದೆ, ಹಾಗೆಯೇ ಅಗ್ನಿಯು.[1] ಆ ಈ (ಬ್ರಹ್ಮವು) ಬ್ರಹ್ಮವರ್ಚಸವು. ಹಿಂದೆ ಆಗಿರುವ ಸ್ವಾಧ್ಯಾಯನಿಮಿತ್ತವಾದ[2] ತೇಜಸ್ಸಿಗೆ ಬ್ರಹ್ಮವರ್ಚಸವೆಂದು (ಹೆಸರು) ಹಿಂದಿನ ಸ್ವಾಧ್ಯಾಯಕ್ಕೆ ಅಗ್ನಿಯ ಸಂಬಂಧವಿರುವದರಿಂದ (ಅದನ್ನು ತೇಜಸ್ಸು ಎಂದು ಕರೆಯಬಹುದು). ಅನ್ನವನ್ನು ನುಂಗುವದಕ್ಕೆ ಅಪಾನವು ಕಾರಣವಾಗಿರುವದರಿಂದ[3] ಅನ್ನಾದ್ಯವು ಮಿಕ್ಕದ್ದು ಸಮಾನವು,[4]

(ಉಪನಿಷತ್ತು)

**ಅಥ ಯೋಽಸ್ಯೋದಙ್ಸುಷಿಃ ಸ ಸಮಾನಸ್ತನ್ಮನಃ ಸ ಪರ್ಜನ್ಯ ಸ್ತದೇತತ್ ಕೀರ್ತಿಶ್ಚ ವ್ಯುಷ್ಟಿಶ್ಚೇತ್ಯುಪಾಸೀತ ಕೀರ್ತಿಮಾನ್ ವ್ಯುಷ್ಟಿಮಾನ್ ಭವತಿ ಯ ಏವಂ ವೇದ ॥ ೪ ॥**

೪. ಇನ್ನು ಇದರ ಉತ್ತರಸುಷಿಯಿದೆಯಲ್ಲ, ಅದು ಸಮಾನವು. ಅದೇ ಮನಸ್ಸು, ಅದೇ ಪರ್ಜನ್ಯನು. ಆ ಇದನ್ನು ಕೀರ್ತಿ, ವ್ಯುಷ್ಟಿ- ಎಂದು ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಕೀರ್ತಿವಂತನೂ ವ್ಯುಷ್ಟಿವಂತನೂ ಆಗುವನು.

## ಉತ್ತರದ್ವಾರಪಾಲನ ಉಪಾಸನೆ

(ಭಾಷ್ಯ)

೨೪೩. ಅಥ ಯೋಽಸ್ಯ ಉದಙ್ಸುಷಿಃ ಉದಗ್ಗತಃ ಸುಷಿಃ ತತ್ಸ್ಥೋ ವಾಯುವಿಶೇಷಃ ಸೋಽಶಿತಪೀತೇ ಸಮಂ ನಯತೀತಿ ಸಮಾನಃ । ತತ್ಸಂಬದ್ಧಂ ಮನಃ, ಅನ್ತಃಕರಣಮ್[5] । ಸ ಪರ್ಜನ್ಯಃ ವೃಷ್ಟ್ಯಾತ್ಮಕೋ ದೇವಃ । ಪರ್ಜನ್ಯ

---

1. ಇಲ್ಲಿಯೂ ಆದಿತ್ಯನಂತೆ ಅಗ್ನಿಗೆ ವಾಙ್ಮೂಲಕವಾಗಿ ಹೃದಯದ ಸಂಬಂಧವಿದೆ. ಬೃ. ೩-೯-೨೪ನ್ನು ನೋಡಿ ತತ್ಸಂಬನ್ಧಾತ್ ಎಂಬುದನ್ನು ವ್ಯಾಖ್ಯಾನದಲ್ಲಿ ಅಗ್ನಿಗೆ ಹೊಂದಿಸಿದ್ದನೂ ವಾಕ್ಕಿಗೇ ಇದು ಅನ್ವಯಿಸುತ್ತದೆ ಎಂದು ಹಿಂದಿನ ಭಾಷ್ಯದ ಶೈಲಿಯಿಂದ ಗೊತ್ತುಮಾಡಬಹುದು. ತಥಾ ಅಗ್ನಿಃ ಎಂದರೇ ಬೇಕಾಗಿರುವ ಅರ್ಥವು ಹೊರಡುತ್ತದೆ. ಇಲ್ಲಿಯೂ ಅಪಾನತೃಪ್ತಿಯಿಂದ ವಾಕ್ಕು, ಅಗ್ನಿ, ಪೃಥಿವಿ- ಇವುಗಳಿಂದ ಅಧಿಷ್ಠಿತವಾದದ್ದೆಲ್ಲವೂ ಹೀಗೆ ತೃಪ್ತವಾಗುತ್ತದೆ ಎಂಬ (೫ ೨೧-೫) ಶ್ರುತಿಯನ್ನು ಮನದಂದುಕೊಳ್ಳಬೇಕು.

2. ಅಧ್ಯಯನನಿಮಿತ್ತವಾದ.

3. ಐ. ೧-೩-೧೦.

4. ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಇಂಥ ಫಲವು ಎಂದು ಹಿಂದಿನಂತೆ ವ್ಯಾಖ್ಯಾನಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

5. 'ತತ್ಸಂಬದ್ಧಂ ತನ್ಮನಃ' ಎಂದೋ 'ತತ್ ತತ್ಸಂಬದ್ಧಂ ಮನಃ' ಎಂದೋ ಮೂಲವಿದ್ದಿರಬೇಕು.

ನಿಮಿತ್ತಾಶ್ಚ ಆಪ ಇತಿ। “ಮನಸಾ ಸೃಷ್ಟಾ ಆಪಶ್ಚ ವರುಣಶ್ಚ” (ಐ. ಆ. ೨-೧) ಇತಿ ಶ್ರುತೇಃ। ತದೇತತ್ ಕೀರ್ತಿಶ್ಚ। ಮನಸೋ ಜ್ಞಾನಸ್ಯ ಕೀರ್ತಿಹೇತುತ್ವಾತ್। ಆತ್ಮಪರೋಕ್ಷಂ ವಿಶ್ರುತತ್ವಂ ಕೀರ್ತಿರ್ಯಶಃ। ಸ್ವಕರಣಸಂವೇದ್ಯಂ ವಿಶ್ರುತತ್ವಂ ವ್ಯುಷ್ಟಿಃ। ಕಾನ್ತಿಃ ದೇಹಗತಂ ಲಾವಣ್ಯಮ್। ತತಶ್ಚ ಕೀರ್ತಿಸಂಭವಾತ್ ಕೀರ್ತಿಶ್ಚ ಇತಿ। ಸಮಾನಮ್ ಅನ್ಯತ್ ॥

(ಭಾಷ್ಯಾರ್ಥ)

ಇನ್ನು ಇದರ ಉತ್ತರಸುಷಿಯಿದೆಯಲ್ಲ, ಉತ್ತರದಲ್ಲಿರುವ ರಂಧ್ರವಿದೆಯಲ್ಲ, ಅದರಲ್ಲಿರುವ ವಾಯುವಿಶೇಷವಿದೆಯಲ್ಲ, ಅದು ಉಂಡದ್ದನ್ನೂ ಕುಡಿದದ್ದನ್ನೂ ಸಮವಾಗಿ ಒಯ್ಯುವದರಿಂದ ‘ಸಮಾನ’ವೆನಿಸುವದು, ಅದಕ್ಕೆ ಸಂಬದ್ಧವಾಗಿರುವದರಿಂದ ಅದೇ ಮನಸ್ಸು, ಅಂತಃಕರಣವು– ಅದೇ ಪರ್ಜನ್ಯನು ; ವೃಷ್ಟ್ಯಾತ್ಮಕನಾದ ದೇವನು , ಏಕೆಂದರೆ ಅಪ್ಪು ಪರ್ಜನ್ಯನ ನಿಮಿತ್ತದಿಂದಾಗುತ್ತದೆ. “ಮನಸ್ಸಿನಿಂದ ಅಪ್ಪೂ ವರುಣನೂ ಸೃಷ್ಟರಾದರು” (ಐ. ಆ. ೨-೧) ಎಂದು ಶ್ರುತಿಯಿದೆ[1]

ಆ ಇದು ಕೀರ್ತಿಯು, ಏಕೆಂದರೆ ಮನಸ್ಸಿನ ಜ್ಞಾನವು ಕೀರ್ತಿಗೆ ಕಾರಣವಾಗಿರುತ್ತದೆ[2]. ತನಗೆ ಪರೋಕ್ಷವಾಗಿ ಹೆಸರಾಗುವದು ಕೀರ್ತಿ, ಯಶಸ್ಸು , ತನ್ನ ಕರಣಕ್ಕೇ ಗೋಚರವಾಗುವಂತೆ ಹೆಸರಾಂತಿರುವದು ವ್ಯುಷ್ಟಿಯು. (ವ್ಯುಷ್ಟಿ ಎಂದರೆ) ಕಾಂತಿ, ದೇಹಗತವಾದ ಲಾವಣ್ಯವು[3], ಅದರಿಂದ ಕೀರ್ತಿಯುಂಟಾಗುವದರಿಂದ (ಅದು) ಕೀರ್ತಿಯೂ (ಆಗುವದು). ಮಿಕ್ಕದ್ದು[4] ಸಮಾನವು

(ಉಪನಿಷತ್ತು)

**ಅಥ ಯೋಽಸ್ಯೋರ್ಧ್ವಃ ಸುಷಿಃ ಸ ಉದಾನಃ ಸ ವಾಯುಃ ಸ ಆಕಾಶಸ್ತದೇತದೋಜಶ್ಚ ಮಹಶ್ಚೇತ್ಯುಪಾಸೀತೌಜಸ್ವೀ ಮಹಸ್ವಾನ್ ಭವತಿ ಯ ಏವಂ ವೇದ ॥೫॥**

---

1. ಪ್ರಜಾಪತಿಯ ಮನಸ್ಸು ಅಪ್ಪಿಗೆ ಕಾರಣವೆಂದು ಶ್ರುತಿಪ್ರಸಿದ್ಧಿಯಿದೆ, ಪರ್ಜನ್ಯನು ಅಪ್ಪಿಗೆ ಕಾರಣನೆಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ಸಮಾನವಾಯುವಿಗೂ ಪರ್ಜನ್ಯನಿಗೂ ಸಂಬಂಧವಾಯಿತು– ಎಂದು ಆಶಯ. ಇಲ್ಲಿಯೂ ಸಮಾನದ ತೃಪ್ತಿಯಿಂದ ಮನಸ್ಸು, ಪರ್ಜನ್ಯ, ವಿದ್ಯುತ್ತು, ಮುಂತಾದದ್ದು ತೃಪ್ತವಾಗುವವು– ಎಂಬ (೫–೨೨ ೨) ಶ್ರುತಿಯನ್ನು ಮನದಂದುಕೊಳ್ಳಬೇಕು.

2. ಆದ್ದರಿಂದ ಮನಸ್ಸಂಬಂಧದಿಂದ ಇದನ್ನು ಕೀರ್ತಿ ಎಂದು ಉಪಾಸನೆಮಾಡಬೇಕು

3. ಆದ್ದರಿಂದ ಇದು ಸ್ವಾನುಭವದಲ್ಲಿರತಕ್ಕದ್ದು. ಕೀರ್ತಿ, ವ್ಯುಷ್ಟಿ– ಎಂದು ಸಮಾನ ಬ್ರಹ್ಮವನ್ನು ಉಪಾಸನೆಮಾಡಬೇಕು.

4. ಫಲವಾಕ್ಯವು.

೫. ಇನ್ನು ಇದರ ಮೇಲುಗಡೆಯ ಸುಷಿಯಿರುವದಲ್ಲ, ಅದು ಉದಾನವು. ಅದೇ ವಾಯು, ಅದೇ ಆಕಾಶವು. ಅದನ್ನು ಓಜಸ್ಸೆಂದೂ ಮಹವೆಂದೂ ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತು ಕೊಳ್ಳುವನೋ ಅವನು ಓಜಸ್ವಿಯೂ ಮಹಸ್ವಂತನೂ ಆಗುವನು.

## ಮೇಲುಗಡೆಯ ದ್ವಾರಪಾಲನ ಉಪಾಸನೆ

(ಭಾಷ್ಯ)

೨೪೪. ಅಥ ಯೋಽಸ್ಯ ಊರ್ಧ್ವಃ ಸುಷಿಃ ಸ ಉದಾನಃ। ಆಪಾದ ತಲಾತ್ ಆರಭ್ಯ ಊರ್ಧ್ವಮ್ ಉತ್ಕ್ರಮಣಾತ್ ಉತ್ಕರ್ಷಾರ್ಥಂ ಚ ಕರ್ಮ ಕುರ್ವನ್ ಅನಿತಿ ಇತಿ ಉದಾನಃ। ಸ ವಾಯುಃ, ತದಾಧಾರಶ್ಚ ಆಕಾಶಃ। ತದೇತತ್ ವಾಯ್ವಾಕಾಶಯೋಃ ಓಜೋಹೇತುತ್ವಾತ್ ಓಜಃ ಬಲಂ ಮಹತ್ತ್ವಾಚ್ಚ ಮಹಃ ಇತಿ। ಸಮಾನಮ್ ಅನ್ಯತ್ ॥

(ಭಾಷ್ಯಾರ್ಥ)

ಇನ್ನು ಇದರ ಮೇಲುಗಡೆಯ ಸುಷಿಯಿದೆಯಲ್ಲ, (ಅದರಲ್ಲಿರುವ ವಾಯು ವಿದೆಯಲ್ಲ), ಅದು ಉದಾನವು, ಅಂಗಾಲಿನಿಂದ ಮೊದಲಾಗಿ ಮೇಲಕ್ಕೆ ಏರು ತ್ತಲೂ ಉತ್ಕರ್ಷಾರ್ಥವಾದ ಕರ್ಮವನ್ನು ಮಾಡುತ್ತಲೂ (ಅನಿತಿ) ವ್ಯಾಪಾರ ಮಾಡುತ್ತಿರುವದರಿಂದ ಉದಾನವು. ಅದೇ ವಾಯು, ಮತ್ತು ಅದಕ್ಕೆ ಆಧಾರ ವಾಗಿರುವ ಆಕಾಶವು.[1]

ವಾಯ್ವಾಕಾಶಗಳು ಓಜಸ್ಸಿಗೆ ಕಾರಣವಾಗಿರುವದರಿಂದ ಓಜಸ್ಸು, ಬಲವು, ವ್ಯಾಪಕವಾಗಿರುವದರಿಂದ ಮಹವು[2] ಮಿಕ್ಕ (ಗ್ರಂಥವು ಹಿಂದಿನದಕ್ಕೆ) ಸಮಾನ ವಾಗಿದೆ.[3]

## ಬ್ರಹ್ಮಪುರುಷರ ಉಪಾಸನೆಗೆ ಬ್ರಹ್ಮಪ್ರಾಪ್ತಿಫಲ

(ಉಪನಿಷತ್ತು)

**ತೇ ವಾ ಏತೇ ಪಞ್ಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರ ಪಾಃ ಸ ಯ ಏತಾನೇವಂ ಪಞ್ಚ ಬ್ರಹ್ಮಪುರುಷಾನ್ ಸ್ವರ್ಗಸ್ಯ**

---

1. ಉದಾನದ ತೃಪ್ತಿಯಿಂದ ತ್ವಕ್ಕು, ವಾಯು, ಆಕಾಶ, ಮತ್ತು ವಾಯ್ವಾಕಾಶ ಗಳಿಂದ ಅಧಿಷ್ಠಿತವಾಗಿರುವದು– ಇವೆಲ್ಲವೂ ತೃಪ್ತವಾಗುವವೆಂಬ (೫–೨೩–೨) ಶ್ರುತಿಯನ್ನು ಇಲ್ಲಿ ಮನದಂದುಕೊಳ್ಳಬೇಕು.

2. ಈ ಗುಣಗಳಿಂದ ಕೂಡಿದ್ದೆಂದು ಉದಾನಬ್ರಹ್ಮವನ್ನು ಉಪಾಸನೆಮಾಡಬೇಕು.

3. ಫಲವಾಕ್ಯದ ಅರ್ಥವನ್ನು ಹಿಂದಿನಂತೆಯೇ ತಿಳಿದುಕೊಳ್ಳಬೇಕೆಂದು ಅಭಿಪ್ರಾಯ.

**ಲೋಕಸ್ಯ ದ್ವಾರಪಾನ್ ವೇದಾಸ್ಯ ಕುಲೇ ವೀರೋ ಜಾಯತೇ ಪ್ರತಿಪದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಞ್ಚ ಬ್ರಹ್ಮ ಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ ವೇದ ॥೬॥**

೬. ಈ ಐವರು ಬ್ರಹ್ಮಪುರುಷರೇ ಸ್ವರ್ಗಲೋಕದ ದ್ವಾರ ಪಾಲಕರು. ಯಾವನು ಹೀಗೆ ಈ ಐವರು ಬ್ರಹ್ಮಪುರುಷರನ್ನು ಸ್ವರ್ಗ ಲೋಕದ ದ್ವಾರಪಾಲಕರೆಂದು ಅರಿತುಕೊಳ್ಳುವನೋ ಅವನ ಕುಲ ದಲ್ಲಿ ವೀರನು ಹುಟ್ಟುತ್ತಾನೆ. ಯಾವನು ಹೀಗೆ ಸ್ವರ್ಗಲೋಕದ ದ್ವಾರಪಾಲಕವಾಗಿರುವ ಈ ಐವರು ಬ್ರಹ್ಮಪುರುಷರನ್ನು ಅರಿತು ಕೊಳ್ಳುವನೋ (ಅವನು) ಸ್ವರ್ಗಲೋಕವನ್ನೂ ಪಡೆದುಕೊಳ್ಳುವನು.

(ಭಾಷ್ಯ)

೨೪೫. ತೇ ವಾ ಏತೇ ಯಥೋಕ್ತಾಃ ಪಞ್ಚಸುಷಿಸಂಬನ್ಧಾತ್ ಪಞ್ಚ ಬ್ರಹ್ಮಣೋ ಹಾರ್ದಸ್ಯ ಪುರುಷಾ ರಾಜಪುರುಷಾ ಇವ ದ್ವಾರಸ್ಥಾಃ ಸ್ವರ್ಗಸ್ಯ ಹಾರ್ದಸ್ಯ ಲೋಕಸ್ಯ ದ್ವಾರಪಾಃ ದ್ವಾರಪಾಲಾಃ। ಏತೈರ್ಹಿ ಚಕ್ಷುಃಶ್ರೋತ್ರ ವಾಙ್ಮನಃಪ್ರಾಣೈರ್ಬಹಿರ್ಮುಖಪ್ರವೃತ್ತೈರ್ಬ್ರಹ್ಮಣೋ ಹಾರ್ದಸ್ಯ ಪ್ರಾಪ್ತಿ ದ್ವಾರಾಣಿ ನಿರುದ್ಧಾನಿ। ಪ್ರತ್ಯಕ್ಷಂ ಹಿ ಏತತ್ ಅಜಿತಕರಣತಯಾ ಬಾಹ್ಯ ವಿಷಯಾಸಙ್ಗಾನೃತಪ್ರತ್ಯೂಢತ್ವಾತ್[1] ನ ಹಾರ್ದೇ ಬ್ರಹ್ಮಣಿ ಮನಸ್ತಿಷ್ಠತಿ। ತಸ್ಮಾತ್ ಸತ್ಯಮುಕ್ತಮ್ ಏತೇ ಪಞ್ಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ಇತಿ। ಅತಃ ಸ ಯ ಏತಾನ್ ಏವಂ ಯಥೋಕ್ತಗುಣವಿಶಿಷ್ಟಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ ವೇದ ಉಪಾಸ್ತೇ ಉಪಾಸನಯಾ ವಶೀಕರೋತಿ ಸ ರಾಜದ್ವಾರಪಾಲಾನಿವ ಉಪಾಸನೇನ ವಶೀಕೃತ್ಯ ತೈಃ ಅನಿವಾರಿತಃ ಪ್ರತಿ ಪದ್ಯತೇ ಸ್ವರ್ಗಂ ಲೋಕಂ ರಾಜಾನಮಿವ ಹಾರ್ದಂ ಬ್ರಹ್ಮ। ಕಿಂ ಚ ಅಸ್ಯ ವಿದುಷಃ ಕುಲೇ ವೀರಃ ಪುತ್ರೋ ಜಾಯತೇ ವೀರಪುರುಷಸೇವನಾತ್[2]। ತಸ್ಯ ಚ ಋಣಾಪಾಕರಣೇನ ಬ್ರಹ್ಮೋಪಾಸನಪ್ರವೃತ್ತಿಹೇತುತ್ವಮ್। ತತಶ್ಚ ಸ್ವರ್ಗ ಲೋಕಪ್ರತಿಪತ್ತಯೇ ಪಾರಮ್ಪರ್ಯೇಣ ಭವತೀತಿ ಸ್ವರ್ಗಲೋಕಪ್ರತಿಪತ್ತಿರೇವ ಏಕಂ ಫಲಮ್ ॥

(ಭಾಷ್ಯಾರ್ಥ)

ಆ ಈ ಮೇಲೆ ಹೇಳಿದ ಐದು ಸುಷಿಗಳಿಗೆ ಸಂಬದ್ಧವಾಗಿರುವದರಿಂದ ಐವರು ಹಾರ್ದಬ್ರಹ್ಮರ ಪುರುಷರು, ಬಾಗಿಲಿನಲ್ಲಿರುವ ರಾಜಸೇವಕರಂತೆ ಸ್ವರ್ಗಲೋಕಕ್ಕೆ

---

1. 'ಪ್ರರೂಢತ್ವಾತ್' ಎಂಬುದಕ್ಕಿಂತ ಈ ಪಾಠವೇ ಮೇಲು.

2. ಈ ವಾ ॥ ತೆ ॥ ಅ ॥ ಪಾಠವೇ ಸರಿ; ಆ ॥ ಪಾಠದಲ್ಲಿ ಧೀರ ಎಂದಿರುವದು ಅಚ್ಚಿನ ತಪ್ಪಿರಬಹುದು.

ಹಾರ್ದ(ಬ್ರಹ್ಮ)ಕ್ಕೆ ದ್ವಾರಪರು, ದ್ವಾರಪಾಲಕರು ಏಕೆಂದರೆ **ಚಕ್ಷುಸ್ಸು, ಶ್ರೋತ್ರ, ವಾಕ್ಕು, ಮನಸ್ಸು, ಪ್ರಾಣ- ಎಂಬೀ**[1] **ಹೊರಮುಖವಾಗಿ ಹೊರಟಿರುವ**[2] **ಇವರಿಂದಲೇ ಅಲ್ಲವೆ, ಹಾರ್ದಬ್ರಹ್ಮದ ಪ್ರಾಪ್ತಿಯ ದ್ವಾರಗಳು ತಡೆಗಟ್ಟಲ್ಪಟ್ಟಿವೆ? ಕರಣಗಳನ್ನು ಗೆದ್ದುಕೊಳ್ಳದೆ ಇರುವದರಿಂದ ಹೊರಗಿನ ವಿಷಯಗಳ ಆಸಂಗವೆಂಬ**[3] **ಅನೃತದಿಂದ ಹೊರದೂಡಲ್ಪಟ್ಟಿರುವದರಿಂದ**[4] **ಹಾರ್ದಬ್ರಹ್ಮದಲ್ಲಿ ಮನಸ್ಸು ನಿಲ್ಲದೆ ಇರುತ್ತದೆ ಎಂಬುದು ಪ್ರತ್ಯಕ್ಷವೇ (ಆಗಿದೆ)ಯಷ್ಟೆ?** ಆದ್ದರಿಂದ ಈ ಐವರು ಬ್ರಹ್ಮಪುರುಷರು ಸ್ವರ್ಗಲೋಕಕ್ಕೆ ದ್ವಾರಪಾಲಕರು ಎಂದು ಹೇಳಿದ್ದು ಸತ್ಯವೇ ಆಗಿದೆ.

ಆದ್ದರಿಂದ ಯಾವನು ಇವರನ್ನು ಹೀಗೆಂದು ಮೇಲೆ ವರ್ಣಿಸಿದ ಗುಣಗಳಿಂದ[5] ಕೂಡಿರುವ ಸ್ವರ್ಗಲೋಕದ ದ್ವಾರಪಾಲಕರೆಂದು ಅರಿತುಕೊಳ್ಳುವನೋ ಉಪಾಸನೆ ಮಾಡುವನೋ, ಉಪಾಸನೆಯಿಂದ ವಶಗೊಳಿಸಿಕೊಂಡಿರುವನೋ[6] ಅವನು ರಾಜನ ದ್ವಾರಪಾಲಕರನ್ನು (ವಶಗೊಳಿಸಿಕೊಳ್ಳು)ವಂತೆ ಉಪಾಸನೆಯಿಂದ ವಶಗೊಳಿಸಿಕೊಂಡು ಅವರು ಅಡ್ಡಬರದೆ ಇರುವದರಿಂದ ಸ್ವರ್ಗಲೋಕವನ್ನು, ಎಂದರೆ ಹಾರ್ದಬ್ರಹ್ಮವನ್ನು, ರಾಜನನ್ನು (ಸೇರು)ವಂತೆಯೇ (ಯಾವ ಅಡ್ಡಿಯೂ ಇಲ್ಲದೆ) ಸೇರುತ್ತಾನೆ.

ಮತ್ತು (ಈ) ವೀರಪುರುಷರ ಸೇವನೆಯಿಂದ ಈ ಉಪಾಸಕನ ಕುಲದಲ್ಲಿ ವೀರನಾದ ಪುತ್ರನು ಹುಟ್ಟುತ್ತಾನೆ. ಮತ್ತು ಅವನು ಋಣವನ್ನು ತೀರಿಸುವ

---

1 ಪೂರ್ವಾದಿಯಾದ ಹೃದಯದ್ವಾರಗಳಿಗೆ ಆದಿತ್ಯಾದ್ಯಧಿಷ್ಠಿತರಾದ ಚಕ್ಷುರಾದಿಗಳು ದ್ವಾರಪಾಲಕರು.

2. ಕ. ೨-೧-೧ರ ಸೂಚನೆ

3. ಕರಣಗಳಿಗೆ ವಿಷಯದಲ್ಲಾಗುವ ಆಸಂಗವನ್ನು ಹಿಂದೆ ೧ ೨ರಲ್ಲಿ ವರ್ಣಿಸಿದೆ, ಬೃ. ೧-೩ರಲ್ಲಿಯೂ ತಿಳಿಸಿದೆ.

4. ೮-೩-೨ರಲ್ಲಿ 'ಅನೃತೇನ ಪ್ರತ್ಯೂಢಾಃ' ಎಂದಿರುವದರ ಸೂಚನೆಯಿದು

5 ಚಕ್ಷುಃಪುರುಷನಿಗೆ ತೇಜಸ್ಸು, ಅನ್ನಾದ್ಯ, ಶ್ರೋತ್ರಪುರುಷನಿಗೆ ಶ್ರೀ, ಯಶಸ್ಸು, ವಾಕ್ಪುರುಷನಿಗೆ ಬ್ರಹ್ಮವರ್ಚಸ್ಸು ಅನ್ನಾದ, ಮನಃಪುರುಷನಿಗೆ ಕೀರ್ತಿ, ವ್ಯುಷ್ಟಿ, ಪ್ರಾಣಪುರುಷನಿಗೆ ಓಜಸ್ಸು, ಮಹ- ಎಂಬ ಗುಣಗಳು ಈ ಪುರುಷರು ಪ್ರಾಣಾದಿಸಂಬದ್ಧರಾಗಿರುವರೆಂದೂ ಉಪಾಸನೆಮಾಡಬೇಕು

6. ಚಕ್ಷುರಾದಿಗಳು ಇಂಥಿಂಥ ದೇವತಾಧಿಷ್ಠಿತರಾಗಿ ಇಂಥಿಂಥ ಗುಣಗಳುಳ್ಳ ಪ್ರಾಣಾದಿರೂಪರು ಎಂದು ಉಪಾಸನೆಮಾಡಿದರೆ ಬಹಿರ್ಮುಖವೃತ್ತಿಯನ್ನು ತಪ್ಪಿಸಿ ಹಾರ್ದಬ್ರಹ್ಮದ ಕಡೆಗೆ ಉಪಾಸಕನ ಚಿತ್ತವನ್ನು ತಿರುಗಿಸುವರು.

ಮೂಲಕ[1] ಬ್ರಹ್ಮದ ಉಪಾಸನೆಯಲ್ಲಿ ತೊಡಗುವದಕ್ಕೆ ಕಾರಣ(ನಾಗುತ್ತಾನೆ), ಆದ್ದರಿಂದಲೇ ಸ್ವರ್ಗಲೋಕಪ್ರಾಪ್ತಿಯೆಂಬುದೊಂದೇ (ಇಲ್ಲಿ ಮುಖ್ಯ)ಫಲವು.[2]

## ಜ್ಯೋತಿರ್ಬ್ರಹ್ಮೋಪಾಸನೆ

(ಉಪನಿಷತ್ತು)

**ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃಪುರುಷೇ ಜ್ಯೋತಿಸ್ತಸ್ಯೈಷಾ ದೃಷ್ಟಿರ್ಯತ್ರೈತದಸ್ಮಿಞ್ಛರೀರೇ ಸಗ್ಂಸ್ಪರ್ಶೇನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿರ್ಯತ್ರೈತತ್ ಕರ್ಣಾವಪಿಗೃಹ್ಯ ನಿನದಮಿವ ನದಥುರಿವಾಗ್ನೇರಿವ ಜ್ವಲತ ಉಪಶೃಣೋತಿ ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ[3] ॥ ೭ ॥**

೭. ಇನ್ನು ಆ ದಿವಕ್ಕಿಂತ ಆಚೆಗೆ, ವಿಶ್ವದ ಮೇಲುಗಡೆಯಲ್ಲಿ, ಎಲ್ಲಕ್ಕೂ ಮೇಲುಗಡೆಯಲ್ಲಿ, ಅನುತ್ತಮವಾದ ಉತ್ತಮಲೋಕಗಳಲ್ಲಿ ಹೊಳೆಯುತ್ತಿರುವ ಜ್ಯೋತಿಯಿದೆಯಲ್ಲ, ಅದು ಪುರುಷನೊಳಗೆ ಇರುವ ಈ ಜ್ಯೋತಿ ಎಂಬಿದೇ. ಅದಕ್ಕೆ ಯಾವಾಗ ಹೀಗೆ ಈ ಶರೀರದಲ್ಲಿ ಸಂಸ್ಪರ್ಶದಿಂದ ಔಷ್ಣ್ಯವನ್ನು ಅನುಭವಿಸುತ್ತಾನೋ ಇದೇ ಅದರ ದೃಷ್ಟಿಯು ; ಯಾವಾಗ ಕಿವಿಗಳನ್ನು ಹೀಗೆ ಹಿಡಿದುಕೊಂಡರೆ ದಡದಡ ಎನ್ನುವಂತೆ ಗುಟುರುಹಾಕಿದಂತೆ ಬೆಂಕಿಯು ಭುಗಿಲೆನ್ನುವಂತೆ ಕೇಳುತ್ತಾನಲ್ಲ, ಅದು ಅದರ ಶ್ರುತಿಯು. (ಅದನ್ನು) ದೃಷ್ಟವೂ ಶ್ರುತವೂ ಎಂದು ಉಪಾಸನೆಮಾಡಬೇಕು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ನೋಡತಕ್ಕವನೂ ಕೇಳಿಬರತಕ್ಕವನೂ ಆಗುತ್ತಾನೆ.

---

1. ತಂದೆಯು ಮಾಡಬೇಕಾದ ಯಜ್ಞಾಧ್ಯಯನಾದಿಗಳನ್ನು ಮಾಡುವ ಮೂಲಕ.

2 ಏಕೆಂದರೆ ವೀರಪುತ್ರಪ್ರಾಪ್ತಿಯನ್ನು ಹೇಳಿರುವದೂ ಅದಕ್ಕಾಗಿಯೇ. ಈ ಉಪಾಸನೆಗಳಿಂದ ಆಯಾ ಅವಾಂತರಫಲವಲ್ಲದೆ ಪರಂಪರೆಯಿಂದ ಬ್ರಹ್ಮಪ್ರಾಪ್ತಿಫಲವೂ ಆಗುತ್ತದೆ ಎಂದು ಭಾವ

3. ಈ ಕಂಡಿಕೆಯನ್ನು ವಾ॥ ಶಾಸ್ತ್ರಿಗಳು ಎರಡಾಗಿ ಒಡೆದು 'ತಸ್ಯೈಷಾ ದೃಷ್ಟಿಃ' ಎಂಬಲ್ಲಿಂದ ಎಂಟನೆಯ ಕಂಡಿಕೆಯಾಗಿ ಕಾಣಿಸಿದೆ. ಆದರೆ ಅದಕ್ಕೆ ಆಧಾರವೇನೋ ತಿಳಿಯಲಿಲ್ಲ.

# ಮುಂದಿನ ಗ್ರಂಥಭಾಗದ ಸಂಬಂಧ

(ಭಾಷ್ಯ)

೨೪೬. ಅಥ ಯದಸೌ ವಿದ್ವಾನ್ ಸ್ವರ್ಗಂ ಲೋಕಂ ವೀರಪುರುಷಸೇವನಾತ್ ಪ್ರತಿಪದ್ಯತೇ । ಯಚ್ಚೋಕ್ತಮ್, 'ತ್ರಿಪಾದಸ್ಯಾಮೃತಂ ದಿವಿ' (೩-೧೨-೬) ಇತಿ ತದಿದಂ ಲಿಙ್ಗೇನ ಚಕ್ಷುಃಶ್ರೋತ್ರೇನ್ದ್ರಿಯಗೋಚರಮ್ ಆಪಾದಯಿತವ್ಯಮ್ । ಯಥಾ ಅಗ್ನ್ಯಾದಿ ಧೂಮಾದಿಲಿಙ್ಗೇನ । ತಥಾ ಹಿ ಏವಮೇವೇದಮ್ ಇತಿ ಯಥೋಕ್ತೇಽರ್ಥೇ ದೃಢಾ ಪ್ರತೀತಿಃ ಸ್ಯಾತ್, ಅನನ್ಯತ್ವೇನ ನಿಶ್ಚಯ ಇತಿ । ಅತ ಆಹ ॥

(ಭಾಷ್ಯಾರ್ಥ)

'ಇನ್ನು' (ಎಂದು ಪ್ರಾರಂಭಿಸಿರುವ ಕಂಡಿಕೆಯ ಅರ್ಥವಿದು): ಈ ಉಪಾಸಕನು ವೀರಪುರುಷಸೇವನೆಯಿಂದ ಸ್ವರ್ಗಲೋಕವನ್ನು (ಪರಂಪರೆಯಿಂದ) ಹೊಂದುತ್ತಾನೆ (ಎಂದು ಹೇಳಿತ್ತಷ್ಟೆ), ಮತ್ತು ಈ (ಬ್ರಹ್ಮದ) "ಅಮೃತವಾದ ಮೂರು ಪಾದವು ದ್ಯುಲೋಕದಲ್ಲಿದೆ" (೩-೧೨-೬) ಎಂದಿತ್ತಷ್ಟೆ[1], ಆ ಇದನ್ನು-ಹೊಗೆಯೇ ಮುಂತಾದ ಲಿಂಗದಿಂದ ಬೆಂಕಿಯೇ ಮುಂತಾದವನ್ನು ಹೇಗೋ ಹಾಗೆ[2] ಲಿಂಗದಿಂದ ಚಕ್ಷುಃಶ್ರೋತ್ರೇಂದ್ರಿಯಗಳಿಗೆ ಗೋಚರವಾಗಿ ಮಾಡಬೇಕು, ಹಾಗಾದರೇ ಅಲ್ಲವೆ, ಇದು ಹೀಗೆಯೇ ಸರಿ ಎಂಬ ಗಟ್ಟಿಯಾದ ಭಾವನೆಯಾದೀತು[3] ? (ನಾನು ಅದಕ್ಕಿಂತ) ಅನ್ಯನಲ್ಲ ಎಂಬ ನಿಶ್ಚಯವೂ (ಆದೀತು)[4] ? ಆದ್ದರಿಂದ (ಶ್ರುತಿ) ಹೀಗೆನ್ನುತ್ತಿದೆ.

# ಜ್ಯೋತಿರ್ಬ್ರಹ್ಮದ ವರ್ಣನೆ

(ಭಾಷ್ಯ)

೨೪೭. ಯದತಃ ಅಮುಷ್ಮಾದ್ ದಿವಃ ದ್ಯುಲೋಕಾತ್ ಪರಃ ಪರಮ್ ಇತಿ ಲಿಙ್ಗವ್ಯತ್ಯಯೇನ ಜ್ಯೋತಿರ್ದೀಪ್ಯತೇ । ಸ್ವಯಂಪ್ರಭಂ ಸದಾ ಪ್ರಕಾಶತ್ವಾತ್ ದೀಪ್ಯತ ಇವ ದೀಪ್ಯತೇ ಇತ್ಯುಚ್ಯತೇ । ಅಗ್ನ್ಯಾದಿವತ್ ಜ್ವಲನಲಕ್ಷಣಾಯಾ ದೀಪ್ತೇರಸಂಭವಾತ್ । ವಿಶ್ವತಃ ಪೃಷ್ಠೇಷು ಇತಿ ಏತಸ್ಯ ವ್ಯಾಖ್ಯಾನಂ ಸರ್ವತಃ ಪೃಷ್ಠೇಷು ಇತಿ । ಸಂಸಾರಾತ್ ಉಪರಿ ಇತ್ಯರ್ಥಃ । ಸಂಸಾರ ಏವ ಹಿ ಸರ್ವಃ ।

---

1. ೩-೧೨ ೬ರಲ್ಲಿ
2. ಪರೋಕ್ಷವಾಗಿಯಾದರೂ ನಿಶ್ಚಯವಾಗಿ ಎಂಬುದಕ್ಕೆ ಈ ಹೋಲಿಕೆಯನ್ನು ಕೊಟ್ಟಿದೆ.
3. ಭಾವನೆಯು ಬಲವಾದರೇ ಉಪಾಸನೆಯು ಸಾಗುತ್ತದೆ.
4. ಸಾಕ್ಷಾತ್ಕಾರಕ್ಕೆ ಕಾರಣವಾದೀತು ಎಂದರ್ಥ

ಅಸಂಸಾರಿಣ ಏಕತ್ವಾತ್ ನಿರ್ಭೇದತ್ವಾಚ್ಚ। ಅನುತ್ತಮೇಷು। ತತ್ಪುರುಷಸಮಾಸಾಶಙ್ಕಾನಿವೃತ್ತಯೇ ಆಹ ಉತ್ತಮೇಷು ಲೋಕೇಷು ಇತಿ। ಸತ್ಯಲೋಕಾದಿಷು ಹಿರಣ್ಯಗರ್ಭಾದಿಕಾರ್ಯಸ್ಯ[1] ಪರಸ್ಯೇಶ್ವರಸ್ಯ ಆಸನ್ನತ್ವಾತ್ ಉಚ್ಯತೇ ಉತ್ತಮೇಷು ಲೋಕೇಷು ಇತಿ ॥

(ಭಾಷ್ಯಾರ್ಥ)

ಆ ಅಲ್ಲಿರುವ ದಿವಕ್ಕಿಂತ ದ್ಯುಲೋಕಕ್ಕಿಂತಲೂ ಆಚೆಗಿರುವ[2] ಹೆಚ್ಚಿನ–ಪರಃ ಎಂಬುದನ್ನು (ನಪುಂಸಕ)ಲಿಂಗಕ್ಕೆ ಮಾರ್ಪಡಿಸಿಕೊಂಡು (ಅರ್ಥಮಾಡಬೇಕು)– ಜ್ಯೋತಿಯು ಹೊಳೆಯುತ್ತಿರುವದಲ್ಲ (ಎಂದರ್ಥ) ಸ್ವಯಂಪ್ರಭವಾಗಿ[3] ನಿತ್ಯಪ್ರಕಾಶ(ಸ್ವರೂಪವೇ) ಆಗಿರುವದರಿಂದ ಹೊಳೆಯುತ್ತಿರುವಂತಿದೆಯಾದ್ದರಿಂದ ಹೊಳೆಯುತ್ತಿದೆ[4]. ಎಂದಿದೆ, ಏಕೆಂದರೆ ಬೆಂಕಿಯೇ ಮುಂತಾದವುಗಳಂತೆ ಉರಿಯುವದೆಂಬ ದೀಪ್ತಿಯು (ಬ್ರಹ್ಮಕ್ಕೆ) ಹೊಂದುವದಿಲ್ಲ[5]

ವಿಶ್ವದ ಮೇಲುಗಡೆಯಲ್ಲಿ ಎಂಬುದರ ವ್ಯಾಖ್ಯಾನವೇ ಎಲ್ಲದರ ಮೇಲುಗಡೆಯಲ್ಲಿ ಎಂಬುದು, ಸಂಸಾರಕ್ಕಿಂತ ಮೇಲುಗಡೆಯಲ್ಲಿ ಎಂದರ್ಥ ಸಂಸಾರವೇ ಅಲ್ಲವೆ, ಎಲ್ಲ (ಎನ್ನಿಸಿಕೊಳ್ಳತಕ್ಕದ್ದು)? ಸಂಸಾರಿಯಲ್ಲದ ಆತ್ಮನು ಒಬ್ಬನೇ ಆಗಿರುವದರಿಂದಲೂ, ಭೇದರಹಿತನಾಗಿರುವದರಿಂದಲೂ (ಸರ್ವಶಬ್ದಕ್ಕೆ ಈ

---

1. 'ಕಾರ್ಯಸ್ಥ' ಎಂಬಿದನ್ನು ಕಾರ್ಯಸ್ಯ ಎಂದು ತಿದ್ದಿಕೊಂಡಿದೆ.

2. ಸಗುಣಬ್ರಹ್ಮವು ದ್ಯುಲೋಕಕ್ಕೆ ಸಂಬದ್ಧವಾಗಿದ್ದರೂ ದ್ಯುಲೋಕದ ಆಚೆಗಿದೆ ಎಂದಿದೆ ಮರದ ಕೊನೆಗೆ ಸಂಬದ್ಧವಾಗಿಯೇ ಇರುವ ಹಕ್ಕಿಯನ್ನು ಮರದ ಕೊನೆಯ ಆಚೆಗಿರುವದೆಂದೂ ತಿಳಿಸಿ ಹೇಳುವದುಂಟು. ಅಥವಾ ನಿರ್ಗುಣರೂಪದಿಂದ ದ್ಯುಲೋಕಕ್ಕೆ ಸಂಬಂಧಪಡದೆ ಇದ್ದರೂ ಹಿಂದೆ 'ತ್ರಿಪಾದಸ್ಯಾಮೃತಂ ದಿವಿ' ಎಂದು ದ್ಯುಲೋಕದಲ್ಲಿದೆಯೆಂತ ಹೇಳಿತ್ತು; ಅದನ್ನೇ ಇಲ್ಲಿ ದ್ಯುಲೋಕಕ್ಕೆ ಆಚೆ ಇದೆ ಎಂತ ಹೇಳಿದೆ. ಹೇಗೂ ಹಿಂದೆ ಹೇಳಿದ ಗಾಯತ್ರೀ ಬ್ರಹ್ಮವನ್ನೇ ಇಲ್ಲಿ ದ್ಯುಲೋಕಕ್ಕೆ ಆಚೆಯಿರುವದೆಂದು ಹೇಳಿದೆ. ಸೂ. ಭಾ. ೧–೧–೨೭ನ್ನು ನೋಡಿ.

3. ತಾನೇ ತೋರಿಕೊಳ್ಳುವ, ಅನಾತ್ಮವಸ್ತುವಿನಂತೆ ಮತ್ತೊಂದರಿಂದ ಬೆಳಗಲ್ಪಡಬೇಕಾದ ಆವಶ್ಯಕತೆಯಿಲ್ಲದಿರುವ ಎಂದರ್ಥ.

4. ಬ್ರಹ್ಮಕ್ಕೆ ಯಾವ ಹೊಳಪೂ ಇಲ್ಲ, ಅದೇ ಚೈತನ್ಯಪ್ರಕಾಶರೂಪವಾಗಿದೆ.

5. 'ತಾನೇ ತೋರಿಕೊಳ್ಳುವ' ಎಂಬ ಗೌಣಾರ್ಥವೇ ಹೊರತು ಬೆಂಕಿ, ಸೂರ್ಯ– ಮುಂತಾದವುಗಳಂತೆ ಹೊಳೆಯುತ್ತಿರುವ ಎಂದೇನೂ ಅರ್ಥವಲ್ಲ. ಬೆಂಕಿಯೇ ಮುಂತಾದವು ತಾವೇ ಹೊಳೆಯುವವೆಂಬುದೂ ವ್ಯವಹಾರದೃಷ್ಟಿಯಿಂದ; ಅವಕ್ಕೆ ಚೈತನ್ಯಪ್ರಕಾಶದ ನೆರವು ಬೇಕು. ಚೈತನ್ಯಪ್ರಕಾಶದಂತೆ ಅವು ನಿತ್ಯವೂ ಅಲ್ಲ. ಆದ್ದರಿಂದ ಇಲ್ಲಿ ಹೊಳೆಯುತ್ತಿದೆ ಎಂಬುದು ಅ..ಸಾದಿಗಳಂತೆ –ಎಂದು ಮುಖ್ಯಾರ್ಥದಲ್ಲಲ್ಲ.

ಅರ್ಥವೇ).[1] ಅನುತ್ತಮವಾದ (ಲೋಕಗಳಲ್ಲಿ ಎಂದರೆ) ತತ್ಪುರುಷಸಮಾಸವೆಂಬ (ಶಂಕೆಯುಂಟಾಗಬಹುದಾಗಿ[2] ಅದನ್ನು) ತೊಲಗಿಸುವದಕ್ಕಾಗಿ ಉತ್ತಮಲೋಕಗಳಲ್ಲಿ ಎಂದು (ಶ್ರುತಿ) ಹೇಳುತ್ತಿದೆ. ಸತ್ಯಲೋಕವೇ ಮುಂತಾದ (ಲೋಕ)ಗಳಲ್ಲಿರುವ ಹಿರಣ್ಯಗರ್ಭನೇ ಮುಂತಾದ ಕಾರ್ಯವು ಪರಮೇಶ್ವರನಿಗೆ ಆಸನ್ನವಾಗಿರುವದರಿಂದ[3] ಉತ್ತಮವಾದ ಲೋಕಗಳಲ್ಲಿ ಎಂದಿದೆ.

## ಜ್ಯೋತಿಬ್ರಹ್ಮದ ದರ್ಶನ

(ಭಾಷ್ಯ)

೨೪೮ ಇದಂ ತಾವ ಇದಮೇವ ತದ್ ಯದಿದಮ್ ಅಸ್ಮಿನ್ ಪುರುಷೇ ಅನ್ತಃ ಮಧ್ಯೇ ಜ್ಯೋತಿಃ ಚಕ್ಷುಃಶ್ರೋತ್ರಗ್ರಾಹ್ಯೇಣ ಲಿಙ್ಗೇನ ಉಷ್ಣಿಮ್ನಾ ಶಬ್ದೇನ ಚ ಅವಗಮ್ಯತೇ । ಯತ್ ತ್ವಚಾ ಸ್ಪರ್ಶರೂಪೇಣ ಗೃಹ್ಯತೇ ತಚ್ಚಕ್ಷುಷ್ಯೈವ। ದೃಢಪ್ರತೀತಿಕರತ್ವಾತ್ ತ್ವಚಃ । ಅವಿನಾಭೂತತ್ವಾಚ್ಚ ರೂಪಸ್ಪರ್ಶಯೋಃ। ಕಥಂ ಪುನಃ ತಸ್ಯ ಜ್ಯೋತಿಷೋ ಲಿಙ್ಗಂ ತ್ವಗ್ದೃಷ್ಟಿಗೋಚರತ್ವಮ್ ಆಪದ್ಯತ ಇತಿ ? ಆಹ। ಯತ್ರ ಯಸ್ಮಿನ್ ಕಾಲೇ। ಏತತ್ ಇತಿ ಕ್ರಿಯಾವಿಶೇಷಣಮ್। ಅಸ್ಮಿನ್ ಶರೀರೇ ಹಸ್ತೇನ ಆಲಭ್ಯ ಸಂಸ್ಪರ್ಶೇನ ಉಷ್ಣಿಮಾನಂ ರೂಪಸಹಭಾವಿನಮ್ ಉಷ್ಣಸ್ಪರ್ಶಭಾವಂ ವಿಜಾನಾತಿ। ಸ ಹಿ ಉಷ್ಣಿಮಾ ನಾಮರೂಪವ್ಯಾಕರಣಾಯ ದೇಹಮ್ ಅನುಪ್ರವಿಷ್ಟಸ್ಯ ಚೈತನ್ಯಾತ್ಮಜ್ಯೋತಿಷೋ ಲಿಙ್ಗಮ್ ಅವ್ಯಭಿಚಾರಾತ್ । ಸ ಹಿ ಜೀವನ್ತಮ್ ಆತ್ಮಾನಮ್ ಉಷ್ಣಿಮಾ ವ್ಯಭಿಚರತಿ "ಉಷ್ಣ ಏವ ಜೀವಿಷ್ಯನ್ ಶೀತೋ ಮರಿಷ್ಯನ್" (ಶತ. ಬ್ರಾ ೮-೭-೨-೧೧) ಇತಿ ಹಿ ವಿಜ್ಞಾಯತೇ । ಮರಣಕಾಲೇ ಚ "ತೇಜಃ ಪರಸ್ಯಾಂ ದೇವತಾಯಾಮ್" (೬ ೮-೬) ಇತಿ ಪರೇಣಾವಿಭಾಗತ್ವೋಪಗಮಾತ್ । ಅತೋಽಸಾಧಾರಣಂ ಲಿಙ್ಗಮ್ ಔಷ್ಣ್ಯಮಗ್ನೇರಿವ ಧೂಮಃ। ಅತಸ್ತಸ್ಯ ಪರಸ್ಯ ಏಷಾ ದೃಷ್ಟಿಃ ಸಾಕ್ಷಾದಿವ ದರ್ಶನಂ ದರ್ಶನೋಪಾಯಃ ಇತ್ಯರ್ಥಃ ॥

---

1. ಬ್ರಹ್ಮವು ಒಂದೇ ಆಗಿ ನಿರ್ಲೇಪವಾಗಿರುವದರಿಂದ ಸರ್ವಶಬ್ದವಾಚ್ಯವಾದ ಸಂಸಾರದ ಆಚೆಗಿರುವ ಲೋಕಗಳಲ್ಲಿ ಬ್ರಹ್ಮವಿದೆ ಎಂದು ಹೇಳಿದ್ದು ಸರಿ.

2. ತತ್ಪುರುಷಸಮಾಸವಾದರೆ ಉತ್ತಮವಲ್ಲದ ಎಂದೂ ಅರ್ಥವಾಗಬಹುದು, ಮಿಗಿಲಿಲ್ಲದ ಉತ್ತಮಲೋಕಗಳು ಎಂಬರ್ಥಕ್ಕಾಗಿ ಮತ್ತೆ ಉತ್ತಮವಾದ ಎಂದಿದೆ.

3. ಕಾರ್ಯಬ್ರಹ್ಮವು ಬ್ರಹ್ಮಸ್ವರೂಪಕ್ಕೆ ಹತ್ತಿರವಾಗಿರುತ್ತದೆಯೆಂಬುದಕ್ಕೆ ಸೂ. ಭಾ. ೪-೩-ನ್ನು ನೋಡಿ. ಬ್ರಹ್ಮಕ್ಕೆ ಆಧಾರವಿಲ್ಲದಿದ್ದರೂ ಉಪಾಧಿಯ ಸಂಬಂಧದಿಂದ ಉಪಾಸನೆಗಾಗಿ ಉತ್ತಮಲೋಕಗಳೆಂಬ ಆಧಾರವನ್ನು ಹೇಳಬಹುದು. ಸೂ. ಭಾ. ೧ ೧-೨೪ (ಭಾ. ಭಾ. ೨೮).

(ಭಾಷ್ಯಾರ್ಥ)

(ಇದಂ ವಾವ= ಇದಮೇವ) ಇದೇ ಅದು. ಈ ಪುರುಷನ ಒಳಗೆ ಒಳಗಡೆ ಯಲ್ಲಿ ಜ್ಯೋತಿಯು ಚಕ್ಷುಃಶ್ರೋತ್ರಗಳಿಂದ ಗ್ರಾಹ್ಯವಾಗಿರುವ ಲಿಂಗವಾದ ಬಿಸಿಯಿಂದಲೂ ಸದ್ದಿನಿಂದಲೂ ತಿಳಿದುಬರುತ್ತದೆಯಲ್ಲ, (ಅದೇ). ಯಾವದು ಸ್ಪರ್ಶರೂಪವಾದ ತ್ವಕ್ಕಿನಿಂದ ತಿಳಿದುಬರುತ್ತದೆಯೋ ಅದು ಚಕ್ಷುಸ್ಸಿನಿಂದಲೇ (ತಿಳಿದಂತೆ), ಏಕೆಂದರೆ ತ್ವಕ್ಕು ಗಟ್ಟಿಯಾದ ಜ್ಞಾನವನ್ನು ಉಂಟುಮಾಡುತ್ತದೆ.[1] ರೂಪಸ್ಪರ್ಶಗಳು (ಒಂದನ್ನೊಂದು) ಬಿಟ್ಟಿರುವದಿಲ್ಲವಾದ್ದರಿಂದಲೂ (ಇದು ಚಕ್ಷುಸ್ಸಿನಿಂದಲೇ ತಿಳಿದಂತೆ)

(ಪ್ರಶ್ನೆ) – ಆ ಜ್ಯೋತಿಯ ಲಿಂಗವು ತ್ವಗ್ದೃಷ್ಟಿಗೋಚರವಾಗಿರುತ್ತದೆ ಎಂಬುದು ಹೇಗೆ?

(ಉತ್ತರ).– (ಇದಕ್ಕೆ ಶ್ರುತಿ) ಹೇಳುತ್ತದೆ. ಯಾವಾಗ ಯಾವ ಕಾಲ ದಲ್ಲಿ (ಏತತ್= ಹೀಗೆ) ಎಂಬುದು ಕ್ರಿಯಾವಿಶೇಷಣವು (ಹೀಗೆ) ಈ ಶರೀರ ದಲ್ಲಿ ಕೈಯಿಂದ ಮುಟ್ಟಿ ಸಂಸ್ಪರ್ಶದಿಂದ ಬಿಸಿಯನ್ನು ರೂಪದೊಡನೆಯೇ ಇರುವ ಉಷ್ಣಸ್ಪರ್ಶದ ಇರುವಿಕೆಯನ್ನು ಅರಿತುಕೊಳ್ಳುತ್ತಾನೋ—ಆ ಬಿಸಿಯು ನಾಮ ರೂಪವ್ಯಾಕರಣಕ್ಕಾಗಿ ದೇಹವನ್ನು ಒಳಹೊಕ್ಕಿರುವ[2] ಚೈತನ್ಯಾತ್ಮಜ್ಯೋತಿಯ ಲಿಂಗವಷ್ಟೆ, ಏಕೆಂದರೆ (ಅದು) ವ್ಯಭಿಚರಿತವಾಗುವದೇ ಇಲ್ಲ. ಬದುಕಿರುವ ಆತ್ಮನನ್ನು ಬಿಸಿಯು ಯಾವಾಗಲೂ ಬಿಟ್ಟಿರುವದಿಲ್ಲವಷ್ಟೆ[3]? "ಬದುಕಿರುವವನು ಬಿಸಿಯಾಗಿಯೇ ಇರುತ್ತಾನೆ, ಸಾಯಲಿರುವವನು ತಣ್ಣಗಿರುತ್ತಾನೆ" (ಶತ. ಬ್ರಾ. ೮-೭-೨-೧೧) ಎಂದಲ್ಲವೆ, (ಶ್ರುತಿಯಿಂದ) ತಿಳಿದುಬರುತ್ತದೆ? ಮರಣಕಾಲದಲ್ಲಿ "ತೇಜಸ್ಸು ಪರದೇವತೆಯಲ್ಲಿ (ಸೇರುತ್ತದೆ)" (೬-೮-೬) ಎಂದು ಆ ಪರಮಾತ್ಮನಲ್ಲಿ (ಅದು) ಅವಿಭಕ್ತವಾಗುವದೆಂದು (ಶ್ರುತಿಯು) ಅಂಗೀಕರಿಸಿರುತ್ತದೆ. ಆದ್ದರಿಂದ ಹೊಗೆಯು ಹೇಗೋ ಹಾಗೆ (ಈ) ಬಿಸಿಯು (ಪರಮಾತ್ಮನಿಗೆ) ಲಿಂಗವು.[4] ಆದ್ದರಿಂದ ಆ ಪರಮಾತ್ಮನಿಗೆ ಇದು ದೃಷ್ಟಿಯು ಸಾಕ್ಷಾತ್ತಾಗಿ ನೋಡಿದಂತೆಯೇ, ದರ್ಶನಕ್ಕೆ ಉಪಾಯವು ಎಂದರ್ಥ.[5]

---

1. ಕಣ್ಣಿನಿಂದ ಕಂಡದ್ದನ್ನು ಸ್ಪರ್ಶಜ್ಞಾನವು ಗಟ್ಟಿಗೊಳಿಸುತ್ತದೆ.

2 ಚಿದಾತ್ಮನಾದ ಪರಮಾತ್ಮನು ಈ ಶರೀರದೊಳಗೆ ಜೀವರೂಪದಿಂದ ಹೊಕ್ಕು ನಾಮ ರೂಪವ್ಯಾಕರಣವನ್ನು ಮಾಡುತ್ತಾನೆಂದು ೬-೩-೨ರಲ್ಲಿ ಹೇಳಲಾಗುತ್ತದೆ.

3. ಸೂಕ್ಷ್ಮಶರೀರಕ್ಕೆ ಈ ಬಿಸಿಯು ಲಿಂಗವು, ಗುರುತು, (ಸೂ. ಭಾ. ೪-೨-೧೧); ಆ ಉಪಾಧಿಯ ಮೂಲಕ ಆತ್ಮನಿಗೂ ಗುರುತು.

4. ಜೀವೇಶ್ವರರಿಗೆ ಹೀಗೆ ಐಕ್ಯವನ್ನು ಹೇಳಿರುವದರಿಂದ ಇದು ಪರಮಾತ್ಮನಿಗೂ ಲಿಂಗವಾಯಿತು ಎಂದು ಭಾವ 5. ಹೀಗೆಂದು ಉಪಾಸನೆಮಾಡಬೇಕು.

# ಜ್ಯೋತಿರ್ಬ್ರಹ್ಮದ ಶ್ರವಣ

(ಭಾಷ್ಯ)

೨೪೯. ತಥಾ ತಸ್ಯ ಜ್ಯೋತಿಷಃ ಏಷಾ ಶ್ರುತಿಃ ಶ್ರವಣಂ ಶ್ರವಣೋಪಾಯೋಽಪಿ ಉಚ್ಯಮಾನಃ। ಯತ್ರ ಯದಾ ಪುರುಷೋ ಜ್ಯೋತಿಷೋ ಲಿಙ್ಗಂ ಶುಶ್ರೂಷತಿ[1] ತದಾ ಏತತ್ ಕರ್ಣೌ ಅಪಿಗೃಹ್ಯ। ಏತಚ್ಛಬ್ದಃ ಕ್ರಿಯಾವಿಶೇಷಣಮ್। ಅಪಿಗೃಹ್ಯ ಅಪಿಧಾಯ ಇತ್ಯರ್ಥಃ। ಅಙ್ಗುಲಿಭ್ಯಾಂ ಪ್ರೋರ್ಣುತ್ಯ ನಿನದಮಿವ। ರಥಸ್ಯೇವ ಘೋಷೋ ನಿನದಃ। ತಮಿವ ಶೃಣೋತಿ। ನದಥುರಿವ ಋಷಭಕೂಜಿತಮಿವ ಶಬ್ದಃ। ಯಥಾ ಚ ಅಗ್ನೇಃ ಬಹಿರ್ಜ್ವಲತಃ ಏವಂ ಶಬ್ದಮ್ ಅನ್ತಃಶರೀರೇ ಉಪಶೃಣೋತಿ ॥

(ಭಾಷ್ಯಾರ್ಥ)

ಹೀಗೆಯೇ ಆ ಜ್ಯೋತಿಗೆ ಇದು ಶ್ರುತಿಯು, ಶ್ರವಣವು, ಶ್ರವಣೋಪಾಯವನ್ನೂ ಹೇಳಲಾಗುತ್ತದೆ (ಎಂದರ್ಥ ಯತ್ರ = ಯದಾ) ಯಾವಾಗ (ಒಬ್ಬ) ಮನುಷ್ಯನು (ಈ) ಜ್ಯೋತಿಯ ಲಿಂಗವನ್ನು ಕೇಳಬಯಸುತ್ತಾನೋ ಆಗ ಹೀಗೆ ಕರ್ಣಗಳನ್ನು ಹಿಡಿದುಕೊಂಡರೆ– (ಮೂಲದಲ್ಲಿ) ಏತತ್ (ಹೀಗೆ) ಎಂಬ ಶಬ್ದವು ಕ್ರಿಯಾವಿಶೇಷಣವು –(ಹೀಗೆ) ಮುಚ್ಚಿಕೊಂಡರೆ ಎಂದರ್ಥ, ಬೆರಳುಗಳಿಂದ ಮರೆಮಾಡಿಕೊಂಡರೆ, ದಡವಡ ಎನ್ನುವಂತೆ, ಬಂಡಿಯ(ಗಾಲಿಯ) ಸದ್ದಿನಂತೆ (ಆಗುವ ಸದ್ದು) ದಡದಡವು, ಅದರಂತೆ ಅವನಿಗೆ ಕೇಳಿಸುತ್ತದೆ. ಗುಟುರು ಹಾಕಿದಂತೆ, ಎತ್ತಿನ ಗುಟರಿನಂತೆ ಇರುವ ಶಬ್ದವು (ಎಂದರ್ಥ). ಅಥವಾ ಹೇಗೆ ಹೊರಗೆ ಉರಿಯುತ್ತಿರುವ (ಶಬ್ದವಿರುವವಲ್ಲ) ಹಾಗಿರುವ (ಶಬ್ದವು) ಶರೀರದೊಳಗೆ (ಅವನಿಗೆ ಯಾವಾಗ) ಕೇಳಿಸುತ್ತದೆಯೋ (ಆ ಶಬ್ದವು)[2]

---

1 'ಶ್ರೋತುಮಿಚ್ಛತಿ' ಬೇಕಿಲ್ಲವೆಂದು ಬಿಟ್ಟಿದೆ.

2. ಯಾವಾಗಲಾದರೂ ಕಿವಿಗೊಟ್ಟರೆ ಕೇಳಿಸುತ್ತದೆಯಲ್ಲ, ಆ ಶಬ್ದವೇ ಜ್ಯೋತಿಬ್ರ್ರಹ್ಮವನ್ನು ಅರಿಯುವ ಉಪಾಯವು ಎಂದರ್ಥ ಬ್ರಹ್ಮವು ಸ್ವತಃ ದೃಷ್ಟವೂ ಅಲ್ಲ, ಶ್ರುತವೂ ಅಲ್ಲ, ಆದರೂ ಜಾಠರಾಗ್ನಿಯ ಪ್ರತೀಕದ ದ್ವಾರದಿಂದ ಬ್ರಹ್ಮವನ್ನು ದೃಷ್ಟವೂ ಶ್ರುತವೂ ಎಂದು ಉಪಾಸನೆಮಾಡಬೇಕು– ಎಂಬುದು ವಿವಕ್ಷಿತ. ಸೂ ಭಾ ೧ ೧ ೨೪ (ಭಾ ಭಾ. ೧೨೮)ನ್ನು ನೋಡಿ. ಇಲ್ಲಿ ಉಪಾಸನಾವಾಕ್ಯದಲ್ಲಿ ಬ್ರಹ್ಮಲಿಂಗವಿಲ್ಲದಿದ್ದರೂ 'ಯದತಃ ಪರೋ ಜ್ಯೋತಿಃ' ಎಂದು ಯಚ್ಛಬ್ದದಿಂದ ಹಿಂದೆ ಹೇಳಿರುವ ತ್ರಿಪಾದಮೃತಬ್ರಹ್ಮವನ್ನೇ ಹೇಳಿದೆ ಎಂದು ಮ್ಯಸಂಬಂಧದಿಂದ ನಿರ್ಣಯಿಸಬೇಕೆಂದು ಸೂ ಭಾ. ೧-೧ ೨೪ (ಭಾ. ಭಾ. ೧೨೯) ರಲ್ಲಿ ನಿರ್ಣಯಿಸಿದೆ.

## ಉಪಾಸನಾಗುಣವಿಧಿಯೂ ಉಪಾಸನೆಯ ಫಲವೂ

(ಭಾಷ್ಯ)

ಶಾಂ ತದೇತತ್ ಜ್ಯೋತಿಃ ದೃಷ್ಟಶ್ರುತಲಿಙ್ಗತ್ವಾತ್ ದೃಷ್ಟಂ ಚ ಶ್ರುತಂ ಚ ಇತ್ಯುಪಾಸೀತ। ತಥಾ ಉಪಾಸನಾತ್ ಚಕ್ಷುಷ್ಯಃ ದರ್ಶನೀಯಃ ಶ್ರುತಃ ವಿಶ್ರುತಶ್ಚ। ಯತ್ ಸ್ಪರ್ಶಗುಣೋಪಾಸನನಿಮಿತ್ತಂ ಫಲಂ ತತ್ ರೂಪೇ ಸಂಪಾದಯತಿ ಚಕ್ಷುಷ್ಯಃ ಇತಿ। ರೂಪಸ್ಪರ್ಶಯೋಃ ಸಹಭಾವಿತ್ವಾತ್, ಇಷ್ಟತ್ವಾಚ್ಚ ದರ್ಶನೀಯತಾಯಾಃ। ಏವಂ ಚ ವಿದ್ಯಾಯಾಃ ಫಲಮ್ ಉಪಪನ್ನಂ ಸ್ಯಾತ್। ನ ತು ಮೃದುತ್ವಾದಿಸ್ಪರ್ಶವತ್ತ್ವೇ। ಯ ಏವಂ ಯಥೋಕ್ತೌ ಗುಣೌ ವೇದ। ಸ್ವರ್ಗಲೋಕಪ್ರತಿಪತ್ತಿಸ್ತೂಕ್ತಮ್ ಅದೃಷ್ಟಂ ಫಲಮ್। ದ್ವಿರಭ್ಯಾಸ ಆದರಾರ್ಥಃ॥

(ಭಾಷ್ಯಾರ್ಥ)

ಆ ಈ ಜ್ಯೋತಿಯನ್ನು ದೃಷ್ಟವಾದ ಮತ್ತು ಶ್ರುತವಾದ ಲಿಂಗವುಳ್ಳದ್ದಾದ್ದರಿಂದ ದೃಷ್ಟವೂ ಶ್ರುತವೂ ಎಂದು ಉಪಾಸನೆಮಾಡಬೇಕು ಹಾಗೆ ಉಪಾಸನೆ ಮಾಡುವದರಿಂದ ಚಕ್ಷುಷ್ಯ(ನಾಗುವನು), ದರ್ಶನೀಯ(ನಾಗುವನು). ಶ್ರುತನೂ ಎಂದರೆ ಹೆಸರುವಾಸಿಯಾದವನೂ (ಆಗುತ್ತಾನೆ) (ಉಷ್ಣ)ಸ್ಪರ್ಶಗುಣವಾದ ಉಪಾಸನೆಯ ನಿಮಿತ್ತದಿಂದಾಗುವ ಫಲವನ್ನು ಚಕ್ಷುಷ್ಯ(ನಾಗುವನು) ಎಂದು (ಶ್ರುತಿಯ) ರೂಪದಲ್ಲಿ ಸಂಪಾದನೆಮಾಡಿರುತ್ತದೆ[1], ಏಕೆಂದರೆ ರೂಪಸ್ಪರ್ಶಗಳು ಜೊತೆಯಲ್ಲಿಯೇ ಇರುತ್ತವೆ, ಮತ್ತು ದರ್ಶನೀಯತ್ವ(ವೆಂಬ ಸುರೂಪವು) ಇಷ್ಟಫಲವೂ (ಆಗಿದೆ). ಹೀಗಾದರೇ ಉಪಾಸನೆಗೆ (ಇದು) ಫಲವೆಂಬುದು ಯುಕ್ತವಾಗುತ್ತದೆಯೇ ಹೊರತು ಮೃದುವಾಗಿರುವದೇ ಮುಂತಾದ ಸ್ಪರ್ಶವುಳ್ಳವನಾಗುವನು (ಎಂದರೆ ಯುಕ್ತ)ವಾಗಲಾರದು[2]

ಹೀಗೆಂದು ಮೇಲೆ ಹೇಳಿದ ಗುಣಗಳನ್ನು ಯಾವನು (ಉಪಾಸನೆಮಾಡಿ) ಅರಿತುಕೊಳ್ಳುವನೋ, (ಅವನಿಗೆ) ಈ ಫಲ(ವಾಗುವದು). ಹಿಂದೆ ಹೇಳಿರುವ

---

1. ಉಷ್ಣಗುಣವನ್ನು ಉಪಾಸನೆಮಾಡಿರುವದರಿಂದ ಸ್ಪರ್ಶದ ಫಲವಾಗಬೇಕಲ್ಲ' ಎಂಬ ಶಂಕೆಗೆ ಸಮಾಧಾನವಿದು. ಸ್ಪರ್ಶದ ಉಪಾಸನೆಯ ಫಲವನ್ನು ರೂಪದಲ್ಲಿ ಸಂಪಾದನೆ ಮಾಡಿದೆ ಎಂದರೆ ಆರೋಪಿಸಿ ಚಿಂತಿಸಬೇಕೆಂದು ಹೇಳಿದೆ ಎಂದರ್ಥ.

2. ಶ್ರುತಿಯಲ್ಲಿ ಹೇಳಿರುವ ಫಲವು ಹೀಗೆ ಸಂಪಾದನೆಮಾಡಬೇಕೆಂದು ವಿಧಿಸಿದೆ ಎಂದರೇ ತಿಳಿಯುತ್ತದೆ, ಏಕೆಂದರೆ ಚಕ್ಷುಷ್ಯನೆಂಬುದು ಸ್ಪರ್ಶಕ್ಕೆ ಹೊಂದುವದಿಲ್ಲ. ಚಕ್ಷುಷ್ಯನಾಗಿರುವದು ಇಷ್ಟವಾಗಿರುವದರಿಂದ ಅದು ಫಲವೂ ಆಗುತ್ತದೆ.

ಸ್ವರ್ಗಲೋಕಪ್ರಾಪ್ತಿಯಾದರೋ ಅದೃಷ್ಟಫಲವು.[1] (ಯ ಏವಂ ವೇದ= ಯಾವನು ಹೀಗೆಂದು ಅರಿಯುವನೋ ಎಂದು) ಎರಡು ಸಲ ಹೇಳಿರುವದು ಆದರ ವನ್ನು ತೋರಿಸುವದಕ್ಕೆ.

---

# ಮೂರನೆಯ ಅಧ್ಯಾಯ-ಹದಿನಾಲ್ಕನೆಯ ಖಂಡ

(ಶಾಂಡಿಲ್ಯವಿದ್ಯೆ)

## ಮನೋಮಯತ್ವಾದಿಗುಣಕಬ್ರಹ್ಮೋಪಾಸನೆ

(ಉಪನಿಷತ್ತು)

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾನ್ತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥೧॥**

೧. ಇವೆಲ್ಲವೂ- ತಜ್ಜಲಾನ್ ಆಗಿರುವದರಿಂದ- ಬ್ರಹ್ಮವೇ ; ಆದ್ದರಿಂದ ಶಾಂತನಾಗಿ ಉಪಾಸನೆಮಾಡಬೇಕು. ಇನ್ನು ಪುರುಷನು ಕ್ರತುಮಯನೇ; ಪುರುಷನು ಈ ಲೋಕದಲ್ಲಿ ಎಂಥ ಕ್ರತುವುಳ್ಳನಾಗಿರು ವನೋ ಇಲ್ಲಿಂದ ಹೊರಟುಹೋದಬಳಿಕ ಹಾಗೆಯೇ ಆಗುತ್ತದೆ. ಅವನು ಕ್ರತುವನ್ನು ಮಾಡಬೇಕು.

### ಗ್ರಂಥಸಂಬಂಧ

(ಭಾಷ್ಯ)

೨೫೧. ಪುನಸ್ತಸ್ಯೈವ ತ್ರಿಪಾದಮೃತಸ್ಯ ಬ್ರಹ್ಮಣೋಽನನ್ತಗುಣವತೋಽ ನನ್ತಶಕ್ತೇಃ ಅನೇಕಭೇದೋಪಾಸ್ಯಸ್ಯ ವಿಶಿಷ್ಟಗುಣಶಕ್ತಿಮತ್ತ್ವೇನೋಪಾಸನಂ ವಿಧಿತ್ಸನ್ ಆಹ ॥

---

1. ಗುಣಗಳ ಉಪಾಸನೆಗೆ ಫಲವು ಚಕ್ಷುಷ್ಯತ್ವಾದಿಪ್ರಾಪ್ತಿ , ಗುಣಿಯಾದ ಬ್ರಹ್ಮದ ಉಪಾಸನೆಗೆ ಬ್ರಹ್ಮಪ್ರಾಪ್ತಿ. ಇಲ್ಲಿ ಚಕ್ಷುಷ್ಯತ್ವಾದಿಯಾದ ಅಲ್ಪಫಲವನ್ನು ಹೇಳಿರುವದರಿಂದ ಇಲ್ಲಿ ಹೇಳಿರುವ ಜ್ಯೋತಿಯು ಬ್ರಹ್ಮವಲ್ಲ ಎಂಬ ಪೂರ್ವಪಕ್ಷವನ್ನು ೧–೧–೨೪ (ಭಾ. ಭಾ. ೧೨೮)ರಲ್ಲಿ ತಳ್ಳಿಹಾಕಿದೆ.

(ಭಾಷ್ಯಾರ್ಥ)

ಮತ್ತು ಅನಂತಗುಣವುಳ್ಳದ್ದೂ ಅನಂತಶಕ್ತಿಯುತವಾದದ್ದೂ ಅನೇಕಭೇದ ಗಳಿಂದ[1] ಉಪಾಸ್ಯವೂ ಆಗಿರುವ ಅದೇ ತ್ರಿಪಾದವ್ಯತವಾಗಿರುವ ಬ್ರಹ್ಮಕ್ಕೇ[2] ಅಸಾಧಾರಣವಾದ ಗುಣಶಕ್ತಿಗಳುಳ್ಳದ್ದೆಂದು ಉಪಾಸನೆ(ಮಾಡಬೇಕೆಂದು) ವಿಧಿಸುವದಕ್ಕಾಗಿ (ಶ್ರುತಿಯು) ಹೀಗೆಂದು ಹೇಳುತ್ತಿದೆ:

## ಬ್ರಹ್ಮೋಪಾಸನೆಯಲ್ಲಿ ಶಮವಿರಬೇಕು

(ಭಾಷ್ಯ)

**೩೫೨.** ಸರ್ವಂ ಸಮಸ್ತಂ ಖಲು ಇತಿ ವಾಕ್ಯಾಲಙ್ಕಾರಾರ್ಥೋ ನಿಪಾತಃ। ಇದಂ ಜಗತ್ ನಾಮರೂಪವ್ಯಾಕೃತಂ[3] ಪ್ರತ್ಯಕ್ಷಾದಿವಿಷಯಂ ಬ್ರಹ್ಮ ಕಾರಣಮ್। ವೃದ್ಧತಮತ್ವಾತ್ ಬ್ರಹ್ಮ। ಕಥಂ ಸರ್ವಸ್ಯ ಬ್ರಹ್ಮತ್ವಮಿತಿ। ಅತ ಆಹ। ತಜ್ಜಲಾನ್ ಇತಿ। ತಸ್ಮಾದ್ ಬ್ರಹ್ಮಣೋ ಜಾತಂ ತೇಜೋಽಬನ್ನಾದಿಕ್ರಮೇಣ ಸರ್ವಮ್। ಅತಃ ತಜ್ಜಮ್। ತಥಾ ತೇನೈವ ಜನನಕ್ರಮೇಣ ಪ್ರತಿಲೋಮ ತಯಾ ತಸ್ಮಿನ್ನೇವ ಬ್ರಹ್ಮಣಿ ಲೀಯತೇ, ತದಾತ್ಮತಯಾ ಶಿಷ್ಯತ[4] ಇತಿ ತಲ್ಲಮ್। ತಥಾ ತಸ್ಮಿನ್ನೇವ ಸ್ಥಿತಿಕಾಲೇ ಅನಿತಿ ಪ್ರಾಣಿತಿ ಚೇಷ್ಟತ ಇತಿ ತದನಮ್[5]। ಏವಂ ಬ್ರಹ್ಮಾತ್ಮತಯಾ ತ್ರಿಷುಕಾಲೇಷು ಅವಿಶಿಷ್ಟಮ್ ತದ್ವ್ಯತಿರೇಕೇಣ ಅಗ್ರಹಣಾತ್। ಅತಃ ತದೇವೇದಂ ಜಗತ್। ಯಥಾ ಚೇದಂ ತದೇವೈಕಮ್ ಅದ್ವಿತೀಯಂ ತಥಾ ಷಷ್ಠೇ ವಿಸ್ತರೇಣ ವಕ್ಷ್ಯಾಮಃ। ಯಸ್ಮಾಚ್ಚ ಸರ್ವಮಿದಂ ಬ್ರಹ್ಮ। ಅತಃ ಶಾನ್ತಃ ರಾಗದ್ವೇಷಾದಿದೋಷರಹಿತಃ ಸಂಯುತಃ ಸನ್ ಯತ್ ತತ್ಸರ್ವಂ ಬ್ರಹ್ಮ ತದ್ ವಕ್ಷ್ಯಮಾಣೈರ್ಗುಣೈರುಪಾಸೀತ॥

---

1. ಅನೇಕ ಪ್ರಕಾರಗಳಿಂದ ಎಂದರ್ಥ. ಭೇದಗಳೆಂದರೆ ಗಾಯತ್ರಿಯೇ ಮುಂತಾದ ಅನೇಕ ಉಪಾಧಿಗಳು ಎಂಬ ಟೀಕಾವ್ಯಾಖ್ಯಾನವು ಪ್ರಕೃತೋಪಯೋಗಿಯಲ್ಲವೆಂದು ತೋರುತ್ತದೆ.

2. ಬ್ರಹ್ಮವು ಅದೇ, ಆದರೆ ಗುಣಶಕ್ತಿಭೇದಗಳಿರುವದರಿಂದ ಉಪಾಸನೆಯು ಬೇರೆಯೇ

3 'ವಿಕೃತಂ' ಎಂಬ ಪಾಠದಲ್ಲಿ ನಾಮರೂಪವಿಕಾರವಾಗಿರುವದರಿಂದ ಎಂದು ಕನ್ನಡಿಸ ಬೇಕಾಗುತ್ತದೆ, ಆದರೆ ಪ್ರಕೃತಿಯೂ ಬೀಜರೂಪವಾಗಿರುವ ನಾಮರೂಪವೇ ವಿಕೃತಿಯೂ ನಾಮರೂಪವೇ ಆಗಿರುವದರಿಂದ 'ವ್ಯಾಕೃತಮ್' ಎಂದು ತಿದ್ದಿಕೊಂಡಿದೆ. 'ನಾಮರೂಪ ವಿಕೃತಮ್' ಎಂಬ ಪ್ರಯೋಗವು ಭಾಷ್ಯದಲ್ಲಿ ಮತ್ತೆಲ್ಲಿಯೂ ಇಲ್ಲ.

4 ಶ್ಲಿಷ್ಯತೇ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

5. ಇಲ್ಲಿ ಅಚ್ಚಿನ ಪುಸ್ತಕದಲ್ಲಿ ಈ ಮಾತು ಬಿಟ್ಟುಹೋಗಿದೆ. 'ತದನ್' ಎಂಬ ಪಾಠಾಂತರವೂ ಇರುವದಾಗಿ ತಿಳಿಯಬಂದಿದೆಯಾದರೂ ಸೂತ್ರಭಾಷ್ಯಕ್ಕನುಗುಣವಾಗಿ 'ತದ ನಮ್' ಎಂದೇ ನಾವು ಬರೆದುಕೊಂಡಿರುತ್ತೇವೆ. 'ತದನ್' ಎಂದು ಶ್ರುತಿಯಲ್ಲಿರುವದು ಛಾಂದಸಪ್ರಯೋಗವು.

(ಭಾಷ್ಯಾರ್ಥ)

(ಸರ್ವಂ ಸಮಸ್ತಮ್) ಎಲ್ಲವೂ -ಮೂಲದಲ್ಲಿರುವ ಖಲು (ಅಷ್ಟೆ) ಎಂಬುದು ವಾಕ್ಯಾಲಂಕಾರಕ್ಕಾಗಿ (ಬಂದಿರುವ) ನಿಪಾತವು[1]- ಇದು ಎಂದರೆ ನಾಮರೂಪಗಳಾಗಿ ವಿಂಗಡಿಸಿಕೊಂಡಿರುವ, ಪ್ರತ್ಯಕ್ಷಾದಿಗಳಿಗೆ ವಿಷಯವಾಗಿರುವ (ಈ) ಜಗತ್ತು (ಎಲ್ಲವೂ) ಬ್ರಹ್ಮವೇ, ಎಲ್ಲಕ್ಕಿಂತಲೂ ಮಿಗಿಲಾದದ್ದರಿಂದ ಬ್ರಹ್ಮ[2](ವೆನಿಸಿಕೊಂಡಿರುವ) ಕಾರಣವೇ[3] ಎಲ್ಲವೂ ಬ್ರಹ್ಮವೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ ತಜ್ಜಲಾನ್ (ಆಗಿರುವವರಿಂದ) ಆ ಬ್ರಹ್ಮದಿಂದ ತೇಜೋಽಬನ್ನಾದಿ ಕ್ರಮದಿಂದ[4] ಎಲ್ಲವೂ ಹುಟ್ಟಿದೆ, ಆದ್ದರಿಂದ **'ತಜ್ಜವು'** ಹೀಗೂ (ಅದು) ಜನನಕ್ಕೆ ವಿಪರೀತವಾದ ಕ್ರಮದಿಂದ[5] ಬ್ರಹ್ಮದಲ್ಲಿಯೇ ಲಯವಾಗುತ್ತದೆ, ಅದರ ರೂಪದಿಂದ ಉಳಿದುಕೊಳ್ಳುತ್ತದೆ, ಆದ್ದರಿಂದ 'ತಲ್ಲವು', ಹಾಗೂ ಅದರಲ್ಲಿಯೇ ಸ್ಥಿತಿಕಾಲದಲ್ಲಿ ಅನನಮಾಡಿಕೊಂಡಿರುತ್ತದೆ, ಪ್ರಾಣನಮಾಡುತ್ತಿರುತ್ತದೆ, ವ್ಯಾಪಾರ ಮಾಡುತ್ತಿರುತ್ತದೆ, ಆದ್ದರಿಂದ 'ತದನವು'.

ಹೀಗೆ ಬ್ರಹ್ಮಸ್ವರೂಪದಿಂದಿರುವದು ಮೂರು ಕಾಲಗಳಲ್ಲಿಯೂ (ಇದಕ್ಕೆ) ಸಮಾನವಾಗಿರುತ್ತದೆ, ಏಕೆಂದರೆ ಅದಕ್ಕಿಂತ ವ್ಯತಿರಿಕ್ತವಾಗಿ (ಇದು) ತಿಳಿಯಬರುತ್ತಿಲ್ಲ[6] ಆದ್ದರಿಂದ ಈ ಜಗತ್ತು ಆ (ಬ್ರಹ್ಮ)ವೇ. ಈ (ಜಗತ್ತು) ತನಗೆರಡನೆಯದಿಲ್ಲ, ಆ(ಬ್ರಹ್ಮ)ವೊಂದೇ ಹೇಗೆಂಬುದನ್ನು ಆರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುವೆವು[7] (ಹೀಗೆ) ಇದೆಲ್ಲವೂ ಬ್ರಹ್ಮವೇ (ಆಗಿರು)ವದಷ್ಟೆ, ಆದ್ದರಿಂದ ಶಾಂತನಾಗಿ ರಾಗದ್ವೇಷಾದಿಗಳಿಲ್ಲದೆ (ಮನಸ್ಸನ್ನು) ಬಿಗಿಹಿಡಿದುಕೊಂಡು ಸರ್ವವೂ

---

1. ಇದಕ್ಕೆ ವಿಶೇಷಾರ್ಥವೇನೂ ಇಲ್ಲ.

2. ಬೃಹ ಬೃಹಿ ವೃದ್ಧೌ ಎಂಬ ಧಾತುವಿನಿಂದ ಬ್ರಹ್ಮಶಬ್ದವು ಬಂದಿದೆ.

3. ಕಾರಣಕ್ಕಿಂತ ವ್ಯತಿರಿಕ್ತವಾಗಿಲ್ಲ.

4. ಬ್ರಹ್ಮದಿಂದ ಪಂಚಭೂತಗಳು ತೇಜಆದಿಕ್ರಮದಲ್ಲಿ ಹುಟ್ಟುವವೆಂದು ಈ ಶ್ರುತಿಯಲ್ಲಿದೆ; ಇದು ಆಕಾಶಾದಿಯಾಗಿ ಹುಟ್ಟುವವೆಂಬುದಕ್ಕೆ ಉಪಲಕ್ಷಣವೆಂದು ತೈತ್ತಿರೀಯ ಶ್ರುತಿಯ ಆಧಾರದಿಂದ ಸೂ ಭಾ ೨-೩-೬ರಲ್ಲಿ ನಿರ್ಣಯಿಸಿದೆ.

5. ಹುಟ್ಟುವಕ್ರಮಕ್ಕೆ ವಿಪರೀತವಾಗಿ ಪೃಥಿವಿಯು ಅಪ್ಪಿನಲ್ಲಿ, ಅಪ್ಪು ಅಗ್ನಿಯಲ್ಲಿ ಈ ಕ್ರಮದಿಂದ ಎಂದರ್ಥ.

6. ಮಡಕೆಯು ಮಣ್ಣಿಗಿಂತ ಬೇರೆಯಾಗಿರದೆ ಮಣ್ಣೇ ಆಗಿದ್ದೇ ತೋರಿಕೊಳ್ಳುವಂತೆ ಬ್ರಹ್ಮಸ್ವರೂಪವನ್ನು ಬಿಡದೆಯೇ ತನ್ನ ರೂಪದಿಂದಲೂ ತೋರಿಕೊಳ್ಳುತ್ತಿದೆ ಎಂದರ್ಥ.

7. ೬-೧ ರಿಂದ ಮುಂದಕ್ಕೆ ಇದನ್ನು ವಿಸ್ತಾರವಾಗಿ ಹೇಳಿದೆ. ಇದು ಉಪಾಸನಾವಾಕ್ಯವಾದ್ದರಿಂದ ಸೃಷ್ಟಿಯಾದದ್ದನ್ನು ಇಟ್ಟುಕೊಂಡೇ ಇಲ್ಲಿ ಉಪಾಸನೆಯನ್ನು ವಿಧಿಸಿದೆ ಎಂದು ಭಾವ.

ಆಗಿರುವ ಬ್ರಹ್ಮವಿದೆಯಲ್ಲ, ಅದನ್ನು ಮುಂದೆ ಹೇಳುವ ಗುಣಗಳಿಂದೊಡಗೂಡಿದ್ದೆಂದು ಉಪಾಸನೆಮಾಡಬೇಕು.[1]

## ಬ್ರಹ್ಮವನ್ನು ಉಪಾಸನೆಮಾಡುವ ರೀತಿ

(ಭಾಷ್ಯ)

೨೫೩. ಕಥಮುಪಾಸೀತ? ಕ್ರತುಂ ಕುರ್ವೀತ। ಕ್ರತುರ್ನಿಶ್ಚಯಃ, ಅಧ್ಯವಸಾಯಃ, ಏವಮೇವ ನಾನ್ಯಥಾ ಇತ್ಯವಿಚಲಃ ಪ್ರತ್ಯಯಃ । ತಂ ಕ್ರತುಂ ಕುರ್ವೀತ ಉಪಾಸೀತ ಇತ್ಯನೇನ ವ್ಯವಹಿತೇನ ಸಂಬನ್ಧಃ। ಕಿಂ ಪುನಃ ಕ್ರತುಕರಣೇನ ಕರ್ತವ್ಯಂ ಪ್ರಯೋಜನಮ್? ಕಥಂ ವಾ ಕ್ರತುಃ ಕರ್ತವ್ಯಃ? ಕ್ರತುಕರಣಂ ಚ ಅಭಿಪ್ರೇತಾರ್ಥಸಿದ್ಧಿಸಾಧನಂ ಕಥಮ್ ಇತಿ? ಅಸ್ಯಾರ್ಥಸ್ಯ ಪ್ರತಿಪಾದನಾರ್ಥಮ್ 'ಅಥ' ಇತ್ಯಾದಿಗ್ರಂಥಃ। ಅಥ ಖಲು ಇತಿ ಹೇತ್ವರ್ಥಃ। ಯಸ್ಮಾತ್ ಕ್ರತುಮಯಃ ಕ್ರತುಪ್ರಾಯಃ ಅಧ್ಯವಸಾಯಾತ್ಮಕಃ ಪುರುಷೋ ಜೀವಃ। ಯಥಾಕ್ರತುಃ ಯಾದೃಶಃ ಕ್ರತುರಸ್ಯ ಸೋಽಯಂ ಯಥಾಕ್ರತುಃ ಯಥಾಧ್ಯವಸಾಯಃ ಯಾದೃಙ್ನಿಶ್ಚಯಃ ಅಸ್ಮಿನ್ ಲೋಕೇ ಜೀವನ್ ಇಹ ಪುರುಷೋ ಭವತಿ ತಥಾ ಇತಃ ಅಸ್ಮಾದ್ದೇಹಾತ್ ಪ್ರೇತ್ಯ ಮೃತ್ವಾ ಭವತಿ। ಕ್ರತ್ವನುರೂಪಫಲಾತ್ಮಕೋ ಭವತಿ ಇತ್ಯರ್ಥಃ। ಏವಂ ಹಿ ಏತತ್ ಶಾಸ್ತ್ರತೋ ದೃಷ್ಟಮ್। "ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್" (ಗೀ ೮-೬) ಇತ್ಯಾದಿ। ಯತ ಏವಂ ವ್ಯವಸ್ಥಾ ಶಾಸ್ತ್ರದೃಷ್ಟಾ ಅತಃ ನ ಏವಂ ಜಾನನ್ ಕ್ರತುಂ ಕುರ್ವೀತ ಯಾದೃಶಂ ಕ್ರತುಂ ವಕ್ಷ್ಯಾಮಸ್ತಮ್। ಯತ ಏವಂ ಶಾಸ್ತ್ರಪ್ರಾಮಾಣ್ಯಾತ್ ಉಪಪದ್ಯತೇ ಕ್ರತ್ವನುರೂಪಂ ಫಲಮ್, ಅತಃ ನ ಕರ್ತವ್ಯಃ ಕ್ರತುಃ॥

(ಭಾಷ್ಯಾರ್ಥ)

ಹೇಗೆ ಉಪಾಸನೆಮಾಡಬೇಕು? ಕ್ರತುವನ್ನು ಮಾಡಬೇಕು. ಕ್ರತು ಎಂದರೆ ನಿಶ್ಚಯವು, ಗೊತ್ತುಪಡಿಸಿಕೊಳ್ಳುವದು, ಹೀಗೆಯೇ (ಸರಿ) ಬೇರೆಯ (ಪ್ರಕಾರ) ವಿಲ್ಲ- ಎಂದು ಅಲುಗಾಡದ ಪ್ರತ್ಯಯವು.[2] ಆ ಕ್ರತುವನ್ನು ಮಾಡಿಕೊಳ್ಳಬೇಕು.

---

1. ಈ ವಾಕ್ಯವು ಶಮವಿಧಿಪರವೇ ಆದರೂ ಮುಂದಿನ ವಾಕ್ಯದಲ್ಲಿ ಹೇಳಿರುವ ಮನೋಮಯತ್ವಾದಿಗುಣಗಳು ಬ್ರಹ್ಮಕ್ಕೆ ಸೇರಿದವೆಂದೇ ಉಪಾಸನೆಮಾಡಬೇಕು. ಇಲ್ಲಿ ಸರ್ವಂ ಖಲ್ವಿದಂ ಬ್ರಹ್ಮ ಎಂದು ಬ್ರಹ್ಮದ ಸನ್ನಿಧಿಯಿರುತ್ತದೆ, ಬ್ರಹ್ಮವನ್ನು ಸ್ವಶಬ್ದದಿಂದ ಹೇಳಿದೆ; ಆದರೆ ಜೀವನ ಪರಾಮರ್ಶವಿಲ್ಲ. ಆ ಗುಣಗಳು ಬ್ರಹ್ಮಕ್ಕೆ ಹೊಂದುತ್ತವೆ. ಆದ್ದರಿಂದ ಇದು ಬ್ರಹ್ಮೋಪಾಸನೆಯೇ ಎಂದು ಸೂ. ಭಾ. ೧-೨-೧ (ಭಾ. ಭಾ. ೧೪೯, ೧೫೧)ರಲ್ಲಿ ನಿರ್ಣಯಿಸಿದೆ.

2. ಸಾಕ್ಷಾತ್ಕಾರವು.

'ಉಪಾಸನೆಮಾಡಬೇಕು' ಎಂಬುದಕ್ಕೆ ವ್ಯವಹಿತವಾಗಿರುವ ಈ (ವಾಕ್ಯ)ದೊಡನೆ ಸಂಬಂಧವನ್ನು ಮಾಡಿಕೊಳ್ಳಬೇಕು.[1]

ಕ್ರತುವನ್ನು ಮಾಡಿಕೊಳ್ಳುವದರಿಂದ (ಆಗುವ) ಪ್ರಯೋಜನವೇನು? ಕ್ರತುವನ್ನು ಮಾಡಿಕೊಳ್ಳುವದಾದರೂ ಹೇಗೆ? ಮತ್ತು ಕ್ರತುವನ್ನು ಮಾಡಿಕೊಳ್ಳುವದು ಇಷ್ಟಾರ್ಥಸಿದ್ಧಿಗೆ ಕಾರಣವೆಂಬುದು ಹೇಗೆ?– ಎಂಬೀ ಅರ್ಥವನ್ನು ಪ್ರತಿಪಾದಿಸುವದಕ್ಕಾಗಿ 'ಅಥ' ಮುಂತಾದ (ಮುಂದಿನ) ಗ್ರಂಥವು (ಬಂದಿದೆ). 'ಅಥ ಖಲು' ಎಂಬುದು ಹೇತುವೆಂಬರ್ಥ(ವನ್ನು ತಿಳಿಸುತ್ತದೆ). (ಹೇಗೆಂದರೆ) ಪುರುಷನು, ಜೀವನು, ಕ್ರತುಮಯನು, ಎಂದರೆ ಕ್ರತುಪ್ರಾಯನು, ಅಧ್ಯವಸಾಯಾತ್ಮಕನಷ್ಟೆ. ಪುರುಷನು ಈ ಲೋಕವಲ್ಲಿ ಇಲ್ಲಿ ಬದುಕಿರುವಾಗ ಎಂಥ ಕ್ರತುವುಳ್ಳವನಾಗಿರುತ್ತಾನೋ –ಇವನ ಕ್ರತುವೆಂಥದ್ದೋ ಇವನು ಅಂಥವನು ಎಂಬುದನ್ನು ಯಥಾಕ್ರತು(ವೆಂಬ ಮಾತು ತಿಳಿಸುತ್ತದೆ)– ಎಂಥ ಅಧ್ಯವಸಾಯದವನೋ, ಎಂಥ ನಿಶ್ಚಯವುಳ್ಳವನಾಗಿರುವನೋ, ಇಲ್ಲಿಂದ ಈ ದೇಹದಿಂದ ಹೊರಟುಹೋಗಿ, ಸತ್ತು, ಅಂಥವನೇ ಆಗುವನು ಕ್ರತುವಿಗೆ ಅನುಗುಣವಾದ ಫಲಸ್ವರೂಪನಾಗುವನು ಎಂದರ್ಥ ಇದು ಹೀಗೆಂದಲ್ಲವೆ, "ಯಾವ ಯಾವ ಭಾವವನ್ನು ಸ್ಮರಿಸಿಕೊಂಡು ಕೊನೆಯಲ್ಲಿ ಶರೀರವನ್ನು ಬಿಡುವನೋ" (ಗೀ ೮–೬) ಎಂದು ಮುಂತಾದ ಶಾಸ್ತ್ರದಿಂದ ತಿಳಿಯಬರುತ್ತದೆ? ಈ ರೀತಿಯ ವ್ಯವಸ್ಥೆಯು ಶಾಸ್ತ್ರದಲ್ಲಿ ಕಂಡುಬರುತ್ತಿರುವದಷ್ಟೆ, ಆದ್ದರಿಂದ ಅವನು ಹೀಗೆಂದು ತಿಳಿದು ಕ್ರತುವನ್ನು ಮಾಡಬೇಕು, ಮುಂದೆ ಎಂಥ ಕ್ರತುವನ್ನು ಹೇಳುವೆವೋ ಅದನ್ನು ಮಾಡಿಕೊಳ್ಳಬೇಕು. ಹೀಗೆ ಶಾಸ್ತ್ರಪ್ರಾಮಾಣ್ಯದಿಂದ ಕ್ರತ್ವನುಗುಣವಾಗಿ ಫಲವಾಗುವದೆಂಬುದು ಯುಕ್ತವಾಗಿರುವದರಿಂದ ಆ ಕ್ರತುವನ್ನು ಮಾಡಬೇಕು.[2]

(ಉಪನಿಷತ್ತು)

**ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪ ಆಕಾಶಾತ್ಮಾ ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ ॥ ೨ ॥**

---

1. ಉಪಾಸನೆಮಾಡಬೇಕು ಎಂಬುದಕ್ಕೆ ಹೀಗೆ ಎಂಬುದರ ಆಕಾಂಕ್ಷೆಯಿದೆ ಅದನ್ನು 'ಕ್ರತುಂ ಕುರ್ವೀತ' ಎಂಬುದು ಪೂರ್ತಿಗೊಳಿಸುವದರಿಂದ ಇದರೊಡನೆ ಅದಕ್ಕೆ ಸಂಬಂಧವನ್ನು ಮಾಡಿಕೊಳ್ಳಬೇಕು. ಇದರಿಂದ ಸಾಕ್ಷಾತ್ಕಾರವಾಗುವವರೆಗೂ ಉಪಾಸನೆಮಾಡಬೇಕು ಎಂಬ ಅಭಿಪ್ರಾಯವು ಹೊರಡುತ್ತದೆ.

2. ಅಥ ಖಲು ಎಂಬುದು ಹೇತ್ವರ್ಥವೆಂದಿದ್ದರ ಸ್ಪಷ್ಟೀಕರಣವಿದು. ಇಂಥಫಲಪ್ರಾಪ್ತಿಗಾಗಿ ಉಪಾಸನೆಮಾಡಬೇಕು.

೨. ಮನೋಮಯನು, ಪ್ರಾಣಶರೀರನು, ಭಾರೂಪನು, ಸತ್ಯಸಂಕಲ್ಪನು, ಆಕಾಶಾತ್ಮನು, ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಇದೆಲ್ಲದರಲ್ಲಿಯೂ ಅಭ್ಯಾತ್ತನಾಗಿರುವನು, ಅವಾಕಿಯು, ಅನಾದರನು.

## ಚಿಂತಿಸಬೇಕಾದ ಬ್ರಹ್ಮದ ಗುಣಗಳು

(ಭಾಷ್ಯ)

೨೫೪. ಕಥಮ್? ಮನೋಮಯಃ ಮನಃಪ್ರಾಯಃ। ಮನುತೇ ಅನೇನೇತಿ ಮನಃ। ತತ್ ಸ್ವವೃತ್ತ್ಯಾ ವಿಷಯೇಷು ಪ್ರವೃತ್ತಂ ಭವತಿ ತೇನ ಮನಸಾ ತನ್ಮಯಃ। ತಥಾ ಪ್ರವೃತ್ತ ಇವ ತತ್ಪ್ರಾಯಃ ನಿವೃತ್ತ ಇವ ಚ। ಅತ ಏವ ಪ್ರಾಣಶರೀರಃ ಪ್ರಾಣೋ ಲಿಙ್ಗಾತ್ಮಾ ವಿಜ್ಞಾನಕ್ರಿಯಾಶಕ್ತಿದ್ವಯಸಮ್ಮೂರ್ಛಿತಃ। "ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವಾ[1] ಪ್ರಜ್ಞಾ ಸ ಪ್ರಾಣಃ" (ಕೌ ೩-೩) ಇತಿ ಶ್ರುತೇಃ। ಸ ಶರೀರಂ ಯಸ್ಯ ಸ ಪ್ರಾಣಶರೀರಃ। "ಮನೋಮಯಃ ಪ್ರಾಣಶರೀರನೇತಾ" (ಮುಂ ೨-೨-೮) ಇತಿ ಚ ಶ್ರುತ್ಯನ್ತರಾತ್। ಭಾರೂಪಃ। ಭಾ ದೀಪ್ತಿಃ, ಚೈತನ್ಯಲಕ್ಷಣಂ ರೂಪಂ ಯಸ್ಯ ಸ ಭಾರೂಪಃ। ಸತ್ಯಸಂಕಲ್ಪಃ। ಸತ್ಯಾಃ ಅವಿತಥಾಃ ಸಂಕಲ್ಪಾಃ ಯಸ್ಯ ಸೋಽಯಂ ಸತ್ಯಸಂಕಲ್ಪಃ। ನ ಯಥಾ ಸಂಸಾರಿಣಃ ಇವ[2] (?) ಅನೈಕಾನ್ತಿಕಫಲಃ ಸಂಕಲ್ಪ ಈಶ್ವರಸ್ಯ ಇತ್ಯರ್ಥಃ। ಅನೃತೇನ[3] ಮಿಥ್ಯಾಫಲತ್ವಹೇತುನಾ ಪ್ರತ್ಯೂಢತ್ವಾತ್ ಸಂಕಲ್ಪಸ್ಯ ಮಿಥ್ಯಾಫಲತ್ವಮ್। ವಕ್ಷ್ಯತಿ "ಅನೃತೇನ ಹಿ ಪ್ರತ್ಯೂಢಾಃ" (೮-೩-೨) ಇತಿ। ಆಕಾಶಾತ್ಮಾ ಆಕಾಶ ಇವ ಆತ್ಮಾ ಸ್ವರೂಪಂ ಯಸ್ಯ ಸ ಆಕಾಶಾತ್ಮಾ। ಸರ್ವಗತತ್ವಂ ಸೂಕ್ಷ್ಮತ್ವಂ ರೂಪಾದಿಹೀನತ್ವಂ ಚ ಆಕಾಶತುಲ್ಯತಾ ಈಶ್ವರಸ್ಯ। ಸರ್ವಕರ್ಮಾ। ಸರ್ವಂ ವಿಶ್ವಂ ತೇನ ಈಶ್ವರೇಣ ಕ್ರಿಯತೇ ಇತಿ ಜಗತ್ ಸರ್ವಂ ಕರ್ಮ ಅಸ್ಯ ಸ ಸರ್ವಕರ್ಮಾ। "ಸ ಹಿ ಸರ್ವಸ್ಯ ಕರ್ತಾ" (ಬೃ ೪-೪-೧೩) ಇತಿ ಶ್ರುತೇಃ। ಸರ್ವಕಾಮಃ। ಸರ್ವೇ ಕಾಮಾಃ ದೋಷರಹಿತಾಃ ಅಸ್ಯ ಇತಿ ಸರ್ವಕಾಮಃ। "ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ" (ಗೀ ೭-೧೧) ಇತಿ ಸ್ಮೃತೇಃ। ನನು ಕಾಮೋಽಸ್ಮಿ ಇತಿ ವಚನಾತ್ ಇಹ ಬಹುವ್ರೀಹಿರ್ನ ಸಂಭವತಿ 'ಸರ್ವಕಾಮ' ಇತಿ। ನ। ಕಾಮಸ್ಯ ಕರ್ತವ್ಯತ್ವಾತ್ ಶಬ್ದಾದಿವತ್ ಪಾರಾರ್ಥ್ಯ

---

1. ಸೂ. ಭಾ. ೧-೧-೩೧ (ಛಾ. ಭಾ. ೪೫೧) 'ಯಾ ವೈ' ಎಂದು ಪಾಠ; ಆ॥ ನಿ॥ ಪಾಠಗಳಲ್ಲಿ ಇಲ್ಲಿರುವಂತೆಯೇ ಪಾಠಗಳಿವೆ, ಆದರೆ ಆ॥ ಪಾಠಗಳಲ್ಲಿ ಈ ಎರಡು ವಾಕ್ಯಗಳೂ ಒಂದೇ ಕಡೆಯಲ್ಲಿಲ್ಲ. 2. 'ಯಥಾ' 'ಇವ'– ಇವುಗಳಲ್ಲಿ ಒಂದು ಹೆಚ್ಚು.

3. ಇದರ ಹಿಂದೆ 'ಸಂಸಾರಿಣಃ' ಎಂಬ ಮಾತು ಅ॥ ವಾ॥ ಪಾಠಗಳಲ್ಲಿದೆ.

ಪ್ರಸಜ್ಯಾಚ್ಚ ದೇಹಸ್ಯ। ತಸ್ಮಾತ್ ಯಥೇಹ ಸರ್ವಕಾಮ ಇತಿ ಬ್ರಹುವ್ರೀಹಿಃ ತಥಾ ಕಾಮೋಽಸ್ಮೀತಿ ಸ್ಮೃತ್ಯರ್ಥೋ ವಾಚ್ಯಃ। ಸರ್ವಗನ್ಧಃ। ಸರ್ವೇ ಗನ್ಧಾಃ ಸುಖಕರಾಃ ಅಸ್ಯ ಸೋಽಯಂ ಸರ್ವಗನ್ಧಃ। "ಪುಣ್ಯೋ ಗನ್ಧಃ ಪೃಥಿವ್ಯಾಮ್" (ಗೀ ೭-೯) ಇತಿ ಸ್ಮೃತೇಃ। ತಥಾ ರಸಾ ಅಪಿ ವಿಜ್ಞೇಯಾಃ। ಅಪುಣ್ಯಗನ್ಧರಸಗ್ರಹಣಸ್ಯ ಪಾಪ್ಮಸಂಬನ್ಧನಿಮಿತ್ತತ್ವಶ್ರವಣಾತ್ "ತಸ್ಮಾತ್ ತೇನೋಭಯಂ ಜಿಘ್ರತಿ ಸುರಭಿ ಚ ದುರ್ಗನ್ಧಿ ಚ। ಪಾಪ್ಮನಾ ಹ್ಯೇಷ ವಿದ್ಧಃ" (೧-೨-೨) ಇತಿ [1]। ನ ಚ ಪಾಪ್ಮಸಂಸರ್ಗ ಈಶ್ವರಸ್ಯ। ಅವಿದ್ಯಾದಿದೋಷಸ್ಯ ಅನುಪಪತ್ತೇಃ। ಸರ್ವಮಿದಂ ಜಗತ್ ಅಭ್ಯಾತ್ತಃ ಅಭಿವ್ಯಾಪ್ತಃ। ಅತತೇರ್ವ್ಯಾಪ್ತ್ಯರ್ಥಸ್ಯ ಕರ್ತರಿ ನಿಷ್ಠಾ। ತಥಾ ಅವಾಕೀ। ಉಚ್ಯತೇ ಅನಯಾ ಇತಿ ವಾಕ್। ವಾಗೇವ ವಾಕಃ। ಯದ್ವಾ ವಚೇರ್ಘಞಸ್ತಸ್ಯ ಕರಣೇ ವಾಕಃ। ಸ ಯಸ್ಯ ವಿದ್ಯತೇ ಸ ವಾಕೀ। ನ ವಾಕೀ ಅವಾಕೀ। ವಾಕ್ಪ್ರತಿಷೇಧಶ್ಚ ಅತ್ರೋಪಲಕ್ಷಣಾರ್ಥಃ। ಗನ್ಧರಸಾದಿಶ್ರವಣಾತ್ ಈಶ್ವರಸ್ಯ ಪ್ರಾಪ್ತಾನಿ ಘ್ರಾಣಾದೀನಿ ಕಾರಣಾನಿ ಗನ್ಧಾದಿಗ್ರಹಣಾಯ। ಅತೋ ವಾಕ್ಪ್ರತಿಷೇಧೇನ ಪ್ರತಿಷಿಧ್ಯನ್ತೇ ತಾನಿ। "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" (ಶ್ವೇ ೩-೧೯) ಇತ್ಯಾದಿಮನ್ತ್ರವರ್ಣಾತ್। ಅನಾದರೋಽಸಂಭ್ರಮಃ। ಅಪ್ರಾಪ್ತಪ್ರಾಪ್ತೌ ಹಿ ಸಂಭ್ರಮಃ ಸ್ಯಾತ್ ಅನಾಪ್ತಕಾಮಸ್ಯ। ನ ತು ಆಪ್ತಕಾಮತ್ವಾತ್ ನಿತ್ಯತೃಪ್ತಸ್ಯ ಈಶ್ವರಸ್ಯ ಸಂಭ್ರಮೋಽಸ್ತಿ ಕ್ವಚಿತ್ ॥

(ಭಾಷ್ಯಾರ್ಥ)

ಹೇಗೆ (ಕ್ರತುವನ್ನು ಮಾಡಿಕೊಳ್ಳಬೇಕು ? ಎಂದರೆ) **ಮನೋಮಯನು,** ಮನಃಪ್ರಾಯನು ಇದರಿಂದ ಮನನಮಾಡುತ್ತಾರಾದ್ದರಿಂದ (ಇದು) ಮನ (ವೆನಿಸಿದೆ) ಇದು ತನ್ನ ವೃತ್ತಿಯಿಂದ ವಿಷಯಗಳಲ್ಲಿ ಪ್ರವೃತ್ತವಾಗುತ್ತದೆ. ಈ ಮನಸ್ಸಿನಿಂದ ತನ್ಮಯ(ನಾಗಿರುತ್ತಾನೆ) ಅದರಂತೆ ಪ್ರವೃತ್ತನಾದಂತೆ (ತೋರುವದರಿಂದಲೂ, ಅದರಂತೆಯೇ) ನಿವೃತ್ತನಾದಂತೆ (ತೋರುವದರಿಂದಲೂ) ತತ್ಪ್ರಾಯನಾಗಿರುತ್ತಾನೆ (ಎಂದರ್ಥ) [2]

ಆದ್ದರಿಂದಲೇ **ಪ್ರಾಣಶರೀರನು.** ಪ್ರಾಣವೆಂದರೆ ವಿಜ್ಞಾನ, ಕ್ರಿಯೆ ಎಂಬ ಶಕ್ತಿದ್ವಯದಿಂದ ಒಟ್ಟುಗೂಡಿರುವ ಲಿಂಗಾತ್ಮವು "ಯಾವದು ಪ್ರಾಣವೋ

---

1. ಇದರ ಮುಂದಿರುವ 'ಶ್ರುತೇಃ' ಎಂಬ ಮಾತು ಹೆಚ್ಚೆಂದು ಬಿಟ್ಟಿದೇವೆ.

2. ಆತ್ಮನಿಗೆ ಪ್ರವೃತ್ತಿನಿವೃತ್ತಿಗಳಿರುವಂತೆ ತೋರುವದಕ್ಕೆ ಮನಸ್ಸೆಂಬ ಉಪಾಧಿಯೇ ಕಾರಣ ಎಂದರ್ಥ. ತೈ. ಭಾ. ೧-೬ (ಭಾ. ಭಾ ೬೦)ರಲ್ಲಿ ಈ ಶಬ್ದಕ್ಕೆ ವಿಜ್ಞಾನದಿಂದ ತಿಳಿಯಬರುವವನು, ಅಂತಃಕರಣವೆಂಬ ಲಿಂಗದಿಂದ ತಿಳಿಯಬರುವವನು ಎಂದು ಅರ್ಥ ಮಾಡಿದೆ. ಮುಂ. ಭಾ. ೨-೨-೮ (ಭಾ. ಭಾ ೮೧)ರಲ್ಲಿ ಮನೋವೃತ್ತಿಗಳಿಂದ ತಿಳಿಯಬರುವವನು ಎಂದು ಅರ್ಥಮಾಡಿದೆ.

ಅದೇ ಪ್ರಜ್ಞೆಯು, ಯಾವದು ಪ್ರಜ್ಞೆಯೋ ಅದೇ ಪ್ರಾಣವು" (ಕೌ. ೩-೩) ಎಂಬ ಶ್ರುತಿಯಿಂದ (ಇದು ಸಿದ್ಧವಾಗಿರುತ್ತದೆ).[1] ಆ (ಪ್ರಾಣವು) ಯಾವನಿಗೆ ಶರೀರವೋ ಅವನು ಪ್ರಾಣಶರೀರನು. "ಮನೋಮಯನು, ಪ್ರಾಣಶರೀರವನ್ನು ನಡೆಯಿಸುವವನು" (ಮುಂ. ೨-೨-೮) ಎಂದು ಶ್ರುತ್ಯಂತರದಲ್ಲಿರುವದರಿಂದ (ಹೀಗೆಂದು ತಿಳಿಯಬೇಕು)[2].

**ಭಾರೂಪನು.** ಭಾ ಎಂದರೆ ಪ್ರಕಾಶವು, ಚೈತನ್ಯರೂಪವಾದ (ಬೆಳಕು) ಯಾವನಿಗೆ ರೂಪವೋ ಅವನು ಭಾರೂಪನು [3]

**ಸತ್ಯಸಂಕಲ್ಪನು.**[4] ಸತ್ಯವಾದ ವ್ಯರ್ಥವಲ್ಲದ ಸಂಕಲ್ಪಗಳು ಯಾವನಿಗೆ (ಇರುವವೋ) ಆ ಇವನು ಸತ್ಯಸಂಕಲ್ಪನು ಸಂಸಾರಿಯ (ಸಂಕಲ್ಪ)ದಂತೆ ಈಶ್ವರನ ಸಂಕಲ್ಪವು ಅನಿಯತವಾದ ಫಲವುಳ್ಳದ್ದಲ್ಲ ಎಂದರ್ಥ. ಮಿಥ್ಯಾಫಲವಾಗುವದಕ್ಕೆ ಕಾರಣವಾದ ಅನೃತ(ವಾದ ಕಾಮ)ದಿಂದ ಹೊರಕ್ಕೆಳೆಯಲ್ಪಟ್ಟಿರುವದರಿಂದಲೇ ಸಂಸಾರಿಯ ಸಂಕಲ್ಪಕ್ಕೆ ಮಿಥ್ಯಾಫಲವಾಗುತ್ತಿರುವದು ಎಂಬುದನ್ನು ಮುಂದೆ "ಅನೃತದಿಂದ ಪ್ರತ್ಯೂಢರಾಗಿರುವರಲ್ಲವೆ ?" (೮-೩-೨) ಎಂದು ಮುಂದೆ ಹೇಳಿರುತ್ತದೆ.

**ಆಕಾಶಾತ್ಮನು.** ಆಕಾಶದಂತೆ ಆತ್ಮವು. ಸ್ವರೂಪವು, ಯಾವನಿಗೆ (ಇರುವದೋ) ಅವನು ಆಕಾಶಾತ್ಮನು ಈಶ್ವರನು ಸರ್ವಗತನೂ ಸೂಕ್ಷ್ಮನೂ ರೂಪಾದಿಗಳಿಲ್ಲದವನೂ ಆಗಿರುವದೇ ಆಕಾಶಕ್ಕೂ (ಅವನಿಗೂ ಇರುವ) ಹೋಲಿಕೆ.

**ಸರ್ವಕರ್ಮನು.** ಸರ್ವವೂ ಎಂದರೆ ಎಲ್ಲವೂ ಆ ಈಶ್ವರನಿಂದ ಮಾಡಲ್ಪಟ್ಟಿರುವದರಿಂದ ಸರ್ವಜಗತ್ತೂ ಅವನ ಕರ್ಮವು, (ಆದ್ದರಿಂದ) ಇವನು

---

1. ಆ ಶ್ರುತಿಯಲ್ಲಿ ಪರಮಾತ್ಮನ ಈ ಎರಡು ಶಕ್ತಿಗಳನ್ನು ಹೇಳಿದೆ.

2. ಪ್ರಾಣವೆಂಬ ಸೂಕ್ಷ್ಮಶರೀರವನ್ನು ಒಂದು ಸ್ಥೂಲಶರೀರದಿಂದ ಮತ್ತೊಂದಕ್ಕೆ ಒಯ್ಯುವವನು ಎಂದು ಮುಂ. ೨-೨-೮ರ ಭಾಷ್ಯದಲ್ಲಿ 'ಪ್ರಾಣಶರೀರನೇತಾ' ಎಂಬುದಕ್ಕೆ ವ್ಯಾಖ್ಯಾನ. ಅದು ನಿರುಪಾಧಿಕನಾದ ಆತ್ಮನ ವರ್ಣನೆಯಾದರೂ ಪ್ರಾಣವೆಂಬುದೊಂದು ಶರೀರವು ಎಂಬುದಕ್ಕೆ ಆ ಶ್ರುತಿಯನ್ನು ಇಲ್ಲಿ ಸಮ್ಮತಿಗಾಗಿ ಉದಾಹರಿಸಿದೆ ಎಂದು ತಿಳಿಯಬೇಕು.

3. ಚೈತನ್ಯಪ್ರಕಾಶಸ್ವರೂಪನು ಎಂದರ್ಥ.

4. ಈ ಸತ್ಯಸಂಕಲ್ಪತ್ವವೇ ಮುಂತಾದ ಗುಣಗಳು ಜೀವನಿಗೆ ಹೊಂದುವದಿಲ್ಲವಾದ್ದರಿಂದ ಮನೋಮಯ, ಪ್ರಾಣಶರೀರ- ಮುಂತಾದ ವಿಶೇಷಣಗಳನ್ನು ಪರಮಾತ್ಮನಿಗೇ ಹೊಂದಿಸಿಕೊಳ್ಳಬೇಕು - ಎಂದು ಸೂ. ಭಾ. ೧-೨-೨ (ಭಾ. ಭಾ. ೧೫೧, ೧೫೨), ೧-೧ ೩ (ಭಾ. ಭಾ. ೧೫೩)ರಲ್ಲಿ ನಿರ್ಣಯಿಸಿದೆ.

ಸರ್ವಕರ್ಮನು. "ಅವನು ಸರ್ವಕ್ಕೂ ಕರ್ತೃವಲ್ಲವೆ? (ಬೃ. ೪-೪-೧೩) ಎಂಬ ಶ್ರುತಿಯಿಂದ[1] (ಇದು ಸಿದ್ಧವಾಗಿರುತ್ತದೆ)

**ಸರ್ವಕಾಮನು.** ದೋಷರಹಿತವಾದ ಎಲ್ಲಾ ಕಾಮಗಳೂ ಇವನಿಗೆ ಇರುವವಾದ್ದರಿಂದ (ಇವನು) ಸರ್ವಕಾಮನು. "ಭೂತಗಳಲ್ಲಿರುವ ಧರ್ಮಾವಿರುದ್ಧವಾದ ಕಾಮವಾಗಿರುವೆನು" (ಗೀ. ೭-೧೧) ಎಂಬ ಸ್ಮೃತಿಯಿಂದ (ಇದು ಸಿದ್ಧವಾಗಿದೆ).

(ಆಕ್ಷೇಪ):- 'ಕಾಮವಾಗಿರುವೆನು' ಎಂದು (ಸ್ಮೃತಿ)ವಚನವಿರುವದರಿಂದ ಇಲ್ಲಿ ಸರ್ವಕಾಮನು ಎಂದು ಬಹುವ್ರೀಹಿಯಾಗಲಾರದಲ್ಲ![2]

(ಪರಿಹಾರ).- ಹಾಗಲ್ಲ ಏಕೆಂದರೆ (ಹಾಗಾದರೆ) ಕಾಮವು ಕಾರ್ಯವಾಗಿರುವದರಿಂದ ಶಬ್ದಾದಿಗಳಂತೆ ಈಶ್ವರನೂ ಮತ್ತೊಂದಕ್ಕೆ ಅಧೀನನೆಂದಾಗುವದು[3] ಆದ್ದರಿಂದ ಸರ್ವಕಾಮವೆಂಬುದು ಇಲ್ಲಿ ಬಹುವ್ರೀಹಿಯಾಗುವಂತೆ ಕಾಮವಾಗಿರುವೆನು ಎಂಬ ಸ್ಮೃತಿಯ ಅರ್ಥವನ್ನು ಹೇಳಬೇಕು[4]

**ಸರ್ವಗನ್ಧನು.** ಸುಖಕರವಾದ ಎಲ್ಲಾ ಗಂಧಗಳೂ ಇವನಿಗೆ ಇರುತ್ತವೆ (ಆದ್ದರಿಂದ) ಆ ಇವನು ಸರ್ವಗಂಧನು "ಪೃಥಿವಿಯಲ್ಲಿರುವ ಒಳ್ಳೆಯ ಗಂಧವು" (ಗೀ ೭-೯) ಎಂಬ ಸ್ಮೃತಿಯಿಂದ (ಇದು ಸಿದ್ಧವಾಗಿದೆ) ರಸಗಳನ್ನೂ ಹೀಗೆಯೇ

---

1. ಆ ಶ್ರುತಿಯಲ್ಲಿ ಪರಮಾತ್ಮನ ತಾದಾತ್ಮ್ಯವನ್ನು ಹೊಂದಿದ ಜ್ಞಾನಿಯನ್ನು ಹೀಗೆಂದು ವರ್ಣಿಸಿದೆ.

2. ಆದ್ದರಿಂದ ಸರ್ವಕಾಮಗಳೂ ಆಗಿರುವವನು ಎಂದು ಸ್ಮೃತಿಗೆ ಅನುಗುಣವಾಗಿ ಅರ್ಥವನ್ನು ಮಾಡಬೇಕಲ್ಲವೆ? ಎಂದು ಆಕ್ಷೇಪಕನ ಆಶಯ.

3. ಗುಣಗಳಾದ ಶಬ್ದಾದಿಗಳು ದ್ರವ್ಯಾಧೀನವಾಗಿರುವಂತೆ ಕಾಮರೂಪನಾದ ಈಶ್ವರನು ಕಾಮಿಗೆ ಅಧೀನವಾಗಿರುವನೆಂದಾಗುವದು. ಆಗ ಈಶ್ವರನ ಸತ್ತಾಸ್ವಾತಂತ್ರ್ಯಕ್ಕೆ ವಿರೋಧವಾಗುತ್ತದೆ.

4. ಸ್ಮೃತಿಯ ಅರ್ಥವನ್ನೇ ನ್ಯಾಯಯುಕ್ತವಾಗಿರುವ ಶ್ರುತಿಗೆ ಅನುಸಾರವಾಗಿ ಮಾಡಿಕೊಳ್ಳಬೇಕು; ಧರ್ಮಾವಿರುದ್ಧವಾದ ಕಾಮವು ನನ್ನ ಅನುಗ್ರಹದಿಂದಲೇ ದೊರೆಯುವದರಿಂದ ಅದನ್ನು ನನ್ನ ವಿಭೂತಿ ಎಂದು ಚಿಂತಿಸಬೇಕು ಎಂದು ಗೀತಾವಾಕ್ಯಕ್ಕೆ ಅರ್ಥವನ್ನು ಕಲ್ಪಿಸಬೇಕು- ಎಂದು ಭಾವ. ಸರ್ವಗನ್ಧಃ, ಸರ್ವರಸಃ -ಎಂಬಿವುಗಳಿಗೂ ಇವೇ ಯುಕ್ತಿಯನ್ನು ಜೋಡಿಸಿಕೊಳ್ಳಬೇಕು.

ತಿಳಿಯಬೇಕು[1] ; ಏಕೆಂದರೆ ಕೆಟ್ಟ ಗಂಧವನ್ನೂ ರಸವನ್ನೂ ಗ್ರಹಿಸುವದು ಪಾಪದ ನಿಮಿತ್ತದಿಂದ ಎಂದು "ಆದ್ದರಿಂದ ಸುವಾಸನೆಯನ್ನೂ ದುರ್ವಾಸನೆಯನ್ನೂ ಮೂಸುತ್ತದೆ, ಏಕೆಂದರೆ (ಇದು) ಪಾಪದಿಂದ ಹೊಡೆಯಲ್ಪಟ್ಟಿರುತ್ತದೆ" (೧-೨-೨) ಎಂಬ ಶ್ರುತಿಯಲ್ಲಿ (ಹೇಳಿದೆ) ಈಶ್ವರನಿಗಾದರೋ ಪಾಪದ ಸಂಬಂಧವಿರುವದಿಲ್ಲ, ಏಕೆಂದರೆ ಅವಿದ್ಯೆಯೇ ಮುಂತಾದ ದೋಷಗಳು (ಅವನಿಗೆ) ಹೊಂದುವದಿಲ್ಲ

**ಈ ಜಗತ್ತೆಲ್ಲವನ್ನೂ (ಅಭ್ಯಾತ್ತಃ=) ಅಭಿವ್ಯಾಪಿಸಿಕೊಂಡಿರುತ್ತಾನೆ.** ('ಅಭ್ಯಾತ್ತಃ' ಎಂಬುದು) ವ್ಯಾಪ್ತಿಯೆಂಬರ್ಥವುಳ್ಳ ಅತ (ಧಾತುವಿಗೆ) ಕರ್ತ್ರರ್ಥದಲ್ಲಿ ಭೂತಕೃತ್ಪ್ರತ್ಯಯವು (ಬಂದು ಆಗಿರುವ ರೂಪವು)[2]

ಇದರಂತೆ **ಅವಾಕಿಯು** ಇದರಿಂದ ಮಾತನಾಡುತ್ತಾರಾದ್ದರಿಂದ (ಇದು) ವಾಕ್ಕು, ವಾಕ್ಕೇ ವಾಕವು[3] ಅಥವಾ ವಚಧಾತುವಿಗೆ ಘಞ್ (ಪ್ರತ್ಯಯವು) ಕರಣವೆಂಬರ್ಥದಲ್ಲಿ (ಬಂದು) ವಾಕ(ವೆಂಬ ಶಬ್ದರೂಪವಾಗಿದೆ)[4] ಆ (ವಾಕವು) ಯಾವನಿಗೆ ಇದೆಯೋ ಅವನು ವಾಕಿಯು, ವಾಕಿಯಲ್ಲದವನು ಅವಾಕಿಯು ಇಲ್ಲಿ ವಾಕ್ಕನ್ನು ಇಲ್ಲವೆಂದಿರುವದು ಉಪಲಕ್ಷಣಕ್ಕಾಗಿ[5] (ಇದರ ವಿವರ). ಗಂಧ, ರಸ- ಮುಂತಾದವುಗಳು (ಇವೆ ಎಂದು) ಶ್ರುತಿಯಲ್ಲಿ ಹೇಳಿರುವದರಿಂದ ಗಂಧಾದಿಗಳನ್ನು ಗ್ರಹಿಸುವದಕ್ಕೆ ಈಶ್ವರನಿಗೆ ಘ್ರಾಣಾದಿಕರಣಗಳು ಇವೆ ಎಂದು ಬಂದೊದಗುತ್ತದೆ, ಆದ್ದರಿಂದ ವಾಕ್ಕನ್ನು ಇಲ್ಲವೆಂದದ್ದರಿಂದ ಅವುಗಳನ್ನೂ ಇಲ್ಲವೆಂದಿರುತ್ತದೆ (ಎಂದು ತಿಳಿಯಬೇಕು), "ಪಾಣಿಪಾದವಿಲ್ಲದೆ ವೇಗವುಳ್ಳವನೂ (ವಸ್ತುಗಳನ್ನು) ಹಿಡಿಯುವವನೂ (ಆಗಿರುತ್ತಾನೆ), ಚಕ್ಷುಸ್ಸಿಲ್ಲದೆ ನೋಡುತ್ತಾನೆ, ಕರ್ಣವಿಲ್ಲದೆ ಕೇಳುತ್ತಾನೆ" (ಶ್ವೇ ೩-೧೯) ಎಂಬ ಮಂತ್ರವರ್ಣವು (ಇದಕ್ಕೆ ಆಧಾರವು)[6]

**ಅನಾದರನು,** ಎಂದರೆ ಸಂಭ್ರಮವಿಲ್ಲದವನು ಸಿಕ್ಕದಿರುವದನ್ನು ಪಡೆದುಕೊಳ್ಳುವದಕ್ಕಲ್ಲವೆ, ಆಪ್ತಕಾಮನಲ್ಲದವನಿಗೆ ಸಂಭ್ರಮವಾಗುವದು? ಆದರೆ

---

1 ಅಲ್ಲಿಯೂ ಒಳ್ಳೆಯ ರಸಗಳುಳ್ಳವನು ಎಂದೇ ಅರ್ಥಮಾಡಿಕೊಳ್ಳಬೇಕು

2. ಕರ್ಮಾರ್ಥವಲ್ಲ, ವ್ಯಾಪಿಸಲ್ಪಟ್ಟವನು ಎಂದು ಅರ್ಥಮಾಡಬಾರದು.

3. ವಾಕ್ಛಬ್ದಕ್ಕೆ ಸ್ವಾರ್ಥದಲ್ಲಿ ಪ್ರತ್ಯಯವು ಬಂದು 'ವಾಕ' ಎಂಬ ರೂಪವಾಗಿದೆ ಎಂದರ್ಥ.

4 ಆದ್ದರಿಂದ ವಾಕ ಎಂಬ ರೂಪವೇ ನೇರಾಗಿ ಸಿದ್ಧಿಸಿರುವದರಿಂದ ಸ್ವಾರ್ಥಪ್ರತ್ಯಯವನ್ನು ಸೇರಿಸಿಕೊಳ್ಳಬೇಕಾದದ್ದೇನೂ ಇಲ್ಲ ಎಂದು ಭಾವ.

5 ಮಿಕ್ಕ ಕರಣಗಳೂ ಇಲ್ಲವೆನ್ನುವದಕ್ಕೆ ಹೆಗ್ಗುರುತಾಗಿ ಎಂದರ್ಥ.

6 ಸರ್ವಕರಣಗಳಲ್ಲಿರುವ ಶಕ್ತಿಯೂ ಆತ್ಮಚೈತನ್ಯವೇ ಆಗಿರುವದರಿಂದಲೂ ಸರ್ವಕರಣಗಳನ್ನು ಬೆಳಗುವ ಚೈತನ್ಯಸ್ವರೂಪನಾದ ಆತ್ಮನು ಅರಿಯುವದಕ್ಕೆ ಬೇರೆ ಕರಣಗಳು ಬೇಕಿಲ್ಲ.

ಆಪ್ತಕಾಮನಾಗಿರುವದರಿಂದ ನಿತ್ಯತೃಪ್ತನಾಗಿರುವ ಈಶ್ವರನಿಗೆ (ಹಾಗೆ) ಏತರಲ್ಲಿಯೂ ಸಂಭ್ರಮವಿರುವದಿಲ್ಲ

(ಉಪನಿಷತ್ತು)

**ಏಷ ಮ ಆತ್ಮಾನ್ತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ ವಾ ಸರ್ಷಪಾದ್ ವಾ ಶ್ಯಾಮಾಕಾದ್ ವಾ ಶ್ಯಾಮಾಕತಣ್ಡುಲಾದ್ ವೈಷ ಮ ಆತ್ಮಾನ್ತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಜ್ಯಾಯಾನನ್ತರಿಕ್ಷಾಜ್ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ॥೩॥**

೩. ಹೃದಯದೊಳಗೆ (ಇರುವ) ಈತನು ನನ್ನ ಆತ್ಮನು. ಬತ್ತದಕಾಳಿಗಿಂತಲೂ ಜವೆಯಕಾಳಿಗಿಂತಲೂ ಸಾಸುವೆಯಕಾಳಿಗಿಂತಲೂ ಸಾವೆಗಿಂತಲೂ ಅಥವಾ ಸಾವೆಯಕ್ಕಿಯಕಾಳಿಗಿಂತಲೂ ಅಣುವಾಗಿರುವನು. ಈ ನನ್ನ ಹೃದಯದೊಳಗೆ (ಇರುವ) ಈ ನನ್ನ ಆತ್ಮನು ಪೃಥಿವಿಗಿಂತಲೂ ದೊಡ್ಡವನು, ಅಂತರಿಕ್ಷಕ್ಕಿಂತಲೂ ದೊಡ್ಡವನು, ದ್ಯುಲೋಕಕ್ಕಿಂತಲೂ ದೊಡ್ಡವನು, ಈ ಲೋಕಗಳಿಗಿಂತಲೂ ದೊಡ್ಡವನು.

## ಮನೋಮಯತ್ವಾದಿಗುಣಕಬ್ರಹ್ಮವನ್ನು ಹೃದಯದಲ್ಲಿ ಉಪಾಸನೆಮಾಡಬೇಕು

(ಭಾಷ್ಯ)

ಅಥ ಏಷ ಯಥೋಕ್ತಗುಣೋ ಮೇ ಮಮ ಆತ್ಮಾಽನ್ತರ್ಹೃದಯೇ ಹೃದಯಪುಣ್ಡರೀಕಸ್ಯಾನ್ತರ್ಮಧ್ಯೇ ಅಣೀಯಾನ್ ಅಣುತರೋ ವ್ರೀಹೇರ್ವಾ ಯವಾದ್ವಾ ಇತ್ಯಾದಿ ಅತ್ಯನ್ತಸೂಕ್ಷ್ಮತ್ವಪ್ರದರ್ಶನಾರ್ಥಮ್ । ಶ್ಯಾಮಾಕಾದ್ ವಾ ಶ್ಯಾಮಾಕತಣ್ಡುಲಾದ್ ವಾ ಇತಿ ಪರಿಚ್ಛಿನ್ನಪರಿಮಾಣಾತ್ ಅಣೀಯಾನ್ ಇತ್ಯುಕ್ತೇಽಣುಪರಿಮಾಣತ್ವಂ ಪ್ರಾಪ್ತಮ್ ಆಶಙ್ಕ್ಯ[1] ಅತಃ ( ? ) ತತ್ಪ್ರತಿಷೇಧಾಯ ಆರಭತೇ । ಏಷ ಮ ಆತ್ಮಾ ಅನ್ತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಇತ್ಯಾದಿನಾ । ಜ್ಯಾಯಃಪರಿಮಾಣಾಚ್ಚ ಜ್ಯಾಯಸ್ತ್ವಂ ದರ್ಶಯನ್ ಅನನ್ತಪರಿಮಾಣತ್ವಂ ದರ್ಶಯತಿ ॥

---

1 ಇಲ್ಲಿ ಭಾಷ್ಯಮೂಲವು ಏನೋ ಹೆಚ್ಚುಕಡಿಮೆಯಾಗಿರುವಂತೆ ಕಾಣುತ್ತದೆ 'ಪ್ರಾಪ್ತಮಾಶಙ್ಕ್ಯ ತತ್ಪ್ರತಿಷೇಧಾಯ' ಎಂದೋ 'ಪ್ರಾಪ್ತಮಿತ್ಯಾಶಙ್ಕ್ಯೇತ । ಅತಃ' ಎಂದೋ ಇದ್ದರೆ ಸರಳವಾಗಿ ಅನ್ವಯವಾಗುವದು.

(ಭಾಷ್ಯಾರ್ಥ)

ಮೇಲೆ ಹೇಳಿರುವ ಗುಣಗಳುಳ್ಳ ಈ ನನ್ನ ಆತ್ಮನು ಹೃದಯದೊಳಗೆ[1] ಹೃದಯಪುಂಡರೀಕದ ಒಳಗೆ, ನಡುವೆ (ಇರುತ್ತಾನೆ) : ಬತ್ತದ ಕಾಳಿಗಿಂತಲೂ ಜವೆಯ ಕಾಳಿಗಿಂತಲೂ ಅಣುವಾಗಿರುವನು- ಎಂದು ಮುಂತಾಗಿ ಹೇಳಿರುವದು (ಇವನು) ಅತ್ಯಂತಸೂಕ್ಷ್ಮನೆಂಬುದನ್ನು ತಿಳಿಸುವದಕ್ಕೆ.

'ಸಾವೆಗಿಂತಲೂ ಸಾವೆಯಕ್ಕಿಯ ಕಾಳಿಗಿಂತಲೂ' ಎಂದು ಅಳತೆಯ ಪರಿಮಾಣವುಳ್ಳದ್ದಕ್ಕಿಂತಲೂ ಅಣು ಎಂದದ್ದರಿಂದ (ಇವನು) ಅಣುಪರಿಮಾಣ ವುಳ್ಳವನು ಎಂದು ಬಂದೊದಗಿತೆಂದು ಆಶಂಕಿಸಿ ಅದನ್ನು ಅಲ್ಲವೆನ್ನುವದಕ್ಕಾಗಿ 'ಈ ಹೃದಯದೊಳಗಿನ ಈ ನನ್ನ ಆತ್ಮನು ಪೃಥಿವಿಗಿಂತಲೂ ದೊಡ್ಡವನು' ಎಂದು ಮುಂತಾಗಿ(ರುವ ಗ್ರಂಥವನ್ನು) ಆರಂಭಿಸುತ್ತದೆ ದೊಡ್ಡ ಪರಿಮಾಣದ್ದ ಕ್ಕಿಂತಲೂ ದೊಡ್ಡವನು ಎಂದು ತಿಳಿಸಿದ್ದರಿಂದ ಅನಂತಪರಿಮಾಣದವನು ಎಂದು ತಿಳಿಸಿದಂತಾಯಿತು[2]

(ಉಪನಿಷತ್ತು)

**ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ ಸರ್ವಮಿದ ಮಭ್ಯಾತ್ತೋಽವಾಕ್ಯನಾದರ ಏಷ ಮ ಆತ್ಮಾನ್ತರ್ಹೃದಯ ಏತದ್ಬ್ರಹ್ಮೈತಮಿತಃ ಪ್ರೇತ್ಯಾಭಿಸಂಭವಿತಾಸ್ಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಽಸ್ತೀತಿ ಹ ಸ್ಮಾಽಽಹ ಶಾಣ್ಡಿಲ್ಯಃ ಶಾಣ್ಡಿಲ್ಯಃ ॥ ೪ ॥**

೪. ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಇದೆಲ್ಲದರಲ್ಲಿಯೂ ಅಭ್ಯಾತ್ತನಾಗಿರುವವನು, ಅವಾಕಿ, ಅನಾದರನು, ಹೃದಯದೊಳಗಿರುವ ಇವನು ನನ್ನ ಆತ್ಮನು. ಇದೇ ಬ್ರಹ್ಮವು, ಇವನನ್ನು ಇಲ್ಲಿಂದ ಹೊರಟುಹೋಗಿ ಸೇರುವವನಾಗಿರು ವೆನು- ಎಂದು ಯಾವನಿಗೆ ನಿಶ್ಚಯವಾಗಿರುವದೋ, ಸಂಶಯವಿರು ವದಿಲ್ಲವೋ, (ಅವನಿಗೇ ಫಲವು) ಎಂದು ಹೇಳುತ್ತಾನೆ, ಶಾಂಡಿಲ್ಯನು, ಶಾಂಡಿಲ್ಯನು.

---

1. ಸರ್ವಗತನಾದ ಪರಮಾತ್ಮನನ್ನು ಹೃದಯದಲ್ಲಿಯೇ ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂದು ಇಲ್ಲಿ ಹೇಳಿದೆ ; ಆದ್ದರಿಂದ ಇಲ್ಲಿ ಹೃದಯಸಂಬಂಧದಿಂದ ಇವನು ಜೀವಾತ್ಮನು ಎಂದು ಶಂಕಿಸುವದಕ್ಕಾಗುವದಿಲ್ಲ.

2. ಏಕೆಂದರೆ ಪರಿಚ್ಛಿನ್ನನಾದ ಒಬ್ಬನೇ ಅಣುವೂ ದೊಡ್ಡವನೂ ಆಗಿರುವದು ಸಾಧ್ಯವಿಲ್ಲ

# ಗುಣಗಳಿಂದೊಡಗೂಡಿಯೇ ಬ್ರಹ್ಮವನ್ನು ಉಪಾಸನೆಮಾಡಬೇಕು

(ಭಾಷ್ಯ)

೨೫೬. ಮನೋಮಯ ಇತ್ಯಾದಿನಾ ಜ್ಯಾಯಾನೇಭ್ಯೋ ಲೋಕೇಭ್ಯಃ ಇತ್ಯನ್ತೇನ[1] ಯಥೋಕ್ತಗುಣಲಕ್ಷಣ ಈಶ್ವರೋ ಧ್ಯೇಯೋ ನ ತು ತದ್ಗುಣ ವಿಶಿಷ್ಟ ಏವ। ಯಥಾ ರಾಜಪುರುಷಮ್ ಆನಯ, ಚಿತ್ರಗುಂ ವಾ ಇತ್ಯುಕ್ತೇನ ವಿಶೇಷಣಸ್ಯಾಪಿ ಆನಯನೇ ವ್ಯಾಪ್ರಿಯತೇ ತದ್ವತ್ ಇಹಾಪಿ ಪ್ರಾಪ್ತಮ್। ಅತಃ ತನ್ನಿವೃತ್ತ್ಯರ್ಥಂ ಸರ್ವಕರ್ಮಾ ಇತ್ಯಾದಿ ಪುನರ್ವಚನಮ್। ತಸ್ಮಾತ್ ಮನೋಮಯತ್ವಾದಿಗುಣವಿಶಿಷ್ಟ ಏವ ಈಶ್ವರೋ ಧ್ಯೇಯಃ। ಅತ ಏವ ಷಷ್ಠಸಪ್ತಮಯೋರಿವ 'ತತ್ತ್ವಮಸಿ' (೬-೮-೭) 'ಆತ್ಮೈವೇದಂ ಸರ್ವಮ್' (೭-೨೫-೨) ಇತಿ ನೇಹ ಸ್ವಾರಾಜ್ಯೇ ಅಭಿಷಿಞ್ಚತಿ। 'ಏಷ ಮ ಆತ್ಮೈತದ್ ಬ್ರಹ್ಮೈತಮಿತಃ ಪ್ರೇತ್ಯಾಭಿಸಂಭವಿತಾಽಸ್ಮಿ' ಇತಿ ಲಿಙ್ಗಾತ್। ನ ತು ಆತ್ಮಶಬ್ದೇನ ಪ್ರತ್ಯಗಾತ್ಮೈವೋಚ್ಯತೇ । 'ಮಮ' ಇತಿ ಷಷ್ಠ್ಯಾಃ ಸಂಬನ್ಧಾರ್ಥಪ್ರತ್ಯಾಯಕತ್ವಾತ್। ಏತಮಭಿಸಂಭವಿತಾಸ್ಮೀತಿ ಚ ಕರ್ಮಕರ್ತೃತ್ವನಿರ್ದೇಶಾತ್। ನನು ಷಷ್ಠೇಽಪಿ "ಅಥ ಸಂಪತ್ಸ್ಯೇ" (೬-೧೪-೨) ಇತಿ ಸತ್ಸಂಪತ್ತೇಃ ಕಾಲಾನ್ತರಿತತ್ವಂ ದರ್ಶಯತಿ। ನ। ಆರಬ್ಧಸಂಸ್ಕಾರಶೇಷಸ್ಥಿತ್ಯರ್ಥಪರತ್ವಾತ್ ನ ಕಾಲಾನ್ತರಿತಾರ್ಥತಾ। ಅನ್ಯಥಾ ತತ್ತ್ವಮಸೀತ್ಯೇತಸ್ಯ ಅರ್ಥಸ್ಯ ಬಾಧಪ್ರಸಙ್ಗಾತ್। ಯದ್ಯಪಿ ಆತ್ಮಶಬ್ದಸ್ಯ ಪ್ರತ್ಯಗರ್ಥತ್ವಂ 'ಸರ್ವಂ ಖಲ್ವಿದಂ ಬ್ರಹ್ಮ' ಇತಿ ಪ್ರಕೃತಮ್ 'ಏಷ ಮ ಆತ್ಮಾಽನ್ತರ್ಹೃದಯೇ ಏತದ್ ಬ್ರಹ್ಮ' ಇತ್ಯುಚ್ಯತೇ, ತಥಾಪಿ ಅನ್ತರ್ಧಾನಮ್ ಈಷದ್ ಅಪರಿತ್ಯಜ್ಯೈವ ಏತಮಾತ್ಮಾನಮ್ ಇತೋಽಸ್ಮಾತ್ ಶರೀರಾತ್ ಪ್ರೇತ್ಯ ಅಭಿಸಂಭವಿತಾಽಸ್ಮಿ ಇತ್ಯುಕ್ತಮ್ ॥

(ಭಾಷ್ಯಾರ್ಥ)

'ಮನೋಮಯನು' ಎಂದು ಮೊದಲುಮಾಡಿ 'ಈ ಲೋಕಗಳಿಗಿಂತಲೂ ದೊಡ್ಡವನು ಎಂಬವರೆಗಿನ (ಗ್ರಂಥದಿಂದ) ಮೇಲೆ ಹೇಳಿರುವ ಗುಣಗಳ ಲಕ್ಷಣವುಳ್ಳ ಈಶ್ವರನನ್ನು (ಮಾತ್ರ)[2] ಧ್ಯಾನಮಾಡಬೇಕೇ ಹೊರತು ಆ ಗುಣಗಳಿಂದೊಡಗೂಡಿಯೇ ಇರುವ ಈಶ್ವರನನ್ನಲ್ಲ. ಹೇಗೆ 'ರಾಜಪುರುಷನನ್ನು ಕರೆದುಕೊಂಡು ಬಾ'

---

1. ಅಚ್ಚಿನ ಪುಸ್ತಕಗಳಲ್ಲಿ ಈ ಭಾಗವನ್ನು ಹಿಂದಿನ ಪ್ರಘಟ್ಟಕ್ಕೆ ಸೇರಿಸಿದೆಯಾದರೂ ಇದು ಇಲ್ಲಿಗೆ ಹೊಂದುತ್ತದೆ; ಆ॥ ಗಿ॥ ಟೀಕೆಯೂ ಇದಕ್ಕೇ ಅನುಗುಣವಾಗಿದೆ.

2. ಗುಣಗಳನ್ನು ಬಿಟ್ಟು, ಆ ಗುಣಗಳಿಂದ ಉಪಲಕ್ಷಿತನಾದ ಈಶ್ವರನನ್ನು ಮಾತ್ರ ಎಂದರ್ಥ. 'ಕಾಗೆ ಕೂತಿರುವ ಮನೆ' ಎಂದು ಮನೆಯ ಗುರುತಿಗಾಗಿ ಕಾಗೆಯನ್ನು ತೋರಿಸುವಂತೆ ಇಲ್ಲಿ ಗುಣಗಳನ್ನು ಈಶ್ವರನ ಗುರುತಿಗಾಗಿ ಹೇಳಿದೆ ಎಂದು ಪೂರ್ವಪಕ್ಷಿಯ ಭಾವ.

ಅಥವಾ 'ಚಿತ್ರಗುವನ್ನ ಕರೆದುಕೊಂಡು ಬಾ' ಎಂದರೆ ವಿಶೇಷಣವನ್ನು ಕರೆದು ಕೊಂಡು ಬರುವದರಲ್ಲಿ ವ್ಯಾಪೃತನಾಗುವದಿಲ್ಲ[1]. ಅದರಂತೆ ಇಲ್ಲಿಯೂ (ಎಂದು) ಬಂದೊದಗುತ್ತದೆ. ಆದ್ದರಿಂದ ಆ (ಶಂಕೆಯನ್ನು) ತೊಲಗಿಸುವದಕ್ಕಾಗಿ 'ಸರ್ವಕರ್ಮನು' ಎಂದು ಮುಂತಾದದ್ದನ್ನು ಮತ್ತೊಂದು ಸಲ ಹೇಳಿರುತ್ತದೆ ಆದ್ದರಿಂದ ಮನೋಮಯತ್ವಾದಿಗುಣವಿಶಿಷ್ಟನಾದ ಈಶ್ವರನನ್ನೇ ಧ್ಯಾನಮಾಡಬೇಕು[2]

ಆದ್ದರಿಂದಲೇ[3] ಆರನೆಯ ಏಳನೆಯ ಅಧ್ಯಾಯಗಳಲ್ಲಿ (ಮಾಡುವ ಹಾಗೆ) "ತತ್ತ್ವಮಸಿ" (ಅದೇ ನೀನಾಗಿರುವೆ, ೬-೮-೭), 'ಆತ್ಮೈವೇದಂ ಸರ್ವಮ್' (ಇದೆಲ್ಲವೂ ಆತ್ಮನೇ, ೭-೨೫-೨) ಎಂದು ಇಲ್ಲಿ ಸ್ವಾರಾಜ್ಯದಲ್ಲಿ ಅಭಿಷೇಕ ಮಾಡಿರುವದಿಲ್ಲ[4] 'ಇವನು ನನ್ನ ಆತ್ಮನು, ಇದು ಬ್ರಹ್ಮವು, ಇವನನ್ನು ಇಲ್ಲಿಂದ ಹೊರಟುಹೋದಬಳಿಕ ಸೇರಿಕೊಳ್ಳುವವನಾಗಿರುವೆನು' ಎಂಬ ಲಿಂಗದಿಂದ (ಹೀಗೆಂದು ಗೊತ್ತಾಗುತ್ತದೆ) ಇಷ್ಟೇ ಹೊರತು 'ಆತ್ಮ' ಎಂಬ ಶಬ್ದದಿಂದ (ನೇರಾಗಿ) ಪ್ರತ್ಯಗಾತ್ಮನನ್ನೇ ಹೇಳಿಲ್ಲ[5], ಏಕೆಂದರೆ ನನ್ನ ಎಂಬ ಷಷ್ಠೀ ವಿಭಕ್ತಿಯು ಸಂಬಂಧವೆಂಬ ಅರ್ಥವನ್ನು ತಿಳಿಸುತ್ತದೆ[6], 'ಇವನನ್ನು ಸೇರಿಕೊಳ್ಳುವವನಾಗಿರುವೆನು' ಎಂದು ಕರ್ಮಕರ್ತೃನಿರ್ದೇಶವೂ ಇಲ್ಲಿದೆ.[7]

---

1 'ರಾಜಪುರುಷನನ್ನು ಕರೆದುಕೊಂಡುಬಾ' ಎಂದರೆ ವಿಶೇಷಣವಾದ ರಾಜನನ್ನು ಕರೆತರುವದಕ್ಕೆ ಹೋಗುವದಿಲ್ಲ, ಅವನ ಭೃತ್ಯನನ್ನು ಮಾತ್ರ ಕರೆಯುವದಕ್ಕೆ ಹೋಗುತ್ತಾರೆ, ಇದರಂತೆ ಚಿತ್ರಗುವನ್ನು ಕರದುಕೊಂಡುಬಾ ಎಂದರೂ ಹಂಡಹಸುವನ್ನು ತರುವದಕ್ಕೆ ಹೋಗುವದಿಲ್ಲ, ಹಸುವಿನ ಒಡೆಯನನ್ನೇ ಕರೆತರುವದಕ್ಕೆ ಹೋಗುತ್ತಾರೆ

2. ಹೀಗೆಂದು ವಿಧಿಸುವದಕ್ಕಾಗಿಯೇ ಮತ್ತೊಮ್ಮೆ ಗುಣಗಳನ್ನು ಇಲ್ಲಿ ಹೇಳಿವೆ ಎಂದಭಿಪ್ರಾಯ.

3. ಸಗುಣಬ್ರಹ್ಮವನ್ನು ವಿಧಿಸುವದರಿಂದಲೇ.

4 'ಅದು ನೀನಾಗಿರುವೆ' ಎಂದರೆ ಈಗಲೇ ಆಗಿರುವೆ ಎಂದು ಅಭಿಪ್ರಾಯ, ಮುಂದೆ ಸತ್ತಬಳಿಕ ಆಗುವೆಯೆಂದಲ್ಲ. 'ಇದೆಲ್ಲವೂ ಆತ್ಮನೇ' ಎಂದರೆ ಈಗಲೇ ಆತ್ಮನು ಎಂದರ್ಥ, ಮುಂದೆ ಎಂದಾದರೂ ಆಗುವದು ಎಂದಲ್ಲ

5. ನಿರುಪಾಧಿಕನಾದ ಪ್ರತ್ಯಗಾತ್ಮನೇ ಪರಮಾತ್ಮನು, ಈ ಐಕ್ಯವನ್ನೇ ಇಲ್ಲಿ ಆತ್ಮನೆಂಬ ಶಬ್ದದಿಂದ ಪ್ರತಿಪಾದಿಸಿಲ್ಲ

6. ಆತ್ಮಶಬ್ದದಿಂದ ಪ್ರತ್ಯಗಾತ್ಮನನ್ನೇ ಹೇಳಿದ್ದರೆ 'ನನ್ನ ಆತ್ಮನು' ಎಂದು ಸಂಬಂಧ ವಾಚಕವಾದ ಷಷ್ಠೀವಿಭಕ್ತಿಯನ್ನು ಪ್ರಯೋಗಿಸುತ್ತಿರಲಿಲ್ಲ ಎಂದು ಭಾವ.

7. ಶರೀರವು ಬಿದ್ದಬಳಿಕ ಪರಮಾತ್ಮನನ್ನು ಸೇರುವೆ ಎಂದು ಜೀವನನ್ನು ಕರ್ತೃವಾಗಿಯೂ ಬ್ರಹ್ಮವನ್ನು ಪ್ರಾಪ್ತಿಕರ್ಮವನ್ನಾಗಿಯೂ ಹೇಳಿದೆ. ಆದ್ದರಿಂದ 'ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು' ಎಂದು ಬೃಹದಾರಣ್ಯಕದಲ್ಲಿ (ಬೃ. ೩-೭-೩) ಹೇಳಿರುವಂತೆ ನನ್ನ ಎಂಬ ಷಷ್ಠಿಯು ಗೌಣಾರ್ಥಕವೆಂದು ಕಲ್ಪಿಸುವದಕ್ಕೆ ಬರುವದಿಲ್ಲ.

(ಆಕ್ಷೇಪ)·- ಆರನೆಯ (ಅಧ್ಯಾಯ)ದಲ್ಲಿಯೂ "ಆಗಲಿ ಸೇರಿಕೊಳ್ಳುವೆ" (೬-೧೪-೨) ಎಂದು ಕಾಲವ್ಯವಧಾನವನ್ನು ಹೇಳಿದೆಯಲ್ಲ! 1

(ಪರಿಹಾರ) :- ಹಾಗಲ್ಲ ಏಕೆಂದರೆ ಪ್ರಾರಬ್ಧ(ಕರ್ಮದ) ಸಂಸ್ಕಾರದ ಶೇಷವು ಇರುತ್ತದೆ ಎಂಬುದರಲ್ಲಿ ತಾತ್ಪರ್ಯವಿರುವದರಿಂದ ಕಾಲವ್ಯವಧಾನವೆಂಬ ರ್ಥವು (ಆ ವಾಕ್ಯ)ಕ್ಕಿಲ್ಲ 2 ಹೀಗಿಲ್ಲದಿದ್ದರೆ 'ಅದೇ ನೀನಾಗಿರುವೆ' (೬-೮-೭) ಎಂಬೀ ಅರ್ಥವು ಬಾಧಿತವಾಗಬೇಕಾದೀತು. 3 ಆತ್ಮಶಬ್ದಕ್ಕೆ ಪ್ರತ್ಯಗಾತ್ಮನೇ (ಮುಖ್ಯವಾದ) ಅರ್ಥವೆಂಬದೂ, (ಇಲ್ಲಿ) 'ಇದೆಲ್ಲವೂ ಬ್ರಹ್ಮವೇ' ಎಂದು ಪ್ರಕೃತ ವಾಗಿರುವದೂ 'ಹೃದಯದೊಳಗಿರುವ ಇವನು ನನ್ನ ಆತ್ಮನು, ಇದೇ ಬ್ರಹ್ಮವು' ಎಂದೂ ಹೇಳಿದೆಯೆಂಬುದೂ(ನಿಜ), ಆದರೂ ಒಂದಿಷ್ಟು ವ್ಯವಧಾನವನ್ನೂ ಬಿಡದೆ (ಇಟ್ಟುಕೊಂಡೇ) 'ಈ ಆತ್ಮನನ್ನು ಈ ಶರೀರದಿಂದ ಹೊರಟುಹೋಗಿ ಸೇರುವವ ನಿರುವೆನು' ಎಂದು ಹೇಳಿರುತ್ತದೆ 4

## ಸಾಕ್ಷಾತ್ಕಾರವು ಫಲಪ್ರಾಪ್ತಿಗೆ ಅವಶ್ಯ

(ಭಾಷ್ಯ)

೨೫೭. ಯಥಾಕ್ರತುರೂಪಸ್ಯ ಆತ್ಮನಃ ಪ್ರತಿಪತ್ತಾಸ್ಮಿ ಇತಿ ಯಸ್ಯೈವಂ ವಿದಃ ಸ್ಯಾತ್ ಭವೇತ್ ಅದ್ಧಾ ಸತ್ಯಮ್ ಏವಮಹಂ ಪ್ರೇತ್ಯ ಏವಂ ನ ಸ್ಯಾಮ್ ಇತಿ ನ ಚ ವಿಚಿಕಿತ್ಸಾ ಅಸ್ತಿ ಇತಿ ಏತಸ್ಮಿನ್ನರ್ಥೇ ಕ್ರತುಫಲಸಂಬನ್ಧೇ ಸ

---

1. ಶರೀರವು ಬಿದ್ದಬಳಿಕ ಪರಮಾತ್ಮನನ್ನು ಸೇರುವೆ ಎಂದು ಅಲ್ಲಿಯೂ ಕಾಲಾಂತರ ದಲ್ಲಿಯೇ ಆತ್ಮಪ್ರಾಪ್ತಿಯನ್ನು ಹೇಳಿದೆಯಲ್ಲ! ಆದ್ದರಿಂದ ಮೋಕ್ಷವು ಕಾಲಾಂತರಪ್ರಾಪ್ಯವೆಂದೇ ಆಗಲಿ! -ಎಂದು ಭಾವ.

2 ಪ್ರಾರಬ್ಧಕರ್ಮಸಂಸ್ಕಾರವು ಕೆಲವು ಕಾಲವಿರುತ್ತದೆಯಾದರೂ ಜ್ಞಾನಿಗೆ ಮತ್ತೂ ದೇಹಾಂತರಪ್ರಾಪ್ತಿಯಿಲ್ಲ, ಏಕೆಂದರೆ ಅವನು ಪರಮಾತ್ಮನೇ ಆಗಿರುತ್ತಾನೆ ಎಂಬುದರಲ್ಲಿ ಶ್ರುತಿಗೆ ತಾತ್ಪರ್ಯ. ಆದ್ದರಿಂದ ಅದೇ ಶ್ರುತಿಗೆ ಕಾಲಾಂತರದಲ್ಲಿ ಮುಕ್ತಿಯನ್ನು ಹೇಳುವದರಲ್ಲಿ ತಾತ್ಪರ್ಯವಿರಲಾರದು. ಈ ಪ್ರಾರಬ್ಧಸಂಸ್ಕಾರವೂ ಜ್ಞಾನಬಾಧಿತವಾಗಿಯೇ ಇರುತ್ತದೆ ಎಂಬು ದಕ್ಕೆ ಸೂ. ಭಾ ೪-೧-೧೫ (ಭಾ. ಭಾ ೫೩೨)ನ್ನು ನೋಡಿ.

3. ಆದರೆ 'ತತ್ತ್ವಮಸಿ' ಎಂದು ತಾತ್ಪರ್ಯದಿಂದ ಶ್ರುತಿಯು ಮತ್ತೆಮತ್ತೆ ಹೇಳು ತ್ತದೆ, ಆದ್ದರಿಂದ ಈ ವಾಕ್ಯವನ್ನು ಕಾಲಾಂತರಮುಕ್ತಿಪರವೆಂದು ಹೇಳಿ ಆ ವಾಕ್ಯದರ್ಥ ವನ್ನು ಬಾಧಿಸುವದು ಯುಕ್ತವಲ್ಲ

4. ಇದರಲ್ಲಿಯೇ ಶ್ರುತಿಗೆ ತಾತ್ಪರ್ಯವಿದೆಯಾದ್ದರಿಂದ ಹಿಂದೆ ಹೇಳಿರುವ ಆತ್ಮ, ಬ್ರಹ್ಮ- ಮುಂತಾದ ಶಬ್ದಗಳು ಮುಖ್ಯಾರ್ಥವನ್ನು ಪ್ರತಿಪಾದಿಸುವದಕ್ಕೆ ಬಂದಿಲ್ಲವೆಂದು ಹೇಳ ಬೇಕಾಗುತ್ತದೆ ಆದ್ದರಿಂದ ಕ್ರಮಮುಕ್ತಿಯಿಂದ ಪಡೆಯಬೇಕಾಗಿರುವ ಪರಮಾತ್ಮನನ್ನೇ ಆತ್ಮ, ಬ್ರಹ್ಮ ಎಂಬ ಶಬ್ದಗಳಿಂದ ಹೇಳಿದೆಯೆಂದೂ ಸೂಕ್ಷ್ಮಶರೀರವಿಶಿಷ್ಟಜೀವನೇ ಆ ಪರ ಮಾತ್ಮನನ್ನು ಕಾಲಾಂತರದಲ್ಲಿ ಸೇರುತ್ತಾನೆಂದು ಹೇಳಿದೆ ಎಂದೂ ಕಲ್ಪಿಸಬೇಕು ಎಂದಭಿಪ್ರಾಯ.

ತಥೈವ ಈಶ್ವರಭಾವಂ ಪ್ರತಿಪದ್ಯತೇ ವಿದ್ವಾನ್ ಇತ್ಯೇತದಾಹ ಸ್ಮ ಉಕ್ತವಾನ್ ಕಿಲ ಶಾಣ್ಡಿಲ್ಯೋ ನಾಮ ಋಷಿಃ । ದ್ವಿರಭ್ಯಾಸ ಆದರಾರ್ಥಃ ॥

(ಭಾಷ್ಯಾರ್ಥ)

ಕ್ರತುವಿಗೆ ಅನುರೂಪವಾಗಿರುವ ಆತ್ಮನನ್ನು ಸೇರುವವನಾಗಿದೇನೆ ಎಂದು ಹೀಗೆ ಉಪಾಸನೆಮಾಡಿರುವ ಯಾವನಿಗೆ ಸತ್ಯವಾಗಿಯೂ ನಾನು (ಇಲ್ಲಿಂದ) ಹೋದ ಬಳಿಕ ಹೀಗೆ ಆಗಿಯೇತೀರುವೆನು ಎಂಬ (ನಿಶ್ಚಯವಿರುವದೋ), ಆಗದೆ ಇರಲೂಬಹುದು ಎಂಬ ಸಂಶಯವೂ ಇರುವದಿಲ್ಲವೋ, (ಅವನಿಗೇ ಈ ಫಲವು) ಎಂದು ಈ ಕ್ರತುಫಲಸಂಬಂಧವಿಷಯದಲ್ಲಿ, ಆ (ಉಪಾಸಕನು) ಹಾಗೆಯೇ ಈಶ್ವರಸ್ವರೂಪವನ್ನು ಹೊಂದುವನು ಎಂಬುದನ್ನು, ಶಾಂಡಿಲ್ಯನೆಂಬ ಋಷಿಯು (ಆಹ ಸ್ಮ=ಉಕ್ತವಾನ್ ಕಿಲ) ಹೇಳಿದನಂತೆ. (ಶಾಂಡಿಲ್ಯ ಎಂಬ ಮಾತನ್ನು) ಎರಡು ಸಲ ಹೇಳಿರುವದು ಆದರಕ್ಕಾಗಿ.

---

# ಮೂರನೆಯ ಅಧ್ಯಾಯ–ಹದಿನೈದನೆಯ ಖಂಡ

( ಪುತ್ರನ ಆಯುಸ್ಸಿಗಾಗಿ ಉಪಾಸನೆ )

## ಕೋಶವಿಜ್ಞಾನ

(ಉಪನಿಷತ್ತು)

**ಅನ್ತರಿಕ್ಷೋದರಃ ಕೋಶೋ ಭೂಮಿಬುಧ್ನೋ ನ ಜೀರ್ಯತಿ ದಿಶೋ ಹ್ಯಸ್ಯ ಸ್ರಕ್ತಯೋ ದ್ಯೌರಸ್ಯೋತ್ತರಂ ಬಿಲಗ್ಂ ಸ ಏಷ ಕೋಶೋ ವಸುಧಾನಸ್ತಸ್ಮಿನ್ ವಿಶ್ವಮಿದಗ್ಂ ಶ್ರಿತಮ್ ॥೧॥**

೧. ಅಂತರಿಕ್ಷವೇ ಉದರವೂ ಭೂಮಿಯೇ ತಳವೂ ಆಗಿರುವ ಕೋಶವು ಹಳತಾಗುವದಿಲ್ಲ. ದಿಕ್ಕುಗಳು ಇದರ ಸ್ರಕ್ತಿಗಳು, ದ್ಯುಲೋಕವು ಇದರ ಮೇಲಿನ ಬಿಲವು, ಆ ಈ ಕೋಶವು ವಸುಧಾನವು. ಅದರಲ್ಲಿ ಇವೆಲ್ಲವೂ ಶ್ರಿತವಾಗಿರುತ್ತದೆ.

### ಗ್ರಂಥಸಂಬಂಧ

(ಭಾಷ್ಯ)

೨೫೬. ಅಸ್ಯ ಕುಲೇ ವೀರೋ ಜಾಯತೇ ಇತ್ಯುಕ್ತಮ್ । ನ ವೀರಜನ್ಮಮಾತ್ರಂ ಪಿತುಸ್ತ್ರಾಣಾಯ । "ತಸ್ಮಾತ್ ಪುತ್ರಮನುಶಿಷ್ಟಂ ಲೋಕ್ಯಮಾಹುಃ" (ಬೃ. ೧-೫-೧೭) ಇತಿ ಶ್ರುತ್ಯನ್ತರಾತ್ । ಅತಃ ತದ್ದೀರ್ಘಾಯುಷ್ಟ್ವಂ ಕಥಂ

ಸ್ಯಾತ್ ಇತ್ಯೇವಮರ್ಥಂ ಕೋಶವಿಜ್ಞಾನಾರಮ್ಭಃ । ಅಭ್ಯರ್ಹಿತವಿಜ್ಞಾನ ವ್ಯಾಸಙ್ಗಾತ್ ಅನನ್ತರಮೇವ ನೋಕ್ತಮ್ । ತದಿದಾನೀಮೇವ ಆರಭ್ಯತೇ ॥

(ಭಾಷ್ಯಾರ್ಥ)

'ಇವನ ಕುಲದಲ್ಲಿ ವೀರನು ಹುಟ್ಟುತ್ತಾನೆ' (೨-೧೩-೬) ಎಂದು (ಹಿಂದೆ) ಹೇಳಿದೆಯಷ್ಟೆ, ವೀರನು ಹುಟ್ಟಿದಮಾತ್ರಕ್ಕೆ ತಂದೆಯನ್ನು ಕಾಪಾಡಿದಂತಾಗುವದಿಲ್ಲ ಏಕೆಂದರೆ, "ಆದ್ದರಿಂದ ಅನುಶಾಸನವನ್ನು ಮಾಡಿಸಿಕೊಂಡಿರುವ ಮಗನೇ ಲೋಕ್ಯನು ಎನ್ನುತ್ತಾರೆ"[1] (ಬೃ ೧-೫-೧೭) ಎಂದು ಮತ್ತೊಂದು ಶ್ರುತಿ (ಹೇಳುತ್ತದೆ) ಆದ್ದರಿಂದ ಅವನು ದೀರ್ಘಾಯುಸ್ಸುಳ್ಳವನಾಗಿರುವದಕ್ಕೆಂದು[2] ಕೋಶವಿಜ್ಞಾನವನ್ನು ಪ್ರಾರಂಭಿಸಲಾಗುತ್ತದೆ. ಹೆಚ್ಚು ಪೂಜ್ಯವಾದ (ವಿಷಯದ) ವಿಜ್ಞಾನದ ಪ್ರಸಂಗದಿಂದ ಆ ಕೂಡಲೆ ಹೇಳಲಿಲ್ಲ,[3] ಆದ್ದರಿಂದ ಈಗಲೇ ಅದನ್ನು (ಹೇಳುವದಕ್ಕೆ) ಪ್ರಾರಂಭಿಸಿದೆ.

## ಕೋಶದ ವಿವರ

(ಭಾಷ್ಯ)

೨೫. ಅನ್ತರಿಕ್ಷಮ್ ಉದರಮ್, ಅನ್ತಃಸುಷಿರಂ ಯಸ್ಯ ಸೋಽಯಮ್ ಅನ್ತರಿಕ್ಷೋದರಃ ಕೋಶಃ ಕೋಶ ಇವ । ಅನೇಕಕೋಶ[4]ಧರ್ಮಸಾದೃಶ್ಯಾತ್ ಕೋಶಃ । ಸ ಚ ಭೂಮಿಬುಧ್ನೋ ಭೂಮಿಃ ಬುಧ್ನೋ ಮೂಲಂ ಯಸ್ಯ ಸ ಭೂಮಿಬುಧ್ನಃ । ನ ಜೀರ್ಯತಿ ನ ವಿನಶ್ಯತಿ । ತ್ರೈಲೋಕ್ಯಾತ್ಮಕತ್ವಾತ್ ಸಹಸ್ರಯುಗಕಾಲಾವಸ್ಥಾಯೀ ಹಿ ಸಃ । ದಿಶೋ ಹಿ ಅಸ್ಯ ಸರ್ವಾ ಸ್ರಕ್ತಯಃ ಕೋಣಾಃ । ದ್ಯೌಃ ಅಸ್ಯ ಕೋಶಸ್ಯ ಉತ್ತರಮ್ ಊರ್ಧ್ವಂ ಬಿಲಮ್ । ಸ ಏಷ ಯಥೋಕ್ತಗುಣಃ ಕೋಶಃ ವಸುಧಾನಃ । ವಸು ಧೀಯತೇಽಸ್ಮಿನ್ ಪ್ರಾಣಿನಾಂ ಕರ್ಮಫಲಾಖ್ಯಮ್ ಅತೋ ವಸುಧಾನಃ । ತಸ್ಮಿನ್ ಅನ್ತರ್ವಿಶ್ವಂ ಸಮಸ್ತಂ ಪ್ರಾಣಿಕರ್ಮಫಲಂ ಸಹ ತತ್ಸಾಧನೈಃ ಇದಂ ಯದ್ ಗೃಹ್ಯತೇ ಪ್ರತ್ಯಕ್ಷಾದಿಪ್ರಮಾಣೈಃ ಶ್ರಿತಮ್ ಆಶ್ರಿತಂ ಸ್ಥಿತಮ್ ಇತ್ಯರ್ಥಃ ॥

---

1. ಮಾಡಬೇಕಾದ ಕರ್ತವ್ಯಗಳನ್ನು ತಂದೆಯಿಂದ ಕಲಿತುಕೊಂಡವನೇ ತಂದೆಗೆ ಉತ್ತಮಲೋಕಗಳನ್ನು ಕೊಡಿಸುತ್ತಾನೆ ಎಂದರ್ಥ.

2. ದೀರ್ಘಾಯುಸ್ಸಿದ್ದರಲ್ಲವೆ, ಅವನಿಗೆ ಅನುಶಾಸನವು ದೊರಕುವದು ? ಆದ್ದರಿಂದ ಅದಕ್ಕಾಗಿ ದೀರ್ಘಾಯುಸ್ಸಿಗೆ ಇಲ್ಲಿ ಉಪಾಸನೆಯನ್ನು ಹೇಳಿದೆ.

3. ಬ್ರಹ್ಮೋಪಾಸನೆಯು ಪೂಜ್ಯವಾದದ್ದು, ಆದ್ದರಿಂದ ಗಾಯತ್ರೀಬ್ರಹ್ಮೋಪಾಸನೆಯೇ ಮುಂತಾದದ್ದನ್ನು ಹೇಳುವದರಲ್ಲಿ ವ್ಯಗ್ರವಾಗಿದ್ದದ್ದರಿಂದ ವೀರಪುತ್ರನು ಹುಟ್ಟುತ್ತಾನೆ -ಎಂದು ಹೇಳಿದಕೂಡಲೆ ಹೇಳಲಿಲ್ಲ- ಎಂದರ್ಥ.

4. 'ಅನೇಕಧರ್ಮ' ಎಂಬ ಪಾಠಕ್ಕಿಂತ ಇದೇ ಮೇಲು.

(ಭಾಷ್ಯಾರ್ಥ)

ಯಾವದಕ್ಕೆ ಅಂತರಿಕ್ಷವು ಉದರವೋ, ಒಳಗಿನ ಪೊಳ್ಳೋ, ಆ ಇದು ಅಂತರಿಕ್ಷೋದರವಾದ ಕೋಶವು ; ಕೋಶದಂತಿರುವದು (ಎಂದರ್ಥ) ಅನೇಕ ಕೋಶಧರ್ಮಗಳ ಹೋಲಿಕೆಯಿರುವದರಿಂದ (ಅದು) ಕೋಶ(ವೆನಿಸಿದೆ)[1] ಆ (ಕೋಶವು) ಭೂಮಿಬುಧ್ನವು, ಭೂಮಿಯೇ ಬುಧ್ನವು ಎಂದರೆ ತಳವಾಗಿರುವದರಿಂದ ಭೂಮಿಬುಧ್ನವು[2] (ಅದು) ಹಳತಾಗುವದಿಲ್ಲ, ತ್ರೈಲೋಕ್ಯಸ್ವರೂಪವಾಗಿರುವದರಿಂದ ನಾಶವಾಗುವದಿಲ್ಲ.[3] (ಅದು) ಸಾವಿರ ಯುಗಗಳವರೆಗೆ ಇರತಕ್ಕದ್ದಲ್ಲವೆ?[4] ಈ (ಕೋಶಕ್ಕೆ) ಎಲ್ಲಾ ದಿಕ್ಕುಗಳೇ ಸ್ರಕ್ತಿಗಳು, ಮೂಲೆಗಳು ದ್ಯುಲೋಕವು ಇದರ ಮೇಲಿನ ಬಿಲವು ಈ ಹೇಳಿದ ಗುಣಗಳುಳ್ಳ ಕೋಶವು ವಸುಧಾನವು, ಪ್ರಾಣಿಗಳ ಕರ್ಮಫಲವೆಂಬ ಹಣವು ಇದರಲ್ಲಿ ಇಡಲ್ಪಡುವದರಿಂದ (ಇದು) ವಸುಧಾನವು ಇದರ ಒಳಗೆ ಎಲ್ಲವೂ ಎಂದರೆ ಪ್ರಾಣಿಕರ್ಮಫಲವೂ ಅದರ ಸಾಧನವೂ ನಹ ಪ್ರತ್ಯಕ್ಷಾದಿಪ್ರಮಾಣಗಳಿಂದ ತಿಳಿಯಬರುವ ಈ ಎಲ್ಲವೂ ಶ್ರಿತವಾಗಿದೆ, ಆಶ್ರಯಿಸಿಕೊಂಡಿರುತ್ತದೆ, (ಇದರೊಳಗ) ಇದ್ದುಕೊಂಡಿರುತ್ತದೆ[5]

(ಉಪನಿಷತ್ತು)

**ತಸ್ಯ ಪ್ರಾಚೀ ದಿಗ್ಜುಹೂರ್ನಾಮ ಸಹಮಾನಾ ನಾಮ ದಕ್ಷಿಣಾ ರಾಜ್ಞೀ ನಾಮ ಪ್ರತೀಚೀ ಸುಭೂತಾ ನಾಮೋದೀಚೀ ತಾಸಾಂ ವಾಯುರ್ವತ್ಸಃ ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದಗ್ಂ ರೋದಿತಿ ಸೋಽಹಮೇತಮೇವಂ ವಾಯುಂ ದಿಶಾಂ ವತ್ಸಂ ವೇದ ಮಾ ಪುತ್ರರೋದಗ್ಂ ರುದಮ್ ॥ ೨ ॥**

೨. ಅದರ ಪೂರ್ವದಿಕ್ಕಿಗೆ ಜುಹೂ ಎಂದು ಹೆಸರು ; ದಕ್ಷಿಣ (ದಿಕ್ಕಿಗೆ) ಸಹಮಾನಾ ಎಂದು ಹೆಸರು ; ಪಶ್ಚಿಮ(ದಿಕ್ಕಿಗೆ) ರಾಜ್ಞೀ ಎಂದು ಹೆಸರು ; ಉತ್ತರ(ದಿಕ್ಕಿಗೆ) ಸುಭೂತಾ ಎಂದು ಹೆಸರು. ಅವುಗಳಿಗೆ ವಾಯುವು ಮಗು. ಯಾವನು ಹೀಗೆ ಈ ವಾಯುವನ್ನು

---

1. ತ್ರೈಲೋಕ್ಯವನ್ನು ಕೋಶವೆಂದು ಚಿಂತಿಸಬೇಕು ಎಂದರ್ಥ.
2. ಭೂಮಿಯೇ ಈ ಕೋಶದ ತಳವು ಎಂದು ಚಿಂತಿಸಬೇಕು.
3. ಬಹುಕಾಲವಿರತಕ್ಕದ್ದು ಎಂದು ಚಿಂತಿಸಬೇಕು
4. ಒಂದು ಕಲ್ಪದವರೆಗೂ ಇರತಕ್ಕದ್ದು.
5. ಕೋಶದಲ್ಲಿ ಧನವು ತುಂಬಿರುವಂತೆ ಸಾಧ್ಯಸಾಧನಗಳೆಲ್ಲವೂ ಈ ತ್ರೈಲೋಕ್ಯಕೋಶದಲ್ಲಿ ತುಂಬಿರುತ್ತವೆ ಎಂದು ಚಿಂತಿಸಬೇಕು

ಅವುಗಳ ಮಗುವೆಂದು ಅರಿತುಕೊಳ್ಳುವನೋ ಅವನು ಪುತ್ರರೋದವನ್ನು ಅಳುವದಿಲ್ಲ. ಆ ನಾನು ಹೀಗೆ ಈ ವಾಯುವು ದಿಕ್ಕುಗಳ ಮಗುವೆಂದು ಅರಿತುಕೊಂಡಿರುವೆನು; ನಾನು ಪುತ್ರರೋದವನ್ನು ಅಳದಂತಾಗಲಿ!

## ಕೋಶದಿಗ್ವತ್ಸವಿಜ್ಞಾನವೂ ಅದರ ಫಲವೂ

(ಭಾಷ್ಯ)

೨೬೦ ತಸ್ಯಾಸ್ಯ ಪ್ರಾಚೀ ದಿಕ್ ಪ್ರಾಗ್ಗತೋ ಭಾಗೋ ಜುಹೂರ್ನಾಮ । ಜುಹ್ವತಿ ಅಸ್ಯಾಂ ದಿಶಿ ಕರ್ಮಿಣಃ ಪ್ರಾಙ್ಮುಖಾಃ ಸನ್ತಃ ಇತಿ ಜುಹೂರ್ನಾಮ । ಸಹಮಾನಾ ನಾಮ ಸಹನ್ತೇ ಅಸ್ಯಾಂ ಪಾಪಕರ್ಮಫಲಾನಿ ಯಮಪುರ್ಯಾಂ ಪ್ರಾಣಿನಃ ಇತಿ ಸಹಮಾನಾ ನಾಮ ದಕ್ಷಿಣಾ ದಿಕ್ । ತಥಾ ರಾಜ್ಞೀ ನಾಮ ಪ್ರತೀಚೀ ಪಶ್ಚಿಮಾ ದಿಕ್ ರಾಜ್ಞೀ ರಾಜ್ಞಾ ವರುಣೇನ ಅಧಿಷ್ಠಿತಾ । ಸಂಧ್ಯಾರಾಗಯೋಗಾದ್ ವಾ । ಸುಭೂತಾ ನಾಮ ಭೂತಿಮದ್ಭಿಃ ಈಶ್ವರಕುಬೇರಾದಿಭಿರಧಿಷ್ಠಿತತ್ವಾತ್ ಸುಭೂತಾ ನಾಮ ಉದೀಚೀ । ತಾಸಾಂ ದಿಶಾಂ ವಾಯುರ್ವತ್ಸಃ । ದಿಗ್ಜತ್ವಾದ್ ವಾಯೋಃ । ಪುರೋವಾತ ಇತ್ಯಾದಿದರ್ಶನಾತ್ । ಸ ಯಃ ಕಶ್ಚಿತ್ ಪುತ್ರದೀರ್ಘಜೀವಿತಾರ್ಥೀ ಏವಂ ಯಥೋಕ್ತಗುಣಂ ವಾಯುಂ ದಿಶಾಂ ವತ್ಸಮ್ ಅಮೃತಂ ವೇದ ಸ ನ ಪುತ್ರರೋದಂ ಪುತ್ರನಿಮಿತ್ತಂ ರೋದನಂ ನ ರೋದಿತಿ । ಪುತ್ರೋ ನ ಮ್ರಿಯತ ಇತ್ಯರ್ಥಃ । ಯತ ಏವಂವಿಶಿಷ್ಟಂ ಕೋಶದಿಗ್ವತ್ಸವಿಷಯಂ ವಿಜ್ಞಾನಮ್ ಅತಃ ಸೋಽಹಂ ಪುತ್ರಜೀವಿತಾರ್ಥೀ । ಏವಮೇತಂ ವಾಯುಂ ದಿಶಾಂ ವತ್ಸಂ ವೇದ ಜಾನೇ । ಅತೋ ಮಾ ಪುತ್ರರೋದಂ ಮಾ ರುದಮ್ । ಪುತ್ರಮರಣನಿಮಿತ್ತಂ ಪುತ್ರರೋದೋ ಮಮ ಮಾ ಭೂತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಈ (ಕೋಶದ) ಪೂರ್ವದಿಕ್ಕಿಗೆ ಪೂರ್ವದಲ್ಲಿರುವ ಭಾಗಕ್ಕೆ 'ಜುಹೂ' ಎಂದು ಹೆಸರು, ಕರ್ಮಿಗಳು ಈ ದಿಕ್ಕಿನಲ್ಲಿ ಪೂರ್ವಾಭಿಮುಖರಾಗಿ ಹೋಮ ಮಾಡುತ್ತಾರಾದ್ದರಿಂದ (ಇದಕ್ಕೆ) ಜುಹೂ ಎಂದು ಹೆಸರು. ದಕ್ಷಿಣದಿಕ್ಕಿಗೆ ಸಹಮಾನಾ ಎಂದು ಹೆಸರು. ಈ (ದಿಕ್ಕಿ)ನಲ್ಲಿ ಯಮಪುರಿಯಲ್ಲಿ ಪ್ರಾಣಿಗಳು ಪಾಪಕರ್ಮದ ಫಲಗಳನ್ನು ಸಹಿಸುತ್ತಾರಾದ್ದರಿಂದ[1] (ಇದಕ್ಕೆ) 'ಸಹಮಾನಾ' ಎಂದು ಹೆಸರು ಇದರಂತೆ ಪ್ರತೀಚಿಗೆ ಪಶ್ಚಿಮದಿಕ್ಕಿಗೆ ರಾಜ್ಞೀ ಎಂದು ಹೆಸರು ರಾಜನಾದ ವರುಣನು (ಅದನ್ನು) ಆಳುತ್ತಾನಾದ್ದರಿಂದ, ಅಥವಾ (ಅದಕ್ಕೆ)

---

1. ಅನುಭವಿಸುತ್ತಾರಾದ್ದರಿಂದ 'ಸಹಮಾನಾ'.

ಸಂಧ್ಯಾರಾಗದ ಸಂಬಂಧವಿರುವದರಿಂದ (ಇದು 'ರಾಜ್ಞೀ').[1] ಉತ್ತರದಿಕ್ಕಿಗೆ ಸುಭೂತಾ ಎಂದು ಹೆಸರು ; ಭೂತಿಯುಳ್ಳ ಈಶ್ವರ, ಕುಬೇರ- ಮುಂತಾದವರು ಆಳುತ್ತಾರಾದ್ದರಿಂದ (ಅದು) ಸುಭೂತಾ (ಎನಿಸಿದೆ).

ಆ ದಿಕ್ಕುಗಳಿಗೆ ವಾಯುವು ಮಗು, ಏಕೆಂದರೆ ವಾಯು ದಿಕ್ಕುಗಳಲ್ಲಿ ಹುಟ್ಟುತ್ತದೆ, 'ಪುರೋವಾತ' ಎಂದುಮುಂತಾಗಿ[2] (ಪ್ರಯೋಗವು) ಕಂಡುಬರುವದರಿಂದ (ಹೀಗೆಂದು ತಿಳಿಯಬೇಕು).

ಪುತ್ರನು ದೀರ್ಘಕಾಲ ಬದುಕಿರಬೇಕೆಂದು ಬಯಸುವವನು ಯಾವನು ಮೇಲೆ ಹೇಳಿರುವಂಥ ಗುಣವುಳ್ಳ ವಾಯುವು ದಿಕ್ಕುಗಳ ಅಮೃತವಾದ ಮಗುವೆಂದು ಅರಿತುಕೊಂಡಿರುವನೋ[3] ಅವನು ಪುತ್ರರೋದವನ್ನು, ಮಗನ ನಿಮಿತ್ತವಾದ ಅಳುವನ್ನು, ಅಳುವದಿಲ್ಲ, (ಅವನ) ಮಗನು ಸಾಯುವದಿಲ್ಲ[4] ಎಂದರ್ಥ. ಕೋಶದ, ದಿಕ್ಕುಗಳ, ಮಗುವಿನ ವಿಷಯದ ವಿಜ್ಞಾನವು ಇಂಥ ವಿಶಿಷ್ಟ(ಫಲದ್ದಾ)ಗಿರುವದಷ್ಟೆ, ಆದ್ದರಿಂದ ಮಗನು (ಬಹುಕಾಲ) ಬದುಕಿರಬೇಕೆಂಬ ಇಚ್ಛೆಯುಳ್ಳ ನಾನು ಈ ವಾಯುವನ್ನು ದಿಕ್ಕುಗಳ ಮಗುವೆಂದು (ವೇದ= ಜಾನೇ) ಉಪಾಸನೆ ಮಾಡಿರುತ್ತೇನೆ. ಆದ್ದರಿಂದ (ನಾನು) ಪುತ್ರರೋದವನ್ನು ಅಳದೆ ಇರುವಂತಾಗಲಿ ! ಮಗನ ಮರಣದ ನಿಮಿತ್ತವಾಗಿ ಅಳದಂತೆ ಆಗಲಿ ! ನನಗೆ ಪುತ್ರರೋದನವಾಗದಿರಲಿ ! ಎಂದರ್ಥ.

(ಉಪನಿಷತ್ತು)

**ಅರಿಷ್ಟಂ ಕೋಶಂ ಪ್ರಪದ್ಯೇಽಮುನಾಽಮುನಾಽಮುನಾ ಪ್ರಾಣಂ ಪ್ರಪದ್ಯೇಽಮುನಾಽಮುನಾಽಮುನಾ ಭೂಃ ಪ್ರಪದ್ಯೇಽಮುನಾಽಮುನಾಽಮುನಾ ಭುವಃ ಪ್ರಪದ್ಯೇಽಮುನಾಽಮುನಾಽಮುನಾ ಸ್ವಃ ಪ್ರಪದ್ಯೇಽಮುನಾಽಮುನಾಽಮುನಾ ॥೩॥**

---

1. ರಾಜನಿಂದ ಆಳಲ್ಪಟ್ಟಿರುವವರಿಂದ ಅಥವಾ ರಾಗದಿಂದ ಹೊಳೆಯುತ್ತದೆಯಾದ್ದರಿಂದ ರಾಜ್ಞೀ.

2. ಮುಂತಾಗಿ ಎಂದಿರುವದು ಹೀಗೆ ಲೌಕಿಕವೈದಿಕಪ್ರಯೋಗವಿದೆ ಎಂದು ತಿಳಿಸುವದಕ್ಕೆ ಎಂದು ಟೀಕೆ, ಪುರೋವಾತ, ಪಶ್ಚಿಮಾನಿಲ ಎಂದು ಮುಂತಾಗಿ ಗಾಳಿಯು ದಿಕ್ಕುಗಳಿಂದ ಬಂದದ್ದು ಎಂಬ ವ್ಯವಹಾರವಿದೆಯಾದ್ದರಿಂದ ವಾಯುವು ದಿಕ್ಕುಗಳಲ್ಲಿ ಹುಟ್ಟಿದ್ದೆಂದು ತಿಳಿಯಬೇಕು- ಎಂದು ಸರಳವಾಗಿ ಅರ್ಥವಾಗುತ್ತದೆ.

3. ವಾಯುವು ತ್ರೈಲೋಕ್ಯಕೋಶದ ಬೇರೆಬೇರೆಯ ಹೆಸರಿನ ದಿಕ್ಕುಗಳಲ್ಲಿ ಹುಟ್ಟಿರುವ ಅಮೃತವಾದ ಮಗು ಎಂದು ಉಪಾಸನೆಮಾಡುವನೋ ಎಂದರ್ಥ.

4 ಅಲ್ಪಾಯುಸ್ಸಿನಲ್ಲಿ ಸಾಯುವದಿಲ್ಲ ಎಂದರ್ಥ.

೩. ಅರಿಷ್ಟವಾದ ಕೋಶವನ್ನು ಶರಣುಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ! ಪ್ರಾಣವನ್ನು ಶರಣುಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ! ಭೂಃ ಎಂಬುವನ್ನು ಶರಣು ಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ! ಭುವಃ ಎಂಬುದನ್ನು ಶರಣುಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ! ಸ್ವಃ ಎಂಬುದನ್ನು ಶರಣುಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ!

## ಉಪಾಸನಾಂಗವಾದ ಜಪಮಂತ್ರಗಳು

(ಭಾಷ್ಯ)

೨೬೧. ಅರಿಷ್ಟಮ್ ಅವಿನಾಶಿನಂ ಕೋಶಂ ಯಥೋಕ್ತಂ ಪ್ರಪದ್ಯೇ ಪ್ರಪನ್ನೋಽಸ್ಮಿ ಪುತ್ರಾಯುಷೇ। ಅಮುನಾ, ಅಮುನಾ, ಅಮುನಾ ಇತಿ ತ್ರಿರ್ನಾಮ ಗೃಹ್ಣಾತಿ ಪುತ್ರಸ್ಯ। ತಥಾ ಪ್ರಾಣಂ ಪ್ರಪದ್ಯೇ ಅಮುನಾ, ಅಮುನಾ, ಅಮುನಾ। ಭೂಃ ಪ್ರಪದ್ಯೇ ಅಮುನಾ ಅಮುನಾ ಅಮುನಾ। ಭುವಃ ಪ್ರಪದ್ಯೇ ಅಮುನಾ ಅಮುನಾ ಅಮುನಾ। ಸ್ವಃ ಪ್ರಪದ್ಯೇ ಅಮುನಾ ಅಮುನಾ ಅಮುನಾ ಸರ್ವತ್ರ ಪ್ರಪದ್ಯೇ ಇತಿ ತ್ರಿರ್ನಾಮ ಗೃಹ್ಣಾತಿ ಪುನಃಪುನಃ ॥

(ಭಾಷ್ಯಾರ್ಥ)

ಅರಿಷ್ಟವಾದ ಎಂದರೆ ವಿನಾಶವಾಗದಿರುವ ಮೇಲೆ ಹೇಳಿರುವ ಕೋಶವನ್ನು ಶರಣುಹೊಕ್ಕಿರುವೆನು, ಪುತ್ರನ ಆಯುಸ್ಸಿಗಾಗಿ (ಕೋಶವನ್ನು) ಮರೆಹೊಕ್ಕಿದ್ದೇನೆ. 'ಇವನಿಂದ', 'ಇವನಿಂದ' 'ಇವನಿಂದ' ಎಂದು ಮೂರು ಸಲ ಪುತ್ರನ ನಾಮವನ್ನು ಗ್ರಹಣಮಾಡಬೇಕು ಇದರಂತೆ ಪ್ರಾಣವನ್ನು ಶರಣುಹೊಕ್ಕಿರುವೆನು ಇವನಿಂದ, ಇವನಿಂದ, ಇವನಿಂದ ಭೂಃ ಎಂಬಿವನ್ನು ಶರಣುಹೊಕ್ಕಿರುವೆನು 'ಇವನಿಂದ', 'ಇವನಿಂದ', 'ಇವನಿಂದ', ಭುವಃ ಎಂಬಿವನ್ನು ಶರಣುಹೊಕ್ಕಿರುವೆನು, 'ಇವನಿಂದ', 'ಇವನಿಂದ', 'ಇವನಿಂದ', ಸುವಃ ಎಂಬಿದನ್ನು ಶರಣುಹೊಕ್ಕಿರುವೆನು, ಇವನಿಂದ, ಇವನಿಂದ, ಇವನಿಂದ (ಈ) ಎಲ್ಲಾ ಕಡೆಯಲ್ಲಿಯೂ ಮೂರು ಸಲ ಮತ್ತೆಮತ್ತೆ ನಾಮಗ್ರಹಣವನ್ನು ಮಾಡಬೇಕು.[1]

(ಉಪನಿಷತ್ತು)

**ಸ ಯದವೋಚಂ ಪ್ರಾಣಂ ಪ್ರಪದ್ಯ ಇತಿ ಪ್ರಾಣೋ ವಾ ಇದಗ್ಂ ಸರ್ವಂ ಭೂತಂ ಯದಿದಂ ಕಿಂ ಚ ತಮೇವ ತತ್ಪ್ರಾಪತ್ಸಿ ॥ ೪ ॥**

---

1 ಮಗನ ಹೆಸರನ್ನು 'ಅಮುನಾ' ಎಂಬ ಸ್ಥಳದಲ್ಲಿ ಹೇಳಬೇಕು ಎಂದರ್ಥ.

**ಅಥ ಯದವೋಚಂ ಭೂಃ ಪ್ರಪದ್ಯ ಇತಿ ಪೃಥಿವೀಂ ಪ್ರಪದ್ಯೇಽ ನ್ತರಿಕ್ಷಂ ಪ್ರಪದ್ಯೇ ದಿವಂ ಪ್ರಪದ್ಯ ಇತ್ಯೇವ ತದವೋಚಮ್ ||೫|| ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನಿಂ ಪ್ರಪದ್ಯೇ ವಾಯುಂ ಪ್ರಪದ್ಯೇ ಆದಿತ್ಯಂಪ್ರಪದ್ಯ ಇತ್ಯೇವ ತದವೋಚಮ್|| ಅಥ ಯದವೋಚಗ್ಂ ಸ್ವಃ ಪ್ರಪದ್ಯ ಇತ್ಯೃಗ್ವೇದಂ ಪ್ರಪದ್ಯೇ ಯಜುರ್ವೇದಂ ಪ್ರಪದ್ಯೇ ಸಾಮವೇದಂ ಪ್ರಪದ್ಯೇ ಇತ್ಯೇವ ತದವೋಚಂ ತದವೋಚಮ್ || ೭ ||**

೪. ಆ (ನಾನು) 'ಪ್ರಾಣವನ್ನು ಶರಣುಹೊಕ್ಕಿರುವೆನು' ಎಂದೆನಷ್ಟೆ ? ಈ ಏನೇನಿದೆಯೋ ಇದೆಲ್ಲ ಪ್ರಾಣವೇ, ಅದನ್ನೇ ಹಾಗೆ ಶರಣುಹೊಕ್ಕೆನು.

೫. ಇನ್ನು 'ಭೂಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದೆನಷ್ಟೆ ? ಪೃಥಿವಿಯನ್ನು ಶರಣುಹೊಕ್ಕಿರುವೆನು, ಅಂತರಿಕ್ಷವನ್ನು ಶರಣುಹೊಕ್ಕಿರುವೆನು, ದ್ಯುಲೋಕವನ್ನು ಶರಣುಹೊಕ್ಕಿರುವೆನು- ಎಂದೇ ಹಾಗೆ ಹೇಳಿದೆನು.

೬. ಇನ್ನು 'ಭುವಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದೆನಷ್ಟೆ ? ಅಗ್ನಿಯನ್ನು ಶರಣುಹೊಕ್ಕಿರುವೆನು, ವಾಯುವನ್ನು ಶರಣುಹೊಕ್ಕಿರುವೆನು, ಆದಿತ್ಯನನ್ನು ಶರಣುಹೊಕ್ಕಿರುವೆನು- ಎಂದೇ ಹಾಗೆ ಹೇಳಿದೆನು.

೭. 'ಇನ್ನು ಸ್ವಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದೆನಷ್ಟೆ ? ಋಗ್ವೇದವನ್ನು ಶರಣುಹೊಕ್ಕಿರುವೆನು, ಯಜುರ್ವೇದವನ್ನು ಶರಣುಹೊಕ್ಕಿರುವೆನು, ಸಾಮವೇದವನ್ನು ಶರಣುಹೊಕ್ಕಿರುವೆನು- ಎಂದೇ ಹಾಗೆ ಹೇಳಿದೆನು, ಹಾಗೆ ಹೇಳಿದೆನು.

## ಜಪಮಂತ್ರಗಳ ವ್ಯಾಖ್ಯಾನ

(ಭಾಷ್ಯ)

೪-೭ ಸ ಯದವೋಚಂ ಪ್ರಾಣಂ ಪ್ರಪದ್ಯೇ ಇತಿ ವ್ಯಾಖ್ಯಾನಾರ್ಥಮ್ ಉಪನ್ಯಾಸಃ । ಪ್ರಾಣೋ ವಾ ಇದಂ ಸರ್ವಂ ಭೂತಂ ಯದಿದಂ ಜಗತ್ । "ಯಥಾ ವಾ ಅರಾ ನಾಭೌ" (೭-೧೫-೧) ಇತಿ ವಕ್ಷ್ಯತಿ । ಅತಸ್ತಮೇವ ಸರ್ವಂ ತತ್ತೇನ

ಪ್ರಾಣಪ್ರತಿಪಾದನೇನ ಪ್ರಾಪತ್ಸಿ ಪ್ರಪನ್ನೋಽಭೂವಮ್ । ತಥಾ[1] ಭೂಃ ಪ್ರಪದ್ಯ ಇತಿ ತ್ರೀನ್ ಲೋಕಾನ್ ಭೂರಾದೀನ್ ಪ್ರಪದ್ಯೇ ಇತಿ ತದವೋಚಮ್ । ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನ್ಯಾದೀನ್ ಪ್ರಪದ್ಯ ಇತಿ ತದವೋಚಮ್ । ಅಥ ಯದವೋಚಂ ಸ್ವಃ ಪ್ರಪದ್ಯ ಇತಿ ಋಗ್ವೇದಾದೀನ್ ಪ್ರಪದ್ಯೇ ಇತ್ಯೇವ ತದವೋಚಮಿತಿ । ಉಪದಿಷ್ಟಾನ್ ಮನ್ತ್ರಾನ್ ಜಪೇತ್ತತಃ ಪೂರ್ವೋಕ್ತಮ್ ಅಜರಂ ಕೋಶಂ ಸದಿಗ್ವತ್ಸಂ ಯಥಾವದ್ ಧ್ಯಾತ್ವಾ । ದ್ವಿರ್ವಚನಮ್ ಆದರಾರ್ಥಮ್ ॥

(ಭಾಷ್ಯಾರ್ಥ)

'ಆ (ನಾನು) ಪ್ರಾಣವನ್ನು ಶರಣುಹೊಕ್ಕಿರುವೆನು ಎಂದೆನಷ್ಟೆ' ಎಂದು (ಮತ್ತೆ) ಪ್ರಾರಂಭಿಸಿರುವದು (ಅದನ್ನು) ವಿವರಿಸುವದಕ್ಕಾಗಿ. ಇದೆಲ್ಲವೂ ಎಂದರೆ ಈ ಜಗತ್ತೆಂಬುದಿದೆಯಲ್ಲ, (ಅದು) ಪ್ರಾಣವೇ "ಹೇಗೆ ಹಾರೆಕೋಲುಗಳು " (ಛಾಂ ೭-೨೩-೧) ಎಂದು ಮುಂದೆ ಹೇಳಲಾಗುವದು ಆದ್ದರಿಂದ ಆ ಸರ್ವವಾದ (ಪ್ರಾಣ)ವನ್ನೇ ಹಾಗೆ ಆ ಪ್ರಾಣವಾಕ್ಯದಿಂದ ಶರಣುಹೊಕ್ಕೆನು, ಶರಣುಹೋದವನಾದೆನು

ಹೀಗೆಯೇ 'ಭೂಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದೆನಷ್ಟೆ, ಭೂರ್ಲೋಕವೇ ಮುಂತಾದ ಮೂರುಲೋಕಗಳನ್ನು ಶರಣುಹೊಕ್ಕಿರುವೆನು ಎಂಬುದನ್ನೇ ಹಾಗೆ ಹೇಳಿದೆನು ಇನ್ನು 'ಭುವಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದು ಹೇಳಿದೆನಷ್ಟೆ, ಅಗ್ನ್ಯಾದಿಗಳನ್ನು ಶರಣುಹೊಕ್ಕಿರುವೆನು ಎಂಬುದನ್ನೇ ಹಾಗೆ ಹೇಳಿದೆನು ಇನ್ನು 'ಸ್ವಃ ಎಂಬುದನ್ನು ಶರಣುಹೊಕ್ಕಿರುವೆನು' ಎಂದು ಹೇಳಿದೆನಷ್ಟೆ, ಋಗ್ವೇದಾದಿಗಳನ್ನು ಶರಣುಹೊಕ್ಕಿರುವೆನು ಎಂದೇ ಹಾಗೆ ಹೇಳಿದೆನು.

ಹಿಂದೆ ಹೇಳಿರುವ ಹಳತಾಗದ ಕೋಶವನ್ನು ದಿಗ್ವತ್ಸಗಳ ಸಮೇತವಾಗಿ (ಇಲ್ಲಿ ಹೇಳಿರು)ವಂತೆಯೇ ಧ್ಯಾನಮಾಡಿ ಆ ಬಳಿಕ[2] ಮಂತ್ರಗಳನ್ನು ಜಪಿಸಬೇಕು. (ತದವೋಚಂ ಎಂದು) ಎರಡು ಸಲ ಹೇಳಿರುವದು ಆದರಕ್ಕಾಗಿ.

---

1. ಇದು 'ಅಥ' ಎಂದಿದ್ದು ಲೇಖಕರು ಹೀಗೆ ಬರೆದುಕೊಂಡಿರಬಹುದೆ?

2 ಇಲ್ಲಿ ಧ್ಯಾತ್ವಾ ಎಂಬುದಕ್ಕೆ ಬದಲು ಧ್ಯಾಯೇತ್ ಎಂಬ ಪಾಠಾಂತರವೂ ಕಂಡುಬರುತ್ತದೆ. ಆಗ ಮಂತ್ರಗಳನ್ನು ಜಪಿಸಬೇಕು, ಆಮೇಲೆ ಧ್ಯಾನಿಸಬೇಕು- ಎಂದಾಗುತ್ತದೆ; ಆದರೆ ಆ||ಗಿ||ಟೀಕೆಯಲ್ಲಿ 'ಧ್ಯಾತ್ವಾ ಉಪರಿಷ್ಟಾತ್ ಇತಿ ಸಂಬನ್ಧಃ' ಎಂದಿದೆ, ಆ ಪಾಠದಲ್ಲಿ ತತಃ ಎಂಬ ಮಾತು ಅನವಶ್ಯವಾಗುತ್ತದೆ. ಯಾವ ಪಾಠವು ಸಾಧುವೆಂಬುದನ್ನು ನಿರ್ಣಯಿಸುವದು ಇಲ್ಲಿ ಅತ್ಯವಶ್ಯ, ಏಕೆಂದರೆ ಜಪಧ್ಯಾನಗಳಲ್ಲಿ ಮೊದಲು ಯಾವದು ಎಂಬುದನ್ನು ಗೊತ್ತುಪಡಿಸುವದಕ್ಕೆ ಅದು ಬೇಕಾಗುತ್ತದೆ

# ಮೂರನೆಯ ಅಧ್ಯಾಯ- ಹದಿನಾರನೆಯ ಖಂಡ

(ದೀರ್ಘಜೀವನಕ್ಕಾಗಿ ಉಪಾಸನೆ)

## ಪುರುಷವಿದ್ಯೆ

(ಉಪನಿಷತ್ತು)

**ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಗ್ಂಶತಿ ವರ್ಷಾಣಿ ತತ್ ಪ್ರಾತಃಸವನಂ ಚತುರ್ವಿಗ್ಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವ ಏತೇ ಹೀದಗ್ಂ ಸರ್ವಂ ವಾಸಯನ್ತಿ ॥೧॥**

೧. ಪುರುಷನೇ ಯಜ್ಞವು ಅವನ ಇಪ್ಪತ್ತುನಾಲ್ಕು ವರ್ಷಗಳಿರುವವಲ್ಲ, ಅದು ಪ್ರಾತಃಸವನವು. ಗಾಯತ್ರಿಯು ಇಪ್ಪತ್ತುನಾಲ್ಕು ಅಕ್ಷರಗಳದ್ದು; ಪ್ರಾತಃಸವನವು ಗಾಯತ್ರವು. ಇದರ ಆ (ಸವನ)ವನ್ನು ವಸುಗಳು ಬೆಂಬಿಡಿದಿರುವರು. ಪ್ರಾಣಗಳೇ ವಸುಗಳು; ಏಕೆಂದರೆ ಇವೇ ಇದೆಲ್ಲವನ್ನೂ ವಾಸಮಾಡಿಸುತ್ತವೆ.

### ಗ್ರಂಥಸಂಬಂಧ

(ಭಾಷ್ಯ)

೩೬೩ ಪುತ್ರಾಯುಷ ಉಪಾಸನಮುಕ್ತಂ ಜಪಶ್ಚ, ಅಥ ಇದಾನೀಮ್ ಆತ್ಮನೋ ದೀರ್ಘಜೀವನಾಯ ಇದಮುಪಾಸನಂ ಜಪಂ ಚ ವಿದಧತ್ ಆಹ। ಜೀವನ್ ಹಿ ಸ್ವಯಂ ಪುತ್ರಾದಿಫಲೇನ ಯುಜ್ಯತೇ ನಾನ್ಯಥಾ ಇತ್ಯತ ಆತ್ಮಾನಂ ಯಜ್ಞಂ ಸಂಪಾದಯತಿ॥

(ಭಾಷಾರ್ಥ)

ಪುತ್ರನ ಆಯುಸ್ಸಿಗಾಗಿ ಉಪಾಸನೆಯನ್ನೂ ಜಪವನ್ನೂ ಹೇಳಿದ್ದಾಯಿತು. ಇನ್ನು ಈಗ ತನ್ನ ದೀರ್ಘಜೀವನಕ್ಕಾಗಿ ಈ ಉಪಾಸನೆಯನ್ನೂ ಜಪವನ್ನೂ ವಿಧಾನಮಾಡಬೇಕೆಂದು (ವೇದವು) ಹೇಳುತ್ತಿದೆ ತಾನು ಬದುಕಿದ್ದರೇ ಪುತ್ರನೇ ಮುಂತಾದ ಫಲದಿಂದ ಯುಕ್ತನಾಗುತ್ತಾನೆ. ಇಲ್ಲದಿದ್ದರೆ ಇಲ್ಲ. ಆದ್ದರಿಂದ ಆತ್ಮನನ್ನು (ಶ್ರುತಿಯು) ಯಜ್ಞವೆಂದು ಸಂಪಾದನೆಮಾಡುತ್ತದೆ.

## ಪುರುಷಯಜ್ಞಕ್ಕೆ ಪ್ರಾತಃಸವನ

(ಭಾಷ್ಯ)

೨೬೪. ಪುರುಷಃ। ಪುರುಷೋ ಜೀವನವಿಶಿಷ್ಟಃ ಕಾರ್ಯಕರಣಸಂಘಾತೋ ಯಥಾಪ್ರಸಿದ್ಧ ಏವ। ವಾವಶಬ್ದೋಽವಧಾರಣಾರ್ಥಃ। ಪುರುಷ ಏವ ಯಜ್ಞ ಇತ್ಯರ್ಥಃ। ತಥಾ ಹಿ ಸಾಮಾನ್ಯೈಃ ಸಂಪಾದಯತಿ ಯಜ್ಞತ್ವಮ್। ಕಥಮ್? ತಸ್ಯ ಪುರುಷಸ್ಯ ಯಾನಿ ಚತುರ್ವಿಂಶತಿ ವರ್ಷಾಣಿ ಆಯುಷಃ ತತ್ ಪ್ರಾತಃಸವನಂ ಪುರುಷಾಖ್ಯಸ್ಯ ಯಜ್ಞಸ್ಯ। ಕೇನ ಸಾಮಾನ್ಯೇನೇತಿ? ಆಹ। ಚತುರ್ವಿಂಶತ್ಯಕ್ಷರಾ ಗಾಯತ್ರೀ ಛನ್ದಃ ಗಾಯತ್ರಂ ಗಾಯತ್ರೀಚ್ಛನ್ದಸ್ಕಂ ಹಿ ವಿಧಿಯಜ್ಞಸ್ಯ ಪ್ರಾತಃಸವನಮ್। ಅತಃ ಪ್ರಾತಃಸವನಸಂಪನ್ನೇನ ಚತುರ್ವಿಂಶತಿವರ್ಷಾಯುಷಾ ಯುಕ್ತಃ ಪುರುಷಃ। ಅತಃ ವಿಧಿಯಜ್ಞಸಾದೃಶ್ಯಾದ್ ಯಜ್ಞಃ। ತಥಾ ಉತ್ತರಯೋರಪಿ ಆಯುಷೋಃ ಸವನದ್ವಯಸಂಪತ್ತಿಸ್ತ್ರಿಷ್ಟುಬ್ಜಗತ್ಯಕ್ಷರಸಂಖ್ಯಾಸಾಮಾನ್ಯತೋ ವಾಚ್ಯಾ। ಕಿಂಚ ತದಸ್ಯ ಪುರುಷಯಜ್ಞಸ್ಯ ಪ್ರಾತಃಸವನಂ ವಿಧಿಯಜ್ಞಸ್ಯೇವ ವಸವೋ ದೇವಾ ಅನ್ವಾಯತ್ತಾಃ ಅನುಗತಾಃ। ಸವನದೇವತಾತ್ವೇನ ಸ್ವಾಮಿನಃ ಇತ್ಯರ್ಥಃ। ಪುರುಷಯಜ್ಞೇಽಪಿ ವಿಧಿಯಜ್ಞ ಇವ ಅಗ್ನ್ಯಾದಯೋ ವಸವೋ ದೇವಾಃ ಪ್ರಾಪ್ತಾಃ ಇತ್ಯತೋ ವಿಶಿನಷ್ಟಿ। ಪ್ರಾಣಾ ವಾವ ವಸವಃ, ವಾಗಾದಯೋ ವಾಯವಶ್ಚ। ಏತೇ ಹಿ ಯಸ್ಮಾದಿದಂ ಪುರುಷಾದಿ ಪ್ರಾಣಿಜಾತಮ್ ಏತೇ ವಾಸಯನ್ತಿ। ಪ್ರಾಣೇಷು ಹಿ ದೇಹೇ ವಸತ್ಸು ಸರ್ವಮಿದಂ ವಸತಿ ನಾನ್ಯಥಾ ಇತ್ಯತೋ ವಸನಾತ್ ವಾಸನಾಚ್ಚ ವಸವಃ॥

(ಭಾಷ್ಯಾರ್ಥ)

ಪುರುಷಃ (ಎಂಬ ವಾಕ್ಯದ ಅರ್ಥವಿದು). ಪುರುಷನು ಎಂದರೆ ಜೀವನವಿಶಿಷ್ಟವಾದ (ಲೋಕದಲ್ಲಿ) ಪ್ರಸಿದ್ಧವಾಗಿರುವ ಕಾರ್ಯಕರಣಸಂಘಾತವೇ (ಮೂಲದಲ್ಲಿರುವ) ವಾವ ಎಂಬ ಶಬ್ದವು ಅವಧಾರಣೆಯ ಅರ್ಥ(ದಲ್ಲಿ ಬಂದಿದೆ) ಪುರುಷನೇ ಯಜ್ಞವು ಎಂದರ್ಥ[1] ಆದ್ದರಿಂದಲೇ (ಬೇರೆಬೇರೆಯ) ಹೋಲಿಕೆಗಳಿಂದ (ಪುರುಷನಲ್ಲಿ) ಯಜ್ಞತ್ವವನ್ನು ಸಂಪಾದನೆಮಾಡಿರುತ್ತದೆ

ಹೇಗೆಂದರೆ, ಆ ಪುರುಷನ ಆಯುಸ್ಸಿನಲ್ಲಿ ಇಪ್ಪತ್ತನಾಲ್ಕು ವರ್ಷಗಳಿರುವವಲ್ಲ, ಅದೇ ಪುರುಷನೆಂಬ (ಈ) ಯಜ್ಞಕ್ಕೆ ಪ್ರಾತಃಸವನವು ಯಾವ ಹೋಲಿಕೆಯಿಂದ ?– ಎಂದರೆ (ಶ್ರುತಿ) ಹೇಳುತ್ತದೆ ಗಾಯತ್ರಿ ಎಂಬ ಛಂದಸ್ಸು

---

1. ಇಲ್ಲಿ ಹೇಳಿರುವ ಪುರುಷಯಜ್ಞವು ತೈತ್ತಿರೀಯನಾರಾಯಣಪ್ರಶ್ನದಲ್ಲಿ (೮೦) ಹೇಳಿರುವ ಪುರುಷಯಜ್ಞದಂತಲ್ಲ ; ಇಲ್ಲಿ ಪುರುಷನನ್ನೇ ಯಜ್ಞವೆಂದು ಸಂಪಾದನೆಮಾಡಿದೆ ಅಲ್ಲಿ ಪ್ರಕೃತನಾದ ಜ್ಞಾನಿಯ ಯಜ್ಞಕ್ಕೆ ಇಂಥಿಂಥವು ಯಜ್ಞಾಂಗಗಳು ಎಂದು ಆತ್ಮಜ್ಞಾನವನ್ನು ಹೊಗಳಿದೆ ಸೂ ಭಾ ೩–೩–೨ ನ್ನು ನೋಡಿ

ಇಪ್ಪತ್ತುನಾಲ್ಕು ಅಕ್ಷರದ್ದು, ವಿಧಿಯಜ್ಞದ ಪ್ರಾತಃಸವನವೂ ಗಾಯತ್ರವಷ್ಟೆ, ಗಾಯತ್ರೀಛಂದಸ್ಸಿನದಷ್ಟೆ? ಆದ್ದರಿಂದ ಪುರುಷನು ಪ್ರಾತಃಸವನವೆಂದು ಸಂಪಾದಿತ ವಾಗಿರುವ ಇಪ್ಪತ್ತುನಾಲ್ಕು ವರ್ಷದ ಆಯುಸ್ಸಿನಿಂದ ಕೂಡಿದವನಾಗಿರುತ್ತಾನೆ. ಆದ್ದರಿಂದ (ಇವನು) ವಿಧಿಯಜ್ಞದ (ಈ) ಸಾದೃಶ್ಯವುಳ್ಳವನಾಗಿರುವದರಿಂದ ಯಜ್ಞವು. ಇದರಂತೆ ಮುಂದಿನ (ಎರಡು) ಆಯುಷ್ಕಾಲಗಳಿಗೂ ತ್ರಿಷ್ಟುಪ್ಪು, ಜಗತಿ- ಇವುಗಳ ಅಕ್ಷರಸಂಖ್ಯೆಯ ಸಾಮಾನ್ಯದಿಂದ (ಉಳಿದ) ಎರಡು ಸವನಗಳ ಸಂಪತ್ತಿಯನ್ನು ಹೇಳಬೇಕು [1]

ಇದಲ್ಲದೆ ಈ ಪುರುಷಯಜ್ಞದ ಆ (ಪ್ರಾತಃ)ಸವನವನ್ನು ವಿಧಿಯಜ್ಞದ (ಪ್ರಾತಃಸವನವನ್ನು) ಹೇಗೋ ಹಾಗೆ ವಸುಗಳೆಂಬ ದೇವತೆಗಳು ಬೆಂಬಿಡಿದಿರುತ್ತಾರೆ, ಅನುವರ್ತಿಸಿಕೊಂಡಿರುತ್ತಾರೆ, (ಆ) ಸವನಕ್ಕೆ ದೇವತೆಗಳಾಗಿ ಒಡೆಯರಾಗಿರುತ್ತಾರೆ ಎಂದರ್ಥ ಪುರುಷಯಜ್ಞದಲ್ಲಿಯೂ ವಿಧಿಯಜ್ಞದಂತೆ ಅಗ್ನಿಯೇ ಮುಂತಾದ ವಸುದೇವತೆಗಳು (ಇರುತ್ತಾರೆಂದು) ಬಂದೊದಗುತ್ತದೆ. ಆದ್ದರಿಂದ (ಶ್ರುತಿಯು) ಇಂಥವರೇ ಎಂದು ಹೇಳುತ್ತಿದೆ ಪ್ರಾಣಗಳೇ ಎಂದರೆ, ವಾಗಾದಿಗಳೂ (ಪಂಚ)ವಾಯುಗಳೂ ವಸುಗಳು (ಹಿ=ಯಸ್ಮಾತ್) ಏಕೆಂದರೆ ಅವು ಮನುಷ್ಯನೇ ಮುಂತಾದ ಪ್ರಾಣಿಜಾತವನ್ನು ವಾಸಮಾಡಿಸುತ್ತವೆ ಪ್ರಾಣಗಳು ದೇಹವಲ್ಲಿ ವಾಸಮಾಡಿಕೊಂಡಿದ್ದರಲ್ಲವೆ, ಇವೆಲ್ಲವೂ ವಾಸಮಾಡಿಕೊಂಡಿರುತ್ತದೆ? ಆದ್ದರಿಂದ (ತಾವು) ವಾಸಮಾಡಿಕೊಂಡಿರುವದರಿಂದಲೂ (ಮಿಕ್ಕೆಲ್ಲವನ್ನೂ) ವಾಸಮಾಡಿಸುವದರಿಂದಲೂ (ಈ ಪ್ರಾಣಗಳು) ವಸುಗಳು [2]

(ಉಪನಿಷತ್ತು)

**ತಂ ಚೇದೇತಸ್ಮಿನ್ ವಯಸಿ ಕಿಂಚಿದುಪತಪೇತ್ ಸ ಬ್ರೂಯಾತ್ ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಗ್ಂ ಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ॥ ೨ ॥**

೨. ಅವನನ್ನು ಈ ವಯಸ್ಸಿನಲ್ಲಿ ಯಾವದಾದರೂ ಉಪತಾಪಗೊಳಿಸಿದರೆ ಅವನು "ಪ್ರಾಣವಸುಗಳೆ, ಈ ನನ್ನ ಪ್ರಾತಃಸವನವನ್ನು

---

1. ಪ್ರಾತಃಸವನಕ್ಕೆ ಗಾಯತ್ರಿಯಂತೆ ಮಾಧ್ಯಂದಿನಸವನಕ್ಕೆ ತ್ರಿಷ್ಟುಪ್ಪು, ಸಾಯಂಸವನಕ್ಕೆ ಜಗತೀ- ಇವು ಛಂದಸ್ಸುಗಳು, ಅವುಗಳ ಅಕ್ಷರಸಂಖ್ಯೆಯಿಂದಲೇ ಅಷ್ಟಷ್ಟು ವರ್ಷಗಳ ಆಯುರ್ಭಾಗಕ್ಕೆ ಆಯಾ ಸವನವೆಂದು ಸಂಪತ್ತಿ ಎಂದರ್ಥ.

2 ವಸುದೇವತಾಕವಾಗಿರುವದರಿಂದಲೂ ಇದು ಪ್ರಾತಃಸವನವೆಂದು ಸಂಪಾದನೆ ಮಾಡಬೇಕು ಎಂದು ಅಭಿಪ್ರಾಯ.

ಮಾಧ್ಯಂದಿನಸವನಕ್ಕೆ ಹೊಂದಿಕೆಯಾಗುವಂತೆ ಮುಂದುವರಿಸಿರಿ! ಯಜ್ಞವಾದ ನಾನು ಪ್ರಾಣವಸುಗಳ ನಡುವೆ ವಿಲೋಪವಾಗದೆ ಇರುವಂತಾಗಲಿ! ಎಂದು ಹೇಳಬೇಕು. ಅದರಿಂದ ಮೇಲಕ್ಕೇ ಹೋಗುತ್ತಾನೆ, ರೋಗವಿಲ್ಲದವನಾಗುತ್ತಾನೆ.

## ಈ ಸವನಧ್ಯಾನಕ್ಕೆ ಅಂಗವಾದ ಜಪ

### (ಭಾಷ್ಯ)

೨೬೫ ತಂ ಚೇತ್ ಯಜ್ಞಸಂಪಾದಿನಮ್ ಏತಸ್ಮಿನ್ ಪ್ರಾತಃಸವನಸಂಪನ್ನೇ ವಯಸಿ ಕಿಂಚಿತ್ ವ್ಯಾಧ್ಯಾದಿ ಮರಣಶಙ್ಕಾಕಾರಣಮ್ ಉಪತಪೇತ್ ದುಃಖಮುತ್ಪಾದಯೇತ್ ಸ ತದಾ ಯಜ್ಞಸಂಪಾದೀ ಪುರುಷಃ ಆತ್ಮಾನಂ ಯಜ್ಞಂ ಮನ್ಯಮಾನಃ ಬ್ರೂಯಾತ್। ಜಪೇತ್ ಇತ್ಯರ್ಥಃ। ಇಮಂ ಮನ್ತ್ರಮ್। ಹೇ ಪ್ರಾಣಾ ವಸವಃ ಇದಂ ಮೇ ಪ್ರಾತಃಸವನಂ ಮಮ ಯಜ್ಞಸ್ಯ ವರ್ತತೇ। ತನ್ಮಾಧ್ಯಂದಿನಂ ಸವನಮ್ ಅನುಸಂತನುತ ಇತಿ ಮಾಧ್ಯಂದಿನೇನ ಸವನೇನ ಆಯುಷಾ ಸಹಿತಮ್ ಏಕೀಭೂತಂ ಸನ್ತತಂ ಕುರುತ ಇತ್ಯರ್ಥಃ। ಮಾ ಅಹಂ ಯಜ್ಞಃ ಯುಷ್ಮಾಕಂ ಪ್ರಾಣಾನಾಂ ವಸೂನಾಂ ಪ್ರಾತಃಸವನೇಶಾನಾಂ ಮಧ್ಯೇ ವಿಲೋಪ್ಸೀಯ ವಿಲುಪ್ಯೇಯ ವಿಚ್ಛಿದ್ಯೇಯ ಇತ್ಯರ್ಥಃ। ಇತಿಶಬ್ದೋ ಮನ್ತ್ರಪರಿಸಮಾಪ್ತ್ಯರ್ಥಃ। ಸ ತೇನ ಜಪೇನ ಧ್ಯಾನೇನ ಚ ತತಃ ತಸ್ಮಾತ್ ಉಪತಾಪಾತ್ ಉದೇತಿ ಉದ್ಗಚ್ಛತಿ। ಉದ್ಗಮ್ಯ ವಿಮುಕ್ತಃ ಸನ್ ಅಗದೋ ಹ ಅನುಪತಾಪೋ ಭವತ್ಯೇವ ॥

### (ಭಾಷ್ಯಾರ್ಥ)

ಆ ಯಜ್ಞವಾಗಿ ಸಂಪಾದನೆಮಾಡಿಕೊಂಡ ಆ (ಪುರುಷ)ನನ್ನು ಈ ಪ್ರಾತಃಸವನವೆಂದು ಸಂಪಾದಿತವಾಗಿರುವ ವಯಸ್ಸಿನಲ್ಲಿ ಸಾವಿನ ಶಂಕೆಗೆ ಕಾರಣವಾಗಿರುವ ಯಾವದಾದರೂ ರೋಗವೇ ಮುಂತಾದದ್ದು ಉಪತಾಪಗೊಳಿಸಿದರೆ, ದುಃಖವನ್ನುಂಟುಮಾಡಿದರೆ, ಆಗ ಆ ಯಜ್ಞಸಂಪಾದನೆಯನ್ನು ಮಾಡಿಕೊಂಡಿರುವ ಪುರುಷನು ತನ್ನನ್ನು ಯಜ್ಞವೆಂದು ಭಾವಿಸಿಕೊಂಡವನಾಗಿ (ಹೀಗೆಂದು) ಹೇಳಬೇಕು, ಈ ಮಂತ್ರವನ್ನು ಜಪಿಸಬೇಕು ಎಂದರ್ಥ. "ಎಲೈ ಪ್ರಾಣಗಳೆಂಬ ವಸುಗಳೆ, ಇದು ಯಜ್ಞರೂಪನಾದ ನನ್ನ ಪ್ರಾತಃಸವನವಾಗಿದೆ. ಇದನ್ನು ಮಾಧ್ಯಂದಿನಸವನಕ್ಕೆ ಹೊಂದಿಕೆಯಾಗುವಂತೆ ಮುಂದುವರಿಸಿರಿ, ಮಾಧ್ಯಂದಿನಸವನವಾದ ಆಯುಸ್ಸಿನೊಡನೆ ಒಂದಾಗುವಂತೆ (ನಡುವೆ) ಕಡಿವಡೆಯದಂತೆ ಮಾಡಿರಿ ಎಂದರ್ಥ ಯಜ್ಞನಾದ ನಾನು ಪ್ರಾಣವಸುಗಳೆಂಬ ಪ್ರಾತಃಸವನ

ದೊಡೆಯರಾದ ನಿಮ್ಮ ನಡುವೆಯಲ್ಲಿ (ವಿಲೋಪ್ಸೀಯ=ವಿಲುಪ್ಯೇಯ) ಲೋಪವಾಗ ದಂತಾಗಲಿ, ವಿಚ್ಛೇದವಾಗದಂತಾಗಲಿ ! ಎಂದರ್ಥ (ಮೂಲದಲ್ಲಿರುವ) ಇತಿ ಶಬ್ದವು ಮಂತ್ರಪರಿಸಮಾಪ್ತಿಯನ್ನು (ತೋರಿಸು)ವದಕ್ಕೆ (ಬಂದಿದೆ)

ಅವನು ಈ ಜಪದಿಂದಲೂ ಧ್ಯಾನದಿಂದಲೂ ಆದರಿಂದ ಆ ಉಪತಾಪದಿಂದ ಮೇಲಕ್ಕೇಳುತ್ತಾನೆ, ಮೇಲಕ್ಕೇರುತ್ತಾನೆ ಮೇಲಕ್ಕೇರಿ, ಬಿಡುಗಡೆಯನ್ನು ಹೊಂದಿದವನಾಗಿ ರೋಗವಿಲ್ಲದವನಾಗುತ್ತಾನೆ, ಉಪತಾಪವಿಲ್ಲದವನಾಗಿಯೇ ತೀರುತ್ತಾನೆ (ಎಂದರ್ಥ)

(ಉಪನಿಷತ್ತು)

**ಅಥ ಯಾನಿ ಚತುಶ್ಚತ್ವಾರಿಗ್ಂಶದ್ ವರ್ಷಾಣಿ ತನ್ಮಾಧ್ಯಂದಿನಗ್ಂ ಸವನಂ ಚತುಶ್ಚತ್ವಾರಿಗ್ಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಗ್ಂ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾ ವಾವ ರುದ್ರಾ ಏತೇ ಹೀದಗ್ಂ ಸರ್ವಗ್ಂ ರೋದಯನ್ತಿ ॥ ೩ ॥**

೩. ಇನ್ನು ನಲವತ್ತನಾಲ್ಕು ವರ್ಷಗಳಿರುವವಲ್ಲ, ಅದು ಮಾಧ್ಯಂದಿನಸವನವು. ತ್ರಿಷ್ಟುಪ್ಪು ನಲವತ್ತುನಾಲ್ಕು ಅಕ್ಷರದ್ದು, ಮಾಧ್ಯಂದಿನಸವನವು ತ್ರಿಷ್ಟುಪ್ಪಿಗೆ ಸಂಬಂಧಪಟ್ಟದ್ದು. ಇವರ ಆ (ಸವನ)ವನ್ನು ರುದ್ರರು ಬೆಂಬಿಡಿದಿರುವರು. ಪ್ರಾಣಗಳೇ ರುದ್ರರು, ಏಕೆಂದರೆ ಇದೆಲ್ಲವನ್ನೂ ರೋದನಮಾಡಿಸುತ್ತಾರೆ.

(ಉಪನಿಷತ್ತು)

**ತಂ ಚೇದೇತಸ್ಮಿನ್ ವಯಸಿ ಕಿಂಚಿದುಪತಪೇತ್ ಸ ಬ್ರೂಯಾತ್ ಪ್ರಾಣಾ ರುದ್ರಾ ಇದಂ ಮೇ ಮಾಧ್ಯಂದಿನಗ್ಂ ಸವನಂ ತೃತೀಯಸವನಮನುಸಂತನುತೇತಿ ಮಾಹಂ ಪ್ರಾಣಾನಾಗ್ಂ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ॥ ೪ ॥**

೪. ಅವನನ್ನು ಈ ವಯಸ್ಸಿನಲ್ಲಿ ಯಾವದಾದರೂ ಉಪತಾಪ ಗೊಳಿಸಿದರೆ ಅವನು "ಪ್ರಾಣರುದ್ರರುಗಳೆ, ಈ ನನ್ನ ಮಾಧ್ಯಂದಿನ ಸವನವನ್ನು ಮೂರನೆಯ ಸವನಕ್ಕೆ (ಹೊಂದುಗೆಯಾಗುವಂತೆ) ಮುಂದುವರಿಸಿರಿ ; ಯಜ್ಞವಾದ ನಾನು ಪ್ರಾಣರುದ್ರರ ನಡುವೆ

ವಿಲೋಪವಾಗದೆ ಇರಲಿ!" ಎಂದು ಹೇಳಬೇಕು. ಅದರಿಂದ ಮೇಲಕ್ಕೆ ಹೋಗಿಯೇತೀರುತ್ತಾನೆ, ರೋಗವಿಲ್ಲದವನೇ ಆಗುತ್ತಾನೆ.

## ಪುರುಷಯಜ್ಞದ ಮಾಧ್ಯಂದಿನಸವನವೂ ಜಪವೂ

(ಭಾಷ್ಯ)

೨೬೬. ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ಇತ್ಯಾದಿ ಸಮಾನಮ್ । ರುವನ್ತಿ ರೋದಯನ್ತೀತಿ ಪ್ರಾಣಾ ರುದ್ರಾಃ । ಕ್ರೂರಾ ಹಿ ತೇ ಮಧ್ಯಮೇ ವಯಸಿ ಅತೋ ರುದ್ರಾಃ ॥

(ಭಾಷ್ಯಾರ್ಥ)

'ಇನ್ನು ನಲವತ್ತನಾಲ್ಕು ವರ್ಷಗಳಿರುವವಲ್ಲ,' ಎಂದು ಮುಂತಾಗಿರುವ (ಗ್ರಂಥವು ಹಿಂದಿನದಕ್ಕೆ) ಸಮಾನ(ವಾಗಿದೆ) ಅಳುತ್ತವೆ, ಅಳುವಂತೆ ಮಾಡುತ್ತವೆ. ಆದ್ದರಿಂದ ರುದ್ರರು ನಡುಹರೆಯದಲ್ಲಿ ಅವು ಕ್ರೂರವಾಗಿರುತ್ತವೆಯಲ್ಲವೆ? ಆದ್ದರಿಂದ ರುದ್ರರು ಎಂದಿದೆ[1]

(ಉಪನಿಷತ್ತು)

**ಅಥ ಯಾನ್ಯಷ್ಟಾಚತ್ವಾರಿಗ್ಂಶದ್ವರ್ಷಾಣಿ ತತ್ ತೃತೀಯ ಸವನಮಷ್ಟಾಚತ್ವಾರಿಗ್ಂಶದಕ್ಷರಾ ಜಗತೀ ಜಾಗತಂ ತೃತೀಯ ಸವನಂ ತದಸ್ಯಾಽಽದಿತ್ಯಾ ಅನ್ವಾಯತ್ತಾಃ ಪ್ರಾಣಾ ವಾವಾಽಽದಿತ್ಯಾ ಏತೇ ಹೀದಗ್ಂ ಸರ್ವಮಾದದತೇ ॥ ೫ ॥**

**ತಂ ಚೇದೇತಸ್ಮಿನ್ ವಯಸಿ ಕಿಂಚಿದುಪತಪೇತ್ ಸ ಬ್ರೂಯಾತ್ ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನು ಸಂತನುತೇತಿ ಮಾಽಹಂ ಪ್ರಾಣಾನಾಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹೈವ ಭವತಿ ॥ ೬ ॥**

೫. ಇನ್ನು ನಲವತ್ತೆಂಟು ವರ್ಷಗಳಿರುವವಲ್ಲ, ಅದು ಮೂರನೆಯ ಸವನವು. ಜಗತಿಯು ನಲವತ್ತೆಂಟಕ್ಷರದ್ದು; ಮೂರನೆಯ ಸವನವು ಜಗತೀಛಂದಸ್ಸಿಗೆ ಸಂಬಂಧಪಟ್ಟದ್ದು. ಇದರ ಆ (ಸವನ)ವನ್ನು ಆದಿತ್ಯರು ಬೆಂಬಿಡಿದಿರುವರು. ಪ್ರಾಣಗಳೇ ಆದಿತ್ಯರು; ಏಕೆಂದರೆ ಇವೇ ಇದೆಲ್ಲವನ್ನೂ ಆದಾನಮಾಡುತ್ತವೆ.

---

1. ಜಪಮಂತ್ರದ ವಿಷಯಕ್ಕೆ ಹೆಚ್ಚಿಗೆಯೇನೂ ಹೇಳತಕ್ಕದ್ದಿಲ್ಲವಾದ್ದರಿಂದ ಭಾಷ್ಯದಲ್ಲಿ ಏನನ್ನೂ ಬರೆದಿಲ್ಲ

೬. ಅವನನ್ನು ಈ ವಯಸ್ಸಿನಲ್ಲಿ ಯಾವುದಾದರೂ ಉಪತಾಪ ಗೊಳಿಸಿದರೆ ಅವನು "ಪ್ರಾಣಾದಿತ್ಯರೆ, ಈ ನನ್ನ ಮೂರನೆಯ ಸವನವಾದ ಆಯುಸ್ಸನ್ನು ಮುಂದುವರಿಸಿರಿ ! ಯಜ್ಞನಾದ ನಾನು ಪ್ರಾಣಾದಿತ್ಯರ ನಡುವೆ ವಿಲೋಪವಾಗದೆ ಇರಲಿ !" ಎಂದು ಹೇಳಬೇಕು. ಅದರಿಂದ ಅವನು ಮೇಲಕ್ಕೆ ಹೋಗಿಯೇತೀರುತ್ತಾನೆ, ರೋಗವಿಲ್ಲದವನೇ ಆಗುತ್ತಾನೆ.

## ಮೂರನೆಯ ಸವನವೂ ಅದರ ಜಪವೂ

(ಭಾಷ್ಯ)

೩-೬ ತಥಾ ಆದಿತ್ಯಾಃ ಪ್ರಾಣಾಃ । ತೇ ಹಿ ಇದಂ ಶಬ್ದಾದಿಜಾತಮ್ ಆದದತೇ ಅತ ಆದಿತ್ಯಾಃ । ತೃತೀಯಸವನಮ್ ಆಯುಃ ಷೋಡಶೋತ್ತರಂ ವರ್ಷಶತಂ ಸಮಾಪಯತ ಅನುಸನ್ತನುತ । ಯಜ್ಞಂ ಸಮಾಪಯತ ಇತ್ಯರ್ಥಃ । ಸಮಾನಮನ್ಯತ ॥

(ಭಾಷ್ಯಾರ್ಥ)

ಇದರಂತೆಯೇ ಪ್ರಾಣಿಗಳೇ ಆದಿತ್ಯರು , ಅವು ಈ ಶಬ್ದಾದಿಜಾತವನ್ನು ತೆಗೆದುಕೊಳ್ಳುತ್ತವೆಯಲ್ಲವೆ ? ಅದ್ದರಿಂದ (ಅವು) ಆದಿತ್ಯರು ಮೂರನೆಯ ಸವನವಾದ ಆಯುಸ್ಸನ್ನು ಮುಂದುವರಿಸಿರಿ ಎಂದರೆ ನೂರಹದಿನಾರುವರ್ಷವನನ್ನು ಮುಗಿಸಿಕೊಡಿರಿ, ಯಜ್ಞವನ್ನು ಮುಗಿಸಿಕೊಡಿರಿ! ಎಂದರ್ಥ (ಉಳಿದದ್ದು ಹಿಂದಿನ ಗ್ರಂಥಕ್ಕೆ) ಸಮಾನವು

(ಉಪನಿಷತ್ತು)

**ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ ಸ ಕಿಂ ಮ ಏತದುಪತಪಸಿ ಯೋಽಹಮನೇನ ನ ಪ್ರೇಷ್ಯಾಮೀತಿ ಸ ಹ ಷೋಡಶಂ ವರ್ಷಶತಮಜೀವತ್ ಪ್ರ ಹ ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ ॥ ೭ ॥**

೭. ಆ ಇದನ್ನು ಅರಿತುಕೊಂಡು ಮಹಿದಾಸಐತರೇಯನು ಇಂತೆಂದನಂತೆ : "ಆ (ನೀನು) ಹೀಗೇಕೆ ನನ್ನನ್ನು ಉಪತಾಪಗೊಳಿಸುತ್ತೀಯೆ ? ಏಕೆಂದರೆ ನಾನು ಇದರಿಂದ ಹೋಗುವವನಲ್ಲ." ಅವನು ನೂರುಹದಿನಾರು ವರ್ಷಗಳವರೆಗೂ ಬದುಕಿದ್ದನು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ನೂರುಹದಿನಾರುವರ್ಷಗಳು ಬದುಕಿರುವನು.

# ಉಪಾಸನೆಯ ಸಾಕ್ಷಾತ್ಕಾರಕ್ಕೆ ಫಲ

(ಭಾಷ್ಯ)

೩೬೮ ನಿಶ್ಚಿತಾ ಹಿ ವಿದ್ಯಾ ಫಲಾಯ ಇತ್ಯೇತದ್ದರ್ಶಯನ್ ಉದಾಹರತಿ। ಏತದ್ ಯಜ್ಞದರ್ಶನಂ ಹ ಸ್ಮ ವೈ ಕಿಲ ತದ್ ವಿದ್ವಾನ್ ಆಹ ಮಹಿದಾಸೋ ನಾಮತಃ। ಇತರಾಯಾ ಅಪತ್ಯಮ್ ಐತರೇಯಃ। ಕಿಂ ತಸ್ಮಾತ್ ಮೇ ಮಮ ಏತತ್ ಉಪತಪನಮ್ ಉಪತಪಸಿ ಸ ತ್ವಂ ಹೇ ರೋಗ, ಯೋಽಹಂ ಯಜ್ಞಃ ಅನೇನ ತ್ವತ್ಕೃತೇನ ಉಪತಾಪೇನ ನ ಪ್ರೇಷ್ಯಾಮಿ ನ ಮರಿಷ್ಯಾಮಿ ಅತೋ ವೃಥಾ ತವ ಶ್ರಮ ಇತ್ಯರ್ಥಃ। ಇತಿ ಏವಮ್ ಆಹ ಸ್ಮ ಇತಿ ಪೂರ್ವೇಣ ಸಂಬನ್ಧಃ। ಸ ಏವಂನಿಶ್ಚಯಃ ಸನ್ ಷೋಡಶಂ ವರ್ಷಶತಮ್ ಅಜೀವತ್। ಅನ್ಯೋಽಪಿ ಏವಂನಿಶ್ಚಯಃ ಷೋಡಶಂ ವರ್ಷಶತಂ ಪ್ರಜೀವತಿ ಯ ಏವಂ ಯಥೋಕ್ತಂ ಯಜ್ಞಸಂಪಾದನಂ ವೇದ ಜಾನಾತಿ ಸ ಇತ್ಯರ್ಥಃ॥

(ಭಾಷ್ಯಾರ್ಥ)

ನಿಶ್ಚಿತವಾದ[1] ವಿದ್ಯೆಯೇ ಫಲಕ್ಕೆ (ಸಾಧಕವಾಗುವದು) ಎಂಬಿದನ್ನು ತಿಳಿಸುವದಕ್ಕಾಗಿ (ಶ್ರುತಿಯು ಇದಕ್ಕೊಂದು) ಉದಾಹರಣೆಯನ್ನು ಕೊಡುತ್ತದೆ ಆ ಈ ಯಜ್ಞದರ್ಶನವನ್ನು (ಹ ಸ್ಮ ವೈ=ಕಿಲ) ಅರಿತುಕೊಂಡ ಐತರೇಯನು ಇತರಾ ಎಂಬಾಕೆಯ ಮಗನಾದ ಮಹಿದಾಸನು (ಆ) ಹೆಸರಿನವನು, ಹೀಗೆಂದನಂತೆ. ಎಲೈ ರೋಗವೆ, ಆ ನೀನು, ಏತಕ್ಕೆ ಯಾವ ಕಾರಣದಿಂದ (ಮೇ=ಮಮ) ನನಗೆ ಹೀಗೆ ಉಪತಾಪವನ್ನು ಮಾಡುತ್ತಿದೀಯೆ ? ಈ ಯಜ್ಞ(ರೂಪ)ನಾದ ನಾನು ಇದರಿಂದ, ನೀನು ಮಾಡುವ ಉಪತಾಪದಿಂದ ಹೊರಟುಹೋಗುವದಿಲ್ಲ, ಸಾಯುವದಿಲ್ಲ ಆದ್ದರಿಂದ (ಈ) ನಿನ್ನ ಶ್ರಮವು ವ್ಯರ್ಥವು ಎಂದರ್ಥ ಹೀಗೆಂದು (ಆಹ ಸ್ಮ ವೈ) ನುಡಿದನಂತೆ ಎಂದು ಹಿಂದಿರುವ ಮಾತಿಗೆ ಇದಕ್ಕೆ ಸಂಬಂಧವು.

ಅವನು ಈ ನಿಶ್ಚಯವುಳ್ಳವನಾಗಿ ನೂರುಹದಿನಾರು ವರ್ಷಗಳವರೆಗೆ ಬದುಕಿದ್ದನು ಮತ್ತೊಬ್ಬನೂ ಈ ನಿಶ್ಚಯವುಳ್ಳವನಾದರೆ ನೂರುಹದಿನಾರು ವರ್ಷಗಳವರೆಗೆ ಪ್ರಜೀವನಮಾಡಿಕೊಂಡಿರುವನು.[2] ಯಾವನು ಹೀಗೆ ಮೇಲೆ ಹೇಳಿದ ಯಜ್ಞಸಂಪಾದನ(ಕ್ರಮವನ್ನು) ಅರಿತುಕೊಂಡಿರುವನೋ, ತಿಳಿದುಕೊಂಡಿರುವನೋ, ಅವನು (ಹೀಗೆ ಜೀವಿಸಿಕೊಂಡಿರುವನು) ಎಂದರ್ಥ.

---

1. ಸಾಕ್ಷಾತ್ಕಾರದಿಂದ ಗಟ್ಟಿಯಾಗಿರುವ.
2. ಉತ್ತಮರೀತಿಯಿಂದ ಬಾಳುವನು.

# ಮೂರನೆಯ ಅಧ್ಯಾಯ—ಹದಿನೇಳನೆಯ ಖಂಡ

(ದೀರ್ಘಾಯುಸ್ಸಿಗೆ ಉಪಾಸನೆ ಮುಂತಾದವು)

## ಪುರುಷಯಜ್ಞದ ದೀಕ್ಷಾದಿಗಳು

(ಉಪನಿಷತ್ತು)

**ಸ ಯದಶಿಶಿಷತಿ ಯತ್ಪಿಪಾಸತಿ ಯನ್ನ ರಮತೇ ತಾ ಅಸ್ಯ ದೀಕ್ಷಾಃ ॥**

೧. ಅವನಿಗೆ ಹಸಿವಾಗುತ್ತದೆಯಲ್ಲ, ನೀರಡಿಕೆಯಾಗುತ್ತದೆಯಲ್ಲ, ರತಿಯಿಲ್ಲದೆ ಇರುವನಲ್ಲ, ಅವು ಈ (ಯಜ್ಞದ) ದೀಕ್ಷೆಗಳು.

### ಈ ಯಜ್ಞದ ದೀಕ್ಷೆ

(ಭಾಷ್ಯ)

೨೬೯. 'ಸ ಯದಶಿಶಿಷತಿ' ಇತ್ಯಾದಿ ಯಜ್ಞಸಾಮಾನ್ಯನಿರ್ದೇಶಃ ಪುರುಷಸ್ಯ ಪೂರ್ವೇಣೈವ ಸಂಬಧ್ಯತೇ। ಯದಶಿಶಿಷತಿ ಅಶಿತುಮಿಚ್ಛತಿ ತಥಾ ಪಿಪಾಸತಿ ಪಾತುಮಿಚ್ಛತಿ ಯನ್ನ ರಮತೇ ಇಷ್ಟಾದ್ಯಪ್ರಾಪ್ತಿನಿಮಿತ್ತಮ್ । ಯದ್ಯೈವಂಜಾತೀಯಕಂ ದುಃಖಮನುಭವತಿ ತಾ ಅಸ್ಯ ದೀಕ್ಷಾಃ। ದುಃಖಸಾಮಾನ್ಯಾದ್ ವಿಧಿಯಜ್ಞಸ್ಯೇವ ॥

(ಭಾಷ್ಯಾರ್ಥ)

'ಅವನಿಗೆ ಹಸಿವಾಗುತ್ತದೆಯಲ್ಲ ..' ಎಂಬುದೇ ಮುಂತಾದ ಯಜ್ಞದ ಹೋಲಿಕೆಯನ್ನು ಪುರುಷನಿಗೆ ತಿಳಿಸಿರುವದು ಹಿಂದಿನ (ಗ್ರಂಥ)ಕ್ಕೇ ಸಂಬದ್ಧವಾಗಿರುತ್ತದೆ. (ಅಶಿಶಿಷತಿ=) ಎಂದರೆ ಹಸಿವನ್ನನುಭವಿಸುತ್ತಾನಲ್ಲ, ತಿನ್ನಬೇಕೆಂದು ಇಚ್ಛಿಸಿ (ಸಂಕಟಪಡು)ತ್ತಾನಲ್ಲ, ಮತ್ತು (ಪಿಪಾಸತಿ=) ನೀರಡಿಕೆಯನ್ನನುಭವಿಸುತ್ತಾನಲ್ಲ, ಕುಡಿಯಬೇಕೆಂದು ಇಚ್ಛಿಸಿ (ಸಂಕಟಪಡು)ತ್ತಾನಲ್ಲ, ತನಗೆ ಇಷ್ಟವಾದದ್ದೇ ಮುಂತಾದದ್ದು ದೊರಕದ್ದರಿಂದ ರತಿಯಿಲ್ಲದೆ (ಬೇಸರಪಡುತ್ತಾನಲ್ಲ[1], ಈ ಬಗೆಯ[2] ದುಃಖವನ್ನನುಭವಿಸುತ್ತಾನಲ್ಲ, ಅವುಗಳೇ ಇದರ ದೀಕ್ಷೆಗಳು, ಏಕೆಂದರೆ ವಿಧಿಯಜ್ಞದ ದೀಕ್ಷೆಗಳಂತೆ (ಅವು) ದುಃಖ(ವಾಗಿರುವವೆಂಬುದು) ಸಮಾನವಾಗಿದೆ.

---

1. ಇಷ್ಟಾದ್ಯಪ್ರಾಪ್ತಿ ಎಂಬುದು ಇಷ್ಟಾಪ್ರಾಪ್ತ್ಯಾದಿ ಎಂದಿದ್ದರೆ ಚೆನ್ನಾಗಿರುತ್ತದೆ. ಆಗ ಅನಿಷ್ಟಪ್ರಾಪ್ತಿಯನ್ನೂ ಸೇರಿಸಿಕೊಳ್ಳಬಹುದಾಗುವದು, ಆದರೆ ಮುಂದಿನ ಕಂಡಿಕೆಯ ಭಾಷ್ಯದಲ್ಲಿಯೂ ಇಷ್ಟಾದಿ ಎಂದೇ ಇದೆ.

2 ಇಲ್ಲಿ ಹೇಳಿರುವದು ಈ ಬಗೆಯ ಎಲ್ಲಾ ದುಃಖಗಳಿಗೂ ಉಪಲಕ್ಷಣವೆಂದು ಭಾವ.

(ಉಪನಿಷತ್ತು)

**ಅಥ ಯದಶ್ನಾತಿ ಯತ್ ಪಿಬತಿ ಯದ್ ರಮತೇ ತದುಪಸದೈ
ರೇತಿ ॥ ೨ ॥**

೨. ಇನ್ನು ತಿನ್ನುತ್ತಾನಲ್ಲ, ಕುಡಿಯುತ್ತಾನಲ್ಲ, ಸಂತುಷ್ಟನಾಗು ತ್ತಾನಲ್ಲ, ಆಗ ಉಪಸತ್ತುಗಳೊಡನೆ (ಹೋಲಿಕೆಯನ್ನು) ಪಡೆದು ಕೊಳ್ಳುತ್ತಾನೆ.

## ಈ ಯಜ್ಞದ ಉಪಸದಗಳು

(ಭಾಷ್ಯ)

೨೭೦ ಅಥ ಯದಶ್ನಾತಿ ಯತ್ ಪಿಬತಿ ಯದ್ ರಮತೇ ರತಿಂ ಚ ಅನು ಭವತಿ ಇಷ್ಟಾದಿಸಂಯೋಗಾತ್ ತತ್ ಉಪಸದ್ಭಿಃ ಸಮಾನತಾಮ್ ಏತಿ। ಉಪ ಸದಾಂ ಚ ಪಯೋವ್ರತತ್ವನಿಮಿತ್ತಂ ಸುಖಮಸ್ತಿ। ಅಲ್ಪಭೋಜನೀಯಾನಿ ಚ ಅಹಾನಿ ಆಸನ್ನಾನಿ ಇತ್ಯತಃ ಪ್ರಶ್ವಾಸಃ ಅಶನಾದೀನಾಮ್ ಉಪಸದಾಂ ಚ ಸಾಮಾನ್ಯಮ್ ॥

(ಭಾಷ್ಯಾರ್ಥ)

ಇನ್ನು ತಿನ್ನುತ್ತಾನಲ್ಲ, ಕುಡಿಯುತ್ತಾನಲ್ಲ, ಸಂತುಷ್ಟನಾಗಿರುತ್ತಾನಲ್ಲ, ಇಷ್ಟವೇ ಮುಂತಾದವುಗಳ ಸಂಯೋಗದಿಂದ ಸಂತೋಷವನ್ನನುಭವಿಸುತ್ತಾನಲ್ಲ, ಆಗ ಉಪಸತ್ತುಗಳೊಡನೆ[1] ಸಮಾನತ್ವವನ್ನು ಪಡೆದುಕೊಳ್ಳುತ್ತಾನೆ. ಉಪಸತ್ತು ಗಳಲ್ಲಿ ಪಯೋವ್ರತದ ನಿಮಿತ್ತದಿಂದ ಸುಖವಿರುತ್ತದೆ, ಅಲ್ಪಭೋಜನದ ಅಹಸ್ಸುಗಳು, ಹತ್ತಿರವಿರುತ್ತವೆಂಬ ಸಮಾಧಾನವೂ ಇರುತ್ತದೆ[2]. (ಇದು) ಅಶನಾದಿಗಳಿಗೂ ಉಪಸತ್ತುಗಳಿಗೂ ಹೋಲಿಕೆ[3].

(ಉಪನಿಷತ್ತು)

**ಅಥ ಯದ್ಧಸತಿ ಯಜ್ಜಕ್ಷತಿ ಯನ್ಮೈಥುನಂ ಚರತಿ ಸ್ತುತಶಸ್ತ್ರೈ
ರೇವ ತದೇತಿ ॥ ೩ ॥**

---

1. ಜ್ಯೋತಿಷ್ಟೋಮದಲ್ಲಿ ಪ್ರವರ್ಗ್ಯಾಹಸ್ಸುಗಳಲ್ಲಿ ಉಪಸತ್ತುಗಳೆಂಬ ಹೋಮ ಗಳಿರುತ್ತವೆ. ಅಲ್ಲಿ ಪಯೋಭಕ್ಷಣವೇ ಮುಂತಾದ ನಿಯಮಗಳನ್ನು ಮಾಡುತ್ತಾರೆ. ಐ. ಬ್ರಾ. ೪-೬ರಿಂದ ೮ರವರೆಗೆ ಉಪಸತ್ತುಗಳ ವಿಚಾರವಿದೆ.

2. ಉಪಸತ್ತುಗಳ ಮುಂದೆ ಬರುವ ಅಹಸ್ಸುಗಳಲ್ಲಿ ಅಲ್ಪಭೋಜನವನ್ನು ಮಾಡ ಬೇಕಾಗುತ್ತದೆ.

3 ಇಲ್ಲಿ ತಿನ್ನುವದು, ಕುಡಿಯುವದು- ಮುಂತಾದವುಗಳಿಂದ ಆಗುವ ಕ್ಲೇಶಪರಿಹಾರ ವನ್ನೂ ಸಮಾಧಾನವನ್ನೂ ಉಪಸತ್ತುಗಳಿಗೆ ಹೋಲಿಸಿದೆ ಎಂದರ್ಥ.

೩. ಇನ್ನು ನಗುತ್ತಾನಲ್ಲ, ತಿನ್ನುತ್ತಾನಲ್ಲ, ಮೈಥುನವನ್ನು ಮಾಡುತ್ತಾನಲ್ಲ, ಆಗ ಸ್ತುತಶಸ್ತ್ರಗಳೊಡನೆ (ಹೋಲಿಕೆಯನ್ನು) ಪಡೆಯುತ್ತಾನೆ.

## ಈ ಯಜ್ಞದ ಸ್ತುತಶಸ್ತ್ರಗಳು

(ಭಾಷ್ಯ)

೨೭೧ ಅಥ ಯದ್ ಹಸತಿ ಯದ್ ಜಕ್ಷತಿ ಭಕ್ಷಯತಿ ಯತ್ ಮೈಥುನಂ ಚರತಿ, ಸ್ತುತ ಶಸ್ತ್ರೈರೇವ ತತ್ ಸಮಾನತಾಮ್ ಏತಿ। ಶಬ್ದವತ್ತ್ವ ಸಾಮಾನ್ಯಾತ್॥

(ಭಾಷ್ಯಾರ್ಥ)

ಇನ್ನು ನಗುತ್ತಾನಲ್ಲ, (ಜಕ್ಷತಿ=ಭಕ್ಷಯತಿ) ಅಗಿದು ತಿನ್ನುತ್ತಾನಲ್ಲ, ಮೈಥುನವನ್ನಾಚರಿಸುತ್ತಾನಲ್ಲ, ಆಗ ಸ್ತುತಶಸ್ತ್ರಗಳೊಡನೆಯೇ ಹೋಲಿಕೆಯನ್ನು ಪಡೆದುಕೊಳ್ಳುತ್ತಾನೆ, ಏಕೆಂದರೆ ಶಬ್ದವುಳ್ಳದ್ದಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ.

(ಉಪನಿಷತ್ತು)

**ಅಥ ಯತ್ತಪೋ ದಾನಮಾರ್ಜವಮಹಿಂಗ್ಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾಃ ॥ ೪ ॥**

೪. ಇನ್ನು ತಪಸ್ಸು, ದಾನ, ಆರ್ಜವ, ಅಹಿಂಸೆ, ಸತ್ಯವಚನ– ಇಂಥವುಗಳಿರುವವಲ್ಲ, ಅವು ಇದಕ್ಕೆ ದಕ್ಷಿಣೆಗಳು.

## ಈ ಯಜ್ಞದ ದಕ್ಷಿಣೆಗಳು

(ಭಾಷ್ಯ)

೨೭೨. ಅಥ ಯತ್ ತಪಃ, ದಾನಮ್ ಆರ್ಜವಮ್, ಅಹಿಂಸಾ। ಸತ್ಯವಚನಮ್ ಇತಿ ತಾ ಅಸ್ಯ ದಕ್ಷಿಣಾಃ। ಧರ್ಮಪುಷ್ಟಿಕರತ್ವಸಾಮಾನ್ಯಾತ್ ॥

(ಭಾಷ್ಯಾರ್ಥ)

ಇನ್ನು ತಪಸ್ಸು, ದಾನ, ಋಜುತ್ವ, ಅಹಿಂಸೆ, ಸತ್ಯವಚನ– ಇಂಥವುಗಳಿರುವವಲ್ಲ, ಅವು ಇದಕ್ಕೆ ದಕ್ಷಿಣೆಗಳು , ಏಕೆಂದರೆ ಧರ್ಮಕ್ಕೆ ಪುಷ್ಟಿಯನ್ನುಂಟುಮಾಡುವದೆಂಬುದು (ಎರಡಕ್ಕೂ) ಸಮಾನ(ವಾಗಿದೆ).

---

1. ಸ್ತೋತ್ರಗಳೂ ಮತ್ತು ಹೋತೃಗಳು ಹೇಳುವ ಶಸ್ತ್ರಗಳೆಂಬ ಋಕ್ಕುಗಳು ಇವಕ್ಕೆ.

(ಉಪನಿಷತ್ತು)

**ತಸ್ಮಾದಾಹುಃ ಸೋಷ್ಯತ್ಯಸೋಷ್ಟೇತಿ ಪುನರುತ್ಪಾದನಮೇವಾಸ್ಯ ತನ್ಮರಣಮೇವಾವಭೃಥಃ ॥೫॥**

೫. ಆದ್ದರಿಂದ 'ಸೋಷ್ಯತಿ', 'ಅಸೋಷ್ಟ'- ಎನ್ನುವರು. ಅದಾವರೆ ಇವರ ಉತ್ಪಾದನೆಯೇ. ಮರಣವೇ ಇವರ ಅವಭೃಥವು.

## ಈ ಯಜ್ಞದ ಸವನಾವಭೃಥಗಳು

(ಭಾಷ್ಯ)

೨೭೨. ಯಸ್ಮಾಚ್ಚ ಯಜ್ಞಃ ಪುರುಷಃ, ತಸ್ಮಾತ್ ತಂ ಜನಯಿಷ್ಯತಿ ಮಾತಾ ಯದಾ ತದಾ ಆಹುರನ್ಯೇ ಸೋಷ್ಯತೀತಿ ತಸ್ಯ ಮಾತರಮ್ ಯದಾ ಚ ಪ್ರಸೂತಾ ಭವತಿ ತದಾ ಅಸೋಷ್ಟ ಪೂರ್ಣಿಕಾ ಇತಿ । ವಿಧಿಯಜ್ಞ ಇವ ಸೋಷ್ಯತಿ ಸೋಮಂ ದೇವದತ್ತಃ ಇತಿ, ಅಸೋಷ್ಟ ಸೋಮಂ ಯಜ್ಞದತ್ತಃ ಇತಿ । ಅತಃ ಶಬ್ದಸಾಮಾನ್ಯಾದ್ವಾ ಪುರುಷೋ ಯಜ್ಞಃ । ಪುನರುತ್ಪಾದನಮೇವಾಸ್ಯ ತತ್ ಪುರುಷಾಖ್ಯಸ್ಯ ಯಜ್ಞಸ್ಯ ಯತ್ ಸೋಷ್ಯತಿ, ಅಸೋಷ್ಟ ಇತಿ ಶಬ್ದಸಂಬನ್ಧಿತ್ವಂ ವಿಧಿಯಜ್ಞಸ್ಯೇವ । ಕಿಂ ಚ ತತ್ ಮರಣಮೇವ ಅಸ್ಯ ಪುರುಷಯಜ್ಞಸ್ಯ ಅವಭೃಥಃ ಸಮಾಪ್ತಿಸಾಮಾನ್ಯಾತ್ ॥

(ಭಾಷ್ಯಾರ್ಥ)

ಪುರುಷನು ಯಜ್ಞವಾಗಿರುವನಲ್ಲ, ಆದ್ದರಿಂದಲೇ ಅವನನ್ನು ತಾಯಿ ಯಾವಾಗ ಹಡೆಯಲಿರುವಳೋ ಆಗ ಅವನ ತಾಯಿಯನ್ನು ಉಳಿದವರು 'ಸೋಷ್ಯತಿ' (ಹಡೆಯುವಳು) ಎನ್ನುತ್ತಾರೆ, ಯಾವಾಗ ಹಡೆದಾಯಿತೋ ಆಗ ಪೂರ್ಣಗರ್ಭಿಣಿಯಾಗಿದ್ದವಳು 'ಅಸೋಷ್ಟ' (ಹಡೆದಳು) ಎನ್ನುವರು. ವಿಧಿಯಜ್ಞದಲ್ಲಿ ದೇವದತ್ತನು ಸೋಮವನ್ನು 'ಸೋಷ್ಯತಿ' (ಹಿಂಡುವನು), ಯಜ್ಞದತ್ತನು ಸೋಮವನ್ನು 'ಅಸೋಷ್ಟ' (ಹಿಂಡಿದನು) ಎಂದು (ಹೇಗೆ ಹೇಳುವರೋ) ಹಾಗೆಯೇ (ಇದು). ಆದ್ದರಿಂದ (ಯಜ್ಞವು), ಅಥವಾ ಶಬ್ದವು ಸಮಾನವಾಗಿರುವದರಿಂದ ಪುರುಷನು ಯಜ್ಞವು ವಿಧಿಯಜ್ಞಕ್ಕೆ ಹೇಗೆ ಸೋಷ್ಯತಿ, ಅಸೋಷ್ಟ- ಎಂಬ ಶಬ್ದಗಳ ಸಂಬಂಧಿತ್ವವಿದೆಯೋ ಹಾಗೆ (ಈ) ಪುರುಷನೆಂಬ ಯಜ್ಞಕ್ಕೆ (ಆ ಶಬ್ದಗಳ ಸಂಬಂಧವಿರುವ)ದಷ್ಟೆ, ಅದು ಉತ್ಪಾದನೆಯೇ (ಹಡೆಯುವದೇ)[1].

---

1. ಇಲ್ಲಿ ಪುನಃ ಎಂಬ ಶಬ್ದವನ್ನು ಟೀಕಾನುಸಾರವಾಗಿ ಯೋಜನೆಮಾಡಿದೆ. 'ಯತ್ಪುನರಸ್ಯ ಪುರುಷಾಖ್ಯಸ್ಯ ವಿಧಿಯಜ್ಞಸ್ಯೇವ ಸೋಷ್ಯತೀತ್ಯಾದಿಶಬ್ದಸಂಬನ್ಧಿತ್ವಂ ತದುತ್ಪಾದನಮೇವ ತತ್ ಇತಿ ಯೋಜನಾ' ಎಂದು ಟೀಕೆ. ಪುನರುತ್ಪಾದನಮೇವ ಎಂದರೆ ಮತ್ತೆ ಉಂಟುಮಾಡಿಕೊಳ್ಳುವದು, ಎಂದರೆ ಮತ್ತೆ ಹುಟ್ಟುವದು ಎಂಬರ್ಥವೂ ಆಗಬಹುದೆ?

ಮತ್ತು ಅವನ ಮರಣವೇ ಈ ಪುರುಷಯಜ್ಞಕ್ಕೆ ಅವಭೃಥವು, ಏಕೆಂದರೆ ಸಮಾಪ್ತಿ ಎಂಬಿದು (ಎರಡಕ್ಕೂ) ಸಮಾನವಾಗಿದೆ.

(ಉಪನಿಷತ್ತು)

**ತದ್ಧೈತದ್ ಘೋರ ಆಙ್ಗಿರಸಃ ಕೃಷ್ಣಾಯ ದೇವಕೀಪುತ್ರಾ ಯೋಕ್ತ್ವೋವಾಚಾಪಿಪಾಸ ಏವ ಸ ಬಭೂವ ಸೋಽನ್ತ ವೇಲಾಯಾಮೇತತ್ ತ್ರಯಂ ಪ್ರತಿಪದ್ಯೇತಾಕ್ಷಿತಮಸ್ಯಚ್ಯುತ ಮಸಿ ಪ್ರಾಣಸಗ್‍ಂಶಿತಮಸೀತಿ ತತ್ರೈತೇ ದ್ವೇ ಋಚೌ ಭವತಃ॥**

೬. ಆ ಇದನ್ನು ಘೋರ ಆಂಗಿರಸನು ದೇವಕೀಪುತ್ರನಾದ ಕೃಷ್ಣನಿಗೆ ಹೇಳಿದನೇನೆಂದರೆ- ಅವನಿಗೆ (ಇದರಿಂದ) ಬಾಯಾರಿಕೆಯೇ ಇಲ್ಲವಾಯಿತು- ಅವನು ಅಂತವೇಳೆಯಲ್ಲಿ 'ಅಕ್ಷಿತವಾಗಿದೀಯೆ', 'ಅಚ್ಯುತವಾಗಿದೀಯೆ', 'ಪ್ರಾಣಸಂಶಿತವಾಗಿದೀಯೆ'- ಎಂಬೀ ಮೂರನ್ನು ಅರಿತಿರಬೇಕು.'' ಈ ವಿಷಯದಲ್ಲಿ ಎರಡು ಋಕ್ಕುಗಳಿವೆ.

## ವಿದ್ಯಾಸ್ತುತಿಯೂ, ವಿದ್ಯಾಂಗಜಪವೂ

(ಭಾಷ್ಯ)

೨೭೪ ತದ್ ಹ ಏತದ್ ಯಜ್ಞದರ್ಶನಂ ಘೋರೋ ನಾಮತಃ ಆಙ್ಗಿರಸೋ ಗೋತ್ರತಃ ಕೃಷ್ಣಾಯ ದೇವಕೀಪುತ್ರಾಯ ಶಿಷ್ಯಾಯ ಉಕ್ತ್ವಾ ಉವಾಚ। ತದೇತತ್ತ್ರಯಮ್ ಇತ್ಯಾದಿವ್ಯವಹಿತೇನ ಸಂಬನ್ಧಃ। ನ ಚ ಏತದ್ ದರ್ಶನಂ ಶ್ರುತ್ವಾ ಅಪಿಪಾಸ ಏವ ಅನ್ಯಾಭ್ಯೋ ವಿದ್ಯಾಭ್ಯೋ ಬಭೂವ। ಇತ್ಥಂ ಚ ವಿಶಿಷ್ಟಾ ಇಯಂ ವಿದ್ಯಾ ಯತ್ ಕೃಷ್ಣಸ್ಯ ದೇವಕೀಪುತ್ರಸ್ಯ ಅನ್ಯಾಂ ವಿದ್ಯಾಂ ಪ್ರತಿ ತೃಡ್ವಿಚ್ಛೇದಕರೀ ಇತಿ ಪುರುಷಯಜ್ಞವಿದ್ಯಾಂ ಸ್ತೌತಿ। ಘೋರ ಆಙ್ಗಿರಸಃ ಕೃಷ್ಣಾಯ ಉಕ್ತ್ವಾ ಇಮಾಂ ವಿದ್ಯಾಂ ಕಿಮ್ ಉವಾಚೇತಿ? ತದಾಹ। ಸ ಏವಂ ಯಥೋಕ್ತಯಜ್ಞವಿತ್ ಅನ್ತವೇಲಾಯಾಂ ಮರಣಕಾಲೇ ಏತತ್ ಮನ್ತ್ರತ್ರಯಂ ಪ್ರತಿಪದ್ಯೇತ। ಜಪೇತ್ ಇತ್ಯರ್ಥಃ। ಕಿಂ ತತ್? ಅಕ್ಷಿತಮ್ ಅಕ್ಷೀಣಮ್, ಅಕ್ಷತಂ ವಾ ಅಸಿ ಇತ್ಯೇಕಂ ಯಜುಃ। ಸಾಮರ್ಥ್ಯಾತ್ ಆದಿತ್ಯಸ್ಥಂ ಪ್ರಾಣಂ ಚ ಏಕೀಕೃತ್ಯ ಆಹ। ತಥಾ ತಮೇವ ಆಹ। ಅಚ್ಯುತಂ ಸ್ವರೂಪಾತ್ ಅಪ್ರಚ್ಯುತಮ್ ಅಸಿ ಇತಿ ದ್ವಿತೀಯಂ ಯಜುಃ। ಪ್ರಾಣಸಂಶಿತಂ ಪ್ರಾಣಶ್ಚ ಸ ಸಂಶಿತಂ ಸಮ್ಯಕ್ ತನೂಕೃತಂ ಸೂಕ್ಷ್ಮಂ ತತ್ತ್ವಮ್ ಅಸಿ ಇತಿ ತೃತೀಯಂ ಯಜುಃ। ತತ್ರ ಏತಸ್ಮಿನ್ ಅರ್ಥೇ ವಿದ್ಯಾಸ್ತುತಿಪರೇ ದ್ವೇ ಋಚೌ ಮನ್ತ್ರೌ

ಭವತಃ। ನ ಜಪಾರ್ಥೇ। ತ್ರಯಂ ಪ್ರತಿಪದ್ಯೇತ ಇತಿ ತ್ರಿತ್ವಸಂಖ್ಯಾಬಾಧನಾತ್। ಪಞ್ಚಸಂಖ್ಯಾ ಹಿ ತದಾ ಸ್ಯಾತ್ ॥

(ಭಾಷ್ಯಾರ್ಥ)

ಆ ಈ ಯಜ್ಞದರ್ಶನವನ್ನು ಆಂಗಿರಸಗೋತ್ರದ ಘೋರನೆಂಬ ಹೆಸರಿನವನು ದೇವಕೀಪುತ್ರನಾದ ಕೃಷ್ಣನೆಂಬ ಶಿಷ್ಯನಿಗೆ ಹೇಳಿ ಇಂತೆಂದನು· (ಈ ವಾಕ್ಯವು) "ಆ ಈ ಮೂರನ್ನೂ " ಎಂದುಮುಂತಾಗಿರುವ ( ಮುಂದಿನ ) ವ್ಯವಹಿತವಾಕ್ಯಕ್ಕೆ ಸಂಬಂಧ(ಪಾಗತಕ್ಕದ್ದು). ಆ (ಕೃಷ್ಣನು) ಈ ದರ್ಶನವನ್ನು ಶ್ರವಣಮಾಡಿದಮೇಲೆ ಮಿಕ್ಕ ವಿದ್ಯೆಗಳಲ್ಲಿ ಬಾಯಾರಿಕೆಯಿಲ್ಲದವನೇ ಆದನು. ಈ ವಿದ್ಯೆಯು ಎಂಥ ವಿಶೇಷ(ಗುಣ)ವುಳ್ಳದ್ದೆಂದರೆ ದೇವಕೀಪುತ್ರನಾದ ಕೃಷ್ಣನಿಗೆ ಮತ್ತೊಂದು ವಿದ್ಯೆಯಲ್ಲಿ ಅದು ಆಸೆಯನ್ನೇ ತೆಗೆದುಹಾಕಿಬಿಟ್ಟಿತು ಎಂದು ಪುರುಷಯಜ್ಞವಿದ್ಯೆಯನ್ನು (ಶ್ರುತಿ) ಹೊಗಳಿರುತ್ತದೆ

ಘೋರ ಆಂಗಿರಸನು ಈ ವಿದ್ಯೆಯನ್ನು ಕೃಷ್ಣನಿಗೆ ಹೇಳಿದ ಬಳಿಕ ಏನೆಂದನು ? ಎಂದರೆ (ಶ್ರುತಿ) ಅದನ್ನು ಹೇಳುತ್ತದೆ. ಅವನು, ಎಂದರೆ ಮೇಲೆ ಹೇಳಿರುವ ಯಜ್ಞವನ್ನು ಅರಿತುಕೊಂಡಿರುವವನು, ಅಂತವೇಳೆಯಲ್ಲಿ ಮರಣಕಾಲದಲ್ಲಿ ಈ ಮೂರು ಮಂತ್ರಗಳನ್ನು ಅರಿತಿರಬೇಕು, ಜಪಮಾಡುತ್ತಿರಬೇಕು ಎಂದರ್ಥ[1] ಆ (ಮಂತ್ರತ್ರಯವು) ಯಾವದು ?– ಎಂದರೆ 'ಅಕ್ಷಿತಮಸಿ' (ಅಕ್ಷಿತವಾಗಿದೀಯೆ), ನಾಶವಾಗದ್ದು ಅಥವಾ ಗಾಯವಿಲ್ಲದ್ದು (ಆಗಿದೀಯೆ) ಎಂಬುದೊಂದು ಯಜುಸ್ಸು. ಆದಿತ್ಯನಲ್ಲಿರುವ (ದೇವತೆಯನ್ನೂ) ಪ್ರಾಣನನ್ನೂ ಒಂದುಮಾಡಿಕೊಂಡು (ಹೀಗೆ) ಹೇಳಿರುತ್ತದೆ– ಎಂದು ಅರ್ಥವಶದಿಂದ ಕಲ್ಪಿಸಬೇಕು[2] ಹೀಗೆಯೇ ಅದೇ (ಪ್ರಾಣವನ್ನು ಕುರಿತು) 'ಅಚ್ಯುತಮಸಿ' (ಅಚ್ಯುತವಾಗಿದೀಯೆ !) ಸ್ವರೂಪದಿಂದ ಜಾರದೆ ಇರುವವನಾಗಿದೀಯೆ– ಎಂಬುದು ಎರಡನೆಯ ಯಜುಸ್ಸು. 'ಪ್ರಾಣಸಂಶಿತಮಸಿ' ಪ್ರಾಣವೂ ಸಂಶಿತವೂ ಎಂದರೆ ಚೆನ್ನಾಗಿ ಹರಿತವಾಗಿ ಮಾಡಿರುವ ಸೂಕ್ಷ್ಮವಾದ ತತ್ತ್ವವೂ ಆಗಿರುತ್ತೀಯೆ– ಎಂಬುದು ಮೂರನೆಯ ಯಜುಸ್ಸು[3].

---

1. ಸಾಯುವವರೆಗೂ ಜಪಮಾಡುತ್ತಿರಬೇಕು ಎಂದರ್ಥ, ಈ ಭಾವನೆ ಸಾಯುವ ಕಾಲದಲ್ಲಿಯೂ ಇರಬೇಕು. ಸೂ. ಭಾ. ೪-೧-೧೨ (ಭಾ ಭಾ ೫೨೬).

2. ಪುರುಷಯಜ್ಞದಲ್ಲಿ ಮತ್ತೆಯಾವ ಸವನದೇವತೆಯೂ ಇಲ್ಲದ್ದರಿಂದ ಪ್ರಾಣಾದಿತ್ಯವನ್ನು ಒಂದೆಂದು ಭಾವಿಸಿಕೊಂಡು ಆದಿತ್ಯನನ್ನೇ ಈ ಮಂತ್ರದಿಂದ ಹೇಳಿರುತ್ತದೆ ಎಂದು ನಿಶ್ಚಯಿಸಬೇಕಾಗಿದೆ– ಎಂದು ಭಾವ.

3. ಈ ಎಲ್ಲಾ ಮಂತ್ರಗಳೂ ಒಂದೇ ದೇವತೆಯನ್ನು ಹೇಳುತ್ತವೆ.

ಇಲ್ಲಿ ಎಂದರೆ ವಿದ್ಯೆಯನ್ನು ಹೊಗಳುವದರಲ್ಲಿ ತಾತ್ಪರ್ಯವುಳ್ಳ ಈ ವಿಷಯದಲ್ಲಿ ಎರಡು ಋಕ್ಕುಗಳು ಎಂದರೆ ಮಂತ್ರಗಳು ಇರುತ್ತವೆ. (ಇವು ಸ್ತುತಿಗೇ ಹೊರತು) ಜಪಕ್ಕಲ್ಲ, ಏಕೆಂದರೆ (ಹಾಗಾದವಕ್ಷದಲ್ಲಿ) 'ಈ ಮೂರನ್ನೂ ಅರಿತಿರಬೇಕು' ಎಂದು (ಹೇಳಿರುವ) ಮೂರೆಂಬ ಸಂಖ್ಯೆಯನ್ನು ಬಾಧಿಸಿದಂತಾಗುತ್ತದೆ. ಆಗ (ಮಂತ್ರಗಳ) ಸಂಖ್ಯೆ ಐದಾಗುವದಷ್ಟೆ ?

## ಪುರುಷವಿದ್ಯಾಸ್ತುತಿಯ ಋಕ್ಕುಗಳು

(ಉಪನಿಷತ್ತು)

**ಆದಿತ್ಪ್ರತ್ನಸ್ಯ ರೇತಸಃ । ಉದ್ವಯಂ ತಮಸಸ್ಪರಿ ಜ್ಯೋತಿಃ ಪಶ್ಯನ್ತ ಉತ್ತರಗ್ಂ ಸ್ವಃ ಪಶ್ಯನ್ತ ಉತ್ತರಂ ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮಿತಿ ಜ್ಯೋತಿರುತ್ತಮಮಿತಿ॥**

೭. 'ಆದಿತ್ಪ್ರತ್ನಸ್ಯ ರೇತಸಃ' (ಪುರಾತನವಾದ ರೇತಸ್ಸಿನ ಎಂದು ಒಂದು ಋಕ್ಕು). 'ಉದ್ವಯಂ . .' ನಾವು ತಮಸ್ಸಿನ ಆಚೆ ಇರುವ ಉತ್ತರವಾದ ನಮ್ಮ ಜ್ಯೋತಿಯನ್ನು ಕಾಣುತ್ತಾ ದೇವತೆಗಳಲ್ಲಿರುವ ದೇವನಾದ ಉತ್ತಮಜ್ಯೋತಿಯಾದ, ಉತ್ತಮಜ್ಯೋತಿಯಾದ, ಸೂರ್ಯನನ್ನು ಮೇಲೇರಿ ಸೇರಿದೆವು' (ಎಂಬುದು) ಇನ್ನೊಂದು ಋಕ್ಕು.

## ಬ್ರಹ್ಮಜ್ಞಾನಿಗಳಿಗೆ ಎಲ್ಲೆಲ್ಲಿಯೂ ಆತ್ಮಜ್ಯೋತಿಯು ಕಾಣಿಸುತ್ತದೆ

(ಭಾಷ್ಯ)

೨೭೫. ಆತ್ ಇತ್ಯತ್ರ ಆಕಾರಸ್ಯ ಅನುಬನ್ಧಸ್ತಕಾರೋಽನರ್ಥಕಃ, ಇಚ್ಛಬ್ದಶ್ಚ । ಪ್ರತ್ನಸ್ಯ ಚಿರನ್ತನಸ್ಯ ಪುರಾಣಸ್ಯ ಇತ್ಯರ್ಥಃ । ರೇತಸಃ ಕಾರಣಸ್ಯ, ಬೀಜಭೂತಸ್ಯ ಜಗತಃ, ಸದಾಖ್ಯಸ್ಯ ಜ್ಯೋತಿಃ ಪ್ರಕಾಶಂ ಪಶ್ಯನ್ತಿ । ಆಶಬ್ದಃ ಉತ್ಸೃಷ್ಟಾನುಬನ್ಧಃ ಪಶ್ಯನ್ತಿ ಇತ್ಯನೇನ ಸಂಬಧ್ಯತೇ । ಕಿಂ ತಜ್ಜ್ಯೋತಿಃ (ಯತ್)[1] ಪಶ್ಯನ್ತಿ ? ವಾಸರಮ್ ಅಹಃ । ಅಹರಿವ ತತ್ ಸರ್ವತೋ ವ್ಯಾಪ್ತಂ ಬ್ರಹ್ಮಣೋ ಜ್ಯೋತಿಃ । ನಿವೃತ್ತಚಕ್ಷುಷಃ ಬ್ರಹ್ಮವಿದಃ ಬ್ರಹ್ಮಚರ್ಯಾದಿನಿವೃತ್ತಿಸಾಧನೈಃ ಶುದ್ಧಾನ್ತಃಕರಣಾಃ ಆ ಸಮನ್ತತೋ ಜ್ಯೋತಿಃ ಪಶ್ಯನ್ತಿ ಇತ್ಯರ್ಥಃ । ಪರಃ ಪರಮ್ ಇತಿ ಲಿಙ್ಗವ್ಯತ್ಯಯೇನ । ಜ್ಯೋತಿಷ್ಪರತ್ವಾತ್ । ಯತ್ ಇಧ್ಯತೇ

---

1. ಇಲ್ಲೊಂದು 'ಯತ್'ಶಬ್ದವು ಇರಬೇಕೆಂದು ತೋರುತ್ತದೆ.

ದೀಪ್ಯತೇ ದಿವಿ ದ್ಯೋತನವತಿ ಪರಸ್ಮಿನ್ ಬ್ರಹ್ಮಣಿ ವರ್ತಮಾನಮ್। ಯೇನ ಜ್ಯೋತಿಷಾ ಇದ್ಧಃ ಸವಿತಾ ತಪತಿ, ಚನ್ದ್ರಮಾ ಭಾತಿ, ವಿದ್ಯುತ್ ವಿದ್ಯೋತತೇ, ಗ್ರಹತಾರಾಗಣಾ ವಿಭಾಸನ್ತೇ॥

(ಭಾಷ್ಯಾರ್ಥ)

ಆತ್ ಎಂಬಲ್ಲಿ ಆಕಾರಕ್ಕೆ ಸೇರಿಕೊಂಡಿರುವ ತಕಾರಕ್ಕೆ ಅರ್ಥವಿಲ್ಲ, (ಮುಂದಿರುವ) ಇತ್ ಎಂಬ ಶಬ್ದಕ್ಕೂ (ಅರ್ಥವಿಲ್ಲ). ಪುರಾತನವಾದ, ಹಳೆಯ ಬಹಳ ಹಿಂದಿನ ಎಂದರ್ಥ ರೇತಸ್ಸಿನ ಕಾರಣದ, ಸತ್ತೆಂಬ[1] ಜಗತ್ತಿನ ಬೀಜದ ಜ್ಯೋತಿಯನ್ನು[2] (ತಕಾರವೆಂಬ) ಅನುಬಂಧವನ್ನು ಬಿಟ್ಟು (ಉಳಿಯುವ) ಆಶಬ್ದವು (ಮುಂದಿರುವ) ಪಶ್ಯನ್ತಿ ಎಂಬುದಕ್ಕೆ ಸಂಬದ್ಧವಾಗಿರುತ್ತದೆ, ಕಾಣು ತ್ತಾರೆಂಬ ಆ ಜ್ಯೋತಿ ಯಾವದು ? (ಎಂದರೆ), ವಾಸರವನ್ನು ಹಗಲನ್ನು ಹಗಲಿನ (ಬೆಳಕಿ)ನಂತೆ ಎಲ್ಲೆಲ್ಲಿಯೂ ಹಬ್ಬಿಕೊಂಡಿರುವ ಆ ಬ್ರಹ್ಮದ ಬೆಳಕನ್ನು, ನಿವೃತ್ತ ಚಕ್ಷುಷ್ಕರಾದ ಬ್ರಹ್ಮಜ್ಞಾನಿಗಳು, ಬ್ರಹ್ಮಚರ್ಯವೇ ಮುಂತಾದ ನಿವೃತ್ತಿ ಸಾಧನಗಳಿಂದ ಶುದ್ಧರಾದ ಅಂತಃಕರಣವುಳ್ಳವರಾಗಿ ಆ ಎಂದರೆ ಎಲ್ಲೆಲ್ಲಿಯೂ (ಆ) ಜ್ಯೋತಿಯನ್ನು ಕಾಣುತ್ತಾರೆ ಎಂದರ್ಥ 'ಪರಃ' ಎಂಬುದನ್ನು ಪರಮ್ ಎಂದು ಲಿಂಗವಿಪರಿಣಾಮವನ್ನು ಮಾಡಿಕೊಂಡು (ಅರ್ಥಮಾಡಿಕೊಳ್ಳಬೇಕು). ಏಕೆಂದರೆ (ಅದು) 'ಜ್ಯೋತಿ'ಯನ್ನು ಹೇಳುವ (ವಿಶೇಷಣವು). ದ್ಯುಲೋಕದಲ್ಲಿ ಎಂದರೆ ಪ್ರಕಾಶವುಳ್ಳ ಪರಬ್ರಹ್ಮದಲ್ಲಿದ್ದುಕೊಂಡು ಹೊತ್ತಿಕೊಂಡು ಉರಿಯುತ್ತಿರು ವದಲ್ಲ, ಹೊಳೆಯುತ್ತಿರುವದಲ್ಲ, (ಆ ಜ್ಯೋತಿಯನ್ನು), ಯಾವ ಜ್ಯೋತಿಯಿಂದ ಹೊತ್ತಿಕೊಂಡು ಸೂರ್ಯನು ತಪಿಸುತ್ತಿರುವನೋ[3] ಚಂದ್ರನು ಬೆಳಗುತ್ತಿರು ವನೋ, ಮಿಂಚು ಥಳಾರೆನ್ನವದೋ, ಗ್ರಹತಾರಕೆಗಳು ಮಿನುಗುತ್ತಿರುವವೋ[4] (ಆ ಜ್ಯೋತಿಯನ್ನು ಕಾಣುತ್ತಾರೆ).

---

1. ಆರನೆಯ ಅಧ್ಯಾಯದಲ್ಲಿ ಹೇಳಿರುವ ಸದ್ಬ್ರಹ್ಮವನ್ನೇ ಇಲ್ಲಿ ಆದಿತ್ಯನಲ್ಲಿರುವ ಜ್ಯೋತಿಯೆಂದು ಹೇಳಿದೆ; ಅಧ್ಯಾತ್ಮಪ್ರಾಣನೊಡನೆ ಒಂದೆಂದು ಭಾವಿಸಿ ಮೇಲೆ ಹೇಳಿದ ಮೂರು ಯಜುಸ್ಸುಗಳಲ್ಲಿ ತಿಳಿಸಿದೆ ಎಂಬುದನ್ನು 'ಸದಾಖ್ಯಸ್ಯ' ಎಂಬ ವಿಶೇಷಣವು ಸೂಚಿಸುತ್ತದೆ.

2. ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಃ ಪಶ್ಯನ್ತಿ ವಾಸರಮ್। ಪರೋ ಯದಿಧ್ಯತೇ ದಿವಿ॥ (ಋ. ಸಂ. ಮಂ. ೮-೬-೩೦) ಎಂಬ ಮಂತ್ರದ ಪ್ರತೀಕವನ್ನು ಉಪನಿಷತ್ತಿನಲ್ಲಿ ಕೊಟ್ಟಿದೆ. ಈ ಮಂತ್ರಕ್ಕೆ ಸಾಯಣಭಾಷ್ಯದಲ್ಲಿ ಸೂರ್ಯಪರವಾಗಿ ಅರ್ಥವನ್ನು ಬರೆದಿದ್ದರೂ ಇದು ನಿಜವಾಗಿ ಸೂರ್ಯನಲ್ಲಿರುವ ಆತ್ಮಜ್ಯೋತಿಯನ್ನೇ ತಿಳಿಸುತ್ತದೆಯಾದ್ದರಿಂದ ಅದನ್ನಂತೆ ಭಾಷ್ಯದಲ್ಲಿ ವ್ಯಾಖ್ಯಾನಮಾಡಿರುತ್ತದೆ.

3. ತೈ. ಬ್ರಾ ೩-೧೨-೯ರ ಸೂಚನೆ.

4. ಮುಂ. ೨-೨-೧೦ರ ಸೂಚನೆ

## ಅಜ್ಞಾನನಾಶಕವಾದ ಆತ್ಮಜ್ಯೋತಿಯನ್ನು ಕಂಡವರು ಧನ್ಯರು

(ಭಾಷ್ಯ)

೨೭೭. ಕಿಂ ಚ ಅನ್ಯೋ ಮನ್ತ್ರದೃಕ್ ಆಹ ಯಥೋಕ್ತಂ ಜ್ಯೋತಿಃ ಪಶ್ಯನ್। ಉದ್ ವಯಂ ತಮಸಃ ಅಜ್ಞಾನಲಕ್ಷಣಾತ್ ಪರಿ ಪರಸ್ತಾತ್ ಇತಿ ಶೇಷಃ। ತಮಸೋ ವಾ ಅಪನೇತೃ ಯದ್ ಜ್ಯೋತಿಃ ಉತ್ತರಂ ಆದಿತ್ಯಸ್ಥಂ ಪರಿ ಪಶ್ಯನ್ತಃ ವಯಮ್ ಉದಗನ್ಮ ಇತಿ ವ್ಯವಹಿತೇನ ಸಂಬನ್ಧಃ। ತದ್ ಜ್ಯೋತಿಃ ಸ್ವಃ ಸ್ವಮ್ ಆತ್ಮೀಯಮ್ ಅಸ್ಮದ್ ಹೃದಿ ಸ್ಥಿತಮ್। ಆದಿತ್ಯಸ್ಥಂ ಚ ತದೇಕಂ ಜ್ಯೋತಿಃ। ಯತ್ ಉತ್ತರಮ್ ಉತ್ಕೃಷ್ಟತರಮ್ ಊರ್ಧ್ವತರಂ ವಾ ಅಪರಂ ಜ್ಯೋತಿರಪೇಕ್ಷ್ಯ ಪಶ್ಯನ್ತಃ ಉದಗನ್ಮ ವಯಮ್। ಕಮ್ ಉದಗನ್ಮೇತಿ ? ಆಹ। ದೇವಂ ದ್ಯೋತನವನ್ತಂ ದೇವತ್ರಾ ದೇವೇಷು ಸರ್ವೇಷು ಸೂರ್ಯಂ ರಸಾನಾಂ ರಶ್ಮೀನಾಂ ಪ್ರಾಣಾನಾಂ ಚ ಜಗತಃ ಈರಣಾತ್ ಸೂರ್ಯಃ। ತಮ್ ಉದಗನ್ಮ ಗತವನ್ತೋ ಜ್ಯೋತಿಃ ಉತ್ತಮಂ ಸರ್ವಜ್ಯೋತಿರ್ಭ್ಯಃ ಉತ್ಕೃಷ್ಟತಮಮ್। ಅಹೋ ಪ್ರಾಪ್ತಾ ವಯಮ್ ಇತ್ಯರ್ಥಃ। ಇದಂ ತಜ್ಜ್ಯೋತಿಃ ಯದೃಗ್ಭ್ಯಾಂ ಸ್ತುತಂ ಯದ್ ಯಜುಸ್ತ್ರಯೇಣ ಪ್ರಕಾಶಿತಮ್। ದ್ವಿರಭ್ಯಾಸೋ ಯಜ್ಞಕಲ್ಪನಾಪರಿಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು ಇನ್ನೊಬ್ಬ ಮಂತ್ರದ್ರಷ್ಟೃ(ವಾದ ಋಷಿಯು)[1] ಮೇಲೆ ಹೇಳಿದ ಜ್ಯೋತಿಯನ್ನು ಕಂಡುಕೊಂಡನಾಗಿ ಹೀಗೆಂದಿರುತ್ತಾನೆ. ನಾವು ಅಜ್ಞಾನರೂಪವಾದ ತಮಸ್ಸಿನಿಂದ, ಆಚೆಗೆ ಎಂದು ಶೇಷ[2]. ಅಥವಾ ತಮಸ್ಸನ್ನು ಹೋಗಲಾಡಿಸುವ ಆದಿತ್ಯನಲ್ಲಿರುವ ಜ್ಯೋತಿಯಿದೆಯಲ್ಲ, ಅದನ್ನು (ಪರಿ= ) ಎಲ್ಲೆಲ್ಲಿಯೂ ಕಾಣುತ್ತಾ[3] ನಾವು (ಉದಗನ್ಮ= ) ಮೇಲಕ್ಕೇರಿ ಸೇರಿದೆವು– ಎಂದು ವ್ಯವಹಿತವಾದ (ಪಶ್ಯನ್ತಃ ಅಗನ್ಮ ಎಂಬುದ)ರೊಡನೆ (ಉತ್, ಪರಿ ಎಂಬಿವಕ್ಕೆ) ಸಂಬಂಧವು.

---

1. ಈ ಮಂತ್ರವು ಋ ಸಂ. ಮಂ ೧–೯–೫೦–೧೦ರಲ್ಲಿದೆ ಇದೂ ಸೂರ್ಯನನ್ನು ವಾಚ್ಯವೃತ್ತಿಯಿಂದಲೂ ಲಕ್ಷಣೆಯಿಂದ ಸೂರ್ಯನಲ್ಲಿರುವ ಪರಮಾತ್ಮನನ್ನೂ ಹೇಳುತ್ತದೆ

2. ಅಜ್ಞಾನವಾಗಲಿ ಅದರ ಕಾರ್ಯವಾಗಲಿ ಒಂದಿಷ್ಟೂ ಸೋಂಕದ ಎಂದರ್ಥ.

3. ಆದಿತ್ಯನಲ್ಲಿರುವ ಜ್ಯೋತಿಯೆಂದು ಉಪಾಸನೆಯ ಜಪಮಂತ್ರದಲ್ಲಿ ಹೇಳಿದ್ದರೂ ಇದು ಎಲ್ಲೆಲ್ಲಿಯೂ ಇದೆ ಎಂಬುದನ್ನು ಜ್ಞಾನಿಗಳು ಬಲ್ಲರು.

ಆ ಜ್ಯೋತಿಯು (ಸ್ವಃ=ಸ್ವಮ್) ನಮ್ಮದು, ನಮ್ಮ ಹೃದಯದಲ್ಲಿರತಕ್ಕದ್ದು, ಆದಿತ್ಯನಲ್ಲಿಯೂ[1] ಆ ಒಂದೇ ಜ್ಯೋತಿಯೇ ಇರತಕ್ಕದ್ದು. ಆ ಉತ್ತರವಾದ ಎಂದರೆ ಕಡಿಮೆಯ ಜ್ಯೋತಿಗಿಂತಲೂ[2] ಉತ್ಕೃಷ್ಟವಾಗಿರ್ರುವ, ಅಥವಾ ಅದಕ್ಕಿಂತಲೂ ಮೇಲಿರುವ[3] (ಜ್ಯೋತಿಯನ್ನು) ಕಾಣುತ್ತಾ ನಾವು ಮೇಲಕ್ಕೇರಿ ಸೇರಿದೆವು.[4] ಯಾವದನ್ನು ಮೇಲಕ್ಕೇರಿ ಸೇರಿದೆವು?– ಎಂದರೆ ಹೇಳುತ್ತಾನೆ: ದೇವನನ್ನು ಕಾಂತಿಯುಳ್ಳ (ದೇವತ್ರಾ= ದೇವೇಷು) ಸರ್ವದೇವತೆಗಳಲ್ಲಿಯೂ (ಇರುವ) ಸೂರ್ಯನೆಂಬ (ದೇವನನ್ನು)– ರಸಗಳನ್ನು, ರಶ್ಮಿಗಳನ್ನು, ಮತ್ತು ಜಗತ್ತಿನ ಪ್ರಾಣಗಳನ್ನು ಪ್ರೇರಿಸುವದರಿಂದ ಸೂರ್ಯನು[5] ಆ (ಸೂರ್ಯನೆಂಬ) ಉತ್ತಮ ಜ್ಯೋತಿಯನ್ನು ಜ್ಯೋತಿಗಳೆಲ್ಲಕ್ಕಿಂತಲೂ ಉತ್ತಮವಾದ (ಜ್ಯೋತಿಯನ್ನು) ಮೇಲಕ್ಕೇರಿ ಸೇರಿಕೊಂಡೆವು, ನಾವು ಪಡೆದುಕೊಂಡೆವು– ಎಂದರ್ಥ

ಎರಡು ಋಕ್ಕುಗಳಿಂದಲೂ ಸ್ತುತವಾಗಿರುವ ಈ ಜ್ಯೋತಿಯೇ (ಮೇಲೆ ಉದಾಹರಿಸಿದ) ಮೂರು ಯಜುಸ್ಸುಗಳಿಂದ ಪ್ರಕಾಶಿತವಾಗಿರುತ್ತದೆ (ಜ್ಯೋತಿರುತ್ತಮಮ್ ಎಂದು) ಎರಡು ಸಲ ಹೇಳಿರುವದು ಯಜ್ಞಕಲ್ಪನೆಯ[6] ಸಂಸಮಾಪ್ತಿಯನ್ನು (ತಿಳಿಸು)ವದಕ್ಕೆ

---

1 ತೈ. ಭಾ ೨-೮ (ಛಾ. ಭಾ ೨೦೪).

2 ಸೂರ್ಯಮಂಡಲದ ಜ್ಯೋತಿಗಿಂತಲೂ.

3. ಸೂರ್ಯಜ್ಯೋತಿಗೆ ಸಜಾತೀಯವಾಗಿರುವದರಿಂದ ಇದನ್ನು ಜ್ಯೋತಿ ಎಂದು ಕರೆದಿದೆಯೆಂದು ಭಾವಿಸಬಾರದು ಎಂದು ಭಾವ.

4. ಅಪರಿಚ್ಛಿನ್ನರೂಪದಿಂದ ಕಂಡುಕೊಂಡೆವು.

5. ರಸಗಳು ಪಕ್ವವಾಗುವದು ರಶ್ಮಿಗಳು ಹರಡಿಕೊಳ್ಳುವದು, ಪ್ರಾಣಗಳು ವ್ಯಾಪಾರವನ್ನು ಮಾಡುವದು– ಈ ದೇವನ ಪ್ರೇರಣೆಯಿಂದಲೇ: ಬೃ. ಭಾ. ೫-೧೫-೧ರಲ್ಲಿ (ಛಾ. ಭಾ. ೪೦೪). ಸೂರ್ಯಶಬ್ದಕ್ಕೆ ಮಾಡಿರುವ ವ್ಯಾಖ್ಯಾನವನ್ನು ನೋಡಿ. ಅಲ್ಲಿರುವದು ಸಗುಣಬ್ರಹ್ಮವಾದರೂ ಇಲ್ಲಿಗೂ ಆ ಅರ್ಥವು ಹೊಂದುತ್ತದೆ.

6. ತಾನೇ ಯಜ್ಞವೆಂದು ಸಂಪಾದನೆಮಾಡಿಕೊಳ್ಳುವ ರೂಪದ ಉಪಾಸನೆಯ ಪ್ರಕರಣದ.

# ಮೂರನೆಯ ಅಧ್ಯಾಯ-ಹದಿನೆಂಟನೆಯ ಖಂಡ

(ಮನಆಕಾಶಗಳಲ್ಲಿ ಬ್ರಹ್ಮದೃಷ್ಟಿ)

## ಮನಆಕಾಶಬ್ರಹ್ಮಗಳ ಉಪಾಸನೆ

(ಉಪನಿಷತ್ತು)

**ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತ ಮಾಕಾಶೋ ಬ್ರಹ್ಮೇತ್ಯುಭಯಮಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ ॥೧॥**

೧. ಮನಸ್ಸು ಬ್ರಹ್ಮವೆಂದು ಉಪಾಸನೆಮಾಡಬೇಕು. ಇದು ಅಧ್ಯಾತ್ಮವು. ಇನ್ನು ಅಧಿದೈವತವು. ಆಕಾಶವು ಬ್ರಹ್ಮವೆಂದು (ಉಪಾಸನೆಮಾಡಬೇಕು. ಹೀಗೆ) ಅಧ್ಯಾತ್ಮ, ಅಧಿದೈವತ- ಈ ಎರಡನ್ನೂ ಉಪದೇಶಮಾಡಿದಂತೆ ಆಯಿತು.

### ಗ್ರಂಥಸಂಬಂಧ

(ಭಾಷ್ಯ)

೨೭೭. ಮನೋಮಯ ಈಶ್ವರ ಉಕ್ತಃ, ಆಕಾಶಾತ್ಮಾ ಇತಿ ಚ ಬ್ರಹ್ಮಣೋ ಗುಣೈಕದೇಶತ್ವೇನ। ಅಥೇದಾನೀಂ ಮನಆಕಾಶಯೋಃ ಸಮಸ್ತಬ್ರಹ್ಮ ದೃಷ್ಟಿವಿಧಾನಾರ್ಥ ಆರಮ್ಭಃ 'ಮನೋ ಬ್ರಹ್ಮ' ಇತ್ಯಾದಿ ॥

(ಭಾಷ್ಯಾರ್ಥ)

ಈಶ್ವರನು ಮನೋಮಯನೆಂದೂ ಆಕಾಶಾತ್ಮನೆಂದೂ (೩-೧೪-೨) (ಮನ ಆಕಾಶಗಳನ್ನು) ಬ್ರಹ್ಮದ ಗುಣಗಳ ಒಂದು ಭಾಗವಾಗಿ ಹೇಳಿದ್ದಾಯಿತು. ಇನ್ನು ಈಗ ಮನಆಕಾಶಗಳಲ್ಲಿ ಸಮಸ್ತಬ್ರಹ್ಮದ ದೃಷ್ಟಿಯನ್ನು ವಿಧಿಸುವದಕ್ಕಾಗಿ[1] 'ಮನೋಬ್ರಹ್ಮ' ಎಂದು ಮುಂತಾಗಿರುವ (ಈ ಮುಂದಿನ ಗ್ರಂಥ)ವನ್ನು ಆರಂಭಿಸಿದೆ.

---

1. ಬ್ರಹ್ಮದ ಏಕದೇಶವೆಂದು ಹಿಂದೆ ಹೇಳಿತ್ತು, ಈಗ ಅದು ಸರ್ವಬ್ರಹ್ಮವೂ ಆಗಿದೆ ಎಂದು ಹೇಳಲಾಗುತ್ತದೆ. ಸಾಮಾವಯವಗಳ ಉಪಾಸನೆಯನ್ನು ಹೇಳಿದಬಳಿಕ ಸಮಸ್ತ ಸಾಮದ ಉಪಾಸನೆಯನ್ನು ಹೇಳಿದಂತೆಯೇ ಇದು.

## ಮನಆಕಾಶಗಳನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು

(ಭಾಷ್ಯ)

೨೭೮. ಮನಃ ಮನುತೇಽನೇನ ಇತ್ಯನ್ತಃಕರಣಮ್ । ತದ್ ಬ್ರಹ್ಮ ಪರಮ್ ಇತ್ಯುಪಾಸೀತ । ಇತಿ ಏತತ್ ಆತ್ಮವಿಷಯಂ ದರ್ಶನಮ್ ಅಧ್ಯಾತ್ಮಮ್ । ಅಥ ಅಧಿದೈವತಮ್ । ದೇವತಾವಿಷಯಮ್ ಇದಂ ವಕ್ಷ್ಯಾಮಃ । ಆಕಾಶೋ ಬ್ರಹ್ಮ ಇತ್ಯುಪಾಸೀತ । ಏವಮ್ ಉಭಯಮ್ ಅಧ್ಯಾತ್ಮಮ್ ಅಧಿದೈವತಂ ಚ ಉಭಯಂ ಬ್ರಹ್ಮದೃಷ್ಟಿವಿಷಯಮ್ ಆದಿಷ್ಟಮ್ ಉಪದಿಷ್ಟಂ ಭವತಿ । ಆಕಾಶ ಮನಸೋಃ ಸೂಕ್ಷ್ಮತ್ವಾತ್ । ಮನಸಾ ಉಪಲಭ್ಯತ್ವಾಚ್ಚ ಬ್ರಹ್ಮಣೋ ಯೋಗ್ಯಂ ಮನೋ ಬ್ರಹ್ಮದೃಷ್ಟೇಃ । ಆಕಾಶಶ್ಚ ಸರ್ವಗತತ್ವಾತ್, ಸೂಕ್ಷ್ಮತ್ವಾತ್ ಉಪಾಧಿ ಹೀನತ್ವಾಚ್ಚ ॥

(ಭಾಷ್ಯಾರ್ಥ)

ಇವರಿಂದ ಅರಿತುಕೊಳ್ಳುತ್ತಾರಾದ್ದರಿಂದ ಅಂತಃಕರಣವನ್ನು 'ಮನಸ್ಸು' (ಎಂದಿದೆ), ಆ (ಮನಸ್ಸು) ಪರಬ್ರಹ್ಮವು ಎಂದು ಉಪಾಸನೆಮಾಡಬೇಕು ಇದು ಅಧ್ಯಾತ್ಮವು, ಎಂದರೆ ಆತ್ಮವಿಷಯದ ದರ್ಶನವು. ಇನ್ನು ಅಧಿದೈವತವನ್ನು ಎಂದರೆ ದೇವತಾವಿಷಯವಾದ ಇದನ್ನು ಹೇಳುವೆವು. ಆಕಾಶವು ಬ್ರಹ್ಮವು ಎಂದು ಉಪಾಸನೆಮಾಡಬೇಕು ಹೀಗೆ ಅಧ್ಯಾತ್ಮ, ಅಧಿದೈವತ – ಎಂಬ (ಈ) ಎರಡೂ ಬ್ರಹ್ಮ ದೃಷ್ಟಿಗೆ ವಿಷಯವು ಎಂದು ಉಪದೇಶಮಾಡಿದಂತೆ ಆಯಿತು.

ಆಕಾಶಮನಸ್ಸುಗಳು ಸೂಕ್ಷ್ಮವಾಗಿರುವದರಿಂದ (ಅವುಗಳಲ್ಲಿ) ಬ್ರಹ್ಮದೃಷ್ಟಿ ಯನ್ನು (ಉಪದೇಶಿಸಿದೆ)[1], ಬ್ರಹ್ಮವು ಮನಸ್ಸಿನಿಂದಲೇ ಉಪಲಭ್ಯವಾಗಿರು ವದರಿಂದ[2] ಮನಸ್ಸು ಬ್ರಹ್ಮದೃಷ್ಟಿಗೆ ತಕ್ಕದ್ದಾಗಿದೆ, ಸರ್ವಗತವಾಗಿರುವದ ರಿಂದಲೂ ಸೂಕ್ಷ್ಮವಾಗಿರುವದರಿಂದಲೂ ಉಪಾಧಿಯಿಲ್ಲದ್ದಾದ್ದರಿಂದಲೂ ಆಕಾಶ ವೂ (ಬ್ರಹ್ಮದೃಷ್ಟಿಗೆ ಯೋಗ್ಯವಾಗಿರುತ್ತದೆ)[3].

(ಉಪನಿಷತ್ತು)

**ತದೇತಚ್ಚತುಷ್ಪಾದ್ ಬ್ರಹ್ಮ ವಾಕ್ಪಾದಃ ಪ್ರಾಣಃ ಪಾದಶ್ಚಕ್ಷುಃ ಪಾದಃ ಶ್ರೋತ್ರಂ ಪಾದ ಇತ್ಯಧ್ಯಾತ್ಮಮಥಾಧಿದೈವತಮಗ್ನಿಃ**

---

1. ಅಧ್ಯಾತ್ಮವಾಗಿ ಮನಸ್ಸಿಗಿಂತಲೂ ಅಧಿದೈವತವಾಗಿ ಆಕಾಶಕ್ಕಿಂತಲೂ ಸೂಕ್ಷ್ಮ ವಾದ ಪ್ರತೀಕವು ದೊರಕುವದಿಲ್ಲ.

2. ಕ. ೨-೧-೧೧, ಬೃ. ೪-೪-೧೯.

3. ಬ್ರಹ್ಮದ ಗುಣಗಳು ಆಕಾಶದಲ್ಲಿ ಬಹಳವಾಗಿರುವದರಿಂದ ಅದನ್ನು ಪ್ರತೀಕ ವಾಗಿಟ್ಟುಕೊಂಡಿದೆ ಎಂದು ಭಾವ.

**ಪಾದೋ ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದ ಇತ್ಯು ಭಯಮೇವಾದಿಷ್ಟಂ ಭವತ್ಯಧ್ಯಾತ್ಮಂ ಚೈವಾಧಿದೈವತಂ ಚ ॥ ೨॥**

೨. ಈ ಬ್ರಹ್ಮವು ಚತುಷ್ಪಾತ್ತಾಗಿದೆ. ವಾಕ್ಕು (ಒಂದು) ಪಾದವು, ಪ್ರಾಣವು (ಒಂದು) ಪಾದವು, ಚಕ್ಷುಸ್ಸು (ಒಂದು) ಪಾದವು, ಶ್ರೋತ್ರವು (ಒಂದು) ಪಾದವು. ಇದು ಅಧ್ಯಾತ್ಮವು. ಇನ್ನು ಅಧಿದೈವತವು. ಅಗ್ನಿಯು (ಒಂದು) ಪಾದವು, ವಾಯುವು (ಒಂದು) ಪಾದವು, ಆದಿತ್ಯನು (ಒಂದು) ಪಾದವು, ದಿಕ್ಕುಗಳು (ಒಂದು) ಪಾದವು. ಹೀಗೆ ಅಧ್ಯಾತ್ಮ, ಅಧಿದೈವತ – ಎರಡೂ ಉಪದಿಷ್ಟವಾದಂತೆ ಆಯಿತು.

## ಬ್ರಹ್ಮದ ಚತುಷ್ಪಾದಗಳು

(ಭಾಷ್ಯ)

೨೭೯. ತದೇತನ್ಮನಆಖ್ಯಂ ಚತುಷ್ಪಾದ್ ಬ್ರಹ್ಮ । ಚತ್ವಾರಃ ಪಾದಾ ಅಸ್ಯೇತಿ । ಕಥಂ ಚತುಷ್ಪಾತ್ತ್ವಂ ಮನಸೋ ಬ್ರಹ್ಮಣ ಇತಿ ? ಆಹ । ವಾಕ್ಪ್ರಾಣಶ್ಚಕ್ಷುಃಶ್ರೋತ್ರಮ್ ಇತ್ಯೇತೇ ಪಾದಾಃ । ಇತಿ ಅಧ್ಯಾತ್ಮಮ್ । ಅಥ ಅಧಿದೈವತಮ್ । ಆಕಾಶಸ್ಯ ಬ್ರಹ್ಮಣಃ ಅಗ್ನಿರ್ವಾಯುರಾದಿತ್ಯೋ ದಿಶಃ ಇತ್ಯೇತೇ । ಏವಮ್ ಉಭಯಮೇವ ಚತುಷ್ಪಾದ್ ಬ್ರಹ್ಮ ಆದಿಷ್ಟಂ ಭವತಿ ಅಧ್ಯಾತ್ಮಂ ಚೈವ ಅಧಿದೈವತಂ ಚ ॥

(ಭಾಷ್ಯಾರ್ಥ)

ಆ ಈ ಮನಸ್ಸೆಂಬ ಬ್ರಹ್ಮವು ಚತುಷ್ಪಾತ್ತಾಗಿದೆ. ಇದಕ್ಕೆ ನಾಲ್ಕು ಪಾದಗಳು, ಆದ್ದರಿಂದ (ಚತುಷ್ಪಾತ್ತು). ಮನೋಬ್ರಹ್ಮಕ್ಕೆ ನಾಲ್ಕು ಪಾದಗಳೆಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ. ವಾಕ್ಕು, ಪ್ರಾಣ, ಚಕ್ಷುಸ್ಸು, ಶ್ರೋತ್ರ–ಎಂಬಿವು (ಅದರ) ಪಾದಗಳು. ಹೀಗೆ (ಹೇಳಿದ್ದು) ಅಧ್ಯಾತ್ಮವು ಇನ್ನು ಅಧಿದೈವತವನ್ನು ಹೇಳಲಾಗುವದು. ಆಕಾಶಬ್ರಹ್ಮಕ್ಕೆ ಅಗ್ನಿ, ವಾಯು, ಆದಿತ್ಯ, ದಿಕ್ಕು–ಎಂಬಿವು (ಪಾದಗಳು). ಹೀಗೆ ಅಧ್ಯಾತ್ಮ, ಅಧಿದೈವತ – ಎಂಬೀ ಎರಡು (ಬಗೆಯ) ಚತುಷ್ಪಾದ್ಬ್ರಹ್ಮವನ್ನೂ ಹೇಳಿದಂತೆ ಆಯಿತು.

## ಪಾದಗಳ ವಿವರಣೆ

(ಭಾಷ್ಯ)

೨೮೦. ತತ್ರ ವಾಗೇವ ಮನಸೋ ಬ್ರಹ್ಮಣಶ್ಚತುರ್ಥಃ ಪಾದಃ ಇತರ ಪಾದತ್ರಯಾಪೇಕ್ಷಯಾ । ವಾಚಾ ಹಿ ಪಾದೇನೇವ ಗವಾದಿ ವಕ್ತವ್ಯವಿಷಯಂ ಪ್ರತಿತಿಷ್ಠತಿ । ಅತೋ ಮನಸಃ ಪಾದ ಇವ ವಾಕ್ । ತಥಾ ಪ್ರಾಣೋ ಘ್ರಾಣಃ

ಪಾದಃ । ತೇನಾಪಿ ಗನ್ಧವಿಷಯಂ ಪ್ರತಿ ಚಜ್ಘ್ರವಿಧಾತಿ[1]। ತಥಾ ಚಕ್ಷುಃ ಪಾದಃ, ಶ್ರೋತ್ರಂ ಪಾದಃ । ಇತ್ಯೇವಮ್ ಅಧ್ಯಾತ್ಮಂ ಚತುಷ್ಪಾತ್ತ್ವಂ ಮನಸೋ ಬ್ರಹ್ಮಣಃ । ಅಥ ಅಧಿದೈವತಮ್ ಅಗ್ನಿವಾಯ್ವಾದಿತ್ಯದಿಶ ಆಕಾಶಸ್ಯ ಬ್ರಹ್ಮಣಃ ಉದರ ಇವ ಗೋಃ ಪಾದಾಃ[2] ವಿಲಗ್ನಾ ಉಪಲಭ್ಯನ್ತೇ । ತೇನ ತಸ್ಯ ಆಕಾಶಸ್ಯ ಅಗ್ನ್ಯಾದಯಃ ಪಾದಾ ಉಚ್ಯನ್ತೇ। ಏವಮ್ ಉಭಯಮ್ ಅಧ್ಯಾತ್ಮಂ ಚೈವಾಧಿ ದೈವತಂ ಚ[3] ಚತುಷ್ಪಾದ್ ಆದಿಷ್ಟಂ ಭವತಿ ॥

(ಭಾಷ್ಯಾರ್ಥ)

ಇವುಗಳೊಳಗೆ ವಾಕ್ಕೇ ಮನೋಬ್ರಹ್ಮದ ನಾಲ್ಕನೆಯ ಪಾದವು, ಉಳಿದ ಪಾದಗಳ ಅಪೇಕ್ಷೆಯಿಂದ (ಇದು ನಾಲ್ಕನೆಯದು)[4] ವಾಕ್ಕಿನಿಂದಲೇ ಅಲ್ಲವೆ, ಗೋವೇ ಮುಂತಾದದ್ದು (ತನ್ನ) ಕಾಲಿನಿಂದ ಹೇಗೋ ಹಾಗೆ (ಈ ಮನಸ್ಸು) ವಕ್ತವ್ಯವಿಷಯವನ್ನು ಪಡೆದುಕೊಳ್ಳುತ್ತದೆ ?[5] ಆದ್ದರಿಂದ ಮನಸ್ಸಿಗೆ ವಾಕ್ಕು ಪಾದದಂತೆ (ಇದೆ) ಹೀಗೆಯೇ ಘ್ರಾಣವು ಎಂದರೆ ಘ್ರಾಣವು ಪಾದವು. ಅದ ರಿಂದಲೂ ಗಂಧವೆಂಬ ವಿಷಯವನ್ನು ಪಡೆದುಕೊಳ್ಳುತ್ತದೆ ಹೀಗೆಯೇ ಚಕ್ಷುಸ್ಸು ಪಾದವು, ಶ್ರೋತ್ರವು ಪಾದವು — ಎಂದಿಂತು ಮನೋಬ್ರಹ್ಮಕ್ಕೆ ಅಧ್ಯಾತ್ಮವಾಗಿ ಚತುಷ್ಪಾತ್ತ್ವವಿದೆ ಇನ್ನು ಅಧಿದೈವತವು, ಅಗ್ನಿವಾಯ್ವಾದಿತ್ಯದಿಕ್ಕುಗಳು ಆಕಾಶ ವೆಂಬ ಬ್ರಹ್ಮಕ್ಕೆ ಗೋವಿನ ಹೊಟ್ಟೆಯಲ್ಲಿ ಕಾಲುಗಳು (ಸೇರಿಕೊಂಡಿರು)ವಂತೆ ಸೇರಿ ಕೊಂಡು ಕಾಣಬರುತ್ತವೆ. ಆದ್ದರಿಂದ ಆ ಆಕಾಶಕ್ಕೆ ಅಗ್ನ್ಯಾದಿಗಳನ್ನು ಪಾದ ವೆಂದಿದೆ[6]. ಹೀಗೆ ಅಧ್ಯಾತ್ಮ, ಅಧಿದೈವತ — (ಈ) ಎರಡು ಬಗೆಯ ಚತು ಷ್ಪಾದ್ಬ್ರಹ್ಮವನ್ನು ಉಪದೇಶಮಾಡಿದಂತೆ ಆಯಿತು

---

1 ಚ ಕ್ರಾಮತಿ ಎಂಬುದನ್ನು ಹೀಗೆ ತಿದ್ದಿಕೊಂಡಿದೆ ; ಅಥವಾ ಚ ಇಲ್ಲದಿದ್ದರೂ ಆಗುತ್ತದೆ. 2. ‘ಪಾದಾ ಇವ ಲಗ್ನಾಃ’ ಎಂಬ ಪಾಠಕ್ಕಿಂತ ಈ ಆ॥ ಪಾಠವೇ ಮೇಲು

3. ಈ ಚಶಬ್ದವಿರುವ ಪಾಠವೇ ಮೇಲು.

4. ಇಲ್ಲಿ ‘ಚತುರ್ಥಃ ಪಾದಃ ಇತರಪಾದತ್ರಯಾಪೇಕ್ಷಯಾ’ ಎಂಬ ಮಾತುಗಳು ಮುಂದಿನ ಕಂಡಿಕೆಯ ಭಾಷ್ಯದಲ್ಲಿದ್ದು ಇಲ್ಲಿಗೆ ಲೇಖಕರ ಪ್ರಮಾದದಿಂದ ಬಂದಿರಬಹುದು ಇಲ್ಲಿ ಪಾದಃ ಎಂದಿಷ್ಟೇ ಇದ್ದಿರಬಹುದು , ಏಕೆಂದರೆ ಮುಂದೆಯೂ ಪಾದಃ ಎಂದಿಷ್ಟೇ ಇದೆ ಟೀಕೆಯಲ್ಲಿಯೂ ಪಾದಾನ್ ಪ್ರಪಞ್ಚಯತಿ ಎಂದಿಷ್ಟೇ ಇದೆ. ಅಥವಾ ಚತುರ್ಥಃ ಪಾದಃ ಎಂದಿಷ್ಟನ್ನು ಇಲ್ಲಿಗೆ ಆಕರ್ಷಣೆಯಿಂದ ಆಚಾರ್ಯರು ಸೇರಿಸಿಕೊಂಡಿದ್ದರೂ ಇರಬಹುದು ಇದನ್ನು ಲಕ್ಷಿಸದೆ ಆ ॥ ಪಾಠದಲ್ಲಿ ಈ ಭಾಷ್ಯಭಾಗವನ್ನು • ಮುಂದಿನ ಕಂಡಿಕೆಗೇ ಜೋಡಿಸಿದೆ ನಾವು ವಾ॥ ಪಾಠವನ್ನನುಸರಿಸಿ ಇಲ್ಲಿಗೇ ಈ ಭಾಗವನ್ನು ತಂದುಕೊಂಡಿರುತ್ತೇವೆ

5. ಹೇಳುವವರಿಂದ ವಿಷಯೀಕರಿಸುತ್ತದೆ.

6. ಮನೋಬ್ರಹ್ಮವು ಆಯಾ ವಿಷಯಗಳನ್ನು ವಾಗಾದಿಗಳಿಂದ ಪಡೆದುಕೊಳ್ಳುತ್ತದೆ (ಪ್ರತಿಪದ್ಯತೇ)ಯಾದ್ದರಿಂದ ಅವು ಪಾದವೆನಿಸಿದೆ. ಅಗ್ನ್ಯಾದಿಗಳು ಗೋವಿನ ಪಾದಗಳಂತೆ ಬೇರೆಬೇರೆಯಾಗಿ ಆಕಾಶಬ್ರಹ್ಮಕ್ಕೆ ಸೇರಿಕೊಂಡಿವೆಯಾದ್ದರಿಂದ ಪಾದಗಳೆನಿಸಿವೆ.

(ಉಪನಿಷತ್ತು)

**ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೩ ॥**

**ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೪ ॥**

**ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೫ ॥**

**ಶ್ರೋತ್ರಮೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ದಿಗ್ಭಿ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ಯ ಏವಂ ವೇದ ॥ ೬ ॥**

೩. ವಾಕ್ಕೇ ಬ್ರಹ್ಮದ ನಾಲ್ಕನೆಯ ಪಾದವು. ಅದು ಅಗ್ನಿಯೆಂಬ ಜ್ಯೋತಿಯಿಂದ ಹೊಳೆಯುತ್ತದೆ, ಮತ್ತು ತಪಿಸುತ್ತದ. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಕೀರ್ತಿಯಿಂದಲೂ ಯಶಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುತ್ತಾನೆ, ಮತ್ತು ತಪಿಸುತ್ತಾನೆ.

೪. ಪ್ರಾಣವೇ ಬ್ರಹ್ಮದ ನಾಲ್ಕನೆಯ ಪಾದವು. ಅದು ವಾಯುವೆಂಬ ಜ್ಯೋತಿಯಿಂದ ಹೊಳೆಯುತ್ತದೆ ಮತ್ತು ತಪಿಸುತ್ತದೆ. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಕೀರ್ತಿಯಿಂದಲೂ ಯಶಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುತ್ತಾನೆ, ಮತ್ತು ತಪಿಸುತ್ತಾನೆ.

೫. ಚಕ್ಷುಸ್ಸೇ ಬ್ರಹ್ಮದ ನಾಲ್ಕನೆಯ ಪಾದವು. ಅದು ಆದಿತ್ಯನೆಂಬ ಜ್ಯೋತಿಯಿಂದ ಹೊಳೆಯುತ್ತದೆ ಮತ್ತು ತಪಿಸುತ್ತದೆ. ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಕೀರ್ತಿಯಿಂದಲೂ ಯಶಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುತ್ತಾನೆ, ಮತ್ತು ತಪಿಸುತ್ತಾನೆ.

೬. ಶ್ರೋತ್ರವೇ ಬ್ರಹ್ಮದ ನಾಲ್ಕನೆಯ ಪಾದವು. ಅದು ದಿಕ್ಕುಗಳೆಂಬ ಜ್ಯೋತಿಯಿಂದ ಹೊಳೆಯುತ್ತದೆ ಮತ್ತು ತಪಿಸುತ್ತದೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಯಾವನು ಹೀಗೆಂದು ಅರಿತುಕೊಳ್ಳುವನೋ (ಅವನು) ಕೀರ್ತಿಯಿಂದಲೂ ಯಶಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುತ್ತಾನೆ ಮತ್ತು ತಪಿಸುತ್ತಾನೆ.

## ವಾಗಾದಿಪಾದಗಳಿಗೂ ಅಗ್ನ್ಯಾದಿಪಾದಗಳಿಗೂ ಸಂಬಂಧ

(ಭಾಷ್ಯ)

೨೧. ತತ್ರ ವಾಗೇವ ಮನಸೋ ಬ್ರಹ್ಮಣಶ್ಚತುರ್ಥಃ ಪಾದಃ । ಸೋಽಗ್ನಿನಾ ಅಧಿದೈವತೇನ ಜ್ಯೋತಿಷಾ ಭಾತಿ ಚ ದೀಪ್ಯತೇ ತಪತಿ ಚ ಸಂತಾಪಂ ಚ ಔಷ್ಣ್ಯಂ ಕರೋತಿ । ಅಥವಾ ತೈಲಘೃತಾದ್ಯಾಗ್ನೇಯಾಶನೇನ ಇದ್ಧಾ ವಾಕ್ ಭಾತಿ ಚ ತಪತಿ ಚ । ವದನಾಯ ಉತ್ಸಾಹವತೀ ಸ್ಯಾತ್ ಇತ್ಯರ್ಥಃ । ವಿದ್ವತ್ಫಲಮ್ । ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ಯಥೋಕ್ತಂ ವೇದ । ತಥಾ ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ । ಸ ವಾಯುನಾ ಗನ್ಧಗ್ರಹಣಾಯ[1] ಭಾತಿ ಚ ತಪತಿ ಚ । ತಥಾ ಚಕ್ಷುಃ ಆದಿತ್ಯೇನ ರೂಪಗ್ರಹಣಾಯ,[2] ಶ್ರೋತ್ರಂ ದಿಗ್ಭಿಃ ಶಬ್ದಗ್ರಹಣಾಯ । ವಿದ್ಯಾಫಲಂ ಸಮಾನಂ ಸರ್ವತ್ರ । ಬ್ರಹ್ಮಸಂಪತ್ತಿರದೃಷ್ಟಂ ಫಲಮ್ । ಯ ಏವಂ ವೇದ ಇತಿ ದ್ವಿರುಕ್ತಿರ್ದರ್ಶನಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಇವುಗಳಲ್ಲಿ ವಾಕ್ಕೇ ಮನಸ್ಸೆಂಬ ಬ್ರಹ್ಮದ ನಾಲ್ಕನೆಯ ಪಾದವು[3]. ಅದು ಅಗ್ನಿ ಎಂಬ ಅಧಿದೈವತಜ್ಯೋತಿಯಿಂದ ಹೊಳೆಯುತ್ತದೆ, ಬೆಳಗುತ್ತದೆ, ಮತ್ತು ತಪಿಸುತ್ತದೆ, ಔಷ್ಣ್ಯವನ್ನುಂಟುಮಾಡುತ್ತದೆ[4] ಅಥವಾ ಎಣ್ಣೆ, ತುಪ್ಪ[5]—ಮುಂತಾದ

1. 'ಗನ್ಧಾಯ' ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಡಿದೆ.

2. ಈ ಮಾತು ಇಲ್ಲಿ ಇರಬೇಕೆಂದು ಸೇರಿಸಿಕೊಂಡಿದೆ.

3. ಹಿಂದಿನ ಕಂಡಿಕೆಯ ಭಾಷ್ಯದಲ್ಲಿರುವ 'ಇತರಪಾದತ್ರಯಾಪೇಕ್ಷಯಾ' ಎಂಬ ಮಾತು ಇಲ್ಲಿದ್ದರೆ ಚೆನ್ನಾಗಿರುತ್ತದೆ. ಒಂದನೆಯ, ಎರಡನೆಯ, ಮೂರನೆಯ, ನಾಲ್ಕನೆಯ ಪಾದ-ಎಂದು ಅನುಕ್ರಮಾರ್ಥದಲ್ಲಿ ನಾಲ್ಕನೆಯದೆಂದಿಲ್ಲ, ಪ್ರತಿಯೊಂದೂ ಪಾದವು, ನಾಲ್ಕನೆಯಂಶವು ಎಂದರ್ಥ.

4. ಅಧಿಷ್ಠಾತೃದೇವತೆಯ ಅನುಗ್ರಹದಿಂದ ತನ್ನ ಕೆಲಸವನ್ನು ಮಾಡಲು ಶಕ್ತವಾಗಿದೆ ಎಂದರ್ಥ ಸೂ. ಭಾ. ೨-೪-೧೪ (ಭಾ ಭಾ. ೧೯೭).

5. ವೈದ್ಯಶಾಸ್ತ್ರದಲ್ಲಿ ಸ್ವರವೈಶಿಷ್ಟ್ಯಕ್ಕೆ ಕೆಲವು ತೈಲಗಳನ್ನೂ ಘೃತಗಳನ್ನು ಹೇಳಿರುತ್ತದೆ.

ಅಗ್ನಿಸಂಬಂಧವಾದ (ವಸ್ತುಗಳನ್ನು) ಸೇವಿಸುವದರಿಂದ ಹೊತ್ತಿಕೊಂಡು ವಾಕ್ಕು ಹೊಳೆಯುತ್ತದೆ ಮತ್ತು ತಪಿಸುತ್ತದೆ, ಮಾತಾಡುವದಕ್ಕೆ ಉತ್ಸಾಹವುಳ್ಳದ್ದಾಗುತ್ತದೆ ಎಂದರ್ಥ.[1] ಹೀಗೆಂದು ಉಪಾಸನೆಮಾಡುವವನಿಗೆ ಫಲ(ವಿದು) ಯಾವನು ಈ ಮೇಲೆ ಹೇಳಿದಂತೆ ಅರಿತುಕೊಳ್ಳುವನೋ (ಅವನು) ಕೀರ್ತಿಯಿಂದಲೂ[2] ಯಶಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುವನು ಮತ್ತು ತಪಿಸುವನು.

ಹೀಗೆಯೇ ಪ್ರಾಣವೇ ಬ್ರಹ್ಮದ ನಾಲ್ಕನೆಯ ಪಾದವು. ಅದು ವಾಯು (ವೆಂಬ ಜ್ಯೋತಿಯಿಂದ) ಗಂಧಗ್ರಹಣಕ್ಕಾಗಿ ಹೊಳೆಯುತ್ತದೆ, ಮತ್ತು ತಪಿಸುತ್ತದೆ ಹೀಗೆಯೇ ಚಕ್ಷುಸ್ಸು ಆದಿತ್ಯನಿಂದ ರೂಪಗ್ರಹಣಕ್ಕಾಗಿಯೂ ಶ್ರೋತ್ರವು ದಿಕ್ಕುಗಳಿಂದ ಶಬ್ದಗ್ರಹಣಕ್ಕಾಗಿಯೂ (ಹೊಳೆಯುತ್ತದೆ ಮತ್ತು ತಪಿಸುತ್ತದೆ)

ಉಪಾಸನೆಯ ಫಲವು ಎಲ್ಲಾ (ಕಡೆಗಳಲ್ಲಿಯೂ ಸಮಾನವಾಗಿರುತ್ತದೆ.)[3] ಬ್ರಹ್ಮಸಂಪತ್ತಿಯು ಅದೃಷ್ಟಫಲವು 'ಯ ಏವಂ ವೇದ' ಎಂದು ಎರಡು ಸಲ ಹೇಳಿರುವದು (ಈ) ಉಪಾಸನೆಯ ಸಮಾಪ್ತಿಯನ್ನು (ತಿಳಿಸು)ವದಕ್ಕೆ

---

# ಮೂರನೆಯ ಅಧ್ಯಾಯ-

## ಹತ್ತೊಂಬತ್ತನೆಯ ಖಂಡ

(ಆದಿತ್ಯಬ್ರಹ್ಮೋಪಾಸನೆ)

### ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು

(ಉಪನಿಷತ್ತು)।

**ಆದಿತ್ಯೋ ಬ್ರಹ್ಮೇತ್ಯಾದೇಶಸ್ತಸ್ಯೋಪವ್ಯಾಖ್ಯಾನಮಸದೇವೇದಮಗ್ರ ಆಸೀತ್। ತತ್ಸದಾಸೀತ್ತತ್ಸಮಭವತ್ತದಾಣ್ಡಂ ನಿರವರ್ತತ ತತ್ಸಂವತ್ಸರಸ್ಯ ಮಾತ್ರಾಮಶಯತ ತನ್ನಿರಭಿದ್ಯತ ತೇ ಆಣ್ಡಕಪಾಲೇ ರಜತಂ ಚ ಸುವರ್ಣಂ ಚಾಭವತಾಮ್ ॥೧॥**

---

1 ಇಲ್ಲಿಯೂ ಅಗ್ನ್ಯಾದಿಗಳ ಸಹಾಯವನ್ನು ವಾಗಾದಿಗಳು ಬಯಸಿದಂತೆ ಆಯಿತು.

2. ಕೀರ್ತಿಯು ಪ್ರತ್ಯಕ್ಷ, ಯಶಸ್ಸು ಪರೋಕ್ಷ.

3. ಉಪಾಸನೆಗೆ ಕೀರ್ತಿ, ಯಶಸ್ಸು, ಬ್ರಹ್ಮವರ್ಚಸ್ಸು-ಎಂಬ ದೃಷ್ಟಫಲವಾಗುವದೆಂಬುದು ಸಮಾನವಾಗಿದೆ ಕ್ರಮಮುಕ್ತಿಯಾಗಿ ಬ್ರಹ್ಮಪ್ರಾಪ್ತಿಯಾಗುವದೆಂಬುದು ಅದೃಷ್ಟ ಫಲವೆಂಬುದು ಸಮಾನವಾಗಿದೆ. ಇಲ್ಲಿ ಒಂದೊಂದು ಪಾದಕ್ಕೂ ಫಲವನ್ನು ಹೇಳಿದರೂ ಒಟ್ಟು ಉಪಾಸನೆಗೇ ಈ ಫಲವೆಂದು ತಿಳಿಯಬೇಕು. ಅಂಗೋಪಾಸನೆಗಳನ್ನು ಹೊಗಳಿರುವದು ಪ್ರಧಾನೋಪಾಸನೆಯ ಫಲವನ್ನು ತಿಳಿಸುವದಕ್ಕಾಗಿಯೇ.

೧. ಆದಿತ್ಯನು ಬ್ರಹ್ಮವೆಂದು ಆದೇಶವು. ಅದರ ಉಪವ್ಯಾಖ್ಯಾನ(ವನ್ನು ಮಾಡಲಾಗುವದು). ಇದು ಮೊದಲು ಅಸತ್ತೇ ಆಗಿತ್ತು, ಅದು ಸತ್ತಾಗಿತ್ತು. ಅದು ಹುಟ್ಟಿತು. ಅದು ಅಂಡವಾಯಿತು. ಅದು ಸಂವತ್ಸರದವರೆಗೂ ಇದ್ದುಕೊಂಡಿತ್ತು. ಅದು ಒಡೆದುಕೊಂಡಿತು. ಆ ಅಂಡಕಪಾಲಗಳು ಬೆಳ್ಳಿಯೂ ಚಿನ್ನವೂ ಆದವು.

## ಗ್ರಂಥಸಂಬಂಧ

(ಭಾಷ್ಯ)

೨೮೨. ಆದಿತ್ಯೋ ಬ್ರಹ್ಮಣಃ ಪಾದ ಉಕ್ತಃ ಇತಿ ತಸ್ಮಿನ್ ಸಕಲಬ್ರಹ್ಮದೃಷ್ಟ್ಯರ್ಥಮ್ ಇದಮಾರಭ್ಯತೇ ॥

(ಭಾಷ್ಯಾರ್ಥ)

ಆದಿತ್ಯನು ಬ್ರಹ್ಮದ ಪಾದವೆಂದು (೩-೧೮-೨) ಹೇಳಿದ್ದಾಯಿತಾದ್ದರಿಂದ ಆ (ಆದಿತ್ಯ)ನಲ್ಲಿ ಸಕಲಬ್ರಹ್ಮದ ದೃಷ್ಟಿಯನ್ನು (ವಿಧಿಸ)ಬೇಕೆಂದು ಇದನ್ನು ಆರಂಭಿಸಿರುತ್ತದೆ.

## ಸೃಷ್ಟಿಗೆ ಪೂರ್ವದಲ್ಲಿ ಜಗತ್ತು ಅವ್ಯಾಕೃತವಾಗಿತ್ತು

(ಭಾಷ್ಯ)

೨೮೩ ಆದಿತ್ಯೋ ಬ್ರಹ್ಮ ಇತಿ ಆದೇಶಃ ಉಪದೇಶಃ। ತಸ್ಯ ಉಪವ್ಯಾಖ್ಯಾನಂ ಕ್ರಿಯತೇ ಸ್ತುತ್ಯರ್ಥಮ್। ಅಸತ್ ಅವ್ಯಾಕೃತನಾಮರೂಪಮ್ ಇದಂ ಜಗತ್ ಅಶೇಷಮ್ ಅಗ್ರೇ ಪ್ರಾಗವಸ್ಥಾಯಾಮ್ ಉತ್ಪತ್ತೇಃ ಆಸೀತ್। ನ ತ್ವಸದೇವ। "ಕಥಮಸತಃ ಸಜ್ಜಾಯೇತ" (೬-೨-೨) ಇತಿ ಅಸತ್ಕಾರ್ಯತ್ವಸ್ಯ ಪ್ರತಿಷೇಧಾತ್। ನನು ಇಹ ಅಸದೇವ ಇತಿ ವಿಧಾನಾತ್ ವಿಕಲ್ಪಃ ಸ್ಯಾತ್। ನ। ಕ್ರಿಯಾಸ್ವಿವ ವಸ್ತುನಿ ವಿಕಲ್ಪಾನುಪಪತ್ತೇಃ। ಕಥಂ ತರ್ಹಿ ಇದಮ್ 'ಅಸದೇವ' ಇತಿ? ನನ್ವವೋಚಾಮ ಅವ್ಯಾಕೃತನಾಮರೂಪತ್ವಾತ್ ಅಸದಿವ ಅಸತ್ ಇತಿ। ನನ್ವೇವಶಬ್ದೋಽವಧಾರಣಾರ್ಥಃ। ಸತ್ಯಮೇವಮ್। ನ ತು ಸತ್ತ್ವಾಭಾವಮ್ ಅವಧಾರಯತಿ, ಕಿಂ ತರ್ಹಿ ವ್ಯಾಕೃತನಾಮರೂಪಾಭಾವಮ್ ಅವಧಾರಯತಿ[1]। ನಾಮರೂಪವ್ಯಾಕೃತವಿಷಯೋ ಸಚ್ಛಬ್ದಪ್ರಯೋಗೋ ದೃಷ್ಟಃ। ತಚ್ಚ ನಾಮರೂಪವ್ಯಾಕರಣಮ್ ಆದಿತ್ಯಾಯತ್ತಂ ಪ್ರಾಯಶೋ ಜಗತಃ। ತದಭಾವೇ ಹಿ ಅನ್ಧಂ ತಮ ಇವ ಇದಂ ನ ಪ್ರಜ್ಞಾಯೇತ ಕಿಂಚನ ಇತಿ। ಅತಃ

---

1. ಇದು ಪಾ॥ ಪಾಠದಲ್ಲಿಮಾತ್ರ ಇದೆ.

ತತ್ಸ್ತುತಿಪರೇ ವಾಕ್ಯೇ ಸದಪೀದಂ ಪ್ರಾಕ್ ಉತ್ಪತ್ತೇರ್ಜಗತ್ ಅಸದೇವ ಇತಿ ಆದಿತ್ಯಂ ಸ್ತೌತಿ ಬ್ರಹ್ಮದೃಷ್ಟ್ಯರ್ಹತ್ವಾಯ। ಆದಿತ್ಯನಿಮಿತ್ತೋ ಹಿ ಲೋಕೇ ಸದಿತಿ ವ್ಯವಹಾರಃ। ಯಥಾ ಅಸದೇವೇದಂ ರಾಜಕುಲಂ[1] ಸರ್ವಗುಣಸಂಪನ್ನೇ ಪೂರ್ಣವರ್ಮಣಿ ರಾಜನಿ ಅಸತೀತಿ ತದ್ವತ್। ನ ಚ ಸತ್ತ್ವಮ್ ಅಸತ್ತ್ವಂ ವಾ ಇಹ ಜಗತಃ ಪ್ರತಿಪಿಪಾದಯಿಷಿತಮ್ ಆದಿತ್ಯೋ ಬ್ರಹ್ಮ ಇತ್ಯಾದೇಶಪರತ್ವಾತ್। ಉಪಸಂಹರಿಷ್ಯತ್ಯನ್ತೇ 'ಆದಿತ್ಯಂ ಬ್ರಹ್ಮೇತ್ಯುಪಾಸ್ತೇ' (೩-೧೯-೪) ಇತಿ॥

(ಭಾಷ್ಯಾರ್ಥ)

ಆದಿತ್ಯಬ್ರಹ್ಮವು ಎಂದು ಆದೇಶವು, ಉಪದೇಶವು ಅದರ ಉಪವ್ಯಾಖ್ಯಾನವನ್ನು ಸ್ತುತಿಗಾಗಿ (ಈಗ) ಮಾಡಲಾಗುವದು. ಈ ಜಗತ್ತೆಲ್ಲವೂ ಮೊದಲು, ಹುಟ್ಟುವ ಮುನ್ನಿನ ಅವಸ್ಥೆಯಲ್ಲಿ ಅಸತ್ತಾಗಿತ್ತು, ನಾಮರೂಪಗಳಾಗಿ ವ್ಯಾಕೃತವಾಗದೆ (ಇತ್ತು ಎಂದು ಅರ್ಥವೇ ಹೊರತು ತೀರ) ಅಸತ್ತೇ (ಆಗಿತ್ತು) ಎಂದಲ್ಲ ಏಕೆಂದರೆ "ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು?" (೬-೨-೨) ಎಂದು ಅಸತ್ಕಾರ್ಯವಾದವನ್ನು (ಶ್ರುತಿಯಲ್ಲಿ) ಅಲ್ಲಗಳೆದಿದೆ.

(ಆಕ್ಷೇಪ) :– ಈ (ವಚನ)ದಲ್ಲಿ ಅಸತ್ತೇ ಎಂದಿರುವದರಿಂದ ವಿಕಲ್ಪವಾಗಬಹುದಲ್ಲ[2] !

(ಪರಿಹಾರ) .– ಹಾಗಲ್ಲ. ಏಕೆಂದರೆ **ಕ್ರಿಯೆಗಳಲ್ಲಿ ಹೇಗೋ ಹಾಗೆ ವಸ್ತುವಿನಲ್ಲಿ ವಿಕಲ್ಪ(ವಿರುವದು) ಹೊಂದುವದಿಲ್ಲ.**[3]

(ಆಕ್ಷೇಪ) – ಹಾಗಾದರೆ 'ಅಸತ್ತೇ ಆಗಿತ್ತು' ಎಂದು (ಇಲ್ಲಿ ಹೇಳಿರುವದು) ಹೇಗೆ (ಸರಿ)[4] ?

(ಪರಿಹಾರ) :– ನಾಮರೂಪವ್ಯಾಕರಣವಿಲ್ಲದ್ದರಿಂದ ಅಸತ್ತಿನಂತೆ ಇತ್ತು ಎಂದು (ಆಗಲೆ ವ್ಯಾಖ್ಯಾನವನ್ನು) ಹೇಳಿದೇವಲ್ಲ[5] !

(ಆಕ್ಷೇಪ) :– (ಇಲ್ಲಿರುವ) ಏವಶಬ್ದಕ್ಕೆ ಅವಧಾರಣೆಯೇ ಅರ್ಥವಲ್ಲವೆ[6] ?

---

1. ಈ ಪಾಠವೇ ಯುಕ್ತ

2. ಶ್ರುತಿಯು ಸತ್ಕಾರ್ಯದಂತೆ ಅಸತ್ಕಾರ್ಯವನ್ನೂ ಒಪ್ಪಿದೆಯಲ್ಲ ! ಎರಡು ವಾಕ್ಯಕ್ಕೂ ಪ್ರಾಮಾಣ್ಯವಿರಬಹುದಲ್ಲವೆ ?

3. ಕ್ರಿಯಾವಾಕ್ಯಗಳು ಹೀಗೆ ಬೇರೆಬೇರೆಯಿರಬಹುದು, ಏಕೆಂದರೆ ಕ್ರಿಯೆಯನ್ನು ಹೇಗಾದರೂ ಮಾಡಬಹುದು, ಆದರೆ ವಸ್ತುತತ್ತ್ವವು ಹಾಗೂ ಇರಬಹುದು, ಹೀಗೂ ಇರಬಹುದು ಎನ್ನುವದಾಗದು.

4. ಈ ವಾಕ್ಯಕ್ಕೂ ಪ್ರಾಮಾಣ್ಯವಿರಬೇಕಲ್ಲವೆ ?

5. ಅಸತ್ತಿನಂತೆ ಇತ್ತು– ಎಂಬರ್ಥದಲ್ಲಿಯೇ ಈ ವಾಕ್ಯಕ್ಕೆ ಪ್ರಾಮಾಣ್ಯವು– ಎಂದು ಅಭಿಪ್ರಾಯ

6. ಅವಧಾರಣೆಯನ್ನು ಹೇಳುವ ಶಬ್ದವನ್ನು ಮುಖ್ಯಾರ್ಥದಿಂದ ತಪ್ಪಿಸಿ ಉಪಮಾನಾರ್ಥವನ್ನು ತೆಗೆದುಕೊಳ್ಳುವದಕ್ಕೇನು ಕಾರಣ ?

(ಪರಿಹಾರ) :- ನಿಜ, ಹೀಗೆಯೇ ಸರಿ. ಆದರೆ (ಈ ಶಬ್ದವು) ಸತ್ತಿಲ್ಲ ವೆಂಬುದನ್ನು ಅವಧಾರಣೆಮಾಡುವದಿಲ್ಲ, ಮತ್ತೇನೆಂದರೆ ವ್ಯಾಕೃತನಾಮರೂಪ ವಾಗಿರಲಿಲ್ಲವೆಂಬುದನ್ನು ಅವಧಾರಣೆಮಾಡುತ್ತದೆ. (ಇದರ ವಿವರ) : ನಾಮ ರೂಪಗಳಾಗಿ ವ್ಯಾಕೃತವಾದದ್ದರ ವಿಷಯದಲ್ಲಿ ಸತ್ ಎಂಬ ಶಬ್ದವನ್ನು ಪ್ರಯೋ ಗಿಸುವದು ಕಂಡುಬಂದಿದೆ(ಯಷ್ಟೆ ?) ಜಗತ್ತಿನ ಆ ನಾಮರೂಪವ್ಯಾಕರಣವು ಬಲುಮಟ್ಟಿಗೆ ಆದಿತ್ಯನಿಗೆ ಅಧೀನವಾಗಿರುತ್ತದೆ. ಹೇಗೆಂದರೆ ಆ (ಆದಿತ್ಯ)ನಿಲ್ಲ ದಿದ್ದರೆ ಇದೆಲ್ಲವೂ ಅಂಧಂತಮಸ್ಸಾಗಿರುವದು, ಯಾವದೊಂದೂ ಇಂಥದ್ದೆಂದು ತಿಳಿಯಬರಲಾರದು. ಆದ್ದರಿಂದ ಆ (ಆದಿತ್ಯನನ್ನು) ಹೊಗಳುವದಕ್ಕಾಗಿ ಬಂದಿರುವ ಈ ವಾಕ್ಯದಲ್ಲಿ[1] ಈ ಜಗತ್ತು ಹುಟ್ಟುವ ಮುಂಚೆ ಸತ್ತಾಗಿದ್ದರೂ ಅಸತ್ತೇ ಎಂದು- (ಆದಿತ್ಯನು) ಬ್ರಹ್ಮದೃಷ್ಟಿಗೆ ತಕ್ಕವನೆಂದು (ತಿಳಿಸುವದಕ್ಕಾಗಿ)- ಆದಿತ್ಯನನ್ನು ಹೊಗಳಿರುತ್ತದೆ. ಲೋಕದಲ್ಲಿ ಸತ್ತೆಂಬ ವ್ಯವಹಾರವು ಆದಿತ್ಯನ ನಿಮಿತ್ತದಿಂದಾಗುವದಷ್ಟೆ ? ಹೇಗೆ "ಸರ್ವಗುಣಸಂಪನ್ನನಾದ ಪೂರ್ಣವರ್ಮ ರಾಜನು ಇಲ್ಲದಿದ್ದರೆ ಈ ರಾಜವಂಶವು ಅಸತ್ತೇ" ಎನ್ನುವರೋ ಹಾಗೆಯೇ (ಇದು)[2] ಇದಲ್ಲದೆ ಇಲ್ಲಿ ಜಗತ್ತು ಸತ್ತೆಂದಾಗಲಿ ಅಸತ್ತೆಂದಾಗಲಿ ತಿಳಿಸಿಕೊಡ ಬೇಕೆಂಬ ಅಭಿಪ್ರಾಯವಿಲ್ಲ, ಏಕೆಂದರೆ (ಇದಕ್ಕೆ) 'ಆದಿತ್ಯನು ಬ್ರಹ್ಮ' ಎಂಬ (ಉಪಾಸನೆಯನ್ನು) ಉಪದೇಶಮಾಡುವದರಲ್ಲಿ ತಾತ್ಪರ್ಯವಿದೆ.[3] "(ಯಾವನು) ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡುವನೋ " (೩-೧೯-೪) ಎಂದು ಕೊನೆಯಲ್ಲಿ ಉಪಸಂಹಾರವನ್ನು ಮಾಡಿಯೂ ಇರುತ್ತದೆ[4]

---

1. ಆದಿತ್ಯನನ್ನು ಹೊಗಳುವದೇಕೆಂದರೆ ಅವನನ್ನು ಬ್ರಹ್ಮದೃಷ್ಟಿಯಿಂದ ಉಪಾಸನೆ ಮಾಡಬೇಕೆಂದು ವಿಧಿಸುವದಕ್ಕಾಗಿ, ಆದ್ದರಿಂದ ಈ ಸಂದರ್ಭದಲ್ಲಿ ಅಸತ್ತಿನಿಂದ ಸತ್ತುಂಟಾಗಲಾರದು ಎಂದು ಹೇಳುವ ತತ್ಪರವಾಕ್ಯವನ್ನು ತಳ್ಳಿಹಾಕಿ 'ಏವ' ಎಂಬ ಶಬ್ದದ ಆಧಾರದಿಂದ ಅಸದ್ವಾದವನ್ನು ತರುವದಕ್ಕೆ ಆಗುವದಿಲ್ಲ.

2. ಈ ಪ್ರಯೋಗದಲ್ಲಿ ಅಸತ್ತೆಂದರೆ ತೀರ ಇಲ್ಲದ್ದು ಎಂದೇನೂ ಅರ್ಥವಿಲ್ಲ, ಇದ್ದರೂ ಇಲ್ಲದಂತೆ ಎಂಬರ್ಥವೇ ಇಲ್ಲಿದೆ. ಹಾಗೆಯೇ ಪ್ರಕೃತದಲ್ಲಿ ಅವ್ಯಾಕೃತವನ್ನೂ ಅಸತ್ತೆಂದಿದೆ ಎಂದು ಕಲ್ಪಿಸುವದು ತಪ್ಪಲ್ಲ.

3. ಜಗತ್ತನ್ನು ಅಸತ್ತೇ ಎಂದು ಪ್ರತಿಪಾದಿಸುವದು, ಆದಿತ್ಯನನ್ನು ಉಪಾಸನೆಮಾಡು ವದಕ್ಕೂ ಹೋಗುವದು ಎಂಬ ಎರಡು ತಾತ್ಪರ್ಯಗಳನ್ನು ಕಲ್ಪಿಸಿದರೆ ವಾಕ್ಯಭೇದವಾಗು ತ್ತದೆ ಆದ್ದರಿಂದ 'ನಾಮರೂಪವ್ಯಾಕರಣವು ಇರಲೇ ಇಲ್ಲ, ಆದ್ದರಿಂದ ಅಸತ್ತಿದ್ದಂತೆ ಇತ್ತು' ಎಂಬುದೇ ವಾಕ್ಯಕ್ಕೆ ತಾತ್ಪರ್ಯವೆಂದಾಯಿತು_ ಎಂದು ಭಾವ.

4. ಉಪಕ್ರಮೋಪಸಂಹಾರಗಳಿಂದ ಈ ವಚನವು ಉಪಾಸನಾಪರವೆಂದು ನಿಶ್ಚಿತ ವಾಗುವದರಿಂದ ಇದು ವಸ್ತುಸ್ವಭಾವವನ್ನು ಹೇಳುವ ವಚನವಲ್ಲವೆಂದಾಗುತ್ತದೆ. ಆದ್ದರಿಂದ ಸತ್ಕಾರ್ಯಶ್ರುತಿಗೆ ಇದು ವಿರುದ್ಧವಲ್ಲ.

# ಅಂಡಕಪಾಲಗಳುಂಟಾದದ್ದು

(ಭಾಷ್ಯ)

೨೮೪. ತತ್ ಸದಾಸೀತ್ । ತತ್ ಅಸಚ್ಛಬ್ದವಾಚ್ಯಂ ಪ್ರಾಗುತ್ಪತ್ತೇಃ ಸ್ತಿಮಿತಮ್ ನಿಸ್ಪಂದವಮ್[1] ಅಸದಿವ ಸತ್ ಕಾರ್ಯಾಭಿಮುಖಮ್ ಈಷದುಪಜಾತ ಪ್ರವೃತ್ತಿ ಸದಾಸೀತ್ । ತತೋ ಲಬ್ಧಪರಿಸ್ಪನ್ದಂ ತತ್ ಸಮಭವತ್ ಅಲ್ಪತರ ನಾಮರೂಪವ್ಯಾಕರಣೇನ ಅಙ್ಕುರೀಭೂತಮಿವ ಬೀಜಮ್ । ತತೋಽಪಿ ಕ್ರಮೇಣ ಸ್ಥೂಲೀಭವತ್ ತತ್ ಅದ್ಭ್ಯಃ ಆಣ್ಡಂ ಸಮವರ್ತತ ಸಂವೃತ್ತಮ್ । ಆಣ್ಡಮ್ ಇತಿ ದೈರ್ಘ್ಯಂ ಛಾನ್ದಸಮ್ । ತದಣ್ಡಂ ಸಂವತ್ಸರಸ್ಯ ಕಾಲಸ್ಯ ಪ್ರಸಿದ್ಧಸ್ಯ ಮಾತ್ರಾಂ ಪರಿಮಾಣಮ್ ಅಭಿನ್ನಸ್ವರೂಪಮೇವ ಅಶಯತ ಸ್ಥಿತಂ ಬಭೂವ। ತತ್ ತತಃ ಸಂವತ್ಸರಪರಿಮಾಣಾತ್ ಕಾಲಾತ್ ಊರ್ಧ್ವಂ ನಿರಭಿದ್ಯತ ನಿರ್ಭಿನ್ನಂ ವಯಸಾಮಿವ ಅಣ್ಡಮ್ । ತಸ್ಯ ನಿರ್ಭಿನ್ನಸ್ಯ ಅಣ್ಡಸ್ಯ ಕಪಾಲೇ ದ್ವೇ ರಜತಂ ಚ ಸುವರ್ಣಂ ಚ ಅಭವತಾಂ ಸಂವೃತ್ತೇ ॥

(ಭಾಷ್ಯಾರ್ಥ)

ಅದು ಸತ್ತಾಯಿತು, ಆ ಅಸಚ್ಛಬ್ದವಾಚ್ಯವಾದ (ಜಗತ್ತು) ಉತ್ಪತ್ತಿಯಾಗುವ ಮುಂಚೆ ಅಸತ್ತಿನ ಹಾಗೆ, ಅಲುಗಾಡದೆ ಚಲನವಿಲ್ಲದೆ ಇದ್ದದ್ದು ಕಾರ್ಯಾಭಿಮುಖವಾಗಿ ಒಂದಿಷ್ಟು ಪ್ರವೃತ್ತಿಯುಳ್ಳದ್ದಾಗಿ ಸತ್ತಾಯಿತು[2] ಆಬಳಿಕ ಚಲನೆಯನ್ನು ಹೊಂದಿ ಅಲ್ಪತರವಾದ ನಾಮರೂಪವ್ಯಾಕರಣದಿಂದ, ಬೀಜವು ಮೊಳಕೆಯಾಗುವಂತೆ, ಅದು (ಕಾರ್ಯವಾಗಿ) ಹುಟ್ಟಿತು. ಆಮೇಲೆ ಕ್ರಮವಾಗಿ ಇನ್ನೂ ಸ್ಥೂಲವಾಗಿ ಅದು ಅಪ್ಪಿನಿಂದ ಆಂಡವಾಯಿತು, (ಅಂಡ)ವಾಯಿತು (ಇಲ್ಲಿ) 'ಆಂಡ'ವೆಂದು ದೀರ್ಘವಿರುವದು ವೈದಿಕ(ಪ್ರಯೋಗವು) ಆ ಅಂಡವು ಸಂವತ್ಸರವೆಂದು ಪ್ರಸಿದ್ಧವಾಗಿರುವ ಕಾಲದ ಮಾತ್ರೆಯನ್ನು ಎಂದರೆ(ಅಷ್ಟು)ಪರಿಮಾಣದ (ಕಾಲದ) ವರೆಗೆ ಸ್ವರೂಪದಲ್ಲಿ ಯಾವ ಬದಲಾವಣೆಯೂ ಇಲ್ಲದೆಯೇ ಇದ್ದುಕೊಂಡಿತ್ತು. (ಹಾಗೆಯೇ) ಇತ್ತು. ಅದು ಆ ಬಳಿಕ, ಸಂವತ್ಸರಪರಿಮಾಣದ ಕಾಲವಾದಮೇಲೆ ಒಡೆಯಿತು, ಹಕ್ಕಿಗಳ ಅಂಡದಂತೆ ಒಡೆದುಕೊಂಡಿತು (ಹಾಗೆ) ಒಡೆದುಕೊಂಡ ಆ ಅಂಡದ ಹೋಳುಗಳು ಬೆಳ್ಳಿಯೂ ಚಿನ್ನವೂ ಆದವು, ಆಗಿ ತೋರಿಕೊಂಡವು.

---

1. ಅನಿಸ್ಪನ್ದಮ್ ಎಂಬುವನ್ನು ಹೀಗೆ ತಿದ್ದಿಕೊಂಡಿದೆ.

2. ಅವ್ಯಾಕೃತವು ವ್ಯಾಕೃತವಾಗುವ ಬಗೆಯನ್ನು ಮುಂ. ಭಾ. ೧-೧-೮ (ಭಾ. ಭಾ ೨೩), ಬೃ. ಭಾ. ೧-೨, ೧-೪ ಇವುಗಳಲ್ಲಿಯೂ ವರ್ಣಿಸಿದೆ. ಅಸತ್ತು ಇತ್ತು ಎನ್ನುವದೂ ಅದು ಸತ್ತಾಯಿತು ಎನ್ನುವದೂ ಸತ್ಕಾರ್ಯವಾದಕ್ಕೆ ಹೊಂದುವದಿಲ್ಲ; ಏಕೆಂದರೆ ಅಸತ್ತಿಗೆ ಕಾಲಸಂಬಂಧವಿಲ್ಲ, ಇದುವಿಕೆಯ ಸಂಬಂಧವೂ ಇಲ್ಲ. ಸೂ. ಭಾ. ೨-೧ ೧೭ (ಭಾ. ಭಾ ೪೪೫ನ್ನು ನೋಡಿ).

(ಉಪನಿಷತ್ತು)

**ತದ್ಯದ್ರಜತಗ್ಂ ಸೇಯಂ ಪೃಥಿವೀ ಯತ್ ಸುವರ್ಣಗ್ಂ ಸಾ ದ್ಯೌರ್ಯಜ್ಜರಾಯು ತೇ ಪರ್ವತಾ ಯದುಲ್ಬಗ್ಂ ಸಮೇಘೋ ನೀಹಾರೋ ಯಾ ಧಮನಯಸ್ತಾ ನದ್ಯೋ ಯದ್ವಾಸ್ತೇಯ ಮುದಕಗ್ಂ ಸ ಸಮುದ್ರಃ ॥ ೨ ॥**

೨. ಅಲ್ಲಿ ಬೆಳ್ಳಿಯಿತ್ತಲ್ಲ, ಅದೇ ಈ ಪೃಥಿವಿ ; ಚಿನ್ನವಿತ್ತಲ್ಲ, ಅದೇ ದ್ಯುಲೋಕವು ; ಜರಾಯುವಿತ್ತಲ್ಲ, ಅದೇ ಪರ್ವತಗಳು ; ಉಲ್ಬವಿತ್ತಲ್ಲ, (ಅದೇ) ಮೋಡಗಳಿಂದೊಡಗೂಡಿದ ನೀಹಾರವು ; ಧಮನಿಗಳಿದ್ದವಲ್ಲ, ಅವೇ ನದಿಗಳು ; ವಾಸ್ತೇಯ ಉದಕವಿತ್ತಲ್ಲ, ಅದೇ ಸಮುದ್ರವು.

## ಅಂಡವು ಒಡೆದುಕೊಂಡಿದ್ದಾಗ ಹುಟ್ಟಿದ ವಸ್ತುಗಳು

(ಭಾಷ್ಯ)

೨೮೫. ತತ್ ತಯೋಃ ಕಪಾಲಯೋಃ, ಯತ್ ರಜತಂ ಕಪಾಲ ಮಾಸೀತ್ ಸೇಯಂ ಪೃಥಿವೀ । ಪೃಥಿವ್ಯುಪಲಕ್ಷಿತಮ್ ಅಧೋಽಣ್ಡಕಪಾಲಮ್ ಇತ್ಯರ್ಥಃ । ಯತ್ ಸುವರ್ಣಂ ಕಪಾಲಂ ಸಾ ದ್ಯೌಃ । ದ್ಯುಲೋಕೋಪಲಕ್ಷಿತಮ್ ಊರ್ಧ್ವಕಪಾಲಮ್ ಇತ್ಯರ್ಥಃ । ಯತ್ ಜರಾಯು ಗರ್ಭಪರಿವೇಷ್ಟನಂ ಸ್ಥೂಲಮ್ ಅಣ್ಡಸ್ಯ ದ್ವಿಶಕಲೀಭಾವಕಾಲೇ ಆಸೀತ್ ತೇ ಪರ್ವತಾ ಬಭೂವುಃ । ಯದುಲ್ಬಂ ಸೂಕ್ಷ್ಮಂ ಗರ್ಭಪರಿವೇಷ್ಟನಂ ತತ್ ಸಹ ಮೇಘೈಃ ಸಮೇಘಃ ನೀಹಾರಃ ಅವಶ್ಯಾಯೋ ಬಭೂವ ಇತ್ಯರ್ಥಃ । ಯಾ ಗರ್ಭಸ್ಯ ಜಾತಸ್ಯ ದೇಹೇ ಧಮನಯಃ ಶಿರಾಃ ತಾ ನದ್ಯೋ ಬಭೂವುಃ । ಯತ್ ತಸ್ಯ ವಸ್ತೌ ಭವಂ ವಾಸ್ತೇ ಯಮ್ ಉದಕಂ ಸ ಸಮುದ್ರಃ ॥

(ಭಾಷ್ಯಾರ್ಥ)

ಅಲ್ಲಿ ಎಂದರೆ ಆ ಹೋಳುಗಳೊಳಗೆ ಬೆಳ್ಳಿಯಿತ್ತಲ್ಲ, (ಬೆಳ್ಳಿಯ) ಹೋಳಿತ್ತಲ್ಲ, ಅದೇ ಈ ಪೃಥಿವಿಯು, ಪೃಥಿವಿಯೆಂಬ ಉಪಲಕ್ಷಣವುಳ್ಳ ಕೆಳಗಿನ ಅಂಡಕಪಾಲವು ಎಂದರ್ಥ. ಚಿನ್ನದ ಹೋಳಿತ್ತಲ್ಲ, ಅದು ದ್ಯುಲೋಕವು ; ದ್ಯುಲೋಕವೆಂಬ ಉಪಲಕ್ಷಣವುಳ್ಳ ಮೇಲಿನ ಕಪಾಲವು ಎಂದರ್ಥ. ಜರಾಯುವಿತ್ತಲ್ಲ, ಎರಡು ಹೋಳಾಗುವ ಕಾಲಕ್ಕೆ ಮೊಟ್ಟೆಯ ಮೇಲಿನ ದಪ್ಪನೆಯ ಪೊರೆಯಿತ್ತಲ್ಲ, ಅದು ಪರ್ವತಗಳಾಯಿತು. ಉಲ್ಬವು ಎಂದರೆ ಗರ್ಭದ ಮೇಲಿನ ತೆಳುವಾದ ಪೊರೆ

ಯಿತ್ತಲ್ಲ, ಅದು ಸಮೇಘವಾದ ಎಂದರೆ ಮೋಡಗಳಿಂದೊಡಗೂಡಿದ ನೀಹಾರವು ಮಂಜು ಆಯಿತು ಎಂದರ್ಥ[1] ಹುಟ್ಟಿದ ಗರ್ಭದ ದೇಹವಲ್ಲಿ ಧಮನಿಗಳು ಎಂದರೆ ನಾಡಿ(ಗಳಿದ್ದ)ವಲ್ಲ, ಅವು ನದಿಗಳಾದವು, ವಾಸ್ತೇಯವಾದ, ಎಂದರೆ ವಸಿಯಲ್ಲಿದ್ದ[2] ನೀರಿತ್ತಲ್ಲ, ಅದು ಸಮುದ್ರವಾಯಿತು.

(ಉಪನಿಷತ್ತು)

**ಅಥ ಯತ್ತದಜಾಯತ ಸೋಽಸಾವಾದಿತ್ಯಸ್ತಂ ಜಾಯಮಾನಂ ಘೋಷಾ ಉಲೂಲವೋಽನೂದತಿಷ್ಠನ್ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಸ್ತಸ್ಮಾತ್ ತಸ್ಯೋದಯಂ ಪ್ರತಿ ಪ್ರತ್ಯಾಯನಂ ಪ್ರತಿ ಘೋಷಾ ಉಲೂಲವೋಽನೂತ್ತಿಷ್ಠನ್ತಿ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ ॥ ೩ ॥**

೩. ಇನ್ನು (ಆಗ) ಹುಟ್ಟಿತಲ್ಲ, ಅದೇ ಈ ಆದಿತ್ಯನು. ಅವನು ಹುಟ್ಟಿದಾಗ ಬಲುಗಟ್ಟಿಯಾದ ಘೋಷಗಳು ಎದ್ದು ಕೊಂಡವು. ಸರ್ವಭೂತಗಳೂ ಸರ್ವಕಾಮಗಳೂ (ಎದ್ದುಕೊಂಡವು). ಆದ್ದರಿಂದ ಅವನ ಉದಯವಾಗುವಾಗಲೂ ಪ್ರತ್ಯಾಯನವಾಗುವಾಗಲೂ ಸರ್ವಭೂತಗಳೂ ಸರ್ವಕಾಮಗಳೂ ಒಡನೆಯೇ ಎದ್ದುಕೊಳ್ಳುವವು

## ಆದಿತ್ಯನ ಜನ್ಮದಲ್ಲಾದ ವಿಶೇಷಗಳು

(ಭಾಷ್ಯ)

೨೮೬. ಅಥ ಯತ್ತದಜಾಯತ ಗರ್ಭರೂಪಂ ತಸ್ಮಿನ್ ಅಣ್ಡೇ ಸೋಽಸಾವಾದಿತ್ಯಃ । ತಮಾದಿತ್ಯಂ ಜಾಯಮಾನಂ ಘೋಷಾಃ ಶಬ್ದಾಃ ಉಲೂಲವಃ ಉರೂರವೋ ವಿಸ್ತೀರ್ಣರವಾಃ ಉದತಿಷ್ಠನ್ ಉತ್ಥಿತವನ್ತಃ । ಈಶ್ವರಸ್ಯೇವ ಇಹ ಪ್ರಥಮಪುತ್ರಜನ್ಮನಿ । ಸರ್ವಾಣಿ ಚ ಸ್ಥಾವರಜಙ್ಗಮಾನಿ ಭೂತಾನಿ ಸರ್ವೇ ಚ ತೇಷಾಂ ಭೂತಾನಾಂ ಕಾಮಾಃ । ಕಾಮ್ಯನ್ತ ಇತಿ ವಿಷಯಾಃ ಸ್ತ್ರೀವಸ್ತ್ರಾನ್ನಾದಯಃ । ಯಸ್ಮಾತ್ ಆದಿತ್ಯಜನ್ಮನಿಮಿತ್ತಾ ಭೂತಕಾಮೋತ್ಪತ್ತಿಃ ತಸ್ಮಾತ್ ಅದ್ಯತ್ವೇಽಪಿ ತಸ್ಯ ಆದಿತ್ಯಸ್ಯ ಉದಯಂ ಪ್ರತಿ ಪ್ರತ್ಯಾಯನಂ ಪ್ರತಿ ಅಸ್ತಗಮನಂ ಚ ಪ್ರತಿ । ಅಥವಾ ಪುನಃ ಪುನಃ ಪ್ರತ್ಯಾಗಮನಂ ಪ್ರತ್ಯಾಯನಮ್ । ತತ್ ಪ್ರತಿ ।

---

1. ಮೋಡಗಳೂ ಮಂಜೂ ಆದವು ಎಂದರ್ಥ

2. ವಸ್ತಿ ಎಂದರೆ ಮೂತ್ರಾಶಯವು, ಈ ಶಬ್ದಕ್ಕೆ ಬಸ್ತಿ ಎಂಬ ರೂಪವೂ ಉಂಟು. ೫-೧೬-೨ನ್ನು ನೋಡಿ

ತನ್ನಿಮಿತ್ತೀಕೃತ್ಯ ಇತ್ಯರ್ಥಃ । ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ ಘೋಷಾಃ ಉಲೂಲವಶ್ಚ ಆನೂತ್ತಿಷ್ಠನ್ತಿ । ಪ್ರಸಿದ್ಧಂ ಹ್ಯೇತತ್ ಉದಯಾದೌ ಸವಿತುಃ ॥

(ಭಾಷ್ಯಾರ್ಥ)

ಇನ್ನು ಆ ಅಂಡದಲ್ಲಿ ಗರ್ಭರೂಪವಾಗಿ ಹುಟ್ಟಿತಲ್ಲ, ಅದೇ ಆದಿತ್ಯನು. ಆ ಆದಿತ್ಯನು ಹುಟ್ಟುತ್ತಲೂ (ಉಲೂಲವಃ=ಉರೂರವಃ) ಬಲುಗಟ್ಟಿಯಾದ ಬಹಳ ಗದ್ದಲವನ್ನುಂಟುಮಾಡುವ ಘೋಷಗಳು ಶಬ್ದಗಳು[1] ಎದ್ದುಕೊಂಡವು, ಈಶ್ವರ ನಾದವನಿಗೆ[2] ಚೊಚ್ಚಲಮಗನು ಹುಟ್ಟಿದಾಗ (ಆಗು)ವಂತೆ ಎದ್ದುಕೊಂಡವು. ಸ್ಥಾವರಜಂಗಮಭೂತಗಳೆಲ್ಲವೂ ಮತ್ತು ಆ ಭೂತಗಳ ಕಾಮುಗಳೆಲ್ಲವೂ- (ಕಾಮುಗಳು ಎಂದರೆ) ಕಾಮಿಸಲ್ಪಡುವ ಸ್ತ್ರೀವಸ್ತ್ರಾನ್ನಾದಿವಿಷಯಗಳು, ಅವುಗಳೂ- (ಉಂಟಾದವು ಹೀಗೆ) ಆದಿತ್ಯಜನ್ಮದ ನಿಮಿತ್ತದಿಂದಲೇ ಭೂತಕಾಮುಗಳ ಉತ್ಪತ್ತಿಯಾಯಿತಷ್ಟೆ, ಆದ್ದರಿಂದ ಈಗಲೂ ಆ ಆದಿತ್ಯನ ಉದಯವಾಗುತ್ತಲೂ, ಪ್ರತ್ಯಾಯನವಾಗುತ್ತಲೂ ಎಂದರೆ ಅಸ್ತಮಯವಾಗುತ್ತಲೂ- ಅಥವಾ ಮತ್ತೆಮತ್ತೆ ಹಿಂತಿರುಗಿಬರುವದೇ ಪ್ರತ್ಯಾಯನವು ; ಅದು ಆಗುತ್ತಲೂ[3].- ಅದನ್ನು ನಿಮಿತ್ತವಾಗಿ ಮಾಡಿಕೊಂಡು ಎಂದರ್ಥ. ಸರ್ವಭೂತಗಳೂ ಸರ್ವಕಾಮುಗಳೂ ಬಲುಗಟ್ಟಿಯಾದ ಘೋಷಗಳೂ ಎದ್ದುಕೊಳ್ಳುತ್ತವೆ. ಸೂರ್ಯನ ಉದಯಾದಿಯಲ್ಲಿ ಇದು ಪ್ರಸಿದ್ಧವಷ್ಟೆ ?

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನಗ್‍ಂ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್ ॥ ೪ ॥**

೪. ಯಾವನು ಹೀಗೆಂದರಿತುಕೊಂಡು ಈ ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನು (ಅವನನ್ನೇ ಸೇರುವನು). ಅವನ ಬಳಿಗೆ ಬೇಗನೆ ಒಳ್ಳೆಯ ಘೋಷಗಳು ಬರುವವು ಮತ್ತು ಒಳ್ಳೆಯದನ್ನು ಮಾಡುವವು, ಒಳ್ಳೆಯದನ್ನು ಮಾಡುವವು.

---

1. ಉತ್ಸವಕಾಲದಲ್ಲಿ ಆಗುವ ಶಬ್ದಗಳು ಎಂದು ಆ॥ ಗಿ॥ ಟೀಕೆ.

2. ಐಶ್ವರ್ಯವಂತನಿಗೆ ಅಥವಾ ರಾಜನಿಗೆ.

3. ಈ ಎರಡನೆಯ ಅರ್ಥವೇ ಇಲ್ಲಿ ಹೆಚ್ಚು ಒಪ್ಪುತ್ತದೆ- ಎಂಬುದು ವಾಕ್ಯಶೇಷದಿಂದ ಗೊತ್ತಾಗುತ್ತದೆ.

## ಆದಿತ್ಯಬ್ರಹ್ಮೋಪಾಸನೆಗೆ ಫಲ

(ಭಾಷ್ಯ)

೨೮೭. ಸ ಯಃ ಕಶ್ಚಿತ್ ಏತಮ್ ಏವಂ ಯಥೋಕ್ತಮಹಿಮಾನಂ ವಿದ್ವಾನ್ ಸನ್ ಆದಿತ್ಯಂ ಬ್ರಹ್ಮೇತ್ಯುಪಾಸ್ತೇ ಸ ತದ್ಭಾವಂ ಪ್ರತಿಪದ್ಯತೇ ಇತ್ಯರ್ಥಃ। ಕಿಂ ಚ ದೃಷ್ಟಂ ಫಲಮ್ ಅಭ್ಯಾಶೋ ಹ ಕ್ಷಿಪ್ರಂ ತದ್ವಿದೋ ಯತ್ ಇತಿ ಕ್ರಿಯಾ ವಿಶೇಷಣಮ್ ಏನಮ್ ಏವಂವಿದಂ ಸಾಧವಃ ಶೋಭನಾ ಘೋಷಾಃ। ಸಾಧುತ್ವಂ ಘೋಷಾದೀನಾಂ ಯದುಪಭೋಗೇ ಪಾಪಾನುಬನ್ಧಾಭಾವಃ। ಆ ಚ ಗಚ್ಛೇಯುಃ ಆಗಚ್ಛೇಯುಶ್ಚ। ಉಪ ಚ ನಿಮ್ರೇಡೇರನ್ ಉಪನಿಮ್ರೇಡೇರಂಶ್ಚ। ನ ಕೇವಲಮ್ ಆಗಮನಮಾತ್ರಂ ಘೋಷಾಣಾಮ್ ಉಪಸುಖಯೇಯುಶ್ಚ. ಉಪಸುಖಂ ಚ ಕುರ್ಯುಃ ಇತ್ಯರ್ಥಃ। ದ್ವಿರಭ್ಯಾಸೋಽಧ್ಯಾಯಪರಿ ಸಮಾಪ್ತ್ಯರ್ಥಃ, ಆದರಾರ್ಥಶ್ಚ॥

(ಭಾಷ್ಯಾರ್ಥ)

ಯಾವನೊಬ್ಬನು ಇವನನ್ನು ಹೀಗೆಂದು ಮೇಲೆ ಹೇಳಿರುವ ಮಹಿಮೆಯವ ನೆಂದು ಅರಿತುಕೊಂಡವನಾಗಿ (ಈ) ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡು ವನೋ, ಅವನು ಈ (ಬ್ರಹ್ಮದ) ಸ್ವರೂಪವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.[1] ಮತ್ತು ದೃಷ್ಟಫಲವೇನೆಂದರೆ (ಅಭ್ಯಾಶಃ=ಕ್ಷಿಪ್ರಮ್) ಬೇಗನೆ ಹೀಗೆಂದು ಉಪಾ ಸನೆಮಾಡುವ ಈ (ಉಪಾಸಕ)ನಿಗೆ – (ಇಲ್ಲಿ ಮೂಲದಲ್ಲಿ) ಯತ್ ಎಂದಿರುವದು ಕ್ರಿಯಾವಿಶೇಷಣವು. ಒಳ್ಳೆಯ ಉತ್ತಮವಾದ ಘೋಷಗಳು – ಘೋಷಗಳೇ ಮುಂತಾದವು[2] ಒಳ್ಳೆಯವಾಗಿರುವದೆಂದರೆ ಉಪಭೋಗಿಸಿದರೆ ಪಾಪಸಂಬಂಧ ವಿಲ್ಲದಿರುವದೇ- (ಆ ಚ ಗಚ್ಛೇಯುಃ=ಆಗಚ್ಛೇಯುಶ್ಚ) ಬಂದೂ ಬರುತ್ತವೆ, ಮತ್ತು (ಉಪ ಚ ನಿಮ್ರೇಡೇರನ್ ಉಪನಿಮ್ರೇಡೇರಂಶ್ಚ) ಒಳ್ಳೆಯವಾಗಿದ್ದು ಕೊಂಡೂ ಇರುವವು. (ಈ ಘೋಷಾದಿಗಳು) ಬರುವವೆಂಬುದಿಷ್ಟೇ ಅಲ್ಲ, ಉಪ ಸುಖವನ್ನುಂಟುಮಾಡುತ್ತಲೂ ಇರುವವು ಎಂದರ್ಥ. (ನಿಮ್ರೇಡೇರನ್ ಎಂದು) ಎರಡು ಸಲ ಹೇಳಿರುವದು ಅಧ್ಯಾಯವು ಮುಗಿಯಿತೆಂಬುದಕ್ಕೆ ಮತ್ತು (ಈ ಉಪಾಸನೆಯಲ್ಲಿ) ಆದರವನ್ನುಂಟುಮಾಡುವದಕ್ಕೆ

---

1. ಇದು ಅದೃಷ್ಟಫಲವು.

2. ಕಾಮಗಳನ್ನೂ ಇಲ್ಲಿ ಸೇರಿಸಿಕೊಳ್ಳಬೇಕೆಂದು ಸ ಎಂಬ ಸರ್ವನಾಮದಿಂದಲೇ ಉಕ್ತವಾಗಿದೆ ಎಂದು ಭಾವ.

# ಮೂರನೆಯ ಅಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಮಧುವಿದ್ಯೆ, ಗಾಯತ್ರೀಬ್ರಹ್ಮೋಪಾಸನೆ, ಶಾಂಡಿಲ್ಯವಿದ್ಯೆ, ಕೋಶವಿದ್ಯೆ, ಪುರುಷವಿದ್ಯೆ, ಮನಆಕಾಶಬ್ರಹ್ಮೋಪಾಸನೆಗಳು- ಇವುಗಳನ್ನು ಹೇಳಿದೆ.

## ಖಂಡಗಳು ಒಂದರಿಂದ ಹನ್ನೆರಡರವರೆಗೆ

**ಸೂಚನೆ :** ಇಲ್ಲಿ ಮೊದಲು ಕೊಟ್ಟಿರುವದು ಖಂಡಸಂಖ್ಯೆ, ಮುಂದೆ ಕೊಟ್ಟಿರುವದು ಕಂಡಿಕೆಗಳ ಸಂಖ್ಯೆ.

ಖಂ. ೧ ಕಂ. ೧-೪. ಆದಿತ್ಯನು ದೇವಮಧು. ಆ ಮಧುವಿಗೆ ದ್ಯುಲೋಕವೇ ಅಡ್ಡ ಬಿದಿರು, ಅಂತರಿಕ್ಷವು ಹುಟ್ಟು; ರಶ್ಮಿಗಳಲ್ಲಿರುವ ಅಪ್ಪೇ ಭ್ರಮರಬೀಜಗಳು. ಋಕ್ಕು ಗಳೆಂಬ ಭ್ರಮರಗಳು ಋಗ್ವೇದವೆಂಬ ಹೂವಿನಿಂದ ಹೀರಿಕೊಂಡುಬಂದಿರುವ- ಕರ್ಮದಲ್ಲಿ ಅವು ಉಪಯುಕ್ತವಾದಾಗ ಉಂಟಾಗುವ ಯಶಸ್ಸು, ತೇಜಸ್ಸು, ಇಂದ್ರಿಯ, ವೀರ್ಯ, ಅನ್ನ- ಎಂಬ ರಸವು ಪೂರ್ವದಿಕ್ಕಿನ ರಶ್ಮಿಗಳೆಂಬ ಮಧುನಾಡಿಗಳಲ್ಲಿ ರೋಹಿತರೂಪದಿಂದ ನಿಂತಿರುತ್ತದೆ.

ಖಂ. ೨ ಕಂ. ೧-೩. ಹೀಗೆಯೇ ಯಜುಸ್ಸುಗಳಿಂದ ಉಂಟಾದ ರಸವು ದಕ್ಷಿಣದಿಕ್ಕಿನ ರಶ್ಮಿಗಳಲ್ಲಿ ಶುಕ್ಲರೂಪದಿಂದ ನಿಂತಿರುತ್ತದೆ.

ಖಂ. ೩ ಕಂ ೧-೩. ಸಾಮಗಳಿಂದ ಉಂಟಾದ ರಸವು ಪಶ್ಚಿಮದಿಕ್ಕಿನ ರಶ್ಮಿಗಳಲ್ಲಿ ಕೃಷ್ಣರೂಪದಿಂದ ನಿಂತಿರುತ್ತದೆ.

ಖಂ. ೪ ಕಂ. ೧-೩. ಅಥರ್ವಾಂಗಿರಸನಿಂದ ದೃಷ್ಟವಾದ ಮಂತ್ರಗಳು ಪಾರಿಪ್ಲವದಲ್ಲಿ ಪ್ರಯುಕ್ತವಾಗುವ ಇತಿಹಾಸಪುರಾಣಗಳೆಂಬ ಪುಷ್ಪಗಳಿಂದ ತಂದ ರಸವು ಹೆಚ್ಚಿನ ಕೃಷ್ಣರೂಪ ವಾಗಿ ಉತ್ತರದ ರಶ್ಮಿಗಳಲ್ಲಿ ನಿಂತಿರುತ್ತದೆ

ಖಂ. ೫ ಕಂ. ೧-೩. ಲೋಕದ್ವಾರೀಯಾದಿ ವಿಧಿಗಳೂ ಕರ್ಮಾಂಗವಿಷಯವಾದ ಉಪಾಸನೆಗಳೂ ಪ್ರಣವವೆಂಬ ಪುಷ್ಪದಿಂದ ತಂದ ರಸವು ಆದಿತ್ಯನ ಮೇಲುಗಡೆಯ ರಶ್ಮಿಗಳಲ್ಲಿ ಆದಿತ್ಯನ ನಡುವೆ ಇರುತ್ತದೆ.

೬ರಿಂದ ೧೧ನೆಯ ಖಂಡಗಳು. ಕೆಂಪುಬಣ್ಣದ ಮೊದಲನೆಯ ಅಮೃತರಸವನ್ನು ಅಗ್ನಿಪ್ರಮುಖರಾದ ವಸುಗಳು ದರ್ಶನಮಾಡುವದರಿಂದಲೇ ಉಪಭೋಗಿಸಿ ತೃಪ್ತರಾಗಿರು ತ್ತಾರೆ. ಅವರು ತಮ್ಮ ಕಾಲವು ಬಂದಾಗಲೇ ಉತ್ಸಾಹಭರಿತರಾಗಿ ಆ ರಸವನ್ನು ಉಪಭೋಗಿಸು ತ್ತಾರೆ; ಮಿಕ್ಕ ಕಾಲದಲ್ಲಿ ಉದಾಸೀನರಾಗಿರುತ್ತಾರೆ. ಇವರಂತೆ ಬಿಳಿಯಬಣ್ಣದ ಎರಡನೆಯ ಅಮೃತರಸವನ್ನು ರುದ್ರರು ಉಪಭೋಗಿಸುತ್ತಾರೆ; ಮೂರನೆಯದಾದ ಕೃಷ್ಣರೂಪದ ಅಮೃತ ವನ್ನು ಆದಿತ್ಯರು ಉಪಭೋಗಿಸುತ್ತಾರೆ; ನಾಲ್ಕನೆಯದಾದ ಹೆಚ್ಚುಕಪ್ಪಿನ ಬಣ್ಣದ ಅಮೃತ ರಸವನ್ನು ಮರುತ್ತರು ಉಪಭೋಗಿಸುತ್ತಾರೆ; ಐದನೆಯದನ್ನು ಸಾಧ್ಯರು ಉಪಭೋಗಿಸುತ್ತಾರೆ.

ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ವಸುಸಾಯುಜ್ಯವನ್ನು ಹೊಂದಿ, ಸೂರ್ಯನು ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಮುಳುಗುವಷ್ಟು ಕಾಲವೂ ವಸುಗಳ ಆಧಿಪತ್ಯವನ್ನೂ ಸ್ವಾರಾಜ್ಯವನ್ನೂ ಪಡೆದುಕೊಂಡಿರುವನು, ಅದರ ಎರಡರಷ್ಟು ಕಾಲದವರೆಗೆ– ಸೂರ್ಯನು ದಕ್ಷಿಣದಲ್ಲಿ ಉದಯಿಸಿ ಉತ್ತರದಲ್ಲಿ ಮುಳುಗುವಷ್ಟು ಕಾಲವೂ– ರುದ್ರರ ಸ್ವಾರಾಜ್ಯವನ್ನು ಪಡೆದುಕೊಂಡಿರುವನು, ಅದರ ಎರಡರಷ್ಟು ಕಾಲ - ಸೂರ್ಯನು ಪಶ್ಚಿಮದಲ್ಲಿ ಉದಯಿಸಿ ಪೂರ್ವದಲ್ಲಿ ಅಸ್ತವಾಗುವಷ್ಟುಕಾಲವೂ- ಆದಿತ್ಯರ ಸಾಯುಜ್ಯವನ್ನು ಪಡೆದಿರುವನು, ಅದರ ಎರಡರಷ್ಟುಕಾಲ - ಸೂರ್ಯನು ಉತ್ತರದಲ್ಲಿ ಉದಯಿಸಿ ದಕ್ಷಿಣದಲ್ಲಿ ಅಸ್ತವಾಗುವಷ್ಟು ಕಾಲವೂ – ಮರುತ್ತರ ಸ್ವಾರಾಜ್ಯವನ್ನು ಪಡೆದುಕೊಂಡಿರುವನು, ಅದರ ಎರಡರಷ್ಟು ಕಾಲ ಸೂರ್ಯನು ಮೇಲುಗಡೆ ಉದಯಿಸಿ ಕೆಳಗಡೆ ಅಸ್ತವಾಗುವವರೆಗೂ –ಸಾಧ್ಯರ ಸ್ವಾರಾಜ್ಯವನ್ನು ಪಡೆದುಕೊಂಡಿರುವನು.

ಖಂ. ೧೧ ಕಂ ೧–೩. ಆಮೇಲೆ ಸೂರ್ಯನಿಗೆ ಉದಯಾಸ್ತಗಳಿರುವದಿಲ್ಲ; ಬ್ರಹ್ಮಸ್ವರೂಪದಲ್ಲಿಯೇ ಆಗ ಸ್ಥಿತಿಯಿದ್ದುಬಿಡುತ್ತದೆ ಈ ಉಪಾಸಕನಿಗೂ ಎಂದೆಂದಿಗೂ ಹಗಲೇ ಆಗಿರುತ್ತದೆ. ಆಗ ಅದ್ವಿತೀಯವಾದ ಸ್ವಯಂಜ್ಯೋತಿಯಾದ ಬ್ರಹ್ಮದ ಬೆಳಕಿನಲ್ಲಿಯೇ ಅವನು ಇದ್ದುಕೊಂಡುಬಿಡುತ್ತಾನೆ

ಖಂ ೧೧ ಕಂ. ೪–೬ ಈ ಮಧುವಿದ್ಯೆಯನ್ನು ಹಿರಣ್ಯಗರ್ಭನು ಪ್ರಜಾಪತಿಗೆ ಹೇಳಿಕೊಟ್ಟನು, ಅವನು ಮನುವಿಗೂ ಮನುವು ಮಿಕ್ಕ ಪ್ರಜೆಗಳಿಗೂ ತಿಳಿಸಿಕೊಟ್ಟರು. ಈ ವಿದ್ಯೆಯನ್ನು ಜ್ಯೇಷ್ಠಪುತ್ರನಾದ ಉದ್ದಾಲಕಆರುಣಿಗೆ ಅವನ ತಂದೆಯು ತಿಳಿಸಿಕೊಟ್ಟನು. ಈ ವಿದ್ಯೆಯನ್ನು ಮಿಕ್ಕವರು ತಮ್ಮ ಜ್ಯೇಷ್ಠಪುತ್ರನಿಗೆ ಅಥವಾ ಯೋಗ್ಯನಾದ ಶಿಷ್ಯನಿಗೆ ಹೇಳಿಕೊಡಬೇಕು, ಮಿಕ್ಕವರಿಗೆ ಹೇಳಿಕೊಡಬಾರದು ಏಕೆಂದರೆ ಈ ವಿದ್ಯೆಯ ದಾನವೆಂಬುದು ಧನಪೂರ್ಣವಾದ ಇಡಿಯ ಭೂಮಿಯ ದಾನಕ್ಕಿಂತಲೂ ಹೆಚ್ಚಿನದು.

## ಖಂಡಗಳು ಹನ್ನೆರಡರಿಂದ ಹದಿಮೂರು ಪೂರ

ಖಂ. ೧೨ ಕಂ ೧–೫ ಸ್ಥಾವರಜಂಗಮಾತ್ಮಕವಾದ ಭೂತಗಳ ರೂಪದಲ್ಲಿರುವ ಇವೆಲ್ಲವೂ ಗಾಯತ್ರಿಯೇ. ಹೇಗೆಂದರೆ ಗಾಯತ್ರಿಯು ವಾಕ್ಕೇ, ಏಕೆಂದರೆ ವಾಕ್ಕು ಎಲ್ಲಾ ಭೂತಗಳನ್ನೂ ಹೇಳುತ್ತದೆ (ಗಾಯತಿ), ಮತ್ತು ಕಾಪಾಡುತ್ತದೆ (ತ್ರಾಯತೇ). ಈ ಸರ್ವಭೂತವಾಗಿರುವ ಗಾಯತ್ರಿಯು ಪೃಥಿವಿಯೇ, ಏಕೆಂದರೆ ಸರ್ವಭೂತಗಳೂ ಪೃಥಿವಿಯಲ್ಲಿ ಇವೆ. ಹೀಗೆ ಸರ್ವಭೂತಗಳ ಸಂಬಂಧದಿಂದ ಪೃಥಿವಿಯೂ ಗಾಯತ್ರಿಯಾಯಿತು. ಈ ಪೃಥಿವಿಯು ಪಾರ್ಥಿವಶರೀರವೇ, ಶರೀರದಲ್ಲಿ ಭೂತಶಬ್ದವಾಚ್ಯಗಳು ಪ್ರಾಣಗಳಿರುವದರಿಂದ ಅದಕ್ಕೂ ಗಾಯತ್ರೀತ್ವವಿದೆ ಈ ಶರೀರಗಾಯತ್ರಿಯು ಹೃದಯವೇ; ಏಕೆಂದರೆ ಹೃದಯದಲ್ಲಿಯೇ ಭೂತಶಬ್ದವಾಚ್ಯವಾದ ಪ್ರಾಣಗಳಿರುತ್ತವೆ. ಹೀಗೆ ನಾಲ್ಕು ಪಾದಗಳುಳ್ಳ ಗಾಯತ್ರಿಯು ವಾಕ್ಕು, ಭೂತ, ಪೃಥಿವಿ, ಶರೀರ, ಹೃದಯ, ಪ್ರಾಣ– ಎಂಬ ಆರು ರೂಪವಾಗಿರುತ್ತದೆ– ಎಂದು ಉಪಾಸನೆಮಾಡಬೇಕು

ಖಂ. ೧೨ ಕಂ. ೬. ಈ ಗಾಯತ್ರೀಬ್ರಹ್ಮದ ಮಹಿಮೆಯನ್ನೇ ಋಕ್ಕು ಹೀಗೆಂದು ವರ್ಣಿಸುತ್ತದೆ. ಈತನ ಮಹಿಮೆಯು ಇಷ್ಟೂ ಆಗಿದೆ, ಆದರೆ ಈ ಪುರುಷನು ಅದಕ್ಕಿಂತ ಹೆಚ್ಚಿನ ಸ್ವರೂಪದವನಾಗಿರುತ್ತಾನೆ. ಇವನಿಗೆ ಭೂತಗಳೆಲ್ಲವೂ ಪಾದಮಾತ್ರ, ಇವನ ಅಮೃತವಾದ ಮೂರು ಪಾದವು ದಿವದಲ್ಲಿ ಎಂದರೆ ಸ್ವಾತ್ಮರೂಪದಲ್ಲಿಯೇ ಇದ್ದುಕೊಂಡಿರುತ್ತದೆ.

ಖಂ. ೧೨ ಕಂ. ೭-೯. ಗಾಯತ್ರೀದ್ವಾರದಿಂದ ಹೇಳಿದ ಈ ಬ್ರಹ್ಮವಿದೆಯಲ್ಲ, ಇದು ಹೊರಗಿನ ಭೂತಾಕಾಶವೇ, ಆ ಭೂತಾಕಾಶವು ಶರೀರದೊಳಗಿನ ಕನಸ್ಸಿನ ಆಕಾಶವೇ; ಆ ಶರೀರಾಕಾಶವು ಹೃದಯದೊಳಗಿನ ಆಕಾಶವೇ. ಆ ಆಕಾಶದಲ್ಲಿ ಚಿಂತಿಸುವ ಬ್ರಹ್ಮವು ಪೂರ್ಣವಾದದ್ದು, ಅವಿನಾಶಿ ಎಂದು ಉಪಾಸನೆಮಾಡಬೇಕು. ಯಾವನು ಈ ಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಳ್ಳುವನೋ ಅವನಿಗೆ ಪೂರ್ಣವೂ ಅವಿನಾಶಿಯೂ ಆದ ಶ್ರೀಯ ಲಾಭವಾಗುವದು

ಖಂ. ೧೩ ಕಂ. ೧ರಿಂದ ೬. ಹೃದಯದಲ್ಲಿ ಉಪಾಸನೆಮಾಡಬೇಕಾಗಿರುವ ಈ ಗಾಯತ್ರೀ ಬ್ರಹ್ಮಕ್ಕೆ ಐವರು ದ್ವಾರಪಾಲರು. ಹೃದಯದ ಪೂರ್ವದ ರಂಧ್ರದಲ್ಲಿರುವ ಪ್ರಾಣವು, ಚಕ್ಷುಸ್ಸು, ಆದಿತ್ಯನು, ಆದಿತ್ಯನು ಚಕ್ಷುಃಪ್ರಾಣಗಳ ಸಂಬಂಧದಿಂದ ಹೃದಯದಲ್ಲಿರುತ್ತಾನೆ ಎಂದು ಉಪಾಸನೆಮಾಡಬೇಕು. ಹೀಗೆಯೇ ಚಂದ್ರ, ಶ್ರೋತ್ರ, ವ್ಯಾನ- ಇವುಗಳು ದಕ್ಷಿಣದ ರಂಧ್ರದಲ್ಲಿರುತ್ತವೆ; ಅಗ್ನಿ, ವಾಕ್ಕು, ಅಪಾನ- ಇವು ಪಶ್ಚಿಮರಂಧ್ರದಲ್ಲಿರುತ್ತವೆ, ಪರ್ಜನ್ಯ, ಮನಸ್ಸು, ಸಮಾನ- ಇವು ಉತ್ತರರಂಧ್ರದಲ್ಲಿರುತ್ತವೆ, ಆಕಾಶ, ವಾಯು, ಉದಾನ- ಇವು ಮೇಲುಗಡೆಯ ರಂಧ್ರದಲ್ಲಿ. ಈ ಐದು ರಂಧ್ರಗಳಲ್ಲಿರುವ ದ್ವಾರಪಾಲರನ್ನು ಕ್ರಮವಾಗಿ ತೇಜಸ್ಸು, ಅನ್ನಾದ್ಯ, ಶ್ರೀ, ಯಶಸ್ಸು, ಬ್ರಹ್ಮವರ್ಚಸ್ಸು, ಅನ್ನಾದ್ಯ, ಕೀರ್ತಿ, ವ್ಯುಷ್ಟಿ, ಓಜಸ್ಸು, ಮಹತ್ತ್ವ- ಎಂದು ಉಪಾಸನೆಮಾಡಬೇಕು. ಈ ಉಪಾಸಕನಿಗೆ ವೀರಪುತ್ರನು ಜನಿಸುವನು ಹಾರ್ದಬ್ರಹ್ಮದ ಪ್ರವೇಶವು ದೊರಕುವದು

ಖಂ. ೧೩ ಕಂ. ೭ರಿಂದ ೮ ಪೂರ ಸಂಸಾರವನ್ನು ಮೀರಿ ಸ್ವಯಂಜ್ಯೋತಿಯಾಗಿರುವ ಮಿಗಿಲಿಲ್ಲದಷ್ಟು ಉತ್ತಮವಾಗಿರುವ ಲೋಕಗಳಲ್ಲಿಯೂ ಇರುವ ಜ್ಯೋತಿಯೇ ಚಕ್ಷುಃಶ್ರೋತ್ರಗ್ರಾಹ್ಯವಾದ ಬಿಸಿ ಮತ್ತು ಸದ್ದು -ಎಂಬ ಲಿಂಗಗಳಿಂದ ಗಮ್ಯವಾಗಿ ಶರೀರದೊಳಗೆ ಇರುತ್ತದೆ, ಇದು ದೃಷ್ಟವು, ಶ್ರುತವು ಎಂದು ಉಪಾಸನೆಮಾಡಬೇಕು. ಅದರಿಂದ ದರ್ಶನೀಯನೂ ವಿಶ್ರುತನೂ ಆಗುವನು, ಉತ್ತಮವಾದ ಸ್ವರ್ಗಲೋಕವೆಂಬ ಫಲವನ್ನು ಪಡೆದುಕೊಳ್ಳುವನು

## ಹದಿನಾಲ್ಕನೆಯ ಖಂಡ

### ಈ ಖಂಡದಲ್ಲಿ ಶಾಂಡಿಲ್ಯವಿದ್ಯೆಯನ್ನು ಉಪದೇಶಿಸಿದೆ

೧-೩. ಮನುಷ್ಯನು ಯಾವ ನಿಶ್ಚಯದಿಂದ ಸಾಯುವನೋ ಅದಕ್ಕನುಗುಣವಾಗಿ ಸತ್ತ ಬಳಿಕ ಫಲವಾಗುವದು ಇದೆಲ್ಲವೂ ಬ್ರಹ್ಮದಿಂದ ಹುಟ್ಟಿ, ಅದರಲ್ಲಿಯೇ ಇದ್ದು, ಅದರಲ್ಲಿಯೇ ಲಯವಾಗುತ್ತಿರುವದರಿಂದ, ಬ್ರಹ್ಮವೇ ಆಗಿರುವದರಿಂದ ಶಾಂತನಾಗಿ ಹೀಗೆಂದು ನಿಶ್ಚಯಮಾಡಿಕೊಂಡು ಉಪಾಸನೆಮಾಡಬೇಕು ಪರಮಾತ್ಮನು ಮನೋಮಯನು, ಪ್ರಾಣಶರೀರನು, ಭಾರೂಪನು, ಸತ್ಯಸಂಕಲ್ಪನು, ಆಕಾಶಾತ್ಮನು, ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಇದೆಲ್ಲವನ್ನೂ ವ್ಯಾಪಿಸಿರುವವನು, ವಾಗಾದಿಕರಣರಹಿತನು, ಸಂಭ್ರಮರಹಿತನು, ಅಣುವಿಗಿಂತಲೂ ಅಣುವಾಗಿ ಮಹತ್ತಿಗಿಂತಲೂ ಮಹತ್ತಾಗಿರುವವನು ಇವನೇ ನನ್ನ ಆತ್ಮನು -ಎಂದು ಉಪಾಸನೆಮಾಡಬೇಕು.

೪. ಈ ಗುಣಗಳಿಂದ ಕೂಡಿದವನೇ ನನ್ನ ಆತ್ಮನಾದ ಬ್ರಹ್ಮವು, ಇವನನ್ನು ದೇಹಪಾತವಾದ ಬಳಿಕ ಸೇರುವೆನು- ಎಂದು ಗುಣವಿಶಿಷ್ಟವಾದ ಬ್ರಹ್ಮವನ್ನು ಉಪಾಸನೆಮಾಡಬೇಕು. ಹೀಗೆಯೇ ಫಲವಾಗುವದೆಂದು ನಿಶ್ಚಿತವಾದ ಬುದ್ಧಿಯೊಡನೆ ಯಾವನು ಉಪಾಸನೆಮಾಡುವನೋ ಅವನಿಗೆ ಅಂಥ ಈಶ್ವರಭಾವನೇ ಫಲವಾಗುವದು -ಎಂದು ಶಾಂಡಿಲ್ಯನು ಹೇಳಿರುತ್ತಾನೆ.

## ಹದಿನೈದನೆಯ ಖಂಡ

ಈ ಖಂಡದಲ್ಲಿ ವೀರಪುತ್ರನು ಹುಟ್ಟುವದಕ್ಕೆ ಬೇಕಾದ ಕೋಶವಿದ್ಯೆಯನ್ನು ಹೇಳಿದೆ.

೧-೨. ವಿಶ್ವಕೋಶಕ್ಕೆ ಅಂತರಿಕ್ಷವೇ ಹೊಟ್ಟೆ, ಭೂಮಿಯೇ ತಳ, ದ್ಯುಲೋಕವೇ ಮೇಲುಬಾಯಿ, ಇದು ಚಿರಕಾಲ ಇರತಕ್ಕದ್ದು. ಅದಕ್ಕೆ ಪೂರ್ವದಲ್ಲಿ ಜುಹೂ, ದಕ್ಷಿಣಕ್ಕೆ ಸಹಮಾನಾ, ಪಶ್ಚಿಮಕ್ಕೆ ರಾಜ್ಞೀ, ಉತ್ತರಕ್ಕೆ ಸುಭೂತಾ -ಎಂಬ ಭಾಗಗಳು ಆ ದಿಕ್ಕುಗಳಿಗೆ ವಾಯುವೇ ಮಗು. ಹೀಗೆಂದು ತಿಳಿದವನಿಗೆ ಪುತ್ರಶೋಕವಿಲ್ಲ.

೩-೭. ಈ ಕೋಶವನ್ನು ಧ್ಯಾನಮಾಡಿ ಅರಿಷ್ಟಂ ಕೋಶಂ ಪ್ರಪದ್ಯೇ, ಪ್ರಾಣಂ ಪ್ರಪದ್ಯೇ, ಭೂಃ ಪ್ರಪದ್ಯೇ, ಭುವಃ ಪ್ರಪದ್ಯೇ, ಸ್ವಃ ಪ್ರಪದ್ಯೇ- ಎಂಬ ಮಂತ್ರಗಳನ್ನು ಅರ್ಥಾನುಸಂಧಾನಪೂರ್ವಕವಾಗಿ ಜಪಮಾಡಬೇಕು. ಇದರಿಂದ ಪುತ್ರನು ದೀರ್ಘಾಯುವಾಗುವನು.

## ಹದಿನಾರನೆಯ ಖಂಡ

ಹದಿನಾರುಹದಿನೇಳನೆಯ ಖಂಡಗಳಲ್ಲಿ ದೀರ್ಘಾಯುಸ್ಸಿಗಾಗಿ ಮಾಡುವ ಪುರುಷವಿದ್ಯೆಯನ್ನು ಹೇಳಿದೆ

೧-೨. ಪುರುಷನೇ ಯಜ್ಞವು ಅದಕ್ಕೆ ಇಪ್ಪತ್ತುನಾಲ್ಕು ವರ್ಷಗಳು ಪ್ರಾತಃಸವನವು; ಏಕೆಂದರೆ ಗಾಯತ್ರಿಗೆ ಅಷ್ಟು ಅಕ್ಷರಗಳು. ಅದಕ್ಕೆ ಪ್ರಾಣಗಳೇ ವಸುಗಳು. ಆ ವಯಸ್ಸಿನಲ್ಲಿ ಯಾವದಾದರೂ ರೋಗವು ಬಂದರೆ 'ಪ್ರಾಣಗಳೆಂಬ ವಸುಗಳೇ. ಈ ನನ್ನ ಪ್ರಾತಃಸವನವನ್ನು ಮಾಧ್ಯಂದಿನಸವನಕ್ಕೆ ಸೇರಿಸಿರಿ'' ಎಂಬರ್ಥದ ಮಂತ್ರವನ್ನು ಜಪಿಸಬೇಕು.

೩-೪. ಮುಂದಿನ ನಲವತ್ತುನಾಲ್ಕು ವರ್ಷಗಳು ಮಾಧ್ಯಂದಿನಸವನವು, ಏಕೆಂದರೆ ತ್ರಿಷ್ಟುಪ್ಪಿಗೆ ಅಷ್ಟು ಅಕ್ಷರಗಳು. ಅದಕ್ಕೆ ಪ್ರಾಣಗಳೇ ರುದ್ರರು. ಆ ವಯಸ್ಸಿನಲ್ಲಿ ಯಾವದಾದರೂ ರೋಗವು ಬಂದರೆ ಪ್ರಾಣಗಳೆಂಬ ರುದ್ರರನ್ನು ಪ್ರಾರ್ಥಿಸುವ ಮಂತ್ರವನ್ನು ಜಪಿಸಬೇಕು.

೫-೬. ಮುಂದಿನ ನಲವತ್ತೆಂಟು ವರ್ಷಗಳು ಸಾಯಂಸವನವು; ಏಕೆಂದರೆ ಜಗತೀ ಛಂದಸ್ಸಿಗೆ ಅಷ್ಟು ಅಕ್ಷರಗಳು. ಅದಕ್ಕೆ ಪ್ರಾಣಗಳೇ ಆದಿತ್ಯರು. ಆ ವಯಸ್ಸಿನಲ್ಲಿ ಏನಾದರೂ ರೋಗವು ಬಂದರೆ ಪ್ರಾಣಗಳೆಂಬ ಆದಿತ್ಯರನ್ನು ಪ್ರಾರ್ಥಿಸುವ ಮಂತ್ರವನ್ನು ಜಪಿಸಬೇಕು.

೭. ಈ ಯಜ್ಞದರ್ಶನವನ್ನು ಮಹಿದಾಸ ಐತರೇಯನು ಅರಿತುಕೊಂಡು 'ಎಲೈ ರೋಗವೆ, ನನ್ನನ್ನು ಸುಮ್ಮನೆ ಏತಕ್ಕೆ ಗೋಳುಗುಟ್ಟಿಸುತ್ತಿರುವೆ? ಇದ್ದರಿಂದ ನಾನು ಸಾಯುವದಿಲ್ಲ!' -ಎಂದನಂತೆ. ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಮಹಿದಾಸನಂತೆ ನೂರುಹದಿನಾರು ವರ್ಷಗಳು ಜೀವಿಸಿರುತ್ತಾನೆ.

## ಹದಿನೇಳನೆಯ ಖಂಡ

೧-೫. ಈ ಪುರುಷಯಜ್ಞಕ್ಕೆ ಹಸಿವು, ನೀರಡಿಕೆ, ಅರತಿ- ಇವೇ ದೀಕ್ಷೆಗಳು; ತಿನ್ನುವದು, ಕುಡಿಯುವದು, ರತಿ -ಇವೇ ಉಪಸತ್ತುಗಳು; ನಗುವದು, ಭಕ್ಷಿಸುವದು, ಮೈಥುನ-

ಇವೇ ಸ್ತುತಶಸ್ತ್ರಗಳು; ತಪಸ್ಸು, ದಾನ, ಆರ್ಜವ, ಅಹಿಂಸೆ, ಸತ್ಯವಚನ— ಇವೇ ದಕ್ಷಿಣೆಗಳು, ಜನನವೇ ಸವನವು, ಮರಣವೇ ಅವಭೃಥವು. ಹೀಗೆಂದು ಯಜ್ಞತ್ವ ಸಂಪಾದನೆಯನ್ನು ಮಾಡಿಕೊಳ್ಳಬೇಕು.

೬–೭. ಈ ಯಜ್ಞದರ್ಶನವನ್ನು ಘೋರ ಆಂಗಿರಸನು ದೇವಕೀಪುತ್ರನಾದ ಕೃಷ್ಣನಿಗೆ ಹೇಳಿದ್ದರಿಂದ ಅವನಿಗೆ ಮತ್ತೊಂದು ಉಪಾಸನೆಯಲ್ಲಿ ಆಶೆಯೇ ಇಲ್ಲವಾಯಿತು. ಉಪಾಸಕನು ಸಾಯುವ ಕಾಲಕ್ಕೆ ಅಕ್ಷಿತಮಸಿ, ಅಚ್ಯುತಮಸಿ, ಪ್ರಾಣಸಂಶಿತಮಸಿ– ಎಂಬ ಮಂತ್ರತ್ರಯ ವನ್ನು ಜಪಿಸಬೇಕು. ಈ ವಿದ್ಯೆಯನ್ನು ಹೊಗಳುವದಕ್ಕೆ ಎರಡು ಋಕ್ಕುಗಳು ವೇದದಲ್ಲಿವೆ ಸೂರ್ಯನಲ್ಲಿರುವ ಪರಮಾತ್ಮನನ್ನೂ ಹೃದಯದಲ್ಲಿರುವ ಪ್ರಾಣನನ್ನೂ ಒಂದೆಂದು ಭಾವಿಸಿ– ಈ ಯಜುಸ್ಸಿನಲ್ಲಿ ಪ್ರಕಾಶಿಸುತ್ತದೆ, ಆ ಋಕ್ಕುಗಳಲ್ಲಿಯೂ ಹೊಗಳಿದೆಯತ್ತದೆ.

## ಹದಿನೆಂಟನೆಯ ಖಂಡ

ಈ ಖಂಡದಲ್ಲಿ ಅಧ್ಯಾತ್ಮವಾಗಿ ಮನೋಬ್ರಹ್ಮವನ್ನೂ ಅಧಿದೈವತವಾಗಿ ಆದಿತ್ಯಬ್ರಹ್ಮವನ್ನೂ ಉಪಾಸನೆಮಾಡಬೇಕೆಂದು ವಿಧಿಸಿದೆ.

೧–೨. ಅಧ್ಯಾತ್ಮವಾಗಿ ಮನಸ್ಸನ್ನು ಬ್ರಹ್ಮವೆಂದೂ ಅಧಿದೈವತವಾಗಿ ಆದಿತ್ಯನನ್ನು ಬ್ರಹ್ಮ ವೆಂದೂ ಉಪಾಸನೆಮಾಡಬೇಕು. ಮನೋಬ್ರಹ್ಮಕ್ಕೆ ವಾಕ್ಕು, ಪ್ರಾಣ, ಚಕ್ಷುಸ್ಸು, ಶ್ರೋತ್ರ– ಎಂಬಿವು ಪಾದಗಳು, ಆಕಾಶಬ್ರಹ್ಮಕ್ಕೆ ಅಗ್ನಿ, ವಾಯು, ಆದಿತ್ಯ, ದಿಕ್ಕುಗಳು – ಇವು ಪಾದಗಳು

೩–೬. ಮನೋಬ್ರಹ್ಮದ ವಾಕ್ಪಾದಕ್ಕೆ ಅಗ್ನಿ, ಪ್ರಾಣಪಾದಕ್ಕೆ ವಾಯು, ಚಕ್ಷುಃಪಾದಕ್ಕೆ ಆದಿತ್ಯ, ಶ್ರೋತ್ರಪಾದಕ್ಕೆ ದಿಕ್ಕುಗಳು ಹೀಗೆ ಅನುಗ್ರಹೀತೃಗಳು ಅಧಿದೈವತಪಾದಗಳಿಂದ ಅಧ್ಯಾತ್ಮಪಾದಗಳು ಹೊಳೆಯುತ್ತಿವೆ, ತಮ್ಮತಮ್ಮ ಕಾರ್ಯದಲ್ಲಿ ವ್ಯಾಪೃತವಾಗುತ್ತಿವೆ

## ಹತ್ತೊಂಬತ್ತನೆಯ ಖಂಡ

ಇಲ್ಲಿ ಆದಿತ್ಯಬ್ರಹ್ಮದ ಉಪಾಸನೆಯನ್ನು ಹೇಳಿದೆ.

೧–೩. ಆದಿತ್ಯನೇ ಬ್ರಹ್ಮವೆಂದು ಉಪಾಸನೆಮಾಡಬೇಕು. ಆದಿತ್ಯನು ಹುಟ್ಟಿದ್ದು ಹೇಗೆಂದರೆ ಅವ್ಯಾಕೃತವಾದ ಜಗತ್ತು ವ್ಯಾಕೃತವಾಗುವಾಗ ಮೊಳೆತು ಅಂಡವಾಯಿತು. ಸಂವತ್ಸರದ ಮೇಲೆ ಒಡೆದುಕೊಂಡಿತು. ಅದರಿಂದ ಪೃಥಿವೀರೂಪದ ರಜತಕಪಾಲವೂ ದ್ಯುರೂಪವಾದ ಸುವರ್ಣಕಪಾಲವೂ ಆದವು ಅದು ಒಡೆದುಕೊಳ್ಳುವಾಗ ಜರಾಯುವು ಪರ್ವತಗಳಾಯಿತು, ತೆಳುವಿನ ಪೊರೆಯು ಮೋಡವೂ ಮಂಜೂ ಆಯಿತು, ನಾಡಿಗಳು ನದಿಗಳಾದವು, ಬಸ್ತಿಯ ಉದಕವು ಸಮುದ್ರವಾಯಿತು. ಕೊನೆಗೆ ಹುಟ್ಟಿದ ಶಿಶುವೇ ಆದಿತ್ಯನು. ಆದಿತ್ಯನು ಹುಟ್ಟಿದಾಗ ಮಹಾಕೋಲಾಹಲವಾಯಿತು, ಸರ್ವಭೂತಗಳೂ ಸರ್ವಕಾಮಗಳೂ ಹುಟ್ಟಿಕೊಂಡವು. ಈಗಲೂ ಸೂರ್ಯೋದಯವಾಗುವಾಗ ಹಾಗೆಯೇ ಆಗುತ್ತಿರುತ್ತದೆ.

೪. ಹೀಗೆಂದರಿತು ಯಾವನು ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನ ಬಳಿಗೆ ಸಾಧುಘೋಷಗಳು ಬರುವವು, ಸುಖವನ್ನೂ ಉಂಟುಮಾಡುವವು.

---

# ನಾಲ್ಕನೆಯ ಅಧ್ಯಾಯ-ಒಂದನೆಯ ಖಂಡ

(ಸಂವರ್ಗವಿದ್ಯೆ)

## ಜಾನಶ್ರುತಿಯು ರೈಕ್ವನನ್ನು ಕಂಡುಹಿಡಿದದ್ದು

(ಉಪನಿಷತ್ತು)

**ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ ಸ ಹ ಸರ್ವತ ಆವಸಥಾನ್ ಮಾಪಯಾಂ ಚಕ್ರೇ ಸರ್ವತ ಏವ ಮೇಽನ್ನಮತ್ಸ್ಯನ್ತೀತಿ ॥ ೧ ॥**

೧. ಜಾನಶ್ರುತಿ ಪೌತ್ರಾಯಣನು, ಶ್ರದ್ಧಾದೇಯನೂ ಬಹುದಾಯಿಯೂ ಬಹುಪಾಕ್ಯನೂ ಆಗಿದ್ದನು. ಅವನು ಎಲ್ಲಾ ಕಡೆಯಲ್ಲಿಯೂ ನನ್ನ ಅನ್ನವನ್ನು[1] ಜನರು ತಿನ್ನಲಿ ' - ಎಂದು ಆವಸಥಗಳನ್ನು ನಿರ್ಮಾಣಮಾಡಿಸಿದ್ದನು.

## ಗ್ರಂಥಸಂಬಂಧವೂ ಕಥಾಪ್ರಯೋಜನವೂ

(ಭಾಷ್ಯ)

೨೮೭. ವಾಯುಪ್ರಾಣಯೋರ್ಬ್ರಹ್ಮಣಃ ಪಾದದೃಷ್ಟ್ಯಧ್ಯಾಸಃ ಪುರಸ್ತಾದ್ ವರ್ಣಿತಃ । ಅಥೇದಾನೀಂ ತಯೋಃ ಸಾಕ್ಷಾದ್ ಬ್ರಹ್ಮತ್ವೇನ ಉಪಾಸ್ಯತ್ವಾಯ ಉತ್ತರಮ್ ಆರಭ್ಯತೇ । ಸುಖಾವಬೋಧಾರ್ಥಾ ಆಖ್ಯಾಯಿಕಾ, ವಿದ್ಯಾದಾನ ಗ್ರಹಣವಿಧಿಪ್ರದರ್ಶನಾರ್ಥಾ ಚ । ಶ್ರದ್ಧಾನ್ನದಾನಾನುದ್ಧತತ್ವಾದೀನಾಂ ಚ ವಿದ್ಯಾಪ್ರಾಪ್ತಿಸಾಧನತ್ವಂ ಪ್ರದರ್ಶ್ಯತ ಆಖ್ಯಾಯಿಕಯಾ ॥

(ಭಾಷ್ಯಾರ್ಥ)

ವಾಯುಪ್ರಾಣಗಳಲ್ಲಿ ಬ್ರಹ್ಮದ ಪಾದವೆಂಬ ದೃಷ್ಟಿಯನ್ನು (ಇಡಬೇಕೆಂದು) (ಈ) ಮುಂಚೆ[2] ವರ್ಣಿಸಲಾಗಿದೆ. ಇನ್ನು ಈಗ ,ಅವುಗಳನ್ನು ನೇರಾಗಿ ಬ್ರಹ್ಮವೆಂದೇ ಉಪಾಸನೆಮಾಡಬೇಕೆಂದು (ವಿಧಿಸುವದಕ್ಕಾಗಿ) ಮುಂದಿನ (ಗ್ರಂಥವನ್ನು) ಆರಂಭಿಸಿರುತ್ತದೆ ಕಥೆಯನ್ನು ಹೇಳಿರುವದು (ವಿಷಯವು) ಸುಲಭವಾಗಿ ತಿಳಿಯ

---

1 ಅನ್ನಮ್ ಎಂಬ ಮಾತು ಆ॥ ಮುದ್ರಿತಪುಸ್ತಕದಲ್ಲಿ ಬಿಟ್ಟುಹೋಗಿದೆ.

2 ೩-೧೮-೨ರಲ್ಲಿ ಮನೋಬ್ರಹ್ಮಕ್ಕೂ ಆಕಾಶಬ್ರಹ್ಮಕ್ಕೂ ಇವು ಪಾದಗಳೆಂದು ಹೇಳಿತ್ತು.

ಲೆಂದೂ ವಿದ್ಯೆಯನ್ನು (ಮತ್ತೊಬ್ಬರಿಗೆ) ಉಪದೇಶಮಾಡುವ ಮತ್ತು ಸ್ವೀಕರಿಸುವ ಕ್ರಮವನ್ನು ತಿಳಿಸುವದಕ್ಕೆಂದೂ (ಆಗಿರುತ್ತದೆ). ಶ್ರದ್ಧೆ, ಅನ್ನದಾನ, ದಿಟ್ಟನಾಗದೆ ಇರುವದು – ಮುಂತಾದವು ವಿದ್ಯಾಪ್ರಾಪ್ತಿಗೆ ಸಾಧನವೆಂಬುದನ್ನು (ಇಲ್ಲಿ) ತಿಳಿಸ ಲಾಗಿರುತ್ತದೆ.

## ಜಾನಶ್ರುತಿಯ ಗುಣಕಥನ

(ಭಾಷ್ಯ)

೨೮೮. ಜಾನಶ್ರುತಿಃ ಜನಶ್ರುತಸ್ಯ ಅಪತ್ಯಮ್ । ಹ[1] ಐತಿಹ್ಯಾರ್ಥಃ । ಪುತ್ರಸ್ಯ ಪೌತ್ರಃ ಪೌತ್ರಾಯಣಃ ಸ ಏವ । ಶ್ರದ್ಧಾದೇಯಃ ಶ್ರದ್ಧಾಪುರಃಸರ ಮೇವ ಬ್ರಾಹ್ಮಣಾದಿಭ್ಯೋ ದೇಯಮ್ ಅಸ್ಯ ಇತಿ ಶ್ರದ್ಧಾದೇಯಃ । ಬಹು ದಾಯೀ (ಬಹು)[2] ಪ್ರಭೂತಂ ದಾತುಂ ಶೀಲಮ್ ಅಸ್ಯ ಇತಿ ಬಹುದಾಯೀ । ಬಹುಪಾಕ್ಯಃ । ಬಹುಪಕ್ತವ್ಯಮ್ ಅಹನ್ಯಹನಿ ಗೃಹೇ ಯಸ್ಯ ಅಸೌ ಬಹುಪಾಕ್ಯಃ। ಭೋಜನಾರ್ಥಿಭ್ಯೋ ಬಹು ಅಸ್ಯ ಗೃಹೇ ಅನ್ನಂ ಪಚ್ಯತ ಇತ್ಯರ್ಥಃ । ಏವಂ ಗುಣಸಂಪನ್ನೋಽಸೌ ಜಾನಶ್ರುತಿಃ ಪೌತ್ರಾಯಣಃ ವಿಶಿಷ್ಟೇ ದೇಶೇ ಕಾಲೇ ಚ ಕಸ್ಮಿಂಶ್ಚಿತ್ ಆಸ ಬಭೂವ । ಸ ಹ ಸರ್ವತಃ ಸರ್ವಾಸು ದಿಕ್ಷು ಗ್ರಾಮೇಷು ನಗ ರೇಷು ಚ ಆವಸಥಾನ್ ಏತ್ಯ ವಸನ್ತಿ ಏಷ್ವಿತಿ ಆವಸಥಾಃ । ತಾನ್ ಮಾಪಯಾಂ ಚಕ್ರೇ ಕಾರಿತವಾನ್ ಇತ್ಯರ್ಥಃ । ಸರ್ವತ ಏವ ಮೇ ಮಮ ಅನ್ನಂ ತೇಷು ಆವಸಥೇಷು ವಸನ್ತಃ ಅತ್ಸ್ಯನ್ತಿ ಭೋಕ್ಷ್ಯನ್ತೇ ಇತ್ಯೇವಮಭಿಪ್ರಾಯಃ ॥

(ಭಾಷ್ಯಾರ್ಥ)

ಜಾನಶ್ರುತಿಯು ಎಂದರೆ ಜನಶ್ರುತನ ಮಗನು. ಹ ಎಂಬುದು ಹಿಂದೆ ನಡೆದದ್ದನ್ನು (ತಿಳಿಸು)ವದಕ್ಕೆ. ಅವನೇ ಪೌತ್ರಾಯಣನು, ಪುತ್ರನೆಂಬವನ ಮೊಮ್ಮಗನು. ಶ್ರದ್ಧಾದೇಯನು, ಶ್ರದ್ಧಾಪೂರ್ವಕವಾಗಿಯೇ ಬ್ರಾಹ್ಮಣಾದಿಗಳಿಗೆ ಕೊಡತಕ್ಕದ್ದನ್ನು (ಕೊಡುತ್ತಿದ್ದನಾದ್ದರಿಂದ) ಶ್ರದ್ಧಾದೇಯನು. ಬಹುದಾಯಿ: ಬಹಳವಾಗಿ ಹೆಚ್ಚಿನ ಪ್ರಮಾಣದಲ್ಲಿ ದಾನಮಾಡುವ ಸ್ವಭಾವದವನಾದ್ದರಿಂದ (ಅವನು) ಬಹುದಾಯಿ. ಬಹುಪಾಕ್ಯನು. ದಿನದಿನವೂ ಬಹುವಾಗಿ ಅಡಿಗೆಮಾಡಿಸು ತ್ತಿದ್ದನಾದ್ದರಿಂದ ಬಹುಪಾಕ್ಯನು ; ಭೋಜನಾರ್ಥಿಗಳಿಗಾಗಿ ಇವನ ಮನೆಯಲ್ಲಿ ಬಹಳ ಅನ್ನವನ್ನು ಅಡುತ್ತಿದ್ದನು ಎಂದರ್ಥ. ಇಂಥ ಗುಣಗಳಿಂದ ಸಂಪನ್ನನಾದ ಈ ಜಾನಶ್ರುತಿ ಪೌತ್ರಾಯಣನು ಒಂದಾನೊಂದು ಗೊತ್ತಾದ ದೇಶದಲ್ಲಿ ಮತ್ತು ಕಾಲದಲ್ಲಿ ಇದ್ದನು, ಇರುತ್ತಿದ್ದನು. ಅವನು ಎಲ್ಲಾ ಕಡೆಯಲ್ಲಿಯೂ, ಎಲ್ಲಾ ದಿಕ್ಕು

1. 'ಹ ಇತಿ' ಎಂದೂ ಪಾಠಾಂತರ; ಅದಿಲ್ಲದಿದ್ದರೂ ಸಾಗುತ್ತದೆ.
2. ಈ ಮಾತು ಬಿಟ್ಟುಹೋಗಿರಬೇಕು.

ಗಳಲ್ಲಿಯೂ ಗ್ರಾಮಗಳಲ್ಲಿಯೂ ನಗರಗಳಲ್ಲಿಯು ಆವಸಥಗಳನ್ನು — ಬಂದು ಇವು ಗಳಲ್ಲಿ ವಾಸಮಾಡುತ್ತಾರಾದ್ದರಿಂದ (ಇವು) ಆವಸಥಗಳು. ಅಂಥ (ಆವಸಥ ಗಳನ್ನು)—ನಿರ್ಮಾಣಮಾಡಿಸಿದ್ದನು, ಕಟ್ಟಿಸಿದ್ದನು ಎಂದರ್ಥ ಎಲ್ಲಾ ಕಡೆ ಗಳಿಂದಲೂ (ಬಂದು) ಈ ಆವಸಥಗಳಲ್ಲಿದ್ದು (ಮೇ=ಮಮ) ನನ್ನ ಅನ್ನವನ್ನು ತಿನ್ನಲಿ, ಭುಂಜಿಸಲಿ! -ಎಂಬ ಅಭಿಪ್ರಾಯದಿಂದ (ಹೀಗೆ ಕಟ್ಟಿಸಿದ್ದನು)

(ಉಪನಿಷತ್ತು)

**ಅಥ ಹ ಹಗ್ಂಸಾ ನಿಶಾಯಾಮತಿಪೇತುಸ್ತದ್ಧೈವಗ್ಂ ಹಗ್ಂ ಸೋ ಹಗ್ಂಸಮಭ್ಯುವಾದ ಹೋ ಹೋಯಿ ಭಲ್ಲಾಕ್ಷ ಭಲ್ಲಾಕ್ಷ ಜಾನಶ್ರುತೇಃ ಪೌತ್ರಾಯಣಸ್ಯ ಸಮಂ ದಿವಾ ಜ್ಯೋತಿ ರಾತತಂ ತನ್ಮಾ ಪ್ರಸಾಙ್‌ಕ್ಷೀಸ್ತತ್ತ್ವಾ ಮಾ ಪ್ರಧಾಕ್ಷೀರಿತಿ ॥ ೨ ॥**

೨. ಹೀಗಿರಲು ಹಂಸಗಳು ಒಂದು ದಿನ ನಿಶಾ(ಸಮಯ)ದಲ್ಲಿ ಹಾರಿಹೋಗುತ್ತಿದ್ದವು. ಆಗ (ಒಂದು) ಹಂಸವು ಮತ್ತೊಂದು ಹಂಸವನ್ನು ಕುರಿತು ಇಂತೆಂದಿತು: 'ಹೋ, ಹೋ! ಭಲ್ಲಾಕ್ಷ, ಭಲ್ಲಾಕ್ಷ! ಜಾನಶ್ರುತಿ ಪೌತ್ರಾಯಣನ ಜ್ಯೋತಿಯು ದ್ಯು(ಲೋಕ)ಕ್ಕೆ ಸಮನಾಗಿ ಹರಡಿಕೊಂಡಿದೆ. ಅದನ್ನು ಸೋಂಕಬೇಡ, ಅದು ನಿನ್ನನ್ನು ಸುಡದಿರಲಿ!

## ಹಂಸವು ಜಾನಶ್ರುತಿಯನ್ನು ಹೊಗಳಿದ್ದು

(ಭಾಷ್ಯ)

೨೮. ತತ್ರ ಏವಂ ಸತಿ ರಾಜನಿ ತಸ್ಮಿನ್ ಘರ್ಮಕಾಲೇ ಹರ್ಮ್ಯತಲಸ್ಥೇ ಅಥ ಹ ಹಂಸಾ ನಿಶಾಯಾಂ ರಾತ್ರೌ ಅತಿಪೇತುಃ। ಋಷಯೋ ದೇವತಾ ವಾ ರಾಜ್ಞೋಽನ್ನದಾನಗುಣೈಸ್ತೋಷಿತಾಃ ಸನ್ತಃ ಹಂಸರೂಪಾ ಭೂತ್ವಾ ರಾಜ್ಞೋ ದರ್ಶನಗೋಚರೇ ಅತಿಪೇತುಃ ಪತಿತವನ್ತಃ। ತತ್ ತಸ್ಮಿನ್ ಕಾಲೇ ತೇಷಾಂ ಪತತಾಂ ಹಂಸಾನಾಮ್ ಏಕಃ ಪೃಷ್ಠತಃ ಪತನ್ ಅಗ್ರತಃ ಪತನ್ತಂ ಹಂಸಮ್ ಅಭ್ಯುವಾದ ಅಭ್ಯುಕ್ತವಾನ್। ಹೋ ಹೋಯಿ ಇತಿ ಭೋ ಭೋ ಇತಿ ಸಂಬೋಧ್ಯ। ಭಲ್ಲಾಕ್ಷ ಭಲ್ಲಾಕ್ಷ ಇತಿ ಆದರಂ ದರ್ಶಯನ್। ಯಥಾ ಪಶ್ಯ ಪಶ್ಯ ಆಶ್ಚರ್ಯಮ್ ಇತಿ ತದ್ವತ್। ಭಲ್ಲಾಕ್ಷ ಇತಿ ಮನ್ದದೃಷ್ಟಿತ್ವಂ ಸೂಚಯನ್ ಆಹ। ಅಥವಾ ಸಮ್ಯಗ್ಬ್ರಹ್ಮದರ್ಶನಾಭಿಮಾನವತ್ತ್ವಾತ್ ತಸ್ಯ ಅಸಕೃತ್ ಉಪಾಲಬ್ಧಸ್ತೇನ ಪೀಡ್ಯಮಾನೋಽಮರ್ಷಿತಯಾ ತತ್ ಸೂಚಯತಿ ಭಲ್ಲಾಕ್ಷ ಇತಿ। ಜಾನಶ್ರುತೇಃ

ಪೌತ್ರಾಯಣಸ್ಯ ಸಮಂ ತುಲ್ಯಂ ದಿವಾ ದ್ಯುಲೋಕೇನ ಜ್ಯೋತಿಃಪ್ರಭಾಸ್ವರಮ್ ಅನ್ನದಾನಾದಿಜನಿತಪ್ರಭಾವಜಮ್ ಆತತಂ ವ್ಯಾಪ್ತಂ ದ್ಯುಲೋಕಸ್ಪೃಕ್ ಇತ್ಯರ್ಥಃ। ದಿವಾ ಅಹ್ನಾ ವಾ ಸಮಂ ಜ್ಯೋತಿಃ ಇತ್ಯೇತತ್। ತನ್ಮಾ ಪ್ರಸಾಙ್ಕ್ಷೀಃ ಸಞ್ಜನಂ ಸಕ್ತಿಂ ತೇನ ಜ್ಯೋತಿಷಾ ಸಂಬನ್ಧಂ ಮಾ ಕಾರ್ಷೀಃ ಇತ್ಯರ್ಥಃ। ತತ್ ಪ್ರಸಞ್ಜನೇನ ತತ್ ಜ್ಯೋತಿಃ ತ್ವಾ ತ್ವಾಂ ಮಾ ಪ್ರಧಾಕ್ಷೀಃ ಮಾ ದಹತು ಇತ್ಯರ್ಥಃ। ಪುರುಷವ್ಯತ್ಯಯೇನ ಮಾ ಪ್ರಧಾಕ್ಷೀದಿತಿ ॥

(ಭಾಷ್ಯಾರ್ಥ)

ಇದು ಹೀಗಿರಲು ಆ ರಾಜನು ಬೇಸಗೆಯ ಕಾಲದಲ್ಲಿ ಉಪ್ಪರಿಗೆಯ ಮೇಲೆ ಇದ್ದುಕೊಂಡಿರಲು, ಆಗ ಹಂಸಗಳು ನಿಶಾ(ಸಮಯ)ದಲ್ಲಿ ರಾತ್ರಿಯಲ್ಲಿ ಹಾರಿ ಹೋಗುತ್ತಿದ್ದವು , ಋಷಿಗಳೋ ದೇವತೆಗಳೋ ರಾಜನ ಅನ್ನದಾನಗುಣಗಳಿಂದ ತುಷ್ಟರಾಗಿ ಹಂಸರೂಪದಿಂದ ರಾಜನಿಗೆ ಕಾಣುವಂತೆ ಹಾರಿಹೋಗುತ್ತಿದ್ದವು. (ಆ ಕಡೆಯಿಂದ) ಹಾರಿಕೊಂಡು ಹೋಗುತ್ತಿದ್ದವು.

ಆಗ ಆ ಕಾಲವಲ್ಲಿ (ಹಾಗೆ) ಹಾರಿಹೋಗುತ್ತಿದ್ದ ಆ ಹಂಸಗಳೊಳಗೆ ಹಿಂದುಗಡೆ ಹಾರಿಹೋಗುತ್ತಿದ್ದ ಒಂದು ಹಂಸವು ಮುಂದೆ ಹಾರಿಹೋಗುತ್ತಿದ್ದ ಹಂಸವನ್ನು ಕುರಿತು ಇಂತೆಂದಿತು, ಹೀಗೆಂದು ಹೇಳಿತು. ಹೋ ಹೋ, ಎಲೊ ಎಲೊ ! ಎಂದು ಕರೆದು (ಇಂತೆಂದಿತು) , ಭಲ್ಲಾಕ್ಷ, ಭಲ್ಲಾಕ್ಷ (ಎಂದು ಎರಡು ಸಲ) ಆದರವನ್ನು ತೋರಿಸಿ (ಮಾತನಾಡಿತು). 'ನೋಡು, ನೋಡು , ಈ ಆಶ್ಚರ್ಯವನ್ನ !' ಎಂದು ಹೇಗೆ (ಹೇಳುತ್ತಾರೋ) ಹಾಗೆಯೇ ಇದು. ಭಲ್ಲಾಕ್ಷ ಎಂದಿರುವದು ಅಲ್ಪದೃಷ್ಟಿತ್ವವನ್ನು ಸೂಚಿಸುವದಕ್ಕೆ,[1] ಅಥವಾ ಅದಕ್ಕೆ (ತನಗೆ) ಸರಿಯಾದ ಬ್ರಹ್ಮಜ್ಞಾನವು (ಇರುವದೆಂಬ) ಅಭಿಮಾನವಿದ್ದದ್ದರಿಂದ ಎಷ್ಟೋ ಸಲ ಆ (ಹಂಸ)ದಿಂದ ಹಂಗಿಸಲ್ಪಟ್ಟಿದ್ದದ್ದರಿಂದ ವ್ಯಥೆಯಿಂದ ತಡೆದುಕೊಳ್ಳಲಾರದೆ, ಭಲ್ಲಾಕ್ಷ ! ಎಂದು ಆ (ಅಸಹನೆಯನ್ನು) ಸೂಚಿಸಿತು (ಎಂದಾದರೂ ವ್ಯಾಖ್ಯಾನಮಾಡಬಹುದು) "ಜಾನಶ್ರುತಿ ಪೌತ್ರಾಯಣನ ಅನ್ನದಾನಾದಿಗಳ ಪ್ರಭಾವದಿಂದುಂಟಾದ ಬೆಳಗುವ ಜ್ಯೋತಿಯು (ದಿವಾ=ದ್ಯುಲೋಕೇನ) ದ್ಯುಲೋಕಕ್ಕೆ ಸಮನಾಗಿ (ಆತತಂ=ವ್ಯಾಪ್ತಮ್) ಹರಡಿಕೊಂಡಿದೆ ; ದ್ಯುಲೋಕವನ್ನು ಮುಟ್ಟುತ್ತಿದೆ ಎಂದರ್ಥ. ಅಥವಾ (ದಿವಾ=ಅಹ್ನಾ) ಹಗಲಿನ (ಬೆಳಕಿಗೆ) ಸಮನಾದ ಜ್ಯೋತಿಯು ಎಂದು ತಾತ್ಪರ್ಯ. ಅದನ್ನು ಸೋಂಕಬೇಡ , ಸಂಜನವನ್ನು ಸಂಗವನ್ನು ಆ ಜ್ಯೋತಿಯ ಸಂಬಂಧವನ್ನು ಮಾಡಿಕೊಳ್ಳದಿರು ಎಂದರ್ಥ ಅದನ್ನು ಸೋಂಕುವದರಿಂದ ಆ ಜ್ಯೋತಿಯು (ತ್ವಾ=ತ್ವಾಮ್)

1. ಸರಿಯಾಗಿ ಕಣ್ಣು ಕಾಣಿಸುವದಿಲ್ಲವೆ ? ಎಂದು ಎಚ್ಚರಿಸಿಮಾತನಾಡುವದಕ್ಕೆ.

ಸುಡದಿರಲಿ, ಸುಟ್ಟುಹಾಕದಿರಲಿ! ಎಂದರ್ಥ. (ಮಾ ಪ್ರಧಾಕ್ಷೀಃ ಎಂಬುದಕ್ಕೆ ಪುರುಷವಿಪರಿಣಾಮದಿಂದ ಮಾ ಪ್ರಧಾಕ್ಷೀತ್ ಎಂದು (ಪ್ರಥಮಪುರುಷಕ್ಕೆ ತಿರುಗಿಸಿ ಅರ್ಥವನ್ನು ಮಾಡಿಕೊಳ್ಳಬೇಕು).

(ಉಪನಿಷತ್ತು)

**ತಮು ಹ ಪರಃ ಪ್ರತ್ಯುವಾಚ ಕಮ್ವರ ಏನಮೇತತ್ ಸನ್ತಗ್ಂ ಸಯುಗ್ವಾನಮಿವ ರೈಕ್ವಮಾತ್ಥೇತಿ ಯೋ ನು ಕಥಗ್ಂ ಸಯುಗ್ವಾ ರೈಕ್ವ ಇತಿ ॥ ೩ ॥**

೩. ಅದಕ್ಕೆ ಮತ್ತೊಂದು ಹೀಗೆಂದಿತು: 'ಎಲೆ, ಹೀಗಿರುವ ಇವನನ್ನು ಯಾವನೆಂದು ಸಯುಗ್ವರೈಕ್ವನಂತೆ ಹೇಳುತ್ತಿದ್ದೀಯೆ?' 'ಆ ಸಯುಗ್ವರೈಕ್ವನೆಂಬವನು ಹೇಗಿರುತ್ತಾನೆ?'

## ರೈಕ್ವನ ಪ್ರಸ್ತಾವನೆ

(ಭಾಷ್ಯ)

೨೯೦. ತಮ್ ಏವಮುಕ್ತವನ್ತಂ ಪರಃ ಇತರೋಽಗ್ರಗಾಮೀ ಪ್ರತ್ಯುವಾಚ। ಅರೇ ನಿಕೃಷ್ಟೋಽಯಂ ರಾಜಾ ವರಾಕಃ। ತಂ ಕಮು ಏನಂ ಸನ್ತಂ ಕೇನ ಮಾಹಾತ್ಮ್ಯೇನ ಯುಕ್ತಂ ಸನ್ತಮ್ ಇತಿ ಕುತ್ಸಯತಿ। ಏನಮ್ ಏವಂ ಸಬಹುಮಾನಮ್ ಏತದ್ ವಚನಮ್ ಆತ್ಥ ರೈಕ್ವಮಿವ ಸಯುಗ್ವಾನಮ್। ಸಹ ಯುಗ್ವನಾ ಗನ್ತ್ರ್ಯಾ ವರ್ತತ ಇತಿ ಸಯುಗ್ವಾ ರೈಕ್ವಃ। ತಮಿವ ಆತ್ಥ ಏನಮ್। ಅನನುರೂಪಮ್ ಅಸ್ಮಿನ್ ಅಯುಕ್ತಮ್ ಈದೃಶಂ ವಕ್ತುಂ ರೈಕ್ವ ಇವ ಇತ್ಯಭಿಪ್ರಾಯಃ। ಇತರಶ್ಚ ಆಹ। ಯೋ ನು ಕಥಂ ತ್ವಯಾ ಉಚ್ಯತೇ ಸಯುಗ್ವಾ ರೈಕ್ವಃ। ಇತ್ಯುಕ್ತವನ್ತಂ ಭಲ್ಲಾಕ್ಷ ಆಹ- ಶೃಣು ಯಥಾ ಸ ರೈಕ್ವಃ॥

(ಭಾಷ್ಯಾರ್ಥ)

ಹೀಗೆಂದ ಆ (ಹಂಸವನ್ನು ಕುರಿತು) ಮತ್ತೊಂದು ಮುಂದೆ ಹೋಗುತ್ತಿದ್ದ ಇನ್ನೊಂದು (ಹಂಸವು ಹೀಗೆಂದು) ಮಾರುನುಡಿಯಿತು. "ಎಲೆ, ಈ ರಾಜನು ಕೀಳನು, ಸಣ್ಣಮನುಷ್ಯನು. ಇವನನ್ನು ಯಾವನೆಂದು "ಯಾವ ಮಹಿಮೆಯಿಂದೊಡಗೂಡಿದವನೆಂದು" ಎಂದು ತಿರಸ್ಕಾರದಿಂದ ನುಡಿದದ್ದು. (ಹೀಗಿರುವ) ಇವನನ್ನು ಹೀಗೆ ಗೌರವದಿಂದೊಡಗೂಡಿದ ವಚನವನ್ನು- ಸಯುಗ್ವರೈಕ್ವನನ್ನು (ಹೊಗಳುವಂತೆ)- ನುಡಿಯುತ್ತಿರುವೆ? ಯುಗ್ವದಿಂದ ಎಂದರೆ ಬಂಡಿಯೊಡನೆ

ಇರುವನಾದ್ದರಿಂದ ರೈಕ್ವನು ಸಯುಗ್ವನು, ಅವನನ್ನು (ಹೊಗಳುವಂತೆ) ಇವನನ್ನು (ಹೊಗಳಿ ಮಾತನಾಡುತ್ತಿರುವೆಯಲ್ಲ !" ರೈಕ್ವನ ವಿಷಯದಲ್ಲಿ ಹೇಗೋ ಹಾಗೆ ಇವನ (ವಿಷಯ)ದಲ್ಲಿ ಇಂಥ (ಮಾತನ್ನು) ಆಡುವದು ಅನುಗುಣವಲ್ಲ- ಎಂದು ಅಭಿಪ್ರಾಯ. (ಆ) ಮತ್ತೊಂದು ಹಂಸವಿಂತೆಂದಿತು. "ಸಯುಗ್ವರೈಕ್ವನೆನ್ನುವೆಯಲ್ಲ, (ಅವನು) ಹೇಗಿರುವನೊ!" ಹೀಗೆಂದು ಹೇಳಲು ಭಲ್ಲಾಕ್ಷನು ಹೇಳುತ್ತದೆ: ಆ ರೈಕ್ವನು ಹೇಗಿರುವನೆಂಬುದನ್ನು (ಹೇಳುವೆನು) ಕೇಳು .[1]

(ಉಪನಿಷತ್ತು)

**ಯಥಾ ಕೃತಾಯ ವಿಜಿತಾಯಾಧರೇಯಾಃ ಸಂಯನ್ತ್ಯೇವಮೇನ ಗ್‌ಂ ಸರ್ವಂ ತದಭಿಸಮೈತಿ[2] ಯತ್ಕಿಂಚ ಪ್ರಜಾಃ ಸಾಧು ಕುರ್ವನ್ತಿ ಯಸ್ತದ್ವೇದ ಯತ್ ಸ ವೇದ ಸ ಮಯೈತದುಕ್ತ ಇತಿ ॥ ೪ ॥**

೪. ಹೇಗೆ ಕೃತವನ್ನು ಗೆದ್ದುಕೊಂಡರೆ (ಅದರ ಬಳಿ)ಗೆ ಕೆಳಗಿನವು ಬಂದು ಸೇರುತ್ತವೆಯೋ ಹಾಗಯೇ ಪ್ರಜೆಗಳು ಏನೇನು ಒಳ್ಳೆಯದನ್ನು ಮಾಡುವರೋ ಅದೆಲ್ಲವೂ ಅವನು ಯಾವದನ್ನರಿತಿರುವನೋ ಅದನ್ನರಿತಿರುವವನ ಬಳಿಗೆ ಬಂದು ಸೇರುವದು. ಅವನನ್ನೇ ನಾನು ಹೀಗೆಂದು ಹೇಳಿರುವದು.

## ರೈಕ್ವನ ಮಹಿಮೆ

(ಭಾಷ್ಯ)

೨೯೧. ಯಥಾ ಲೋಕೇ ಕೃತಾಯಃ ಕೃತೋ ನಾಮಾಯೋ[3] ದ್ಯೂತ ಸಮಯೇ ಪ್ರಸಿದ್ಧಶ್ಚತುರಙ್ಕಃ । ಸ ಯದಾ ಜಯತಿ ದ್ಯೂತೇ ಪ್ರವೃತ್ತಾನಾಮ್ ತಸ್ಮೈ ವಿಜಿತಾಯ ತದರ್ಥಮ್ ಇತರೇ ತ್ರಿದ್ವ್ಯೇಕಾಙ್ಕಾ ಅಧರೇಯಾಃ ತ್ರೇತಾ ದ್ವಾಪರಕಲಿನಾಮಾನಃ ಸಂಯನ್ತಿ ಸಂಗಚ್ಛನ್ತೇ ಅನ್ತರ್ಭವನ್ತಿ । ಚತುರಙ್ಕೇ ಕೃತಾಯೇ ತ್ರಿದ್ವ್ಯೇಕಾಙ್ಕಾನಾಂ ವಿದ್ಯಮಾನತ್ವಾತ್ತದನ್ತರ್ಭವನ್ತಿ ಇತ್ಯರ್ಥಃ। ಯಥಾ ಅಯಂ ದೃಷ್ಟಾನ್ತಃ ಏವಮ್ ಏನಂ ರೈಕ್ವಂ ಕೃತಾಯಸ್ಥಾನೀಯಂ

---

1. ಈ ವಾಕ್ಯವು ಮುಂದಿನ ಕಂಡಿಕೆಗೆ ಅವತರಣಿಕೆ.

2. 'ಸಮೇತಿ' ಎಂದು ಕಂಡಿಕೆಯಲ್ಲಿಯೂ ಭಾಷ್ಯದಲ್ಲಿಯೂ ಪಾಠಾಂತರವಿದೆ.

3. ಮೂಲದಲ್ಲಿ ಆಯ ಎಂಬ ಶಬ್ದವೇ ಇದೆ ಎಂದು ಮುಂದೆ 'ತ್ರೇತಾದ್ಯಾಯಸ್ಥಾನೀಯಮ್' ಎಂದಿರುವದರಿಂದ ಊಹಿಸಬಹುದಾಗಿದೆ ; ಆದರೆ ಅಲ್ಲಿಯೂ ವಾ' ಪಾಠದಲ್ಲಿ ತ್ರೇತಾದ್ಯಯ ಎಂಬ ಪಾಠಾಂತರವಿದೆ. ಟೀಕೆಯಲ್ಲೇನೊ ಅಯ ಎಂದೇ ಇದೆ.

ತ್ರೇತಾದ್ಯಯಸ್ಥಾನೀಯಂ ಸರ್ವಂ ತದಭಿಸಮೈತಿ ಅನ್ತರ್ಭವತಿ ರೈಕ್ವೇ । ಕಿಂ ತತ್ ಯತ್ಕಿಂಚ ಲೋಕೇ ಸರ್ವಾಃ ಪ್ರಜಾಃ ಸಾಧು ಶೋಭನಂ ಧರ್ಮಜಾತಂ ಕುರ್ವನ್ತಿ ತತ್ ಸರ್ವಂ ರೈಕ್ವಸ್ಯ ಧರ್ಮೇ ಅನ್ತರ್ಭವತಿ। ತಸ್ಯ ಚ ಫಲೇ ಸರ್ವಪ್ರಾಣಿಧರ್ಮಫಲಮ್ ಅನ್ತರ್ಭವತಿ ಇತ್ಯರ್ಥಃ। ತಥಾ ಅನ್ಯೋಽಪಿ ಕಶ್ಚಿತ್ ಯಸ್ತತ್ ವೇದ್ಯಂ ವೇದ । ಕಿಂ ತತ್ ? ಯತ್ ವೇದ್ಯಂ ಸ ರೈಕ್ವಃ ವೇದ। ತದ್ವೇದ್ಯಮ್ ಅನ್ಯೋಽಪಿ ಯೋ ವೇದ ತಮಪಿ ಸರ್ವಪ್ರಾಣಿಧರ್ಮಜಾತಂ ತತ್ಫಲಂ ಚ ರೈಕ್ವಮಿವ ಅಭಿಸಮೈತಿ ಇತ್ಯನುವರ್ತತೇ । ಸ ಏವಂಭೂತಃ ಅರೈಕ್ವೋಽಪಿ ಮಯಾ ವಿದ್ವಾನ್ ಏತದುಕ್ತಃ ಏವಮುಕ್ತಃ। ರೈಕ್ವವತ್ ಸ ಏವ ಕೃತಾಯ ಸ್ಥಾನೀಯೋ ಭವತಿ ಇತ್ಯಭಿಪ್ರಾಯಃ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ಕೃತಾಯವು ಕೃತವೆಂಬ ಗರವು, ನಾಲ್ಕು ಅಂಕಗಳುಳ್ಳದ್ದೆಂದು ದ್ಯೂತಸಮಯದಲ್ಲಿ ಪ್ರಸಿದ್ಧವಷ್ಟೆ, ದ್ಯೂತದಲ್ಲಿ ಪ್ರವೃತ್ತರಾದವರಿಗೆ ಅದು -ಯಾವಾಗ ಗೆಲ್ಲುತ್ತದೆಯೋ (ಆಗ) ಆ ಗೆದ್ದ (ಗರಕ್ಕೆ) ಅದಕ್ಕಾಗಿ ಉಳಿದ ಮೂರು, ಎರಡು, ಒಂದು- ಅಂಕಗಳುಳ್ಳ ತ್ರೇತ, ದ್ವಾಪರ, ಕಲಿ- ಎಂಬ ಹೆಸರಿನ ಕೆಳಗಿನ (ಗರ)ಗಳು ಬಂದುಸೇರುತ್ತವೆಯೋ, ಸೇರಿಕೊಳ್ಳುತ್ತವೆಯೋ, (ಅದರೊಳಗೆ) ಅಡಕವಾಗಿಬಿಡುವವೋ, ನಾಲ್ಕು ಅಂಕದ ಕೃತಾಯದಲ್ಲಿ ಮೂರು, ಎರಡು, ಒಂದು- ಎಂಬ ಅಂಕಗಳೂ ಇರುವದರಿಂದ ಅವರೊಳಗೆ ಅಡಕವಾಗಿಬಿಡುವವೋ ಎಂದರ್ಥ.[1] ಈ ದೃಷ್ಟಾಂತವು ಹೇಗೋ, ಹಾಗೆಯೇ ಕೃತಾಯದಂತಿರುವ ಈ ರೈಕ್ವನನ್ನು ತ್ರೇತೆಯೇ ಮುಂತಾದ ಗರಗಳಂತಿರುವ ಅದೆಲ್ಲವೂ ಬಂದುಸೇರುತ್ತದೆ, ರೈಕ್ವನಲ್ಲಿ ಅಡಕವಾಗಿಬಿಡುತ್ತದೆ ಅದು ಎಂದರೆ ಯಾವದು ? ಎಂದರೆ ಲೋಕದಲ್ಲಿ ಸರ್ವಪ್ರಜೆಗಳೂ ಒಳ್ಳೆಯದನ್ನು ಉತ್ತಮವಾದ ಪುಣ್ಯಜಾತವನ್ನು ಮಾಡುತ್ತಾರೋ ಅದೆಲ್ಲವೂ ರೈಕ್ವನ ಧರ್ಮದಲ್ಲಿ ಅಡಕವಾಗುತ್ತದೆ. ಆ (ಧರ್ಮದ) ಫಲವಲ್ಲಿ ಸರ್ವಪ್ರಾಣಿಗಳ ಧರ್ಮಫಲವೂ ಅಡಕವಾಗಿರುತ್ತದೆ ಎಂದರ್ಥ.[2]

ಇದರಂತೆ ಮತ್ತೊಬ್ಬನೂ ಯಾವನೇ ಆಗಲಿ, ಆ ವೇದ್ಯವನ್ನು ಅರಿತುಕೊಂಡನಾದರೆ—ಅದನ್ನು ಎಂದರೆ ಯಾವದು ? ಯಾವದನ್ನು ಆ ರೈಕ್ವನು ಅರಿತುಕೊಂಡಿರುವನೋ (ಅದನ್ನು ಅರಿತುಕೊಂಡನಾದರೆ)—ಆ ವೇದ್ಯವನ್ನು ಮತ್ತೊಬ್ಬನೂ ಯಾವನು ಅರಿತುಕೊಂಡಿರುವನೋ ಅವನನ್ನು ಸರ್ವಪ್ರಾಣಿಗಳ

1. ಕೃತಾಯವನ್ನು ಗೆದ್ದವನಿಗೆ ೪+೩+೨+೧= ೧೦ ಗರಬಿದ್ದಂತೆ ಎಂದು ಆಟದಲ್ಲಿ ಭಾವಿಸುತ್ತಾರೆ.

2. ಸರ್ವಕರ್ಮಗಳ ಫಲವನ್ನೂ ಅವನು ಅನುಭವಿಸಿದಂತೆ ಎಂದರ್ಥ.

ಧರ್ಮಜಾತವೂ ಅದರ ಫಲವೂ ರೈಕ್ವನನ್ನು ಹೇಗೋ ಹಾಗೆಯೇ 'ಬಂದು ಸೇರುತ್ತದೆ' ಎಂದು ಅನುವೃತ್ತಿಯಾಗುತ್ತದೆ. ಹೀಗಿರುವ ಜ್ಞಾನಿಯು ರೈಕ್ವನಲ್ಲದಿದ್ದರೂ ಅವನನ್ನು (ಏತದುಕ್ತಃ= ಏವಮುಕ್ತಃ) ನಾನು ಹೀಗೆಂದಿರುತ್ತೇನೆ, ರೈಕ್ವನಂತೆ ಅವನೇ ಕೃತಾಯದಂತಿರುವನು ಎಂದರ್ಥ.[1]

(ಉಪನಿಷತ್ತು)

**ತದು ಹ ಜಾನಶ್ರುತಿಃ ಪೌತ್ರಾಯಣ ಉಪಶುಶ್ರಾವ ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚಾಙ್ಗಾರೇ ಹ ಸಯುಗ್ವಾನಮಿವ ರೈಕ್ವಮಾತ್ಥೇತಿ ಯೋ ನು ಕಥಗ್ಂ ಸಯುಗ್ವಾ ರೈಕ್ವ ಇತಿ ॥೫॥**

**ಯಥಾ ಕೃತಾಯ ವಿಜಿತಾಯಾಧರೇಯಾಃ ಸಂಯನ್ತ್ಯೇವಮೇನಗ್ಂ ಸರ್ವಂ ತದಭಿಸಮೈತಿ ಯತ್ಕಿಂಚ ಪ್ರಜಾಃ ಸಾಧು ಕುರ್ವನ್ತಿ ಯಸ್ತದ್ವೇದ ಯತ್ಸ ವೇದ ಸ ಮಯೈತದುಕ್ತ ಇತಿ ॥**

೫. ಅದನ್ನು ಜಾನಶ್ರುತಿಯು, ಕೇಳಿದನು. ಅವನು (ಹಾಸಿಗೆಯನ್ನು) ಬಿಡುತ್ತಲೂ ಕ್ಷತ್ತೃವನ್ನು "ಎಲಾ, ಏನಯ್ಯ, ಸಯುಗ್ವ ರೈಕ್ವನನ್ನು ಕುರಿತು (ಹೀಗೆಂದು) ಹೇಳು!" ಎಂದನು. "ಸಯುಗ್ವ ರೈಕ್ವನು ಎಂದೆಯಲ್ಲ, ಅವನು ಹೇಗೆ ಇರುವನೊ!" ಎಂದು (ಕ್ಷತ್ತೃವು ಕೇಳಿದನು).

೬. "ಹೇಗೆ ಕೃತವನ್ನು ಗೆದ್ದುಕೊಂಡರೆ (ಅವನ ಬಳಿಗೆ) ಕೆಳಗಿನವು ಬಂದುಸೇರುವವೋ ಹಾಗೆಯೇ ಪ್ರಜೆಗಳು ಏನೇನು ಒಳ್ಳೆಯದನ್ನು ಮಾಡುವರೋ ಅದೆಲ್ಲವೂ ಅವನು ಯಾವದನ್ನರಿತಿರುವನೋ ಅವನ ಬಳಿಗೆ ಬಂದುಸೇರುವದು. ಅವನನ್ನೇ ನಾನು ಹೀಗೆ ಹೇಳಿರುವದು" ಎಂದನು.

## ಜಾನಶ್ರುತಿಯು ರೈಕ್ವನನ್ನು ಹುಡುಕಿಸಿದ್ದು

(ಭಾಷ್ಯ)

೫–೬. ತದು ಹ ತದೇತತ್ ಈದೃಶಂ ಹಂಸವಾಕ್ಯಮ್ ಆತ್ಮನಃ ಕುತ್ಸಾರೂಪಮ್ ಅನ್ಯಸ್ಯ ವಿದುಷೋ ರೈಕ್ವಾದೇಃ ಪ್ರಶಂಸಾರೂಪಮ್ ಉಪಶುಶ್ರಾವ

1. ಅವನಿಗೂ ಸರ್ವಕರ್ಮಫಲಗಳನ್ನು ಒಳಗೊಂಡ ಫಲವಾಗುತ್ತದೆ ಎಂದರ್ಥ.

ಶ್ರುತವಾನ್ ಹರ್ಮ್ಯತಲಸ್ಥೋ ರಾಜಾ ಜಾನಶ್ರುತಿಃ ಪೌತ್ರಾಯಣಃ। ತಚ್ಚ ಹಂಸವಾಕ್ಯಂ ಸ್ಮರನ್ನೇವ ಪೌನಃಪುನ್ಯೇನ ರಾತ್ರಿಶೇಷಮ್ ಅತಿವಾಹಯಾಮಾಸ। ತತಃ ಸ ವನ್ದಿಭಿಃ ರಾಜಾ ಸ್ತುತಿಯುಕ್ತಾಭಿರ್ವಾಗ್ಭಿಃ ಪ್ರತಿಬೋಧ್ಯಮಾನಃ ಉವಾಚ ಕ್ಷತ್ತಾರಂ ಸಂಜಿಹಾನ ಏವ ಶಯನಂ ನಿದ್ರಾಂ ವಾ ಪರಿತ್ಯಜನ್ನೇವ। ಹೇ ಅಙ್ಗ ವತ್ಸ ಅರೇ ಹ ಸಯುಗ್ವಾನಮಿವ ರೈಕ್ವಮ್ ಆತ್ಥ ಕಿಂ ಮಾಮ್? ಸ ಏವ ಸ್ತುತ್ಯರ್ಹೋ ನಾಹಮ್ ಇತ್ಯಭಿಪ್ರಾಯಃ। ಅಥವಾ ಸಯುಗ್ವಾನಂ ರೈಕ್ವಮ್ ಆತ್ಥ ಗತ್ವಾ ಮಮ ತದ್ದಿದೃಕ್ಷಾಮ್। ತದಾ ಇವ ಶಬ್ದೋಽವಧಾರಣಾರ್ಥೋಽನರ್ಥಕೋ ವಾ ವಾಚ್ಯಃ। ಸ ಚ ಕ್ಷತ್ತಾ ಪ್ರತ್ಯುವಾಚ ರೈಕ್ವಾನಯನಕಾಮೋ ರಾಜ್ಞೋಽಭಿಪ್ರಾಯಜ್ಞಃ। ಯೋ ನು ಕಥಂ ಸಯುಗ್ವಾ ರೈಕ್ವ ಇತಿ? ರಾಜ್ಞಾ ಏವಂ ಚೋಕ್ತಃ ಆನೇತುಂ ತಚ್ಚಿಹ್ನಂ ಜ್ಞಾತುಮಿಚ್ಛನ್ ಯೋ ನು ಕಥಂ ಸಯುಗ್ವಾ ರೈಕ್ವ ಇತ್ಯವೋಚತ್। ಸ ಚ ಭಲ್ಲಾಕ್ಷವಚನಮೇವ ಅವೋಚತ್ ತಸ್ಯ ಸ್ಮರನ್[1]॥

(ಭಾಷ್ಯಾರ್ಥ)

ಅದನ್ನು, ತನ್ನ ನಿಂದೆಯ ರೂಪವಾಗಿಯೂ ರೈಕ್ವನೇ ಮೊದಲಾದ ಜ್ಞಾನಿಯಾದ ಮತ್ತೊಬ್ಬನ ಸ್ತುತಿಯ ರೂಪವಾಗಿಯೂ (ಇದ್ದ) ಇಂಥ ಹಂಸವಾಕ್ಯವನ್ನು ಉಪ್ಪರಿಗೆಯ ಮೇಲುಗಡೆ ಇದ್ದ ಜಾನಶ್ರುತಿಪೌತ್ರಾಯಣರಾಜನು ಕೇಳಿದನು. ಆ ಹಂಸವಾಕ್ಯವನ್ನು ಮತ್ತೆಮತ್ತೆ ಸ್ಮರಿಸುತ್ತಲೇ ಉಳಿದ ರಾತ್ರಿಯನ್ನು ಕಳೆದನು. ಆ ಬಳಿಕ ವಂದಿಗಳು ಸ್ತುತಿಯುಕ್ತವಾದ ವಾಕ್ಕುಗಳಿಂದ ಎಚ್ಚರಿಸಲು ರಾಜನು ಕ್ಷತ್ತೃವನ್ನು[2] ಕುರಿತು ಬಿಡುತ್ತಲೆ, ಹಾಸಿಗೆಯನ್ನು ಅಥವಾ ನಿದ್ರೆಯನ್ನು ಬಿಡುತ್ತಲೆ, ಇಂತೆಂದನು. ಎಲಾ, ಏನಯ್ಯ, ಬಂಡಿಯ ರೈಕ್ವನನ್ನು ಹೊಗಳುವಂತೆ ನನ್ನನ್ನೇಕೆ ಹೊಗಳುತ್ತಿರುವೆ? ಅವನೇ ಸ್ತುತ್ಯರ್ಹನೇ ಹೊರತು ನಾನಲ್ಲ ಎಂದು ಅಭಿಪ್ರಾಯ. ಅಥವಾ ರೈಕ್ವನಲ್ಲಿಗೆ ಹೋಗಿ ನಾನು ಅವನನ್ನು ಕಾಣಲಿಚ್ಛಿಸುವೆನೆಂದು ಹೇಳು (ಎಂದು ಈ ವಾಕ್ಯಕ್ಕೆ ಅರ್ಥ). ಆಗ ಇವಶಬ್ದವು ಅವಧಾರಣಾರ್ಥಕವೆಂದೋ ಅರ್ಥರಹಿತವೆಂದೋ ಹೇಳಬೇಕಾಗುವದು.

ಆಗ ಕ್ಷತ್ತೃವು ರಾಜನ ಅಭಿಪ್ರಾಯವನ್ನು ತಿಳಿದುಕೊಂಡವನಾಗಿ ರೈಕ್ವನನ್ನು ಕರೆತರಬೇಕೆಂಬ ಇಚ್ಛೆಯುಳ್ಳವನಾಗಿ 'ಆ ಬಂಡಿಯ ರೈಕ್ವನೆಂಬುವನು ಹೇಗಿರುವನೊ!' ಎಂದು ಮತ್ತೆ ಕೇಳಿದನು, ರಾಜನು ಹೀಗೆನ್ನಲು (ಅವನನ್ನು) ಕರೆದುಕೊಂಡುಬರುವದಕ್ಕೆ ಅವನ ಗುರುತನ್ನು (ತಿಳಿಯ)ಲೆಳಸಿದವನಾಗಿ ಆ

1. ಇದು ವಾ॥ ಪಾಠವಂತೆ ಇಲ್ಲಿದೆ; ಆ॥ ಪಾಠವಲ್ಲಿ ಮುಂದಿನ ಕಂಡಿಕೆಯ ಮೊದಲಿದೆ.

2. ಕ್ಷತ್ರಿಯನಿಗೆ ಶೂದ್ರಳಲ್ಲಿ ಜನಿಸಿದವನು ಕ್ಷತ್ತೃವು, ಅವನನ್ನು ರಾಜರು ಸಾರಥ್ಯ ದ್ವಾರಪಾಲಕತ್ವ- ಮುಂತಾದ ಕೆಲಸಗಳಿಗೆ ನಿಯಮಿಸಿಕೊಳ್ಳುತ್ತಿದ್ದರು.

ಬಂಡಿಯ ರೈಕ್ವನಲ್ಲಿರುವನಲ್ಲ, ಅವನು ಹೇಗಿರುವನೊ, ಎಂದನು. (ಆ ರಾಜನು) ಭಲ್ಲಾಕ್ಷ(ಹಂಸದ) ಮಾತನ್ನೇ ಸ್ಮರಣೆಗೆ ತಂದು[1] ಕೊಂಡು ಅದನ್ನೇ ಹೇಳಿದನು.

(ಉಪನಿಷತ್ತು)

**ಸ ಹ ಕ್ಷತ್ತಾನ್ವಿಷ್ಯ ನಾವಿದಮಿತಿ ಪ್ರತ್ಯೇಯಾಯ ತಗ್ಂ ಹೋವಾಚ ಯತ್ರಾರೇ ಬ್ರಾಹ್ಮಣಸ್ಯಾನ್ವೇಷಣಾ ತದೇನ ಮರ್ಚ್ಛೇತಿ ॥ ೭ ॥**

೭. ಆ ಕ್ಷತ್ತೃ ಹುಡುಕಿ 'ತಿಳಿಯಲಿಲ್ಲ' ಎಂದು ಹಿಂತಿರುಗಿದನು. ಅವನನ್ನು (ರಾಜನು) "ಎಲಾ, ಎಲ್ಲಿ ಬ್ರಾಹ್ಮಣನನ್ನು ಹುಡುಕಬೇಕೋ ಅಲ್ಲಿ ಇವನ ಬಳಿಗೆ ಹೋಗಿ (ನೋಡು) !"

(ಭಾಷ್ಯ)

೨೯೩. ಸ ಹ ಕ್ಷತ್ತಾ ನಗರಂ ಗ್ರಾಮಂ ಚ[2] ಗತ್ವಾ ಅನ್ವಿಷ್ಯ ರೈಕ್ವಂ ನಾವಿದಂ ನ ವ್ಯಜ್ಞಾಸಿಷಮ್ ಇತಿ ಪ್ರತ್ಯೇಯಾಯ ಪ್ರತ್ಯಾಗತವಾನ್ । ತಂ ಹೋವಾಚ ಕ್ಷತ್ತಾರಮ್ । ಅರೇ ಯತ್ರ ಬ್ರಾಹ್ಮಣಸ್ಯ ಬ್ರಹ್ಮವಿದಃ ಏಕಾನ್ತೇ ಅರಣ್ಯನದೀಪುಲಿನಾದೌ[3] ವಿವಿಕ್ತದೇಶೇ[4] ಅನ್ವೇಷಣಾ ಅನುಮಾರ್ಗಣಂ ಭವತಿ ತತ್ ತತ್ರ ಏನಂ ರೈಕ್ವಮ್ ಅರ್ಚ್ಛ ಋಚ್ಛ ಗಚ್ಛ । ತತ್ರ ಮಾರ್ಗಣಂ ಕುರು ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಕ್ಷತ್ತೃವು[5] ನಗರಕ್ಕೂ ಗ್ರಾಮಕ್ಕೂ ಹೋಗಿ[6] ರೈಕ್ವನನ್ನು ಹುಡುಕಿ ನನಗೆ ತಿಳಿಯಲಿಲ್ಲ, ನನಗೆ ಗೊತ್ತಾಗಲಿಲ್ಲ ಎಂದು ಹಿಂತಿರುಗಿದನು, ಮರಳಿಬಂದನು. ಆ ಕ್ಷತ್ತೃವನ್ನು (ಕುರಿತು ಅರಸ) ನಿಂತೆಂದನು: ಎಲಾ, ಎಲ್ಲಿ ಬ್ರಾಹ್ಮಣನು ಬ್ರಾಹ್ಮಣನನ್ನು ಬ್ರಹ್ಮಜ್ಞಾನಿಯನ್ನು ಕಾಡು, ನದಿಯ ಮಳಲೊಟ್ಟಿಲು ಮುಂತಾದ (ಯಾವ) ಏಕಾಂತಸ್ಥಲದಲ್ಲಿ ಅನ್ವೇಷಣವಾಗುವದೋ ಹುಡುಕುವದಾದೀತೋ (ತತ್=ತತ್ರ)

---

1. ಇದು ಮುಂದಿನ ಕಂಡಿಕೆಗೆ ಸೇರಿದ್ದರೆ ಭಲ್ಲಾಕ್ಷನ ಮಾತನ್ನೇ ಹೇಳಿದನು–ಎಂದಿಷ್ಟೇ ಕನ್ನಡಿಸಿಕೊಳ್ಳಬೇಕು.

2. 'ವಾ' ಎಂಬುದಕ್ಕಿಂತ ಈ ಪಾಠವು ಮೇಲು.

3. 'ಅರಣ್ಯೇ ನದೀ' ಎಂಬುದಕ್ಕಿಂತ ಈ ಪಾಠವೇ ಮೇಲು.

4. 'ವಿವಿಕ್ತೇ ದೇಶೇ' ಎಂಬುದಕ್ಕಿಂತ ಈ ಸಮಾಸಪಾಠವೇ ಮೇಲು.

5. ಇದರ ಹಿಂದೆ 'ತಸ್ಯ ಸ್ಮರನ್' ಎಂದಿರುವ ಆ॥ ಪಾಠದಲ್ಲಿ (ಅವನ) ಆ (ಮಾತನ್ನೇ) ಸ್ಮರಿಸುತ್ತಾ –ಎಂದು ಕನ್ನಡಿಸಿಕೊಳ್ಳಬೇಕು. 6. ಊರೂರನ್ನು ಹುಡುಕಿ ಎಂದರ್ಥ.

ಅಲ್ಲಿ ಈ ರೈಕ್ವನನ್ನು (ಅರ್ಚ್ಛ=ಋಚ್ಛ) ಪಡೆದುಕೊ, ಹೋಗಿಸೇರು, ಅಲ್ಲಿ ಅವನನ್ನು ಹುಡುಕು ಎಂದರ್ಥ.

(ಉಪನಿಷತ್ತು)

**ಸೋಽಧಸ್ತಾಚ್ಛಕಟಸ್ಯ ಪಾಮಾನಂ ಕಷಮಾಣಮುಪೋಪವಿವೇಶ ತಗ್ಂ ಹಾಭ್ಯುವಾದ ತ್ವಂ ನು ಭಗವಃ ಸಯುಗ್ವಾ ರೈಕ್ವ ಇತ್ಯ ಹಗ್ಂ ಹ್ಯರಾಽ ಇತಿ ಹ ಪ್ರತಿಜಜ್ಞೇ ಸ ಹ ಕ್ಷತ್ತಾವಿದಮಿತಿ ಪ್ರತ್ಯೇಯಾಯ ॥ ೮ ॥**

೮. ಅವನು ಬಂಡಿಯ ಕೆಳಗೆ ಕಜ್ಜಿಯನ್ನು ತುರಿಸಿಕೊಳ್ಳುತ್ತಿರುವ (ಅವನ) ಬಳಿಯಲ್ಲಿ ಕುಳಿತುಕೊಂಡನು. ಅವನನ್ನು 'ಪೂಜ್ಯರೆ, ಸಯುಗ್ವರೈಕ್ವನೆಂದರೆ ತಾವೇಯೊ ?' ಎಂದು ಕೇಳಿದನು. 'ನಾನೇ ಕಾಣೋ !' ಎಂದು (ಅವನು) ಹೇಳಿದನು. ಆ ಕ್ಷತ್ತೃವು 'ತಿಳಿಯಿತು' ಎಂದು ಹಿಂತಿರುಗಿದನು.

## ಕ್ಷತ್ತೃವು ರೈಕ್ವನನ್ನು ಕಂಡುಬಂದದ್ದು

(ಭಾಷ್ಯ)

೨೯೪. ಇತ್ಯುಕ್ತಃ ಕ್ಷತ್ತಾ ಅನ್ವಿಷ್ಯ ತಂ ವಿಜನೇ ದೇಶೇ ಅಧಸ್ತಾತ್ ಶಕಟಸ್ಯ ಗನ್ತ್ರ್ಯಾಃ ಪಾಮಾನಂ ಖರ್ಜೂಂ ಕಷಮಾಣಂ ಕಣ್ಡೂಯಮಾನಂ ದೃಷ್ಟ್ವಾ ಅಯಂ ನೂನಂ ಸಯುಗ್ವಾ ರೈಕ್ವ ಇತಿ ಉಪ ಸಮೀಪೇ ಉಪವಿವೇಶ ವಿನಯೇನ ಉಪವಿಷ್ಟವಾನ್ । ತಂ ಚ ರೈಕ್ವಂ ಹ ಅಭ್ಯುವಾದ ಉಕ್ತವಾನ್ । ತ್ವಮಸಿ ಹೇ ಭಗವಃ ಭಗವನ್ ಸಯುಗ್ವಾ ರೈಕ್ವ ಇತಿ? ಏವಂ ಪೃಷ್ಟಃ ಅಹಮಸ್ಮಿ ಹಿ ಅರಾಽ ಅರೇ ಇತಿ ಹ ಅನಾದರ ಏವ ಪ್ರತಿಜಜ್ಞೇ ಅಭ್ಯುಪಗತವಾನ್ । ಸ ತಂ ವಿಜ್ಞಾಯ ಅವಿದಂ ವಿಜ್ಞಾತವಾನ್ ಅಸ್ಮಿ ಇತಿ ಪ್ರತ್ಯೇಯಾಯ ಪ್ರತ್ಯಾಗತಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆನ್ನಲು (ಆ) ಕ್ಷತ್ತೃವು ವಿಜನವಾದ ಸ್ಥಳದಲ್ಲಿ ಅವನನ್ನು ಹುಡುಕಿ ಬಂಡಿಯ ಗಾಡಿಯ ಕೆಳಗೆ (ಪಾಮಾನಂ=ಖರ್ಜೂಂ) ಕಜ್ಜಿಯನ್ನು ತುರಿಸಿಕೊಳ್ಳುತ್ತಾ ಕೆರೆದುಕೊಳ್ಳುತ್ತಾ ಇದ್ದ (ರೈಕ್ವನನ್ನು) ಕಂಡು ಇವನೇ (ಆ) ಸಯುಗ್ವರೈಕ್ವನಿರಬೇಕು ಎಂದು (ಉಪ) ಬಳಿಯಲ್ಲಿ ಕುಳಿತುಕೊಂಡನು. ವಿನಯದಿಂದ ಕೂತುಕೊಂಡನು ಮತ್ತು ಆ ರೈಕ್ವನನ್ನು (ಕುರಿತು) ಇಂತೆಂದನು : "ಎಲೈ ಪೂಜ್ಯನೆ,

ನೀನೇಯೊ, ಸಯುಗ್ವರೈಕ್ವನು ?" "ನಾನೇ ಕಾಣೋ !" ಎಂದು- ಅರೇ ಎಂದು ಅನಾದರದಿಂದಲೇ ಹೇಳಿದನು, ಒಪ್ಪಿಕೊಂಡನು. ಅವನು ಅವನನ್ನು ಅರಿತುಕೊಂಡು 'ತಿಳಿದುಕೊಂಡೆನು, ಗೊತ್ತಾಯಿತು' ಎಂದು ಹಿಂತಿರುಗಿದನು, ಮರಳಿ ಬಂದನು ಎಂದರ್ಥ.

---

# ನಾಲ್ಕನೆಯ ಅಧ್ಯಾಯ-ಎರಡನೆಯ ಖಂಡ

( ಸಂವರ್ಗವಿದ್ಯೆ )

## ಜಾನಶ್ರುತಿಯು ರೈಕ್ವನ ಶಿಷ್ಯನಾದದ್ದು

(ಉಪನಿಷತ್ತು)

**ತದು ಹ ಜಾನಶ್ರುತಿಃ ಪೌತ್ರಾಯಣಃ ಷಟ್ಶತಾನಿ ಗವಾಂ ನಿಷ್ಕಮ ಶ್ವತರೀರಥಂ ತದಾದಾಯ ಪ್ರತಿಚಕ್ರಮೇ ತಗ್ಂ ಹಾಭ್ಯುವಾದ ||**

೧. ಆಗಲೇ ಜಾನಶ್ರುತಿ ಪೌತ್ರಾಯಣನು ಆರುನೂರು ಗೋಗಳು, ನಿಷ್ಕ, ಅಶ್ವತರೀರಥ- ಇವನ್ನು ತೆಗೆದುಕೊಂಡು ಹೊರಟನು. ಅವನನು ಕುರಿತು ಇಂತೆಂದನು.

### ಜಾನಶ್ರುತಿ ರೈಕ್ವನಲ್ಲಿಗೆ ಹೋದದ್ದು

(ಭಾಷ್ಯ)

ಶಾ. ತತ್ ತತ್ರ ಋಷೇಃ ಗಾರ್ಹಸ್ಥ್ಯಂ ಪ್ರತಿ ಅಭಿಪ್ರಾಯಂ ಬುದ್ಧ್ವಾ ಧನಾರ್ಥಿತಾಂ ಚ ಉ ಹ ಏವ ಜಾನಶ್ರುತಿಃ ಪೌತ್ರಾಯಣಃ ಷಟ್ಶತಾನಿ ಗವಾಂ ನಿಷ್ಕಂ ಕಣ್ಠಹಾರಮ್ ಅಶ್ವತರೀರಥಮ್ ಅಶ್ವತರೀಭ್ಯಾಂ ಯುಕ್ತಂ ರಥಂ ತತ್ ಆದಾಯ ಧನಂ ಗೃಹೀತ್ವಾ ಪ್ರತಿಚಕ್ರಮೇ ರೈಕ್ವಂ ಪ್ರತಿ ಗತವಾನ್ । ತಂ ಚ ಗತ್ವಾ ಅಭ್ಯುವಾದ ಹ ಅಭ್ಯುಕ್ತವಾನ್ ॥

(ಭಾಷ್ಯಾರ್ಥ)

(ತತ್=ತತ್ರ) ಆಗ,[1] ಋಷಿಗೆ ಗಾರ್ಹಸ್ಥ್ಯದಲ್ಲಿ ಅಭಿಪ್ರಾಯವಿದೆ ಎಂಬುದನ್ನು ಧನವು ಬೇಕೆಂಬುದನ್ನು ತಿಳಿದುಕೊಂಡು- ಉ ಹ ಎಂದರೆ ಏ (ಎಂದರ್ಥ.

---

1. ಋಷಿ ಕ್ಷತ್ತೃವಚನವನ್ನು ಕೇಳಿದಾಗ ಎಂದರ್ಥ.

ಆದ್ದರಿಂದ ತದು ಹ ಎಂದರೆ ಆಗಲೇ) ಜಾನಶ್ರುತಿಪೌತ್ರಾಯಣನು ಆರುನೂರು ಗೋಗಳು, ನಿಷ್ಕ ಎಂದರೆ ಕಂಠೀಸರ, ಅಶ್ವತರೀರಥ ಎಂದರೆ ಹೇಸರಕತ್ತೆಗಳನ್ನು ಕಟ್ಟಿದ್ದ ರಥ– ಇಷ್ಟು ಧನವನ್ನು ತೆಗೆದುಕೊಂಡು ಹೊರಟು ರೈಕ್ವನ ಬಳಿಗೆ ಹೋದನು. ಅವನಲ್ಲಿಗೆ ಹೋಗಿ ಇಂತೆಂದನು.

(ಉಪನಿಷತ್ತು)

**ರೈಕ್ವೇಮಾನಿ ಷಟ್ಶತಾನಿ ಗವಾಮಯಂ ನಿಷ್ಕೋಽಯಮಶ್ವತರೀ ರಥೋಽನು ಮ ಏತಾಂ ಭಗವೋ ದೇವತಾಗ್ಂ ಶಾಧಿ ಯಾಂ ದೇವತಾಮುಪಾಸ್ಸ ಇತಿ ॥ ೨ ॥**

೨. ರೈಕ್ವನೆ, ಇವು ಆರುನೂರು ಗೋಗಳು, ಇದು ನಿಷ್ಕವು, ಇದು ಅಶ್ವತರೀರಥವು. ಭಗವಂತನೆ, ಯಾವ ದೇವತೆಯನ್ನು ನೀನು ಉಪಾಸನೆಮಾಡುತ್ತಿರುವೆಯೋ ಆ ದೇವತೆಯನ್ನು ನನಗೆ ತಿಳಿಸಿ ಕೊಡು.

## ಕಾಣಿಕೆಯನ್ನು ಒಪ್ಪಿಸಿ ಉಪದೇಶವನ್ನು ಕೇಳಿಕೊಂಡದ್ದು

(ಭಾಷ್ಯ)

೨೯೬. ಹೇ ರೈಕ್ವ ಗವಾಂ ಷಟ್ಶತಾನಿ ಇಮಾನಿ ತುಭ್ಯಂ ಮಯಾ ಆನೀತಾನಿ ಅಯಂ ನಿಷ್ಕಃ ಅಶ್ವತರೀರಥಶ್ಚಾಯಮ್, ಏತದ್ ಧನಮ್ ಆದತ್ಸ್ವ। ಭಗವಃ ಅನುಶಾಧಿ ಚ ಮೇ ಮಾಮ್ ಏತಾಮ್ ಯಾಂ ಚ ದೇವತಾಂ ತ್ವಮ್ ಉಪಾಸ್ಸೇ। ತದ್ದೇವತೋಪದೇಶೇನ ಮಾಮ್ ಅನುಶಾಧಿ ಇತ್ಯರ್ಥಃ ॥

(ಭಾಷ್ಯಾರ್ಥ)

ಎಲೆ ರೈಕ್ವನೆ, (ಇಗೊ) ಇವು ನಿನಗಾಗಿ ನಾನು ತಂದಿರುವ ಆರುನೂರು ಗೋಗಳು , ಇದು ನಿಷ್ಕವು, ಇದು ಹಾರವು, ಇದು ಹೇಸರುಕತ್ತೆಗಳ ರಥವು. ಈ ಧನವನ್ನು ತೆಗೆದುಕೊ! ಪೂಜ್ಯನೆ, ನನಗೆ ನೀನು ಯಾವ ದೇವತೆಯನ್ನು ಉಪಾಸನೆಯನ್ನು ಮಾಡುತ್ತಿರುವೆಯೋ ಅದನ್ನು ತಿಳಿಸಿಕೊಡು. ಆ ದೇವತೆಯನ್ನು ಉಪದೇಶಿಸಿ ಅನುಶಾಸನಮಾಡು ಎಂದರ್ಥ.

(ಉಪನಿಷತ್ತು)

**ತಮು ಹ ಪರಃ ಪ್ರತ್ಯುವಾಚಾಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತ್ವಿತಿ ತದು ಹ ಪುನರೇವ ಜಾನಶ್ರುತಿಃ ಪೌತ್ರಾ**

**ಯಣಃ ಸಹಸ್ರಂ ಗವಾಂ ನಿಷ್ಕಮಶ್ವತರೀರಥಂ ದುಹಿತರಂ ತದಾದಾಯ ಪ್ರತಿಚಕ್ರಮೇ ॥ ೩ ॥**

೩. ಅವನಿಗೆ (ಆ) ಮತ್ತೊಬ್ಬನು ಪ್ರತಿಯಾಗಿ ಇಂತೆಂದನು : "ಆಹ, ಎಲಾ ಶೂದ್ರ! ಗೋಗಳಿಂದೊಡಗೂಡಿದ ಹಾರೇತ್ವವು ನಿನಗೇ ಇರಲಿ!'' ಅದನ್ನು (ಅರಿತು) ಜಾನಶ್ರುತಿಪೌತ್ರಾಯಣನು ಮತ್ತು ಗೋಸಹಸ್ರವನ್ನೂ ನಿಷ್ಕವನ್ನೂ ಅಶ್ವತರೀರಥವನ್ನೂ ಮಗಳನ್ನೂ ತೆಗೆದುಕೊಂಡು (ಅಲ್ಲಿಗೆ) ಹೊರಟನು.

## ರೈಕ್ವನ ತಿರಸ್ಕಾರ, ರಾಜನು ಹೆಚ್ಚಿನ ಕಾಣಿಕೆಯನ್ನು ಒಪ್ಪಿಸಿದ್ದು

(ಭಾಷ್ಯ)

೨೯೭ ತಮ್ ಏವಮುಕ್ತವನ್ತಂ ರಾಜಾನಂ ಪ್ರತ್ಯುವಾಚ ಪರೋ ರೈಕ್ವಃ । ಅಹ ಇತ್ಯಯಂ ನಿಪಾತೋ ವಿನಿಗ್ರಹಾರ್ಥೀಯೋಽನ್ಯತ್ರ । ಇಹ ತು ಅನರ್ಥಕಃ । ಏವಶಬ್ದಸ್ಯ ಪೃಥಕ್ ಪ್ರಯೋಗಾತ್ । ಹಾರೇತ್ವಾ ಹಾರೇಣ ಯುಕ್ತಾ ಇತ್ವಾ ಗನ್ತ್ರೀ ಸೇಯಂ ಹಾರೇತ್ವಾ ಗೋಭಿಃ ಸಹ ತವೈವಾಸ್ತು ತವೈವ ತಿಷ್ಠತು । ನ ಮಮ ಅಪರ್ಯಾಪ್ತೇನ ಕರ್ಮಾರ್ಥಮ್ ಅನೇನ ಪ್ರಯೋಜನಮ್ ಇತ್ಯಭಿಪ್ರಾಯಃ । ಹೇ ಶೂದ್ರ ಇತಿ । ನನು ರಾಜಾಸೌ ಕ್ಷತ್ತೃಸಂಬನ್ಧಾತ್ । ಸ ಹ ಕ್ಷತ್ತಾರಮ್ ಉವಾಚ ಇತ್ಯುಕ್ತಮ್ । ವಿದ್ಯಾಗ್ರಹಣಾಯ ಚ ಬ್ರಾಹ್ಮಣ ಸಮೀಪೋಪಗಮಾತ್ । ಶೂದ್ರಸ್ಯ ಚ ಅನಧಿಕಾರಾತ್ । ಕಥಮಿದಮ್ ಅನನುರೂಪಂ ರೈಕ್ವೇಣ ಉಚ್ಯತೇ ಹೇ ಶೂದ್ರ ಇತಿ ? ತತ್ರಾಹುರಾಚಾರ್ಯಾಃ । ಹಂಸವಚನಶ್ರವಣಾತ್ ಶುಕ್ ಏನಮ್ ಆವಿವೇಶ । ತೇನಾಸೌ ಶುಚಾ ಶ್ರುತ್ವಾ ರೈಕ್ವಸ್ಯ ಮಹಿಮಾನಂ ವಾ ಆದ್ರವತೀತಿ ಋಷಿಃ ಆತ್ಮನಃ ಪರೋಕ್ಷಜ್ಞತಾಂ ದರ್ಶಯನ್ ಶೂದ್ರ ಇತ್ಯಾಹೇತಿ । ಶೂದ್ರವದ್ ವಾ ಧನೇನೈವ ಏನಂ ವಿದ್ಯಾಗ್ರಹಣಾಯ ಉಪಜಗಾಮ ನ ಚ ಶುಶ್ರೂಷಯಾ । ನ ತು ಜಾತ್ಯೈವ ಶೂದ್ರಃ ಇತಿ । ಅಪರೇ ಪುನರಾಹುಃ ಅಲ್ಪಂ ಧನಮ್ ಆಹೃತಮಿತಿ ರುಷೈವ ಏನಮ್ ಉಕ್ತವಾನ್ ಶೂದ್ರ ಇತಿ । ಲಿಙ್ಗಂ ಚ ಬಹ್ವಾಹರಣೇ ಉಪಾದಾನಂ ಧನಸ್ಯೇತಿ । ತದು ಹ ಋಷೇರ್ಮತಂ ಜ್ಞಾತ್ವಾ ಪುನರೇವ ಜಾನಶ್ರುತಿಃ ಪೌತ್ರಾಯಣೋ ಗವಾಂ ಸಹಸ್ರಮ್ ಅಧಿಕಂ (?)[1] ಜಾಯಾಂ ಚ ಋಷೇರಭಿಮತಾಂ ದುಹಿತರಮ್ ಆತ್ಮನಃ ತದಾದಾಯ ಪ್ರತಿಚಕ್ರಮೇ ಕ್ರಾನ್ತವಾನ್ ॥

---

1. ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಹೀಗೆ ಹೇಳಿದ ರಾಜನಿಗೆ (ಆ) ಮತ್ತೊಬ್ಬನಾದ ರೈಕ್ವನು ಪ್ರತಿಯಾಗಿ ಇಂತೆಂದನು. ಅಹ ಎಂಬ ನಿಪಾತಕ್ಕೆ ಮಿಕ್ಕಕಡೆಗಳಲ್ಲಿ ಅನಾದರವೆಂಬರ್ಥ(ವಿದೆ): ಆದರೆ ಇಲ್ಲಿ (ಅದಕ್ಕೆ ಯಾವ) ಅರ್ಥವೂ ಇಲ್ಲ. ಏಕೆಂದರೆ (ಇಲ್ಲಿ ತವೈವ ಎಂದು) ಏವಶಬ್ದವನ್ನು ಬೇರೆಯಾಗಿ ಪ್ರಯೋಗಿಸಿದೆ.[1] ಹಾರೇತ್ವಾ ಎಂದರೆ ಹಾರದೊಡನೆ ಕೂಡಿರುವ ಇತ್ವಾ (ಅಥವಾ) ಬಂಡಿ ಈ ಹಾರೇತ್ವವು ಗೋಗಳೊಡಗೂಡಿ ನಿನಗೇ ಇರಲಿ, ನಿನ್ನಲ್ಲಿಯೇ ಇದ್ದುಕೊಂಡಿರಲಿ! ಕರ್ಮಕ್ಕೆ ಸಾಲದೆ ಇರುವ ಇದರಿಂದ ನನಗೆ ಯಾವ ಪ್ರಯೋಜನವೂ ಇಲ್ಲ ಎಂದು ಅಭಿಪ್ರಾಯ. ಎಲೈ ಶೂದ್ರನೆ, (ಎಂದು ಸಂಬೋಧನೆ).

(ಆಕ್ಷೇಪ).- ಇವನು ರಾಜನಲ್ಲವೆ? ಏಕೆಂದರೆ (ಇವನಿಗೆ) ಕ್ಷತ್ತೃ ಸಂಬಂಧವಿದೆ. "ಅವನು ಕ್ಷತ್ತೃವನ್ನು ಕುರಿತು ಇಂತೆಂದನು" (೪-೧-೫)[2] ಎಂದಲ್ಲವೆ, ಹೇಳಿದೆ ವಿದ್ಯಾಗ್ರಹಣಕ್ಕಾಗಿ ಬ್ರಾಹ್ಮಣನ ಸಮೀಪಕ್ಕೆ ಹೋಗಿರುವದರಿಂದಲೂ, ಶೂದ್ರನಿಗೆ ಅಧಿಕಾರವಿಲ್ಲದ್ದರಿಂದಲೂ[3] (ಅವನು ಶೂದ್ರನಲ್ಲವೆಂದಾಗುತ್ತದೆ). ರೈಕ್ವನು 'ಎಲೆ ಶೂದ್ರ,' ಎಂದು ಅನನುಗುಣವಾಗಿ ಹೇಳಿರುವದು ಹೇಗೆ (ಸರಿ)?

(ಪರಿಹಾರ).- ಇದಕ್ಕೆ **ಆಚಾರ್ಯರು**[4] ಹೇಳಿರುವದೇನೆಂದರೆ, ಹಂಸವಚನವನ್ನು ಕೇಳಿದ್ದರಿಂದ ಇವನನ್ನು ಶೋಕವು ಆವರಿಸಿಕೊಂಡಿತು. ಆ ಶೋಕದಿಂದ (ಶುಚಾ) ರೈಕ್ವನ ಮಹಿಮೆಯನ್ನು ಕೇಳಿ ಹೋಗಿರುತ್ತಾನೆ (ದ್ರವತಿ), ಎಂದು ಋಷಿಯು ತನ್ನ ಪರೋಕ್ಷಜ್ಞತೆಯನ್ನು ತೋರಿಸುವದಕ್ಕಾಗಿ ಶೂದ್ರ ಎಂದನು ಅಥವಾ ಶೂದ್ರನಂತೆ ಇವನನ್ನು ಧನದಿಂದಲೇ ವಿದ್ಯಾಗ್ರಹಣಕ್ಕಾಗಿ ಬಳಿಸಾರಿದನೇ ಹೊರತು ಶುಶ್ರೂಷೆಯಿಂದಲ್ಲ. ಇಷ್ಟೇ ಹೊರತು ಜಾತಿಯಿಂದಲೇ (ಇವನು)

---

1. ನಿನಗೇ ಇರಲಿ, ನನಗೇನೂ ಬೇಡ- ಎಂದು ಏವಶಬ್ದದಿಂದಲೇ ವಿನಿಗ್ರಹವೆಂಬರ್ಥವನ್ನು ತಿಳಿಸಿರುವದರಿಂದ 'ಅಹ' ಎಂಬುದಕ್ಕೆ ಮತ್ತೆ ಆ ಅರ್ಥವನ್ನು ಕಲ್ಪಿಸಬೇಕಾಗಿಲ್ಲ. ಅಹ ಎಂಬುದಕ್ಕೆ ವಿನಿಗ್ರಹಾರ್ಥವೆಂಬುದಕ್ಕೆ ನಿರುಕ್ತ ೧-೫ನ್ನು ನೋಡಿ.

2. ಇದು ಶ್ರುತಿಯ ಅರ್ಥಮಾತ್ರ.

3. ಶೂದ್ರನು ಇಲ್ಲಿ ಪ್ರಕೃತನಾಗಿರುವದರಿಂದಲೂ ಎಂದು ಅರ್ಥವನ್ನು ಮಾಡಬಹುದು; ವಿದ್ಯೆಗೆಂದು ಬ್ರಾಹ್ಮಣನಲ್ಲಿಗೆ ಹೋಗುವವನು ಶೂದ್ರನಾಗಿರಲಾರನಾದ್ದರಿಂದಲೂ ಎಂಬುದು ಹಿಂದಿನ ವಿಶೇಷಣದಿಂದಲೇ ಸಿದ್ಧವಾಗುತ್ತದೆ. ಈಗ ನಾವು ಟೀಕೆಯಂತೆ ಕನ್ನಡಿಸಿರುತ್ತೇವೆ.

4. ಇವರೂ ದ್ರವಿಡಾಚಾರ್ಯರೇ ಇರಬಹುದೆ? ೩-೪ರಿಂದ ೧೧ನೆಯ ಖಂಡಗಳ ಭಾಷ್ಯ (ಛಾ. ಭಾ. ೨೨೧)ವನ್ನು ನೋಡಿ.

ಶೂದ್ರನೆಂದಲ್ಲ[1]. ಇನ್ನು ಕೆಲವರು ಹೇಳಿರುವದೇನೆಂದರೆ ಅಲ್ಪಧನವನ್ನು ತಂದ ನೆಂಬ ಸಿಟ್ಟನಿಂದಲೇ ಇವನನ್ನು ಶೂದ್ರನೆಂದನು, ಬಹಳ ಧನವನ್ನು ತರುತ್ತಲೂ ತೆಗೆದುಕೊಂಡಿದ್ದು (ಇದಕ್ಕೆ) ಜ್ಞಾಪಕವು ಎಂದು (ಅವರ ಮತ).[2]

ಆ ಋಷಿಯ ಅಭಿಪ್ರಾಯವನ್ನು ಅರಿತುಕೊಂಡು ಮತ್ತೆ ಜಾನಶ್ರುತಿ ಪೌತ್ರಾಯಣನು ಸಾವಿರ ಗೋಗಳನ್ನೂ ಹೆಚ್ಚಾಗಿ[3] ಋಷಿಗೆ ಒಪ್ಪಾದ ಹೆಂಡತಿ ಯಾಗಿ ತನ್ನ ಮಗಳನ್ನೂ ಕೊಡಲು ಹೊರಟನು, (ಅವನ ಬಳಿಗೆ) ಬಂದನು.

(ಉಪನಿಷತ್ತು)

**ತಗ್ಂ ಹಾಭ್ಯುವಾದ ರೈಕ್ವೇದಗ್ಂ ಸಹಸ್ರಂ ಗವಾಮಯಂ ನಿಷ್ಕೋಽಯಮಶ್ವತರೀರಥ ಇಯಂ ಜಾಯಾಯಂ ಗ್ರಾಮೋ ಯಸ್ಮಿನ್ನಾಸ್ಸೇಽನ್ವೇವ ಮಾ ಭಗವಃ ಶಾಧೀತಿ ॥ ೪ ॥**
**ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚಾಜಹಾರೇಮಾಃ ಶೂದ್ರಾನೇನೈವ ಮುಖೇನಾಲಾಪಯಿಷ್ಯಥಾ ಇತಿ ತೇ ಹೈತೇ ರೈಕ್ವಪರ್ಣಾ ನಾಮ ಮಹಾವೃಷೇಷು ಯತ್ರಾಸ್ಮಾ ಉವಾಸ ತಸ್ಮೈ[4] ಹೋವಾಚ ॥ ೫ ॥**

೪. ಅವನನ್ನು ಕುರಿತು ಇಂತೆಂದನು : 'ರೈಕ್ವನೆ, ಇಗೊ ಇದು ಗೋಸಹಸ್ರವು ; ಇದು ನಿಷ್ಕವು ; ಇದು ಅಶ್ವತರೀರಥವು ; ಇವಳು ಹೆಂಡತಿ , ಇದು ನೀನು ಇರುವದಕ್ಕೆ ಗ್ರಾಮವು ; ಭಗವಂತನೆ, ನನಗೆ ಅನುಶಾಸನವನ್ನೇ ಮಾಡು !'

೫. ಆಕೆಯನ್ನು ಮುಖವಾಗಿ ಗ್ರಹಿಸಿ (ರೈಕ್ವನಿಂತೆಂದನು : 'ಶೂದ್ರನೆ, ಇವುಗಳನ್ನು ತಂದಿರುವೆಯಲ್ಲ, ಈ ಮುಖದಿಂದಲೇ ಮಾತನಾಡಿಸುವೆ !' ಇವನು ವಾಸಮಾಡಿಕೊಂಡಿದ್ದನಲ್ಲಿ, ಆ ಇವು

---

1. ಸೂ. ಭಾ. ೧-೩-೩೪ (ಭಾ. ಭಾ. ೩೦೮)ರಲ್ಲಿ ಶುಚಮ್ ಅಭಿದುದ್ರಾವ, ಶುಚಾ ವಾ ಅಭಿದುದ್ರುವೇ, ಶುಚಾ ವಾ ರೈಕ್ವಮ್ ಅಭಿದುದ್ರಾವ- ಎಂದು ಮಾತ್ರ ವ್ಯುತ್ಪತ್ತಿಯನ್ನು ಬರೆದಿದೆ, ಅಲ್ಲಿ ಎರಡನೆಯ ಅರ್ಥವನ್ನು ಬರೆದಿಲ್ಲ.

2 ಇವರು ಯಾರೆಂಬುದು ತಿಳಿಯಲಿಲ್ಲ. ರೈಕ್ವನಿಗೆ ರೋಷವುಂಟಾಯಿತೆಂಬುದು ಆಚಾರ್ಯರಿಗೆ ಅಸಮ್ಮತವಾಗಿದ್ದದ್ದರಿಂದ ಈ ಅಭಿಪ್ರಾಯವನ್ನು ಬೇರ್ಪಡಿಸಿ ಹೇಳಿರಬಹುದು.

3 ಈಗ ಗೋಗಳನ್ನು ಹೆಚ್ಚಾಗಿ ತಂದನು, ಹಾರವನ್ನೂ ರಥವನ್ನೂ ಮುನ್ನಿನಂತೆ ತಂದನು, ತನ್ನ ಮಗಳನ್ನೂ ರೈಕ್ವನ ಹೆಂಡತಿಯಾಗಲೆಂದು ಕರೆತಂದನು- ಎಂದರ್ಥ. ಮೂಲ ದಲ್ಲಿ 'ನಿಷ್ಕಮಶ್ವತರೀರಥಮ್' ಎಂಬ ಮಾತು ಬಿಟ್ಟುಹೋಗಿದೆಯೆಂದು ಕಾಣುತ್ತದೆ.

4. ಇಲ್ಲಿ "ಸ ತಸ್ಮೈ" ಎಂದು ವಾ॥ ಪಾಠದಲ್ಲಿದೆ.

ಮಹಾವೃಷ(ದೇಶ)ದಲ್ಲಿ ರೈಕ್ವಪರ್ಣ ಎಂಬಿವು. ಅವನು ಅವನಿಗೆ ಇಂತೆಂದನು :

## ರೈಕ್ವನು ಕಾಣಿಕೆಯನ್ನು ಒಪ್ಪಿ, ಉಪದೇಶಕ್ಕೆ ಮೊದಲುಮಾಡಿದ್ದು

(ಭಾಷ್ಯ)

೫೯೮. ರೈಕ್ವ ಇದಂ ಗವಾಂ ಸಹಸ್ರಮ್, ಅಯಂ ನಿಷ್ಕಃ, ಅಯಮ್ ಅಶ್ವತರೀರಥಃ, ಇಯಂ ಜಾಯಾ ಜಾಯಾರ್ಥಂ ಮಮ ದುಹಿತಾ ಆನೀತಾ। ಅಯಂ ಚ ಗ್ರಾಮೋ ಯಸ್ಮಿನ್ ಆಸ್ಸೇ ತಿಷ್ಠಸಿ। ಸ ಚ ತ್ವದರ್ಥೇ ಮಯಾ ಕಲ್ಪಿತಃ। ತದೇತತ್ ಸರ್ವಮ್ ಆದಾಯ ಅನುಶಾಧ್ಯೇವ ಮಾ ಮಾಂ ಹೇ ಭಗವಃ। ಇತ್ಯುಕ್ತಃ ತಸ್ಯಾ ಜಾಯಾರ್ಥಮ್ ಆನೀತಾಯಾಃ ರಾಜ್ಞೋ ದುಹಿತುಃ ಹ ಏವ ಮುಖಂ ದ್ವಾರಂ ವಿದ್ಯಾಯಾ ದಾನೇ ತೀರ್ಥಮ್ ಉಪೋದ್ಗೃಹ್ಣನ್ ಜಾನನ್ ಇತ್ಯರ್ಥಃ। "ಬ್ರಹ್ಮಚಾರೀ ಧನದಾಯಿಾ ಮೇಧಾವೀ ಶ್ರೋತ್ರಿಯಃ ಪ್ರಿಯಃ। ವಿದ್ಯಯಾ ವಾ ವಿದ್ಯಾಂ ಪ್ರಾಹ ತಾನಿ ತೀರ್ಥಾನಿ ಷಣ್ಮಮ॥" ( ? ) ಇತಿ ವಿದ್ಯಾಯಾ ವಚನಂ ವಿಜ್ಞಾಯತೇ ಹಿ। ಏವಂ ಜಾನನ್ ಉಪೋದ್ಗೃಹ್ಣನ್ ಉವಾಚ ಉಕ್ತವಾನ್। ಆಜಹಾರ ಆಹೃತವಾನ್ ಭವಾನ್ ಯತ್ ಇಮಾ ಗಾಃ ಯಚ್ಚ ಅನ್ಯದ್ ಧನಂ ತತ್ಸಾಧು ಇತಿ ವಾಕ್ಯಶೇಷಃ। ಶೂದ್ರ ಇತಿ ಪೂರ್ವೋಕ್ತಾನುಕೃತಿಮಾತ್ರಂ ನ ತು ಕಾರಣಾನ್ತರಾಪೇಕ್ಷಯಾ ಪೂರ್ವವತ್। ಅನೇನೈವ ಮುಖೇನ ವಿದ್ಯಾಗ್ರಹಣತೀರ್ಥೇನ ಆಲಾಪಯಿಷ್ಯಥಾಃ ಆಲಾಪಯಸಿ ಇತಿ। ಮಾಂ ಭಾಣಯಸೀತ್ಯರ್ಥಃ। ತೇ ಹ ಏತೇ ಗ್ರಾಮಾಃ ರೈಕ್ವಪರ್ಣಾ ನಾಮ ವಿಖ್ಯಾತಾ ಮಹಾವೃಷೇಷು ದೇಶೇಷು ಯತ್ರ ಯೇಷು ಗ್ರಾಮೇಷು ಉವಾಸ ಉಷಿತವಾನ್ ರೈಕ್ವಃ। ತಾನಸೌ ಗ್ರಾಮಾನ್ ಅದಾತ್ ಅಸ್ಮೈ ರೈಕ್ವಾಯ ರಾಜಾ। ತಸ್ಮೈ ರಾಜ್ಞೇ ಧನಂ ದತ್ತವತೇ ಹ ಕಿಲ ಉವಾಚ ವಿದ್ಯಾಂ ಸ ರೈಕ್ವಃ॥

(ಭಾಷ್ಯಾರ್ಥ)

ರೈಕ್ವನೆ, ಇದು ಗೋಸಹಸ್ರವು, ಇದು ನಿಷ್ಕವು, ಇದು ಅಶ್ವತರೀರಥವು ; ಈಕೆಯು (ನಿನ್ನ) ಹೆಂಡತಿಯಾಗಲೆಂದು (ನಾನು) ಕರೆತಂದಿರುವ ನನ್ನ ಮಗಳು. ಈ ನೀನು ಇರುವೆಯಲ್ಲ, ಇದ್ದುಕೊಂಡಿರುವೆಯಲ್ಲ, ಇದು ಗ್ರಾಮವು , ಇವನ್ನು ನಿನಗಾಗಿ ನಾನು ಏರ್ಪಡಿಸಿರುವೆನು. ಇದೆಲ್ಲವನ್ನೂ ತೆಗೆದುಕೊಂಡು, ಎಲೈ ಭಗವಂತನೆ, ನನಗೆ ಅನುಶಾಸನವನ್ನೇ ಮಾಡು !

ಹೀಗೆನ್ನಲು ಹೆಂಡತಿಯಾಗಲೆಂದು ಕರೆತಂದಿದ್ದ ಆ ರಾಜನ ಮಗಳನ್ನು ಮುಖವೆಂದು ವಿದ್ಯಾದಾನಕ್ಕೆ ದ್ವಾರವೆಂದು ತೀರ್ಥವೆಂದು ಗ್ರಹಿಸಿ ಅರಿತುಕೊಂಡು

ಎಂದರ್ಥ. "ಬ್ರಹ್ಮಚಾರಿಯು, ಧನವನ್ನು ಕೊಟ್ಟವನು, ಮೇಧಾವಿಯು, ಶ್ರೋತ್ರಿಯನು, ಪ್ರಿಯನು, ಅಥವಾ ವಿದ್ಯೆಗೆ ಬದಲಾಗಿ ವಿದ್ಯೆಯನ್ನು ಹೇಳಿಕೊಡುವವನು-ಇವು ಆರೂ ನನಗೆ ತೀರ್ಥಗಳು" (　? ...　) ಎಂಬ ವಿದ್ಯೆಯ ವಚನವು ತಿಳಿದು ಬರುತ್ತಿದೆಯಲ್ಲವೆ ?[1] ಹೀಗೆಂದು ಗ್ರಹಿಸಿಕೊಂಡು ತಿಳಿದುಕೊಂಡು ಇಂತೆಂದನು, ಹೀಗೆಂದನು: "ಈ ಗೋಗಳನ್ನೂ ಮಿಕ್ಕಧನವನ್ನೂ ನೀನು (ಆಜಹಾರ=ಆಹೃತವಾನ್) ತಂದಿರುವೆಯಲ್ಲ, ಅದು ಒಳ್ಳೆಯದಾಯಿತು- ಎಂದು ವಾಕ್ಯಶೇಷವು. 'ಶೂದ್ರನೆ,' ಎಂದಿರುವದು ಹಿಂದೆ ಹೇಳಿದ್ದರ ಅನುಕರಣವೇ ಹೊರತು ಹಿಂದಿನಂತೆ ಮತ್ತೊಂದು ಕಾರಣದಿಂದ (ಹೇಳಿ)ದ್ದಲ್ಲ. ಇದೇ ಮುಖದಿಂದಲೇ ವಿದ್ಯಾಗ್ರಹಣ ತೀರ್ಥದಿಂದ ಮಾತನಾಡಿಸುವೆ, ಮಾತನಾಡಿಸುತ್ತಿದ್ದೀಯೆ, ನನ್ನನ್ನು ಮಾತನಾಡುವಂತೆ ಮಾಡಿದ್ದೀಯೆ" ಎಂದರ್ಥ.

ಯಾವ ಗ್ರಾಮಗಳಲ್ಲಿ[2] ರೈಕ್ವನು ವಾಸವಾಗಿದ್ದನೋ, ಆ ಈ ಗ್ರಾಮಗಳು ಮಹಾವೃಷದೇಶದಲ್ಲಿ ರೈಕ್ವಪರ್ಣಗಳೆಂದು ವಿಖ್ಯಾತವಾಗಿವೆ. ಅವನ್ನು ರಾಜನು ಈ ರೈಕ್ವನಿಗೆ ಕೊಟ್ಟನು (ಹೀಗೆ) ಧನವನ್ನು ಕೊಟ್ಟ ಆ ರಾಜನಿಗೆ ಆ ರೈಕ್ವನು ವಿದ್ಯೆಯನ್ನು ಹೇಳಿದನಂತೆ.

---

# ನಾಲ್ಕನೆಯ ಅಧ್ಯಾಯ-ಮೂರನೆಯ ಖಂಡ

(ಸಂವರ್ಗವಿದ್ಯೆ)

## ಅಧಿದೈವತಸಂವರ್ಗ

(ಉಪನಿಷತ್ತು)

**ವಾಯುರ್ವಾವ ಸಂವರ್ಗೋ ಯದಾ ವಾ ಅಗ್ನಿರುದ್ವಾಯತಿ ವಾಯುಮೇವಾಪ್ಯೇತಿ ಯದಾ ಸೂರ್ಯೋಽಸ್ತಮೇತಿ ವಾಯುಮೇವಾಪ್ಯೇತಿ ಯದಾ ಚನ್ದ್ರೋಽಸ್ತಮೇತಿ ವಾಯುಮೇವಾಪ್ಯೇತಿ ॥೧॥**

---

1. ತೀರ್ಥಗಳು ಎಂದರೆ ವಿದ್ಯಾದಾನಕ್ಕೆ ದ್ವಾರಗಳು. ಇಲ್ಲಿ ಹೇಳಿರುವ ವಚನವು ಎಲ್ಲಿದೆಯೋ ತಿಳಿಯದು. 'ವಿಜ್ಞಾಯತೇ' ಎಂಬ ಮಾತನ್ನು ಶ್ರುತಿಯ ವಾಕ್ಯದ ಅನುವಾದದಲ್ಲಿ ಹೇಳುವ ರೂಢಿಯಿದೆ.

2. ಹಿಂದೆ 'ಗ್ರಾಮಃ' ಎಂದು ಒಂದೇ ಗ್ರಾಮವನ್ನು ಹೇಳಿದೆ; ಇಲ್ಲಿ ರೈಕ್ವಪರ್ಣಗಳೆಂಬ ಗ್ರಾಮಗಳು ಎಂದಿದೆ. ರೈಕ್ವನಿಗೆ ಬಹಳ ಗ್ರಾಮಗಳನ್ನು ಕೊಟ್ಟಿದ್ದರೂ 'ಇದು' (ಅಯಮ್) ಎಂದು ಏಕೆ ಏಕವಚನವನ್ನೇ ಪ್ರಯೋಗಿಸಿದನು ?- ಎಂಬುದು ವಿಚಾರಣೀಯವಾಗಿದೆ.

**ಯದಾಪ ಉಚ್ಛುಷ್ಯನ್ತಿ ವಾಯುಮೇವಾಪಿಯನ್ತಿ । ವಾಯು ರ್ಹ್ಯೇವೈತಾನ್ ಸರ್ವಾನ್ ಸಂವೃಙ್ಕ್ತ ಇತ್ಯಧಿದೈವತಮ್ ॥**

೧. ವಾಯುವೇ ಸಂವರ್ಗವು. ಯಾವಾಗ ಅಗ್ನಿಯು ಹೊರಟು ಹೋಗುತ್ತದೆಯೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತದೆ. ಯಾವಾಗ ಸೂರ್ಯನು ಅಸ್ತವನ್ನು ಹೊಂದುತ್ತಾನೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತಾನೆ. ಯಾವಾಗ ಚಂದ್ರನು ಅಸ್ತವಾಗುತ್ತಾನೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತಾನೆ.

೨. ಯಾವಾಗ ಅಪ್ಪು ಉಚ್ಛೋಷವಾಗುವದೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತವೆ. ವಾಯುವೇ ಅಲ್ಲವೆ, ಇವೆಲ್ಲವನ್ನೂ ಒಳಗೊಳ್ಳುತ್ತದೆ? ಇದು ಅಧಿದೈವತವು.

## ವಾಯುವೇ ಅಧಿದೈವತಸಂವರ್ಗವು

(ಭಾಷ್ಯ)

೨೯೯. ವಾಯುರ್ವಾವ ಸಂವರ್ಗಃ । ವಾಯುರ್ಬಾಹ್ಯಃ ವಾವ ಇತಿ ಅವಧಾರಣಾರ್ಥಃ। ಸಂವರ್ಗಃ ಸಂವರ್ಜನಾತ್, ಸಂಗ್ರಹಣಾತ್, ಸಂಗ್ರಸನಾದ್ ವಾ ಸಂವರ್ಗಃ[1] । ವಕ್ಷ್ಯಮಾಣಾ ಅಗ್ನ್ಯಾದ್ಯಾ ದೇವತಾ ಆತ್ಮಭಾವಮ್ ಆಪಾದ ಯತಿ ಇತ್ಯತಃ ಸಂವರ್ಗಃ। ಸಂವರ್ಜನಾಖ್ಯೋ ಗುಣೋ ಧ್ಯೇಯಃ, ವಾಯುವತ್[2] । ಕೃತಾಯಾನ್ತರ್ಭಾವದೃಷ್ಟಾನ್ತಾತ್ । ಕಥಂ ಸಂವರ್ಗತ್ವಂ ವಾಯೋರಿತಿ? ಆಹ। ಯದಾ ಯಸ್ಮಿನ್ ಕಾಲೇ ವಾ ಅಗ್ನಿಃ ಉದ್ವಾಯತಿ, ಉದ್ವಾಸನಂ ಪ್ರಾಪ್ನೋತಿ, ಉಪಶಾಮ್ಯತಿ, ತದಾ ಅಸೌ ಅಗ್ನಿಃ ವಾಯುಮೇವ ಅಪ್ಯೇತಿ, ವಾಯುಸ್ವಾಭಾವ್ಯಮ್ ಅಪಿಗಚ್ಛತಿ। ತಥಾ ಯದಾ ಸೂರ್ಯಃ ಅಸ್ತಮೇತಿ ವಾಯುಮೇವ ಅಪ್ಯೇತಿ। ನನು ಕಥಂ ಸೂರ್ಯಾಚನ್ದ್ರಮಸೋಃ ಸ್ವರೂಪಾವ ಸ್ಥಿತಯೋರ್ವಾಯಾವಪಿಗಮನಮ್ ? ನೈಷ ದೋಷಃ। ಅಸ್ತಮನೇ ಅದರ್ಶನ ಪ್ರಾಪ್ತೇರ್ವಾಯುನಿಮಿತ್ತತ್ವಾತ್ । ವಾಯುನಾ ಹಿ ಅಸ್ತಂ ನೀಯತೇ ಸೂರ್ಯಃ ।

---

1 ಸಂವರ್ಗಃ ಎಂದು ಮತ್ತೆ ಇಲ್ಲಿ ಬರೆದಿರುವದು ಬೇಕಿಲ್ಲವೆಂದು ತೋರುತ್ತದೆ. ಭಾಮತೀವ್ಯಾಖ್ಯಾನವಲ್ಲಿ (ಸೂ.ಭಾ ೧–೧–೪) 'ಯಥಾ ಹ ದ್ರವಿಡಾಚಾರ್ಯಃ ಸಂಹರಣಾದ್ವಾ ಸಂವರಣಾದ್ವಾ ಸಾತ್ಮೀಭಾವಾದ್ ವಾಯುಃ ಸಂವರ್ಗಃ' ಎಂಬ ಉದಾಹರಣೆಯಿದೆ. ಇಲ್ಲಿರುವದು ಆಚಾರ್ಯರು ದ್ರವಿಡಾಚಾರ್ಯರ ಅಭಿಪ್ರಾಯವನ್ನು ಮಾತ್ರ ಬರೆದದ್ದಾಗಿರಬಹುದು.

2 'ವಾಯೋಃ' ಎಂದು ಪಾ॥ ಆ॥ ಪಾಠ, 'ವಾಯೋಃ' ಎಂಬ ಪಾಠಕ್ಕೆ ವಾಯುವಿನ ಸಂವರ್ಗವೆಂಬ ಗುಣವನ್ನು ಧ್ಯಾನಮಾಡಬೇಕು– ಎಂದು ಅರ್ಥ.

ಚಲನಸ್ಯ ವಾಯುಕಾರ್ಯತ್ವಾತ್ । ಅಥವಾ ಪ್ರಲಯೇ ಸೂರ್ಯಾಚನ್ದ್ರಮಸೋಃ ಸ್ವರೂಪಭ್ರಂಶೇ ತೇಜೋರೂಪಯೋರ್ವಾಯಾವೇವ ಅಪಿಗಮನಂ ಸ್ಯಾತ್ । ತಥಾ ಯದಾ ಆಪ ಉಚ್ಛುಷ್ಯನ್ತಿ ಉಚ್ಛೋಷಮ್ ಆಪ್ನುವನ್ತಿ ತದಾ ವಾಯುಮೇವ ಅಪಿಯನ್ತಿ । ವಾಯುರ್ಹಿ ಯಸ್ಮಾದೇವ ಏತಾನ್ ಅಗ್ನ್ಯಾದೀನ್ ಮಹಾಬಲಾನ್ ಸಂವೃಙ್ಕ್ತೇ । ಅತೋ ವಾಯುಃ ಸಂವರ್ಗಗುಣಃ ಉಪಾಸ್ಯಃ ಇತ್ಯರ್ಥಃ । ಇತ್ಯಧಿದೈವತಂ ದೇವತಾಸು ಸಂವರ್ಗದರ್ಶನಮ್ ಉಕ್ತಮ್ ॥

(ಭಾಷ್ಯಾರ್ಥ)

ವಾಯುವೇ ಸಂವರ್ಗವು ವಾಯು ಎಂದರೆ ಹೊರಗಿನ (ವಾಯು). ವಾವ ಎಂಬುದು ಅವಧಾರಣೆಗಾಗಿ (ಬಂದಿದೆ). ಒಳಗೊಳ್ಳುವದರಿಂದ ಎಂದರೆ ಒಳಕ್ಕೆ ತೆಗೆದುಕೊಳ್ಳುವದರಿಂದ, ಅಥವಾ ಚೆನ್ನಾಗಿ ನುಂಗುವದರಿಂದ ಸಂವರ್ಗ(ವೆನಿಸಿದೆ). ಮುಂದೆ ಹೇಳಲಾಗುವ ಅಗ್ನಿಯೇ ಮುಂತಾದ ದೇವತೆಗಳನ್ನು ತನ್ನ ರೂಪಕ್ಕೆ ತಿರುಗಿಸಿಕೊಳ್ಳುವದರಿಂದ (ಇದು) ಸಂವರ್ಗವು.[1] ಸಂವರ್ಜನ (ಒಳಗೊಳ್ಳುವದು) ಎಂಬ ಗುಣವನ್ನೂ ವಾಯುವಿನಂತೆ ಧ್ಯಾನಮಾಡಬೇಕು.[2] ಕೃತಾಯದಲ್ಲಿ (ಮಿಕ್ಕ ಗರಗಳು) ಅಡಕವಾಗುವವೆಂಬ ದೃಷ್ಟಾಂತವನ್ನು ಕೊಟ್ಟಿರುವದರಿಂದ (ಹೀಗೆಂದು ಏರ್ಪಡುತ್ತದೆ).[3]

ವಾಯುವು ಸಂವರ್ಗವೆಂಬುದು ಹೇಗೆ? ಎಂದರೆ ಹೇಳುತ್ತಾನೆ [4] ಯಾವಾಗ ಯಾವ ಕಾಲಕ್ಕೆ ಅಗ್ನಿಯು ಹೊರಟುಹೋಗುತ್ತದೆಯೋ, ಎಂದರೆ ಉಪಶಾಂತವಾಗುತ್ತದೆಯೋ, ಆಗ ಈ ಅಗ್ನಿಯು ವಾಯುವನ್ನೇ ಸೇರಿಕೊಳ್ಳುತ್ತದೆ, ವಾಯುವಿನ ಸ್ವಭಾವವನ್ನು ಹೊಂದುತ್ತದೆ. ಇದರಂತೆ ಯಾವಾಗ ಸೂರ್ಯನು ಅಸ್ತವಾಗುತ್ತಾನೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತಾನೆ, ಯಾವಾಗ ಚಂದ್ರನು ಅಸ್ತವಾಗುತ್ತಾನೋ (ಆಗ) ವಾಯುವನ್ನೇ ಸೇರಿಕೊಳ್ಳುತ್ತಾನೆ.

---

1. ಇದು ಸಂಗ್ರಹಣಪಕ್ಷವೆಂದು ಆ॥ ಗಿ॥ ಟೀಕೆ, ಸಂವರ್ಗ ಎಂಬಲ್ಲಿ ಸಂಪೂರ್ವಕವಾದ ಧಾತುವಿಗೆ ಸಂಗ್ರಹಣವೆಂದೋ ಸಂಗ್ರಸನವೆಂದೋ ಅರ್ಥವೆಂದಿಷ್ಟೇ ಭಾಷ್ಯಕಾರರ ಅಭಿಪ್ರಾಯವೆಂದು ತೋರುತ್ತದೆ, ಇಲ್ಲಿ ಎರಡು ಬೇರೆಬೇರೆಯ ಪಕ್ಷಗಳಿರುವಂತೆ ಕಾಣುವದಿಲ್ಲ.

2. ವಾಯುವನ್ನು ಸಂವರ್ಗಗುಣಯುಕ್ತವೆಂದು ಧ್ಯಾನಿಸಬೇಕು ಎಂದರ್ಥ.

3. ಸಂವರ್ಗವಿದ್ಯೆಯುಳ್ಳ ಉಪಾಸಕನಿಗೆ ಮಿಕ್ಕ ಫಲವೆಲ್ಲವೂ ಸೇರುವವೆಂಬುದಕ್ಕೆ ಈ ದೃಷ್ಟಾಂತವನ್ನು ಕೊಟ್ಟಿರುವದರಿಂದ ವಾಯುವಿನಲ್ಲಿ ಎಲ್ಲಾ ದೇವತೆಗಳೂ ಸೇರಿರುವರೆಂದು ಉಪಾಸನೆಮಾಡಬೇಕೆಂದು ಹೇಳಿದಂತೆ ಆಯಿತು ಎಂದರ್ಥ.

4. ಸಂಗ್ರಸನಾದ್ವಾ ಎಂಬುದಕ್ಕೆ ಈ ಅಭಿಪ್ರಾಯವನ್ನು ಇಲ್ಲಿ ತಿಳಿಸಿದೆ ಎಂದು ಟೀಕೆ. ಹೀಗೆ ಪಕ್ಷಭೇದವನ್ನು ಕಲ್ಪಿಸುವದಕ್ಕೆ ಭಾಷ್ಯದಲ್ಲಿ ಗಮಕವೇನೂ ಕಾಣುವದಿಲ್ಲ.

(ಆಕ್ಷೇಪ) :- ಸೂರ್ಯಚಂದ್ರರುಗಳು ತಮ್ಮತಮ್ಮ ರೂಪದಿಂದಲೇ ಇರುತ್ತಿರುವಲ್ಲಿ ಅವರಿಬ್ಬರಿಗೂ ವಾಯುವಿನಲ್ಲಿಯೇ ಲಯವೆಂದು (ಹೇಳಿದ್ದು) ಹೇಗೆ (ಸರಿ) ?

(ಪರಿಹಾರ) .- ಇದೇನೂ ತಪ್ಪಲ್ಲ. ಏಕೆಂದರೆ ಅಸ್ತವಾದಾಗ ಕಾಣದೆ ಇರುವದು ವಾಯುನಿಮಿತ್ತದಿಂದ (ಇದರ ವಿವರ): ವಾಯುವಿನಿಂದಲೇ ಸೂರ್ಯನು ಅಸ್ತವಾಗಿಸಲ್ಪಡುತ್ತಾನೆ, ಏಕೆಂದರೆ ಚಲನವು ವಾಯುವಿನ ಕಾರ್ಯವಾಗಿದೆ.[1] ಅಥವಾ ಪ್ರಲಯದಲ್ಲಿ ಚಂದ್ರಸೂರ್ಯರುಗಳ ಸ್ವರೂಪವು ನಾಶವಾಗುವಾಗ ತೇಜೋರೂಪರಾದ (ಅವರಿಗೆ) ವಾಯುವಿನಲ್ಲಿಯೇ ಪ್ರಲಯವಾಗುವದು.[2]

ಇದರಂತೆ ಯಾವಾಗ ಅಪ್ಪು ಉಚ್ಛೋಷವಾಗುವದೋ ಒಣಗಿಹೋಗುವದೋ ಆಗ (ಅದು) ವಾಯುವನ್ನೇ ಸೇರಿಕೊಳ್ಳುತ್ತದೆ (ಹಿ= ಯಸ್ಮಾತ್) ವಾಯುವೇ ಅಲ್ಲವೆ, ಈ ಮಹಾಬಲಶಾಲಿಗಳಾದ ಅಗ್ನ್ಯಾದಿಗಳನ್ನು ಒಳಗೊಳ್ಳುತ್ತದೆ! ಆದ್ದರಿಂದ ವಾಯುವು ಸಂವರ್ಗವೆಂಬ ಗುಣವುಳ್ಳದ್ದು ಎಂದರ್ಥ. ಇದು ಅಧಿದೈವತವು. ದೇವತೆಗಳ ವಿಷಯದಲ್ಲಿ ಸಂವರ್ಗದರ್ಶನವನ್ನು ಹೇಳಿದ್ದಾಯಿತು.

## ಅಧ್ಯಾತ್ಮಸಂವರ್ಗ

(ಉಪನಿಷತ್ತು)

**ಅಥಾಧ್ಯಾತ್ಮಂ ಪ್ರಾಣೋ ವಾವ ಸಂವರ್ಗಃ ಸ ಯದಾ ಸ್ವಪಿತಿ ಪ್ರಾಣಮೇವ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಗ್ಂ ಶ್ರೋತ್ರಂ ಪ್ರಾಣಂ ಮನಃ ಪ್ರಾಣೋ ಹ್ಯೇವೈತಾನ್ ಸರ್ವಾನ್ ಸಂವೃಙ್ಕ್ತ ಇತಿ ॥ ೩ ॥**

೩. ಇನ್ನು ಅಧ್ಯಾತ್ಮವು. ಪ್ರಾಣವೇ ಸಂವರ್ಗವು. ಅವನು ಯಾವಾಗ ನಿದ್ರೆಯನ್ನು ಮಾಡುವನೋ ಆಗ ಪ್ರಾಣವನ್ನೇ ವಾಕ್ಕು ಸೇರಿಕೊಳ್ಳುತ್ತದೆ; ಪ್ರಾಣವನ್ನೇ ಚಕ್ಷುಸ್ಸು (ಸೇರಿಕೊಳ್ಳುತ್ತದೆ); ಪ್ರಾಣವನ್ನೇ ಶ್ರೋತ್ರವು (ಸೇರಿಕೊಳ್ಳುತ್ತದೆ), ಪ್ರಾಣವನ್ನೇ ಮನಸ್ಸು (ಸೇರಿಕೊಳ್ಳುತ್ತದೆ). ಪ್ರಾಣವೇ ಅಲ್ಲವೆ, ಇವೆಲ್ಲವನ್ನೂ ಒಳಗೊಳ್ಳುತ್ತದೆ?

---

1. ಚಲನವಿಲ್ಲದೆ ಉದಯಾಸ್ತಗಳಿಲ್ಲವಾದ್ದರಿಂದ ಸೂರ್ಯಚಂದ್ರರು ಅಸ್ತವಾಗುವದು ವಾಯುವಿನ ವಶವೆಂದು ಹೇಳಿದೆ ಎಂದು ಭಾವ.

2. ಹಿಂದಿನ ವ್ಯಾಖ್ಯಾನದಲ್ಲಿ ಗೌಣಲಯವನ್ನು ಹೇಳಿತ್ತು, ಇಲ್ಲಿ ಮುಖ್ಯಲಯವನ್ನು ಹೇಳಿದೆ. ವಿದ್ಯುದ್ವೃಷ್ಟಿಚಂದ್ರಸೂರ್ಯಾಗ್ನಿಗಳು ವಾಯುವಿನಲ್ಲಿ ಲಯವಾಗುವ ಕ್ರಮವನ್ನು ಐ. ಬ್ರಾ. ೪ ೫ರಲ್ಲಿ ವರ್ಣಿಸಿರುವದನ್ನು ನೋಡಿ.

## ಪ್ರಾಣವೇ ಅಧ್ಯಾತ್ಮಸಂವರ್ಗ

(ಭಾಷ್ಯ)

೩೦೦. ಅಥ ಅನನ್ತರಮ್ ಅಧ್ಯಾತ್ಮಮ್ ಆತ್ಮನಿ ಸಂವರ್ಗದರ್ಶನಮ್ ಇದಮುಚ್ಯತೇ। ಪ್ರಾಣೋ ಮುಖ್ಯಃ ವಾವ ಸಂವರ್ಗಃ। ಸ ಪುರುಷಃ ಯದಾ ಯಸ್ಮಿನ್ ಕಾಲೇ ಸ್ವಪಿತಿ ತದಾ ಪ್ರಾಣಮೇವ ವಾಕ್ ಅಪ್ಯೇತಿ ವಾಯುಮಿವ ಅಗ್ನಿಃ। ಪ್ರಾಣಂ ಚಕ್ಷುಃ, ಪ್ರಾಣಂ ಶ್ರೋತ್ರಂ, ಪ್ರಾಣಂ ಮನಃ। ಪ್ರಾಣೋ ಹಿ ಯಸ್ಮಾತ್ ಏವ ಏತಾನ್ ವಾಗಾದೀನ್ ಸರ್ವಾನ್ ಸಂವೃಙ್ಕ್ತೇ ಇತಿ ॥

(ಭಾಷ್ಯಾರ್ಥ)

ಇನ್ನು (ಅಧಿದೈವತವಾದ) ಬಳಿಕ ಅಧ್ಯಾತ್ಮವಾಗಿ ತನ್ನೊಳಗಿನ ವಿಷಯದಲ್ಲಿ ಈ ಸಂವರ್ಗದರ್ಶನವನ್ನು ಹೇಳಲಾಗುವದು. ಮುಖ್ಯಪ್ರಾಣವೇ ಸಂವರ್ಗವು. ಅವನು ಎಂದರೆ ಪುರುಷನು ಯಾವಾಗ ಯಾವ ಕಾಲದಲ್ಲಿ ನಿದ್ರಿಸುವನೋ ಆಗ ಪ್ರಾಣವನ್ನೇ ವಾಕ್ಕು ಸೇರಿಕೊಳ್ಳುವದು, ವಾಯುವನ್ನು ಅಗ್ನಿಯು ಹೇಗೆ (ಸೇರುವನೋ ಹಾಗೆ), ಪ್ರಾಣವನ್ನೇ ಚಕ್ಷುಸ್ಸು, ಪ್ರಾಣವನ್ನೇ ಶ್ರೋತ್ರವು, ಪ್ರಾಣವನ್ನೇ ಮನಸ್ಸು. (ಹಿ = ಯಸ್ಮಾತ್) ಪ್ರಾಣವೇ ಅಲ್ಲವೆ, ಈ ವಾಗಾದಿಗಳನ್ನೆಲ್ಲ ಒಳಗೊಳ್ಳುತ್ತದೆ ?

## ಸಂವರ್ಗವಿದ್ಯೆಯ ಉಪಸಂಹಾರ

(ಉಪನಿಷತ್ತು)

**ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು ॥ ೪ ॥**

೪. ಆ ಈ ಎರಡು ಸಂವರ್ಗಗಳು, ವಾಯುವೇ ದೇವತೆಗಳಲ್ಲಿ, ಪ್ರಾಣವೇ ಪ್ರಾಣಗಳಲ್ಲಿ.

## ವಾಯುಪ್ರಾಣಗಳನ್ನು ಸಂವರ್ಗವೆಂದು ಉಪಾಸನೆಮಾಡಬೇಕು

(ಭಾಷ್ಯ)

೩೦೧. ತೌ ವಾ ಏತೌ ದ್ವೌ ಸಂವರ್ಗೌ ಸಂವರ್ಜನಗುಣೌ। ವಾಯುರೇವ ದೇವೇಷು ಸಂವರ್ಗಃ, ಪ್ರಾಣಃ ಪ್ರಾಣೇಷು ವಾಗಾದಿಷು ಮುಖ್ಯಃ ॥

(ಭಾಷ್ಯಾರ್ಥ)

ಈ ಎರಡೂ ಸಂವರ್ಗಗಳು, ಸಂವರ್ಜನವೆಂಬ ಗುಣವುಳ್ಳವು, ವಾಯುವೇ ದೇವತೆಗಳೊಳಗೆ ಸಂವರ್ಗವು, ಮುಖ್ಯಪ್ರಾಣವೇ ಪ್ರಾಣಗಳಲ್ಲಿ, ವಾಗಾದಿಗಳಲ್ಲಿ (ಸಂವರ್ಗವು).[1]

## ವಾಯುಪ್ರಾಣಗಳ ಸ್ತುತಿಗಾಗಿ ಕಥೆ

(ಉಪನಿಷತ್ತು)

**ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಪರಿವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ ತಸ್ಮಾ ಉ ಹ ನ ದದತುಃ ॥ ೫ ॥**

೫. ಇನ್ನು (ಆಖ್ಯಾಯಿಕೆ) ಶೌನಕ ಕಾಪೇಯನನ್ನು ಅಭಿಪ್ರತಾರಿ ಕಾಕ್ಷಸೇನಿಯನ್ನೂ (ಊಟಕ್ಕೆ) ಬಡಿಸಿಕೊಳ್ಳುತ್ತಿದ್ದಾಗ ಬ್ರಹ್ಮಚಾರಿಯು ಭಿಕ್ಷೆಬೇಡಿದನು. ಅವನಿಗೆ ಅವರು ಕೊಡಲಿಲ್ಲ

### ಸಂವರ್ಗೋಪಾಸಕನಿಗೆ ಭಿಕ್ಷೆಹಾಕದೆ ಇದ್ದದ್ದು

(ಭಾಷ್ಯ)

೩೦೨ ಅಥ ಏತಯೋಃ ಸ್ತುತ್ಯರ್ಥಮ್ ಇಯಮ್ ಆಖ್ಯಾಯಿಕಾ ಆರಭ್ಯತೇ। ಹ ಇತಿ ಐತಿಹ್ಯಾರ್ಥಃ। ಶೌನಕಂ ಚ ಶುನಕಸ್ಯ ಅಪತ್ಯಂ ಶೌನಕಂ ಕಾಪೇಯಂ ಕಪಿಗೋತ್ರಮ್ ಅಭಿಪ್ರತಾರಿಣಂ ಚ ನಾಮತಃ ಕಕ್ಷಸೇನಸ್ಯ ಅಪತ್ಯಂ ಕಾಕ್ಷಸೇನಿಂ ಭೋಜನಾಯ ಉಪವಿಷ್ಟೌ ಪರಿವಿಷ್ಯಮಾಣೌ ಸೂಪಕಾರೈಃ ಬ್ರಹ್ಮಚಾರೀ ಬ್ರಹ್ಮವಿಚ್ಛೌಣ್ಡೋ ಬಿಭಿಕ್ಷೇ ಭಿಕ್ಷಿತವಾನ್ । ಬ್ರಹ್ಮಚಾರಿಣೋ ಬ್ರಹ್ಮವಿನ್ಮಾನಿತಾಂ ಬುದ್ಧ್ವಾ[2] ಜಿಜ್ಞಾಸಮಾನೌ ತಸ್ಮೈ ಉ ಭಿಕ್ಷಾಂ ನ ದದತುಃ ನ ದತ್ತವನ್ತೌ ಹ। ಕಿಮಯಂ ವಕ್ಷ್ಯತೀತಿ ॥

(ಭಾಷ್ಯಾರ್ಥ)

ಇನ್ನು ಈ (ಎರಡರ) ಸ್ತುತಿಗಾಗಿ ಈ ಕಥೆಯನ್ನು ಆರಂಭಿಸಲಾಗಿದೆ. ಹ ಎಂಬಿದು ಹಿಂದೆ ನಡೆಯಿತೆಂಬುದನ್ನು (ತಿಳಿಸು)ವದಕ್ಕೆ. ಶೌನಕನು ಎಂದರೆ ಶುನಕನ ಮಗನು; ಕಾಪೇಯನೆಂದರೆ ಕಪಿಗೋತ್ರದವನು.[3] ಮತ್ತು ಅಭಿಪ್ರತಾರಿ

---

1 ಇಲ್ಲಿ ವಾಯುಪ್ರಾಣಗಳನ್ನು ಸಂವರ್ಗವೆಂದು ಉಪಾಸನೆಮಾಡುವ ವಿದ್ಯೆಯು ಒಂದೇ; ಆದರೂ ಇವನ್ನು ಬೇರೆಬೇರೆಯಾಗಿಯೇ ಚಿಂತಿಸಬೇಕು ಎಂದು ಸೂ. ಭಾ ೩-೩-೪೩ (ಭಾ. ಭಾ. ೪೦೨, ೪೦೩)ರಲ್ಲಿ ನಿರ್ಣಯಿಸಿದೆ.

2 ಇದರ ಮುಂದಿರುವ 'ತಂ' ಬೇಕಿಲ್ಲವೆಂದು ಬಿಟ್ಟಿದೇವೆ

3. ಕಾಪೇಯನಾಮಸಂಬಂಧದಿಂದ ಜಾನಶ್ರುತಿಯು ಕ್ಷತ್ರಿಯನೆಂದು ಕಲ್ಪಿಸಿರುವ ಒಂದು ಯುಕ್ತಿಯನ್ನು ಸೂ. ಭಾ. ೧-೩-೩೫ (ಭಾ. ಭಾ. ೩೭೮ರಲ್ಲಿ) ಕಾಣಬಹುದು.

(ಎಂದರೆ ಆ) ಹೆಸರಿನವನು, ಕಾಕ್ಷಸೇನಿ ಎಂದರೆ ಕಕ್ಷಸೇನನ ಮಗನು. ಊಟಕ್ಕೆ ಕುಳಿತುಕೊಂಡು ಅಡಿಗೆಯವರಿಂದ (ಅನ್ನವನ್ನು) ಬಡಿಸಿಕೊಳ್ಳುತ್ತಿದ್ದ (ಆ ಇಬ್ಬರನ್ನು ಒಬ್ಬ) ಬ್ರಹ್ಮಚಾರಿಯು, ಬ್ರಹ್ಮಜ್ಞಾನಿಗಳಲ್ಲಿ ಶೂರನಾದವನು[1] ಭಿಕ್ಷೆಯನ್ನು ಬೇಡಿದನು, ಯಾಚಿಸಿದನು. ಬ್ರಹ್ಮಚಾರಿಯು ತಾನು ಬ್ರಹ್ಮಜ್ಞಾನಿಯೆಂದು ಭಾವಿಸಿಕೊಂಡಿರುವನೆಂಬುದನ್ನು ಅರಿತುಕೊಂಡು[2] ಅವನಿಗೆ ಇವನು ಏನು ಹೇಳುತ್ತಾನೋ ತಿಳಿದುಕೊಳ್ಳೋಣ ಎಂದು- ಭಿಕ್ಷೆಯನ್ನು ಕೊಡಲಿಲ್ಲ

(ಉಪನಿಷತ್ತು)

**ಸ ಹೋವಾಚ ಮಹಾತ್ಮನಶ್ಚತುರೋ ದೇವ ಏಕಃ ಕಃ ಸ ಜಗಾರ ಭುವನಸ್ಯ ಗೋಪಾಸ್ತಂ ಕಾಪೇಯ ನಾಭಿಪಶ್ಯನ್ತಿ ಮರ್ತ್ಯಾ ಅಭಿಪ್ರತಾರಿನ್ ಬಹುಧಾ ವಸನ್ತಂ ಯಸ್ಮೈ ವಾ ಏತದನ್ನಂ ತಸ್ಮಾ ಏತನ್ನ ದತ್ತಮಿತಿ ॥ ೬ ॥**

೬. ಅವನು ಇಂತೆಂದನು : ನಾಲ್ವರು ಮಹಾತ್ಮರನ್ನು ಒಬ್ಬನೇ ದೇವನಾದ ಆ ಕನು ನುಂಗಿರುತ್ತಾನೆ; (ಅವನೇ) ಭುವನದ ಗೋಪ್ತೃ. 'ಕಾಪೇಯನೆ, ಅಭಿಪ್ರತಾರಿಯೆ, ಬಹುಪ್ರಕಾರದಿಂದ ಇರುತ್ತಿರುವ ಆತನನ್ನು ಮರ್ತ್ಯರು ಕಾಣರು. ಯಾವನಿಗೋಸ್ಕರ ಈ ಅನ್ನವೋ, ಅವನಿಗೆ ಇದನ್ನು ಕೊಡಲಿಲ್ಲ !'

## ಬ್ರಹ್ಮಚಾರಿಯು ವಾಯುವನ್ನು ಪ್ರಶಂಸಿಸಿದ್ದು

(ಭಾಷ್ಯ)

೩೦೩ ಸ ಹೋವಾಚ ಬ್ರಹ್ಮಚಾರೀ 'ಮಹಾತ್ಮಾನಶ್ಚತುರ' ಇತಿ ದ್ವಿತೀಯಾಬಹುವಚನಮ್ । ದೇವ ಏಕಃ ಅಗ್ನ್ಯಾದೀನ್ ವಾಯುಃ । ವಾಗಾದೀನ್ ಪ್ರಾಣಃ । ಕಃ ಸ ಪ್ರಜಾಪತಿಃ ಜಗಾರ ಗ್ರಸಿತವಾನ್ । ಕಃ ಸ ಜಗಾರ ? ಇತಿ ಪ್ರಶ್ನಮೇಕೇ । ಭುವನಸ್ಯ ಭವನ್ತಿ ಅಸ್ಮಿನ್ ಭೂತಾನಿ ಇತಿ ಭುವನಂ ಭೂರಾದಿಃ ಸರ್ವೋ ಲೋಕಃ । ತಸ್ಯ ಗೋಪಾಃ ಗೋಪಾಯಿತಾ ರಕ್ಷಿತಾ ।

---

1. ಸಂವರ್ಗವಿದ್ಯೆಯಲ್ಲಿ ವಾಯುಪ್ರಾಣಗಳನ್ನು ಬ್ರಹ್ಮದೃಷ್ಟಿಯಿಂದ ಉಪಾಸನೆ ಮಾಡುವುದರಿಂದ ಇದೂ ಬ್ರಹ್ಮವಿದ್ಯೆಯೇ. ಆದ್ದರಿಂದ ಇವನನ್ನು ಬ್ರಹ್ಮಜ್ಞಾನಿ ಎಂದಿದೆ.

2. ಬ್ರಹ್ಮವಿಚ್ಛೌಣ್ಡಃ ಎಂಬುದು ಬ್ರಹ್ಮಚಾರೀ ಎಂಬುದರ ಭಾಷ್ಯಕ್ಕೆ ಬರೆದಿರುವ ವ್ಯಾಖ್ಯಾನ ಬ್ರಹ್ಮಚಾರಿಯು ತಾನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೆಂದು ತಿಳಿದುಕೊಂಡಿದ್ದನು ಎಂಬರ್ಥವನ್ನು ಟೀಕೆಯಲ್ಲಿ ತೆಗೆದಿರುವುದಕ್ಕೆ ಭಾಷ್ಯದ ಆಧಾರವು ಸಾಲದು. ಬ್ರಹ್ಮಚಾರಿಯು ಎಷ್ಟರಮಟ್ಟಿಗೆ ಬ್ರಹ್ಮವನ್ನು ತಿಳಿದಿದ್ದಾನೋ ನೋಡೋಣವೆಂಬ ಕುತೂಹಲದಿಂದ ಭಿಕ್ಷೆಯನ್ನು ಕೊಡಲಿಲ್ಲ ಎಂದಿಷ್ಟೇ ಭಾಷ್ಯಕ್ಕೆ ಅರ್ಥ.

ಗೋಪ್ತಾ ಇತ್ಯರ್ಥಃ । ತಂ ಕಂ ಪ್ರಜಾಪತಿಂ ಹೇ ಕಾಪೇಯ ನಾಭಿಪಶ್ಯನ್ತಿ ನ ಜಾನನ್ತಿ ಮರ್ತ್ಯಾ ಮರಣಧರ್ಮಾಣಃ ಅವಿವೇಕಿನೋ ವಾ ಹೇ ಅಭಿಪ್ರತಾರಿನ್ ಬಹುಧಾ ಅಧ್ಯಾತ್ಮಾಧಿದೈವತಾಧಿಭೂತಪ್ರಕಾರೈಃ ವಸನ್ತಮ್ । ಯಸ್ಮೈ ವಾ ಏತತ್ ಅಹನ್ಯಹನಿ ಅನ್ನಮ್ ಅದನಾಯ ಆಹ್ರಿಯತೇ ಸಂಸ್ಕ್ರಿಯತೇ ಚ ತಸ್ಮೈ ಪ್ರಜಾಪತಯೇ ಏತದನ್ನಂ ನ ದತ್ತಮಿತಿ ॥

(ಭಾಷ್ಯಾರ್ಥ)

ಬ್ರಹ್ಮಚಾರಿಯು ಇಂತೆಂದನು, ಮಹಾತ್ಮನಶ್ಚತುರಃ ಎಂಬಿದು ದ್ವಿತೀಯಾ ಬಹುವಚನವು[1] (ನಾಲ್ವರು ಮಹಾತ್ಮರನ್ನು) ಒಬ್ಬನೇ ದೇವನು, ಅಗ್ನಿಯೇ ಮೊದಲಾದವರನ್ನು ವಾಯು(ವೊಬ್ಬನೇ). ವಾಕ್ಕೇ ಮುಂತಾದವುಗಳನ್ನು ಪ್ರಾಣ (ವೊಂದೇ) ಕಸು ಎಂದರೆ ಪ್ರಜಾಪತಿಯಾದ ಆತನು ನುಂಗಿರುತ್ತಾನೆ, ಗ್ರಾಸ ಮಾಡಿಕೊಂಡಿರುತ್ತಾನೆ ನುಂಗಿರುತ್ತಾನಲ್ಲ ಅವನು (ಕಃ ?) ಯಾರು ? ಎಂದು ಕೆಲವರು (ಇದನ್ನು) ಪ್ರಶ್ನೆಯಾಗಿ ವ್ಯಾಖ್ಯಾನಮಾಡಿರುತ್ತಾರೆ. ಭುವನದ–ಇದರಲ್ಲಿ ಭೂತಗಳು ಇರುತ್ತವೆ (ಭವನ್ತಿ), ಆದ್ದರಿಂದ ಭೂರಾದಿಲೋಕವೆಲ್ಲವೂ ಭುವನ ವೆನಿಸುವದು ಅದರ– (ಗೋಪಾಃ–ಗೋಪಾಯಿತಾ) ಕಾಪಾಡತಕ್ಕ ಗೋಪ್ತೃವು ಎಂದರ್ಥ. ಆ ಪ್ರಜಾಪತಿಯನ್ನು ಎಲೈ ಕಾಪೇಯನೆ, ಮರ್ತ್ಯರು ಮರಣಧರ್ಮ ವುಳ್ಳವರು, ಅಥವಾ ಅವಿವೇಕಿಗಳು, ಎಲೈ ಅಭಿಪ್ರತಾರಿಯೆ, ಬಹುಪ್ರಕಾರದಿಂದ ಎಂದರೆ ಅಧ್ಯಾತ್ಮ, ಅಧಿದೈವತ, ಅಧಿಭೂತ– ಎಂಬ ಪ್ರಕಾರಗಳಿಂದ ಇರುತ್ತಿ ರುವ (ಅವನನ್ನು) ಕಾಣರು, ಅರಿಯರು ಯಾವನಿಗಾಗಿ ದಿನದಿನವೂ ಈ ಅನ್ನ ವನ್ನು ಉಣ್ಣಲೆಂದು ತರುತ್ತಿರುವರೋ ಮತ್ತು ಸಂಸ್ಕರಿಸುತ್ತಿರುವರೋ ಆ ಪ್ರಜಾ ಪತಿಗೆ ಈ ಅನ್ನವನ್ನು ನೀವು ಕೊಡಲಿಲ್ಲ ![2]

(ಉಪನಿಷತ್ತು)

**ತದು ಹ ಶೌನಕಃ ಕಾಪೇಯಃ ಪ್ರತಿಮನ್ವಾನಃ ಪ್ರತ್ಯೇಯಾ ಯಾತ್ಮಾ ದೇವಾನಾಂ ಜನಿತಾ ಪ್ರಜಾನಾಗ್ಂ ಹಿರಣ್ಯದಗ್ಂಷ್ಟ್ರೋ ಬಭಸೋಽನಸೂರಿರ್ಮಹಾನ್ತಮಸ್ಯ ಮಹಿಮಾನಮಾಹು**

---

1. ಚತುರಃ ಎಂಬುದು ಏಕವಚನವಲ್ಲ, ಮಹಾತ್ಮನಃ ಎಂಬುದಕ್ಕೆ ವಿಶೇಷಣವಾಗಿ ದ್ವಿತೀಯಾ ಬಹುವಚನ ಎಂದರ್ಥ. ಟೀಕೆಯಲ್ಲಿ ಮಹಾತ್ಮನಃ ಎಂಬುದು ಪಂಚಮೀವಿಭಕ್ತಿ ಯೆಂದೂ ಚತುರಃ ಎಂಬಿದು ಸಮೀಚೀನಾರ್ಥಕವೆಂದೂ ತಿಳಿಯಬಾರದೆಂದು ಹೀಗೆ ಹೇಳಿದೆ ಯೆಂದಿದೆ.

2 ನೀವು ನನಗೆ ಭಿಕ್ಷೆಯನ್ನು ಕೊಡದಿರುವದು ಆ ಪ್ರಜಾಪತಿಗೇ ಕೊಡದೆ ಇದ್ದಂತೆ ಎಂದು ತನ್ನ ಸಾಕ್ಷಾತ್ಕಾರವನ್ನು ತಿಳಿಸಿದನೆಂದು ಭಾವ.

**ರನದ್ಯಮಾನೋ ಯದನನ್ನಮತ್ತೀತಿ[1] ವೈ ವಯಂ ಬ್ರಹ್ಮಚಾರಿ ನ್ನೇದಮುಪಾಸ್ಮಹೇ ದತ್ತಾಽಸ್ಮೈ ಭಿಕ್ಷಾಮಿತಿ ॥ ೭ ॥**

೭. ಶೌನಕ ಕಾಪೇಯನು ಅದನ್ನು ಕುರಿತು ಮನನಮಾಡಿ ಹತ್ತಿರಕ್ಕೆ ಬಂದನು; 'ಆತ್ಮನೂ ದೇವತೆಗಳ (ಮತ್ತು) ಪ್ರಜೆಗಳ ಜನಕನೂ ಚಿನ್ನದದಾಡೆಯುಳ್ಳವನೂ ಬಭಸನೂ ಅನಸೂರಿಯೂ ಆಗಿರುವ ಇವನ ಮಹಿಮೆಯನ್ನು ದೊಡ್ಡದೆಂದು ಹೇಳುತ್ತಾರೆ. ಏಕೆಂದರೆ ತಿನ್ನಲ್ಪಡದೆ ಅನನ್ನವನ್ನು ತಿನ್ನುತ್ತಾನೆ. ಬ್ರಹ್ಮಚಾರಿಯೆ. ನಾವು ಇದನ್ನು ಚೆನ್ನಾಗಿ ಉಪಾಸನೆಮಾಡುತ್ತಿದೇವೆ. ಇವನಿಗೆ ಭಿಕ್ಷೆ ಯನ್ನು ಕೊಡಿರೊ !' (ಎಂದನು).

## ಶೌನಕಕಾಪೇಯನು ವಾಯುವನ್ನು ಪ್ರಶಂಸಿಸಿದ್ದು

(ಭಾಷ್ಯ)

೩೦೪. ತದು ಹ ಬ್ರಹ್ಮಚಾರಿಣೋ ವಚನಂ ಶೌನಕಃ ಕಾಪೇಯಃ ಪ್ರತಿ ಮನ್ವಾನಃ ಮನಸಾ ಆಲೋಚಯನ್ ಬ್ರಹ್ಮಚಾರಿಣಂ ಪ್ರತ್ಯೇಯಾಯ ಆಜಗಾಮ। ಗತ್ವಾ ಚ ಆಹ। ಯಂ ತ್ವಮ್ ಅವೋಚಃ ನ ಪಶ್ಯನ್ತಿ[2] ಮರ್ತ್ಯಾ ಇತಿ ತಂ ವಯಂ ಪಶ್ಯಾಮಃ। ಕಥಮ್ ? ಆತ್ಮಾ ಸರ್ವಸ್ಯ ಸ್ಥಾವರಸ್ಯ ಜಙ್ಗಮಸ್ಯ ಚ[3]। ಕಿಂ ಚ ದೇವಾನಾಮ್ ಅಗ್ನ್ಯಾದೀನಾಮ್ ಆತ್ಮನಿ ಸಂಹೃತ್ಯ ಗ್ರಸಿತ್ವಾ ಪುನರ್ಜನಿತಾ ಉತ್ಪಾದಯಿತಾ ವಾಯುರೂಪೇಣ ಅಧಿದೈವತಮ್ ಅಗ್ನ್ಯಾದೀ ನಾಮ್ ಅಧ್ಯಾತ್ಮಂ ಚ ಪ್ರಾಣರೂಪೇಣ ವಾಗಾದೀನಾಂ ಪ್ರಜಾನಾಂ ಚ ಜನಿತಾ। ಅಥವಾ ಆತ್ಮಾ ದೇವಾನಾಮ್ ಅಗ್ನಿವಾಗಾದೀನಾಮ್ ಜನಿತಾ ಪ್ರಜಾನಾಂ ಸ್ಥಾವರಜಙ್ಗಮಾನಾಮ್ । ಹಿರಣ್ಯದಂಷ್ಟ್ರಃ ಅಮೃತದಂಷ್ಟ್ರಃ । ಅಭಗ್ನದಂಷ್ಟ್ರ ಇತಿ ಯಾವತ್। ಬಭಸಃ ಭಕ್ಷಣಶೀಲಃ। ಅನಸೂರಿಃ । ಸೂರಿಃ ಮೇಧಾವೀ। ನ ಸೂರಿಃ ಅಸೂರಿಃ। ತತ್ಪ್ರತಿಷೇಧೋಽನಸೂರಿಃ। ಸೂರಿರೇವ ಇತ್ಯರ್ಥಃ। ಮಹಾನ್ತಮ್ ಅತಿಪ್ರಮಾಣಮ್ ಅಪ್ರಮೇಯಮ್ ಅಸ್ಯ ಪ್ರಜಾಪತೇಃ ಮಹಿ ಮಾನಂ ವಿಭೂತಿಮ್ ಆಹುಃ ಬ್ರಹ್ಮವಿದಃ।. ಯಸ್ಮಾತ್ ಸ್ವಯಮ್ ಅನ್ಯೈಃ ಅನದ್ಯಮಾನಃ ಅಭಕ್ಷ್ಯಮಾಣಃ ಯದನನ್ನಮ್ ಅಗ್ನಿವಾಗಾದಿದೇವತಾರೂಪಮ್

---

1. 'ಆತ್ಮಾ ದೇವಾನಾಮ್' ಎಂಬ ಋಕ್ಕು ಸಂಹಿತೆಯಲ್ಲಿ ಎಲ್ಲಿಯಾದರೂ ಇದೆಯೋ ಇಲ್ಲಿಯೇ ಬ್ರಾಹ್ಮಣೋತ್ಪನ್ನವಾದದ್ದೋ ತಿಳಿಯದು

2. 'ನಾಭಿಪಶ್ಯನ್ತಿ' ಎಂದು ಮಾ॥ಅ॥ ಪಾಠ, ಇದು ಹಿಂದಿನ ಉಪನಿಷತ್ತಿನ ಮೂಲಕ್ಕೆ ಹೊಂದುತ್ತದೆ.        3. 'ಸ್ಥಾವರಜಙ್ಗಮಸ್ಯ' ಎಂಬುದಕ್ಕಿಂತ ಈ ಪಾಠವು ಮೇಲು

ಅತ್ತಿ ಭಕ್ಷಯತೀತಿ ವಾ ಇತಿ ನಿರರ್ಥಕಃ। ವಯಂ ಹೇ ಬ್ರಹ್ಮಚಾರಿನ್। ಆ ಇದಮ್ ಏವಂ ಯಥೋಕ್ತಲಕ್ಷಣಂ ಬ್ರಹ್ಮ ವಯಮ್। ಆ ಉಪಾಸ್ಮಹೇ। ವಯಮ್ ಇತಿ ವ್ಯವಹಿತೇನ ಸಂಬನ್ಧಃ। ಅನ್ಯೇ ನ ವಯಮಿದಮ್ ಉಪಾಸ್ಮಹೇ ಕಿಂ ತರ್ಹಿ ಪರಮೇವ ಬ್ರಹ್ಮ ಉಪಾಸ್ಮಹೇ ಇತಿ ವರ್ಣಯನ್ತಿ। ದತ್ತ ಅಸ್ಮೈ ಭಿಕ್ಷಾಮ್ ಇತ್ಯವೋಚತ್ ಭೃತ್ಯಾನ್ ॥

(ಭಾಷ್ಯಾರ್ಥ)

ಆ ಬ್ರಹ್ಮಚಾರಿಯ ವಚನವನ್ನು ಶೌನಕಕಾಪೇಯನು ಮನನಮಾಡುತ್ತಾ ಮನಸ್ಸಿನಲ್ಲಿ ಆಲೋಚಿಸುತ್ತಾ ಬ್ರಹ್ಮಚಾರಿಯ ಬಳಿಗೆ ಬಂದನು, ಬಂದುಸೇರಿದನು. ಬಂದು ಇಂತೆಂದನು. 'ಮರ್ತ್ಯರು ಕಾಣರು' ಎಂದು ನೀನು ಹೇಳಿದೆಯಲ್ಲ, ಅವನನ್ನು ನಾವು ಕಂಡಿರುತ್ತೇವೆ ಹೇಗೆಂದರೆ, (ಅವನು) ಎಲ್ಲಕ್ಕೂ, ಸ್ಥಾವರಕ್ಕೂ ಜಂಗಮಕ್ಕೂ ಆತ್ಮನು, ಮತ್ತು ಅಗ್ನ್ಯಾದಿದೇವತೆಗಳನ್ನು ತನ್ನೊಳಕ್ಕೆ ಸೇರಿಸಿ ಕೊಂಡು ನುಂಗಿ ಮತ್ತೆ ಅಧಿದೈವತವಾಗಿ ವಾಯುರೂಪದಿಂದ (ಆ) ಅಗ್ನ್ಯಾದಿ ದೇವತೆಗಳಿಗೂ ಜನಕನಾಗಿರುವನು, ಉತ್ಪಾದಕನಾಗಿರುವನು,[1] ಅಧ್ಯಾತ್ಮವಾಗಿ ಪ್ರಾಣರೂಪದಿಂದ ವಾಗಾದಿಗಳಿಗೂ ಪ್ರಜೆಗಳಿಗೂ ಜನಕನಾಗಿರುವನು, ಅಥವಾ (ಆತ್ಮಾ ದೇವಾನಾಮ್) ಅಗ್ನಿವಾಗಾದಿದೇವತೆಗಳಿಗೆ ಆತ್ಮನಾಗಿರುವನು,[2] (ಜನಿತಾ ಪ್ರಜಾನಾಂ) ಸ್ಥಾವರಜಂಗಮ(ರೂಪವಾದ) ಪ್ರಜೆಗಳಿಗೆ ಜನಕನಾಗಿರುವನು (ಎಂದಾದರೂ ಅನ್ವಯಿಸಬಹುದು), ಹಿರಣ್ಯದಂಷ್ಟ್ರನು, ಎಂದರೆ ಅಮೃತವಾದ ದಂಷ್ಟ್ರವುಳ್ಳವನು, ನಾಶವಾಗದ ಕೋರದಾಡೆಗಳುಳ್ಳವನು ಎಂದರ್ಥ[3] ಬಭಸನು ಎಂದರೆ (ಎಲ್ಲವನ್ನೂ) ಭಕ್ಷಿಸುವ ಸ್ವಭಾವದವನು ಅನಸೂರಿಯು, ಸೂರಿ ಎಂದರೆ ತಿಳಿದವನು, ಸೂರಿಯಲ್ಲದವನು ಅಸೂರಿ, ಅದಲ್ಲದವನು ಅನಸೂರಿ, ಎಂದರೆ ಸೂರಿಯೇ ಎಂದರ್ಥ ಈ ಪ್ರಜಾಪತಿಯ ಮಹಿಮೆಯು, ವಿಭೂತಿಯು ದೊಡ್ಡದು, ಅಳತೆಯಿಲ್ಲದ್ದು, (ಇಷ್ಟೆಂದು) ಗೊತ್ತುಪಡಿಸಲಾಗದ್ದು ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ ಏಕೆಂದರೆ ತಾನು ಮತ್ತೊಬ್ಬರಿಂದ ತಿನ್ನಲ್ಪಡದೆ ಅಗ್ನಿವಾಗಾದಿರೂಪರಾದ ದೇವತೆಗಳನ್ನು ತಿನ್ನುತ್ತಾನೆ. (ಮೂಲದಲ್ಲಿರುವ) ವಾ ಎಂಬ ಮಾತಿಗೆ ಅರ್ಥವಿಲ್ಲ.

ಎಲೈ ಬ್ರಹ್ಮಚಾರಿಯೆ, ಬ್ರಹ್ಮಚಾರಿನ್ ಆ ಇದಮ್ (ಎಂದು ಪದಚ್ಛೇದ), ಹೀಗೆ ಮೇಲೆ ಹೇಳಿರುವ ಲಕ್ಷಣವುಳ್ಳ ಬ್ರಹ್ಮವನ್ನು ನಾವು ಚೆನ್ನಾಗಿ ಉಪಾಸನೆ

1. ಐತರೇಯಬ್ರಾಹ್ಮಣದಲ್ಲಿ 'ಬ್ರಹ್ಮಣಃ ಪರಿಮರ'ವೆಂದು ವರ್ಣಿಸಿರುವ ಕಡೆಯಲ್ಲಿ ವಾಯುವಿನಲ್ಲಿ ಅಗ್ನ್ಯಾದಿಗಳ ಪ್ರಲಯವನ್ನೂ ಮತ್ತೆ ವಾಯುವಿನಿಂದ ಉತ್ಪತ್ತಿಯನ್ನೂ ಹೇಳಿದೆ.

2. ಏಕೆಂದರೆ ಸರ್ವದೇವತಾತ್ಮನಿವನು.

3. ಚಿನ್ನವು ಗಟ್ಟಿಯಾಗಿರುವುದರಿಂದ ಹಿರಣ್ಯಶಬ್ದಕ್ಕೆ ನಾಶವಾಗದ ಎಂಬರ್ಥವನ್ನು ತೆಗೆದಿದೆ.

ಮಾಡುತ್ತೇವೆ (ಆ ಉಪಾಸ್ಮಹೇ ಎಂಬುದಕ್ಕೆ) ವಯಮ್ (ನಾವು) ಎಂಬ (ಹಿಂದೆ) ದೂರದಲ್ಲಿರುವ (ಪದಕ್ಕೆ) ಸಂಬಂಧ. ಮತ್ತೆ ಕೆಲವರು (ವ್ಯಾಖ್ಯಾನಕಾರರು) ನಾವು (ನೇದಂ) ಇದನ್ನು ಉಪಾಸನೆಮಾಡುತ್ತಿಲ್ಲ, ಮತ್ತೇನನ್ನೆಂದರೆ) ಪರಬ್ರಹ್ಮವನ್ನೇ ಉಪಾಸನೆಮಾಡುತ್ತೇವೆ ಎಂದು (ಈ ವಾಕ್ಯದರ್ಥವನ್ನು) ವರ್ಣಿಸುತ್ತಾರೆ[1]. 'ಇವನಿಗೆ ಭಿಕ್ಷೆಯನ್ನು ಕೊಡಿರೊ!' ಎಂದು (ಕಾಪೇಯನು) ಆಳುಗಳಿಗೆ ಹೇಳಿದನು

## ಸಂವರ್ಗವಿದ್ಯೆಯ ಫಲ

(ಉಪನಿಷತ್ತು)

**ತಸ್ಮಾ ಉ ಹ ದದುಸ್ತೇ ವಾ ಏತೇ ಪಞ್ಚಾನ್ಯೇ ಪಞ್ಚಾನ್ಯೇ ದಶ ಸನ್ತಸ್ತತ್ಕೃತಂ ತಸ್ಮಾತ್ಸರ್ವಾಸು ದಿಕ್ಷ್ವನ್ನಮೇವ ದಶ ಕೃತಗ್ಂ ಸೈಷಾ ವಿರಾಡನ್ನಾದೀ ತಯೇದಗ್ಂ ಸರ್ವಂ ದೃಷ್ಟಂ ಸರ್ವಮಸ್ಯೇದಂ ದೃಷ್ಟಂ ಭವತ್ಯನ್ನಾದೋ ಭವತಿ ಯ ಏವಂ ವೇದ ಯ ಏವಂ ವೇದ ॥ ೮ ॥**

೮. ಮತ್ತು ಅವನಿಗೆ ಕೊಟ್ಟರು. ಆ ಇವು ಐದು ಬೇರೆ, ಐದು ಬೇರೆ- (ಹೀಗೆ) ಹತ್ತಾಗಿರುವದರಿಂದ ಇದು ಕೃತವು. ಆದ್ದರಿಂದ ಎಲ್ಲಾ ದಿಕ್ಕುಗಳಲ್ಲಿಯೂ ಅನ್ನವೇ, ಹತ್ತು ಕೃತವೇ. ಆ ಈ ವಿರಾಟ್ಟು ಅನ್ನಾದಿಯಾಗಿರುವದು, ಅದರಿಂದ ಇದೆಲ್ಲವೂ ದೃಷ್ಟವಾಗಿರುತ್ತದೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನಿಗೆ ಎಲ್ಲವೂ ದೃಷ್ಟವಾಗುವದು ; (ಅವನು) ಅನ್ನಾದನಾಗುವನು. ಯಾವನು ಹೀಗೆಂದು ಅರಿಯುವನೋ (ಅವನಿಗೆ ದೃಷ್ಟವಾಗುವದು, ಅವನು ಅನ್ನಾದನಾಗುವನು).

## ಸಂವರ್ಗವಿದ್ಯೆಯ ದೃಷ್ಟಫಲ

(ಭಾಷ್ಯ)

೨೦೫. ತಸ್ಮಾ ಉ ಹ ದದುಃ ತೇ ಹ[2] ಭಿಕ್ಷಾಮ್ । ತೇ ವೈ ಯೇ ಗ್ರಸ್ಯನ್ತೇ ಅಗ್ನ್ಯಾದಯಃ ಯಶ್ಚ ತೇಷಾಂ ಗ್ರಸಿತಾ ವಾಯುಃ ಪಞ್ಚ ಅನ್ಯೇ ವಾಗಾದಿಭ್ಯಃ । ತಥಾ ಅನ್ಯೇ ತೇಭ್ಯಃ ಪಞ್ಚ ಅಧ್ಯಾತ್ಮಂ ವಾಗಾದಯಃ ಪ್ರಾಣಶ್ಚ । ತೇ ಸರ್ವೇ ದಶ ಭವನ್ತಿ ಸಂಖ್ಯಯಾ । ದಶ ಸನ್ತಃ ತತ್ಕೃತಂ ಭವತಿ ತೇ । ಚತುರಙ್ಕ ಏಕ ಆಯಃ[3] । ಏವಂ ಚತ್ವಾರಃ । ತ್ರ್ಯಙ್ಕಾಯಃ ಏವಂ ತ್ರಯೋಽಪರೇ ।

---

1. ಈ ವ್ಯಾಖ್ಯಾನವು ಪ್ರಕೃತರಾದ ವಾಯುಬ್ರಹ್ಮರನ್ನು ಹೊಗಳುವ ಈ ಪ್ರಕರಣಕ್ಕೆ ಅಷ್ಟು ಒಪ್ಪಾಗಿ ಕಾಣುವದಿಲ್ಲ. 2. ಹಿ ಎಂಬುದನ್ನು ಹ ಎಂದು ತಿದ್ದಿಕೊಂಡಿದೆ.
3. ಏಕಾಯಃ ಎಂಬುದಕ್ಕಿಂತ ಈ ವ್ಯಸ್ತಪಾಠವೇ ಉತ್ತಮ.

ದ್ವ್ಯಙ್ಕಾಯಃ ಏವಂ ದ್ವೌ ಅನ್ಯೌ। ಏಕಾಙ್ಕಾಯಃ। ಏವಮೇಕೋಽನ್ಯಃ। ಇತ್ಯೇವಂ ದಶ ಸನ್ತಃ ತತ್ಕೃತಂ ಭವತಿ। ಯತ ಏವಮ್ ತಸ್ಮಾತ್ ಸರ್ವಾಸು ದಿಕ್ಷು ದಶಸ್ವಪಿ ಅಗ್ನ್ಯಾದ್ಯಾ ವಾಗಾದ್ಯಾಶ್ಚ ದಶಸಂಖ್ಯಾಸಾಮಾನ್ಯಾತ್ ಅನ್ನಮೇವ ದಶಾಕ್ಷರಾ ವಿರಾಟ್। "ವಿರಾಡನ್ನಮ್" ಇತಿ ಹಿ ಶ್ರುತಿಃ। ಅತೋಽನ್ನಮೇವ ದಶಸಂಖ್ಯತ್ವಾತ್। ತತ ಏವ ದಶಕೃತಮ್। ಕೃತೇ ಅನ್ತರ್ಭಾವಾತ್ ಚತುರಙ್ಕಾಯತ್ವೇನ[1] ಇತ್ಯವೋಚಾಮ। ಸೈಷಾ ವಿರಾಟ್ ದಶಸಂಖ್ಯಾ ಸತೀ ಅನ್ನಂ ಚ ಅನ್ನಾದೀ ಅನ್ನಾದಿನೀ ಚ ಕೃತತ್ವೇನ। ಕೃತೇ ಹಿ ದಶಸಂಖ್ಯಾ ಅನ್ತರ್ಭೂತಾ। ಅತೋಽನ್ನಮ್ ಅನ್ನಾದಿನೀ ಚ ಸಾ। ತಥಾ ವಿದ್ವಾನ್ ದಶ ದೇವತಾತ್ಮಭೂತಃ ಸನ್ ವಿರಾಟ್ತ್ವೇನ ದಶಸಂಖ್ಯಯಾ ಅನ್ನಂ ಕೃತಸಂಖ್ಯಯಾ ಅನ್ನಾದೀ ಚ। ತಯಾ ಅನ್ನಾನ್ನಾದಿನ್ಯಾ ಇದಂ ಸರ್ವಂ ಜಗತ್ ದಶದಿಕ್ಸಂಸ್ಥಂ ದೃಷ್ಟಂ ಕೃತಸಂಖ್ಯಾಭೂತಯಾ ಉಪಲಬ್ಧಮ್। ಏವಂವಿದಃ ಅಸ್ಯ ಸರ್ವಂ ಕೃತಸಂಖ್ಯಾಭೂತಸ್ಯ ದಶದಿಕ್ಸಂಬದ್ಧಂ ದೃಷ್ಟಮ್ ಉಪಲಬ್ಧಂ ಭವತಿ। ಕಿಂ ಚ ಅನ್ನಾದಶ್ಚ ಭವತಿ ಯ ಏವಂ ವೇದ ಯಥೋಕ್ತದರ್ಶೀ। ದ್ವಿರಭ್ಯಾಸ ಉಪಾಸನ ಸಮಾಪ್ತ್ಯರ್ಥಃ॥

(ಭಾಷ್ಯಾರ್ಥ)

ಅವನಿಗೆ ಅವರು ಭಿಕ್ಷೆಯನ್ನು ಕೊಟ್ಟರು.

ಅವರು– ನುಂಗಲ್ಪಡುತ್ತಾರಲ್ಲ, ಆ ಅಗ್ನ್ಯಾದಿಗಳು, ಮತ್ತು ಅವರನ್ನು ನುಂಗುವ ವಾಯುವಿದಾನಲ್ಲ, ಅವನು (ಹೀಗೆ)– ಐವರು ವಾಗಾದಿಗಳಿಗಿಂತ ಬೇರೆ, ಮತ್ತು ಅವರಿಗಿಂತ ಅಧ್ಯಾತ್ಮವಾಗಿರುವ ವಾಗಾದಿಗಳೂ ಪ್ರಾಣನೂ ಈ ಐವರೂ ಬೇರೆ. ಅವರೆಲ್ಲ (ಸೇರಿದರೆ) ಸಂಖ್ಯೆಯಲ್ಲಿ ಹತ್ತಾಗುತ್ತಾರೆ, ಹತ್ತಾಗುವದರಿಂದ ಇದು ಕೃತವಾಗುವದು, ಅವು –ನಾಲ್ಕು ಅಂಕಗಳ ಒಂದು ಗರ, ಹೀಗೆ ನಾಲ್ವರು, ಮೂರು ಅಂಕದ (ಒಂದು ಗರ), ಹೀಗೆ ಮೂರು ಬೇರೆ ಎರಡು ಅಂಕದ (ಗರ ಒಂದು), ಹೀಗೆ ಎರಡು ಬೇರೆ, ಒಂದಂಕದ (ಗರ ಒಂದು), ಹೀಗೆ ಒಂದು ಬೇರೆ– ಅಂತೂ ಹೀಗೆ ಹತ್ತಾದರೆ ಅದು ಕೃತವಾಗುತ್ತದೆ

ಹೀಗಿರುವದಷ್ಟೆ, ಆದ್ದರಿಂದ ಎಲ್ಲಾ ದಿಕ್ಕುಗಳಲ್ಲಿಯೂ, ಹತ್ತು (ದಿಕ್ಕುಗಳಲ್ಲಿಯೂ) ಅಗ್ನ್ಯಾದಿಗಳೂ ವಾಗಾದಿಗಳೂ ಹತ್ತು ಎಂಬ ಸಂಖ್ಯೆಯು ಹೋಲಿಕೆಯಿರುವದರಿಂದ ಅನ್ನವೇ. ವಿರಾಟ್ಛಂದಸ್ಸು ಹತ್ತಕ್ಷರದ್ದು, "ವಿರಾಜವು ಅನ್ನವೇ' ( ? ) ಎಂದಲ್ಲವೆ, ಶ್ರುತಿಯಿದೆ? ಆದ್ದರಿಂದ (ಇದು) ಹತ್ತೆಂಬ ಸಂಖ್ಯೆಯಿರುವದರಿಂದ (ಇವು) ಅನ್ನವೇ.[2] ಆದ್ದರಿಂದಲೇ (ಈ) ಹತ್ತು ಕೃತವು, ಏಕೆಂದರೆ

1. ಚತುರಾಯತ್ವೇನ ಎಂಬುದಕ್ಕಿಂತ ಈ ಪಾಠವು ಮೇಲು.

2 ವಿರಾಟ್ಛಂದಸ್ಸಿನಲ್ಲಿ ಹತ್ತಕ್ಷರವಿದ್ದು, ಅದು ಶ್ರುತಿಪ್ರಮಾಣದಿಂದ ಅನ್ನವೆನಿಸಿದೆ; ಅದರಂತೆ ಹತ್ತು ದೇವತೆಗಳ ರೂಪವಾದ ವಿರಾಜನಾಗಿರುವದರಿಂದ ಇದೂ ಅನ್ನವೇ.

ನಾಲ್ಕು ಅಂಕೆಗಳ ಗರವಿರುವದರಿಂದ (ಹತ್ತು)ಕೃತದಲ್ಲಿ ಅಂತರ್ಭಾವವಾಗಿದೆ ಎಂದು ಆಗಲೆ ಹೇಳಿರುತ್ತೇವೆ.

೮ ಈ ವಿರಾಜವು ಹತ್ತು ಸಂಖ್ಯೆಯಿರುವದಾದ್ದರಿಂದ ಅನ್ನವೂ, ಕೃತವಾಗಿರುವದರಿಂದ (ಅನ್ನಾದೀ= ಅನ್ನಾದಿನೀ) ಅನ್ನಾದಿಯೂ ಆಗಿರುತ್ತದೆ. ಕೃತದಲ್ಲಿ ಹತ್ತೆಂಬ ಸಂಖ್ಯೆಯು ಅಂತರ್ಭೂತವಾಗಿದೆಯಲ್ಲವೆ? ಆದ್ದರಿಂದ ಅದು ಅನ್ನವೂ ಅನ್ನಾದಿಯೂ ಆಗಿರುತ್ತದೆ ಇವರಂತೆ ಉಪಾಸಕನು ಹತ್ತು ದೇವತೆಗಳ ಸ್ವರೂಪವುಳ್ಳನನಾಗಿರುವದರಿಂದ ಹತ್ತೆಂಬ ಸಂಖ್ಯೆಯಿಂದ ವಿರಾಟ್ಟಾಗಿರುವದರಿಂದ ಅನ್ನವೂ ಕೃತಸಂಖ್ಯೆಯಿಂದ ಅನ್ನಾದಿಯೂ (ಆಗಿರುತ್ತಾನೆ).[1] ಈ ಅನ್ನಾನ್ನಾದಿಯಾಗಿರುವ ಅದರಿಂದ ಈ ಸರ್ವಜಗತ್ತೂ ಹತ್ತುದಿಕ್ಕುಗಳಲ್ಲಿರುವ (ಜಗತ್ತೆಲ್ಲವೂ) ದೃಷ್ಟವಾಗಿರುತ್ತದೆ, ಕೃತಸಂಖ್ಯೆಯಾಗಿರುವ ಅದರಿಂದ ಅರಿಯಲ್ಪಟ್ಟಿರುತ್ತದೆ. ಹೀಗೆಂದು ಅರಿತಿರುವ ಕೃತಸಂಖ್ಯಾರೂಪನಾದ ಈ (ಉಪಾಸಕನಿಗೆ) ಹತ್ತುದಿಕ್ಕುಗಳಿಗೆ ಸಂಬದ್ಧವಾದ ಎಲ್ಲವೂ ದೃಷ್ಟವಾಗುತ್ತದೆ, ಅರಿಯಲ್ಪಟ್ಟದ್ದಾಗುತ್ತದೆ.[2] ಮತ್ತು ಅವನು ಯಾವನು ಹೀಗೆಂದು ಅರಿತಿರುವನೋ, ಮೇಲೆ ಹೇಳಿದಂತೆ ಕಂಡುಕೊಂಡಿರುವನೋ (ಅವನು) ಅನ್ನಾದನೂ (ಆಗುತ್ತಾನೆ).[3] (ಯ ಏವಂ ವೇದ) ಎಂದು ಎರಡು ಸಲ ಹೇಳಿರುವದು ಉಪಾಸನೆಯು ಮುಗಿಯಿತೆಂದು (ತಿಳಿಸು) ವದಕ್ಕೆ

---

1. ಛಂದಸ್ಸಿನಂತೆ ಅನ್ನವಾಗಿದೆ, ಕೃತಾಯದಂತೆ ಅನ್ನಾದಿಯಾಗಿದೆ, ಎರಡಕ್ಕೂ ಹತ್ತೆಂಬ ಸಂಖ್ಯೆಯೇ ಕಾರಣವಾಗಿದೆ.

2. ಏಕೆಂದರೆ ಜಗತ್ತೇ ಈ ಹತ್ತು ದೇವತೆಗಳ ರೂಪವಾಗಿರುತ್ತದೆ.

3. ಇದೂ ದೃಷ್ಟಫಲವೇ ಪ್ರಜಾಪತಿಪ್ರಾಪ್ತಿಯೇ ಅದೃಷ್ಟಫಲ, ಏಕೆಂದರೆ ಇವನು ಪ್ರಜಾಪತಿಯನ್ನೇ ಸಂವರ್ಗವೆಂದು ಉಪಾಸನೆಮಾಡಿರುತ್ತಾನೆ

# ನಾಲ್ಕನೆಯ ಅಧ್ಯಾಯದ ಒಂದರಿಂದ ಮೂರನೆಯ ಖಂಡಗಳ ಸಾರ

## ಒಂದನೆಯ ಖಂಡ

೧-೬. ಜಾನಶ್ರುತಿಪೌತ್ರಾಯಣನು ಶ್ರದ್ಧೆಯಿಂದ ಛತ್ರಗಳನ್ನು ಕಟ್ಟಿಸಿ ಅನ್ನದಾನ ಮಾಡಿಸುವದರಲ್ಲಿ ಪ್ರಖ್ಯಾತನಾಗಿದ್ದನು. ಒಂದು ದಿನ ರಾತ್ರೆ ಅರಮನೆಯ ಮೇಲೆ ಕೆಲವು ಹಂಸಗಳು ಹಾದುಹಾರಿಹೋಗುತ್ತಿರುವಲ್ಲಿ ಆ ಸಾಲಿನಲ್ಲಿ ಹಿಂದುಗಡೆಯಿದ್ದ ಹಂಸವೊಂದು ತೀರ ಮುಂದೆ ಇದ್ದ ಹಂಸವನ್ನು ಕುರಿತು "ಭಲ್ಲಾಕ್ಷನೆ, ಜಾನಶ್ರುತಿಯ ಕಡೆಗೆ ಕಾಲುಚಾಚದಿರು, ಅವನ ಧರ್ಮಜ್ಯೋತಿಯು ನಿನ್ನನ್ನು ಸುಟ್ಟುಹಾಕಬಹುದು" ಎಂದಿತು. ಆಗ ಭಲ್ಲಾಕ್ಷನು "ಇವನೇನು ಮಹಾಪುರುಷ? ಬಂಡಿಯ ರೈಕ್ವನೋ ಎನ್ನುವಹಾಗೆ ಹೇಳುತ್ತಿರುವೆಯಲ್ಲ!" ಎಂದಿತು "ಆ ರೈಕ್ವನು ಎಂದರೆ ಹೇಗಿರುವನು?" ಎಂದು ಹಿಂದಿನ ಹಂಸವು ಕೇಳಿದ್ದಕ್ಕೆ "ಪಗಡೆಯಲ್ಲಿ ಕೃತಾಯವನ್ನು ಗೆದ್ದರೆ ಕೆಳಗಿನ ತ್ರೇತೆ, ದ್ವಾಪರ, ಕಲಿ- ಎಲ್ಲವೂ ಅವರಲ್ಲಿ ಹೇಗೆ ಸೇರಿಹೋಗಿರುವವೋ ಹಾಗೆಯೇ ಆ ರೈಕ್ವನು ಅರಿತಿರುವ ದೇವತೆಯನ್ನು ಉಪಾಸನೆ ಮಾಡುವವನಿಗೆ ಜನರು ಮಾಡುವ ಪುಣ್ಯವೆಲ್ಲವೂ ಸೇರಿಹೋಗಿರುವದು" ಎಂದಿತು.

೭-೮ ರಾಜನು ಬೆಳಗಾಗುತ್ತಲೂ ಎದ್ದು ತನ್ನ ದೂತನಿಗೆ ಆ ರೈಕ್ವನನ್ನು ಹುಡುಕು ವಂತೆ ಅಪ್ಪಣೆಮಾಡಿದನು ಊರೂರನ್ನೂ ಹುಡುಕಿ 'ಸಿಕ್ಕಲಿಲ್ಲ' ಎಂದು ಅವನು ಹಿಂತಿರುಗಿದನು. 'ಬ್ರಹ್ಮಜ್ಞಾನಿಗಳು ಇರಬಹುದಾದ ಏಕಾಂತಸ್ಥಲಗಳಲ್ಲಿ ಹುಡುಕು' ಎಂದು ರಾಜನು ಮತ್ತೆ ಕಳುಹಿಸಲು 'ಆ ದೂತನು ಒಂದು ಬಂಡಿಯಕೆಳಗೆ ಕಜ್ಜಿಯನ್ನು ತುರಿಸಿಕೊಳ್ಳುತ್ತಾ ಕುಳಿತಿದ್ದ ರೈಕ್ವನನ್ನು ಕಂಡು ವಿಚಾರಿಸಿ ತಿಳಿದುಕೊಂಡು ರಾಜನ ಬಳಿಗೆ ಬಂದು ಹೇಳಿದನು.

## ಎರಡನೆಯ ಖಂಡ

೧-೨. ಜಾನಶ್ರುತಿಪೌತ್ರಾಯಣನು ಆರುನೂರು ಗೋಗಳು, ಒಂದು ಕಂಠಮಾಲಿಕೆ, ಒಂದು ರಥ- ಇಷ್ಟನ್ನು ತೆಗೆದುಕೊಂಡು ಹೋಗಿ "ಭಗವಂತನೆ, ಇದನ್ನು ತಗೆದುಕೊಂಡು, ತಾವು ಉಪಾಸನೆಮಾಡುವ ದೇವತೆಯ ವಿದ್ಯೆಯನ್ನು ನನಗೆ ತಿಳಿಸಿಕೊಡಬೇಕು" ಎಂದು ಬೇಡಿಕೊಂಡನು

೩-೫. ರೈಕ್ವನು ಪರೋಕ್ಷಜ್ಞಾನದಿಂದ ಜಾನಶ್ರುತಿಯು ಶೋಕಗ್ರಸ್ತನಾಗಿ ಬಂದಿರು ವನೆಂದು ತಿಳಿದುಕೊಂಡನು. ಆದರೂ ಶೂದ್ರನಂತೆ ಬರಿಯ ಧನಮಾತ್ರದಿಂದ ಉಪಾಸನೆ ಯನ್ನು ಕಲಿತುಕೊಳ್ಳುವದಕ್ಕೆ ಪ್ರಯತ್ನಿಸಿದ್ದರಿಂದ ರಾಜನನ್ನು "ಎಲಾ ಶೂದ್ರ, ಈ ಅಲ್ಪ ಧನವು ನಿನ್ನಲ್ಲೇ ಇರಲಿ, ನನಗೇತಕ್ಕೆ?" ಎಂದನು. ಆಗ ಜಾನಶ್ರುತಿಯು ಮತ್ತೆ ಸಾವಿರ ಗೋಗಳನ್ನೂ ಹಾರವನ್ನೂ ರಥವನ್ನೂ ತನ್ನ ಮಗಳನ್ನೂ ತೆಗೆದುಕೊಂಡು ಅವನ ಬಳಿಗೆ ಬಂದು "ರೈಕ್ವನೆ, ಇವೆಲ್ಲವನ್ನೂ ತೆಗೆದುಕೊ, ನನಗೆ ಆ ದೇವತಾವಿದ್ಯೆಯನ್ನು ಹೇಳಿಕೊಡು!" ಎಂದು ಕೇಳಿಕೊಂಡನು. ಅವನಿಗೆ ವಾಸಕ್ಕೆ ಒಂದು ಗ್ರಾಮವನ್ನೂ ಕೊಟ್ಟನು. ಆಗ ಋಷಿಯು

ಆ ಸ್ತ್ರೀದಾನವನ್ನೇ ದ್ವಾರವಾಗಿಮಾಡಿಕೊಂಡು ಅವನಿಗೆ ವಿದ್ಯೆಯನ್ನು ಉಪದೇಶಿಸಿದನು. ರೈಕ್ವನು ವಾಸಮಾಡಿಕೊಂಡಿದ್ದ ಬಳಿಯ ಗ್ರಾಮಗಳು ಮಹಾವೃಷದೇಶದಲ್ಲಿ ರೈಕ್ವಪರ್ಣಗಳು ಎಂದು ಪ್ರಸಿದ್ಧವಾದವು.

## ಮೂರನೆಯ ಖಂಡ

೧-೪. ಆಗ ರೈಕ್ವನು ಹೀಗೆಂದು ಉಪದೇಶಿಸಿದನು : ಅಧಿದೈವತವಾಗಿ ವಾಯುವೇ ಸಂವರ್ಗವು. ಏಕೆಂದರೆ ಪ್ರಲಯದಲ್ಲಿ ಅಗ್ನಿ, ಸೂರ್ಯ, ಚಂದ್ರ, ಅಪ್ಪು- ಇವೆಲ್ಲ ವಾಯುವಿನಲ್ಲಿಯೇ ಲಯವಾಗುವವು. ಅಧ್ಯಾತ್ಮವಾಗಿ ಪ್ರಾಣವೇ ಸಂವರ್ಗವು; ಏಕೆಂದರೆ ಸುಷುಪ್ತಿಯಲ್ಲಿ ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು- ಇವು ಪ್ರಾಣದಲ್ಲಿಯೇ ಲಯವಾಗುವವು. ಆದ್ದರಿಂದ ವಾಯು, ಪ್ರಾಣ - ಇವೆರಡನ್ನೂ ಸಂವರ್ಗವೆಂದು ಉಪಾಸನೆಮಾಡಬೇಕು.

೫-೭. ಹಿಂದಕ್ಕೆ ಶೌನಕ ಕಾಪೇಯ, ಅಭಿಪ್ರತಾರಿ ಕಾಕ್ಷಸೇನಿ - ಎಂಬಿಬ್ಬರು ಊಟಕ್ಕೆ ಕುಳಿತುಕೊಳ್ಳುತ್ತಿರುವಲ್ಲಿ ಈ ಸಂವರ್ಗವಿದ್ಯೆಯನ್ನು ಬಲ್ಲ ಬ್ರಹ್ಮಜ್ಞಾನಿಯೊಬ್ಬನು ಭಿಕ್ಷೆಗೆ ಬಂದನು. ಆಗ ಅವರಿಬ್ಬರೂ ಇವನು ಎಷ್ಟರಮಟ್ಟಿಗೆ ತಿಳಿದಿರುವನೋ ನೋಡೋಣ ಎಂದು ಭಿಕ್ಷೆಯನ್ನು ಹಾಕಿಸಲಿಲ್ಲ. ಆಗ ಆ ಬ್ರಹ್ಮಚಾರಿಯು "ನಾಲ್ವರು ದೇವತೆಗಳನ್ನು ನುಂಗುವ ಒಬ್ಬ ದೇವನಿರುವನು; ಅವನು ಭುವನಕ್ಕೆಲ್ಲ ರಕ್ಷಕನು. ಬಹುಪ್ರಕಾರದಲ್ಲಿರುವ ಆತನನ್ನು ಮರ್ತ್ಯರು ಅರಿಯರು, ಕಾಪೇಯನೆ, ಅಭಿಪ್ರತಾರಿಯೆ, ಅವನಿಗಾಗಿಯೇ ಮಾಡಿಸಿರುವ ಅನ್ನವನ್ನು ನೀವು ಅವನಿಗೆ ಕೊಡಲಿಲ್ಲ!" ಎಂದನು. ಅದನ್ನು ಶೌನಕ ಕಾಪೇಯನು ಮನದಟ್ಟುಮಾಡಿಕೊಂಡು ಹೀಗೆ ಉತ್ತರವಿತ್ತನು; "ದೇವತೆಗಳಿಗೆ ಆತ್ಮನೂ ಪ್ರಜೆಗಳ ಜನಕನೂ ಆಗಿರುವ ಅಭಗ್ನ ದಂಷ್ಟ್ರನಾದ ಭಕ್ಷಕನಾದ ಸೂರಿಯೇ ಅವನು. ಅವನ ಮಹಿಮೆಯು ಅನಂತವು; ಏಕೆಂದರೆ ಅವನು ಅನ್ನವಲ್ಲದ್ದನ್ನೂ ತಿನ್ನುತ್ತಿರುವನು. ಬ್ರಹ್ಮಚಾರಿಯೆ, ನಾವು ಈ ದೇವತೆಯನ್ನು ಚೆನ್ನಾಗಿ ಅರಿತು ಉಪಾಸನೆಮಾಡುತ್ತಿರುವೆವು ಎಂದು ಭಿಕ್ಷವನ್ನು ಬ್ರಹ್ಮಚಾರಿಗೆ ಕೊಡಿಸಿದನು.

೮. ಈ ದೇವತೆಗಳು ಅಧಿದೈವವಾಗಿ ಐದು, ಅಧ್ಯಾತ್ಮವಾಗಿ ಐದು - ಹೀಗೆ ಹತ್ತಾಗಿರುವವರಿಂದ ಇದು ಕೃತವಾಯಿತು. ಹತ್ತು ದಿಕ್ಕುಗಳಲ್ಲಿಯೂ ಇರುವ ಇದು ವಿರಾಟ್ಛಂದಸ್ಸಿನಂತೆ ಅನ್ನವೂ ಕೃತಾಯದಂತೆ ಅನ್ನಾದಿಯೂ ಆಗಿರುತ್ತದೆ. ಇದು ಎಲ್ಲವನ್ನೂ ಒಳಗೊಂಡಿರುವದರಿಂದ ಎಲ್ಲವನ್ನೂ ಕಂಡುಕೊಂಡಿದೆ. ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಇದೆಲ್ಲವೂ ದೃಷ್ಟವಾಗುತ್ತದೆ, ಅವನು ದೀಪ್ತಾಗ್ನಿಯಾದ ಅನ್ನಾದನೂ ಆಗಿರುವನು. ಪ್ರಜಾಪತಿಪ್ರಾಪ್ತಿಯೆಂಬ ಅದೃಷ್ಟಫಲವೂ ಅವನಿಗೆ ಆಗುವದು.

---

# ನಾಲ್ಕನೆಯ ಅಧ್ಯಾಯ – ನಾಲ್ಕನೆಯ ಖಂಡ

(ಷೋಡಶಕಲವಿದ್ಯೆ)

## ಸತ್ಯಕಾಮನು ಹಾರಿದ್ರುಮತನ ಶಿಷ್ಯನಾದದ್ದು

(ಉಪನಿಷತ್ತು)

**ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರಮಾಮನ್ತ್ರ ಯಾಂಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂ ಗೋತ್ರೋ ನ್ವಹಮಸ್ಮೀತಿ ॥ ೧ ॥**

೧. ಸತ್ಯಕಾಮಜಾಬಾಲನು ತಾಯಿಯಾದ ಜಬಾಲೆಯನ್ನು "ಅಮ್ಮ, ಬ್ರಹ್ಮಚರ್ಯೆಯನ್ನು ಮಾಡಬೇಕೆಂದಿರುವೆನು. ನಾನು ಯಾವ ಗೋತ್ರದವನಾಗಿರುವೆನು?" ಎಂದು ಕೇಳಿದನು.

## ಗ್ರಂಥಸಂಬಂಧ

(ಭಾಷ್ಯ)

೩೦೬ ಸರ್ವಂ ವಾಗಾದಿ ಅಗ್ನ್ಯಾದಿ ಚ ಅನ್ನಾನ್ನಾದತ್ವಸಂಸ್ತುತಂ ಜಗತ್ ಏಕೀಕೃತ್ಯ ಷೋಡಶಧಾ ಪ್ರವಿಭಜ್ಯ ತಸ್ಮಿನ್ ಬ್ರಹ್ಮದೃಷ್ಟಿರ್ವಿಧಾತವ್ಯಾ ಇತ್ಯಾರಭ್ಯತೇ । ಶ್ರದ್ಧಾತಪಸೋರ್ಬ್ರಹ್ಮೋಪಾಸನಾಙ್ಗತ್ವಪ್ರದರ್ಶನಾಯ ಆಖ್ಯಾಯಿಕಾ ॥

(ಭಾಷ್ಯಾರ್ಥ)

ವಾಗಾದಿಯಾದ ಮತ್ತು ಅಗ್ನ್ಯಾದಿಯಾದ, ಅನ್ನಾನ್ನಾದವೆಂದು ಹೊಗಳಲಾಗಿರುವ, ಜಗತ್ತೆಲ್ಲವನ್ನೂ ಒಂದುಗೂಡಿಸಿ[1] ಹದಿನಾರು ಪ್ರಕಾರದಿಂದ ವಿಂಗಡಿಸಿ, ಅದರಲ್ಲಿ ಬ್ರಹ್ಮದೃಷ್ಟಿಯನ್ನು ವಿಧಾನಮಾಡಬೇಕೆಂದು (ಈ ಗ್ರಂಥವನ್ನು) ಆರಂಭಿಸಿರುತ್ತದೆ. ಶ್ರದ್ಧಾತಪಸ್ಸುಗಳು ಬ್ರಹ್ಮೋಪಾಸನೆಗೆ ಅಂಗವೆಂಬುದನ್ನು ತಿಳಿಸಿಕೊಡುವದಕ್ಕಾಗಿ ಕಥೆ (ಬಂದಿದೆ).

---

1. 'ಕಾರಣರೂಪದಿಂದ ಒಂದೆಂದು ಭಾವಿಸಿ' ಎಂದು ಟೀಕೆ. ಒಟ್ಟನ್ನು ಬ್ರಹ್ಮವೆಂದು [illegible]ಸಬೇಕು ಎಂದಿಷ್ಟೇ ಭಾಷ್ಯದಲ್ಲಿ ತೋರುತ್ತದೆ.

# ಸತ್ಯಕಾಮನು ಬ್ರಹ್ಮಚರ್ಯಕ್ಕೆ ಮನಸ್ಸುಮಾಡಿದ್ದು

(ಭಾಷ್ಯ)

೩೦೭. ಸತ್ಯಕಾಮೋ ಹ ನಾಮತಃ। ಹಶಬ್ದ ಐತಿಹ್ಯಾರ್ಥಃ। ಜಬಾಲಾಯಾ ಅಪತ್ಯಂ ಜಾಬಾಲಃ ಜಬಾಲಾಂ ಸ್ವಾಂ ಮಾತರಮ್ ಆಮನ್ತ್ರಯಾಂಚಕ್ರೇ ಆಮನ್ತ್ರಿತವಾನ್। ಬ್ರಹ್ಮಚರ್ಯಂ ಸ್ವಾಧ್ಯಾಯಗ್ರಹಣಾಯ ಹೇ ಭವತಿ ವಿವತ್ಸ್ಯಾಮಿ ಆಚಾರ್ಯಕುಲೇ। ಕಿಂಗೋತ್ರೋಽಹಮ್ ? ಕಿಮಸ್ಯ ಮಮ ಗೋತ್ರಂ ಸೋಽಹಂ ಕಿಂಗೋತ್ರೋ ನು ಅಹಮಸ್ಮೀತಿ ॥

(ಭಾಷ್ಯಾರ್ಥ)

ಸತ್ಯಕಾಮನೆಂಬ ಹೆಸರಿನ—ಹಶಬ್ದವು ಹಿಂದೆ (ಹೀಗೆ) ನಡೆಯಿತೆಂದು ತಿಳಿಸುವದಕ್ಕೆ (ಬಂದಿದೆ). ಜಬಾಲೆಯ ಮಗನು ಜಾಬಾಲನು, (ಅವನು) ಜಬಾಲೆ ಎಂಬ ತನ್ನ ತಾಯಿಯನ್ನು (ಹೀಗೆಂದು) ಕೇಳಿದನು, ಕೇಳಿದವನಾದನು. "ಅಮ್ಮ, ಸ್ವಾಧ್ಯಾಯವನ್ನು ಗ್ರಹಿಸುವದಕ್ಕಾಗಿ[1] ಆಚಾರ್ಯರ ಮನೆಯಲ್ಲಿ ಬ್ರಹ್ಮಚಾರಿಯಾಗಿ ಇರಬೇಕೆಂದಿರುವೆನು. ನಾನು ಯಾವ ಗೋತ್ರದವನು ? (ಕಿಂಗೋತ್ರಃ ಎಂಬುದಕ್ಕೆ ಕಿಂ ಗೋತ್ರಮ್ ಅಸ್ಯ ಎಂದು ವಿಗ್ರಹ), ಯಾವ ಗೋತ್ರದವನಾಗಿರುವೆನು ?

(ಉಪನಿಷತ್ತು)

**ಸಾ ಹೈನಮುವಾಚ ನಾಹಮೇತದ್ ವೇದ ತಾತ ಯದ್ಗೋತ್ರಸ್ತ್ವಮಸಿ ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸಿ ಸ ಸತ್ಯಕಾಮ ಏವ ಜಾಬಾಲೋ ಬ್ರುವೀಥಾ ಇತಿ ॥ ೨ ॥**

೨. ಆಕೆಯು ಅವನನ್ನು ಕುರಿತು "ಅಪ್ಪ, ನೀನು ಯಾವ ಗೋತ್ರದವನಾಗಿರುವೆಯೋ ನಾನು ಅದನ್ನರಿಯೆನು, ನಾನು ಬಹಳವಾಗಿ ಪರಿಚರ್ಯೆಯನ್ನು ಮಾಡುವ ಪರಿಚಾರಿಣಿಯಾಗಿದ್ದು ಯೌವನದಲ್ಲಿ ನಿನ್ನನ್ನು ಪಡೆದೆನು. ಆ ನಾನು, ನೀನು ಯಾವ ಗೋತ್ರದವನೋ ಅದನ್ನರಿಯೆ. ಆದರೆ ನಾನು ಜಬಾಲೆ ಎಂಬವಳು, ನೀನು ಸತ್ಯಕಾಮನೆಂಬವನಾಗಿರುವೆ. ಆದ್ದರಿಂದ ಸತ್ಯಕಾಮ ಜಾಬಾಲನೆಂದೇ ಹೇಳಿಕೊ" ಎಂದಳು.

---

1. ವೇದಗ್ರಹಣಕ್ಕಾಗಿ ಎಂದರ್ಥ.

## ತಾಯಿಗೆ ಅವನ ಗೋತ್ರವು ತಿಳಿಯದೆ ಇದ್ದದ್ದು

(ಭಾಷ್ಯ)

೩೦೮. ಏವಂ ಪೃಷ್ಟಾ ಜಬಾಲಾ ಸಾ ಹೈನಂ ಪುತ್ರಮ್ ಉವಾಚ। ನಾಹಮೇತತ್ ತವ ಗೋತ್ರಂ ವೇದ ಹೇ ತಾತ ಯದ್ಗೋತ್ರಸ್ತ್ವಮಸಿ। ಕಸ್ಮಾತ್ ನ ವೇತ್ಸೀತ್ಯುಕ್ತಾ ಆಹ। ಬಹು ಭರ್ತೃಗೃಹೇ ಪರಿಚರ್ಯಾಜಾತಮ್ ಅತಿಥ್ಯಭ್ಯಾಗತಾದಿ ಚರನ್ತೀ ಅಹಂ ಪರಿಚಾರಿಣೀ ಪರಿಚರನ್ತೀತಿ ಪರಿಚರಣ ಶೀಲೈವಾಹಮ್। ಪರಿಚರಣಚಿತ್ತತಯಾ ಗೋತ್ರಾದಿಸ್ಮರಣೇ ಮಮ ಮನೋ ನಾಭೂತ್। ಯೌವನೇ ಚ ತತ್ಕಾಲೇ ತ್ವಾಮ್ ಅಲಭೇ ಲಬ್ಧವತೀ ಅಸ್ಮಿ। ತದೈವ ತೇ ಪಿತಾ ಉಪರತಃ। ಅತೋಽನಾಥಾ ಅಹಮ್। ನಾಹಮೇತತ್ ನ ವೇದ ಯದ್ಗೋತ್ರಸ್ತ್ವಮಸಿ। ಜಬಾಲಾ ತು ನಾಮಾ ಅಹಮಸ್ಮಿ। ಸತ್ಯ ಕಾಮೋ ನಾಮ ತ್ವಮಸಿ। ಸ ತ್ವಂ ಸತ್ಯಕಾಮ ಏವಾಹಂ ಜಾಬಾಲೋಽಸ್ಮಿ ಇತಿ ಆಚಾರ್ಯಾಯ ಬ್ರುವೀಥಾಃ ಯದಿ ಆಚಾರ್ಯೇಣ ಪೃಷ್ಟಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆಂದು ಕೇಳಲು ಜಬಾಲೆಯು ಈ ಮಗನನ್ನು ಕುರಿತು ಇಂತೆಂದಳು . "ಅಪ್ಪ, ನೀನು ಯಾವ ಗೋತ್ರದವನಾಗಿರುವೆಯೆಂಬುದನ್ನು, ನಿನ್ನ ಗೋತ್ರವನ್ನು, ನಾನು ಅರಿಯೆನು ಏತಕ್ಕೆ ಅರಿಯೆ ? ಎಂದರೆ ಹೇಳುತ್ತಾಳೆ. ಗಂಡನ ಮನೆ ಯಲ್ಲಿ ಬಹಳವಾಗಿ ಪರಿಚರ್ಯೆಗಳನ್ನು ಅತಿಥ್ಯಭ್ಯಾಗತಾದಿಗಳ (ಪರಿಚರ್ಯೆ ಗಳನ್ನು) ಮಾಡುವವಳಾಗಿ ನಾನು ಪರಿಚಾರಿಣಿಯಾಗಿ—ಪರಿಚರ್ಯೆಯನ್ನು ಮಾಡುವಳಾದ್ದರಿಂದ ಪರಿಚಾರಿಣಿ ಎನಿಸಿದ್ದವಳಾಗಿ—ಪರಿಚರಣದ ಸ್ವಭಾವವುಳ್ಳ ವಳೇ ಆಗಿದ್ದೆನಾದ್ದರಿಂದ ಪರಿಚರಣದಲ್ಲಿಯೇ ಚಿತ್ತವನ್ನಿಟ್ಟಿದ್ದದ್ದರಿಂದ ಗೋತ್ರಾದಿ ಗಳನ್ನು ನೆನಪಿಡುವದರಲ್ಲಿ ನನ್ನ ಮನಸ್ಸು ಇರಲಿಲ್ಲ ಆ ಮತ್ತು ಕಾಲದಲ್ಲಿ ಯೌವನ ದಲ್ಲಿ ನಿನ್ನನ್ನು ಪಡೆದುಕೊಂಡೆನು, ಪಡೆದುಕೊಂಡವಳಾಗಿರುವೆನು, ಆಗಲೇ ನಿಮ್ಮ ತಂದೆ ಗತಿಸಿದನು. ಆದ್ದರಿಂದ ನಾನು ಅನಾಥಳು , ಇಂಥ ನಾನು, ನೀನು ಯಾವ ಗೋತ್ರದವನೋ ಅದನ್ನರಿಯೆ.

ಆದರೆ ನಾನು ಜಬಾಲೆ ಎಂಬ ಹೆಸರಿನವಳಾಗಿರುವೆನು, ನೀನು ಸತ್ಯಕಾಮ ನೆಂಬ ಹೆಸರಿನವನಾಗಿರುವೆ. ಆ ನೀನು ಸತ್ಯಕಾಮ ಜಾಬಾಲನೇ ಆಗಿರುವೆನು ಎಂದೇ ಆಚಾರ್ಯನಿಗೆ ಹೇಳು. ಆಚಾರ್ಯನು (ನಿನ್ನನ್ನು) ಕೇಳಿದರೆ (ಹೀಗೆಂದೇ ಹೇಳು) ಎಂದು ಅಭಿಪ್ರಾಯ.

(ಉಪನಿಷತ್ತು)

**ಸ ಹ ಹಾರಿದ್ರುಮತಂ ಗೌತಮಮೇತ್ಯೋವಾಚ ಬ್ರಹ್ಮಚರ್ಯಂ ಭಗವತಿ ವತ್ಸ್ಯಾಮ್ಯುಪೇಯಾಂ ಭಗವನ್ತಮಿತಿ ॥ ೩ ॥**

**ತೆಗ್ಂ ಹೋವಾಚ ಕಿಂಗೋತ್ರೋ ನು ಸೋಮ್ಯಾಸೀತಿ ಸ ಹೋವಾಚ ನಾಹಮೇತದ್ವೇದ ಭೋ ಯದ್ಗೋತ್ರೋಽಹ ಮಸ್ಮ್ಯಪೃಚ್ಛಂ ಮಾತರಗ್ಂ ಸಾ ಮಾ ಪ್ರತ್ಯಬ್ರವೀದ್ ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸೀತಿ ಸೋಽಹಗ್ಂ ಸತ್ಯಕಾಮೋ ಜಾಬಾಲೋಽಸ್ಮಿ ಭೋ ಇತಿ ॥ ೪ ॥**

೩. ಅವನು ಹಾರಿದ್ರುಮತಗೌತಮನ ಬಳಿಗೆ ಬಂದು ಇಂತೆಂದನು : ಭಗವಂತರಾದ (ತಮ್ಮಲ್ಲಿ) ಬ್ರಹ್ಮಚರ್ಯವಾಸವನ್ನು ಮಾಡುವೆನು. ಭಗವಂತರಾದ ತಮ್ಮನ್ನು ಬಳಿಸಾರುವೆನು !

೪. ಅವನನ್ನು ಕುರಿತು 'ಸೋಮ್ಯ, ಯಾವ ಗೋತ್ರದವನಾಗಿರುವೆಯೊ !' ಎಂದನು. ಅವನಿಂತೆಂದನು : 'ಸ್ವಾಮಿ, ನಾನು ಯಾವ ಗೋತ್ರದವನೆಂಬುದನ್ನು ನಾನರಿಯೆ. ತಾಯಿಯನ್ನು ಕೇಳಿದೆನು. ಆಕೆಯು ನನಗ ಹೀಗೆಂದು ಉತ್ತರವಿತ್ತಳು : 'ಬಹುವಾಗಿ ಪರಿಚರ್ಯೆಯನ್ನು ಮಾಡುವ ಪರಿಚಾರಿಣಿಯಾಗಿದ್ದು ಯೌವನದಲ್ಲಿ ನಿನ್ನನ್ನು ಪಡೆದುಕೊಂಡೆನು. ಆ ನಾನು, ನೀನು ಯಾವ ಗೋತ್ರದವನಾಗಿರುವೆಯೋ ಅರಿಯೆ. ನಾನೇನೋ ಜಬಾಲೆ ಎಂಬ ಹೆಸರಿನವಳಾಗಿರುವೆನು, ನೀನು ಸತ್ಯಕಾಮನೆಂಬ ಹೆಸರಿನವನಾಗಿರುವೆ.' ಆದ್ದರಿಂದ ಸ್ವಾಮಿ, ನಾನು ಸತ್ಯಕಾಮಜಾಬಾಲನಾಗಿರುವೆನು.'

## ಸತ್ಯಕಾಮನು ಹಾರಿದ್ರುಮತನ ಬಳಿಗೆ ಬಂದದ್ದು

(ಭಾಷ್ಯ)

೩೦೯ ಸ ಹ ಸತ್ಯಕಾಮಃ ಹಾರಿದ್ರುಮತಂ ಹರಿದ್ರುಮತೋಽಪತ್ಯಂ ಹಾರಿದ್ರುಮತಂ ಗೌತಮಂ ಗೋತ್ರತಃ ಏತ್ಯ ಗತ್ವಾ ಉವಾಚ। ಬ್ರಹ್ಮಚರ್ಯಂ ಭಗವತಿ ಪೂಜಾವತಿ ತ್ವಯಿ ವತ್ಸ್ಯಾಮಿ। ಅತಃ ಉಪೇಯಾಮ್ ಉಪಗಚ್ಛೇಯಂ ಶಿಷ್ಯತಯಾ ಭಗವನ್ತಮ್ ಇತ್ಯುಕ್ತವನ್ತಂ ತಂ ಹ ಉವಾಚ ಗೌತಮಃ। ಕಿಂ ಗೋತ್ರಃ ನು ಸೋಮ್ಯ[1] ಅಸೀತಿ। ವಿಜ್ಞಾತಕುಲಗೋತ್ರಃ ಶಿಷ್ಯ ಉಪನೇತವ್ಯಃ। ಇತಿ ಪೃಷ್ಟಃ ಪ್ರತ್ಯಾಹ ಸತ್ಯಕಾಮಃ। ಸ ಹ ಉವಾಚ। ನಾಹಮೇತದ್ ವೇದ

1. ಸೌಮ್ಯ ಎಂಬ ಪಾಠಕ್ಕಿಂತ ಇದು ಹೆಚ್ಚು ಕೋಶಗಳಲ್ಲಿರುವ ಪಾಠ.

ಭೋಃ ಯದ್ಗೋತ್ರೋಽಹಮಸ್ಮಿ । ಕಿಂ ತು ಅಪೃಚ್ಛಂ ಪೃಷ್ಟವಾನಸ್ಮಿ ಮಾತರಮ್ । ಸಾ ಮಯಾ ಪೃಷ್ಟಾ ಮಾಂ ಪ್ರತ್ಯಬ್ರವೀತ್ ಮಾತಾ ಬಹ್ವಹಂ ಚರನ್ತೀ ಇತ್ಯಾದಿಪೂರ್ವವತ್ । ತಸ್ಯಾ ಅಹಂ ವಚಃ ಸ್ಮರಾಮಿ । ಸೋಽಹಂ ಸತ್ಯಕಾಮೋ ಜಾಬಾಲೋಽಸ್ಮಿ ಭೋಃ ಇತಿ ॥

(ಭಾಷ್ಯಾರ್ಥ)

ಆ ಸತ್ಯಕಾಮನು ಹಾರಿದ್ರುಮತನನ್ನು, ಹರಿದ್ರುಮತನ ಮಗನಾದ ಹಾರಿದ್ರುಮತನನ್ನು, ಗೋತ್ರದಿಂದ ಗೌತಮ(ನೆನಿಸಿದ್ದ ಹಾರಿದ್ರುಮತನನ್ನು) ಸೇರಿ, (ಅವನ ಬಳಿಗೆ) ಬಂದು, ಇಂತೆಂದನು. ಭಗವಂತರಾದ ಪೂಜ್ಯರಾದ ತಮ್ಮಲ್ಲಿ ಬ್ರಹ್ಮಚರ್ಯಕ್ಕಾಗಿ ವಾಸಮಾಡಿಕೊಂಡಿರುವೆನು: ಆದ್ದರಿಂದ ಪೂಜ್ಯರಾದ ತಮ್ಮನ್ನು ಶಿಷ್ಯನಾಗಿ ಬಳಿಸಾರುವೆನು.

ಹೀಗೆನ್ನಲು ಅವನನ್ನು ಕುರಿತು ಗೌತಮನಿಂತೆಂದನು, 'ನೀನು ಯಾವ ಗೋತ್ರದವನಪ್ಪ ? ಕುಲಗೋತ್ರಗಳನ್ನು ಅರಿತುಕೊಂಡು ಶಿಷ್ಯನಿಗೆ ಉಪನಯನ ಮಾಡಿಸಬೇಕು[1]. ಹೀಗೆಂದು ಕೇಳಲು ಸತ್ಯಕಾಮನು (ಹೀಗೆಂದು) ಉತ್ತರವಿತ್ತನು. ಅವನು ಹೇಳಿದನೇನೆಂದರೆ "ಸ್ವಾಮಿ, ನಾನು ಯಾವ ಗೋತ್ರದವನಾಗಿರುವೆನೋ ಅದನ್ನು ನಾನರಿಯೆ. ಆದರೆ ತಾಯಿಯನ್ನು ಕೇಳಿದೆನು. ನಾನು ಕೇಳಿದ್ದಕ್ಕೆ ಆ (ತಾಯಿ) ಹೀಗೆಂದು ಉತ್ತರವಿತ್ತಳು. 'ಬಹುವಾಗಿ (ಪರಿ)ಚರ್ಯೆಯನ್ನು ಮಾಡುತ್ತಿದ್ದು' ಎಂದುಮುಂತಾಗಿರುವ (ಗ್ರಂಥಕ್ಕೆ) ಹಿಂದಿನಂತೆಯೇ (ವ್ಯಾಖ್ಯಾನ). "ಆಕೆಯ ಮಾತು ನನಗೆ ನೆನಪಿದೆ. ಆ ನಾನು ಸತ್ಯಕಾಮಜಾಬಾಲನಾಗಿರುತ್ತೇನೆ, ಸ್ವಾಮಿ !"

## ಸತ್ಯಕಾಮನ ಗೋಸೇವೆ

(ಉಪನಿಷತ್ತು)

**ತಗ್ಂ ಹೋವಾಚ ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಗ್ಂ ಸೋಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾ ಇತಿ ತಮುಪನೀಯ ಕೃಶಾನಾಮಬಲಾನಾಂ ಚತುಃಶತಾ ಗಾ ನಿರಾಕೃತ್ಯೋವಾಚೇಮಾಃ ಸೋಮ್ಯಾನುಸಂವ್ರಜೇತಿ ತಾ ಅಭಿಪ್ರಸ್ಥಾಪಯನ್ನುವಾಚ ನಾಸಹಸ್ರೇಣಾವರ್ತೇಯೇತಿ ಸ ಹ ವರ್ಷಗಣಂ ಪ್ರೋವಾಸ ತಾ ಯದಾ ಸಹಸ್ರಗ್ಂ ಸಂಪೇದುಃ ॥ ೫ ॥**

೫. (ಗೌತಮನು) ಅವನನ್ನು ಕುರಿತು 'ಅಬ್ರಾಹ್ಮಣನು ಇದನ್ನು ಹೇಳಲಾರನು. ಸೋಮ್ಯ, ಸಮಿತ್ತನ್ನು ತೆಗೆದುಕೊಂಡು

1. ಈ ಅಭಿಪ್ರಾಯವನ್ನು ಗೌತಮನ ಪ್ರಶ್ನೆಯು ಸೂಚಿಸುತ್ತದೆ ಎಂದು ಭಾವ.

ಬಾ! ನಿನಗೆ ಉಪನಯನವನ್ನು ಮಾಡಿಸುವೆನು. (ನೀನು) ಸತ್ಯವನ್ನು ಬಿಟ್ಟಿರುವದಿಲ್ಲ' ಎಂದನು. ಅವನಿಗೆ ಉಪನಯನವನ್ನು ಮಾಡಿಸಿ ಕೃಶವಾಗಿ ಬಲವಿಲ್ಲದಿದ್ದ ನಾನೂರು ಗೋಗಳನ್ನು ತೆಗೆದುಕೊಟ್ಟು 'ಸೋಮ್ಯ, ಇವುಗಳನ್ನು ಹಿಂಬಾಲಿಸು!' ಎಂದನು. ಅವುಗಳನು ಹೊರಡಿಸಿಕೊಂಡು ಹೋಗುವಾಗ (ಸತ್ಯಕಾಮನು) 'ಸಹಸ್ರವಿಲ್ಲದೆ ಹಿಂತಿರುಗೆನು' ಎಂದನು. ಅವನು ವರ್ಷಗಟ್ಟಲೆಯಾಗಿ ಹೊರ ಗಿದ್ದನು. ಅವು ಯಾವಾಗ ಸಾವಿರವಾದವೋ (ಆಗ)-

## ಗುರುಗಳ ಗೋಗಳನ್ನು ಶ್ರದ್ಧೆಯಿಂದ ಕಾಯ್ದುದ್ದು

(ಭಾಷ್ಯ)

೩೧೦. ತಂ ಹ ಉವಾಚ ಗೌತಮಃ। ನೈತದ್ ವಚಃ ಅಬ್ರಾಹ್ಮಣೋ (ವಿವಕ್ತುಮ್)[1] ವಿಶೇಷೇಣ ವಕ್ತುಮ್ ಅರ್ಹತಿ ಆರ್ಜವಾರ್ಥಸಂಯುಕ್ತಮ್। ಋಜವೋ ಹಿ ಬ್ರಾಹ್ಮಣಾ ನೇತರೇ ಸ್ವಭಾವತಃ। ಯಸ್ಮಾತ್ ನ ಸತ್ಯಾತ್ ಬ್ರಾಹ್ಮಣಜಾತಿಧರ್ಮಾತ್ ಅಗಾಃ ನಾಪೇತವಾನಸಿ। ಅತಃ ಬ್ರಾಹ್ಮಣಂ ತ್ವಾಮ್ ಉಪನೇಷ್ಯೇ। ಅತಃ ಸಂಸ್ಕಾರಾರ್ಥಂ ಹೋಮಾಯ ಸಮಿಧಂ ಸೋಮ್ಯ ಆಹರ। ಇತ್ಯುಕ್ತ್ವಾ ತಮ್ ಉಪನೀಯ ಕೃಶಾನಾಮ್ ಅಬಲಾನಾಂ ಗೋಯೂಥಾತ್ ನಿರಾಕೃತ್ಯ ಅಪಕೃಷ್ಯ[2] ಚತುಃಶತಾ ಚತ್ವಾರಿ ಶತಾನಿ ಗವಾಮ್, ಉವಾಚ। ಇಮಾ ಗಾಃ ಸೋಮ್ಯ ಅನುಸಂವ್ರಜ ಅನುಗಚ್ಛ। ಇತ್ಯುಕ್ತಃ ತಾ ಅರಣ್ಯಂ ಪ್ರತ್ಯಭಿಪ್ರಸ್ಥಾಪಯನ್ ಉವಾಚ। ನಾಸಹಸ್ರೇಣ ಅಪೂರ್ಣೇನ ಸಹಸ್ರೇಣ ನಾವರ್ತೇಯ ನ ಪ್ರತ್ಯಾಗಚ್ಛೇಯಮ್। ಸ ಏವಮುಕ್ತ್ವಾ ಗಾಃ ಅರಣ್ಯಂ ತೃಣೋದಕಬಹುಲಂ ದ್ವಂದ್ವರಹಿತಂ ಪ್ರವೇಶ್ಯ ಸಹ ವರ್ಷಗಣಂ ದೀರ್ಘಂ ಪ್ರೋವಾಸ ಪ್ರೋಷಿತವಾನ್। ತಾಃ ಸಮ್ಯಗ್ ಗಾವಃ ರಕ್ಷಿತಾಃ ಯದಾ ಯಸ್ಮಿನ್ ಕಾಲೇ ಸಹಸ್ರಂ ಸಂಪೇದುಃ ಸಂಪನ್ನಾಃ ಬಭೂವುಃ॥

(ಭಾಷ್ಯಾರ್ಥ)

ಅವನನ್ನು ಕುರಿತು ಗೌತಮನಿಂತೆಂದನು: ಈ ಋಜುವಾದ ಅರ್ಥವುಳ್ಳ ಮಾತನ್ನು ಬ್ರಾಹ್ಮಣನಲ್ಲದವನು (ವಿವಕ್ತುಮರ್ಹತಿ) ವಿಶೇಷವಾಗಿ ಹೇಳಲಾರನು. ಬ್ರಾಹ್ಮಣರಲ್ಲವೆ, ಸ್ವಭಾವದಿಂದಲೇ ಸರಳರಾಗಿರುತ್ತಾರೆ, ಮಿಕ್ಕವರಲ್ಲ. (ನೀನು) ಬ್ರಾಹ್ಮಣಜಾತಿಯ ಧರ್ಮವಾದ ಸತ್ಯವನ್ನು ಬಿಟ್ಟಿಲ್ಲ, (ಬಿಟ್ಟು) ಚಲಿಸಿದವನಾ

1. ಈ ಮೂಲದ ಮಾತು ಇಲ್ಲಿ ಬಿಟ್ಟುಹೋಗಿದೆ.
2. 'ಅಪಾಕೃತ್ಯ' ಎಂದು ಪಾಠಾಂತರ.

ಗಲಿಲ್ಲ; ಆದ್ದರಿಂದ ಬ್ರಾಹ್ಮಣನಾದ ನಿನಗೆ ಉಪನಯನವನ್ನು ಮಾಡಿಸುವೆನು. ಆದ್ದರಿಂದ ಸೋಮ್ಯನೆ, ಸಂಸ್ಕಾರಾರ್ಥವಾದ ಹೋಮಕ್ಕಾಗಿ ಸಮಿತ್ತನ್ನು ತೆಗೆದುಕೊಂಡು ಬಾ- ಎಂದು ಅವನಿಗೆ ಉಪನಯನವನ್ನು ಮಾಡಿಸಿ[1] ಗೋಗಳ ಹಿಂಡಿನಿಂದ ಬಡಕಲಾಗಿ ದುರ್ಬಲವಾಗಿದ್ದ ನಾನೂರು ನಾಲ್ಕುನೂರು ಗೋಗಳನ್ನು ಆರಿಸಿ, ಈಚೆಗೆ ತೆಗೆಯಿಸಿ[2] 'ಸೋಮ್ಯ, ಈ ಗೋಗಳನ್ನು ಹಿಂಬಾಲಿಸು, ಅನುಸರಿಸಿಕೊಂಡು ಹೋಗು!' ಎಂದನು

ಹೀಗೆನ್ನಲು ಅವನ್ನು ಅರಣ್ಯಕ್ಕೆ ಹೊರಡಿಸಿಕೊಂಡು ಹೊರಟವನು 'ಸಹಸ್ರವಿಲ್ಲದೆ ಸಾವಿರವನ್ನು ಪೂರ್ತಿಗೊಳಿಸಿಕೊಳ್ಳದೆ ಹಿಂತಿರುಗೆನು, ಹಿಂತಿರುಗಿ ಬರಲಾರೆನು' ಎಂದನು. ಅವನು ಹೀಗೆಂದು ನುಡಿದು ಗೋಗಳನ್ನು ಹುಲ್ಲೂ ನೀರೂ ಹೆಚ್ಚಾಗಿದ್ದು (ಶೀತೋಷ್ಣಾದಿ)ದ್ವಂದ್ವಗಳಿಲ್ಲದ ಕಾಡಿಗೆ ಹೊಡೆದುಕೊಂಡು ಹೋಗಿ ಅವನು ವ ರ್ಷ ಗ ಟ್ಟ ಲೆ ಯಾ ಗಿ ದೀರ್ಘ(ಕಾಲ) ಹೊರಗೆ ಇದ್ದನು, (ಅಲ್ಲಿಯೇ) ಇದ್ದುಬಿಟ್ಟನು. ಚೆನ್ನಾಗಿ ಕಾಪಾಡಿದ ಆ ಗೋಗಳು ಯಾವಾಗ ಯಾವ ಕಾಲದಲ್ಲಿ ಸಹಸ್ರವಾದವೋ (ಸಾವಿರ ಗೋಗ)ಳಾದವೋ (ಆಗ)-

---

# ನಾಲ್ಕನೆಯ ಅಧ್ಯಾಯ – ಐದನೆಯ ಖಂಡ

(ಷೋಡಶಕಲವಿದ್ಯೆ)

## ಸತ್ಯಕಾಮನಿಗೆ ಎತ್ತಿನ ಉಪದೇಶ

(ಉಪನಿಷತ್ತು)

**ಅಥ ಹೈನಮೃಷಭೋಽಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ಪ್ರಾಪ್ತಾಃ ಸೋಮ್ಯ ಸಹಸ್ರಗ್ಂ ಸ್ಮಃ ಪ್ರಾಪಯ ನ ಆಚಾರ್ಯಕುಲಮ್ ॥೧॥**

೧. ಆಗ ಎತ್ತು ಇವನನ್ನು 'ಸತ್ಯಕಾಮಾ೩' ಎಂದು (ಕೂಗಿ) ಕರೆಯಿತು. ಅದಕ್ಕೆ ಪ್ರತಿಯಾಗಿ (ಇವನು) 'ಭಗವಂತನೆ', ಎಂದನು.

---

1. ಶೂದ್ರನಲ್ಲವೆಂದು ನಿರ್ಧರಿಸಿದಮೇಲೆಯೇ ಉಪನಯನವನ್ನು ಮಾಡಿಸಿದನೆಂದು ಹೇಳಿರುವದರಿಂದ ವೈದಿಕಬ್ರಹ್ಮವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿಲ್ಲವೆಂದಾಯಿತು ಎಂದು ಸೂ ಭಾ. ೧-೩-೩೭ (ಭಾ. ಭಾ ೩೧೧)ದಲ್ಲಿ ನಿರ್ಣಯಿಸಿದೆ.

2. ಹಟ್ಟಿಯಿಂದ ಹೊರಕ್ಕೆ ಹೊಡೆಯಿಸಿ ಎಂದರ್ಥ.

'ಸೋಮ್ಯ, ಸಾವಿರವನ್ನು ಮುಟ್ಟಿರುತ್ತೇವೆ; ಆಚಾರ್ಯರ ಕುಲಕ್ಕೆ ನಮ್ಮನ್ನು ಸೇರಿಸು!'

## ಗೋಗಳು ಸಾವಿರವಾದದ್ದು

(ಭಾಷ್ಯ)

೩೧೧. ತಮೇತಂ ಶ್ರದ್ಧಾತಪೋಭ್ಯಾಂ ಸಿದ್ಧಂ ವಾಯುದೇವತಾ ದಿಕ್ಸಂಬನ್ಧಿನೀ ತುಷ್ಟಾ ಸತೀ ಋಷಭಮನುಪ್ರವಿಶ್ಯ ಋಷಭಭಾವಮಾಪನ್ನಾ ಅನುಗ್ರಹಾಯ । ಅಥ ಹ ಏನಮ್ ಋಷಭಃ ಅಭ್ಯುವಾದ ಅಭ್ಯುಕ್ತವಾನ್ ಸತ್ಯಕಾಮ೩ ಇತಿ ಸಂಬೋಧ್ಯ । ತಮ್ ಅಸೌ ಸತ್ಯಕಾಮೋ ಭಗವಃ ಇತಿ ಹ ಪ್ರತಿಶುಶ್ರಾವ ಪ್ರತಿವಚನಂ ದದೌ । ಪ್ರಾಪ್ತಾಃ ಸೋಮ್ಯ ಸಹಸ್ರಂ ಸ್ಮಃ । ಪೂರ್ಣಾ ತವ ಪ್ರತಿಜ್ಞಾ । ಅತಃ ಪ್ರಾಪಯ ನಃ ಅಸ್ಮಾನ್ ಆಚಾರ್ಯಕುಲಮ್ ॥

(ಭಾಷ್ಯಾರ್ಥ)

(ಹೀಗೆ) ಶ್ರದ್ಧಾತಪಸ್ಸುಗಳಿಂದ ಸಿದ್ಧನಾಗಿದ್ದ ಆ ಇವನನ್ನು ಕುರಿತು ದಿಕ್ಸಂಬಂಧಿಯಾದ ವಾಯುದೇವತೆಯು ತೃಪ್ತವಾಗಿ (ಇವನನ್ನು) ಅನುಗ್ರಹಿಸುವದಕ್ಕಾಗಿ ಎತ್ತಿನೊಳಗೆ ಹೊಕ್ಕು ಎತ್ತಾಯಿತು.

ಆಗ ಇವನನ್ನು ಕುರಿತು ಎತ್ತು 'ಸತ್ಯಕಾಮಾ೩' ಎಂದು (ಕೂಗಿ) ಕರೆದು ಇಂತೆಂದಿತು, ಹೀಗೆಂದು ನುಡಿಯಿತು. ಅದಕ್ಕೆ ಪ್ರತಿಯಾಗಿ ಈ ಸತ್ಯಕಾಮನು 'ಭಗವಂತನೆ!' ಎಂದನು, ಪ್ರತ್ಯುತ್ತರವನ್ನು ಕೊಟ್ಟನು ಸೋಮ್ಯನೆ, ಸಾವಿರವನ್ನು ಮುಟ್ಟಿರುತ್ತೇವೆ, ನಿನ್ನ ಪ್ರತಿಜ್ಞೆಯು ಪೂರ್ಣವಾಯಿತು. ಆದ್ದರಿಂದ (ನಃ=ಅಸ್ಮಾನ್) ನಮ್ಮಗಳನ್ನು ಆಚಾರ್ಯರ ಮನೆಸೇರಿಸು! (ಎಂದಿತು).

(ಉಪನಿಷತ್ತು)

**ಬ್ರಹ್ಮಣಶ್ಚ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಚೀ ದಿಕ್ಕಲಾ ಪ್ರತೀಚೀ ದಿಕ್ಕಲಾ ದಕ್ಷಿಣಾ ದಿಕ್ಕಲೋದೀಚೀ ದಿಕ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ನಾಮ ॥ ೨ ॥**

೨. 'ನಿನಗೆ ಬ್ರಹ್ಮದ (ಒಂದೆ) ಪಾದವನ್ನು ಹೇಳಿಕೊಡುವೆನು', 'ಪೂಜ್ಯರು ನನಗೆ ಹೇಳಿಕೊಡಬೇಕು!' ಅವನಿಗೆ ಹೇಳಿತೇನೆಂದರೆ : 'ಪೂರ್ವದಿಕ್ಕು (ಒಂದು) ಕಲೆ, ಪಶ್ಚಿಮದಿಕ್ಕು (ಒಂದು) ಕಲೆ, ದಕ್ಷಿಣದಿಕ್ಕು (ಒಂದು) ಕಲೆ, ಉತ್ತರದಿಕ್ಕು (ಒಂದು) ಕಲೆ. ಸೋಮ್ಯ, ಇದೇ ಬ್ರಹ್ಮದ ಪ್ರಕಾಶವಾನ್ ಎಂಬ ಚತುಷ್ಕಲಪಾದವು.

## ಬ್ರಹ್ಮದ ಮೊದಲನೆಯ ಪಾದ

(ಭಾಷ್ಯ)

೩೧೨. ಕಿಂ ಚ ಅಹಂ ಬ್ರಹ್ಮಣಃ ಪರಸ್ಯ ತೇ ತುಭ್ಯಂ ಪಾದಂ ಬ್ರವಾಣಿ ಕಥಯಾನಿ। ಇತ್ಯುಕ್ತಃ ಪ್ರತ್ಯುವಾಚ। ಬ್ರವೀತು ಕಥಯತು ಮೇ ಮಹ್ಯಂ ಭಗವಾನ್। ಇತ್ಯುಕ್ತಃ ಋಷಭಃ ತಸ್ಮೈ ಸತ್ಯಕಾಮಾಯ ಹ ಉವಾಚ। ಪ್ರಾಚೀ ದಿಕ್ ಕಲಾ ಬ್ರಹ್ಮಣಃ ಪಾದಸ್ಯ ಚತುರ್ಥೋ ಭಾಗಃ। ತಥಾ ಪ್ರತೀಚೀ ದಿಕ್ ಕಲಾ, ದಕ್ಷಿಣಾ ದಿಕ್ ಕಲಾ, ಉದೀಚೀ ದಿಕ್ ಕಲಾ । ಏಷ ವೈ ಸೋಮ್ಯ ಬ್ರಹ್ಮಣಃ ಪಾದಃ ಚತುಷ್ಕಲಃ ಚತಸ್ರಃ ಕಲಾ ಅವಯವಾ ಯಸ್ಯ ಸೋಽಯಂ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ ನಾಮ । ಪ್ರಕಾಶವಾನ್ ಇತ್ಯೇವಂ[1] ನಾಮ ಅಭಿಧಾನಂ ಯಸ್ಯ। ತಥಾ ಉತ್ತರೇಽಪಿ ಪಾದಾಸ್ತ್ರಯಃ ಚತುಷ್ಕಲಾ ಬ್ರಹ್ಮಣಃ ॥

(ಭಾಷ್ಯಾರ್ಥ)

ಮತ್ತು ಪರಬ್ರಹ್ಮದ[2] (ಒಂದು) ಪಾದವನ್ನು ನಿನಗೆ ಹೇಳಿಕೊಡುವೆನು, ತಿಳಿಸಿಕೊಡುವೆನು ಹೀಗೆನ್ನಲು (ಸತ್ಯಕಾಮನು) ಪ್ರತ್ಯುತ್ತರವಿತ್ತನು : '(ಮೇ= ಮಹ್ಯಂ) ನನಗೆ ಪುಜ್ಯರಾದ (ತಾವು) ಹೇಳಿಕೊಡಬೇಕು, ತಿಳಿಸಿಕೊಡಬೇಕು !' ಹೀಗೆನ್ನಲು ಎತ್ತು ಆ ಸತ್ಯಕಾಮನಿಗೆ ಇಂತೆಂದಿತು. ಪೂರ್ವದಿಕ್ಕು (ಒಂದು) ಕಲೆ.[3] ಬ್ರಹ್ಮದ (ಈ) ಪಾದದ ನಾಲ್ಕನೆಯ ಭಾಗವು. ಹೀಗೆಯೇ ಪಶ್ಚಿಮದಿಕ್ಕು ಒಂದು ಕಲೆ, ದಕ್ಷಿಣದಿಕ್ಕು (ಒಂದು) ಕಲೆ, ಉತ್ತರದಿಕ್ಕು (ಒಂದು) ಕಲೆ. ಸೋಮ್ಯ, ಇದೇ ಚತುಷ್ಕಲವಾದ—ನಾಲ್ಕು ಕಲೆಗಳು, ಅವಯವಗಳು, ಇದಕ್ಕೆ ಇರುವದರಿಂದ ಚತುಷ್ಕಲ(ವೆನಿಸಿರುವ)-ಬ್ರಹ್ಮದ ಪಾದವು, ಪ್ರಕಾಶವಾನ್ ಎಂಬ ಹೆಸರಿನ (ಪಾದವು), ಪ್ರಕಾಶವಾನ್ ಎಂಬ[4] (ನಾಮ=ಅಭಿಧಾನವು) ಇದಕ್ಕೆ ಇರುವದು. ಹೀಗೆಯೇ ಬ್ರಹ್ಮದ ಮುಂದಿನ ಮೂರು ಪಾದಗಳೂ ಚತುಷ್ಕಲವಾಗಿರುತ್ತವೆ.

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ ಪ್ರಕಾಶವಾನಸ್ಮಿಲ್ಲೋಕೇ ಭವತಿ**

---

1. 'ಏವ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಪರಬ್ರಹ್ಮವೇ ಷೋಡಶಕಲವೆಂದು ಉಪದಿಷ್ಟವಾಗಿರುವ ಉಪಾಸ್ಯಬ್ರಹ್ಮವೆಂಬುವನ್ನು ಈ ವಿಶೇಷಣವು ತಿಳಿಸುತ್ತದೆ

3. ಹದಿನಾರನೆಯ ಅಂಶವು.

4. 'ಪ್ರಕಾಶವಾನ್ ಇತ್ಯೇವ' ಎಂಬ ಅಚ್ಚಿನ ಪಾಠಕ್ಕೆ ಪ್ರಕಾಶವಾನ್ ಎಂದೇ ಎಂದು ಅರ್ಥ ; ಅವಧಾರಣೆಯು ಬೇಕಿಲ್ಲದ್ದರಿಂದ ಏವಂ (= ಎಂಬ) ಎಂದು ತಿದ್ದಿಕೊಂಡಿದೇವೆ.

**ಪ್ರಕಾಶವತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಗ್‌ಂಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯು ಪಾಸ್ತೇ ॥ ೩ ॥**

೩. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಹೀಗೆಂದ ರಿತು ಪ್ರಕಾಶವುಳ್ಳದ್ದು ಎಂದು ಉಪಾಸನೆಮಾಡುವನೋ ಅವನು ಈ ಲೋಕದಲ್ಲಿ ಪ್ರಕಾಶವುಳ್ಳವನಾಗಿರುವನು. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಹೀಗೆಂದರಿತು ಪ್ರಕಾಶವುಳ್ಳದ್ದೆಂದು ಉಪಾಸನೆಮಾಡುವನೋ (ಅವನು) ಪ್ರಕಾಶವುಳ್ಳ ಲೋಕಗಳನ್ನು ಗೆದ್ದುಕೊಳ್ಳುವನು.

## ಬ್ರಹ್ಮದ ಮೊದಲನೆಯ ಪಾದದ ಉಪಾಸನೆಯ ಫಲ

(ಭಾಷ್ಯ)

೩೧೩. ಸ ಯಃ ಕಶ್ಚಿತ್ ಏವಂ ಯಥೋಕ್ತಮ್ ಏವಂ ಬ್ರಹ್ಮಣಃ ಚತುಷ್ಕಲಂ ಪಾದಂ (ಏವಂ)[1] ವಿದ್ವಾನ್ ಪ್ರಕಾಶವಾನ್ ಇತ್ಯನೇನ ಗುಣೇನ ವಿಶಿಷ್ಟಮ್ ಉಪಾಸ್ತೇ, ತಸ್ಯೇದಂ ಫಲಮ್। ಪ್ರಕಾಶವಾನ್ ಅಸ್ಮಿನ್ ಲೋಕೇ ಭವತಿ। ಪ್ರಖ್ಯಾತೋ ಭವತಿ ಇತ್ಯರ್ಥಃ। ತಥಾ ಅದೃಷ್ಟಂ ಫಲಮ್। ಪ್ರಕಾಶ ವತಃ ಹ ಲೋಕಾನ್ ದೇವಾದಿಸಂಬನ್ಧಿನಃ ಮೃತಃ ಸನ್ ಜಯತಿ ಪ್ರಾಪ್ನೋತಿ। ಯ ಏತಮೇವಂ ವಿದ್ವಾನ್ ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನ್ ಇತ್ಯುಪಾಸ್ತೇ ॥

(ಭಾಷ್ಯಾರ್ಥ)

ಯಾವನೊಬ್ಬನು ಮೇಲೆ ಹೇಳಿರುವ ಈ ಬ್ರಹ್ಮದ ಚತುಷ್ಕಲಪಾದವನ್ನು ಹೀಗೆಂದು ಅರಿತು ಪ್ರಕಾಶವುಳ್ಳದ್ದು ಎಂಬೀ ಗುಣದಿಂದ ಕೂಡಿದ್ದೆಂದು ಉಪಾಸನೆ ಮಾಡುತ್ತಾನೋ ಅವನಿಗೆ ಇದು (ದೃಷ್ಟ)ಫಲವು : ಅವನು ಈ ಲೋಕದಲ್ಲಿ ಪ್ರಕಾಶವುಳ್ಳವನಾಗಿರುತ್ತಾನೆ, ಪ್ರಖ್ಯಾತನಾಗಿರುತ್ತಾನೆ ಎಂದರ್ಥ. ಇದರಂತೆ (ಈ) ಅದೃಷ್ಟಫಲವೂ (ಆಗುತ್ತದೆ). ಯಾವನು ಈ ಬ್ರಹ್ಮದ ಚತುಷ್ಕಲಪಾದ ವನ್ನು ಹೀಗೆಂದರಿತು ಪ್ರಕಾಶವುಳ್ಳದ್ದು ಎಂದುಉಪಾಸನೆಮಾಡುತ್ತಾನೋ ಅವನು ಪ್ರಕಾಶವುಳ್ಳ ದೇವಾದಿಗಳಿಗೆ ಸೇರಿದ ಲೋಕಗಳನ್ನು ಸತ್ತವನಾಗಿ, ಗೆದ್ದುಕೊಳ್ಳು ತ್ತಾನೆ, ಪಡೆದುಕೊಳ್ಳುತ್ತಾನೆ.

---

1. ಈ ಮೂಲದ ಮಾತು ಇಲ್ಲಿರಬೇಕು.

# ನಾಲ್ಕನೆಯ ಅಧ್ಯಾಯ-ಆರನೆಯ ಖಂಡ

(ಷೋಡಶಕಲವಿದ್ಯೆ)

## ಸತ್ಯಕಾಮನಿಗೆ ಅಗ್ನಿಯ ಉಪದೇಶ

(ಉಪನಿಷತ್ತು)

**ಅಗ್ನಿಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿ ಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥**

೧. 'ನಿನಗೆ ಅಗ್ನಿಯು (ಇನ್ನೊಂದು) ಪಾದವನ್ನು ಹೇಳಿಕೊಡುವದು' ಎಂದಿತು. ಅವನು ಬೆಳಗಾಗಲು ಗೋಗಳನ್ನು ಹೊಡೆದುಕೊಂಡು ಹೊರಟನು. ಅವು ಎಲ್ಲಿ ಸಾಯಂಕಾಲದಲ್ಲಿ ಒಟ್ಟಾದವೋ ಅಲ್ಲಿ ಅಗ್ನಿಯನ್ನು ಹೊತ್ತಿಸಿ, ಗೋಗಳನ್ನು ತಡೆಗಟ್ಟಿ ಸಮಿತ್ತನ್ನು ಇಟ್ಟು ಅಗ್ನಿಯ ಹಿಂದುಗಡೆಯಲ್ಲಿ ಪೂರ್ವಮುಖನಾಗಿ ಹತ್ತಿರಹತ್ತಿರದಲ್ಲಿಯೇ ಕುಳಿತುಕೊಂಡನು.

## ಸತ್ಯಕಾಮನು ಅಗ್ನಿಯ ಉಪದೇಶಕ್ಕೆ ಅನುವಾದದ್ದು

(ಭಾಷ್ಯ)

೩೧೪. ಸಃ ಅಗ್ನಿಷ್ಟೇ[1] ಪಾದಂ ವಕ್ತಾ ಇತ್ಯುಪರರಾಮ ಋಷಭಃ। ಸ ಸತ್ಯಕಾಮಃ ಹ ಶ್ವೋಭೂತೇ ಪರೇದ್ಯುಃ ನೈತ್ಯಕಂ ನಿತ್ಯಂ ಕರ್ಮ[2] ಕೃತ್ವಾ ಗಾ ಅಭಿಪ್ರಸ್ಥಾಪಯಾಂಚಕಾರ ಆಚಾರ್ಯಕುಲಂ ಪ್ರತಿ। ತಾಃ ಶನೈಶ್ಚರನ್ತ್ಯಃ ಆಚಾರ್ಯಕುಲಾಭಿಮುಖ್ಯಃ ಪ್ರಸ್ಥಿತಾಃ ಯತ್ರ ಯಸ್ಮಿನ್ ಕಾಲೇ ದೇಶೇ[3] ಅಭಿಸಾಯಂ ನಿಶಾಯಾಮ್ ಅಭಿಸಂಬಭೂವುಃ ಏಕತ್ರಾಭಿಮುಖ್ಯಃ ಸಂಭೂತಾಃ

---

1. ಬಹುಕೋಶಗಳಲ್ಲಿ ಅಗ್ನಿಷ್ಟೇ ಎಂದೇ ಇವೆ. ಮೂಲದಲ್ಲಿರುವಂತೆ ಇಲ್ಲಿ ಬರೆದುಕೊಂಡಿವೆ ಎಂದು ಹಿಡಿದು ಆ ಪಾಠವನ್ನೇ ಇಟ್ಟುಕೊಂಡಿದೇವೆ.

2. 'ನಿತ್ಯಂ ಕರ್ಮ' ಎಂಬ ಎರಡು ಮಾತುಗಳೂ ಇಲ್ಲದ ಪಾಠವೂ ಉಂಟು; ಹೇಗೂ 'ನಿತ್ಯಂ' ಎಂಬ ಮಾತು ಇಲ್ಲದಿದ್ದರೂ ಸಾಗುತ್ತದೆ.

3. ಕಾಲೇ ಎಂಬುದು ಬೇಕಿಲ್ಲವೆಂದು ತೋರುತ್ತದೆ ಅನುವಾದದ ಟಿಪ್ಪಣಿಯನ್ನು ನೋಡಿ.

ತತ್ರ ಅಗ್ನಿಮ್ ಉಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾತ್ ಅಗ್ನೇಃ ಪ್ರಾಙ್ಮುಖಃ[1] ಉಪೋಪವಿವೇಶ[2] ಋಷಭವಚೋ ಧ್ಯಾಯನ್ ॥

(ಭಾಷ್ಯಾರ್ಥ)

ಆ (ಎತ್ತು) ನಿನಗೆ ಅಗ್ನಿಯು (ಇನ್ನೊಂದು) ಪಾದವನ್ನು ಹೇಳುವದು ಎಂದು (ನುಡಿದು)[3] ಸುಮ್ಮನಾಯಿತು. ಆ ಸತ್ಯಕಾಮನು ಬೆಳಗಾಗಲು ಮಾರನೆಯ ದಿನ ನಿತ್ಯದ ಕರ್ಮವನ್ನು ಮಾಡಿ ಗೋಗಳನ್ನು ಆಚಾರ್ಯರ ಮನೆಯಕಡೆಗೆ ಹೊರಡಿಸಿದನು. ಅವು ಮೆಲ್ಲಗೆ ನಡೆಯುತ್ತಾ ಆಚಾರ್ಯರ ಮನೆಯಕಡೆಗೆ ಹೊರಟು ಎಲ್ಲಿ ಯಾವ ಕಾಲದಲ್ಲಿ (ಯಾವ) ದೇಶದಲ್ಲಿ[4] ಸಾಯಂಕಾಲ ಕತ್ತಲೆಯಾಗಲು ಒಟ್ಟಾದವೋ, ಒಂದೇ ಕಡೆಯಲ್ಲಿ ಅಭಿಮುಖವಾಗಿ ಸೇರಿದವೋ, ಅಲ್ಲಿ ಬೆಂಕಿಯನ್ನು ಹೊತ್ತಿಸಿ ಗೋಗಳನ್ನು ತಡೆಗಟ್ಟಿ ಸಮಿತ್ತನ್ನಿಟ್ಟು ಅಗ್ನಿಯ ಹಿಂದುಗಡೆಯಲ್ಲಿ ಪೂರ್ವಮುಖನಾಗಿ ಎತ್ತಿನ ಮಾತನ್ನೇ ಚಿಂತಿಸಿ ಕೊಳ್ಳುತ್ತಾ ಹತ್ತಿರಹತ್ತಿರ[5] ಕುಳಿತುಕೊಂಡನು.

(ಉಪನಿಷತ್ತು)

**ತಮಗ್ನಿರಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿ ಶುಶ್ರಾವ ॥ ೨ ॥**

**ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪೃಥಿವೀ ಕಲಾಽನ್ತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋಽನನ್ತವಾನ್ನಾಮ ॥ ೩ ॥**

೨. ಅವನನ್ನು ಕುರಿತು ಅಗ್ನಿಯು 'ಸತ್ಯಕಾಮಾ೩' ಎಂದಿತು. ಅದಕ್ಕೆ ಪ್ರತಿಯಾಗಿ (ಇವನು) 'ಭಗವಂತನೆ,' ಎಂದನು.

೩. ಸೋಮ್ಯ, ನಿನಗೆ ಬ್ರಹ್ಮದ (ಒಂದು) ಪಾದವನ್ನು ಹೇಳಿ ಕೊಡುವೆನು. 'ಪೂಜ್ಯರು ನನಗೆ ಹೇಳಿಕೊಡಬೇಕು!' ಅವನಿಗೆ

---

1. ಕೆಲವು ಪುಸ್ತಕಗಳಲ್ಲಿ ಈ ವಾ॥ ಪಾಠವೇ ಇರಬಹುದು

2. ವಾ॥ ಪಾಠದಲ್ಲಿ ಒಂದು ಉಪ ಬಿಟ್ಟುಹೋಗಿದೆ.

3. ಇತ್ಯುಕ್ತ್ವಾ ಎಂದೂ ಒಂದು ಕೋಶದಲ್ಲಿ ಪಾಠವಿರುವದಾಗಿ ತಿಳಿಯುತ್ತದೆ

4. ಸಾಯಂಕಾಲ ಎಂದೇ ಇರುವದರಿಂದ ಯಸ್ಮಿನ್ ದೇಶೇ ಎಂದಿಷ್ಟೇ ಇದ್ದರೂ ಸಾಕಾಗಿತ್ತೆಂದು ತೋರುತ್ತದೆ, ಅಥವಾ ಸಾಯಂಕಾಲ ಯಾವಾಗ ಒಟ್ಟುಗೂಡಿದವೋ ಎಂದೂ ಅರ್ಥವಾಗಬಹುದು. ಆಗ ದೇಶೇ ಚ ಎಂದಿದ್ದರೆ ಚೆನ್ನಾಗಿರುವದು.

5. ಗೋಗಳಿಗೂ ಅಗ್ನಿಗೂ ಹತ್ತಿರವಾಗಿ ಕುಳಿತನೆಂಬುದನ್ನು ಎರಡು ಉಪಶಬ್ದಗಳು ತಿಳಿಸುತ್ತದೆ ಎಂದು ಆ॥ ಟೀ॥.

(ಅದು) ಹೇಳಿತೇನೆಂದರೆ 'ಪೃಥಿವಿಯು (ಒಂದು) ಕಲೆ, ಅಂತರಿಕ್ಷವು (ಒಂದು) ಕಲೆ, ದ್ಯುಲೋಕವು ಒಂದು ಕಲೆ, ಸಮುದ್ರವು (ಒಂದು) ಕಲೆ. ಸೋಮ್ಯ, ಇದೇ ಇದೇ ಬ್ರಹ್ಮದ ಅನಂತವಾನ್ ಎಂಬ ಚತುಷ್ಕಲಪಾದವು.'

## ಬ್ರಹ್ಮದ ಎರಡನೆಯ ಪಾದ

(ಭಾಷ್ಯ)

೩೧೫. ತಮ್ ಅಗ್ನಿರಭ್ಯುವಾದ ಸತ್ಯಕಾಮಃ ಇತಿ ಸಂಬೋಧ್ಯ । ತಮ್ ಅಸೌ ಸತ್ಯಕಾಮೋ ಭಗವಃ ಇತಿ ಹ ಪ್ರತಿಶುಶ್ರಾವ ಪ್ರತಿವಚನಂ ದದೌ । ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ । ಬ್ರವೀತು ಮೇ ಭಗವಾನ್ ಇತಿ । ತಸ್ಮೈ ಹ ಉವಾಚ । ಪೃಥಿವೀ ಕಲಾ ಅನ್ತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲಾ ಇತಿ ಆತ್ಮಗೋಚರಮೇವ ದರ್ಶನಮ್ ಅಗ್ನಿರಬ್ರವೀತ್ । ಏಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಅನನ್ತವಾನ್ ನಾಮ ॥

(ಭಾಷ್ಯಾರ್ಥ)

ಅವನನ್ನು ಕುರಿತು ಅಗ್ನಿಯು 'ಸತ್ಯಕಾಮನೇ' ಎಂದು ಸಂಬೋಧಿಸಿ ಮಾತನಾಡಿತು. ಅದಕ್ಕೆ ಪ್ರತಿಯಾಗಿ ಈ ಸತ್ಯಕಾಮನು 'ಭಗವಂತನೆ!' ಎಂದನು, ಪ್ರತ್ಯುತ್ತರವನ್ನು ಕೊಟ್ಟನು ಅಗ್ನಿಯು, "ಸೋಮ್ಯ, ಬ್ರಹ್ಮದ (ಒಂದು) ಪಾದವನ್ನು ನಿನಗೆ ಹೇಳಿಕೊಡುವೆನು" ಎಂದಿತು. "ಪೂಜ್ಯರು ನನಗೆ ಹೇಳಿಕೊಡಬೇಕು" ಎನ್ನಲು ಅವನಿಗೆ ಅದು ಹೇಳಿತೇನೆಂದರೆ, ಪೃಥಿವಿಯು (ಒಂದು) ಕಲೆ, ಅಂತರಿಕ್ಷವು ಒಂದು ಕಲೆ, ದ್ಯುಲೋಕವು (ಒಂದು) ಕಲೆ, ಸಮುದ್ರವು (ಒಂದು) ಕಲೆ– ಎಂದು ತನ್ನ ವಿಷಯವಾದ ದರ್ಶನವನ್ನೇ[1] ಅಗ್ನಿಯು ಹೇಳಿತು. "ಸೋಮ್ಯ, ಇದೇ ಬ್ರಹ್ಮದ ಅನಂತವಾನ್ ಎಂಬ ಚತುಷ್ಕಲಪಾದವು."

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣೋಽನನ್ತವಾನಿತ್ಯುಪಾಸ್ತೇಽನನ್ತವಾನಸ್ಮಿಲ್ಲೋಕೇ ಭವತ್ಯನನ್ತವತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣೋಽನನ್ತವಾನಿತ್ಯುಪಾಸ್ತೇ ॥ ೪ ॥**

---

1. ಅಗ್ನಿಯು ಪೃಥಿವ್ಯಾದಿಗಳಿಗೆ ಸಂಬಂಧವುಳ್ಳ ದೇವತೆ, ಆದ್ದರಿಂದ ಈ ಪೃಥಿವ್ಯಾದಿ ರೂಪದ ಚತುಷ್ಕಲಪಾದವನ್ನೇ ಹೇಳಿತು.

೪. ಯಾವನು ಹೀಗೆಂದರಿತು ಈ ಬ್ರಹ್ಮದ ಚತುಷ್ಕಲಪಾದವನ್ನು ಅನಂತವಂತವೆಂದು ಉಪಾಸನೆಮಾಡುವನೋ ಅವನು ಈ ಲೋಕದಲ್ಲಿ ಅನಂತವಂತನಾಗುತ್ತಾನೆ. ಯಾವನು ಹೀಗೆಂದರಿತು ಬ್ರಹ್ಮದ ಚತುಷ್ಕಲಪಾದವನ್ನು ಅನಂತವಂತವೆಂದು ಉಪಾಸನೆ ಮಾಡುತ್ತಾನೋ (ಅವನು) ಅಂತವಿಲ್ಲದ ಲೋಕಗಳನ್ನು ಗೆದ್ದುಕೊಳ್ಳುತ್ತಾನೆ.

## ಎರಡನೆಯ ಚತುಷ್ಕಲಪಾದದ ಉಪಾಸನೆಯ ಫಲ

(ಭಾಷ್ಯ)

೩೧೬ ಸ ಯಃ ಕಶ್ಚಿತ್ ಯಥೋಕ್ತಂ ಪಾದಮ್ ಅನನ್ತವತ್ತ್ವೇನ ಗುಣೇನ ಉಪಾಸ್ತೇ ಸ ತಥೈವ ತದ್ಗುಣೋ ಭವತಿ ಅಸ್ಮಿಲ್ಲೋಕೇ। ಮೃತಶ್ಚ ಅನನ್ತವತೋ ಹ ಲೋಕಾನ್ ಸ ಜಯತಿ ಯ ಏತಮೇವಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಯಾವನೊಬ್ಬನು ಮೇಲೆ ಹೇಳಿದ ಪಾದವನ್ನು ಅಂತವಿಲ್ಲದ್ದೆಂಬ ಗುಣವುಳ್ಳದ್ದೆಂದು ಉಪಾಸನೆಮಾಡುವನೋ ಅವನು ಈ ಲೋಕದಲ್ಲಿ ಹಾಗೆಯೇ ಅದೇ ಗುಣವುಳ್ಳವನಾಗುತ್ತಾನೆ ಸತ್ತ ಬಳಿಕ ಅಂತವಿಲ್ಲದ ಲೋಕಗಳನ್ನು ಗೆದ್ದುಕೊಳ್ಳುತ್ತಾನೆ. 'ಯ ಏವಮ್' ಮುಂತಾದ (ಉಳಿದ ಗ್ರಂಥಕ್ಕೆ) ಹಿಂದಿನಂತೆಯೇ ಅರ್ಥ.

---

# ನಾಲ್ಕನೆಯ ಅಧ್ಯಾಯ-ಏಳನೆಯ ಖಂಡ

( ಷೋಡಶಕಲವಿದ್ಯೆ )

## ಸತ್ಯಕಾಮನಿಗೆ ಹಂಸಗ ಉಪದೇಶ

(ಉಪನಿಷತ್ತು)

**ಹಗ್ಂಸಸ್ತೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿ ಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥**

೧. 'ನಿನಗೆ ಹಂಸವು (ಇನ್ನೊಂದು) ಪಾದವನ್ನು ಹೇಳುವದು' ಎಂದಿತು. ಅವನು ಬೆಳಗಾಗಲು ಗೋಗಳನ್ನು ಹೊಡೆದುಕೊಂಡು ಹೊರಟನು. ಅವು ಎಲ್ಲಿ ಸಾಯಂಕಾಲದಲ್ಲಿ ಒಟ್ಟಾದವೋ ಅಲ್ಲಿ ಅಗ್ನಿಯನ್ನು ಹೊತ್ತಿಸಿ ಗೋಗಳನ್ನು ತಡೆಗಟ್ಟಿ ಸಮಿತ್ತನ್ನಿಟ್ಟು ಅಗ್ನಿಯ ಹಿಂದುಗಡೆ ಪೂರ್ವಾಭಿಮುಖನಾಗಿ ಹತ್ತಿರಹತ್ತಿರವೇ ಕುಳಿತುಕೊಂಡನು.

(ಭಾಷ್ಯ)

೩೧೭. ಸೋಽಗ್ನಿಃ ಹಂಸಸ್ತೇ ಪಾದಂ ವಕ್ತಾ ಇತ್ಯುಕ್ತ್ವಾ[1] ಉಪರರಾಮ । ಹಂಸ ಆದಿತ್ಯಃ । ಶೌಕ್ಲ್ಯಾತ್ ಪತನಸಾಮಾನ್ಯಾಚ್ಚ । ಸ ಹ ಶ್ವೋಭೂತ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಆ ಅಗ್ನಿಯು ಹಂಸವು ನಿನಗೆ (ಇನ್ನೊಂದು) ಪಾದವನ್ನು ಹೇಳುವದು ಎಂದು ನುಡಿದು ಸುಮ್ಮನಾಯಿತು. ಹಂಸವು ಎಂದರೆ ಆದಿತ್ಯನು, ಏಕೆಂದರೆ (ಅವನೂ) ಬೆಳ್ಳಗಿರುತ್ತಾನೆ; (ಆಕಾಶದಲ್ಲಿ) ಹಾರಾಡುವದೆಂಬುದೂ (ಇಬ್ಬರಿಗೂ) ಸಮಾನ(ವಾಗಿದೆ). 'ಅವನು ಬೆಳಗಾಗಲು' ಎಂಬುದೇ ಮುಂತಾದ (ಭಾಗವು ಹಿಂದಿನ ಗ್ರಂಥಕ್ಕೂ ಇದಕ್ಕೂ) ಸಮಾನವು.

(ಉಪನಿಷತ್ತು)

**ತಗ್ಂ ಹಗ್ಂಸ ಉಪನಿಪತ್ಯಾಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೨ ॥**

**ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚಾಗ್ನಿಃ ಕಲಾ ಸೂರ್ಯಃ ಕಲಾ ಚನ್ದ್ರಃ ಕಲಾ ವಿದ್ಯುತ್ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋ ಜ್ಯೋತಿಷ್ಮಾನ್ನಾಮ ॥ ೩ ॥**

೨. ಹಂಸವು ಅವನ ಬಳಿಗೆ ಹಾರಿಬಂದು 'ಸತ್ಯಕಾಮಾ೩' ಎಂದಿತು. ಅವನು (ಅದಕ್ಕೆ) ಪ್ರತಿಯಾಗಿ 'ಭಗವಂತನೆ!' ಎಂದನು.

೩. 'ಸೋಮ್ಯ, ನಿನಗೆ ಬ್ರಹ್ಮದ (ಒಂದು) ಪಾದವನ್ನು ಹೇಳಿಕೊಡುವೆನು' ಎಂದಿತು. 'ಪೂಜ್ಯರು ನನಗೆ ಹೇಳಿಕೊಡಬೇಕು!'

---

1. 'ಇತ್ಯುಕ್ತ್ವಾ' ಎಂಬ ಪಾಠವು ಇಲ್ಲದಿರುವದರಿಂದ ಎಲ್ಲಾ ಕಡೆಯಲ್ಲಿಯೂ ಇದ್ದಿತೆ? ಶೋಧಿಸಿ ನಿರ್ಣಯಿಸಬೇಕಾಗಿದೆ.

ಎಂದನು. ಅವನಿಗೆ ಅದು ಹೇಳಿತೇನೆಂದರೆ: 'ಅಗ್ನಿಯು (ಒಂದು) ಕಲೆ, ಸೂರ್ಯನು (ಒಂದು) ಕಲೆ, ಚಂದ್ರನು (ಒಂದು) ಕಲೆ, ಮಿಂಚು (ಒಂದು) ಕಲೆ. ಸೋಮ್ಯ, ಇದೇ ಬ್ರಹ್ಮದ ಜ್ಯೋತಿಷ್ಮಾನ್ ಎಂಬ ಚತುಷ್ಕಲಪಾದವು.

## ಬ್ರಹ್ಮದ ಮೂರನೆಯ ಪಾದ

(ಭಾಷ್ಯ)

೩೧೮ ಅಗ್ನಿಃ ಕಲಾ ಸೂರ್ಯಃ ಕಲಾ ಚನ್ದ್ರಃ ಕಲಾ ವಿದ್ಯುತ್ ಕಲಾ ಏಷ ವೈ ಸೋಮ್ಯ . ಇತಿ ಜ್ಯೋತಿರ್ವಿಷಯಮೇವ ಚ ದರ್ಶನಂ ಪ್ರೋವಾಚ। ಅತೋ ಹಂಸಸ್ಯ ಆದಿತ್ಯತ್ವಂ ಪ್ರತೀಯತೇ ॥

(ಭಾಷ್ಯಾರ್ಥ)

"ಅಗ್ನಿಯು (ಒಂದು) ಕಲೆ, ಸೂರ್ಯನು (ಒಂದು) ಕಲೆ. ಚಂದ್ರನು (ಒಂದು) ಕಲೆ, ಮಿಂಚು (ಒಂದು) ಕಲೆ. ಸೋಮ್ಯ, ಇದೇ " ಎಂದು ಜ್ಯೋತಿರ್ವಿಷಯವಾದ ದರ್ಶನವನ್ನೇ (ಹಂಸವು) ಹೇಳಿತು ಆದ್ದರಿಂದ ಹಂಸವು ಆದಿತ್ಯನೆಂದು ನಿಶ್ಚಯವಾಗುತ್ತದೆ.

## ಮೂರನೆಯ ಪಾದದ ಉಪಾಸನೆಗೆ ಫಲ

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ಜ್ಯೋತಿಷ್ಮಾನಸ್ಮಿಲ್ಲೋಕೇ ಭವತಿ ಜ್ಯೋತಿಷ್ಮತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ॥ ೪ ॥**

೪. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಹೀಗೆಂದರಿತು ಜ್ಯೋತಿಯುಳ್ಳದ್ದು ಎಂದು ಉಪಾಸನೆಮಾಡುವನೋ ಅವನು ಈ ಲೋಕದಲ್ಲಿ ಜ್ಯೋತಿಷ್ಮಂತನಾಗಿರುವನು. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಹೀಗೆಂದರಿತು ಜ್ಯೋತಿಯುಳ್ಳದ್ದೆಂದು ಉಪಾಸನೆಮಾಡುವನೋ (ಅವನು) ಜ್ಯೋತಿಯುಳ್ಳ ಲೋಕಗಳನ್ನು ಗೆದ್ದುಕೊಳ್ಳುವನು.

(ಭಾಷ್ಯ)

೩೧೯. ವಿದ್ವತ್ಫಲಮ್ । ಜ್ಯೋತಿಷ್ಮಾನ್ ದೀಪ್ತಿಯುಕ್ತೋಽಸ್ಮಿನ್ ಲೋಕೇ ಭವತಿ । ಚನ್ದ್ರಾದಿತ್ಯಾದೀನಾಂ ಜ್ಯೋತಿಷ್ಮತ ಏವ ಚ ಮೃತ್ವಾ ಲೋಕಾನ್ ಜಯತಿ । ಸಮಾನಮುತ್ತರಮ್ ॥

(ಭಾಷ್ಯಾರ್ಥ)

ಉಪಾಸಕನಿಗೆ ಫಲವೇನೆಂದರೆ ಈ ಲೋಕದಲ್ಲಿ ಜ್ಯೋತಿಷ್ಮಂತನು, ಕಾಂತಿ ಯುಕ್ತನು, ಆಗಿರುತ್ತಾನೆ, ಸತ್ತಬಳಿಕ ಚಂದ್ರಾದಿತ್ಯಾದಿಗಳ ಜ್ಯೋತಿರ್ಯುಕ್ತ ಲೋಕಗಳನ್ನೇ ಗೆದ್ದುಕೊಳ್ಳುವನು. ಮುಂದಿನ (ಗ್ರಂಥವು) ಹಿಂದಿನದಕ್ಕೆ ಸಮಾನ(ವಾಗಿದೆ).

---

# ನಾಲ್ಕನೆಯ ಅಧ್ಯಾಯ-ಎಂಟನೆಯ ಖಂಡ

(ಷೋಡಶಕಲವಿದ್ಯೆ)

## ಸತ್ಯಕಾಮನಿಗೆ ಮದ್ಗುವಿನ ಉಪದೇಶ

(ಉಪನಿಷತ್ತು)

**ಮದ್ಗುಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿ ಪ್ರಸ್ಥಾಪಯಾಂಚಕಾರ ತಾ ಯತ್ರಾಭಿ ಸಾಯಂ ಬಭೂವು ಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧ ಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥**

೧. 'ಮದ್ಗುವು ನಿನಗೆ (ಇನ್ನೊಂದು) ಪಾದವನ್ನು ಹೇಳಿ ಕೊಡುವದು' ಎಂದಿತು. ಅವನು ಬೆಳಗಾಗಲು ಗೋಗಳನ್ನು ಹೊಡೆದುಕೊಂಡು ಹೊರಟನು. ಅವು ಎಲ್ಲಿ ಸಾಯಂಕಾಲದಲ್ಲಿ ಒಟ್ಟಾದವೋ ಅಲ್ಲಿ ಅಗ್ನಿಯನ್ನು ಹೊತ್ತಿಸಿ ಗೋಗಳನ್ನು ತಡೆಗಟ್ಟಿ ಅಗ್ನಿಯ ಹಿಂದುಗಡೆ ಪೂರ್ವಾಭಿಮುಖನಾಗಿ ಹತ್ತಿರಹತ್ತಿರವೇ ಕುಳಿತನು.

### ಸತ್ಯಕಾಮನು ಮದ್ಗುವಿನ ಉಪದೇಶಕ್ಕೆ ಅನುವಾದದ್ದು

(ಭಾಷ್ಯ)

೩೨೦. ಹಂಸೋಽಪಿ ಮದ್ಗುಷ್ಟೇ ಪಾದಂ ವಕ್ತಾ ಇತ್ಯುಪರರಾಮ । ಮದ್ಗುಃ ಉದಕಚರಃ ಪಕ್ಷೀ । ಸ ಚ ಅಪ್ಸಂಬನ್ಧಾತ್ ಪ್ರಾಣಃ । ಸ ಹ ಶ್ವೋ ಭೂತೇ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಹಂಸವುಕೂಡ ಮದ್ಗುವು ನಿನಗೆ (ಇನ್ನೊಂದು) ಪಾದವನ್ನು ಹೇಳುವದು ಎಂದು (ನುಡಿದು) ಸುಮ್ಮನಾಯಿತು. ಮದ್ಗು ಎಂಬುದು ನೀರಿನಲ್ಲಿರುವ (ಒಂದು ಜಾತಿಯ) ಪಕ್ಷಿ.[1] ಅದು ನೀರಿನ ಸಂಬಂಧದಿಂದ ಪ್ರಾಣನು (ಎಂದು ನಿಶ್ಚಯಿಸಬೇಕು).[2] ಅವನು ಬೆಳಗಾಗಲು ... ಎಂದುಮುಂತಾದದ್ದು ಹಿಂದಿನಂತೆಯೇ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು).

(ಉಪನಿಷತ್ತು)

**ತಂ ಮದ್ಗುರುಪನಿಪತ್ಯಾಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೨ ॥**

**ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಣಃ ಕಲಾ ಚಕ್ಷುಃ ಕಲಾ ಶ್ರೋತ್ರಂ ಕಲಾ ಮನಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣ ಆಯತನವಾನ್ನಾಮ ॥ ೩ ॥**

೨. ಮದ್ಗುವು ಅವನ ಹತ್ತಿರಕ್ಕೆ ಹಾರಿಬಂದು 'ಸತ್ಯಕಾಮಾ೩' ಎಂದಿತು. (ಅವನು) 'ಭಗವಂತನೆ!' ಎಂದು ಅದಕ್ಕೆ ಪ್ರತ್ಯುತ್ತರವನ್ನು ಕೊಟ್ಟನು.

೩. 'ಸೋಮ್ಯ, ನಿನಗೆ ಬ್ರಹ್ಮದ (ಒಂದು) ಪಾದವನ್ನು ಹೇಳಿಕೊಡುವೆನು' ಎಂದಿತು. 'ಪೂಜ್ಯರು ನನಗೆ ಹೇಳಿಕೊಡಬೇಕು!' ಎಂದನು. ಅವನಿಗೆ (ಅದು) ಹೇಳಿದ್ದೇನೆಂದರೆ ಪ್ರಾಣವು (ಒಂದು) ಕಲೆ, ಚಕ್ಷುಸ್ಸು (ಒಂದು) ಕಲೆ, ಶ್ರೋತ್ರವು (ಒಂದು) ಕಲೆ, ಮನಸ್ಸು (ಒಂದು) ಕಲೆ. ಸೋಮ್ಯ, ಇದೇ ಬ್ರಹ್ಮದ ಆಯತನವಾನ್ ಎಂಬ ಚತುಷ್ಕಲಪಾದವು.

## ಬ್ರಹ್ಮದ ನಾಲ್ಕನೆಯ ಪಾದವು

(ಭಾಷ್ಯ)

೩.೨೧ ಸ ಚ ಮದ್ಗುಃ ಪ್ರಾಣಃ ಸ್ವವಿಷಯಮೇವ ಚ ದರ್ಶನಮುವಾಚ ಪ್ರಾಣಃ ಕಲಾ ಇತ್ಯಾದಿ। ಆಯತನವಾನ್ ಇತ್ಯೇವಂ ನಾಮ। ಆಯತನಂ ನಾಮ ಮನಃ ಸರ್ವಕರಣೋಪಹೃತಾನಾಂ ಭೋಗಾನಾಮ್ ತತ್ ಅಸ್ಮಿನ್[3] ಪಾದೇ ವಿದ್ಯತ ಇತಿ ಆಯತನವಾನ್ ನಾಮ ಪಾದಃ ॥

1. ನೀರುಕೋಳಿ, ಜಾತು - ಇಂಥ ಪಕ್ಷಿ.
2. ಇದಕ್ಕೇನು ಯುಕ್ತಿ ಎಂಬುದು ತಿಳಿಯಲಿಲ್ಲ, ವ್ಯಾಖ್ಯಾನದಲ್ಲಿಯೂ ಇಲ್ಲ.
3. ಯಸ್ಮಿನ್ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

(ಉಪನಿಷತ್ತು)

ಆ ಮದ್ಗು(ರೂಪದ) ಪ್ರಾಣನು, 'ಪ್ರಾಣವು (ಒಂದು) ಕಲೆ ಎಂದು ಮುಂತಾಗಿ ತನ್ನ ವಿಷಯವೇ ಆದ ಉಪಾಸನೆಯನ್ನು ಹೇಳಿತು. ಆಯತನವಾನ್ ಎಂಬುದು (ಈ ಪಾದದ) ಹೆಸರು ಆಯತನ ಎಂದರೆ ಸರ್ವಕರಣಗಳೂ ತಂದು ಕೊಡುವ ಭೋಗಗಳಿಗೆ (ಆಶ್ರಯವಾದ) ಮನಸ್ಸು. ಆ (ಆಯತನವು) ಈ ಪಾದ ದಲ್ಲಿದೆಯಾದ್ದರಿಂದ (ಈ) ಪಾದವು ಆಯತನವಾನ್ ಎನಿಸಿದೆ.

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನವಾನಿತ್ಯುಪಾಸ್ತ ಆಯತನವಾನಸ್ಮಿಲ್ಲೋಕೇ ಭವತ್ಯಾ ಯತನವತೋ ಹ ಲೋಕಾಞ್ಜಯತಿ ಯ ಏತಮೇವಂ ವಿದ್ವಾಗ್ಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನ ವಾನಿತ್ಯುಪಾಸ್ತೇ ॥ ೪ ॥**

೪. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಹೀಗೆಂದ ರಿತು ಆಯತನವುಳ್ಳದ್ದು ಎಂದು ಉಪಾಸನೆಮಾಡುತ್ತಾನೋ ಅವನು ಈ ಲೋಕದಲ್ಲಿ ಆಯತನವುಳ್ಳವನಾಗಿರುತ್ತಾನೆ. ಯಾವನು ಬ್ರಹ್ಮದ ಈ ಚತುಷ್ಕಲಪಾದವನ್ನು ಆಯತನವುಳ್ಳದ್ದು ಎಂದು ಉಪಾಸನೆ ಮಾಡುತ್ತಾನೋ (ಅವನು) ಆಯತನವುಳ್ಳ ಲೋಕಗಳನ್ನು ಗೆದ್ದು ಕೊಳ್ಳುತ್ತಾನೆ.

## ನಾಲ್ಕನೆಯ ಪಾದದ ಉಪಾಸನೆಗೆ ಫಲ

(ಭಾಷ್ಯ)

೩೨೨. ತಂ ಪಾದಂ ತಥೈವ ಉಪಾಸ್ತೇ ಯಃ ಸ ಆಯತನವಾನ್ ಆಶ್ರಯ ವಾನ್ ಅಸ್ಮಿನ್ ಲೋಕೇ ಭವತಿ । ಆಯತನವತ ಏವ ಸಾವಕಾಶಾನ್ ಲೋಕಾನ್ ಮೃತೋ ಜಯತಿ । ಯ ಏತಮೇವಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಆ ಪಾದವನ್ನು ಹಾಗೆಯೇ ಯಾವನು ಉಪಾಸನೆಮಾಡುತ್ತಾನೋ ಅವನು ಈ ಲೋಕದಲ್ಲಿ ಆಯತನವುಳ್ಳವನು, ಆಶ್ರಯವುಳ್ಳವನು ಆಗಿರುತ್ತಾನೆ. ಹಾಗೂ ಸತ್ತಮೇಲೆ ಆಯತನವುಳ್ಳವೇ ಆದ, ಅವಕಾಶವುಳ್ಳ, ಲೋಕಗಳನ್ನೂ ಗೆದ್ದು ಕೊಳ್ಳುತ್ತಾನೆ. 'ಯ ಏತದೇವಮ್' (ಯಾವನು ಇದನ್ನು ಹೀಗೆಂದರಿತು_) ಮುಂತಾದ (ಗ್ರಂಥ)ಕ್ಕೆ ಹಿಂದಿನಂತೆ (ವ್ಯಾಖ್ಯಾನ).

# ನಾಲ್ಕನೆಯ ಅಧ್ಯಾಯ–ಒಂಬತ್ತನೆಯ ಖಂಡ

(ಷೋಡಶಕಲವಿದ್ಯೆ)

## ಗುರುವಿನಿಂದಲೂ ಸತ್ಯಕಾಮನಿಗೆ ಉಪದೇಶ

(ಉಪನಿಷತ್ತು)

**ಪ್ರಾಪ ಹಾಚಾರ್ಯಕುಲಂ ತಮಾಚಾರ್ಯೋಽಭ್ಯುವಾದ ಸತ್ಯಕಾಮ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೧ ॥**

**ಬ್ರಹ್ಮವಿದಿವ ವೈ ಸೋಮ್ಯ ಭಾಸಿ ಕೋ ನು ತ್ವಾನುಶಶಾಸೇತ್ಯನ್ಯೇ ಮನುಷ್ಯೇಭ್ಯ ಇತಿ ಹ ಪ್ರತಿಜಜ್ಞೇ ಭಗವಾಗ್ಂ ಸ್ತ್ವೇವ ಮೇ ಕಾಮೇ ಬ್ರೂಯಾತ್ ॥ ೨ ॥**

೧. ಆಚಾರ್ಯನ ಮನೆಯನ್ನು ಸೇರಿದನು. ಅವನನ್ನು ಆಚಾರ್ಯನು 'ಸತ್ಯಕಾಮಾ೩' ಎಂದನು. 'ಭಗವಂತನೆ!' ಎಂದು (ಅದಕ್ಕೆ ಅವನು) ಪ್ರತ್ಯುತ್ತರವಿತ್ತನು.

೨. 'ಸೋಮ್ಯ, ಬ್ರಹ್ಮವಿದನಂತೆ ಕಾಣುತ್ತಿರುವೆ. ನಿನಗೆ ಯಾವನು ಹೇಳಿಕೊಟ್ಟನೊ!' ಎಂದನು. 'ಮನುಷ್ಯರಿಗಿಂತ ಬೇರೆಯವರು' ಎಂದು (ಅವನು) ಹೇಳಿದನು. 'ನನ್ನ ಕಾಮದಲ್ಲಿ ಪೂಜ್ಯರಾದ ತಾವೇ ಹೇಳಬೇಕು!'

### ಸತ್ಯಕಾಮನು ಗುರುವನ್ನು ಉಪದೇಶಿಸಬೇಕೆಂದು ಬೇಡಿಕೊಂಡದ್ದು

(ಭಾಷ್ಯ)

೨.೨೩. ಸ ಏವಂ ಬ್ರಹ್ಮವಿತ್ ಸನ್ ಪ್ರಾಪ ಹ ಪ್ರಾಪ್ತವಾನ್ ಆಚಾರ್ಯಕುಲಮ್ । ತಮ್ ಆಚಾರ್ಯೋಽಭ್ಯುವಾದ ಸತ್ಯಕಾಮ೩ ಇತಿ । ಭಗವ ಇತಿ ಹ ಪ್ರತಿಶುಶ್ರಾವ । ಬ್ರಹ್ಮವಿದಿವ ವೈ ಸೋಮ್ಯ ಭಾಸಿ । ಪ್ರಸನ್ನೇನ್ದ್ರಿಯಃ ಪ್ರಹಸಿತವದನಶ್ಚ ನಿಶ್ಚಿನ್ತಃ ಕೃತಾರ್ಥೋ ಬ್ರಹ್ಮವಿದ್ ಭವತಿ । ಅತ ಆಹ ಆಚಾರ್ಯಃ 'ಬ್ರಹ್ಮವಿದಿವ ಭಾಸಿ' ಇತಿ । ಕೋ ನು ಇತಿ ವಿತರ್ಕಯನ್ ಉವಾಚ ಕಸ್ತ್ವಾಮ್ ಅನುಶಶಾಸ ? ಇತಿ । ಸ ಚ ಆಹ ಸತ್ಯಕಾಮಃ ಅನ್ಯೇ

ಮನುಷ್ಯೇಭ್ಯಃ । ದೇವತಾ ಮಾಮ್ ಅನುಶಿಷ್ಟವತ್ಯಃ । ಕೋಽನ್ಯೋ ಭಗವಚ್ಛಿಷ್ಯಂ ಮಾಂ ಮನುಷ್ಯಃ ಸನ್ ಅನುಶಾಸಿತುಮ್ ಉತ್ಸಹೇತ ಇತ್ಯಭಿಪ್ರಾಯಃ । ಅತಃ ಅನ್ಯೇ ಮನುಷ್ಯೇಭ್ಯಃ ಇತಿ ಹ ಪ್ರತಿಜಜ್ಞೇ ಪ್ರತಿಜ್ಞಾತವಾನ್ । ಭಗವಾಂಸ್ತ್ವೇವ ಮೇ ಕಾಮೇ ಮಮೇಚ್ಛಾಯಾಂ ಬ್ರೂಯಾತ್ । ಕಿಮನ್ಯೈರುಕ್ತೇನ ? ನಾಹಂ ತದ್ ಗಣಯಾಮಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅವನು ಹೀಗೆ ಬ್ರಹ್ಮವಿದನಾಗಿ ಆಚಾರ್ಯರ ಮನೆಯನ್ನು ಸೇರಿದನು, ಸೇರಿದವನಾದನು. ಅವನನ್ನು ಆಚಾರ್ಯನು 'ಸತ್ಯಕಾಮಾ' ಎಂದು ಕೂಗಿ ಕರೆದನು. 'ಭಗವಂತನೆ !' ಎಂದು (ಅವನು) ಪ್ರತ್ಯುತ್ತರವಿತ್ತನು.

ಸೋಮ್ಯ, ಬ್ರಹ್ಮಜ್ಞಾನಿಯಂತೆ ಕಾಣುತ್ತಿರುವೆ. **ಬ್ರಹ್ಮಜ್ಞಾನಿಯು ಪ್ರಸನ್ನೇಂದ್ರಿಯನೂ ನಗೆಮುಖದವನೂ ನಿಶ್ಚಿಂತನೂ ಕೃತಾರ್ಥನೂ ಆಗಿರುತ್ತಾನೆ. ಆದ್ದರಿಂದ ಆಚಾರ್ಯನು 'ಬ್ರಹ್ಮಜ್ಞಾನಿಯಂತೆ ಕಾಣುತ್ತಿರುವೆ' ಎಂದಿರುತ್ತಾನೆ.** ನಿನಗೆ ಯಾವನು ಹೇಳಿಕೊಟ್ಟನೊ ! ನಿನಗೆ ತಿಳಿಸಿಕೊಟ್ಟವನು ಯಾರು ?– ಎಂದು ವಿತರ್ಕಮಾಡುತ್ತಾ[1] ಕೇಳಿದನು ಆ ಸತ್ಯಕಾಮನು ಮನುಷ್ಯರಿಗಿಂತ ಬೇರೆಯವರು, ದೇವತೆಗಳು, ನನಗೆ ತಿಳಿಸಿ ಕೊಟ್ಟಿರುತ್ತಾರೆ– ಎಂದು ನುಡಿದನು ಪೂಜ್ಯರಾದ ತಮ್ಮ ಶಿಷ್ಯನಾದ ನನಗೆ ಮನುಷ್ಯನಾಗಿದ್ದುಕೊಂಡಿರುವ ಮತ್ತೆಯಾವನುತಾನೆ, ಹೇಳಿಕೊಡಲು ಶಕ್ತನಾದಾನು[2] ?– ಎಂದು ಅಭಿಪ್ರಾಯ. ಆದ್ದರಿಂದ ಮನುಷ್ಯರಿಗಿಂತ ಬೇರೆಯವರು ಎಂದು ಹೇಳಿದನು, ಹೇಳಿದವನಾದನು ನನ್ನ ಕಾಮದಲ್ಲಿ, ನನ್ನ ಇಚ್ಛೆಯಂತೆ ಪೂಜ್ಯರಾದ ತಾವೇ ಹೇಳಬೇಕು , ಮಿಕ್ಕವರು ಹೇಳಿದ್ದರಿಂದೇನು ? ನಾನು ಅದನ್ನು ಲೆಕ್ಕಕ್ಕೆ ತರುವವನಲ್ಲ ಎಂದು ಅಭಿಪ್ರಾಯ[3].

---

1. ನು ಎಂಬುದು ವಿತರ್ಕವನ್ನು ಹೇಳುವ ನಿಪಾತ ; ನಿನಗೆ ಯಾರು ತಿಳಿಸಿಕೊಟ್ಟವರಾಗಿದ್ದೀತು ?– ಈ ರಹಸ್ಯವನ್ನು ತಿಳಿದವರು ಮತ್ತೆ ಯಾರಿದ್ದಾರು ? ಎಂದು ಆಚಾರ್ಯನು ತನ್ನಲ್ಲಿ ತಾನು ಆಲೋಚಿಸಿಕೊಂಡನು ಎಂದರ್ಥ.

2. ತಮ್ಮ ಶಿಷ್ಯನಾದ ನನಗೆ ಉಪದೇಶಮಾಡುವದಕ್ಕೆ ಮತ್ತೆಯಾವ ಮನುಷ್ಯಗುರು ಶಕ್ತನು ? ತಮಗೊಬ್ಬರಿಗೆ ಮಾತ್ರ ಇದು ತಿಳಿದಿರುವ ವಿಷಯ. ದೇವತೆಗಳಿಗೆ ಮಾತ್ರ ತಿಳಿದಿರಬಹುದು, ಮನುಷ್ಯರಿಗಂತೂ ತಿಳಿಯುವಂತಿಲ್ಲ. ತಮ್ಮಲ್ಲಿ ಶಿಷ್ಯನಾದ ನನಗೆ ಹೇಳಿಕೊಡುವ ಎದೆಯು ಮನುಷ್ಯರಿಗೆ ಬರುವಂತೆಯೂ ಇಲ್ಲ - ಎಂಬ ಭಾವವು ಇಲ್ಲಿ ಅಡಗಿದೆ.

3. ದೇವತೆಗಳು ಹೇಳಿದ್ದರೂ ಹೇಳಿರಲಿ, ಗುರುಗಳಾದ ತಾವು ಹೇಳಿಕೊಟ್ಟಮೇಲೆಯೇ ಅದಕ್ಕೆ ಬೆಲೆ ಎಂದರ್ಥ.

(ಉಪನಿಷತ್ತು)

**ಶ್ರುತಗ್‌ಂ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧೈವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪದಿತಿ[1] ತಸ್ಮೈ ಹೈತದೇವೋ ವಾಚಾತ್ರ ಹ ನ ಕಿಂಚನ ವೀಯಾಯೇತಿ ವೀಯಾಯೇತಿ ॥ ೩ ॥**

೩. ಆಚಾರ್ಯನಿಂದಲೇ ಅರಿತುಕೊಂಡ ವಿದ್ಯೆಯು ಸಾಧಿಷ್ಠವನ್ನು ಹೊಂದುತ್ತದೆ ಎಂದು ಭಗವಂತನಂಥವರಿಂದ ಕೇಳಿದ್ದೇ ನನ್ನಲ್ಲಿದೆ. ಅವನಿಗೆ ಇದನ್ನೇ (ಆಚಾರ್ಯನು) ಹೇಳಿಕೊಟ್ಟನು; ಇದರಲ್ಲಿ ಒಂದಿಷ್ಟೂ ಹೋಗಲಿಲ್ಲ, ಹೋಗಲಿಲ್ಲ.

## ಆಚಾರ್ಯನೂ ಇದೇ ಷೋಡಶಕಲವಿದ್ಯೆಯನ್ನೇ ಹೇಳಿಕೊಟ್ಟನು

(ಭಾಷ್ಯ)

೩.೨೪. ಕಿಂ ಚ ಶ್ರುತಂ ಹಿ ಯಸ್ಮಾತ್ ಮಮ ವಿದ್ಯತ ಏವ ಅಸ್ಮಿನ್ನರ್ಥೇ ಭಗವದ್ದೃಶೇಭ್ಯಃ ಭಗವತ್ಸಮೇಭ್ಯೋ ಋಷಿಭ್ಯಃ। ಆಚಾರ್ಯಾದ್ಧೈವ ವಿದ್ಯಾ ವಿದಿತಾ ಸಾಧಿಷ್ಠಂ ಸಾಧುತಮತ್ವಂ ಪ್ರಾಪತ್ ಪ್ರಾಪ್ನೋತಿ (ಇತಿ)[2]। ಅತೋ ಭಗವಾನೇವ ಬ್ರೂಯಾತ್। ಇತ್ಯುಕ್ತ ಆಚಾರ್ಯಃ ಅಬ್ರವೀತ್ ತಸ್ಮೈ (ಏತದೇವ)[3] ತಾಮೇವ ದೇವತೈರುಕ್ತಾಂ ವಿದ್ಯಾಮ್। ಅತ್ರ ಹ ನ ಕಿಂಚನ ಷೋಡಶಕಲವಿದ್ಯಾಯಾಃ ಕಿಂಚಿತ್ ಏಕದೇಶಮಾತ್ರಮಪಿ ನ ವೀಯಾಯ ನ ವಿಗತಮ್ ಇತ್ಯರ್ಥಃ। ದ್ವಿರಭ್ಯಾಸೋ ವಿದ್ಯಾಪರಿಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು (ಹಿ=ಯಸ್ಮಾತ್) ಈ ವಿಷಯದಲ್ಲಿ ತಮ್ಮಂಥವರಿಂದ, ತಮಗೆ ಸಮರಾದ ಋಷಿಗಳಿಂದ ಕೇಳಿದ್ದು ನನ್ನಲ್ಲಿದ್ದೇ ಇದೆಯಷ್ಟೆ. (ಏನೆಂದರೆ), 'ಆಚಾರ್ಯನಿಂದಲೇ ಅರಿತುಕೊಂಡ ವಿದ್ಯೆಯು ಸಾಧಿಷ್ಠವನ್ನು ಸಾಧುತಮತ್ವ

---

1. ಉಪನಿಷತ್ತಿನಲ್ಲಿಯೂ 'ಪ್ರಾಪತಿ', 'ಪ್ರಾಪತ್' ಎಂಬ ಎರಡು ಪಾಠಗಳಿವೆ; ಪ್ರಾಪತ್ (ಪಡೆಯಿತು) ಎಂಬ ರೂಪವನ್ನು ನಾವು ಸ್ವೀಕರಿಸಿದೇವೆ. ಯಾವದು ಸಾಧುವೆಂಬುದನ್ನು ವಿದ್ವಾಂಸರು ನಿರ್ಣಯಿಸಬೇಕು.
2. ಇಲ್ಲಿ ಮೂಲದ 'ಇತಿ'ಯಿರಬೇಕು.
3. ಇಲ್ಲಿ ಮೂಲದ 'ಏತದೇವ' ಇರಬೇಕು.

ವನ್ನು (ಪ್ರಾಪತ್=ಪ್ರಾಪ್ನೋತಿ) ಹೊಂದುತ್ತದೆ' (ಎಂದು ಕೇಳಿಯೇ ಇರುತ್ತೇನೆಷ್ಟೆ. ಆದ್ದರಿಂದ ತಾವೇ ಹೇಳಿಕೊಡಬೇಕು.

ಹೀಗೆನ್ನಲು ಆಚಾರ್ಯನು ಅವನಿಗೆ (ಇದನ್ನೇ) ದೇವತೆಗಳು ಹೇಳಿಕೊಟ್ಟ ಆ ವಿದ್ಯೆಯನ್ನೇ ಹೇಳಿಕೊಟ್ಟನು. ಇದರಲ್ಲಿ (ಈ) ಷೋಡಶಕಲವಿದ್ಯೆಯಲ್ಲಿ ಒಂದಿಷ್ಟೂ ಸ್ವಲ್ಪಭಾಗವು ಕೂಡ ಹೋಗಲಿಲ್ಲ. (ಅವನನ್ನು ಬಿಟ್ಟುಹೋಗಲಿಲ್ಲ ಎಂದರ್ಥ). (ವೀಯಾಯ ಎಂಬುದನ್ನು) ಎರಡು ಸಲ ಹೇಳಿರುವದು ವಿದ್ಯೆಯು ಮುಗಿಯಿತೆಂದು ತಿಳಿಸುವದಕ್ಕೆ.

---

# ನಾಲ್ಕನೆಯ ಅಧ್ಯಾಯ ನಾಲ್ಕನೆಯ ಖಂಡದಿಂದ ಒಂಬತ್ತನೆಯ ಖಂಡದವರೆಗಿನ ಗ್ರಂಥದ ಸಾರ

ಈ ಭಾಗದಲ್ಲಿ ಷೋಡಶಕಲವಿದ್ಯೆಯನ್ನು ಉಪದೇಶಿಸಿದೆ.

## ನಾಲ್ಕನೆಯ ಖಂಡ

ಸತ್ಯಕಾಮಜಾಬಾಲನೆಂಬ ಹುಡುಗನು ತಾಯಿಯಾದ ಜಬಾಲೆಯನ್ನು 'ನಾನು ಬ್ರಹ್ಮಚರ್ಯವನ್ನು ಮಾಡಬೇಕು; ನಮ್ಮ ಗೋತ್ರವು ಯಾವದು?' ಎಂದು ಕೇಳಿದನು. ತಾಯಿಯು 'ಚಿಕ್ಕಂದಿನಲ್ಲಿ ನಿನ್ನನ್ನು ಹಡೆದೆನು; ನಿಮ್ಮ ತಂದೆಯು ಬೇಗನೆ ಕಾಲವಾದನು. ಆದ್ದರಿಂದ ನನಗೆ ಗೋತ್ರವು ನೆನಪಿಲ್ಲ. ನಿನ್ನ ಹೆಸರು ಸತ್ಯಕಾಮ ಜಾಬಾಲ; ಹೀಗೆಂದೇ ಗುರುಗಳಲ್ಲಿ ಹೇಳು' ಎಂದಳು.

ಸತ್ಯಕಾಮನು ಹಾರಿದ್ರುಮತ ಗೌತಮರಲ್ಲಿಗೆ ಬಂದು 'ತಮ್ಮ ಶಿಷ್ಯನಾಗಿರುತ್ತೇನೆ; ನನಗೆ ದಯವಿಟ್ಟು ಉಪನಯನಮಾಡಿಸಬೇಕು' ಎಂದು ಕೇಳಿಕೊಂಡನು. 'ನಿಮ್ಮ ಗೋತ್ರವು ಯಾವದು?' ಎಂದು ಅವರು ಕೇಳಲು ತಾಯಿಯು ಹೇಳಿದ್ದನ್ನೇ ತಿಳಿಸಿದನು. ಅವರು 'ನಿಜವನ್ನೇ ಹೇಳಿದ್ದೀಯೆ; ಆದ್ದರಿಂದ ನೀನು ಬ್ರಾಹ್ಮಣನೇ' ಎಂದು ಅವನಿಗೆ ಉಪನಯನವನ್ನು ಮಾಡಿಸಿದರು. ಅವನಿಗೆ ನಾನೂರು ಬಡಕಲುದನಗಳನ್ನು ಕೊಟ್ಟು 'ಇವುಗಳನ್ನು ಕಾಯುತ್ತಿರು' ಎಂದು ಕಟ್ಟಪ್ಪಣೆಮಾಡಿದರು. ಇವುಗಳನ್ನು ಸಾವಿರಕ್ಕೆ ಹೆಚ್ಚಿಸದೆ ಮೇಲೆಯೇ ಹಿಂತಿರುಗುತ್ತೇನೆಂಬ ಪ್ರತಿಜ್ಞೆಯಿಂದ ಸತ್ಯಕಾಮನು ಹೊರಟನು.

## ಐದನೆಯ ಖಂಡ

ಕಾಲಕ್ರಮದಲ್ಲಿ ದನಗಳು ಸಾವಿರವಾದವು. ಆಗ ವಾಯುದೇವತೆಯು ಒಂದು ಎತ್ತಿನಲ್ಲಿ ಆವಿಷ್ಟವಾಗಿ "ಸತ್ಯಕಾಮನೆ, ಸಾವಿರ ದನಗಳಾದವು. ನಮ್ಮನ್ನು ಗುರುಗಳ ಮನೆಗೆ ಹೊಡೆದುಕೊಂಡು ಹೋಗು. ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡುವೆನು, ಕೇಳು. ಪೂರ್ವದಿಕ್ಕು, ಪಶ್ಚಿಮದಿಕ್ಕು, ದಕ್ಷಿಣದಿಕ್ಕು, ಉತ್ತರದಿಕ್ಕು - ಎಂಬ ನಾಲ್ಕು ಕಲೆಗಳುಳ್ಳದ್ದು ಬ್ರಹ್ಮದ ಒಂದು ಪಾದವು. ಇದಕ್ಕೆ ಪ್ರಕಾಶವಂತ ಎಂದು ಹೆಸರು. ಹೀಗೆಂದರಿತು ಇದನ್ನು ಉಪಾಸನೆಮಾಡಿದವನು ಪ್ರಖ್ಯಾತಿಪ್ರಕಾಶದಿಂದ ಬಾಳಿ ಪರದಲ್ಲಿ ಪ್ರಕಾಶಯುಕ್ತಲೋಕಗಳನ್ನೇ ಪಡೆದುಕೊಳ್ಳುವನು" ಎಂದನು.

## ಆರನೆಯ ಖಂಡ

"ಇನ್ನೊಂದು ಪಾದವನ್ನು ನಿನಗೆ ಅಗ್ನಿಯು ತಿಳಿಸಿಕೊಡುವನು" ಎಂದು ಎತ್ತು ಸುಮ್ಮನಾಯಿತು. ಸತ್ಯಕಾಮನು ಮಾರನೆಯ ದಿನ ದನಗಳನ್ನು ಅಟ್ಟಿಕೊಂಡು ಹೊರಟನು. ಸಾಯಂಕಾಲದಲ್ಲಿ ಅವನ್ನು ಒಕ್ಕಡೆಯಲ್ಲಿ ತಡೆಗಟ್ಟಿ, ಅಗ್ನಿಯನ್ನು ಇಟ್ಟುಕೊಂಡು ಪೂರ್ವಾಭಿಮುಖವಾಗಿ ಹತ್ತಿರಹತ್ತಿರವೇ ಕುಳಿತುಕೊಂಡನು.

ಅಗ್ನಿಯು "ಸತ್ಯಕಾಮನೆ, ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡುವೆನು. ಪೃಥಿವಿ, ಅಂತರಿಕ್ಷ, ದ್ಯುಲೋಕ, ಸಮುದ್ರ ಈ ನಾಲ್ಕು ಇದರ ಕಲೆಗಳು. ಬ್ರಹ್ಮದ ಈ ಪಾದಕ್ಕೆ ಅನಂತವಾನ್ ಎಂದು ಹೆಸರು. ಹೀಗೆಂದರಿತು ಇದನ್ನು ಉಪಾಸನೆಮಾಡುವವನು ಅನಂತಗುಣಯುಕ್ತನಾಗಿ ಬಾಳಿ ಪರದಲ್ಲಿ ಅನಂತಗುಣಯುಕ್ತ ಲೋಕಗಳನ್ನು ಪಡೆದುಕೊಳ್ಳುವನು" ಎಂದನು

## ಏಳನೆಯ ಖಂಡ

"ಹಂಸವು ನಿನಗೆ ಇನ್ನೊಂದು ಪಾದವನ್ನು ಹೇಳಿಕೊಡುವದು" ಎಂದು ಅಗ್ನಿಯು ಸುಮ್ಮನಾಯಿತು ಅವನು ಮಾರನೆಯ ದಿನವೂ ಮುಂದಕ್ಕೆ ಹೊರಟು ಸಾಯಂಕಾಲದಲ್ಲಿ ಅಗ್ನಿಯನ್ನಿಟ್ಟುಕೊಂಡು ಪೂರ್ವಾಭಿಮುಖವಾಗಿ ಕುಳಿತನು.

ಹಂಸವು ಅವನ ಬಳಿಗೆ ಬಂದು ಇಂತೆಂದಿತು. (ಇಲ್ಲಿ ಹಂಸದಲ್ಲಿ ಒಳಹೊಕ್ಕ ಆದಿತ್ಯನನ್ನೇ ಹಂಸವೆಂದಿದೆ). "ಸತ್ಯಕಾಮನೆ, ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡುವೆನು. ಅಗ್ನಿ, ಸೂರ್ಯ, ಚಂದ್ರ, ಮಿಂಚು- ಇವೇ ಈ ಪಾದದ ನಾಲ್ಕು ಕಲೆಗಳು. ಇದಕ್ಕೆ ಜ್ಯೋತಿಷ್ಮಂತನೆಂದು ಹೆಸರು. ಯಾವನು ಹೀಗೆಂದರಿತು ಈ ಪಾದವನ್ನು ಉಪಾಸನೆಮಾಡುವನೋ ಅವನು ಕಾಂತಿಯುಕ್ತನಾಗಿ ಬಾಳಿ ಪರದಲ್ಲಿ ಜ್ಯೋತಿಯುಕ್ತನಾದ ಚಂದ್ರಾದಿತ್ಯಾದಿ ಲೋಕಗಳನ್ನು ಪಡೆದುಕೊಳ್ಳುವನು" ಎಂದಿತು.

## ಎಂಟನೆಯ ಖಂಡ

"ನೀರುಕೋಳಿಯು ನಿನಗೆ ಇನ್ನೊಂದು ಪಾದವನ್ನು ಹೇಳಿಕೊಡುವದು" ಎಂದು ಹಂಸವು ಸುಮ್ಮನಾಯಿತು. ಅವನು ಮಾರನೆಯ ದಿನ ಸಾಯಂಕಾಲವೂ ಮತ್ತೊಂದು ಕಡೆಯಲ್ಲಿ ದನವನ್ನು ನಿಲಿಸಿ ಹಿಂದಿನ ದಿನದಂತೆ ಅಗ್ನಿಯ ಬಳಿಯಲ್ಲಿ ಕುಳಿತನು

ನೀರುಕೋಳಿಯು (ಅದರಲ್ಲಿ ಪ್ರವಿಷ್ಟನಾದ ಪ್ರಾಣನು), "ಸತ್ಯಕಾಮನೆ, ನಿನಗೆ ಬ್ರಹ್ಮದ ನಾಲ್ಕನೆಯ ಪಾದವನ್ನು ಹೇಳಿಕೊಡುವೆನು. ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು- ಇವೇ ಇದರ ಕಲೆಗಳು. ಇದಕ್ಕೆ ಆಯತನನೆಂದು ಹೆಸರು ಯಾವನು ಬ್ರಹ್ಮದ ಈ ಪಾದವನ್ನು ಹೀಗೆಂದರಿತು ಉಪಾಸನೆಮಾಡುವನೋ ಅವನು ಈ ಲೋಕದಲ್ಲಿ ಆಶ್ರಯವುಳ್ಳವನಾಗಿ ಬಾಳಿ, ಪರದಲ್ಲಿ ಅವಕಾಶಯುಕ್ತವಾದ ಲೋಕಗಳನ್ನು ಪಡೆದುಕೊಳ್ಳುವನು.

## ಒಂಬತ್ತನೆಯ ಖಂಡ

ಸತ್ಯಕಾಮನು ಕೊನೆಗೆ ಗುರುಗಳ ಮನೆಗೆ ಬಂದನು. ಹಾರಿದ್ರುಮತರು "ಸತ್ಯಕಾಮನೆ, ಬ್ರಹ್ಮಜ್ಞಾನಿಯಂತೆ ಕಾಣಿಸುತ್ತಿರುವೆಯಲ್ಲ! ನಿನಗೆ ಈ ವಿದ್ಯೆಯನ್ನು ಯಾರು ಹೇಳಿಕೊಟ್ಟರು?" ಎಂದು ಕೇಳಿದರು. ಸತ್ಯಕಾಮನು "ಮನುಷ್ಯರಂತೂ ಅಲ್ಲ, ಅದರೆ ಯಾರು ಹೇಳಿಕೊಟ್ಟರೇನು? ನನಗೆ ತಾವೇ ಉಪದೇಶಿಸಬೇಕೆಂಬ ಇಚ್ಛೆ. ಆಚಾರ್ಯರಿಂದಲೇ ವಿದ್ಯೆಯನ್ನು ಪಡೆದುಕೊಂಡರೆ ಅದು ಉತ್ತಮಫಲವನ್ನು ಕೊಡುವದು ಎಂದು ತಮ್ಮಂಥವರಿಂದ ಕೇಳಿರುತ್ತೇನೆ" ಎಂದನು ಆಗ ಗುರುಗಳು ಇದೇ ಷೋಡಶಕಲವಿದ್ಯೆಯನ್ನು ಅವನಿಗೆ ಉಪದೇಶಿಸಿದರು. ಅವರಿಂದ ವಿದ್ಯೆಯಲ್ಲಿ ಒಂದಿಷ್ಟೂ ಅವನನ್ನು ಬಿಟ್ಟು ಹೋಗದಂತೆ ಗಟ್ಟಿಯಾಯಿತು.

# ನಾಲ್ಕನೆಯ ಅಧ್ಯಾಯ-ಹತ್ತನೆಯ ಖಂಡ

(ಉಪಕೋಸಲವಿದ್ಯೆ)

## ಉಪಕೋಸಲನು ವಿದ್ಯೆಗಾಗಿ ನಿರಶನನಾದದ್ದು

(ಉಪನಿಷತ್ತು)

**ಉಪಕೋಸಲೋ ಹ ವೈ ಕಾಮಲಾಯನಃ ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಮುವಾಸ ತಸ್ಯ ಹ ದ್ವಾದಶವರ್ಷಾಣ್ಯಗ್ನೀನ್ ಪರಿಚಚಾರ ಸ ಹ ಸ್ಮಾನ್ಯಾನನ್ತೇವಾಸಿನಃ ಸಮಾವರ್ತಯಗ್ಂಸ್ತಗ್ಂ ಹ ಸ್ಮೈವ ನ ಸಮಾವರ್ತಯತಿ ॥೧॥**

೧. ಉಪಕೋಸಲ ಕಾಮಲಾಯನನು ಸತ್ಯಕಾಮಜಾಬಾಲನಲ್ಲಿ ಬ್ರಹ್ಮಚರ್ಯದಿಂದ ಇರುತ್ತಿದ್ದನು. ಆತನ ಅಗ್ನಿಗಳನ್ನು ಹನ್ನೆರಡು ವರ್ಷಗಳು ಪರಿಚರ್ಯೆಮಾಡಿದನು. ಆತನು ಮಿಕ್ಕ ಶಿಷ್ಯರನ್ನು ಸಮಾವರ್ತನಮಾಡಿಸಿದರೂ ಅವನನ್ನೊಬ್ಬನನ್ನೇ ಸಮಾವರ್ತನಮಾಡಿಸಲಿಲ್ಲ.

### ಗ್ರಂಥದ ಸಂಬಂಧ

(ಭಾಷ್ಯ)

೩೨೭. ಪುನರ್ಬ್ರಹ್ಮವಿದ್ಯಾಂ ಪ್ರಕಾರಾನ್ತರೇಣ ವಕ್ಷ್ಯಾಮೀತ್ಯಾರಭತೇ, ಗತಿಂ ಚ ತದ್ವಿದಃ, ಅಗ್ನಿವಿದ್ಯಾಂ ಚ । ಆಖ್ಯಾಯಿಕಾ ಪೂರ್ವವತ್ ಶ್ರದ್ಧಾತಪಸೋರ್ಬ್ರಹ್ಮವಿದ್ಯಾಸಾಧನತ್ವಪ್ರದರ್ಶನಾರ್ಥಾ ॥

(ಭಾಷ್ಯಾರ್ಥ)

ಮತ್ತೆ, ಇನ್ನೊಂದು ಪ್ರಕಾರದಿಂದ ಬ್ರಹ್ಮವಿದ್ಯೆಯನ್ನೂ ಬ್ರಹ್ಮಜ್ಞಾನಿಗೆ ಗತಿಯನ್ನೂ ಅಗ್ನಿವಿದ್ಯೆಯನ್ನೂ ಹೇಳೋಣವೆಂದು (ಮುಂದಿನ ಗ್ರಂಥವನ್ನು) ಆರಂಭಿಸಿರುತ್ತದೆ. ಕಥೆಯು ಹಿಂದಿನಂತೆ ಶ್ರದ್ಧಾತಪಸ್ಸುಗಳು ಬ್ರಹ್ಮವಿದ್ಯೆಗೆ ಸಾಧನವೆಂಬುದನ್ನು ತಿಳಿಸುವುದಕ್ಕೆ (ಬಂದಿದೆ).

### ಉಪಕೋಸಲನಿಗೆ ಗುರು ವಿದ್ಯೆಯನ್ನು ಹೇಳದೆ ಇದ್ದದ್ದು

(ಭಾಷ್ಯ)

**೩೨೮. ಉಪಕೋಸಲೋ ಹ ವೈ ನಾಮತಃ ಕಮಲಸ್ಯಾಪತ್ಯಂ ಕಾಮಲಾಯನಃ ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಮ್ ಉವಾಸ । ತಸ್ಯ**

ಹ ಐತಿಹ್ಯಾರ್ಥಃ । ತಸ್ಯಾಚಾರ್ಯಸ್ಯ ದ್ವಾದಶ ವರ್ಷಾಣಿ ಅಗ್ನೀನ್ ಪರಿಚಚಾರ ಅಗ್ನೀನಾಂ ಪರಿಚರಣಂ ಕೃತವಾನ್ । ಸ ಹ ಸ್ಮ ಆಚಾರ್ಯಃ ಅನ್ಯಾನ್ ಬ್ರಹ್ಮಚಾರಿಣಃ ಸ್ವಾಧ್ಯಾಯಂ ಗ್ರಾಹಯಿತ್ವಾ ಸಮಾವರ್ತಯನ್ ತಮೇವೋಪ ಕೋಸಲಮ್ ಏಕಂ ನ ಸಮಾವರ್ತಯತಿ ಸ್ಮ ಹ ॥

(ಭಾಷ್ಯಾರ್ಥ)

ಉಪಕೋಸಲನೆಂಬ ಹೆಸರುಳ್ಳ ಕಮಲನ ಮಗನಾದ ಕಾಮಲಾಯನನು, ಸತ್ಯಕಾಮಜಾಬಾಲನಲ್ಲಿ ಬ್ರಹ್ಮಚರ್ಯದಿಂದಿರುತ್ತಿದ್ದನು ಆತನ- ಹ ಎಂಬುದು ಹಿಂದೆ ನಡೆದದ್ದನ್ನು ತಿಳಿಸುವದಕ್ಕೆ (ಬಂದಿರುವ ಶಬ್ದವು)- ಆ ಆಚಾರ್ಯನ ಅಗ್ನಿಗಳನ್ನು ಹನ್ನೆರಡು ವರ್ಷಗಳವರೆಗೆ ಪರಿಚರ್ಯೆಮಾಡಿದನು, ಅಗ್ನಿಗಳ ಸೇವೆಯನ್ನು ಮಾಡಿದನು ಆ ಆಚಾರ್ಯನು ಮಿಕ್ಕ ಬ್ರಹ್ಮಚಾರಿಗಳಿಗೆ ಅಧ್ಯಯನವನ್ನು ಕಲಿಸಿ ಹಿಂತಿರುಗಿ ಕಳುಹಿಸಿಕೊಟ್ಟನು, ಅವನೊಬ್ಬನನ್ನೇ ಉಪಕೋಸಲನೊಬ್ಬನನ್ನು ಮಾತ್ರ ಹಿಂತಿರುಗಿ ಕಳುಹಿಸಲಿಲ್ಲ

(ಉಪನಿಷತ್ತು)

**ತಂ ಜಾಯೋವಾಚ ತಪ್ತೋ ಬ್ರಹ್ಮಚಾರೀ ಕುಶಲಮಗ್ನೀನ್ ಪರಿಚಚಾರೀನ್ಮಾ ತ್ವಾಽಗ್ನಯಃ ಪರಿಪ್ರವೋಚನ್ ಪ್ರಬ್ರೂಹ್ಯಸ್ಮಾ ಇತಿ ತಸ್ಮೈ ಹಾಪ್ರೋಚ್ಯೈವ ಪ್ರವಾಸಾಂಚಕ್ರೇ ॥ ೨ ॥**

೨. ಆತನನ್ನು (ಕುರಿತು) ಹೆಂಡತಿಯು 'ಬ್ರಹ್ಮಚಾರಿಯು ತಪ್ತನಾಗಿರುತ್ತಾನೆ; ಕುಶಲವಾಗಿ ಅಗ್ನಿಗಳನ್ನು ಪರಿಚರ್ಯೆ ಮಾಡಿರುತ್ತಾನೆ. ನಿನ್ನನ್ನು ಅಗ್ನಿಗಳು (ಏನೂ) ಅನ್ನದೆ ಇರಲಿ! ಇವನಿಗೆ ಹೇಳಿಕೊಡು!' ಎಂದಳು. ಅವನಿಗೆ ಹೇಳಿಕೊಡದೆಯೇ ಹೊರಟುಹೋದನು.

## ಹೆಂಡತಿ ನೆನಪುಕೊಟ್ಟರೂ ಗುರು ಉಪದೇಶಿಸದೆ ಹೊರಟುಹೋದದ್ದು

(ಭಾಷ್ಯ)

೩೨೭. ತಮ್ ಆಚಾರ್ಯಂ ಜಾಯಾ ಉವಾಚ । ತಪ್ತೋ ಬ್ರಹ್ಮಚಾರೀ ಕುಶಲಂ ಸಮ್ಯಕ್ ಅಗ್ನೀನ್ ಪರಿಚಚಾರೀತ್ ಪರಿಚರಿತವಾನ್ । ಭಗವಾಂಶ್ಚ ಅಗ್ನಿಷು ಭಕ್ತಂ ನ ಸಮಾವರ್ತಯತಿ । ಅತಃ ಅಸ್ಮದ್ಭಕ್ತಂ ನ ಸಮಾವರ್ತ ಯತೀತಿ ಜ್ಞಾತ್ವಾ ತ್ವಾಮ್ ಅಗ್ನಯಃ ಮಾ ಪರಿಪ್ರವೋಚನ್ ಗರ್ಹಾಂ ತವ

ಮಾ ಕುರ್ಯುಃ । ಅತಃ ಪ್ರಬ್ರೂಹಿ ಅಸ್ಮೈ ವಿದ್ಯಾಮ್ ಇಷ್ಟಾಮ್ ಉಪಕೋಸಲಾಯ ಇತಿ । ತಸ್ಮೈ ಏವಂ ಜಾಯಯಾ ಉಕ್ತೋಽಪಿ ಹ ಅಪ್ರೋಚ್ಯೈವ ಅನುಕ್ತ್ವೈವ ಕಿಂಚಿತ್ ಪ್ರವಾಸಾಂಚಕ್ರೇ ಪ್ರವಸಿತವಾನ್ ॥

(ಭಾಷ್ಯಾರ್ಥ)

ಆ ಆಚಾರ್ಯನನ್ನು ಕುರಿತು ಹೆಂಡತಿಯು 'ಬ್ರಹ್ಮಚಾರಿಯು ತಪ್ತನಾಗಿರುತ್ತಾನೆ'[1]. ಅಗ್ನಿಗಳನ್ನು ಕುಶಲವಾಗಿ ಚೆನ್ನಾಗಿ ಪರಿಚರ್ಯೆಮಾಡಿರುತ್ತಾನೆ, ಸೇವಿಸಿರುತ್ತಾನೆ. ಆದರೆ ಅಗ್ನಿಗಳಲ್ಲಿ ಭಕ್ತಿಯುಳ್ಳ ಅವನನ್ನು ತಾವು ಹಿಂದಕ್ಕೆ ಕಳುಹಿಸುತ್ತಿಲ್ಲ. ಆದ್ದರಿಂದ ನಮ್ಮ ಭಕ್ತನನ್ನು ಹಿಂದಕ್ಕೆ ಕಳುಹಿಸಲಿಲ್ಲವಲ್ಲ !- ಎಂದರಿತು ನಿಮ್ಮನ್ನು ಅಗ್ನಿಗಳು (ಏನೂ) ಹೇಳದೆ ಇರಲಿ, ನಿಮ್ಮ ನಿಂದೆಯನ್ನು ಮಾಡದೆ ಇರಲಿ ! ಆದ್ದರಿಂದ ಈ ಉಪಕೋಸಲನಿಗೆ ಇಷ್ಟವಾದ ವಿದ್ಯೆಯನ್ನು ಹೇಳಿರಿ !' ಎಂದಳು.

ಹೀಗೆಂದು ಹೇಳಿದಮೇಲೂ ಅವನಿಗೆ ಹೇಳದೆಯೇ ಏನನ್ನೂ ಹೇಳಿಕೊಡದೆಯೇ (ಆಚಾರ್ಯನು ಊರುಬಿಟ್ಟು) ಹೊರಟುಹೋದನು

(ಉಪನಿಷತ್ತು)

**ಸ ಹ ವ್ಯಾಧಿನಾನಶಿತುಂ ದಧ್ರೇ ತಮಾಚಾರ್ಯಜಾಯೋವಾಚ ಬ್ರಹ್ಮಚಾರಿನ್ನಶಾನ ಕಿಂ ನು ನಾಶ್ನಾಸೀತಿ ಸ ಹೋವಾಚ ಬಹವ ಇಮೇಽಸ್ಮಿನ್ ಪುರುಷೇ ಕಾಮಾ ನಾನಾತ್ಯಯಾ ವ್ಯಾಧಿಭಿಃ ಪ್ರತಿಪೂರ್ಣೋಽಸ್ಮಿ ನಾಶಿಷ್ಯಾಮೀತಿ ॥ ೩ ॥**

೩. ಅವನು ವ್ಯಾಧಿಯಿಂದ ಊಟಮಾಡದಿರುವದಕ್ಕೆ ನಿಶ್ಚಯಿಸಿದನು. ಅವನನ್ನು ಆಚಾರ್ಯನ ಹೆಂಡತಿ 'ಬ್ರಹ್ಮಚಾರಿಯೆ, ಊಟಮಾಡು. ಏಕೆ ಊಟಮಾಡದಿರುವೆಯೊ ?' ಎಂದಳು. ಅವನು 'ಈ ಪುರುಷನಲ್ಲಿ ನಾನಾಗತಿಯ ಬಹಳ ಕಾಮಗಳಿರುವವು, ವ್ಯಾಧಿಗಳಿಂದ ತುಂಬಿರುವೆನು, ಊಟಮಾಡೆನು' ಎಂದನು.

## ಉಪಕೋಸಲನು ವ್ಯಥೆಯಿಂದ ಊಟಮಾಡದೆಹೋದದ್ದು

(ಭಾಷ್ಯ)

೩-೪. ಸ ಹ ಉಪಕೋಸಲಃ ವ್ಯಾಧಿನಾ ಮಾನಸೇನ ದುಃಖೇನ ಅನಶಿತುಮ್ ಅನಶನಂ ಕರ್ತುಂ ದಧ್ರೇ ಧೃತವಾನ್ ಮನಃ । ತಂ ತೂಷ್ಣೀಮ್

1. ನಿಮ್ಮ ಶುಶ್ರೂಷೆಯಲ್ಲಿ ಬಹಳ ಕಾಯಕ್ಲೇಶವನ್ನು ಮಾಡಿದ್ದಾನೆ- ಎಂದು ಟೀಕೆ ; ತಪಸ್ಸುಮಾಡಿದ್ದಾನೆ ಎಂದರ್ಥ. ವಿದ್ಯೆಯಿಲ್ಲದೆ ಸಂತಪ್ತನಾಗಿದಾನೆ ಎಂಬರ್ಥವೂ ಇರಬಹುದು

ಅಗ್ನ್ಯಗಾರೇಽವಸ್ಥಿತಮ್ ಆಚಾರ್ಯಜಾಯಾ ಉವಾಚ। ಹೇ ಬ್ರಹ್ಮಚಾರಿನ್ ಅಶಾನ ಭುಙ್ಕ್ಷ್ವ । ಕಿಂ ನು ಕಸ್ಮಾನ್ನು ಕಾರಣಾತ್ ನಾಶ್ನಾಸಿ? ಇತಿ। ಸ ಹ ಉವಾಚ। ಬಹವಃ ಅನೇಕೇ ಅಸ್ಮಿನ್ ಪುರುಷೇ ಅಕೃತಾರ್ಥೇ ಪ್ರಾಕೃತೇ ಕಾಮಾಃ ಇಚ್ಛಾಃ ಕರ್ತವ್ಯಂ ಪ್ರತಿ। ನಾನಾ ಅತ್ಯಯಃ ಅತಿಗಮನಂ ಯೇಷಾಂ ವ್ಯಾಧೀನಾಂ ಕರ್ತವ್ಯಚಿನ್ತಾನಾಂ ತೇ ನಾನಾತ್ಯಯಾ ವ್ಯಾಧಯಃ । ಕರ್ತವ್ಯತಾಽ ಪ್ರಾಪ್ತಿನಿಮಿತ್ತಾನಿ ಚಿತ್ತದುಃಖಾನಿ ಇತ್ಯರ್ಥಃ। ತೈಃ ಪ್ರತಿಪೂರ್ಣೋಽಸ್ಮಿ। ಅತೋ ನಾಶಿಷ್ಯಾಮಿತ್ಯುಕ್ತ್ವಾ ತೂಷ್ಣೀಂ ಭೂತೇ ಬ್ರಹ್ಮಚಾರಿಣಿ—

(ಭಾಷ್ಯಾರ್ಥ)

ಆ ಉಪಕೋಸಲನು ವ್ಯಾಧಿಯಿಂದ ಮನಸ್ಸಿನ ದುಃಖದಿಂದ[1] ಊಟ ಮಾಡದಿರುವದಕ್ಕೆ ಉಪವಾಸವನ್ನು ಮಾಡುವದಕ್ಕೆ ನಿಶ್ಚಯಿಸಿದನು, ಮನಸ್ಸು ಮಾಡಿದನು ಸುಮ್ಮನೆ ಅಗ್ನಿಯ ಮನೆಯಲ್ಲಿ ಇದ್ದುಕೊಂಡಿದ್ದ ಅವನನ್ನು ಕುರಿತು ಆಚಾರ್ಯನ ಹೆಂಡತಿಯು "ಎಲೈ ಬ್ರಹ್ಮಚಾರಿಯೆ, ಊಟಮಾಡು, ಭೋಜನಮಾಡು, ಏತಕ್ಕೆ ಯಾವ ಕಾರಣದಿಂದ ಊಟಮಾಡದಿರುವೆಯೊ!" ಎಂದಳು. ಅವನು "ಈ ಪುರುಷನಲ್ಲಿ ಪ್ರಾಕೃತನಾದ ಕೃತಾರ್ಥನಲ್ಲದ (ಈ ಮನುಷ್ಯನಲ್ಲಿ), ನಾನಾಗತಿಯು- ಬಗೆಬಗೆಯ ಅತ್ಯಯವು, (ಒಂದನ್ನು) ಬಿಟ್ಟು (ಮತ್ತೊಂದಕ್ಕೆ) ಹೋಗುವಿಕೆಯು, ಯಾವ ವ್ಯಾಧಿಗಳಿಗೆ ಕರ್ತವ್ಯಚಿಂತೆಗಳಿಗೆ[2] ಇರುವದೋ ಅವು ನಾನಾತ್ಯಯ (ನಾನಾಗತಿಯ ಕಾಮಗಳು), ಅಂಥ-ಈ ಕಾಮಗಳು, ಕರ್ತವ್ಯಕ್ಕಾಗಿರುವ ಇಚ್ಛೆಗಳು, ಬಹಳ, ಅನೇಕ. (ವ್ಯಾಧಿಗಳಿಂದ) ವ್ಯಾಧಿಗಳೆಂದರೆ ಕರ್ತವ್ಯತೆಯು ದೊರೆಯದೆ ಇರುವದರಿಂದಾದ ಚಿತ್ತದುಃಖಗಳು[3]

---

1. ರೂಢಿಯಲ್ಲಿ ವ್ಯಾಧಿಯೆಂದರೆ ರೋಗವು; ಇಲ್ಲಿ ಅವನಿಗೆ ಮನಸ್ಸಿನ ವ್ಯಥೆಯು ಮಾತ್ರ ಇದ್ದದ್ದರಿಂದ ಆಧಿ ಎಂಬರ್ಥದಲ್ಲಿಯೇ ಈ ಶಬ್ದವನ್ನು ಪ್ರಯೋಗಿಸಿದೆ ಎಂದು ಭಾವ.

2. 'ಯೇಷಾಂ ವ್ಯಾಧೀನಾಂ' ಎಂದು ಭಾಷ್ಯದಲ್ಲಿದೆ. ಮೂಲದಲ್ಲಿ ನಾನಾತ್ಯಯಾಃ ಎಂಬುದು ಕಾಮಗಳಿಗೆ ವಿಶೇಷಣವಾಗಿದೆಯಾದ್ದರಿಂದ ಭಾಷ್ಯದಲ್ಲಿ ವ್ಯಾಧಿಗಳೆಂದರೆ ಕಾಮಗಳೇ ಎಂದು ಟೀಕೆ. ಆದರೆ ಭಾಷ್ಯದಲ್ಲಿ ಕಾಮಗಳು, ಇಚ್ಛೆಗಳು -ಎಂದು ವಿವರಿಸಿ ಕರ್ತವ್ಯಚಿಂತೆಗಳು ಎಂದು ಹೇಳಿರುವದರಿಂದ ಇಂಥದ್ದನ್ನು ಮಾಡಬೇಕೆಂಬ ಚಿಂತೆಯೇ ಕಾಮಗಳೆಂದಾಗುತ್ತದೆ. 'ವ್ಯಾಧೀನಾಂ' ಎಂಬುದು 'ಕಾಮಾನಾಂ' ಎಂಬುದರ ಬದಲು ಲೇಖಕರ ಕೈತಪ್ಪಿನಿಂದ ಬಿದ್ದಿರಬಾರದೆ? ವಿಚಾರಿಸತಕ್ಕದ್ದಾಗಿದೆ.

3. ವ್ಯಾಧಿಗಳು ಎಂದರೆ ಕರ್ತವ್ಯತಾಽಪ್ರಾಪ್ತಿಯ ದುಃಖಗಳು; ಉಪಕೋಸಲನಿಗೆ ವಿದ್ಯೆಯನ್ನು ದೊರಕಿಸಿಕೊಳ್ಳಲಿಲ್ಲವಲ್ಲ ಎಂಬ ಕಾರಣದಿಂದ ದುಃಖವಾಗಿತ್ತು. ಇಲ್ಲಿ 'ಕರ್ತವ್ಯಚಿಂತಾ' ಎಂದಿರದೆ ಅಪ್ರಾಪ್ತಿನಿಮಿತ್ತದುಃಖಾದಿ ಎಂದಿರುವದರಿಂದ ಹಿಂದೆ 'ಕಾಮಾನಾಂ' ಎಂಬುದಕ್ಕೆ ವ್ಯಾಧೀನಾಂ ಎಂದು ತಪ್ಪಿನಿಂದ ಬರೆದುಕೊಂಡದ್ದಾಗಿರಬಹುದೆಂಬ ಊಹೆಗೆ ಬೆಂಬಲವಿದೆ

ಎಂದರ್ಥ, ಆ (ವ್ಯಾಧಿಗಳಿಂದ) ತುಂಬಿರುತ್ತೇನೆ ಆದ್ದರಿಂದ ಊಟಮಾಡೆನು" ಎಂದು ನುಡಿದು ಬ್ರಹ್ಮಚಾರಿಯು ಸುಮ್ಮನಾಗಲು[1] —

# ಉಪಕೋಸಲನಿಗೆ ಅಗ್ನಿಗಳ ಒಟ್ಟು ಉಪದೇಶ

(ಉಪನಿಷತ್ತು)

**ಅಥ ಹಾಗ್ನಯಃ ಸಮೂದಿರೇ ತಪ್ತೋ ಬ್ರಹ್ಮಚಾರೀ ಕುಶಲಂ ನಃ ಪರ್ಯಚಾರೀದ್ಧನ್ತಾಸ್ಮೈ ಪ್ರಬ್ರವಾಮೇತಿ ತಸ್ಮೈ ಹೋಚುಃ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ[2] ॥ ೪ ॥**

೪. ಆಗ ಅಗ್ನಿಗಳು 'ಬ್ರಹ್ಮಚಾರಿಯು ತಪ್ತನಾಗಿರುತ್ತಾನೆ. ನಮ್ಮನ್ನು ಚೆನ್ನಾಗಿ ಪರಿಚರ್ಯೆಮಾಡಿದ್ದಾನೆ. ಒಳ್ಳೆಯದು, ಇವನಿಗೆ ಹೇಳಿಕೊಡೋಣ' ಎಂದು ಸಂವಾದಮಾಡಿಕೊಂಡವು. ಅವನಿಗೆ 'ಪ್ರಾಣವು ಬ್ರಹ್ಮವು; ಕಂ ಬ್ರಹ್ಮವು, ಖಂ ಬ್ರಹ್ಮವು' ಎಂದು ಹೇಳಿದವು.

## ಪ್ರಾಣವು ಬ್ರಹ್ಮ, ಕಂ ಬ್ರಹ್ಮ, ಖಂ ಬ್ರಹ್ಮ

(ಭಾಷ್ಯ)

೩೯. ಅಥ ಹ ಅಗ್ನಯಃ ಶುಶ್ರೂಷಯಾ ಆವರ್ಜಿತಾಃ ಕಾರುಣ್ಯಾವಿಷ್ಟಾಃ ಸನ್ತಃ ತ್ರಯೋಽಪಿ ಸಮೂದಿರೇ ಸಂಭೂಯ ಉಕ್ತವನ್ತಃ। 'ಹನ್ತ ಇದಾನೀಮ್ ಅಸ್ಮೈ ಬ್ರಹ್ಮಚಾರಿಣೇ ಅಸ್ಮದ್ಭಕ್ತಾಯ ದುಃಖಿತಾಯ ತಪಸ್ವಿನೇ ಶ್ರದ್ದಧಾನಾಯ ಸರ್ವೇ ಅನುಶಾಸ್ಮ ಅನುಪ್ರಬ್ರವಾಮ[3] ಬ್ರಹ್ಮವಿದ್ಯಾಮ್' ಇತಿ। ಏವಂ ಸಂಪ್ರಧಾರ್ಯ ತಸ್ಮೈ ಹ ಊಚುಃ ಉಕ್ತವನ್ತಃ 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಇತಿ ॥

---

1. 'ಇತ್ಯುಕ್ತ್ವಾ ತೂಷ್ಣೀಂಭೂತೇ ಬ್ರಹ್ಮಚಾರಿಣಿ' ಎಂಬುದು ಮುಂದಿನ ಭಾಷ್ಯಕ್ಕೆ ಸಂಬಂಧವನ್ನು ಹೇಳುವ ವಾಕ್ಯ. ಮೂಲದಲ್ಲೊಂದು ಇತಿಯನ್ನು ಇಲ್ಲಿ ಬಿಟ್ಟಿದೆಯೆಂದೋ ಇತಿಯ ಮುಂದೆ ಮತ್ತೊಂದು ಇತಿಯು ಬರುವಾಗ ಅದನ್ನು ಬಿಡುವದು ಭಾಷ್ಯಕಾರರ ಶೈಲಿಯೆಂದೋ ಇಟ್ಟುಕೊಳ್ಳಬೇಕಾಗಿದೆ.

2. ಈ ವಾಕ್ಯವು ತೆ॥ ಪಾಠದಲ್ಲಿ ಮುಂದಿನ ಕಂಡಿಕೆಗೆ ಸೇರಿದೆ.

3. ಪ್ರಬ್ರವಾಮ ಎಂದೇ ಮೂಲದಲ್ಲಿರುವದರಿಂದ ಅನುಶಾಸ್ಮ ಎಂಬುದೇ ಅದಾದ ಮೇಲೆ ಇದ್ದರೆ ಚೆನ್ನಾಗಿತ್ತು ; ಅನು ಎಂಬುದು ಅರ್ಥದ್ಯೋತನಕ್ಕಾಗಿ ಸೇರಿಸಿಕೊಂಡದ್ದು.

(ಭಾಷ್ಯಾರ್ಥ)

ಆ ಬಳಿಕ ಅಗ್ನಿಗಳು (ಅವನ) ಶುಶ್ರೂಷೆಯಿಂದ (ಅವನಿಗೆ) ಒಲಿದು ಕಾರುಣ್ಯದಿಂದೊಡಗೂಡಿದವಾಗಿ[1] ಮೂರೂ ಸಂವಾದಮಾಡಿಕೊಂಡವು, ಒಟ್ಟು ಸೇರಿ ಇಂತೆಂದವು 'ಒಳ್ಳೆಯದು[2], ಈಗ ಈ ನಮ್ಮ ಭಕ್ತನಾದ, ದುಃಖಿಯೂ ತಪಸ್ವಿಯೂ[3] ಶ್ರದ್ಧಾವಂತನೂ ಆಗಿರುವ ಬ್ರಹ್ಮಚಾರಿಗೆ ಬ್ರಹ್ಮವಿದ್ಯೆಯನ್ನು (ಅನುಪ್ರಬ್ರವಾಮ=ಅನುಶಾಸ್ಮ) ಎಲ್ಲರೂ (ಸೇರಿ) ಹೇಳಿಕೊಡೋಣ" ಹೀಗೆಂದು ನಿಶ್ಚಯಿಸಿ ಅವನಿಗೆ ಪ್ರಾಣವು ಬ್ರಹ್ಮ, ಕಂ ಬ್ರಹ್ಮ, ಖಂ ಬ್ರಹ್ಮ ಎಂದು (ಊಚುಃ- ಉಕ್ತವನ್ತಃ) ತಿಳಿಸಿದವು

(ಉಪನಿಷತ್ತು)

**ಸ ಹೋವಾಚ ವಿಜಾನಾಮ್ಯಹಂ ಯತ್ ಪ್ರಾಣೋ ಬ್ರಹ್ಮ ಕಂ ಚ ತು ಖಂ ಚ ನ ವಿಜಾನಾಮೀತಿ ತೇ ಹೋಚುರ್ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಮಿತಿ ಪ್ರಾಣಂ ಚ ಹಾಸ್ಮೈ ತದಾಕಾಶಂ ಚೋಚುಃ ॥ ೫ ॥**

೫. ಅವನು ಹೇಳಿದನೇನೆಂದರೆ 'ಪ್ರಾಣವು ಬ್ರಹ್ಮ ಎಂಬುದನ್ನು ನಾನು ತಿಳಿದುಕೊಂಡೆನು. ಆದರೆ ಕಂ ಎಂಬುವನ್ನೂ ಖಂ ಎಂಬುದನ್ನೂ ತಿಳಿಯಲಾರೆ'. ಅವು ಹೇಳಿದವೇನೆಂದರೆ 'ಕಂ ಎಂಬುದು ಯಾವದೋ ಅದೇ ಖಂ; ಖಂ ಎಂಬುದು ಯಾವದೋ ಅದೇ ಕಮ್'. ಪ್ರಾಣವನ್ನೂ ಅದರ ಆಕಾಶವನ್ನೂ ಅವನಿಗೆ ಹೇಳಿಕೊಟ್ಟವು.

## ಉಪಕೋಸಲನ ಸಂಶಯ

(ಭಾಷ್ಯ)

೩೩೦. ಸ ಹ ಉವಾಚ ಬ್ರಹ್ಮಚಾರೀ। ವಿಜಾನಾಮ್ಯಹಂ ಯದ್ ಭವದ್ಭಿರುಕ್ತಂ ಪ್ರಸಿದ್ಧಪದಾರ್ಥಕತ್ವಾತ್[4] ಪ್ರಾಣೋ ಬ್ರಹ್ಮೇತಿ। ಸ[5] ಯಸ್ಮಿನ್

1. 'ವರ್ಜಿತಾಃ' ಎಂದು ಪರಿಚ್ಛೇದವನಾಡಿದ ಪಾಠವೂ ಅಚ್ಚಿನ ಆ॥ ಪುಸ್ತಕದಲ್ಲಿವೆ; ಆದರೆ ಶುಶ್ರೂಷೆಬಿಟ್ಟನೆಂದು ಅಗ್ನಿಗಳು ಹೇಳಿಕೊಟ್ಟವು ಎಂಬುದು ಸರಿಯಾಗಿ ಕಾಣುವದಿಲ್ಲ.

2. ಹನ್ತ ಎಂಬ ಅವ್ಯಯವನ್ನು ಅನುಮತಿಯನ್ನು ಕೇಳುವ ಸೂಚನೆಗೆ ಶೇಷವಾಗಿ ಪ್ರಯೋಗಿಸುತ್ತಾರೆ.

3. ಉಪವಾಸದಿಂದ ಕೃಶನಾಗಿರುವ ಎಂಬರ್ಥವೂ ಇವರಲ್ಲಿ ಸೇರಿರಬಹುದು.

4 'ಪ್ರಸಿದ್ಧಪದಾರ್ಥತ್ವಾತ್' ಎಂದು ಕಕಾರರಹಿತಪಾಠವೂ ಉಂಟು.

5. ಇದು ಕೆಲವು ಪಾಠಗಳಲ್ಲಿರುವದಿಲ್ಲ; ಅನುವಾದದ ಟಿಪ್ಪಣಿಯನ್ನು ನೋಡಿ.

ಸತಿ ಜೀವನಂ ಯದಪಗಮೇ ಚ ನ ಭವತಿ[1], ತಸ್ಮಿನ್ ವಾಯುವಿಶೇಷೇ ಲೋಕೇ ರೂಢಃ। ಅತೋ ಯುಕ್ತಂ ಬ್ರಹ್ಮತ್ವಂ ತಸ್ಯ। ತೇನ ಪ್ರಸಿದ್ಧಪದಾರ್ಥಕತ್ವಾದ್ ವಿಜಾನಾಮ್ಯಹಂ ಯತ್ ಪ್ರಾಣೋ ಬ್ರಹ್ಮೇತಿ। ಕಂ ಚ ತು ಖಂ ಚ ನ ವಿಜಾನಾಮೀತಿ। ನನು ಕಂಖಂಶಬ್ದಯೋರಪಿ ಸುಖಾಕಾಶವಿಷಯತ್ವೇನ ಪ್ರಸಿದ್ಧ ಪದಾರ್ಥಕತ್ವಮೇವ। ಕಸ್ಮಾದ್ ಬ್ರಹ್ಮಚಾರಿಣೋಽಜ್ಞಾನಮ್ ? ನೂನಮ್। ಸುಖಸ್ಯ ಕಂಶಬ್ದವಾಚ್ಯಸ್ಯ ಕ್ಷಣಪ್ರಧ್ವಂಸಿತ್ವಾತ್ । ಖಂಶಬ್ದವಾಚ್ಯಸ್ಯ ಚಾಕಾಶಸ್ಯಾಚೇತನಸ್ಯ ಕಥಂ ಬ್ರಹ್ಮತ್ವಮ್ ಇತಿ ಮನ್ಯತೇ। ಕಥಂ ಚ ಭಗವತಾಂ ವಾಕ್ಯಮ್ ಅಪ್ರಮಾಣಂ ಸ್ಯಾದಿತಿ। ಅತೋ ನ ವಿಜಾನಾಮಿ ಇತ್ಯಾಹ ॥

(ಭಾಷ್ಯಾರ್ಥ)

ಆ ಬ್ರಹ್ಮಚಾರಿಯು ಇಂತೆಂದನು. ತಾವು ಹೇಳಿದಿರಲ್ಲ, ಪ್ರಾಣವು ಬ್ರಹ್ಮವೆಂದು, ಅದು ನನಗೆ ತಿಳಿಯಿತು ಏಕೆಂದರೆ (ಆ ವಾಕ್ಯದಲ್ಲಿ) ಪ್ರಸಿದ್ಧವಾದ ಅರ್ಥವಿದೆ.[2] ಯಾವದಿದ್ದರೆ ಜೀವನ(ವಿರುತ್ತದೆಯೋ), ಯಾವದು ಹೋದರೆ ಇಲ್ಲದೆಹೋಗುವದೋ, ಆ ವಾಯುವಿಶೇಷದಲ್ಲಿ ಆ (ಪ್ರಾಣಶಬ್ದವು) ರೂಢವಾಗಿದೆ.[3] ಆದ್ದರಿಂದ ಅದು ಬ್ರಹ್ಮವೆಂಬುದು ಯುಕ್ತವೇ. ಆದ್ದರಿಂದ ಪ್ರಾಣವು ಬ್ರಹ್ಮ ಎಂಬುದು ಪ್ರಸಿದ್ಧವಾದ ಅರ್ಥವುಳ್ಳ (ವಾಕ್ಯ)ವಾದ್ದರಿಂದ (ಅದು ನನಗೆ) ಗೊತ್ತಿದೆ. ಆದರೆ ಕಂ ಮತ್ತು ಖಂ (ಇವು ಬ್ರಹ್ಮ ಎಂದಿರಲ್ಲ, ಇದು) ನನಗೆ ತಿಳಿಯಲಿಲ್ಲ.

(ಆಕ್ಷೇಪ) :- ಕಂಖಂಶಬ್ದಗಳಿಗೂ ಸುಖ, ಆಕಾಶ- ಎಂಬ ಅರ್ಥವಿರುವದರಿಂದ (ಅದಕ್ಕೂ) ಪ್ರಸಿದ್ಧವಾದ ಅರ್ಥವೇ ಇದೆ.[4] ಬ್ರಹ್ಮಚಾರಿಗೆ (ಇವು) ತಿಳಿಯಲಿಲ್ಲ ಎಂಬುದಕ್ಕೆ ಕಾರಣವೇನು ?

---

1. ಇದರ ಮುಂದಿರುವ ಇತಿ ಬೇಡವೆಂದು ಬಿಟ್ಟುಬಿಟ್ಟಿವೆ

2. ಅದು ಪ್ರಸಿದ್ಧವಾದ ಅರ್ಥವಾಗಿದೆ -ಎಂಬುದು ಪ್ರಸಿದ್ಧಾರ್ಥತ್ವಾತ್ ಎಂಬುದಕ್ಕೆ ಕನ್ನಡ.

3. 'ರೂಢಃ' ಎಂಬುದಕ್ಕೆ 'ಸಃ' ಎಂಬ ಉದ್ದೇಶವಿದ್ದರೆ ಅನ್ವಯವಾಗುತ್ತದೆ, ಆದರೆ ಅದಕ್ಕೆ ಪದಾರ್ಥತ್ವಾತ್ ಎಂದಿರುವ ಪಾಠದಲ್ಲಿ ಪ್ರಾಣವು ಶಬ್ದವಲ್ಲ, ಪದಾರ್ಥವೇ ಆಗುವದು. ಆದ್ದರಿಂದ 'ಪದಾರ್ಥಕತ್ವಾತ್' ಎಂಬ ಪಾಠವನ್ನು ಒಪ್ಪುವದೇ ಸರಿಯೆಂದಾಗುತ್ತದೆ. ಆದರೆ ಆಗಲೂ ವಾಕ್ಯವೆಂಬುದೇ ಪರಾಮೃಷ್ಟವಾಗುತ್ತದೆ, ಪ್ರಾಣಶಬ್ದವೆಂಬ ಮಾತು ಹಿಂದೆ ಇಲ್ಲ. ಮತ್ತು 'ಅದು ಬ್ರಹ್ಮ' ಎಂಬ ವಾಕ್ಯಶೇಷದಲ್ಲಿ ಪ್ರಾಣವೇ ಬೇಕಾಗುತ್ತದೆ, ಪ್ರಾಣಶಬ್ದವಲ್ಲ. 'ರೂಢಃ ಪ್ರಾಣಶಬ್ದಃ' ಎಂದು ಟೀಕೆಯಲ್ಲಿ ಅಧ್ಯಾಹಾರಮಾಡಿಕೊಂಡಿವೆ ಅಲ್ಲಿಯೂ ಅನ್ವಯಕ್ಲೇಶವಿದೆ. ಆದ್ದರಿಂದ ವಾಕ್ಯವು ಏನೋ ಬರೆವವರ ಪ್ರಮಾದದಿಂದ ಹೆಚ್ಚುಕಡಿಮೆಯಾಗಿರಬೇಕು.

4. ಇಲ್ಲಿ ಶಬ್ದಗಳಿಗೆ ಅರ್ಥವಿದೆ ಎಂದಿರುವದರಿಂದ ಹಿಂದಿನ ವಾಕ್ಯದಲ್ಲಿಯೂ ಪ್ರಾಣಶಬ್ದದ ಪ್ರಯೋಗವಿತ್ತೆಂದು ಊಹಿಸುವದಕ್ಕೆಡೆಯಿದೆ.

(ಪರಿಹಾರ):- ಕಂಶಬ್ದವಾಚ್ಯವಾದ ಸುಖವು ಕ್ಷಣಕ್ಕೆ ನಾಶವಾಗುವ ದಾದ್ದರಿಂದಲೂ, ಖಂಶಬ್ದವಾಚ್ಯವಾದ ಆಕಾಶವು ಅಚೇತನವಾಗಿರುವದರಿಂದಲೂ (ಅವು) ಬ್ರಹ್ಮವೆಂದರೆ ಹೇಗೆ[1] ? ಎಂದು (ಅವನ) ಅಭಿಪ್ರಾಯವಿರಬೇಕು. ಆದರೆ ಪೂಜ್ಯರಾದ (ಅಗ್ನಿಗಳ) ವಾಕ್ಯವು ಹೇಗೆತಾನೆ ಅಪ್ರಮಾಣವಾದೀತು ? ಎಂದೂ (ಅವನ ಅಭಿಪ್ರಾಯವಿರಬೇಕು). ಆದ್ದರಿಂದ ನನಗೆ ತಿಳಿಯಲಿಲ್ಲ ಎಂದಿರುತ್ತಾನೆ

## ಸುಖವಿಶಿಷ್ಟಬ್ರಹ್ಮವನ್ನೇ ಇಲ್ಲಿ ಹೇಳಿದೆ

(ಭಾಷ್ಯ)

೩೩೧ ತಮ್ ಏವಮುಕ್ತವನ್ತಂ ಬ್ರಹ್ಮಚಾರಿಣಂ ತೇ ಹ ಅಗ್ನಯ ಊಚುಃ । ಯದ್ವಾವ ಯದೇವ ವಯಂ ಕಮ್ ಅವೋಚಾಮ । ತದೇವ ಖಮ್ ಆಕಾಶಮ್ । ಇತ್ಯೇವಂ ಖೇನ ವಿಶೇಷ್ಯಮಾಣಂ ಕಂ ವಿಷಯೇನ್ದ್ರಿಯ ಸಂಯೋಗಜಾತ್ ಸುಖಾನ್ನಿವರ್ತಿತಂ ಸ್ಯಾತ್ । ನೀಲೇನೇವ ವಿಶೇಷ್ಯಮಾಣಮ್ ಉತ್ಪಲಂ ರಕ್ತಾದಿಭ್ಯಃ । ಯದೇವ ಖಮ್ ಇತ್ಯಾಕಾಶಮ್ ಅವೋಚಾಮ, ತದೇವ ಚ ಕಂ ಸುಖಮಿತಿ ಜಾನೀಹಿ । ಏವಂ ಚ ಸುಖೇನ ವಿಶೇಷ್ಯಮಾಣಂ ಖಂ ಭೌತಿಕಾತ್ ಅಚೇತನಾತ್ ಖಾನ್ನಿವರ್ತಿತಂ ಸ್ಯಾತ್ । ನೀಲೋತ್ಪಲವದೇವ । ಸುಖಮಾಕಾಶಸ್ಥಂ ನೇತರಲ್ಲೌಕಿಕಮ್, ಆಕಾಶಂ ಚ ಸುಖಾಶ್ರಯಂ ನೇತರದ್ ಭೌತಿಕಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಂದು ಹೇಳಿದ ಬ್ರಹ್ಮಚಾರಿಯನ್ನು ಕುರಿತು ಆ ಅಗ್ನಿಗಳು ಇಂತೆಂದವು. (ಯದ್ವಾವ-ಯದೇವ) ಯಾವದನ್ನು ನಾವು ಕಂ ಎಂದೆವೋ, ಅದೇ ಖಮ್, ಆಕಾಶವು. ಹೀಗೆ ಆಕಾಶವೆಂಬ ವಿಶೇಷಣವನ್ನು ಕೊಟ್ಟದ್ದರಿಂದ ಕಂ (ಸುಖವನ್ನು) ವಿಷಯೇಂದ್ರಿಯಗಳ ಸಂಯೋಗದಿಂದುಂಟಾದ ಸುಖದಿಂದ ಬೇರ್ಪಡಿಸಿಕೊಂಡಂತೆ ಆಗುತ್ತದೆ. ಕಪ್ಪೆಂಬ ವಿಶೇಷಣವನ್ನು ಕೊಟ್ಟರೆ ನೈದಿಲೆಯನ್ನು ಕೆಂಪು (ನೈದಿಲೆ) ಮುಂತಾದವುಗಳಿಂದ (ಹೇಗೆ ಬೇರ್ಪಡಿಸಿಕೊಂಡಂತೆ ಆಗುವದೋ) ಹಾಗೆ. ಯಾವದನ್ನು ಖಮ್, ಎಂಬ ಆಕಾಶವೆಂದು, ಹೇಳಿದೆವೋ ಅದೇ ಕಂ ಎಂಬ ಸುಖವೆಂದು ತಿಳಿ ಹೀಗೆ ಸುಖವೆಂಬ ವಿಶೇಷಣವನ್ನು ಕೊಟ್ಟದ್ದರಿಂದ ಖಂ (ಆಕಾಶವನ್ನು) ಭೌತಿಕವಾದ ಅಚೇತನವಾದ ಆಕಾಶದಿಂದ ಬೇರ್ಪಡಿಸಿಕೊಂಡಂತೆ ಆಗುವದು. (ಇದೂ) ನೀಲೋತ್ಪಲದಂತೆಯೇ[2] ಸುಖ

---

1. 'ಅಚೇತನಸ್ಯ' ಎಂಬುದು 'ಅಚೇತನತ್ವಾತ್' ಎಂದಿದ್ದಂತೆ ಭಾವಿಸಿ ಕನ್ನಡಿಸಿದೆ, ಈಗ ಇರುವಂತೆ ಈ ವಾಕ್ಯದಲ್ಲಿಯೂ ಅನ್ವಯಕ್ಲೇಶವಿದೆ

2. ನೀಲೋತ್ಪಲ (ಕನ್ನೈದಿಲೆ) ಎಂಬಲ್ಲಿ ಕಪ್ಪು ಎಂಬುದು ಸೇರಿದ್ದರಿಂದ ಕೆಂಪು ನೈದಿಲೆಯಲ್ಲವೆಂದು ಹೇಗೆ ಆಗುವದೋ ಹಾಗೆ ನೈದಿಲೆ ಎಂಬುದು ಸೇರಿದ್ದರಿಂದ ಮತ್ತೊಂದರ ಕಪ್ಪಲ್ಲ ಎಂಬುದೂ ಆಗುತ್ತದೆಯಷ್ಟೆ ? ಹೀಗೆಯೇ ಇಲ್ಲಿಯೂ ತಿಳಿಯಬೇಕು.

**ವೆಂಬುದು ಆಕಾಶದಲ್ಲಿರುವದೇ ಹೊರತು ಲೌಕಿಕಸುಖವಲ್ಲ. ಆಕಾಶವೆಂದರೆ ಸುಖಕ್ಕೆ ಆಶ್ರಯವಾಗಿರುವದೇ ಹೊರತು ಭೌತಿಕ(ವಾದ ಆಕಾಶ)ವಲ್ಲ- ಎಂದರ್ಥ.**[1]

## ಕಂಖಂಗಳನ್ನು ವ್ಯತಿಹಾರದಿಂದ ಹೇಳಿದ್ದೇಕೆ ?

(ಭಾಷ್ಯ)

೩೩೬. ನನ್ವಾಕಾಶಂ ಚೇತ್ ಸುಖೇನ ವಿಶೇಷಯಿತುಮಿಷ್ಟಮ್ ಅಸ್ತ್ವನ್ಯತರದೇವ ವಿಶೇಷಣಮ್ 'ಯದ್ವಾವ ಕಂ ತದೇವ ಖಮ್' ಇತಿ । ಅತಿರಿಕ್ತಮ್ ಇತರತ್ । 'ಯದೇವ ಖಂ ತದೇವ ಕಮ್' ಇತಿ ಪೂರ್ವವಿಶೇಷಣಂ ವಾ । ನನು ಸುಖಾಕಾಶಯೋರುಭಯೋರಪಿ ಲೌಕಿಕಸುಖಾಕಾಶಾಭ್ಯಾಂ ವ್ಯಾವೃತ್ತಿರಿಷ್ಟಾ ಇತ್ಯವೋಚಾಮ । ಸುಖೇನ ಆಕಾಶೇ ವಿಶೇಷಿತೇ ವ್ಯಾವೃತ್ತಿರುಭಯೋರರ್ಥಪ್ರಾಪ್ತೈವೇತಿ ಚೇತ್ । ಸತ್ಯಮೇವಮ್ । ಕಿಂ ತು ಸುಖೇನ ವಿಶೇಷಿತಸ್ಯೈವ ಆಕಾಶಸ್ಯ ಧ್ಯೇಯತ್ವಂ ವಿಹಿತಮ್ ನ ತ್ವಾಕಾಶಗುಣಸ್ಯ ವಿಶೇಷಣಸ್ಯ ಸುಖಸ್ಯ ಧ್ಯೇಯತ್ವಂ ವಿಹಿತಂ ಸ್ಯಾತ್ । ವಿಶೇಷಣೋಪಾದಾನಸ್ಯ ವಿಶೇಷ್ಯನಿಯನ್ತೃತ್ವೇನೈವ ಉಪಕ್ಷಯಾತ್ । ಅತಃ ಖೇನ ಸುಖಮಪಿ ವಿಶೇಷ್ಯತೇ ಧ್ಯೇಯತ್ವಾಯ । ಕುತಶ್ಚೈತನ್ನಿಶ್ಚೀಯತೇ ? ಕಂಶಬ್ದಸ್ಯಾಪಿ ಬ್ರಹ್ಮಶಬ್ದಸಂಬನ್ಧಾತ್ ಕಂ ಬ್ರಹ್ಮೇತಿ । ಯದಿ ಹಿ ಸುಖಗುಣವಿಶಿಷ್ಟಸ್ಯ ಖಸ್ಯ ಧ್ಯೇಯತ್ವಂ ವಿವಕ್ಷಿತಂ ಸ್ಯಾತ್ ಕಂ ಖಂ ಬ್ರಹ್ಮ ಇತಿ ಬ್ರೂಯುರಗ್ನಯಃ ಪ್ರಥಮಮ್ । ನ ಚೈವಮ್ ಉಕ್ತವನ್ತಃ । ಕಿಂ ತರ್ಹಿ ? ಕಂ ಬ್ರಹ್ಮ ಖಂ ಬ್ರಹ್ಮ ಇತಿ । ಅತಃ ಬ್ರಹ್ಮಚಾರಿಣೋ ಮೋಹಾಪನಯನಾಯ ಕಂಖಂಶಬ್ದಯೋರಿತರೇತರವಿಶೇಷಣವಿಶೇಷ್ಯತ್ವನಿರ್ದೇಶೋ ಯುಕ್ತ ಏವ ಯದ್ವಾವ ಕಮ್ ಇತ್ಯಾದಿಃ ॥

(ಭಾಷ್ಯಾರ್ಥ)

(ಆಕ್ಷೇಪ) – ಆಕಾಶಕ್ಕೆ ಸುಖವೆಂಬ ವಿಶೇಷಣವನ್ನು ಕೊಡಬೇಕೆಂಬ ಇಚ್ಛೆಯಿದ್ದರೆ ಇವೆರಡರಲ್ಲಿ ಒಂದೇ ವಿಶೇಷಣವಾಗಿರಲಿ 'ಯದ್ವಾವ ಕಂ ತದೇವ ಖಮ್' (ಯಾವದು ಕಂ ಎಂದೆವೋ ಅದೇ ಖಂ) ಎಂದಿರಲಿ, ಇನ್ನೊಂದು ಹೆಚ್ಚು. ಅಥವಾ 'ಯದೇವ ಖಂ ತದೇವ ಕಮ್' (ಯಾವದನ್ನು ಖಂ ಎಂದೆವೋ ಅದೇ ಕಂ) ಎಂದು ಮೊದಲಿನದಕ್ಕೇ ವಿಶೇಷಣವಾಗಲಿ !

(ಪರಿಹಾರ) .– ಸುಖ, ಆಕಾಶ– ಎರಡೂ ಲೌಕಿಕಸುಖ, (ಭೌತಿಕ) ಆಕಾಶ– ಇವುಗಳಿಂದ ಬಿಡಿಸಿಕೊಳ್ಳುವದು ಬೇಕಾಗಿದೆ ಎಂದು ಹೇಳಿದೆವಲ್ಲ !

---

1 ಕಂಖಂಗಳು ಎರಡೂ ಒಂದಕ್ಕೊಂದು ವಿಶೇಷಣವಾಗಿರುವದರಿಂದ ಅಪರಿಚ್ಛಿನ್ನವಾದ ಸ್ವರೂಪಾನಂದವನ್ನೇ ಹೇಳಿದಂತಾಗುವದು ಎಂದು ಭಾವ.

(ಆಕ್ಷೇಪ) :- ಆಕಾಶಕ್ಕೆ ಸುಖವೆಂಬ ವಿಶೇಷಣವನ್ನು ಕೊಟ್ಟರೆ ಎರಡನ್ನೂ (ಮಿಕ್ಕವುಗಳಿಂದ) ಬಿಡಿಸಿಕೊಂಡದ್ದು ತಾನೇ ಪ್ರಾಪ್ತವಾಗುವದಲ್ಲ !

(ಪರಿಹಾರ) - ಹಾಗೇ ಸರಿ ಆದರೆ (ಆಗ) ಸುಖವೆಂಬ ವಿಶೇಷಣವುಳ್ಳ ಆಕಾಶವನ್ನೇ ಧ್ಯಾನಮಾಡಬೇಕೆಂದು ವಿಧಿಸಿದ್ದಾಗುವದೇ ಹೊರತು ಆಕಾಶಗುಣವಾದ ಸುಖವೆಂಬ ವಿಶೇಷಣವನ್ನು ಧ್ಯಾನಮಾಡಬೇಕೆಂದು ವಿಧಿಸಿದ್ದಾಗಲಾರದು. ಏಕೆಂದರೆ (ಸುಖವೆಂಬ) ವಿಶೇಷಣವನ್ನು ತೆಗೆದುಕೊಂಡದ್ದಕ್ಕೆ ವಿಶೇಷ್ಯವನ್ನು ಗೊತ್ತುಮಾಡುವದರಲ್ಲಿಯೇ (ತಾತ್ಪರ್ಯವು) ಮುಗಿದುಹೋಗುವದು. ಆದ್ದರಿಂದ (ಅದನ್ನು ಧ್ಯಾನಿಸಲೆಂದು) ಆಕಾಶವೆಂಬ ವಿಶೇಷಣವನ್ನು ಸುಖಕ್ಕೂ ಕೊಟ್ಟಿದೆ.

ಇವನ್ನು ಮತ್ತೂ ಏತರಿಂದ ನಿಶ್ಚಯಿಸಬಹುದೆಂದರೆ, ಕಂ ಬ್ರಹ್ಮ ಎಂದು ಕಂಶಬ್ದಕ್ಕೂ ಬ್ರಹ್ಮಶಬ್ದದ ಸಂಬಂಧವಿರುವದರಿಂದ. ಸುಖಗುಣವಿಶಿಷ್ಟವಾದ ಆಕಾಶವನ್ನು (ಮಾತ್ರ) ಧ್ಯಾನಮಾಡತಕ್ಕದ್ದೆಂದು ಹೇಳುವ ಇಚ್ಛೆ ಇದ್ದಿದ್ದರೆ ಕಂ ಖಂ ಬ್ರಹ್ಮ ಎಂದೇ ಅಗ್ನಿಗಳು ನೊದಲೇ ಹೇಳಿಬಿಡುತ್ತಿದ್ದವು. ಆದರೆ ಹಾಗೆ ಹೇಳಿರುವದಿಲ್ಲ, ಮತ್ತೇನೆಂದರೆ ಕಂ ಬ್ರಹ್ಮ ಖಂ ಬ್ರಹ್ಮ ಎಂದೇ (ಹೇಳಿವೆ).[1] ಆದ್ದರಿಂದ ಬ್ರಹ್ಮಚಾರಿಯ ಭ್ರಾಂತಿಯನ್ನು ಕಳೆಯುವದಕ್ಕಾಗಿ 'ಯದ್ವಾವ ಕಮ್' ಎಂದುಮುಂತಾಗಿ ಕಂಖಂಶಬ್ದಗಳನ್ನು (ಎರಡನ್ನೂ) ಒಂದಕ್ಕೊಂದು ವಿಶೇಷಣವಿಶೇಷ್ಯಭಾವದಿಂದ ತಿಳಿಸಿರುವದು ಯುಕ್ತವೇ ಆಗಿರುತ್ತದೆ.

## ಅಗ್ನಿಗಳ ಉಪದೇಶದ ಒಟ್ಟರ್ಥ

### (ಭಾಷ್ಯ)

೩೩೩. ತದೇತತ್ ಅಗ್ನಿಭಿರುಕ್ತಂ ವಾಕ್ಯಾರ್ಥಮ್ ಅಸ್ಮದ್ಬೋಧಾಯ ಶ್ರುತಿರಾಹ। ಪ್ರಾಣಂ ಚ ಹ ಅಸ್ಮೈ ಬ್ರಹ್ಮಚಾರಿಣೇ ತಸ್ಯ ಆಕಾಶಃ ತದಾಕಾಶಃ। ಪ್ರಾಣಸ್ಯ ಸಂಬನ್ಧೀ ಆಶ್ರಯತ್ವೇನ ಹಾರ್ದ ಆಕಾಶ ಇತ್ಯರ್ಥಃ। ಸುಖಗುಣವತ್ತ್ವನಿರ್ದೇಶಾತ್। ತಂ ಚ ಆಕಾಶಂ ಸುಖಗುಣವಿಶಿಷ್ಟಂ ಬ್ರಹ್ಮ ತತ್ಸ್ಥಂ ಚ ಪ್ರಾಣಂ ಬ್ರಹ್ಮಸಂಪರ್ಕಾದೇವ ಬ್ರಹ್ಮೇತ್ಯುಭಯಂ ಪ್ರಾಣಂ ಚ ಆಕಾಶಂ ಚ ಸಮುಚ್ಚಿತ್ಯ ಬ್ರಹ್ಮಣೀ ಊಚುಃ ಅಗ್ನಯಃ ಇತಿ ॥

### (ಭಾಷ್ಯಾರ್ಥ)

ಆ ಈ ಅಗ್ನಿಗಳು ಹೇಳಿದ್ದರ ವಾಕ್ಯಾರ್ಥವನ್ನು ನಮ್ಮ ತಿಳಿವಳಿಕೆಗಾಗಿ ಶ್ರುತಿಯು ಹೇಳುತ್ತಿದೆ : ಈ ಬ್ರಹ್ಮಚಾರಿಗೆ ಪ್ರಾಣವನ್ನು (ಹೇಳಿದವು). ಅದರ ಆಕಾಶವು ತದಾಕಾಶವು, ಪ್ರಾಣಕ್ಕೆ ಸಂಬದ್ಧವಾಗಿರುವ ಹಾರ್ದಆಕಾಶವು

1 ಸೂ. ಭಾ. ೧-೨-೧೫ (ಭಾ. ಭಾ. ೧೮೧)ನ್ನು ನೋಡಿ.

ಎಂದರ್ಥ. ಏಕೆಂದರೆ (ಅದಕ್ಕೆ) ಸುಖವೆಂಬ ಗುಣವಿದೆ ಎಂದು (ಇಲ್ಲಿ) ತಿಳಿಸಿರುತ್ತದೆ. ಆ (ಹಾರ್ದವಾದ) ಆಕಾಶವೆಂಬ ಸುಖಗುಣವಿಶಿಷ್ಟವಾದ ಬ್ರಹ್ಮವನ್ನೂ ಅದರಲ್ಲಿರುವ ಪ್ರಾಣವನ್ನೂ– ಬ್ರಹ್ಮದ ಸಂಬಂಧವುಂಟಲ್ಲವೇ (ಅದೂ) ಬ್ರಹ್ಮವು– ಹೀಗೆ ಪ್ರಾಣವನ್ನೂ ಆಕಾಶವನ್ನೂ ಎರಡನ್ನೂ ಸೇರಿಸಿ ಬ್ರಹ್ಮಗಳು ಎಂದು ಅಗ್ನಿಗಳು ಹೇಳಿದವು[1].

---

# ನಾಲ್ಕನೆಯ ಅಧ್ಯಾಯ–ಹನ್ನೊಂದನೆಯ ಖಂಡ

( ಉಪಕೋಸಲವಿದ್ಯೆ )

## ಗಾರ್ಹಪತ್ಯಾಗ್ನಿಯ ವಿದ್ಯೆ

(ಉಪನಿಷತ್ತು)

**ಅಥ ಹೈನಂ ಗಾರ್ಹಪತ್ಯೋಽನುಶಶಾಸ ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥**

೧. ಇನ್ನು ಇವನಿಗೆ ಗಾರ್ಹಪತ್ಯವು (ಹೀಗೆಂದು) ಅನುಶಾಸನಮಾಡಿತು : 'ಪೃಥಿವಿ, ಅಗ್ನಿ, ಅನ್ನ, ಆದಿತ್ಯ. ಆದಿತ್ಯನಲ್ಲಿ ಈ ಪುರುಷನು ಕಾಣಬರುತ್ತಾನಲ್ಲ, ಅವನು ನಾನಾಗಿದ್ದೇನೆ ; ಅವನೇ ನಾನಾಗಿರುತ್ತೇನೆ.'

## ಗಾರ್ಹಪತ್ಯದ ತನುಚತುಷ್ಟಯ

(ಭಾಷ್ಯ)

೩೩೪. ಸಂಭೂಯಾಗ್ನಯಃ ಬ್ರಹ್ಮಚಾರಿಣೇ ಬ್ರಹ್ಮ ಉಕ್ತವನ್ತಃ । ಅಥ ಅನನ್ತರಂ ಪ್ರತ್ಯೇಕಂ ಸ್ವಸ್ವವಿಷಯಾಂ ವಿದ್ಯಾಂ ವಕ್ತುಮ್ ಆರೇಭಿರೇ । ತತ್ರ ಆದೌ ಏನಂ ಬ್ರಹ್ಮಚಾರಿಣಂ ಗಾರ್ಹಪತ್ಯೋಽಗ್ನಿಃ ಅನುಶಶಾಸ । ಪೃಥಿವೀ, ಅಗ್ನಿಃ, ಅನ್ನಮ್, ಆದಿತ್ಯಃ– ಇತಿ ಮಮೈತಾಶ್ಚತಸ್ರಸ್ತನವಃ । ತತ್ರ ಯ ಆದಿತ್ಯೇ

1. ಸೂ. ಭಾ. ದಲ್ಲಿ ಬ್ರಹ್ಮವಿಚಾರವನ್ನು ಮಾಡಿರುವದರಿಂದ ಇಲ್ಲಿ ಪ್ರಾಣವನ್ನೂ ಹೇಳಿದೆ ಎಂಬುದನ್ನು ಪರಾಮರ್ಶಮಾಡಿಲ್ಲವೆಂದು ಕಾಣುತ್ತದೆ.

ಏಷ ಪುರುಷೋ ದೃಶ್ಯತೇ ಸೋಽಹಮಸ್ಮಿ ಗಾರ್ಹಪತ್ಯೋಽಗ್ನಿಃ । ಯಶ್ಚ ಗಾರ್ಹಪತ್ಯೋಽಗ್ನಿಃ ಸ ಏವಾಹಮ್ ಆದಿತ್ಯೇ ಪುರುಷೋಽಸ್ಮಿ- ಇತಿ ಪುನಃ ಪರಾವೃತ್ತ್ಯಾ ಸ ಏವಾಽಹಮಸ್ಮೀತಿ ವಚನಮ್ । ಪೃಥಿವ್ಯನ್ನಯೋರಿವ ಭೋಜ್ಯತ್ವಲಕ್ಷಣಯೋಃ ಸಂಬನ್ಧೋ ನ ಗಾರ್ಹಪತ್ಯಾದಿತ್ಯಯೋಃ । ಅತ್ತೃತ್ವಪಕ್ತೃತ್ವಪ್ರಕಾಶನಧರ್ಮಾ ಅವಿಶಿಷ್ಟಾ ಇತ್ಯತಃ ಏಕತ್ವಮೇವಾನಯೋರತ್ಯನ್ತಮ್ । ಪೃಥಿವ್ಯನ್ನಯೋಸ್ತು ಭೋಜ್ಯತ್ವೇನ ಆಭ್ಯಾಂ ಸಂಬನ್ಧಃ ॥

(ಭಾಷ್ಯಾರ್ಥ)

ಒಟ್ಟಾಗಿ ಅಗ್ನಿಗಳು ಬ್ರಹ್ಮಚಾರಿಗೆ ಬ್ರಹ್ಮವನ್ನು ಹೇಳಿದವು. ಇನ್ನು ಆ ಬಳಿಕ (ಅವು) ಒಂದೊಂದೂ ತಮ್ಮತಮ್ಮ ವಿಷಯದ ವಿದ್ಯೆಯನ್ನು ಹೇಳಿಕೊಡುವದಕ್ಕೆ ಪ್ರಾರಂಭಿಸಿದವು.

ಅವುಗಳಲ್ಲಿ ಮೊದಲು ಈ ಬ್ರಹ್ಮಚಾರಿಗೆ ಗಾರ್ಹಪತ್ಯಾಗ್ನಿಯು (ಹೀಗೆಂದು) ಅನುಶಾಸನಮಾಡಿತು. ಪೃಥಿವಿ, ಅಗ್ನಿ, ಅನ್ನ, ಆದಿತ್ಯ- ಎಂಬಿವು ನನ್ನ ನಾಲ್ಕು ತನುಗಳು. ಇವುಗಳಲ್ಲಿ ಆದಿತ್ಯನಲ್ಲಿ ಈ ಪುರುಷನು ಕಾಣಿಸುತ್ತಿರುವನಲ್ಲ[1], ಅವನೇ ಗಾರ್ಹಪತ್ಯವೆಂಬ ಅಗ್ನಿಯಾದ ನಾನಾಗಿರುವೆನು, ಮತ್ತು ಗಾರ್ಹಪತ್ಯವೆಂಬ ಅಗ್ನಿಯಿರುವನಲ್ಲ, ಆ ನಾನೇ ಆದಿತ್ಯನಲ್ಲಿರುವ ಪುರುಷನಾಗಿರುವೆನು- ಎಂದು ಮತ್ತೆ ತಿರುಗಮುರುಗಾಗಿ 'ಅವನೇ ನಾನಾಗಿರುತ್ತೇನೆ' ಎಂದು ಹೇಳಿರುತ್ತದೆ.

ಭೋಜ್ಯರೂಪವಾಗಿರುವ ಪೃಥಿವಿ, ಅನ್ನ- ಇವುಗಳಿಗಿರುವಂಥ ಸಂಬಂಧವಲ್ಲ, ಗಾರ್ಹಪತ್ಯಾದಿತ್ಯರಿಗೆ. **ಅತ್ತೃತ್ವ (ತಿನ್ನುವವನಾಗಿರುವಿಕೆ), ಪಕ್ತೃತ್ವ (ಬೇಯಿಸುವವನಾಗಿರುವಿಕೆ), ಪ್ರಕಾಶನ (ಬೆಳಗುವಿಕೆ)- ಎಂಬ ಧರ್ಮಗಳು ಸಮಾನವಾಗಿರುತ್ತವೆಯಾದ್ದರಿಂದ ಇವರಿಬ್ಬರಿಗೂ ಅತ್ಯಂತವಾಗಿ ಏಕತ್ವವೇ.** ಪೃಥಿವ್ಯನ್ನಗಳಿಗೋ ಎಂದರೆ ಇವುಗಳಿಗೆ ಭೋಜ್ಯವಾಗಿವೆ ಎಂಬುದರಿಂದಲೇ ಸಂಬಂಧ.

(ಉಪನಿಷತ್ತು)

**ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯನ್ತ ಉಪ ವಯಂ ತಂ ಭುಞ್ಜಾಮೋಽಸ್ಮಿಗ್ಂಶ್ಚ ಲೋಕೇಽಮುಷ್ಮಿಗ್ಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ॥ ೨ ॥**

---

1 ಶಾಸ್ತ್ರಪ್ರಸಿದ್ಧನಾಗಿರುವನಲ್ಲ ಎಂದರ್ಥ.

೨. ಯಾವನು ಹೀಗೆಂದರಿತುಕೊಂಡು ಈ (ಅಗ್ನಿ)ಯನ್ನು ಉಪಾಸನೆಮಾಡುತ್ತಾನೋ ಅವನು ಪಾಪಕೃತ್ಯವನ್ನು ನಾಶಗೊಳಿಸಿಕೊಳ್ಳುವನು, ಲೋಕಿಯಾಗುವನು, ಸರ್ವಾಯುಸ್ಸನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಜೀವಿಸುವನು ; ಇವನ ಕೆಳಗಿನ ಪುರುಷರು ಲಯವಾಗುವದಿಲ್ಲ. ಯಾವನು ಹೀಗೆಂದರಿತು ಉಪಾಸನೆಮಾಡುತ್ತಾನೋ ಅವನನ್ನು ಈ ಲೋಕವಲ್ಲಿಯೂ ಆ (ಲೋಕದಲ್ಲಿ)ಯೂ ನಾವು ಉಪಭುಂಜಿಸುವೆವು.

## ಗಾರ್ಹಪತ್ಯೋಪಾಸನೆಗೆ ಫಲ

(ಭಾಷ್ಯ)

೩೩೫. ಸ ಯಃ ಕಶ್ಚಿತ್ ಏವಂ ಯಥೋಕ್ತಂ ಗಾರ್ಹಪತ್ಯಾಗ್ನಿಂ ಅನ್ನಾನ್ನಾದತ್ವೇನ ಚತುರ್ಧಾ ಪ್ರವಿಭಕ್ತಮ್ ಉಪಾಸ್ತೇ । ಸಃ ಅಪಹತೇ ವಿನಾಶಯತಿ ಪಾಪಕೃತ್ಯಾಂ ಪಾಪಂ ಕರ್ಮ । ಲೋಕೀ ಲೋಕವಾಂಶ್ಚ ಅಸ್ಮದೀಯೇನ ಲೋಕೇನ ಆಗ್ನೇಯೇನ ತದ್ವಾನ್ ಭವತಿ ಯಥಾ ವಯಮ್ । ಇಹ ಚ ಲೋಕೇ ಸರ್ವಂ ವರ್ಷಶತಮ್ ಆಯುರೇತಿ ಪ್ರಾಪ್ನೋತಿ । ಜ್ಯೋಕ್ ಉಜ್ಜ್ವಲಂ ಜೀವತಿ । ನಾಪ್ರಖ್ಯಾತ ಇತ್ಯೇತತ್ । ನ ಚ ಅಸ್ಯ ಅವರಾಶ್ಚ ತೇ ಪುರುಷಾಶ್ಚ ಅಸ್ಯ ವಿದುಷಃ । ಸಂತತಿಜಾ ಇತ್ಯರ್ಥಃ । ನ ಕ್ಷೀಯನ್ತೇ ಸಂತತ್ಯುಚ್ಛೇದೋ ನ ಭವತೀತ್ಯರ್ಥಃ । ಕಿಂ ಚ ತಂ ವಯಮ್ ಉಪಭುಞ್ಜಾಮಃ ಪಾಲಯಾಮಃ ಅಸ್ಮಿಂಶ್ಚ ಲೋಕೇ ಜೀವನ್ತಮ್ ಅಮುಷ್ಮಿಂಶ್ಚ ಪರಲೋಕೇ । ಯ ಏತಮ್ ಏವಂ ವಿದ್ವಾನ್ ಉಪಾಸ್ತೇ ಯಥೋಕ್ತಂ ತಸ್ಯ ಏತತ್ ಫಲಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾವನೊಬ್ಬನು ಹೀಗೆ ಮೇಲೆ ಹೇಳಿದಂತೆ ಗಾರ್ಹಪತ್ಯಾಗ್ನಿಯನ್ನು ಅನ್ನ, ಅನ್ನಾದ್ಯ– ಎಂಬ ರೂಪದಿಂದ ನಾಲ್ಕು ಬಗೆಯಾಗಿ ವಿಂಗಡವಾಗಿರುವನೆಂದು[1] ಉಪಾಸನೆಮಾಡುತ್ತಾನೋ, ಅವನು ಪಾಪಕೃತ್ಯವನ್ನೂ ಪಾಪಕರ್ಮವನ್ನೂ (ಅಪಹತೇ=ವಿನಾಶಯತಿ) ವಿನಾಶಮಾಡಿಕೊಳ್ಳುವನು. ಲೋಕಿಯಾಗುತ್ತಾನೆ, ನಾವು ಹೇಗೋ ಹಾಗೆ (ಅವನೂ) ಅಗ್ನಿಸಂಬಂಧವಾದ ಲೋಕದಿಂದ ಲೋಕವುಳ್ಳವನಾಗುತ್ತಾನೆ. ಈ ಲೋಕದಲ್ಲಿಯೂ ಎಲ್ಲ ಎಂದರೆ ನೂರುವರ್ಷದ ಆಯುಸ್ಸನ್ನೂ ಪಡೆದುಕೊಳ್ಳುವನು, ಹೊಂದುವನು. ಚೆನ್ನಾಗಿ ಜೀವಿಸುವನು ,

1. ಅನ್ನಗಳೆರಡು, ಅತ್ತೃಗಳೆರಡು ಎಂದು; ಅವರಲ್ಲಿಯೂ ಎರಡು ಬಗೆಯಲ್ಲಿ ಕಾಣುವ ಅತ್ತೃವು ಒಬ್ಬನೇ ಎಂದು ಅರಿತು ಉಪಾಸನೆಮಾಡುತ್ತಾನೋ ಎಂದರ್ಥ.

ಹೆಸರುವಾಸಿಯಿಲ್ಲದೆ (ಜೀವಿಸು)ವದಿಲ್ಲ ಎಂದು ಅಭಿಪ್ರಾಯ ಮತ್ತು ಅವನ ಕೆಳಗಿನವರಾದ ಪುರುಷರು, ಈ ಉಪಾಸಕನ ಸಂತತಿಯಲ್ಲಿ ಜನಿಸಿದವರು ಎಂದರ್ಥ, ಕ್ಷಯವಾಗುವದಿಲ್ಲ, (ಅವನ) ಸಂತತಿಯು ನಾಶವಾಗುವದಿಲ್ಲ ಎಂದರ್ಥ. ಮತ್ತು ಅವನನ್ನು ನಾವು ಈ ಲೋಕದಲ್ಲಿ (ಅವನು) ಬದುಕಿರುವಾಗಲೂ ಮತ್ತು ಆ ಪರಲೋಕದಲ್ಲಿಯೂ ಉಪಭುಂಜಿಸುವೆವು, ಕಾಪಾಡುವೆವು. ಯಾವನು ಈ (ಅಗ್ನಿ)ಯನ್ನು ಹೀಗೆಂದು ಅರಿತು ಉಪಾಸನೆಮಾಡುತ್ತಾನೋ ಅವನಿಗೆ ಇದು ಫಲವು ಎಂದರ್ಥ.

---

# ನಾಲ್ಕನೆಯ ಅಧ್ಯಾಯ-ಹನ್ನೆರಡನೆಯ ಖಂಡ

## ( ಉಪಕೋಸಲವಿದ್ಯೆ )

## ಅನ್ವಾಹಾರ್ಯಪಚನಾಗ್ನಿಯ ವಿದ್ಯೆ

(ಉಪನಿಷತ್ತು)

**ಅಥ ಹೈನಮನ್ವಾಹಾರ್ಯಪಚನೋಽನುಶಶಾಸಾಪೋ ದಿಶೋ ನಕ್ಷತ್ರಾಣಿ ಚನ್ದ್ರಮಾ ಇತಿ ಯ ಏಷ ಚನ್ದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥**

**ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯನ್ತ ಉಪ ವಯಂ ತಂ ಭುಞ್ಜಾಮೋಽಸ್ಮಿಗ್ಂಶ್ಚ ಲೋಕೇಽಮುಷ್ಮಿಗ್ಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ॥ ೨ ॥**

೧. ಇನ್ನು ಇವನಿಗೆ ಅನ್ವಾಹಾರ್ಯಪಚನವು ಅನುಶಾಸನ ಮಾಡಿತು. 'ಅಪ್ಪು, ದಿಕ್ಕುಗಳು, ನಕ್ಷತ್ರಗಳು, ಚಂದ್ರನು. ಚಂದ್ರನಲ್ಲಿ ಈ ಪುರುಷನು ಕಾಣಬರುತ್ತಾನಲ್ಲ, ಅವನು ನಾನಾಗಿದ್ದೇನೆ; ಅವನೇ ನಾನಾಗಿರುತ್ತೇನೆ.

೨. ಯಾವನು ಹೀಗೆಂದರಿತು ಈ (ಅಗ್ನಿ)ಯನ್ನು ಉಪಾಸನೆ ಮಾಡುತ್ತಾನೋ ಅವನು ಪಾಪಕೃತ್ಯವನ್ನು ನಾಶಗೊಳಿಸಿಕೊಳ್ಳು

ವನು. ಲೋಕಿಯಾಗುವನು. ಸರ್ವಾಯುಸ್ಸನ್ನು ಪಡೆದುಕೊಳ್ಳುವನು. ಚೆನ್ನಾಗಿ ಜೀವಿಸುವನು. ಅವನ ಕೆಳಗಿನ ಪುರುಷರು ಕ್ಷೀಣವಾಗು ವದಿಲ್ಲ. ಯಾವನು ಹೀಗೆಂದರಿತು ಉಪಾಸನೆಮಾಡುತ್ತಾನೋ ಅವನನ್ನು ಈ ಲೋಕದಲ್ಲಿಯೂ ಆ (ಲೋಕ)ದಲ್ಲಿಯೂ ನಾವು ಉಪ ಭುಂಜಿಸುವೆವು'.

## ಅನ್ವಾಹಾರ್ಯಪಚನದ ತನುಚತುಷ್ಟಯವೂ ಉಪಾಸನೆಯ ಫಲವೂ

(ಭಾಷ್ಯ)

೩೩೬. ಅಥ ಹ ಏನಮ್ ಅನ್ವಾಹಾರ್ಯಪಚನಃ ಅನುಶಶಾಸ ದಕ್ಷಿಣಾಗ್ನಿಃ । ಆಪಃ, ದಿಶಃ, ನಕ್ಷತ್ರಾಣಿ, ಚನ್ದ್ರಮಾ– ಇತ್ಯೇತಾ ಮಮ ಚತಸ್ರಸ್ತನವಃ । ಚತುರ್ಧಾ ಅಹಮ್ ಅನ್ವಾಹಾರ್ಯವಚನಃ[1] ಆತ್ಮಾನಂ ಪ್ರವಿಭಜ್ಯ ಅವಸ್ಥಿತಃ । ತತ್ರ ಯ ಏಷ ಚನ್ದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ ಇತಿ ಪೂರ್ವವತ್ । ಅನ್ನಸಂಬನ್ಧಾತ್ ಜ್ಯೋತಿಷ್ಟ್ವಸಾಮಾನ್ಯಾಚ್ಚ ಅನ್ವಾಹಾರ್ಯಪಚನಚನ್ದ್ರಮಸೋರೇಕತ್ವಂ ದಕ್ಷಿಣಾದಿಕ್ಸಂಬನ್ಧಾಚ್ಚ । ಅಪಾಂ ನಕ್ಷತ್ರಾಣಾಂ ಚ ಪೂರ್ವವದನ್ನತ್ವೇನೈವ ಸಂಬನ್ಧಃ । ನಕ್ಷತ್ರಾಣಾಂ ಚನ್ದ್ರಮಸೋ ಭೋಗ್ಯತ್ವಪ್ರಸಿದ್ಧೇಃ । ಅಪಾಮ್ ಅನ್ನೋತ್ಪಾದಕತ್ವಾದನ್ನತ್ವಂ ದಕ್ಷಿಣಾಗ್ನೇಃ । ಪೃಥಿವೀವದ್ ಗಾರ್ಹಪತ್ಯಸ್ಯ । ಸಮಾನಮನ್ಯತ್ ॥

(ಭಾಷ್ಯಾರ್ಥ)

ಇನ್ನು ಈ (ಬ್ರಹ್ಮಚಾರಿಗೆ) ಅನ್ವಾಹಾರ್ಯಪಚನವು, ದಕ್ಷಿಣಾಗ್ನಿಯು, ಅನುಶಾಸನಮಾಡಿತು. "ಅಪ್ಪು, ದಿಕ್ಕುಗಳು, ನಕ್ಷತ್ರಗಳು, ಚಂದ್ರ– ಎಂಬಿವು ನನ್ನ ನಾಲ್ಕು ತನುಗಳು. ನಾಲ್ಕುಪ್ರಕಾರದಿಂದ ಅನ್ವಾಹಾರ್ಯಪಚನವೆಂಬ ನಾನು ನನ್ನನ್ನು ವಿಂಗಡಿಸಿಕೊಂಡು ಇರುತ್ತಿರುವೆನು. ಇವುಗಳಲ್ಲಿ ಚಂದ್ರನಲ್ಲಿ ಈ ಪುರುಷನು ಕಾಣಿಸುತ್ತಿರುವನಲ್ಲ, ಅವನು ನಾನಾಗಿರುವೆನು, ಅವನೇ ನಾನಾಗಿರುವೆನು– ಎಂಬುದಕ್ಕೆ ಹಿಂದಿನಂತೆ (ವ್ಯಾಖ್ಯಾನ).

ಅನ್ನಸಂಬಂಧವಿರುವದರಿಂದಲೂ[2] ಜ್ಯೋತಿಯಾಗಿರುವದು ಸಮಾನವಾಗಿರುವದರಿಂದಲೂ ಅನ್ವಾಹಾರ್ಯಪಚನ, ಚಂದ್ರ– ಇವರುಗಳಿಗೆ ಏಕತ್ವ(ವಿದೆ) ;

1. 'ಅನ್ವಾಹಾರ್ಯಪಚನಃ' ಎಂದು ಪಾ॥ ಪಾಠವು ಸರಿಯಲ್ಲ.

2. 'ದರ್ಶಪೂರ್ಣಮಾಸಗಳಲ್ಲಿ ಹವಿಸ್ಸನ್ನು ಅನ್ವಾಹಾರ್ಯಪಚನದಲ್ಲಿ ಬೇಯಿಸುತ್ತಾರೆ' 'ಅವನು ಚಂದ್ರನನ್ನು ಸೇರಿ ಅನ್ನವಾಗುತ್ತಾನೆ' ಎಂಬ ಶ್ರುತಿಯಲ್ಲಿ ಚಂದ್ರನಿಗೆ ಅನ್ನಸಂಬಂಧವಿದೆ ಆದ್ದರಿಂದ ಅವರಿಬ್ಬರೂ ಒಂದೇ ಎಂದರ್ಥ ಎಂದು ಟೀಕೆ.

ದಕ್ಷಿಣದಿಕ್ಕಿನ ಸಂಬಂಧವಿರುವದರಿಂದಲೂ[1] (ಏಕತ್ವವಿದೆ). ಅಪ್ಪು, ನಕ್ಷತ್ರಗಳು- ಇವುಗಳಿಗೆ ಹಿಂದಿನ (ಕಂಡಿಕೆಯಲ್ಲಿ ಹೇಳಿರು)ವಂತೆ ಅನ್ನವಾಗಿರುವದರಿಂದಲೇ (ಒಂದಕ್ಕೊಂದಕ್ಕೆ) ಸಂಬಂಧ. ಏಕೆಂದರೆ ನಕ್ಷತ್ರಗಳು ಚಂದ್ರನಿಗೆ ಭೋಗ್ಯವೆಂದು ಪ್ರಸಿದ್ಧಿಯಿದೆ. ಅಪ್ಪು ಅನ್ನವನ್ನುಂಟುಮಾಡುವದರಿಂದ- ಪೃಥಿವಿಯು ಗಾರ್ಹಪತ್ಯಕ್ಕೆ ಹೇಗೋ ಹಾಗೆ (ಅದು)- ದಕ್ಷಿಣಾಗ್ನಿಗೆ ಅನ್ನವು. ಮಿಕ್ಕದ್ದು ಸಮಾನವು.

---

# ನಾಲ್ಕನೆಯ ಅಧ್ಯಾಯ-ಹದಿಮೂರನೆಯ ಖಂಡ

( ಉಪಕೋಸಲವಿದ್ಯೆ )

## ಆಹವನೀಯಾಗ್ನಿಯ ವಿದ್ಯೆ

( ಉಪನಿಷತ್ತು )

**ಅಥ ಹೈನಮಾಹವನೀಯೋಽನುಶಶಾಸ ಪ್ರಾಣ ಆಕಾಶೋ ದ್ಯೌರ್ವಿದ್ಯುದಿತಿ ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥**

**ಸ ಯ ಏತಮೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರ ಪುರುಷಾಃ ಕ್ಷೀಯನ್ತ ಉಪ ವಯಂ ತಂ ಭುಞ್ಜಾಮೋಽಸ್ಮಿಂಶ್ಚ ಲೋಕೇಽಮುಷ್ಮಿಗ್ಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ॥೨॥**

೧. ಇನ್ನು ಇವನಿಗೆ ಆಹವನೀಯವು ಅನುಶಾಸನಮಾಡಿತು. 'ಪ್ರಾಣ, ಆಕಾಶ, ದ್ಯುಲೋಕ, ಮಿಂಚು. ಈ ಮಿಂಚಿನಲ್ಲಿ ಪುರುಷನು ಕಾಣಬರುತ್ತಾನಲ್ಲ, ಅವನು ನಾನಾಗಿದ್ದೇನೆ, ಅವನೇ ನಾನಾಗಿರುತ್ತೇನೆ.

೨. ಯಾವನು ಹೀಗೆಂದರಿತು ಈ (ಅಗ್ನಿ)ಯನ್ನು ಉಪಾಸನೆ ಮಾಡುತ್ತಾನೋ ಅವನು ಪಾಪಕೃತ್ಯವನ್ನು ನಾಶಗೊಳಿಸಿಕೊಳ್ಳುವನು. ಸರ್ವಾಯುಸ್ಸನ್ನೂ ಪಡೆದುಕೊಳ್ಳುವನು, ಚೆನ್ನಾಗಿ ಜೀವಿಸುವನು. ಅವನ ಕೆಳಗಿನ ಪುರುಷರು ಕ್ಷಯವಾಗುವಹಾಗಿಲ್ಲ. ಯಾವನು

---

1. 'ಅನ್ವಾಹಾರ್ಯಪಚನಕ್ಕೆ ದಕ್ಷಿಣಾಗ್ನಿ ಎಂದು ಹೆಸರು; ಚಂದ್ರನನ್ನು ದಕ್ಷಿಣಮಾರ್ಗದಿಂದ ಪಡೆದುಕೊಳ್ಳುತ್ತಾರೆ- ಹೀಗೆ ದಕ್ಷಿಣದಿಕ್ಕಿನ ಸಂಬಂಧವಿದೆ' ಎಂದು ಟೀಕೆ.

ಹೀಗೆಂದರಿತು ಉಪಾಸನೆಮಾಡುತ್ತಾನೋ ಅವನನ್ನು ಈ ಲೋಕ ದಲ್ಲಿಯೂ ಆ (ಲೋಕ)ದಲ್ಲಿಯೂ ನಾವು ಉಪಭುಂಜಿಸುವೆವು'.

## ಆಹವನೀಯದ ತನುಚತುಷ್ಟಯ

(ಭಾಷ್ಯ)

೩೩೭. ಅಥ ಹೈನಮ್ ಆಹವನೀಯೋಽನುಶಶಾಸ। ಪ್ರಾಣಃ, ಆಕಾಶಃ, ದ್ಯೌಃ, ವಿದ್ಯುತ್-ಇತಿ ಮಮಾಪ್ಯೇತಾಶ್ಚತಸ್ರಸ್ತನವಃ । ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಇತ್ಯಾದಿ ಪೂರ್ವವತ್। ಸಾಮಾನ್ಯಾತ್। ದ್ಯಾ-ಕಾಶಯೋಽಸ್ತು[1] ಆಶ್ರಯತ್ವಾತ್ ವಿದ್ಯುದಾಹವನೀಯಯೋಃ ಭೋಗ್ಯತ್ವೇ ನೈವ ಸಂಬನ್ಧಃ। ಸಮಾನಮನ್ಯತ್ ॥

(ಭಾಷ್ಯಾರ್ಥ)

ಇನ್ನು ಈ (ಬ್ರಹ್ಮಚಾರಿ)ಗೆ ಆಹವನೀಯವು ಅನುಶಾಸನಮಾಡಿತು. ಪ್ರಾಣ, ಆಕಾಶ, ದ್ಯುಲೋಕ, ಮಿಂಚು- ಎಂಬೀ ನಾಲ್ಕು ನನ್ನ ತನುಗಳು. ಈ ವಿದ್ಯುತ್ತಿನಲ್ಲಿ ಈ ಪುರುಷನು ಕಾಣಿಸುತ್ತಿರುವನಲ್ಲ, ಅವನು ನಾನಾಗಿದ್ದೇನೆ- ಎಂದು ಮುಂತಾದದ್ದು ಹಿಂದಿನಂತೆ ಹೋಲಿಕೆಯಿಂದ[2] (ಎರಡೂ ಒಂದೇ ಎಂದು ವ್ಯಾಖ್ಯಾನಮಾಡಿಕೊಳ್ಳಬೇಕು). ದ್ಯುಲೋಕ, ಆಕಾಶ- ಇವುಗಳಾದರೋ ಮಿಂಚು, ಆಹವನೀಯ- ಇವುಗಳಿಗೆ ಆಶ್ರಯವಾಗಿರುವದರಿಂದ[3] (ಅವಕ್ಕೆ ದ್ಯುಲೋಕಾಕಾಶಗಳೊಡನೆ) ಭೋಗ್ಯವಾಗಿರುವದರಿಂದಲೇ ಸಂಬಂಧ. ಮಿಕ್ಕದ್ದು ಸಮಾನವು.

---

# ನಾಲ್ಕನೆಯ ಅಧ್ಯಾಯ-ಹದಿನಾಲ್ಕನೆಯ ಖಂಡ

(ಉಪಕೋಸಲವಿದ್ಯೆ)

## ಆಚಾರ್ಯನಲ್ಲಿ ಉಪಕೋಸಲನು ನಡೆದದ್ದನ್ನು ಹೇಳಿದ್ದು

(ಉಪನಿಷತ್ತು)

**ತೇ ಹೋಚುರುಪಕೋಸಲೈಷಾ ಸೋಮ್ಯ ತೇಽಸ್ಮದ್ವಿದ್ಯಾಽಽತ್ಮ ವಿದ್ಯಾ ಚಾಚಾರ್ಯಸ್ತು ತೇ ಗತಿಂ ವಕ್ತೇತ್ಯಾಜಗಾಮ ಹಾಸ್ಯಾ ಚಾರ್ಯಸ್ತಮಾಚಾರ್ಯೋಽಭ್ಯುವಾದೋಪಕೋಸಲ೩ ಇತಿ ॥೧॥**

---

1. 'ದಿವಾಕಾಶಯೋಃ' ಎಂಬ ಪಾಠವನ್ನು ಬಿಟ್ಟು ಈ ಪಾಠವನ್ನೇ ಇಟ್ಟುಕೊಂಡಿದೆ.
2. ಅಗ್ನಿ, ಮಿಂಚು- ಎರಡೂ ಜ್ಯೋತಿಯಾಗಿರುವ ಹೋಲಿಕೆಯಿಂದ ಎಂದರ್ಥ.
3. 'ಆಹವನೀಯದಲ್ಲಿ ಮಾಡಿದ ಹೋಮದ ಅಪೂರ್ವಕ್ಕೆ ದ್ಯುಲೋಕವೇ ಆಶ್ರಯವು; ಮಿಂಚಿಗೆ ಆಕಾಶವು ಆಶ್ರಯವೆಂಬುದು ಪ್ರಸಿದ್ಧವೇ' -ಎಂದು ಟೀಕೆ.

೧. ಅವು 'ಸೋಮ್ಯ ಉಪಕೋಸಲ, ಇದೇ ನಿನಗೆ (ನಾವು ಹೇಳಿರುವ) ನಮ್ಮ ವಿದ್ಯೆ, ಮತ್ತು ಆತ್ಮವಿದ್ಯೆ. ಆದರೆ ಆಚಾರ್ಯನು ನಿನಗೆ ಗತಿಯನ್ನು ಹೇಳಿಕೊಡುವನು' ಎಂದವು. ಇವನ ಆಚಾರ್ಯನು ಬಂದನು. ಅವನನ್ನು ಆಚಾರ್ಯನು 'ಉಪಕೋಸಲಾ३' ಎಂದನು.

## ಅಗ್ನಿಗಳ ಉಪದೇಶದ ಉಪಸಂಹಾರ

(ಭಾಷ್ಯ)

೩೩೮. ತೇ ಪುನಃ ಸಂಭೂಯ ಊಚುಃ ಹ। ಉಪಕೋಸಲ ಏಷಾ ಸೋಮ್ಯ ತೇ ತವ ಅಸ್ಮದ್ವಿದ್ಯಾ। ಅಗ್ನಿವಿದ್ಯೇತ್ಯರ್ಥಃ। ಆತ್ಮವಿದ್ಯಾ ಪೂರ್ವೋಕ್ತಾ, ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ ಇತಿ ಚ। ಆಚಾರ್ಯಸ್ತು ತೇ ಗತಿಂ ವಕ್ತಾ ವಿದ್ಯಾಫಲಪ್ರಾಪ್ತಯೇ ಇತ್ಯುಕ್ತ್ವಾ ಉಪರೇಮುರಗ್ನಯಃ। ಆಜಗಾಮ ಹ ಅಸ್ಯ ಆಚಾರ್ಯಃ ಕಾಲೇನ। ತಂ ಚ ಶಿಷ್ಯಮ್ ಆಚಾರ್ಯೋಽಭ್ಯುವಾದ ಉಪಕೋಸಲ३ ಇತಿ ॥

(ಭಾಷ್ಯಾರ್ಥ)

ಅವು ಮತ್ತೆ ಒಟ್ಟಾಗಿ ಇಂತೆಂದವು: "ಅಪ್ಪ, ಉಪಕೋಸಲ, ಇದು ನಮ್ಮ ವಿದ್ಯೆಯು ಎಂದರೆ ಅಗ್ನಿವಿದ್ಯೆಯು ಎಂದರ್ಥ, ಮತ್ತು ಆತ್ಮವಿದ್ಯೆಯು; ಹಿಂದೆ 'ಪ್ರಾಣವು ಬ್ರಹ್ಮವು, ಕಂ ಬ್ರಹ್ಮ, ಖಂ ಬ್ರಹ್ಮ'- ಎಂದು ಹೇಳಿದೆವಲ್ಲ, (ಆ ವಿದ್ಯೆಯು). (ಇನ್ನು) ಆಚಾರ್ಯನಾದರೋ ವಿದ್ಯೆಯ ಫಲದ ಪ್ರಾಪ್ತಿಗಾಗಿ ನಿನಗೆ ಗತಿಯನ್ನು ಹೇಳುತ್ತಾನೆ'-[1] ಎಂದು ಹೇಳಿ ಅಗ್ನಿಗಳು ಸುಮ್ಮನಾದವು.

ಕಾಲಾನುಕಾಲಕ್ಕೆ ಇವನ ಆಚಾರ್ಯನು ಬಂದನು. ಮತ್ತು ಆ ಶಿಷ್ಯನನ್ನು 'ಉಪಕೋಸಲಾ३' ಎಂದು ಕೂಗಿ ಕರೆದನು.

(ಉಪನಿಷತ್ತು)

**ಭಗವ ಇತಿ ಹ ಪ್ರತಿಶುಶ್ರಾವ ಬ್ರಹ್ಮವಿದ ಇವ ಸೋಮ್ಯ ತೇ ಮುಖಂ ಭಾತಿ ಕೋ ನು ತ್ವಾನುಶಶಾಸೇತಿ ಕೋ ನು ಮಾನು ಶಿಷ್ಯಾದ್ಭೋ ಇತೀಹಾಪೇವ ನಿಹ್ನುತ ಇಮೇ ನೂನಮೀದೃಶಾ ಅನ್ಯಾದೃಶಾ ಇತೀಹಾಗ್ನೀನಭ್ಯೂದೇ ಕಿಂ ನು ಸೋಮ್ಯ ಕಿಲ ತೇಽವೋಚನ್ನಿತಿ ॥ ೨ ॥**

---

1. ಉಪಾಸನೆಯಲ್ಲಿ ಗತಿಯನ್ನೂ ಧ್ಯಾನಮಾಡಬೇಕು; ಹಾಗಾದರೆ ಫಲವು ನಿಶ್ಚಯವಾಗಿ ದೊರಕುತ್ತದೆ.

**ಇದಮಿತಿ ಹ ಪ್ರತಿಜಜ್ಞೇ ಲೋಕಾನ್ ವಾವ ಕಿಲ ಸೋಮ್ಯ ತೇಽವೋಚನ್ನಹಂ ತು ತೇ ತದ್ ವಕ್ಷ್ಯಾಮಿ ಯಥಾ ಪುಷ್ಕರ ಪಲಾಶ ಆಪೋ ನ ಶ್ಲಿಷ್ಯನ್ತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತ ಇತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ॥**

೨. 'ಭಗವಂತನೆ' ಎಂದು (ಅವನು) ಉತ್ತರಕೊಟ್ಟನು. (ಆಚಾರ್ಯನು) 'ಅಪ್ಪ, ಬ್ರಹ್ಮಜ್ಞಾನಿಯ (ಮುಖ)ದಂತೆ ನಿನ್ನ ಮುಖವು ಹೊಳೆಯುತ್ತಿದೆ. ನಿನಗೆ ಯಾವನು ಅನುಶಾಸನಮಾಡಿ ದನೊ!' ಎಂದನು. 'ನನಗೆ ಯಾವನುತಾನೆ ಅನುಶಾಸನಮಾಡಿ ಯಾನು, ಸ್ವಾಮಿ?' ಎಂದು ಇಲ್ಲಿ ಅಲ್ಲಗಳೆಯುವವನಂತೆ (ನುಡಿದು) 'ಇವೇ ನಿಜವಾಗಿ! ಹೀಗೆ ಇವೆ. (ಮತ್ತೊಂದು ಬಗೆಯಾಗಿದ್ದವು)' ಎಂದು ಇಲ್ಲಿ ಅಗ್ನಿಗಳನ್ನು ಹೇಳಿದನು. 'ಅವು ನಿನಗೆ ಏನು ಹೇಳಿದವಪ್ಪ?'

೩. 'ಇದನ್ನು' ಎಂದಿಂತು ಹೇಳಿದನು. 'ಅಪ್ಪ, ಲೋಕ ಗಳನ್ನೇ ಅವು ಹೇಳಿರುತ್ತವೆ. ಆದರೆ ನಾನು ಅದನ್ನು ನಿನಗೆ ಹೇಳು ವೆನು. ಹೇಗೆ ಪುಷ್ಕರಪಲಾಶದಲ್ಲಿ ನೀರು ಅಂಟಿಕೊಳ್ಳುವದಿಲ್ಲವೋ, ಹಾಗೆಯೇ ಹೀಗೆಂದು ಅರಿತಿರುವವನಲ್ಲಿ ಪಾಪಕರ್ಮವು ಅಂಟಿಕೊಳ್ಳು ವದಿಲ್ಲ.' 'ಭಗವಂತನು, ನನಗೆ ಹೇಳಿಕೊಡಬೇಕು!' ಅವನನ್ನು ಕುರಿತು (ಆಚಾರ್ಯನು) ಇಂತೆಂದನು :

## ಆಚಾರ್ಯನು ಅಗ್ನಿಗಳು ಉಪದೇಶಮಾಡಿದ್ದನ್ನು ತಿಳಿದುಕೊಂಡದ್ದು

(ಭಾಷ್ಯ)

೩೩೯. ಭಗವಃ ಇತಿ ಹ ಪ್ರತಿಶುಶ್ರಾವ। ಬ್ರಹ್ಮವಿದ ಇವ ಸೋಮ್ಯ ತೇ ಮುಖಂ ಪ್ರಸನ್ನಂ ಭಾತಿ। ಕೋ ನು ತ್ವಾ ಅನುಶಶಾಸ ಇತ್ಯುಕ್ತಃ ಪ್ರತ್ಯಾಹ। ಕೋ ನು ಮಾ ಅನುಶಿಷ್ಯಾತ್ ಅನುಶಾಸನಂ ಕುರ್ಯಾತ್ ಭೋ ಭಗವನ್ ತ್ವಯಿ ಪ್ರೋಷಿತೇ? -ಇತಿ ಇಹ ಅಪ ಇವ ನಿಹ್ನುತೇ। ಅಪನಿಹ್ನುತ ಇವೇತಿ ವ್ಯವ ಹಿತೇನ ಸಂಬನ್ಧಃ। ನ ಚ ಅಪನಿಹ್ನುತೇ ನ ಚ ಯಥಾವತ್ ಅಗ್ನಿಭಿರುಕ್ತಂ ಬ್ರವೀತಿ ಇತ್ಯಭಿಪ್ರಾಯಃ। ಕಥಮ್ ? ಇಮೇ ಅಗ್ನಯಃ ಮಯಾ ಪರಿಚರಿತಾಃ।

ಉಕ್ತವನ್ತೋ ನೂನಮ್। ಯತಸ್ತ್ವಾಂ ದೃಷ್ಟ್ವಾ ವೇಪಮಾನಾ ಇವ ಈದೃಶಾ ದೃಶ್ಯನ್ತೇ ಪೂರ್ವಮನ್ಯಾದೃಶಾಃ ಸನ್ತಃ। ಇತಿ ಇಹ ಅಗ್ನೀನ್ ಅಭ್ಯೂದೇ ಅಭ್ಯುಕ್ತವಾನ್ ಕಾಕ್ವಾ ಅಗ್ನೀನ್ ದರ್ಶಯನ್। ಕಿಂ ನು ಸೋಮ್ಯ ಕಿಲ ತೇ ತುಭ್ಯಮ್ ಅವೋಚನ್ ಅಗ್ನಯಃ ಇತಿ? ಪೃಷ್ಟಃ ಇತಿ ಏವಮ್ ಇದಮುಕ್ತವನ್ತ ಇತ್ಯೇವಂ ಹ ಪ್ರತಿಜಜ್ಞೇ ಪ್ರತಿಜ್ಞಾತವಾನ್ ಪ್ರತೀಕಮಾತ್ರಂ ಕಿಂಚಿತ್, ನ ಸರ್ವಂ ಯಥೋಕ್ತಮಗ್ನಿಭಿರುಕ್ತಮ್ ಅವೋಚತ್ ॥

(ಭಾಷ್ಯಾರ್ಥ)

"ಭಗವಂತನೆ" ಎಂದು (ಆ ಉಪಕೋಸಲನು) ಪ್ರತ್ಯುತ್ತರವನ್ನು ಕೊಟ್ಟನು. (ಆಚಾರ್ಯನು) "ಅಪ್ಪ, ನಿನ್ನ ಮುಖವು ಬ್ರಹ್ಮಜ್ಞಾನಿಯ ಮುಖದಂತೆ ಪ್ರಸನ್ನವಾಗಿ ಕಾಣುತ್ತಿದೆ, ನಿನಗೆ ಯಾವನು ಹೇಳಿಕೊಟ್ಟನೊ!" ಎನ್ನಲು (ಅವನು ಹೀಗೆಂದು) ಉತ್ತರವಿತ್ತನು. "ಸ್ವಾಮಿ, ಪೂಜ್ಯರೆ, ತಾವು ಹೊರಕ್ಕೆ ಹೋಗಿರುವಲ್ಲಿ ನನಗೆ ಯಾವನು ಅನುಶಾಸನವನ್ನು ಮಾಡಿಯಾನು ?" ಎಂದು ಈ (ವಿಷಯ) ದಲ್ಲಿ (ಅಪೇವ ನಿಹ್ನುತೇ= ಅಪನಿಹ್ನುತೇ ಇವ) ಎಂದು ವ್ಯವಹಿತವಾದದ್ದಕ್ಕೆ ಸಂಬಂಧವನ್ನು ಮಾಡಿಕೊಳ್ಳಬೇಕು—ಅಲ್ಲಗಳೆಯುವವನಂತೆ, ಅಲ್ಲಗಳೆಯಲೂ ಇಲ್ಲ, ಅಗ್ನಿಗಳು ಹೇಳಿವರೆಂಬುದನ್ನು ಇದ್ದದ್ದು ಇದ್ದಂತೆ ಹೇಳಲೂ ಇಲ್ಲ. ಹೇಗೆಂದರೆ, "ಈ ನಾನು ಪರಿಚರ್ಯೆಮಾಡಿದ ಅಗ್ನಿಗಳೇ ಹೇಳಿರಬೇಕು, ಏಕೆಂದರೆ ನಿಮ್ಮನ್ನು ಕಂಡು ನಡುಗುತ್ತವೆಯೋ ಎಂಬಂತೆ, ಹೀಗೆ ಕಾಣುತ್ತಿವೆ, ಮೊದಲು ಇನ್ನೊಂದು ಬಗೆಯಾಗಿದ್ದುಕೊಂಡು (ಈಗ ಹೀಗೆ ಕಾಣುತ್ತಿವೆ)" -ಎಂದು ಇಲ್ಲಿ ಕಾಕುವಿನಿಂದ[1] ಅಗ್ನಿಗಳನ್ನು ತೋರಿಸುತ್ತಾ (ಅಭ್ಯೂದೇ= ಅಭ್ಯುಕ್ತವಾನ್) ನುಡಿದನು. "ಅಪ್ಪ, ಅವು ನಿನಗೆ ಏನು ಹೇಳಿಕೊಟ್ಟವೊ!" ಎಂದು (ಆಚಾರ್ಯನು) ಕೇಳಲು ಇದನ್ನು ಹೇಳಿದವು ಎಂದು (ಇತಿ= ಏವಮ್) ಹೀಗೆ ಒಂದಿಷ್ಟು ಪ್ರತೀಕವನ್ನು[2] ಮಾತ್ರ (ಪ್ರತಿಜಜ್ಞೇ= ಪ್ರತಿಜ್ಞಾತವಾನ್) ಹೇಳಿದನು, ಅಗ್ನಿಗಳು ಹೇಳಿದ್ದೆಲ್ಲವನ್ನೂ ಮೇಲೆ ಹೇಳಿದಂತೆ ತಿಳಿಸಲಿಲ್ಲ.

## ಆಚಾರ್ಯನು ಉಪದೇಶಿಸುವದಕ್ಕೆ ಪ್ರಾರಂಭಿಸಿದ್ದು

(ಭಾಷ್ಯ)

೩೪೦. ಯತ ಆಹಾಽಽಚಾರ್ಯಃ। ಲೋಕಾನ್ ವಾವ ಪೃಥಿವ್ಯಾದೀನ್ ಹೇ ಸೋಮ್ಯ ಕಿಲ ತೇ ಅವೋಚನ್, ನ ಬ್ರಹ್ಮ ಸಾಕಲ್ಯೇನ। ಅಹಂ ತು ತೇ

---

1. ಮಾತಾಡುವಾಗ ಆಗುವ ಸ್ವರಭೇದಕ್ಕೆ ಕಾಕುವೆಂದು ಹೆಸರು; 'ಇವೇ ಹೇಳಿರಬೇಕು' ಎಂದು ಅಗ್ನಿಗಳ ಕಡೆಗೆ ನೋಡಿದ್ದರಿಂದ ಆಚಾರ್ಯನಿಗೆ ತಿಳಿಯುವಂತೆ ಮಾಡಿದನು. ಏಕೆಂದರೆ ಆಗ ಅವನು ಹೆದರಿಕೊಂಡಿದ್ದನು.

2. ಒಂದೆರಡು ಮಾತುಗಳನ್ನು ಮಾತ್ರ, ಸಾರಾಂಶವನ್ನು ಮಾತ್ರ- ಎಂದರ್ಥ.

ತುಭ್ಯಂ ತದ್ ಬ್ರಹ್ಮ ಯದೀಚ್ಛಸಿ[1] ತ್ವಂ ಶ್ರೋತುಂ ವಕ್ಷ್ಯಾಮಿ। ಶೃಣು ತಸ್ಯ ಮಯೋಚ್ಯಮಾನಸ್ಯ ಬ್ರಹ್ಮಣೋ ಜ್ಞಾನಮಾಹಾತ್ಮ್ಯಮ್। ಯಥಾ ಪುಷ್ಕರ ಪಲಾಶೇ ಪದ್ಮಪತ್ರೇ ಆಪೋ ನ ಶ್ಲಿಷ್ಯನ್ತೇ ಏವಂ ಯಥಾ ವಕ್ಷ್ಯಾಮಿ ಬ್ರಹ್ಮ ಏವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ನ ಸಂಬಧ್ಯತೇ ಇತಿ। ಏವಮುಕ್ತವತಿ ಆಚಾರ್ಯೇ ಆಹ ಉಪಕೋಸಲಃ ಬ್ರವೀತು ಮೇ ಭಗವಾನ್ ಇತಿ। ತಸ್ಮೈ ಹ ಉವಾಚಾಽಽಚಾರ್ಯಃ ॥

(ಭಾಷ್ಯಾರ್ಥ)

ಆದ್ದರಿಂದಲೇ[2] ಆಚಾರ್ಯನು ಹೀಗೆಂದಿರುತ್ತಾನೆ "ಎಲೈ ಸೋಮ್ಯನೆ, ಅವು ಪೃಥಿವಿಯೇ ಮುಂತಾದ ಲೋಕಗಳನ್ನೇ ಹೇಳಿರುವವೇ ಹೊರತು ಬ್ರಹ್ಮ ವನ್ನು ಪೂರ್ಣವಾಗಿ[3] (ಹೇಳಿ)ಲ್ಲ. ಆದರೆ ನಾನು (ತೇ=ತುಭ್ಯಂ) ನಿನಗೆ (ನಿನಗೆ) ಇಚ್ಛೆಯಿದ್ದರೆ ಬ್ರಹ್ಮವನ್ನು (ಪೂರ್ಣವಾಗಿ) ಹೇಳುವೆನು. ನಾನು ಹೇಳುತ್ತಿರುವ ಆ ಬ್ರಹ್ಮದ ಜ್ಞಾನದ ಮಹಿಮೆಯನ್ನು ಕೇಳು. ಹೇಗೆ ಪುಷ್ಕರಪಲಾಶದಲ್ಲಿ, ತಾವರೆ ಎಲೆಯಲ್ಲಿ ನೀರು ಅಂಟಿಕೊಳ್ಳುವದಿಲ್ಲವೋ ಹಾಗೆ ನಾನು ಬ್ರಹ್ಮವನ್ನು ಹೇಳುವೆನಲ್ಲ, ಹಾಗೆಯೇ ಅರಿತುಕೊಂಡಿರುವವನಲ್ಲಿ ಪಾಪಕರ್ಮವು ಅಂಟಿಕೊಳ್ಳು ವದಿಲ್ಲ, ಸಂಬದ್ಧವಾಗುವದಿಲ್ಲ

ಆಚಾರ್ಯನು ಹೀಗೆನ್ನಲು ಉಪಕೋಸಲು "ಭಗವಂತನು ನನಗೆ ಹೇಳಿ ಕೊಡಬೇಕು" ಎಂದನು. ಅವನಿಗೆ ಆಚಾರ್ಯನು (ಹೀಗೆಂದು) ಹೇಳಿದನು.

---

# ನಾಲ್ಕನೆಯ ಅಧ್ಯಾಯ-ಹದಿನೈದನೆಯ ಖಂಡ

( ಉಪಕೋಸಲವಿದ್ಯೆ )

## ಅಕ್ಷಿಪುರುಷನ ವಿದ್ಯೆ

(ಉಪನಿಷತ್ತು)

**ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತದ್ಯದ್ಯಪ್ಯ ಸ್ಮಿನ್ ಸರ್ಪಿರ್ವೋದಕಂ ವಾ ಸಿಞ್ಚತಿ ವರ್ತ್ಮನೀ ಏವ ಗಚ್ಛತಿ॥**

---

1 'ಯದಿಚ್ಛಸಿ' ಎಂಬುವಕ್ಕಿಂತ ಈ ಪಾಠವು ಮೇಲು.

2. 'ಶಿಷ್ಯನು ಹೀಗೆ ಹೇಳಿದ್ದರಿಂದಲೇ' ಎಂದು ಟೀಕೆ. ಅವನು ಪ್ರತೀಕಮಾತ್ರವನ್ನು ಹೇಳಿದ್ದನ್ನು ಕೇಳಿದ್ದರಿಂದಲೇ ಎಲ್ಲವನ್ನೂ ತಿಳಿದುಕೊಂಡು- ಎಂಬ ಅಭಿಪ್ರಾಯವೂ ಇಲ್ಲಿದೆ.

3. ಅಗ್ನಿಗಳು ಆತ್ಮವಿದ್ಯೆಯನ್ನು ಸ್ವಲ್ಪ ಹೇಳಿವೆ, ಅದನ್ನೇ ಪೂರ್ಣವಾಗಿ ಹೇಳುತ್ತೇನೆ ಎಂದರ್ಥ.

೧. ಕಣ್ಣಿನಲ್ಲಿ ಕಾಣಿಸುವ ಈ ಪುರುಷನಿದಾನಲ್ಲ, ಇವನೇ ಆತ್ಮನು. ಇದೇ ಅಮೃತವು, ಅಭಯವು ; ಇದೇ ಬ್ರಹ್ಮವು- ಎಂದನು. ಅಲ್ಲಿ ಇದರಲ್ಲಿ ಬೆಣ್ಣೆಯನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೂ ಕಡೆ (ಗಣ್ಣು)ಗಳಿಗೇ ಬಂದು ಸೇರುತ್ತದೆ.

## ಅಕ್ಷಿಪುರುಷನೇ ಬ್ರಹ್ಮ

(ಭಾಷ್ಯ)

೩೪೧. ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ನಿವೃತ್ತಚಕ್ಷುರ್ಭಿರ್ಬ್ರಹ್ಮಚರ್ಯಾದಿಸಾಧನಸಂಪನ್ನೈಃ ಶಾನ್ತೈರ್ವಿವೇಕಿಭಿಃ "ದೃಷ್ಟೇರ್ದ್ರಷ್ಟಾ" (ಬೃ. ೩-೪-೨), "ಚಕ್ಷುಷಶ್ಚಕ್ಷುಃ" (ಕೇ. ೧-೨) ಇತ್ಯಾದಿಶ್ರುತ್ಯನ್ತರಾತ್। ನನ್ವಗ್ನಿಭಿರುಕ್ತಂ ವಿತಥಮ್। ಯತ ಆಚಾರ್ಯಸ್ತು ತೇ ಗತಿಂ ವಕ್ತಾ (೪-೧೪-೧) ಇತಿ ಗತಿಮಾತ್ರಸ್ಯ ವಕ್ತೇತ್ಯವೋಚನ್ । ಭವಿಷ್ಯದ್ವಿಷಯಾಪರಿಜ್ಞಾನಂ ಚಾಗ್ನೀನಾಮ್। ನೈಷ ದೋಷಃ । ಸುಖಾಕಾಶಸ್ಯೈವ ಅಕ್ಷಿಣಿ ದೃಶ್ಯತೇ ಇತಿ ದ್ರಷ್ಟುರನುವಾದಾತ್। ಏಷ ಆತ್ಮಾ ಪ್ರಾಣಿನಾಮ್ ಇತಿ ಹ ಉವಾಚ ಏವಮುಕ್ತವಾನ್। ಏತತ್ ಯದೇವ ಆತ್ಮತತ್ತ್ವಮವೋಚಾಮ ಏತತ್ ಅಮೃತಮ್ ಅಮರಣಧರ್ಮಿ ಅವಿನಾಶಿ। ಅತ ಏವ ಅಭಯಮ್ । ಯಸ್ಯ ಹಿ ವಿನಾಶಾಶಙ್ಕಾ ತಸ್ಯ ಭಯೋಪಪತ್ತಿಃ। ತದಭಾವಾತ್ ಅಭಯಮ್। ಅತ ಏವ ಏತದ್ ಬ್ರಹ್ಮ, ಬೃಹತ್, ಅನನ್ತಮಿತಿ । ಕಿಂ ಚಾಸ್ಯ ಬ್ರಹ್ಮಣೋಽಕ್ಷಿಪುರುಷಸ್ಯ ಮಾಹಾತ್ಮ್ಯಮ್। ತತ್ ತತ್ರ ಪುರುಷಸ್ಯ ಸ್ಥಾನೇ ಅಕ್ಷಿಣಿ ಯದ್ಯಪಿ ಅಸ್ಮಿನ್ ಸರ್ಪಿರ್ವಾ ಉದಕಂ ವಾ ಸಿಞ್ಚತಿ ವರ್ತ್ಮನೀ ಏವ ಗಚ್ಛತಿ ಪಕ್ಷ್ಮಾವೇವ ಗಚ್ಛತಿ । ನ ಚಕ್ಷುಷಾ ಸಂಬಧ್ಯತೇ ಪದ್ಮಪತ್ರೇಣೇವೋದಕಮ್ । ಸ್ಥಾನಸ್ಯಾಪ್ಯೇತನ್ಮಾಹಾತ್ಮ್ಯಮ್। ಕಿಂ ಪುನಃ ಸ್ಥಾನಿನೋಽಕ್ಷಿಪುರುಷಸ್ಯ ನಿರಞ್ಜನತ್ವಂ ವಕ್ತವ್ಯಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

**ಇಂದ್ರಿಯಗಳನ್ನು ಹಿಂತಿರುಗಿಸಿಕೊಂಡು ಬ್ರಹ್ಮಚರ್ಯವೇ ಮುಂತಾದ ಸಾಧನೆಗಳಿಂದೊಡಗೂಡಿದವರಾಗಿ ಶಾಂತರೂ ವಿವೇಕಿಗಳೂ ಆದವರಿಗೆ ಕಣ್ಣಿನಲ್ಲಿ ಕಾಣುವ ದೃಷ್ಟಿಯ ದ್ರಷ್ಟೃವೂ, (ಬೃ ೩-೪-೨) ಚಕ್ಷುಸ್ಸಿಗೂ ಚಕ್ಷುಸ್ಸೂ (ಕೇ. ೧-೨) ಮುಂತಾದ**

**ಶ್ರುತಿಗಳ (ಪ್ರಮಾಣ)ದಿಂದ (ತಿಳಿಯಬರುವ) ಈ ಪುರುಷನಿದಾನಲ್ಲ[1]-**

(ಆಕ್ಷೇಪ) :- ಅಗ್ನಿಗಳು ಹೇಳಿದ್ದು ಸುಳ್ಳಾಯಿತಲ್ಲ ! "ಆಚಾರ್ಯನಾದರೆ ಗತಿಯನ್ನು ಹೇಳಿಕೊಡುವನು" (೪-೧೪-೧) ಗತಿಮಾತ್ರವನ್ನು ಹೇಳಿಕೊಡುತ್ತಾನೆ ಎಂದು (ಅವು) ಹೇಳಿದ್ದವು. ಅಗ್ನಿಗಳಿಗೆ ಭವಿಷ್ಯತ್ಕಾಲದ ವಿಷಯವು ತಿಳಿಯಲಿಲ್ಲವೆಂದೂ (ಆಯಿತಲ್ಲ) !

(ಪರಿಹಾರ) :- (ಇಲ್ಲ) ಈ ದೋಷವಿಲ್ಲ. ಸುಖಾಕಾಶನಾದ ಬ್ರಹ್ಮವನ್ನೇ 'ಕಣ್ಣಿನಲ್ಲಿ ಕಾಣುತ್ತಾನಲ್ಲ' ಎಂದು ಅನುವಾದಮಾಡಿಕೊಂಡಿರುತ್ತದೆ[2]. (ಕಣ್ಣಿನಲ್ಲಿ ಕಾಣುವ ಈ ಪುರುಷನಿದಾನಲ್ಲ,) ಇವನೇ ಪ್ರಾಣಿಗಳ ಆತ್ಮನು[3] ಎಂದಿಂತು ಹೇಳಿದನು, ಹೇಳಿದವನಾದನು. ಇದು, ಎಂದರೆ (ನಾವು) ಯಾವ ಆತ್ಮತತ್ತ್ವವನ್ನು ಹೇಳಿದೆವೋ ಇದೇ ಅಮೃತವು. ಸಾವೆಂಬ ಧರ್ಮವಿಲ್ಲದ್ದು, ನಾಶವಾಗದ್ದು, ಆದ್ದರಿಂದಲೇ ಅಭಯವು ; ಯಾವದಕ್ಕೆ ವಿನಾಶದ ಆಶಂಕೆಯಿರುವದೋ ಅದಕ್ಕೆ ಭಯವಾಗುವದೆಂಬುದು ಹೊಂದುತ್ತದೆ, ಅದಿಲ್ಲದ್ದರಿಂದ (ಇದು) ಅಭಯವು ಆದ್ದರಿಂದಲೇ ಇದು ಬ್ರಹ್ಮವು, ದೊಡ್ಡದು, ಅನಂತವಾದದ್ದು ಎಂದನು

ಮತ್ತು ಈ ಅಕ್ಷಿಪುರುಷನೆಂಬ ಬ್ರಹ್ಮದ ಮಾಹಾತ್ಮ್ಯವೇನೆಂದರೆ, (ತತ್= ತತ್ರ) ಅಲ್ಲಿ (ಈ) ಪುರುಷನ ಸ್ಥಾನವಾದ ಕಣ್ಣಿನಲ್ಲಿ ತುಪ್ಪವನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೂ ಕಡೆ(ಕಣ್ಣು)ಗಳಿಗೇ (ಕಣ್ಣಿನ) ಕಡೆಯ ಭಾಗಗಳಿಗೇ ಹೋಗಿ ಸೇರುತ್ತದೆ, ನೀರು ತಾವರೆಯೆಲೆಗೆ ಸಂಬಂಧಿಸದೆ ಇರುವಂತೆ, ಕಣ್ಣಿಗೆ ಸಂಬಂಧಿಸದೆ ಇರುತ್ತದೆ (ಇವನ) ಸ್ಥಾನಕ್ಕೂ ಈ ಮಾಹಾತ್ಮ್ಯವಿರುತ್ತದ, ಸ್ಥಾನಿಯಾದ (ಈ) ಅಕ್ಷಿಪುರುಷನು ನಿರಂಜನತ್ವವನ್ನು[4] ಹೇಳುವದೇನಿದೆ ?- ಎಂದು ಅಭಿಪ್ರಾಯ

---

1. ಇಲ್ಲಿ ಕಣ್ಣಿನಲ್ಲಿ ಕಾಣುವ ಪುರುಷನೆಂದರೆ ಕಣ್ಣಿನ ಗೊಂಬೆಯಲ್ಲ, ಚಕ್ಷುಸ್ಸಿನ ಅನುಗ್ರಾಹಕನಾದ ಸೂರ್ಯನೂ ಅಲ್ಲ , ಇಂದ್ರಿಯಗಳನ್ನೆಲ್ಲ ಬೆಳಗುವ ಚೈತನ್ಯಪ್ರಕಾಶನಾದ ಪರಮಾತ್ಮನೇ ಎಂಬುದನ್ನು ಇಲ್ಲಿರುವ ವಿಶೇಷಣಗಳು ತಿಳಿಸುತ್ತವೆ. ಈ ವಾಕ್ಯದ ಚರ್ಚೆಯನ್ನೂ ಸಿದ್ಧಾಂತವನ್ನೂ ಸೂ ಭಾ. ೧-೨-೧೩ರಿಂದ ೧೭ರವರೆಗಿನ (ಭಾ. ೧೭೭ರಿಂದ ೧೮೭ರವರೆಗಿನ) ಗ್ರಂಥದಲ್ಲಿ ಕಾಣಬಹುದು

2. ಹಿಂದೆ ಅಗ್ನಿಗಳು ಹೇಳಿದ್ದ ಆತ್ಮನನ್ನೇ ಅನುವಾದಮಾಡಿಕೊಂಡು ಇಲ್ಲಿ ಬ್ರಹ್ಮವನ್ನು ಪೂರ್ಣವಾಗಿ ಹೇಳಿದೆ.

3 ಆತ್ಮ, ಅಮೃತ, ಅಭಯ, ಬ್ರಹ್ಮ- ಈ ಶಬ್ದಗಳೂ ಮುಂದೆ ಹೇಳುವ ಗುಣಗಳೂ ಬ್ರಹ್ಮಕ್ಕೇ ಹೊಂದುವವೆಂಬುದು ಸ್ಪಷ್ಟವಾಗಿವೆ

4. ಪರಮಾತ್ಮನಿಗೆ ಏತರ ಅಂಟೂ ಇಲ್ಲವೆಂಬುದನ್ನು ಈ ಪವಿತ್ರಸ್ಥಾನದಿಂದಲೇ ಮನದಂಬುಕೊಳ್ಳಬಹುದು ; ಆತನ ಸಂಬಂಧದಿಂದ ಈ ಸ್ಥಾನವೇ ಇಷ್ಟು ನಿರ್ಮಲವಾಗಿರುವಾಗ ಆತನು ನಿತ್ಯನಿರ್ಮಲನೆಂಬುವದನ್ನು ಹೇಳಬೇಕಾದದ್ದೇ ಇಲ್ಲ ಎಂದು ಅಭಿಪ್ರಾಯ.

(ಉಪನಿಷತ್ತು)

**ಏತಗ್‍ಂ ಸಂಯದ್ವಾಮ ಇತ್ಯಾಚಕ್ಷತ ಏತಗ್‍ಂ ಹಿ ಸರ್ವಾಣಿ ವಾಮಾನ್ಯಭಿಸಂಯನ್ತಿ ಸರ್ವಾಣ್ಯೇನಂ ವಾಮಾನ್ಯಭಿಸಂಯನ್ತಿ ಯ ಏವಂ ವೇದ ॥ ೨ ॥**

೨. ಈತನನ್ನು ಸಂಯದ್ವಾಮನೆಂದು ಕರೆಯುತ್ತಾರೆ. ಇವನನ್ನು ಎಲ್ಲಾ ವಾಮಗಳೂ ಬಂದು ಸೇರುತ್ತವೆಯಲ್ಲವೆ ? ಯಾವನು ಹೀಗೆಂದು ಅರಿತುಕೊಳ್ಳುವನೋ ಅವನನ್ನು ಎಲ್ಲಾ ವಾಮಗಳೂ ಬಂದು ಸೇರುವವು.

## ಅಕ್ಷಿಪುರುಷನು ಸಂಯದ್ವಾಮನು

(ಭಾಷ್ಯ)

೩೪೨. ಏತಂ ಯಥೋಕ್ತಂ ಪುರುಷಂ ಸಂಯದ್ವಾಮಃ ಇತ್ಯಾಚಕ್ಷತೇ । ಕಸ್ಮಾತ್ ? (ಹಿ)[1] ಯಸ್ಮಾತ್ ಏತಂ ಸರ್ವಾಣಿ ವಾಮಾನಿ ವನನೀಯಾನಿ ಸಂಭಜನೀಯಾನಿ ಶೋಭನಾನಿ ಅಭಿಸಂಯನ್ತಿ ಅಭಿಸಂಗಚ್ಛನ್ತೀತ್ಯತಃ ಸಂಯದ್ವಾಮಃ । ತಥಾ ಏವಂವಿದಮೇನಂ ಸರ್ವಾಣಿ ವಾಮಾನಿ ಅಭಿಸಂಯನ್ತಿ ಯ ಏವಂ ವೇದ ॥

(ಭಾಷ್ಯಾರ್ಥ)

ಈ ಮೇಲೆ ಹೇಳಿದ ಪುರುಷನನ್ನು 'ಸಂಯದ್ವಾಮನು' ಎಂದು ಕರೆಯುತ್ತಾರೆ. ಏಕೆ ? (ಹಿ=ಯಸ್ಮಾತ್) ಏಕೆಂದರೆ ಇವನನ್ನು ಎಲ್ಲಾ ವಾಮಗಳೂ ವನನೀಯವಾದ ಬಯಸಬೇಕಾದ ಮಂಗಲಗಳೂ (ಅಭಿಸಂಯನ್ತಿ=ಅಭಿಸಂಗಚ್ಛನ್ತಿ) ಬಂದು ಸೇರುತ್ತವೆ. ಆದ್ದರಿಂದ (ಇವನು) ಸಂಯದ್ವಾಮ(ನೆನಿಸಿರುತ್ತಾನೆ). ಹೀಗೆಯೇ ಹೀಗೆಂದು ಉಪಾಸನೆಮಾಡುವನಲ್ಲ ಅವನ ಬಳಿಗೂ ಎಲ್ಲಾ ವಾಮಗಳೂ ಬಂದು ಸೇರುತ್ತವೆ.

(ಉಪನಿಷತ್ತು)

**ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ ॥ ೩ ॥**

೩. ಮತ್ತು ಈತನೇ ವಾಮನಿಯು. ಈತನಲ್ಲವೆ, ಎಲ್ಲ ವಾಮಗಳನ್ನು ಒದಗಿಸುತ್ತಾನೆ ? ಯಾವನು ಹೀಗೆಂದು ಅರಿತಿರುವನೋ (ಅವನು) ಎಲ್ಲಾ ವಾಮಗಳನ್ನೂ ಒದಗಿಸುವನು.

[1] ಈ ಮಾತು ಇಲ್ಲಿ ಬಿಟ್ಟುಹೋಗಿರುತ್ತದೆ

## ಅಕ್ಷಿಪುರುಷನು ವಾಮನಿಯು

(ಭಾಷ್ಯ)

೩೪೩. ಏಷ ಉ ಏವ ವಾಮನೀಃ । ಯಸ್ಮಾದೇಷ ಹಿ ಸರ್ವಾಣಿ ವಾಮಾನಿ ಪುಣ್ಯಕರ್ಮಫಲಾನಿ ಪುಣ್ಯಾನುರೂಪಂ ಪ್ರಾಣಿಭ್ಯೋ ನಯತಿ ಪ್ರಾಪಯತಿ ವಹತಿ ಚ ಆತ್ಮಧರ್ಮತ್ವೇನ । ವಿದುಷಃ ಫಲಮ್– ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ ॥

(ಭಾಷ್ಯಾರ್ಥ)

ಮತ್ತು ಈತನೇ ವಾಮನಿಯು, (ಹಿ= ಯಸ್ಮಾತ್) ಏಕೆಂದರೆ ಎಲ್ಲಾ ವಾಮಗಳನ್ನೂ ಎಂದರೆ ಪುಣ್ಯಕರ್ಮಫಲಗಳನ್ನೂ ಪುಣ್ಯಕ್ಕೆ ಅನುಗುಣವಾಗಿ ಪ್ರಾಣಿಗಳಿಗೆ (ನಯತಿ=ಪ್ರಾಪಯತಿ) ಒದಗಿಸಿಕೊಡುತ್ತಾನೆ, ಮತ್ತು ತನ್ನ ಧರ್ಮವಾಗಿಟ್ಟುಕೊಂಡಿರುತ್ತಾನೆ[1]. ಉಪಾಸಕನಿಗೆ ಫಲವೇನೆಂದರೆ, ಯಾವನು ಹೀಗೆಂದು ಅರಿಯುವನೋ ಅವನು ಸರ್ವಕಾಮುಗಳನ್ನೂ ಒದಗಿಸುತ್ತಾನೆ.

(ಉಪನಿಷತ್ತು)

**ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ ಸರ್ವೇಷು ಲೋಕೇಷು ಭಾತಿ ಯ ಏವಂ ವೇದ ॥ ೪ ॥**

೪. ಮತ್ತು ಈತನೇ ಭಾಮನಿಯು. ಈತನೇ ಅಲ್ಲವೆ, ಸರ್ವಲೋಕಗಳಲ್ಲಿಯೂ ಹೊಳೆಯುತ್ತಿರುತ್ತಾನೆ? ಯಾವನು ಹೀಗೆಂದು ಅರಿತಿರುವನೋ ಅವನು ಸರ್ವಲೋಕಗಳಲ್ಲಿಯೂ ಹೊಳೆಯುವನು.

## ಅಕ್ಷಿಪುರುಷನು ಭಾಮನಿಯು

(ಭಾಷ್ಯ)

೩೪೪. ಏಷ ಉ ಏವ ಭಾಮನೀಃ । ಏಷ ಹಿ ಯಸ್ಮಾತ್ ಸರ್ವೇಷು ಲೋಕೇಷು ಆದಿತ್ಯಚನ್ದ್ರಾಗ್ನ್ಯಾದಿರೂಪೈಃ ಭಾತಿ ದೀಪ್ಯತೇ । "ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಮುಂ. ೨–೨–೧೧) ಇತಿ ಶ್ರುತೇಃ । ಅತೋ ಭಾಮಾನಿ ನಯತಿ ಇತಿ ಭಾಮನೀಃ । ಯ ಏವಂ ವೇದ ಅಸಾವಪಿ ಸರ್ವೇಷು ಲೋಕೇಷು ಭಾತಿ ॥

---

1. ತನ್ನ ಧರ್ಮವಾಗಿಟ್ಟುಕೊಂಡಿರುತ್ತಾನೆ ಎಂದು ಹಿಂದಿನ ಕಂಡಿಕೆಯ ಎರಡನೆಯ ವ್ಯಾಖ್ಯಾನವನ್ನು ಅನುಸರಿಸಿ ಅರ್ಥಮಾಡಿಕೊಳ್ಳಬೇಕು

(ಭಾಷ್ಯಾರ್ಥ)

ಮತ್ತು ಇವನೇ ಭಾಮನಿಯು. ಇವನೇ ಅಲ್ಲವೆ, ಸರ್ವಲೋಕಗಳಲ್ಲಿಯೂ ಆದಿತ್ಯ, ಚಂದ್ರ, ಅಗ್ನಿ- ಮುಂತಾದ ರೂಪಗಳಿಂದ (ಭಾತಿ-ದೀಪ್ಯತೇ) ಹೊಳೆಯುತ್ತಾನೆ, "ಅವನ ಕಾಂತಿಯಿಂದ ಇದೆಲ್ಲವೂ ಹೊಳೆಯುತ್ತಿದೆ" (ಮುಂ ೨-೨-೧೧) ಎಂಬ ಶ್ರುತಿಯಿಂದ ಇದು ಸಿದ್ಧವಾಗುತ್ತದೆ ಆದ್ದರಿಂದ ಭಾಮ(ಕಾಂತಿ)ಗಳನ್ನು ಒಯ್ಯುತ್ತಾನೆ[1] ಎಂಬ ಕಾರಣದಿಂದ (ಇವನು) ಭಾಮನಿಯು. ಯಾವನು ಹೀಗೆಂದು ಅರಿತಿರುವನೋ ಅವನೂ ಸರ್ವಲೋಕಗಳಲ್ಲಿಯೂ ಹೊಳೆಯುತ್ತಿರುವನು

## ಸಗುಣಬ್ರಹ್ಮವಿದ್ಯೆಗೆ ಉತ್ತರಗತಿ

(ಉಪನಿಷತ್ತು)

**ಅಥ ಯದು ಚೈವಾಸ್ಮಿಞ್ಛವ್ಯಂ ಕುರ್ವನ್ತಿ ಯದಿ ಚ ನಾರ್ಚಿಷ ಮೇವಾಭಿಸಂಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣ ಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾ ಗ್ಂಸ್ತಾನ್ ಮಾಸೇಭ್ಯಃ ಸಂವತ್ಸರಗ್ಂ ಸಂವತ್ಸರಾದಾದಿತ್ಯ ಮಾದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರು ಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವ ಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವ ಮಾವರ್ತಂ ನಾವರ್ತನ್ತೇ ನಾವರ್ತನ್ತೇ ॥ ೫ ॥**

೫. ಇನ್ನು ಈತನ (ವಿಷಯದ)ಲ್ಲಿ ಶವ್ಯವನ್ನು ಮಾಡಲಿ, (ಮಾಡ)ದಿರಲಿ, (ಈ ಉಪಾಸಕರು) ಅರ್ಚಿಸ್ಸನ್ನು ಸೇರುತ್ತಾರೆ. ಅರ್ಚಿಸ್ಸಿನಿಂದ ಅಹಸ್ಸನ್ನು, ಅಹಸ್ಸಿನಿಂದ ಆಪೂರ್ಯಮಾಣಪಕ್ಷವನ್ನು, ಆಪೂರ್ಯಮಾಣಪಕ್ಷದಿಂದ (ಆದಿತ್ಯನು) ಉತ್ತರದಿಕ್ಕಿಗೇ ಹೋಗುವನಲ್ಲ ಆ ಷಣ್ಮಾಸಗಳನ್ನು, ಆ ಮಾಸಗಳಿಂದ ಸಂವತ್ಸರವನ್ನು, ಸಂವತ್ಸರದಿಂದ ಆದಿತ್ಯನನ್ನು, ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುತ್ತನ್ನು, (ಸೇರುತ್ತಾರೆ). ಅಲ್ಲಿರುವ ಇವರನ್ನು ಅಮಾನವಪುರುಷನು ಬ್ರಹ್ಮನನ್ನು ಸೇರಿಸುತ್ತಾನೆ. ಇದು ದೇವಪಥವು, ಬ್ರಹ್ಮಪಥವು. ಇದರಿಂದ ಪಡೆಯುವವರು ಈ ಮಾನವ ಆವರ್ತಕ್ಕೆ ಹಿಂತಿರುಗುವದಿಲ್ಲ, ಹಿಂತಿರುಗುವದಿಲ್ಲ.

---

1 ಹೊಳೆಯುವ ಪದಾರ್ಥಗಳಿಗೆ ಕೊಡುತ್ತಾನೆ

## ಉಪಾಸಕನಿಗೆ ಉತ್ತರಮಾರ್ಗದಿಂದ ಬ್ರಹ್ಮಪ್ರಾಪ್ತಿ

(ಭಾಷ್ಯ)

೩೪೫. ಅಥೇದಾನೀಂ ಯಥೋಕ್ತಬ್ರಹ್ಮವಿದೋ ಗತಿರುಚ್ಯತೇ । ಯತ್ ಯದಿ ಉ ಚೈವ ಅಸ್ಮಿನ್ ಏವಂವಿದಿ ಶವ್ಯಂ ಶವಕರ್ಮ ಮೃತೇ ಕುರ್ವನ್ತಿ ಯದಿ ಚ ನ ಕುರ್ವನ್ತಿ ಋತ್ವಿಜಃ, ಸರ್ವಥಾಪ್ಯೇನಮನಿತ್ ತೇನ ಶವಕರ್ಮಣಾ ಅಕೃತೇನಾಪಿ ಪ್ರತಿಬದ್ಧೋ ನ ಬ್ರಹ್ಮ ನ ಪ್ರಾಪ್ನೋತಿ । ನ ಚ ಕೃತೇನ ಶವಕರ್ಮಣಾ ಅಸ್ಯ ಕಶ್ಚನಾಭ್ಯಧಿಕೋ ಲೋಕಃ । "ನ ಕರ್ಮಣಾ ವರ್ಧತೇ ನೋ ಕನೀಯಾನ್" (ಬೃ. ೪-೪-೨೩) ಇತಿ ಶ್ರುತ್ಯನ್ತರಾತ್ । ಶವಕರ್ಮಣ್ಯನಾದರಂ ದರ್ಶಯನ್ ವಿದ್ಯಾಂ ಸ್ತೌತಿ । ನ ಪುನಃ ಶವಕರ್ಮ ಏವಂವಿದೋ ನ ಕರ್ತವ್ಯಮಿತಿ । ಅಕ್ರಿಯಮಾಣೇ ಹಿ ಶವಕರ್ಮಣಿ ಕರ್ಮಣಾಂ ಫಲಾರಮ್ಭೇ ಪ್ರತಿಬನ್ಧಃ ಕಶ್ಚಿದನುಮೀಯತೇಽನ್ಯತ್ರ । ಯತ ಇಹ ವಿದ್ಯಾಫಲಾರಮ್ಭಕಾಲೇ ಶವಕರ್ಮ ಸ್ಯಾದ್ ವಾ ನ ವಾ ಇತಿ ವಿದ್ಯಾವತೋಽಪ್ರತಿಬನ್ಧೇನ ಫಲಾರಮ್ಭಂ ದರ್ಶಯತಿ । ಯೇ ಸುಖಾಕಾಶಮಕ್ಷಿಸ್ಥಂ ಸಂಯದ್ವಾಮೋ ವಾಮನೀರ್ಭಾಮನೀರಿತ್ಯೇವಂ ಗುಣಮ್ ಉಪಾಸತೇ ಪ್ರಾಣಸಹಿತಾಮ್ ಅಗ್ನಿವಿದ್ಯಾಂ ಚ ತೇಷಾಮ್ ಅನ್ತ್ಯಂ[1] ಕರ್ಮ ಭವತು ಮಾ ವಾ ಭೂತ್, ಸರ್ವಥಾಪಿ ತೇ ಅರ್ಚಿಷಮೇವ ಅಭಿಸಂಭವನ್ತಿ । ಅರ್ಚಿರಭಿಮಾನಿನೀಂ ದೇವತಾಮ್ ಅಭಿಸಂಭವನ್ತಿ ಪ್ರತಿಪದ್ಯನ್ತ ಇತ್ಯರ್ಥಃ । ಅರ್ಚಿಷಃ ಅರ್ಚಿರ್ದೇವತಾಯಾ ಅಹಃ ಅಹರಭಿಮಾನಿನೀಂ ದೇವತಾಮ್ । ಅಹ್ನಃ ಆಪೂರ್ಯಮಾಣಪಕ್ಷಂ ಶುಕ್ಲಪಕ್ಷದೇವತಾಮ್ । ಆಪೂರ್ಯಮಾಣಪಕ್ಷಾತ್ ಯಾನ್ ಷಣ್ಮಾಸಾನ್ ಉದಙ್ ಉತ್ತರಾಂ ದಿಶಮ್ ಏತಿ ಸವಿತಾ ತಾನ್ ಮಾಸಾನ್ ಉತ್ತರಾಯಣದೇವತಾನ್ । ತೇಭ್ಯೋ ಮಾಸೇಭ್ಯಃ ಸಂವತ್ಸರಂ ಸಂವತ್ಸರದೇವತಾಮ್ । ತತಃ ಸಂವತ್ಸರಾತ್ ಆದಿತ್ಯಮ್ । ಆದಿತ್ಯಾತ್ ಚನ್ದ್ರಮಸಮ್ ಚನ್ದ್ರಮಸೋ ವಿದ್ಯುತಮ್ । ತತ್ ತತ್ರಸ್ಥಾನ್ ತಾನ್ ಪುರುಷಃ ಕಶ್ಚಿತ್ ಬ್ರಹ್ಮಲೋಕಾತ್ ಏತ್ಯ ಅಮಾನವಃ ಮಾನವ್ಯಾಂ ಸೃಷ್ಟೌ ಭವೋ ಮಾನವಃ । ನ ಮಾನವೋಽಮಾನವಃ । ಸ ಪುರುಷಃ ಏನಾನ್ ಬ್ರಹ್ಮ ಸತ್ಯಲೋಕಸ್ಥಂ ಗಮಯತಿ । ಗನ್ತೃಗನ್ತವ್ಯಗಮಯಿತೃತ್ವವ್ಯಪದೇಶೇಭ್ಯಃ । ಸನ್ಮಾತ್ರಬ್ರಹ್ಮಪ್ರಾಪ್ತೌ ತದನುಪಪತ್ತೇಃ । "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪-೪-೬) ಇತಿ ಹಿ ತತ್ರ ವಕ್ತುಂ ನ್ಯಾಯ್ಯಮ್ । ಸರ್ವಭೇದನಿರಾಸೇನ ಸನ್ಮಾತ್ರಪ್ರತಿಪತ್ತಿಂ ವಕ್ಷ್ಯತಿ ನ ಚ ಅದೃಷ್ಟೋ ಮಾರ್ಗೋ ಗಮನಾಯ ಉಪತಿಷ್ಠತೇ । "ಸ ಏನಮ್ ಅವಿದಿತೋ ನ ಭುನಕ್ತಿ" (ಬೃ. ೧-೪-೧೫) ಇತಿ ಶ್ರುತ್ಯನ್ತರಾತ್ । ಏಷ ದೇವಪಥಃ ।

---

1. ಅನ್ಯತ್ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

ದೇವೈಃ ಅರ್ಚಿರಾದಿಭಿಃ ಗಮಯಿತೃತ್ವೇನ ಅಧಿಕೃತೈಃ ಉಪಲಕ್ಷಿತಃ ಪನ್ಥಾ ದೇವ ಪಥ ಉಚ್ಯತೇ। ಬ್ರಹ್ಮ ಗನ್ತವ್ಯಮ್। ತೇನ ಚ ಉಪಲಕ್ಷಿತಃ ಇತಿ ಬ್ರಹ್ಮಪಥಃ। ಏತೇನ ಪ್ರತಿಪದ್ಯಮಾನಾ ಗಚ್ಛನ್ತಃ ಬ್ರಹ್ಮ ಇಮಂ ಮಾನವಂ ಮನುಸಂಬನ್ಧಿನಂ ಮನೋಃ ಸೃಷ್ಟಿಲಕ್ಷಣಮ್ ಆವರ್ತಂ ನಾವರ್ತನ್ತೇ। ಆವರ್ತನ್ತೇ ಅಸ್ಮಿನ್ ಜನನಮರಣಪ್ರಬನ್ಧಚಕ್ರಾರೂಢಾ ಘಟೀಯನ್ತ್ರವತ್ ಪುನಃಪುನಃ ಇತಿ ಆವರ್ತಃ। ತಂ ನ ಪ್ರತಿಪದ್ಯನ್ತೇ। ನಾವರ್ತನ್ತೇ ಇತಿ ದ್ವಿರುಕ್ತಿಃ ಸಫಲಾಯಾಃ ವಿದ್ಯಾಯಾಃ ಪರಿಸಮಾಪ್ತಿಪ್ರದರ್ಶನಾರ್ಥಾ ॥

(ಭಾಷ್ಯಾರ್ಥ)

ಇನ್ನು ಈಗ ಹಿಂದೆ ಹೇಳಿರುವ ಬ್ರಹ್ಮವನ್ನು ಉಪಾಸನೆಮಾಡಿರುವಾತನಿಗೆ ಗತಿಯನ್ನು ಹೇಳಲಾಗುತ್ತದೆ.

(ಅಸ್ಮಿನ್= ) ಈತನ (ವಿಷಯ)ದಲ್ಲಿ, ಈ ಪ್ರಕಾರವಾಗಿ ಉಪಾಸನೆಮಾಡಿ ರುವನಾಗಿ ಮೃತನಾಗಿರುವವನ ವಿಷಯದಲ್ಲಿ ಋತ್ವಿಜರು ಶವ್ಯವನ್ನು ಶವಕರ್ಮ ವನ್ನು ಮಾಡಿರಲಿ ಮಾಡದೆಇರಲಿ, ಹೇಗೇ ಆಗಲಿ, ಹೀಗೆಂದು ಉಪಾಸನೆಮಾಡಿ ದವನು ಆ ಶವಕರ್ಮವನ್ನು ಮಾಡದೆ ಇದ್ದದ್ದರಿಂದಲೂ ಅಡ್ಡಿಯಾಗಿ ಬ್ರಹ್ಮನನ್ನು ಪಡೆಯುವದಿಲ್ಲವೆಂಬುದೂ ಇಲ್ಲ, (ಅದನ್ನು) ಮಾಡಿದ್ದರಿಂದ ಇವನಿಗೆ ಯಾವ ಹೆಚ್ಚಿನ ಲೋಕವೂ (ಪ್ರಾಪ್ತವಾಗು)ವದಿಲ್ಲ ಏಕೆಂದರೆ "ಕರ್ಮದಿಂದ ಹೆಚ್ಚು ವದಿಲ್ಲ, ಕಡಿಮೆಯಾಗುವದೂ ಇಲ್ಲ" (ಬೃ. ೪-೪-೨೩) ಎಂದು ಮತ್ತೊಂದು ಶ್ರುತಿಯಲ್ಲಿದೆ. ಶವಕರ್ಮದಲ್ಲಿ ಅಸಡ್ಡೆಯನ್ನು ತೋರಿಸಿ ವಿದ್ಯೆಯನ್ನು ಹೊಗಳಿರು ತ್ತದೆಯೇ ಹೊರತು ಇಂಥ ಉಪಾಸಕನಿಗೆ ಶವಕರ್ಮವನ್ನು ಮಾಡಬಾರದು -ಎಂದೇನೂ (ಹೇಳಿ)ರುವದಿಲ್ಲ ಮಿಕ್ಕ ಕಡೆಯಲ್ಲಿ[1] ಶವಕರ್ಮವನ್ನು ಮಾಡದೆ ಇದ್ದರೆ ಕರ್ಮಗಳು (ತಮ್ಮ) ಫಲವನ್ನುಂಟುಮಾಡುವದಕ್ಕೆ ಯಾವದೋ ಒಂದು ಅಡ್ಡಿಯಾಗುತ್ತದೆಯೆಂದೇ (ಇದರಿಂದ) ಅನುಮಾನಿಸಬೇಕು, ಏಕೆಂದರೆ ಇಲ್ಲಿ ಉಪಾಸನೆಯ ಫಲವುಂಟಾಗುವ ಕಾಲದಲ್ಲಿ ಶವಕರ್ಮವಾಗಲಿ ಬಿಡಲಿ, ಉಪಾಸಕ ನಿಗೆ (ಯಾವ) ಅಡ್ಡಿಯೂ ಇಲ್ಲದೆ ಫಲವುಂಟಾಗುವದೆಂದು ತಿಳಿಸಿರುತ್ತದೆ.

ಯಾರು ಆನಂದಾಕಾಶ(ಬ್ರಹ್ಮವು) ಕಣ್ಣಿನಲ್ಲಿರುವದೆಂದೂ ಸಂಯದ್ವಾಮ, ವಾಮನೀ, ಭಾಮನೀ- ಎಂಬೀ ಗುಣವುಳ್ಳದ್ದೆಂದೂ ಉಪಾಸನೆಮಾಡುತ್ತಾರೋ ಮತ್ತು ಪ್ರಾಣಸಹಿತವಾದ ಅಗ್ನಿವಿದ್ಯೆಯನ್ನು ಉಪಾಸನೆಮಾಡುತ್ತಾರೋ ಅವರಿಗೆ

---

1. ಉಪಾಸಕನಲ್ಲದ ಕರ್ಮಿಯ ವಿಷಯದಲ್ಲಿ

ಅಂತ್ಯಕರ್ಮವನ್ನು ಮಾಡಿರಲಿ (ಮಾಡದೆ)ಯಾದರೂ ಇರಲಿ, ಹೇಗೂ ಅವರು ಅರ್ಚಿಯನ್ನೇ[1] ಜ್ವಾಲೆಗೆ ಅಭಿಮಾನಿಯಾದ ದೇವತೆಯನ್ನು ಸೇರುತ್ತಾರೆ, ಪಡೆದು ಕೊಳ್ಳುತ್ತಾರೆ. ಅರ್ಚಿಸ್ಸಿನಿಂದ ಅಹಸ್ಸನ್ನು ಎಂದರೆ ಹಗಲಿನ ಅಭಿಮಾನಿಯಾದ ದೇವತೆಯನ್ನು, ಅಹಸ್ಸಿನಿಂದ ಆಪೂರ್ಯಮಾಣಪಕ್ಷವನ್ನು ಎಂದರೆ ಶುಕ್ಲಪಕ್ಷ ದೇವತೆಯನ್ನು, ಆಪೂರ್ಯಮಾಣಪಕ್ಷದಿಂದ ಸೂರ್ಯನು ಯಾವ ಆರು ತಿಂಗಳು ಉತ್ತರಕ್ಕೆ ಹೋಗುತ್ತಾನೋ ಆ (ಆರು) ತಿಂಗಳುಗಳ (ದೇವತೆಯನ್ನು) ಎಂದರೆ ಉತ್ತರಾಯಣದೇವತೆಯನ್ನು. ಆ ಮಾಸಗಳಿಂದ ಸಂವತ್ಸರವನ್ನು ಸಂವತ್ಸರ ದೇವತೆಯನ್ನು, ಆ ಸಂವತ್ಸರದಿಂದ ಆದಿತ್ಯನನ್ನು, ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುತ್ತನ್ನು ಸೇರುತ್ತಾರೆ.

(ತತ್=ತತ್ರಸ್ಥಾನ್) ಅಲ್ಲಿರುವ[2] ಅವರನ್ನು ಅಮಾನವನಾದ ಒಬ್ಬ ಪುರುಷನು –ಮಾನವಸೃಷ್ಟಿಯಲ್ಲಿ ಹುಟ್ಟಿದವನು ಮಾನವನು, ಮಾನವನಲ್ಲದವನು ಅಮಾನವನು.[3] ಆ (ಅಮಾನವನಾದ) ಪುರುಷನು– ಬ್ರಹ್ಮಲೋಕದಿಂದ ಬಂದು ಇವರನ್ನು ಸತ್ಯಲೋಕದಲ್ಲಿರುವ ಬ್ರಹ್ಮದ (ಬಳಿಗೆ) ಕರೆದುಕೊಂಡು ಹೋಗು ತ್ತಾನೆ. ಹೋಗುವವರು, ಹೋಗುವ (ಬ್ರಹ್ಮ), ಕರೆದುಕೊಂಡು ಹೋಗುವವನು –ಎಂದು ಹೇಳಿರುವದರಿಂದ (ಸತ್ಯಲೋಕದಲ್ಲಿರುವ ಬ್ರಹ್ಮದ ಬಳಿಗೆ ಎಂದೇ ಅರ್ಥ), ಏಕೆಂದರೆ ಸನ್ಮಾತ್ರವಾಗಿರುವ ಬ್ರಹ್ಮಪ್ರಾಪ್ತಿಯಲ್ಲಿ ಆ (ಗಂತೃಗಂತವ್ಯಗಮ ಯಿತೃಗಳು) ಹೊಂದುವದಿಲ್ಲ[4] "ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗು ತ್ತಾನೆ" (ಬೃ. ೪–೪–೬) ಎಂದಲ್ಲವೆ, ಇದರ ವಿಷಯದಲ್ಲಿ ಹೇಳುವದು ಯುಕ್ತ ವಾಗಿರುತ್ತದೆ ? ಎಲ್ಲಾ ಭೇದವನ್ನೂ ತೆಗೆದುಹಾಕಿ ಸನ್ಮಾತ್ರ(ಬ್ರಹ್ಮವನ್ನು) ಪಡೆಯುವನೆಂದು ಮುಂದೆ ಹೇಳಲಾಗುತ್ತದೆ[5] ಮಾರ್ಗವನ್ನು ಉಪಾಸನೆ

---

1. ಸೂ. ಭಾ. ೪–೩–೪ (ಭಾ. ಭಾ ೫೭೦), ೪–೩–೫ (ಭಾ. ಭಾ. ೫೭೧)ರಲ್ಲಿ ಅರ್ಚಿರಾದಿಗಳು ಬರಿಯ ಮಾರ್ಗಚಿಹ್ನೆಗಳಲ್ಲ, ಲೋಕಗಳೂ ಅಲ್ಲ, ಆತಿವಾಹಿಕದೇವತೆಗಳೇ ಎಂದು ನಿರ್ಣಯಿಸಿದೆ.

2. ವಿದ್ಯುದ್ದೇವತೆಯಾದ ಬಳಿಕ ವರುಣನನ್ನೂ ಆಮೇಲೆ ಇಂದ್ರಪ್ರಜಾಪತಿಗಳನ್ನೂ ಸೇರಿಸಿಕೊಳ್ಳಬೇಕೆಂದು ಸೂ. ಭಾ. ೪–೩–೩ (ಭಾ. ಭಾ. ೫೬೮)ರಲ್ಲಿ ನಿರ್ಣಯಿಸಿದೆ.

3 'ಮಾನಸಪುರುಷನು' ಎಂದು ಬೃ ೬–೨–೧೫ರಲ್ಲಿದೆ. ಅಮಾನವ ಮತ್ತು ಮಾನಸ– ಎರಡಕ್ಕೂ ಒಂದೇ ಅರ್ಥ. ಮಾನವಸೃಷ್ಟಿಯಲ್ಲಿ ಸ್ತ್ರೀಪುರುಷರ ಕೂಟದಿಂದ ಹುಟ್ಟಿದವನಲ್ಲದ ಬ್ರಹ್ಮನಿಂದ ಮನಸ್ಸಿನಿಂದಲೇ ಸೃಷ್ಟವಾಗಿರುವ ಪುರುಷನು ಎಂದು ಒಟ್ಟರ್ಥ.

4. ಸೂ. ಭಾ. ೪–೩–೭ (ಭಾ.ಭಾ. ೫೭೩) ಮತ್ತು ಸೂ.ಭಾ. ೪–೩–೧೪ (ಭಾ.ಭಾ. ೫೮೨) ಇವುಗಳಲ್ಲಿ ಹೀಗೆಂದು ನಿರ್ಣಯವನ್ನು ಮಾಡಿದೆ.

5. ಮುಂದೆ ೬–೧೪–೨ರಲ್ಲಿ ಹೇಳಿರುವ ಸತ್ಸಂಪತ್ತಿಯು ಬೃಹದಾರಣ್ಯಕದಲ್ಲಿ ಹೇಳಿ ರುವ 'ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿಯೇ ಸೇರಿಹೋಗುತ್ತಾನೆ' ಎಂಬಂತೆಯೇ ಇದೆ. ಅಲ್ಲಿ ಗತಿಯನ್ನೇನೂ ಹೇಳಿಲ್ಲ.

ಮಾಡದೆ ಇದ್ದರೆ (ಅದು) ಗತಿಗೆ ಸಿದ್ಧವಾಗಲಾರದು[1] "ಅದು ಅವಿದಿತವಾದರೆ ಇವನನ್ನು ರಕ್ಷಿಸುವದಿಲ್ಲ" (ಬೃ. ೧-೪-೧೫) ಎಂಬ ಬೇರೊಂದು ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).

ಇದೇ ದೇವಪಥವು. ಕರೆದುಕೊಂಡು ಹೋಗುವದಕ್ಕೆ ಅಧಿಕಾರಿಗಳಾದ ಅರ್ಚಿರಾದಿದೇವತೆಗಳ ಉಪಲಕ್ಷಣವುಳ್ಳ ಮಾರ್ಗವನ್ನು[2] ದೇವಪಥವೆಂದಿದೆ. ಗಂತವ್ಯವಾದ ಬ್ರಹ್ಮವಿದೆಯಲ್ಲ, ಅದರಿಂದಲೂ ಉಪಲಕ್ಷಿತವಾಗಿರುವ (ಮಾರ್ಗವಾದ್ದರಿಂದ) ಬ್ರಹ್ಮಪಥವೆನಿಸಿದೆ.[3] ಇದರಿಂದ ಹೋಗಿ ಬ್ರಹ್ಮವನ್ನು ಸೇರುವವರು ಈ ಮಾನವವಾದ ಮನುಸಂಬಂಧಿಯಾದ, ಮನುವಿನ ಸೃಷ್ಟಿರೂಪವಾದ ಅವರ್ತಕ್ಕೆ- ಇದರಲ್ಲಿ ಜನನಮರಣಪ್ರಬಂಧದ ಚಕ್ರವನ್ನೇರಿ ರಾಟೆಯಂತೆ ಮತ್ತೆ ಮತ್ತೆ ಸುತ್ತುತ್ತಿರುವದಾದ್ದರಿಂದ (ಇದು) ಆವರ್ತವು, ಆ (ಆವರ್ತಕ್ಕೆ)- ಹಿಂತಿರುಗುವದಿಲ್ಲ, ಮತ್ತೆ (ಅದನ್ನು) ಪಡೆಯುವದಿಲ್ಲ.[4] 'ಹಿಂತಿರುಗುವದಿಲ್ಲ' ಎಂದು ಎರಡು ಸಲ ಹೇಳಿರುವದು ಫಲಸಹಿತವಾದ ವಿದ್ಯೆಯು ಮುಗಿಯಿತೆಂಬುದನ್ನು ತಿಳಿಸುವದಕ್ಕೆ (ಬಂದಿದೆ).

---

1 'ಅಗಮನಾಯ' ಎಂಬ ಪಾಠವನ್ನು ಒಪ್ಪಿ ಏಕತ್ವವೆಂಬ ಮಾರ್ಗವನ್ನು ಕಂಡುಕೊಳ್ಳದೆ ಇದ್ದರೆ ಅದು ಅಗಮನಕ್ಕೆ ಕಾರಣವಾಗುವದಿಲ್ಲ - ಎಂಬ ಒಂದು ವ್ಯಾಖ್ಯಾನವನ್ನೂ 'ಗಮನಾಯ' ಎಂಬ ಪಾಠವನ್ನು ಒಪ್ಪಿ ಏಕತ್ವಲಕ್ಷಣವಾದ ಮಾರ್ಗವನ್ನು ಅರಿತುಕೊಳ್ಳದಿದ್ದರೆ ಗಮನಕ್ಕೆ ಎಂದರೆ ಮೋಕ್ಷಕ್ಕೆ ಕಾರಣವಾಗುವದಿಲ್ಲ - ಎಂಬ ಮತ್ತೊಂದು ವ್ಯಾಖ್ಯಾನವನ್ನೂ ಟೀಕೆಯಲ್ಲಿ ಕೊಟ್ಟಿದೆ. ಇವೆರಡಕ್ಕಿಂತಲೂ 'ಇಲ್ಲಿ ಹೇಳಿರುವ ಮಾರ್ಗವನ್ನು ಧ್ಯಾನಮಾಡದಿದ್ದರೆ ಬ್ರಹ್ಮಲೋಕಗಮನಕ್ಕೆ ಇದು ಸತ್ತ ಬಳಿಕ ಸಾಧನವಾಗಿ ಕಾಣಿಸಿಕೊಳ್ಳುವದಿಲ್ಲ' ಎಂಬುದೇ ಸರಳವಾದ ಅರ್ಥವೆಂದು ನಮ್ಮ ಮತ. ಭಾಷ್ಯದಲ್ಲಿ ಉದಾಹೃತವಾಗಿರುವ ಬೃಹದಾರಣ್ಯಕಶ್ರುತಿಯ ಭಾಷ್ಯದಲ್ಲಿ ವೇದವನ್ನು ಅಧ್ಯಯನಮಾಡದಿದ್ದರೂ ಮತ್ತೆ ಯಾವದಾದರೂ ಕರ್ಮವನ್ನು ಮಾಡದಿದ್ದರೂ ಅವು ಫಲದಾಯಕವಲ್ಲದಿರುವಂತೆ (ಆತ್ಮಲೋಕವೂ ವಿದಿತವಾಗದೆ ಇದ್ದರೆ ಫಲದಾಯಕವಲ್ಲ) ಎಂಬ ಹೋಲಿಕೆಯಲ್ಲಿ ಹೇಳಿರುವಂತೆ ಉಪಾಸನೆಯಲ್ಲಿ ಮಾರ್ಗವನ್ನು ಚಿಂತಿಸದಿದ್ದರೆ ಫಲದಾಯಕವಲ್ಲ ಎಂಬುದು ಭಾಷ್ಯಾಭಿಪ್ರಾಯ

2. ಕರೆದುಕೊಂಡುಹೋಗುವ ದೇವತೆಗಳಿಂದ ಇದಕ್ಕೆ ದೇವಪಥವೆಂಬ ಹೆಸರು

3. ಮುಟ್ಟಬೇಕಾದ ಬ್ರಹ್ಮದಿಂದ ಬ್ರಹ್ಮಪಥವೆಂಬ ಹೆಸರು.

4. 'ಇಮಂ' ಈ (ಮಾನವ ಆವರ್ತವನ್ನು) ಎಂದಿರುವದರಿಂದ ಮತ್ತೊಂದು ಕಲ್ಪದ ಮಾನವಸೃಷ್ಟಿಗೆ ಬರುತ್ತಾರೆಂದೇ ಅರ್ಥವೆಂದು ಬೃ. ಭಾ. ೬-೨-೧೫ (ಭಾ. ಭಾ. ೪೫೦)ರಲ್ಲಿ ನಿರ್ಣಯಿಸಿರುವದನ್ನು ನೋಡಿರಿ.

# ನಾಲ್ಕನೆಯ ಅಧ್ಯಾಯ ಹತ್ತನೆಯ ಖಂಡದಿಂದ ಹದಿನೈದನೆಯ ಖಂಡ ಪೂರ ಗ್ರಂಥದ ಸಾರ

ಈ ಭಾಗದಲ್ಲಿ ಅಗ್ನಿವಿದ್ಯೆಯನ್ನೂ ಉಪಕೋಸಲವಿದ್ಯೆಯನ್ನೂ ಹೇಳಿದೆ.

## ಹತ್ತನೆಯ ಖಂಡ

ಉಪಕೋಸಲಕಾಮಲಾಯನನು ಸತ್ಯಕಾಮಜಾಬಾಲನಲ್ಲಿ ಬ್ರಹ್ಮಚಾರಿಯಾಗಿದ್ದು ಕೊಂಡಿದ್ದನು. ಗುರುವು ಮಿಕ್ಕ ಶಿಷ್ಯರಿಗೆ ವಿದ್ಯೆಯನ್ನು ಹೇಳಿ ಮನೆಗೆ ಕಳುಹಿದಮೇಲೂ ಇವನಿಗೆ ಮಾತ್ರ ಹೇಳದೆ ಇದ್ದನು. ಹೆಂಡತಿಯು ಅರಿಕೆಮಾಡಿಕೊಂಡಮೇಲೂ ಆಚಾರ್ಯನು ತನಗೆ ವಿದ್ಯೆಯನ್ನು ಹೇಳದೆ ಇದ್ದದ್ದರಿಂದ ದುಃಖಿತನಾದ ಉಪಕೋಸಲನು ಸಂತಪ್ತನಾಗಿ ಊಟಮಾಡದೆ ಇದ್ದುಬಿಟ್ಟನು.

ಆಗ ಅಗ್ನಿಗಳೆಲ್ಲವೂ ಒಟ್ಟಾಗಿ ಪ್ರಾಣವು ಬ್ರಹ್ಮವು, ಕಂ ಬ್ರಹ್ಮ, ಖಂ ಬ್ರಹ್ಮ– ಎಂದು ಉಪದೇಶಿಸಿದವು. ಉಪಕೋಸಲನಿಗೆ ಕಂ ಖಂ ಎಂಬಿವು ಹೇಗೆ ಬ್ರಹ್ಮವೆಂಬುದು ತಿಳಿಯ ಲಿಲ್ಲ. ಆಗ ಕಂ ಖಂ ಎಂಬಿವೆರಡೂ ಒಂದೇ ಬ್ರಹ್ಮದ ಸ್ವರೂಪವೆಂದೂ ಸರ್ವವ್ಯಾಪಿಯಾದ ಅಲೌಕಿಕಾನಂದವೇ ಬ್ರಹ್ಮವೆಂದೂ ತಿಳಿಸಿಕೊಟ್ಟವು.

## ಹನ್ನೊಂದರಿಂದ ಹದಿಮೂರನೆಯ ಖಂಡದವರೆಗೆ

ಆಮೇಲೆ ಅಗ್ನಿಗಳು ಒಂದೊಂದಾಗಿ ತಮ್ಮತಮ್ಮ ವಿದ್ಯೆಯನ್ನು ತಿಳಿಸಿಕೊಟ್ಟವು ಗಾರ್ಹ ಪತ್ಯಾಗ್ನಿಯು 'ಪೃಥಿವಿ, ಅಗ್ನಿ, ಅನ್ನ, ಆದಿತ್ಯ– ಎಂಬಿವು ನನ್ನ ತನುಗಳು; ಅಗ್ನ್ಯಾದಿತ್ಯ ರೂಪದಿಂದ ನಾನೊಬ್ಬನೇ ಇದೇನೆ. ಹೀಗೆಂದು ನನ್ನನ್ನು ಉಪಾಸನೆಮಾಡಿದವನು ಈ ಲೋಕ ದಲ್ಲಿ ನೂರುವರ್ಷವೂ ಸುಖದಿಂದ ಪ್ರಜಾಸಂತತಿಯುಕ್ತನಾಗಿ ಬಾಳಿ ಸತ್ತಬಳಿಕ ನನ್ನ ಲೋಕ ವನ್ನು ಪಡೆಯುತ್ತಾನೆ' –ಎಂದು ತಿಳಿಸಿಕೊಟ್ಟಿತು.

ಆ ಬಳಿಕ ದಕ್ಷಿಣಾಗ್ನಿಯು 'ಅಪ್ಪು, ದಿಕ್ಕು, ನಕ್ಷತ್ರಗಳು, ಚಂದ್ರ –ಇವು ನನ್ನ ತನುಗಳು, ಅಗ್ನಿಚಂದ್ರರ ರೂಪದಿಂದ ನಾನೊಬ್ಬನೇ ಇರುತ್ತೇನೆ. ಹೀಗೆಂದು ನನ್ನನ್ನು ಉಪಾಸನೆಮಾಡಿ ದವನಿಗೆ ಉಕ್ತರೀತಿಯಿಂದ ಇಹಪರಗತಿಯಾಗುವದು' ಎಂದು ತಿಳಿಸಿಕೊಟ್ಟಿತು.

ಆ ಬಳಿಕ ಆಹವನೀಯವು 'ಪ್ರಾಣ, ಆಕಾಶ, ದ್ಯುಲೋಕ, ಮಿಂಚು –ಎಂಬಿವು ನನ್ನ ತನುಗಳು. ಮಿಂಚಿನಲ್ಲಿರುವ ಪುರುಷನೂ ನಾನೂ ಬೇರೆಬೇರೆಯಲ್ಲ, ಎರಡೂ ನಾನೇ ಹೀಗೆಂದು ನನ್ನನ್ನು ಉಪಾಸನೆಮಾಡಿದವನಿಗೆ ಉಕ್ತರೀತಿಯ ಫಲವಾಗುವದು.

## ಹದಿನಾಲ್ಕನೆಯ ಖಂಡ

ಅಗ್ನಿಗಳು ಒಟ್ಟಾಗಿ "ಅಪ್ಪ, ಇದು ನಮ್ಮಗಳ ಅಗ್ನಿವಿದ್ಯೆ, ಮತ್ತು ಆತ್ಮವಿದ್ಯೆ. ಮುಂದೆ ಆಚಾರ್ಯನು ಆತ್ಮವಿದ್ಯೆಯ ಗತಿಯನ್ನು ತಿಳಿಸಿಕೊಡುವನು" ಎಂದವು.

ಆಚಾರ್ಯನಾದ ಸತ್ಯಕಾಮನು ಕಾಲಾನುಕಾಲಕ್ಕೆ ಬಂದು "ನಿನ್ನ ಮುಖವನ್ನು ನೋಡಿದರೆ ಬ್ರಹ್ಮಜ್ಞಾನಿಯಂತೆ ಕಾಣುತ್ತಿರುವೆ; ನಿನಗೆ ಹೇಳಿಕೊಟ್ಟವರು ಯಾರು?" ಎಂದು ಕೇಳಿದನು ಉಪಕೋಸಲನು ಅಗ್ನಿಗಳು ಹೇಳಿಕೊಟ್ಟ ವಿಷಯಗಳನ್ನು ಸಂಗ್ರಹವಾಗಿ ತಿಳಿಸಿದನು.

ಆಗ ಗುರುವು "ಅವು ಪೃಥಿವ್ಯಾದಿಲೋಕಗಳನ್ನು ಮಾತ್ರ ತಿಳಿಸಿಕೊಟ್ಟಿರುತ್ತವೆ ನಾನು ಆ ಬ್ರಹ್ಮಸ್ವರೂಪವನ್ನು ಪೂರ್ಣವಾಗಿ ಹೇಳಿಕೊಡುವೆನು. ಇದನ್ನು ಅರಿತುಕೊಂಡವನಿಗೆ, ತಾವರೆಯೆಲೆಗೆ ನೀರು ಅಂಟದಿರುವಂತೆ, ಪಾಪಕರ್ಮದ ಲೇಪವುಂಟಾಗದೆ ಇರುವದು" ಎಂದನು.

## ಹದಿನೈದನೆಯ ಖಂಡ

ಸತ್ಯಕಾಮನು ಉಪಕೋಸಲನಿಗೆ ಮಾಡಿದ ಉಪದೇಶವೇನೆಂದರೆ :

"ಕಣ್ಣಿನಲ್ಲಿರುವ ಸರ್ವದ್ರಷ್ಟೃವಾದ ಪುರುಷನಿರುವನಲ್ಲ, ಅವನೇ ವ್ಯಾಪಕಾನಂದಸ್ವರೂಪನಾದ ಆ ಪರಮಾತ್ಮನು; ಅವೇ ಅಮೃತವೂ ಅಭಯವೂ ಆದ ಬ್ರಹ್ಮವು. ಆ ಬ್ರಹ್ಮದ ಸ್ಥಾನವಾದ್ದರಿಂದಲೇ ಕಣ್ಣಿನಲ್ಲಿ ತುಪ್ಪ, ನೀರು ಮುಂತಾದವನ್ನು ಚಿಮುಕಿಸಿದರೆ ಕಡೆಗಣ್ಣಿಗೇ ಬಂದುಬಿಡುವದು

ಈ ಆತ್ಮನು ಸಂಯದ್ವಾಮನು, ಎಂದರೆ ಸರ್ವವಾಂಛಿತಗಳೂ ಬಂದು ಸೇರುವವು ಇವನೇ ವಾಮನಿಯು, ಎಂದರೆ ಸರ್ವವಾಮುಗಳನ್ನೂ ಪುಣ್ಯಕರ್ಮಫಲಗಳನ್ನೂ ಪ್ರಾಣಿಗಳಿಗೆ ಒದಗಿಸತಕ್ಕವನು. ಇವನೇ ಭಾಮನಿಯು, ಎಂದರೆ ಎಲ್ಲಾ ಲೋಕಗಳಲ್ಲಿಯೂ ಹೊಳೆಯುತ್ತಿರುವವನು.

ಈ ಬ್ರಹ್ಮವಿದ್ಯೆಯನ್ನು ಅಳವಡಿಸಿಕೊಂಡವನಿಗೆ ಅಂತ್ಯಕರ್ಮವನ್ನು ಮಾಡಲಿ ಬಿಡಲಿ, ಅವನು ಅರ್ಚಿ, ಅಹಸ್ಸು, ಆಪೂರ್ಯಮಾಣಪಕ್ಷ, ಉತ್ತರಾಯಣಮಾಸ, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್- ಈ ದೇವತೆಗಳನ್ನು ಪಡೆಯುವನು. ಆ ವಿದ್ಯುತ್ತಿನಲ್ಲಿರುವಾಗ ಬ್ರಹ್ಮಲೋಕದಿಂದ ಬಂದ ಅಮಾನವಪುರುಷನು ಇವನನ್ನು ಹಿರಣ್ಯಗರ್ಭನ ಸಮೀಪಕ್ಕೆ ಒಯ್ಯುವನು. ಇದೇ ದೇವಪಥವು, ಬ್ರಹ್ಮಪಥವು. ಇದರಿಂದ ಹೋದವರು ಈ ಆವರ್ತರೂಪದ ಮಾನವಸೃಷ್ಟಿಗೆ ಮರಳಿಬರುವದಿಲ್ಲ."

---

# ನಾಲ್ಕನೆಯ ಅಧ್ಯಾಯ-ಹದಿನಾರನೆಯ ಖಂಡ

(ಪ್ರಾಸಂಗಿಕವಾಗಿ ಯಜ್ಞಧರ್ಮಗಳು)

## ಯಜ್ಞದಲ್ಲಿ ಬ್ರಹ್ಮನು ಮೌನವಾಗಿರುವ ಕಾಲ

(ಉಪನಿಷತ್ತು)

**ಏಷ ಹ ವೈ ಯಜ್ಞೋ ಯೋಽಯಂ ಪವತ ಏಷ ಹ ಯನ್ನಿದಗ್ಂ ಸರ್ವಂ ಪುನಾತಿ ಯದೇಷ ಯನ್ನಿದಗ್ಂ ಸರ್ವಂ ಪುನಾತಿ ತಸ್ಮಾದೇಷ ಏವ ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ ॥ ೧ ॥**

೧. ಈ ಬೀಸುತ್ತಿದೆಯಲ್ಲ, ಇದೇ ಯಜ್ಞವು. ಇದೇ ಹೋಗುತ್ತಾ ಇದೆಲ್ಲವನ್ನೂ ಪವಿತ್ರಗೊಳಿಸುತ್ತದೆ ; ಇದು ಹೋಗುತ್ತಾ ಇದೆಲ್ಲವನ್ನೂ ಪವಿತ್ರಗೊಳಿಸುತ್ತದೆಯಷ್ಟೆ? ಆದ್ದರಿಂದ ಇದೇ ಯಜ್ಞವು, ಅದಕ್ಕೆ ಮನಸ್ಸೂ ವಾಕ್ಕೂ ವರ್ತನಿಗಳು.

### ಗ್ರಂಥದ ಸಂಬಂಧ

(ಭಾಷ್ಯ)

೩೪೬. ರಹಸ್ಯಪ್ರಕರಣೇ ಪ್ರಸಙ್ಗಾತ್, ಆರಣ್ಯಕತ್ವಸಾಮಾನ್ಯಾಚ್ಚ ಯಜ್ಞೇ ಕ್ಷತ ಉತ್ಪನ್ನೇ ವ್ಯಾಹೃತಯಃ ಪ್ರಾಯಶ್ಚಿತ್ತಾರ್ಥಾ ವಿಧಾತವ್ಯಾಃ । ತದಭಿಜ್ಞಸ್ಯ ಚ ಋತ್ವಿಜೋ ಬ್ರಹ್ಮಣಃ ಮೌನಮ್ ಇತ್ಯತ ಇದಮಾರಭ್ಯತೇ ॥

(ಭಾಷ್ಯಾರ್ಥ)

(ಇದು) ರಹಸ್ಯಪ್ರಕರಣ(ವಾದರೂ) ಪ್ರಸಂಗವಶದಿಂದಲೂ[1] (ಇದೂ ಆರಣ್ಯಕ[2]ವಾಗಿರುವದರಿಂದಲೂ ಯಜ್ಞದಲ್ಲಿ (ಏನಾದರೂ) ಕೊರತೆಯುಂಟಾದರೆ ಪ್ರಾಯಶ್ಚಿತ್ತಕ್ಕಾಗಿ ವ್ಯಾಹೃತಿಗಳನ್ನು ವಿಧಾನಮಾಡಬೇಕಾಗಿದೆ ; ಅದನ್ನರಿತಿರುವ ಋತ್ವಿಜನಾದ ಬ್ರಹ್ಮನಿಗೆ ಮೌನವನ್ನು (ವಿಧಾನಮಾಡಬೇಕಾಗಿದೆ). ಆದ್ದರಿಂದ ಇದನ್ನು ಆರಂಭಿಸಿದೆ.

---

1. ಉಪಾಸಕರಿಗೆ ಫಲಪ್ರಾಪ್ತಿಗೆ ಮಾರ್ಗಚಿಂತನೆಯನ್ನು ಹೇಳಿದಂತೆ ಇಲ್ಲಿ ಯಜ್ಞವನ್ನು ಸರಿಯಾಗಿ ಮಾಡುವದಕ್ಕೆ ಮಾರ್ಗವನ್ನು ತಿಳಿಸುತ್ತದೆ. ಇದನ್ನು ಪ್ರಾಸಂಗಿಕವಾ ಹೇಳಿದ್ದು, ಹಿಂದಿನ ಉಪಾಸನೆಗೂ ಇದಕ್ಕೂ ಸಂಬಂಧವೇನೂ ಇಲ್ಲ.
2. ಹಿಂದಿನ ಗ್ರಂಥದಂತೆ ಇದನ್ನು ಅರಣ್ಯದಲ್ಲಿ ಅಧ್ಯಯನಮಾಡಬೇಕು.

## ಯಜ್ಞವು ವಾಯುವೇ

(ಭಾಷ್ಯ)

೩೪೭. ಏಷ ಹ ವೈ ಏಷ ವಾಯುರ್ಯೋಽಯಂ ಪವತೇ ಅಯಂ ಯಜ್ಞಃ। ಹ ವೈ ಇತಿ ಪ್ರಸಿದ್ಧಾರ್ಥಾವದ್ಯೋತಕೌ ನಿಪಾತೌ । ವಾಯುಪ್ರತಿಷ್ಠೋ ಹಿ ಯಜ್ಞಃ ಪ್ರಸಿದ್ಧಃ ಶ್ರುತಿಷು। "ಸ್ವಾಹಾ ವಾತೇಧಾಃ" (?), "ಅಯಂ ವೈ ಯಜ್ಞೋ ಯೋಽಯಂ ಪವತೇ" (ಐ ಬ್ರಾ. ೨೫-೮) ಇತ್ಯಾದಿಶ್ರುತಿಭ್ಯಃ। ವಾತ ಏವ ಹಿ ಚಲನಾತ್ಮಕತ್ವಾತ್ ಕ್ರಿಯಾಸಮವಾಯೀ। "ವಾತ ಏವ ಯಜ್ಞಸ್ಯಾಽಽರಮ್ಭಕೋ ವಾತಃ ಪ್ರತಿಷ್ಠಾ" (?) ಇತಿ ಚ ಶ್ರವಣಾತ್, ಏಷ ಹ ಯನ್ ಗಚ್ಛಂಶ್ಚಲನ್ನಿದಂ ಸರ್ವಂ ಜಗತ್ ಪುನಾತಿ ಪಾವಯತಿ ಶೋಧಯತಿ । ನ ಹಿ ಅಚಲತಃ ಶುದ್ಧಿರಸ್ತಿ । ದೋಷನಿರಸನಂ ಚಲತೋ ಹಿ ದೃಷ್ಟಂ ನ ಸ್ಥಿರಸ್ಯ । ಯದ್ ಯಸ್ಮಾಚ್ಚ ಯನ್ ಏಷ ಇದಂ ಸರ್ವಂ ಪುನಾತಿ ತಸ್ಮಾತ್ ಏಷ ಏವ ಯಜ್ಞಃ ಯಃ ಪುನಾತೀತಿ[1] ॥

(ಭಾಷ್ಯಾರ್ಥ)

ಇದೇ, ಬೀಸುತ್ತಿದೆಯಲ್ಲ ಈ ವಾಯುವೇ, ಈ ಯಜ್ಞವು ಹ ವೈ ಎಂಬಿವು ಪ್ರಸಿದ್ಧವಾದ ಅರ್ಥವನ್ನು ತಿಳಿಸುವ ನಿಪಾತಗಳು. ಯಜ್ಞವು ವಾಯುವಿನಲ್ಲಿ ಪ್ರತಿಷ್ಠಿತವಾಗಿದೆ ಎಂವಲ್ಲವೆ, ಶ್ರುತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ ? "ಸ್ವಾಹಾ ವಾತೇಧವು"[2] (?), "ಈ ಬೀಸುತ್ತಿದೆಯಲ್ಲ, ಇದೇ ಯಜ್ಞವು" (ಐ.ಬ್ರಾ. ೨೫-೮) ಮುಂತಾದ ಶ್ರುತಿಗಳಿಂದ (ಹೀಗೆಂದು ಗೊತ್ತಾಗುತ್ತದೆ). ವಾತವೇ ಅಲ್ಲವೆ, ಚಲನಾತ್ಮಕವಾಗಿರುವದರಿಂದ ಕ್ರಿಯೆಗೆ ಸಂಬಂಧಪಟ್ಟಿದೆ ? "ವಾತವೇ ಯಜ್ಞದ ಆರಂಭಕವು, ವಾತವೇ (ಅದಕ್ಕೆ) ಪ್ರತಿಷ್ಠೆಯು" ( ? ) ಎಂದೂ ಶ್ರುತಿಯಿರುತ್ತದೆ. ಈ (ವಾಯು ಯನ್= ಗಚ್ಛನ್) ಹೋಗುತ್ತಾ ಚಲಿಸುತ್ತಿರುವಾಗ ಈ ಎಲ್ಲ ಜಗತ್ತನ್ನು (ಪುನಾತಿ= ಪಾವಯತಿ) ಪವಿತ್ರಗೊಳಿಸುತ್ತದೆ, ಶುದ್ಧಿಗೊಳಿಸುತ್ತದೆ ಚಲಿಸದೆ ಇರುವದಕ್ಕೆ[3] ಶುದ್ಧಿಯಿಲ್ಲವಷ್ಟೆ ? ದೋಷವನ್ನು ಹೋಗಲಾಡಿಸುವದು ಚಲಿಸುವವನಿಗೇ ಕಂಡಿದೆಯೇ ಹೊರತು, ಸ್ಥಿರನಾದವನಿಗೆ ಇಲ್ಲವಷ್ಟೆ[4] (ಯತ್=ಯಸ್ಮಾತ್) ಹೋಗುತ್ತಿರುವ ಇದು ಇದೆಲ್ಲವನ್ನೂ ಪವಿತ್ರಗೊಳಿಸುತ್ತದೆಯಲ್ಲ, ಆದ್ದರಿಂದ ಪವಿತ್ರಗೊಳಿಸುವ ಯಜ್ಞವು ಇದೇ

---

1 'ಯತ್' ಎಂಬುವಕ್ಕಿಂತ ಈ ಪಾಠವೇ ಮೇಲು.

2. ಈ ಶ್ರುತಿ ಯಾವದೆಂಬುದು ತಿಳಿಯಲಿಲ್ಲ, ಸ್ವಾಹಾಕಾರವನ್ನು ಉಚ್ಚರಿಸಿ ವಾತದಲ್ಲಿ ಇಡಲ್ಪಡುತ್ತದೆಯಾದ್ದರಿಂದ ಯಜ್ಞವು ವಾತೇಧಾ – ಎಂದು ಟೀಕೆ.

3. ಕ್ರಿಯಾನುಷ್ಠಾನವಿಲ್ಲದವನಿಗೆ. 4. ಶುದ್ಧಿ ಎಂದರೆ ಇದ್ದ ದೋಷವು ಹೋಗುವದು ; ಇದ್ದಂತೆ ಇರುವ ವಸ್ತುವಿಗೆ ದೋಷಪರಿಹಾರವಿಲ್ಲ.

## ಯಜ್ಞದ ಮಾರ್ಗದ್ವಯ

(ಭಾಷ್ಯ)

೩೪೮. ತಸ್ಯಾಸ್ಯ ಏವಂವಿಶಿಷ್ಟಸ್ಯ ಯಜ್ಞಸ್ಯ ವಾಕ್ಚ ಮನ್ತ್ರೋಚ್ಚಾರಣೇ ವ್ಯಾಪೃತಾ, ಮನಶ್ಚ ಯಥಾಭೂತಾರ್ಥಜ್ಞಾನೇ ವ್ಯಾಪೃತಮ್। ತೇ ಏತೇ ವಾಙ್ಮನಸೇ ವರ್ತನೀ ಮಾರ್ಗೌ। ಯಾಭ್ಯಾಂ ಯಜ್ಞಸ್ತಾಯಮಾನಃ ಪ್ರವರ್ತತೇ ವರ್ತನೀ। 'ಪ್ರಾಣಾಪಾನಪರಿಚಲನವತ್ಯಾ ಹಿ ವಾಚಶ್ಚಿತ್ತಸ್ಯ ಚೋತ್ತರೋತ್ತರಕ್ರಮೋ ಯದ್ಯಜ್ಞಃ' (ಐ. ಆ ೨-೩)[1] ಇತಿ ಹಿ ಶ್ರುತ್ಯನ್ತರಮ್। ಅತೋ ವಾಙ್ಮನಸಾಭ್ಯಾಂ ಯಜ್ಞೋ ವರ್ತತ ಇತಿ ವಾಙ್ಮನಸೇ ವರ್ತನೀ ಉಚ್ಯೇತೇ ಯಜ್ಞಸ್ಯ ॥

(ಭಾಷ್ಯಾರ್ಥ)

ಇಂಥ ವಿಶೇಷಣವುಳ್ಳ ಆ ಈ ಯಜ್ಞಕ್ಕೆ ಮಂತ್ರೋಚ್ಚಾರಣೆಯಲ್ಲಿ ಕೆಲಸ ಮಾಡುವ ವಾಕ್ಕು, ಇರತಕ್ಕ ಅರ್ಥವನ್ನು ಅರಿತುಕೊಳ್ಳುವದರಲ್ಲಿ ವ್ಯಾಪೃತವಾದ ಮನಸ್ಸು –ಎಂಬೀ ವಾಙ್ಮನಸ್ಸುಗಳು ವರ್ತನಿಗಳು, ಮಾರ್ಗಗಳು. ಮಾಡುವ ಯಜ್ಞವು ಯಾವ ಎರಡರಿಂದ ಸಾಗುವದೋ (ಆ) ವರ್ತನಿಗಳು. 'ಪ್ರಾಣಾಪಾನ ಸಂಚಾರವುಳ್ಳ[2] ವಾಕ್ಕಿನ ಮತ್ತು ಚಿತ್ತದ ಮುಂದುಮುಂದಿನ ಕ್ರಮವುಳ್ಳದ್ದೇ ಯಜ್ಞವೆಂಬುದು' (ಐ. ಆ. ೨-೩) ಎಂದಲ್ಲವೆ, ಮತ್ತೊಂದು ಶ್ರುತಿಯಲ್ಲಿದೆ ? ಆದ್ದರಿಂದ ವಾಙ್ಮನಸ್ಸುಗಳಿಂದ ಯಜ್ಞವು ನಾಗುತ್ತದೆಯಾದ್ದರಿಂದ ವಾಙ್ಮನಸ್ಸುಗಳು ಯಜ್ಞಕ್ಕೆ ವರ್ತನಿಗಳು ಎಂದಿರುತ್ತದೆ.

(ಉಪನಿಷತ್ತು)

**ತಯೋರನ್ಯತರಾಂ ಮನಸಾ ಸಗ್ಂಸ್ಕರೋತಿ ಬ್ರಹ್ಮಾ ವಾಚಾ ಹೋತಾಽಧ್ವರ್ಯುರುದ್ಗಾತಾಽನ್ಯತರಾಗ್ಂ ಸ ಯತ್ರೋಪಾಕೃತೇ ಪ್ರಾತರನುವಾಕೇ ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯವವದತಿ ॥ ೨ ॥**

**ಅನ್ಯತರಾಮೇವ ವರ್ತನೀಗ್ಂ ಸಗ್ಂಸ್ಕರೋತಿ ಹೀಯತೇಽನ್ಯತರಾ ಸ ಯಥೈಕಪಾದ್ ವ್ರಜನ್ರಥೋ ವೈಕೇನ ಚಕ್ರೇಣ ವರ್ತಮಾನೋ ರಿಷ್ಯತ್ಯೇವಮಸ್ಯ ಯಜ್ಞೋ ರಿಷ್ಯತಿ ಯಜ್ಞಗ್ಂ ರಿಷ್ಯನ್ತಂ ಯಜಮಾನೋಽನುರಿಷ್ಯತಿ ಸ ಇಷ್ಟ್ವಾ ಪಾಪೀಯಾನ್ ಭವತಿ ॥ ೩ ॥**

---

1. ಇದು ಶ್ರುತಿಯ ಅರ್ಥ. 'ಸ ಏಷ ವಾಚಶ್ಚಿತ್ತಸ್ಯೋತ್ತರೋತ್ತರಿಕ್ರಮೋ ಯದ್ಯಜ್ಞಃ' ಎಂದು ಐ. ಆ.ದ ಪಾಠ.

2. ಪ್ರಾಣಾಪಾನಗಳಲ್ಲಿಯೇ ಚಕ್ಷುಃಶ್ರೋತ್ರಮನೋವಾಕ್ಕುಗಳು ವಿಶಿಷ್ಟವಾಗಿವೆ ಎಂಬ ಐ.ಆ.ದ ಹಿಂದಿನ ವಾಕ್ಯದ ಅನುವಾದವಿದು.

೨. ಅವುಗಳಲ್ಲಿ ಒಂದನ್ನು ಬ್ರಹ್ಮನು ಮನಸ್ಸಿನಿಂದ ಸಂಸ್ಕರಿಸುತ್ತಾನೆ. ಹೋತೃವೂ ಅಧ್ವರ್ಯುವೂ ಉದ್ಗಾತೃವೂ ಒಂದನ್ನು ವಾಕ್ಕಿನಿಂದ (ಸಂಸ್ಕರಿಸುತ್ತಾರೆ). ಬ್ರಹ್ಮನು ಪ್ರಾತರನುವಾಕವು ಉಪಾಕೃತವಾಗಿ ಪರಿಧಾನೀಯದ ಹಿಂದೆ ಯಾವಾಗ ಮಾತನಾಡುತ್ತಾನೋ.

೩. (ಆಗ) ಒಂದೇ ವರ್ತನಿಯನ್ನು ಸಂಸ್ಕರಿಸಿದರೆ ಇನ್ನೊಂದು ಹಾನಿಯಾಗುವದು. ಅದು ಹೇಗೆಂದರೆ (ಹೇಗೆ) ಒಂದು ಕಾಲಿನಲ್ಲಿ ಹೋಗುವವನು, ಅಥವಾ ಒಂದೇ ಚಕ್ರದಿಂದ ಸಾಗುವ ರಥವು, ಹೇಗೆ ರೇಷವಾಗುತ್ತದೆಯೋ (ಹಾಗೆ) ಯಜ್ಞವು ರೇಷವಾಗುತ್ತದೆ. ಯಜ್ಞವು ರೇಷವಾದರೆ ಯಜಮಾನನು ಹಿಂದೆಯೇ ರೇಷವಾಗುವನು. ಅವನು ಯಾಗವನ್ನು ಮಾಡಿದರೆ ಪಾಪೀಯಾಂಸನಾಗುವನು.

## ಬ್ರಹ್ಮನು ಮೌನವಾಗಿರದಿದ್ದರೆ ದೋಷ

(ಭಾಷ್ಯ)

೩೪೯. ತಯೋರ್ವರ್ತನ್ಯೋರನ್ಯತರಾಂ ವರ್ತನೀಂ ಮನಸಾ ವಿವೇಕಜ್ಞಾನವತಾ ಸಂಸ್ಕರೋತಿ ಬ್ರಹ್ಮಾ ಋತ್ವಿಕ್, ವಾಚಾ ವರ್ತನ್ಯಾ ಹೋತಾ, ಅಧ್ವರ್ಯುಃ ಉದ್ಗಾತಾ ಇತ್ಯೇತೇ ತ್ರಯೋಽಪಿ ಋತ್ವಿಜೋಽನ್ಯತರಾಂ ವಾಗ್ಲಕ್ಷಣಾಂ ವರ್ತನೀಂ ವಾಚೈವ ಸಂಸ್ಕುರ್ವನ್ತಿ । ತತ್ರೈವಂ ಇತಿ ಸತಿ ವಾಙ್ಮನಸೇ ವರ್ತನೀ ಸಂಸ್ಕಾರ್ಯೇ ಯಜ್ಞೇ । ಅಥ ಸ ಬ್ರಹ್ಮಾ ಯತ್ರ ಯಸ್ಮಿನ್ ಕಾಲೇ ಉಪಾಕೃತೇ ಪ್ರಾರಬ್ಧೇ ಪ್ರಾತರನುವಾಕೇ ಶಸ್ತ್ರೇ ಪುರಾ ಪೂರ್ವಂ ಪರಿಧಾನೀಯಾಯಾ ಋಚಃ ಬ್ರಹ್ಮಾ ಏತಸ್ಮಿನ್ ಅನ್ತರೇ ಕಾಲೇ ವ್ಯವವದತಿ ಮೌನಂ ಪರಿತ್ಯಜತಿ ಯದಾ[1] ತದಾಽನ್ಯತರಾಮೇವ ವಾಗ್ವರ್ತನೀಂ ಸಂಸ್ಕರೋತಿ। ಬ್ರಹ್ಮಣಾ ಅಸಂಸ್ಕ್ರಿಯಮಾಣಾ ಮನೋವರ್ತನೀ ಹೀಯತೇ ವಿನಶ್ಯತಿ ಛಿದ್ರೀಭವತಿ ಅನ್ಯತರಾ। ಸ ಯಜ್ಞಃ ವಾಗ್ವರ್ತನ್ಯೈವಾನ್ಯತರಯಾ ವರ್ತಿತುಮಶಕ್ನುವನ್ ರಿಷ್ಯತಿ। ಕಥಮಿವೇತಿ ? ಆಹ। ಸ ಯಥಾ ಏಕಪಾತ್ ಪುರುಷೋ ವ್ರಜನ್ ಗಚ್ಛನ್ನಧ್ವಾನಂ ರಿಷ್ಯತಿ ರಥೋ ವಾ ಏಕೇನ ಚಕ್ರೇಣ ವರ್ತಮಾನೋ ಗಚ್ಛನ್ ರಿಷ್ಯತಿ ಏವಮಸ್ಯ ಯಜಮಾನಸ್ಯ ಕುಬ್ರಹ್ಮಣಾ ಯಜ್ಞೋ ರಿಷ್ಯತಿ ವಿನಶ್ಯತಿ। ಯಜ್ಞಂ ರಿಷ್ಯನ್ತಂ ಯಜಮಾನೋಽನುರಿಷ್ಯತಿ । ಯಜ್ಞಪ್ರಾಣೋ ಹಿ ಯಜಮಾನಃ। ಅತೋ ಯುಕ್ತೋ ಯಜ್ಞರೇಷೇ ರೇಷಸ್ತಸ್ಯ। ಸ ತಂ ಯಜ್ಞಮಿಷ್ಟ್ವಾ ತಾದೃಶಂ ಪಾಪೀಯಾನ್ ಪಾಪತರೋ ಭವತಿ ॥

---

1. ಇದು ಯದಾ ಎಂದೇ ಇರಬೇಕೆಂದೂ 'ಯತ್ರ' ಎಂಬುದರ ಅರ್ಥವೇ ಎಂದೂ ಇಟ್ಟುಕೊಂಡಿದ್ದೇವೆ; ಆದ್ದರಿಂದ ಇದನ್ನು ಅನುವಾದಮಾಡಿಲ್ಲ.

(ಭಾಷ್ಯಾರ್ಥ)

ಆ ವರ್ತನಿಗಳೊಳಗೆ ಒಂದು ವರ್ತನಿಯನ್ನು ವಿವೇಕಜ್ಞಾನವುಳ್ಳ ಮನಸ್ಸಿನಿಂದ ಬ್ರಹ್ಮನೆಂಬ ಋತ್ವಿಜನು ಸಂಸ್ಕಾರಮಾಡುತ್ತಾನೆ. ವಾಕ್ಕೆಂಬ ವರ್ತನಿಯಿಂದ ಹೋತೃ, ಅಧ್ವರ್ಯು, ಉದ್ಗಾತೃ- ಎಂಬೀ ಮೂವರೂ ಋತ್ವಿಜರು ವಾಕ್ಕೆಂಬ ವರ್ತನಿಯನ್ನು ವಾಕ್ಕಿನಿಂದಲೇ ಸಂಸ್ಕಾರಮಾಡುವರು ಇದು ಹೀಗಿರುವಲ್ಲಿ ವಾಙ್ಮನಸ್ಸುಗಳೆಂಬ ವರ್ತನಿಗಳನ್ನು ಯಜ್ಞದಲ್ಲಿ ಸಂಸ್ಕಾರಮಾಡಬೇಕು

ಇನ್ನು ಆ ಬ್ರಹ್ಮನು ಪ್ರಾತರನುವಾಕದ ಶಸ್ತ್ರವು ಉಪಾಕೃತವಾಗಿ ಪ್ರಾರಂಭವಾಗಿ ಪರಿಧಾನೀಯದ ಋಕ್ಕನ್ನು (ಹೇಳುವದಕ್ಕಿಂತ) ಮೊದಲು[1] (ಆಗ) ಈ ನಡುವಿನ ಕಾಲದಲ್ಲಿ ಬ್ರಹ್ಮನು ಮಾತನಾಡುತ್ತಾನಾದರೆ, ಮೌನವನ್ನು ಬಿಡುತ್ತಾನಾದರೆ, ಯಾವಾಗ ಯಾವ ಕಾಲದಲ್ಲಿ ಮೌನವನ್ನು ಬಿಡುತ್ತಾನೋ (ಮಾತನಾಡುತ್ತಾನೋ) ಆಗ (ಅವೆರಡರಲ್ಲಿ) ಒಂದೇ ಆದ ವಾಕ್ಕೆಂಬ ವರ್ತನಿಯನ್ನು (ಯಜಮಾನನು) ಸಂಸ್ಕಾರಮಾಡುತ್ತಾನೆ ಬ್ರಹ್ಮನಿಂದ ಸಂಸ್ಕಾರವಾಗಬೇಕಾಗಿದ್ದ ಅವುಗಳಲ್ಲೊಂದಾದ ಮನೋವರ್ತನಿಯ ಹಾನಿಯಾಗುವದು, ವಿನಾಶವಾಗುವದು, ಕೊರತೆಯುಳ್ಳದ್ದಾಗುವದು ಆ ಯಜ್ಞವು ಒಂದೇಒಂದಾದ ವಾಗ್ವರ್ತನಿಯಿಂದಲೇ ಸಾಗುವದಕ್ಕೆ ಶಕ್ತಿಯಿಲ್ಲದೆ ನಾಶವಾಗುತ್ತದೆ ಏತರಂತೆ?- ಎಂದರೆ (ಶ್ರುತಿ) ಹೇಳುತ್ತದೆ ಅದು ಹೇಗೆಂದರೆ (ಹೇಗೆ) ಒಂದೇ ಕಾಲಿನಲ್ಲಿ ಹೋಗುವವನು ದಾರಿಯನ್ನು ನಡೆಯುವವನು, ಅಥವಾ ಒಂದೇ ಗಾಲಿಯಿಂದ ಸಾಗುವ ಹೋಗುವ ಗಾಡಿಯು, ಹೇಗೆ ನಾಶವಾಗುವದೋ-ಹಾಗೆಯೇ ಈ ಯಜಮಾನನ ಯಜ್ಞವು ಕೀಳುಬ್ರಹ್ಮನಿಂದ (ರಿಷ್ಯತಿ= ವಿನಶ್ಯತಿ) ರೇಷವಾಗುವದು ಹಾಳಾಗುವದು. ಯಜ್ಞವು ರೇಷವಾದರೆ ಯಜಮಾನನು ಹಿಂದೆಯೇ ರೇಷವಾಗುವನು; ಯಜಮಾನನಿಗೆ ಯಜ್ಞವೇ ಪ್ರಾಣವಷ್ಟೆ? ಆದ್ದರಿಂದ ಯಜ್ಞವು ರೇಷವಾದರೆ ಅವನಿಗೂ ರೇಷವಾಗುವದು ಯುಕ್ತ ಅವನು ಆ ಯಜ್ಞವನ್ನು ಮಾಡಿ ಹಾಗೆ ಪಾಪೀಯಾಂಸನು, ಬಹಳ ಪಾಪಿಯು ಆಗುವನು.[2]

(ಉಪನಿಷತ್ತು)

**ಅಥ ಯತ್ರೋಪಾಕೃತೇ ಪ್ರಾತರನುವಾಕೇ ನ ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯವವದತ್ಯುಭೇ ಏವ ವರ್ತನೀ ಸಗ್ಂಸ್ಕುರ್ವನ್ತಿ ನ ಹೀಯತೇಽನ್ಯತರಾ ॥ ೪ ॥**

---

1. ಇದು ಶಸ್ತ್ರದ ಕೊನೆಯನ್ನು ಸೂಚಿಸುವ ಕಾಲ. ಪ್ರಾತರನುವಾಕದ ಶಸ್ತ್ರವನ್ನು ಆರಂಭಿಸಿ ಮುಗಿಸುವದಕ್ಕಿಂತ ನಡುವಿನ ಕಾಲದಲ್ಲಿ ಬ್ರಹ್ಮನು ಮೌನವಾಗಿರಬೇಕು. ಪರಿಧಾನೀಯಋಕ್ಕುಗಳ ವಿಷಯಕ್ಕೆ ಐ. ಬ್ರಾ. ೨೭-೪ನ್ನು ನೋಡಿ.

2. 'ವಾಗ್ವರ್ತನಿಯು ಸಂಸ್ಕಾರವಿಲ್ಲದಿದ್ದರೂ ಹೀಗೆಯೇ ದೋಷವೆಂದು ತಿಳಿಯಬೇಕು'- ಎಂದು ಟೀಕೆ.

**ಸ ಯಥೋಭಯಪಾದ್ವ್ರಜನ್ರಥೋ ವೋಭಾಭ್ಯಾಂ ಚಕ್ರಾಭ್ಯಾಂ ವರ್ತಮಾನಃ ಪ್ರತಿತಿಷ್ಠತ್ಯೇವಮಸ್ಯ ಯಜ್ಞಃ ಪ್ರತಿತಿಷ್ಠತಿ ಯಜ್ಞಂ ಪ್ರತಿತಿಷ್ಠನ್ತಂ ಯಜಮಾನೋಽನುಪ್ರತಿತಿಷ್ಠತಿ ಸ ಇಷ್ಟ್ವಾ ಶ್ರೇಯಾನ್ ಭವತಿ ॥ ೫ ॥**

೪. ಇನ್ನು ಆ ಬ್ರಹ್ಮನು ಯಾವಾಗ ಪ್ರಾತರನುವಾಕವು ಪ್ರಾರಂಭವಾಗಿ ಪರಿಧಾನೀಯದ ಮುಂಚೆ ಯಾವಾಗ ಮಾತನಾಡು ವದಿಲ್ಲವೋ ಎರಡು ವರ್ತನಿಗಳನ್ನೂ ಸಂಸ್ಕಾರಮಾಡಿದವರಾಗು ತ್ತಾರೆ. ಅವುಗಳಲ್ಲಿ ಯಾವದೊಂದೂ ಹಾನಿಯಾಗುವದಿಲ್ಲವೋ.

೫. ಅದು ಹೇಗೆಂದರೆ (ಹೇಗೆ) ಎರಡು ಕಾಲಿನವನು ಹೋಗು ವವನು) ಪ್ರತಿಷ್ಠಿತನಾಗಿರುವವನೋ) ಅಥವಾ ಎರಡು ಚಕ್ರಗಳಿಂದ ಸಾಗುತ್ತಿರುವ ಚಕ್ರವು ಪ್ರತಿಷ್ಠಿತವಾಗಿರುವದೋ, ಹಾಗೆಯೇ ಇವನ ಯಜ್ಞವು ಪ್ರತಿಷ್ಠಿತವಾಗಿರುವದು, ಯಜ್ಞವು ಪ್ರತಿಷ್ಠಿತವಾದರೆ ಯಜಮಾನನೂ ಹಿಂದೆಯೇ ಪ್ರತಿಷ್ಠಿತನಾಗಿರುವನು. ಅವನು ಯಾಗ ಮಾಡಿದರೆ ಶ್ರೇಯಾಂಸನಾಗುವನು.

## ಬ್ರಹ್ಮನು ಮೌನದಿಂದಿದ್ದರೆ ಗುಣ

**(ಭಾಷ್ಯ)**

೩೫೦. ಅಥ ಪುನಃ ಯತ್ರ ಬ್ರಹ್ಮಾ ವಿದ್ವಾನ್ ಮೌನಂ ಪರಿಗೃಹ್ಯ ವಾಗ್ವಿಸರ್ಗಮ್ ಅಕುರ್ವನ್ ವರ್ತತೇ ಯಾವತ್ ಪರಿಧಾನೀಯಾಯಾ ನ ವ್ಯವ ವದತಿ ತಥೈವ ಸರ್ವರ್ತ್ವಿಜಃ, ಉಭೇ ಏವ ವರ್ತನೀ ಸಂಸ್ಕುರ್ವನ್ತಿ ನ ಹೀಯತೇ ಅನ್ಯತರಾಪಿ। ಕಿಮಿವೇತಿ ? ಆಹ। ಪೂರ್ವೋಕ್ತವಿಪರೀತೌ ದೃಷ್ಟಾನ್ತೌ। ಏವಮಸ್ಯ ಯಜಮಾನಸ್ಯ ಯಜ್ಞಃ ಸ್ವವರ್ತನೀಭ್ಯಾಂ ವರ್ತಮಾನಃ ಪ್ರತಿತಿಷ್ಠತಿ ಸ್ವೇನಾಽತ್ಮನಾ ಅವಿನಶ್ಯನ್ ವರ್ತತ ಇತ್ಯರ್ಥಃ। ಯಜ್ಞಂ ಪ್ರತಿತಿಷ್ಠನ್ತಂ ಯಜಮಾನೋಽನುಪ್ರತಿತಿಷ್ಠತಿ। ಸ ಯಜಮಾನ ಏವಂ ಮೌನವಿಜ್ಞಾನ ವದ್ಬ್ರಹ್ಮೋಪೇತಂ ಯಜ್ಞಮ್ ಇಷ್ಟ್ವಾ ಶ್ರೇಯಾನ್ ಭವತಿ ಶ್ರೇಷ್ಠೋ ಭವತಿ ಇತ್ಯರ್ಥಃ ॥

**(ಭಾಷ್ಯಾರ್ಥ)**

ಇನ್ನು ಇದಕ್ಕೆ ಬದಲು ಯಾವಾಗ ಬಲ್ಲವನಾದ ಬ್ರಹ್ಮನು ಮೌನವನ್ನು ಸ್ವೀಕರಿಸಿ ಮಾತನಾಡದೆಯೆ ಇರುವನೋ ಪರಿಧಾನೀಯವು (ಮುಗಿಯುವ)ವರೆಗೂ

ಮಾತಿಲ್ಲದೆ (ಸುಮ್ಮ)ನಿರುವನೋ, (ಮತ್ತು) ಹಾಗೆಯೇ ಎಲ್ಲಾ ಋತ್ವಿಜರೂ (ಸರಿಯಾಗಿ ತಮ್ಮ ಕೆಲಸವನ್ನು ಮಾಡುತ್ತಿರುವರೋ, ಆಗ) ಎರಡೂ ವರ್ತನಿಗಳನ್ನೂ ಸಂಸ್ಕರಿಸಿದವರಾಗುವರು, (ಅವೆರಡರಲ್ಲಿ) ಒಂದೂ ಹಾನಿಯಾಗುವದಿಲ್ಲ. ಏತರಂತೆ ? ಎಂದರೆ (ಶ್ರುತಿ) ಹೇಳುತ್ತದೆ: ಇಲ್ಲಿ ದೃಷ್ಟಾಂತಗಳು ಹಿಂದೆ ಹೇಳಿದ್ದಕ್ಕೆ ವಿಪರೀತವಾಗಿರುತ್ತವೆ.

ಈ (ದೃಷ್ಟಾಂತ)ಗಳಂತೆಯೇ ಈ ಯಜಮಾನನ ಯಜ್ಞವು ತನ್ನ ವರ್ತನಿಗಳಿಂದ ಸಾಗುವದಾಗಿ ಪ್ರತಿಷ್ಠಿತವಾಗಿರುತ್ತದೆ. ವಿನಾಶವಾಗದೆ ತನ್ನ ರೂಪದಿಂದಲೇ ಸಾಗುತ್ತದೆ ಎಂದರ್ಥ. ಯಜ್ಞವು ಪ್ರತಿಷ್ಠಿತವಾಗಿದ್ದರೆ ಯಜಮಾನನೂ ಹಿಂದೆಯೇ ಪ್ರತಿಷ್ಠಿತನಾಗಿರುವನು. ಆ ಯಜಮಾನನು ಈ ಮೌನವಿಜ್ಞಾನವನ್ನು ಬಲ್ಲ ಬ್ರಹ್ಮನೊಡಗೂಡಿದ ಯಜ್ಞವನ್ನು ಮಾಡಿದ್ದರಿಂದ ಶ್ರೇಯಾಂಸನಾಗುವನು, ಶ್ರೇಷ್ಠನಾಗುತ್ತಾನೆ ಎಂದರ್ಥ.

---

# ನಾಲ್ಕನೆಯ ಅಧ್ಯಾಯ-ಹದಿನೇಳನೆಯ ಖಂಡ

(ಪ್ರಾಸಂಗಿಕವಾಗಿ ಯಜ್ಞಧರ್ಮಗಳು)

## ವ್ಯಾಹೃತಿಗಳ ಉತ್ಪತ್ತಿ

(ಉಪನಿಷತ್ತು)

**ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಗ್ಂ ರಸಾನ್ ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮನ್ತರಿಕ್ಷಾದಾದಿತ್ಯಂ ದಿವಃ ॥ ೧ ॥**

**ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾನಾಗ್ಂ ರಸಾನ್ ಪ್ರಾವೃಹದಗ್ನೇರ್ಋಚೋ ವಾಯೋರ್ಯಜೂಂಷಿ ಸಾಮಾನ್ಯಾದಿತ್ಯಾತ್ ॥ ೨ ॥**

**ಸ ಏತಾಂ ತ್ರಯೀಂ ವಿದ್ಯಾಮಭ್ಯತಪತ್ತಸ್ಯಾಸ್ತಪ್ಯಮಾನಾಯಾ ರಸಾನ್ ಪ್ರಾವೃಹದ್ಭೂರಿತ್ಯೃಗ್ಭ್ಯೋ ಭುವರಿತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ ॥ ೩ ॥**

೧. ಪ್ರಜಾಪತಿಯು ಲೋಕಗಳನ್ನು ಕುರಿತು ತಪಸ್ಸುಮಾಡಿದನು, ತಪ್ಯಮಾನವಾದ ಅವುಗಳಿಂದ - ಪೃಥಿವಿಯಿಂದ ಅಗ್ನಿ, ಅಂತ

ರಿಕ್ಷದಿಂದ ವಾಯು, ದ್ಯುಲೋಕದಿಂದ ಆದಿತ್ಯ - (ಹೀಗೆ ಈ) ರಸ ಗಳನ್ನು ಈಚೆಗೆ ತೆಗೆದನು.

೨. ಅವನು ಈ ಮೂರು ದೇವತೆಗಳನ್ನು ಕುರಿತು ತಪಸ್ಸು ಮಾಡಿದನು. ತಪ್ಯಮಾನವಾದ ಅವುಗಳಿಂದ - ಅಗ್ನಿಯಿಂದ ಋಕ್ಕು ಗಳನ್ನು, ವಾಯುವಿನಿಂದ ಯಜುಸ್ಸುಗಳನ್ನು, ಆದಿತ್ಯನಿಂದ ಸಾಮ ಗಳನ್ನು - (ಹೀಗೆ ಈ) ರಸಗಳನ್ನು ಈಚೆಗೆ ತೆಗೆದನು.

೩. ಅವನು ಈ ತ್ರಯೀವಿದ್ಯೆಯನ್ನು ಕುರಿತು ತಪಸ್ಸುಮಾಡಿ ದನು. ತಪ್ಯಮಾನವಾದ ಅದರಿಂದ - ಋಕ್ಕುಗಳಿಂದ ಭೂಃ ಎಂಬುದು, ಯಜುಸ್ಸುಗಳಿಂದ ಭುವಃ ಎಂಬುದು, ಸಾಮುಗಳಿಂದ ಸ್ವಃ ಎಂಬುದು - (ಹೀಗೆ ಈ) ರಸಗಳನ್ನು ಈಚೆಗೆ ತೆಗೆದನು.

## ಗ್ರಂಥದ ಸಂಬಂಧ

(ಭಾಷ್ಯ)

೩೫೦. ಅತ್ರ ಬ್ರಹ್ಮಣೋ ಮೌನಂ ವಿಹಿತಮ್ । ಅಥ[1] ತದ್ರೇಷೇ ಬ್ರಹ್ಮತ್ವಕರ್ಮಣಿ ಚ ಅಥಾನ್ಯಸ್ಮಿಂಶ್ಚ ಹೌತ್ರಾದಿಕರ್ಮರೇಷೇ ವ್ಯಾಹೃತಿಹೋಮಃ ಪ್ರಾಯಶ್ಚಿತ್ತಮಿತಿ ತದರ್ಥಂ ವ್ಯಾಹೃತಯೋ ವಿಧಾತವ್ಯಾ ಇತ್ಯಾಹ ॥

(ಭಾಷ್ಯಾರ್ಥ)

ಇಲ್ಲಿ ಬ್ರಹ್ಮನಿಗೆ ಮೌನವನ್ನು ವಿಧಿಸಲಾಯಿತು. ಇನ್ನು ಬ್ರಹ್ಮತ್ವಕರ್ಮ ದಲ್ಲಿ ಅದು ತಪ್ಪಿಹೋದರೆ, ಮತ್ತು ಬೇರೆಯ ಹೋತೃವೇ ಮುಂತಾದವರ ಕರ್ಮ ಗಳು ತಪ್ಪಿದರೆ ವ್ಯಾಹೃತಿಹೋಮವು ಪ್ರಾಯಶ್ಚಿತ್ತವಾದ್ದರಿಂದ ಅದಕ್ಕಾಗಿ ವ್ಯಾಹೃತಿಗಳನ್ನು ವಿಧಿಸಬೇಕೆಂದು (ಶ್ರುತಿ ಹೀಗೆಂದು) ಹೇಳುತ್ತಿದೆ.

## ಲೋಕಾದಿಗಳಲ್ಲಿ ಸಾರತಮವಾದವು ವ್ಯಾಹೃತಿಗಳು

(ಭಾಷ್ಯ)

೩೫೧. ಪ್ರಜಾಪತಿರ್ಲೋಕಾನ್ ಅಭ್ಯತಪತ್ । ಲೋಕಾನುದ್ದಿಶ್ಯ ತತ್ರ ಸಾರಜಿಘೃಕ್ಷಯಾ ಧ್ಯಾನಲಕ್ಷಣಂ ತಪಶ್ಚಚಾರ । ತೇಷಾಂ ತಪ್ಯಮಾನಾನಾಂ ಲೋಕಾನಾಂ ರಸಾನ್ ಸಾರರೂಪಾನ್ ಪ್ರಾವೃಹತ್ ಉದ್ಧೃತವಾನ್ । ಜಗ್ರಾಹ ಇತ್ಯರ್ಥಃ । ಕಾನ್ ? ಅಗ್ನಿಂ ರಸಂ ಪೃಥಿವ್ಯಾಃ । ವಾಯುಮನ್ತರಿಕ್ಷಾತ್ । ಆದಿತ್ಯಂ

---

1. 'ಅಥ' ಇರುವ ಪಾಠವೇ ಮೇಲು.

ದಿವಃ । ಪುನರಪ್ಯೇವಮೇವ[1] ಅಗ್ನ್ಯಾದ್ಯಾಃ ಸ ಏತಾಸ್ತಿಸ್ರೋ ದೇವತಾ ಉದ್ದಿಶ್ಯ ಅಭ್ಯತಪತ್ । ತತೋಽಪಿ ಸಾರಂ ರಸಂ ತ್ರಯೀಂ[2] ವಿದ್ಯಾಂ ಜಗ್ರಾಹ । ಸ ಏತಾಂ ಪುನರಭ್ಯತಪತ್ ತ್ರಯೀಂ ವಿದ್ಯಾಮ್ । ತಸ್ಯಾಸ್ತಪ್ಯಮಾನಾಯಾಃ ರಸಂ ಭೂರಿತಿ ವ್ಯಾಹೃತಿಂ ಋಗ್ಭ್ಯೋ ಜಗ್ರಾಹ । ಭುವರಿತಿ ವ್ಯಾಹೃತಿಂ ಯಜುರ್ಭ್ಯಃ । ಸ್ವರಿತಿ ವ್ಯಾಹೃತಿಂ ಸಾಮಭ್ಯಃ । ಅತ ಏವ ಲೋಕದೇವವೇದರಸಾ ಮಹಾ ವ್ಯಾಹೃತಯಃ ॥

(ಭಾಷ್ಯಾರ್ಥ)

ಪ್ರಜಾಪತಿಯು ಲೋಕಗಳನ್ನು ಅಭಿತಪಿಸಿದನು, ಲೋಕಗಳನ್ನು ಕುರಿತು ಅವುಗಳಲ್ಲಿ ಸಾರವನ್ನು ಗ್ರಹಿಸುವ ಇಚ್ಛೆಯಿಂದ ಧ್ಯಾನರೂಪವಾದ ತಪಸ್ಸನ್ನು ಮಾಡಿದನು. ತಪ್ಯಮಾನವಾದ ಆ ಲೋಕಗಳ ರಸಗಳನ್ನು ಸಾರರೂಪವಾದವು ಗಳನ್ನು ಈಚೆಗೆ ತೆಗೆದನು, ಎತ್ತಿಕೊಂಡನು, ಸ್ವೀಕರಿಸಿದನು ಎಂದರ್ಥ. ಯಾವ (ರಸಗಳನ್ನು)? ಎಂದರೆ, ಪೃಥಿವಿಯಿಂದ ಅಗ್ನಿ ಎಂಬ ರಸವನ್ನು, ಅಂತರಿಕ್ಷದಿಂದ ವಾಯುವನ್ನು, ದ್ಯುಲೋಕದಿಂದ ಆದಿತ್ಯನನ್ನು (ತೆಗೆದುಕೊಂಡನು).

ಮತ್ತು ಹೀಗೆಯೇ ಈ ಅಗ್ನಿಯೇ ಮೊದಲಾದ ಮೂವರು ದೇವತೆಗಳನ್ನು ಕುರಿತು ತಪಸ್ಸುಮಾಡಿದನು. ಅವುಗಳಿಂದಲೂ ಸಾರವಾದ ತ್ರಯೀವಿದ್ಯೆ ಎಂಬ ರಸವನ್ನು ಸ್ವೀಕರಿಸಿದನು.

ಅವನು ಈ (ತ್ರಯೀವಿದ್ಯೆಯನ್ನು) ಕುರಿತು ಮತ್ತೆ ತಪಿಸಿದನು. ಆ ತಪ್ಯ ಮಾನವಾದ (ವಿದ್ಯೆ)ಯಿಂದ ಭೂಃ ಎಂಬ ವ್ಯಾಹೃತಿರೂಪವಾದ ರಸವನ್ನು ಋಕ್ಕು ಗಳಿಂದ ತೆಗೆದುಕೊಂಡನು, ಭುವಃ ಎಂಬ ವ್ಯಾಹೃತಿಯನ್ನು ಯಜುಸ್ಸುಗಳಿಂದ (ತೆಗೆದುಕೊಂಡನು), ಸ್ವಃ ಎಂಬ ವ್ಯಾಹೃತಿಯನ್ನು ಸಾಮಗಳಿಂದ (ತೆಗೆದು ಕೊಂಡನು) **ಆದ್ದರಿಂದಲೇ (ಈ) ಮಹಾವ್ಯಾಹೃತಿಗಳು ಲೋಕದೇವ ವೇದಗಳ ರಸಗಳು.**

## ವ್ಯಾಹೃತಿಗಳಿಂದ ಹೋಮಮಾಡುವ ಪ್ರಾಯಶ್ಚಿತ್ತ

(ಉಪನಿಷತ್ತು)

**ತದ್ಯದ್ಯೃಕ್ತೋ[3] ರಿಷ್ಯೇದ್ಭೂಃ ಸ್ವಾಹೇತಿ ಗಾರ್ಹಪತ್ಯೇ ಜುಹು ಯಾದೃಚಾಮೇವ ತದ್ರಸೇನಾರ್ಚಾಂ ವೀರ್ಯೇಣರ್ಚಾಂ ಯಜ್ಞಸ್ಯ ವಿರಿಷ್ಟಗ್ಂ ಸಂದಧಾತಿ ॥ ೪ ॥**

---

1. 'ಏವಮೇವಮ್' ಎಂಬುದಕ್ಕಿಂತ ಈ ಪಾ॥ ಪಾಠವೇ ಮೇಲು.

2. ಮೂಲಕ್ಕನುಗುಣವಾಗಿ 'ತ್ರಯೀ ವಿದ್ಯಾಂ' ಎಂಬುದಕ್ಕೆ ಬದಲು ಈ ಪಾಠವನ್ನೇ ಹಿಡಿದಿದೆ.

3. 'ಯದ್ಯೃಕ್ತೋ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ. ಭಾಷ್ಯದ ಟಿಪ್ಪಣಿಯನ್ನು ನೋಡಿ.

**ಅಥ ಯದಿ ಯಜುಷ್ಟೋ ರಿಷ್ಯೇದ್ಭುವಃ ಸ್ವಾಹೇತಿ ದಕ್ಷಿಣಾಗ್ನೌ ಜುಹುಯಾದ್ಯಜುಷಾಮೇವ ತದ್ರಸೇನ ಯಜುಷಾಂ ವೀರ್ಯೇಣ ಯಜುಷಾಂ ಯಜ್ಞಸ್ಯ ವಿರಿಷ್ಟಗ್ಂ ಸಂದಧಾತಿ ॥ ಅಥ ಯದಿ ಸಾಮತೋ ರಿಷ್ಯೇತ್ ಸ್ವಃ ಸ್ವಾಹೇತ್ಯಾಹವನೀಯೇ ಜುಹುಯಾತ್ ಸಾಮ್ನಾಮೇವ ತದ್ರಸೇನ ಸಾಮ್ನಾಂ ವೀರ್ಯೇಣ ಸಾಮ್ನಾಂ ಯಜ್ಞಸ್ಯ ವಿರಿಷ್ಟಗ್ಂ ಸಂದಧಾತಿ ॥ ೬ ॥**

೪. ಅಲ್ಲಿ ಋಕ್ಕಿನಿಂದ ರೇಷವಾದರೆ 'ಭೂಃ ಸ್ವಾಹಾ !' ಎಂದು ಗಾರ್ಹಪತ್ಯದಲ್ಲಿ ಹೋಮಮಾಡಬೇಕು, ಹಾಗೆ ಋಕ್ಕುಗಳ ಯಜ್ಞದ ವಿರಿಷ್ಟವನ್ನು ಋಕ್ಕುಗಳ ರಸದಿಂದಲೇ ಋಕ್ಕುಗಳ ವೀರ್ಯ ದಿಂದಲೇ ಬೆಸಗೆಮಾಡಿದವನಾಗುತ್ತಾನೆ.

೫. ಇನ್ನು ಯಜುಸ್ಸಿನಿಂದ ರೇಷವಾದರೆ 'ಭುವಃ ಸ್ವಾಹಾ !' ಎಂದು ದಕ್ಷಿಣಾಗ್ನಿಯಲ್ಲಿ ಹೋಮಮಾಡಬೇಕು. ಯಜುಸ್ಸುಗಳ ಯಜ್ಞದ ವಿರಿಷ್ಟವನ್ನು ಯಜುಸ್ಸುಗಳ ರಸದಿಂದಲೇ ಯಜುಸ್ಸುಗಳ ವೀರ್ಯದಿಂದಲೇ ಬೆಸಗೆಮಾಡಿದವನಾಗುತ್ತಾನೆ.

೬. ಇನ್ನು ಸಾಮದಿಂದ ರೇಷವಾದರೆ 'ಸ್ವಃ ಸ್ವಾಹಾ !' ಎಂದು ಆಹವನೀಯದಲ್ಲಿ ಹೋಮಮಾಡಬೇಕು. ಸಾಮಗಳ ಯಜ್ಞದ ವಿರಿಷ್ಟವನ್ನು ಸಾಮಗಳ ರಸದಿಂದಲೇ ಸಾಮಗಳ ವೀರ್ಯ ದಿಂದಲೇ ಬೆಸಗೆಮಾಡಿದವನಾಗುತ್ತಾನೆ.

## ವ್ಯಾಹೃತಿಗಳನ್ನು ಪ್ರಾಯಶ್ಚಿತ್ತಕ್ಕೆ ವಿನಿಯೋಗಿಸುವ ಕ್ರಮ

(ಭಾಷ್ಯ)

೪-೫-೬. ಅತಃ ತತ್ ತತ್ರ ಯಜ್ಞೇ ಯದಿ[1] ಋಕ್ತಃ ಋಕ್ಸಂಬನ್ಧಾತ್ ಋಙ್ನಿಮಿತ್ತಂ ರಿಷ್ಯೇದ್ ಯಜ್ಞಃ ಕ್ಷತಂ ಪ್ರಾಪ್ನುಯಾತ್ ಭೂಃ ಸ್ವಾಹಾ ! ಇತಿ ಗಾರ್ಹಪತ್ಯೇ ಜುಹುಯಾತ್। ಸಾ ತತ್ರ ಪ್ರಾಯಶ್ಚಿತ್ತಿಃ। ಕಥಮ್ ? ಋಚಾಮೇವ ತದಿತಿ ಕ್ರಿಯಾವಿಶೇಷಣಮ್। ರಸೇನ ಋಚಾಂ ವೀರ್ಯೇಣ ಓಜಸಾ ಋಚಾಂ ಯಜ್ಞಸ್ಯ ಋಕ್ಸಂಬನ್ಧಿನೋ ಯಜ್ಞಸ್ಯ ವಿರಿಷ್ಟಂ ವಿಚ್ಛಿನ್ನಂ

1. ಇಲ್ಲಿ 'ಯತ್ ಯದಿ' ಎಂದು ಪ್ರತೀಕಗ್ರಹಣಪೂರ್ವಕವಾಗಿ ವ್ಯಾಖ್ಯಾನಮಾಡಿಲ್ಲವಾದ್ದರಿಂದ 'ಯದ್ಯೃಕ್ತಃ' ಎಂದೇ ಉಪನಿಷನ್ಮೂಲವೂ ಇತ್ತೆಂದು ಊಹಿಸುವದಕ್ಕೆಡೆಯಿದೆ. ಕಾ॥ ಪಾಠದಲ್ಲಿ ಹಾಗೆಯೇ ಇದೆ.

ಕ್ಷತರೂಪಮುತ್ಪನ್ನಂ ಸಂದಧಾತಿ ಪ್ರತಿಸಂಧತ್ತೇ ॥ ಅಥ ಯದಿ ಯಜುಷ್ಟೋ ಯಜುರ್ನಿಮಿತ್ತಂ ರಿಷ್ಯೇತ್, ಭುವಃ ಸ್ವಾಹಾ ! ಇತಿ ದಕ್ಷಿಣಾಗ್ನೌ ಜುಹುಯಾತ್। ತಥಾ ಸಾಮನಿಮಿತ್ತೇ ರೇಷೇ ಸ್ವಃ ಸ್ವಾಹಾ ! ಇತಿ ಆಹವನೀಯೇ ಜುಹುಯಾತ್ । ತಥಾ ಪೂರ್ವವದ್ ಯಜ್ಞಂ ಸಂದಧಾತಿ। ಬ್ರಹ್ಮನಿಮಿತ್ತೇ ತು ರೇಷೇ ತ್ರಿಷು ಅಗ್ನಿಷು ತಿಸೃಭಿರ್ವ್ಯಾಹೃತಿಭಿಃ ಜುಹುಯಾತ್। ತ್ರಯ್ಯಾ ಹಿ ವಿದ್ಯಾಯಾ ಸ ರೇಷಃ । "ಅಥ ಕೇನ ಬ್ರಹ್ಮತ್ವಮಿತ್ಯನಯೈವ ತ್ರಯ್ಯಾ ವಿದ್ಯಯಾ"[1] ( ? ) ಇತಿ ಶ್ರುತೇಃ। ನ್ಯಾಯಾನ್ತರಂ ವಾ ಮೃಗ್ಯಂ ಬ್ರಹ್ಮತ್ವನಿಮಿತ್ತೇ ರೇಷೇ ॥

(ಭಾಷ್ಯಾರ್ಥ)

ಆದ್ದರಿಂದ (ತತ್ = ತತ್ರ) ಆ ಯಜ್ಞದಲ್ಲಿ ಋಕ್ಕಿನಿಂದ ಋಕ್ಸಂಬಂಧದಿಂದ ಋಕ್ಕಿನ ನಿಮಿತ್ತವಾಗಿ ರೇಷವಾದರೆ, ಯಜ್ಞವು ಕೊರತೆಯನ್ನು ಪಡೆದರೆ, 'ಭೂಃ ಸ್ವಾಹಾ!' ಎಂದು **ಗಾರ್ಹಪತ್ಯ**ದಲ್ಲಿ ಹೋಮಮಾಡಬೇಕು. ಅದೇ ಅದರ ವಿಷಯದಲ್ಲಿ ಪ್ರಾಯಶ್ಚಿತ್ತವು ಹೇಗೆಂದರೆ, 'ತತ್' (ಹಾಗೆ ಮಾಡಿದರೆ) ಎಂಬುದು ಕ್ರಿಯಾವಿಶೇಷಣವು , ಋಕ್ಕುಗಳ ರಸದಿಂದಲೇ, ಋಕ್ಕುಗಳ ವೀರ್ಯದಿಂದಲೇ, ಓಜಸ್ಸಿನಿಂದಲೇ, ಋಕ್ಕುಗಳ ಋಕ್ಸಂಬಂಧವಾದ ಯಜ್ಞದ ವಿರಿಷ್ಟವನ್ನು ವಿಚ್ಛಿನ್ನವಾದ ಕೊರೆಯ ರೂಪವುಂಟಾಗುವದಲ್ಲ (ಅದನ್ನು), ಬೆಸಗೆಮಾಡಿದವನಾಗುತ್ತಾನೆ

ಇನ್ನು ಯಜುಸ್ಸಿನಿಂದ ಯಜುಸ್ಸಿನ ನಿಮಿತ್ತದಿಂದ ರೇಷವಾದರೆ 'ಭುವಃ ಸ್ವಾಹಾ!' ಎಂದು **ದಕ್ಷಿಣಾಗ್ನಿ**ಯಲ್ಲಿ ಹೋಮಮಾಡಬೇಕು. ಹೀಗೆಯೇ ಸಾಮನಿಮಿತ್ತದಿಂದ ರೇಷವಾದರೆ 'ಸ್ವಃ ಸ್ವಾಹಾ !' ಎಂದು **ಆಹವನೀಯ**ದಲ್ಲಿ ಹೋಮಮಾಡಬೇಕು. ಹಾಗೆ (ಮಾಡಿದರೆ) ಹಿಂದಿನಂತೆಯೇ ಯಜ್ಞವನ್ನು ಬೆಸಗೆಮಾಡಿದವನಾಗುತ್ತಾನೆ. ಬ್ರಹ್ಮನಿಮಿತ್ತವಾಗಿ ರೇಷವಾದರೋ ಮೂರು ಅಗ್ನಿಗಳಲ್ಲಿಯೂ ಮೂರು ವ್ಯಾಹೃತಿಗಳಿಂದಲೂ ಹೋಮಮಾಡಬೇಕು[2]. ಏಕೆಂದರೆ ಆ ರೇಷವು ತ್ರಯೀವಿದ್ಯೆಗೆ ಸಂಬಂಧಪಟ್ಟದ್ದು. "ಇನ್ನು (ಹೀಗಿರುವಲ್ಲಿ) ಬ್ರಹ್ಮತ್ವವನ್ನು ಏತರಿಂದ (ಮಾಡತಕ್ಕದ್ದು)? ಎಂದರೆ ಇದೇ ತ್ರಯೀವಿದ್ಯೆಯಿಂದ" ( ? ) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಅಥವಾ ಬ್ರಹ್ಮತ್ವ

---

1. ಐ. ಬ್ರಾ. ೨೫-೮ರಲ್ಲಿ 'ಅಥ ಕೇನ ಬ್ರಹ್ಮತ್ವಂ ಕ್ರಿಯತ ಇತಿ ತ್ರಯ್ಯಾ ವಿದ್ಯಯೇತಿ ಬ್ರೂಯಾತ್' ಎಂದಿದೆ.

2. ಈ ಹೋಮವನ್ನು ಬ್ರಹ್ಮನೇ ಮಾಡಬೇಕು ಎಂದು ಐ. ಬ್ರಾ. ೨೫-೯ರಲ್ಲಿ ಹೇಳಿದೆ.

ನಿಮಿತ್ತವಾದ ದೋಷಕ್ಕೆ ಮತ್ತೆ ಯಾವದಾದರೊಂದು ನ್ಯಾಯವನ್ನಾದರೂ ಹುಡುಕ ಬೇಕು[1].

## ವಿದ್ವಾಂಸನಾದವನನ್ನೇ ಬ್ರಹ್ಮನನ್ನಾಗಿ ಮಾಡಿಕೊಳ್ಳಬೇಕು

(ಉಪನಿಷತ್ತು)

**ತದ್ಯಥಾ ಲವಣೇನ ಸುವರ್ಣಗ್‌ಂ ಸಂದಧ್ಯಾತ್ ಸುವರ್ಣೇನ ರಜತಗ್‌ಂ ರಜತೇನ ತ್ರಪು ತ್ರಪುಣಾ ಸೀಸಗ್‌ಂ ಸೀಸೇನ ಲೋಹಂ ಲೋಹೇನ ದಾರು ದಾರು ಚರ್ಮಣಾ ॥ ೭ ॥**

**ಏವಮೇಷಾಂ ಲೋಕಾನಾಮಾಸಾಂ ದೇವತಾನಾಮಸ್ಯಾಸ್ತ್ರಯ್ಯಾ ವಿದ್ಯಾಯಾ ವೀರ್ಯೇಣ ಯಜ್ಞಸ್ಯ ವಿರಿಷ್ಟಗ್‌ಂ ಸಂದಧಾತಿ ಭೇಷಜಕೃತೋ ಹ ವಾ ಏಷ ಯಜ್ಞೋ ಯತ್ರೈವಂವಿದ್ ಬ್ರಹ್ಮಾ ಭವತಿ ॥ ೮ ॥**

೭. ಅದು ಹೇಗೆಂದರೆ (ಹೇಗೆ) ಉಪ್ಪಿನಿಂದ ಚಿನ್ನವನ್ನು, ಚಿನ್ನದಿಂದ ಬೆಳ್ಳಿಯನ್ನು, ಬೆಳ್ಳಿಯಿಂದ ತವರವನ್ನು, ತವರದಿಂದ ಸೀಸವನ್ನು, ಸೀಸದಿಂದ ಕಬ್ಬಿಣವನ್ನು ಕಬ್ಬಿಣದಿಂದ ಮರವನ್ನು, ಮರವನ್ನು ಚರ್ಮದಿಂದಲೂ ಹೇಗೆ ಕೂಡಿಸುತ್ತಾರೋ—

೮. ಹಾಗೆಯೇ ಈ ಲೋಕಗಳ ಈ ದೇವತೆಗಳ ಈ ತ್ರಯೀ ವಿದ್ಯೆಯ ವೀರ್ಯದಿಂದ ಯಜ್ಞದ ವಿರಿಷ್ಟವನ್ನು ಕೂಡಿಸುತ್ತಾನೆ. ಎಲ್ಲಿ ಹೀಗೆ ತಿಳಿದಿರುವ ಬ್ರಹ್ಮನು ಇರುತ್ತಾನೋ ಆ ಯಜ್ಞವು ಭೇಷಜಕೃತನಿಂದ ಕೂಡಿದ್ದಾಗಿರುತ್ತದೆ.

## ತಿಳಿದ ಬ್ರಹ್ಮನಿದ್ದರೆ ಯಜ್ಞಕ್ಕೆ ಗುಣ

(ಭಾಷ್ಯ)

೩೫೩. ತದ್ಯಥಾ ಲವಣೇನ ಸುವರ್ಣಂ ಸಂದಧ್ಯಾತ್। ಕ್ಷಾರೇಣ ಟಙ್ಕಣಾದಿನಾ ಖರೇ ಮೃದುತ್ವಕರಂ ಹಿ ತತ್। ಸುವರ್ಣೇನ ರಜತಮಶಕ್ಯಸಂಧಾನಂ

---

1 ಬ್ರಹ್ಮನ ಜ್ಞಾನನಿಮಿತ್ತವಾಗಿಯೇ ಸರ್ವದೋಷಗಳೂ ನಿವೃತ್ತವಾಗುವದರಿಂದ ಅವನ ವಿಷಯದಲ್ಲಿ ಮತ್ತೆ ಯಾವ ಪ್ರಾಯಶ್ಚಿತ್ತವೂ ವಿಹಿತವಾಗತಕ್ಕದ್ದಲ್ಲ ಎಂದು ಆ॥ ಟೀಕೆ. ಆದರೆ ಹಿಂದೆ ಮೌನಭ್ರೇಷವಾದರೆ ಯಜ್ಞವು ಕೆಟ್ಟುಹೋಗುತ್ತದೆ ಎಂದು ಹೇಳಿರುವದರಿಂದ ಅವನ ನಿಮಿತ್ತದಿಂದ ದೋಷವಾದರೂ ಪ್ರಾಯಶ್ಚಿತ್ತವುಂಟೆಂಬುದೇ ಆಚಾರ್ಯರ ಅಭಿಪ್ರಾಯ ವೆಂದು ತೋರುತ್ತದೆ. ಐ. ಬ್ರಾ. ೨೫–೮ನ್ನು ನೋಡಿ.

ಸಂದಧ್ಯಾತ್। ರಜತೇನ ತಥಾ ತ್ರಪು, ತ್ರಪುಣಾ ಸೀಸಂ, ಸೀಸೇನ ಲೋಹಂ, ಲೋಹೇನ ದಾರು, ದಾರು ಚರ್ಮಣಾ ಚರ್ಮಬನ್ಧನೇನ । ಏವಮೇಷಾಂ ಲೋಕಾನಾಮ್ ಆಸಾಂ ದೇವತಾನಾಮ್ ಅಸ್ಯಾಸ್ತ್ರಯ್ಯಾ ವಿದ್ಯಾಯಾ ವೀರ್ಯೇಣ ರಸಾಖ್ಯೇನ ಓಜಸಾ ಯಜ್ಞಸ್ಯ ವಿರಿಷ್ಟಂ ಸಂದಧಾತಿ। ಭೇಷಜಕೃತಾ[1] ಉ ಹ ವಾ ಏಷ ಯಜ್ಞಃ। ರೋಗಾರ್ತ ಇವ ಪುಮಾನ್ ಚಿಕಿತ್ಸಕೇನ ಸುಶಿಕ್ಷಿತೇನ ಏಷ ಯಜ್ಞೋ ಭವತಿ। ಕೋಽಸೌ? ಯತ್ರ ಯಸ್ಮಿನ್ ಯಜ್ಞ ಏವಂವಿದ್ ಯಥೋಕ್ತವ್ಯಾಹೃತಿಹೋಮಪ್ರಾಯಶ್ಚಿತ್ತವಿತ್ ಬ್ರಹ್ಮಾ ಋತ್ವಿಕ್ ಭವತಿ ಸ ಯಜ್ಞಃ ಇತ್ಯರ್ಥಃ ॥

(ಭಾಷ್ಯಾರ್ಥ)

ಅದು ಹೇಗೆಂದರೆ (ಹೇಗೆ) ಉಪ್ಪಿನಿಂದ ಚಿನ್ನವನ್ನು ಕೂಡಿಸುತ್ತಾರೋ, (ಕಾಯಿಸಿ) ಉಪ್ಪಿಸಿಂದ ಟಂಕವನ್ನೇ ಮುಂತಾದದ್ದರಿಂದ (ಹೇಗೆ ಬೆಸೆಯುತ್ತಾರೋ ಎಂದರ್ಥ) ಗಟ್ಟಿಯಾದ (ಚಿನ್ನವನ್ನು) ಮೆದುಮಾಡುವದಕ್ಕಲ್ಲವೆ, ಅದು? ಕೂಡಿಸುವದಕ್ಕೆ ಆಗದೆ ಇರುವ ಬೆಳ್ಳಿಯನ್ನು ಚಿನ್ನದಿಂದ ಕೂಡಿಸುತ್ತಾರೋ, ಬೆಳ್ಳಿಯಿಂದ ತವರವನ್ನು, ತವರದಿಂದ ಸೀಸವನ್ನು, ಸೀಸದಿಂದ ಕಬ್ಬಿಣವನ್ನು, ಕಬ್ಬಿಣದಿಂದ ಕಟ್ಟಿಗೆಯನ್ನು, ಕಟ್ಟಿಗೆಯನ್ನು ಚರ್ಮದಿಂದ ಎಂದರೆ ತೊಗಲಿನಿಂದ ಬಿಗಿದು (ಹೇಗೆ ಸೇರಿಸುತ್ತಾರೋ) ಹಾಗೆಯೇ ಈ ಲೋಕಗಳ, ಈ ದೇವತೆಗಳ, ಈ ತ್ರಯೀವಿದ್ಯೆಯ ವೀರ್ಯದಿಂದ, ರಸವೆಂಬ ಶಕ್ತಿಯಿಂದ, ಯಜ್ಞದ ವಿಚ್ಛಿನ್ನತೆಯನ್ನು ಬ್ರಹ್ಮನು ಕೂಡಿಸುತ್ತಾನೆ. ಆ ಯಜ್ಞವು ಭೇಷಜಕೃತನಿಂದ (ಕೂಡಿದ್ದಾಗಿರುತ್ತದೆ). ಮತ್ತು ರೋಗದಿಂದ ನರಳುತ್ತಿರುವ ಪುರುಷನು, ಸುಶಿಕ್ಷಿತನಾಗಿರುವ ಚಿಕಿತ್ಸಕನಿಂದ ಕೂಡಿರುವಂತೆ ಈ ಯಜ್ಞವು ವೈದ್ಯನಿಂದ ಕೂಡಿದ್ದಾಗಿರುತ್ತದೆ[2]. ಯಾವ (ಯಜ್ಞ)ವದು? –ಎಂದರೆ ಎಲ್ಲಿ, ಯಾವ ಯಜ್ಞದಲ್ಲಿ, ಹೀಗೆಂದು ತಿಳಿದಿರುವ, ಮೇಲೆ ಹೇಳಿರುವ ವ್ಯಾಹೃತಿಹೋಮಗಳ ಪ್ರಾಯಶ್ಚಿತ್ತವನ್ನು ಅರಿತಿರುವ ಬ್ರಹ್ಮನು ಋತ್ವಿಜನಾಗಿರುವನೋ ಆ ಯಜ್ಞವು ಎಂದರ್ಥ.

(ಉಪನಿಷತ್ತು)

**ಏಷ ಹ ವಾ ಉದಕ್ಪ್ರವಣೋ ಯಜ್ಞೋ ಯತ್ರೈವಂವಿದ್ ಬ್ರಹ್ಮಾ ಭವತ್ಯೇವಂವಿದಗ್ಂ ಹ ವಾ ಏಷಾ ಬ್ರಹ್ಮಾಣಮನು ಗಾಥಾ ಯತೋ ಯತ ಆವರ್ತತೇ ತತ್ತದ್ಗಚ್ಛತಿ ॥ ೯ ॥**

---

1. 'ಭೇಷಜಕೃತಃ' ಎಂದು ಆ॥ ಟೀಕಾಪಾಠ, ಅನುವಾದದ ಟಿಪ್ಪಣಿಯನ್ನು ನೋಡಿ.

2. ಇದನ್ನು ತಿಳಿದ ಬ್ರಹ್ಮನು ಯಜ್ಞದ ದೋಷಕ್ಕೆ ಮದ್ದುಮಾಡುವ ವೈದ್ಯನಂತೆ ಇರುತ್ತಾನೆ ಎಂದರ್ಥ. 'ಚಿಕಿತ್ಸಕೇನ' ಎಂದು ಭಾಷ್ಯದಲ್ಲಿ ವ್ಯಾಖ್ಯಾನಮಾಡಿರುವದರಿಂದ ಭೇಷಜಕೃತಾ ಎಂಬ ಪಾಠವೇ ಸರಿಯೆಂದು ಹೇಳಬೇಕಾಗಿದೆ.

**ಮಾನವೋ ಬ್ರಹ್ಮೈವೈಕ ಋತ್ವಿಕ್ಕುರೂನಶ್ವಾಭಿರಕ್ಷತ್ಯೇವಂ ವಿದ್ಧ ವೈ ಬ್ರಹ್ಮಾ ಯಜ್ಞಂ ಯಜಮಾನಗ್ಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ತಸ್ಮಾದೇವಂವಿದಮೇವ ಬ್ರಹ್ಮಾಣಂ ಕುರ್ವೀತ ನಾನೇವಂವಿದಂ ನಾನೇವಂವಿದಮ್ ॥ ೧೦ ॥**

೯. ಎಲ್ಲಿ ಹೀಗೆಂದರಿತ ಬ್ರಹ್ಮನಿರುತ್ತಾನೋ ಅದೇ ಉದಕ್ಪ್ರವಣವಾದ ಯಜ್ಞವು. ಇದು ಬ್ರಹ್ಮನನ್ನು ಕುರಿತ ಅನುಗಾಥೆಯು : "ಎತ್ತೆತ್ತಲಿಂದ ಹಿಂತಿರುಗುವದೋ ಅತ್ತತ್ತ ಹೋಗುತ್ತಿರುವನು."

೧೦. ಮಾನವನಾದ ಬ್ರಹ್ಮನೆಂಬ ಋತ್ವಿಜನೊಬ್ಬನೇ ಕುರುಗಳನ್ನು ಹೆಣ್ಣು ಕುದುರೆಯು ರಕ್ಷಿಸುತ್ತದೆಯಲ್ಲ, ಹಾಗೆ- ಹೀಗೆಂದು ತಿಳಿದಿರುವ ಬ್ರಹ್ಮನು ಯಜ್ಞವನ್ನೂ ಯಜಮಾನನನ್ನೂ ಎಲ್ಲಾ ಋತ್ವಿಜರನ್ನೂ ಕಾಪಾಡುತ್ತಾನೆ. ಆದ್ದರಿಂದ ಹೀಗೆಂದು ಬಲ್ಲವನನ್ನೇ ಬ್ರಹ್ಮನನ್ನು ಮಾಡಿಕೊಳ್ಳಬೇಕು, ಹೀಗೆಂದು ತಿಳಿಯದಿರುವವನನ್ನಲ್ಲ, ಹೀಗೆಂದು ತಿಳಿಯದಿರುವವನನ್ನಲ್ಲ.

## ತಿಳಿದ ಬ್ರಹ್ಮನ ಸ್ತುತಿ

(ಭಾಷ್ಯ)

೩೫೪. ಕಿಂ ಚ ಏಷ ಹ ವಾ ಉದಕ್ಪ್ರವಣ ಉದಙ್ನಿಮ್ನೋ ದಕ್ಷಿಣೋಚ್ಛ್ರಾಯೋ ಯಜ್ಞೋ ಭವತಿ । ಉತ್ತರಮಾರ್ಗಪ್ರತಿಪತ್ತಿಹೇತುರಿತ್ಯರ್ಥಃ । ಯತ್ರೈವಂವಿದ್ ಬ್ರಹ್ಮಾ ಭವತಿ। ಏವಂವಿದಂ ಹ ವೈ ಬ್ರಹ್ಮಾಣಮ್ ಋತ್ವಿಜಂ ಪ್ರತಿ ಏಷಾ ಅನುಗಾಥಾ ಬ್ರಹ್ಮಣಃ ಸ್ತುತಿಪರಾ। ಯತೋ ಯತ ಆವರ್ತತೇ ಕರ್ಮಪ್ರದೇಶಾತ್ ಋತ್ವಿಜಾಂ ಯಜ್ಞಃ ಕ್ಷತೀಭವನ್ ತತ್ತದ್ಯಜ್ಞಸ್ಯ ಕ್ಷತರೂಪಂ ಪ್ರತಿಸಂದಧತ್ ಪ್ರಾಯಶ್ಚಿತ್ತೇನ ಗಚ್ಛತಿ। ಪರಿಪಾಲಯತೀತ್ಯೇತತ್ ॥

(ಭಾಷ್ಯಾರ್ಥ)

ಮತ್ತು ಎಲ್ಲಿ ಹೀಗೆಂದು ತಿಳಿದಿರುವವನು ಬ್ರಹ್ಮನಾಗಿರುತ್ತಾನೋ ಅದೇ ಉದಕ್ಪ್ರವಣವಾದ ಉತ್ತರದ ಕಡೆಗೆ ಇಳಿಜಾರಾಗಿರುವ, ದಕ್ಷಿಣದ ಕಡೆಗೆ ತಿಟ್ಟಾಗಿರುವ ಯಜ್ಞವಾಗಿರುತ್ತದೆ. ಅದೇ ಉತ್ತರಮಾರ್ಗಕ್ಕೆ ಕಾರಣವಾಗಿರುತ್ತದೆ ಎಂದರ್ಥ. ಹೀಗೆಂದರಿತಿರುವ ಬ್ರಹ್ಮನೆಂಬ ಋತ್ವಿಜನನ್ನು ಕುರಿತು, ಬ್ರಹ್ಮನನ್ನು ಹೊಗಳುವದರಲ್ಲಿ ತಾತ್ಪರ್ಯವುಳ್ಳ ಈ ಅನುಗಾಥೆ(ಯಿರುತ್ತದೆ). "ಎತ್ತೆತ್ತಲಿಂದ (ಯಾವಯಾವ) ಋತ್ವಿಜರ ಕರ್ಮಪ್ರದೇಶದಿಂದ ಯಜ್ಞವು

ಕ್ಷತವಾಗಿ ಹಿಂತಿರುಗುತ್ತದೆಯೋ ಅತ್ತತ್ತ ಯಜ್ಞದ ಕ್ಷತರೂಪವನ್ನು ಪ್ರಾಯಶ್ಚಿತ್ತ ದಿಂದ ಮಾಡಿಸುತ್ತಾ (ಇವನು) ಹೋಗುತ್ತಿರುವನು, ಕಾಪಾಡುತ್ತಾನೆ ಎಂದು ಅಭಿಪ್ರಾಯ.

## ತಿಳಿದ ಬ್ರಹ್ಮನನ್ನೇ ಮಾಡಿಕೊಳ್ಳಬೇಕು

(ಭಾಷ್ಯ)

೩೫೫. ಮಾನವೋ ಬ್ರಹ್ಮಾ ಮೌನಾಚರಣಾತ್, ಮನನಾದ್ ವಾ, ಜ್ಞಾನವತ್ತ್ವಾತ್। ತತೋ ಬ್ರಹ್ಮೈವೈಕಃ ಋತ್ವಿಕ್ ಕುರೂನ್ ಕರ್ತ್ರ್ಯಾನ್, ಯೋದ್ಧೄನಾರೂಢಾನ್ ಅಶ್ವಾ ವಡವಾ ಯಥಾ ಅಭಿರಕ್ಷತಿ, ಏವಂವಿತ್ ಹ ವೈ ಬ್ರಹ್ಮಾ ಯಜ್ಞಂ ಯಜಮಾನಂ ಸರ್ವಾಂಶ್ಚ ಋತ್ವಿಜೋಽಭಿರಕ್ಷತಿ। ತತ್ಕೃತ ದೋಷಾಪನಯನಾತ್। ಯತ ಏವಂ ವಿಶಿಷ್ಟೋ ಬ್ರಹ್ಮಾ ವಿದ್ವಾನ್ ತಸ್ಮಾತ್ ಏವಂವಿದಮೇವ ಯಥೋಕ್ತವ್ಯಾಹೃತ್ಯಾದಿವಿದಂ ಬ್ರಹ್ಮಾಣಂ ಕುರ್ವೀತ, ನಾನೇವಂವಿದಂ ಕದಾಚನೇತಿ। ದ್ವಿರಭ್ಯಾಸೋಽಧ್ಯಾಯಪರಿಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಬ್ರಹ್ಮನು ಮಾನವನು, ಮೌನವನ್ನು ಆಚರಣೆಮಾಡುವದರಿಂದ ಅಥವಾ ಮನನಮಾಡುತ್ತಿರುವದರಿಂದ (ಸರಿಯಾದ) ಜ್ಞಾನವುಳ್ಳವನಾದ್ದರಿಂದ (ಮಾನ ವನು). ಆದ್ದರಿಂದ ಬ್ರಹ್ಮನೆಂಬ ಋತ್ವಿಜನೊಬ್ಬನೇ ಕುರುಗಳನ್ನು ಎಂದರೆ ಕರ್ತೃಗಳಾದವರನ್ನು—(ತನ್ನ) ಮೇಲೇರಿರುವ ಯೋಧರನ್ನು (ಅಶ್ವಾ=ವಡವಾ) ಹೆಣ್ಣುಕುದುರೆಯು ಹೇಗೆ ಕಾಪಾಡುತ್ತದೆಯೋ (ಹಾಗೆ) ಹೀಗೆಂದು ಬಲ್ಲ ಬ್ರಹ್ಮನೇ ಯಜ್ಞವನ್ನೂ ಯಜಮಾನನನ್ನೂ ಎಲ್ಲಾ ಋತ್ವಿಜರನ್ನೂ ಅವರು ಮಾಡಿದ ದೋಷ ಗಳನ್ನೂ ಹೋಗಲಾಡಿಸಿ ಕಾಪಾಡುತ್ತಾನೆ. ತಿಳಿದ ಬ್ರಹ್ಮನು ಇಂಥವನಲ್ಲವೆ, ಆದ್ದರಿಂದ ಹೀಗೆಂದು ತಿಳಿದಿರುವವನನ್ನೇ ಎಂದರೆ ಹಿಂದೆ ಹೇಳಿರುವ ವ್ಯಾಹೃತ್ಯಾದಿ ಗಳನ್ನು ಬಲ್ಲವನನ್ನೇ ಬ್ರಹ್ಮನನ್ನು ಮಾಡಿಕೊಳ್ಳಬೇಕು. ಹೀಗೆಂದು ತಿಳಿಯು ದಿರುವವನನ್ನು ಎಂದಿಗೂ (ಮಾಡಿಕೊಳ್ಳ)ಬಾರದು. (ನಾನೇವಂವಿದಮ್ ಎಂದು) ಎರಡು ಸಲ ಮತ್ತೆ ಹೇಳಿರುವದು ಅಧ್ಯಾಯದ ಪರಿಸಮಾಪ್ತಿಯನ್ನು (ತಿಳಿಸು) ವದಕ್ಕಾಗಿ.

---

# ಹದಿನಾರು-ಹದಿನೇಳನೆಯ ಖಂಡಗಳ ಸಾರ

**ಈ ಖಂಡಗಳಲ್ಲಿ ಪ್ರಾಸಂಗಿಕವಾಗಿ ಕೆಲವು ಯಜ್ಞಧರ್ಮಗಳನ್ನು ವಿಧಿಸಿದೆ.**

## ಹದಿನಾರನೆಯ ಖಂಡ

ಯಜ್ಞವೆಂಬುದು ಈ ವಾಯುವೇ, ಏಕೆಂದರೆ ಇದು ಬೀಸುತ್ತಿರುವಾಗ ಎಲ್ಲವನ್ನೂ ಶುದ್ಧಿಗೊಳಿಸುತ್ತದೆ –ಎಂದು ವಾಯುದೃಷ್ಟಿಯಿಂದ ಯಜ್ಞವನ್ನು ನೋಡಬೇಕು. ಈ ಯಜ್ಞಕ್ಕೆ ವಾಕ್ಕು, ಮನಸ್ಸು– ಎಂದು ಎರಡು ಮಾರ್ಗಗಳಿವೆ. ಈ ಮಾರ್ಗಗಳಿಂದಲೇ ಯಜ್ಞವು ಮುಂದಕ್ಕೆ ಸಾಗುತ್ತದೆ. ಬ್ರಹ್ಮನೆಂಬ ಋತ್ವಿಜನು ಮೌನಾಚರಣೆಯಿಂದಲೂ ಹೋತೃ, ಅಧ್ವರ್ಯು, ಉದ್ಗಾತೃ- ಇವರು ಮಂತ್ರೋಚ್ಚಾರಣೆಯಿಂದಲೂ ಈ ಮಾರ್ಗಗಳಿಗೆ ಸಂಸ್ಕಾರವನ್ನುಂಟುಮಾಡುತ್ತಾರೆ ಈ ಎರಡರಲ್ಲಿ ಯಾವ ಸಂಸ್ಕಾರವು ತಪ್ಪಿದರೂ ಯಜ್ಞವು ಕೆಟ್ಟುಹೋಗುತ್ತದೆ, ಯಜಮಾನನಿಗೆ ಫಲವಾಗುವದಿಲ್ಲ.

ಬ್ರಹ್ಮನು ಪ್ರಾತರನುವಾಕದಿಂದ ಹಿಡಿದು ಪರಿಧಾನೀಯಋಕ್ಕುಗಳನ್ನು ಹೇಳುವವರೆಗೂ ಮೌನದಿಂದಿರಬೇಕು. ಹಾಗಿದ್ದರೆ ಮನೋಮಾರ್ಗವು ಸಂಸ್ಕೃತವಾಗುತ್ತದೆ, ಇಲ್ಲದಿದ್ದರೆ ಇಲ್ಲ.

## ಹದಿನೇಳನೆಯ ಖಂಡ

ಪ್ರಜಾಪತಿಯು ಚೆನ್ನಾಗಿ ಧ್ಯಾನಮಾಡಿ ಲೋಕಗಳ ಸಾರವು ಅಗ್ನಿ, ವಾಯು, ಆದಿತ್ಯ– ಈ ದೇವತೆಗಳೆಂದೂ, ಈ ದೇವತೆಗಳ ಸಾರವು ಋಗ್ಯಜುಃಸಾಮಗಳೆಂದೂ, ಅವುಗಳ ಸಾರವು ಭೂರ್ಭುವಃಸ್ವರೆಂಬ ವ್ಯಾಹೃತಿಗಳೆಂದೂ ಕಂಡುಹಿಡಿದನು.

ಆದ್ದರಿಂದ ಋಕ್ಕಿನಿಂದ ಆದ ಕೊರತೆಯನ್ನು 'ಭೂಃ ಸ್ವಾಹಾ' ಎಂದು ಗಾರ್ಹಪತ್ಯದಲ್ಲಿ ಹೋಮಮಾಡುವದರಿಂದಲೂ ಯಜುಸ್ಸುಗಳಿಂದಾದ ಕೊರತೆಯನ್ನು 'ಭುವಃ ಸ್ವಾಹಾ' ಎಂದು ದಕ್ಷಿಣಾಗ್ನಿಯಲ್ಲಿ ಹೋಮಮಾಡುವದರಿಂದಲೂ ಸಾಮದಿಂದಾದ ಕೊರತೆಯನ್ನು 'ಸ್ವಃ ಸ್ವಾಹಾ' ಎಂದು ಆಹವನೀಯದಲ್ಲಿ ಹೋಮಮಾಡುವದರಿಂದಲೂ ಬ್ರಹ್ಮನು ಸರಿಪಡಿಸಿಕೊಳ್ಳಬೇಕು.

ಕ್ಷಾರ, ಚಿನ್ನ, ಬೆಳ್ಳಿ, ತವರ, ಸೀಸ, ಕಬ್ಬಿಣ, ಕಟ್ಟಿಗೆ, ಚರ್ಮ– ಇವುಗಳನ್ನು ಒಂದರ ಕ್ಕೊಂದನ್ನು ಕೂಡಿಸುವ ಜಾಣನಂತೆ ಬ್ರಹ್ಮನು ಈ ಲೋಕದೇವತಾತ್ರಯೀವಿದ್ಯೆಗಳ ವೀರ್ಯ ದಿಂದ ಯಜ್ಞದ ಕೊರತೆಯನ್ನು ಹೋಗಲಾಡಿಸುವನು.

ಹೀಗೆ ಮೌನಪ್ರಾಯಶ್ಚಿತ್ತಗಳನ್ನು ಅರಿತಿರುವ ಬ್ರಹ್ಮನು ಋತ್ವಿಜನಾಗಿರುವ ಯಜ್ಞವು ಉತ್ತರಾಯಣಗತಿಗೆ ಕಾರಣವಾಗುವದು. ಜಾತಿಯ ಹೆಣ್ಣುಕುದುರೆಯು ಯೋಧರನ್ನು ರಕ್ಷಿಸುವಂತೆ ಈ ವಿದ್ಯೆಯನ್ನು ಬಲ್ಲ ಬ್ರಹ್ಮನೇ ಯಜ್ಞ, ಯಜಮಾನ, ಋತ್ವಿಜರು– ಎಲ್ಲರನ್ನೂ ಕಾಪಾಡುತ್ತಾನೆ. ಆದ್ದರಿಂದ ಇಂಥ ಬಲ್ಲ ಬ್ರಹ್ಮನೇ ಋತ್ವಿಜನಾಗಿರುವಂತೆ ಯಜಮಾನನು ನೋಡಿಕೊಳ್ಳಬೇಕು.

# ಐದನೆಯ ಅಧ್ಯಾಯ - ಒಂದನೆಯ ಖಂಡ

## (ಪ್ರಾಣವಿದ್ಯೆ)

## ಅಧ್ಯಾಯದ ಸಂಬಂಧ

(ಭಾಷ್ಯ)

೩೫೭. ಸಗುಣಬ್ರಹ್ಮವಿದ್ಯಾಯಾ ಉತ್ತರಾ ಗತಿರುಕ್ತಾ । ಅಥೇದಾನೀಂ ಪಞ್ಚಮೇಽಧ್ಯಾಯೇ ಪಞ್ಚಾಗ್ನಿವಿದೋ ಗೃಹಸ್ಥಸ್ಯೋರ್ಧ್ವರೇತಸಾಂ ಚ ಶ್ರದ್ಧಾಲೂನಾಂ ವಿದ್ಯಾನ್ತರಶೀಲಿನಾಂ ತಾಮೇವ ಗತಿಮನೂದ್ಯ ಅನ್ಯಾ ದಕ್ಷಿಣದಿಕ್ಸಂಬನ್ಧಿನೀ ಕೇವಲಕರ್ಮಿಣಾಂ ಧೂಮಾದಿಲಕ್ಷಣಾ ಪುನರಾವೃತ್ತಿರೂಪಾ ತೃತೀಯಾ ಚ ತತಃ ಕಷ್ಟತರಾ ಸಂಸಾರಗತಿರ್ವೈರಾಗ್ಯಹೇತೋರ್ವಕ್ತವ್ಯಾ ಇತ್ಯಾರಭ್ಯತೇ ॥

(ಭಾಷ್ಯಾರ್ಥ)

ಸಗುಣಬ್ರಹ್ಮದ ವಿದ್ಯೆಗೆ ಉತ್ತರಗತಿಯನ್ನು ಹೇಳಿದ್ದಾಯಿತು. ಇನ್ನು ಈಗ ಐದನೆಯ ಅಧ್ಯಾಯದಲ್ಲಿ ಪಂಚಾಗ್ನಿಗಳನ್ನು ಬಲ್ಲ (ಉಪಾಸಕನಾದ) ಗೃಹಸ್ಥನಿಗೂ ಶ್ರದ್ಧಾಳುಗಳಾಗಿ ಬೇರೆಯ ವಿದ್ಯೆಯನ್ನು ಅನುಷ್ಠಿಸುವ ಊರ್ಧ್ವರೇತಸ್ಕರಿಗೂ ಅದೇ ಗತಿಯನ್ನು ಅನುವಾದಮಾಡಿಕೊಂಡು, ಕೇವಲಕರ್ಮಿಗಳಿಗೆ ದಕ್ಷಿಣದಿಕ್ಕಿಗೆ ಸಂಬಂಧಪಟ್ಟದ್ದೂ ಪುನರಾವೃತ್ತಿರೂಪವಾಗಿರುವದೂ ಆದ ಧೂಮಾದಿಲಕ್ಷಣವಾದ ಬೇರೊಂದು ಗತಿಯನ್ನೂ, ಅದಕ್ಕಿಂತಲೂ ಕಷ್ಟತರವಾದ ಮೂರನೆಯ ಸಂಸಾರಗತಿಯನ್ನೂ ವೈರಾಗ್ಯವುಂಟಾಗಲೆಂಬ ಕಾರಣದಿಂದ[1] ಹೇಳಬೇಕೆಂದು (ಈ ಅಧ್ಯಾಯವನ್ನು) ಆರಂಭಿಸಿರುತ್ತದೆ.

## ಪ್ರಾಣದಲ್ಲಿರುವ ಶ್ರೇಷ್ಠತ್ವಾದಿಗುಣಗಳು

(ಉಪನಿಷತ್ತು)

**ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಹ ವೈ ಶ್ರೇಷ್ಠಶ್ಚ ಭವತಿ ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ ॥೧॥**

---

1. ಉತ್ತರಾಯಣಮಾರ್ಗದಿಂದ ಹೋದವರಿಗೆ ಪುನರಾವೃತ್ತಿಯಿಲ್ಲವೆಂದು ಹೇಳಿ ಈ ಗತಿಗಳನ್ನು ಹೇಳಿರುವದರಿಂದ ಸ್ವೇಚ್ಛಾಪ್ರವೃತ್ತಿಯನ್ನು ಬಿಟ್ಟು, ಸಾಮಾನ್ಯಕರ್ಮವನ್ನು ಮೀರಿ ಉಪಾಸನಾಮಾರ್ಗದಿಂದ ಉತ್ತರಾಯಣಗತಿಯನ್ನೇ ಪಡೆಯಬೇಕೆಂದು ಮಿಕ್ಕ ಪ್ರವೃತ್ತಿಗಳಲ್ಲಿ ವೈರಾಗ್ಯವುಂಟಾಗುತ್ತದೆ. ಈ ವೈರಾಗ್ಯವು ಜ್ಞಾನಕ್ಕೂ ಕಾರಣವಾಗುತ್ತದೆ ಎಂದು ಭಾವ.

೧. ಯಾವನು ಜ್ಯೇಷ್ಠವೂ ಶ್ರೇಷ್ಠವೂ (ಆಗಿರುವದನ್ನು) ಅರಿತಿರುವನೋ (ಅವನು) ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿದೆ.

## ಪ್ರಾಣವಿದ್ಯೆಯ ಸಂಬಂಧ

(ಭಾಷ್ಯ)

೩೫೭. 'ಪ್ರಾಣಃ ಶ್ರೇಷ್ಠೋ ವಾಗಾದಿಭ್ಯಃ' (೧-೨), 'ಪ್ರಾಣೋ ವಾವ ಸಂವರ್ಗಃ' (೪-೩-೩) ಇತ್ಯಾದಿ ಚ ಬಹುಶೋಽತೀತೇ ಗ್ರನ್ಥೇ ಪ್ರಾಣಗ್ರಹಣಂ ಕೃತಮ್। ಸ ಕಥಂ ಶ್ರೇಷ್ಠೋ ವಾಗಾದಿಷು ಸರ್ವೈಃ ಸಂಹತ್ಯಕಾರಿತ್ವಾವಿಶೇಷೇ? ಕಥಂ ಚ ತಸ್ಯೋಪಾಸನಮ್ ? ಇತಿ ತಸ್ಯ ಶ್ರೇಷ್ಠತ್ವಾದಿಗುಣವಿಧಿತ್ಸಯಾ ಇದಮನನ್ತರಮ್ ಆರಭ್ಯತೇ ॥

(ಭಾಷ್ಯಾರ್ಥ)

'ಪ್ರಾಣವು ವಾಗಾದಿಗಳಿಗಿಂತ ಶ್ರೇಷ್ಠವಾದದ್ದು' (೧-೨ರ ಅರ್ಥ), 'ಪ್ರಾಣವೇ ಸಂವರ್ಗವು' (೪-೩-೩) -ಎಂದುಮುಂತಾಗಿ ಬಹಳವಾಗಿ ಹಿಂದಿನ ಗ್ರಂಥದಲ್ಲಿ ಪ್ರಾಣವನ್ನು ತೆಗೆದುಕೊಂಡು ಹೇಳಿದ್ದಾಗಿದೆ ಎಲ್ಲವುಗಳೊಡನೆ ಕೂಡಿಕೊಂಡೇ ವ್ಯಾಪಾರಮಾಡುವದೆಂಬುದು ಸಮಾನವಾಗಿರುವಲ್ಲಿ[1] ವಾಗಾದಿಗಳಲ್ಲಿ ಅದೇ ಶ್ರೇಷ್ಠವೆಂಬುದು ಹೇಗೆ? ಅದರ ಉಪಾಸನೆಯಾದರೂ ಹೇಗೆ?- ಎಂದರೆ ಅದರ ಶ್ರೇಷ್ಠತ್ವಾದಿಗುಣಗಳನ್ನು ವಿಧಾನಮಾಡುವದಕ್ಕಾಗಿ (ಈ) ಮುಂದಿನ ಗ್ರಂಥವನ್ನು ಆರಂಭಿಸಿದೆ.

## ಪ್ರಾಣವು ಜ್ಯೇಷ್ಠ, ಶ್ರೇಷ್ಠ

(ಭಾಷ್ಯ)

೩೫೮. ಯೋ ಹ ವೈ ಕಶ್ಚಿತ್ ಜ್ಯೇಷ್ಠಂ ಚ ಪ್ರಥಮಂ ವಯಸಾ ಶ್ರೇಷ್ಠಂ ಚ ಗುಣೈರಭ್ಯಧಿಕಂ ವೇದ ಸ ಜ್ಯೇಷ್ಠಶ್ಚ ಹ ವೈ ಶ್ರೇಷ್ಠಶ್ಚ ಭವತಿ। ಫಲೇನ ಪುರುಷಂ ಪ್ರಲೋಭ್ಯ ಅಭಿಮುಖೀಕೃತ್ಯ ಆಹ। ಪ್ರಾಣೋ ವಾವ ಜ್ಯೇಷ್ಠಶ್ಚ ವಯಸಾ ವಾಗಾದಿಭ್ಯಃ। ಗರ್ಭಸ್ಥೇ ಹಿ ಪುರುಷೇ ಪ್ರಾಣಸ್ಯ ವೃತ್ತಿರ್ವಾಗಾದಿಭ್ಯಃ ಪೂರ್ವಂ ಲಬ್ಧಾತ್ಮಿಕಾ ಭವತಿ ಯಯಾ ಗರ್ಭೋ ವಿವರ್ಧತೇ। ಚಕ್ಷುರಾದಿಸ್ಥಾನಾವಯವನಿಷ್ಪತ್ತೌ ಸತ್ಯಾಂ ಪಶ್ಚಾತ್ ವಾಗಾದೀನಾಂ ವೃತ್ತಿಲಾಭಃ ಇತಿ ಪ್ರಾಣೋ ಜ್ಯೇಷ್ಠೋ ವಯಸಾ ಭವತಿ। ಶ್ರೇಷ್ಠತ್ವಂ ತು ಪ್ರತಿಪಾದಯಿಷ್ಯತಿ ಸುಹಯ ಇತ್ಯಾದಿನಿದರ್ಶನೇನ। ಅತಃ ಪ್ರಾಣ ಏವ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಅಸ್ಮಿನ್ ಕಾರ್ಯಕರಣಸಂಘಾತೇ ॥

---

1. ವಾಗಾದಿಗಳಂತೆ ಮುಖ್ಯಪ್ರಾಣವೂ ಮಿಕ್ಕ ಪ್ರಾಣಗಳೊಡನೆ ಸೇರಿಕೊಂಡೇ ಜೀವನಿಗಾಗಿ ಕೆಲಸಮಾಡುತ್ತಿರುವಲ್ಲಿ ಎಂದರ್ಥ.

(ಭಾಷ್ಯಾರ್ಥ)

ಯಾವನೇ ಆಗಲಿ ಯಾವನು ಜ್ಯೇಷ್ಠವಾದದ್ದನ್ನು ವಯಸ್ಸಿನಿಂದ ಹಿರಿಯದಾಗಿರುವದನ್ನು ಶ್ರೇಷ್ಠವಾದದ್ದನ್ನು ಗುಣಗಳಿಂದ ಹೆಚ್ಚಿನದಾಗಿರುವದನ್ನು ಅರಿತುಕೊಳ್ಳುತ್ತಾನೋ ಅವನು ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ. ಫಲದಿಂದ (ಹೀಗೆ) ಪ್ರಲೋಭನೆಮಾಡಿ ಪುರುಷನನ್ನು (ತನ್ನ) ಕಡೆಗೆ ತಿರುಗಿಸಿಕೊಂಡು (ಶ್ರುತಿ) ಹೇಳುತ್ತದೆ. ಪ್ರಾಣನೇ ವಾಗಾದಿಗಳಿಗಿಂತ ವಯಸ್ಸಿನಿಂದ ಹಿರಿಯನು, ಪುರುಷನು ಗರ್ಭವಲ್ಲಿರುವಾಗಲೇ ವಾಗಾದಿಗಳಿಗಿಂತ ಮೊದಲೇ ಪ್ರಾಣದ ವೃತ್ತಿಯು ಉಂಟಾಗುತ್ತದೆ, ಅದರಿಂದ ಗರ್ಭವು ಬೆಳೆಯುತ್ತದೆ. ಚಕ್ಷುರಾದಿಗಳ ಸ್ಥಾನವಾದ ಅವಯವಗಳು ಉಂಟಾಗಲು ಆಮೇಲೆ ವಾಗಾದಿಗಳಿಗೆ ವೃತ್ತಿಯು ಲಭಿಸುತ್ತದೆಯಾದ್ದರಿಂದ ಪ್ರಾಣವು ವಯಸ್ಸಿನಿಂದ ಹಿರಿಯದಾಗಿರುತ್ತದೆ. (ಇದು) ಶ್ರೇಷ್ಠವೆಂಬುದನ್ನಾದರೋ 'ಸುಹಯವು' ಮುಂತಾದ ದೃಷ್ಟಾಂತದಿಂದ ಮುಂದೆ (೧೨ರಲ್ಲಿ) ತಿಳಿಸಲಾಗುವದು. ಆದ್ದರಿಂದ ಈ ಕಾರ್ಯಕರಣಸಂಘಾತದಲ್ಲಿ ಪ್ರಾಣವೇ ಜ್ಯೇಷ್ಠವು, ಶ್ರೇಷ್ಠವು

(ಉಪನಿಷತ್ತು)

**ಯೋ ಹ ವೈ ವಸಿಷ್ಠಂ ವೇದ ವಸಿಷ್ಠೋ ಹ ಸ್ವಾನಾಂ ಭವತಿ ವಾಗ್ವಾವ ವಸಿಷ್ಠಃ ॥ ೨ ॥**

೨. ಯಾವನು ವಸಿಷ್ಠವನ್ನು ಅರಿತುಕೊಂಡಿರುವನೋ ಅವನು ತಮ್ಮವರಲ್ಲಿ ವಸಿಷ್ಠನಾಗುವನು. ವಾಕ್ಕೇ ವಸಿಷ್ಠವು.

## ವಾಕ್ಕು ವಸಿಷ್ಠ

(ಭಾಷ್ಯ)

೩೮೫. ಯೋ ಹ ವೈ ವಸಿಷ್ಠಂ ವಸಿತೃತಮಮ್ ಆಚ್ಛಾದಯಿತೃತಮಂ ವಸುಮತ್ತಮಮ್ ವಾ ಯೋ ವೇದ ಸ ತಥೈವ ವಸಿಷ್ಠೋ ಹ ಭವತಿ ಸ್ವಾನಾಂ ಜ್ಞಾತೀನಾಮ್। ಕಸ್ತರ್ಹಿ ವಸಿಷ್ಠ ಇತಿ ? ಆಹ। ವಾಗ್ವಾವ ವಸಿಷ್ಠಃ। ವಾಗ್ಮಿನೋ ಹಿ ಪುರುಷಾಃ ವಸನ್ತಿ ಅಭಿಭವನ್ತಿ ಅನ್ಯಾನ್ ವಸುಮತ್ತಮಶ್ಚ। ಅತೋ ವಾಗ್ ವಸಿಷ್ಠಃ ॥

(ಭಾಷ್ಯಾರ್ಥ)

ಯಾವನು ವಸಿಷ್ಠವನ್ನು ಎಲ್ಲಕ್ಕೂ ಹೆಚ್ಚಿನ ವಸಿತೃವನ್ನು– ಮುಚ್ಚುವದನ್ನು, ಅಥವಾ ವಸುಮತ್ತಮವಾದದ್ದನ್ನು[1] ಯಾವನು ಅರಿತಿರುವನೋ ಅವನೂ

1. ಹೆಚ್ಚಿನ ಧನವುಳ್ಳದ್ದನ್ನು.

ಹಾಗೆಯೇ ತಮ್ಮವರೊಳಗೆ ಜ್ಞಾತಿಗಳೊಳಗೆ ವಸಿಷ್ಠನಾಗುತ್ತಾನೆ. ಹಾಗಾದರೆ ವಸಿಷ್ಠವು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. ವಾಕ್ಕೇ ವಸಿಷ್ಠವು. ವಾಗ್ಮಿಗಳಾದ ಪುರುಷರು ಉಳಿದ ಜನರನ್ನು (ವಸನ್ತಿ= ಅಭಿಭವನ್ತಿ) ಮುಚ್ಚಿಹಾಕುತ್ತಾರಲ್ಲವೆ ? ವಸುಮತ್ತರೂ ಆಗಿರುತ್ತಾರಲ್ಲವೆ ? ಆದ್ದರಿಂದ ವಾಕ್ಕು ವಸಿಷ್ಠವು.

(ಉಪನಿಷತ್ತು)

**ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತ್ಯಸ್ಮಿꣳಶ್ಚ ಲೋಕೇಽಮುಷ್ಮಿꣳಶ್ಚ ಚಕ್ಷುರ್ವಾವ ಪ್ರತಿಷ್ಠಾ ॥ ೩ ॥**

೩. ಯಾವನು ಪ್ರತಿಷ್ಠೆಯನ್ನು ಅರಿತಿರುವನೋ (ಅವನು) ಈ ಲೋಕದಲ್ಲಿಯೂ ಆ (ಲೋಕ)ದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ. ಚಕ್ಷುಸ್ಸೇ ಪ್ರತಿಷ್ಠೆ.

ಚಕ್ಷುಸ್ಸು ಪ್ರತಿಷ್ಠೆ

(ಭಾಷ್ಯ)

೩೬೦. ಯೋ ಹ ವೈ ಪ್ರತಿಷ್ಠಾಂ ವೇದ ಸ ಅಸ್ಮಿನ್ ಲೋಕೇ ಅಮುಷ್ಮಿꣳಶ್ಚ ಪರೇ ಪ್ರತಿತಿಷ್ಠತಿ ಹ । ಕಾ ತರ್ಹಿ ಪ್ರತಿಷ್ಠೇತಿ ? ಆಹ । 'ಚಕ್ಷುರ್ವಾವ ಪ್ರತಿಷ್ಠಾ । ಚಕ್ಷುಷಾ ಹಿ ಪಶ್ಯನ್ ಸಮೇ ಚ ದುರ್ಗೇ ಚ ಪ್ರತಿತಿಷ್ಠತಿ ಯಸ್ಮಾತ್, ಅತಃ ಪ್ರತಿಷ್ಠಾ ಚಕ್ಷುಃ ॥

(ಭಾಷ್ಯಾರ್ಥ)

ಯಾವನು ಪ್ರತಿಷ್ಠೆಯನ್ನು ಅರಿತಿರುವನೋ ಅವನು ಈ ಲೋಕದಲ್ಲಿಯೂ ಆ ಪರ(ಲೋಕ)ದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ. ಹಾಗಾದರೆ ಪ್ರತಿಷ್ಠೆ ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. ಚಕ್ಷುಸ್ಸೇ ಪ್ರತಿಷ್ಠೆ. ಚಕ್ಷುಸ್ಸಿನಿಂದ ಸಮ(ದೇಶಕಾಲ)ಗಳಲ್ಲಿಯೂ, ದುರ್ಗ(ಮವಾದ ದೇಶಕಾಲ)ಗಳಲ್ಲಿಯೂ ಕಂಡು ಪ್ರತಿಷ್ಠಿತನಾಗಿರುತ್ತಾನಲ್ಲವೆ[1] ? ಆದ್ದರಿಂದ ಚಕ್ಷುಸ್ಸು ಪ್ರತಿಷ್ಠೆ.

(ಉಪನಿಷತ್ತು)

**ಯೋ ಹ ವೈ ಸಂಪದಂ ವೇದ ಸꣳ ಹಾಸ್ಮೈ ಕಾಮಾಃ ಪದ್ಯನ್ತೇ ದೈವಾಶ್ಚ ಮಾನುಷಾಶ್ಚ ಶ್ರೋತ್ರಂ ವಾವ ಸಂಪತ್ ॥**

೪. ಯಾವನು ಸಂಪತ್ತನ್ನು ಅರಿತಿರುವನೋ (ಅವನಿಗೆ ದೈವಕಾಮಗಳೂ ಮಾನುಷಕಾಮಗಳೂ) ಉಂಟಾಗುತ್ತವೆ. ಶ್ರೋತ್ರವೇ ಸಂಪತ್ತು.

1. ಬೃ. ಭಾ. ೬-೧-೩ನ್ನೂ ಆದರ ಭಾಷ್ಯವನ್ನೂ (ಭಾ.ಭಾ. ೪೧೧) ನೋಡಿ. ಪ್ರಾಣಸಂವಾದವನ್ನು ಈ ಎರಡು ಉಪನಿಷತ್ತುಗಳಲ್ಲಿ ಹೇಳಿರುವ ಬಗೆಯನ್ನು ಸಂಪೂರ್ಣವಾಗಿ ಹೋಲಿಸುವುದು ಅವಶ್ಯ.

## ಶ್ರೋತ್ರವು ಸಂಪತ್ತು

(ಭಾಷ್ಯ)

೩೬೧. ಯೋ ಹ ವೈ ಸಂಪದಂ ವೇದ ತಸ್ಮೈ ಅಸ್ಮೈ ದೈವಾಶ್ಚ ಮಾನುಷಾಶ್ಚ ಕಾಮಾಃ ಸಂಪದ್ಯನ್ತೇ ಹ । ಕಾ ತರ್ಹಿ ಸಂಪದಿತಿ ? ಆಹ । ಶ್ರೋತ್ರಂ ವಾವ ಸಂಪತ್ । ಯಸ್ಮಾತ್ ಶ್ರೋತ್ರೇಣ ವೇದಾ ಗೃಹ್ಯನ್ತೇ ತದರ್ಥವಿಜ್ಞಾನಂ ಚ ತತಃ ಕರ್ಮಾಣಿ ಕ್ರಿಯನ್ತೇ ತತಃ ಕಾಮಸಂಪತ್ ಇತ್ಯೇವಂ ಕಾಮಸಂಪದ್ಧೇತುತ್ವಾತ್ ಶ್ರೋತ್ರಂ ವಾವ ಸಂಪತ್ ॥

(ಭಾಷ್ಯಾರ್ಥ)

ಯಾವನು ಸಂಪತ್ತನ್ನು ಅರಿತಿರುವನೋ ಆ ಇವನಿಗೆ ದೈವಕಾಮಗಳೂ ಮಾನುಷ(ಕಾಮ)ಗಳೂ ಉಂಟಾಗುತ್ತವೆ. ಹಾಗಾದರೆ ಸಂಪತ್ತು ಯಾವದು ? ಎಂದರೆ (ಶ್ರುತಿ) ಹೇಳುತ್ತದ ಶ್ರೋತ್ರವೇ ಸಂಪತ್ತು. ಏಕೆಂದರೆ ಶ್ರೋತ್ರದಿಂದ ವೇದಗಳನ್ನು ಗ್ರಹಿಸುತ್ತಾರೆ[1], ಅದರ ಅರ್ಥವನ್ನು (ಅರಿತುಕೊಳ್ಳುತ್ತಾರೆ), ಅದರಿಂದ ಕರ್ಮಗಳನ್ನು ಮಾಡುತ್ತಾರೆ. ಅದರಿಂದ ಕಾಮಿತಗಳು ಉಂಟಾಗುತ್ತವೆ.- ಹೀಗೆ ಕಾಮಿತಗಳು ಉಂಟಾಗುವವಕ್ಕೆ ಕಾರಣವಾಗಿರುವದರಿಂದ ಶ್ರೋತ್ರವೇ ಸಂಪತ್ತು

(ಉಪನಿಷತ್ತು)

**ಯೋ ಹ ವಾ ಆಯತನಂ ವೇದಾಽಽಯತನಗ್ಂ ಹ ಸ್ವಾನಾಂ ಭವತಿ ಮನೋ ಹ ವಾ ಆಯತನಮ್ ॥ ೫ ॥**

೫. ಯಾವನು ಆಯತನವನ್ನು ಅರಿತಿರುವನೋ ಅವನು ತಮ್ಮವರಿಗೆ ಆಯತನವಾಗುವನು. ಮನಸ್ಸೇ ಆಯತನವು.

## ಮನಸ್ಸು ಆಯತನ

(ಭಾಷ್ಯ)

೩೬೨. ಯೋ ಹ ವಾ ಆಯತನಂ ವೇದ ಆಯತನಂ ಹ ಸ್ವಾನಾಂ ಭವತಿ ಆಶ್ರಯೋ ಭವತಿ ಇತ್ಯರ್ಥಃ । ಕಿಂ ತದಾಯತನಮಿತಿ ? ಆಹ । ಮನೋ ಹ ವಾ ಆಯತನಮ್ । ಇನ್ದ್ರಿಯೋಪಹೃತಾನಾಂ ವಿಷಯಾಣಾಂ ಭೋಕ್ತ್ರರ್ಥಾನಾಂ ಪ್ರತ್ಯಯರೂಪಾಣಾಂ ಮನ ಆಯತನಮ್ ಆಶ್ರಯಃ । ಅತೋ ಮನೋ ಹ ವಾ ಆಯತನಮ್ ಇತ್ಯುಕ್ತಮ್ ॥

---

1 ಬೃ. ೬-೧-೪ ಮತ್ತು ಅದರ ಭಾಷ್ಯ (ಭಾ. ೪೧೩)- ಇವನ್ನು ಹೋಲಿಸಿರಿ.

(ಭಾಷ್ಯಾರ್ಥ)

ಯಾವನು ಆಯತನವನ್ನು ಅರಿತಿರುವನೋ ಅವನು ತಮ್ಮವರಿಗೆ ಆಯತನವಾಗುತ್ತಾನೆ, ಆಶ್ರಯವಾಗುತ್ತಾನೆ ಎಂದರ್ಥ. ಆ ಆಯತನವು ಯಾವದು? ಎಂದರೆ (ಶ್ರುತಿ) ಹೇಳುತ್ತದೆ. ಮನಸ್ಸೇ ಆಯತನವು. ಇಂದ್ರಿಯಗಳು ತಂದು ಕೊಟ್ಟ, ಭೋಕ್ತೃವಿಗಾಗಿರುವ, ಪ್ರತ್ಯಯರೂಪವಾದ ವಿಷಯಗಳಿಗೆ ಮನಸ್ಸು ಆಯತನವು, ಆಶ್ರಯವಷ್ಟೆ? ಆದ್ದರಿಂದ ಮನಸ್ಸೇ ಆಯತನವು ಎಂದು ಹೇಳಿದೆ.

(ಉಪನಿಷತ್ತು)

**ಅಥ ಹ ಪ್ರಾಣಾ ಅಹಗ್ಂ ಶ್ರೇಯಸಿ ವ್ಯೂದಿರೇಽಹಗ್ಂ ಶ್ರೇಯಾನಸ್ಮ್ಯಹಗ್ಂ ಶ್ರೇಯಾನಸ್ಮೀತಿ ॥ ೬ ॥**

೬. ಇನ್ನು ಪ್ರಾಣಗಳು ನಾನು ಶ್ರೇಷ್ಠನು ಎಂಬುದಕ್ಕಾಗಿ 'ನಾನು ಶ್ರೇಷ್ಠನಾಗಿರುವೆನು, ನಾನು ಶ್ರೇಷ್ಠನಾಗಿರುವೆನು' ಎಂದು ವಿವಾದಮಾಡಿದವು.

## ಪ್ರಾಣಗಳೊಳಗೆ ವಿವಾದ

(ಭಾಷ್ಯ)

೩೬೩. ಅಥ ಹ ಪ್ರಾಣಾ ಏವಂ ಯಥೋಕ್ತಗುಣಾಃ ಸನ್ತೋಽಹಂ ಶ್ರೇಯಸಿ ಅಹಂ ಶ್ರೇಯಾನ್ ಅಸ್ಮಿ, ಅಹಂ ಶ್ರೇಯಾನಸ್ಮಿ, – ಇತ್ಯೇತಸ್ಮಿನ್ ಪ್ರಯೋಜನೇ ವ್ಯೂದಿರೇ ನಾನಾ ವಿರುದ್ಧಂ ಚ ಊದಿರೇ ಉಕ್ತವನ್ತಃ ॥

(ಭಾಷ್ಯಾರ್ಥ)

ಇನ್ನು ಹೀಗೆ ಮೇಲೆ ಹೇಳಿದ ಗುಣಗಳುಳ್ಳವಾಗಿರುವ (ಈ) ಪ್ರಾಣಗಳು ನಾನು ಶ್ರೇಷ್ಠನು ಎಂಬ – ನಾನೇ ಹೆಚ್ಚಿನವನಾಗಿರುತ್ತೇನೆ, ನಾನೇ ಹೆಚ್ಚಾಗಿರುತ್ತೇನೆ ಎಂಬ ಪ್ರಯೋಜನದ (ವಿಷಯ)ದಲ್ಲಿ, ವಿವಾದಮಾಡಿದವು (ವಿ=) ಬಗೆ ಬಗೆಯಾಗಿಯೂ ವಿರುದ್ಧವಾಗಿಯೂ ವಾದಮಾಡಿದವು, ಮಾತನಾಡಿದವು.

(ಉಪನಿಷತ್ತು)

**ತೇ ಹ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುರ್ಭಗವನ್ ಕೋ ನಃ ಶ್ರೇಷ್ಠ ಇತಿ ತಾನ್ ಹೋವಾಚ ಯಸ್ಮಿನ್ವ ಉತ್ಕ್ರಾನ್ತೇ ಶರೀರಂ ಪಾಪಿಷ್ಠತರಮಿವ ದೃಶ್ಯೇತ ಸ ವಃ ಶ್ರೇಷ್ಠ ಇತಿ ॥ ೭ ॥**

೭. ಆ ಪ್ರಾಣಗಳು ಪಿತೃವಾದ ಪ್ರಜಾಪತಿಯ (ಬಳಿಗೆ) ಹೋಗಿ 'ಭಗವಂತನೆ, ನಮ್ಮೊಳಗೆ ಯಾವನು ಶ್ರೇಷ್ಠನು?' ಎಂದು

ಕೇಳಿದವು. ಅವನ್ನು ಕುರಿತು 'ನಿಮ್ಮಗಳಲ್ಲಿ ಯಾವನು ಉತ್ಕ್ರಾಂತನಾದರೆ ಶರೀರವು ಪಾಪಿಷ್ಠತರವಾಗಿ ಕಾಣುವದೋ ಅವನು ನಿಮ್ಮೊಳಗೆ ಶ್ರೇಷ್ಠನು' ಎಂದನು.

## ಪ್ರಜಾಪತಿಯ ತೀರ್ಮಾನ

(ಭಾಷ್ಯ)

೩೬೪ ತೇ ಹ। ತೇ ಹೈವಂ ವಿವದಮಾನಾಃ ಆತ್ಮನಃ ಶ್ರೇಷ್ಠತ್ವವಿಜ್ಞಾನಾಯ ಪ್ರಜಾಪತಿಂ ಪಿತರಂ ಜನಯಿತಾರಂ ಕಂಚಿದೇತ್ಯ ಊಚುಃ ಉಕ್ತವನ್ತಃ। ಹೇ ಭಗವನ್ ಕೋ ನಃ ಅಸ್ಮಾಕಂ ಮಧ್ಯೇ ಶ್ರೇಷ್ಠ ಅಭ್ಯಧಿಕೋ ಗುಣೈಃ ಇತಿ ಏವಂ ಪೃಷ್ಟವನ್ತಃ। ತಾನ್ ಪಿತಾ ಉವಾಚ ಹ ಯಸ್ಮಿನ್ ವೋ ಯುಷ್ಮಾಕಂ ಮಧ್ಯೇ ಉತ್ಕ್ರಾನ್ತೇ ಶರೀರಮಿದಂ ಪಾಪಿಷ್ಠಮಿವ ಅತಿಶಯೇನ ಜೀವತೋಽಪಿ ಸಮುತ್ಕ್ರಾನ್ತಪ್ರಾಣಂ ತತೋಽಪಿ ಪಾಪಿಷ್ಠತರಮಿವ ಅತಿಶಯೇನ ದೃಶ್ಯೇತ ಕುಣಪಮ್ ಅಸ್ಪೃಶ್ಯಮ್ ಅಶುಚಿ ದೃಶ್ಯೇತ ಸ ವೋ ಯುಷ್ಮಾಕಂ ಶ್ರೇಷ್ಠ ಇತ್ಯವೋಚತ್ ಕಾಕ್ವಾ ತದ್ದುಃಖಂ ಪರಿಜಿಹೀರ್ಷುಃ ॥

(ಭಾಷ್ಯಾರ್ಥ)

ಅವು ಹೀಗೆ ವಿವಾದಮಾಡಿಕೊಂಡು ತಮ್ಮಲ್ಲಿ ಶ್ರೇಷ್ಠತ್ವವನ್ನು ತಿಳಿದುಕೊಳ್ಳುವದಕ್ಕಾಗಿ ಪಿತೃವಾದ ತಮ್ಮನ್ನು ಉಂಟುಮಾಡಿರುವ ಯಾವನೋ ಒಬ್ಬ[2] ಪ್ರಜಾಪತಿಯ ಬಳಿಗೆ ಹೋಗಿ (ಊಚುಃ=ಉಕ್ತವನ್ತಃ) ಇಂತೆಂದವು. ಎಲೈ ಭಗವಂತನೆ (ನಃ=ಅಸ್ಮಾಕಮ್) ನಮ್ಮೊಳಗೆ ಯಾವನು ಶ್ರೇಷ್ಠನು, (ಯಾವನು) ಗುಣಗಳಿಂದ ಹೆಚ್ಚಿನವನು ? ಎಂದು ಇಂತು ಕೇಳಿದವು. ಅವನ್ನು ಕುರಿತು (ಆ) ಪಿತೃವಿಂತೆಂದನು : ನಿಮ್ಮಗಳೊಳಗೆ ಯಾವನು ಉತ್ಕ್ರಾಂತನಾದರೆ ಈ ಶರೀರವು ಬದುಕಿರುವ (ಶರೀರ)ಕ್ಕಿಂತಲೂ ಪ್ರಾಣವು ಉತ್ಕ್ರಾಂತವಾಗಲು ಅದಕ್ಕಿಂತಲೂ ಪಾಪಿಷ್ಠತರವಾಗಿರುವಂತೆ ಹೆಚ್ಚಾಗಿ (ಕೆಟ್ಟಿರುವಂತೆ) ಹೆಣವಾಗಿ ಕಾಣುವದೋ ಮುಟ್ಟಬಾರದೆ ಅಶುಚಿಯಾಗಿ ಕಾಣುವದೋ, ಅವನು (ವಃ – ಯುಷ್ಮಾಕಮ್) ನಿಮ್ಮೊಳಗೆ ಶ್ರೇಷ್ಠನು ಎಂದು ಕಾಕುವಿನಿಂದ ಅವುಗಳ ದುಃಖವನ್ನು ಪರಿಹರಿಸುವದಕ್ಕಾಗಿ[3] ಹೇಳಿದನು.

---

1. ಇದಕ್ಕೆ 'ಪೃಷ್ಟವತಃ', 'ಉಕ್ತವನ್ತಃ', 'ಉಕ್ತವತಃ' – ಎಂಬ ಪಾಠಾಂತರಗಳೂ ಇವೆ. ಈಗಿರುವದೇ ಸಾಕಾಗಿದೆ

2. ಕಶ್ಯಪನೇ ಮೊದಲಾದವರಲ್ಲಿ ಒಬ್ಬ ಪ್ರಜಾಪತಿಯನ್ನು ಎಂದರ್ಥ.

3. ಮುಖ್ಯಪ್ರಾಣನೇ ಶ್ರೇಷ್ಠನು ಎಂದು ಹೇಳುವದಕ್ಕೆ ಶಕ್ತನಾಗಿದ್ದರೂ ಇವರೇ ತಿಳಿದುಕೊಳ್ಳಲಿ, ನನ್ನ ನೇರಾದ ಮಾತಿನಿಂದೇಕೆ ಇವರು ಈಗಲೆ ದುಃಖಪಡಬೇಕು ?– ಎಂದು ಹೀಗೆ ಪರೋಕ್ಷರೀತಿಯಿಂದ ತಿಳಿಸಿದನು ಎಂದರ್ಥ

(ಉಪನಿಷತ್ತು)

**ಸಾ ಹ ವಾಗುಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಕಲಾ ಅವದನ್ತಃ ಪ್ರಾಣನ್ತಃ ಪ್ರಾಣೇನ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹ ವಾಕ್ ॥ ೮ ॥**

೮. ಆ ವಾಕ್ಕು ಉತ್ಕ್ರಾಂತವಾಯಿತು. ಅದು ಸಂವತ್ಸರದ ವರೆಗೆ ಹೊರಗಿದ್ದು ಹಿಂತಿರುಗಿ ಬಂದು ಇಂತೆಂದಿತು: 'ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ'' 'ಹೇಗೆ ಕಲರು ಮಾತನಾಡದೆ ಪ್ರಾಣದಿಂದ ಉಸಿರುಬಿಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಶ್ರೋತ್ರದಿಂದ ಕೇಳುತ್ತಾ ಮನಸ್ಸಿನಿಂದ ಚಿಂತಿಸುತ್ತಾ (ಇರುವರೋ) ಹಾಗೆ' ಎಂದವು. ವಾಕ್ಕು ಪ್ರವೇಶಿಸಿತು.

## ವಾಕ್ಕಿಲ್ಲದೆ ಮಿಕ್ಕ ಪ್ರಾಣಗಳು ಬದುಕಿದ್ದದ್ದು

(ಭಾಷ್ಯ)

೩.೬.೫. ತಥೋಕ್ತೇಷು ಪಿತ್ರಾ ಪ್ರಾಣೇಷು ಸಾ ಹ ವಾಕ್ ಉಚ್ಚಕ್ರಾಮ ಉತ್ಕ್ರಾನ್ತವತೀ। ಸಾ ಚೋತ್ಕ್ರಮ್ಯ ಸಂವತ್ಸರಮಾತ್ರಂ ಪ್ರೋಷ್ಯ ಸ್ವವ್ಯಾಪಾರಾತ್ ನಿವೃತ್ತಾ ಸತೀ ಪುನಃ ಪರ್ಯೇತ್ಯ ಇತರಾನ್ ಪ್ರಾಣಾನ್ ಉವಾಚ ಕಥಂ ಕೇನ ಪ್ರಕಾರೇಣ ಅಶಕತಶಕ್ತವನ್ತೋ ಯೂಯಂಮದೃತೇ ಮಾಂ ವಿನಾ ಜೀವಿತುಂ ಧಾರಯಿತುಮಾತ್ಮಾನಮಿತಿ ? ತೇ ಹೋಚುಃ ಯಥಾ ಕಲಾ ಇತ್ಯಾದಿ। ಕಲಾ ಮೂಕಾ ಯಥಾ ಲೋಕೇ ಅವದನ್ತೋ ವಾಚಾ ಜೀವನ್ತಿ। ಕಥಮ್ ಪ್ರಾಣನ್ತಃ ಪ್ರಾಣೇನ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ಧ್ಯಾಯನ್ತೋ ಮನಸಾ ಏವಂ ಸರ್ವಕರಣಚೇಷ್ಟಾಂ ಕುರ್ವನ್ತ ಇತ್ಯರ್ಥಃ। ಏವಂ ವಯಮ್ ಅಜೀವಿಷ್ಮ ಇತ್ಯರ್ಥಃ। ಆತ್ಮನೋಽಶ್ರೇಷ್ಠತಾಂ ಪ್ರಾಣೇಷು ಬುದ್ಧ್ವಾ ಪ್ರವಿವೇಶ ಹ ವಾಕ್। ಪುನಃ ಸ್ವವ್ಯಾಪಾರೇ ಪ್ರವೃತ್ತಾ ಬಭೂವ ಇತ್ಯರ್ಥಃ ॥

(ಭಾಷ್ಯಾರ್ಥ)

ತಂದೆಯು ಹೀಗೆ ಪ್ರಾಣಗಳನ್ನು ಕುರಿತು ಹೇಳಲಾಗಿ ಆ ವಾಕ್ಕು (ಉಚ್ಚಕ್ರಾಮ= ಉತ್ಕ್ರಾನ್ತವತೀ) ಉತ್ಕ್ರಾಂತವಾಯಿತು. ಅದು ಹಾಗೆ ಉತ್ಕ್ರಾಂತವಾಗಿ ಸಂವತ್ಸರದಷ್ಟು (ಕಾಲ) ಹೊರಗಿದ್ದು, ತನ್ನ ವ್ಯಾಪಾರವನ್ನು

ಬಿಟ್ಟಿದ್ದು ಮತ್ತೆ ಹಿಂತಿರುಗಿಬಂದು ಮಿಕ್ಕ ಪ್ರಾಣಗಳನ್ನು ಕುರಿತು ಹೀಗೆಂದಿತು : ನೀವು ನಾನಿಲ್ಲದೆ ನನ್ನನ್ನು ಬಿಟ್ಟು, ಬದುಕಿರುವದಕ್ಕೆ ನೀವುನೀವೇ ಇದ್ದುಕೊಂಡಿರುವವಕ್ಕೆ, ಹೇಗೆ ಯಾವ ಪ್ರಕಾರದಿಂದ (ಅಶಕತ = ಶಕ್ತವಂತಃ) ಶಕ್ತರಾದಿರಿ ?

ಅವು ಇಂತೆಂದವು . 'ಹೇಗೆ ಕಲರು' ಇತ್ಯಾದಿ (ಗ್ರಂಥದ ಅರ್ಥವಿದು). ಕಲರು ಎಂದರೆ ಮೂಕರು. ಹೇಗೆ ಲೋಕದಲ್ಲಿ ಮಾತನಾಡದೆ ಜೀವಿಸಿರುತ್ತಾರೋ ಪ್ರಾಣದಿಂದ ಪ್ರಾಣನವ್ಯಾಪಾರವನ್ನು ಮಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಶ್ರೋತ್ರಧಿಂದ ಕೇಳುತ್ತಾ ಮನಸ್ಸಿನಿಂದ ಚಿಂತಿಸುತ್ತಾ– ಹೀಗೆ ಎಲ್ಲಾ ಕರಣ ವ್ಯಾಪಾರಗಳನ್ನೂ ಮಾಡುತ್ತಾ ಎಂದರ್ಥ. ಹೀಗೆ ನಾವು ಬದುಕಿದೆವು ಎಂದರ್ಥ.

ಪ್ರಾಣಗಳೊಳಗೆ ತಾನು ಶ್ರೇಷ್ಠನಲ್ಲವೆಂಬುದನ್ನು ತಿಳಿದು ವಾಕ್ಕು ಪ್ರವೇಶಿಸಿತು , ಮತ್ತೆ ತನ್ನ ವ್ಯಾಪಾರವಲ್ಲಿ ತೊಡಗಿದ್ದಾಯಿತು ಎಂದರ್ಥ.

(ಉಪನಿಷತ್ತು)

**ಚಕ್ಷುರ್ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾನ್ಧಾ ಅಪಶ್ಯನ್ತಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಶೃಣ್ವನ್ತಃ ಶ್ರೋತ್ರೇಣ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹ ಚಕ್ಷುಃ ॥ ೯ ॥**

**ಶ್ರೋತ್ರಗ್ಂ ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಧಿರಾ ಅಶೃಣ್ವನ್ತಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಧ್ಯಾಯನ್ತೋ ಮನಸೈವಮಿತಿ ಪ್ರವಿವೇಶ ಹ ಶ್ರೋತ್ರಮ್ ॥ ೧೦ ॥**

**ಮನೋ ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಾಲಾ ಅಮನಸಃ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣೈವಮಿತಿ ಪ್ರವಿವೇಶ ಹ ಮನಃ ॥ ೧೧ ॥**

೯. ಚಕ್ಷುಸ್ಸು ಉತ್ಕ್ರಾಂತವಾಯಿತು. ಅದು ಸಂವತ್ಸರದವರೆಗೆ ಹೊರಗಿದ್ದು ಹಿಂತಿರುಗಿ ಬಂದು ಇಂತೆಂದಿತು : 'ನಾನಿಲ್ಲದೆ ಬದುಕಿರುವವಕ್ಕೆ ಹೇಗೆ ಶಕ್ತರಾದಿರಿ ?', 'ಹೇಗೆ ಕುರುಡರು ಕಾಣದೆ

ಪ್ರಾಣದಿಂದ ಉಸಿರುಬಿಡುತ್ತಾ ವಾಕ್ಕಿನಿಂದ ಮಾತಾಡುತ್ತಾ ಶ್ರೋತ್ರ ದಿಂದ ಕೇಳುತ್ತಾ ಮನಸ್ಸಿನಿಂದ ಚಿಂತಿಸುತ್ತಾ (ಇರುವರೋ)-ಹಾಗೆ' ಎಂದವು. ಚಕ್ಷುಸ್ಸು ಪ್ರವೇಶಿಸಿತು.

೧೦. ಶ್ರೋತ್ರವು ಉತ್ಕ್ರಾಂತವಾಯಿತು. ಅದು ಸಂವತ್ಸರ ದವರೆಗೆ ಹೊರಗಿದ್ದು ಹಿಂತಿರುಗಿ ಬಂದು ಇಂತೆಂದಿತು. 'ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?' 'ಹೇಗೆ ಕಿವುಡರು ಕೇಳದೆ ಪ್ರಾಣದಿಂದ ಉಸಿರುಬಿಡುತ್ತಾ ವಾಕ್ಕಿನಿಂದ ಮಾತನಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಮನಸ್ಸಿನಿಂದ ಚಿಂತಿಸುತ್ತಾ (ಇರುವರೋ) -ಹಾಗೆ' ಎಂದವು. ಶ್ರೋತ್ರವು ಪ್ರವೇಶಿಸಿತು.

೧೧. ಮನಸ್ಸು ಉತ್ಕ್ರಾಂತವಾಯಿತು. ಅದು ಸಂವತ್ಸರ ದವರೆಗೆ ಹೊರಗಿದ್ದು ಹಿಂತಿರುಗಿ ಬಂದು ಹೀಗೆಂದಿತು. 'ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?' 'ಹೇಗೆ ಹುಡುಗರು ಮನಸ್ಸಿಲ್ಲದೆ ಪ್ರಾಣದಿಂದ ಉಸಿರುಬಿಡುತ್ತಾ ವಾಕ್ಕಿನಿಂದ ಮಾತನಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಶ್ರೋತ್ರದಿಂದ ಕೇಳುತ್ತಾ (ಇರುವರೋ) -ಹಾಗೆ' ಎಂದವು. ಮನಸ್ಸು ಪ್ರವೇಶಿಸಿತು.

## ಚಕ್ಷುರಾದಿಗಳಿಲ್ಲದಿದ್ದರೂ ಬದುಕಿದ್ದದ್ದು

(ಭಾಷ್ಯ)

೩೬೬. ಸಮಾನಮನ್ಯತ್ 'ಚಕ್ಷುರ್ಹೋಚ್ಚಕ್ರಾಮ', 'ಶ್ರೋತ್ರಂ ಹೋಚ್ಚಕ್ರಾಮ', 'ಮನೋ ಹೋಚ್ಚಕ್ರಾಮ' ಇತ್ಯಾದಿ। ಯಥಾ ಬಾಲಾ ಅಮನಸಃ ಅಪ್ರರೂಢಮನಸಃ ಇತ್ಯರ್ಥಃ ॥

(ಭಾಷ್ಯಾರ್ಥ)

'ಚಕ್ಷುಸ್ಸು ಉತ್ಕ್ರಾಂತವಾಯಿತು'[1], 'ಶ್ರೋತ್ರವು ಉತ್ಕ್ರಾಂತವಾಯಿತು', 'ಮನಸ್ಸು ಉತ್ಕ್ರಾಂತವಾಯಿತು' ಮುಂತಾದ ಗ್ರಂಥವು (ಹಿಂದಿನದಕ್ಕೆ) ಸಮಾನ ವಾಗಿದೆ. ಮನಸ್ಸಿಲ್ಲದ ಹುಡುಗರು, ಎಂದರೆ ಮನಸ್ಸು ಇನ್ನೂ ಬೆಳೆದುಕೊಳ್ಳದೆ ಇರುವವರು ಎಂದರ್ಥ.

(ಉಪನಿಷತ್ತು)

**ಅಥ ಹ ಪ್ರಾಣ ಉಚ್ಚಿಕ್ರಮಿಷನ್ ಸ ಯಥಾ ಸುಹಯಃ ಪಡ್ವೀಶ ಶಙ್ಕೂನ್ ಸಂಖಿದೇದೇವಮಿತರಾನ್ ಪ್ರಾಣಾನ್ ಸಮಖಿದ**

---

1. ಅದರಂತೆಯೇ ಈ ಗ್ರಂಥಕ್ಕೂ ತಾತ್ಪರ್ಯವನ್ನರಿಯಬೇಕು ಎಂದು ಭಾವ.

**ತ್ತೈಗ್ಂ ಹಾಭಿಸಮೇತ್ಯೋಚುರ್ಭಗವನ್ನೇಧಿ ತ್ವಂ ನಃ ಶ್ರೇಷ್ಠೋಽಸಿ ಮೋತ್ಕ್ರಮೀರಿತಿ ॥ ೧೨ ॥**

೧೨. ಇನ್ನು ಪ್ರಾಣವು ಉತ್ಕ್ರಾಂತವಾಗಲಿಚ್ಛಿಸಿ ಅದು ಹೇಗೆಂದರೆ (ಹೇಗೆ) ಸುಹಯವು ಪಡ್ವೀಶಶಂಕುಗಳನ್ನು ಕಿತ್ತುಕೊಳ್ಳುವದೋ ಹಾಗೆಯೇ ಉಳಿದ ಪ್ರಾಣಗಳನ್ನು ಕಿತ್ತುಕೊಂಡಿತು. ಅವರ ಬಳಿಗೆ ಒಟ್ಟುಕೂಡಿ ಬಂದು 'ಭಗವಂತನೆ, ಇರು, ನೀನು ನಮ್ಮಲ್ಲಿ ಶ್ರೇಷ್ಠನಿರುವೆ. ಉತ್ಕ್ರಾಂತನಾಗಬೇಡ !' ಎಂದವು

## ಪ್ರಾಣನನ್ನು ಉತ್ಕ್ರಾಂತನಾಗದಂತೆ ವಾಗಾದಿಗಳು ಬೇಡಿಕೊಂಡದ್ದು

(ಭಾಷ್ಯ)

೩೬೭. ಏವಂ ಪರೀಕ್ಷಿತೇಷು ವಾಗಾದಿಷು ಅಥ ಅನನ್ತರಂ ಹ ಸ ಮುಖ್ಯಃ ಪ್ರಾಣ ಉಚ್ಚಿಕ್ರಮಿಷನ್ ಉತ್ಕ್ರಮಿತುಮಿಚ್ಛನ್ । ಕಿಮಕರೋತ್ ಇತಿ ? ಉಚ್ಯತೇ। ಯಥಾ ಲೋಕೇ ಸುಹಯಃ ಶೋಭನೋಽಶ್ವಃ ಪಡ್ವೀಶಶಙ್ಕೂನ್ ಪಾದಬನ್ಧನಕೀಲಾನ್ ಪರೀಕ್ಷಣಾಯ ಆರೂಢೇನ ಕಶಯಾ ಹತಃ ಸನ್ ಸಂಖಿದೇತ್ ಸಮುತ್ಖನೇತ್ ಸಮುತ್ಪಾಟಯೇತ್ ಏವಮ್ ಇತರಾನ್ ವಾಗಾದೀನ್ ಪ್ರಾಣಾನ್ ಸಮಖಿದತ್ ಸಮುದ್ಧೃತವಾನ್। ತೇ ಪ್ರಾಣಾಃ ಸಂಚಾಲಿತಾಃ ಸನ್ತಃ ಸ್ವಸ್ಥಾನೇ ಸ್ಥಾತುಮ್ ಅನುತ್ಸಹಮಾನಾಃ ಅಭಿಸಮೇತ್ಯ ಮುಖ್ಯಂ ಪ್ರಾಣಂ ತಮ್ ಊಚುಃ ಹೇ ಭಗವನ್ ಏಧಿ ಭವ ನಃ ಸ್ವಾಮೀ, ಯಸ್ಮಾತ್ ತ್ವಂ ನಃ ಅಸ್ಮಾಕಂ ಶ್ರೇಷ್ಠೋಽಸಿ ಮಾ ಚಾಸ್ಮಾದ್ದೇಹಾತ್ ಉತ್ಕ್ರಮೀರಿತಿ ॥

(ಭಾಷ್ಯಾರ್ಥ)

ಹೀಗೆ ವಾಕ್ಕೇ ಮುಂತಾದ (ಪ್ರಾಣಗಳನ್ನು) ಪರೀಕ್ಷೆಮಾಡಿದ್ದಾಗಲು ಇನ್ನು (ಅ) ಬಳಿಕ ಆ ಮುಖ್ಯಪ್ರಾಣನು (ಉಚ್ಚಿಕ್ರಮಿಷನ್= ಉತ್ಕ್ರಮಿತುಮಿಚ್ಛನ್) ಉತ್ಕ್ರಾಂತನಾಗಲೆಳಸಿ– ಏನುಮಾಡಿದನು ?. ಎಂದರೆ (ಶ್ರುತಿ) ಹೇಳುತ್ತದೆ. ಹೇಗೆ ಲೋಕದಲ್ಲಿ ಸುಹಯವು ಒಳ್ಳೆಯ ಕುದುರೆಯು ಪಡ್ವೀಶಶಂಕುಗಳನ್ನು ಕಾಲುಗಳಿಗೆ ಕಟ್ಟಿದ ಗೂಟಗಳನ್ನು, ಪರೀಕ್ಷೆಗಾಗಿ ಸವಾರನು ಕೋರಡೆಯಿಂದ ಹೊಡೆಯಲು (ಸಂಖಿದೇತ್= ಸಮುತ್ಖದೇತ್) ಚೆನ್ನಾಗಿ ಕಿತ್ತುಕೊಳ್ಳುವದೋ, ಕಿತ್ತುಹಾಕುವದೋ ಹಾಗೆ ಉಳಿದ ವಾಗಾದಿಪ್ರಾಣಗಳನ್ನು (ಸಮಖಿದತ್= ಸಮುದ್ಧೃತವಾನ್) ಮೇಲಕ್ಕೆತ್ತಿಕೊಂಡಿತು.

ಆ ಪ್ರಾಣಗಳು ಅಲುಗಾಡಿಸಲ್ಪಟ್ಟವಾಗಿ ತಮ್ಮ(ತಮ್ಮ) ಸ್ಥಾನದಲ್ಲಿದ್ದು ಕೊಂಡಿರುವದಕ್ಕೆ ಅಶಕ್ತಗಳಾಗಿ ಆ (ಮುಖ್ಯ)ಪ್ರಾಣನ ಬಳಿಗೆ ಒಟ್ಟುಗೂಡಿ ಬಂದು ಇಂತೆಂದವು. "ಎಳ್ಳೈ ಭಗವಂತನೆ, ನಮ್ಮಗಳ ಒಡೆಯನಾಗಿ (ಏಧಿ= ಭವ) ಇದ್ದುಕೊಂಡಿರು, ಏಕೆಂದರೆ ನೀನು ನಮ್ಮಲ್ಲಿ ಶ್ರೇಷ್ಠನಾಗಿರುವೆ, ಮತ್ತು ಈ ದೇಹದಿಂದ ಉತ್ಕ್ರಾಂತನಾಗದಿರು!"

(ಉಪನಿಷತ್ತು)

**ಅಥ ಹೈನಂ ವಾಗುವಾಚ ಯದಹಂ ವಸಿಷ್ಠೋಽಸ್ಮಿ ತ್ವಂ ತದ್ವ ಸಿಷ್ಠೋಽಸೀತ್ಯಥ ಹೈನಂ ಚಕ್ಷುರುವಾಚ ಯದಹಂ ಪ್ರತಿಷ್ಠಾಸ್ಮಿ ತ್ವಂ ತತ್ಪ್ರತಿಷ್ಠಾಸೀತಿ ॥ ೧೩ ॥**

**ಅಥ ಹೈನಗ್ಂ ಶ್ರೋತ್ರಮುವಾಚ ಯದಹಗ್ಂ ಸಂಪದಸ್ಮಿ ತ್ವಂ ತತ್ಸಂಪದಸೀತ್ಯಥ ಹೈನಂ ಮನ ಉವಾಚ ಯದಹ ಮಾಯತನಮಸ್ಮಿ ತ್ವಂ ತದಾಯತನಮಸೀತಿ ॥ ೧೪ ॥**

೧೩-೧೪. ಆಗ ಇದನ್ನು ಕುರಿತು ವಾಕ್ಕು ಇಂತೆಂದಿತು: 'ನಾನು ವಸಿಷ್ಠನಾಗಿರುವೆನಲ್ಲ, ನೀನೇ ಆ ವಸಿಷ್ಠನಾಗಿರುವೆ!' ಆಗ ಇದನ್ನು ಚಕ್ಷುಸ್ಸು ಇಂತೆಂದಿತು: 'ನಾನು ಪ್ರತಿಷ್ಠೆಯಾಗಿರುವೆನಲ್ಲ, ನೀನೇ ಆ ಪ್ರತಿಷ್ಠೆಯಾಗಿರುವೆ!' ಆಗ ಇದನ್ನು ಕುರಿತು ಶ್ರೋತ್ರವು ಇಂತೆಂದಿತು: 'ನಾನು ಸಂಪತ್ತಾಗಿರುವೆನಲ್ಲ, ನೀನೇ ಆ ಸಂಪತ್ತಾಗಿ ರುವೆ!' ಆಗ ಮನಸ್ಸು ಇದನ್ನು ಕುರಿತು ಇಂತೆಂದಿತು: 'ನಾನು ಆಯ ತನವಾಗಿರುವೆನಲ್ಲ, ನೀನೇ ಆ ಆಯತನವಾಗಿರುವೆ!'

## ವಾಗಾದಿಗಳು ತಮ್ಮ ವಸಿಷ್ಠತ್ವಾದಿಗಳನ್ನು ಪ್ರಾಣಕ್ಕೆ ಒಪ್ಪಿಸಿದ್ದು

(ಭಾಷ್ಯ)

೩೬೮. ಅಥ ಹೈನಮ್। ವಾಗಾದಯಃ ಪ್ರಾಣಸ್ಯ ಶ್ರೈಷ್ಠ್ಯತ್ವಂ[1] ಕಾರ್ಯೇಣ ಆಪಾದಯನ್ತ ಆಹುರ್ಬಲಿಮಿವ ಹರನ್ತೋ ರಾಜ್ಞೋ ವಿಶಃ। ಕಥಮ್? ವಾಕ್ ತಾವದುವಾಚ। ಯದಹಂ ವಸಿಷ್ಠೋಽಸ್ಮಿ। ಯದಿತಿ ಕ್ರಿಯಾವಿಶೇಷಣಮ್। ಯದ್ ವಸಿಷ್ಠತ್ವಗುಣಾಸ್ಮೀತ್ಯರ್ಥಃ। ತ್ವಂ ತದ್ ವಸಿಷ್ಠಃ। ತೇನ ವಸಿಷ್ಠತ್ವ ಗುಣೇನ ತ್ವಂ ತದ್ ವಸಿಷ್ಠೋಽಸಿ। ತದ್ಗುಣಸ್ತ್ವಮ್ ಇತ್ಯರ್ಥಃ। ಅಥವಾ

1. 'ಶ್ರೇಷ್ಠತಾಮ್' ಎಂಬ ಪಾಠವೂ ಉಂಟು, ಅರ್ಥದಲ್ಲಿ ಹೆಚ್ಚುಕಡಿಮೆಯಿಲ್ಲ

ತಚ್ಛಬ್ದೋಽಪಿ ಕ್ರಿಯಾವಿಶೇಷಣಮೇವ । ತ್ವತ್ಕೃತಸ್ತ್ವದೀಯೋಽಸೌ ವಸಿಷ್ಠತ್ವ ಗುಣೋಽಜ್ಞಾನಾನ್ ಮಮೇತಿ ಮಯಾಽಭಿಮತ ಇತ್ಯೇತತ್ । ತಥಾ ಉತ್ತರೇಷು ಯೋಜ್ಯಂ ಚಕ್ಷುಃಶ್ರೋತ್ರಮನಃಸು ॥

(ಭಾಷ್ಯಾರ್ಥ)

ಆಗ ಇದನ್ನು ಕುರಿತು- ವಾಗಾದಿಗಳು ಪ್ರಾಣನ ಶ್ರೇಷ್ಠತ್ವವನ್ನು ಕಾರ್ಯದಿಂದ ಕಲ್ಪಿಸಿಕೊಂಡು, ಅರಸನಿಗೆ ಪ್ರಜೆಗಳು ಕಾಣಿಕೆಯನ್ನು ಒಪ್ಪಿಸುವಂತೆ, ಇಂತೆಂದವು ಹೇಗೆ ? ಎಂದರೆ, ಮೊದಲು ವಾಕ್ಕು ಇಂತೆಂದಿತು ನಾನು ವಸಿಷ್ಠನಾಗಿರುವೆನಲ್ಲ – (ಇಲ್ಲಿ) ಯತ್ ಎಂಬುದು ಕ್ರಿಯಾವಿಶೇಷಣವು , ವಸಿಷ್ಠತ್ವ ಗುಣವುಳ್ಳದ್ದಾಗಿರುವೆನಲ್ಲ, ಎಂದರ್ಥ. ನೀನು ತದ್ವಸಿಷ್ಠನು, ಆ ವಸಿಷ್ಠತ್ವಗುಣದಿಂದ ನೀನು ತದ್ವಸಿಷ್ಠನಾಗಿವೆ, ಆ ಗುಣವುಳ್ಳವನು ನೀನು ಎಂದರ್ಥ. ಅಥವಾ ತತ್ ಎಂಬ ಶಬ್ದವೂ ಕ್ರಿಯಾವಿಶೇಷಣವೇ. ನಿನ್ನಿಂದಾದ, ನಿನ್ನದೇ ಆದ, ವಸಿಷ್ಠತ್ವವೆಂಬ ಗುಣವನ್ನು ಅಜ್ಞಾನದಿಂದ ನನ್ನದೆಂದು ನಾನು ತಿಳಿದುಕೊಂಡಿದ್ದೆ ಎಂದು ಅಭಿಪ್ರಾಯ. ಹೀಗೆಯೇ ಮುಂದಿನ ಚಕ್ಷುಸ್ಸು, ಶ್ರೋತ್ರ, ಮನಸ್ಸು- ಇವುಗಳಲ್ಲಿಯೂ (ಯತ್‌ತಚ್ಛಬ್ದಗಳನ್ನು) ಸಂಬಂಧಿಸಿಕೊಳ್ಳಬೇಕು.[1]

(ಉಪನಿಷತ್ತು)

**ನ ವೈ ವಾಚೋ ನ ಚಕ್ಷೂಗ್ಂಷಿ ನ ಶ್ರೋತ್ರಾಣಿ ನ ಮನಾಗ್ಂಸೀತ್ಯಾಚಕ್ಷತೇ ಪ್ರಾಣಾ ಇತ್ಯೇವಾಚಕ್ಷತೇ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ ॥ ೧೫ ॥**

೧೫. (ಇವುಗಳನ್ನು) ವಾಕ್ಕುಗಳೆಂದು ಕರೆಯುವದಿಲ್ಲ, ಚಕ್ಷಸ್ಸುಗಳು ಎಂದೂ ಅಲ್ಲ, ಶ್ರೋತ್ರಗಳು ಎಂದೂ ಅಲ್ಲ, ಮನಸ್ಸುಗಳು ಎಂದೂ ಅಲ್ಲ; ಪ್ರಾಣಗಳು ಎಂದೇ ಕರೆಯುತ್ತಾರೆ. ಪ್ರಾಣವೇ ಅಲ್ಲವೆ, ಇವೆಲ್ಲವೂ ಆಗಿರುತ್ತದೆ ?

## ಮುಖ್ಯಪ್ರಾಣವು ಸರ್ವಕರಣರೂಪವಾದದ್ದು

(ಭಾಷ್ಯ)

೩೭೯ ಶ್ರುತೇರಿದಂ ವಚಃ । ಯುಕ್ತಮಿದಂ ವಾಗಾದಿಭಿರ್ಮುಖ್ಯಂ ಪ್ರಾಣಂ ಪ್ರತ್ಯಭಿಹಿತಮ್ । ಯಸ್ಮಾನ್ನ ವೈ ಲೋಕೇ ವಾಚಃ, ನ ಚಕ್ಷೂಂಷಿ, ನ

---

1. ಪ್ರಾಣದಲ್ಲಿ ಈ ವಸಿಷ್ಠಾತ್ವಾದಿಗುಣಗಳನ್ನು ಗುಣೋಪಸಂಹಾರನ್ಯಾಯದಿಂದ ಸೇರಿಸಿಕೊಂಡೇ ಕೌಷೀತಕ್ಯಾದಿಗಳಲ್ಲಿ ಹೇಳಿರುವ ಉಪಾಸನೆಯನ್ನು ಮಾಡಬೇಕು ; ಏಕೆಂದರೆ ಉಪಾಸ್ಯವಾದ ಪ್ರಾಣಕ್ಕೇ ಈ ಧರ್ಮಗಳನ್ನು ಹೇಳಿದೆ_ ಎಂದು ಸೂ. ಭಾ. ೩-೩-೧೦ (ಭಾ. ಭಾ. ೩೩೫)ರಲ್ಲಿ ತೀರ್ಮಾನಿಸಿದೆ.

ಶ್ರೋತ್ರಾಣಿ, ನ ಮನಾಂಸೀತಿ ವಾಗಾದೀನಿ ಕರಣಾನಿ ಆಚಕ್ಷತೇ ಲೌಕಿಕಾ ಆಗಮಜ್ಞಾ ವಾ। ಕಿಂ ತರ್ಹಿ, ಪ್ರಾಣಾ ಇತ್ಯೇವ ಆಚಕ್ಷತೇ ಕಥಯನ್ತಿ। ಯಸ್ಮಾತ್ ಪ್ರಾಣೋ ಹಿ ಏವ ಏತಾನಿ ಸರ್ವಾಣಿ ವಾಗಾದೀನಿ ಕರಣಜಾತಾನಿ ಭವತಿ। ಅತೋ ಮುಖ್ಯಂ ಪ್ರಾಣಂ ಪ್ರತಿ ಅನುರೂಪಮೇವ ವಾಗಾದಿಭಿರುಕ್ತಮ್ ಇತಿ ಪ್ರಕರಣಾರ್ಥಮುಪಸಂಜಿಹೀರ್ಷತಿ ॥

(ಭಾಷ್ಯಾರ್ಥ)

ಈ ವಚನವು ಶ್ರುತಿಯದು ವಾಗಾದಿಗಳು ಮುಖ್ಯಪ್ರಾಣನನ್ನು ಕುರಿತು ಹೇಳಿದವಲ್ಲ, ಅದು ಯುಕ್ತವೇ ಏಕೆಂದರೆ ಲೋಕದಲ್ಲಿ ಸಾಮಾನ್ಯಜನರಾಗಲಿ ಆಗಮಜ್ಞರಾಗಲಿ ವಾಗಾದಿಕರಣಗಳನ್ನು ವಾಕ್ಕುಗಳೆನ್ನುವದಿಲ್ಲ, ಚಕ್ಷುಸ್ಸುಗಳೆನ್ನುವದಿಲ್ಲ, ಶ್ರೋತ್ರಗಳೆನ್ನುವದಿಲ್ಲ, ಮನಸ್ಸುಗಳೆನ್ನುವದಿಲ್ಲ, ಮತ್ತೇನೆಂದರ 'ಪ್ರಾಣಗಳು' ಎಂದೇ (ಆಚಕ್ಷತೇ=ಕಥಯನ್ತಿ) ಕರೆಯುತ್ತಾರೆ. ಏಕೆಂದರೆ ಪ್ರಾಣವೇ ಅಲ್ಲವೆ, ಈ ವಾಗಾದಿಯಾದ ಸರ್ವಕರಣಜಾತಗಳೂ ಆಗಿರುತ್ತದೆ? ಆದ್ದರಿಂದ ಮುಖ್ಯಪ್ರಾಣವನ್ನು ಕುರಿತು ವಾಗಾದಿಗಳು ಹೇಳಿದ್ದು ಅನುರೂಪವೇ ಎಂದು ಪ್ರಕರಣಾರ್ಥವನ್ನು ಉಪಸಂಹಾರಮಾಡಲಿಚ್ಛಿಸಿ (ಶ್ರುತಿ ಹೇಳುತ್ತದೆ)

## ಚರ್ಚೆ: ವಾಗಾದಿಗಳು ಸ್ಪರ್ಧೆಮಾಡಿದವೆಂಬುದು ಹೇಗೆ ಸರಿ?

### ವಾಗಾದಿಗಳೂ ಚೇತನಾವಂತವಾಗಿವೆ

(ಭಾಷ್ಯ)

೩೭೦. ನನು ಕಥಮಿದಂ ಯುಕ್ತಂ ಚೇತನಾವನ್ತ ಇವ ಪುರುಷಾ ಅಹಂ ಶ್ರೇಷ್ಠತಾಯೈ ವಿವದನ್ತಃ[1] ಅನ್ಯೋನ್ಯಂ ಸ್ಪರ್ಧೇರನ್ ಇತಿ? ನ ಹಿ ಚಕ್ಷುರಾದೀನಾಂ ವಾಚಂ ಪ್ರತ್ಯಾಖ್ಯಾಯ ಪ್ರತ್ಯೇಕಂ ವದನಂ ಸಂಭವತಿ। ತಥಾ ಅಪಗಮೋ ದೇಹಾತ್ ಪುನಃ ಪ್ರವೇಶೋ ಬ್ರಹ್ಮಗಮನಂ ಪ್ರಾಣಸ್ತುತಿರ್ವಾ ಉಪಪದ್ಯತೇ। ತತ್ರಾಗ್ನ್ಯಾದಿಚೇತನಾವದ್ದೇವತಾಧಿಷ್ಠಿತತ್ವಾದ್ ವಾಗಾದೀನಾಂ ಚೇತನಾವತ್ತ್ವಂ ತಾವತ್ ಸಿದ್ಧಮಾಗಮತಃ। ತಾರ್ಕಿಕಸಮಯವಿರೋಧ ಇತಿ ಚೇತ್, ದೇಹ ಏಕಸ್ಮಿನ್ನನೇಕಚೇತನಾವತ್ತ್ವೇ। ನ। ಈಶ್ವರಸ್ಯ ನಿಮಿತ್ತಕಾರಣತ್ವಾಭ್ಯುಪಗಮಾತ್। ಯೇ ತಾವದೀಶ್ವರಮಭ್ಯುಪಗಚ್ಛನ್ತಿ ತಾರ್ಕಿಕಾಃ, ತೇ ಮನಆದಿಕಾರ್ಯಕರಣಾನಾಮಾಧ್ಯಾತ್ಮಿಕಾನಾಂ ಬಾಹ್ಯಾನಾಂ ಚ ಪೃಥಿ

1. 'ವಿವದಮಾನಾಃ' ಎಂದಿದ್ದು ಹೀಗೆ ಲೇಖಕರು ಬರೆದುಕೊಂಡಿರಬಹುದೆ? ಮುಂದೆ ವಿವದಮಾನಾ ಎಂದೇ ಇದೆ

ವ್ಯಾದೀನಾಮ್ ಈಶ್ವರಾಧಿಷ್ಠಿತಾನಾಮೇವ ನಿಯಮೇನ ಪ್ರವೃತ್ತಿಮಿಚ್ಛನ್ತಿ ರಥಾದಿವತ್ । ನ ಚಾಸ್ಮಾಭಿರಗ್ನ್ಯಾದ್ಯಾಷ್ಟೇತನಾವತ್ತ್ವೇಽಪಿ ದೇವತಾ ಅಧ್ಯಾತ್ಮಂ ಭೋಕ್ತ್ರ್ಯೋಽಭ್ಯುಪಗಮ್ಯನ್ತೇ, ಕಿಂ ತರ್ಹಿ, ಕಾರ್ಯಕರಣವತೀನಾಂ ಹಿ ತಾಸಾಂ ಪ್ರಾಣೈಕದೇವತಾಭೇದಾನಾಮ್ ಅಧ್ಯಾತ್ಮಾಧಿಭೂತಾಧಿದೈವಭೇದ ಕೋಟಿವಿಕಲ್ಪಾನಾಮ್ ಅಧ್ಯಕ್ಷತಾಮಾತ್ರೇಣ ನಿಯನ್ತಾ ಈಶ್ವರೋಽಭ್ಯುಪ ಗಮ್ಯತೇ। ಸ ಹ್ಯಕರಣಃ । "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯ ತ್ಯಚಕ್ಷುಃ ಸ ಶೃಣೋತ್ಯಕರ್ಣಃ" (ಶ್ವೇ. ೩-೧೯) ಇತ್ಯಾದಿಮನ್ತ್ರವರ್ಣಾತ್। "ಹಿರಣ್ಯಗರ್ಭಂ ಪಶ್ಯತ ಜಾಯಮಾನಮ್" (ಶ್ವೇ ೪-೧೨), 'ಹಿರಣ್ಯಗರ್ಭಂ ಜನಯಾಮಾಸ ಪೂರ್ವಮ್' (ಶ್ವೇ. ೩-೪) ಇತ್ಯಾದಿ ಚ ಶ್ವೇತಾಶ್ವತರೀಯಾಃ ಪಠನ್ತಿ। ಭೋಕ್ತಾ ಕರ್ಮಫಲಸಂಬನ್ಧೀ ದೇಹೇ ತದ್ವಿಲಕ್ಷಣೋ ಜೀವ ಇತಿ ವಕ್ಷ್ಯಾಮಃ ॥

(ಭಾಷ್ಯಾರ್ಥ)

(ಆಕ್ಷೇಪ) .– ಚೇತನಾವಂತರಾದ ಪುರುಷರಂತೆ (ವಾಗಾದಿಗಳು) ನಾನೇ ಶ್ರೇಷ್ಠನು (ಎಂಬ ನಿಮಿತ್ತದಲ್ಲಿ) ವಿವಾದಮಾಡುತ್ತಾ ಒಂದರೊಡನೊಂದು ಸ್ಪರ್ಧಿ ಸಿದವೆಂಬುದು ಹೇಗೆ ಸರಿ ? ವಾಕ್ಕನ್ನು ಬಿಟ್ಟರೆ ಚಕ್ಷುರಾದಿಗಳು ಒಂದೊಂದಾಗಿ ಮಾತನಾಡಿದವೆಂಬುದಾಗಲಿ ಹಾಗೆಯೇ ದೇಹವನ್ನು ಬಿಟ್ಟು (ಹೊರಗೆ) ಹೋಗು ವದಾಗಲಿ ಮತ್ತೆ (ಅಲ್ಲಿಗೆ) ಬಂದುಸೇರುವದಾಗಲಿ ಬ್ರಹ್ಮನ ಬಳಿಗೆ ಹೋಗು ವದಾಗಲಿ ಪ್ರಾಣನನ್ನು ಹೊಗಳುವದಾಗಲಿ ಹೊಂದುವದಿಲ್ಲವಲ್ಲ !

(ಪರಿಹಾರ) – ಇಲ್ಲಿ ಅಗ್ನಿಯೇ ಮುಂತಾದ ಚೇತನಾವಂತರಾದ ದೇವತೆ ಗಳಿಂದ ಅಧಿಷ್ಠಿತವಾಗಿರುವದರಿಂದ[1] ವಾಗಾದಿಗಳಿಗೆ ಚೇತನವುಂಟೆಂಬುದಂತೂ ಆಗಮದಿಂದ ಸಿದ್ಧವಾಗಿರುತ್ತದೆ.

(ಆಕ್ಷೇಪ) :– ಒಂದು ದೇಹದಲ್ಲಿಯೇ ಅನೇಕ ಚೇತನಗಳಿರುವದು ತಾರ್ಕಿಕ ಸಮಯಕ್ಕೆ ವಿರುದ್ಧವಾಗುವದಲ್ಲ[2] ?

(ಪರಿಹಾರ) – ಹಾಗಲ್ಲ. ಏಕೆಂದರೆ (ಅವರು) ಈಶ್ವರನನ್ನು ನಿಮಿತ್ತಕಾರಣ ನೆಂದು ಒಪ್ಪಿರುತ್ತಾರೆ. ಮೊದಲನೆಯದಾಗಿ ಈಶ್ವರನನ್ನೊಪ್ಪುವ ತಾರ್ಕಿಕರಿದ್ದಾರಷ್ಟೆ, ಅವರು ಮನಸ್ಸೇ ಮುಂತಾದ ಒಳಗಿನ ಕಾರ್ಯಕರಣಗಳೂ ಹೊರಗಿನ ಪೃಥಿವಿಯೇ

---

1　ಸೂ. ಭಾ. ೩-೪-೧೪ (ಭಾ. ಭಾ. ೧೯೭)ನ್ನು ನೋಡಿ.

2.　ಒಂದು ದೇಹದಲ್ಲಿ ಅನೇಕ ಚೇತನರಿದ್ದರೆ ಒಬ್ಬೊಬ್ಬರಿಗೆ ಒಂದು ವಿರುದ್ಧಾಭಿ ಪ್ರಾಯವಾದರೆ ದೇಹವು ಎಲ್ಲಾ ಕಡೆಗೂ ಜಗ್ಗಾಡಿದ್ದರಿಂದ ನಾಶವಾಗಬೇಕು , ಅಥವಾ ಅನೇಕ ಕ್ರಿಯೆಗಳು ಒಂದನ್ನೊಂದು ತಡೆಗಟ್ಟಿದರೆ ದೇಹದಲ್ಲಿ ಯಾವ ಕ್ರಿಯೆಯೂ ಆಗದೆ ಇರಬೇಕಾಗು ವದು.

ಮುಂತಾದವುಗಳೂ ಈಶ್ವರಾಧಿಷ್ಠಿತವಾಗಿಯೇ ನಿಯಮದಿಂದ ಗಾಡಿ ಮುಂತಾದವುಗಳಂತೆ (ತಮ್ಮ ಕಾರ್ಯದಲ್ಲಿ) ತೊಡಗುವವೆಂದು ಒಪ್ಪಿರುತ್ತಾರೆ[1] ನಾವು ಅಗ್ನ್ಯಾದಿದೇವತೆಗಳು ಚೇತನನಂತರಾದರೂ (ದೇಹದ) ಒಳಗೆ ಭೋಕ್ತೃಗಳಾಗಿರುವರೆಂದೇನೂ ಒಪ್ಪಿರುವದಿಲ್ಲ.[2] ಮತ್ತೇನೆಂದರೆ, ಅವು ಕಾರ್ಯಕರಣವುಳ್ಳವುಗಳೆಂದೂ ಪ್ರಾಣನೆಂಬ ಒಂದೇ ದೇವತೆಯ ಭೇದಗಳೆಂದೂ ಅಧ್ಯಾತ್ಮ, ಅಧಿಭೂತ, ಅಧಿದೈವ- ಎಂಬ (ಮೂರು) ಕೋಟೆಗಳಿಂದ ಭಿನ್ನವಾಗಿರುವ ವಿಕಲ್ಪಗಳೆಂದೂ[3] ಅವಕ್ಕೆ (ಅವುಗಳನ್ನು) ಕೇವಲ ಅಧ್ಯಕ್ಷನಾಗಿ ಈಶ್ವರನು ನಿಯಂತೃವಾಗಿರುವನೆಂದೂ ಒಪ್ಪಿರುತ್ತೇವೆ[4] ಏಕೆಂದರೆ ಅವನು (ಯಾವ) ಕರಣಗಳೂ ಇಲ್ಲದವನು ಏಕೆಂದರೆ "ಅವನು ಕೈಕಾಲುಗಳಿಲ್ಲದೆ ವೇಗವಾಗಿ ಹೋಗುವವನು, ಹಿಡಿಯುವವನು ಚಕ್ಷುಸ್ಸುಗಳಿಲ್ಲದೆ ಕಾಣುವವನು, ಕರ್ಣಗಳಿಲ್ಲದೆ ಕೇಳುವವನು' ಎಂದು ಮಂತ್ರವರ್ಣವಿದೆ (ಶ್ವೇ ೩-೧-೯) "ಹುಟ್ಟುತ್ತಿರುವ ಹಿರಣ್ಯಗರ್ಭವನ್ನು ನೋಡಿರಿ" (ಶ್ವೇ ೪-೧೨) "ಎಲ್ಲಕ್ಕೂ ಮೊದಲನೆಯವನಾದ ಹಿರಣ್ಯಗರ್ಭನನ್ನು ಹುಟ್ಟಿಸಿದನು" (ಶ್ವೇ. ೩-೪). ಎಂದೂ ಶ್ವೇತಾಶ್ವತರೀಯರು ಸಾರುತ್ತಾರೆ[5] ದೇಹದಲ್ಲಿ ಕರ್ಮಫಲಸಂಬಂಧಿಯಾಗಿ ಭೋಕ್ತೃವಾಗಿರುವ ಜೀವನು ಆ ದೇವೇಶ್ವರರುಗಳಿಗಿಂತ ಬೇರೆಯಾಗಿರುತ್ತಾನೆ- ಎಂದು ಮುಂದೆ[6] ಹೇಳುವೆವು

## ಪ್ರಾಣಸಂವಾದಕಲ್ಪನೆಯ ಪ್ರಯೋಜನ

(ಭಾಷ್ಯ)

೩.೭.೧ ವಾಗಾದೀನಾಂ ಚ ಇಹ ಸಂವಾದಃ ಕಲ್ಪಿತಃ, ವಿದುಷೋಽನ್ವಯವ್ಯತಿರೇಕಾಭ್ಯಾಂ ಪ್ರಾಣಶ್ರೈಷ್ಠ್ಯನಿರ್ಧಾರಣಾರ್ಥಮ್ । ಯಥಾ ಲೋಕೇ

---

1 ಈಶ್ವರನು ಕಾರ್ಯಕರಣಗಳಿಗೆ ಅಧಿಷ್ಠಾತೃವೆಂದು ಅವರು ಒಪ್ಪಿರುವಂತೆ ವಾಗಾದಿಗಳಿಗೆ ಅಗ್ನ್ಯಾದಿಗಳು ಅಧಿಷ್ಠಾತೃಗಳೆಂದು ಒಪ್ಪುವದರಲ್ಲಿ ಯಾವ ದೋಷ?

2 ಈಶ್ವರನನ್ನು ತಾರ್ಕಿಕರು ಒಪ್ಪಿರುವಂತೆ ನಾವು ಅವು ಬರಿಯ ಅಧಿಷ್ಠಾತೃಗಳೆಂದೇ ಹೇಳುತ್ತೇವೆ

3 ಪೃಥಿವ್ಯಾದಿದೇವತೆಗಳಿಗೆ ಕಾರ್ಯಕರಣಗಳಿರುವವೆಂಬುದನ್ನು ಬೃ ಭಾ. ೩-೨-೩ (ಭಾ ಭಾ ೭೦)ರಲ್ಲಿ ಹೇಳಿದೆ, ಅವುಗಳೆಲ್ಲವೂ ಪ್ರಾಣನ ಭೇದಗಳೇ ಎಂಬುದನ್ನು ಬೃ. ಭಾ ೩-೯-೯ (ಭಾ ಭಾ ೧೦೪)ರಲ್ಲಿ ಹೇಳಿದೆ.

4. ಪೃಥಿವ್ಯಾದಿದೇವತೆಗಳಿಗೂ ಈಶ್ವರನು ನಿಯಂತೃವೆಂಬುದನ್ನು ಅಂತರ್ಯಾಮಿ ಬ್ರಾಹ್ಮಣದಲ್ಲಿ (೩-೭-೩ ) ಹೇಳಿರುತ್ತದೆ. ಈಶ್ವರನಿಗೆ ಯಾವ ಕರಣಗಳೂ ಇಲ್ಲದಿದ್ದರೂ ದೇವತೆಗಳ ಕಾರ್ಯಕರಣಗಳಿಂದಲೇ ಅವನ್ನು ನಿಯಮನಮಾಡುತ್ತಿರುವನೆಂಬುದನ್ನು ಬೃ ಭಾ ೩ ೭ ೩ (ಭಾ. ಭಾ. ೭೦)ರಲ್ಲಿ ಸ್ಪಷ್ಟಪಡಿಸಿದೆ

5. ಈ ಶ್ರುತಿಗಳಲ್ಲಿ ಹಿರಣ್ಯಗರ್ಭನನ್ನು ಪರಮೇಶ್ವರನೇ ಹುಟ್ಟಿಸಿದನು ಎಂದಿದ್ದರಿಂದ ಅವನೇ ಸಕಲದೇವತೆಗಳಿಗೂ ಮೂಲವೆಂದು ಹೇಳಿದಂತೆ ಆಯಿತು. ಆದ್ದರಿಂದ ಅವನೇ ಎಲ್ಲರಿಗೂ ಅಧಿಷ್ಠಾತೃವೆಂದು ಹೇಳುವದು ಯುಕ್ತವೆಂದು ಭಾವ

6 ೬-೧ ೩ರ ಭಾಷ್ಯದಲ್ಲಿ.

ಪುರುಷಾ ಅನ್ಯೋನ್ಯಮ್ ಆತ್ಮನಃ ಶ್ರೇಷ್ಠತಾಯೈ ವಿವದಮಾನಾಃ ಕಂಚಿದ್ಗುಣವಿಶೇಷಾಭಿಜ್ಞಂ ಪೃಚ್ಛನ್ತಿ 'ಕೋ ನಃ ಶ್ರೇಷ್ಠೋ ಗುಣೈಃ' ಇತಿ। ತೇನೋಕ್ತಾ 'ಏಕೈಕಶ್ಯೇನ ಇದಂ ಕಾರ್ಯಂ ಸಾಧಯಿತುಮ್ ಉದ್ಯಚ್ಛತ। ಯೇನೇದಂ ಕಾರ್ಯಂ ಸಾಧ್ಯತೇ ಸ ವಃ ಶ್ರೇಷ್ಠಃ।' ಇತ್ಯುಕ್ತಾಃ ತಥೈವ ಉದ್ಯಚ್ಛನ್ತ ಆತ್ಮನೋಽನ್ಯಸ್ಯ ವಾ ಶ್ರೇಷ್ಠತಾಂ ನಿರ್ಧಾರಯನ್ತಿ। ತಥೇಮಂ ಸಂವ್ಯವಹಾರಂ ವಾಗಾದಿಷು ಕಲ್ಪಿತವತೀ ಶ್ರುತಿಃ। ಕಥಂ ನಾಮ ವಿದ್ವಾನ್ ವಾಗಾದೀನಾಮೇಕೈಕಸ್ಯಾಭಾವೇಽಪಿ ಜೀವನಂ ದೃಷ್ಟಮ್, ನ ತು ಪ್ರಾಣಸ್ಯೇತಿ ಪ್ರಾಣಶ್ರೇಷ್ಠತಾಂ ಪ್ರತಿಪದ್ಯೇತೇತಿ। ತಥಾ ಚ ಶ್ರುತಿಃ ಕೌಷೀತಕಿನಾಮ್ "ಜೀವತಿ ವಾಗಪೇತೋ ಮೂಕಾನ್ ಹಿ ಪಶ್ಯಾಮೋ ಜೀವತಿ ಚಕ್ಷುರಪೇತೋಽನ್ಧಾನ್ ಹಿ ಪಶ್ಯಾಮೋ ಜೀವತಿ ಶ್ರೋತ್ರಾಪೇತೋ ಬಧಿರಾನ್ ಹಿ ಪಶ್ಯಾಮೋ ಜೀವತಿ ಮನೋಽಪೇತೋ ಬಾಲಾನ್ ಹಿ ಪಶ್ಯಾಮೋ ಜೀವತಿ ಬಾಹುಚ್ಛಿನ್ನೋ ಜೀವತ್ಯೂರುಚ್ಛಿನ್ನಃ" (ಶಾಂ ಆ ೫-೩)[1] ಇತ್ಯಾದ್ಯಾ ॥

(ಭಾಷ್ಯಾರ್ಥ)

ಇಲ್ಲಿ ವಾಗಾದಿಗಳು ಸಂವಾದ(ಮಾಡಿದವೆಂದು) ಕಲ್ಪಿಸಿರುವದು ಉಪಾಸಕನು ಅನ್ವಯವ್ಯತಿರೇಕಗಳಿಂದ ಪ್ರಾಣವೇ ಶ್ರೇಷ್ಠವೆಂದು ಗೊತ್ತುಪಡಿಸಿಕೊಳ್ಳಲೆಂದು. ಹೇಗೆ ಲೋಕದಲ್ಲಿ ಜನರು ಒಬ್ಬರೊಡನೊಬ್ಬರು ತಮ್ಮ ಶ್ರೇಷ್ಠತೆಗಾಗಿ ವಿವಾದ ಮಾಡುತ್ತಾ ಗುಣವಿಶೇಷಗಳನ್ನು ಬಲ್ಲ ಯಾವನಾದರೊಬ್ಬನನ್ನು 'ನಮ್ಮಗಳಲ್ಲಿ ಯಾವನು ಗುಣಗಳ (ದೃಷ್ಟಿ)ಯಿಂದ ಶ್ರೇಷ್ಠನು ?' ಎಂದು ಹೇಗೆ ಕೇಳುತ್ತಾರೋ, ಅವನು 'ಒಬ್ಬೊಬ್ಬರಾಗಿ ಇಂಥ ಕಾರ್ಯವನ್ನು ಸಾಧಿಸುವದಕ್ಕೆ ಪ್ರಯತ್ನಿಸಿರಿ, ಯಾವನಿಂದ ಈ ಕಾರ್ಯವು ಸಾಧಿತವಾಗುವದೋ ಅವನೇ ನಿಮ್ಮಗಳಲ್ಲಿ ಶ್ರೇಷ್ಠನು' ಎಂದು ಹೇಳುವನೋ, ಅವನು ಹೀಗೆನ್ನಲು ಹಾಗೆಯೇ ಪ್ರಯತ್ನಿಸಿ ತಾವು ಅಥವಾ ಮತ್ತೊಬ್ಬನು ಶ್ರೇಷ್ಠನೆಂದು ಗೊತ್ತುಪಡಿಸಿಕೊಳ್ಳುವರೋ ಹಾಗೆಯೇ ಶ್ರುತಿಯು 'ವಾಗಾದಿಗಳಲ್ಲಿ ಒಂದೊಂದು ಇಲ್ಲದಿದ್ದರೂ (ಪ್ರಾಣಿಯು) ಬದುಕಿರುವದು ಕಂಡಿದೆ, ಆದರೆ ಪ್ರಾಣವು (ಇಲ್ಲದಿದ್ದರೆ ಬದುಕಿರುವದು ಕಂಡಿರುವದಿಲ್ಲ)ವಾದ್ದರಿಂದ ಪ್ರಾಣವೇ ಶ್ರೇಷ್ಠ –ಎಂಬುದನ್ನು ಉಪಾಸಕನು ಹೇಗಾದರೂ

---

1. ಇದು ಆನಂದಾಶ್ರಮದಲ್ಲಿ ಮುದ್ರಿತವಾಗಿರುವ ಶಾಂಖಾಯನಾರಣ್ಯಕದ ಪಾಠ. ನಿರ್ಣಯಸಾಗರದಲ್ಲಿ ಅಚ್ಚಾಗಿರುವ ಉಪನಿಷತ್ತಿನಲ್ಲಿ (೩-೩) "ಜೀವತಿ ವಾಗಪೇತೋ ಮೂಕಾನ್ ವಿಪಶ್ಯಾಮೋ ಬಧಿರಾನ್ ವಿಪಶ್ಯಾಮೋ ಜೀವತಿ ಬಾಹುಚ್ಛಿನ್ನೋ ಜೀವತ್ಯೂರುಚ್ಛಿನ್ನಃ" ಎಂದೇ ಪಾಠವಿದೆ. ಆ ಪಾಠದಲ್ಲಿ ಹಿ ಎಂಬುದಕ್ಕೆ ಬದಲು ವಿ ಇದೆ, ಮನೋಽಪೇತೋ ಎಂಬ ಪರ್ಯಾಯವಿಲ್ಲ. ಮುಂದಕ್ಕೆ ಇತ್ಯೇವಂ ಹಿ ಪಶ್ಯಾಮಃ ಎಂದೇ ಎರಡು ಪಾಠಗಳಲ್ಲಿಯೂ ಇದೆ.

ತಿಳಿದುಕೊಳ್ಳಲಿ' ಎಂದು ಈ ಸಂವ್ಯವಹಾರವನ್ನು ವಾಗಾದಿಗಳ ವಿಷಯದಲ್ಲಿಯೂ ಕಲ್ಪಿಸಿರುತ್ತದೆ.[1] ಆದ್ದರಿಂದಲೇ ಕೌಷೀತಕಿಗಳ ಶ್ರುತಿಯು "ವಾಕ್ಕಿಲ್ಲದವನೂ ಬದುಕಿರುತ್ತಾನೆ, ಮೂಕರನ್ನು ಕಂಡಿದೇವಷ್ಟೆ? ಚಕ್ಷುಸ್ಸಿಲ್ಲದವನೂ ಬದುಕಿರುತ್ತಾನೆ, ಕುರುಡರನ್ನು ಕಂಡಿರುತ್ತೇವಷ್ಟೆ ? ಶ್ರೋತ್ರವಿಲ್ಲವವನೂ ಬದುಕಿರುತ್ತಾನೆ, ಕಿವುಡರನ್ನು ಕಂಡಿರುತ್ತೇವಷ್ಟೆ ? ಮನಸ್ಸಿಲ್ಲದವನೂ ಬದುಕಿರುತ್ತಾನೆ, ಬಾಲರನ್ನು ಕಂಡಿರುತ್ತೇವಷ್ಟೆ ? ತೋಳುಕತ್ತರಿಸಿಕೊಂಡವನೂ ಬದುಕಿರುತ್ತಾನೆ, ತೊಡೆಕತ್ತರಿಸಿಕೊಂಡವನೂ ಬದುಕಿರುತ್ತಾನೆ" (ಶಾಂ ಆ ಕೌ ೫ ೩) ಎಂದು ಮುಂತಾಗಿ (ರುತ್ತದೆ).

---

# ಐದನೆಯ ಅಧ್ಯಾಯ - ಎರಡನೆಯ ಖಂಡ

(ಪ್ರಾಣೋಪಾಸನೆ ಮುಂದ ವರಿವದು)

## ಪ್ರಾಣನ ಅನ್ನವೂ ವಸ್ತ್ರವೂ

(ಉಪನಿಷತ್ತು)

**ಸ ಹೋವಾಚ ಕಿಂ ಮೇಽನ್ನಂ ಭವಿಷ್ಯತೀತಿ ಯತ್ಕಿಂಚದಿದಮಾ ಶ್ವಭ್ಯ ಆ ಶಕುನಿಭ್ಯ ಇತಿ ಹೋಚುಸ್ತದ್ವಾ ಏತದನಸ್ಯಾನ್ನ ಮನೋ ಹ ವೈ ನಾಮ ಪ್ರತ್ಯಕ್ಷಂ ನ ಹ ವಾ ಏವಂವಿದಿ ಕಿಂಚನಾ ನನ್ನಂ ಭವತೀತಿ ॥ ೧ ॥**

೧. ಅವನು 'ನನಗೆ ಅನ್ನವು ಯಾವದಾಗಿರುವದು ?' ಎಂದನು. 'ನಾಯಿಗಳವರೆಗೂ ಹಕ್ಕಿಗಳವರೆಗೂ ಯಾವಯಾವ (ಅನ್ನವಿದೆಯೋ ಅವೆಲ್ಲವೂ)' ಎಂದವು. ಆ ಇದೇ ಅವನ ಅನ್ನವು, ಅನ ಎಂಬ ನಾಮವು ಪ್ರತ್ಯಕ್ಷವಷ್ಟೆ ? ಹೀಗೆಂದರಿತಿರುವವನಿಗ ಯಾವದೊಂದೂ ಅನನ್ನವಾಗಿರುವದಿಲ್ಲ.

### ಪ್ರಾಣನ ಅನ್ನ

(ಭಾಷ್ಯ)

೩-೭-೨ ಸ ಹೋವಾಚ ಮುಖ್ಯಃ ಪ್ರಾಣಃ ಕಿಂ ಮೇಽನ್ನಂ ಭವಿಷ್ಯತೀತಿ । ಮುಖ್ಯಂ ಪ್ರಾಣಂ ಪ್ರಷ್ಟಾರಮಿವ ಕಲ್ಪಯಿತ್ವಾ ವಾಗಾದೀನ್ ಪ್ರತಿವಕ್ತ್ರೄನಿವ

1. ಪ್ರಾಂ. ಕಾ ಭಾ ೩-೧೫ (ಭಾ ಭಾ. ೧೫೬, ೧೫೭)- ಇವುಗಳಲ್ಲಿ ಈ ವಿಷಯ ವಲ್ಲಿ ಹೇಳಿರುವದನ್ನು ನೋಡಿರಿ.

ಕಲ್ಪಯನ್ತೀ ಶ್ರುತಿರಾಹ। ಯದಿದಂ ಲೋಕೇ ಅನ್ನಜಾತಂ ಪ್ರಸಿದ್ಧಮ್ ಆ ಶ್ವಭ್ಯಃ ಶ್ವಭಿಃ ಸಹ ಆ ಶಕುನಿಭ್ಯಃ ಸಹ ಶಕುನಿಭಿಃ ಸರ್ವಪ್ರಾಣಿನಾಂ ಯತ್ ಅನ್ನಂ ತತ್ ತವಾನ್ನಮಿತಿ ಹ ಊಚುರ್ವಾಗಾದಯ ಇತಿ। ಪ್ರಾಣಸ್ಯ ಸರ್ವಮನ್ನಂ ಪ್ರಾಣೋಽತ್ತಾ ಸರ್ವಸ್ಯಾನ್ನಸ್ಯ ಇತ್ಯೇವಂ ಪ್ರತಿಪತ್ತಯೇ ಕಲ್ಪಿತಾಖ್ಯಾಯಿಕಾರೂಪಾದ್ ವ್ಯಾವೃತ್ಯ ಸ್ವೇನ ಶ್ರುತಿರೂಪೇಣ ಆಹ। ತದ್ವಾ ಏತತ್ ಯತ್ಕಿಂಚಿತ್ ಲೋಕೇ ಪ್ರಾಣಿಭಿಃ ಅನ್ನಮ್ ಅದ್ಯತೇ ಅನಸ್ಯ ಪ್ರಾಣಸ್ಯ ತದನ್ನಂ ಪ್ರಾಣೇನೈವ ತತ್ ಅದ್ಯತೇ ಇತ್ಯರ್ಥಃ। ಸರ್ವಪ್ರಕಾರಚೇಷ್ಟಾವ್ಯಾಪ್ತಿಗುಣಪ್ರದರ್ಶನಾರ್ಥಮ್ ಅನ ಇತಿ ಪ್ರಾಣಸ್ಯ ಪ್ರತ್ಯಕ್ಷಂ ನಾಮ। ಪ್ರಾದ್ಯುಪಸರ್ಗಪೂರ್ವತ್ವೇ ಹಿ ವಿಶೇಷಗತಿರೇವ ಸ್ಯಾತ್। ತಥಾ ಚ ಸರ್ವಾನ್ನಾನಾಮ್ ಅತ್ತುರ್ನಾಮಗ್ರಹಣಮ್ ಇತೀದಂ ಪ್ರತ್ಯಕ್ಷಂ ನಾಮ ಅನ ಇತಿ ಸರ್ವಾನ್ನಾನಾಮತ್ತುಃ ಸಾಕ್ಷಾದಭಿಧಾನಮ್। ನ ಹ ವಾ ಏವಂವಿದಿ ಯಥೋಕ್ತಪ್ರಾಣವಿದಿ ಪ್ರಾಣೋಽಹಮಸ್ಮಿ ಸರ್ವಭೂತಸ್ಥಃ ಸರ್ವಾನ್ನಾನಾಮತ್ತಾ ಇತಿ ತಸ್ಮಿನ್ನೇವಂವಿದಿ ಹ ವೈ ಕಿಂಚನ ಕಿಂಚಿದಪಿ ಪ್ರಾಣಿಭಿರಾದ್ಯಂ ಸರ್ವೈಃ ಅನನ್ನಮ್ ಅನ್ನಾದ್ಯಂ[1] ನ ಭವತಿ। ಸರ್ವಮ್ ಏವಂವಿದಿ ಅನ್ನಂ ಭವತೀತ್ಯರ್ಥಃ। ಪ್ರಾಣಭೂತತ್ವಾತ್ ವಿದುಷಃ। "ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತಮೇತಿ" ಇತ್ಯುಪಕ್ರಮ್ಯ "ಏವಂವಿದೋ ಹ ವಾ ಉದೇತಿ ಸೂರ್ಯ ಏವಂವಿದ್ಯಸ್ತಮೇತಿ" ( ? )[2] ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

ಆ ಮುಖ್ಯಪ್ರಾಣನು ಇಂತೆಂದನು 'ನನಗೆ ಅನ್ನವು ಯಾವಾದಾಗಿರುವದು ?' ಮುಖ್ಯಪ್ರಾಣನು ಕೇಳಿದಂತೆ ಕಲ್ಪಿಸಿ ವಾಗಾದಿಗಳು ಉತ್ತರಹೇಳಿದಂತೆ ಕಲ್ಪಿಸಿ ಶ್ರುತಿಯು 'ಲೋಕದಲ್ಲಿ ನಾಯಿಗಳವರೆಗೂ, ನಾಯಿಗಳನ್ನೂ ಸೇರಿಸಿಕೊಂಡು, ಹಕ್ಕಿಗಳವರೆಗೂ, ಹಕ್ಕಿಗಳನ್ನೂ ಸೇರಿಸಿಕೊಂಡು, ಎಲ್ಲಾ ಪ್ರಾಣಿಗಳಿಗೂ ಲೋಕದಲ್ಲಿ ಯಾವ ಪ್ರಸಿದ್ಧವಾದ ಅನ್ನಜಾತವಿರುವದೋ, ಅದು ನಿನ್ನ ಅನ್ನವು ಎಂದು ವಾಗಾದಿಗಳು ಅಂದವು'– ಎಂದಿದೆ.[3] ಪ್ರಾಣನಿಗೆ ಎಲ್ಲವೂ ಅನ್ನವು, ಪ್ರಾಣನೇ ಎಲ್ಲಾ ಅನ್ನಕ್ಕೂ ಅತ್ತೃ ಎಂದಿಂತು ತಿಳಿಯಲೆಂದು ಕಲ್ಪಿತವಾದ ಕಥೆಯ ರೂಪದಿಂದ ಹಿಂತಿರುಗಿ ತನ್ನ ಶ್ರುತಿರೂಪದಿಂದ (ಹೀಗೆಂದು) ಹೇಳುತ್ತಿದೆ : ಆ

---

1. 'ಅನ್ನಾದ್ಯಂ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ, 'ಅನದ್ಯಂ' ಎಂಬ ಪಾಠವೂ ಸರಿಯಲ್ಲ.

2. ಇದು ಯಾವ ಶ್ರುತಿಯೋ ತಿಳಿಯದು. 'ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತಮೇತಿ' ಎಂದು ಮಾತ್ರ ಬೃ. ೧-೫-೨೩ರಲ್ಲಿದೆ.

3. ಈ ಕಲ್ಪನೆಯು ಸರ್ವಾನ್ನವೂ ಪ್ರಾಣನಾದ ನನ್ನದು ಎಂದು ಉಪಾಸನೆಮಾಡಲೆಂದೇ ಹೊರತು ನಿಜವಾಗಿ ಸರ್ವಾನ್ನಭಕ್ಷಣೆಯನ್ನು ಮಾಡಲೆಂದಲ್ಲ, ಇದನ್ನೇ ಮುಂದಿನ ವಾಕ್ಯದಲ್ಲಿ ಹೇಳಿದೆ.

ಇದು, ಲೋಕದಲ್ಲಿ ಯಾವಯಾವದನ್ನು ಪ್ರಾಣಿಗಳು ತಿನ್ನುತ್ತವೆಯೋ ಅದು ಅವನಿಗೆ ಪ್ರಾಣನಿಗೆ ಅನ್ನವು; ಪ್ರಾಣನೇ ಅದನ್ನು ತಿನ್ನುತ್ತಾನೆ ಎಂದರ್ಥ. ಸರ್ವಪ್ರಕಾರದ ಕೆಲಸವನ್ನೂ ವ್ಯಾಪಿಸಿಕೊಂಡಿರುವದೆಂಬ ಗುಣವನ್ನು ತಿಳಿಸುವದಕ್ಕಾಗಿ ಪ್ರಾಣನಿಗೆ ಅನ ಎಂಬ ಪ್ರತ್ಯಕ್ಷನಾಮವು (ಬಂದಿದೆ). ಪ್ರ ಮುಂತಾದ ಉಪಸರ್ಗವಿದ್ದರೆ ವಿಶೇಷಾರ್ಥವೇ ತಿಳಿಯುತ್ತಿತ್ತಷ್ಟೆ[1] ? ಆದ್ದರಿಂದ ಸರ್ವಾನ್ನಗಳನ್ನೂ ತಿನ್ನುವವನ ನಾಮಗ್ರಹಣವಾದ್ದರಿಂದ ಇದು ಪ್ರತ್ಯಕ್ಷನಾಮವು; (ಈ) ಅನವೆಂಬುದು ಎಲ್ಲಾ ಅನ್ನಗಳನ್ನೂ ತಿನ್ನುವ (ಪ್ರಾಣನ) ನೇರಾದ ಹೆಸರು.[2]

ಹೀಗೆಂದು ತಿಳಿದವನ (ವಿಷಯ)ದಲ್ಲಿ, ನಾನು ಸರ್ವಭೂತಗಳಲ್ಲಿಯೂ ಇರುವ ಸರ್ವಾನ್ನಗಳ ಅತ್ತೃವಾಗಿರುವೆನು ಎಂದು ಮೇಲೆ ಹೇಳಿರುವ ಪ್ರಾಣನ ಉಪಾಸಕನ (ವಿಷಯ)ದಲ್ಲಿ, ಆ ಹೀಗೆಂದು ತಿಳಿದವನ (ವಿಷಯ)ದಲ್ಲಿ, (ಕಿಂಚನ=ಕಿಂಚಿದಪಿ) ಎಲ್ಲಾ ಪ್ರಾಣಿಗಳು ತಿನ್ನುವ ಯಾವದೊಂದೂ ಅನನ್ನವಾಗಿರುವದಿಲ್ಲ. ಅನಾದ್ಯವಾಗಿರುವದಿಲ್ಲ. ಹೀಗೆಂದು ಉಪಾಸನೆಮಾಡಿರುವವನಿಗೆ ಎಲ್ಲವೂ ಅನ್ನವಾಗಿರುತ್ತದೆ ಎಂದರ್ಥ; ಏಕೆಂದರೆ ಉಪಾಸಕನು ಪ್ರಾಣವೇ ಆಗಿಬಿಟ್ಟಿರುತ್ತಾನೆ.[3] "ಪ್ರಾಣನಿಂದಲೇ ಈ (ಸೂರ್ಯನು) ಉದಯಿಸುತ್ತಾನೆ, ಪ್ರಾಣನಲ್ಲಿಯೇ ಅಸ್ತಮಿಸುತ್ತಾನೆ" ಎಂದು ಉಪಕ್ರಮಿಸಿ "ಹೀಗೆಂದು ತಿಳಿದುಕೊಂಡಿರುವವನಿಂದಲೇ ಸೂರ್ಯನು ಉದಯಿಸುತ್ತಾನೆ. ಹೀಗೆಂದು ತಿಳಿದುಕೊಂಡಿರುವವನಲ್ಲಿಯೇ ಅಸ್ತವಾಗುತ್ತಾನೆ" ( ? ) ಎಂಬ ಶ್ರುತ್ಯಂತರದಿಂದ (ಇದು ಸಿದ್ಧವಾಗುತ್ತದೆ).

(ಉಪನಿಷತ್ತು)

**ಸ ಹೋವಾಚ ಕಿಂ ಮೇ ವಾಸೋ ಭವಿಷ್ಯತೀತ್ಯಾಪ ಇತಿ ಹೋಚುಸ್ತಸ್ಮಾದ್ವಾ ಏತದಶಿಷ್ಯನ್ತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್ಭಿಃ ಪರಿದಧತಿ ಲಮ್ಭುಕೋ ಹ ವಾಸೋ ಭವತ್ಯನಗ್ನೋ ಹ ಭವತಿ ॥ ೨ ॥**

---

1. ಪ್ರಾಣ, ಅಪಾನ - ಮುಂತಾದವು ವಿಶೇಷವೃತ್ತಿಗಳ ಹೆಸರಷ್ಟೆ ? ಎಂದರ್ಥ.

2. ಅನ ಎಂಬುದು ಪ್ರಾಣಸಾಮಾನ್ಯದ ಹೆಸರಾದ್ದರಿಂದ ಎಲ್ಲಾ ಪ್ರಾಣಿಗಳ ಚೇಷ್ಟೆಗಳನ್ನು ತಿಳಿಸುತ್ತದೆ; ಆದ್ದರಿಂದ ಎಲ್ಲಾ ಬಗೆಯ ಅನ್ನವನ್ನೂ ತಿನ್ನುವವನು ಎಂಬರ್ಥವು ಇದರಿಂದ ಹೊರಡುತ್ತದೆ ಎಂದು ಭಾವ.

3. ಇಲ್ಲಿ ಪ್ರಾಣಾನ್ನೋಪಾಸಕನಿಗೆ ಸರ್ವವೂ ಅನ್ನವೆಂಬ ಅಭಿಪ್ರಾಯವೇನೂ ಇಲ್ಲ; ಅವನು ಅಭಕ್ಷ್ಯಭಕ್ಷಣವನ್ನು ಮಾಡಿದರೂ ದೋಷವೇ. ಆದ್ದರಿಂದ ಇದು ವಿದ್ಯಾಸ್ತುತಿಯೇ. ಬೃ. ಭಾ. ೬-೧-೧೪ (ಭಾ. ಭಾ. ೪೨೨, ೪೨೪) ಸೂ. ಭಾ. ೩-೪-೨೮ (ಭಾ.ಭಾ. ೪೭೩)ನ್ನು ನೋಡಿ.

೨. ಅವನು 'ನನಗೆ ಯಾವದು ವಸ್ತ್ರವಾಗಿರುವದು?' ಎಂದನು. 'ನೀರು' ಎಂದರು. ಆದ್ದರಿಂದಲೇ ಊಟಮಾಡಲಿರುವಾಗ ಹೀಗೆ ಮೊದಲೂ ಆಮೇಲೂ ನೀರಿನಿಂದ ಹೊದಿಸುತ್ತಾರೆ. ವಸ್ತ್ರವನ್ನು ಪಡೆಯುವವನಾಗುತ್ತಾನೆ, ಬೆತ್ತಲೆಯಲ್ಲದವನೂ ಆಗುತ್ತಾನೆ.

## ಪ್ರಾಣನಿಗೆ ವಸ್ತ್ರ

(ಭಾಷ್ಯ)

೩೭೨. ಸ ಹ ಉವಾಚ ಪುನಃ ಪ್ರಾಣಃ। ಪೂರ್ವವದೇವ ಕಲ್ಪನಾ। ಕಿಂ ಮೇ ವಾಸೋ ಭವಿಷ್ಯತೀತಿ। ಆಪ ಇತಿ ಹ ಊಚುರ್ವಾಗಾದಯಃ। ಯಸ್ಮಾತ್ ಪ್ರಾಣಸ್ಯ ವಾಸ ಆಪಃ, ತಸ್ಮಾದ್ ವಾ ಏತತ್ ಅಶಿಷ್ಯನ್ತೋ ಭೋಕ್ಷ್ಯಮಾಣಾಃ ಭುಕ್ತವನ್ತಶ್ಚ ಬ್ರಾಹ್ಮಣಾಃ ವಿದ್ವಾಂಸಃ ಏತತ್ ಕುರ್ವನ್ತಿ। ಕಿಮ್? ಅದ್ಭಿಃ ವಾಸಸ್ಥಾನೀಯಾಭಿಃ ಪುರಸ್ತಾದ್ ಭೋಜನಾತ್ ಪೂರ್ವಮ್, ಉಪರಿಷ್ಟಾಚ್ಚ ಭೋಜನಾದ್ ಊರ್ಧ್ವಂ ಚ ಪರಿದಧತಿ ಪರಿಧಾನಂ ಕುರ್ವನ್ತಿ ಮುಖ್ಯಸ್ಯ ಪ್ರಾಣಸ್ಯ ಲಮ್ಭುಕೋ ಲಮ್ಭನಶೀಲೋ ವಾಸೋ ಹ ಭವತಿ। ವಾಸಸೋ ಲಬ್ಧೈವ ಭವತಿ ಇತ್ಯರ್ಥಃ। ಅನಗ್ನೋ ಹ ಭವತಿ। ವಾಸಸೋ ಲಮ್ಭುಕತ್ವೇನ ಅರ್ಥಸಿದ್ಧೈವ ಅನಗ್ನತಾ ಇತ್ಯನಗ್ನೋ ಹ ಭವತೀತಿ ಉತ್ತರೀಯವಾನ್ ಭವತಿ ಇತ್ಯೇತತ್ ॥

(ಭಾಷ್ಯಾರ್ಥ)

ಆ ಪ್ರಾಣನು ಮತ್ತೂ ಇಂತೆಂದನು (ಇಲ್ಲಿಯೂ) ಹಿಂದಿನಂತೆಯೇ ಕಲ್ಪನೆ[1] 'ನನಗೆ ಯಾವದು ವಸ್ತ್ರವಾಗಿರುವದು?' 'ನೀರು' ಎಂದು ವಾಗಾದಿಗಳೆಂದವು (ಹೀಗೆ) ಪ್ರಾಣನಿಗೆ ನೀರು ವಸ್ತ್ರವಷ್ಟೆ, ಆದ್ದರಿಂದಲೇ ಹೀಗೆ ಊಟಮಾಡಲಿರುವಾಗ ಭೋಜನಮಾಡಲಿರುವವರಾದಾಗ ಮತ್ತು ಭೋಜನಮಾಡಿದವರಾದಾಗ ಉಪಾಸಕರಾದ ಬ್ರಾಹ್ಮಣರು ಇದನ್ನು ಮಾಡುವರು. ಏನನ್ನು? ವಸ್ತ್ರದಂತಿರುವ ನೀರಿನಿಂದ ಮೊದಲೂ ಊಟಕ್ಕಿಂತ ಮುಂಚೆಯೂ ಆಮೇಲೂ ಊಟವಾದ ಮೇಲೂ ಮುಖ್ಯಪ್ರಾಣನಿಗೆ (ಪರಿದಧತಿ= ಪರಿಧಾನಂ ಕುರ್ವನ್ತಿ) ಉಡಿಗೆಯನ್ನು ಮಾಡುವರು. ವಸ್ತ್ರವನ್ನು (ಲಮ್ಭುಕಃ= ಲಮ್ಭನಶೀಲಃ) ಪಡೆಯುವವನೂ ಆಗುತ್ತಾನೆ, ವಸ್ತ್ರವನ್ನು ಪಡೆಯುವವನೇ ಆಗುತ್ತಾನೆ ಎಂದರ್ಥ. ಬೆತ್ತಲೆಯಲ್ಲದವನೂ ಆಗುತ್ತಾನೆ, ವಸ್ತ್ರವನ್ನು ಪಡೆದದ್ದರಿಂದಲೇ

1 ಪ್ರಾಣನು ಕೇಳಿದನೆಂದೂ ವಾಗಾದಿಗಳು ಹೇಳಿದವೆಂದೂ ಹೇಳಿರುವದು ಹಿಂದಿನಂತೆ ಉಪಾಸನೆಗಾಗಿಯೇ

ಬೆತ್ತಲೆಯಲ್ಲದವನೆಂದಾಗುವವರಿಂದ ಬೆತ್ತಲೆಯಲ್ಲದವನಾಗುತ್ತಾನೆ ಎಂಬುದಕ್ಕೆ ಮೇಲುಹೊದಿಕೆಯುಳ್ಳವನೂ ಆಗುತ್ತಾನೆ ಎಂದರ್ಥ.[1]

## ಚರ್ಚೆ : ಇದು ವಸ್ತ್ರದೃಷ್ಟಿಯೊ, ಆಚಮನಾಂತರವಿಧಿಯೊ ?

(ಭಾಷ್ಯ)

೩೭೪. ಭೋಕ್ಷ್ಯಮಾಣಸ್ಯ ಭುಕ್ತವತಶ್ಚ ಯತ್ ಆಚಮನಂ ಶುದ್ಧ್ಯರ್ಥಂ ವಿಜ್ಞಾತಮ್, ತಸ್ಮಿನ್ ಪ್ರಾಣಸ್ಯ ವಾಸ ಇತಿ ದರ್ಶನಮಾತ್ರಮ್ ಇಹ ವಿಧೀಯತೇ। ‘ಅದ್ಭಿಃ ಪರಿದಧತಿ’ ಇತಿ, ನಾಚಮನಾನ್ತರಮ್। ಯಥಾ ಲೌಕಿಕೈಃ ಪ್ರಾಣಿಭಿರದ್ಯಮಾನಮ್ ಅನ್ನಂ ಪ್ರಾಣಸ್ಯ ಇತಿ ದರ್ಶನಮಾತ್ರಮ್, ತದ್ವತ್। ‘ಕಿಂ ಮೇಽನ್ನಮ್’, ‘ಕಿಂ ಮೇ ವಾಸಃ ?’—ಇತ್ಯಾದಿಪ್ರಶ್ನಪ್ರತಿವಚನಯೋಸ್ತುಲ್ಯತ್ವಾತ್। ಯದಾ ಆಚಮನಮ್ ಅಪೂರ್ವಂ ತಾದರ್ಥ್ಯೇನ ಕ್ರಿಯೇತ ತದಾ ಕ್ರಮ್ಯಾದ್ಯನ್ನಮಪಿ ಪ್ರಾಣಸ್ಯ ಭಕ್ಷ್ಯತ್ವೇನ ವಿಹಿತಂ ಸ್ಯಾತ್। ತುಲ್ಯಯೋರ್ವಿಜ್ಞಾನಾರ್ಥಯೋಃ ಪ್ರಕರಣಸ್ಯ ವಿಜ್ಞಾನಾರ್ಥತ್ವಾತ್ ಅರ್ಧಜರತೀಯೋ ನ್ಯಾಯೋ ನ ಯುಕ್ತಃ ಕಲ್ಪಯಿತುಮ್। ಯತ್ತು ಪ್ರಸಿದ್ಧಮಾಚಮನಂ ಪ್ರಾಯತ್ಯಾರ್ಥಂ ಪ್ರಾಣಸ್ಯ ಅನಗ್ನತಾರ್ಥಂ ಚ ನ ಭವತೀತ್ಯುಚ್ಯತೇ ನ ತಥಾ ವಯಮ್ ಆಚಮನಮ್ ಉಭಯಾರ್ಥಂ ಬ್ರೂಮಃ। ಕಿಂ ತರ್ಹಿ ಪ್ರಾಯತ್ಯಾರ್ಥಾಚಮನಸಾಧನಭೂತಾ ಆಪಃ ಪ್ರಾಣಸ್ಯ ವಾಸ ಇತಿ ದರ್ಶನಂ ಚೋದ್ಯತ ಇತಿ ಬ್ರೂಮಃ। ತತ್ರ ಆಚಮನಸ್ಯ ಉಭಯಾರ್ಥತ್ವಪ್ರಸಙ್ಗದೋಷ ಚೋದನಾ ಅನುಪಪನ್ನಾ। ವಾಸೋಽರ್ಥ ಏವ ಆಚಮನೇ ತದ್ದರ್ಶನಂ ಸ್ಯಾದಿತಿ ಚೇತ್। ನ। ವಾಸೋಜ್ಞಾನಾರ್ಥವಾಕ್ಯೇ ವಾಸೋಽರ್ಥಾಪೂರ್ವಾಚಮನ ವಿಧಾನೇ ತತ್ರ ಅನಗ್ನತಾರ್ಥತ್ವದೃಷ್ಟಿವಿಧಾನೇ ಚ ವಾಕ್ಯಭೇದಃ। ಆಚಮನಸ್ಯ ತದರ್ಥತ್ವಮ್ ಅನ್ಯಾರ್ಥತ್ವಂ ಚ ಇತಿ ಪ್ರಮಾಣಾಭಾವಾತ್ ॥

(ಭಾಷ್ಯಾರ್ಥ)

ಊಟಮಾಡುವ ಮೊದಲೂ ಮತ್ತು ಊಟಮಾಡಿದ ಮೇಲೂ ಶುದ್ಧ್ಯರ್ಥವಾಗಿ ಮಾಡಬೇಕೆಂದು ಆಚಮನವು (ಸ್ಮೃತಿಯಿಂದ) ತಿಳಿದುಬಂದಿದೆಯಷ್ಟೆ? ಅದರಲ್ಲಿ (ಇದು) ಪ್ರಾಣನ ವಸ್ತ್ರವು –ಎಂದು ದೃಷ್ಟಿಮಾತ್ರವನ್ನು ‘ನೀರಿನಿಂದ ಹೊದಿಸುತ್ತಾರೆ’ (ಎಂಬ ವಾಕ್ಯದಿಂದ) ವಿಧಿಸಿರುತ್ತಾರೆಯೇ ಹೊರತು ಮತ್ತೊಂದು ಆಚಮನವನ್ನು (ವಿಧಿಸು)ವದಿಲ್ಲ. ಹೇಗೆ ಲೋಕದ ಪ್ರಾಣಿಗಳು ತಿನ್ನುವ

1. ಮೊದಲಿನ ಆಚಮನವು ಉಡುವ ವಸ್ತ್ರ, ಆಮೇಲಿನದು ಹೊದೆಯುವ ವಸ್ತ್ರ- ಎಂಬ ವಿಶೇಷಾರ್ಥವು ಇದರಿಂದ ಹೊರಡುತ್ತದೆ.

ಅನ್ನವು ಪ್ರಾಣನದೆಂದು (ಹಿಂದಿನ ಕಂಡಿಕೆಯಲ್ಲಿ) ದರ್ಶನಮಾತ್ರವನ್ನು (ವಿಧಿಸಿದೆಯೋ) ಹಾಗೆಯೇ (ಇದು), ಏಕೆಂದರೆ 'ನನಗೆ ಯಾವದು ಅನ್ನವು ?', 'ನನಗೆ ಯಾವದು ವಸ್ತ್ರವು ?'- ಎಂದು ಮುಂತಾಗಿರುವ ಪ್ರಶ್ನೋತ್ತರಗಳೆರಡೂ ಸಮಾನವಾಗಿರುತ್ತವೆ. ಹೊಸದಾಗಿ ಆಚಮನವನ್ನು ಇದಕ್ಕಾಗಿ (ಇಲ್ಲಿ) ವಿಧಿಸಿದೆ ಎಂದಾದರೆ, ಆಗ ಕ್ರಿಮಿಯೇ ಮುಂತಾದವುಗಳ ಅನ್ನವನ್ನೂ ಪ್ರಾಣನಿಗೆ ಭಕ್ಷ್ಯವೆಂದು ವಿಹಿತವಾಗಿದೆ ಎನ್ನಬೇಕಾದೀತು. ಏಕೆಂದರೆ ಉಪಾಸನೆಗಾಗಿ ಬಂದಿರುವ ಸಮಾನವಾಗಿರುವ (ಎರಡು) ಪ್ರಶ್ನಪ್ರತಿವಚನಗಳಲ್ಲಿ- (ಈ) ಪ್ರಕರಣವು ಉಪಾಸನೆಗಾಗಿಯೇ ಬಂದಿರುವದರಿಂದ- ಅರ್ಧಜರತೀಯನ್ಯಾಯವನ್ನು ಕಲ್ಪಿಸುವದು ಯುಕ್ತವಲ್ಲ.[2]

(ಇನ್ನು) 'ಪ್ರಸಿದ್ಧವಾದ (ಸ್ಮಾರ್ತವಾದ) ಆಚಮನವು ಶುದ್ಧಿಗಾಗಿಯೂ ಪ್ರಾಣನ ಅನಗ್ನತೆಗಾಗಿಯೂ ಇರಲಾರದು' ಎಂದು ಹೇಳುತ್ತಾರಲ್ಲ[3], ಹಾಗೇನೂ ನಾವು ಆಚಮನವನ್ನು ಎರಡಕ್ಕಾಗಿಯೂ (ಮಾಡಬೇಕೆಂದು ಕಲ್ಪಿಸಿ) ಹೇಳಿರುವದಿಲ್ಲ. ಮತ್ತೇನೆಂದರೆ ಶುದ್ಧಿಗಾಗಿ (ವಿಧಿಸಿರುವ) ಆಚಮನಕ್ಕೆ ಬೇಕಾಗಿರುವ ನೀರು ಪ್ರಾಣನಿಗೆ ವಸ್ತ್ರವು ಎಂಬ ದೃಷ್ಟಿಯನ್ನು (ಇಲ್ಲಿ) ವಿಧಿಸಿದೆ ಎನ್ನುತ್ತೇವೆ. ಹೀಗಿರುವಲ್ಲಿ ಆಚಮನವು ಎರಡು ಪ್ರಯೋಜನಕ್ಕೂ (ವಿಹಿತವಾದಂತಾಯಿತು) ಎಂಬ ಆಕ್ಷೇಪವು ಸರಿಯಲ್ಲ.

(ಆಕ್ಷೇಪ).- ವಸ್ತ್ರಾರ್ಥವಾಗಿ ಮಾಡುವ ಆಚಮನದಲ್ಲಿಯೇ ಆ ದೃಷ್ಟಿಯಾಗಬಹುದಲ್ಲ ![4]

(ಪರಿಹಾರ).- ಹಾಗಲ್ಲ. ಏಕೆಂದರೆ ವಸ್ತ್ರದೃಷ್ಟಿಗಾಗಿ ಬಂದಿರುವ ವಾಕ್ಯದಲ್ಲಿ ವಸ್ತ್ರಾರ್ಥವಾಗಿ ಹೊಸದೊಂದು ಆಚಮನವನ್ನು ವಿಧಿಸಿ, ಅದರಲ್ಲಿ ಅನಗ್ನತೆಗಾಗಿ ಬಂದಿದೆ ಎಂಬ ದೃಷ್ಟಿಯನ್ನು ವಿಧಿಸಿದೆ (ಎಂದರೆ) ವಾಕ್ಯಭೇದ(ವಾದೀತು).

---

1. ಪ್ರಾಣೋಪಾಸಕನಿಗೆ ಎಂದೇ ಅರ್ಥ; ಏಕೆಂದರೆ ಪ್ರಾಣನಿಗೆ ಎಲ್ಲವೂ ಭಕ್ಷ್ಯವೇ ಎಂಬುದು ಇಷ್ಟವೇ ಆಗಿದೆ.

2. ಒಂದೇ ಮುದಿಕೋಳಿಯನ್ನು ಅಡಿಗೆಗೂ ಮರಿಮಾಡಲಿಕ್ಕೂ ಉಪಯೋಗಿಸುವವೆಂಬುದು ಹೊಂದದಿರುವಂತೆ ಒಂದೇ ಪ್ರಕರಣದಲ್ಲಿರುವ ಒಂದಂಶಕ್ಕೆ ವಿಧಿಯಿದೆ, ಮತ್ತೊಂದಕ್ಕೆ ಇಲ್ಲ ಎನ್ನುವದು ಅಯುಕ್ತ ಎಂದರ್ಥ.

3. ಪೂರ್ವಪಕ್ಷಿಗಳು ಹೀಗೆನ್ನುತ್ತಾರೆ. ಬೃ. ಭಾ. ೬-೧-೧೪ (ಭಾ. ಭಾ. ೪೨೫)ನ್ನು ನೋಡಿ. ಸೂ. ಭಾ. ೩-೩-೧೮ (ಭಾ. ಭಾ. ೩೫೩)ನ್ನು ನೋಡಿ.

4. ಶುದ್ಧ್ಯಾಚಮನದಲ್ಲಿ ದೃಷ್ಟಿ ಬೇಡ, ವಸ್ತ್ರಾರ್ಥವಾಗಿ ಆಚಮನವನ್ನು ವಿಧಿಸಿವೆ, ಅದರಲ್ಲಿಯೇ ದೃಷ್ಟಿಯನ್ನು ವಿಧಿಸಿದೆ ಎನ್ನೋಣ -ಎಂದಭಿಪ್ರಾಯ.

ಏಕೆಂದರೆ ಆಚಮನವು ಅದಕ್ಕಾಗಿಯೂ ಬಂದಿದೆ, ಮತ್ತೊಂದಕ್ಕಾಗಿಯೂ ಬಂದಿದೆ ಎಂಬುದಕ್ಕೆ ಪ್ರಮಾಣವಿಲ್ಲ.[1]

## ಪ್ರಾಣದರ್ಶನಸ್ತುತಿ

(ಉಪನಿಷತ್ತು)

**ತದ್ಧೈತತ್ ಸತ್ಯಕಾಮೋ ಜಾಬಾಲೋ ಗೋಶ್ರುತಯೇ ವೈಯಾಘ್ರಪದ್ಯಾಯೋಕ್ತ್ವೋವಾಚ ಯದ್ಯಪ್ಯೇನಚ್ಛುಷ್ಕಾಯ ಸ್ಥಾಣವೇ ಬ್ರೂಯಾಜ್ಜಾಯೇರನ್ನೇವಾಸ್ಮಿಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೩ ॥**

೩. ಆ ಇದನ್ನು ಸತ್ಯಕಾಮಜಾಬಾಲನು ಗೋಶ್ರುತಿ ವೈಯಾಘ್ರಪದ್ಯನಿಗೆ ಹೇಳಿಕೊಟ್ಟು ಇಂತೆಂದನು. "ಇದನ್ನು ಒಣಗಿದ ಮೋಟುಮರಕ್ಕೆ ಹೇಳಿದರೂ ಅದರಲ್ಲಿ ಕೊಂಬೆಗಳು ಹುಟ್ಟಿಯೇ ಹುಟ್ಟಿಯಾವು, ಎಲೆಗಳು ಬೆಳೆದುಕೊಂಡಾವು."

## ಪ್ರಾಣವಿದ್ಯೆಯ ಹೆಚ್ಚುಗಾರಿಕೆ

(ಭಾಷ್ಯ)

೩೭೫. ತದೇತತ್ ಪ್ರಾಣದರ್ಶನಂ ಸ್ತೂಯತೇ। ಕಥಮ್ ? ತದ್ ಹ ಏತತ್ ಪ್ರಾಣದರ್ಶನಂ ಸತ್ಯಕಾಮೋ ಜಾಬಾಲೋ ಗೋಶ್ರುತಯೇ ನಾಮ್ನಾ ವೈಯಾಘ್ರಪದ್ಯಾಯ ವ್ಯಾಘ್ರಪದೋಽಪತ್ಯಂ ವೈಯಾಘ್ರಪದ್ಯಃ। ತಸ್ಮೈ ಗೋಶ್ರುತ್ಯಾಖ್ಯಾಯ ಉಕ್ತ್ವಾ ಉವಾಚ ಅನ್ಯದಪಿ ವಕ್ಷ್ಯಮಾಣಂ ವಚಃ। ಕಿಂ ತದುವಾಚೇತಿ ? ಆಹ। ಯದ್ಯಪಿ ಶುಷ್ಕಾಯ ಸ್ಥಾಣವ ಏತದ್ ದರ್ಶನಂ ಬ್ರೂಯಾತ್ ಪ್ರಾಣವಿತ್ ಜಾಯೇರನ್ ಉತ್ಪದ್ಯೇರನ್ನೇವ ಅಸ್ಮಿನ್ ಸ್ಥಾಣೌ ಶಾಖಾಃ ಪ್ರರೋಹೇಯುಶ್ಚ ಪಲಾಶಾನಿ ಪತ್ರಾಣಿ ಕಿಮು ಜೀವತೇ ಪುರುಷಾಯ ಬ್ರೂಯಾತ್ ಇತಿ ॥

(ಭಾಷ್ಯಾರ್ಥ)

ಆ ಈ ಪ್ರಾಣದರ್ಶನವನ್ನು ಹೊಗಳಲಾಗುತ್ತದೆ. ಹೇಗೆಂದರೆ, ಆ ಈ ಪ್ರಾಣದರ್ಶನವನ್ನು ಸತ್ಯಕಾಮಜಾಬಾಲನು ಗೋಶ್ರುತಿಯೆಂಬ ಹೆಸರಿನ

1. ಇಲ್ಲಿ ವೃಷ್ಟಿಯ ವಿಷಯವಿದೆ ಎಂಬುದು ಅದನ್ನೇ ತಾತ್ಪರ್ಯದಿಂದ ಹೇಳಿರುವದರಿಂದ ಗೊತ್ತಾಗುತ್ತದೆ ; ಆದರೆ ಆಚಮನವಿಧಾನವು ಇದೆ ಎಂಬುದಕ್ಕೆ ಪ್ರಮಾಣವೂ ಇಲ್ಲ. ಆದ್ದರಿಂದ ಪ್ರಮಾಣವಿಲ್ಲದೆ ಕಲ್ಪಿಸಿದರೆ ವಾಕ್ಯಭೇದದೋಷವು ಬರುತ್ತದೆ ಎಂದು ಭಾವ

ವೈಯಾಘ್ರಪದ್ಯನಿಗೆ ವ್ಯಾಘ್ರಪದನ ಮಗನು ವೈಯಾಘ್ರಪದ್ಯನು, ಗೋಶ್ರುತಿ ಎಂಬ ಹೆಸರಿನ ಅವನಿಗೆ ಹೇಳಿಕೊಟ್ಟು ತಿಳಿಯಹೇಳಿ, ಮುಂದೆ ಹೇಳುವ ಬೇರೆ ಮಾತನ್ನು ಹೇಳಿದನು. ಅವನು ಹೇಳಿದನೆಂಬ ಅದು ಯಾವದು? ಎಂದರೆ (ಶ್ರುತಿ) ಹೇಳುತ್ತದೆ, ಒಣಗಿದ ಮೋಟುಮರಕ್ಕೆ ಈ ದರ್ಶನವನ್ನು ಪ್ರಾಣೋಪಾಸಕನು ಹೇಳುತ್ತಾನಾದರೂ ಆ ಮೋಟುಮರದಲ್ಲಿ ಕೊಂಬೆಗಳು ಹುಟ್ಟಿಯೇ ಹುಟ್ಟಿಯಾವು, ಪಲಾಶಗಳು ಎಂದರೆ ಎಲೆಗಳು ಬೆಳೆದುಕೊಂಡಾವು! ಇನ್ನು ಬದುಕಿರುವ ಪುರುಷನಿಗೆ ಹೇಳಿದವನಾದರೆ (ಮಹಾಫಲವಾಗುವದೆಂದು) ಹೇಳುವದಿನ್ನೇನು[1]?

## ಶ್ರೀಮಂಥಕರ್ಮ

(ಉಪನಿಷತ್ತು)

**ಅಥ ಯದಿ ಮಹಜ್ಜಿಗಮಿಷೇದಮಾವಾಸ್ಯಾಯಾಂ ದೀಕ್ಷಿತ್ವಾ ಪೌರ್ಣಮಾಸ್ಯಾಗ್ಂ ರಾತ್ರೌ ಸರ್ವೌಷಧಸ್ಯ ಮನ್ಥಂ ದಧಿ ಮಧುನೋರುಪಮಥ್ಯ ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ ॥ ೪ ॥**

೪. ಇನ್ನು ಮಹತ್ತನ್ನು ಹೊಂದಬೇಕೆಂದಿಚ್ಛಿಸುತ್ತಾನಾದರೆ ಅಮಾವಾಸ್ಯೆಯಲ್ಲಿ ದೀಕ್ಷಿತನಾಗಿ ಪೌರ್ಣಮಾಸಿಯ ರಾತ್ರಿಯಲ್ಲಿ ಎಲ್ಲಾ ಓಷಧದ ಮಂಥವನ್ನು ಮೊಸರುಜೇನುತುಪ್ಪಗಳಲ್ಲಿ ತೊಳಸಿ 'ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ'' ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಮಂಥದಲ್ಲಿ ಸಂಪಾತವನ್ನು ಹಾಕಬೇಕು.

## ಮಂಥಕರ್ಮದ ಪ್ರಕಾರವೂ ಹೋಮಗಳೂ

(ಭಾಷ್ಯ)

೨೭೬ ಯಥೋಕ್ತಪ್ರಾಣದರ್ಶನವಿದಃ ಇದಂ ಮನ್ಥಾಖ್ಯಂ ಕರ್ಮ ಆರಭ್ಯತೇ। ಅಥ ಅನನ್ತರಂ ಯದಿ ಮಹತ್ ಮಹತ್ತ್ವಂ ಜಿಗಮಿಷೇತ್ ಗನ್ತುಮಿಚ್ಛೇತ್ ಮಹತ್ತ್ವಂ ಪ್ರಾಪ್ತುಂ ಯದಿ ಕಾಮಯೇತ ಇತ್ಯರ್ಥಃ। ತಸ್ಯ ಇದಂ ಕರ್ಮ ವಿಧೀಯತೇ। ಮಹತ್ತ್ವೇ ಹಿ ಸತಿ ಶ್ರೀರುಪನಮತೇ। ಶ್ರೀಮತೋ

---

1. ಈ ಶ್ರುತಿಯನ್ನು ಬೃಹದಾರಣ್ಯಕದಲ್ಲಿ ಮಂಥಕರ್ಮವಾದಮೇಲೆ ೬-೩-೧೨ರಲ್ಲಿ ಹೇಳಿದೆ. ಎರಡು ಶ್ರುತಿಗಳಿಗೂ ಏಕವಾಕ್ಯತೆಯಾಗುವದಕ್ಕಾಗಿ ಇಲ್ಲಿಯೂ ಹಾಗೆಯೇ ತಿಳಿಯಬೇಕು; ಏಕೆಂದರೆ ಇಲ್ಲಿ ಮಂಥಕರ್ಮದಮೇಲೆ ಶ್ರುತಿಯಿಲ್ಲ, ಆ ಕರ್ಮವು ಪ್ರಾಣೋಪಾಸಕನಿಗೇ ಹೇಳಿದ್ದು.

ಹಿ ಅರ್ಥಪ್ರಾಪ್ತಂ ಧನಂ ತತಃ ಕರ್ಮಾನುಷ್ಠಾನಂ ತತಶ್ಚ ದೇವಯಾನಂ ಪಿತೃಯಾಣಂ ವಾ ಪನ್ಥಾನಂ ಪ್ರತಿಪತ್ಸ್ಯತ ಇತ್ಯೇತತ್ ಪ್ರಯೋಜನಮ್ ಉದರೀಕೃತ್ಯ ಮಹತ್ತ್ವಪ್ರೇಪ್ಸೋರಿದಂ ಕರ್ಮ ನ ವಿಷಯೋಪಭೋಗಕಾಮಸ್ಯ। ತಸ್ಯ ಅಯಂ ಕಾಲಾದಿವಿಧಿರುಚ್ಯತೇ। ಅಮಾವಾಸ್ಯಾಯಾಂ ದೀಕ್ಷಿತ್ವಾ ದೀಕ್ಷಿತ ಇವ ಭೂಮಿಶಯನಾದಿನಿಯಮಂ ಕೃತ್ವಾ। ತಪೋರೂಪಂ ಸತ್ಯವಚನಂ ಬ್ರಹ್ಮಚರ್ಯಮ್ ಇತ್ಯಾದಿ ಧರ್ಮವಾನ್ ಭೂತ್ವಾ ಇತ್ಯರ್ಥಃ। ನ ಪುನರ್ದೀಕ್ಷಣಮೇವ ಕರ್ಮಜಾತಂ ಸರ್ವಮುಪಾದತ್ತೇ। ಅತದ್ವಿಕಾರತ್ವಾತ್ ಮನ್ಥಾಖ್ಯಸ್ಯ ಕರ್ಮಣಃ। "ಉಪಸದ್ವ್ರತೀ" (ಬೃ. ೬-೩-೧) ಇತಿ ಶ್ರುತ್ಯನ್ತರಾತ್ ಪಯೋಮಾತ್ರಭಕ್ಷಣಂ ಶುದ್ಧಿಕಾರಣಂ ತಪ ಉಪಾದತ್ತೇ। ಪೌರ್ಣಮಾಸ್ಯಾಂ ರಾತ್ರೌ ಕರ್ಮ ಆರಭತೇ। ಸರ್ವೌಷಧಸ್ಯ ಗ್ರಾಮ್ಯಾರಣ್ಯಾನಾಮೋಷಧೀನಾಂ ಯಾವಚ್ಛಕ್ತಿ ಅಲ್ಪಮಲ್ಪಮ್ ಉಪಾದಾಯ ತದ್ವಿತುಷೀಕೃತ್ಯ ಆಮಮೇವ ಪಿಷ್ಟಂ ದಧಿಮಧುನೋಃ ಔದುಮ್ಬರೇ ಕಂಸಾಕಾರೇ ಚಮಸಾಕಾರೇ ವಾ ಪಾತ್ರೇ ಶ್ರುತ್ಯನ್ತರಾತ್ ಪ್ರಕ್ಷಿಪ್ಯ ಉಪಮಥ್ಯ ಅಗ್ರತಃ ಸ್ಥಾಪಯಿತ್ವಾ ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ' ಇತಿ ಅಗ್ನೌ ಆವಸಥ್ಯೇ ಆಜ್ಯಸ್ಯ ಆವಾಪಸ್ಥಾನೇ ಹುತ್ವಾ ಸ್ರುವಸಂಲಗ್ನಂ ಮನ್ಥೇ ಸಂಪಾತಮ್ ಅವನಯೇತ್ ಸಂಸ್ರವಮಧಃ ಪಾತಯೇತ್ ॥

(ಭಾಷ್ಯಾರ್ಥ)

ಮೇಲೆ ಹೇಳಿರುವ ಪ್ರಾಣೋಪಾಸನೆಯನ್ನು ಬಲ್ಲವನಿಗೆ ಈ ಮಂಥವೆಂಬ ಹೆಸರಿನ ಕರ್ಮವನ್ನು (ತಿಳಿಸುವದಕ್ಕೆ) ಆರಂಭಿಸಿರುತ್ತದೆ.

ಇನ್ನು (ಪ್ರಾಣೋಪಾಸನೆಯನ್ನು ತಿಳಿಸಿದ) ಬಳಿಕ, ಮಹತ್ತನ್ನು ಎಂದರೆ ಮಹತ್ತ್ವವನ್ನು (ಜಿಗಮಿಷೇತ್=ಗನ್ತುಮಿಚ್ಛೇತ್) ಹೊಂದಬೇಕೆಂದು ಇಚ್ಛಿಸುತ್ತಾನಾದರೆ –ಎಂದರ್ಥ. ಅವನಿಗೆ ಈ ಕರ್ಮವನ್ನು ವಿಧಿಸಲಾಗುತ್ತದೆ. ಮಹತ್ತ್ವವುಂಟಾದರಲ್ಲವೆ, ಶ್ರೀಯು ಒಲಿಯುವಳು ? ಶ್ರೀಮಂತನಿಗಲ್ಲವೆ, ಧನವು ತಾನೇ ಬಂದೊದಗುತ್ತದೆ ? ಅದರಿಂದ ಕರ್ಮವನ್ನು ಮಾಡುತ್ತಾನೆ, ಮತ್ತು ಅದರಿಂದಲೇ ದೇವಯಾನ ಅಥವಾ ಪಿತೃಯಾಣ ಎಂಬ ಮಾರ್ಗವನ್ನು ಪಡೆಯುತ್ತಾನೆ? ಹೀಗೆಂಬ ಪ್ರಯೋಜನವನ್ನು ಇಟ್ಟುಕೊಂಡು ಮಹತ್ತ್ವವನ್ನು ಪಡೆಯಬೇಕೆಂದು ಇಚ್ಛಿಸುವವನಿಗೇ ಈ (ಮಂಥ)ಕರ್ಮವೇ ಹೊರತು, ವಿಷಯಗಳ ಭೋಗವನ್ನು ಇಚ್ಛಿಸುವವನಿಗಲ್ಲ.

ಆ (ಕರ್ಮ)ಕ್ಕೆ ಕಾಲವೇ ಮುಂತಾದವುಗಳ ಈ ವಿಧಿಯನ್ನು ಹೇಳಲಾಗುತ್ತದೆ. ಅಮಾವಾಸ್ಯೆಯಲ್ಲಿ ದೀಕ್ಷಿತನಾಗಿ, ದೀಕ್ಷಿತನಂತೆ ಭೂಮಿಶಯನವೇ ಮುಂತಾದ ನಿಯಮವನ್ನು ಮಾಡಿಕೊಂಡು, ತಪೋರೂಪವಾಗಿ ಸತ್ಯವಚನ, ಬ್ರಹ್ಮಚರ್ಯವೇ ಮುಂತಾದ ಧರ್ಮಗಳುಳ್ಳವನಾಗಿ ಎಂದರ್ಥ. (ಇಷ್ಟೇ ಹೊರತು)

ದೀಕ್ಷೆಗೆ ಸಂಬಂಧಪಟ್ಟ ಕರ್ಮಜಾತವೆಲ್ಲವನ್ನೂ (ಇಲ್ಲಿ) ಸ್ವೀಕರಿಸಿಲ್ಲ, ಏಕೆಂದರೆ ಮಂಥವೆಂಬ ಕರ್ಮವು ಆ ದೀಕ್ಷೆಯ ವಿಕಾರವಲ್ಲ. 'ಉಪಸದ್ವ್ರತಿಯಾಗಿ' (ಬೃ ೬-೩-೧) ಎಂದು ಬೇರೆ ಒಂದು ಶ್ರುತಿಯಲ್ಲಿರುವದರಿಂದ ಹಾಲನ್ನು ಮಾತ್ರ ಕುಡಿಯುವ ಶುದ್ಧಿಕಾರಣವಾದ ತಪಸ್ಸನ್ನು (ಇಲ್ಲಿ) ಸ್ವೀಕರಿಸಿದೆ[1] ಪೌರ್ಣಮಾಸಿಯ ರಾತ್ರೆಯಲ್ಲಿ (ಈ) ಕರ್ಮವನ್ನು ಆರಂಭಿಸಬೇಕು.

ಎಲ್ಲಾ ಔಷಧದ ಊರಿನ ಮತ್ತು ಕಾಡಿನ ಎಲ್ಲಾ ಸಸ್ಯಗಳನ್ನೂ ಶಕ್ತಿಯಿದ್ದಷ್ಟುಮಟ್ಟಿಗೆ ಸ್ವಲ್ಪಸ್ವಲ್ಪವನ್ನು ತೆಗೆದು ತಂದು ಕುಟ್ಟಿ ಹಸಿಯಾಗಿಯೇ ಇರುವ ಹಿಟ್ಟನ್ನು ಮೊಸರು, ಜೇನು- ಇವುಗಳಲ್ಲಿ ಅತ್ತಿಯ ಬಟ್ಟಲಿನ ಆಕಾರದ ಅಥವಾ ಚಮಸದ ಆಕಾರದ ಪಾತ್ರೆಯಲ್ಲಿ ಎಂದು ಬೇರೊಂದು ಶ್ರುತಿಯಿಂದ ಗೊತ್ತು ಮಾಡಬೇಕು. (ಅದರಲ್ಲಿ)ಟ್ಟುಕೊಂಡು ತೊಳಸಿ ಮುಂದುಗಡೆ ಇಟ್ಟುಕೊಂಡು 'ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ[2] !' ಎಂದು ಆವಸಥ್ಯಾಗ್ನಿಯಲ್ಲಿ ಆಜ್ಯವನ್ನು ಆವಾಪಸ್ಥಾನದಲ್ಲಿ ಹೋಮಮಾಡಿ ಸ್ರುವಕ್ಕೆ ಹತ್ತಿಕೊಂಡಿರುವ ಸಂಪಾತವನ್ನು ಮಂಥದಲ್ಲಿ ಕೆಳಕ್ಕೆ ಹಾಕಬೇಕು, ಸಂಸ್ರವವನ್ನು ಹಾಕಬೇಕು

(ಉಪನಿಷತ್ತು)

**ವಸಿಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ ಪ್ರತಿಷ್ಠಾಯೈ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ ಸಂಪದೇ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇದಾಯತನಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮನ್ಥೇ ಸಂಪಾತಮವನಯೇತ್ ॥ ೫ ॥**

೫. 'ವಸಿಷ್ಠಾಯ ಸ್ವಾಹಾ !' ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಮಂಥದಲ್ಲಿ ಸಂಪಾತವನ್ನು ಹಾಕಬೇಕು. 'ಪ್ರತಿಷ್ಠಾಯೈ ಸ್ವಾಹಾ !' ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಮಂಥದಲ್ಲಿ ಸಂಪಾತವನ್ನು ಹಾಕಬೇಕು. 'ಸಂಪದೇ ಸ್ವಾಹಾ !'

1. ಉಪಸದ್ವ್ರತವು ಜ್ಯೋತಿಷ್ಟೋಮದಲ್ಲಿದೆ, ಆದರೆ ಈ ಕರ್ಮವು ಅದರ ವಿಕೃತಿಯಲ್ಲವಾದ್ದರಿಂದ ಇಲ್ಲಿ ಹೇಳಿರುವ ಅಹಿಂಸೆ, ಸತ್ಯವಚನ, ಭೂಶಯ್ಯೆ, ಪಯಃಪಾನ– ಇವನ್ನು ಮಾತ್ರ ಅನುಸರಿಸಬೇಕೆಂದು ಅರ್ಥ. ಇಲ್ಲಿ ಕೊಟ್ಟಿರುವ ಕರ್ಮಪ್ರಕಾರವನ್ನು ಬೃಹದಾರಣ್ಯಕದಲ್ಲಿ ವಿಸ್ತಾರವಾಗಿ ವರ್ಣಿಸಿದೆ. ಬೃ. ೬–೩ನ್ನು ಸಂಪೂರ್ಣವಾಗಿ ಭಾಷ್ಯಗಳ ಸಹಿತವಾಗಿ ಓದಿದರೆ ಇಲ್ಲಿ ಹೇಳಿರುವ ವಿವರಗಳು ಸ್ಫುಟವಾಗುತ್ತವೆ.

2. ಪ್ರಾಣವಿದ್ಯೆಯಲ್ಲಿ ಅಧಿಕಾರವಿರುವವನಿಗೇ ಮಂಥಕರ್ಮದಲ್ಲಿ ಅಧಿಕಾರವೆಂಬುದನ್ನು ಈ ಹೋಮಗಳು ಸೂಚಿಸುತ್ತವೆ.

ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಮಂಥದಲ್ಲಿ ಸಂಪಾತ ವನ್ನು ಹಾಕಬೇಕು. 'ಆಯತನಾಯ ಸ್ವಾಹಾ !' ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮಮಾಡಿ ಮಂಥದಲ್ಲಿ ಸಂಪಾತವನ್ನು ಹಾಕಬೇಕು.

## ಮಂಥಕರ್ಮದ ಉಳಿದ ಹೋಮಗಳು

(ಭಾಷ್ಯ)

೩೭೭. ಸಮಾನಮನ್ಯತ್। ವಸಿಷ್ಠಾಯ ಪ್ರತಿಷ್ಠಾಯೈ ಸಂಪದೇ ಆಯ ತನಾಯ ಸ್ವಾಹಾ ! ಇತಿ ಪ್ರತ್ಯೇಕಂ ತಥೈವ ಸಂಪಾತಮವನಯೇತ್ ಹುತ್ವಾ ॥

(ಭಾಷ್ಯಾರ್ಥ)

ಮಿಕ್ಕದ್ದು ಸಮಾನವು 'ವಸಿಷ್ಠಾಯ', 'ಪ್ರತಿಷ್ಠಾಯೈ', 'ಸಂಪದೇ', 'ಆಯತನಾಯ' ಸ್ವಾಹಾ ! ಎಂದು ಒಂದೊಂದನ್ನೂ ಹೀಗೆಯೇ ಹೋಮಮಾಡಿ ಸಂಪಾತವನ್ನು (ಮಂಥದಲ್ಲಿ) ಹಾಕಬೇಕು

(ಉಪನಿಷತ್ತು)

**ಅಥ ಪ್ರತಿಸೃಪ್ಯಾಞ್ಜಲೌ ಮನ್ಥಮಾಧಾಯ ಜಪತ್ಯಮೋ ನಾಮಾಸ್ಯಮಾ ಹಿ ತೇ ಸರ್ವಮಿದಗ್ಂ ಸ ಹಿ ಜ್ಯೇಷ್ಠಃ ಶ್ರೇಷ್ಠೋ ರಾಜಾಧಿಪತಿಃ ಸ ಮಾ ಜ್ಯೈಷ್ಠ್ಯಗ್ಂ ಶ್ರೈಷ್ಠ್ಯಗ್ಂ ರಾಜ್ಯ ಮಾಧಿಪತ್ಯಂ ಗಮಯತ್ವಹಮೇವೇದಗ್ಂ ಸರ್ವಮಸಾನೀತಿ ॥**

೬. ಇನ್ನು ಹಿಂಜರಿದು ಬೊಗಸೆಯಲ್ಲಿ ಮಂಥವನ್ನು ಇಟ್ಟು ಕೊಂಡು "ಅಮ ಎಂಬ ಹೆಸರಿನವನಾಗಿರುತ್ತೀಯೆ ; ಇದೆಲ್ಲವೂ ನಿನ್ನ ಜೊತೆಯಲ್ಲಲ್ಲವೆ ? ಆತನೇ ಜ್ಯೇಷ್ಠನು, ಶ್ರೇಷ್ಠನು, ರಾಜನು, ಅಧಿ ಪತಿಯು ; ಅವನು ನನ್ನನ್ನು ಜ್ಯೈಷ್ಠ್ಯವನ್ನೂ ಶ್ರೈಷ್ಠ್ಯವನ್ನೂ ರಾಜ್ಯ ವನ್ನೂ ಆಧಿಪತ್ಯವನ್ನೂ ಹೊಂದಿಸಲಿ ! ನಾನೇ ಇದೆಲ್ಲವೂ ಆಗಿರು ವಂತಾಗಲಿ !" ಎಂದು ಜಪಿಸಬೇಕು.

## ಮಂಥಜಪಮಂತ್ರ

(ಭಾಷ್ಯ)

೩೭೮ ಅಥ ಪ್ರತಿಸೃಪ್ಯ ಅಗ್ನೇಃ ಈಷದಪಸೃತ್ಯ ಅಞ್ಜಲೌ ಮನ್ಥಮ್ ಆಧಾಯ ಜಪತಿ ಇಮಂ ಮನ್ತ್ರಮ್। "ಅಮೋ ನಾಮಾಸ್ಯಮಾ ಹಿ ತೇ। ಅಮ

ಇತಿ ಪ್ರಾಣಸ್ಯ ನಾಮ। ಅನ್ನೇನ ಹಿ ಪ್ರಾಣಃ ಪ್ರಾಣಿತಿ ದೇಹೇ ಇತ್ಯತೋ ಮನ್ಥದ್ರವ್ಯಂ ಪ್ರಾಣಸ್ಯ ಅನ್ನತ್ವಾತ್ ಪ್ರಾಣತ್ವೇನ ಸ್ತೂಯತೇ ಅಮೋ ನಾಮಾಽಸಿ ಇತಿ। ಕುತಃ? ಯತಃ ಅಮಾ ಸಹ ಹಿ ಯಸ್ಮಾತ್ ತೇ ತವ ಪ್ರಾಣಭೂತಸ್ಯ ಸರ್ವಂ ಸಮಸ್ತಂ ಜಗದಿದಮ್ ಅತಃ ಅಮೋ ನಾಮಾಸೀತ್ಯರ್ಥಃ[1] । ಸ ಹಿ ಪ್ರಾಣ ಭೂತೋ ಮನ್ಥೋ ಜ್ಯೇಷ್ಠಃ ಶ್ರೇಷ್ಠಶ್ಚ। ಅತ ಏವ ಚ ರಾಜಾ ದೀಪ್ತಿಮಾನ್ ಅಧಿಪತಿಶ್ಚ ಅಧಿಷ್ಠಾಯ ಪಾಲಯಿತಾ ಸರ್ವಸ್ಯ। ಸ ಮಾ ಮಾಮಪಿ ಮನ್ಥಃ ಪ್ರಾಣೋ ಜ್ಯೈಷ್ಠ್ಯಾದಿಗುಣಪೂಗಮ್ ಆತ್ಮನಃ ಗಮಯತು। ಅಹಮೇವೇದಂ ಸರ್ವಂ ಜಗತ್ ಅಸಾನಿ ಭವಾನಿ ಪ್ರಾಣವತ್ । ಇತಿಶಬ್ದೋ ಮನ್ತ್ರಪರಿ ಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಇನ್ನು ಹಿಂಜರಿದು ಅಗ್ನಿಗೆ ಸ್ವಲ್ಪ ಇತ್ತಸರಿದು ಬೊಗಸೆಯಲ್ಲಿ ಮನ್ಥವನ್ನು ಇಟ್ಟುಕೊಂಡು ಈ ಮಂತ್ರವನ್ನು ಜಪಿಸಬೇಕು ಅಮೋ ನಾಮಾಸ್ಯಮಾ ಹಿ ತೇ (ಅಮ ಎಂಬ ಹೆಸರಿನವನಾಗಿರುವೆ. ನಿನ್ನ ಜೊತೆಯಲ್ಲಲ್ಲವೆ?) ಅಮ ಎಂಬುದು ಪ್ರಾಣನ ಹೆಸರು ಅನ್ನದಿಂದಲೇ ಅಲ್ಲವೆ, ಪ್ರಾಣನು ದೇಹದಲ್ಲಿ ಪ್ರಾಣನ ವ್ಯಾಪಾರಮಾಡುತ್ತಿರುತ್ತಾನೆ? ಆದ್ದರಿಂದ ಮಂಥದ್ರವ್ಯವನ್ನು (ಅದು) ಪ್ರಾಣನ ಅನ್ನವಾಗಿರುವದರಿಂದ 'ಅಮೋ ನಾಮಾಸಿ' ಅಮನೆಂಬ ಹೆಸರುಳ್ಳವನಾಗಿರುವೆ ಎಂದು ಹೊಗಳಿದೆ. ಏಕೆಂದರೆ, (ತೇ=ತವ) ಪ್ರಾಣನಾಗಿರುವ ನಿನಗೆ ಇದೆಲ್ಲವೂ ಈ ಸಮಸ್ತಜಗತ್ತೂ (ಅಮಾ=ಸಹ) ಜೊತೆಯಲ್ಲಿರುತ್ತದೆಯಷ್ಟೆ, ಆದ್ದರಿಂದ ಅಮನೆಂಬ ಹೆಸರುಳ್ಳವನಾಗಿರುವೆ ಎಂದರ್ಥ. ಪ್ರಾಣನೇ ಆಗಿರುವ ಆ ಮಂಥವು ಜ್ಯೇಷ್ಠನೂ ಶ್ರೇಷ್ಠನೂ ಆಗಿದೆಯಷ್ಟೆ.[2] ಆದ್ದರಿಂದಲೇ ರಾಜನು, ಕಾಂತಿಯುಳ್ಳದ್ದು, ಅಧಿಪತಿ ಎಂದರೆ ಮೇಲಿದ್ದುಕೊಂಡು ಎಲ್ಲವನ್ನೂ ಪಾಲಿಸುತ್ತಿರುವದು. ಆ ಮಂಥನೆಂಬ ಪ್ರಾಣನು (ಮಾ=ಮಾಮಪಿ) ನನ್ನನ್ನು ಜ್ಯೈಷ್ಠ್ಯವೇ ಮುಂತಾದ ತನ್ನ ಗುಣಸಮೂಹವನ್ನು ಹೊಂದಿಸಲಿ! ನಾನೇ ಪ್ರಾಣನಂತೆ ಈ ಜಗತ್ತೆಲ್ಲವೂ ಆಗುವಂತಾಗಲಿ! (ಇಲ್ಲಿ) ಇತಿಶಬ್ದವು ಮಂತ್ರ ಸಮಾಪ್ತಿಯನ್ನು (ತಿಳಿಸು)ವದಕ್ಕೆ (ಬಂದಿದೆ)

---

1. ಈ ವಾಕ್ಯವಿಲ್ಲದ ಪಾಠವೂ ಉಂಟು; ಆಗ ಹಿಂದಿನ ವಾಕ್ಯಕ್ಕೇ ಅನ್ವಯಿಸಿಕೊಳ್ಳಬೇಕು, ಅರ್ಥದಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವದಿಲ್ಲ. ವ್ಯಾಖ್ಯಾನದಲ್ಲಿ ಈ ವಾಕ್ಯವಿಲ್ಲದ ಪಾಠವನ್ನೇ ಅಂಗೀಕರಿಸಿದೆ.

2. ಮಂಥದಲ್ಲಿ ಪ್ರಾಣನ ಗುಣವನ್ನು ಇಲ್ಲಿ ಸಂಪಾದನೆಮಾಡಿರುತ್ತದೆ ಎಂದರ್ಥ.

(ಉಪನಿಷತ್ತು)

**ಅಥ ಖಲ್ವೇತಯರ್ಚಾ ಪಚ್ಛ ಆಚಾಮತಿ ತತ್ಸವಿತುರ್ವೃಣೀಮಹ ಇತ್ಯಾಚಾಮತಿ ವಯಂ ದೇವಸ್ಯ ಭೋಜನಮಿತ್ಯಾಚಾಮತಿ ಶ್ರೇಷ್ಠಗ್ಂ ಸರ್ವಧಾತಮಮಿತ್ಯಾಚಾಮತಿ ತುರಂ ಭಗಸ್ಯ ಧೀಮಹೀತಿ ಸರ್ವಂ ಪಿಬತಿ ನಿರ್ಣಿಜ್ಯ ಕಗ್ಂಸಂ ಚಮಸಂ ವಾ ಪಶ್ಚಾದಗ್ನೇಃ ಸಂವಿಶತಿ ಚರ್ಮಣಿ ವಾ ಸ್ಥಣ್ಡಿಲೇ ವಾ ವಾಚಂಯಮೋಽಪ್ರಸಾಹಃ ಸ ಯದಿ ಸ್ತ್ರಿಯಂ ಪಶ್ಯೇತ್ ಸಮೃದ್ಧಂ ಕರ್ಮೇತಿ ವಿದ್ಯಾತ್ ॥ ೭ ॥**

೭. ಇನ್ನು ಈ ಋಕ್ಕಿನಿಂದ ಪಾದಪಾದವಾಗಿ ಆಚಮನಮಾಡಬೇಕು 'ತತ್ಸವಿತುರ್ವೃಣೀಮಹೇ' (ಆ ಸವಿತೃವಿನ .. ವರಿಸುತ್ತೇವೆ) ಎಂದು ಆಚಮನಮಾಡಬೇಕು; 'ವಯಂ ದೇವಸ್ಯ ಭೋಜನಮ್' (ನಾವು ದೇವನ ಭೋಜನವನ್ನು), ಎಂದು ಆಚಮನಮಾಡಬೇಕು; 'ಶ್ರೇಷ್ಠಗ್ಂ ಸರ್ವಧಾತಮಮ್' (ಶ್ರೇಷ್ಠವಾದ ಎಲ್ಲವನ್ನೂ ಧರಿಸಬಲ್ಲ) ಎಂದು ಆಚಮನಮಾಡಬೇಕು. 'ತುರಂ ಭಗಸ್ಯ ಧೀಮಹಿ' (ಶೀಘ್ರವಾದ ಭಗನ ಸ್ವರೂಪವನ್ನು ಧ್ಯಾನಿಸುತ್ತೇವೆ) ಎಂದು ಕಂಸವನ್ನು ಅಥವಾ ಚಮಸವನ್ನು ತೊಳೆದುಕೊಂಡು ಎಲ್ಲವನ್ನೂ ಕುಡಿಯಬೇಕು. ಅಗ್ನಿಯ ಹಿಂದುಗಡೆಯಲ್ಲಿ ಚರ್ಮದಮೇಲೆ ಅಥವಾ ಸ್ಥಂಡಿಲದಮೇಲೆ ವಾಚಂಯಮನಾಗಿ ಅಪ್ರಸಾಹನಾಗಿ ಮಲಗಬೇಕು. ಸ್ತ್ರೀಯನ್ನು ನೋಡಿದರೆ ಕರ್ಮವು ಸಮೃದ್ಧ(ವಾಯಿತೆಂದು) ತಿಳಿಯಬೇಕು.

## ಮಂಥಭಕ್ಷಣಪ್ರಕಾರ

(ಭಾಷ್ಯ)

೩೭೯. ಅಥ ಅನನ್ತರಂ ಖಲು ಏತಯಾ ವಕ್ಷ್ಯಮಾಣಯಾ ಋಚಾ ಪಚ್ಛಃ ಪಾದಶಃ ಆಚಾಮತಿ ಭಕ್ಷಯತಿ। ಮನ್ತ್ರಸ್ಯ ಏಕೈಕೇನ ಪಾದೇನ ಏಕೈಕಂ ಗ್ರಾಸಂ ಭಕ್ಷಯತಿ। ತದ್ಭೋಜನಂ ಸವಿತುಃ ಸರ್ವಸ್ಯ ಪ್ರಸವಿತುಃ। ಪ್ರಾಣಮ್ ಆದಿತ್ಯಂ ಚ ಏಕೀಕೃತ್ಯ ಉಚ್ಯತೇ। ಆದಿತ್ಯಸ್ಯ ವೃಣೀಮಹೇ ಪ್ರಾರ್ಥಯೇಮಹಿ ಮನ್ಥರೂಪಮ್। ಯೇನ ಅನ್ನೇನ ಸಾವಿತ್ರೇಣ ಭೋಜನೇನ ಉಪಭುಕ್ತೇನ ವಯಂ ಸವಿತೃಸ್ವರೂಪಾಪನ್ನಾ ಭವೇಮ ಇತ್ಯಭಿಪ್ರಾಯಃ। ದೇವಸ್ಯ ಸವಿತುಃ ಇತಿ ಪೂರ್ವೇಣ ಸಂಬನ್ಧಃ। ಶ್ರೇಷ್ಠಂ ಪ್ರಶಸ್ಯತಮಂ ಸರ್ವಾನ್ನೇಭ್ಯಃ ಸರ್ವಧಾತಮಂ

ಸರ್ವಸ್ಯ ಜಗತೋ ಧಾರಯಿತೃತಮಮ್ ಅತಿಶಯೇನ ವಿಧಾತೃತಮಮಿತಿ ವಾ। ಸರ್ವಥಾ ಭೋಜನವಿಶೇಷಣಮ್। ತುರಂ ತ್ವರಂ ತೂರ್ಣಂ ಶೀಘ್ರಮ್ ಇತ್ಯೇತತ್। ಭಗಸ್ಯ ದೇವಸ್ಯ ಸವಿತುಃ ಸ್ವರೂಪಮ್ ಇತಿ ಶೇಷಃ। ಧೀಮಹಿ ಚಿನ್ತಯೇಮಹಿ। ವಿಶಿಷ್ಟಭೋಜನೇನ ಸಂಸ್ಕೃತಾಃ ಶುದ್ಧಾತ್ಮಾನಃ ಸನ್ತಃ ಇತ್ಯಭಿಪ್ರಾಯಃ। ಅಥವಾ ಭಗಸ್ಯ ಶ್ರಿಯಃ ಕಾರಣಂ ಮಹತ್ತ್ವಂ ಪ್ರಾಪ್ತುಂ ಕರ್ಮ ಕೃತವನ್ತೋ ವಯಂ ತದ್ಧೀಮಹಿ ಚಿನ್ತಯೇಮಹಿ ಇತಿ ಸರ್ವಂ ಚ ಮನ್ಥಲೇಪಂ ಪಿಬತಿ ನಿರ್ಣಿಜ್ಯ ಪ್ರಕ್ಷಾಲ್ಯ ಕಂಸಂ ಕಂಸಾಕಾರಂ ಚಮಸಂ ಚಮಸಾಕಾರಂ ವಾ ಔದುಮ್ಬರಂ ಪಾತ್ರಮ್। ಪೀತ್ವಾ ಆಚಮ್ಯ ಪಶ್ಚಾದಗ್ನೇಃ ಪ್ರಾಕ್ಶಿರಾಃ ಸಂವಿಶತಿ ಚರ್ಮಣಿ ವಾ ಅಜಿನೇ ಸ್ಥಣ್ಡಿಲೇ ಕೇವಲಾಯಾಂ ವಾ ಭೂಮೌ। ವಾಚಂ ಯಮಃ ವಾಗ್ಯತಃ ಸನ್ ಇತ್ಯರ್ಥಃ। ಅಪ್ರಸಾಹಃ ನ ಪ್ರಸಹ್ಯತೇ ನಾಭಿಭೂಯತೇ ಸ್ತ್ರ್ಯಾದ್ಯನಿಷ್ಟಸ್ವಪ್ನದರ್ಶನೇನ ಯಥಾ ತಥಾ ಸಂಯತಚಿತ್ತಃ ಸನ್ ಇತ್ಯರ್ಥಃ। ಸ ಏವಂಭೂತೋ ಯದಿ ಸ್ತ್ರಿಯಂ ಪಶ್ಯೇತ್ ಸ್ವಪ್ನೇಷು ತದಾ ವಿದ್ಯಾತ್ ಸಮೃದ್ಧಂ ಮಮೇದಂ ಕರ್ಮ ಇತಿ ॥

(ಭಾಷ್ಯಾರ್ಥ)

ಇನ್ನು ಆ ಬಳಿಕ ಈ ಮುಂದೆ ಹೇಳುವ ಋಕ್ಕಿನಿಂದ[1] (ಪಚ್ಛಃ=ಪಾದಶಃ) ಪಾದಪಾದವಾಗಿ (ಉಚ್ಚರಿಸಿ) ಆಚಮನಮಾಡಬೇಕು, (ಮಂಥವನ್ನು) ಭಕ್ಷಣ ಮಾಡಬೇಕು, ಮಂತ್ರದ ಒಂದೊಂದು ಪಾದದಿಂದ ಒಂದೊಂದು ತುತ್ತನ್ನು ತಿನ್ನಬೇಕು ಸವಿತೃವಿನ ಸರ್ವಕ್ಕೂ ಕಾರಣನಾಗಿರುವ ದೇವನ- ಪ್ರಾಣನನ್ನೂ ಆದಿತ್ಯನನ್ನೂ ಒಂದೆಂದು ಮಾಡಿಕೊಂಡು (ಸವಿತೃವೆಂದು) ಕರೆದಿದೆ- ಆದಿತ್ಯನ ಆ ಮಂಥರೂಪವಾದ ಭೋಜನವನ್ನು ವರಿಸುತ್ತೇವೆ, ಪ್ರಾರ್ಥಿಸುತ್ತೇವೆ. ಆ ಅನ್ನದಿಂದ, ಸವಿತೃಸಂಬಂಧವಾದ ಭೋಜನವನ್ನು ಉಪಭೋಗಿಸುವದರಿಂದ ನಾವು ಸವಿತೃವಿನ ಸ್ವರೂಪವನ್ನು ಪಡೆದವರಾಗುವಂತಾಗಲಿ! -ಎಂದು ಅಭಿಪ್ರಾಯ. ದೇವಸ್ಯ ಎಂಬುದನ್ನು ಸವಿತುಃ ಎಂಬ ಹಿಂದಿನ ಶಬ್ದಕ್ಕೆ ಸಂಬಂಧಿಸಿಕೊಳ್ಳಬೇಕು.

ಶ್ರೇಷ್ಠವಾದ (ಮಿಕ್ಕ) ಎಲ್ಲಾ ಅನ್ನಗಳಿಗಿಂತಲೂ ಅತ್ಯಂತಪ್ರಶಸ್ಯವಾದ ಸರ್ವಧಾತಮಮ್ ಎಂದರೆ ಜಗತ್ತೆಲ್ಲವನ್ನೂ ಧರಿಸಬಲ್ಲ, ಹೆಚ್ಚಾಗಿ ಉಂಟುಮಾಡಬಲ್ಲ ಎಂದಾದರೂ ಅರ್ಥ. ಹೇಗಾದರೂ ಇದು ಭೋಜನಕ್ಕೆ ವಿಶೇಷಣವು (ತುರಂ=ತ್ವರಂ) ತೂರ್ಣವಾದ ಶೀಘ್ರವಾದ ಭಗನ ದೇವನಾದ ಸವಿತೃವಿನ

1. ಇಲ್ಲಿ ಹೇಳಿರುವ ಋಕ್ಕು ಋಗ್ವೇದದ ಮಂ. ೫-೬-೮೨-೧ರಲ್ಲಿವೆ. ಬೃ. ದಲ್ಲಿ ಮಂಥಾಚಮನಕ್ಕೆ ಹೇಳಿರುವದು ಸುಪ್ರಸಿದ್ಧವಾದ ಗಾಯತ್ರಿಯ ಪಾದಗಳು, ಮಧುಮತಿಯ ಭಾಗಗಳು, ವ್ಯಾಹೃತಿಗಳು. ಇಲ್ಲಿ ಈ ಗಾಯತ್ರಿಯನ್ನು ಹೇಳಿರುವದು ಆ ಬ್ರಾಹ್ಮಣಕ್ಕೆ ಸಂಮತವಲ್ಲವೆಂದು ತೋರುತ್ತದೆ, ಬೃ ಭಾ. ೫-೧೪-೫ (ಭಾ. ಭಾ. ೩೯೭)ನ್ನು ನೋಡಿ

'ಸ್ವರೂಪವನ್ನು' ಎಂದು ಸೇರಿಸಿಕೊಳ್ಳಬೇಕು. (ಧೀಮಹಿ= ಚಿಂತಯೇಮಹಿ) ಧ್ಯಾನಿಸುತ್ತೇವೆ. ವಿಶಿಷ್ಟವಾದ ಭೋಜನದಿಂದ ಸಂಸ್ಕೃತರಾಗಿ ಶುದ್ಧಾಂತಃಕರಣರಾಗಿ (ದೇವನ ಸ್ವರೂಪವನ್ನು ಚಿಂತಿಸುವಂತಾಗಲಿ) ಎಂದು ಅಭಿಪ್ರಾಯ. ಅಥವಾ (ಭಗಸ್ಯ= ಶ್ರಿಯಃ) ಭಗಕ್ಕೆ ಎಂದರೆ ಶ್ರೀಗೆ ಕಾರಣವಾದ ಮಹತ್ತ್ವವನ್ನು ಪಡೆದುಕೊಳ್ಳುವದಕ್ಕೆ ಕರ್ಮವನ್ನು ಮಾಡಿರುವ ನಾವು ಅದನ್ನು ಧ್ಯಾನಮಾಡುತ್ತೇವೆ ಎಂಬ ಮಂಥಲೇಪವನ್ನೆಲ್ಲ ಕುಡಿಯಬೇಕು.

ಕಂಸವನ್ನು ಎಂದರೆ ಕಂಸಾಕಾರವಾದ ಅಥವಾ ಚಮಸವನ್ನು ಎಂದರೆ ಚಮಸಾಕಾರವಾದ ಅತ್ತಿಯ ಪಾತ್ರೆಯನ್ನು[1] (ನಿರ್ಣಿಜ್ಯ= ಪ್ರಕ್ಷಾಲ್ಯ) ತೊಳೆದುಕೊಂಡು ಕುಡಿದು ಆಚಮನಮಾಡಿ[2] ಅಗ್ನಿಯ ಹಿಂದುಗಡೆಯಲ್ಲಿ ಪೂರ್ವಕ್ಕೆ ತಲೆಯನ್ನು ಮಾಡಿಕೊಂಡು ಚರ್ಮದ ಎಂದರೆ ಅಜಿನದಮೇಲೆ ಅಥವಾ ಸ್ಥಂಡಿಲದ ಬರಿಯ ನೆಲದಮೇಲೆ ವಾಚಂಯಮನಾಗಿ ಮಾತನ್ನು ಬಿಗಿಹಿಡಿದುಕೊಂಡು ಎಂದರ್ಥ. ಅಪ್ರಸಾಹನಾಗಿ ಸ್ತ್ರೀ ಮುಂತಾದ[3] ಅನಿಷ್ಟಸ್ವಪ್ನದರ್ಶನದಿಂದ (ನ ಪ್ರಸಹ್ಯತೇ= ನಾಭಿಭೂಯತೇ) ಅಡಚಣೆಯಾಗದಂತೆ ಚಿತ್ತವನ್ನು ಸಂಯಮ ಮಾಡಿಕೊಂಡು ಮಲಗಬೇಕು ಎಂದರ್ಥ. ಅವನು ಹೀಗಿದ್ದು ಸ್ವಪ್ನಗಳಲ್ಲಿ ಸ್ತ್ರೀಯನ್ನು ಕಂಡರೆ ಆಗ ಈ ನನ್ನ ಕರ್ಮವು ಸಮೃದ್ಧವಾಯಿತು ಎಂದು ತಿಳಿಯಬೇಕು.

(ಉಪನಿಷತ್ತು)

**ತದೇಷ ಶ್ಲೋಕೋ ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಗ್ಂ ಸ್ವಪ್ನೇಷು ಪಶ್ಯತಿ । ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನೇ ತಸ್ಮಿನ್ ಸ್ವಪ್ನನಿದರ್ಶನೇ ॥ ೮ ॥**

೮. ಇಲ್ಲಿ ಈ ಶ್ಲೋಕವು. "ಯಾವಾಗ ಕಾಮ್ಯಕರ್ಮಗಳಲ್ಲಿ ಸ್ವಪ್ನಗಳಲ್ಲಿ ಸ್ತ್ರೀಯನ್ನು ಯಾವಾಗ ಕಾಣುತ್ತಾನೋ ಆಗ ಅಲ್ಲಿ ಆ ಸ್ವಪ್ನದರ್ಶನದಲ್ಲಿ– ಆ ಸ್ವಪ್ನದರ್ಶನದಲ್ಲಿ – ಸಮೃದ್ಧಿಯೆಂದು ತಿಳಿಯಬೇಕು".

---

1. ಬೃ. ಉಪನಿಷತ್ತಿನಲ್ಲಿ ಹೀಗೆಂದು ವಿಧಿಸಿದೆ.
2. ಇದು ಶುದ್ಧಾಚಮನವು.
3. ಸ್ತ್ರ್ಯಾದಿ ಎಂಬ ಮೂಲದ ಅನುವಾದವಿದು; ಇದು ಭಾಷ್ಯದಲ್ಲಿತ್ತೆ ಎಂಬುದು ವಿಚಾರಣೀಯ.

# ಮಂಥಕರ್ಮವು ಸಮೃದ್ಧವಾದದ್ದಕ್ಕೆ ಗುರುತು

(ಭಾಷ್ಯ)

೩೮೦. ತತ್ ಏತಸ್ಮಿನ್ನರ್ಥೇ ಏಷ ಶ್ಲೋಕೋ ಮನ್ತ್ರೋಽಪಿ ಭವತಿ। ಯದಾ ಕರ್ಮಸು ಕಾಮ್ಯೇಷು ಕಾಮಾರ್ಥೇಷು ಸ್ತ್ರಿಯಂ ಸ್ವಪ್ನೇಷು ಸ್ವಪ್ನದರ್ಶನೇಷು ಸ್ವಪ್ನಕಾಲೇಷು ವಾ ಪಶ್ಯತಿ, ಸಮೃದ್ಧಿಂ ತತ್ರ ಜಾನೀಯಾತ್। ಕರ್ಮಣಾಂ ಫಲನಿಷ್ಪತ್ತಿರ್ಭವಿಷ್ಯತೀತಿ ಜಾನೀಯಾತ್ ಇತ್ಯರ್ಥಃ। ತಸ್ಮಿನ್ ಸ್ತ್ರ್ಯಾದಿಪ್ರಶಸ್ತ ಸ್ವಪ್ನದರ್ಶನೇ ಸತಿ ಇತ್ಯಭಿಪ್ರಾಯಃ। ದ್ವಿರುಕ್ತಿಃ ಕರ್ಮಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಇಲ್ಲಿ ಈ ವಿಷಯದಲ್ಲಿ ಈ ಶ್ಲೋಕವು ಮಂತ್ರವುಕೂಡ ಇದೆ: ಯಾವಾಗ ಕಾಮ್ಯಗಳಾದ ಕಾಮಗಳಿಗಾಗಿ ಮಾಡುವ ಕರ್ಮಗಳಲ್ಲ, ಸ್ವಪ್ನಗಳಲ್ಲಿ ಎಂದರೆ ಕನಸಿನ ಕಾಲದಲ್ಲಿ ಅಥವಾ ಕನಸಿನ ದರ್ಶನಗಳಲ್ಲಿ ಸ್ತ್ರೀಯನ್ನು ಕಾಣುತ್ತಾನೋ ಅಲ್ಲಿ ಸಮೃದ್ಧಿಯನ್ನು ತಿಳಿಯಬೇಕು, ಕರ್ಮಗಳ ಫಲವು ಉಂಟಾಗುವದೆಂದು ಅರಿತುಕೊಳ್ಳಬೇಕು ಎಂದರ್ಥ. ಆ ಸ್ತ್ರ್ಯಾದಿಪ್ರಶಸ್ತಸ್ವಪ್ನವನ್ನು ಕಂಡರೆ (ಸಮೃದ್ಧಿಯೆಂದು ತಿಳಿಯಬೇಕು) ಎಂದರ್ಥ. (ತಸ್ಮಿನ್ ಸ್ವಪ್ನನಿದರ್ಶನೇ ಎಂದು) ಎರಡು ಸಲ ಹೇಳಿರುವದು (ಮಂಥ)ಕರ್ಮದ ಸಮಾಪ್ತಿಗಾಗಿ.

---

# ಐದನೆಯ ಅಧ್ಯಾಯ

## ಒಂದು ಎರಡನೆಯ ಖಂಡಗಳ ಸಾರ

ಇವುಗಳಲ್ಲಿ ಪ್ರಾಣೋಪಾಸನೆಯನ್ನೂ ಪ್ರಾಣೋಪಾಸಕನಿಗೆ ಮಂಥಕರ್ಮವನ್ನೂ ವಿಧಿಸಿದೆ.

### ಒಂದನೆಯ ಖಂಡ

೧–೫. ಪ್ರಾಣಗಳಲ್ಲಿ ಜ್ಯೇಷ್ಠವೂ ಶ್ರೇಷ್ಠವೂ ಯಾವುದೆಂಬುದನ್ನು ತಿಳಿದವನು ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿರುತ್ತದೆ ವಸಿಷ್ಠವನ್ನು ತಿಳಿದವನು ತಾನೂ ವಸಿಷ್ಠ ಧನವಂತನಾಗುತ್ತಾನೆ. ಪ್ರತಿಷ್ಠೆಯನ್ನು ತಿಳಿದವನು ಇಹಪರಲೋಕಗಳಲ್ಲಿ ಪ್ರತಿಷ್ಠೆಯನ್ನು ಹೊಂದುತ್ತಾನೆ. ಸಂಪತ್ತನ್ನು ತಿಳಿದವನು ಕಾಮಸಂಪತ್ತಿಯನ್ನು ಪಡೆದುಕೊಳ್ಳುತ್ತಾನೆ ಆಯತನವನ್ನು ತಿಳಿದವನು ತನ್ನವರಿಗೆ ಆಯತನವಾಗುತ್ತಾನೆ, ವಾಕ್ಕೇ ವಸಿಷ್ಠ, ಚಕ್ಷುಸ್ಸೇ ಪ್ರತಿಷ್ಠೆ, ಶ್ರೋತ್ರವೇ ಸಂಪತ್ತು, ಮನಸ್ಸೇ ಆಯತನ

೬–೧೫. ವಾಗಾದಿಪ್ರಾಣಗಳು ತಮ್ಮಲ್ಲಿ ಯಾವನು ಶ್ರೇಷ್ಠನೆಂಬುದನ್ನು ನಿರ್ಧರಿಸುವದಕ್ಕಾಗಿ ಪ್ರಜಾಪತಿಯ ಬಳಿಗೆ ಹೋದವು 'ನಿಮ್ಮಲ್ಲಿ ಯಾವನು ಉತ್ಕ್ರಾಂತನಾದರೆ ಶರೀರವು ಅತ್ಯಂತ ಅಮಂಗಲವಾಗಿ ಕಾಣುವದೋ ಅವನೇ ಶ್ರೇಷ್ಠನು' ಎಂದು ಪ್ರಜಾಪತಿಯೆಂದನು. ವಾಗಾದಿಗಳು ಈಗ ಒಂದೊಂದಾಗಿ ಶರೀರವನ್ನು ಬಿಟ್ಟು ವರ್ಷದವರೆಗೆ ಹೊರಗೆ ಇದ್ದು ಮತ್ತೆ ಹಿಂತಿರುಗಿಬಂದವು. ಶರೀರವು ಬದುಕಿಯೇ ಇತ್ತು, ಆದ್ದರಿಂದ ಅವುಗಳು ತಾವು ಯಾರೊಬ್ಬರೂ ಶ್ರೇಷ್ಠರಲ್ಲವೆಂಬುದನ್ನು ಕಂಡುಕೊಂಡವು.

ಆಗ ಮುಖ್ಯಪ್ರಾಣವು ಶರೀರವನ್ನು ಬಿಟ್ಟುಹೋಗುವದಕ್ಕೆ ಯತ್ನಿಸುತ್ತಿರಲು ಜಾತ್ಯಶ್ವವು ಕಾಲಿಗೆ ಕಟ್ಟಿದ್ದ ಗೂಟಗಳನ್ನು ಕಿತ್ತುಕೊಳ್ಳುವಂತೆ ಮಿಕ್ಕ ಪ್ರಾಣಗಳನ್ನೆಲ್ಲ ಸ್ವಸ್ಥಾನದಿಂದ ಕಿತ್ತು ಅಲುಗಾಡಿಸಿತು ಆಗ ಪ್ರಾಣಗಳೆಲ್ಲವೂ 'ಭಗವಂತನೆ, ನೀನೇ ಶ್ರೇಷ್ಠನು, ಉತ್ಕ್ರಾಂತನಾಗದಿರು' ಎಂದು ಬೇಡಿಕೊಂಡವು. ವಾಕ್ಕು ತನ್ನ ವಸಿಷ್ಠತ್ವವೂ ಶ್ರೋತ್ರವು ತನ್ನ ಸಂಪತ್ತೂ ಮನಸ್ಸು ತನ್ನ ಆಯತನತ್ವವೂ ಮುಖ್ಯಪ್ರಾಣನದೇ ಎಂದು ಒಪ್ಪಿಕೊಂಡವು ಆದ್ದರಿಂದ ಮುಖ್ಯಪ್ರಾಣನ ಹೆಸರಿನಿಂದಲೇ ಅವುಗಳೆಲ್ಲವನ್ನೂ ಪ್ರಾಣಗಳು ಎಂದು ಕರೆಯುತ್ತಾರೆ.

### ಎರಡನೆಯ ಖಂಡ

೧–೨. ಆಗ ಮುಖ್ಯಪ್ರಾಣನು 'ನನಗೆ ಅನ್ನವು ಯಾವದು ?' ಎಂದಿತು. ವಾಗಾದಿಗಳು 'ನಾಯಿಗಳವರೆಗೂ ಹಕ್ಕಿಗಳವರೆಗೂ ಪ್ರಾಣಿಗಳಿಗೆ ಅನ್ನವಾಗಿರುವದೆಲ್ಲ ನಿನ್ನ ಅನ್ನವೇ' ಎಂದವು ; 'ನನಗೆ ಬಟ್ಟೆ ಯಾವದು ?' ಎಂದು ಮುಖ್ಯಪ್ರಾಣವು ಕೇಳಲು 'ಅಪ್ಪು' ಎಂದವು, ಆದ್ದರಿಂದಲೇ ಊಟಮಾಡುವ ಮೊದಲು, ಆಮೇಲೂ ಉಪಾಸಕರು ಆಚಮನಮಾಡಿ ಪ್ರಾಣ

ನಿಗೆ ಹೊದಿಕೆಯನ್ನು ಏರ್ಪಡಿಸುತ್ತಾರೆ; ಸ್ಮೃತಿವಿಹಿತವಾದ ಆಚಮನದಲ್ಲಿ ಇದು ಪ್ರಾಣದ ವಸ್ತ್ರವು ಎಂದು ಭಾವನೆಮಾಡುತ್ತಾರೆ.

೩. ಈ ಪ್ರಾಣೋಪಾಸನೆಯ ಮಹಿಮೆಯನ್ನು ಹೊಗಳಿ 'ಒಣಗಿದ ಮೋಟುಮರಕ್ಕೆ ಹೇಳಿದರೂ ಅದು ಚಿಗುರು ಎಲೆಗಳನ್ನು ಬಿಡುವದು' ಎಂದು ಸತ್ಯಕಾಮ ಜಾಬಾಲನು ಗೋಶ್ರುತಿ ಎಂಬ ತನ್ನ ಶಿಷ್ಯನಿಗೆ ಹೇಳಿರುತ್ತಾನೆ.

೪.–೮. ಈ ಪ್ರಾಣೋಪಾಸನೆಯನ್ನು ಬಲ್ಲವನಿಗೆ ಮಂಥವೆಂಬ ಕರ್ಮದಲ್ಲಿ ಅಧಿಕಾರವು. ತಾನು ದೊಡ್ಡವನಾಗಿ ಶ್ರೀಮಂತನಾಗಬೇಕೆಂದೂ ಆಮೂಲಕ ಕರ್ಮಾನುಷ್ಠಾನವನ್ನು ಮಾಡಿ ಸದ್ಗತಿಯನ್ನು ಪಡೆಯಬೇಕೆಂದೂ ಯಾವನು ಇಚ್ಛಿಸುತ್ತಾನೋ ಅವನು ಅಮಾವಾಸ್ಯೆಯಲ್ಲಿ ದೀಕ್ಷಾವಿಧಿಯನ್ನು ಕೈಕೊಂಡು ಪೌರ್ಣಮಾಸಿಯ ರಾತ್ರಿಯಲ್ಲಿ ಈ ಕರ್ಮವನ್ನು ಮಾಡಬೇಕು. ಯಾವಚ್ಛಕ್ತಿಯಾಗಿ ಎಲ್ಲಾ ಸಸ್ಯಗಳ ಮಂಥವನ್ನು ಮಾಡಿ ಅದಕ್ಕೆ ಮೊಸರು ಜೇನು ತುಪ್ಪ ಇವುಗಳನ್ನು ಸೇರಿಸಿ 'ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ'' 'ವಸಿಷ್ಠಾಯ ಸ್ವಾಹಾ' 'ಪ್ರತಿಷ್ಠಾಯೈ ಸ್ವಾಹಾ'' 'ಸಂಪದೇ ಸ್ವಾಹಾ'' 'ಆಯತನಾಯ ಸ್ವಾಹಾ'' ಎಂದು ಮಂತ್ರಗಳನ್ನುಚ್ಚರಿಸುತ್ತಾ ಸ್ವಾಹಾಂತದಲ್ಲಿ ಸ್ರುವದಲ್ಲಿರುವ ಮಂಥಶೇಷವನ್ನು ಹೋಮ ಮಾಡಬೇಕು. ಆಮೇಲೆ 'ಅಮೋ ನಾಮಾಸಿ' ಎಂಬ ಮಂತ್ರವನ್ನು ಜಪಿಸಬೇಕು. ಬಳಿಕ 'ತತ್ಸವಿತುರ್ವೃಣೀಮಹೇ' ಎಂಬ ಮಂತ್ರದ ಪಾದಗಳನ್ನುಚ್ಚರಿಸುತ್ತಾ ಮಂಥಭಾಗಗಳನ್ನು ಕುಡಿದು ಕೊನೆಯ ಸಲಕ್ಕೆ ಎಲ್ಲವನ್ನೂ ಕುಡಿದುಬಿಡಬೇಕು; ಕೈತೊಳೆದುಕೊಂಡು ಆಚಮನ ಮಾಡಿ ಅಗ್ನಿಯ ಹಿಂದುಗಡೆ ಚರ್ಮದ ಮೇಲೆ ಅಥವಾ ನೆಲದ ಮೇಲೆ ಮಲಗಬೇಕು. ಸ್ವಪ್ನದಲ್ಲಿ ಸ್ತ್ರೀದರ್ಶನವಾದರೆ ಕರ್ಮವು ಸಮೃದ್ಧವಾಯಿತೆಂದು ತಿಳಿಯಬೇಕು.

---

# ಐದನೆಯ ಅಧ್ಯಾಯ - ಮೂರನೆಯ ಖಂಡ

(ಪಂಚಾಗ್ನಿವಿದ್ಯೆ)

## ಶ್ವೇತಕೇತುವು ಪಂಚಾಲರಾಜನ ಬಳಿಗೆ ಬಂದದ್ದು

(ಉಪನಿಷತ್ತು)

**ಶ್ವೇತಕೇತುರ್ಹಾರುಣೇಯಃ ಪಞ್ಚಾಲಾನಾಗ್ಂ ಸಮಿತಿ ಮೇಯಾಯ ತಗ್ಂಹ ಪ್ರವಾಹಣೋ ಜೈವಲಿರುವಾಚ ಕುಮಾ ರಾನು ತ್ವಾಶಿಷತ್ ಪಿತೇತ್ಯನು ಹಿ ಭಗವ ಇತಿ ॥ ೧ ॥**

೧. ಆರುಣೇಯಶ್ವೇತಕೇತುವು ಪಂಚಾಲರ ಸಮಿತಿಗೆ ಬಂದನು. ಅವನನ್ನು ಪ್ರವಾಹಣಜೈವಲಿಯು ‘ಕುಮಾರನೆ, ತಂದೆಯು ಅನುಶಾಸನಮಾಡಿರುವನೇನು ?’ (ಎಂದನು. ಅವನು) ಭಗವಂತನೆ, ‘ಅನು(ಶಾಸನ) ಮಾಡಿಯೇ (ಇರುತ್ತಾನೆ) ಎಂದನು.

### ಕಥೆಯ ಸಂಬಂಧ

(ಭಾಷ್ಯ)

೩೮೧. ಬ್ರಹ್ಮಾದಿಸ್ತಮ್ಬಪರ್ಯನ್ತಾಃ ಸಂಸಾರಗತಯೋ ವಕ್ತವ್ಯಾಃ ವೈರಾಗ್ಯಹೇತೋರ್ಮುಮುಕ್ಷೂಣಾಮಿತ್ಯತಃ ಆಖ್ಯಾಯಿಕಾ ಆರಭ್ಯತೇ ॥

(ಭಾಷ್ಯಾರ್ಥ)

ಮುಮುಕ್ಷುಗಳಿಗೆ ವೈರಾಗ್ಯ(ವಾಗಲೆಂಬ) ಕಾರಣದಿಂದ ಬ್ರಹ್ಮಾದಿಸ್ತಂಬ ಪರ್ಯಂತವಾದ ಸಂಸಾರಗತಿಗಳನ್ನು ಹೇಳಬೇಕೆಂಬುದಕ್ಕಾಗಿ (ಈ) ಆಖ್ಯಾಯಿಕೆ ಯನ್ನು ಪ್ರಾರಂಭಿಸಿರುತ್ತದೆ.

### ಶ್ವೇತಕೇತುವಿಗೂ ಜೈವಲಿಗೂ ಸಂಭಾಷಣೆ

(ಭಾಷ್ಯ)

೩೮೨. ಶ್ವೇತಕೇತುರ್ನಾಮತಃ। ಹ ಇತ್ಯೈತಿಹ್ಯಾರ್ಥಃ। ಅರುಣ ಸ್ಯಾಪತ್ಯಮ್ ಆರುಣಿಃ। ತಸ್ಯಾಪತ್ಯಮ್ ಆರುಣೇಯಃ। ಪಞ್ಚಾಲಾನಾಂ ಜನಪದಾ ನಾಂ ಸಮಿತಿಂ ಸಭಾಮ್ ಏಯಾಯ ಆಜಗಾಮ। ತಮ್ ಆಗತವನ್ತಂ ಹ ಪ್ರವಾಹಣೋ ನಾಮತೋ ಜೀವಲಸ್ಯಾಪತ್ಯಂ ಜೈವಲಿಃ, ಉವಾಚ ಉಕ್ತವಾನ್। ಹೇ ಕುಮಾರ ಅನು ತ್ವಾ ತ್ವಾಮ್ ಅಶಿಷತ್ ಅನ್ವಶಿಷತ್ ಪಿತಾ। ಕಿಮನುಶಿಷ್ಟಸ್ತ್ವಂ

ಪಿತ್ರಾ ? ಇತ್ಯರ್ಥಃ। ಇತ್ಯುಕ್ತಃ ಸ ಆಹ। ಅನು ಹಿ ಅನುಶಿಷ್ಟೋಽಸ್ಮಿ ಭಗವ ಇತಿ ಸೂಚಯನ್ ಆಹ ॥

(ಭಾಷ್ಯಾರ್ಥ)

ಶ್ವೇತಕೇತು ಎಂಬ ಹೆಸರಿನ- ಹ ಎಂಬುದು ಹಿಂದೆ ನಡೆಯಿತು ಎಂಬುವನ್ನು (ತಿಳಿಸುವದಕ್ಕೆ), ಆರುಣೇಯನು, ಅರುಣನ ಮಗನು ಆರುಣಿ, ಅವನ ಮಗನು, ಆರುಣೇಯನು. ಪಂಚಾಲದೇಶದವರ ಸಮಿತಿಗೆ ಸಭೆಗೆ (ಏಯಾಯ= ಆಜಗಾಮ) ಬಂದನು. ಆ ಬಂದು (ಶ್ವೇತಕೇತು)ವನ್ನು ಪ್ರವಾಹಣನೆಂಬ ಹೆಸರಿನ ಜೀವಲನ ಮಗನಾದ ಜೈವಲಿಯು(ಉವಾಚ= ಉಕ್ತವಾನ್) ಇಂತೆಂದನು. ಎಲೈಕುಮಾರನೆ, (ತ್ವಾ= ತ್ವಾಮ್) ನಿನ್ನನ್ನು ತಂದೆಯು (ಅನು ಅಶಿಷತ್) ಅನುಶಾಸನಮಾಡಿದ್ದಾನೇನು ? ನೀನು ತಂದೆಯಿಂದ ಅನುಶಾಸನವನ್ನು ಪಡೆದುಕೊಂಡಿದ್ದೀಯೊ ? ಹೀಗೆನ್ನಲು ಅವನೆಂದನು ಪೂಜ್ಯನೆ, ಅನುಶಿಷ್ಟನೇ ಆಗಿರುತ್ತೇನೆ ಎಂದು ಸೂಚಿಸುವದಕ್ಕೆ 'ಅನು ಹಿ' ಎಂದನು.

## ಜೈವಲಿಪ್ರವಾಹಣನ ಪ್ರಶ್ನೆಗಳು

(ಉಪನಿಷತ್ತು)

**ವೇತ್ಥ ಯದಿತೋಽಧಿ ಪ್ರಜಾಃ ಪ್ರಯನ್ತೀತಿ ನ ಭಗವ ಇತಿ ವೇತ್ಥ ಯಥಾ ಪುನರಾವರ್ತನ್ತ೩ ಇತಿ ನ ಭಗವ ಇತಿ ವೇತ್ಥ ಪಥೋರ್ದೇವಯಾನಸ್ಯ ಪಿತೃಯಾಣಸ್ಯ ಚ ವ್ಯಾವರ್ತನಾ೩ ಇತಿ ನ ಭಗವ ಇತಿ ॥ ೨ ॥**

**ವೇತ್ಥ ಯಥಾಸೌ ಲೋಕೋ ನ ಸಂಪೂರ್ಯತಾ೩ ಇತಿ ನ ಭಗವ ಇತಿ ವೇತ್ಥ ಯಥಾ ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತೀತಿ ನೈವ ಭಗವ ಇತಿ ॥ ೩ ॥**

೨. 'ಪ್ರಜೆಗಳು ಇಲ್ಲಿಂದ ಮೇಲಕ್ಕೆ ಎಲ್ಲಿಗೆ ಹೋಗುತ್ತಾರೋ ಬಲ್ಲೆಯ ?', 'ಇಲ್ಲ, ಭಗವಂತನೆ' ಎಂದನು. 'ಮತ್ತೆ ಹೇಗೆ ಹಿಂತೆರಳುತ್ತಾರೋ ಬಲ್ಲೆಯ ?' 'ಇಲ್ಲ, ಭಗವಂತ' ಎಂದನು. 'ಮಾರ್ಗಗಳಲ್ಲಿ ದೇವಯಾನಪಿತೃಯಾಣಗಳ ವ್ಯಾವರ್ತನೆಗಳನ್ನು ಬಲ್ಲೆಯ ?' 'ಇಲ್ಲ, ಭಗವಂತ' ಎಂದನು.

೩. 'ಆ ಲೋಕವು ಸಂಪೂರ್ಣವಾಗದೆ ಇದೆ ಹೇಗೆ ಬಲ್ಲೆಯ ?' 'ಇಲ್ಲ, ಭಗವಂತ'. 'ಐದನೆಯ ಆಹುತಿಯಲ್ಲಿ ಅಪ್ಪು ಪುರುಷವಚಸ್ಸು ಆಗುವದು ಹೇಗೆ, ಬಲ್ಲೆಯ?', 'ಇಲ್ಲವೇ ಇಲ್ಲ. ಭಗವಂತ' ಎಂದನು.

## ಜೈವಲಿಯ ಐದು ಪ್ರಶ್ನೆಗಳಿಗೆ ಶ್ವೇತಕೇತುವು ಉತ್ತರವನ್ನು ಹೇಳಲಾರದೆ ಹೋದದ್ದು

(ಭಾಷ್ಯ)

೩೮೩. ತಂ ಹ ಉವಾಚ। ಯದ್ಯನುಶಿಷ್ಟೋಽಸಿ ವೇತ್ಥ ಯತ್ ಇತಃ ಅಸ್ಮಾಲ್ಲೋಕಾತ್ ಅಧಿ ಊರ್ಧ್ವಂ ಯತ್ ಪ್ರಜಾಃ ಪ್ರಯನ್ತಿ ಯದ್ ಗಚ್ಛನ್ತಿ ತತ್ ಕಿಂ ಜಾನೀಷ ಇತ್ಯರ್ಥಃ। ನ ಭಗವಃ ಇತ್ಯಾಹ ಇತರಃ। ನ ಜಾನೇಽಹಂ ತದ್ ಯತ್ ಪೃಚ್ಛಸಿ। ಏವಂ ತರ್ಹಿ ವೇತ್ಥ ಜಾನೀಷೇ ಯಥಾ ಯೇನ ಪ್ರಕಾರೇಣ ಪುನರಾವರ್ತನ್ತ ಇತಿ। ನ ಭಗವ ಇತಿ ಪ್ರತ್ಯಾಹ। ವೇತ್ಥ ಪಥೋರ್ಮಾರ್ಗಯೋಃ ಸಹಪ್ರಯಾಣಯೋರ್ದೇವಯಾನಸ್ಯ ಪಿತೃಯಾಣಸ್ಯ ಚ ವ್ಯಾವರ್ತನಾ ವ್ಯಾವರ್ತನಮ್ ಇತರೇತರವಿಯೋಗಸ್ಥಾನಂ ಸಹ ಗಚ್ಛತಾಮ್ ಇತ್ಯರ್ಥಃ। ನ ಭಗವಃ ಇತಿ। ವೇತ್ಥ ಯಥಾಽಸೌ ಲೋಕಃ ಪಿತೃಸಂಬನ್ಧೀ ಯಂ ಪ್ರಾಪ್ಯ ಪುನರಾವರ್ತನ್ತೇ ಬಹುಭಿಃ ಪ್ರಯದ್ಭಿರಪಿ ಯೇನ ಕಾರಣೇನ ನ ಸಂಪೂರ್ಯತ ಇತಿ। ನ ಭಗವ ಇತಿ ಪ್ರತ್ಯಾಹ। ವೇತ್ಥ ಯಥಾ ಯೇನ ಕ್ರಮೇಣ ಪಞ್ಚಮ್ಯಾಂ ಪಞ್ಚಸಂಖ್ಯಾಕಾಯಾಮ್ ಆಹುತೌ ಹುತಾಯಾಮ್ ಆಹುತಿನಿರ್ವೃತ್ತಾ ಆಹುತಿಸಾಧನಾಶ್ಚ ಆಪಃ ಪುರುಷವಚಸಃ ಪುರುಷ ಇತ್ಯೇವಂ ವಚಃ ಅಭಿಧಾನಂ ಯಾಸಾಂ ಹೂಯಮಾನಾನಾಂ ಕ್ರಮೇಣ ಷಷ್ಠಾಹುತಿಭೂತಾನಾಂ ತಾಃ ಪುರುಷವಚಸಃ ಪುರುಷಶಬ್ದವಾಚ್ಯಾ ಭವನ್ತಿ ಪುರುಷಾಖ್ಯಾಂ ಲಭನ್ತ ಇತ್ಯರ್ಥಃ। ಇತ್ಯುಕ್ತೋ ನೈವ ಭಗವಃ ಇತ್ಯಾಹ। ನೈವಾಹಮತ್ರ ಕಿಂಚನ ಜಾನಾಮಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅವನನ್ನು ಕುರಿತು (ಜೈವಲಿ)ಯಿಂತೆಂದನು.[1] ನೀನು ಅನುಶಿಷ್ಟನಾಗಿರುವೆಯಾದರೆ ಇಲ್ಲಿಂದ ಈ ಲೋಕದಿಂದ (ಅಧಿ= ಊರ್ಧ್ವಮ್) ಮೇಲಕ್ಕೆ (ಹೋಗಿ) ಪ್ರಜೆಗಳು ಯಾವದನ್ನು ಸೇರುವರೋ ಅದನ್ನು ಬಲ್ಲೆಯೇನು? -ಎಂದರ್ಥ. ನಾನು ಇನ್ನೊಬ್ಬ(ನಾದ ಶ್ವೇತಕೇತು) 'ಇಲ್ಲ, ಭಗವಂತ' ಎಂದನು, ನನ್ನನ್ನು ಕೇಳುತ್ತಿರುವೆಯಲ್ಲ, ನಾನು (ಅದನ್ನು) ಅರಿಯೆ ಹಾಗಾದರೆ ಹೇಗೆ ಯಾವ ಪ್ರಕಾರದಿಂದ ಮತ್ತೆ ಹಿಂತಿರಳುತ್ತಾರೋ ಬಲ್ಲೆಯ? -ಎನ್ನಲು 'ಇಲ್ಲ, ಭಗವಂತ' ಎಂದು ಪ್ರತ್ಯುತ್ತರವನ್ನು ಕೊಟ್ಟನು. (ಪಥೋಃ= ಮಾರ್ಗಯೋಃ) ಸಮಾನವಾಗಿ

---

1. 'ತಂ ಹೋವಾಚ' ಎಂಬ ವಾಕ್ಯದ ಅನುವಾದವಿದು. ಈ ವಾಕ್ಯವು ಉಪನಿಷತ್ತಿನ ಮೂಲದಲ್ಲಿಲ್ಲ; ಅದು ಹೇಗೆ ಭಾಷ್ಯದಲ್ಲಿ ಸೇರಿಕೊಂಡಿತೆಂಬುದು ತಿಳಿಯದು. ಟೀಕೆಯಲ್ಲಿ ಅದರ ಪರಾಮರ್ಶವಿಲ್ಲ.

ಹೊರಟಿರುವ ಎರಡು ಮಾರ್ಗಗಳಲ್ಲಿ ದೇವಯಾನ ಮತ್ತು ಪಿತೃಯಾಣ- ಇವುಗಳ (ವ್ಯಾವರ್ತನಾ= ವ್ಯಾವರ್ತನಮ್) ವ್ಯಾವರ್ತನವನ್ನು, ಜೊತೆಯಲ್ಲಿಯೇ ಹೋಗುವ (ಆ ಮಾರ್ಗಗಳು) ಒಂದನ್ನೊಂದು ಬಿಟ್ಟಗಲುವ ಸ್ಥಾನವನ್ನು, ಬಲ್ಲೆಯ? ಎಂದರ್ಥ 'ಇಲ್ಲ, ಭಗವಂತ' ಎಂದನು.

ಆ ಪಿತೃಸಂಬಂಧವಾದ ಲೋಕವು – ಯಾವದನ್ನು ಸೇರಿದವರು ಹಿಂತಿರುಗುವರೋ (ಅದು)- ಬಹುಜನರು ಹೋಗಿ (ಸೇರಿದರೂ) ಯಾವ ಕಾರಣದಿಂದ ತುಂಬಿಕೊಳ್ಳುವದಿಲ್ಲ, ಬಲ್ಲೆಯ? 'ಇಲ್ಲ, ಭಗವಂತ' ಎಂದು ಉತ್ತರವನ್ನು ಕೊಟ್ಟನು. ಹೇಗೆ, ಯಾವ ಪ್ರಕಾರದಿಂದ, ಐದನೆಯ ಸಂಖ್ಯೆಯ ಆಹುತಿಯನ್ನು ಹೋಮ ಮಾಡಲು ಆಹುತಿಗಳಿಂದಾಗಿರುವವೂ ಆಹುತಿಯೆಂಬ[1] ಸಾಧನವುಳ್ಳವೂ ಆಗಿರುವ ಅಪ್ಪು ಪುರುಷವಚಸ್ಸಾಗುವದು, ಪುರುಷ ಎಂಬೀ ವಚನವು, ಹೆಸರು, ಹುತವಾದ ಕ್ರಮದಿಂದ ಆರನೆಯ ಆಹುತಿಯಾಗುವ ಯಾವದಕ್ಕೆ ಆಗುವದೋ ಅವು ಪುರುಷ ವಚಸ್ಸುಗಳಾಗುವದು, ಪುರುಷಶಬ್ದವಾಚ್ಯವಾಗುವದು ಹೇಗೆ, ಪುರುಷನೆಂಬ ಹೆಸರನ್ನು ಪಡೆಯುವದು (ಹೇಗೆ), ಬಲ್ಲೆಯ? ಎಂದರ್ಥ.[2] ಹೀಗೆನ್ನಲು, 'ಇಲ್ಲವೇಇಲ್ಲ, ಭಗವಂತ!' ಎಂದನು, ನಾನು ಈ ವಿಷಯದಲ್ಲಿ ಏನನ್ನೂ ಅರಿಯೆನು ಎಂದರ್ಥ.

## ಶ್ವೇತಕೇತುವು ತಂದೆಯ ಬಳಿಗ ಬಂದು ನಡೆದದ್ದನ್ನು ತಿಳಿಸಿದ್ದು

(ಉಪನಿಷತ್ತು)

**ಅಥಾನು ಕಿಮನುಶಿಷ್ಟೋಽವೋಚಥಾ ಯೋ ಹೀಮಾನಿ ನ ವಿದ್ಯಾತ್ ಕಥಗ್ಂ ಸೋಽನುಶಿಷ್ಟೋ ಬ್ರುವೀತೇತಿ ಸ ಹಾಽಽಯಸ್ತಃ ಪಿತುರರ್ಧಮೇಯಾಯ ತಗ್ಂ ಹೋವಾಚಾನನುಶಿಷ್ಯ ವಾವ ಕಿಲ ಮಾ ಭಗವಾನಬ್ರವೀದನು ತ್ವಾಽಶಿಷಮಿತಿ ॥ ೪ ॥**

**ಪಞ್ಚ ಮಾ ರಾಜನ್ಯಬನ್ಧುಃ ಪ್ರಶ್ನಾನಪ್ರಾಕ್ಷೀತ್ತೇಷಾಂ ನೈಕಂಚನಾಶಕಂ ವಿವಕ್ತುಮಿತಿ ಸ ಹೋವಾಚ ಯಥಾ ಮಾ ತ್ವಂ ತದೈತಾನವದೋ ಯಥಾಽಹಮೇಷಾಂ ನೈಕಂಚನ ವೇದ ಯದ್ಯಹಮಿಮಾನವೇದಿಷ್ಯಂ ಕಥಂ ತೇ ನಾವಕ್ಷ್ಯಮಿತಿ ॥ ೫ ॥**

---

1. ಆಹುತಿಗಳಿಂದಾಗಿರುವ ಅಪೂರ್ವದ ರೂಪವನ್ನು ಪಡೆದಿರುವ. 'ಆಹುತಿಸಾಧನ' ಎಂಬುದು ಆಹುತಿನಿರ್ವೃತ್ತ ಎಂಬುದರ ವ್ಯಾಖ್ಯಾನವೆಂದು ಟೀಕೆ; ಆಹುತಿಕ್ರಿಯೆಯಿಂದ ಏರ್ಪಡುವ –ಎಂಬುದು ಈ ವಿಶೇಷಣಕ್ಕೆ ಅರ್ಥವೆಂದು ಇಟ್ಟುಕೊಂಡರೆ ಆಹುತಿಸಾಧನಾಶ್ಚ ಎಂಬ ಚಕಾರಕ್ಕೆ ಸಾರ್ಥಕ್ಯವುಂಟಾಗುವದೆಂದು ನಮ್ಮ ಮತ.

2. ಪುರುಷನ ವಾಕ್ಕುಳ್ಳವಾಗಿ ಎಂಬ ಮತ್ತೊಂದರ್ಥವಿದೆ. ಬೃ. ಭಾ. ೬-೨-೨ (ಭಾ. ಭಾ. ೪೨೮) ರಲ್ಲಿ ಕೊಟ್ಟಿದೆ.

೪. 'ಇನ್ನು ಏತರಮೇಲೆ ಅನುಶಿಷ್ಟನೆಂದು ಹೇಳಿದೆ? ಯಾವನು ಇವನ್ನು ಅರಿಯನೋ ಅವನು ಹೇಗೆ ಅನುಶಿಷ್ಟನೆಂದು ಹೇಳಿಕೊಂಡಾನು?' ಅವನು ಆಯಸ್ತನಾಗಿ ತಂದೆಯ ಸ್ಥಾನಕ್ಕೆ ಬಂದನು. ಅವನನ್ನು ಕುರಿತು ಇಂತೆಂದನು: 'ನನಗೆ ಅನುಶಾಸನಮಾಡದೆಯೇ ನಿನಗೆ ಅನುಶಾಸನಮಾಡಿರುವೆನೆಂದು ಭಗವಂತನು ಹೇಳಿದನಲ್ಲ!'

೫. 'ರಾಜನ್ಯಬಂಧುವು ನನ್ನನ್ನು ಐದು ಪ್ರಶ್ನೆಗಳನ್ನು ಕೇಳಿದನು. ಅವುಗಳಲ್ಲಿ ಒಂದನ್ನೂ ವಿವಚನಮಾಡಲು ಶಕ್ತನಾಗಲಿಲ್ಲ.' ಅವನಿಂತೆಂದನು: 'ಹೇಗೆ ನನಗೆ ನೀನು ಆಗ ಹೇಳಿದೆಯೋ ಹಾಗೆಯೇ ನಾನು ಇವುಗಳಲ್ಲಿ ಒಂದನ್ನೂ ಅರಿಯೆನು. ಇವುಗಳನ್ನು ನಾನು ಅರಿತಿದ್ದರೆ ನಿನಗೆ ಹೇಗೆ ತಿಳಿಸದೆ ಇರುತ್ತಿದ್ದೆನು?'

## ಶ್ವೇತಕೇತುವು ವ್ಯಥೆಯಿಂದ ಬಂದು ತಂದೆಗೆ ತಿಳಿಸಿದ್ದು; ತಂದೆಗೂ ಈ ಪ್ರಶ್ನೆಗಳು ತಿಳಿಯದೆ ಇದ್ದದ್ದು

(ಭಾಷ್ಯ)

೩೮೪. ಅಥ ಏವಮಜ್ಞಃ ಸನ್ ಕಿಮನು ಕಸ್ಮಾತ್ ತ್ವಮ್ ಅನುಶಿಷ್ಟೋಽಸ್ಮೀತಿ ಅವೋಚಥಾಃ ಉಕ್ತವಾನಸಿ? ಯೋ ಹಿ ಇಮಾನಿ ಮಯಾ ಪೃಷ್ಟಾನಿ ಅರ್ಥಜಾತಾನಿ ನ ವಿದ್ಯಾತ್ ನ ವಿಜಾನೀಯಾತ್ ಕಥಂ ಸ ವಿದ್ವತ್ಸು ಅನುಶಿಷ್ಟೋಽಸ್ಮೀತಿ ಬ್ರುವೀತ? ಇತ್ಯೇವಂ ಸ ಶ್ವೇತಕೇತುಃ, ರಾಜ್ಞಾ ಆಯಸ್ತಃ ಆಯಾಸಿತಃ ಸನ್ ಪಿತುರರ್ಧಂ ಸ್ಥಾನಮ್ ಏಯಾಯ ಆಗತವಾನ್। ತಂ ಚ ಪಿತರಮ್ ಉವಾಚ ಅನನುಶಿಷ್ಯ ಅನುಶಾಸನಮ್ ಅಕೃತ್ವೈವ ಮಾ ಮಾಂ ಕಿಲ ಭಗವಾನ್ ಸಮಾವರ್ತನಕಾಲೇ ಅಬ್ರವೀತ್ ಉಕ್ತವಾನ್ ಅನು ತ್ವಾ ಅಶಿಷಮ್ ಅನ್ವಶಿಷಂ ತ್ವಾಮಿತಿ।? ಯತಃ ಪಞ್ಚ ಪಞ್ಚಸಂಖ್ಯಾಕಾನ್ ಪ್ರಶ್ನಾನ್ ರಾಜನ್ಯಬನ್ಧುಃ ರಾಜನ್ಯಾ ಬನ್ಧವಃ ಅಸ್ಯ ಇತಿ ರಾಜನ್ಯಬನ್ಧುಃ। ಸ್ವಯಂ ದುರ್ವೃತ್ತಃ ಇತ್ಯರ್ಥಃ। ಅಪ್ರಾಕ್ಷೀತ್ ಪೃಷ್ಟವಾನ್। ತೇಷಾಂ ಪ್ರಶ್ನಾನಾಂ ನೈಕಂಚನ ನೈಕಮಪಿ ನಾಶಕಂ ನ ಶಕ್ತವಾನ್ ಅಹಂ ವಿವಕ್ತುಂ ವಿಶೇಷೇಣ ಅರ್ಥತೋ ನಿರ್ಣೇತುಮ್ ಇತ್ಯರ್ಥಃ। ಸ ಹೋವಾಚ ಪಿತಾ। ಯಥಾ ಮಾ ಮಾಂ ವತ್ಸ ತ್ವಂ ತದಾ ಆಗತಮಾತ್ರ ಏವ ಏತಾನ್ ಪ್ರಶ್ನಾನ್ ಅವದಃ ಉಕ್ತವಾನಸಿ ತೇಷಾಂ ನೈಕಂಚನ ನಾಶಕಂ ವಿವಕ್ತುಮಿತಿ ತಥಾ ಮಾಂ ಜಾನೀಹಿ। ತ್ವದೀಯಾಜ್ಞಾನೇನ ಲಿಙ್ಗೇನ ಮಮ ತದ್ವಿಷಯಮ್ ಅಜ್ಞಾನಂ ಜಾನೀಹಿ ಇತ್ಯರ್ಥಃ। ಕಥಮ್? ಯಥಾಽಹಮೇಷಾಂ ಪ್ರಶ್ನಾನಾಮೇಕಂಚನ ಏಕಮಪಿ ನ ವೇದ ನ ಜಾನೇ ಇತಿ।

ಯಥಾ ತ್ವಮೇವಾಜ್ಞ ಏತಾನ್ ಪ್ರಶ್ನಾನ್ ನ ಜಾನೀಷೇ ತಥಾ ಅಹಮಪಿ ಏತಾನ್ ನ ಜಾನ ಇತ್ಯರ್ಥಃ। ಅತೋ ಮಯಿ ಅನ್ಯಥಾಭಾವೋ ನ ಕರ್ತವ್ಯಃ। ಕುತ ಏತದೇವಮ್ ? ಯತೋ ನ ಜಾನೇ। ಯದ್ಯಹಮಿಮಾನ್ ಪ್ರ ಶ್ನಾ ನ್ ಅ ವೇದಿಷ್ಯಂ ವಿದಿತವಾನಸ್ಮಿ, ಕಥಂ ತೇ ತುಭ್ಯಂ ಪ್ರಿಯಾಯ ಪುತ್ರಾಯ ಸಮಾವರ್ತನ ಕಾಲೇ ಪುರಾ ನಾವಕ್ಷ್ಯಂ ನೋಕ್ತವಾನಸ್ಮಿ ?

(ಭಾಷ್ಯಾರ್ಥ)

'ಇನ್ನು ಹೀಗೆ ಅಜ್ಞನಾಗಿದ್ದುಕೊಂಡು (ಕಿಮನು=ಕಸ್ಮಾತ್) ಏತರಿಂದ ನೀನು ಅನುಶಿಷ್ಟನಾಗಿರುವೆನೆಂದು ಹೇಳಿದ್ದೆ, ಹೇಳಿದವನಾಗಿರುವೆ? ಯಾವನು ಈ ನಾನು ಕೇಳಿರುವ ಅರ್ಥಜಾತಗಳನ್ನು ಅರಿಯದೆ ಇರುವನೋ ತಿಳಿದುಕೊಳ್ಳ ದಿರುವನೋ ಅವನು ವಿದ್ವಾಂಸರುಗಳ ಮುಂದೆ ಅನುಶಿಷ್ಟನಾಗಿರುವೆನೆಂದು ಹೇಗೆ ತಾನೇ ಹೇಳಿಕೊಂಡಾನು ?

ಎಂದಿಂತು ಆ ಶ್ವೇತಕೇತು ರಾಜನಿಂದ ಆಯಸ್ತನಾಗಿ ಹಂಗಿಸಲ್ಪಟ್ಟವ ನಾಗಿ ತಂದೆಯ (ಅರ್ಧಂ=ಸ್ಥಾನಮ್) ಸ್ಥಾನಕ್ಕೆ ಬಂದನು, ಒಂದವನಾದನು. ಮತ್ತು ಆ ತಂದೆಯನ್ನು ಕುರಿತು ಇಂತೆಂದನು: "ಸಮಾವರ್ತನಕಾಲದಲ್ಲಿ ನನಗೆ (ಅನನು ಶಿಷ್ಯ=ಅನುಶಾಸನಮಕೃತ್ವೈವ) ಅನುಶಾಸನವನ್ನು ಮಾಡದೆಯೇ ಭಗವಂತನಾದ ನೀನು ನಿನಗೆ ನಾನು (ಅನು ತ್ವಾ ಅಶಿಷಮ್=ತ್ವಾ ಅನ್ವಶಿಷಮ್) ಅನುಶಾಸನ ಮಾಡಿರುವೆನು ಎಂದೆಯಲ್ಲ! ರಾಜನ್ಯಬಂಧುವು ರಾಜನ್ಯರು ಇವನಿಗೆ ಬಂಧು ಗಳಾದ್ದರಿಂದ (ಅವನು) ರಾಜನ್ಯಬಂಧುವು, ತಾನುತಾನು ಕೆಟ್ಟ ಆ ಚಾ ರ ಡವನೇ ಎಂದರ್ಥ[1] ಐದು, ಐದು ಸಂಖ್ಯೆಯ, ಪ್ರಶ್ನೆಗಳನ್ನು ಕೇಳಿದನು, ಕೇಳಿದವನಾದನು, ಆ ಪ್ರಶ್ನೆಗಳಲ್ಲಿ (ಏಕಂಚನ=ಏಕಮಪಿ) ಒಂದನ್ನು ಕೂಡ ನಾನು ವಿವಚನಮಾಡಲು ಶಕ್ತನಾಗಲಿಲ್ಲ, ಇಂಥ ವಿಷಯವೆಂದು ಗೊತ್ತುಮಾಡಿ ಹೇಳಲಾರದೆಹೋದೆನು ಎಂದರ್ಥ.

ಆಗ ತಂದೆ ಇಂತೆಂದನು, (ಮಾ=ಮಾಂ) ನನ್ನನ್ನು ಕುರಿತು, ಮಗನೆ, ಆಗ ಬಂದಕೂಡಲೆ ನೀನು ಹೇಗೆ ಈ ಪ್ರಶ್ನೆಗಳನ್ನು ಹೇಳಿದೆಯೋ – ಇವುಗಳಲ್ಲಿ ಒಂದನ್ನೂ ಗೊತ್ತುಪಡಿಸಿಹೇಳಲು ಶಕ್ತನಾಗಲಿಲ್ಲ (ಎಂದೆಯೋ) – ಹಾಗೆಯೇ ನನ್ನನ್ನು ತಿಳಿದುಕೊ! ನಿನ್ನ ಅಜ್ಞಾನದ ಗುರುತಿನಿಂದ ನನಗೂ ಆ ವಿಷಯದ ಅಜ್ಞಾನ (ವಿದೆ)ಯೆಂದು ತಿಳಿದುಕೊ ಎಂದರ್ಥ. ಹೇಗೆ ? ಎಂದರೆ ಹೇಗೆಂದರೆ ನನಗೆ ಈ ಪ್ರಶ್ನೆಗಳಲ್ಲಿ (ಏಕಂಚನ=ಏಕಮಪಿ) ಒಂದನ್ನೂ (ನ ವೇದ=ನ ಜಾನೇ) ಅರಿಯೆನು

1. ರಾಜನಮೇಲಿನ ತಿರಸ್ಕಾರದಿಂದ ಹೇಳಿದ ಮಾತಿದು. ನಿಜವಾಗಿ ರಾಜನು ಉತ್ತಮ ಕ್ಷತ್ರಿಯನೇ ಆಗಿದ್ದನು. ಆವನಿಂದ ತನಗೆ ಅಪಮಾನವಾಯಿತಲ್ಲ! _ಎಂದು ಶ್ವೇತಕೇತು ಹೀಗೆ ಆಡಿದಾನೆ.

ಎಂದು. ನೀನು ಹೇಗೆ ಈ ಪ್ರಶ್ನೆಗಳನ್ನು (ಉತ್ತರಿಸಲು) ಅರಿಯೆಯೋ, ಹಾಗೆಯೇ ನಾನು, ಇವುಗಳನ್ನು ಅರಿಯೆ (ಎಂದು ತಿಳಿ) -ಎಂದರ್ಥ ಆದ್ದರಿಂದ ನನ್ನಲ್ಲಿ ಬೇರೊಂದು ಭಾವನೆಯನ್ನು ಮಾಡಿಕೊಳ್ಳಬಾರದು. ಇದು ಹೀಗೆಂಬುದೇಕೆ ? ಎಂದರೆ ಏಕೆಂದರೆ ನಾನು (ಅವನ್ನು) ಅರಿಯೆನು. ಈ ಪ್ರಶ್ನೆಗಳನ್ನು ನಾನು ಅರಿತಿದ್ದರೆ, ತಿಳಿದುಕೊಂಡವನಾಗಿದ್ದಿದ್ದರೆ (ತೇ=ತುಭ್ಯಂ) ಪ್ರಿಯಪುತ್ರನಾದ ನಿನಗೆ ಹಿಂದೆ ಸಮಾವರ್ತನಕಾಲದಲ್ಲಿ ಹೇಗೆತಾನೆ ತಿಳಿಸದೆ ಇರುತ್ತಿದ್ದೆನು? ಹೇಳಿಕೊಡದೆ ಇದ್ದೇನು ?

## ಗೌತಮನು ರಾಜನಲ್ಲಿಗೆ ಬಂದು ಪಂಚಾಗ್ನಿವಿದ್ಯೆಯನ್ನು ಬೇಡಿದ್ದು

(ಉಪನಿಷತ್ತು)

**ಸ ಹ ಗೌತಮೋ ರಾಜ್ಞೋಽರ್ಧಮೇಯಾಯ ತಸ್ಮೈ ಹ ಪ್ರಾಪ್ತಾಯಾರ್ಹಾಂಚಕಾರ ಸ ಹ ಪ್ರಾತಃ ಸಭಾಗ ಉದೇಯಾಯ ತಗ್ಂ ಹೋವಾಚ ಮಾನುಷಸ್ಯ ಭಗವನ್ ಗೌತಮ ವಿತ್ತಸ್ಯ ವರಂ ವೃಣೀಥಾಃ ಇತಿ ಸ ಹೋವಾಚ ತವೈವ ರಾಜನ್ ಮಾನುಷಂ ವಿತ್ತಂ ಯಾಮೇವ ಕುಮಾರಸ್ಯಾನ್ತೇ ವಾಚಮಭಾಷಥಾಸ್ತಾಮೇವ ಮೇ ಬ್ರೂಹೀತಿ ಸ ಹ ಕೃಚ್ಛ್ರೀ ಬಭೂವ ॥ ೬ ॥**

೬. ಆ ಗೌತಮನು ರಾಜನ ಬಳಿಗೆ ಬಂದನು. ಆ ಬಂದ (ಗೌತಮ)ನಿಗೆ ಪೂಜೆಯನ್ನು ಮಾಡಿದನು. ಅವನು ಬಳಿಗೆ ಸಭೆಯಲ್ಲಿರುವ ರಾಜನ ಬಳಿಗೆ ಬಂದನು. ಅವನನ್ನು ಕುರಿತು, ಭಗವಂತನಾದ ಗೌತಮನೆ, ಮಾನುಷವಿತ್ತದ ವರವನ್ನು ಕೇಳಿಕೊ !' ಎಂದನು. 'ರಾಜನೆ, ಮಾನುಷವಿತ್ತವು ನಿನಗೇ (ಇರಲಿ) ! ಕುಮಾರನ ಬಳಿಯಲ್ಲಿ ಯಾವ ಮಾತನ್ನಾಡಿದೆಯೋ ಅದನ್ನೇ ಹೇಳಿಕೊಡು' (ಎನ್ನಲು) ಅವನು ಕಷ್ಟವುಳ್ಳವನಾದನು.

## ಗೌತಮನು ಮಾನುಷವಿತ್ತವನ್ನೊಲ್ಲದೆ ವಿದ್ಯೆಯನ್ನೇ ಕೇಳಿಕೊಂಡದ್ದು

(ಭಾಷ್ಯ)

೩೮೫ **ಇತ್ಯುಕ್ತ್ವಾ ಸ ಹ ಗೌತಮೋ ಗೋತ್ರತೋ ರಾಜ್ಞೋ ಜೈವಲೇಃ ಅರ್ಧಂ ಸ್ಥಾನಮ್ ಏಯಾಯ ಗತವಾನ್ । ತಸ್ಮೈ ಹ ಗೌತಮಾಯ ಪ್ರಾಪ್ತಾಯ**

ಅರ್ಹಾಮ್ ಅರ್ಹಣಾಂ ಚಕಾರ ಕೃತವಾನ್ । ಸ ಚ ಗೌತಮಃ ಕೃತಾತಿಥ್ಯಃ ಉಷಿತ್ವಾ ಪರೇದ್ಯುಃ ಪ್ರಾತಃಕಾಲೇ ಸಭಾಗೇ ಸಭಾಂ ಗತೇ ರಾಜ್ಞಿ ಉದೇಯಾಯ । ಭಜನಂ ಭಾಗಃ ಪೂಜಾ ಸೇವಾ । ಸಹ ಭಾಗೇನ ವರ್ತಮಾನೋ ವಾ ಸಭಾಗಃ ಪೂಜ್ಯಮಾನೋಽನ್ಯೈ ಸ್ವಯಂ ಗೌತಮ ಉದೇಯಾಯ ರಾಜಾನಮ್ ಉದ್ಗತವಾನ್ । ತಂ ಹೋವಾಚ ಗೌತಮಂ ರಾಜಾ । ಮಾನುಷಸ್ಯ ಭಗವನ್ ಗೌತಮ ಮನುಷ್ಯಸಂಬನ್ಧಿನೋ ವಿತ್ತಸ್ಯ ಗ್ರಾಮಾದೇಃ ವರಂ ವರಣೀಯಂ ಕಾಮಂ ವೃಣೀಥಾಃ ಪ್ರಾರ್ಥಯೇಥಾಃ । ಸ ಹೋವಾಚ ಗೌತಮಃ । ತವೈವ ತಿಷ್ಠತು ರಾಜನ್ ಮಾನುಷಂ ವಿತ್ತಮ್ । ಯಾಮೇವ ಕುಮಾರಸ್ಯ ಮಮ ಪುತ್ರಸ್ಯ ಅನ್ತೇ ಸಮೀಪೇ ವಾಚಂ ಪಞ್ಚಪ್ರಶ್ನಲಕ್ಷಣಾಮ್ ಅಭಾಷಥಾ ಉಕ್ತವಾನಸಿ ತಾಮೇವ ವಾಚಂ ಮೇ ಮಹ್ಯಂ ಬ್ರೂಹಿ ಕಥಯ ಇತ್ಯುಕ್ತೋ ಗೌತಮೇನ ರಾಜಾ ಸ ಹ ಕೃಚ್ಛ್ರೀ ದುಃಖೀ ಬಭೂವ ಕಥಂ ನ್ವಿದಮಿತಿ[1] ?

(ಭಾಷ್ಯಾರ್ಥ)

ಹೀಗೆಂದು ಹೇಳಿ ಆ ಗೌತಮನು– (ಆರುಣಿಯು) ಗೋತ್ರದಿಂದ (ಗೌತಮನು)– ಜೈವಲಿರಾಜನ (ಅರ್ಧಂ=ಸ್ಥಾನಮ್) ಬಳಿಗೆ ಹೋದನು, ಹೋದವನಾದನು, ಆ ಬಂದ ಗೌತಮನಿಗೆ (ಅರ್ಹಾಂ =ಅರ್ಹಣಾಂ) ಪೂಜೆಯನ್ನು (ರಾಜನು) ಮಾಡಿದನು, ಮಾಡಿದವನಾದನು. ಮತ್ತು ಆ ಗೌತಮನು ಆತಿಥ್ಯವನ್ನು ಮಾಡಿಸಿಕೊಂಡು (ಒಂದು ರಾತ್ರೆ) ಇದ್ದು ಮಾರನೆಯ ಬೆಳಗಿನ ಹೊತ್ತು ರಾಜನು ಸಭಾಗನಾಗಿರಲು ಸಭೆಯನ್ನು ಸೇರಿರಲು (ಅಲ್ಲಿಗೆ) ಬಂದನು. (ಅಥವಾ) ಭಾಗವೆಂದರೆ ಭಜನವು, ಪೂಜೆಯು ಸೇವೆ , ಭಾಗದಿಂದ ಕೂಡಿಕೊಂಡಿರುವವನು ಸಭಾಗನು ; ಮಿಕ್ಕವರಿಂದ ತಾನು ಪೂಜಿಸಲ್ಪಟ್ಟವನಾಗಿ ಗೌತಮನು ರಾಜನ ಬಳಿಗೆ ಬಂದನು, ಬಂದವನಾದನು – ಎಂದಾದರೂ (ಈ ವಾಕ್ಯಕ್ಕೆ ಅರ್ಥಮಾಡಬಹುದು) ![2]

ಆ ಗೌತಮನನ್ನು ಕುರಿತು ರಾಜನಿಂತೆಂದನು. ಭಗವಂತನಾದ ಗೌತಮನೆ, ಮಾನುಷವಾದ ಮನುಷ್ಯಸಂಬಂಧವಾದ ಗ್ರಾಮಾದಿವಿತ್ತದ ವರವನ್ನು ಬೇಡಬೇಕಾದ ಕಾಮವನ್ನು ಬೇಡಿಕೊ, ಕೇಳಿಕೊ. ಆ ಗೌತಮನಿಂತೆಂದನು : ರಾಜನೆ, ಮಾನುಷವಿತ್ತವು ನಿನಗೇ ಇರಲಿ, ಕುಮಾರನ ನನ್ನ ಮಗನ (ಅನ್ತೇ=ಸಮೀಪೇ) ಬಳಿಯಲ್ಲಿ ಯಾವ ಪಂಚಪ್ರಶ್ನೆಗಳ ರೂಪದ ವಾಕ್ಯವನ್ನು ಹೇಳಿದೆಯೋ, ಹೇಳಿದವನಾಗಿರುವೆಯೋ ಅದೇ ಮಾತನ್ನೇ (ಮೇ= ಮಹ್ಯಂ) ನನಗೆ ಹೇಳು, ಹೇಳಿಕೊಡು. ಗೌತಮನು ಹೀಗೆನ್ನಲು ಆ ರಾಜನು ಕಷ್ಟವುಳ್ಳವನಾದನು, ಇದು ಹೇಗಾದೀತು ? –ಎಂದು ದುಃಖಿಯಾದನು.

---

1. " ಕಥಂ ತ್ವಿದಮಿತಿ " ವಾ॥
2. ‹ಸಭಾ+ಗ› ಎಂದು ಬಿಡಿಸಿ ಮೊದಲನೆಯ ವ್ಯಾಖ್ಯಾನ ; ಸ+ಭಾಗ ಎಂದು ಬಿಡಿಸಿ ಎರಡನೆಯ ವ್ಯಾಖ್ಯಾನ.

## ಬ್ರಹ್ಮಚರ್ಯದ ಬಳಿಕ ರಾಜನು ವಿದ್ಯೆಯನ್ನು ಹೇಳಲನುವಾದದ್ದು

(ಉಪನಿಷತ್ತು)

**ತಗ್ಂ ಹ ಚಿರಂ ವಸೇತ್ಯಾಜ್ಞಾಪಯಾಂಚಕಾರ ತಗ್ಂ ಹೋವಾಚ ಯಥಾ ಮಾ ತ್ವಂ ಗೌತಮಾವದೋ ಯಥೇಯಂ ನ ಪ್ರಾಕ್ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ ಗಚ್ಛತಿ ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂದಿತಿ ತಸ್ಮೈ ಹೋವಾಚ ॥ ೭ ॥**

೭. ಅವನನ್ನು 'ಬಹುಕಾಲ ವಾಸಮಾಡಿಕೊಂಡಿರು' ಎಂದು ಆಜ್ಞಾಪಿಸಿದನು. ಅವನನ್ನು ಕುರಿತು ಇಂತೆಂದನು: 'ನೀನು ನನಗೆ ಹೇಗೆ ಹೇಳಿದೆಯೋ (ಅದರ ವಿಚಾರವಿದು). ಈ ವಿದ್ಯೆ ನಿನಗಿಂತ ಹಿಂದೆ ಬ್ರಾಹ್ಮಣರನ್ನು ಸೇರಿರಲಿಲ್ಲ; ಮತ್ತು ಆದ್ದರಿಂದ ಸರ್ವ ಲೋಕಗಳಲ್ಲಿ ಕ್ಷತ್ರಕ್ಕೇ ಪ್ರಶಾಸನವು ಇದ್ದುಕೊಂಡಿತ್ತು' ಎಂದು ಅವನಿಗೆ ವಿದ್ಯೆಯನ್ನು ಹೇಳಿಕೊಟ್ಟನು.

## ಕ್ಷಮಾಪಣಪೂರ್ವಕವಾಗಿ ರಾಜನು ವಿದ್ಯೆಯನ್ನು ಹೇಳಿದ್ದು

(ಭಾಷ್ಯ)

೩೮೬. ಸ ಹ ಕೃಚ್ಛ್ರೀಭೂತಃ ಅಪ್ರತ್ಯಾಖ್ಯೇಯಂ ಬ್ರಾಹ್ಮಣಂ ಮನ್ವಾನಃ ನ್ಯಾಯೇನ ವಿದ್ಯಾ ವಕ್ತವ್ಯಾ ಇತಿ ಮತ್ವಾ ತಂ ಹ ಗೌತಮಂ ಚಿರಂ ದೀರ್ಘಕಾಲಂ ವಸ ಇತ್ಯೇವಮ್ ಆಜ್ಞಾಪಯಾಂಚಕಾರ ಆಜ್ಞಪ್ತವಾನ್। ಯತ್ಪೂರ್ವಂ ಪ್ರ(ತ್ಯಾ)[1]ಖ್ಯಾತವಾನ್ ರಾಜಾ ವಿದ್ಯಾಂ ಯಚ್ಚ ಪಶ್ಚಾತ್ ಚಿರಂ ವಸ ಇತ್ಯಾಜ್ಞಪ್ತವಾನ್ ತನ್ನಿಮಿತ್ತಂ ಬ್ರಾಹ್ಮಣಂ ಕ್ಷಮಾಪಯತಿ ಹೇತುವಚನೋಕ್ತ್ಯಾ। ತಂ ಹೋವಾಚ ರಾಜಾ ಸರ್ವವಿದ್ಯೋ ಬ್ರಾಹ್ಮಣೋಽಪಿ ಸನ್ ಯಥಾ ಯೇನ ಪ್ರಕಾರೇಣ ಮಾ ಮಾಂ ಹೇ ಗೌತಮ ಅವದಸ್ತ್ವಂ ತಾಮೇವ ವಿದ್ಯಾಲಕ್ಷಣಾಂ ವಾಚಂ ಮೇ ಬ್ರೂಹೀತಿ ಅಜ್ಞಾನಾತ್, ತೇನ ತ್ವಂ ಜಾನೀಹಿ।ತತ್ರಾಸ್ತಿ ವಕ್ತವ್ಯಮ್ ಯಥಾ ಯೇನ ಪ್ರಕಾರೇಣ ಇಯಂ ವಿದ್ಯಾ ಪ್ರಾಕ್ ತ್ವತ್ತೋ ಬ್ರಾಹ್ಮಣಾನ್ನ

---

1. ಇಲ್ಲಿ ಪ್ರಖ್ಯಾತವಾನ್ ಎಂಬುದು ಪ್ರತ್ಯಾಖ್ಯಾತವಾನ್ ಎಂಬುದಕ್ಕೆ ಅಚ್ಚಿನಲ್ಲಿ ಅಥವಾ ಕೈಬರಹದಲ್ಲಿ ತಪ್ಪಾಗಿ ಬಿದ್ದಿರಬೇಕೆಂಬುದು ಸಂಬಂಧದಿಂದ ಗೊತ್ತಾಗುತ್ತದೆ.

ಗಚ್ಛತಿ ನ ಗತವತೀ। ನ ಚ ಬ್ರಾಹ್ಮಣಾ ಅನಯಾ ವಿದ್ಯಯಾ ಅನುಶಾಸಿತವನ್ತಃ। ತದ್ಧೈತತ್ ಪ್ರಸಿದ್ಧಂ ಲೋಕೇ। ಯತಃ, ತಸ್ಮಾದು ಪುರಾ ಪೂರ್ವಂ ಸರ್ವೇಷು ಲೋಕೇಷು ಕ್ಷತ್ರಸ್ಯೈವ ಕ್ಷತ್ರಜಾತೇರೇವ ಅನಯಾ ವಿದ್ಯಯಾ ಪ್ರಶಾಸನಂ ಪ್ರಶಾಸ್ತೃತ್ವಂ ಶಿಷ್ಯಾಣಾಮ್ ಅಭೂತ್ ಬಭೂವ। ಕ್ಷತ್ರಿಯಪರಮ್ಪರಯೈವ ಇಯಂ ವಿದ್ಯಾ ಏತಾವನ್ತಂ ಕಾಲಮ್ ಆಗತಾ। ತಥಾಪಿ ಅಹಮೇತಾಂ ತುಭ್ಯಂ ವಕ್ಷ್ಯಾಮಿ ತ್ವತ್ಸಂಪ್ರದಾನಾದೂರ್ಧ್ವಂ ಬ್ರಾಹ್ಮಣಾನ್ ಗಮಿಷ್ಯತಿ। ಅತೋ ಮಯಾ ಯದುಕ್ತಂ ತತ್ ಕ್ಷನ್ತುಮರ್ಹಸಿ ಇತ್ಯುಕ್ತ್ವಾ ತಸ್ಮೈ ಹೋವಾಚ ವಿದ್ಯಾಂ ರಾಜಾ ॥

(ಭಾಷ್ಯಾರ್ಥ)

(ಹಾಗೆ) ಕಷ್ಟಕ್ಕೊಳಗಾದ (ರಾಜನು) ಬ್ರಾಹ್ಮಣನಿಗೆ ಇಲ್ಲವೆನ್ನುವದು ಸರಿಯಲ್ಲವೆಂದೆಣಿಸಿ ನ್ಯಾಯದಿಂದ[1] ವಿದ್ಯೆಯನ್ನು ಹೇಳಬೇಕು ಎಂದು ಯೋಚಿಸಿ ಕೊಂಡು ಆ ಗೌತಮನನ್ನು (ಚಿರಂ= ದೀರ್ಘಕಾಲಂ) ಬಹುಕಾಲದವರೆಗೆ ವಾಸ ಮಾಡಿಕೊಂಡಿರು ಎಂದು ಆಜ್ಞಾಪಿಸಿದನು, ಆಜ್ಞೆಮಾಡಿದವನಾದನು

ಮೊದಲು ವಿದ್ಯೆಯನ್ನು ಇಲ್ಲವೆಂದು ಹೇಳಿದನಷ್ಟೆ, ಆಮೇಲೆ ಬಹುಕಾಲ (ಇಲ್ಲಿ) ವಾಸಮಾಡಿಕೊಂಡಿರು ಎಂದು ಆಜ್ಞಾಪಿಸಿದನಷ್ಟೆ, ಆ ನಿಮಿತ್ತವಾಗಿ (ಆ) ಬ್ರಾಹ್ಮಣನಿಗೆ ಕಾರಣವನ್ನು ಹೇಳಿ ಕ್ಷಮಾಪಣೆಮಾಡುತ್ತಿದಾನೆ. ಅವನನ್ನು ಕುರಿತು ರಾಜನಿಂತೆಂದನು. ಎಲ್ಲಾ ವಿದ್ಯೆಗಳನ್ನೂ ಬಲ್ಲ ಬ್ರಾಹ್ಮಣನಾಗಿದ್ದರೂ ಹೇಗೆ ಯಾವ ಪ್ರಕಾರದಿಂದ (ಮಾ= ಮಾಂ) ನನ್ನನ್ನು ಕುರಿತು ಎಲೆ ಗೌತಮನೆ, ನೀನು ಹೇಳಿದೆಯೋ- ಆ ವಿದ್ಯೆಯ ರೂಪದ ಮಾತನ್ನೇ ನನಗೆ ಹೇಳಿಕೊಡು ಎಂದು (ಅದ) ನ್ನರಿಯದೆ ಹೇಳಿದೆಯಲ್ಲವೆ ?- ಅದರ ವಿಷಯಕ್ಕೆ ಹೇಳತಕ್ಕದ್ದಿದೆ. ಹೇಗೆ ಯಾವ ಪ್ರಕಾರದಿಂದ ಈ ವಿದ್ಯೆಯು ನಿನಗಿಂತ ಮುಂಚೆ ಬ್ರಾಹ್ಮಣರನ್ನು (ನ ಗಚ್ಛತಿ= ನ ಗತವತೀ) ಹೋಗಿ ಸೇರಿರಲಿಲ್ಲವೋ ಬ್ರಾಹ್ಮಣರು ಈ ವಿದ್ಯೆಯನ್ನು (ಹೇಳಿ) ಅನುಶಾಸನಮಾಡುತ್ತಿರಲಿಲ್ಲವೋ ಹಾಗೆ ಆ ಇದು ಲೋಕದಲ್ಲಿ ಪ್ರಸಿದ್ಧವೇ ಆಗಿದೆ ಯಷ್ಟೆ[2], ಆದ್ದರಿಂದಲೇ (ಪುರಾ=ಪೂರ್ವಂ) ಹಿಂದಕ್ಕೆ ಸರ್ವಲೋಕಗಳಲ್ಲಿಯೂ ಕ್ಷತ್ರಕ್ಕೇ ಕ್ಷತ್ರಿಯಜಾತಿಗೇ ಈ ವಿದ್ಯೆಯಿಂದ ಪ್ರಶಾಸನವು, ಗುರುಗಳಾಗಿ ಶಿಷ್ಯರಿಗೆ

1. ಶಿಷ್ಯಭಾವದಿಂದ ಬ್ರಹ್ಮಚರ್ಯವಾಸವನ್ನು ಮಾಡಿಕೊಂಡಿದ್ದವನಿಗೇ ಹೇಳ ಬೇಕೆಂಬುದು ನ್ಯಾಯ.

2. ಈ ವಿದ್ಯೆಯು ಈವರೆಗೆ ಕ್ಷತ್ರಿಯರಲ್ಲಿ ಮಾತ್ರವೇ ಇದ್ದು ಅವರೇ ಇದನ್ನು ಒಬ್ಬರಿಂದೊಬ್ಬರು ಪಡೆಯುತ್ತಾಬಂದಿದ್ದಾರಷ್ಟೆ —ಎಂದರ್ಥ; ಮೂಲದ ಅಕ್ಷರಾರ್ಥವನ್ನು ಮಾತ್ರ ಅನುವಾದಿಸಿದೆ.

ಅನುಶಾಸನಮಾಡುವದು (ಅಭೂತ್=ಬಭೂವ) ಇದ್ದುಕೊಂಡಿತ್ತು ; ಕ್ಷತ್ರಿಯಪರಂಪರೆಯಿಂದಲೇ ಈ ವಿದ್ಯೆಯು ಇಷ್ಟುಕಾಲವೂ ಬಂದುಕೊಂಡಿತ್ತು. ಆದರೂ ನಾನು ನಿನಗೆ ಇದನ್ನು ಹೇಳಿಕೊಡುವೆನು, ನಿನಗೆ (ನಾನು ಹೇಳಿ)ಕೊಟ್ಟಮೇಲೆ (ಇದು) ಬ್ರಾಹ್ಮಣರನ್ನು ಸೇರುವದು. ಆದ್ದರಿಂದ ನಾನು ಹೇಳಿದೆನಲ್ಲ[1], ಅದನ್ನು ಕ್ಷಮಿಸಬೇಕು. ಹೀಗೆಂದು ರಾಜನು ಅವನಿಗೆ ವಿದ್ಯೆಯನ್ನು ಹೇಳಿದನು.

---

# ಐದನೆಯ ಅಧ್ಯಾಯ - ನಾಲ್ಕನೆಯ ಖಂಡ

(ಪಞ್ಚಾಗ್ನಿವಿದ್ಯೆ)

## ದ್ಯುಲೋಕಾಗ್ನಿ

(ಉಪನಿಷತ್ತು)

**ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿಶ್ಚನ್ದ್ರಮಾ ಅಙ್ಗಾರಾ ನಕ್ಷತ್ರಾಣಿ ವಿಸ್ಫುಲಿಙ್ಗಾಃ ॥ ೧ ॥**

೧. ಗೌತಮನೆ, ಆ ಲೋಕವೇ ಅಗ್ನಿಯು. ಅದಕ್ಕೆ ಆದಿತ್ಯನೇ ಸಮಿತ್ತು, ರಶ್ಮಿಗಳೇ ಹೊಗೆ, ಹಗಲು ಉರಿ, ಚಂದ್ರನೇ ಕೆಂಡ, ನಕ್ಷತ್ರಗಳು ಕಿಡಿಗಳು.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೩೮೭. ಪಞ್ಚಮ್ಯಾಮ್ ಆಹುತೌ ಆಪ ಇತ್ಯಯಂ ಪ್ರಶ್ನಃ ಪ್ರಾಥಮ್ಯೇನ ಅಪಾಕ್ರಿಯತೇ। ತದಪಾಕರಣಮ್ ಅನು ಇತರೇಷಾಮ್ ಅಪಾಕರಣಮ್ ಅನುಕೂಲಂ ಭವೇದಿತಿ। ಅಗ್ನಿಹೋತ್ರಾಹುತ್ಯೋಃ ಕಾರ್ಯಾರಮ್ಭೋ ಯಃ ಸ ಉಕ್ತೋ ವಾಜಸನೇಯಕೇ "ತಂ ಪ್ರತಿ ಪ್ರಶ್ನಾಃ। ಉತ್ಕ್ರಾನ್ತಿರಾಹುತ್ಯೋರ್ಗತಿಃ ಪ್ರತಿಷ್ಠಾ ತೃಪ್ತಿಃ ಪುನರಾವೃತ್ತಿರ್ಲೋಕಂ ಪ್ರತ್ಯುತ್ಥಾಯೀ[2]" ಇತಿ। ತೇಷಾಂ

1. ವಿದ್ಯೆಯನ್ನು ಮೊದಲು ಉಪದೇಶಮಾಡಲಾರೆನೆಂದು ಹೇಳಿದೆನಲ್ಲ, ಮತ್ತು ದೀರ್ಘಕಾಲ ಬ್ರಹ್ಮಚರ್ಯೆಯನ್ನು ಮಾಡಬೇಕೆಂದು ಹೇಳಿದೆನಲ್ಲ- (ಅದನ್ನು) ಎಂದರ್ಥ.

2. ಇಲ್ಲಿರುವ ವಾಕ್ಯವು ಮಾಧ್ಯಂದಿನಪಾಠದಲ್ಲಿಲ್ಲ. ಅಲ್ಲಿ "ನ ತ್ವೇವೈನಯೋಸ್ತ್ವಮುತ್ಕ್ರಾನ್ತಿಂ ನ ಗತಿಂ ನ ಪ್ರತಿಷ್ಠಾಂ ನ ತೃಪ್ತಿಂ ನ ಪುನರಾವೃತ್ತಿಂ ನ ಲೋಕಂ ಪ್ರತ್ಯುತ್ಥಾಯಿನಮ್ (ವೇತ್ಥ) ॥" (ಶತ. ಬ್ರಾ. ೧೧-೬-೨-೪) ಎಂಬ ವಾಕ್ಯವಿದೆ. ಅದನ್ನು ಬೃ. ಭಾ. ೬-೨-೧ (ಭಾ. ಭಾ. ೪೨೬), ೬-೨-೯ (ಭಾ. ಭಾ. ೪೪೦) ಇವುಗಳಲ್ಲಿ ಉದಾಹರಿಸಿದೆ. ಇಲ್ಲಿರುವ ವಾಕ್ಯವು ಕಾಣ್ವಪಾಠವೋ ಏನೊ.

ಚಾಪಾಕರಣಮುಕ್ತಂ ತತ್ರೈವ "ತೇ ವಾ ಏತೇ ಆಹುತೀ ಹುತೇ ಉತ್ಕ್ರಾಮತಸ್ತೇ ಅನ್ತರಿಕ್ಷಮಾವಿಶತಸ್ತೇ ಅನ್ತರಿಕ್ಷಮೇವಾಽಽಹವನೀಯಂ ಕುರ್ವಾತೇ ವಾಯುಂ ಸಮಿಧಂ ಮರೀಚೀರೇವ ಶುಕ್ಲಾಮಾಹುತಿಂ ತೇ ಅನ್ತರಿಕ್ಷಂ ತರ್ಪಯತಸ್ತೇ ತತ ಉತ್ಕ್ರಾಮತಃ" (ಶತ ಬ್ರಾ ೧೧-೬-೨-೬) ಇತ್ಯಾದಿ। ಏವಮೇವ ಪೂರ್ವವತ್ "ದಿವಂ ತರ್ಪಯತಸ್ತೇ ತತ ಆವರ್ತೇತೇ। ಇಮಾಮಾವಿಶ್ಯ ತರ್ಪಯಿತ್ವಾ ಪುರುಷಮಾವಿಶತಃ। ತತಃ ಸ್ತ್ರಿಯಮಾವಿಶ್ಯ ಲೋಕಂ ಪ್ರತ್ಯುತ್ಥಾಯೀ ಭವತಿ" (ಶತ. ಬ್ರಾ. ೧೧-೬-೨-೭,೮,೯.೧೦)[1] ? ಇತಿ ತತ್ರಾಗ್ನಿಹೋತ್ರಾಹುತ್ಯೋಃ ಕಾರ್ಯಾರಮ್ಭಮಾತ್ರಮೇವಂಪ್ರಕಾರಂ ಭವತೀತ್ಯುಕ್ತಮ್। ಇಹ ತು ತಂ ಕಾರ್ಯಾರಮ್ಭಮಗ್ನಿಹೋತ್ರಾಪೂರ್ವವಿಪರಿಣಾಮಲಕ್ಷಣಂ ಪಞ್ಚಧಾ ಪ್ರವಿಭಜ್ಯ ಅಗ್ನಿತ್ವೇನೋಪಾಸನಮುತ್ತರಮಾರ್ಗಪ್ರತಿಪತ್ತಿಸಾಧನಂ ವಿಧಿತ್ಸನ್ನಾಹ। ಅಸೌ ವಾವ ಲೋಕೋ ಗೌತಮಾಗ್ನಿರಿತ್ಯಾದಿ॥

(ಭಾಷ್ಯಾರ್ಥ)

"ಐದನೆಯ ಆಹುತಿಯಲ್ಲಿ ಅಪ್ಪು " ಎಂಬೀ ಪ್ರಶ್ನೆಯನ್ನು ಮೊದಲನೆಯದಾಗಿ ನಿರ್ಣಯಿಸಿ ಹೇಳಿದೆ[2], ಅದಕ್ಕೆ ಉತ್ತರವನ್ನು ಕೊಟ್ಟರೆ ಉಳಿದ (ಪ್ರಶ್ನೆಗಳಿಗೆ) ಉತ್ತರವನ್ನು ಹೇಳುವದಕ್ಕೆ ಅನುಕೂಲವಾದೀತೆಂಬುದೇ (ಈ ಕ್ರಮಕ್ಕೆ ಕಾರಣ)[3]

ಅಗ್ನಿಹೋತ್ರದ ಆಹುತಿಗಳಿಗೆ ಕಾರ್ಯವುಂಟಾಗುವದನ್ನು **ವಾಜಸನೇಯಕ**ದಲ್ಲಿ "ಅವನಿಗೆ ಪ್ರಶ್ನೆಗಳು ಉತ್ಕ್ರಾಂತಿ, ಆಹುತಿಗಳ ಗತಿ, ಪ್ರತಿಷ್ಠೆ, ತೃಪ್ತಿ, ಪುನರಾವೃತ್ತಿ, ಲೋಕವನ್ನು ಕುರಿತು ಏಳುವವನು (ಯಾರು ?)" ಎಂದು ಕೇಳಿತ್ತಷ್ಟೆ ? ಆ (ಪ್ರಶ್ನೆ)ಗಳಿಗೆ ಉತ್ತರವನ್ನು ಲಲ್ಲಿಯೇ ಹೇಳಿತ್ತಷ್ಟೆ, "ಆ ಈ ಆಹುತಿಗಳು ಹುತವಾಗಿ ಉತ್ಕ್ರಾಂತವಾಗುತ್ತವೆ: ಅವು ಅಂತರಿಕ್ಷವನ್ನು ಪ್ರವೇಶಿಸುತ್ತವೆ, ಅವು ಅಂತರಿಕ್ಷವನ್ನೇ ಆಹವನೀಯವನ್ನು ಮಾಡಿಕೊಳ್ಳುತ್ತವೆ, ವಾಯುವನ್ನೇ ಸಮಿತ್ತನ್ನಾಗಿಯೂ ರಶ್ಮಿಗಳನ್ನು ಶುದ್ಧವಾದ ಆಹುತಿಯನ್ನಾಗಿಯೂ (ಮಾಡಿಕೊಳ್ಳುತ್ತವೆ), ಅವು ಅಂತರಿಕ್ಷವನ್ನು ತೃಪ್ತಿಗೊಳಿಸುತ್ತವೆ; ಅವು ಅಲ್ಲಿಂದ ಉತ್ಕ್ರಾಂತವಾಗುತ್ತವೆ" (ಶತ.ಬ್ರಾ ೧೧-೬-೨-೬) ಎಂದು ಮುಂತಾಗಿಯೂ, ಹೀಗೆಯೇ ಮೊದಲಿನಂತೆ 'ದ್ಯುಲೋಕವನ್ನು ತೃಪ್ತಿಗೊಳಿಸುತ್ತವೆ, ಅವು ಅಲ್ಲಿಂದ ಹಿಂತಿರುಗುತ್ತವೆ, ಈ ಭೂಮಿಯನ್ನು ಪ್ರವೇಶಿಸಿ ತೃಪ್ತಿಗೊಳಿಸಿ ಪುರುಷ

---

1. ಇದು ಬ್ರಾಹ್ಮಣವಾಕ್ಯಗಳ ಅರ್ಥಮಾತ್ರವಾಗಿರಬಹುದು.
2. ಇಲ್ಲಿ ಕೇಳಿದ ಪ್ರಶ್ನೆಗಳಲ್ಲಿ ಐದನೆಯದನ್ನೇ ಮೊದಲು ನಿರ್ಣಯಿಸಿದೆ.
3. ಅರ್ಥಕ್ರಮವೇ ಪಾಠಕ್ರಮಕ್ಕಿಂತ ಪ್ರಬಲ ಎಂದು ತಾತ್ಪರ್ಯ.

ನನ್ನು ಪ್ರವೇಶಿಸುತ್ತವೆ, ಆ ಬಳಿಕ ಸ್ತ್ರೀಯನ್ನು ಪ್ರವೇಶಿಸಿ ಲೋಕವನ್ನು ಕುರಿ
ಏಳುವವನಾಗುತ್ತಾನೆ" ಎಂದೂ (ಹೇಳಿತ್ತಷ್ಟೆ)? ಅಲ್ಲಿ ಅಗ್ನಿಹೋತ್ರಾಹುತಿಗ
ಕಾರ್ಯವು ಉಂಟಾಗುವದನ್ನು ಮಾತ್ರ ಈ ಪ್ರಕಾರದಿಂದ ಆಗುತ್ತದೆ ಎಂದ
ಹೇಳಿತ್ತು. ಆದರೆ ಇಲ್ಲಿ ಅಗ್ನಿಹೋತ್ರದ ಅಪೂರ್ವದ ಪರಿಣಾಮರೂಪವಾ
ಆ ಕಾರ್ಯಾರಂಭವನ್ನು ಐದು ಪ್ರಕಾರವಾಗಿ ವಿಂಗಡಿಸಿಕೊಂಡು ಅಗ್ನಿಗಳೆಂದ
ಉಪಾಸನೆಮಾಡಬೇಕು, (ಅದು) ಉತ್ತರಮಾರ್ಗಪ್ರಾಪ್ತಿಗೆ ಸಾಧನವು ಎಂದ
ವಿಧಿಸುವದಕ್ಕಾಗಿ (ಶ್ರುತಿ) 'ಗೌತಮನೆ, ಆ ಲೋಕವೇ ಅಗ್ನಿಯು' ಎಂದ
ಮುಂತಾಗಿ ಹೇಳುತ್ತಿದೆ.

## ಇಲ್ಲಿ ಹೇಳಿರುವ ಅಗ್ನ್ಯಾದಿಗಳ ಸಂಕ್ಷಿಪ್ತವಿವರ

(ಭಾಷ್ಯ)

೩೮೮. ಇಹ ಸಾಯಂಪ್ರಾತರಗ್ನಿಹೋತ್ರಾಹುತೀ ಹುತೇ ಪಯ ಆ
ಸಾಧನೇ ಶ್ರದ್ಧಾಪುರಃಸರೇ ಆಹವನೀಯಾಗ್ನಿಸಮಿದ್ಧೂಮಾರ್ಚಿರಙ್ಗಾ
ವಿಸ್ಫುಲಿಙ್ಗಭಾವಿತೇ ಕರ್ತ್ರಾದಿಕಾರಕಭಾವಿತೇ ಚಾನ್ತರಿಕ್ಷಕ್ರಮೇಣೋತ್ಕ್ರಮ
ದ್ಯುಲೋಕಂ ಪ್ರವಿಶನ್ತ್ಯೌ ಸೂಕ್ಷ್ಮಭೂತೇ ಅಪ್ಸಮವಾಯಿತ್ವಾದಪ್ಶಬ್ದವಾಚ್ಯೇ
ಶ್ರದ್ಧಾಹೇತುತ್ವಾಚ್ಚ ಶ್ರದ್ಧಾಶಬ್ದವಾಚ್ಯೇ ತಯೋರಧಿಕರಣೋಽಗ್ನಿರನ್ಯಚ್ಚ ತತ್ಸ
ಬದ್ಧಂ ಸಮಿದಾದೀತ್ಯುಚ್ಯತೇ। ಯಾ ಚಾಸೌ ಅಗ್ನ್ಯಾದಿಭಾವನಾ ಆಹುತ್ಯೋ
ಸಾಪಿ ತಥೈವ ನಿರ್ದಿಶ್ಯತೇ ॥

(ಭಾಷ್ಯಾರ್ಥ)

ಇಲ್ಲಿ ಸಾಯಂಕಾಲ ಮತ್ತು ಪ್ರಾತಃಕಾಲದ ಅಗ್ನಿಹೋತ್ರಾಹುತಿಗಳು ಹಾಲೆ
ಮುಂತಾದ ಸಾಧನಗಳಿಂದೊಡಗೂಡಿ[1] ಶ್ರದ್ಧಾಪುರಸ್ಸರವಾಗಿ[2] ಹುತವಾಗಿ, ಆಹ
ವನೀಯಾಗ್ನಿ, ಸಮಿತ್ತು, ಹೊಗೆ, ಉರಿ, ಕೆಂಡ, ಕಿಡಿಗಳು- ಎಂದು ಭಾವಿತವಾಗಿ
ಕರ್ತ್ರಾದಿಕಾರಕಗಳ (ಭಾವನೆಯಿಂದಲೂ) ಭಾವಿತವಾಗಿ[3], ಅಂತರಿಕ್ಷಕ್ರಮ
ದಿಂದ ಉತ್ಕ್ರಾಂತವಾಗಿ[4] ದ್ಯುಲೋಕವನ್ನು ಹೊಕ್ಕು ಸೂಕ್ಷ್ಮಭೂತವಾಗಿ[5]

---

1. ಹೋಮದ್ರವ್ಯದಲ್ಲಿ ದ್ರವದ್ರವ್ಯಗಳು ಹೆಚ್ಚಾಗಿರುವದರಿಂದ ಇದನ್ನು ಅಪ್ಪು ಎಂದಿದ
ಎಂದು ಭಾವ.

2. ಶ್ರದ್ಧಾಪುರಸ್ಸರವಾಗಿ ಹೋಮಮಾಡುವದರಿಂದ ಆಹುತಿಗಳನ್ನು ಶ್ರದ್ಧೆಯೆಂದಿದ
ಎಂದು ಭಾವ.

3. ಹೋಮಕ್ಕೆ ಕರ್ತೃ ಮುಂತಾದವುಗಳು ಬೇಕಾಗಿರುವದರಿಂದ ಕರ್ತ್ರಾದಿಬುದ್ಧಿ
ಯನ್ನು ಇಲ್ಲಿ ವಿಧಿಸಿದೆ.

4. ಇಲ್ಲಿ ಬರಿಯ ಆಹುತಿಗಳ ಉತ್ಕ್ರಾಂತಿಯಲ್ಲ, ಕರ್ಮಫಲವನ್ನನುಭವಿಸುವದ
ಕ್ಕಾಗಿ ಅಪ್ಪರಿವೃತರಾದ ಜೀವರ ಉತ್ಕ್ರಾಂತಿಯನ್ನೇ ಹೇಳಿದೆ. ಸೂ. ಭಾ. ೩-೧-೬
(ಭಾ ಭಾ. ೨೨೦) ನೋಡಿ.

5. ಅದೃಷ್ಟರೂಪದಿಂದ.

ಅಪ್ಸಂಬಂಧದಿಂದ ಅಪ್ಪೆಂಬ ಶಬ್ದಕ್ಕೆ ವಾಚ್ಯವಾಗಿ[1] ಶ್ರದ್ಧೆಯೆಂಬ ಹೇತುವಿನಿಂದ ಆಗಿರುವವರಿಂದ ಶ್ರದ್ಧಾಶಬ್ದಕ್ಕೆ ವಾಚ್ಯವೂ ಆಗಿರುತ್ತವೆ. ಅವುಗಳಿಗೆ ಆಧಾರವಾಗಿರುವದು ಅಗ್ನಿ, ಆದಕ್ಕೆ ಸಂಬದ್ಧವಾಗಿರುವ ಮಿಕ್ಕದ್ದು ಸಮಿತ್ತು ಮುಂತಾದದ್ದು ಎಂದು ಉಕ್ತವಾಗಿದೆ (ಈ) ಆಹುತಿಗಳ ಅಗ್ನ್ಯಾದಿಭಾವನೆಯಿದೆಯಲ್ಲ, ಅದನ್ನು ಹಾಗೆಯೇ ತಿಳಿಸಲಾಗುತ್ತದೆ[2] ॥

## ದ್ಯುಲೋಕಾಗ್ನಿಯ ವಿವರ

(ಭಾಷ್ಯ)

೩೮೯. ಅಸೌ ವಾವ ಲೋಕೋಽಗ್ನಿರ್ಹೇ ಗೌತಮ। ಯಥಾಗ್ನಿಹೋತ್ರಾದಿಕರಣಮಾಹವನೀಯ ಇಹ । ತಸ್ಯಾಗ್ನೇರ್ದ್ಯುಲೋಕಾಖ್ಯಸ್ಯ ಆದಿತ್ಯ ಏವ ಸಮಿತ್। ತೇನ ಹಿ ಇದ್ಧ ಅಸೌ ಲೋಕೋ ದೀಪ್ಯತೇ। ಅತಃ ಸಮಿನ್ಧನಾತ್ ಸಮಿದಾದಿತ್ಯಃ। ರಶ್ಮಯೋ ಧೂಮಃ। ತದುತ್ಥಾನಾತ್। ಸಮಿಧೋ ಹಿ ಧೂಮ ಉತ್ತಿಷ್ಠತಿ। ಅಹರರ್ಚಿಃ। ಪ್ರಕಾಶಸಾಮಾನ್ಯಾತ್। ಆದಿತ್ಯಕಾರ್ಯತ್ವಾಚ್ಚ। ಚನ್ದ್ರಮಾ ಅಙ್ಗಾರಾಃ। ಅಹ್ನಃ ಪ್ರಶಮೇಽಭಿವ್ಯಕ್ತೇಃ। ಅರ್ಚಿಷೋ ಹಿ ಪ್ರಶಮೇಽಙ್ಗಾರಾ ಅಭಿವ್ಯಜ್ಯನ್ತೇ। ನಕ್ಷತ್ರಾಣಿ ವಿಸ್ಫುಲಿಙ್ಗಾಃ। ಚನ್ದ್ರಮಸೋಽವಯವಾ ಇವ ವಿಪ್ರಕೀರ್ಣತ್ವಸಾಮಾನ್ಯಾತ್ ॥

(ಭಾಷ್ಯಾರ್ಥ)

ಎಲೈ ಗೌತಮನೆ, ಆ ಲೋಕವೇ ಅಗ್ನಿಯು. ಹೇಗೆ ಇಲ್ಲಿ ಅಗ್ನಿಹೋತ್ರಕ್ಕೆ ಆಹವನೀಯವು ಅಧಿಕರಣವಾದ (ಅಗ್ನಿಯೋ ಹಾಗೆ ಆ ಲೋಕವು ಅಗ್ನಿಯು). ಆ ದ್ಯುಲೋಕವೆಂಬ ಅಗ್ನಿಗೆ ಆದಿತ್ಯನೇ ಸಮಿತ್ತು, ಏಕೆಂದರೆ ಅದರಿಂದಲೇ ಅಲ್ಲವೆ, ಇದ್ಧವಾಗಿ ಆ ಲೋಕವು ಪ್ರಕಾಶಿಸುತ್ತದೆ? ಆದ್ದರಿಂದ (ಸಮಿನ್ಧನಾತ್) ಹತ್ತಿಕೊಂಡು ಉರಿಯುವಂತೆ ಮಾಡುತ್ತಿರುವವರಿಂದ ಆದಿತ್ಯನು ಸಮಿತ್ತು. ರಶ್ಮಿಗಳೇ ಹೊಗೆ, ಏಕೆಂದರೆ ಆ (ಸಮಿತ್ತಿನಿಂದ) ಏಳುತ್ತವೆ ಸಮಿತ್ತಿನಿಂದಲ್ಲವೆ, ಹೊಗೆಯು ಏಳುತ್ತದೆ? ಅಹಸ್ಸೇ ಉರಿಯು, ಏಕೆಂದರೆ ಬೆಳಗುವದೆಂಬುದು (ಎರಡಕ್ಕೂ) ಸಮಾನವಾಗಿದೆ, ಮತ್ತು (ಅವು) ಆದಿತ್ಯನ ಕಾರ್ಯವಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು). ಚಂದ್ರನೇ ಕೆಂಡ[3], ಏಕೆಂದರೆ

---

1. ಅಪ್ಸಂಬಂಧವೆಂದರೆ ಬರಿಯ ದ್ರವದ್ರವ್ಯವಲ್ಲ, ಭೂತಮಾತ್ರಗಳನ್ನೆಲ್ಲ ಅಪ್ಪೆಂದಿದೆ, ಸೂ. ಭಾ. ೩-೧-೨ (ಭಾ. ಭಾ. ೨೧೫)ನ್ನು ನೋಡಿ.

2. ಅಗ್ನಿಹೋತ್ರದಲ್ಲಿ ಅಗ್ನ್ಯಾದಿಗಳನ್ನು ಕಂಡು ಅದರಂತೆ ದ್ಯುಲೋಕಾದಿಗಳಲ್ಲಿ ಅಗ್ನ್ಯಾದಿಭಾವನೆಯನ್ನು ಇಲ್ಲಿ ವಿಧಿಸಿದೆ ಎಂದರ್ಥ.

3. ಬೃಹದಾರಣ್ಯಕದಲ್ಲಿ (೬-೨-೯) ದಿಕ್ಕುಗಳು ಕೆಂಡ, ಅವಾಂತರದಿಕ್ಕುಗಳು ಕಿಡಿಗಳು ಎಂದಿದೆ.

ಹಗಲು ಆರಲು (ಅದು) ಕಾಣಿಸಿಕೊಳ್ಳುತ್ತದೆ ಉರಿಯು ಆರಿದಮೇಲಲ್ಲವೆ, ಕೆಂಡವು ಕಾಣಿಸಿಕೊಳ್ಳುತ್ತದೆ ? ನಕ್ಷತ್ರಗಳೇ ಕಿಡಿಗಳು, ಏಕೆಂದರೆ ಚಂದ್ರನ ಅವಯವಗಳಂತೆ (ಅವು) ಸಿಡಿದುಬಂದಿರುತ್ತವೆ

(ಉಪನಿಷತ್ತು)

**ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ ॥ ೨ ॥**

೨. ಆ ಈ ಅಗ್ನಿಯಲ್ಲಿ ದೇವತೆಗಳ ಶ್ರದ್ಧೆಯನ್ನು ಹೋಮ ಮಾಡುತ್ತಾರೆ, ಆ ಆಹುತಿಯಿಂದ ಸೋಮರಾಜನು ಹುಟ್ಟುತ್ತಾನೆ.

## ದ್ಯುಲೋಕಾಗ್ನಿಯಲ್ಲಿ ಹೋಮ, ಸೋಮದ ಉತ್ಪತ್ತಿ

(ಭಾಷ್ಯ)

೩೯೦ ತಸ್ಮಿನ್ನೇತಸ್ಮಿನ್ ಯಥೋಕ್ತಲಕ್ಷಣೇಽಗ್ನೌ ದೇವಾ ಯಜಮಾನ ಪ್ರಾಣಾ ಅಗ್ನ್ಯಾದಿರೂಪಾ ಅಧಿದೈವತಮ್ । ಶ್ರದ್ಧಾಮ್ ಅಗ್ನಿಹೋತ್ರಾಹುತಿ ಪರಿಣಾಮಾವಸ್ಥಾರೂಪಾಃ ಸೂಕ್ಷ್ಮಾ ಆಪಃ ಶ್ರದ್ಧಾಭಾವಿತಾಃ ಶ್ರದ್ಧಾ ಉಚ್ಯನ್ತೇ । "ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತಿ" (೫-೩-೩)ಇತ್ಯಪಾಂ ಹೋಮ್ಯತಯಾ ಪ್ರಶ್ನೇ ಶ್ರುತತ್ವಾತ್ । "ಶ್ರದ್ಧಾ ವಾ ಆಪಃ ಶ್ರದ್ಧಾಮೇವಾರಭ್ಯ ಪ್ರಣೀಯ ಪ್ರಚರತಿ" (ತೈ ಬ್ರಾ. ೩-೨-೪-೨೨) ಇತಿ ಚ ವಿಜ್ಞಾಯತೇ । ತಾಂ ಶ್ರದ್ಧಾಮ್ ಅಬ್ರೂಪಾಂ ಜುಹ್ವತಿ । ತಸ್ಯಾ ಆಹುತೇಃ ಸೋಮೋ ರಾಜಾ ಅಪಾಂ ಶ್ರದ್ಧಾಶಬ್ದವಾಚ್ಯಾನಾಂ ದ್ಯುಲೋಕಾಗ್ನೌ ಹುತಾನಾಂ ಪರಿಣಾಮಃ ಸೋಮೋ ರಾಜಾ ಸಂಭವತಿ । ಯಥಾ ಋಗ್ವೇದಾದಿಪುಷ್ಪರಸಾ ಋಗಾದಿಮಧುಕರೋಪ ನೀತಾಸ್ತ ಆದಿತ್ಯೇ ಯಶಆದಿಕಾರ್ಯಂ ರೋಹಿತಾದಿರೂಪಲಕ್ಷಣಮ್ ಆರಭನ್ತ ಇತ್ಯುಕ್ತಮ್, ತಥೇಮಾ ಅಗ್ನಿಹೋತ್ರಾಹುತಿಸಮವಾಯಿನ್ಯಃ ಸೂಕ್ಷ್ಮಾಃ ಶ್ರದ್ಧಾ ಶಬ್ದವಾಚ್ಯಾಃ ಆಪಃ ದ್ಯುಲೋಕಮನುಪ್ರವಿಶ್ಯ ಚಾನ್ದ್ರಂ ಕಾರ್ಯಮಾರಭನ್ತೇ ಫಲರೂಪಮಗ್ನಿಹೋತ್ರಾಹುತ್ಯೋಃ । ಯಜಮಾನಾಶ್ಚ ತತ್ಕರ್ತಾರ ಆಹುತಿ ಮಯಾ ಆಹುತಿಭಾವನಾಭಾವಿತಾ ಆಹುತಿರೂಪೇಣ ಕರ್ಮಣಾ ಆಕೃಷ್ಟಾ ಶ್ರದ್ಧಾಪ್ಸಮವಾಯಿನೋ ದ್ಯುಲೋಕಮನುಪ್ರವಿಶ್ಯ ಸೋಮಭೂತಾ ಭವನ್ತಿ । ತದರ್ಥಂ ಹಿ ತೈರಗ್ನಿಹೋತ್ರಂ ಹುತಮ್ । ಅತ್ರ ತು ಆಹುತಿಪರಿಣಾಮ ಏವ ಪಞ್ಚಾಗ್ನಿಸಂಬನ್ಧಕ್ರಮೇಣ ಪ್ರಾಧಾನ್ಯೇನ ವಿವಕ್ಷಿತ ಇತಿ ಉಪಾಸನಾರ್ಥಂ ನ ಯಜಮಾನಾನಾಂ ಗತಿಃ । ತಾಂ ತ್ವವಿದುಷಾಂ ಧೂಮಾದಿಕ್ರಮೇಣ ಉತ್ತರತ್ರ ವಕ್ಷ್ಯತಿ ವಿದುಷಾಂ ಚೋತ್ತರಾಂ ವಿದ್ಯಾಕೃತಾಮ್ ॥

(ಭಾಷ್ಯಾರ್ಥ)

ಆ ಈ ಮೇಲೆ ಹೇಳಿದ ಲಕ್ಷಣವುಳ್ಳ ಅಗ್ನಿಯಲ್ಲಿ ದೇವತೆಗಳು, ಎಂದರೆ ಯಜಮಾನನ ಪ್ರಾಣಗಳು, ಅಧಿದೈವತವಾಗಿ ಅಗ್ನ್ಯಾದಿರೂಪ(ರಾದ ದೇವತೆಗಳು)[1], ಶ್ರದ್ಧೆಯನ್ನು ಅಗ್ನಿಹೋತ್ರದ ಆಹುತಿಗಳ ಪರಿಣಾಮವಾದ ಅವಸ್ಥೆಯ ರೂಪದಲ್ಲಿರುವ ಸೂಕ್ಷ್ಮವಾದ ಅಪ್ಪು ಶ್ರದ್ಧಾಭಾವಿತವಾಗಿರುವದರಿಂದ ಶ್ರದ್ಧೆಯೆಂದು ಕರೆಯಲ್ಪಟ್ಟಿದೆ "ಐದನೆಯ ಆಹುತಿಯಲ್ಲಿ ಅಪ್ಪು (ಹೇಗೆ) ಪುರುಷವಚಸ್ಸಾಗುತ್ತದೆ ?" (೫-೩-೩) ಎಂದು ಅಪ್ಪನ್ನು ಹೋಮದ್ರವ್ಯವೆಂದು ಪ್ರಶ್ನೆಯಲ್ಲಿ ಹೇಳಿರುವದರಿಂದ (ಶ್ರದ್ಧೆ ಎಂದರೆ ಅಪ್ಪೇ ಎಂದು ತಿಳಿಯಬೇಕು). "ಅಪ್ಪೇ ಶ್ರದ್ಧೆಯು, ಶ್ರದ್ಧೆಯನ್ನು ಪ್ರಾರಂಭಿಸಿಯೇ ಅಪ್ಪನ್ನು (ಹೋಮಮಾಡುವದಕ್ಕೆ) ಹಾಕುತ್ತಾನೆ" (ತೈ ಬ್ರಾ ೩-೨ ೪-೨೮) ಎಂದು (ಬ್ರಾಹ್ಮಣದಲ್ಲಿ) ತಿಳಿದುಬರುತ್ತಲೂ ಇದೆ (ದೇವತೆಗಳು) ಆ ಅಬ್ರೂಪವಾದ ಶ್ರದ್ಧೆಯನ್ನು ಹೋಮಮಾಡುತ್ತಾರೆ, ಆ ಆಹುತಿಯಿಂದ ಸೋಮರಾಜನು, ಶ್ರದ್ಧಾಶಬ್ದವಾಚ್ಯವಾದ ದ್ಯುಲೋಕಾಗ್ನಿಯಲ್ಲಿ ಹುತವಾದ ಪರಿಣಾಮವಾದ ಸೋಮರಾಜನು, ಹುಟ್ಟುತ್ತಾನೆ[2]. ಹೀಗೆ ಋಗ್ವೇದವೇ ಮುಂತಾದ ಪುಷ್ಪರಸಗಳು, ಋಕ್ಕುಗಳೇ ಮುಂತಾದ ಜೇನುಹುಳುಗಳಿಂದ ತರಲ್ಪಟ್ಟು ಆದಿತ್ಯನಲ್ಲಿ ಯಶಸ್ಸೇ ಮುಂತಾದ ಕೆಂಪು ಮುಂತಾದ ಬಣ್ಣದ ಸ್ವರೂಪದ ಕಾರ್ಯವನ್ನು ಉಂಟುಮಾಡುತ್ತವೆ ಎಂದು ಹಿಂದೆ[3] ಹೇಳಲಾಗಿತ್ತಲ್ಲ ಹಾಗೆಯೇ ಈ ಅಗ್ನಿಹೋತ್ರಾಹುತಿಗಳಿಗೆ ಸಂಬಂಧಪಟ್ಟ ಸೂಕ್ಷ್ಮವಾದ ಶ್ರದ್ಧಾಶಬ್ದವಾಚ್ಯವಾದ ಅಪ್ಪು ದ್ಯುಲೋಕವನ್ನು ಹೊಕ್ಕು ಅಗ್ನಿಹೋತ್ರಾಹುತಿಗಳ ಫಲರೂಪವಾದ ಚಂದ್ರನೆಂಬ ಕಾರ್ಯವನ್ನುಂಟುಮಾಡುತ್ತವೆ ಆ (ಕರ್ಮವನ್ನು) ಮಾಡಿದ ಯಜಮಾನರುಗಳೂ ಆಹುತಿಮಯರಾಗಿ ಆಹುತಿಭಾವಭಾವಿತರಾಗಿ ಆಹುತಿರೂಪವಾದ ಕರ್ಮದಿಂದ ಸೆಳೆಯಲ್ಪಟ್ಟು ಶ್ರದ್ಧಾರೂಪವಾದ ಅಪ್ಸಂಬಂಧಿಗಳಾಗಿ ದ್ಯುಲೋಕವನ್ನು ಸೇರಿ ಸೋಮಭೂತರಾಗುತ್ತಾರೆ. ಉದಕ್ಕಾಗಿಯಲ್ಲವೆ, ಅವರು ಅಗ್ನಿಹೋತ್ರವನ್ನುಮಾಡಿದ್ದು ? ಆದರೆ ಇಲ್ಲಿ ಆಹುತಿಪರಿಣಾಮವನ್ನೇ ಪಂಚಾಗ್ನಿಗಳ ಸಂಬಂಧದ ಕ್ರಮದಿಂದ ಉಪಾಸನೆಗಾಗಿ ಪ್ರಧಾನವಾಗಿ ಹೇಳಬೇಕೆಂದು ಹೊರಟಿರುತ್ತದೆಯೇ ಹೊರತು ಯಜಮಾನರುಗಳ ಗತಿ(ಯನ್ನು ಹೇಳುವದಕ್ಕೆ ಹೊರ)ಟಿಲ್ಲ. ಆ ಗತಿಯನ್ನಾದರೋ ಅಜ್ಞರಿಗೆ ಧೂಮಾದಿ

---

1. ಯಜಮಾನನ ಪ್ರಾಣಗಳೇ ಅಧಿದೈವತವಾಗಿ ಅಗ್ನ್ಯಾದಿರೂಪದಲ್ಲಿರುತ್ತವೆ ಎಂದು ಭಾವ

2. ಈ ವಿಷಯದಲ್ಲಿ ಬೃ. ಭಾ ೬-೨-೯ (ಭಾ ಭಾ. ೪೩೯)ರ ಅನುವಾದವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

3. ೩-೨-೨ರಿಂದ ಮುಂದಕ್ಕೆ

ಕ್ರಮದಿಂದಲೂ ಉಪಾಸಕರಿಗೆ ವಿದ್ಯಾಕೃತವಾದ ಉತ್ತರಾಯಣ(ಗತಿ)ಯನ್ನೂ ಮುಂದೆ[1] ಹೇಳಲಾಗುತ್ತದೆ.

---

# ಐದನೆಯ ಅಧ್ಯಾಯ - ಐದನೆಯ ಖಂಡ

(ಪಂಚಾಗ್ನಿವಿದ್ಯೆ)

## ಪರ್ಜನ್ಯಾಗ್ನಿ

(ಉಪನಿಷತ್ತು)

**ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶನಿರಙ್ಗಾರಾ ಹ್ರಾದನಯೋ ವಿಸ್ಫುಲಿಙ್ಗಾಃ ॥೧॥**

೧. ಗೌತಮನೆ, ಪರ್ಜನ್ಯವೇ ಅಗ್ನಿ, ಅದಕ್ಕೆ ವಾಯುವೇ ಸಮಿತ್ತು, ಮೋಡವು ಹೊಗೆ, ವಿದ್ಯುತ್ತು ಉರಿ, ಸಿಡಿಲೇ ಕೆಂಡ, ಹ್ರಾದನಿಗಳೇ ಕಿಡಿಗಳು.

### ಪರ್ಜನ್ಯನಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೩೯೧. ದ್ವಿತೀಯಹೋಮಪರ್ಯಾಯಾರ್ಥಮಾಹ। ಪರ್ಜನ್ಯೋ ವಾವ ಪರ್ಜನ್ಯ ಏವ ಗೌತಮ ಅಗ್ನಿಃ। ಪರ್ಜನ್ಯೋ ನಾಮ ವೃಷ್ಟ್ಯುಪಕರಣಾಭಿಮಾನೀ ದೇವತಾವಿಶೇಷಃ। ತಸ್ಯ ವಾಯುರೇವ ಸಮಿತ್। ವಾಯುನಾ ಹಿ ಪರ್ಜನ್ಯೋಽಗ್ನಿಃ ಸಮಿಧ್ಯತೇ। ಪುರೋವಾತಾದಿಪ್ರಾಬಲ್ಯೇ ವೃಷ್ಟಿದರ್ಶನಾತ್। ಅಭ್ರಂ ಧೂಮಃ। ಧೂಮಕಾರ್ಯತ್ವಾತ್, ಧೂಮವಚ್ಚ ಲಕ್ಷ್ಯಮಾಣತ್ವಾತ್। ವಿದ್ಯುದರ್ಚಿಃ। ಪ್ರಕಾಶಸಾಮಾನ್ಯಾತ್। ಅಶನಿರಙ್ಗಾರಾಃ। ಕಾಠಿನ್ಯಾತ್, ವಿದ್ಯುತ್ಸಂಬನ್ಧಾದ್ವಾ। ಹ್ರಾದನಯೋ ವಿಸ್ಫುಲಿಙ್ಗಾಃ। ಹ್ರಾದನಯೋ ಗರ್ಜಿತಶಬ್ದಾಃ ಮೇಘಾನಾಮ್। ವಿಪ್ರಕೀರ್ಣತ್ವಸಾಮಾನ್ಯಾತ್ ॥

(ಭಾಷ್ಯಾರ್ಥ)

ಎರಡನೆಯ ಹೋಮಪರ್ಯಾಯವನ್ನು (ತಿಳಿಸು)ವದಕ್ಕಾಗಿ ಹೇಳುತ್ತಿದಾನೆ. ಗೌತಮನೆ, (ಪರ್ಜನ್ಯೋ ವಾವ= ಪರ್ಜನ್ಯ ಏವ) ಪರ್ಜನ್ಯನೇ ಅಗ್ನಿಯು.

---

1. ೫-೧೦-೩, ೫-೧೦-೪- ಇವುಗಳಲ್ಲಿ.

ಪರ್ಜನ್ಯ ಎಂದರೆ ಮಳೆಯ ಉಪಕರಣಕ್ಕೆ ಅಭಿಮಾನಿಯಾದ ದೇವತೆ. ಅದಕ್ಕೆ ವಾಯುವೇ[1] ಸಮಿತ್ತು, ವಾಯುವಿನಿಂದಲ್ಲವೆ, ಪರ್ಜನ್ಯನೆಂಬ ಅಗ್ನಿಯು ಸಮಿದ್ಧ ವಾಗುತ್ತದೆ? ಏಕೆಂದರೆ ಮುಂಗಾಳಿಯೇ ಮುಂತಾದವು ಪ್ರಬಲವಾದಾಗ ಮಳೆ ಯಾಗುವದು ಕಂಡುಬರುತ್ತದೆ. ಮೋಡವು ಹೊಗೆ, ಏಕೆಂದರೆ ಅದು ಹೊಗೆ ಯಿಂದಾಗುತ್ತದೆ[2], ಹೊಗೆಯಂತೆ ಕಾಣಿಸುತ್ತಲೂ ಇರುತ್ತದೆ. ಮಿಂಚೇ ಉರಿ; ಏಕೆಂದರೆ ಪ್ರಕಾಶವು (ಎರಡಕ್ಕೂ) ಸಮಾನವಾಗಿರುತ್ತದೆ ಸಿಡಿಲೇ ಕೆಂಡ, ಏಕೆಂದರೆ ಗಟ್ಟಿಯಾಗಿರುತ್ತದೆ, ಅಥವಾ ಮಿಂಚಿಗೆ ಸಂಬಂಧಿಸಿರುತ್ತದೆ. ಹ್ರಾದನಿ ಗಳು ಕಿಡಿಗಳು ಹ್ರಾದನಿಗಳು ಎಂದರೆ ಮೋಡಗಳ ಗುಡುಗಿನ ಶಬ್ದಗಳು, ಏಕೆಂದರೆ ಸಿಡಿದುಬರುವದೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ

(ಉಪನಿಷತ್ತು)

**ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಗ್ಂ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷಗ್ಂ ಸಂಭವತಿ ॥ ೨ ॥**

೨. ಆ ಈ ಅಗ್ನಿಯಲ್ಲಿ ದೇವತೆಗಳು ಸೋಮರಾಜನನ್ನು ಹೋಮಮಾಡುತ್ತಾರೆ. ಆಹುತಿಯಿಂದ ಮಳೆ ಹುಟ್ಟುತ್ತದೆ.

## ಪರ್ಜನ್ಯಾಗ್ನಿಯಲ್ಲಿ ಹೋಮ, ಮಳೆಯ ಜನ್ಮ

(ಭಾಷ್ಯ)

೩೯೨ ತಸ್ಮಿನ್ನೇತಸ್ಮಿನ್ ಅಗ್ನೌ ದೇವಾಃ ಪೂರ್ವವತ್ ಸೋಮಂ ರಾಜಾನಂ ಜುಹ್ವತಿ। ತಸ್ಯಾ ಆಹುತೇರ್ವರ್ಷಂ ಸಂಭವತಿ। ಶ್ರದ್ಧಾಖ್ಯಾ ಆಪಃ ಸೋಮಾಕಾರಪರಿಣತಾ ದ್ವಿತೀಯೇ ಪರ್ಯಾಯೇ ಪರ್ಜನ್ಯಾಗ್ನಿಂ ಪ್ರಾಪ್ಯ ವೃಷ್ಟಿತ್ವೇನ ಪರಿಣಮನ್ತೇ॥

(ಭಾಷ್ಯಾರ್ಥ)

ಆ ಈ ಅಗ್ನಿಯಲ್ಲಿ ದೇವತೆಗಳು ಹಿಂದಿನಂತೆ, ಸೋಮರಾಜನನ್ನು ಹೋಮ ಮಾಡುತ್ತಾರೆ ಆ ಆಹುತಿಯಿಂದ ಮಳೆ ಹುಟ್ಟುತ್ತದೆ ಶ್ರದ್ಧೆಯೆಂಬ ಹೆಸರಿನ ಅಪ್ಪು ಸೋಮಾಕಾರವಾಗಿ ಪರಿಣಾಮವಾಗಿದ್ದದ್ದು ಎರಡನೆಯ ಪರ್ಯಾಯದಲ್ಲಿ ಪರ್ಜನ್ಯಾಗ್ನಿಯನ್ನು ಪಡೆದು ಮಳೆಯಾಗಿ ಪರಿಣಮಿಸುತ್ತದೆ.

---

1. ಸಂವತ್ಸರವೇ ಸಮಿತ್ತು ಎಂದು ಬೃ. ೬-೨-೧೦.

2. ಮೋಡವು ಹೊಗೆಯಿಂದಾಗುತ್ತದೆ ಎಂಬ ಪ್ರಾಚೀನರ ನಂಬಿಕೆಯು ಪುರಾಣ ಪ್ರಸಿದ್ಧ.

# ಐದನೆಯ ಅಧ್ಯಾಯ - ಆರನೆಯ ಖಂಡ

(ಪಂಚಾಗ್ನಿವಿದ್ಯೆ)

## ಪೃಥಿವ್ಯಗ್ನಿ

(ಉಪನಿಷತ್ತು)

**ಪೃಥಿವೀ ವಾವ ಗೌತಮಾಗ್ನಿಸ್ತಸ್ಯಾಃ ಸಂವತ್ಸರ ಏವ ಸಮಿದಾ ಕಾಶೋ ಧೂಮೋ ರಾತ್ರಿರರ್ಚಿರ್ದಿಶೋಽಙ್ಗಾರಾ ಅವಾನ್ತರ ದಿಶೋ ವಿಸ್ಫುಲಿಙ್ಗಾಃ ॥ ೧ ॥**

೧. ಗೌತಮನೆ, ಪೃಥಿವಿಯೇ ಅಗ್ನಿ. ಅದಕ್ಕೆ ಸಂವತ್ಸರವೇ ಸಮಿತ್ತು, ಆಕಾಶವೇ ಹೊಗೆ, ರಾತ್ರಿಯೇ ಉರಿ, ದಿಕ್ಕುಗಳು ಕೆಂಡ, ಅವಾಂತರದಿಕ್ಕುಗಳೇ ಕಿಡಿಗಳು

### ಪೃಥಿವಿಯಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೬-೩ ಪೃಥಿವೀ ವಾವ ಗೌತಮಾಗ್ನಿರಿತ್ಯಾದಿಪೂರ್ವವತ್ । ತಸ್ಯಾಃ ಪೃಥಿವ್ಯಾಖ್ಯಸ್ಯಾಗ್ನೇಃ ಸಂವತ್ಸರ ಏವ ಸಮಿತ್ । ಸಂವತ್ಸರೇಣ ಹಿ ಕಾಲೇನ ಸಮಿದ್ಧಾ ಪೃಥಿವೀ ವ್ರೀಹ್ಯಾದಿನಿಷ್ಪತ್ತಯೇ ಭವತಿ । ಆಕಾಶೋ ಧೂಮಃ । ಪೃಥಿವ್ಯಾ ಇವೋತ್ಥಿತ ಆಕಾಶೋ ದೃಶ್ಯತೇ । ಯಥಾಗ್ನೇರ್ಧೂಮಃ । ರಾತ್ರಿರರ್ಚಿಃ । ಪೃಥಿವ್ಯಾ ಹಿ ಅಪ್ರಕಾಶಾತ್ಮಿಕಾಯಾ ಅನುರೂಪಾ ರಾತ್ರಿಃ । ತಮೋರೂಪ ತ್ವಾತ್, ಅಗ್ನೇರಿವಾನುರೂಪಮರ್ಚಿಃ । ದಿಶಃ ಅಙ್ಗಾರಾಃ । ಉಪಶಾನ್ತತ್ವ ಸಾಮಾನ್ಯಾತ್ । ಅವಾನ್ತರದಿಶಃ ವಿಸ್ಫುಲಿಙ್ಗಾಃ । ಕ್ಷುದ್ರತ್ವಸಾಮಾನ್ಯಾತ್ ॥

(ಭಾಷ್ಯಾರ್ಥ)

'ಗೌತಮನೆ, ಪೃಥಿವಿಯೇ[1] ಅಗ್ನಿ' ಎಂದು ಮುಂತಾಗಿರುವದ(ನ್ನು ಹಿಂದಿನಂತೆ ಅರ್ಥಮಾಡಿಕೊಳ್ಳಬೇಕು). ಆ ಪೃಥಿವಿ ಎಂಬ ಹೆಸರಿನ ಅಗ್ನಿಗೆ ಸಂವತ್ಸರವೇ ಸಮಿತ್ತು, ಸಂವತ್ಸರವೆಂಬ ಕಾಲದಿಂದಲೇ ಅಲ್ಲವೆ, ಪೃಥಿವಿಯು ಸಮಿದ್ಧವಾಗಿ ಬತ್ತವೇ ಮುಂತಾದವುಗಳಿಗೆ ಕಾರಣವಾಗುತ್ತವೆ? ಆಕಾಶವೇ ಹೊಗೆ, (ಏಕೆಂದರೆ)

---

**1. ಈ ಲೋಕವೇ ಅಗ್ನಿ, ಅದಕ್ಕೆ ಪೃಥಿವಿಯೇ ಸಮಿತ್ತು, ಬೆಂಕಿಯೇ ಹೊಗೆ, ರಾತ್ರಿಯೇ ಉರಿ. ಚಂದ್ರನೇ ಕೆಂಡ, ನಕ್ಷತ್ರಗಳೇ ಕಿಡಿಗಳು -ಎಂದು ಬೃ. ೬-೨-೧೧.**

ಹೊಗೆಯು ಹೇಗೆ ಅಗ್ನಿಯಿಂದ (ಎದ್ದು ಬರುವದೋ) ಹಾಗೆ ಆಕಾಶವು ಪೃಥಿವಿಯಿಂದ ಎದ್ದು ಬಂದಿರುವಂತೆ ಕಾಣುತ್ತದೆ. ರಾತ್ರಿಯೇ ಉರಿ; ಅಪ್ರಕಾಶರೂಪವಾದ ಪೃಥಿವಿಗೆ ರಾತ್ರಿಯು, ಉರಿಯು ಅಗ್ನಿಗೆ ಅನುರೂಪವಾಗಿರುವಂತೆ, ತಮೋರೂಪವಾಗಿರುವದರಿಂದ ರಾತ್ರಿಯೂ ಅನುರೂಪವಾಗಿದೆಯಲ್ಲವೆ? ದಿಕ್ಕುಗಳು ಕೆಂಡ, ಏಕೆಂದರೆ ಉಪಶಾಂತವಾಗಿರುವದು (ಎರಡಕ್ಕೂ) ಸಮಾನವಾಗಿರುತ್ತದೆ. ಕೋಣದಿಕ್ಕುಗಳು ಕಿಡಿಗಳು, ಏಕೆಂದರೆ ಅಲ್ಪವಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿದೆ

(ಉಪನಿಷತ್ತು)

**ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವರ್ಷಂ ಜುಹ್ವತಿ ತಸ್ಯಾ ಆಹುತೇರನ್ನಗ್ಂ ಸಂಭವತಿ ॥ ೨ ॥**

೨. ಆ ಈ ಅಗ್ನಿಯಲ್ಲಿ ದೇವತೆಗಳು ಮಳೆಯನ್ನು ಹೋಮ ಮಾಡುತ್ತಾರೆ, ಆ ಆಹುತಿಯಿಂದ ಅನ್ನವು ಉಂಟಾಗುತ್ತದೆ.

## ಪೃಥಿವ್ಯಗ್ನಿಯಲ್ಲಿ ಹೋಮ, ಅನ್ನದ ಉತ್ಪತ್ತಿ

(ಭಾಷ್ಯ)

೩೯೪. ತಸ್ಮಿನ್ನಿತ್ಯಾದಿ ಸಮಾನಮ್ । ತಸ್ಯಾಃ ಆಹುತೇರನ್ನಂ ವ್ರೀಹಿಯವಾದಿ ಸಂಭವತಿ ॥

(ಭಾಷ್ಯಾರ್ಥ)

ಆ (ಈ ಅಗ್ನಿಯಲ್ಲಿ) ಎಂದು ಮುಂತಾಗಿರುವದು (ಹಿಂದಿನ ಕಂಡಿಕೆಗೆ) ಸಮಾನವಾಗಿದೆ. ಆದ್ದರಿಂದ ಆಹುತಿಯಿಂದ ಬತ್ತ, ಜವೆ-ಮುಂತಾದ ಅನ್ನವು ಉಂಟಾಗುತ್ತದೆ.

---

# ಐದನೆಯ ಅಧ್ಯಾಯ - ಏಳನೆಯ ಖಂಡ

(ಪಂಚಾಗ್ನಿವಿದ್ಯೆ)

## ಪು ರು ಷಾ ಗ್ನಿ

(ಉಪನಿಷತ್ತು)

**ಪುರುಷೋ ವಾವ ಗೌತಮಾಗ್ನಿಸ್ತಸ್ಯ ವಾಗೇವ ಸಮಿತ್ ಪ್ರಾಣೋ ಧೂಮೋ ಜಿಹ್ವಾರ್ಚಿಶ್ಚಕ್ಷುರಙ್ಗಾರಾಃ ಶ್ರೋತ್ರಂ ವಿಸ್ಫುಲಿಙ್ಗಾಃ॥**

೧. ಗೌತಮನೆ, ಪುರುಷನೇ ಅಗ್ನಿಯು. ಅವನಿಗೆ ವಾಕ್ಕೇ ಸಮಿತ್ತು, ಪ್ರಾಣವು ಹೊಗೆ, ಜಿಹ್ವೆಯು ಉರಿ, ಚಕ್ಷುಸ್ಸು ಕೆಂಡ, ಶ್ರೋತ್ರವು ಕಿಡಿಗಳು.

## ಪುರುಷನಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೩೯೫. ಪುರುಷೋ ವಾವ ಗೌತಮಾಗ್ನಿಃ। ತಸ್ಯ ವಾಗೇವ ಸಮಿತ್। ವಾಚಾ ಹಿ ಮುಖೇನ ಸಮಿಧ್ಯತೇ ಪುರುಷೋ ನ ಮೂಕಃ। ಪ್ರಾಣೋ ಧೂಮಃ। ಧೂಮ ಇವ ಮುಖಾತ್ ನಿರ್ಗಮನಾತ್। ಜಿಹ್ವಾ ಅರ್ಚಿಃ। ಲೋಹಿತತ್ವಾತ್। ಚಕ್ಷುರಙ್ಗಾರಾಃ। ಭಾಸ ಆಶ್ರಯತ್ವಾತ್। ಶ್ರೋತ್ರಂ ವಿಸ್ಫುಲಿಙ್ಗಾಃ। ವಿಪ್ರಕೀರ್ಣತ್ವಸಾಮ್ಯಾತ್॥

(ಭಾಷ್ಯಾರ್ಥ)

ಗೌತಮನೆ, ಪುರುಷನೇ ಅಗ್ನಿಯು. ಅವನಿಗೆ ವಾಕ್ಕೇ ಸಮಿತ್ತು. ವಾಕ್ಕೆಂಬ ಮುಖದಿಂದಲೇ ಸಮಿದ್ಧನಾಗುತ್ತಾನೆಯೇ ಹೊರತು ಮೂಕನಾದವನು (ಸಮಿದ್ಧನಾಗುವದಿಲ್ಲ)ವಷ್ಟೆ?[1] ಪ್ರಾಣವೇ ಹೊಗೆ, ಏಕೆಂದರೆ (ಬೆಂಕಿಯಿಂದ) ಹೊಗೆಯಂತೆ (ಅದು) ಮುಖದಿಂದ ಹೊರಕ್ಕೆ ಬರುತ್ತದೆ. ನಾಲಗೆಯೇ ಉರಿ ; ಏಕೆಂದರೆ ಕೆಂಪಗಿದೆ, ಕಣ್ಣೇ ಕೆಂಡ, ಏಕೆಂದರೆ ಕಾಂತಿಗೆ ಆಶ್ರಯವಾಗಿದೆ, ಕಿವಿಯೇ ಕಿಡಿಗಳು, ಏಕೆಂದರೆ ಸಿಡಿದುಬಂದಿರುವದು (ಎರಡಕ್ಕೂ) ಸಮಾನವಾಗಿದೆ.[2]

(ಉಪನಿಷತ್ತು)

**ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತೇ ರೇತಃ ಸಂಭವತಿ ॥ ೨ ॥**

೨. ಆ ಈ ಅಗ್ನಿಯಲ್ಲಿ ದೇವತೆಗಳು[3] ಅನ್ನವನ್ನು ಹೋಮ ಮಾಡುತ್ತಾರೆ. ಆ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ.

---

1. ಮಾತನಾಡುವಾಗಲೂ ಅಧ್ಯಯನವೇ ಮುಂತಾದದ್ದನ್ನು ಮಾಡುವಾಗಲೂ ಕಾಂತಿಯುಕ್ತನಾಗಿರುತ್ತಾನೆ.

2. ಪುರುಷಾಗ್ನಿಗೆ ತೆರೆದ ಬಾಯಿ ಸಮಿತ್ತು, ಪ್ರಾಣ ಹೊಗೆ, ವಾಕ್ಕು ಉರಿ, ಕಣ್ಣು ಕೆಂಡ, ಕಿವಿ ಕಿಡಿಗಳು –ಎಂದು ಬೃ. ೬-೨-೧೨.

3 ಪ್ರಾಣಗಳು.

## ಪುರುಷಾಗ್ನಿಯಲ್ಲಿ ಹೋಮ, ರೇತಸ್ಸಿನ ಉತ್ಪತ್ತಿ

(ಭಾಷ್ಯ)

೩೯೬. ಸಮಾನಮನ್ಯತ್ । ಅನ್ನಂ ಜುಹ್ವತಿ ವ್ರೀಹ್ಯಾದಿ ಸಂಸ್ಕೃತಮ್ । ತಸ್ಯಾ ಆಹುತೇಃ ರೇತಃ ಸಂಭವತಿ ॥

(ಭಾಷ್ಯಾರ್ಥ)

ಮಿಕ್ಕದ್ದು ಸಮಾನವು ಅನ್ನವನ್ನು ಎಂದರೆ ಸಂಸ್ಕೃತವಾದ ಬತ್ತ ಮುಂತಾದದ್ದನ್ನು ಆ ಆಹುತಿಯಿಂದ ರೇತಸ್ಸು ಹುಟ್ಟುತ್ತದೆ.

---

# ಐದನೆಯ ಅಧ್ಯಾಯ–ಎಂಟನೆಯ ಖಂಡ

(ಪಂಚಾಗ್ನಿವಿದ್ಯೆ)

## ಯೋ ಷಾ ಗ್ನಿ

(ಉಪನಿಷತ್ತು)

**ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದುಪಮನ್ತ್ರಯತೇ ಸ ಧೂಮೋ ಯೋನಿರರ್ಚಿರ್ಯದನ್ತಃ ಕರೋತಿ ತೇಽಙ್ಗಾರಾ ಅಭಿನನ್ದಾ ವಿಸ್ಫುಲಿಙ್ಗಾಃ ॥ ೧ ॥**

೧. ಸ್ತ್ರೀಯೇ ಅಗ್ನಿ, ಅವಳಿಗೆ ಉಪಸ್ಥವೇ ಸಮಿತ್ತು ; ಕರೆಯುತ್ತಾನಲ್ಲ, ಅದು ಹೊಗೆ ; ಯೋನಿಯು ಉರಿ ; ಒಳಗೆ ಮಾಡುತ್ತಾನಲ್ಲ, ಅದು ಕೆಂಡ ; ಅಭಿನಂದಗಳು ಕಿಡಿಗಳು.

## ಹೆಂಡತಿಯಲ್ಲಿ ಅಗ್ನಿದೃಷ್ಟಿ

(ಭಾಷ್ಯ).

೩೯೭. ಯೋಷಾ ವಾವ ಗೌತಮಾಗ್ನಿಃ । ತಸ್ಯಾ ಉಪಸ್ಥ ಏವ ಸಮಿತ್ । ತೇನ ಹಿ ಸಾ ಪುತ್ರಾದ್ಯುತ್ಪಾದನಾಯ ಸಮಿಧ್ಯತೇ । ಯದುಪಮನ್ತ್ರಯತೇ ಸ ಧೂಮಃ । ಸ್ತ್ರೀಸಂಭವಾತ್ ಉಪಮನ್ತ್ರಣಸ್ಯ । ಯೋನಿರರ್ಚಿಃ । ಲೋಹಿತತ್ವಾತ್ । ಯದನ್ತಃ ಕರೋತಿ ತೇಽಙ್ಗಾರಾಃ । ಅಗ್ನಿಸಂಬನ್ಧಾತ್ । ಅಭಿನನ್ದಾಃ ಸುಖಲವಾ ವಿಸ್ಫುಲಿಙ್ಗಾಃ । ಕ್ಷುದ್ರತ್ವಾತ್ ॥

(ಭಾಷ್ಯಾರ್ಥ)

ಗೌತಮನೆ, ಸ್ತ್ರೀಯೇ ಅಗ್ನಿ. ಆಕೆಯ ಉಪಸ್ಥವೇ ಸಮಿತ್ತು. ಅದರಿಂದಲಲ್ಲವೆ, ಆಕೆಯು ಪುತ್ರನೇ ಮೊದಲಾದವರನ್ನು ಹಡೆಯುವದಕ್ಕಾಗಿ ಸಮಿದ್ಧಳಾಗುತ್ತಾಳೆ ? ಕರೆಯುತ್ತಾನಲ್ಲ, ಅದು ಧೂಮವು[1] , ಏಕೆಂದರೆ ಆ ಉಪಮಂತ್ರಣವು ಸ್ತ್ರೀಯಿಂದ ಆಗಿರುತ್ತದೆ, ಯೋನಿಯೇ ಉರಿ ; ಏಕೆಂದರೆ ಕೆಂಪಗಿದೆ. ಒಳಗೆ ಮಾಡುತ್ತಾನಲ್ಲ, ಅದೇ ಕೆಂಡ , ಏಕೆಂದರೆ (ಅದು) ಆ ಅಗ್ನಿಗೆ ಸಂಬದ್ಧವಾಗಿದೆ. ಅಭಿನಂದಗಳು ಎಂದರೆ ಸುಖದ ಲೇಶಗಳು ಕಿಡಿಗಳು , ಏಕೆಂದರೆ ಅಲ್ಪವಾಗಿರುತ್ತವೆ.

(ಉಪನಿಷತ್ತು)

**ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತೇ ಗರ್ಭಃ ಸಂಭವತಿ ॥ ೨ ॥**

೨. ಆ ಈ ಅಗ್ನಿಯಲ್ಲಿ ದೇವತೆಗಳು ರೇತಸ್ಸನ್ನು ಹೋಮ ಮಾಡುತ್ತಾರೆ ; ಆ ಆಹುತಿಯಿಂದ ಗರ್ಭವು ಉಂಟಾಗುತ್ತದೆ.

## ಯೋಷಾಗ್ನಿಯಲ್ಲಿ ಹೋಮ, ಗರ್ಭೋತ್ಪತ್ತಿ

(ಭಾಷ್ಯ)

೩೯೮. ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ । ತಸ್ಯಾ ಆಹುತೇ ಗರ್ಭಃ ಸಂಭತಿ ॥

(ಭಾಷ್ಯಾರ್ಥ)

ಆ ಈ ಅಗ್ನಿಯಲ್ಲಿ ದೇವತೆಗಳು ರೇತಸ್ಸನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ಗರ್ಭವು ಉಂಟಾಗುತ್ತದೆ.

## ಇಲ್ಲಿ ಅಪ್ಪೆಂದರೆ ಪಂಚಭೂತಗಳು

(ಭಾಷ್ಯ)

೩೯೯. ಏವಂ ಶ್ರದ್ಧಾಸೋಮವರ್ಷಾನ್ನರೇತೋಹವನಪರ್ಯಾಯಕ್ರಮೇಣ ಆಪ ಏವ ಗರ್ಭೀಭೂತಾಸ್ತಾಃ। ತತ್ರ ಅಪಾಮ್ ಆಹುತಿಸಮವಾಯಿತ್ವಾತ್ ಪ್ರಾಧಾನ್ಯವಿವಕ್ಷಾ ಆಪಃ ಪಞ್ಚಮ್ಯಾಮ್ ಆಹುತೌ ಪುರುಷವಚಸೋ ಭವನ್ತೀತಿ। ನ ತ್ವಾಪ ಏವ ಕೇವಲಾಃ ಸೋಮಾದಿಕಾರ್ಯಮಾರಭನ್ತೇ। ನ ಚಾಽಽಪೋಽತ್ರಿವೃತ್ಕೃತಾಃ ಸನ್ತೀತಿ। ತ್ರಿವೃತ್ಕೃತತ್ವೇಽಪಿ ವಿಶೇಷಸಂಜ್ಞಾಲಾಭೋ

1. 'ಲೋಮಗಳೇ ಹೊಗೆ' ಬೃ. ೬-೨-೧೩.

ದೃಷ್ಟಃ ಪೃಥಿವೀಯಮ್ ಇಮಾ ಆಪಃ ಅಯಮಗ್ನಿಃ – ಇತ್ಯನ್ಯತಮಬಾಹುಲ್ಯ ನಿಮಿತ್ತಃ । ತಸ್ಮಾತ್ ಸಮುದಿತಾನ್ಯೇವ ಭೂತಾನ್ಯಬ್ಬಾಹುಲ್ಯಾತ್ ಕರ್ಮಸಮವಾಯೀನಿ ಸೋಮಾದಿಕಾರ್ಯಾರಮ್ಭಕಾಣಿ ಆಪ ಇತ್ಯುಚ್ಯನ್ತೇ । ದೃಶ್ಯತೇ ಚ ದ್ರವಬಾಹುಲ್ಯಂ ಸೋಮವೃಷ್ಟ್ಯನ್ನರೇತೋದೇಹೇಷು । ಬಹುದ್ರವಂ ಚ ಶರೀರಂ ಯದ್ಯಪಿ ಪಾರ್ಥಿವಮ್ । ತತ್ರ ಪಞ್ಚಮ್ಯಾಮಾಹುತೌ ಹುತಾಯಾಂ ರೇತೋರೂಪಾ ಆಪೋ ಗರ್ಭೀಭೂತಾಃ – ॥

(ಭಾಷ್ಯಾರ್ಥ)

ಹೀಗೆ ಶ್ರದ್ಧೆ, ಸೋಮ, ವರ್ಷ, ಅನ್ನ, ರೇತಸ್ಸು – ಇವುಗಳನ್ನು ಹೋಮ ಮಾಡುವ ಪರ್ಯಾಯಕ್ರಮದಿಂದ ಆ ಅಪ್ಪೇ ಗರ್ಭವಾಗುತ್ತದೆ. ಇಲ್ಲಿ 'ಅಪ್ಪು ಐದನೆಯ ಆಹುತಿಯಲ್ಲಿ ಪುರುಷವಚಸ್ಸಾಗುತ್ತದೆ' ಎಂದು ಆಹುತಿಗೆ ಸಂಬಂಧಪಟ್ಟಿರುವದರಿಂದ (ಅದಕ್ಕೆ) ಪ್ರಾಧಾನ್ಯ(ವಿರುತ್ತದೆ. ಇಷ್ಟೇ ಹೊರತು) ಬರಿಯ ಅಪ್ಪೇ ಸೋಮಾದಿಕಾರ್ಯವನ್ನುಂಟುಮಾಡುವದಿಲ್ಲ. ತ್ರಿವೃತ್ಕೃತವಲ್ಲದ ಅಪ್ಪು ಇರುವದೂ ಇಲ್ಲ[1]. ತ್ರಿವೃತ್ಕೃತವಾದರೂ ಆಯಾ (ಭೂತವು) ಹೆಚ್ಚಾಗಿರುವದರಿಂದ ಇದು ಪೃಥಿವಿ, ಇದು ಅಪ್ಪು, ಇದು ಅಗ್ನಿ – ಎಂದು ವಿಶೇಷಸಂಜ್ಞೆಯುಂಟಾಗಿರುವದು ಕಂಡಿರುತ್ತದೆ[2]. ಆದ್ದರಿಂದ ಒಟ್ಟುಗೂಡಿದ ಭೂತಗಳನ್ನೇ, ಕರ್ಮಸಂಬದ್ಧವಾಗಿದ್ದುಕೊಂಡು ಸೋಮಾದಿಕಾರ್ಯಗಳನ್ನು ಉಂಟುಮಾಡುತ್ತವೆಯಾದ್ದರಿಂದ (ಅವುಗಳಲ್ಲಿ) ಅಪ್ಪು ಹೆಚ್ಚಾಗಿರುವದರಿಂದ ಅಪ್ಪು ಎಂದಿದೆ. ಸೋಮ, ವೃಷ್ಟಿ, ಅನ್ನ, ರೇತಸ್ಸು, ದೇಹ – ಇವುಗಳಲ್ಲಿ ದ್ರವವು ಹೆಚ್ಚಾಗಿರುವದು ಕಂಡೂ ಇದೆ, ಶರೀರವು ಪಾರ್ಥಿವವೇ ಆದರೂ (ಅದರಲ್ಲಿ) ಬಹಳ ದ್ರವ(ವಸ್ತು)ಗಳಿವೆ[3].

ಇಲ್ಲಿ ಐದನೆಯ ಆಹುತಿಯನ್ನು ಹೋಮಮಾಡಲಾಗಿ ರೇತೋರೂಪವಾದ (ಈ) ಅಪ್ಪು ಗರ್ಭೀಭೂತವಾಗಿ[4] –

---

1. ಆದ್ದರಿಂದ ಒಂದೊಂದರಲ್ಲಿಯೂ ಎಲ್ಲಾ ಭೂತಗಳೂ ಇರುತ್ತವೆ.
2. ಆಯಾ ಭೂತಗಳಲ್ಲಿ ಯಾವದು ಹೆಚ್ಚಾಗಿರುವದೋ ಅದರ ಹೆಸರಿರುವದು.
3. ಸೂ. ಭಾ. ೩-೧-೨ನ್ನು ನೋಡಿ.
4. ಈ ವಾಕ್ಯಕ್ಕೆ ಮುಂದಿನ ಕಂಡಿಕೆಯ ಭಾಷ್ಯದಲ್ಲಿ ಅನ್ವಯ.

# ಐದನೆಯ ಅಧ್ಯಾಯ—ಒಂಬತ್ತನೆಯ ಖಂಡ

(ಪಂಚಾಗ್ನಿವಿದ್ಯೆ)

## ಜನನಮರಣಗಳು

(ಉಪನಿಷತ್ತು)

**ಇತಿ ತು ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತೀತಿ ಸ ಉಲ್ಬಾವೃತೋ ಗರ್ಭೋ ದಶ ವಾ ನವ ವಾ ಮಾಸಾನನ್ತಃ ಶಯಿತ್ವಾ ಯಾವದ್ವಾಽಥ ಜಾಯತೇ ॥ ೧ ॥**

೧. ಹೀಗೆಯೇ ಐದನೆಯ ಆಹುತಿಯಲ್ಲಿ ಅಪ್ಪು ಪುರುಷವಚಸ್ಸಾಗುತ್ತದೆ. ಉಲ್ಬಾವೃತವಾದ ಗರ್ಭವು ಹತ್ತೋ ಒಂಬತ್ತೋ ತಿಂಗಳುಗಳವರೆಗೆ ಅಥವಾ ಎಷ್ಟು (ಕಾಲವಿರಬೇಕೋ, ಅಷ್ಟುಕಾಲವೂ) ಒಳಗೆ ಮಲಗಿದ್ದು ಆಮೇಲೆ ಹುಟ್ಟುತ್ತದೆ.

### ಸ್ತ್ರೀಯಲ್ಲಿ ಹುಟ್ಟಿ ಈ ಲೋಕಕ್ಕೆ ಬರುವದು

(ಭಾಷ್ಯ)

೪೦೦. ಇತಿ ತು ಏವಂ ತು ಪಞ್ಚಮ್ಯಾಮ್ ಆಹುತೌ ಆಪಃ ಪುರುಷವಚಸೋ ಭವನ್ತೀತಿ ವ್ಯಾಖ್ಯಾತ ಏಕಃ ಪ್ರಶ್ನಃ ।ಯತ್ತು ದ್ಯುಲೋಕಾತ್ ಇಮಾಂ ಪ್ರತ್ಯಾವೃತ್ತಯೋರಾಹುತ್ಯೋಃ ಪೃಥಿವೀಂ ಪುರುಷಂ ಸ್ತ್ರಿಯಂ ಕ್ರಮೇಣ ಆವಿಶ್ಯ ಲೋಕಂ ಪ್ರತ್ಯುತ್ಥಾಯಿಾ ಭವತಿ (ಶತ. ಬ್ರಾ. ೧೧-೬-೨-೧) ಇತಿ ವಾಜಸನೇಯಕ ಉಕ್ತಮ್, ತತ್ ಪ್ರಾಸಙ್ಗಿಕಮ್ ಇಹ ಉಚ್ಯತೇ । ಇಹ ಚ ಪ್ರಥಮೇ ಪ್ರಶ್ನೇ ಉಕ್ತಂ ವೇತ್ಥ ಯತ್ ಇತೋಽಧಿ ಪ್ರಜಾಃ ಪ್ರಯನ್ತೀತಿ। ತಸ್ಯ ಚಾಯಮ್ ಉಪಕ್ರಮಃ। ಸ ಗರ್ಭಃ ಅಪಾಂ ಪಞ್ಚಮಃ ಪರಿಣಾಮವಿಶೇಷ ಆಹುತಿಕರ್ಮಸಮವಾಯಿನೀನಾಂ ಶ್ರದ್ಧಾಶಬ್ದವಾಚ್ಯಾನಾಮ್ ಉಲ್ಬಾವೃತಃ ಉಲ್ಬೇನ ಜರಾಯುಣಾ ಆವೃತೋ ವೇಷ್ಟಿತಃ ದಶ ವಾ ನವ ವಾ ಮಾಸಾನ್ ಅನ್ತಃ ಮಾತುಃ ಕುಕ್ಷೌ ಶಯಿತ್ವಾ ಯಾವದ್ ವಾ ಯಾವತ್ ಕಾಲೇನ ನ್ಯೂನೇನ ಅತಿರಿಕ್ತೇನ ವಾ ಅಥ ಅನನ್ತರಂ ಜಾಯತೇ। ಉಲ್ಬಾವೃತ ಇತ್ಯಾದಿ ವೈರಾಗ್ಯಹೇತೋರಿದಮುಚ್ಯತೇ। ಕಷ್ಟಂ ಹಿ ಮಾತುಃ ಕುಕ್ಷೌ ಮೂತ್ರಪುರೀಷವಾತಪಿತ್ತಶ್ಲೇಷ್ಮಾದಿಪೂರ್ಣೇ ತದನುಲಿಪ್ತಸ್ಯ ಗರ್ಭಸ್ಯ ಉಲ್ಬಾಶುಚಿಪಟಾವೃತಸ್ಯ ಲೋಹಿತರೇತೋಽಶುಚಿಬೀಜಸ್ಯ ಮಾತುರಶಿತಪೀತರಸಾನುಪ್ರವೇಶೇನ ವಿವರ್ಧಮಾನಸ್ಯ ನಿರುದ್ಧಶಕ್ತಿಬಲವೀರ್ಯತೇಜಃಪ್ರಜ್ಞಾ

ಚೇಷ್ಟಸ್ಯ ಶಯನಮ್, ತತೋ ಯೋನಿದ್ವಾರೇಣ ಪೀಡ್ಯಮಾನಸ್ಯ ಕಷ್ಟತರಾ ನಿಃಸೃತಿರ್ಜನ್ಮೇತಿ ವೈರಾಗ್ಯಂ ಗ್ರಾಹಯತಿ । ಮುಹೂರ್ತಮಪ್ಯಸಹ್ಯಂ ದಶ ವಾ ನವ ವಾ ಮಾಸಾನ್ ಅತಿದೀರ್ಘಕಾಲಮ್ ಅನ್ತಃ ಶಯಿತ್ವಾ ಇತಿ ಚ ॥

(ಭಾಷ್ಯಾರ್ಥ)

(ಇತಿ ತು= ಏವಂ ತು) ಹೀಗೆಯೇ ಐದನೆಯ ಆಹುತಿಯಲ್ಲಿ ಅಪ್ಪು ಪುರುಷ ವಚಸ್ಸಾಗುವದು-ಎಂದು ಒಂದು ಪ್ರಶ್ನೆಗೆ ಉತ್ತರಹೇಳಿದಂತಾಯಿತು. ದ್ಯುಲೋಕ ದಿಂದ ಈ ಲೋಕಕ್ಕೆ ಹಿಂತಿರುಗಿ ಆಹುತಿಗಳು ಬರಲು ಪೃಥಿವಿ, ಪುರುಷ, ಸ್ತ್ರೀ- ಇವರನ್ನು ಕ್ರಮವಾಗಿ ಹೊಕ್ಕು ಲೋಕವನ್ನು ಕುರಿತು ಉತ್ಥಾಯಿಯಾಗುತ್ತಾನೆ ಎಂದು (ಶತ.ಬ್ರಾ. ೧೧-೬-೨-೧) ವಾಜಸನೇಯಕದಲ್ಲಿ ಹೇಳಿದೆಯಷ್ಟೆ, ಅದನ್ನು ಪ್ರಾಸಂಗಿಕವಾಗಿ ಇಲ್ಲಿ ಹೇಳಲಾಗುತ್ತದೆ. ಇಲ್ಲಿಯೂ ಮೊದಲನೆಯ ಪ್ರಶ್ನೆಯಲ್ಲಿ 'ಇಲ್ಲಿಂದಮೇಲೆ ಪ್ರಜೆಗಳು ಎಲ್ಲಿಗೆ ಹೋಗುತ್ತಾರೋ, ಬಲ್ಲೆಯ ?' (೫-೩-೨) ಎಂದು ಕೇಳಿತ್ತಲ್ಲ, ಅದನ್ನೂ ಇಲ್ಲಿ (ಹೇಳುವದಕ್ಕೆ) ಈ (ಗ್ರಂಥವನ್ನು) ಉಪ ಕ್ರಮಿಸಿದೆ.

ಆ ಗರ್ಭವು, ಆಹುತಿಕರ್ಮಕ್ಕೆ ಸಂಬದ್ಧವಾಗಿರುವ ಶ್ರದ್ಧಾಶಬ್ದವಾಚ್ಯವಾದ ಅಪ್ಪಿನ ಐದನೆಯ ಪರಿಣಾಮವಿಶೇಷವು, ಉಲ್ಬಾವೃತವಾಗಿ- ಉಲ್ಬವೆಂದರೆ ಜರಾಯು ; ಆ (ಜರಾಯುವೆಂಬ) ಪೊರೆಯಿಂದ ಆವೃತವಾಗಿ ಸುತ್ತುವರೆಯ ಲ್ಪಟ್ಟು- ಹತ್ತೊ ಒಂಬತ್ತೊ ತಿಂಗಳವರೆಗೆ ಒಳಗೆ ತಾಯಿಯ ಹೊಟ್ಟೆಯಲ್ಲಿ ಇದ್ದು ಕೊಂಡಿದ್ದು, ಅಥವಾ ಎಷ್ಟಿರಬೇಕೋ (ಇದಕ್ಕಿಂತ) ಹೆಚ್ಚು ಅಥವಾ ಕಡಿಮೆ ಕಾಲದ ವರೆಗೂ - (ಅಲ್ಲಿದ್ದುಕೊಂಡು ಆಮೇಲೆ ಆಬಳಿಕ ಹುಟ್ಟುತ್ತದೆ).

'ಉಲ್ಬಾವೃತವಾಗಿ' ಎಂದುಮುಂತಾಗಿರುವ ಈ (ಗ್ರಂಥವನ್ನು) ವೈರಾಗ್ಯ ಕ್ಕಾಗಿ ಹೇಳಿರುತ್ತದೆ. ಮೂತ್ರ, ಮಲ, ವಾತ, ಪಿತ್ತ, ಶ್ಲೇಷ್ಮ- ಮುಂತಾದವು ಗಳಿಂದ ತುಂಬಿರುವ ತಾಯಿಯ ಹೊಟ್ಟೆಯಲ್ಲಿ, ಅದರಿಂದ ಬಳಿದುಕೊಂಡು ಅಶುದ್ಧವಾದ ಪೊರೆಯಿಂದ ಮುಚ್ಚಲ್ಪಟ್ಟಿರುವ ಗರ್ಭವು, ರಕ್ತರೇತಸ್ಸುಗಳೆಂಬ ಅಶುಚಿಯಾದ ಬೀಜದಿಂದ ತಾಯಿಯೂ ಉಂಡುಕುಡಿದದ್ದರ ರಸವು ಸೇರಿಕೊಂಡು ಬೆಳೆಯುತ್ತಾ ಶಕ್ತಿ, ಬಲ, ವೀರ್ಯ, ತೇಜಸ್ಸು, ಪ್ರಜ್ಞೆ, ವ್ಯಾಪಾರ- ಇವೆಲ್ಲಕ್ಕೂ ತಡೆಯಿದ್ದುಕೊಂಡು (ಆ ಹೊಟ್ಟೆಯೊಳಗೆ) ಇದ್ದುಕೊಂಡಿರುವದು ಕಷ್ಟವಲ್ಲವೆ? ಆ ಬಳಿಕ ಯೋನಿಯ ದ್ವಾರದಿಂದ ಸಂಕಟಪಡುತ್ತಾ ಹೊರಕ್ಕೆ ಬರುವದೆಂಬ ಜನ್ಮ ವೂ (ಒಂದು) ಮುಹೂರ್ತವಿರುವದೂ ಅಸಹ್ಯವಾಗಿರುವಾಗ ಹತ್ತೂ ಒಂಬತ್ತೂ ತಿಂಗಳುಗಳ ಅತಿದೀರ್ಘಕಾಲದವರೆಗೆ ಒಳಗಿದ್ದು (ಬರುವದೂ) ಇನ್ನೂ ಕಷ್ಟತರ ವೆಂದು ವೈರಾಗ್ಯವನ್ನುಂಟುಮಾಡುವದಕ್ಕೆ (ಶ್ರುತಿ) ಹೇಳುತ್ತಿದೆ.

(ಉಪನಿಷತ್ತು)

**ಸ ಜಾತೋ ಯಾವದಾಯುಷಂ ಜೀವತಿ ತಂ ಪ್ರೇತಂ ದಿಷ್ಟ ಮಿತೋಽಗ್ನಯ ಏವ ಹರನ್ತಿ ಯತ ಏವೇತೋ ಯತಃ ಸಂಭೂತೋ ಭವತಿ ॥ ೨ ॥**

೨. ಅವನು ಹುಟ್ಟಿ ಆಯುಸ್ಸಿರುವವರೆಗೆ ಬದುಕಿರುತ್ತಾನೆ. ಅವನು ಇಲ್ಲಿಂದ ದಿಷ್ಟಕ್ಕೆ ಹೊರಟುಹೊಗಲು – ಯಾವ (ಅಗ್ನಿಯಿಂದ) ಬಂದಿದ್ದನೋ, ಯಾವದರಿಂದ ಹುಟ್ಟಿರುವದೋ ಆ– ಅಗ್ನಿಗೇ ಒಯ್ಯುತ್ತಾರೆ.

## ಅಂತ್ಯೇಷ್ಟಿ

(ಭಾಷ್ಯ)

೪೧೧. ಸ ಏವಂ ಜಾತೋ ಯಾವದಾಯುಷಂ ಪುನಃಪುನರ್ಘಟೀಯನ್ತ್ರವದ್ ಗಮನಾಗಮನಾಯ ಕರ್ಮ ಕುರ್ವನ್ ಕುಲಾಲಚಕ್ರವದ್ ವಾ ತಿರ್ಯಗ್ಭ್ರಮಣಾಯ ಯಾವತ್ ಕರ್ಮಣೋಪಾತ್ತಮಾಯುಃ ತಾವಜ್ಜೀವತಿ । ತಮೇನಂ ಕ್ಷೀಣಾಯುಷಂ ಪ್ರೇತಂ ಮೃತಂ ದಿಷ್ಟಂ ಕರ್ಮಣಾ ನಿರ್ದಿಷ್ಟಂ ಪರಲೋಕಂ ಪ್ರತಿ – ಯದಿ ಚೇತ್ ಜೀವನ್ ವೈದಿಕೇ ಕರ್ಮಣಿ ಜ್ಞಾನೇ ವಾ ಅಧಿಕೃತಃ– ತಮೇನಂ ಮೃತಮ್ ಇತಃ ಅಸ್ಮಾದ್ ಗ್ರಾಮಾತ್ ಅಗ್ನಯೇ ಅಗ್ನ್ಯರ್ಥಂ ಋತ್ವಿಜೋ ಹರನ್ತಿ ಪುತ್ರಾ ವಾ ಅನ್ತ್ಯಕರ್ಮಣೇ । ಯತ ಏವ ಇತ ಆಗತಃ ಅಗ್ನೇಃ ಸಕಾಶಾತ್ ಶ್ರದ್ಧಾದ್ಯಾಹುತಿಕ್ರಮೇಣ ಯತಶ್ಚ ಪಞ್ಚಭ್ಯೋಽಗ್ನಿಭ್ಯಃ ಸಂಭೂತಃ ಉತ್ಪನ್ನೋ ಭವತಿ ತಸ್ಮಾ ಏವ ಅಗ್ನಯೇ ಹರನ್ತಿ । ಸ್ವಾಮೇವ ಯೋನಿಮ್ ಅಗ್ನಿಮ್ ಆಪಾದಯನ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅವನು ಹೀಗೆ ಹುಟ್ಟಿ ಆಯುಸ್ಸಿರುವವರೆಗೆ ಮತ್ತೆಮತ್ತೆ ನೀರಿನ ರಾಟೆಯಂತೆ ಹೋಗಿಬರುತ್ತಲೂ, ಅಥವಾ ಕುಂಬಾರನ ತಿಗುರಿಯಂತೆ ಸುತ್ತಿಬರುತ್ತಲೂ ಎಲ್ಲಿಯವರೆಗೆ ಕರ್ಮದಿಂದ ಎಷ್ಟು ಆಯುಸ್ಸನ್ನು ಪಡೆದುಕೊಂಡಿದ್ದನೋ ಅಷ್ಟುಕಾಲದವರೆಗೆ ಬದುಕಿರುತ್ತಾನೆ. ಆಯುಸ್ಸು ಸವೆಯಲು ಆ ಇವನು ಹೊರಟುಹೋಗಲು ಸಾಯಲು ಇಲ್ಲಿಂದ ಈ ಊರಿನಿಂದ ದಿಷ್ಟಕ್ಕೆ ಕರ್ಮದಿಂದ ನಿರ್ದಿಷ್ಟವಾದ ಪರಲೋಕಕ್ಕೆ (ಹೋಗಲು) – ಬದುಕಿರುವಾಗ ವೈದಿಕಕರ್ಮದಲ್ಲಿ ಅಥವಾ ಜ್ಞಾನದಲ್ಲಿ ಅಧಿಕೃತನಾಗಿದ್ದನಾಗಿದ್ದರೆ – ಆ ಈ ಸತ್ತವನನ್ನು ಅಗ್ನಿಗೆ ಅಗ್ನಿಯ ಬಳಿಗೆ ಋತ್ವಿಜರೋ ಪುತ್ರರೋ ಅಂತ್ಯಕರ್ಮಕ್ಕಾಗಿ ಒಯ್ಯುತ್ತಾರೆ. ಎಲ್ಲಿಂದ (ಯಾವ) ಅಗ್ನಿಯಿಂದ ಶ್ರದ್ಧೆಯೇ ಮುಂತಾದ ಆಹುತಿಕ್ರಮದಿಂದ (ಇತಃ=ಆಗತಃ) ಬಂದಿದ್ದನೋ ಮತ್ತು ಯಾವ ಪಂಚಾಗ್ನಿಗಳಿಂದ ಹುಟ್ಟಿರುವನೋ ಉಂಟಾಗಿರುವನೋ ಅದೇ ಅಗ್ನಿಯ ಬಳಿಗೆ ಒಯ್ಯುವರು. ತನ್ನ ಕಾರಣವಾದ ಅಗ್ನಿಯನ್ನಾಗಿಯೇ ಮಾಡುವರು ಎಂದರ್ಥ.

---

# ಐದನೆಯ ಅಧ್ಯಾಯ-ಹತ್ತನೆಯ ಖಂಡ

( ಪಂಚಾಗ್ನಿವಿದ್ಯೆ )

## ಪಂಚಾಗ್ನಿವಿದ್ಯೆಯ ಫಲ

(ಉಪನಿಷತ್ತು)

**ತದ್ಯ ಇತ್ಥಂ ವಿದುಃ । ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾಗ್ಂ ಸ್ತಾನ್ ॥ ೧ ॥**

**ಮಾಸೇಭ್ಯಃ ಸಂವತ್ಸರಗ್ಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಯಾನಃ ಪನ್ಥಾ ಇತಿ ॥ ೨ ॥**

೧-೨. ಅವರಲ್ಲಿ ಯಾರು ಹೀಗೆಂದು ಅರಿತಿರುವರೋ ಮತ್ತು ಅರಣ್ಯದಲ್ಲಿ ಶ್ರದ್ಧೆ, ತಪಸ್ಸು- ಇತ್ಯಾದಿ(ಗಳನ್ನು) ಉಪಾಸನೆಮಾಡುತ್ತಿರುವರೋ ಅವರು ಅರ್ಚಿಸ್ಸನ್ನು ಸೇರುತ್ತಾರೆ. ಅರ್ಚಿಸ್ಸಿನಿಂದ ಅಹಸ್ಸನ್ನು, ಅಹಸ್ಸಿನಿಂದ ಆಪೂರ್ಯಮಾಣಪಕ್ಷವನ್ನು, ಆಪೂರ್ಯಮಾಣಪಕ್ಷದಿಂದ ಯಾವ (ಮಾಸಗಳನ್ನು) ಉತ್ತರಕ್ಕೇ ಹೋಗುತ್ತಿರುವನೋ ಆ ಆರು ಮಾಸಗಳನ್ನು, ಮಾಸಗಳಿಂದ ಸಂವತ್ಸರವನ್ನು[1], ಸಂವತ್ಸರದಿಂದ ಆದಿತ್ಯನನ್ನು, ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುತ್ತನ್ನು. ಅಲ್ಲಿ ಅಮಾನವನಾದ ಪುರುಷ(ನಿರುವನಲ್ಲ), ಅವನು ಇವರನ್ನು ಬ್ರಹ್ಮವನ್ನು ಸೇರಿಸುತ್ತಾನೆ. ಇದು ದೇವಯಾನದ ಮಾರ್ಗವು.

## ದೇವಯಾನವಿಷಯದ ಚರ್ಚೆ

### ದೇವಯಾನಕ್ಕೆ ಅಧಿಕಾರಿಗಳು

(ಭಾಷ್ಯ)

೪೦೨. 'ವೇತ್ಥ ಯದಿತೋಽಧಿ ಪ್ರಜಾಃ ಪ್ರಯನ್ತಿ' (೫-೩-೨)

1. ಇಲ್ಲಿಂದ ಮುಂದಕ್ಕೆ ಬೃಹದಾರಣ್ಯಕಕ್ಕೂ ಈ ಉಪನಿಷತ್ತಿಗೂ ಮಾರ್ಗದಲ್ಲಿ ಸೇರುವ ದೇವತೆಗಳ ವಿಷಯಕ್ಕೆ ತಾರತಮ್ಯವಿದೆ.

ಇತ್ಯಯಂ ಪ್ರಶ್ನಃ ಪ್ರತ್ಯುಪಸ್ಥಿತೋಽಪಾಕರ್ತವ್ಯತಯಾ । ತತ್ ತತ್ರ ಲೋಕಂ ಪ್ರತ್ಯುತ್ಥಿತಾನಾಮ್ ಅಧಿಕೃತಾನಾಮ್ ಗೃಹಮೇಧಿನಾಂ ಯೇ ಇತ್ಥಮೇವಂ ಯಥೋಕ್ತಂ ಪಞ್ಚಾಗ್ನಿದರ್ಶನಂ ದ್ಯುಲೋಕಾದ್ಯಗ್ನಿಭ್ಯೋ ವಯಂ ಕ್ರಮೇಣ ಜಾತಾ ಅಗ್ನಿಸ್ವರೂಪಾಃ ಪಞ್ಚಾಗ್ನ್ಯಾತ್ಮಾನ ಇತ್ಯೇವಂ ವಿದುಃ ಜಾನೀಯುಃ ಕಥಮವಗಮ್ಯತ ಇತ್ಥಂ ವಿದುರಿತಿ ಗೃಹಸ್ಥಾ ಏವೋಚ್ಯನ್ತ ನಾನ್ಯ ಇತಿ । ಗೃಹಸ್ಥಾನಾಂ ಯೇ ತು ಅನಿತ್ಥಂವಿದಃ ಕೇವಲೇಷ್ಟಾಪೂರ್ತದತ್ತಪರಾಃ, ತೇ ಧೂಮಾದಿನಾ ಚನ್ದ್ರಂ ಗಚ್ಛನ್ತೀತಿ ವಕ್ಷ್ಯತಿ । ಯೇ ಚ ಅರಣ್ಯೋಪಲಕ್ಷಿತಾ ವೈಖಾನಸಾಃ ಪರಿವ್ರಾಜಕಾಶ್ಚ ಶ್ರದ್ಧಾ ತಪ ಇತ್ಯುಪಾಸತೇ ತೇಷಾಂ ಚ ಇತ್ಥಂವಿದ್ಭಿಃ ಸಹ ಅರ್ಚಿರಾದಿನಾ ಗಮನಂ ವಕ್ಷ್ಯತಿ । ಪಾರಿಶೇಷ್ಯಾತ್ ಅಗ್ನಿಹೋತ್ರಾಹುತಿಸಂಬನ್ಧಾಚ್ಚ ಗೃಹಸ್ಥಾ ಏವ ಗೃಹ್ಯನ್ತ ಇತ್ಥಂ ವಿದುರಿತಿ । ನನು ಬ್ರಹ್ಮಚಾರಿಣೋಽಪ್ಯಗೃಹೀತಾ ಗ್ರಾಮಶ್ರುತ್ಯಾ ಅರಣ್ಯಶ್ರುತ್ಯಾ ಚ ಅನುಪಲಕ್ಷಿತಾ ವಿದ್ಯನ್ತೇ । ಕಥಂ ಪಾರಿಶೇಷ್ಯಸಿದ್ಧಿಃ ? ನೈಷ ದೋಷಃ । ಪುರಾಣಸ್ಮೃತಿಪ್ರಾಮಾಣ್ಯಾತ್ ಊರ್ಧ್ವರೇತಸಾಂ ನೈಷ್ಠಿಕಬ್ರಹ್ಮಚಾರಿಣಾಮ್ ಉತ್ತರೇಣಾರ್ಯಮ್ಣಃ ಪನ್ಥಾಃ ಪ್ರಸಿದ್ಧಃ । ಅತಸ್ತೇಽಪಿ ಅರಣ್ಯವಾಸಿಭಿಃ ಸಹ ಗಮಿಷ್ಯನ್ತಿ । ಉಪಕುರ್ವಾಣಕಾಸ್ತು ಸ್ವಾಧ್ಯಾಯಗ್ರಹಣಾರ್ಥಾ ಇತಿ ನ ವಿಶೇಷನಿರ್ದೇಶಾರ್ಹಾಃ ॥

(ಭಾಷ್ಯಾರ್ಥ)

'ಇಲ್ಲಿಂದ ಮೇಲಕ್ಕೆ ಎಲ್ಲಿಗೆ ಪ್ರಜೆಗಳು ಹೋಗುತ್ತಾರೋ, ಬಲ್ಲೆಯ ?' (೫-೩-೨) ಎಂಬೀ ಪ್ರಶ್ನೆಯು ಉತ್ತರವನ್ನು ಹೇಳಬೇಕಾಗಿ ಎದುರಿಗೆ ಬಂದಿರುತ್ತದೆ. (ತತ್=ತತ್ರ) ಅದರಲ್ಲಿ (ಈ) ಲೋಕವನ್ನು ಕುರಿತು ಎದ್ದಿರುವ ಅಧಿಕೃತರಾದ ಗೃಹಸ್ಥರೊಳಗೆ ಯಾರು (ಇತ್ಥಮ್=ಏವಮ್) ಮೇಲೆ ಹೇಳಿರುವ ಪಂಚಾಗ್ನಿವಿದ್ಯೆಯನ್ನು 'ನಾವು ದ್ಯುಲೋಕವೇ ಮುಂತಾದ ಅಗ್ನಿಗಳಿಂದ ಕ್ರಮವಾಗಿ ಹುಟ್ಟಿ ಪಂಚಗ್ನ್ಯಾತ್ಮರಾಗಿ ಅಗ್ನಿಸ್ವರೂಪರಾಗಿರುವೆವು ಎಂದಿಂತು (ವಿದುಃ= ಜಾನೀಯುಃ) ಅರಿತಿರುವರೋ-

(ಆಕ್ಷೇಪ), 'ಹೀಗೆಂದರಿತಿರುವರೋ' ಎಂದರೆ ಗೃಹಸ್ಥರನ್ನೇ ಹೇಳಿರುತ್ತದೆಯೇ ಹೊರತು ಬೇರೆಯವರನ್ನಲ್ಲ ಎಂದು ಹೇಗೆ ಗೊತ್ತು ?

(ಪರಿಹಾರ) :- ಗೃಹಸ್ಥರಲ್ಲಿ ಹೀಗೆಂದರಿಯದೆ ಬರಿಯ ಇಷ್ಟಾಪೂರ್ತದತ್ತಪರರಾಗಿರುವರಷ್ಟೆ, ಅವರು ಧೂಮಾದಿ(ಮಾರ್ಗ)ದಿಂದ ಚಂದ್ರನನ್ನು ಸೇರುತ್ತಾರೆ ಎಂದು ಮುಂದೇ(೫-೧೦-೩) ಹೇಳುತ್ತಾನೆ, ಮತ್ತು ಅರಣ್ಯೋಪಲಕ್ಷಿತವಾಗಿರುವ ವೈಖಾನಸರೂ ಪರಿವ್ರಾಜಕರೂ[1] ಶ್ರದ್ಧೆ, ತಪಸ್ಸು- ಇತ್ಯಾದಿಗಳಿಂದೊಡಗೂಡಿ

1. ವೈಖಾನಸರೆಂದರೆ ವಾನಪ್ರಸ್ಥರು, ಇಲ್ಲಿ ಹೇಳಿರುವ ಪರಿವ್ರಾಜಕರು ತ್ರಿದಂಡಿ ಸಂನ್ಯಾಸಿಗಳು.

ಉಪಾಸನೆಮಾಡುತ್ತಿರುವರೋ, ಅವರಿಗೂ ಹೀಗೆಂದು ಅರಿತಿರುವವರೊಡನೆ ಅರ್ಚಿರಾದಿಮಾರ್ಗದಿಂದ ಗಮನವೆಂದು (ಇಲ್ಲಿಯೇ) ಮುಂದೆ ಹೇಳಿರುತ್ತಾನೆ. (ಆದ್ದರಿಂದ) ಪಾರಿಶೇಷ್ಯನ್ಯಾಯದಿಂದಲೂ ಅಗ್ನಿಹೋತ್ರಾಹುತಿಗಳ ಸಂಬಂಧ ವಿರುವದರಿಂದಲೂ ಹೀಗೆಂದರಿತಿರುವವರು- ಎಂದರೆ (ಇಲ್ಲಿ) ಗೃಹಸ್ಥರನ್ನೇ ಹಿಡಿದಿದೆ (ಎಂದು ಗೊತ್ತಾಗುತ್ತದೆ).

(ಆಕ್ಷೇಪ) - ಬ್ರಹ್ಮಚಾರಿಗಳನ್ನು (ಇಲ್ಲಿ) ಹಿಡಿದಿಲ್ಲ ; (ಅವರು) ಗ್ರಾಮ ಶ್ರುತಿಯಿಂದಲಾಗಲಿ ಅರಣ್ಯಶ್ರುತಿಯಿಂದಲಾಗಲಿ ಉಪಲಕ್ಷಿತರೂ ಆಗಿಲ್ಲ[1]. (ಅವರೂ) ಇದಾರಲ್ಲ ! ಪಾರಿಶೇಷ್ಯವು ಹೇಗೆ ಸಿದ್ಧವಾಯಿತು ?[2]

(ಪರಿಹಾರ) :- ಇದೇನೂ ದೋಷವಲ್ಲ. ಏಕೆಂದರೆ ಪುರಾಣಸ್ಮೃತಿಯ ಪ್ರಾಮಾಣ್ಯದಿಂದ ಊರ್ಧ್ವರೇತಸರಾದ ನೈಷ್ಠಿಕಬ್ರಹ್ಮಚಾರಿಗಳಿಗೆ ಸೂರ್ಯನ ಉತ್ತರಮಾರ್ಗವು ಪ್ರಸಿದ್ಧವಾಗಿರುತ್ತದೆ, ಆದ್ದರಿಂದ ಅವರನ್ನು ಅರಣ್ಯವಾಸಿ ಗಳೊಡನೆಯೇ ಸೇರಿಸಬಹುದು[3]. (ಇನ್ನು) ಉಪಕುರ್ವಾಣ(ಬ್ರಹ್ಮಚಾರಿಗಳೊ), ಎಂದರೆ ಅಧ್ಯಯನಗ್ರಹಣಕ್ಕಾಗಿ (ಬ್ರಹ್ಮಚಾರಿಗಳಾಗಿರು)ವದರಿಂದ (ಅವರನ್ನು) ಬೇರೆಯಾಗಿ ತಿಳಿಸಬೇಕಾದದ್ದಿಲ್ಲ[4].

## ಪಂಚಾಗ್ನಿವಿದ್ಯೆಯು ಗೃಹಸ್ಥರ ವಿಷಯಕ್ಕೆ ಸಾರ್ಥಕ

(ಭಾಷ್ಯ)

೪೦೩. ನನು ಊರ್ಧ್ವರೇತಸ್ತ್ವಂ ಚೇದುತ್ತರಮಾರ್ಗಪ್ರತಿಪತ್ತಿಕಾರಣಂ ಪುರಾಣಸ್ಮೃತಿಪ್ರಾಮಾಣ್ಯಾದಿಷ್ಯತೇ ಇತ್ಥಂವಿತ್ತ್ವಮನರ್ಥಕಂ ಪ್ರಾಪ್ತಮ್ । ನ । ಗೃಹಸ್ಥಾನ್ ಪ್ರತ್ಯರ್ಥವತ್ತ್ವಾತ್ । ಯೇ ಗೃಹಸ್ಥಾ ಅನಿತ್ಥಂವಿದಸ್ತೇಷಾಂ ಸ್ವಭಾವತೋ ದಕ್ಷಿಣೋ ಧೂಮಾದಿಃ ಪನ್ಥಾಃ ಪ್ರಸಿದ್ಧಃ । ತೇಷಾಂ ಯ ಇತ್ಥಂ ವಿದುಃ, ಸಗುಣಂ ವಾ ಅನ್ಯದ್ ಬ್ರಹ್ಮ ವಿದುಃ "ಅಥ ಯದು ಚೈವಾಸ್ಮಿಞ್ಛವ್ಯಂ ಕುರ್ವನ್ತಿ ಯದಿ ಚ ನಾರ್ಚಿಷಮೇವ" (೪-೧೫-೫) ಇತಿ ಲಿಙ್ಗಾತ್ ಉತ್ತರೇಣ ತೇ ಗಚ್ಛನ್ತಿ ॥

---

1. ಗ್ರಾಮದಲ್ಲಿ ಪತ್ನಿಯೊಡನೆ ವಾಸವಾಗಲಿ, ಅರಣ್ಯದಲ್ಲಿ ತಪಸ್ಸು ಮುಂತಾದವು ಗಳನ್ನು ಮಾಡಿಕೊಂಡಿರುವದಾಗಲಿ ಬ್ರಹ್ಮಚಾರಿಗಳಿಗೆ ಹೊಂದುವದಿಲ್ಲ ; ಏಕೆಂದರೆ ಅವರು ಗುರುಕುಲವಾಸವನ್ನು ಮಾಡಿಕೊಂಡಿರುತ್ತಾರೆ.

2. ಬ್ರಹ್ಮಚಾರಿಗಳೂ ಉಳಿದಿರುವದರಿಂದ ಇಲ್ಲಿ ಹೀಗೆ ಅರಿತಿರುವವರು_ ಎಂದು ಗೃಹಸ್ಥರನ್ನೇ ಹೇಳಿದೆ ಎಂದು ಹೇಗೆ ಅರಿಯೋಣ ?

3. ಪಂಚಾಗ್ನಿವಿದ್ಯೆಯಿಲ್ಲದೆ ಯಾರುಯಾರು ಉತ್ತರಮಾರ್ಗಕ್ಕೆ ಕಾರಣಾಂತರದಿಂದ ಅಧಿಕಾರಿಗಳಾಗಿರುವರೋ ಅವರೆಲ್ಲ ಒಂದು ಪಂಗಡವೆಂದು ಭಾವಿಸಬಹುದು.

4. ಏಕೆಂದರೆ ಮುಂದೆ ಅವರೂ ಗೃಹಸ್ಥರಾಗುವವರೇ.

(ಭಾಷ್ಯಾರ್ಥ)

(ಆಕ್ಷೇಪ) :- ಊರ್ಧ್ವರೇತಸ್ಕನಾಗಿರುವದೇ ಉತ್ತರಮಾರ್ಗಪ್ರಾಪ್ತಿಗೆ ಹೇತುವೆಂದು ಪುರಾಣಸ್ಮೃತಿಯ ಪ್ರಾಮಾಣ್ಯದಿಂದ ಒಪ್ಪಿದರೆ 'ಹೀಗೆಂದು ತಿಳಿದಿರುವದು [1] ವ್ಯರ್ಥವಾಗುವದಲ್ಲ ![2]

(ಪರಿಹಾರ) :- ಹಾಗಲ್ಲ. ಏಕೆಂದರೆ ಗೃಹಸ್ಥರ ವಿಷಯಕ್ಕೆ ಅದು ಸಾರ್ಥಕವಾಗಿರುತ್ತದೆ. ಹೀಗೆಂದು ತಿಳಿದುಕೊಳ್ಳದಿರುವ ಗೃಹಸ್ಥರಿರುತ್ತಾರಷ್ಟೆ. ಅವರಿಗೆ ಸ್ವಭಾವದಿಂದಲೇ ದಕ್ಷಿಣದ ಧೂಮಾದಿಮಾರ್ಗವು ಪ್ರಸಿದ್ಧವಾದ (ಗತಿ) ಯಾಗಿರುತ್ತದೆ. (ಆದರೆ) ಅವರಲ್ಲಿ ಯಾರು ಹೀಗೆಂದು ತಿಳಿದುಕೊಂಡಿರುತ್ತಾರೋ, ಅಥವಾ- "ಇನ್ನು ಈತನ ವಿಷಯದಲ್ಲಿ ಶವ್ಯ(ಕರ್ಮ)ವನ್ನು ಮಾಡಲಿ, ಮಾಡದಿರಲಿ, ಅರ್ಚಿಯನ್ನೇ (ಪಡೆಯುತ್ತಾರೆ)" (೪-೧೫-೫) ಎಂಬ ಲಿಂಗವಿರುವದರಿಂದ- ಸಗುಣವಾದ ಮತ್ತೊಂದು ಬ್ರಹ್ಮವನ್ನಾಗಲಿ ಅರಿತು (ಉಪಾಸನೆ) ಮಾಡಿರುತ್ತಾರೋ[3] ಅವರು ಉತ್ತರಮಾರ್ಗದಿಂದಲೇ ಹೋಗುತ್ತಾರೆ.

## ಸಾಮಾನ್ಯಗೃಹಸ್ಥರಿಗೆ ಉತ್ತರಮಾರ್ಗಪ್ರಾಪ್ತಿಯಿಲ್ಲ

(ಭಾಷ್ಯ)

೪೦೪. ನನೂರ್ಧ್ವರೇತಸಾಂ ಗೃಹಸ್ಥಾನಾಂ ಚ ಸಮಾನ ಆಶ್ರಮಿತ್ವೆ ಊರ್ಧ್ವರೇತಸಾಮೇವೋತ್ತರೇಣ ಪಥಾ ಗಮನಂ ನ ಗೃಹಸ್ಥಾನಾಮಿತಿ ನ ಯುಕ್ತಮ್ ಅಗ್ನಿಹೋತ್ರಾದಿವೈದಿಕಕರ್ಮಬಾಹುಲ್ಯೇ ಚ ಸತಿ । ನೈಷ ದೋಷಃ । ಅಪೂತಾ ಹಿ ತೇ । ಶತ್ರುಮಿತ್ರಸಂಯೋಗನಿಮಿತ್ತಂ ಹಿ ತೇಷಾಂ ರಾಗದ್ವೇಷೌ । ತಥಾ ಧರ್ಮಾಧರ್ಮೌ ಹಿಂಸಾನುಗ್ರಹನಿಮಿತ್ತೌ । ಹಿಂಸಾನೃತಮಾಯಾಽಬ್ರಹ್ಮಚರ್ಯಾದಿ ಚ ಬಹ್ವಶುದ್ಧಿಕಾರಣಮಪರಿಹಾರ್ಯಂ ತೇಷಾಮ್ । ಅತೋಽಪೂತಾಃ । ಅಪೂತತ್ವಾನ್ನೋತ್ತರೇಣ ಪಥಾ ಗಮನಮ್ । ಹಿಂಸಾನೃತಮಾಯಾಽಬ್ರಹ್ಮಚರ್ಯಾದಿಪರಿಹಾರಾಚ್ಚ ಶುದ್ಧಾತ್ಮಾನೋ ಹೀತರೇ ಶತ್ರುಮಿತ್ರರಾಗದ್ವೇಷಾದಿಪರಿಹಾರಾಚ್ಚ ವಿರಜಸಃ । ತೇಷಾಂ ಯುಕ್ತ ಉತ್ತರಃ ಪನ್ಥಾಃ । ತಥಾ

---

1. ಪಂಚಾಗ್ನಿಯನ್ನು ಉಪಾಸನೆಮಾಡಿರುವದು.

2. ಪಂಚಾಗ್ನಿವಿದ್ಯೆಯಿಲ್ಲದಿದ್ದರೂ ಉತ್ತರಮಾರ್ಗಪ್ರಾಪ್ತಿಯೆಂದು ಒಪ್ಪಿದರೆ ಈ ವಿದ್ಯೆಯೇ ವ್ಯರ್ಥವೆಂದಾಗುವದಲ್ಲ !- ಎಂದು ಆಕ್ಷೇಪ.

3. ಪಂಚಾಗ್ನಿವಿದ್ಯೆಯನ್ನು ಬಲ್ಲವರಿಗೆ ಉತ್ತರಮಾರ್ಗಪ್ರಾಪ್ತಿ ಎಂಬುದು ಪ್ರಕೃತ ಶ್ರುತಿಯಿಂದ ಸಿದ್ಧವಾಗುತ್ತದೆ. ಉಪಕೋಸಲವಿದ್ಯೆಯನ್ನು ಬಲ್ಲವರಿಗೂ ಈ ಗತಿಯುಂಟೆಂದು ಶ್ರುತಿಯಲ್ಲಿ ಹೇಳಿದೆ. ಅಂತ್ಯೇಷ್ಟಿಯನ್ನು ಮಾಡಲಿ, ಮಾಡದಿರಲಿ- ಎಂದು ಆ ಶ್ರುತಿಯಲ್ಲಿರುವದರಿಂದ ಆ ಸಗುಣಬ್ರಹ್ಮವಿದ್ಯೆಗೆ ಗೃಹಸ್ಥರೇ ಅಧಿಕಾರಿಗಳೆಂದು ತಿಳಿಯಬೇಕಾಗಿದೆ ಎಂದು ಅಭಿಪ್ರಾಯ.

ಚ ಪೌರಾಣಿಕಾಃ- "ಯೇ ಪ್ರಜಾಮೀಷಿರೇಽಧೀರಾಸ್ತೇ ಶ್ಮಶಾನಾನಿ ಭೇಜಿರೇ । ಯೇ ಪ್ರಜಾಂ ನೇಷಿರೇ ಧೀರಾಸ್ತೇಽಮೃತತ್ವಂ ಹಿ ಭೇಜಿರೇ"[1] (?) ಇತ್ಯಾಹುಃ ॥

(ಭಾಷ್ಯಾರ್ಥ)

(ಆಕ್ಷೇಪ) ,- ಊರ್ಧ್ವರೇತಸ್ಕರಿಗೂ ಗೃಹಸ್ಥರಿಗೂ ಆಶ್ರಮಿತ್ವವೆಂಬುದು ಸಮಾನವಾಗಿರುವಲ್ಲಿ[2] ಊರ್ಧ್ವರೇತಸ್ಕರಿಗೆ ಮಾತ್ರ ಉತ್ತರಮಾರ್ಗದಿಂದ ಗತಿಯಾಗುವದೆಂದೂ ಅಗ್ನಿಹೋತ್ರಾದಿಕರ್ಮಗಳನ್ನು ಬಹಳವಾಗಿ (ಮಾಡಿದ್ದರೂ) ಗೃಹಸ್ಥರಿಗೆ (ಆಗುವ)ದಿಲ್ಲವೆಂದೂ ಹೇಳುವದು ಯುಕ್ತವಲ್ಲವಲ್ಲ !

(ಪರಿಹಾರ) .- ಇದೇನೂ ದೋಷವಲ್ಲ. ಏಕೆಂದರೆ ಅವರು ಅಶುದ್ಧರಾಗಿರುತ್ತಾರೆ. ಶತ್ರುಮಿತ್ರರೊಡನೆ ಸೇರುವ ನಿಮಿತ್ತದಿಂದ[3] ಅವರಿಗೆ ರಾಗದ್ವೇಷಗಳಾಗುವವಷ್ಟೆ ? ಮತ್ತು ಹಿಂಸೆ, ಅನುಗ್ರಹ- ಇವುಗಳ ನಿಮಿತ್ತದಿಂದ[4] ಪಾಪಪುಣ್ಯಗಳು, (ಆಗುವವಷ್ಟೆ) ? ಹಿಂಸೆ, ಅನೃತ, ಮಾಯೆ, ಅಬ್ರಹ್ಮಚರ್ಯ-[5] ಮುಂತಾದ ಅನೇಕ ಅಶುದ್ಧಿಕಾರಣವು ಅವರಿಗೆ ಅಪರಿಹಾರ್ಯವಾಗಿರುತ್ತದೆ. ಆದ್ದರಿಂದ ಅವರು ಅಶುದ್ಧರು. ಅಶುದ್ಧವಾಗಿರುವದರಿಂದಲೇ (ಅವರಿಗೆ) ಉತ್ತರಮಾರ್ಗದಿಂದ ಗಮನ(ವಾಗು)ವದಿಲ್ಲ. ಮತ್ತು ಹಿಂಸೆ, ಅನೃತ, ಮಾಯೆ, ಅಬ್ರಹ್ಮಚರ್ಯ- ಮುಂತಾದವುಗಳನ್ನು ಪರಿಹರಿಸಿಕೊಂಡಿರುವದರಿಂದಲೇ ಮಿಕ್ಕವರು ಶುದ್ಧಾತ್ಮರು , ಶತ್ರು, ಮಿತ್ರ, ರಾಗ, ದ್ವೇಷ- ಮುಂತಾದವುಗಳನ್ನು ತಪ್ಪಿಸಿಕೊಂಡಿರುವದರಿಂದಲೂ ಅವರು ಕಲ್ಮಷವಿಲ್ಲದವರಾಗಿರುತ್ತಾರೆ. (ಆದ್ದರಿಂದ) ಅವರಿಗೆ ಉತ್ತರಮಾರ್ಗವು (ದೊರಕುವದು) ಯುಕ್ತವು. ಆದ್ದರಿಂದಲೇ

---

1. ಇದು ಯಾವ ಪುರಾಣವೆಂಬುದು ತಿಳಿಯಲಿಲ್ಲ , ಆಪಸ್ತಂಬಧರ್ಮಸೂತ್ರದಲ್ಲಿ ಹೀಗೆ ಇದೆ :

ಅಷ್ಟಾಶೀತಿಸಹಸ್ರಾಣಿ ಯೇ ಪ್ರಜಾಮೀಷಿರೇ ಋಷಯಃ ।
ದಕ್ಷಿಣೇನಾರ್ಯಮ್ಣಃ ಪನ್ಥಾನಂ ತೇ ಶ್ಮಶಾನಾನಿ ಭೇಜಿರೇ ॥
ಅಷ್ಟಾಶೀತಿಸಹಸ್ರಾಣಿ ಯೇ ಪ್ರಜಾಂ ನೇಷಿರೇ ಋಷಯಃ ।
ಉತ್ತರೇಣಾರ್ಯಮ್ಣಃ ಪನ್ಥಾನಂ ತೇಽಮೃತತ್ವಗ್ಂ ಹಿ ಕಲ್ಪತೇ ॥

ಬೃ. ಭಾ ದ. ೬-೨-೧೫ (ಭಾ. ಭಾ. ೪೪೭)ನ್ನೂ ಅದರ ಟಿಪ್ಪಣಿಯನ್ನೂ ನೋಡಿರಿ.

2. ಸ್ವಾಶ್ರಮಧರ್ಮದ ಅನುಷ್ಠಾನವು ಇಬ್ಬರಿಗೂ ಸಮಾನವಾದ ಫಲವನ್ನು ಮಾಡಬೇಕು ಎಂದು ಭಾವ.

3. ಊರ್ಧ್ವರೇತಸ್ಕರಿಗೆ ಶತ್ರುಮಿತ್ರಭಾವವಿರುವದಿಲ್ಲ. ಗೀ. ೧೨-೧೮.

4. ಊರ್ಧ್ವರೇತಸ್ಕರಿಗೆ ಹಿಂಸಾನುಗ್ರಹಗಳಿರುವದಿಲ್ಲ ಗೌ. ಸೂ ೧-೩-೨೩. ಮೈ. ೨-೨೫.

5. ಇಂಥ ದೋಷಗಳು ಗೃಹಸ್ಥರಿಗೆ ಅಪರಿಹಾರ್ಯ. ಪ್ರ. ೧-೧೬ (ಭಾ. ಭಾ. ೨೨)

ಪೌರಾಣಿಕರು "ಯಾವ ಅವಿವೇಕಿಗಳು ಪ್ರಜೆಯನ್ನು ಬಯಸಿದರೋ ಅವರು ಶ್ಮಶಾನಗಳನ್ನು ಸೇರಿದರು [1], ಯಾವ ವಿವೇಕಿಗಳು ಪ್ರಜೆಯನ್ನು ಬಯಸಲಿಲ್ಲವೋ ಅವರು ಅಮೃತತ್ವವನ್ನೇ ಸೇರಿದರು" (?) ಎಂದು ಹೇಳಿರುತ್ತಾರೆ.

## ಪಂಚಾಗ್ನಿವಿದ್ಯೆಗೆ ಆಗುವ ಅಮೃತತ್ವವು ಆಪೇಕ್ಷಿಕ

(ಭಾಷ್ಯ)

೪೦೫. ಇತ್ಥಂವಿದಾಂ ಗೃಹಸ್ಥಾನಾಮ್ ಅರಣ್ಯವಾಸಿನಾಂ ಚ ಸಮಾನಮಾರ್ಗತ್ವೇ ಅಮೃತತ್ವಫಲೇ ಚ ಸತಿ ಅರಣ್ಯವಾಸಿನಾಂ ವಿದ್ಯಾನರ್ಥಕ್ಯಂ ಪ್ರಾಪ್ತಮ್। ತಥಾ ಚ ಶ್ರುತಿವಿರೋಧಃ 'ನ ತತ್ರ ದಕ್ಷಿಣಾ ಯನ್ತಿ ನಾವಿದ್ವಾಂಸಸ್ತಪಸ್ವಿನಃ' (ಶತ ಬ್ರಾ. ೧೦-೫-೪-೧೬)[2] ಇತಿ। "ಸ ಏನಮವಿದಿತೋ ನ ಭುನಕ್ತಿ" (ಬೃ.೧-೪-೧೫) ಇತಿ ಚ ವಿರುದ್ಧಮ್। ನ। ಆಭೂತಸಂಪ್ಲವಸ್ಥಾನಸ್ಯಾಮೃತತ್ವೇನ ವಿವಕ್ಷಿತತ್ವಾತ್। ತತ್ರೈವೋಕ್ತಂ ಪೌರಾಣಿಕೈಃ "ಆಭೂತಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ"[3] (ವಿ.ಪು ೨-೮-೯೭) ಇತಿ। ಯಚ್ಚಾತ್ಯನ್ತಿಕಮಮೃತತ್ವಂ ತದಪೇಕ್ಷಯಾ 'ನ ತತ್ರ ದಕ್ಷಿಣಾ ಯನ್ತಿ', 'ಸ ಏನಮವಿದಿತೋ ನ ಭುನಕ್ತಿ' ಇತ್ಯಾದ್ಯಾಃ ಶ್ರುತಯ ಇತ್ಯತೋ ನ ವಿರೋಧಃ। 'ನ ಚ ಪುನರಾವರ್ತತೇ[4]' (೮-೫೧-೧), 'ಇಮಂ ಮಾನವಮಾವರ್ತಂ ನಾವರ್ತನ್ತೇ' (೪-೧೫-೫) ಇತ್ಯಾದಿಶ್ರುತಿವಿರೋಧ ಇತಿ ಚೇತ್। ನ। 'ಇಮಂ ಮಾನವಮ್' ಇತಿ ವಿಶೇಷಣಾತ್ "ತೇಷಾಮಿಹ ನ ಪುನರಾವೃತ್ತಿರಸ್ತಿ" (ಬೃ ಮಾ ೬-೧-೧೮) ಇತಿ ಚ। ಯದಿ ಹಿ ಏಕಾನ್ತೇನೈವ ನಾವರ್ತೇರನ್ 'ಇಮಂ ಮಾನವಮ್' 'ಇಹ' ಇತಿ ಚ ವಿಶೇಷಣಮ್ ಅನರ್ಥಕಂ ಸ್ಯಾತ್। 'ಇಮಮ್' 'ಇಹ' ಇತ್ಯಾಕೃತಿಮಾತ್ರಮುಚ್ಯತ ಇತಿ ಚೇತ್। ನ। ಅನಾವೃತ್ತಿಶಬ್ದೇನೈವ ನಿತ್ಯಾನಾವೃತ್ತ್ಯರ್ಥಸ್ಯ ಪ್ರತೀತತ್ವಾತ್ ಆಕೃತಿಕಲ್ಪನಾ ಅನರ್ಥಿಕಾ। ಅತ 'ಇಮಮ್' 'ಇಹ' ಇತಿ ಚ ವಿಶೇಷಣಾರ್ಥವತ್ತ್ವಾಯ ಅನ್ಯತ್ರಾಽಽವೃತ್ತಿಃ ಕಲ್ಪನೀಯಾ। ನ ಚ ಸದೇಕಮೇವಾದ್ವಿತೀಯಮ್ ಇತ್ಯೇವಂಪ್ರತ್ಯಯವತಾಂ ಮೂರ್ಧನ್ಯಯಾ ನಾಡ್ಯಾ ಅರ್ಚಿರಾದಿಮಾರ್ಗೇಣ ಗಮನಮ್। "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ ೪-೪-೬) "ತಸ್ಮಾತ್ತತ್ಸರ್ವಮಭವತ್" (ಬೃ.೧-೪-೯), "ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ" (ಬೃ. ೪-೪-೬) "ಅತ್ರೈವ ಸಮವನೀಯನ್ತೇ" (ಬೃ. ೩-೨-೧೧) ಇತ್ಯಾದಿ

---

1. ಇದು ಅಂತ್ಯಸಂಸ್ಕಾರದ ವಿಷಯವೆಂದು ಆ. ಧ. ೨-೯-೨೩-೧೧.

2. 'ವಿದ್ಯಯಾ ತದಾರೋಹನ್ತಿ ಯತ್ರ ಕಾಮಾಃ ಪರಾಗತಾಃ' ಎಂಬುದು ಇದರ ಪೂರ್ವಾರ್ಧ.

3. 'ಅಮೃತತ್ವಂ ವಿಭಾವ್ಯತೇ' ಎಂದು ಅಚ್ಚಿನ ಪುಸ್ತಕದ ಪಾಠ.

4 'ಪುನರಾವರ್ತನ್ತೇ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಶ್ರುತಿಶತೇಭ್ಯಃ । ನನು ತಸ್ಮಾಜ್ಜೀವಾತ್ ಉಚ್ಚಿಕ್ರಮಿಷೋಃ ಪ್ರಾಣಾ ನೋತ್ಕ್ರಾಮನ್ತಿ, ಸಹೈವ ಗಚ್ಛನ್ತಿ ಇತ್ಯಯಮರ್ಥಃ ಕಲ್ಪ್ಯೇತ ಇತಿ ಚೇತ್ । ನ । 'ಅತ್ರೈವ ಸಮವನೀಯನ್ತ' ಇತಿ ವಿಶೇಷಣಾನರ್ಥಕ್ಯಾತ್ । "ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ.೪-೪-೨) ಇತಿ ಚ ಪ್ರಾಣೈರ್ಗಮನಸ್ಯ ಪ್ರಾಪ್ತತ್ವಾತ್ । ತಸ್ಮಾದುತ್ಕ್ರಾಮನ್ತೀತ್ಯನಾಶಙ್ಕ್ಯೈವೈಷಾ । ಯದಾಪಿ ಮೋಕ್ಷಸ್ಯ ಸಂಸಾರಗತಿವೈಲಕ್ಷಣ್ಯಾತ್ ಪ್ರಾಣಾನಾಂ ಜೀವೇನ ಸಹ ಗಮನಮಾಶಙ್ಕ್ಯ ತಸ್ಮಾನ್ನೋತ್ಕ್ರಾಮನ್ತಿ -ಇತ್ಯುಚ್ಯತೇ ತದಾಪಿ 'ಅತ್ರೈವ ಸಮವನೀಯನ್ತ' ಇತಿ ವಿಶೇಷಣಮ್ ಅನರ್ಥಕಂ ಸ್ಯಾತ್ । ನ ಚ ಪ್ರಾಣೈರ್ವಿಯುಕ್ತಸ್ಯ ಗತಿರುಪಪದ್ಯತೇ ಜೀವತ್ವಂ ವಾ । ಸರ್ವಗತತ್ವಾತ್ ಸದಾತ್ಮನೋ ನಿರವಯವತ್ವಾತ್ । ಪ್ರಾಣಸಂಬನ್ಧಮಾತ್ರಮೇವ ಹಿ ಅಗ್ನಿವಿಸ್ಫುಲಿಙ್ಗವಜ್ಜೀವತ್ವಭೇದಕಾರಣಮ್ ಇತ್ಯತಸ್ತದ್ವಿಯೋಗೇ ಜೀವತ್ವಂ ಗತಿರ್ವಾ ನ ಶಕ್ಯಾ ಪರಿಕಲ್ಪಯಿತುಂ ಶ್ರುತಯಶ್ಚೇತ್ ಪ್ರಮಾಣಮ್ । ನ ಚ ಸತೋಽಣುರವಯವಃ ಸ್ಫುಟಿತೋ ಜೀವಾಖ್ಯಃ ಸದ್ರೂಪಂ ಛಿದ್ರೀಕುರ್ವನ್ ಗಚ್ಛತೀತಿ ಶಕ್ಯಂ ಕಲ್ಪಯಿತುಮ್ । ತಸ್ಮಾತ್ "ತಯೋರ್ಧ್ವಮಾಯನ್ನಮೃತತ್ವಮೇತಿ" (ಛ-೬-೬) ಇತಿ ಸಗುಣಬ್ರಹ್ಮೋಪಾಸಕಸ್ಯ ಪ್ರಾಣೈಃ ಸಹ ನಾಡ್ಯಾ ಗಮನಂ ಸಾಪೇಕ್ಷಮೇವ ಚಾಮೃತತ್ವಂ ನ ಸಾಕ್ಷಾನ್ಮೋಕ್ಷಃ ಇತಿ ಗಮ್ಯತೇ । "ತದಪರಾಜಿತಾ ಪೂಸ್ತದೈರಂ ಮದೀಯಂ ಸರಃ" (ಛ-೫-೩),[1] ಇತ್ಯಾದ್ಯುಕ್ತ್ವಾ "ತೇಷಾಮೇವೈಷ ಬ್ರಹ್ಮಲೋಕಃ" (ಛ-೫-೪) ಇತಿ ವಿಶೇಷಣಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಹೀಗೆ (ಪಂಚಾಗ್ನಿವಿದ್ಯೆಯನ್ನು) ಅರಿತಿರುವ ಗೃಹಸ್ಥರಿಗೂ ಅರಣ್ಯವಾಸಿಗಳಿಗೂ ಅದೇ (ಉತ್ತರ)ಮಾರ್ಗವೂ ಅಮೃತತ್ವವೆಂಬ ಫಲವೂ ಆಗುವದಾದರೆ ಅರಣ್ಯವಾಸಿಗಳಿಗೆ ವಿದ್ಯೆಯು ವ್ಯರ್ಥವಾಯಿತಲ್ಲ! ಹಾಗಾದರೆ "ಅಲ್ಲಿಗೆ ದಕ್ಷಿಣ(ಮಾರ್ಗ)ದವರೂ, ಜ್ಞಾನಿಗಳಲ್ಲದ ತಪಸ್ವಿಗಳೂ ಹೋಗಲಾರರು" (ಶತ. ಬ್ರಾ. ೧೦-೫-೪-೧೬), ಎಂಬ ಶ್ರುತಿಗೆ ವಿರೋಧವಾಗುವದು , "ಅದು ಅರಿಯಲ್ಪಡದೆ ಇವನನ್ನು ಕಾಪಾಡುವದಿಲ್ಲ," (ಬೃ ೧-೪-೧೫) ಎಂಬುದೂ ವಿರುದ್ಧ(ವಾಗುವದು).

(ಪರಿಹಾರ) .- ಹಾಗಲ್ಲ. ಏಕೆಂದರೆ ಭೂತಗಳು ಪ್ರಲಯವಾಗುವವರೆಗಿನ ಸ್ಥಾನವನ್ನು ಅಮೃತತ್ವವೆಂದು (ಇಲ್ಲಿ) ವಿವಕ್ಷಿತವಾಗಿರುತ್ತದೆ[2]. ಈ ವಿಷಯದಲ್ಲಿ

---

1 ಅನುವಾದದ ಟಿಪ್ಪಣಿಯನ್ನು ನೋಡಿ.

2. ಇದು ಮುಖ್ಯಾಮೃತತ್ವವಲ್ಲ

ಯೇ "ಆಭೂತಸಂಪ್ಲವವಾದ ಸ್ಥಾನವನ್ನು ಅಮೃತತ್ವವೆನ್ನುವರು" (ವಿ. ಪು. ೨-೮-೯೭) ಎಂದು **ಪೌರಾಣಿಕರು** ಹೇಳಿರುತ್ತಾರೆ. ಆದರೆ ಆತ್ಯಂತಿಕವಾದ ಅಮೃತತ್ವವಿದೆಯಲ್ಲ, ಅದರ ದೃಷ್ಟಿಯಿಂದಲೇ 'ಅಲ್ಲಿಗೆ ದಕ್ಷಿಣಮಾರ್ಗದವರು ಹೋಗಲಾರರು', 'ಅದು ಅರಿಯಲ್ಪಡದೆ ಇದ್ದರೆ ಇವನನ್ನು ಕಾಪಾಡುವದಿಲ್ಲ' ಮುಂತಾದ ಶ್ರುತಿಗಳು (ಹೊರಟಿವೆ)ಯಾದ್ದರಿಂದ (ಯಾವ) ವಿರೋಧವೂ ಇಲ್ಲ.

(ಆಕ್ಷೇಪ) :– "ಮತ್ತೆ ಹಿಂತಿರುಗುವದೂ ಇಲ್ಲ" (೮-೧೫-೧), "ಈ ಮಾನವ ಆವರ್ತಕ್ಕೆ ಹಿಂತಿರುಗುವದಿಲ್ಲ" (೪-೧೫-೫) ಮುಂತಾದ ಶ್ರುತಿಗಳಿಗೆ (ಇದು) ವಿರುದ್ಧವಲ್ಲವೆ ?

(ಪರಿಹಾರ) :– ಹಾಗಲ್ಲ, ಏಕೆಂದರೆ 'ಈ ಮಾನವ (ಆವರ್ತಕ್ಕೆ)' ಎಂದೂ 'ಅವರಿಗೆ ಇಲ್ಲಿಗೆ ಪುನರಾವೃತ್ತಿಯಿಲ್ಲ' (ಬೃ.ವಾ. ೬-೧-೧೮) ಎಂದೂ ವಿಶೇಷಣ (ವಿರುತ್ತದೆ). ನಿಯಮದಿಂದ (ಅವರು) ಹಿಂತಿರುಗುವದಿಲ್ಲವೆಂದಾಗಿದ್ದರೆ 'ಈ ಮಾನವ' ಎಂದೂ 'ಇಲ್ಲಿಗೆ' ಎಂದೂ ವಿಶೇಷಣವನ್ನು (ಕೊಟ್ಟಿರುವದು) ವ್ಯರ್ಥವಾಗುತ್ತಿತ್ತು.

(ಆಕ್ಷೇಪ) :– 'ಈ' 'ಇಲ್ಲಿ'– ಎಂದು ಆಕೃತಿಮಾತ್ರವನ್ನು ಹೇಳಿದೆ ಎಂದರೊ[1] ?

(ಪರಿಹಾರ) :– ಹಾಗಲ್ಲ. ಅನಾವೃತ್ತಿ (ಹಿಂತಿರುಗದೆ ಇರುವಿಕೆ) ಎಂಬ ಮಾತಿನಿಂದಲೇ ಎಂದಿಗೂ ಹಿಂತಿರುಗುವದಿಲ್ಲ ಎಂದು ತೋರುತ್ತಿರುವಲ್ಲಿ ಆವೃತ್ತಿಯನ್ನು ಕಲ್ಪಿಸುವದು ವ್ಯರ್ಥ. ಆದ್ದರಿಂದ 'ಇಮಮ್' (ಈ) ಎಂದೂ 'ಇಹ' (ಇಲ್ಲಿಗೆ) ಎಂದೂ (ಇರುವ) ವಿಶೇಷಣವು ಸಾರ್ಥಕವಾಗುವದಕ್ಕೆ ಮತ್ತೊಂದು (ಕಲ್ಪ)ದಲ್ಲಿ ಆವೃತ್ತಿ(ಯಾಗುವದೆಂದು) ಕಲ್ಪಿಸಬೇಕು. ಸತ್ತು ತನಗೆರಡನೆಯದಿಲ್ಲದ ಒಂದೇ–ಎಂದಿಂಥ ಪ್ರತ್ಯಯವುಳ್ಳವರಿಗೆ ನೆತ್ತಿಯಮೇಲೆ ಹೋಗಿರುವ ನಾಡಿಯಿಂದ ಹೋಗುವದು ಆಗಲಾರದು.[2] ಏಕೆಂದರೆ "ಬ್ರಹ್ಮವೇ ಆಗಿದ್ದವನು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ" (ಬೃ. ೪-೪-೬), "ಅದರಿಂದ ಅದು ಎಲ್ಲವೂ ಆಯಿತು" (ಬೃ.೧-೪-೯), "ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ" (ಬೃ. ೪-೪-೬), "ಇಲ್ಲಿಯೇ ಸೇರಿಹೋಗುತ್ತವೆ" (ಬೃ. ೩-೨-೧೧) ಮುಂತಾದ ನೂರಾರು ಶ್ರುತಿಗಳಿರುತ್ತವೆ.

---

1. ಯಾವ ಕಲ್ಪವಾದರೂ ಈ ಕಲ್ಪದ ಸಂಸಾರಕ್ಕೆ ಅವರು ಬರುವದಿಲ್ಲ ಎಂದು ಕಲ್ಪಿಸಬಹುದಲ್ಲ – ಎಂದು ಶಂಕೆ. ಬೃ. ಭಾ. ೬–೨–೧೫ (ಭಾ. ಭಾ. ೪೫೦) ನೋಡಿ.

2 ಉಪಾಸಕರಿಗೆ ಮಾತ್ರ ಸುಷುಮ್ನಾನಾಡಿಯಿಂದ ಗತಿಯಿದು ; ಪರಬ್ರಹ್ಮಜ್ಞಾನಿಗಳಿಗಲ್ಲ

(ಆಕ್ಷೇಪ):- ಆ ಉತ್ಕ್ರಾಂತನಾಗಲಿರುವ ಜೀವನನ್ನು ಬಿಟ್ಟು ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, ಜೊತೆಯಲ್ಲಿಯೇ ಹೋಗುತ್ತವೆ- ಎಂಬೀ ಅರ್ಥವನ್ನು ಕಲ್ಪಿಸಬಹುದಲ್ಲ ![1]

(ಪರಿಹಾರ) :- ಹಾಗಲ್ಲ. ಏಕೆಂದರೆ (ಆಗ) "ಇಲ್ಲಿಯೇ ಸೇರಿಹೋಗುತ್ತವೆ" ಎಂಬ ವಿಶೇಷಣವು ವ್ಯರ್ಥವಾಗುವದು[2]. "ಎಲ್ಲಾ ಪ್ರಾಣಗಳೂ ಹಿಂಬಾಲಿಸಿಕೊಂಡು ಉತ್ಕ್ರಾಂತವಾಗುವವು" (ಬೃ. ೪-೪-೨) ಎಂದು ಪ್ರಾಣಗಳೊಡನೆ ಹೋಗುತ್ತಾನೆಂಬುದು ಪ್ರಾಪ್ತವಾಗಿಯೇ ಇರುವದರಿಂದಲೂ (ಹೀಗೆ)[3], ಆದ್ದರಿಂದ (ಅವನನ್ನು ಬಿಟ್ಟು) ಉತ್ಕ್ರಾಂತವಾಗುತ್ತವೆ ಎಂಬೀ ಶಂಕೆಯೇ ಇಲ್ಲ[4]. ಮೋಕ್ಷವು ಸಂಸಾರಿಗತಿಗಿಂತ ವಿಲಕ್ಷಣವಾಗಿರುವದರಿಂದ ಪ್ರಾಣಗಳು ಜೀವನೊಡನೆ ಬರುತ್ತವೆಯೊ, (ಇಲ್ಲವೊ ಎಂಬುದು) ಆಶಂಕಿಸಿ[5] "ಅವನನ್ನು ಬಿಟ್ಟು ಉತ್ಕ್ರಾಂತವಾಗುವದಿಲ್ಲ" ಎಂದು ಯಾವ ಪಕ್ಷದಲ್ಲಿ ಹೇಳುತ್ತಾರೋ ಆಗಲೂ 'ಇಲ್ಲಿಯೇ ಸೇರಿಹೋಗುತ್ತವೆ' ಎಂಬ ವಿಶೇಷಣವು ವ್ಯರ್ಥವಾಗುವದು[6]. ಪ್ರಾಣಗಳು ಬಿಟ್ಟಗಲಿದ (ಆತ್ಮನಿಗೆ) ಗಮನವಾಗಲಿ, ಜೀವತ್ವವಾಗಲಿ ಹೊಂದುವದೂ ಇಲ್ಲ. ಏಕೆಂದರೆ ಸದ್ರೂಪವಾದ ಆತ್ಮನು ಸರ್ವಗತನಾಗಿರುತ್ತಾನೆ, ನಿರವಯವ

---

1. 'ನ ತಸ್ಮಾತ್ಪ್ರಾಣಾ ಉತ್ಕ್ರಾಮನ್ತಿ' ಎಂಬ ಮಾಧ್ಯಂದಿನಶ್ರುತಿಯನ್ನು ಅನುಸರಿಸಿ ಈ ಅರ್ಥವನ್ನು ತೆಗೆದಿವೆ. ಪ್ರಾಣಗಳು ಅವನನ್ನು ಬಿಟ್ಟಗಲುವದಿಲ್ಲವೆಂದು ಅರ್ಥವೇ ಹೊರತು ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲವೆಂದೇನೂ ಅಲ್ಲ ; ಏಕೆಂದರೆ ಪಂಚಮಿಯು ವಿಶೇಷಾರ್ಥವನ್ನೂ ಹೇಳುತ್ತದೆ, ಷಷ್ಠಿಯು ಸಂಬಂಧಸಾಮಾನ್ಯವನ್ನು ಹೇಳುತ್ತದೆ ಎಂದು ಭಾವ. ಸೂ. ಭಾ. ೪-೨-೧೨ರಲ್ಲಿ ಈ ಪೂರ್ವಪಕ್ಷವನ್ನು ತೆಗೆದು ಮುಂದಿನ ಸೂತ್ರದಲ್ಲಿ ಉತ್ತರವನ್ನು ಹೇಳಿದೆ.

2. ಹೋಗುವದಿಲ್ಲ, ಇಲ್ಲಿಯೇ ಆತ್ಮನಲ್ಲಿ ಸೇರಿಬಿಡುವವು- ಎಂದರೇ ವಿಶೇಷಣವು ಹೊಂದುಗಡೆಯಾಗುತ್ತದೆ.

3. ಪ್ರಾಪ್ತವಾಗಿರುವದನ್ನು ಮತ್ತೆ ಹೇಳಬೇಕಾದದ್ದಿಲ್ಲ.

4. ಜೀವನನ್ನು ಬಿಟ್ಟಗಲುತ್ತವೆಯೆ ? ಎಂಬ ಶಂಕೆಯಿದ್ದರಲ್ಲವೆ, ಪರಿಹಾರವು ಬೇಕಾಗುವದು ?

5. ಸಂಸಾರಿಗಳು ಹೋಗುವ ಮಾರ್ಗವು ಬೇರೆ ; ಮುಮುಕ್ಷುಗಳದು ಬೇರೆ. ಆದ್ದರಿಂದ ಇಲ್ಲಿ ಜೀವನೊಡನೆ ಪ್ರಾಣಗಳು ಹೋಗುತ್ತವೆಯೊ, ಇಲ್ಲವೊ- ಎಂಬ ಶಂಕೆಯುಂಟಾಗಬಹುದಲ್ಲ ! ಎಂದರ್ಥ. 'ಸಹಾಗಮನ' ಎಂಬ ಮೂಲದಲ್ಲಿ ದೀರ್ಘವು ಬೇಕಿಲ್ಲ, ಸಹಗಮನ ಎಂದಿದ್ದರೇ ಸಾಕೆಂದು ತೋರುತ್ತದೆ.

6. ಏಕೆಂದರೆ ಆ ವಿಶೇಷಣವು ಆಗ ಯಾವ ಶಂಕೆಗೂ ಪರಿಹಾರವನ್ನು ಹೇಳುವದಿಲ್ಲವೆಂದಾಗುತ್ತದೆ. ಪ್ರಾಣಗಳ ಉತ್ಕ್ರಾಂತಿಯು ಉಂಟೊ, ಇಲ್ಲವೊ ?- ಎಂಬ ಸಂಶಯವಿದ್ದಾಗಲೆ ಈ ವಿಶೇಷಣವು ಸಾರ್ಥಕವಾಗುತ್ತದೆ.

ನಾಗಿರುತ್ತಾನೆ[1]. ಪ್ರಾಣಗಳ ಸಂಬಂಧವೊಂದೇ ಅಲ್ಲವೆ, ಬೆಂಕಿಯ ಕಿಡಿಗಳಂತೆ ಜೀವತ್ವವೆಂಬ ಭೇದಕ್ಕೆ ಕಾರಣವಾಗಿರುವದು?[2] ಆದ್ದರಿಂದ ಅವುಗಳು ಅಗಲಿದರೆ –ಶ್ರುತಿಗಳು ಪ್ರಮಾಣವೆಂದಾದರೆ–(ಆತ್ಮನಿಗೆ) ಜೀವತ್ವವನ್ನಾಗಲಿ ಗತಿಯನ್ನಾಗಲಿ ಕಲ್ಪಿಸುವದು ಆಗಲಾರದು[3]. ಸತ್ತಿನ ಜೀವನೆಂಬ ಹೆಸರಿನ ಅಣುರೂಪದ ಅವಯವವು ಸದ್ರೂಪವನ್ನು ರಂಧ್ರಗೊಳಿಸಿ ಹೋಗುತ್ತದೆ ಎಂದು ಕಲ್ಪಿಸುವದೂ ಆಗಲಾರದು[4]. ಆದ್ದರಿಂದ "ಆ (ನಾಡಿಯಿಂದ) ಮೇಲೆ ಬರುವವನು ಅಮೃತತ್ವವನ್ನು ಹೊಂದುತ್ತಾನೆ" (೮-೬-೬) ಎಂಬ (ಶ್ರುತಿಯಂತೆ) ಸಗುಣಬ್ರಹ್ಮೋಪಾಸಕನಿಗೆ ಪ್ರಾಣಗಳೊಡನೆ ನಾಡಿಯಿಂದ ಹೋಗುವದೂ ಸಾಪೇಕ್ಷವೇ ಆಗಿರುವ ಅಮೃತತ್ವವೂ (ಆಗುವದು), ನೇರಾದ ಮೋಕ್ಷವಾಗುವದಿಲ್ಲ– ಎಂದು ಗೊತ್ತಾಗುತ್ತದೆ. ಏಕೆಂದರೆ "ಆ ಅಪರಾಜಿತವೆಂಬ ಪುರವು, ಆ ಐರಂಮದೀಯವಾದ ಸರೋವರವು"[5] ಎಂದುಮುಂತಾಗಿ (೮-೫-೩) ಹೇಳಿ "ಅವರಿಗೇ ಈ ಬ್ರಹ್ಮಲೋಕವು" (೮-೫-೪) ಎಂದು (ಅದಕ್ಕೆ) ವಿಶೇಷಣವನ್ನು ಕೊಟ್ಟಿರುತ್ತದೆ.

## ಮಂತ್ರದ ಅರ್ಥ

(ಭಾಷ್ಯ)

೪೦೬. ಅತಃ ಪಞ್ಚಾಗ್ನಿವಿದೋ ಗೃಹಸ್ಥಾ ಯೇ ಚ ಇಮೇಽರಣ್ಯೇ ವಾನಪ್ರಸ್ಥಾಃ ಪರಿವ್ರಾಜಕಾಶ್ಚ ಸಹ ನೈಷ್ಠಿಕಬ್ರಹ್ಮಚಾರಿಭಿಃ ಶ್ರದ್ಧಾ ತಪ ಇತ್ಯೇವ

---

1. ಎಲ್ಲಾ ಕಡೆಯೂ ಇರುವ ಆತ್ಮನಿಗೆ ಗಮನವಿಲ್ಲ, ನಿರವಯವನಾಗಿರುವದರಿಂದ ಅವನಿಗೆ ಚಲನೆಯೂ ಇಲ್ಲ.

2. ಆತ್ಮನು ಅಖಂಡನಾಗಿದ್ದರೂ ಪ್ರಾಣಗಳ ಸಂಬಂಧದಿಂದ ಬೇರೆಬೇರೆಯಾಗಿರುತ್ತಾನೆ. ಬೆಂಕಿಗೆ ಸುಡುವ ವಸ್ತುವಿನ ನೆಪದಿಂದ ಕಿಡಿಗಳು ಬೇರೆಯಾಗಿರುವಂತೆ ಕಾಣುವಂತೆಯೇ ಇದು.

3. ಜೀವನಿಗೆ ಗತ್ಯಾಗತಿಗಳನ್ನು ಪ್ರಾಣಸಂಬಂಧದಿಂದಲೇ ಶ್ರುತಿಯಲ್ಲಿ ಹೇಳಿದೆ. ಸ್ವತಃ ಆತ್ಮನು ಆಕಾಶದಂತೆ ಸರ್ವಗತನೆಂದೂ ಹೇಳಿದೆ 'ಪ್ರಾಣನು ಉತ್ಕ್ರಾಂತನಾದರೇ ನಾನು ಉತ್ಕ್ರಾಂತನಾಗುವೆನು' ಎಂದೂ ಆತ್ಮನು ಪ್ರಾಣನನ್ನು ಸೃಷ್ಟಿಸಿದನೆಂದೂ ಪ್ರಶ್ನೋಪನಿಷತ್ತುಗಳಲ್ಲಿ ಹೇಳಿದೆ ಜೀವ ಪ್ರಾಣಧಾರಣೇ ಎಂಬ ಧಾತುವಿನ ಬಲದಿಂದ ಜೀವನೆಂದರೆ ಪ್ರಾಣಗಳುಳ್ಳವನೆಂದೇ ಅರ್ಥ.

4. ಆತ್ಮನ ಅವಯವವು ಜೀವನೆಂದೂ ಬೆಂಕಿಯಿಂದ ಕಿಡಿ ಸಿಡಿದುಬರುವಂತೆ ಅವನು ಆತ್ಮನಿಂದ ಹುಟ್ಟಿರುವನೆಂದೂ ಕಲ್ಪಿಸಿದರೆ ಆತ್ಮನಲ್ಲಿ ಜೀವೋತ್ಪತ್ತಿಯಿಂದ ಸಂದುಗಳು ಆಗಬೇಕಾಗುವದು ; ನಿರವಯವನೂ ಅಖಂಡಸ್ವರೂಪನೂ ಆದ ಆತ್ಮನಲ್ಲಿ ಹೀಗೆ ಆಗುವದೆಂದು ಕಲ್ಪಿಸುವದು ಯುಕ್ತವಾಗಲಾರದು.

5. ಶ್ರುತಿಯಲ್ಲಿ ಈ ವಿಶೇಷಣಗಳು ಈ ಕ್ರಮದಲ್ಲಿಲ್ಲ , ಇಲ್ಲಿ ಸಗುಣೋಪಾಸಕರಿಗೆ ಸಿಕ್ಕುವ ಲೋಕವೆಂಬುದು ಮುಖ್ಯಮೋಕ್ಷವಲ್ಲವೆಂಬುದನ್ನು ತಿಳಿಸುವದಕ್ಕೆ ಮಾತ್ರ ಶ್ರುತ್ಯರ್ಥವನ್ನು ಅನುವಾದಮಾಡಿಕೊಂಡಿದೆ.

ಮಾದ್ಯುಪಾಸತೇ ಶ್ರದ್ಧಧಾನಾಸ್ತಪಸ್ವಿನಶ್ಚೇತ್ಯರ್ಥಃ । ಉಪಾಸನಾಶಬ್ದ ಸ್ತಾತ್ಪರ್ಯಾರ್ಥಃ । "ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ" (೫-೧೦-೩) ಇತಿ ಯದ್ವತ್ । ಶ್ರುತ್ಯನ್ತರಾತ್ ಯೇ ಚ ಸತ್ಯಂ ಬ್ರಹ್ಮ ಹಿರಣ್ಯಗರ್ಭಾಖ್ಯಮ್ ಉಪಾಸತೇ ತೇ ಸರ್ವೇಽರ್ಚಿಷಮ್ ಅರ್ಚಿರಭಿಮಾನಿನೀಂ ದೇವತಾಮ್ ಅಭಿ ಸಂಭವನ್ತಿ ಪ್ರತಿಪದ್ಯನ್ತೇ । ಸಮಾನಮನ್ಯತ್ ಚತುರ್ಥಗತಿವ್ಯಾಖ್ಯಾನೇನ । ಏಷ ದೇವಯಾನಃ ಪನ್ಥಾ ವ್ಯಾಖ್ಯಾತಃ ಸತ್ಯಲೋಕಾವಸಾನೋ ನಾಣ್ಡಾದ್ ಬಹಿಃ । "ಯದನ್ತರಾ ಪಿತರಂ ಮಾತರಂ ಚ" (ಋ. ೧೦-೮೮-೧೫) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಆದ್ದರಿಂದ ಪಂಚಾಗ್ನಿವಿದ್ಯೆಯನ್ನು ಬಲ್ಲ ಗೃಹಸ್ಥರೂ, ಈ ವಾನಪ್ರಸ್ಥ ಪರಿವ್ರಾಜಕರೂ[1] ನೈಷ್ಠಿಕಬ್ರಹ್ಮಚಾರಿಗಳೊಡನೆ ಶ್ರದ್ಧಾ, ತಪಸ್ಸು- ಎಂಬಿವೇ ಮುಂತಾದವುಗಳನ್ನು ಅರಣ್ಯದಲ್ಲಿ ಉಪಾಸನೆಮಾಡುತ್ತಿರುವವರಲ್ಲ, ಅವರೂ- ಶ್ರದ್ಧೆಯುಳ್ಳವರೂ ತಪಸ್ವಿಗಳೂ ಎಂದರ್ಥ. (ಇಲ್ಲಿ) ಉಪಾಸನೆ (ಮಾಡುತ್ತಾರೆ) ಎಂಬ ಶಬ್ದಕ್ಕೆ ತಾತ್ಪರ್ಯ(ವುಳ್ಳವರಾಗಿರುತ್ತಾರ) ಎಂದರ್ಥ. "ಇಷ್ಟಾಪೂರ್ತೇ ದತ್ತಮಿತ್ಯುವಾಸತೇ" (೫-೧೦-೩) ಎಂದು (ಮುಂದಿನ ಕಂಡಿಕೆಯಲ್ಲಿ) ಹೇಳಿರು ವಂತೆಯೇ (ಇದು). ಮತ್ತು ಬೇರೊಂದು ಶ್ರುತಿ(ಪ್ರಾಮಾಣ್ಯ)ದಿಂದ ಹಿರಣ್ಯ ಗರ್ಭನೆಂಬ ಸತ್ಯಬ್ರಹ್ಮವನ್ನು ಉಪಾಸನೆಮಾಡುವರಲ್ಲ, ಅವರೂ (ಎಂದು ಸೇರಿಸಿ ಕೊಳ್ಳಬೇಕು)[2]. ಇವರೆಲ್ಲರೂ ಅರ್ಚಿಸ್ಸನ್ನು ಅರ್ಚಿರಭಿಮಾನಿಯಾದ ದೇವತೆ ಯನ್ನು ಸೇರುತ್ತಾರೆ, ಪಡೆದುಕೊಳ್ಳುತ್ತಾರೆ. ಮಿಕ್ಕದ್ದೆಲ್ಲವೂ ನಾಲ್ಕನೆಯ (ಅಧ್ಯಾಯ ೧೫ನೆಯ ಖಂಡದ) ಗತಿಯ ವ್ಯಾಖ್ಯಾನಕ್ಕೆ ಸಮಾನವಾಗಿ (ತಿಳಿದು ಕೊಳ್ಳತಕ್ಕದ್ದು) ಈ ಹೇಳಿದ್ದು ಸತ್ಯಲೋಕಾವಸಾನದವರೆಗಿನ ದೇವಯಾನವು, (ಇದು) ಅಂಡದ ಹೊರಗಿರುವದಲ್ಲ[3]. ಏಕೆಂದರೆ "ಪಿತೃವಿಗೂ ಮಾತೃವಿಗೂ ನಡುವೆ ಯಿರುವವು" (ಋಂ ೧೦-೮೮-೧೫) ಎಂದು ಮಂತ್ರವರ್ಣವಿದೆ[4].

---

1. ತ್ರಿದಂಡಿಸನ್ಯಾಸಿಗಳು, ಬ್ರಹ್ಮಸಂಸ್ಥರಾದ ಪರಮಹಂಸಪರಿವ್ರಾಜಕರಲ್ಲ.

2. ಬೃ. ಭಾ. ೬-೨-೧೫ (ಭಾ. ಭಾ ೪೪೭)ನ್ನು ನೋಡಿ. ಇವರೆಲ್ಲರಿಗೂ ಉತ್ತರಮಾರ್ಗದಿಂದ ಬ್ರಹ್ಮಲೋಕಪ್ರಾಪ್ತಿ. ಉಪಾಸನಾತಾರತಮ್ಯದಿಂದ ಇವರಿಗೆ ಬ್ರಹ್ಮ ಲೋಕದ ಬೇರೆಬೇರೆಯ ಸ್ಥಾನಗಳ ಪ್ರಾಪ್ತಿ ಎಂಬುದಕ್ಕೆ ಬೃ. ಭಾ ೬-೨-೧೫ (ಭಾ. ಭಾ. ೪೮೯) ನೋಡಿ. ಜ್ಞಾನಿಗಳಿಗೆ ಸದ್ಯೋಮುಕ್ತಿ, ಮಿಕ್ಕವರಿಗೆ ದಕ್ಷಿಣಮಾರ್ಗ ಅಥವಾ ಕ್ಷುದ್ರಗತಿ.

3. ದೇವಯಾನಮಾರ್ಗದಿಂದ ಹೋದವರು ಅಂಡದಿಂದಾಚೆಗಿರುವ ಬ್ರಹ್ಮವನ್ನು ಸೇರುತ್ತಾರೆಂದು ಕೆಲವರ ಮತ. ಅದನ್ನು ಇಲ್ಲಿ ತಳ್ಳಿಹಾಕಿದೆ. ಸೂ. ಬಾ. ೪-೩-೭ ಭಾ. ಭಾ. ೫೩೭) ಮತ್ತು ಭಾ. ಭಾ. ೫೮೧ರಿಂದ ೫೮೭ರವರೆಗಿನ ಚರ್ಚೆ ಇವನ್ನು- ನೋಡಿ.

4. ದ್ಯಾವಾಪೃಥಿವಿಗಳಿಗೆ ನಡುವೆ ಎಂದರ್ಥ. ಬೃ ಭಾ. ೬-೨-೨ (ಭಾ.ಭಾ. ೪೨೯).

# ಕೇವಲಕರ್ಮಿಗಳಾದ ಗೃಹಸ್ಥರಿಗೆ ಗತಿ

(ಉಪನಿಷತ್ತು)

**ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವನ್ತಿ ಧೂಮಾದ್ರಾತ್ರಿಗ್ಂ ರಾತ್ರೇರಪರ ಪಕ್ಷಾದ್ಯಾನ್ ಷಡ್ದಕ್ಷಿಣೈತಿ ಮಾಸಾಗ್ಂ ಸ್ತಾನ್ನೈತೇ ಸಂವತ್ಸರ ಮಭಿಪ್ರಾಪ್ನುವನ್ತಿ ॥ ೩ ॥**

**ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಮಾಕಾಶಾ ಚ್ಚನ್ದ್ರಮಸಮೇಷ ಸೋಮೋ ರಾಜಾ ತದ್ದೇವಾನಾಮನ್ನಂ ತಂ ದೇವಾ ಭಕ್ಷಯನ್ತಿ ॥ ೪ ॥**

೩. ಇನ್ನು ಯಾವ ಇವರು ಗ್ರಾಮದಲ್ಲಿ ಇಷ್ಟಾಪೂರ್ತಗಳು, ದತ್ತ- ಇಂಥವನ್ನು ಉಪಾಸನೆಮಾಡುತ್ತಾರೋ ಅವರು ಧೂಮವನ್ನು ಸೇರಿಕೊಳ್ಳುತ್ತಾರೆ. ಧೂಮದಿಂದ ರಾತ್ರಿಯನ್ನು, ರಾತ್ರಿಯಿಂದ ಅಪರಪಕ್ಷವನ್ನು, ಅಪರಪಕ್ಷದಿಂದ ಯಾವ ಆರು (ಮಾಸಗಳನ್ನು ಸೂರ್ಯನು) ದಕ್ಷಿಣಕ್ಕೆ ಹೋಗುವನೋ ಆ ಮಾಸಗಳನ್ನು, (ಸೇರುತ್ತಾರೆ). ಇವರು ಸಂವತ್ಸರವನ್ನು ಪಡೆದುಕೊಳ್ಳುವದಿಲ್ಲ.

೪. ಮಾಸಗಳಿಂದ ಪಿತೃಲೋಕವನ್ನು, ಪಿತೃಲೋಕದಿಂದ ಆಕಾಶವನ್ನು, ಆಕಾಶದಿಂದ ಚಂದ್ರನನ್ನು, (ಸೇರುತ್ತಾರೆ). ಇವನೇ ಸೋಮರಾಜನು. ಅದೇ ದೇವತೆಗಳಿಗೆ ಅನ್ನವು, ಅವನನ್ನು ದೇವತೆಗಳು ಭಕ್ಷಿಸುತ್ತಾರೆ.

## ಗೃಹಸ್ಥರಿಗೆ ದಕ್ಷಿಣಮಾರ್ಗ

(ಭಾಷ್ಯ)

೪೧೭. ಅಥ ಇತ್ಯರ್ಥಾನ್ತರಪ್ರಸ್ತಾವನಾರ್ಥಃ । ಯ ಇಮೇ ಗೃಹಸ್ಥಾಃ ಗ್ರಾಮೇ । ಗ್ರಾಮ ಇತಿ ಗೃಹಸ್ಥಾನಾಮ್ ಅಸಾಧಾರಣಂ ವಿಶೇಷಣಮ್ ಅರಣ್ಯವಾಸಿಭ್ಯೋ ವ್ಯಾವೃತ್ತ್ಯರ್ಥಮ್ । ಯಥಾ ವಾನಪ್ರಸ್ಥಪರಿವ್ರಾಜಕಾನಾಮ್ ಅರಣ್ಯಂ ವಿಶೇಷಣಂ ಗೃಹಸ್ಥೇಭ್ಯೋ ವ್ಯಾವೃತ್ತ್ಯರ್ಥಂ ತದ್ವತ್ । ಇಷ್ಟಾಪೂರ್ತೇ ಇಷ್ಟಮ್ ಅಗ್ನಿಹೋತ್ರಾದಿ ವೈದಿಕಂ ಕರ್ಮ, ಪೂರ್ತಂ ವಾಪೀಕೂಪತಡಾಗಾರಾಮಾದಿ ಕರಣಮ್ । ದತ್ತಂ ಬಹಿರ್ವೇದಿ ಯಥಾಶಕ್ತ್ಯರ್ಹೇಭ್ಯೋ ದ್ರವ್ಯ ಸಂವಿಭಾಗೋ ದತ್ತಮ್ ಇತಿ ಏವಂವಿಧಂ ಪರಿಚರಣಪರಿತ್ರಾಣಾದಿ ಉಪಾಸತೇ ।

ಇತಿಶಬ್ದಸ್ಯ ಪ್ರಕಾರದರ್ಶನಾರ್ಥತ್ವಾತ್। ತೇ ದರ್ಶನವರ್ಜಿತತ್ವಾತ್ ಧೂಮಂ ಧೂಮಾಭಿಮಾನಿನೀಂ ದೇವತಾಮ್ ಅಭಿಸಂಭವನ್ತಿ ಪ್ರತಿಪದ್ಯನ್ತೇ। ತಯಾ ಅತಿವಾಹಿತಾ ಧೂಮಾತ್ ರಾತ್ರಿಂ ರಾತ್ರಿದೇವತಾಂ ರಾತ್ರೇಃ ಅಪರಪಕ್ಷದೇವತಾಮ್। ಏವಮೇವ ಕೃಷ್ಣಪಕ್ಷಾಭಿಮಾನಿನೀಮ್ ಅಪರಪಕ್ಷಾದ್ ಯಾನ್ ಷಣ್ಮಾಸಾನ್ ದಕ್ಷಿಣಾ ದಕ್ಷಿಣಾಂ ದಿಶಮ್ ಏತಿ ಸವಿತಾ ತಾನ್ ಮಾಸಾನ್ ದಕ್ಷಿಣಾಯನ ಷಣ್ಮಾಸಾಭಿಮಾನಿನೀರ್ದೇವತಾಃ ಪ್ರತಿಪದ್ಯನ್ತ ಇತ್ಯರ್ಥಃ। ಸಂಘಚಾರಿಣ್ಯೋ ಹಿ ಷಣ್ಮಾಸದೇವತಾ ಇತಿ ಮಾಸಾನ್ ಇತಿ ಬಹುವಚನಪ್ರಯೋಗಸ್ತಾಸು। ನೈತೇ ಕರ್ಮಿಣಃ ಪ್ರಕೃತಾಃ ಸಂವತ್ಸರಂ ಸಂವತ್ಸರಾಭಿಮಾನಿನೀಂ ದೇವತಾಮ್ ಇಮಾಮ್ ಆಪ್ನುವನ್ತಿ। ಕುತಃ ಪುನಃ ಸಂವತ್ಸರಪ್ರಾಪ್ತಿಪ್ರಸಙ್ಗೋ ಯತಃ ಪ್ರತಿಷಿಧ್ಯತೇ? ಅಸ್ತಿ ಹಿ ಪ್ರಸಙ್ಗಃ। ಸಂವತ್ಸರಸ್ಯ ಹಿ ಏಕಸ್ಯಾವಯವಭೂತೇ ದಕ್ಷಿಣೋತ್ತರಾಯಣೇ। ತತ್ರ ಆರ್ಚಿರಾದಿಮಾರ್ಗಪ್ರವೃತ್ತಾನಾಮ್ ಉದಗಯನ ಮಾಸೇಭ್ಯೋಽವಯವಿನಃ ಸಂವತ್ಸರಸ್ಯ ಪ್ರಾಪ್ತಿರುಕ್ತಾ। ಅತ ಇಹಾಪಿ ತದವಯವ ಭೂತಾನಾಂ ದಕ್ಷಿಣಾಯನಮಾಸಾನಾಂ ಪ್ರಾಪ್ತಿಂ ಶ್ರುತ್ವಾ ತದವಯವಿನಃ ಸಂವತ್ಸರಸ್ಯಾಪಿ ಪೂರ್ವವತ್ ಪ್ರಾಪ್ತಿರಾಪನ್ನಾ ಇತ್ಯತಸ್ತತ್ಪ್ರಾಪ್ತಿಃ ಪ್ರತಿಷಿಧ್ಯತೇ 'ನೈತೇ ಸಂವತ್ಸರಮಭಿಪ್ರಾಪ್ನುವನ್ತಿ' ಇತಿ। ಮಾಸೇಭ್ಯಃ ಪಿತೃಲೋಕಂ ಪಿತೃ ಲೋಕಾತ್ ಆಕಾಶಮ್ ಆಕಾಶಾತ್ ಚನ್ದ್ರಮಸಮ್। ಕೋಽಸೌ ಯಸ್ತೈಃ ಪ್ರಾಪ್ಯತೇ ಚನ್ದ್ರಮಾಃ? ಯ ಏಷ ದೃಶ್ಯತೇ ಅನ್ತರಿಕ್ಷೇ ಸೋಮೋ ರಾಜಾ ಬ್ರಾಹ್ಮಣಾನಾಮ್। ತದನ್ನಂ ದೇವಾನಾಂ। ತಂ ಚನ್ದ್ರಮಸಮನ್ನಂ ದೇವಾ ಇನ್ದ್ರಾದಯೋ ಭಕ್ಷಯನ್ತಿ। ಅತಸ್ತೇ ಧೂಮಾದಿನಾ ಗತ್ವಾ ಚನ್ದ್ರಭೂತಾಃ ಕರ್ಮಿಣೋ ದೇವೈರ್ಭಕ್ಷ್ಯನ್ತೇ ॥

(ಭಾಷ್ಯಾರ್ಥ)

'ಇನ್ನು' ಎಂಬ (ಮಾತು) ಮತ್ತೊಂದು ವಿಷಯವನ್ನು ಪ್ರಸ್ತಾಪಿಸುವದಕ್ಕಾಗಿ. ಈ ಗೃಹಸ್ಥರಿದಾರಲ್ಲ, ಗ್ರಾಮದಲ್ಲಿ—ಗ್ರಾಮದಲ್ಲಿ ಎಂದು ಗೃಹಸ್ಥರಿಗೆ ಅಸಾಧಾರಣವಾಗಿರುವ ವಿಶೇಷಣವನ್ನು ಕೊಟ್ಟಿರುವದು ಅರಣ್ಯವಾಸಿಗಳಾದವರನ್ನು ಕೈಬಿಡುವದಕ್ಕಾಗಿ. ಹೇಗೆ ವಾನಪ್ರಸ್ಥಪರಿವ್ರಾಜಕರಿಗೆ ಅರಣ್ಯವೆಂಬ ವಿಶೇಷಣವು ಗೃಹಸ್ಥರಿಂದ ಅವರನ್ನು ಬಿಡಿಸಿ ಹೇಳುವದಕ್ಕೋ ಹಾಗೆಯೇ ಇದು—ಇಷ್ಟಾಪೂರ್ತಗಳನ್ನು, ಇಷ್ಟವೆಂದರೆ ಅಗ್ನಿಹೋತ್ರವೇ ಮುಂತಾದ ವೈದಿಕ ಕರ್ಮವು, ಪೂರ್ತವೆಂದರೆ ಬಾವಿ, ಕುಂಟೆ, ಕೆರೆ, ತೋಟ- ಮುಂತಾದವುಗಳನ್ನು ಮಾಡಿಸುವದು, ದತ್ತವು ವೇದಿಯ ಹೊರಗೆ[1] ಶಕ್ತಿಯಿದ್ದಷ್ಟುಮಟ್ಟಿಗೆ

1. ಯಜ್ಞದಲ್ಲಿ ಕೊಡುವ ದಕ್ಷಿಣೆಯಲ್ಲದೆ ಕೊಡುವ (ದಾನವು).

ಯೋಗ್ಯರಾದವರಿಗೆ ದ್ರವ್ಯವನ್ನು ಹಂಚುವದೇ ದತ್ತವು, ಇತಿ ಈ ಬಗೆಯ, ಪರಿಚರಣ[1], ಪರಿತ್ರಾಣವೇ ಮುಂತಾದ[2]ವುಗಳನ್ನು ಉಪಾಸನೆಮಾಡುವರೋ, ಎಂದರ್ಥ, ಏಕೆಂದರೆ (ಇಲ್ಲಿರುವ) ಇತಿಶಬ್ದವು ಪ್ರಕಾರವನ್ನು ತಿಳಿಸುವದಕ್ಕೆ ಬಂದಿದೆ.

(ಹೀಗೆ ಯಾರು ಉಪಾಸನೆಮಾಡುವರೋ) ಅವರು ಜ್ಞಾನರಹಿತರಾಗಿರುವದರಿಂದ[3] ಧೂಮವನ್ನು ಧೂಮದಭಿಮಾನಿಯಾದ ದೇವತೆಯನ್ನು ಸೇರುತ್ತಾರೆ, ಪಡೆದುಕೊಳ್ಳುತ್ತಾರೆ. ಆ ದೇವತೆಯು ಕರೆದುಕೊಂಡುಹೋಗಲು ಧೂಮದಿಂದ ರಾತ್ರಿಯನ್ನು ರಾತ್ರಿದೇವತೆಯನ್ನು, ರಾತ್ರೆಯಿಂದ ಅಪರಪಕ್ಷದೇವತೆಯನ್ನು. ಇದರಂತೆಯೇ ಕೃಷ್ಣಪಕ್ಷಾಭಿಮಾನಿದೇವತೆಯನ್ನು, ಅಪರಪಕ್ಷದಿಂದ ಯಾವ ಆರು ತಿಂಗಳುಗಳವರೆಗೆ (ದಕ್ಷಿಣಾ=ದ್ದಕ್ಷಿಣಾಂ) ದಕ್ಷಿಣದಿಕ್ಕಿಗೆ ಸೂರ್ಯನು ಹೋಗುತ್ತಿರುತ್ತಾನೋ ಆ ಮಾಸಗಳನ್ನು ದಕ್ಷಿಣಾಯನದ ಆರುಮಾಸಗಳ ಅಭಿಮಾನಿಗಳಾದ ದೇವತೆಗಳನ್ನು ಸೇರುತ್ತಾರೆ ಎಂದರ್ಥ. ಷಣ್ಮಾಸದೇವತೆಗಳು ಸಂಘವಾಗಿಯೇ ಸಂಚರಿಸುವದರಿಂದ 'ಷಣ್ಮಾಸದೇವತೆಗಳನ್ನು' ಎಂದು ಅವರ ವಿಷಯದಲ್ಲಿ ಬಹುವಚನಪ್ರಯೋಗವನ್ನು ಮಾಡಿರುತ್ತದೆ.

ಈ ಪ್ರಕೃತರಾದ ಕರ್ಮಿಗಳು ಸಂವತ್ಸರವನ್ನು ಸಂವತ್ಸರಾಭಿಮಾನಿಯಾದ ದೇವತೆಯನ್ನು ಸೇರುವದಿಲ್ಲ.

(ಆಕ್ಷೇಪ) :- ಇವರು (ಸಂವತ್ಸರವನ್ನು ಸೇರುವದಿಲ್ಲ) ಎಂದು ಅಲ್ಲಗಳೆದಿದೆಯಲ್ಲ, ಸಂವತ್ಸರವನ್ನು ಸೇರುವ ಪ್ರಸಂಗವೆಲ್ಲಿಂದ ಬಂತು ?

(ಪರಿಹಾರ) .- ಪ್ರಸಂಗವು ಇದ್ದೇಇದೆ. (ಹೇಗೆಂದರೆ) ಒಂದೇ ಸಂವತ್ಸರಕ್ಕಲ್ಲವೆ, ದಕ್ಷಿಣೋತ್ತರಾಯನಗಳೆರಡೂ ಅವಯವಗಳಾಗಿರುತ್ತವೆ ? ಇವುಗಳಲ್ಲಿ ಅರ್ಚಿರಾದಿಮಾರ್ಗದಲ್ಲಿ ಹೊರಟವರಿಗೆ ಉತ್ತರಾಯಣಮಾಸಗಳಿಂದ ಅವಯವಿಯಾದ ಸಂವತ್ಸರದ ಪ್ರಾಪ್ತಿಯನ್ನು ಹೇಳಲಾಗಿದೆ, ಆದ್ದರಿಂದ ಇಲ್ಲಿಯೂ ಆ (ಸಂವತ್ಸರದ) ಅವಯವಗಳಾಗಿರುವ ದಕ್ಷಿಣಾಯನಮಾಸಗಳ ಪ್ರಾಪ್ತಿ(ಯಾಗುವ)ದೆಂಬುದನ್ನು ಹೇಳಿದ್ದರಿಂದ ಅವುಗಳ ಅವಯವಿಯಾದ ಸಂವತ್ಸರವನ್ನು ಹಿಂದಿನಂತೆ ಪಡೆಯುತ್ತಾರೆಂದಾಗುತ್ತದೆ. ಆದ್ದರಿಂದ ಅದನ್ನು ಪಡೆಯುವದೆಂಬುದನ್ನು 'ಇವರು ಸಂವತ್ಸರವನ್ನು ಪಡೆಯುವದಿಲ್ಲ' ಎಂದು (ಇಲ್ಲಿ) ನಿಷೇಧಿಸಿರುತ್ತದೆ.

---

1. ಗುರುಶುಶ್ರೂಷೆ.
2. ಕಾಪಾಡುವದು_ ಮುಂತಾದದ್ದು ಎಂದರೆ ಅಧ್ಯಯನ ಮುಂತಾದದ್ದು. ಅ. ಗಿ.
3. ಪಂಚಾಗ್ನಿಯ ಅಥವಾ ಹಿರಣ್ಯಗರ್ಭಾದಿಗಳ ಉಪಾಸನೆಯಿಲ್ಲದವರಾದ್ದರಿಂದ.

ಮಾಸಗಳಿಂದ ಪಿತೃಲೋಕವನ್ನು, ಪಿತೃಲೋಕದಿಂದ ಆಕಾಶವನ್ನು[1], ಆಕಾಶದಿಂದ ಚಂದ್ರನನ್ನು (ಸೇರುತ್ತಾರೆ). ಅವರು ಪಡೆದುಕೊಳ್ಳುವ ಈ ಚಂದ್ರನೆಂದರೆ ಯಾರು ? ಅಂತರಿಕ್ಷದಲ್ಲಿ ಕಾಣುತ್ತಿರುವ ಸೋಮನೆಂಬ ಬ್ರಾಹ್ಮಣರ ರಾಜನಿರುತ್ತಾನಲ್ಲ, (ಅವನು) ಅದೇ ದೇವತೆಗಳಿಗೆ ಅನ್ನವು. ಆ ಚಂದ್ರನೆಂಬ ಅನ್ನವನ್ನು ಇಂದ್ರಾದಿದೇವತೆಗಳು ಭಕ್ಷಿಸುತ್ತಾರೆ. ಆದ್ದರಿಂದ ಧೂಮಾದಿಮಾರ್ಗದಿಂದ ಹೋಗಿ ಚಂದ್ರ(ಸ್ವರೂಪ)ದ ಆ ಕರ್ಮಿಗಳನ್ನು ದೇವತೆಗಳು ಭಕ್ಷಿಸುತ್ತಾರೆ.

## ಕರ್ಮಿಗಳು ದೇವತೆಗಳಿಗೆ ಭಕ್ಷ್ಯವಾಗುತ್ತಾರೆಂದರೇನು ?

(ಭಾಷ್ಯ)

೪೦೮ ನನ್ವನರ್ಥಾಯೇಷ್ಟಾದಿಕರಣಂ ಯದ್ಯನ್ನಭೂತಾ ದೇವೈರ್ಭಕ್ಷ್ಯೇರನ್ । ನೈಷ ದೋಷಃ । ಅನ್ನಮ್ ಇತ್ಯುಪಕರಣಮಾತ್ರಸ್ಯ ವಿವಕ್ಷಿತತ್ವಾತ್ । ನ ಹಿ ತೇ ಕವಲೋತ್ಕ್ಷೇಪೇಣ ದೇವೈರ್ಭಕ್ಷ್ಯಂತೇ । ಕಿಂ ತರ್ಹಿ, ಉಪಕರಣಮಾತ್ರಂ ದೇವಾನಾಂ ಭವನ್ತಿ ತೇ ಸ್ತ್ರೀಪಶುಭೃತ್ಯಾದೀವತ್ । ದೃಷ್ಟಶ್ಚಾನ್ನಶಬ್ದ ಉಪಕರಣೇಷು ಸ್ತ್ರಿಯೋಽನ್ನಂ ಪಶವೋಽನ್ನಂ ವಿಶೋಽನ್ನಂ ರಾಜ್ಞಾಮಿತ್ಯಾದಿ । ನ ಚ ತೇಷಾಂ ಸ್ತ್ರ್ಯಾದೀನಾಂ ಪುರುಷೋಪಭೋಗ್ಯತ್ವೇಽಪಿ ಉಪಭೋಗೋ ನಾಸ್ತಿ । ತಸ್ಮಾತ್ ಕರ್ಮಿಣೋ ದೇವಾನಾಮ್ ಉಪಭೋಗಾ ಅಪಿ ಸನ್ತಃ ಸುಖಿನೋ ದೇವೈಃ ಕ್ರೀಡನ್ತಿ । ಶರೀರಂ ಚ ತೇಷಾಂ ಸುಖೋಪಭೋಗಯೋಗ್ಯಂ ಚನ್ದ್ರಮಣ್ಡಲೇ ಆಪ್ಯಮಾರಭ್ಯತೇ । ತದುಕ್ತಂ ಪುರಸ್ತಾತ್ ಶ್ರದ್ಧಾಶಬ್ದಾ ಆಪೋ ದ್ಯುಲೋಕಾಗ್ನೌ ಹುತಾಃ ಸೋಮೋ ರಾಜಾ ಸಂಭವತೀತಿ । ತಾ ಆಪಃ ಕರ್ಮಸಮವಾಯಿನ್ಯಃ ಇತರೈಶ್ಚ ಭೂತೈರನುಗತಾ ದ್ಯುಲೋಕಂ ಪ್ರಾಪ್ಯ ಚನ್ದ್ರತ್ವಮಾಪನ್ನಾಃ ಶರೀರಾದ್ಯಾರಮ್ಭಿಕಾ ಇಷ್ಟಾದ್ಯುಪಾಸಕಾನಾಂ ಭವನ್ತಿ । ಅನ್ತ್ಯಾಯಾಂ ಚ ಶರೀರಾಹುತಾವಗ್ನೌ ಹುತಾಯಾಮ್ ಅಗ್ನಿನಾ ದಹ್ಯಮಾನೇ ಶರೀರೇ ತದುತ್ಥಾ ಆಪೋ ಧೂಮೇನ ಸಹೋರ್ಧ್ವಂ ಯಜಮಾನಮಾವೇಷ್ಟ್ಯ ಚನ್ದ್ರಮಣ್ಡಲಂ ಪ್ರಾಪ್ಯ ಕುಶಮೃತ್ತಿಕಾಸ್ಥಾನೀಯಾ ಬಾಹ್ಯಶರೀರಾರಮ್ಭಿಕಾ ಭವನ್ತಿ । ತದಾರಬ್ಧೇನ ಚ ಶರೀರೇಣೇಷ್ಟಾದಿಫಲಮುಪಭುಞ್ಜಾನಾ ಆಸತೇ ಯಾವತ್ ತದುಪಭೋಗನಿಮಿತ್ತಸ್ಯ ಕರ್ಮಣಃ ಕ್ಷಯಃ[2] ॥

---

1. ಬೃ. ೬_೨_೧೬ರಲ್ಲಿ 'ಆಕಾಶ'ವನ್ನು ಹೇಳಿಲ್ಲ. ಇದನ್ನು ಅಲ್ಲಿ ಸೇರಿಸಿಕೊಳ್ಳಬೇಕು.

2. ಈ ವಾಕ್ಯವು ಇಲ್ಲಿಗೇ ಸೇರಬೇಕಾದದ್ದು. ಇದನ್ನು ಅಚ್ಚಿನ ಪುಸ್ತಕಗಳಲ್ಲಿ ಮುಂದಿನ ಕಂಡಿಕೆಯ ವ್ಯಾಖ್ಯಾನಕ್ಕೆ ಸೇರಿಸಲಾಗಿದೆ.

(ಭಾಷ್ಯಾರ್ಥ)

(ಆಕ್ಷೇಪ) :- ಅನ್ನವಾಗಿ ದೇವತೆಗಳಿಗೆ ಭಕ್ಷ್ಯವಾಗುವದಾದರೆ ಇಷ್ಟಾದಿಗಳನ್ನು ಮಾಡುವದು ಅನರ್ಥಕ್ಕೆ ಕಾರಣವೆಂದೇ ಆಯಿತಲ್ಲ !

(ಪರಿಹಾರ) .- ಇದೇನೂ ದೋಷವಲ್ಲ ಏಕೆಂದರೆ ಅನ್ನವೆಂದರೆ ಬರಿಯ ಉಪಕರಣವೆಂದೇ (ಇಲ್ಲಿ) ವಿವಕ್ಷಿತವಾಗಿರುತ್ತಾರೆ ತುತ್ತನ್ನು ಎತ್ತಿ (ತಿನ್ನುವಂತೆ) ಅವರನ್ನು ದೇವತೆಗಳೇನೂ ತಿನ್ನುವದಿಲ್ಲ, ಮತ್ತೇನೆಂದರೆ ಅವರು ದೇವತೆಗಳಿಗೆ ಸ್ತ್ರೀಪಶುಭೃತ್ಯಾದಿಗಳಂತೆ ಉಪಕರಣಮಾತ್ರವಾಗಿರುತ್ತಾರೆ, ಅಷ್ಟೆ 'ಸ್ತ್ರೀಯರು ಅನ್ನವು', 'ಪಶುಗಳು ಅನ್ನವು' 'ಪ್ರಜೆಗಳು ರಾಜರಿಗೆ ಅನ್ನವು'[1] ಎಂದು ಮುಂತಾಗಿ ಉಪಕರಣಗಳ (ವಿಷಯ)ದಲ್ಲಿ ಅನ್ನಶಬ್ದವನ್ನು (ಪ್ರಯೋಗಿಸುವದು) ಕಂಡುಬಂದಿದೆ. ಆ ಸ್ತ್ರೀಯರೇ ಮುಂತಾದವರು ಪುರುಷ(ರೇ ಮುಂತಾದವರಿಗೆ) ಉಪಭೋಗ್ಯರಾಗಿದ್ದರೂ (ಅವರಿಗೆ) ಉಪಭೋಗವೇ ಇರುವದಿಲ್ಲವೆಂದಿಲ್ಲ[2] ಆದ್ದರಿಂದ ಕರ್ಮಿಗಳು ದೇವತೆಗಳಿಗೆ ಉಪಭೋಗ್ಯರಾಗಿದ್ದರೂ ಸುಖದಿಂದ ದೇವತೆಗಳೊಡನೆ ಕ್ರೀಡಿಸುತ್ತಿರುತ್ತಾರೆ ಮತ್ತು ಅವರಿಗೆ ಸುಖೋಪಭೋಗಕ್ಕೆ ತಕ್ಕ ಅಮ್ಮಯಶರೀರವೂ ಚಂದ್ರಮಂಡಲದಲ್ಲಿ ಉಂಟಾಗುತ್ತವೆ.[3] ಇದನ್ನು ಹಿಂದೆಯೇ ಶ್ರದ್ಧಾಶಬ್ದ(ವಾಚ್ಯವಾದ) ಅಪ್ಪು ದ್ಯುಲೋಕಾಗ್ನಿಯಲ್ಲಿ ಹುತವಾಗಲು ಸೋಮರಾಜನು ಉಂಟಾಗುತ್ತಾನೆ (೫-೪-೨) ಎಂದು ಹೇಳಿದೆ. ಕರ್ಮಸಂಬದ್ಧವಾದ ಆ ಅಪ್ಪು ಮಿಕ್ಕ ಭೂತಗಳೊಡನೆಯೂ ಅನುಗತವಾಗಿ ದ್ಯುಲೋಕವನ್ನು ಹೊಂದಿ ಚಂದ್ರತ್ವವನ್ನು ಪಡೆದುಕೊಂಡು ಇಷ್ಟಾದ್ಯುಪಾಸಕರ ಶರೀರವೇ ಮುಂತಾದವನ್ನು ಉಂಟುಮಾಡುತ್ತದೆ. ಕೊನೆಯದಾದ ಶರೀರಾಹುತಿಯನ್ನು ಅಗ್ನಿಯಲ್ಲಿ ಹೋಮಮಾಡಲಾಗಿ ಶರೀರವು ಅಗ್ನಿಯಲ್ಲಿ ದಗ್ಧವಾಗಲು ಅದರಿಂದ ಎದ್ದ ಅಪ್ಪು ಧೂಮದೊಡನೆ ಮೇಲಕ್ಕೆ ಯಜಮಾನನನ್ನು ಸುತ್ತಿಕೊಂಡು ಚಂದ್ರಮಂಡಲವನ್ನು ಸೇರಿ ಹುಲ್ಲುಮಣ್ಣು- ಮುಂತಾದವುಗಳಂತೆ[4] ಹೊರಗಿನ ಶರೀರವನ್ನುಂಟುಮಾಡುತ್ತದೆ. ಆದರಿಂದಾದ ಶರೀರದಿಂದ (ಅವರು) ಇಷ್ಟಾದಿಗಳ ಫಲವನ್ನು ಉಪಭೋಗಿಸುತ್ತಾ ಆ ಉಪಭೋಗಕ್ಕೆ ನಿಮಿತ್ತವಾದ ಕರ್ಮವು ಕ್ಷಯವಾಗುವವರೆಗೂ ಇದ್ದುಕೊಂಡಿರುತ್ತಾರೆ.

---

1. ಇಲ್ಲಿ ಅನ್ನವಾಗಿ ಭಕ್ಷಿತರಾಗುವವೆಂದರೆ ಉಪಕರಣರಾಗಿರುವದೇ ಎಂಬುದಕ್ಕೆ ಸೂ. ಭಾ. ೩-೧-೭ (ಭಾ. ಭಾ. ೨೨೦)ನ್ನು ನೋಡಿ ಅಲ್ಲಿ 'ವಿಶೋಽನ್ನಂ ರಾಜ್ಞಾಂ ಪಶವೋಽನ್ನಂ ವಿಶಾಮ್' ಎಂದು ಉದಾಹರಣೆಕೊಟ್ಟಿದೆ.

2. ಸ್ತ್ರೀಯರು ಪುರುಷರಿಗೂ, ದನಗಳು ಜನರಿಗೂ, ಜನರು ರಾಜರಿಗೂ ಭೋಗೋಪಕರಣವಾಗಿದ್ದರೂ ತಾವುತಾವೂ ಸುಖೋಪಭೋಗವನ್ನು ಮಾಡುತ್ತಲೂ ಇರುತ್ತಾರೆ.

3. ಆದ್ದರಿಂದ ಅಲ್ಲಿ ಉಪಭೋಗಕ್ಕೆ ಸಾಧನವಿಲ್ಲವೆಂಬುದಿಲ್ಲ.

4. ಮನೆಯ ಗೋಡೆಗೆ ಉಪಯೋಗಿಸುವ ಸಾಮಗ್ರಿಗಳಂತೆ ಎಂದರ್ಥ.

# ಇಷ್ಟಾದಿಕಾರಿಗಳು ಈ ಲೋಕಕ್ಕೆ ಬರುವ ಕ್ರಮ

(ಉಪನಿಷತ್ತು)

**ತಸ್ಮಿನ್ ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನ ರ್ನಿವರ್ತನ್ತೇ ಯಥೇತಮಾಕಾಶಮಾಕಾಶಾದ್ವಾಯುಂ ವಾಯು ರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಭ್ರಂ ಭವತಿ ॥೫॥**

೫. ಅದರಲ್ಲಿ ಸಂಪಾತದವರೆಗೂ ಇದ್ದುಕೊಂಡಿದ್ದು ಇನ್ನು ಇದೇ ಮಾರ್ಗದಲ್ಲಿ ಹೋಗಿದ್ದ ರೀತಿಯಿಂದ ಮತ್ತೆ ಹಿಂತಿರುಗುವರು. ಆಕಾಶವನ್ನು, ಆಕಾಶದಿಂದ ವಾಯುವನ್ನು ; ವಾಯುವಾಗಿ ಧೂಮ ವಾಗುವನು, ಧೂಮವಾಗಿ ಅಭ್ರವಾಗುವನು.

(ಭಾಷ್ಯ)

೪೧೯. ಸಂಪತನ್ತಿ ಯೇನ ಇತಿ ಸಂಪಾತಃ ಕರ್ಮಣಃ ಕ್ಷಯಃ। ಯಾವತ್ಸಂ ಪಾತಂ ಯಾವತ್ಕರ್ಮಣಃ ಕ್ಷಯಃ ಇತ್ಯರ್ಥಃ। ತಾವತ್ ತಸ್ಮಿನ್ ಚನ್ದ್ರ ಮಣ್ಡಲೇ ಉಷಿತ್ವಾ ಅಥ ಅನನ್ತರಮ್ ಏತಮೇವ ವಕ್ಷ್ಯಮಾಣಮ್ ಅಧ್ವಾನಂ ಮಾರ್ಗಂ ಪುನರ್ನಿವರ್ತನ್ತೇ। ಪುನರ್ನಿವರ್ತನ್ತ ಇತಿ ಪ್ರಯೋಗಾತ್ ಪೂರ್ವ ಮಪಿ ಅಸಕೃಚ್ಚನ್ದ್ರಮಣ್ಡಲಂ ಗತಾ ನಿವೃತ್ತಾಶ್ಚಾಽಽಸನ್ನಿತಿ ಗಮ್ಯತೇ। ತಸ್ಮಾ ದಿಹ ಲೋಕೇ ಇಷ್ಟಾದಿಕರ್ಮ ಉಪಚಿತ್ಯ ಚನ್ದ್ರಂ ಗಚ್ಛನ್ತಿ। ತತ್ಕ್ಷಯೇ ಚಾಽಽವರ್ತನ್ತೇ। ಕ್ಷಣಮಾತ್ರಮಪಿ ತತ್ರ ಸ್ಥಾತುಂ ನ ಲಭ್ಯತೇ। ಸ್ಥಿತಿನಿಮಿತ್ತ ಕರ್ಮಕ್ಷಯಾತ್। ಸ್ನೇಹಕ್ಷಯಾದಿವ ಪ್ರದೀಪಸ್ಯ ॥

(ಭಾಷ್ಯಾರ್ಥ)

ಯಾವದರಿಂದ ಕೆಳಕ್ಕೆ ಬೀಳುತ್ತಾರೋ (ಅದು) ಸಂಪಾತವು, ಕರ್ಮದ ಕ್ಷಯವು. ಸಂಪಾತದವರೆಗೂ ಎಂದರೆ ಕರ್ಮವು ಕ್ಷಯವಾಗುವವರೆಗೂ ಎಂದರ್ಥ. (ಕರ್ಮವು ಎಲ್ಲಿಯವರೆಗೆ ಕ್ಷಯವಾಗದೆ ಇರುವದೋ) ಅಲ್ಲಿಯವರೆಗೂ ಆ ಚಂದ್ರ ಮಂಡಲದಲ್ಲಿ ಇದ್ದುಕೊಂಡಿದ್ದು ಇನ್ನು ಆಮೇಲೆ ಇದೇ ಮುಂದೆ ಹೇಳುವ ಮಾರ್ಗಕ್ಕೆ ಮತ್ತೆ ಹಿಂತಿರುಗುತ್ತಾರೆ. 'ಮತ್ತೆ' ಹಿಂತಿರುಗುತ್ತಾರೆ ಎಂದು ಪ್ರಯೋಗಿಸಿರುವದರಿಂದ ಹಿಂದೆಯೂ ಹಲವು ಬಾರಿ ಚಂದ್ರಮಂಡಲಕ್ಕೆ ಹೋಗಿ ಯೂ ಹಿಂತಿರುಗಿಯೂ ಇದ್ದರು ಎಂದು ತಿಳಿಯಬೇಕಾಗಿದೆ. ಆದ್ದರಿಂದ ಈ ಲೋಕದಲ್ಲಿ ಇಷ್ಟಾದಿಕರ್ಮವನ್ನು ಕೂಡಿಹಾಕಿಕೊಂಡಿದ್ದು ಚಂದ್ರನನ್ನು ಸೇರು ತ್ತಾರೆ; ಅದು ಸವೆಯಲು ಹಿಂತಿರುಗುತ್ತಾರೆ. ಇರುವದಕ್ಕೆ ನಿಮಿತ್ತವಾದ ಕರ್ಮವು ಸವೆಯುವದರಿಂದ, ಎಣ್ಣೆತೀರಿದ ದೀಪದಂತೆ (ಒಂದು) ಕ್ಷಣದವರೆಗೆ ಕೂಡ ಅಲ್ಲಿರುವದು (ಅವರಿಗೆ) ಲಭಿಸುವದಿಲ್ಲ.

# ಕರ್ಮಶೇಷದಿಂದ ಇಷ್ಟಾದಿಕಾರಿಗಳು ಇಳಿಯುತ್ತಾರೆ

(ಭಾಷ್ಯ)

೪೧೦. ತತ್ರ ಕಿಂ ಯೇನ ಕರ್ಮಣಾ ಚನ್ದ್ರಮಣ್ಡಲಮಾರೂಢಾಃ, ತಸ್ಯ ಸರ್ವಸ್ಯ ಕ್ಷಯೇ ತಸ್ಮಾದವರೋಹಣಮ್, ಕಿಂ ವಾ ಸಾವಶೇಷೇ ಇತಿ? ಕಿಂ ತತಃ? ಯದಿ ಸರ್ವಸ್ಯೈವ ಕ್ಷಯಃ ಕರ್ಮಣಃ, ಚನ್ದ್ರಮಣ್ಡಲಸ್ಥಸ್ಯೈವ ಮೋಕ್ಷಃ ಪ್ರಾಪ್ನೋತಿ। ತಿಷ್ಠತು ತಾವತ್ ತತ್ರೈವ ಮೋಕ್ಷಃ ಸ್ಯಾನ್ನವೇತಿ। ತತ ಆಗತಸ್ಯೇಹ ಶರೀರೋಪಭೋಗಾದಿ ನ ಸಂಭವತಿ। "ತತಃ ಶೇಷೇಣ" (ಗೌ ಧ ೨-೨-೨೯) ಇತ್ಯಾದಿಸ್ಮೃತಿವಿರೋಧಶ್ಚ ಸ್ಯಾತ್। ನನ್ವಿಷ್ಟಾಪೂರ್ತದತ್ತವ್ಯತಿರೇಕೇಣಾಪಿ ಮನುಷ್ಯಲೋಕೇ ಶರೀರೋಪಭೋಗನಿಮಿತ್ತಾನಿ ಕರ್ಮಾಣ್ಯನೇಕಾನಿ ಸಂಭವನ್ತಿ। ನ ಚ ತೇಷಾಂ ಚನ್ದ್ರಮಣ್ಡಲ ಉಪಭೋಗಃ। ಅತೋಽಕ್ಷೀಣಾನಿ ತಾನಿ। ಯನ್ನಿಮಿತ್ತಂ ಚನ್ದ್ರಮಣ್ಡಲಮಾರೂಢಸ್ತಾನ್ಯೇವ ಕ್ಷೀಣಾನೀತ್ಯವಿರೋಧಃ। ಶೇಷಶಬ್ದಶ್ಚ ಸರ್ವೇಷಾಂ ಕರ್ಮತ್ವಸಾಮಾನ್ಯಾದವಿರುದ್ಧಃ। ಅತ ಏವ ಚ ತತ್ರೈವ ಮೋಕ್ಷಃ ಸ್ಯಾದಿತಿ ದೋಷಾಭಾವಃ। ವಿರುದ್ಧಾನೇಕಯೋನ್ಯುಪಭೋಗಫಲಾನಾಂ ಚ ಕರ್ಮಣಾಮೇಕೈಕಸ್ಯ ಜನ್ತೋರಾರಮ್ಭಕತ್ವಸಂಭವಾತ್। ನ ಚೈಕಸ್ಮಿಞ್ಜನ್ಮನಿ ಸರ್ವಕರ್ಮಣಾಂ ಕ್ಷಯ ಉಪಪದ್ಯತೇ। ಬ್ರಹ್ಮಹತ್ಯಾದೇಶ್ಚೈಕೈಕಸ್ಯ ಕರ್ಮಣೋಽನೇಕಜನ್ಮಾರಮ್ಭಕತ್ವಸ್ಮರಣಾತ್। ಸ್ಥಾವರಾದಿಪ್ರಾಪ್ತಾನಾಂ ಚಾತ್ಯನ್ತಮೂಢಾನಾಮುತ್ಕರ್ಷಹೇತೋಃ ಕರ್ಮಣ ಆರಮ್ಭಕತ್ವಾಸಂಭವಾತ್। ಗರ್ಭಭೂತಾನಾಂ ಚ ಸ್ರಂಸಮಾನಾನಾಂ ಕರ್ಮಾಸಂಭವೇ ಸಂಸಾರಾನುಪಪತ್ತಿಃ। ತಸ್ಮಾನ್ನೈಕಸ್ಮಿಞ್ಜನ್ಮನಿ ಸರ್ವೇಷಾಂ ಕರ್ಮಣಾಮುಪಭೋಗಃ। ಯತ್ತು ಕೈಶ್ಚಿದುಚ್ಯತೇ ಸರ್ವಕರ್ಮಾಶ್ರಯೋಪಮರ್ದೇನ ಪ್ರಾಯೇಣ ಕರ್ಮಣಾಂ ಜನ್ಮಾರಮ್ಭಕತ್ವಮ್। ತತ್ರ ಕಾನಿಚಿತ್ ಕರ್ಮಾಣಿ ಅನಾರಮ್ಭಕತ್ವೇನೈವ ತಿಷ್ಠನ್ತಿ, ಕಾನಿಚಜ್ಜನ್ಮಾಽಽರಭನ್ತ ಇತಿ ನೋಪಪದ್ಯತೇ। ಮರಣಸ್ಯ ಸರ್ವಕರ್ಮಾಭಿವ್ಯಞ್ಜಕತ್ವಾತ್ ಸ್ವಗೋಚರಾಭಿವ್ಯಞ್ಜಕಪ್ರದೀಪವದಿತಿ। ತದಸತ್। ಸರ್ವಸ್ಯ ಸರ್ವಾತ್ಮಕತ್ವಾಭ್ಯುಪಗಮಾತ್। ನ ಹಿ ಸರ್ವಸ್ಯ ಸರ್ವಾತ್ಮಕತ್ವೇ ದೇಶಕಾಲನಿಮಿತ್ತಾವರುದ್ಧತ್ವಾತ್ ಸರ್ವಾತ್ಮನಾ ಉಪಮರ್ದಃ ಕಸ್ಯಚಿತ್ ಕ್ವಚಿದಭಿವ್ಯಕ್ತಿರ್ವಾ ಸರ್ವಾತ್ಮನಾ ಉಪಪದ್ಯತೇ। ತಥಾ ಕರ್ಮಣಾಮಪಿ ಸಾಶ್ರಯಾಣಾಂ ಭವೇತ್। ಯಥಾ ಚ ಪೂರ್ವಾನುಭೂತಮನುಷ್ಯಮಯೂರಮರ್ಕಟಾದಿಜನ್ಮಾಭಿಸಂಸ್ಕೃತಾ ವಿರುದ್ಧಾನೇಕವಾಸನಾ ಮರ್ಕಟತ್ವಪ್ರಾಪಕೇಣ ಕರ್ಮಣಾ ಮರ್ಕಟಜನ್ಮಾರಭಮಾಣೇನ ನೋಪಮೃದ್ಯನ್ತೇ ತಥಾ ಕರ್ಮಾಣ್ಯಪ್ಯನ್ಯಜನ್ಮಪ್ರಾಪ್ತಿನಿಮಿತ್ತಾನಿ ನೋಪಮೃದ್ಯನ್ತ ಇತಿ ಯುಕ್ತಮ್। ಯದಿ ಹಿ ಸರ್ವಾಃ ಪೂರ್ವಜನ್ಮಾನುಭವವಾಸನಾ ಉಪಮೃದ್ಯೇರನ್ ಮರ್ಕಟ

ಜನ್ಮನಿಮಿತ್ತೇನ ಕರ್ಮಣಾ ಮರ್ಕಟಜನ್ಮನ್ಯಾರಬ್ಧೇ ಮರ್ಕಟಸ್ಯ ಜಾತಮಾತ್ರಸ್ಯ ಮಾತುಃ ಶಾಖಾಯಾಃ ಶಾಖಾನ್ತರಗಮನೇ ಮಾತುರುದರಸಲ್ಲಗ್ನತ್ವಾದಿಕೌಶಲಂ ನ ಪ್ರಾಪ್ನೋತಿ। ಇಹ ಜನ್ಮನ್ಯನಭ್ಯಸ್ತತ್ವಾತ್। ನ ಚಾತೀತಾನನ್ತರಜನ್ಮನಿ ಮರ್ಕಟತ್ವಮೇವಾಽಽಸೀತ್ತಸ್ಯ ಇತಿ ಶಕ್ಯಂ ವಕ್ತುಮ್। "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ" (ಬೃ. ೪-೪-೨) ಇತಿ ಶ್ರುತೇಃ। ತಸ್ಮಾದ್ ವಾಸನಾವನ್ನಾಶೇಷಕರ್ಮೋಪಮರ್ದಃ ಇತಿ ಶೇಷಕರ್ಮಸಂಭವಃ। ಯತ ಏವಂ ತಸ್ಮಾಚ್ಛೇಷೇಣೋಪಭುಕ್ತಾತ್ ಕರ್ಮಣಃ ಸಂಸಾರ ಉಪಪದ್ಯತ ಇತಿ ನ ಕಶ್ಚಿದ್ವಿರೋಧಃ ॥

(ಭಾಷ್ಯಾರ್ಥ)

(ಪ್ರಶ್ನೆ):- ಇಲ್ಲಿ ಯಾವ ಕರ್ಮದಿಂದ ಚಂದ್ರಮಂಡಲಕ್ಕೆ ಏರಿದ್ದನೋ ಅದೆಲ್ಲವೂ ಸವೆದಮೇಲೆ ಅಲ್ಲಿಂದ ಇಳಿಯುತ್ತಾನೊ, ಅಥವಾ (ಇನ್ನೂ ಸ್ವಲ್ಪ) ಉಳಿದಿರುವಾಗ (ಇಳಿಯುತ್ತಾನೊ) ?

(ಸಿದ್ಧಾಂತಿ):- ಇವರಿಂದ ಏನು (ಫಲವಿಶೇಷ) ?

(ಪ್ರಶ್ನೆಮಾಡಿದವ) - ಕರ್ಮವೆಲ್ಲವೂ ಕ್ಷಯವಾದರೆ[1] ಚಂದ್ರಮಂಡಲದಲ್ಲಿರುವಾಗಲೇ ಮೋಕ್ಷವಾಗಿಬಿಡುತ್ತದೆ. ಅಲ್ಲಿಯೇ ಮೋಕ್ಷವಾಗುತ್ತದೆಯೊ, ಇಲ್ಲವೊ- ಎನ್ನುವದು ಹಾಗಿರಲಿ, ಅಲ್ಲಿಂದ ಬಂದಮೇಲೆ (ಅವನಿಗೆ) ಶರೀರ ಉಪಭೋಗಿನುವದು ಮುಂತಾದದ್ದು ಹೊರಡುವದೇ ಇಲ್ಲ. ಮತ್ತು 'ಅದರ ಶೇಷದಿಂದ'[2] (ಗೌ. ಧ ೨-೨-೨೯, ವೈ. ಗೌ. ಧ ೧೧-೩೧) ಮುಂತಾದ ಸ್ಮೃತಿಗೆ ವಿರೋಧವೂ ಆಗುವದು.

(ಸಿದ್ಧಾಂತಿ) .- ಇಷ್ಟಾಪೂರ್ತದತ್ತಗಳಿಗಿಂತ ಬೇರೆಯಾದ ಅನೇಕ ಕರ್ಮಗಳು ಮನುಷ್ಯಲೋಕದಲ್ಲಿ ಶರೀರೋಪಭೋಗಗಳಿಗೆ ನಿಮಿತ್ತವಾಗಿರಬಹುದಲ್ಲವೆ? ಅವುಗಳನ್ನು ಚಂದ್ರಮಂಡಲದಲ್ಲಿ ಉಪಭೋಗಿಸಿರುವದೂ ಇಲ್ಲ. ಆದ್ದರಿಂದ ಅವು ಕ್ಷಯವಾಗಿರುವದಿಲ್ಲ.[3] ಯಾವ (ಕರ್ಮಗಳ) ನಿಮಿತ್ತದಿಂದ ಚಂದ್ರಮಂಡಲಕ್ಕೆ ಏರಿಹೋಗಿದ್ದನೋ ಅವೇ ಕ್ಷೀಣವಾಗಿರುತ್ತವೆ. ಆದ್ದರಿಂದ (ಇಲ್ಲಿ

---

1. ಚಂದ್ರಮಂಡಲಕ್ಕೆ ಯಾವ ಕರ್ಮದ ಬಲದಿಂದ ಹೋಗಿದ್ದನೋ ಆದರಲ್ಲಿಯೇ ಸ್ವಲ್ಪಭಾಗವು ಉಳಿದಿರುತ್ತದೆ. ಇದಕ್ಕೆ ಅನುಶಯವೆಂದು ಹೆಸರು- ಎಂದು ಕೆಲವರು ವಾದಿಸಿದ್ದರು. ಸೂ. ಭಾ. ೩-೧-೮ (ಭಾ. ಭಾ. ೨೨೭)ನ್ನು ನೋಡಿ.

2. ಶೇಷಶಬ್ದಕ್ಕೆ ಇದೇ ಅರ್ಥವೆಂದು ಅಭಿಪ್ರಾಯ. ಸೂ. ಭಾ. ೩-೧-೮ (ಭಾ. ಭಾ. ೨೨೮)ನ್ನು ನೋಡಿ.

3. 'ಅದರ ಶೇಷದಿಂದ' ಎಂದರೆ ಆ ಚಂದ್ರಮಂಡಲಕ್ಕೆ ಹೋಗುವದಕ್ಕೆ ನಿಮಿತ್ತವಾದ ಕರ್ಮದ ಶೇಷದಿಂದ ಎಂದೇನೂ ಅರ್ಥಮಾಡಬೇಕಾದದ್ದಿಲ್ಲ. ಕರ್ಮದ ಶೇಷದಿಂದ ಎಂದೇ ಅರ್ಥಮಾಡಬಹುದು. ಏಕೆಂದರೆ ಉಳಿದ ಕರ್ಮಗಳೂ ಕರ್ಮಗಳೇ ಆಗಿವೆ.

ಯಾವ) ವಿರೋಧವೂ ಇರುವದಿಲ್ಲ. (ಸ್ಮೃತಿಯಲ್ಲಿ) ಶೇಷಶಬ್ದವನ್ನು (ಪ್ರಯೋಗಿಸಿರುವದು) ಎಲ್ಲಾ (ಕರ್ಮಗಳೂ ಕರ್ಮಗಳೇ ಎಂಬ) ಕರ್ಮತ್ವ ಸಾಮಾನ್ಯವಿರುವದರಿಂದ ವಿರುದ್ಧವಲ್ಲ. ಆದ್ದರಿಂದಲೇ ಅಲ್ಲಿಯೇ ಮೋಕ್ಷವಾಗ ಬಹುದಾಗುವದೆಂಬ ದೋಷವಿಲ್ಲ[1] ಅನೇಕ ಜನ್ಮಗಳಲ್ಲಿ ಉಪಭೋಗಮಾಡ ಬೇಕಾದ ಫಲವುಳ್ಳ ವಿರುದ್ಧವಾದ ಅನೇಕಕರ್ಮಗಳು ಒಬ್ಬೊಬ್ಬ ಜೀವನನ್ನು ಉಂಟುಮಾಡಬಹುದಾಗಿರುತ್ತದೆಯಾದ್ದರಿಂದಲೂ (ಹೀಗೆ)[2] ಒಂದೇ ಜನ್ಮದಲ್ಲಿ ಎಲ್ಲಾ ಕರ್ಮಗಳ ಕ್ಷಯವೂ ಆಗುವದೆಂಬುದು ಹೊಂದುವದೂ ಇಲ್ಲ ಏಕೆಂದರೆ ಬ್ರಹ್ಮಹತ್ಯೆಯೇ ಮುಂತಾದ ಒಂದೊಂದು ಕರ್ಮವು ಅನೇಕ ಜನ್ಮಗಳನ್ನು ಕೊಡು ವದೆಂದು ಸ್ಮೃತಿಯಲ್ಲಿದೆ[3] ಸ್ಥಾವರಾದಿಜನ್ಮಗಳನ್ನು ಪಡೆದು ಅತ್ಯಂತ ಅಚೇತನ ರಾಗಿರುವವರಿಗೆ ಉತ್ಕರ್ಷಕ್ಕೆ ಕಾರಣವಾದ ಕರ್ಮವು ಆರಂಭಕವೆಂಬುದು ಹೊಂದುವದಿಲ್ಲವಾದ್ದರಿಂದಲೂ (ಹೀಗೆಂದು ಒಪ್ಪಬೇಕು) ಗರ್ಭವಾಗಿ ಜಗುಳಿ ಬಿದ್ದವರಿಗೆ (ಯಾವ) ಕರ್ಮವೂ ಇಲ್ಲದ್ದರಿಂದ (ಅವರಿಗೆ) ಸಂಸಾರವೇ ಇಲ್ಲ ವೆಂದಾಗುವದು. ಆದ್ದರಿಂದ ಒಂದೇ ಜನ್ಮದಲ್ಲಿ ಎಲ್ಲಾ ಕರ್ಮಗಳನ್ನೂ ಉಪ ಭೋಗಿಸಿ (ಮುಗಿಸುವದು ಆಗ)ಲಾರದೆಂದಾಯಿತು.

ಇಲ್ಲಿ **ಕೆಲವರು**[4] (ಹೀಗೆಂದು) ಹೇಳುತ್ತಾರೆ. ಎಲ್ಲಾ ಕರ್ಮಗಳ ಆಶ್ರಯವನ್ನೂ ನಾಶಮಾಡಿಯೇ ಪ್ರಾಯಶಃ ಕರ್ಮಗಳು ಜನ್ಮವನ್ನುಂಟುಮಾಡು ತ್ತವೆ. ಹೀಗಿರುವಲ್ಲಿ ಕೆಲವು ಕರ್ಮಗಳು (ಜನ್ಮವನ್ನುಂಟು)ಮಾಡದೆ (ಹಾಗೆಯೇ) ಇರುತ್ತವೆ, ಕೆಲವು (ಮಾತ್ರ) ಜನ್ಮವನ್ನುಂಟುಮಾಡುತ್ತವೆ ಎಂಬುದು ಹೊಂದ ಲಾರದು. ಏಕೆಂದರೆ ಮರಣವು, ತನ್ನ ವಿಷಯವನ್ನೆಲ್ಲ ತೋರಿಸುವ ದೀಪದಂತೆ, ಎಲ್ಲಾ ಕರ್ಮಗಳನ್ನೂ ಅಭಿವ್ಯಕ್ತಿಗೊಳಿಸುತ್ತದೆ- (ಎಂದು ಅವರ ಅಭಿಪ್ರಾಯ)[5]

ಇದು ಸರಿಯಲ್ಲ. ಏಕೆಂದರೆ ಎಲ್ಲವೂ ಸರ್ವಾತ್ಮಕವಾಗಿರುತ್ತದೆ ಎಂದು ಒಪ್ಪಿರುತ್ತೇವೆ.[6] ಎಲ್ಲವೂ ಸರ್ವಾತ್ಮಕವಾಗಿರುವಲ್ಲಿ ದೇಶ, ಕಾಲ, ನಿಮಿತ್ತ-

1. ಏಕೆಂದರೆ ಸರ್ವಕರ್ಮಕ್ಷಯವಾದ ಹೊರತು ಮೋಕ್ಷವಿಲ್ಲ, ಜ್ಞಾನದಿಂದಲೇ ಸರ್ವಕರ್ಮಕ್ಷಯವಾದೀತು.

2. ಎಲ್ಲಾ ಕರ್ಮಗಳೂ ಈ ಜನ್ಮದಲ್ಲಿ ಫಲವನ್ನು ಕೊಟ್ಟು ಮುಗಿದಿರುವದಿಲ್ಲವಾದ್ದ ರಿಂದ ಉಳಿದಿರುವ ಕರ್ಮಗಳು ಇದ್ದೇಇರುತ್ತವೆ.

3. ಬ್ರಹ್ಮಹತ್ಯೆಯನ್ನು ಮಾಡಿದವನು ನಾಯಿ, ಹಂದಿ, ಕತ್ತೆ, ಒಂಟೆ, ಹಸು, ಮೇಕೆ, ಕುರಿ, ಮೃಗ, ಪಕ್ಷಿ, ಚಂಡಾಲ, ಪುಕ್ಕಸ (ನಿಷಾದನಿಂದ ಶೂದ್ರಿತಿಯಲ್ಲಿ ಹುಟ್ಟಿದವನು)- ಇವರ ಜನ್ಮಗಳನ್ನು ಒಂದೊಂದಾಗಿ ಪಡೆಯುವನು ಎಂದು **ಮನುಸ್ಮೃತಿ** ೧೨-೫೫.

4. ಇವರು ಯಾರೆಂಬುದು ತಿಳಿಯಲಿಲ್ಲ.

5. ಈ ಪಕ್ಷವನ್ನೂ ಇವರ ಖಂಡನೆಯನ್ನೂ ಸೂ. ಭಾ. ೩-೧-೮ (ಭಾ. ಭಾ. ೨೨೯)ರಲ್ಲಿ ಕಾಣಬಹುದು.

6. ಪಂಚೀಕೃತಭೂತಗಳಿಂದಾಗಿರುವದರಿಂದ ಸರ್ವವೂ ಸರ್ವಾತ್ಮಕವಾಗಿದೆ.

ಇವುಗಳ ಅಡ್ಡಿಯಿರುವದರಿಂದ ಯಾವದೊಂದೂ ಸಂಪೂರ್ಣವಾಗಿ ನಾಶವಾಗುವದೆಂಬುದಾಗಲಿ, ಎಲ್ಲಿಯಾದರೂ ಸಂಪೂರ್ಣವಾಗಿ ಅಭಿವ್ಯಕ್ತವಾಗುವದೆಂಬುದಾಗಲಿ ಹೊಂದುವದಿಲ್ಲ. ಇವರಂತೆ ಸಾಶ್ರಯವಾದ[1] ಕರ್ಮಗಳಿಗೂ ಆಗಬೇಕು. ಹೇಗೆ ಹಿಂದೆ ಅನುಭವಿಸಿರುವ ಮನುಷ್ಯ, ನವಿಲು, ಕೋತಿ– ಮುಂತಾದ ಜನ್ಮಗಳಿಂದ ಸಂಸ್ಕಾರವನ್ನು ಪಡೆದಿರುವ ವಿರುದ್ಧವಾದ ಅನೇಕ ವಾಸನೆಗಳೂ ಕೋತಿಯ ಜನ್ಮವನ್ನು ಕೊಡಬೇಕಾದ ಕರ್ಮವು ಕೋತಿಯ ಜನ್ಮವನ್ನುಂಟುಮಾಡಲಾಗಿ ನಾಶವಾಗುವದಿಲ್ಲವೋ[2] ಹಾಗೆಯೇ ಬೇರೆಯ ಜನ್ಮಗಳು ಬರುವದಕ್ಕೆ ಕಾರಣವಾಗಿರುವ ಕರ್ಮಗಳೂ (ಅದರಿಂದ) ನಾಶವಾಗುವದಿಲ್ಲ ಎಂಬುದು ಯುಕ್ತವು. ಹಿಂದಿನ ಜನ್ಮದ ಅನುಭವಗಳ ವಾಸನೆಗಳೆಲ್ಲವೂ ನಾಶವಾಗುವದಾದರೆ, ಕೋತಿಯ ಜನ್ಮಕ್ಕೆ ನಿಮಿತ್ತವಾದ ಕರ್ಮವು ಕೋತಿಯ ಜನ್ಮವನ್ನುಂಟುಮಾಡಿದರೆ ಹುಟ್ಟಿದ ಮಾತ್ರಕ್ಕೇ ತಾಯಿಯು ಕೊಂಬೆಯಿಂದ ಕೊಂಬೆಗೆ ಹೋಗುವಲ್ಲಿ ತಾಯಿಯ ಹೊಟ್ಟೆಗೆ ಹತ್ತಿಕೊಂಡಿರುವದೇ ಮುಂತಾದ ಕೌಶಲವು (ಅದಕ್ಕೆ) ಬರಬಾರದಾಗುವದು, ಏಕೆಂದರೆ ಈ ಜನ್ಮದಲ್ಲಿ (ಆ ಕೌಶಲವನ್ನು ಮರಿಯು) ಅಭ್ಯಾಸಮಾಡಿರುವದಿಲ್ಲ[3] ಇದರ ಹಿಂದಿನ ಜನ್ಮದಲ್ಲಿ ಅದಕ್ಕೆ ಮರ್ಕಟತ್ವವೇ ಇತ್ತೆಂದು ಹೇಳುವದಕ್ಕೂ ಬರುವದಿಲ್ಲ "ಅವನನ್ನು ವಿದ್ಯಾಕರ್ಮಗಳೂ ಪೂರ್ವಪ್ರಜ್ಞೆಯೂ ಹಿಂಬಾಲಿಸುವವು" (ಬೃ. ೪-೪-೨) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).[4] ಆದ್ದರಿಂದ[5] ವಾಸನೆಗಳಂತೆಯೇ ಎಲ್ಲಾ ಕರ್ಮಗಳ ನಾಶವೂ ಆಗುವದಿಲ್ಲವಾದ್ದರಿಂದ ಶೇಷಕರ್ಮವು ಇರಬಹುದಾಗಿದೆ. ಹೀಗಿರುವದರಿಂದ (ಚಂದ್ರಮಂಡಲದಲ್ಲಿ) ಉಪಭುಕ್ತವಾದ ಕರ್ಮಕ್ಕಿಂತಲೂ (ಬೇರೆ) ಉಳಿದಿರುವ ಕರ್ಮದಿಂದ (ಮುಂದೆಯೂ) ಸಂಸಾರವು ಇರಬಹುದಾಗಿದೆಯಾದ್ದರಿಂದ (ಯಾವ) ವಿರೋಧವೂ ಇಲ್ಲ.[6]

---

1. ಸರ್ವಕರ್ಮಾಶ್ರಯೋಪಮರ್ದೇನ ಸಾಶ್ರಯಾಣಾಮ್– ಎಂಬ ಮೂಲದ ಅನುವಾದವಿದು. ಆಶಯ ಎಂಬ ಪಾಠವಿದ್ದರೆ ವಾಸನೆ ಎಂಬರ್ಥವನ್ನು ಮಾಡಬೇಕಾಗುವದು.

2. ಹಿಂದಿನ ಜನ್ಮದ ವಾಸನೆಗಳೆಲ್ಲವೂ ಒಂದೇ ಸಲಕ್ಕೆ ನಾಶವಾಗುವದಿಲ್ಲವೆಂಬುದನ್ನು ಮುಂದೆ ಚರ್ಚಿಸಿ ನಿರ್ಣಯಿಸಲಾಗುವದು.

3. ಆದ್ದರಿಂದ ಇದು ಹಿಂದಿನ ಯಾವದೋ ಜನ್ಮದ ವಾಸನೆಯ ಫಲವಾಗಿರಬೇಕು.

4. ವಿಹಿತ, ಪ್ರತಿಷಿದ್ಧ, ಅವಿಹಿತ, ಅಪ್ರತಿಷಿದ್ಧ, ಜನ್ಮಕರ್ಮಗಳಲ್ಲದೆ ವಾಸನೆಗಳೂ ಸಾಯುವವನ ಜೊತೆಯಲ್ಲಿಯೇ ಇರುವವೆಂಬುದಕ್ಕೆ ಇದು ಪ್ರಮಾಣ,

5. ವಾಸನೆಗಳೆಲ್ಲವೂ ಒಮ್ಮೆಗೇ ನಾಶವಾಗುವದಿಲ್ಲವೆಂದು ಸಿದ್ಧವಾದ್ದರಿಂದ.

6. ಚಂದ್ರಮಂಡಲದಲ್ಲಿಯೇ ಮುಕ್ತಿಯಾಗುವವೆಂಬ ದೋಷವಾಗಲಿ ಮತ್ತೆ ಇಳಿದವರಿಗೆ ಶರೀರಧಾರಣಫಲೋಪಭೋಗಾದಿಸಂಸಾರವಿಲ್ಲವೆಂಬ ದೋಷವಾಗಲಿ ಇಲ್ಲ.

## ಇಷ್ಟಾದಿಕರ್ಮಿಗಳು ಹಿಂತಿರುಗುವ ಮಾರ್ಗ

(ಭಾಷ್ಯ)

೪೧೧. ಕೋಽಸಾವಧ್ವಾ ಯಂ ಪ್ರತಿ ನಿವರ್ತನ್ತ ಇತಿ। ಉಚ್ಯತೇ। ಯಥೇತಂ ಯಥಾಗತಂ ನಿವರ್ತನ್ತೇ। ನನು ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಮ್ ಆಕಾಶಾಚ್ಚನ್ದ್ರಮಸಮಿತಿ ಗಮನಕ್ರಮ ಉಕ್ತೋ ನ ತಥಾ ನಿವೃತ್ತಿಃ। ಕಿಂ ತರ್ಹ್ಯಾಕಾಶಾದ್ ವಾಯುಮಿತ್ಯಾದಿ। ಕಥಂ ಯಥೇತಮಿತ್ಯುಚ್ಯತೇ ? ನೈಷ ದೋಷಃ। ಆಕಾಶಪ್ರಾಪ್ತೇಸ್ತುಲ್ಯತ್ವಾತ್, ಪೃಥಿವೀಪ್ರಾಪ್ತೇಶ್ಚ । ನ ಚಾತ್ರ ಯಥೇತಮೇವೇತಿ ನಿಯಮಃ, ಅನೇವಂವಿಧಮಪಿ ನಿವರ್ತನ್ತೇ। ಪುನರ್ನಿವರ್ತನ್ತ ಇತಿ ತು ನಿಯಮಃ। ಅತ ಉಪಲಕ್ಷಣಾರ್ಥಮೇತದ್ ಯಥೇತಮಿತಿ। ಅತೋ ಭೌತಿಕಮಾಕಾಶಂ ತಾವತ್ ಪ್ರತಿಪದ್ಯನ್ತೇ। ಯಾಸ್ತೇಷಾಂ ಚನ್ದ್ರಮಣ್ಡಲೇ ಶರೀರಾರಮ್ಭಿಕಾ ಆಪ ಆಸನ್, ತಾಸ್ತೇಷಾಂ ತತ್ರೋಪಭೋಗನಿಮಿತ್ತಾನಾಂ ಕರ್ಮಣಾಂ ಕ್ಷಯೇ ವಿಲೀಯನ್ತೇ ಘೃತಸಂಸ್ಥಾನಮಿವಾಗ್ನಿಸಂಯೋಗೇ। ತಾ ವಿಲೀನಾ ಅನ್ತರಿಕ್ಷಸ್ಥಾ ಆಕಾಶಭೂತಾ ಇವ ಸೂಕ್ಷ್ಮಾ ಭವನ್ತಿ। ತಾ ಅನ್ತರಿಕ್ಷಾದ್ ವಾಯುರ್ಭವನ್ತಿ। ವಾಯುಪ್ರತಿಷ್ಠಾ ವಾಯುಭೂತಾ ಇತಶ್ಚಾಮುತಶ್ಚ ಉಹ್ಯಮಾನಾಸ್ತಾಭಿಃ ಸಹ ಕ್ಷೀಣಕರ್ಮಾ ವಾಯುಭೂತೋ ಭವತಿ। ವಾಯುರ್ಭೂತ್ವಾ ತಾಭಿಃ ಸಹೈವ ಧೂಮೋ ಭವತಿ। ಧೂಮೋ ಭೂತ್ವಾಽಭ್ರಮ್। ಅಬ್ಭರಣಮಾತ್ರರೂಪೋ ಭವತಿ ॥

(ಭಾಷ್ಯಾರ್ಥ)

ಅವರು ಹಿಂತಿರುಗಿಬರುತ್ತಾರೆಂದದ್ದು ಆ ಮಾರ್ಗವು ಯಾವದು ? ಎಂದರೆ (ಶ್ರುತಿ)ಹೇಳುತ್ತದೆ. (ಯಥೇತಮ್= ಯಥಾಗತಮ್) ಹೇಗೆ ಹೋಗಿದ್ದನೋ ಹಾಗೆ ಹಿಂತಿರುಗುತ್ತಾರೆ.

(ಆಕ್ಷೇಪ) :- ಮಾಸಗಳಿಂದ ಪಿತೃಲೋಕಕ್ಕೆ ಪಿತೃಲೋಕದಿಂದ ಆಕಾಶವನ್ನು ಆಕಾಶದಿಂದ ಚಂದ್ರನನ್ನು (ಹೋಗಿ ಸೇರುತ್ತಾನೆಂದು) ಗಮನಕ್ರಮವನ್ನು ಹೇಳಿದ್ದಾಗಿದೆ. (ಆದರೆ) ಹಾಗೆಯೇ ಹಿಂತಿರುಗುವದಿಲ್ಲ, ಮತ್ತೇನೆಂದರೆ ಆಕಾಶದಿಂದ ವಾಯುವನ್ನು ಎಂದು ಮುಂತಾಗಿ (ನಿವೃತ್ತಿಯನ್ನು ಇಲ್ಲಿ ಹೇಳಿದೆ. ಹೀಗಿರುವಲ್ಲಿ) 'ಹೋದಂತೆ' ಎಂದು ಹೇಳಿರುವದು ಹೇಗೆ ಸರಿ[1] ?

(ಪರಿಹಾರ) :- ಇದೇನೂ ದೋಷವಲ್ಲ. ಏಕೆಂದರೆ ಆಕಾಶವನ್ನು ಪಡೆಯುವದೂ ಪೃಥಿವಿಯನ್ನು ಪಡೆಯುವದೂ (ಎರಡಕ್ಕೂ) ಸಮಾನವಾಗಿದೆ.

---

1. ಇಲ್ಲಿ ಹಿಂದೆ ಹೇಳಿದ ಧೂಮ, ಆಕಾಶ- ಇವುಗಳೂ ಇವೆ; ರಾತ್ರ್ಯಾದಿಗಳನ್ನು ಹೇಳದೆ ಅಭ್ರಾದಿಗಳನ್ನು ಸೇರಿಸಿಕೊಂಡೂ ಇದೆ. ಆದ್ದರಿಂದ ಹೋದಕ್ರಮವೂ ಇದೆ, ಬೇರೆಯ ಕ್ರಮವೂ ಇದೆ. ಸೂ. ಭಾ. ೩-೧-೮ (ಭಾ. ಭಾ. ೨೩೦)ನ್ನು ನೋಡಿ.

ಇದೂ ಅಲ್ಲದೆ ಹೇಗೆ ಹೋಗಿದ್ದನೋ (ಹಾಗೆ)ಯೇ ಎಂಬ ನಿಯಮವೇನೂ ಇಲ್ಲ, (ಏಕೆಂದರೆ) ಬೇರೆಯ ಪ್ರಕಾರದಿಂದಲೂ ಹಿಂತಿರುಗುತ್ತಾರೆ. ಆದರೆ ಮತ್ತೆ ಹಿಂತಿರುಗಿಯೇ ತಿರುಗುತ್ತಾರೆ ಎಂಬುದು ನಿಯಮವು [1] ಆದ್ದರಿಂದ 'ಹೋದಂತೆ' ಎಂದು (ಹೇಳಿರುವದು) ಉಪಲಕ್ಷಣಕ್ಕಾಗಿ ಆದ್ದರಿಂದ ಭೌತಿಕಾಕಾಶವನ್ನು ಮೊದಲು ಸೇರುತ್ತಾರೆ. ಅವರ ಶರೀರವನ್ನುಂಟುಮಾಡಿತ್ತಲ್ಲ ಆ ಅಪ್ಪು, ಅಲ್ಲಿ ಉಪಭೋಗ ಮಾಡುವದಕ್ಕೆ ನಿಮಿತ್ತವಾಗಿದ್ದ ಅವರ ಕರ್ಮವು ಕ್ಷಯವಾಗಲು ಬೆಂಕಿಯ ಸಂಯೋಗದಿಂದ ತುಪ್ಪದ (ಗಟ್ಟಿಯ) ಆಕಾರವು ಕರಗುವಂತೆ ಕರಗುತ್ತದೆ. ಅದು ಕರಗಿ ಅಂತರಿಕ್ಷವನ್ನು ಸೇರಿ ಆಕಾಶವೇ ಆದಂತೆ[2] ಸೂಕ್ಷ್ಮವಾಗುತ್ತವೆ. ಅದು ಅಂತರಿಕ್ಷದಿಂದ ವಾಯುವಾಗುತ್ತದೆ, ವಾಯುವನ್ನು ಸೇರಿ ವಾಯುವಾಗಿ[3] ಇತ್ತಲಾಗಿ ಅತ್ತಲಾಗಿ (ವಾಯುವಿನಿಂದ) ಕೊಚ್ಚಿಕೊಂಡು ಹೋಗಲ್ಪಡುತ್ತಾ ಇರುತ್ತದೆ, ಅದರೊಡನೆ (ಆ) ಕ್ಷೀಣಕರ್ಮನಾದ (ಜೀವನು) ವಾಯುವಾಗುತ್ತಾನೆ [4] (ಹೀಗೆ) ವಾಯುವಾಗಿ ಅದರೊಡನೆಯೇ ಧೂಮವಾಗುತ್ತಾನೆ ಧೂಮವಾಗಿ ಅಭ್ರ, ನೀರನ್ನು ಸೇರಿಸುವ (ಕಾವಳದ) ರೂಪದವನೇ ಆಗುತ್ತಾನೆ.

(ಉಪನಿಷತ್ತು)

**ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯನ್ತೇಽತೋ ವೈ ಖಲು ದುರ್ನಿಷ್ಪ್ರಪತರಂ ಯೋ ಯೋ ಹ್ಯನ್ನಮತ್ತಿ ಯೋ ರೇತಃ ಸಿಞ್ಚತಿ ತದ್ಭೂಯ ಏವ ಭವತಿ ॥ ೬ ॥**

೬. ಅಭ್ರವಾಗಿ ಮೇಘವಾಗುತ್ತಾನೆ; ಮೇಘವಾಗಿ ಮಳೆಗರೆಯುತ್ತಾನೆ. ಅವರು ಇಲ್ಲಿ ಬತ್ತ ಜವೆ, ಗಿಡಮರಗಳು, ಎಳ್ಳು ಉದ್ದು- ಹೀಗೆ ಹುಟ್ಟುತ್ತಾರೆ. ಆದ್ದರಿಂದಲೇ ಹೊರಕ್ಕೆ ಬರುವದು ಕಷ್ಟವು. ಏಕೆಂದರೆ ಯಾವಯಾವನು ಅನ್ನವನ್ನು ತಿನ್ನುತ್ತಾನೋ ಯಾವನು ರೇತಸ್ಸನ್ನು ಸೇಚನಮಾಡುತ್ತಾನೋ ತದ್ಭೂಯನೇ ಆಗುತ್ತಾನೆ.

---

1. ಹೋದಂತೆ ಮತ್ತೆ ಹಿಂತಿರುಗಿಬರುತ್ತಾರೆ –ಎಂಬಲ್ಲಿ ಹೋದಂತೆ ಎಂಬುದನ್ನು ಒತ್ತಿ ಹೇಳಿಲ್ಲ, ಹಿಂತಿರುಗಿ ಬರುತ್ತಾರೆ ಎಂಬುದನ್ನು ಒತ್ತಿ ಹೇಳಿದೆ.

2. ಆಕಾಶವೇ ಆಗುವದಿಲ್ಲ, ಏಕೆಂದರೆ ಆಗ ಮತ್ತೆ ವಾಯುವಾಗುವದು ಆಗಲಾರದು. ಸೂ. ಭಾ. ೩-೧-೨೨ (ಭಾ. ಭಾ. ೨೪೬)ನ್ನು ನೋಡಿ.

3. ಇಲ್ಲಿಯೂ ವಾಯುವಿನಂತೆ ಆಗಿ ಎಂದೇ ಅರ್ಥ, ಇದನ್ನು ಮುಂದಿನ ವಾಕ್ಯದಲ್ಲಿ ವಿವರಿಸಿದೆ.

4. ಉಪಾಧಿಯ ರೂಪವೇ ಜೀವನಿಗೆ.

## ಇಷ್ಟಾದಿಕರ್ಮಿಗಳು ಹಿಂತಿರುಗುವ ಮಾರ್ಗ, ಮುಂದುವರಿದದ್ದು

(ಭಾಷ್ಯ)

೪೧೨. ಅಭ್ರಂ ಭೂತ್ವಾ ತತಃ ಸೇಚನಸಮರ್ಥೋ ಮೇಘೋ ಭವತಿ। ಮೇಘೋ ಭೂತ್ವಾ ಉನ್ನತೇಷು ಪ್ರದೇಶೇಷು ಅಥ ಪ್ರವರ್ಷತಿ ವರ್ಷಧಾರಾರೂಪೇಣ ಶೇಷಕರ್ಮಾ ಪತತೀತ್ಯರ್ಥಃ। ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಏವಂಪ್ರಕಾರಾ ಜಾಯನ್ತೇ। ಕ್ಷೀಣಕರ್ಮಣಾಮ್ ಅನೇಕತ್ವಾತ್ ಬಹುವಚನನಿರ್ದೇಶಃ। ಮೇಘಾದಿಷು ಪೂರ್ವೇಷು ಏಕರೂಪತ್ವಾತ್ ಏಕವಚನನಿರ್ದೇಶಃ। ಯಸ್ಮಾದ್ಗಿರಿತಟದುರ್ಗನದೀಸಮುದ್ರಾರಣ್ಯಮರುದೇಶಾದಿಸಂನಿವೇಶಸಹಸ್ರಾಣಿ ವರ್ಷಧಾರಾಭಿಃ ಪತಿತಾನಾಮ್ ಅತಸ್ತಸ್ಮಾದ್ ಹೇತೋರ್ವೈ ಖಲು ದುರ್ನಿಷ್ಪ್ರಪತರಂ ದುರ್ನಿಷ್ಕ್ರಮಣಂ ದುರ್ನಿಃಸರಣಮ್। ಯತೋ ಗಿರಿತಟಾತ್ ಉದಕಸ್ರೋತಸಾ ಉಹ್ಯಮಾನಾ ನದೀಃ ಪ್ರಾಪ್ನುವನ್ತಿ, ತತಃ ಸಮುದ್ರಮ್। ತತೋ ಮಕರಾದಿಭಿರ್ಭಕ್ಷ್ಯನ್ತೇ। ತೇಽಪ್ಯನ್ಯೇನ। ತತ್ರೈವ ಚ ಸಹ ಮಕರೇಣ ಸಮುದ್ರೇ ವಿಲೀನಾಃ ಸಮುದ್ರಾಮ್ಭೋಭಿರ್ಜಲಧರೈರಾಕೃಷ್ಟಾಃ ಪುನರ್ವರ್ಷಧಾರಾಭಿರ್ಮರುದೇಶೇ ಶಿಲಾತಟೇ ವಾಽಗಮ್ಯೇ ಪತಿತಾಸ್ತಿಷ್ಠನ್ತಿ। ಕದಾಚಿತ್ ವ್ಯಾಲಮೃಗಾದಿಪೀತಾ ಭಕ್ಷಿತಾಶ್ಚಾನ್ಯೈಃ। ತೇಽಪ್ಯನ್ಯೈಃ। ಇತ್ಯೇವಂಪ್ರಕಾರಾಃ ಪರಿವರ್ತೇರನ್। ಕದಾಚಿದಭಕ್ಷ್ಯೇಷು ಜಾತಾಸ್ತತ್ರೈವ ಶುಷ್ಯೇರನ್। ಭಕ್ಷ್ಯೇಷ್ವಪಿ ಸ್ಥಾವರೇಷು ಜಾತಾನಾಂ ರೇತಃಸಿಗ್ದೇಹಸಂಬನ್ಧೋ ದುರ್ಲಭ ಏವ। ಬಹುತ್ವಾತ್ ಸ್ಥಾವರಾಣಾಮ್ ಇತ್ಯತೋ ದುರ್ನಿಷ್ಕ್ರಮಣತ್ವಮ್। ಅಥವಾ ಅತೋಽಸ್ಮಾದ್ವ್ರೀಹಿಯವಾದಿಭಾವಾತ್ ದುರ್ನಿಷ್ಪ್ರಪತರಂ ದುರ್ನಿರ್ಗಮತರಮ್। ದುರ್ನಿಷ್ಪ್ರಪತರಮಿತಿ ತಕಾರ ಏಕೋ ಲುಪ್ತೋ ದ್ರಷ್ಟವ್ಯಃ। ವ್ರೀಹಿಯವಾದಿಭಾವೋ ದುರ್ನಿಷ್ಪ್ರಪತಃ। ತಸ್ಮಾದಪಿ ದುರ್ನಿಷ್ಪ್ರಪತಾತ್ ರೇತಃಸಿಗ್ದೇಹಸಂಬನ್ಧೋ ದುರ್ನಿಷ್ಪ್ರಪತತರ ಇತ್ಯರ್ಥಃ। ಯಸ್ಮಾತ್ ಊರ್ಧ್ವರೇತೋಭಿರ್ಬಾಲೈಃ ಪುಂಸ್ತ್ವರಹಿತೈಃ ಸ್ಥವಿರೈರ್ವಾ ಭಕ್ಷಿತಾ ಅನ್ತರಾಲೇ ಶೀರ್ಯನ್ತೇ। ಅನೇಕತ್ವಾದನ್ನಾದಾನಾಮ್। ಕದಾಚಿತ್ ಕಾಕತಾಲೀಯವೃತ್ತ್ಯಾ ರೇತಃಸಿಗ್ಭಿರ್ಭಕ್ಷ್ಯನ್ತೇ ಯದಾ ತದಾ ರೇತಃಸಿಗ್ಭಾವಂ ಗತಾನಾಂ ಕರ್ಮಣೋ ವೃತ್ತಿಲಾಭಃ। ಕಥಮ್ ? ಯೋ ಯೋ ಹ್ಯನ್ನಮತ್ತಿ ಅನುಶಯಿಭಿಃ ಸಂಶ್ಲಿಷ್ಟಂ ರೇತಃಸಿಗ್ ಯಶ್ಚ ರೇತಃ ಸಿಞ್ಚತಿ ಋತುಕಾಲೇ ಯೋಷಿತಿ ತದ್ಭೂಯ ಏವ ತದಾಕೃತಿರೇವ ಭವತಿ। ತದವಯವಾಕೃತಿರ್ಭೂಯಸ್ತ್ವಂ ಭೂಯ ಇತ್ಯುಚ್ಯತೇ ರೇತೋರೂಪೇಣ ಯೋಷಿತೋ ಗರ್ಭಾಶಯೇಽನ್ತಃ ಪ್ರವಿಷ್ಟೋಽನುಶಯೀ। ರೇತಸೋ ರೇತಃಸಿಗಾಕೃತಿಭಾವಿತತ್ವಾತ್। "ಸರ್ವೇಭ್ಯೋಽಙ್ಗೇಭ್ಯಸ್ತೇಜಃ ಸಂಭೂತಮ್

(ಐ. ೨-೧) ಇತಿ (ಹಿ)[1] ಶ್ರುತ್ಯನ್ತರಾತ್ । ಅತೋ ರೇತಃಸಿಗಾಕೃತಿರೇವ ಭವತೀತ್ಯರ್ಥಃ । ತಥಾ ಹಿ ಪುರುಷಾತ್ ಪುರುಷೋ ಜಾಯತೇ ಗೋರ್ಗವಾಕೃತಿರೇವ ನ ಜಾತ್ಯನ್ತರ್ರ್ಯಾಕತಿಃ । ತಸ್ಮಾದ್ ಯುಕ್ತಂ ತದ್ಭೂಯ ಏವ ಭವತೀತಿ ॥

(ಭಾಷ್ಯಾರ್ಥ)

ಅಭ್ರವಾಗಿ ಆಮೇಲೆ ನೀರುಸುರಿಸುವದಕ್ಕೆ ಸಮರ್ಥವಾದ ಮೋಡವಾಗಿ ಎತ್ತರವಾದ ಪ್ರದೇಶಗಳಲ್ಲಿ ಇನ್ನು ಮಳೆಗರೆಯುತ್ತಾನೆ, ಮಳೆಯ ಧಾರೆಯ ರೂಪದಿಂದ ಕರ್ಮಶೇಷವುಳ್ಳವನು ಬೀಳುತ್ತಾನೆ ಎಂದರ್ಥ. ಅವರು ಇಲ್ಲಿ ಭತ್ತ ಜವೆ, ಗಿಡ ಮರಗಳು, ಎಳ್ಳುಉದ್ದುಗಳು – ಎಂದು ಈ ಪ್ರಕಾರದವರಾಗಿ ಹುಟ್ಟುತ್ತಾರೆ. ಕರ್ಮವು ಕ್ಷೀಣವಾದ (ಇಷ್ಟಾದಿಕಾರಿಗಳು) ಅನೇಕರಾಗಿರುವದರಿಂದ ಬಹುವಚನದಿಂದ (ಹುಟ್ಟುತ್ತಾರೆ ಎಂದು) ತಿಳಿಸಿದೆ, ಮೋಡವೇ ಮುಂತಾದ (ಈ) ಹಿಂದಿನವುಗಳಲ್ಲಿ ಒಂದೇ ರೂಪದಿಂದಿರುವದರಿಂದ (ಅವರನ್ನು) ಏಕವಚನದಿಂದ ತಿಳಿಸಿದೆ.

ಬೆಟ್ಟಗಳ ತಪ್ಪಲು, ದುರ್ಗ, ನದಿ, ಸಮುದ್ರ, ಅರಣ್ಯ, ಮರಳುಕಾಡು– ಮುಂತಾದ ಸಾವಿರಾರು ಸಂನಿವೇಶಗಳಿವೆಯಲ್ಲವೆ, ಮಳೆಯ ಧಾರೆಗಳಾಗಿ (ಕೆಳಕ್ಕೆ) ಬಿದ್ದವರಿಗೆ? ಆದ್ದರಿಂದ ಆ ಕಾರಣದಿಂದಲೇ (ದುರ್ನಿಷ್ಪ್ರಪತರಂ=ದುರ್ನಿಷ್ಕ್ರಮಣಂ) ಹೊರಕ್ಕೆ ಬರುವದು, ಈಚೆಗೆ ಬರುವದು ಬಹಳ ಕಷ್ಟವು. ಬೆಟ್ಟದ ತಪ್ಪಲಿನಿಂದ ನೀರಿನ ಪ್ರವಾಹದಿಂದ ಕೊಚ್ಚಿಕೊಂಡು ಹೋಗಿ ನದಿಗಳನ್ನು ಸೇರುತ್ತಾರೆ, ಅಲ್ಲಿಂದ ಸಮುದ್ರವನ್ನು (ಸೇರುತ್ತಾರೆ) ಆಮೇಲೆ (ಅಲ್ಲಿರುವ) ಮೊಸಳೆ ಮುಂತಾದವುಗಳಿಂದ ಭಕ್ಷಿತರಾಗುತ್ತಾರೆ, ಅವು ಮತ್ತೆ ಯಾವದೋ (ಪ್ರಾಣಿ)ಯಿಂದ ಭಕ್ಷಿತವಾಗುತ್ತವೆ. ಮತ್ತು ಅಲ್ಲಿಯೇ ಮೊಸಳೆಯೊಡನೆ ಸಮುದ್ರದಲ್ಲಿ ಅಡಗಿ ಸಮುದ್ರದ ನೀರಿನಿಂದ ಮೋಡಗಳು ಸೆಳೆದುಕೊಳ್ಳಲು ಮತ್ತೆ ಮಳೆಯ ಧಾರೆಗಳಿಂದ ಮರಳುಕಾಡಿನಲ್ಲಿಯೋ ಅಗಮ್ಯವಾದ ಕಲ್ಲುಬಂಡೆಯ ಮೇಲೆಯೋ ಬಿದ್ದಿರುತ್ತಾರೆ ಕೆಲವು ವೇಳೆ ಹಾವು ಮೃಗ– ಮುಂತಾದವುಗಳು (ಅವನ್ನು) ಕುಡಿದು ಬೇರೊಬ್ಬರಿಂದ ತಿನ್ನಲ್ಪಟ್ಟು, ಅವರೂ ಮತ್ತೊಬ್ಬರಿಂದ (ತಿನ್ನಲ್ಪಟ್ಟು)- ಈ ಪ್ರಕಾರಗಳಿಂದ ಸುತ್ತುತ್ತಿರಬಹುದು. ಕೆಲವು ವೇಳೆ ಅಭಕ್ಷ್ಯವಾದ ಸ್ಥಾವರಗಳಲ್ಲಿ ಹುಟ್ಟಿ ಅಲ್ಲಿಯೇ ಒಣಗಿಹೋಗಬಹುದು. ಭಕ್ಷ್ಯವಾದ ಸ್ಥಾವರಗಳಲ್ಲಿ ಹುಟ್ಟಿದರೂ ರೇತಃಸೇಚನಮಾಡುವ ದೇಹದ ಸಂಬಂಧವು ದುರ್ಲಭವೇ, ಏಕೆಂದರೆ ಸ್ಥಾವರಗಳು ಅನೇಕವಾಗಿರುತ್ತವೆ, ಆದ್ದರಿಂದ ಹೊರಕ್ಕೆ ಬರುವದು ಕಷ್ಟ.

ಅಥವಾ (ಅತಃ=ಅಸ್ಮಾತ್) ಈ ವ್ರೀಹಿಯವಾದಿರೂಪವನ್ನು ಪಡೆಯುವದಕ್ಕಿಂತಲೂ (ದುರ್ನಿಷ್ಪ್ರಪತರಮ್=ದುರ್ನಿರ್ಗಮತರಮ್) ಹೊರಕ್ಕೆ ಬರುವದು ಇನ್ನೂ ಕಷ್ಟ, (ಮೂಲದಲ್ಲಿ) ದುರ್ನಿಷ್ಪ್ರಪತರವು ಎಂಬಲ್ಲಿ ಒಂದು ತಕಾರವು ಲುಪ್ತ

1. ಇಲ್ಲಿ ಹಿ ಇಲ್ಲದೆಯೇ ಸಾಗುತ್ತದೆ ; ಇದನ್ನು ನಾವು ಕನ್ನಡಿಸಿಲ್ಲ.

ವಾಗಿದೆ ಎಂದು ತಿಳಿಯಬೇಕು[1] ವ್ರೀಹಿಯವಾದಿಗಳ ಸ್ವರೂಪವನ್ನು ಪಡೆಯು ವದು ಕಷ್ಟವು, ಆ ದುರ್ನಿಷ್ಪ್ರಪತರವಾಗಿರುವ (ವ್ರೀಹ್ಯಾದಿಭಾವ)ಕ್ಕಿಂತಲೂ ರೇತಃ ಸಿಗ್ದೇಹದ ಸಂಬಂಧವು ದುರ್ನಿಷ್ಪ್ರಪತತರವಾಗಿದೆ ಏಕೆಂದರೆ ಅನ್ನವನ್ನು ತಿನ್ನು ವವರು ಅನೇಕ (ವಿಧವಾಗಿರು)ವದರಿಂದ ಊರ್ಧ್ವರೇತಸ್ಕರೋ ಹುಡುಗರೋ ಪುಂಸ್ತ್ವವಿಲ್ಲದವರೋ ಮುದುಕರೋ ತಿನ್ನುವದರಿಂದ ನಡುವೆಯೇ ನಾಶವಾಗು ವರು[2]

ಎಲ್ಲಿಯೋ ಒಂದು ಸಲ ಯಾವಾಗ ಕಾಕತಾಲೀಯವೃತ್ತಿಯಿಂದ[3] ರೇತಃ ಸಿಗ್ಜನರಿಂದ ಭಕ್ಷಿತರಾಗುವರೋ ಆಗ ರೇತಃಸಿಗ್ಭಾವವನ್ನು ಹೊಂದುವ (ಅವರ) ಕರ್ಮಕ್ಕೆ ವ್ಯಾಪಾರವುಂಟಾಗುವದು. ಹೇಗೆಂದರೆ ಯಾವ ಯಾವ ರೇತಃಸೇಚನಸಮರ್ಥನು (ಈ) ಅನುಶಯಿಗಳಿಗೆ[4] ಸಂಬದ್ಧವಾಗಿರುವ ಅನ್ನವನ್ನು ತಿನ್ನುವನೋ, ಮತ್ತು ಋತುಕಾಲದಲ್ಲಿ ಹೆಂಡತಿಯಲ್ಲಿ ರೇತಃಸೇಚನವನ್ನು ಮಾಡುವನೋ ತದ್ಭೂಯನೇ ಎಂದರೆ ಆ ಆಕೃತಿಯುವನೇ ಆಗುತ್ತಾನೆ. (ಇಲ್ಲಿ) ಆಯಾ ಅವಯವಾಕೃತಿಯು ಹೆಚ್ಚಾಗಿರುವದನ್ನೇ 'ಭೂಯ' ಎಂದಿದೆ ರೇತಸ್ಸಿನ ರೂಪದಿಂದ ಸ್ತ್ರೀಯ ಗರ್ಭಾಶಯದಲ್ಲಿ ಒಳಗೆ ಅನುಶಯಿಯು[4] ಹೊಕ್ಕಿರುತ್ತಾನೆ, ಏಕೆಂದರೆ ರೇತಸ್ಸು ರೇತಃಸೇಚಕನ ಆಕೃತಿಯಿಂದ ಭಾವಿತವಾಗಿರುತ್ತದೆ "(ಆ ಇದು) ಎಲ್ಲಾ ಅಂಗಗಳಿಂದ ತೇಜಸ್ಸಾಗಿ ಉಂಟಾಗಿರುತ್ತದೆ" (ಐ. ೨-೧) ಎಂದು ಬೇರೊಂದು ಶ್ರುತಿಯಲ್ಲಿರುವದರಿಂದ (ಹೀಗೆಂದು ತಿಳಿಯಬೇಕು). ಆದ್ದರಿಂದ ರೇತಃಸೇಕವನ್ನು ಮಾಡುವವನ ಆಕಾರವುಳ್ಳವನೇ ಆಗುತ್ತಾನೆ ಎಂದರ್ಥ. ಆದ್ದ ರಿಂದಲೇ ಅಲ್ಲವೆ, ಮನುಷ್ಯನಿಂದ ಮನುಷ್ಯನೇ ಹುಟ್ಟುತ್ತಾನೆ, ಗೋವಿನಿಂದ ಗವಾ ಕೃತಿಯೇ (ಹುಟ್ಟುತ್ತದೆಯೇ ಹೊರತು) ಮತ್ತೊಂದು ಜಾತಿಯ ಆಕೃತಿಯು

1. ದುರ್ನಿಷ್ಪ್ರಪತತರಂ ಎಂದಿರಬೇಕಾದದ್ದು ತಕಾರಲೋಪವಾಗಿ ಪ್ರಯೋಗವಾಗಿದೆ; ಇದು ವೈದಿಕಪ್ರಯೋಗ.

2. ಮೊದಲನೆಯ ವ್ಯಾಖ್ಯಾನದಲ್ಲಿ ಅತಃ ಎಂಬ ಮೂಲಕ್ಕೆ ಆದ್ದರಿಂದ ಎಂದು ಅರ್ಥ, ಈ ವ್ಯಾಖ್ಯಾನದಲ್ಲಿ ಅದಕ್ಕಿಂತಲೂ ಎಂದರ್ಥ. ಈ ಎರಡನೆಯ ವ್ಯಾಖ್ಯಾನವನ್ನೇ ಸೂ. ಭಾ. ದಲ್ಲಿ ಇಟ್ಟುಕೊಂಡಿದೆ. ವ್ರೀಹ್ಯಾದಿಭಾವದಿಂದ ಮುಂದಕ್ಕೆ ಹೊರಡುವದು ಬಹಳ ಕಷ್ಟವೆಂದದ್ದರಿಂದ ಮೊದಲು ಆಕಾಶಾದಿಗಳ ಪ್ರಾಪ್ತಿಯು ಬಹುಕಾಲವಿರುವದಿಲ್ಲ ಎಂದು ಸೂ.ಭಾ. ೩-೧-೨೩ (ಭಾ.ಭಾ. ೨೪೭)ರಲ್ಲಿ ತೀರ್ಮಾನಿಸಿದೆ. ಇಲ್ಲಿ ಮಳೆಯಿಂದ ವ್ರೀಹ್ಯಾದಿ ಭಾವವನ್ನು ಪಡೆಯುವದೂ ಕಷ್ಟವೇ; ಅದಕ್ಕಿಂತಲೂ ಇಲ್ಲಿಂದ ಮುಂದಕ್ಕೆ ಹೋಗುವದು ಕಷ್ಟ ಎಂಬ ಅರ್ಥವನ್ನು ತೆಗೆದಿದೆ. ಸೂತ್ರಾಭಿಪ್ರಾಯವನ್ನೇಕೆ ಇಲ್ಲಿ ಪರಾಮರ್ಶಿಸಿಲ್ಲ ಎಂಬುದು ವಿಚಾರಣೀಯವಾಗಿದೆ.

3. ಕಾಗೆ ಬರುವ ಹೊತ್ತಿಗೆ ತಾಳೆಯ ಹಣ್ಣು ಬಿದ್ದಂತೆ.

4. ಅನುಶಯವೆಂದರೆ ಕರ್ಮಶೇಷ. ಇದರ ವಿಷಯಕ್ಕೆ ಸೂ. ಭಾ ೩-೧-೮ರಿಂದ ೩-೧-೧೧ರವರೆಗಿನ ಭಾಷ್ಯಗ್ರಂಥವನ್ನು ನೋಡಿ.

(ಹುಟ್ಟು)ವದಿಲ್ಲ? ಆದ್ದರಿಂದ 'ತದ್ಭಾಯನೇ ಆಗುತ್ತಾನೆ' ಎಂದು (ಹೇಳಿರುವದು) ಯುಕ್ತವಾಗಿರುತ್ತದೆ.

## ಚಂದ್ರಮಂಡಲದಿಂದ ಇಳಿಯುವವರಿಗೆ ದುಃಖದ ಅರಿವು ಇಲ್ಲ

(ಭಾಷ್ಯ)

೪೧೩. ಯೇ ತ್ವನ್ಯೇಽನುಶಯಿಭ್ಯಃ, ಚನ್ದ್ರಮಣ್ಡಲಮ್ ಅನಾರುಹ್ಯ ಇಹೈವ ಪಾಪಕರ್ಮಭಿರ್ಘೋರೈರ್ವ್ರೀಹಿಯವಾದಿಭಾವಂ ಪ್ರತಿಪದ್ಯನ್ತೇ ಪುನರ್ಮನುಷ್ಯಾದಿಭಾವಮ್ ತೇಷಾಂ ನಾನುಶಯಿನಾಮಿವ ದುರ್ನಿಷ್ಪ್ರಪತರಮ್ । ಕಸ್ಮಾತ್ ? ಕರ್ಮಣಾ ಹಿ ತೈರ್ವ್ರೀಹಿಯವಾದಿದೇಹ ಉಪಾತ್ತ ಇತಿ ತದುಪಭೋಗನಿಮಿತ್ತಕ್ಷಯೇ ವ್ರೀಹ್ಯಾದಿಸ್ತಮ್ಬದೇಹವಿನಾಶೇ ಯಥಾಕರ್ಮಾರ್ಜಿತಂ ದೇಹಾನ್ತರಂ ನವಂ ನವಂ ಜಲೂಕಾವತ್ ಸಂಕ್ರಮನ್ತೇ ಸವಿಜ್ಞಾನಾ ಏವ । "ಸವಿಜ್ಞಾನೋ ಭವತಿ ಸವಿಜ್ಞಾನಮೇವಾನ್ವವಕ್ರಾಮತಿ" (ಬೃ. ೪-೪-೨) ಇತಿ ಶ್ರುತ್ಯನ್ತರಾತ್ । ಯದ್ಯಪ್ಯುಪಸಂಹೃತಕರಣಾಃ ಸನ್ತೋ ದೇಹಾನ್ತರಂ ಗಚ್ಛನ್ತಿ ತಥಾಪಿ ಸ್ವಪ್ನವದ್ದೇಹಾನ್ತರಪ್ರಾಪ್ತಿನಿಮಿತ್ತಕರ್ಮೋದ್ಭಾವಿತವಾಸನಾಜ್ಞಾನೇನ ಸವಿಜ್ಞಾನಾ ಏವ ದೇಹಾನ್ತರಂ ಗಚ್ಛನ್ತಿ । ಶ್ರುತಿಪ್ರಾಮಾಣ್ಯಾತ್ । ತಥಾ ಅರ್ಚಿರಾದಿನಾ ಧೂಮಾದಿನಾ ಚ ಗಮನಂ ಸ್ವಪ್ನ ಇವೋದ್ಭೂತವಿಜ್ಞಾನೇನ । ಲಬ್ಧವೃತ್ತಿಕರ್ಮನಿಮಿತ್ತತ್ವಾದ್ ಗಮನಸ್ಯ । ನ ತಥಾ ಅನುಶಯಿನಾಂ ವ್ರೀಹ್ಯಾದಿಭಾವೇನ ಜಾತಾನಾಂ ಸವಿಜ್ಞಾನಮೇವ ರೇತಸ್ಸಿಗ್ಯೋಷಿದ್ದೇಹಸಂಬನ್ಧ ಉಪಪದ್ಯತೇ । ನ ಹಿ ವ್ರೀಹ್ಯಾದಿಲವನಕಣ್ಡನಪೇಷಣಾದೌ ಚ ಸವಿಜ್ಞಾನಾನಾಂ ಸ್ಥಿತಿರಸ್ತಿ । ನನು ಚನ್ದ್ರಮಣ್ಡಲಾದಪ್ಯವರೋಹತಾಂ ದೇಹಾನ್ತರಗಮನಸ್ಯ ತುಲ್ಯತ್ವಾತ್, ಜಲೂಕಾವತ್ ಸವಿಜ್ಞಾನತ್ವೈವ ಯುಕ್ತಾ । ತಥಾ ಸತಿ ಘೋರೋ ನರಕಾನುಭವ ಇಷ್ಟಾಪೂರ್ತಾದಿಕಾರಿಣಾಂ ಚನ್ದ್ರಮಣ್ಡಲಾದಾರಭ್ಯ ಪ್ರಾಪ್ತೋ ಯಾವದ್ ಬ್ರಾಹ್ಮಣಾದಿಜನ್ಮ । ತಥಾ ಚ ನತ್ಯನರ್ಥಾಯೈವ ಇಷ್ಟಾಪೂರ್ತಾದ್ಯುಪಾಸನಂ ವಿಹಿತಂ ಸ್ಯಾತ್ । ಶ್ರುತೇಶ್ಚ ಅಪ್ರಾಮಾಣ್ಯಂ ಪ್ರಾಪ್ತಮ್ । ವೈದಿಕಾನಾಂ ಕರ್ಮಣಾಮ್ ಅನರ್ಥಾನುಬನ್ಧಿತ್ವಾತ್॥ ನ । ವೃಕ್ಷಾರೋಹಣಪತನವದ್ ವಿಶೇಷಸಂಭವಾತ್ । ದೇಹಾದ್ ದೇಹಾನ್ತರಂ ಪ್ರತಿಪಿತ್ಸೋಃ ಕರ್ಮಣೋ ಲಬ್ಧವೃತ್ತಿತ್ವಾತ್ ಕರ್ಮಣಾ ಉದ್ಭಾವಿತೇನ ವಿಜ್ಞಾನೇನ ಸವಿಜ್ಞಾನತ್ವಂ ಯುಕ್ತಮ್ । ವೃಕ್ಷಾಗ್ರಮ್ ಆರೋಹತ ಇವ ಫಲಂ ಜಿಘೃಕ್ಷೋಃ ತಥಾ ಅರ್ಚಿರಾದಿನಾ ಗಚ್ಛತಾಂ ಸವಿಜ್ಞಾನತ್ವಂ ಭವೇತ್, ಧೂಮಾದಿನಾ ಚ ಚನ್ದ್ರಮಣ್ಡಲಮ್ ಆರುರುಕ್ಷತಾಮ್ । ನ ತಥಾ ಚನ್ದ್ರಮಣ್ಡಲಾದ್ ಅವರುರುಕ್ಷತಾಂ ವೃಕ್ಷಾಗ್ರಾದಿವ ಪತ

ತಾಂ ಸಚೇತನತ್ವಮ್ । ಯಥಾ ಚ ಮುದ್ಗರಾದ್ಯಭಿಹತಾನಾಂ ತದಭಿಘಾತವೇದನಾನಿಮಿತ್ತಸಂಮೂರ್ಛಿತಪ್ರತಿಬದ್ಧಕರಣಾನಾಂ ಸ್ವದೇಹೇನೈವ ದೇಶಾತ್ ದೇಶಾನ್ತರಂ ನೀಯಮಾನಾನಾಂ ವಿಜ್ಞಾನಶೂನ್ಯತಾ ದೃಷ್ಟಾ ತಥಾ ಚನ್ದ್ರಮಣ್ಡಲಾನ್ಮಾನುಷಾದಿದೇಹಾನ್ತರಂ ಪ್ರತಿ ಅವರುರುಕ್ಷತಾಂ ಸ್ವರ್ಗಭೋಗನಿಮಿತ್ತಕರ್ಮಕ್ಷಯಾನ್ಮೃದಿತಾಬ್ದೇಹಾನಾಂ ಪ್ರತಿಬದ್ಧಕರಣಾನಾಮ್ । ಅತಸ್ತೇ ಅಪರಿತ್ಯಕ್ತದೇಹಬೀಜಭೂತಾಭಿರದ್ಭಿರ್ಮೂರ್ಛಿತಾ ಇವ ಆಕಾಶಾದಿಕ್ರಮೇಣ ಇಮಾಮವರುಹ್ಯ ಕರ್ಮನಿಮಿತ್ತಜಾತಿಸ್ಥಾವರದೇಹೈಃ ಸಂಶ್ಲಿಷ್ಯನ್ತೇ ಪ್ರತಿಬದ್ಧಕರಣತಯಾ ಅನುದ್ಭೂತವಿಜ್ಞಾನಾ ಏವ । ತಥಾ ಲವನಕಣ್ಡನಪೇಷಣಸಂಸ್ಕಾರಭಕ್ಷಣರಸಾದಿಪರಿಣಾಮರೇತಃಸೇಕಕಾಲೇಷು ಮೂರ್ಛಿತವದೇವ । ದೇಹಾನ್ತರಾರಮ್ಭಕಸ್ಯ ಕರ್ಮಣೋಽಲಬ್ಧವೃತ್ತಿಕತ್ವಾತ್ । ದೇಹಬೀಜಭೂತಾಪ್ಸಂಬನ್ಧಾಪರಿತ್ಯಾಗೇನೈವ ಸರ್ವಾಸ್ವವಸ್ಥಾಸು ವರ್ತನ್ತ ಇತಿ ಜಲೂಕಾವತ್ ಚೇತನಾವತ್ತ್ವಂ ನ ವಿರುಧ್ಯತೇ। ಅನ್ತರಾಲೇ ತ್ವವಿಜ್ಞಾನಂ ಮೂರ್ಛಿತವದೇವೇತ್ಯದೋಷಃ । ನ ಚ ವೈದಿಕಾನಾಂ ಕರ್ಮಣಾಂ ಹಿಂಸಾಯುಕ್ತತ್ವೇನೋಭಯಹೇತುತ್ವಂ ಶಕ್ಯಮ್ ಅನುಮಾತುಮ್। ಹಿಂಸಾಯಾಃ ಶಾಸ್ತ್ರಚೋದಿತತ್ವಾತ್। "ಅಹಿಂಸನ್ ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯಃ" (೮-೧೫-೧) ಇತಿ ಶ್ರುತೇಃ ಶಾಸ್ತ್ರಚೋದಿತಾಯಾ ಹಿಂಸಾಯಾ ನಾಧರ್ಮಹೇತುತ್ವಮ್ ಅಭ್ಯುಪಗಮ್ಯತೇ। ಅಭ್ಯುಪಗತೇಽಪ್ಯಧರ್ಮಹೇತುತ್ವೇ ಮನ್ತ್ರೈರ್ವಿಷಾದಿವತ್ ತದಪನಯೋಪಪತ್ತೇರ್ನ ದುಃಖಕಾರ್ಯಾರಮ್ಭಕತ್ವೋಪಪತ್ತಿರ್ವೈದಿಕಾನಾಂ ಕರ್ಮಣಾಂ ಮನ್ತ್ರೇಣೇವ ವಿಷಭಕ್ಷಣಸ್ಯೇತಿ ॥

(ಭಾಷ್ಯಾರ್ಥ)

ಆದರೆ ಅನುಶಯಿಗಳಿಗಿಂತ ಬೇರೆಯವರಾದ ಯಾವ (ಕರ್ಮಿಗಳು) ಚಂದ್ರಮಂಡಲಕ್ಕೇರದೆ ಇಲ್ಲಿಯೇ (ತಮ್ಮ) ಘೋರವಾದ ಪಾಪಕರ್ಮಗಳಿಂದ ಬತ್ತ, ಜವೆ- ಮುಂತಾದ (ಸ್ಥಾವರ)ಭಾವವನ್ನು ಪಡೆಯುತ್ತಾರೋ[1] ಮತ್ತೆ ಮನುಷ್ಯಾದಿಭಾವವನ್ನು (ಪಡೆಯುತ್ತಾರೋ) ಅವರಿಗೆ ಅನುಶಯಿಗಳಂತೆ ಹೊರಕ್ಕೆ ಬರುವದು ಕಷ್ಟವಾಗುವದಿಲ್ಲ. ಅದೇಕೆ? ಎಂದರೆ ಕರ್ಮದಿಂದಲೇ ಅವರು ಬತ್ತ, ಜವೆ-ಮುಂತಾದವುಗಳ ದೇಹವನ್ನು ಪಡೆದುಕೊಂಡಿದಾರಾದ್ದರಿಂದ[2] ಆ (ದೇಹದ) ಉಪಭೋಗಕ್ಕೆ ನಿಮಿತ್ತ(ವಾದ ಕರ್ಮವು) ಕ್ಷಯವಾಗಲು ಬತ್ತವೇ ಮುಂತಾದ

---

1. ಇವರ ವಿಷಯಕ್ಕೆ ಸೂ. ಭಾ. ೩-೧-೧೩ (ಭಾ. ಭಾ. ೨೩೫)ನ್ನು ನೋದಿ.

2. ಅನುಶಯಿಗಳು ಹೀಗೆ ಬತ್ತವೇ ಮುಂತಾದ ದೇಹಗಳನ್ನೇ ತಮ್ಮವಾಗಿ ಪಡೆದುಕೊಳ್ಳುವದಿಲ್ಲ ; ಅವುಗಳೊಡನೆ ಸಂಬಂಧವುಳ್ಳವರಾಗಿದ್ದುಕೊಂಡಿರುತ್ತಾರೆ. ಅಷ್ಟೆ. ಸೂ.ಭಾ. ೩-೧-೨೪ (ಭಾ. ಭಾ. ೨೫೦).

ಸ್ಥಾವರದೇಹವು ನಾಶವಾಗಿ ಕರ್ಮದಿಂದ (ಅವರು) ಸಂಪಾದಿಸಿಕೊಂಡಿರುವಂತೆ ಹೊಸಹೊಸ ದೇಹವನ್ನು ಜಿಗಣೆಯಂತೆ ಅರಿವಿನಿಂದೊಡಗೂಡಿಯೇ ಸೇರುತ್ತಿರುವರು. "ಸವಿಜ್ಞಾನನಾಗುತ್ತಾನೆ, ಸವಿಜ್ಞಾನನಾಗಿಯೇ ಅನುಸರಿಸಿ ಹೋಗಿ ಸೇರುತ್ತಾನೆ" (ಬೃ. ೪-೪-೨) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). (ಅವರು) ಕರಣಗಳನ್ನು ಉಪಸಂಹಾರಮಾಡಿಕೊಂಡೇ ಮತ್ತೊಂದು ದೇಹಕ್ಕೆ ಹೋಗುತ್ತಾರಾದರೂ ಕನಸಿನಲ್ಲಿರುವಂತೆ[1] ಮತ್ತೊಂದು ದೇಹವನ್ನು ಪಡೆಯುವದಕ್ಕೆ ನಿಮಿತ್ತವಾಗಿರುವ ಕರ್ಮವು ಎಬ್ಬಿಸಿರುವ ವಾಸನಾಜ್ಞಾನದಿಂದ ಸವಿಜ್ಞಾನರಾಗಿಯೇ ದೇಹಾಂತರಕ್ಕೆ ಅರ್ಚಿರಾದಿಮಾರ್ಗದಿಂದಲೂ ಧೂಮಾದಿಮಾರ್ಗದಿಂದಲೂ ಹೋಗುವದು ಕನಸಿನಲ್ಲಿರುವಂತೆ ಎದ್ದುಕೊಂಡ ವಿಜ್ಞಾನದೊಡನೆಯೇ, ಏಕೆಂದರೆ (ಹಾಗೆ) ಹೋಗುವದು ಕರ್ಮಕ್ಕೆ ವೃತ್ತಿಯುಂಟಾಗುವ ನಿಮಿತ್ತದಿಂದಲೇ (ಆ) ಗಮನವು (ಆಗುತ್ತದೆ)[2].

(ಆದರೆ) ಅನುಶಯಿಗಳಿಗೆ ವ್ರೀಹ್ಯಾದಿಭಾವದಿಂದ ಹುಟ್ಟಿದಮೇಲೆ[3] ಹಾಗೆ[4] ಸವಿಜ್ಞಾನವಾಗಿಯೇ ರೇತಃಸೇಚನಮಾಡುವವನ ಮತ್ತು ಸ್ತ್ರೀಯ ದೇಹದ ಸಂಬಂಧವು (ಆಗುವದೆಂಬುದು) ಹೊಂದುವದಿಲ್ಲ. ಏಕೆಂದರೆ ಬತ್ತವೇ ಮುಂತಾದವುಗಳನ್ನು ಕೊಯ್ಯುವದು, ಕುಟ್ಟುವದು, ಬೀಸುವದು- ಮುಂತಾದದ್ದನ್ನು ಮಾಡುವಾಗ ಸವಿಜ್ಞಾನರಾಗಿ ಇರುವದು ಆಗುವಂತಿಲ್ಲ[5].

(ಆಕ್ಷೇಪ) .- ಚಂದ್ರಮಂಡಲದಿಂದ ಇಳಿಯುವವರಿಗೂ ಮತ್ತೊಂದು ದೇಹವನ್ನು ಸೇರುವದೆಂಬುದು ಸಮಾನವಾಗಿರುವದರಿಂದ[6] ಜಿಗಣೆಯಂತೆ (ಅವರೂ) ಸವಿಜ್ಞಾನರಾಗಿಯೇ ಇರಬೇಕೆಂಬುದೇ ಯುಕ್ತವಲ್ಲವೆ? ಹಾಗಾದರೆ ಇಷ್ಟಾಪೂರ್ತಾದಿಕಾರಿಗಳಿಗೆ ಚಂದ್ರಮಂಡಲದಿಂದ (ಇಳಿಯುವದು) ಮೊದಲಾಗಿ ಬ್ರಾಹ್ಮಣಾದಿಜನ್ಮವಾಗುವವರೆಗೂ ಘೋರವಾದ ನರಕಾನುಭವವೇ ಆಗಬೇಕಾಗು

---

1. ಎಚ್ಚರದಲ್ಲಿ ಮನಃಪೂರ್ವಕವಾಗಿ ಹೋಗಿಬಂದು ಮಾಡುವಂತಲ್ಲ, ಕನಸಿನಲ್ಲಾಗುವಂತೆ ಕರ್ಮಪರತಂತ್ರರಾಗಿಯೇ ಅರಿವುಳ್ಳವರಾಗಿ ಹೋಗುತ್ತಾರೆ- ಎಂದರ್ಥ. ಬೃ. ಭಾ. ೪-೪-೨ (ಭಾ. ಭಾ. ೨೫೫)ನ್ನು ನೋಡಿ.

2. ಅವರು ಮಾಡಿರುವ ಕರ್ಮದ ಮತ್ತು ಉಪಾಸನೆಯ ಬಲದಿಂದಾದ ಅದೃಷ್ಟಕ್ಕೆ ವ್ಯಾಪಾರವಿರುತ್ತದೆಯಾದ್ದರಿಂದ ಅವರು ಹೋಗುವಾಗ ಸವಿಜ್ಞಾನರಾಗಿಯೇ ಇರುತ್ತಾರೆ.

3. ಸಂಬಂಧವಾದಮೇಲೆ.

4 ಸಾಮಾನ್ಯಕರ್ಮಿಗಳಂತೆ ಅಥವಾ ದಕ್ಷಿಣೋತ್ತರಮಾರ್ಗಗಾಮಿಗಳಂತೆ.

5. ಶರೀರವನ್ನು ಬಿಟ್ಟು ಹೋಗಿಬಿಡಬೇಕಾಗುವದು ; ಆಗ ರೇತಃಸಿಗ್ಯೋಗವೇ ಇಲ್ಲವಾಗುವದು.

6. ಈ ಶರೀರವನ್ನು ಬಿಟ್ಟು ಚಂದ್ರಲೋಕಕ್ಕೆ ಹೋಗುವವರಂತೆಯೇ ಇರುವದರಿಂದ ಎಂದರ್ಥ. ವ್ರೀಹ್ಯಾದಿಜನ್ಮವನ್ನು ಪಡೆಯುವವರಂತೆಯೇ ಎಂದು ಟೀಕೆ.

ವದಲ್ಲ! ಮತ್ತು ಹಾಗೆ ಆದರೆ ಇಷ್ಟಾಪೂರ್ತಾದಿಗಳನ್ನು ಮಾಡಬೇಕೆಂದು ವಿಧಿಸಿರುವದು ಅನರ್ಥಕ್ಕೇ ಎಂದಾಗುವದು, ಶ್ರುತಿಯು ಅಪ್ರಮಾಣವೆಂದೂ ಆಗುವದು, ಏಕೆಂದರೆ ವೈದಿಕಕರ್ಮಗಳಿಗೆ ಅನರ್ಥಫಲವಿದೆಯೆಂದಾಗುವದಲ್ಲವೆ ?

(ಪರಿಹಾರ) :– ಹಾಗಲ್ಲ. ಮರವನ್ನೇರುವದು. (ಅದರಿಂದ) ಬೀಳುವದು –ಇವುಗಳಿಗಿರುವಂತೆ (ಇಲ್ಲಿಯೂ) ವಿಶೇಷವಿರಬಹುದಾಗಿರುತ್ತದೆ (ಒಂದು) ದೇಹದಿಂದ ಇನ್ನೊಂದು ದೇಹವನ್ನು ಪಡೆಯಲಿರುವವನಿಗೆ ಕರ್ಮದ ವ್ಯಾಪಾರವು ಮೊದಲಾಗಲು (ಆ) ಕರ್ಮದಿಂದುಂಟಾದ ವಿಜ್ಞಾನದಿಂದ (ಅವರು) ಹಣ್ಣನ್ನು ತೆಗೆದುಕೊಳ್ಳುವದಕ್ಕೆ ಮರವನ್ನೇರುವವನಂತೆ ಸವಿಜ್ಞಾನರಾಗುವದು ಯುಕ್ತವಾಗಿದೆ. ಹೀಗೆಯೇ ಅರ್ಚಿರಾದಿ(ಮಾರ್ಗ)ದಿಂದ ಹೋಗುವವರಿಗೂ ಧೂಮಾದಿ (ಮಾರ್ಗ)ದಿಂದ ಚಂದ್ರಮಂಡಲವನ್ನು ಏರಲಿರುವವರೂ ಸವಿಜ್ಞಾನರಾಗಿರುವದೂ ಆಗಬಹುದು. ಆದರೆ ಚಂದ್ರಮಂಡಲದಿಂದ ಇಳಿಯಲಿರುವವರಿಗೆ– ಮರದಿಂದ(ಕೆಳಕ್ಕೆ) ಬೀಳುವವರಂತೆ– ಸಚೇತನವಾಗಿರುವದು ಆಗಲಾರದು. ಮತ್ತು ಕೊಡತಿಯೇ ಮುಂತಾದದ್ದರಿಂದ ಹೊಡೆಯಲ್ಪಟ್ಟವರಿಗೆ ಆ ಹೊಡೆತದ ವೇದನೆಯ ನಿಮಿತ್ತದಿಂದ ಸಂಮೂರ್ಛಿತರಾಗಿ ಕರಣಗಳಿಗೆ ಪ್ರತಿಬಂಧವಾಗಿರುವಲ್ಲಿ ಅವರ ದೇಹಸಹಿತವಾಗಿಯೇ (ಒಂದು) ಕಡೆಯಿಂದ ಇನ್ನೊಂದುಕಡೆಗೆ ಒಯ್ಯಲ್ಪಟ್ಟರೆ ವಿಜ್ಞಾನವಿರುವದಿಲ್ಲವೆಂಬುದು ಹೇಗೆ ಕಂಡಿದೆಯೋ ಹಾಗೆಯೇ ಚಂದ್ರಮಂಡಲದಿಂದ ಮನುಷ್ಯ(ದೇಹವೇ) ಮುಂತಾದ ದೇಹಾಂತರವನ್ನು (ಪಡೆಯುವದಕ್ಕೆ) ಇಳಿಯಲಿರುವಾಗ ಸ್ವರ್ಗಭೋಗಕ್ಕೆ ನಿಮಿತ್ತವಾದ ಕರ್ಮವು ಕ್ಷಯವಾದದ್ದರಿಂದ ಅಬ್ದೇಹವು ನಾಶವಾಗಲು ಕರಣಗಳಿಗೆ ಪ್ರತಿಬಂಧವಾಗುವದರಿಂದ (ಅಚೇತನರಾಗಿರುವದೆಂಬುದು ಯುಕ್ತ). ಆದ್ದರಿಂದ ಅವರು ದೇಹಕ್ಕೆ ಬೀಜಭೂತವಾಗಿರುವ ಅಪ್ಪನ್ನೂ ಬಿಡದೆ ಅದರೊಡನೆ ಮೂರ್ಛಿತರಂತೆ ಆಕಾಶಾದಿಕ್ರಮದಿಂದ ಈ (ಭೂಮಿಗೆ) ಇಳಿದು ಕರ್ಮನಿಮಿತ್ತದಿಂದ ಜಾತಿಸ್ಥಾವರರಾಗಿರುವವರ ದೇಹಗಳೊಡನೆ ಸಂಬಂಧವನ್ನು, ಕರಣಗಳಿಗೆ ಪ್ರತಿಬಂಧವಾಗಿರುವದರಿಂದ, ವಿಜ್ಞಾನವುಂಟಾಗದೆಯೇ ಪಡೆದುಕೊಳ್ಳುತ್ತಾರೆ[1]. ಮತ್ತು ಕೊಯ್ಯುವದು, ಕುಟ್ಟುವದು, ಬೀಸುವದು, ಅಡುವದು, ತಿನ್ನುವದು, ರಸಾದಿ(ರೂಪದಿಂದ) ಪರಿಣಮಿಸುವದು, ರೇತಃಸೇಚನವಾಗುವದು– (ಈ) ಕಾಲಗಳಲ್ಲಿ ದೇಹಾಂತರವನ್ನುಂಟುಮಾಡುವ ಕರ್ಮದ ವ್ಯಾಪಾರವು ಮೊದಲಾಗಿರುವದಿಲ್ಲವಾದ್ದರಿಂದ ಮೂರ್ಛಿತರಂತೆಯೇ (ಇರುತ್ತಾರೆ)[2]. ದೇಹಕ್ಕೆ ಬೀಜವಾಗಿರುವ ಅಪ್ಸಂಬಂಧವನ್ನು ಬಿಡದೆಯೇ ಎಲ್ಲಾ ಅವಸ್ಥೆಗಳಲ್ಲಿಯೂ ಇದ್ದುಕೊಂಡಿರುತ್ತಾರಾದ್ದರಿಂದ ಜಿಗಣೆಯಂತೆ ಚೇತನಾ

1. ಸ್ಥಾವರಗಳಾಗಿಯೇ ಹುಟ್ಟುವದಿಲ್ಲ.
2. ಆದ್ದರಿಂದ ಅವರಿಗೆ ನಡುವೆ ಆಗುವ ದುಃಖದ ಅರಿವಾಗುವದಿಲ್ಲ.

ವಂತರಾಗಿರುವದು ವಿರುದ್ಧವಲ್ಲ[1], ನಡುವೆ ಮಾತ್ರ ಮೂರ್ಛಿತರಂತೆಯೇ ವಿಜ್ಞಾನವಿರುವದಿಲ್ಲ. ಆದ್ದರಿಂದ (ಇಲ್ಲಿ ಯಾವ) ದೋಷವೂ ಇರುವದಿಲ್ಲ.

ವೈದಿಕಕರ್ಮಗಳು ಹಿಂಸಾಯುಕ್ತವಾಗಿರುವದರಿಂದ ಎರಡಕ್ಕೂ ಕಾರಣ ಎಂದು ಅನುಮಾನಿಸುವದಕ್ಕೂ ಆಗುವಂತಿಲ್ಲ[2]. ಏಕೆಂದರೆ (ಈ) ಹಿಂಸೆಯು ಶಾಸ್ತ್ರಚೋದಿತವಾಗಿರುತ್ತದೆ 'ತೀರ್ಥಗಳನ್ನು ಬಿಟ್ಟು ಮಿಕ್ಕ ಕಡೆಗಳಲ್ಲಿ ಯಾವ ಭೂತಗಳನ್ನೂ ಹಿಂಸಿಸದೆ' (೮-೧೫-೧) ಎಂದು ಶ್ರುತಿಯಿರುವದರಿಂದ ಶಾಸ್ತ್ರ ಚೋದಿತವಾಗಿರುವ ಹಿಂಸೆಯು ಅಧರ್ಮಕ್ಕೆ ಕಾರಣವೆಂಬುದನ್ನು (ನಾವು) ಒಪ್ಪು ವದಿಲ್ಲ[3]. (ಹಿಂಸೆಯು) ಅಧರ್ಮಕ್ಕೆ ಹೇತುವೇ ಎಂದು ಒಪ್ಪಿದರೂ ಮಂತ್ರ ಗಳಿಂದ ವಿಷಾದಿಗಳಂತೆ ಆ (ಅಧರ್ಮ)ವು ತೊಲಗಬಹುದಾಗಿದೆಯಾದ್ದರಿಂದ ವೈದಿಕಕರ್ಮಗಳಿಂದ—ಮಂತ್ರದಿಂದ ವಿಷಭಕ್ಷಣವು ಹೇಗೆ (ದುಃಖವನ್ನುಂಟು ಮಾಡಲಾರದೋ) ಹಾಗೆ—ದುಃಖರೂಪವಾದ ಕಾರ್ಯವುಂಟಾಗುವದಿಲ್ಲ

## ಅನುಶಯಿಗಳಿಗೆ ಜನ್ಮಾಂತರ

(ಉಪನಿಷತ್ತು)

**ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರಞ್ಶ್ವಯೋನಿಂ ವಾ ಸೂಕರಯೋನಿಂ ವಾ ಚಣ್ಡಾಲಯೋನಿಂ ವಾ ॥೭॥**

೭. ಅವರಲ್ಲಿ ಯಾರು ಇಲ್ಲಿ ರಮಣೀಯಚರಣರೋ ಅವರು ರಮಣೀಯಯೋನಿಯನ್ನು- ಬ್ರಾಹ್ಮಣಯೋನಿಯನ್ನೋ ಕ್ಷತ್ರಿಯ ಯೋನಿಯನ್ನೋ ವೈಶ್ಯಯೋನಿಯನ್ನೋ—ಬೇಗನೆ ಹಾಗೆ ಪಡೆಯು ವರು. ಇನ್ನು ಯಾರು ಇಲ್ಲಿ ಕಪೂಯಚರಣರೋ ಅವರು ಕಪೂಯ ಯೋನಿಯನ್ನು—ನಾಯಿಯ ಯೋನಿಯನ್ನೋ ಚಂಡಾಲಯೋನಿ ಯನ್ನೋ—ಬೇಗನೆ ಹಾಗೆ ಪಡೆಯುವರು.

---

1 ಚಂದ್ರಮಂಡಲಕ್ಕೆ ಹೋಗುವಾಗ ಅರಿವಿರುವದು ವಿರುದ್ಧವಲ್ಲ.

2. ವೈದಿಕಕರ್ಮದಿಂದ ಧರ್ಮವೂ ಅಧರ್ಮವೂ ಎರಡೂ ಆಗುತ್ತವೆಯಾದ್ದರಿಂದ ಅನುಶಯಿಗಳು ಅಧರ್ಮದಿಂದ ಸ್ಥಾವರರಾಗಿಯೇ ಅವರಿಗೆ ದುಃಖಾನುಭವವೂ ಆಗಬಹುದು, ಹುಟ್ಟಬಹುದು ಎನ್ನುವದಕ್ಕೂ ಬರುವದಿಲ್ಲ. ಸಾಂಖ್ಯಮತದಲ್ಲಿ ವೈದಿಕಕರ್ಮವೂ ಹಿಂಸಾ ರೂಪವಾಗಿರುವದರಿಂದ ಅದಕ್ಕೆ ದುಃಖಫಲವೂ ಆಗಬಹುದು. ವೇದಾಂತಿಗಳು ಇದನ್ನು ಒಪ್ಪುವದಿಲ್ಲ.

3. ಸೂ. ಭಾ. ೩-೧-೨೫ನ್ನು ನೋಡಿ.

# ಕರ್ಮಕ್ಕೆ ಅನುಗುಣವಾಗಿ ಜನ್ಮ

(ಭಾಷ್ಯ)

೪೧೪. ತತ್ ತತ್ರ ತೇಷು ಅನುಶಯಿನಾಂ ಯ ಇಹ ಲೋಕೇ ರಮಣೀಯಂ ಶೋಭನಂ ಚರಣಂ ಶೀಲಂ ಯೇಷಾಂ ತೇ ರಮಣೀಯಚರಣಾ ರಮಣೀಯಚರಣೇನೋಪಲಕ್ಷಿತಃ ಶೋಭನೋಽನುಶಯಃ ಪುಣ್ಯಂ ಕರ್ಮ ಯೇಷಾಂ ತೇ ರಮಣೀಯ ಚರಣಾ ಉಚ್ಯನ್ತೇ। ಕ್ರೌರ್ಯಾನೃತಮಾಯಾವರ್ಜಿತಾನಾಂ ಹಿ ಶಕ್ಯ ಉಪಲಕ್ಷಯಿತುಂ ಶುಭಾನುಶಯಸದ್ಭಾವಃ। ತೇನ ಅನುಶಯೇನ ಪುಣ್ಯೇನ ಕರ್ಮಣಾ ಚನ್ದ್ರಮಣ್ಡಲೇ ಭುಕ್ತಶೇಷೇಣ ಅಭ್ಯಾಶೋ ಹ ಕ್ಷಿಪ್ರಮೇವ। ಯದಿತಿ ಕ್ರಿಯಾವಿಶೇಷಣಮ್। ತೇ ರಮಣೀಯಾಂ ಕ್ರೌರ್ಯಾದಿವರ್ಜಿತಾಂ ಯೋನಿಮ್ ಆಪದ್ಯೇರನ್ ಪ್ರಾಪ್ನುಯುಃ। ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾ ಸ್ವಕರ್ಮಾನುರೂಪೇಣ। ಅಥ ಪುನರ್ಯೇ ತದ್ವಿಪರೀತಾಃ ಕಪೂಯಚರಣೋಪಲಕ್ಷಿತಕರ್ಮಾಣೋಽಶುಭಾನುಶಯಾ ಅಭ್ಯಾಶೋ ಹ ಯತ್ ತೇ ಕಪೂಯಾಂ ಯಥಾಕರ್ಮ ಯೋನಿಮ್ ಆಪದ್ಯೇರನ್ ಕಪೂಯಾಮೇವ ಧರ್ಮಸಂಬನ್ಧವರ್ಜಿತಾಂ ಜುಗುಪ್ಸಿತಾಂ ಯೋನಿಮ್ ಆಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಣ್ಡಾಲಯೋನಿಂ ವಾ ಸ್ವಕರ್ಮಾನುರೂಪೇಣೈವ ॥

(ಭಾಷ್ಯಾರ್ಥ)

(ತತ್=ತತ್ರ) ಅವರಲ್ಲಿ ಅನುಶಯಿಗಳೊಳಗೆ ಯಾರು ಈ ಲೋಕದಲ್ಲಿ ರಮಣೀಯವಾದ ಒಳ್ಳೆಯ ಚರಣವು ಶೀಲವು[1] ಯಾರಿಗೆ ಇರುವದೋ ಅವರು— ರಮಣೀಯವಾದ ನಡತೆಯಿಂದ ಒಳ್ಳೆಯ ಅನುಶಯವು, ಪುಣ್ಯಕರ್ಮವು ಯಾರಿಗೆ ಉಪಲಕ್ಷಿತವಾಗುತ್ತದೆಯೋ ಅವರನ್ನು ರಮಣೀಯಚರಣರು ಎಂದಿದೆ. ಕ್ರೌರ್ಯ, ಅನೃತ, ಮಾಯೆ- ಇವುಗಳಿಲ್ಲದವರಿಗೆ (ಹಿಂದೆ) ಒಳ್ಳೆಯ ಅನುಶಯವಿತ್ತೆಂದು ತಿಳಿಯುವದಕ್ಕೆ ಆಗುತ್ತದೆಯಲ್ಲವೆ ? ಚಂದ್ರಮಂಡಲದಲ್ಲಿ ಅನುಭವಿಸಿದಮೇಲೆ ಉಳಿದ ಅನುಶಯವೆಂಬ ಪುಣ್ಯಕರ್ಮದಿಂದ, (ಅಭ್ಯಾಶೋ ಹ=ಕ್ಷಿಪ್ರಮೇವ) ಬೇಗನೆಯೇ- ಯತ್ (=ಹಾಗೆ) ಎಂಬುದು ಕ್ರಿಯಾವಿಶೇಷಣವು- ಅವರು ರಮಣೀಯವಾದ ಕ್ರೌರ್ಯಾದಿಗಳಿಲ್ಲದ ಯೋನಿಯನ್ನು—ಬ್ರಾಹ್ಮಣಯೋನಿಯನ್ನೋ ಕ್ಷತ್ರಿಯಯೋನಿಯನ್ನೋ ವೈಶ್ಯಯೋನಿಯನ್ನೋ—ಸ್ವಕರ್ಮಾನುಸಾರವಾಗಿ ಪಡೆದುಕೊಳ್ಳುವರು. ಇನ್ನು ಯಾರಾದರೆ ಅವರಿಗೆ ವಿಪರೀತವಾಗಿ

---

1. ಅನುಶಯ, ಚರಣ, ಶೀಲ- ಇವುಗಳೆಲ್ಲ ಒಂದೇ. ಸೂ. ಭಾ. ೩-೧-೯ರಲ್ಲಿರುವ ಈ ವಿಷಯಕ್ಕೆ ಹೇಳಿರುವ ಪೂರ್ವಪಕ್ಷವನ್ನೂ ೩-೧-೧೦ರಲ್ಲಿ ಕೊಟ್ಟಿರುವ ಸಿದ್ಧಾಂತವನ್ನೂ ನೋಡಿರಿ.

ಕಪೂಯಚರಣದಿಂದ ಉಪಲಕ್ಷಿತವಾದ ಕರ್ಮಗಳುಳ್ಳವರೋ, ಎಂದರೆ ಕೆಟ್ಟ ಅನುಶಯವುಳ್ಳವರಾಗಿರುವರೋ, ಅವರು ಕಪೂಯವಾದ ಧರ್ಮದ ಸಂಬಂಧವು ಇಲ್ಲದೆಯೇ ಇರುವ ಅಸಹ್ಯಕರವಾದ ಯೋನಿಯನ್ನು—ನಾಯಿಯ ಯೋನಿಯನ್ನೋ ಹಂದಿಯ ಯೋನಿಯನ್ನೋ ಚಂಡಾಲಯೋನಿಯನ್ನೋ—ಅವರ ಕರ್ಮಕ್ಕೆ ಅನುರೂಪವಾಗಿಯೇ ಬೇಗನೆ ಹಾಗೆ ಪಡೆದುಕೊಳ್ಳುವರು.

## ಕರ್ಮಿಗಳೂ ಉಪಾಸಕರೂ ಅಲ್ಲದವರಿಗೆ ಗತಿ

(ಉಪನಿಷತ್ತು)

**ಅಥೈತಯೋಃ ಪಥೋ ರ್ನ ಕತರೇಣ ಚ ನ ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವನ್ತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಗ್ಂ ಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ ತಸ್ಮಾಜ್ಜುಗುಪ್ಸೇತ ತದೇಷ ಶ್ಲೋಕಃ ॥೮॥**

೮. ಇನ್ನು ಈ ಎರಡು ಮಾರ್ಗಗಳಲ್ಲಿ ಯಾವದೊಂದರಿಂದಲೂ ಅಲ್ಲದೆ (ಇರುವವರಲ್ಲ, ಅವರು) ಆ ಈ ಕ್ಷುದ್ರವಾದ ಮತ್ತೆಮತ್ತೆ ಆವೃತ್ತವಾಗುವ ಭೂತಗಳಾಗುವರು. ಹುಟ್ಟುವದು, ಸಾಯುವದು-ಎಂಬಿದು ಮೂರನೆಯ ಸ್ಥಾನವು. ಅದರಿಂದ ಆ ಲೋಕವು ತುಂಬುವದಿಲ್ಲ. ಆದ್ದರಿಂದ ಜುಗುಪ್ಸೆಪಡಬೇಕು.

## ಕರ್ಮಿಗಳೂ ಉಪಾಸಕರೂ ಅಲ್ಲದವರಿಗೆ ದುರ್ಗತಿ

(ಭಾಷ್ಯ)

೪೧೫. ಯೇ ತು ರಮಣೀಯಚರಣಾ ದ್ವಿಜಾತಯಃ, ತೇ ಸ್ವಕರ್ಮಸ್ಥಾಶ್ಚೇದಿಷ್ಟಾದಿಕಾರಿಣಃ, ತೇ ಧೂಮಾದಿಗತ್ಯಾ ಗಚ್ಛನ್ತಿ, ಆಗಚ್ಛನ್ತಿ ಚ ಪುನಃಪುನಃ, ಘಟೀಯನ್ತ್ರವತ್। ವಿದ್ಯಾಂ ಚೇತ್ ಪ್ರಾಪ್ನುಯಃ, ತದಾ ಅರ್ಚಿರಾದಿನಾ ಗಚ್ಛನ್ತಿ। ಯದಾ ತು ನ ವಿದ್ಯಾಸೇವಿನಃ, ನಾಪಿ ಇಷ್ಟಾದಿಕರ್ಮ ಸೇವನ್ತೇ, ತದಾ ಅಥೈತಯೋಃ ಪಥೋಃ ಯಥೋಕ್ತಯೋಃ ಅರ್ಚಿರ್ಧೂಮಾದಿಲಕ್ಷಣಯೋಃ ನ ಕತರೇಣ ಅನ್ಯತರೇಣ ಚ ನ ಅಪಿ ಯನ್ತಿ। ತಾನೀಮಾನಿ ಭೂತಾನಿ ಕ್ಷುದ್ರಾಣಿ ದಂಶಮಶಕಕೀಟಾದೀನಿ ಅಸಕೃದಾವರ್ತೀನಿ ಭವನ್ತಿ। ಅತಃ ಉಭಯಮಾರ್ಗಪರಿಭ್ರಷ್ಟಾ ಹಿ ಅಸಕೃಜ್ಜಾಯನ್ತೇ ಮ್ರಿಯನ್ತೇ ಚೇತ್ಯರ್ಥಃ। ತೇಷಾಂ ಜನನಮರಣಸಂತತೇರನುಕರಣಮಿದಮ್ ಉಚ್ಯತೇ। ಜಾಯಸ್ವ ಮ್ರಿಯಸ್ವ ಇತಿ ಈಶ್ವರ

ನಿಮಿತ್ತಾ ಚೇಷ್ಟಾ ಉಚ್ಯತೇ। ಜನನಮರಣಕ್ಷಣೇನೈವ[1] ಕಾಲ ಯಾ ಪ ನಾ ಭವತಿ ನ ತು ಕ್ರಿಯಾಸು ಶೋಭನೇಷು[2] ಭೋಗೇಷು ವಾ ಕಾಲೋಽಸ್ತೀತ್ಯರ್ಥಃ। ಏತತ್ ಕ್ಷುದ್ರಜನ್ತುಲಕ್ಷಣಂ ತೃತೀಯಂ ಪೂರ್ವೋಕ್ತೌ ಪನ್ಥಾನಾವಪೇಕ್ಷ್ಯ ಸ್ಥಾನಂ ಸಂಸರತಾಮ್ ॥

(ಭಾಷ್ಯಾರ್ಥ)

ರಮಣೀಯಚರಣರಾದ ದ್ವಿಜರಿದ್ದಾರಲ್ಲ, ಅವರು ಸ್ವಕರ್ಮದಲ್ಲಿ ನಿಷ್ಠರಾಗಿ ಇಷ್ಟಾದಿಕಾರಿಗಳಾಗಿದ್ದರೆ, ಅವರು ಗಡಿಗೆಯ ರಾಟೆಯಂತೆ ಧೂಮಾದಿಮಾರ್ಗದಿಂದ ಮತ್ತೆಮತ್ತೆ ಹೋಗುತ್ತಾರೆ, ಬರುತ್ತಾರೆ[3], ವಿದ್ಯೆಯನ್ನು[4] ನಡೆಯುತ್ತಾರಾದರೆ ಆಗ ಅರ್ಚಿರಾದಿ(ಮಾರ್ಗ)ದಿಂದ ಹೋಗುತ್ತಾರೆ. ಆದರೆ ಯಾವಾಗ ವಿದ್ಯೆಯನ್ನೂ ಅನುಷ್ಠಾನಮಾಡದೆ, ಇಷ್ಟಾದಿಕರ್ಮಗಳನ್ನೂ ಮಾಡದೆ ಇರುವರೋ ಆಗ ಇನ್ನು ಈ ಅರ್ಚಿರಾದಿಧೂಮಾದಿರೂಪವಾದ ಈ ಎರಡು ಮಾರ್ಗಗಳಲ್ಲಿ[5] ಯಾವದರಿಂದಲೂ ಒಂದರಿಂದಲೂ ಕೂಡ ಹೋಗುವದಿಲ್ಲ, ಆ ಈ ಕಣಜ, ಸೊಳ್ಳೆ, ಹುಳು- ಮುಂತಾದ ಮತ್ತೆಮತ್ತೆ ಹಿಂತಿರುಗುವ ಅಲ್ಪಪ್ರಾಣಿಗಳಾಗುವರು ಆದ್ದರಿಂದ (ಈ) ಎರಡು ಮಾರ್ಗಗಳಿಂದಲೂ ಭ್ರಷ್ಟರಾಗಿ ಅನೇಕ ವೇಳೆ ಹುಟ್ಟುತ್ತಲೂ ಸಾಯುತ್ತಲೂ ಇರುವರು ಎಂದರ್ಥ. ಅವರಿಗೆ (ಆಗುವ) ಜನನಮರಣಗಳ ಸಾಲನ್ನು ಅನುಕರಣಮಾಡಿ ಇದನ್ನು ಹೇಳಿರುತ್ತಾರೆ 'ಸಾಯುವದು, ಹುಟ್ಟುವದು' ಎಂದು ಈಶ್ವರನಿಮಿತ್ತವಾದ ವ್ಯಾಪಾರವನ್ನು ಹೇಳಿದೆ[6] ಜನನಮರಣಕ್ಷಣದಿಂದಲೇ[7] ಕಾಲಯಾಪನೆಯಾಗುತ್ತದೆಯೇ ಹೊರತು, ಕ್ರಿಯೆಗಳಿಗಾಗಲಿ ಒಳ್ಳೆಯ ಭೋಗಗಳಿಗಾಗಲಿ ಕಾಲವಿರುವದಿಲ್ಲ[8] ಎಂದರ್ಥ ಈ ಅಲ್ಪಜಂತುಲಕ್ಷಣವಾದ (ಸ್ಥಾನವು) ಹಿಂದೆ ಹೇಳಿದ ಎರಡು ಮಾರ್ಗಗಳಿಗಿಂತ ಸಂಸಾರಿಗಳಿಗೆ ಬೇರೆಯಾದ ಮತ್ತೊಂದು ಸ್ಥಾನವು

---

1. 'ಲಕ್ಷಣೇನೈವ'- ಎಂಬುದು ಕ್ಷಣೇನೈವ ಎಂದಿದ್ದರೆ ಒಳ್ಳೆಯದು.
2. ಇದು ಒಂದು ಕೋಶದಲ್ಲಿ ಮಾತ್ರ ಇದೆಯಂತೆ, ಇಲ್ಲದಿದ್ದರೂ ಆಗುತ್ತದೆ
3. ಬೃ. ಭಾ. ೬-೨-೧೬ (ಭಾ. ಭಾ. ೪೪೮)ನ್ನು ನೋಡಿ.
4. ಪಂಚಾಗ್ನಿವಿದ್ಯೆಯನ್ನು ಅಥವಾ ಹಿರಣ್ಯಗರ್ಭಾದಿವಿದ್ಯೆಯನ್ನು
5. ವಿದ್ಯಾಕರ್ಮಗಳಿಗೆ ಹೇಳಿರುವ ಮಾರ್ಗಗಳಲ್ಲಿ ಎಂದರ್ಥ ಕರ್ಮೋಪಾಸನೆಗಳಿಲ್ಲದ ಪಾಪಿಗಳಿಗೆ ಚಂದ್ರಲೋಕವಿಲ್ಲವೆಂಬುದಕ್ಕೆ ಇದೂ ಒಂದು ಗುರುತು. ಸೂ. ಭಾ ೩-೧-೧೭ (ಭಾ. ಭಾ. ೨೩೯)
6. ಮತ್ತೆಮತ್ತೆ ಹುಟ್ಟಿಸಾಯುವದು ಎಂಬುದನ್ನು 'ಜಾಯಸ್ವ ಮ್ರಿಯಸ್ವ' ಎಂದು ತಿಳಿಸಿದೆ 'ಈಶ್ವರನು ಮಾರ್ಗದ್ವಯಭ್ರಷ್ಟರನ್ನು ಕಂಡು ಹುಟ್ಟು, ಸಾಯಿ- ಎಂದು ಪ್ರೇರಿಸುತ್ತಾನೆ' ಎಂಬ ಟೀಕೆ ಸರಿಯಲ್ಲ, ಈಶ್ವರನು ಸಲಕ್ಕ ನಿಮಿತ್ತನೇ ಹೊರತು ತಾನೇ ನೇರಾಗಿ 'ಹುಟ್ಟು, ಸಾಯಿ' ಎಂದು ಹೇಳುವದಿಲ್ಲ
7. ಹುಟ್ಟುವ ಕ್ಷಣ ಒಂದು ಸಾಯುವ ಕ್ಷಣ ಒಂದು -ಹೀಗೆಯೇ ಎಂದರ್ಥ.
8. ಅಷ್ಟು ಬೇಗಬೇಗ ಅವರು ಹುಟ್ಟಿಹುಟ್ಟಿ ಸಾಯುತ್ತಾರೆ.

# ಜೈವಲಿಯ ಪ್ರಶ್ನೆಗಳಿಗೆ ಉತ್ತರಗಳ ವಿನಿಯೋಗ

(ಭಾಷ್ಯ)

೪೧೭. ಯೇನ್ಯೈವಂ ದಕ್ಷಿಣಮಾರ್ಗಗಾ ಅಪಿ ಪುನರಾಗಚ್ಛನ್ತಿ, ಅನಧಿಕೃತಾನಾಂ ಜ್ಞಾನಕರ್ಮಣೋರಗಮನಮೇವ ದಕ್ಷಿಣೇನ ಪಥಾ ಇತಿ ತೇನಾಸೌ ಲೋಕೋ ನ ಸಂಪೂರ್ಯತೇ। ಪಞ್ಚಮಸ್ತು ಪ್ರಶ್ನಃ ಪಞ್ಚಾಗ್ನಿವಿದ್ಯಯಾ ವ್ಯಾಖ್ಯಾತಃ। ಪ್ರಥಮೋ ದಕ್ಷಿಣೋತ್ತರಮಾರ್ಗಾಭ್ಯಾಮುಪಾಕೃತಃ। ದಕ್ಷಿಣೋತ್ತರಯೋಃ ಪಥೋರ್ವ್ಯಾವರ್ತನಾಪಿ 'ಮೃತಾನಾಮಗ್ನೌ ಪ್ರಕ್ಷೇಪಃ ಸಮಾನಃ। ತತೋ ವ್ಯಾವರ್ತ್ಯ ಅನ್ಯೇಽರ್ಚಿರಾದಿನಾ ಯನ್ತಿ, ಅನ್ಯೇ ಧೂಮಾದಿನಾ ಪುನರುತ್ತರದಕ್ಷಿಣಾಯನೇ ಷಣ್ಮಾಸಾನ್ ಪ್ರಾಪ್ನುವನ್ತಃ ಸಂಯುಜ್ಯ ಪುನರ್ವ್ಯಾವರ್ತನ್ತೇ ಅನ್ಯೇ ಸಂವತ್ಸರಮ್, ಅನ್ಯೇ ಮಾಸೇಭ್ಯಃ ಪಿತೃಲೋಕಮ್— ಇತಿ ವ್ಯಾಖ್ಯಾತಾ। ಪುನರಾವೃತ್ತಿರಪಿ ಕ್ಷೀಣಾನುಶಯಾನಾಂ ಚನ್ದ್ರಮಣ್ಡಲಾತ್ ಆಕಾಶಾದಿಕ್ರಮೇಣೋಕ್ತಾ। ಅಮುಷ್ಯಲೋಕಸ್ಯಾಪೂರಣಂ ಸ್ವಶಬ್ದೇನೈವೋಕ್ತಮ್ ತೇನಾಸೌ ಲೋಕೋ ನ ಸಂಪೂರ್ಯತ ಇತಿ ॥

(ಭಾಷ್ಯಾರ್ಥ)

ಹೀಗೆ ದಕ್ಷಿಣಮಾರ್ಗದಲ್ಲಿ ಹೋಗುವವರೂ ಮತ್ತೆ ಬರುತ್ತಾರಷ್ಟೆ, ಜ್ಞಾನಕರ್ಮಗಳಲ್ಲಿ ಅಧಿಕಾರಿಗಳಲ್ಲದವರಿಗೆ ದಕ್ಷಿಣಮಾರ್ಗದಿಂದ ಹೋಗುವಿಕೆಯೇ ಇಲ್ಲವಷ್ಟೆ, ಅದರಿಂದ ಆ ಲೋಕವು ತುಂಬುವದಿಲ್ಲ ಐದನೆಯ[1] ಪ್ರಶ್ನೆಗೆ ಪಂಚಾಗ್ನಿವಿದ್ಯೆಯಿಂದ ಉತ್ತರಹೇಳಿದ್ದಾಯಿತು. ಮೊದಲನೆಯ (ಪ್ರಶ್ನೆಗೆ)[2] ದಕ್ಷಿಣೋತ್ತರಮಾರ್ಗಗಳನ್ನು (ವಿವರಿಸಿದ್ದರಿಂದ) ಉತ್ತರ ಹೇಳಿದಂತಾಯಿತು. ದಕ್ಷಿಣೋತ್ತರಮಾರ್ಗಗಳ ವ್ಯಾವರ್ತನೆಯನ್ನು[3] 'ಸತ್ತವರನ್ನು ಅಗ್ನಿಯಲ್ಲಿ ಹಾಕುವದು ಸಮಾನವು, ಅಲ್ಲಿಂದ ಬೇರೆಬೇರೆಯಾಗಿ ಕೆಲವರು ಅರ್ಚಿರಾದಿಮಾರ್ಗದಿಂದಲೂ ಮತ್ತೆ ಕೆಲವರು ಧೂಮಾದಿ(ಮಾರ್ಗ)ದಿಂದಲೂ ಹೋಗುತ್ತಾರೆ. ಮತ್ತೂ ಉತ್ತರದಕ್ಷಿಣಾಯನದಲ್ಲಿ ಷಣ್ಮಾಸಗಳನ್ನು ಸೇರಿದವರು ಕೂಡಿದ್ದು ಮತ್ತೆ (ಒಬ್ಬರನ್ನೊಬ್ಬರು) ಅಗಲುತ್ತಾರೆ ಕೆಲವರು ಸಂವತ್ಸರವನ್ನೂ ಕೆಲವರು ಮಾಸಗಳಿಂದ ಪಿತೃಲೋಕವನ್ನೂ (ಸೇರುತ್ತಾರೆ)– ಎಂದು ವಿವರಿಸಿದ್ದಾಯಿತು. ಪುನರಾವೃತ್ತಿ

---

1. ಅಪ್ಪು ಐದನೆಯ ಆಹುತಿಯಲ್ಲಿ ಹೇಗೆ ಪುರುಷಶಬ್ದವಾಚ್ಯವಾಗುತ್ತವೆ ?– ಎಂಬ ಪ್ರಶ್ನೆಗೆ.

2. ಇಲ್ಲಿಂದ ಪ್ರಜೆಗಳು ಎಲ್ಲಿಗೆ ಹೋಗುತ್ತಾರೆ ?– ಎಂಬ ಪ್ರಶ್ನೆಗೆ

3. ದೇವಯಾನ ಪಿತೃಯಾಣಗಳು ಒಂದನ್ನೊಂದು ಬಿಟ್ಟಗಲುವ ಸ್ಥಾನವು ಯಾವದು' ಎಂಬ ಪ್ರಶ್ನೆಯನ್ನು

ಯನ್ನು[1] ಅನುಶಯವು[2] ಕ್ಷೀಣವಾದವರಿಗೆ ಚಂದ್ರಮಂಡಲದಿಂದ ಆಕಾಶಾದಿ ಕ್ರಮದಿಂದ (ಹಿಂತಿರುಗುವರು) ಎಂದು ಹೇಳಿದ್ದಾಗಿದೆ. ಆ ಲೋಕವು ಹೇಗೆ ತುಂಬುವದಿಲ್ಲ ಎಂಬುದನ್ನು 'ಅದರಿಂದ ಆ ಲೋಕವು ತುಂಬುವದಿಲ್ಲ' ಎಂದು (ಇಲ್ಲಿ) ಸ್ವಶಬ್ದದಿಂದಲೇ (ಶ್ರುತಿಯು) ಹೇಳಿದೆ.

## ವೈರಾಗ್ಯೋಪದೇಶ

(ಭಾಷ್ಯ)

೪೧೭. ಯಸ್ಮಾದೇವಂ ಕಷ್ಟಾ ಸಂಸಾರಗತಿಃ । ತಸ್ಮಾಜ್ಜುಗುಪ್ಸೇತ । ಯಸ್ಮಾಚ್ಚ ಜನ್ಮಮರಣಜನಿತವೇದನಾನುಭವಕೃತಕ್ಷಣಾಃ ಕ್ಷುದ್ರಜನ್ತವೋ ಧ್ವಾನ್ತೇ ಚ ಘೋರೇ ದುಸ್ತರೇ ಪ್ರವೇಶಿತಾಃ, ಸಾಗರ ಇವ ಅಗಾಧೇಽಪ್ಲವೇ ನಿರಾಶಾಶ್ಚೋತ್ತರಣಂ ಪ್ರತಿ, ತಸ್ಮಾಚ್ಚೈವಂವಿಧಾಂ ಸಂಸಾರಗತಿಂ ಜುಗುಪ್ಸೇತ ಬೀಭತ್ಸೇತ ಘೃಣೀ ಭವೇತ್ 'ಮಾ ಭೂದೇವಂವಿಧೇ ಸಂಸಾರಮಹೋದಧೌ ಘೋರೇ ಪಾತಃ' ಇತಿ। ತದೇತಸ್ಮಿನ್ ಅರ್ಥೇ ಏಷ ಶ್ಲೋಕಃ ಪಞ್ಚಾಗ್ನಿವಿದ್ಯಾಸ್ತುತಯೇ ॥

(ಭಾಷ್ಯಾರ್ಥ)

ಹೀಗೆ ಸಂಸಾರಗತಿಯು (ಇಷ್ಟು) ಕಷ್ಟವಾಗಿರುವವಷ್ಟೆ, ಆದ್ದರಿಂದ ಜುಗುಪ್ಸೆಮಾಡಬೇಕು. ಮತ್ತು ಅಲ್ಪಜಂತುಗಳು ಹುಟ್ಟುಸಾವುಗಳಿಂದಾಗುವ ವೇದನಾನುಭವದಿಂದಾಗಿರುವ ಕ್ಷಣವುಳ್ಳವಾಗಿ—ಆಳವಾದ ದೋಣಿಯಿಲ್ಲದ ಸಾಗರದಲ್ಲಿ ಹೇಗೋ ಹಾಗೆ ಘೋರವಾದ ದಾಟಲಶಕ್ಯವಾದ ಅಂಧಕಾರದಲ್ಲಿ ಪ್ರವೇಶಿತವಾಗಿ (ಅದನ್ನು) ದಾಟುವ ಆಶೆಯಿಲ್ಲದೆ ಇರುವವಷ್ಟೆ, ಆದ್ದರಿಂದಲೂ ಈ ಬಗೆಯ ಸಂಸಾರಗತಿಯನ್ನು ಜುಗುಪ್ಸೆಮಾಡಬೇಕು, ಕಂಡುಬೆಚ್ಚಬೇಕು ; ಘೋರವಾದ ಮಹಾಸಾಗರದಲ್ಲಿ ಪಾತವಾಗದೆ ಇರಲಪ್ಪ !- ಎಂದು (ಇದಕ್ಕೆ) ಹೇಸಬೇಕು, ಈ ವಿಧವಾದ ಸಂಸಾರದಲ್ಲಿ ಬೇಸರಪಡಬೇಕು. ಆ ಈ ಅರ್ಥದಲ್ಲಿ ಪಂಚಾಗ್ನಿವಿದ್ಯೆಯನ್ನು ಹೊಗಳುವದಕ್ಕಾಗಿ ಈ (ಮುಂದಿನ) ಶ್ಲೋಕವು (ಬಂದಿರುತ್ತದೆ).

## ಪಂಚಾಗ್ನಿವಿದ್ಯೆಯ ಸ್ತುತಿ

(ಉಪನಿಷತ್ತು)

**ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಗ್ಂಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ ಚೈತೇ ಪತನ್ತಿ ಚತ್ವಾರಃ ಪಞ್ಚಮಶ್ಚಾಚರಗ್ಂಸ್ತೈರಿತಿ ॥ ೯ ॥**

1. ಎರಡನೆಯ ಪ್ರಶ್ನೆಗೆ ಎಂದರ್ಥ.
2. ಕರ್ಮವು.

**ಅಥ ಹ ಯ ಏತಾನೇವಂ ಪಞ್ಚಾಗ್ನೀನ್ ವೇದ ನ ಸಹ ತೈರ ಪ್ಯಾಚರನ್ ಪಾಪ್ಮನಾ ಲಿಪ್ಯತೇ ಶುದ್ಧಃ ಪೂತಃ ಪುಣ್ಯಲೋಕೋ ಭವತಿ ಯ ಏವಂ ವೇದ ಯ ಏವಂ ವೇದ ॥ ೧೦ ॥**

೯. ಹಿರಣ್ಯದ ಸ್ತೇನನು, ಸುರೆಯನ್ನು ಪಾನಮಾಡುವವನು, ಗುರುವಿನ ತಲ್ಪದಲ್ಲಿ ವಾಸಮಾಡುವವನು, ಬ್ರಹ್ಮಹತ್ಯೆ ಮಾಡುವವನು –ಈ ನಾಲ್ವರು ಪತಿತರಾಗುವರು. ಅವರೊಡನೆ ಆಚಾರಮಾಡುವ ಐದನೆಯವನೂ (ಪತಿತನಾಗುವನು).

೧೦. ಇನ್ನು ಯಾವನು ಈ ಪಂಚಾಗ್ನಿಗಳನ್ನು ಹೀಗೆಂದರಿತು ಕೊಂಡಿರುವನೋ ಅವರೊಡನೆ ಆಚರಣೆಮಾಡಿದರೂ (ಅವನು) ಪಾಪ ದಿಂದ ಲಿಪ್ತನಾಗುವದಿಲ್ಲ. ಯಾವನು ಹೀಗೆ ಅರಿತಿರುವನೋ ಯಾವನು ಹೇಗೆ ಅರಿತಿರುವನೋ, (ಅವನು) ಶುದ್ಧನಾಗಿ ಪೂತನಾಗಿ ಪುಣ್ಯ ಲೋಕನಾಗುವನು.

## ಮಹಾಪಾತಕಿಗಳ ಸವ್ಯವಹಾರದಿಂದಲೂ ಪಂಚಾಗ್ನ್ಯುಪಾಸಕನಿಗೆ ದೋಷವಾಗದು

(ಭಾಷ್ಯ)

೪೧೮. ಸ್ತೇನೋ ಹಿರಣ್ಯಸ್ಯ ಬ್ರಾಹ್ಮಣಸುವರ್ಣಸ್ಯ ಹರ್ತಾ, ಸುರಾಂ ಪಿಬನ್ ಬ್ರಾಹ್ಮಣಃ ಸನ್, ಗುರೋಶ್ಚ ತಲ್ಪಂ ದಾರಾನ್ ಆವಸನ್। ಬ್ರಹ್ಮಹಾ ಬ್ರಾಹ್ಮಣಸ್ಯ ಹನ್ತಾ ಚ ಇತ್ಯೇತೇ ಪತನ್ತಿ ಚತ್ವಾರಃ। ಪಞ್ಚಮಶ್ಚ ತೈಃ ಸಹ ಆಚರನ್ ಇತಿ ॥

ಅಥ ಹ ಪುನಃ ಯೋ ಯಥೋಕ್ತಾನ್ ಪಞ್ಚಾಗ್ನೀನ್ ವೇದ ಸ ತೈರಪ್ಯಾ ಚರನ್ ಮಹಾಪಾತಕಿಭಿಃ ಸಹ ನ ಪಾಪ್ಮನಾ ಲಿಪ್ಯತೇ, ಶುದ್ಧ ಏವ। ತೇನ ಪಞ್ಚಾಗ್ನಿದರ್ಶನೇನ ಪಾವಿತಃ ಯಸ್ಮಾತ್ ಪೂತಃ ಪುಣ್ಯೋ ಲೋಕಃ ಪ್ರಜಾ ಪತ್ಯಾದಿರ್ಯಸ್ಯ ಸೋಽಯಂ ಪುಣ್ಯಲೋಕಃ ಭವತಿ। ಯ ಏವಂ ವೇದ ಯಥೋಕ್ತಂ ಸಮಸ್ತಂ ಪಞ್ಚಭಿಃ ಪ್ರಶ್ನೈಃ ಪೃಷ್ಟಮರ್ಥಜಾತಂ ವೇದ। ದ್ವಿರುಕ್ತಿಃ ಸಮಸ್ತಪ್ರಶ್ನನಿರ್ಣಯಪ್ರದರ್ಶನಾರ್ಥಾ ॥

(ಭಾಷ್ಯಾರ್ಥ)

ಹಿರಣ್ಯದ ಸ್ತೇನನು, ಬ್ರಾಹ್ಮಣನ ಚಿನ್ನವನ್ನು ಕದ್ದವನು : ಬ್ರಾಹ್ಮಣನಾಗಿ ಸುರೆಯನ್ನು ಕುಡಿಯುವವನು , ಮತ್ತು ಗುರುವಿನ ತಲ್ಪದಲ್ಲಿ ವಾಸಮಾಡುವವನು,

(ಅವನ) ಹೆಂಡತಿಯನ್ನು (ಗಮನಮಾಡುವವನು), ಬ್ರಹ್ಮಹತ್ಯೆಯನ್ನು ಮಾಡುವವನು, ಬ್ರಾಹ್ಮಣನನ್ನು ಕೊಂದವನು – ಈ ನಾಲ್ವರು ಪತಿತರಾಗುತ್ತಾರೆ. ಮತ್ತು ಅವರೊಡನೆ ಆಚರಣೆಮಾಡುವ ಐದನೆಯವನೂ (ಪತಿತನಾಗುವನು).

(ಆದರೆ) ಇನ್ನು ಯಾವನಾದರೆ ಮೇಲೆ ಹೇಳಿರುವ ಪಂಚಾಗ್ನಿಗಳನ್ನು ಅರಿತುಕೊಂಡಿರುವನೋ, ಅವನು ಆ ಮಹಾಪಾತಕಿಗಳೊಡನೆ ಸಹಾಚರಣೆಮಾಡಿಕೊಂಡಿದ್ದರೂ ಪಾಪದಿಂದ ಲಿಪ್ತನಾಗುವದಿಲ್ಲ, ಶುದ್ಧನೇ. ಆ ಪಂಚಾಗ್ನಿದರ್ಶನದಿಂದ ಪವಿತ್ರಗೊಳಿಸಲ್ಪಟ್ಟು ಪೂತನಾಗಿರುವನಾದ್ದರಿಂದ ಪುಣ್ಯಲೋಕನು– ಪ್ರಾಜಾಪತ್ಯವೇ ಮುಂತಾದ ಪುಣ್ಯವಾದ ಲೋಕವು ಯಾವನಿಗಾಗುವದೋ ಅವನು ಪುಣ್ಯಲೋಕನು– ಆಗುವನು. ಯಾವನು ಮೇಲೆ ಹೇಳಿದ ಐದು ಪ್ರಶ್ನೆಗಳಿಂದ ಕೇಳಿರುವ ಅರ್ಥಜಾತವನ್ನು ಅರಿತುಕೊಂಡಿರುವನೋ ಅವನು (ಹೀಗೆ ಪೂತನಾಗಿ ಪುಣ್ಯಲೋಕನಾಗುವನು. (ಯಾವನು ಹೀಗೆಂದರಿತಿರುವನೋ ಎಂದು) ಎರಡು ಸಲ ಹೇಳಿರುವದು ಸಮಸ್ತಪ್ರಶ್ನೆಗಳ ನಿರ್ಣಯವೂ (ಆಯಿತೆಂದು) ತಿಳಿಸುವದಕ್ಕೆ.

---

# ಐದನೆಯ ಅಧ್ಯಾಯದ ಮೂರರಿಂದ ಹತ್ತನೆಯ ಖಂಡದವರೆಗಿನ ಗ್ರಂಥಸಾರ

ಇವುಗಳಲ್ಲಿ ಪಂಚಾಗ್ನಿವಿದ್ಯೆಯ ವಿವರಣೆಯೂ ಸಂಸಾರಗತಿಯ ವರ್ಣನೆಯೂ ಇವೆ

## ಮೂರನೆಯ ಖಂಡ

೧-೩. ಆರುಣೇಯಶ್ವೇತಕೇತು ಪಂಚಾಲರಾಜನಾದ ಪ್ರವಾಹಣಜೈವಲಿಯ ಬಳಿಗೆ ಬಂದನು. ರಾಜನು 'ನಿಮ್ಮ ತಂದೆಯು ನಿನಗೆ ಅನುಶಾಸನಮಾಡಿದ್ದಾನೊ ?' ಎಂದು ಕೇಳಲು 'ಮಾಡಿದ್ದಾನೆ' ಎಂದು ಅವನು ಉತ್ತರಕೊಟ್ಟನು. ರಾಜನು ಅವನನ್ನು ಐದು ಪ್ರಶ್ನೆಗಳನ್ನು ಕೇಳಿದನು (೧) ಇಲ್ಲಿಂದ ಹೋದವರು ಎಲ್ಲಿಗೆ ಹೋಗುತ್ತಾರೆ ? (೨) ಅವರು ಹಿಂತಿರುಗಿ ಬರುವದು ಹೇಗೆ ? (೩) ದೇವಯಾನಪಿತೃಯಾಣಗಳು ಅಗಲುವದು ಎಲ್ಲಿ ? (೪) ದ್ಯುಲೋಕವು ಪೂರ್ಣವಾಗುವದಿಲ್ಲವೇಕೆ ? (೫) ಐದನೆಯ ಆಹುತಿಯಲ್ಲಿ ಅಪ್ಪು ಪುರುಷ ಶಬ್ದವಾಚ್ಯವಾಗುವದು ಹೇಗೆ ?

ನನಗೆ ಇವುಗಳಲ್ಲಿ ಒಂದೂ ತಿಳಿಯದು ಎಂದು ಶ್ವೇತಕೇತು ಹೇಳಿದನು

೪ 'ಹಾಗಾದರೆ ನನಗೆ ಅನುಶಾಸನವಾಗಿದೆ ಎಂದು ಏಕೆ ಹೇಳಿದೆ ? ಇವುಗಳನ್ನು ತಿಳಿಯದೆ ಅನುಶಿಷ್ಟನಾಗಿರುವೆನೆಂದು ಹೇಳಬಹುದೆ ?' ಎಂದು ರಾಜನು ಹಂಗಿಸಿದನು. ಶ್ವೇತಕೇತು ತಂದೆಯಬಳಿಗೆ ಬಂದು 'ನೀನು ನನಗೆ ಅನುಶಾಸನಮಾಡಿದೇನೆಂದಿದ್ದೆಯಲ್ಲ' ರಾಜನು ಕೇಳಿದ ಐದು ಪ್ರಶ್ನೆಗಳಿಗೂ ನನಗೆ ಉತ್ತರವು ತಿಳಿಯಲೇ ಇಲ್ಲ' ಎಂದು ದೂರುಹೇಳಿಕೊಂಡನು. 'ನನಗೂ ಇವುಗಳ ಉತ್ತರವು ತಿಳಿಯದು, ತಿಳಿದಿದ್ದರೆ ನಿನಗೆ ಹೇಗೆತಾನೆ ಹೇಳದೆ ಇರುತ್ತಿದ್ದೆನು ?' ಎಂದು ತಂದೆಯು ರಾಜನ ಬಳಿಗೆ ಬಂದು ಸತ್ಕಾರವನ್ನು ಹೊಂದಿದ ಬಳಿಕ ರಾಜನು 'ಮಾನುಷವಿತ್ತವನ್ನು ಕೇಳಿಕೊ'' ಎಂದನು ಗೌತಮನು 'ನನಗೇನೂ ಆ ವಿತ್ತವು ಬೇಡ, ನನ್ನ ಮಗನಿಗೆ ನೀನು ಹಾಕಿದ ಪ್ರಶ್ನೆಗಳ ಉತ್ತರವನ್ನು ತಿಳಿಸಿಕೊಡು' ಎಂದು ಕೇಳಿಕೊಂಡನು. ರಾಜನು ಅವನನ್ನು ಚಿರಕಾಲ ಬ್ರಹ್ಮಚರ್ಯದಿಂದಿರುವಂತೆ ಹೇಳಿ ಕೊನೆಗೆ ವಿನಯದಿಂದ ಈ ಪಂಚಾಗ್ನಿವಿದ್ಯೆಯನ್ನು ಹೇಳಿಕೊಟ್ಟನು.

## ನಾಲ್ಕನೆಯ ಖಂಡದಿಂದ ಎಂಟನೆಯ ಖಂಡದವರೆಗೆ

ಐದನೆಯ ಪ್ರಶ್ನೆಗೆ ಉತ್ತರವಿದು ದ್ಯುಲೋಕವೆಂಬ ಅಗ್ನಿಗೆ ಆದಿತ್ಯನು ಸಮಿತ್ತು, ರಶ್ಮಿಗಳು ಹೊಗೆ, ಹಗಲು ಉರಿ, ಚಂದ್ರನು ಕೆಂಡ, ನಕ್ಷತ್ರಗಳು ಕಿಡಿಗಳು ಈ ಅಗ್ನಿಯಲ್ಲಿ ಶ್ರದ್ಧಾಶಬ್ದವಾಚ್ಯವಾದ ಅಪ್ಪನ್ನು ದೇವತೆಗಳು ಹೋಮಮಾಡಲು ಅವರಲ್ಲಿ ಸೋಮರಾಜನು ಹುಟ್ಟುತ್ತಾನೆ.

ಈ ಸೋಮರಾಜನನ್ನು ಪರ್ಜನ್ಯಾಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ. ಆ ಅಗ್ನಿಗೆ ವಾಯುವೇ ಸಮಿತ್ತು, ಮೋಡವು ಹೊಗೆ, ಮಿಂಚು ಉರಿ, ಸಿಡಿಲು ಕೆಂಡ, ಗುಡುಗುಗಳು ಕಿಡಿಗಳು. ಈ ಅಗ್ನಿಯಲ್ಲಿ ಹಾಕಿದ ಆಹುತಿಯಿಂದ ಮಳೆಯಾಗುತ್ತದೆ.

ಈ ಮಳೆಯನ್ನು ಪೃಥಿವಿಯೆಂಬ ಅಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ. ಈ ಅಗ್ನಿಗೆ ಸಂವತ್ಸರವೇ ಸಮಿತ್ತು, ಆಕಾಶವೇ ಹೊಗೆ, ರಾತ್ರಿಯೇ ಉರಿ, ದಿಕ್ಕುಗಳೇ ಕೆಂಡ, ಅವಾಂತರದಿಕ್ಕುಗಳೇ ಕಿಡಿಗಳು. ಇದರಲ್ಲಿ ಹಾಕಿದ ಆಹುತಿಯಿಂದ ಅನ್ನವುಂಟಾಗುತ್ತದೆ.

ಈ ಅನ್ನವನ್ನು ಪುರುಷಾಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ. ಈ ಅಗ್ನಿಗೆ ವಾಕ್ಕೇ ಸಮಿತ್ತು, ಪ್ರಾಣವೇ ,ಹೊಗೆ, ನಾಲಗೆಯೇ ಉರಿ, ಕಣ್ಣೇ ಕೆಂಡ, ಕಿವಿಯೇ ಕಿಡಿಗಳು, ಅ ಇದರಲ್ಲಿ ಹಾಕಿದ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ.

ಈ ರೇತಸ್ಸನ್ನು ದೇವತೆಗಳು ಸ್ತ್ರೀ ಎಂಬಗ್ನಿಯಲ್ಲಿ ಹೋಮಮಾಡುತ್ತಾರೆ. ಈ ಅಗ್ನಿಗೆ ಉಪಸ್ಥವೇ ಸಮಿತ್ತು, ಉಪಮಂತ್ರಣವೇ ಹೊಗೆ, ಯೋನಿಯೇ ಉರಿ, ಅಂತಃಕರ್ಮವೇ ಕೆಂಡ, ಕ್ಷುದ್ರಸುಖಗಳೇ ಕಿಡಿಗಳು. ಈ ಅಗ್ನಿಯಲ್ಲಿ ಹಾಕಿದ ಆಹುತಿಯಿಂದ ಗರ್ಭವುಂಟಾಗುತ್ತದೆ. ಹೀಗೆ ಐದನೆಯ ಆಹುತಿಯಲ್ಲಿ ಅಪ್ಪು ಪುರುಷಶಬ್ದವಾಚ್ಯವಾಗುತ್ತದೆ

## ಒಂಬತ್ತನೆಯ ಖಂಡ

ಗರ್ಭವು ಸ್ತ್ರೀಯ ಹೊಟ್ಟೆಯಲ್ಲಿ ಒಂಬತ್ತು ಅಥವಾ ಹತ್ತುತಿಂಗಳಿದ್ದು ಹುಟ್ಟುತ್ತದೆ. ಹೀಗೆ ಹುಟ್ಟಿದ ಪುರುಷನು ಆಯುಸ್ಸಿರುವವರೆಗೆ ಬದುಕಿರುತ್ತಾನೆ. ಅವನು ಸಾಯಲು ಅವನು ಯಾವ ಅಗ್ನಿಯಿಂದ ಬಂದಿದ್ದನೋ ಆ ಅಗ್ನಿಗೆ ಅಂತ್ಯಕರ್ಮಕ್ಕಾಗಿ ಒಯ್ಯುತ್ತಾರೆ.

## ಹತ್ತನೆಯ ಖಂಡ

೧-೨. ಇನ್ನು ಮೊದಲನೆಯ ಪ್ರಶ್ನೆಗೆ ಉತ್ತರವನ್ನು ಹೇಳಬೇಕಷ್ಟೆ ? ಪಂಚಾಗ್ನಿ ವಿದ್ಯೆಯನ್ನು ಬಲ್ಲವರೂ ಅರಣ್ಯದಲ್ಲಿರುವ ವಾನಪ್ರಸ್ಥ, ಸಾಧಾರಣಸಂನ್ಯಾಸಿಗಳು- ಎಂಬ ಉಪಾಸಕರೂ ಅರ್ಚಿಸ್ಸು, ಅಹಸ್ಸು, ಆಪೂರ್ಯಮಾಣಪಕ್ಷ, ಉತ್ತರಾಯಣಮಾಸಗಳು, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ತು- ಈ ದೇವತೆಗಳನ್ನು ಕ್ರಮದಿಂದ ಪಡೆಯುತ್ತಾರೆ. ವಿದ್ಯುತ್ತಿನಲ್ಲಿ ಅಮಾನವಪುರುಷನು ಬಂದು ಇವರನ್ನು ಕರೆದುಕೊಂಡು ಹೋಗಿ ಬ್ರಹ್ಮವನ್ನು ಸೇರಿಸುತ್ತಾನೆ. ಇದು **ದೇವಯಾನದ ಮಾರ್ಗವು.**

೩-೫. ಇನ್ನು ಇಷ್ಟಾಪೂರ್ತಗಳು, ದತ್ತ -ಮುಂತಾದ ಕರ್ಮಗಳನ್ನು ಮಾಡುವ ಗೃಹಸ್ಥರು ಧೂಮ, ರಾತ್ರಿ, ಅಪರಪಕ್ಷ, ದಕ್ಷಿಣಾಯನಮಾಸಗಳು- ಇವುಗಳನ್ನು ಪಡೆಯುತ್ತಾರೆ. ಇವರು ಸಂವತ್ಸರಕ್ಕೆ ಹೋಗುವದಿಲ್ಲ, ಮಾಸದಿಂದ ಪಿತೃಲೋಕ, ಆಕಾಶ, ಚಂದ್ರ- ಇವುಗಳನ್ನು ಸೇರುತ್ತಾರೆ. ಚಂದ್ರನು ದೇವತೆಗಳ ಅನ್ನ. ಆ ಚಂದ್ರನಲ್ಲಿ ಉಪಭೋಗದ ಕರ್ಮವು ಮುಗಿಯುವವರೆಗೂ ಸುಖದಿಂದಿರುತ್ತಾರೆ. ಇದು ಪಿತೃಯಾಣಮಾರ್ಗ.

೫ ೬. ಇನ್ನು ಹೋದವರು ಹಿಂತಿರುಗುವ ಮಾರ್ಗವನ್ನು ಹೇಳಬೇಕಷ್ಟೆ ? ದೇವಯಾನದಿಂದ ಹೋದವರಿಗೆ ಈ ಕಲ್ಪದಲ್ಲಿ ಪುನರಾವೃತ್ತಿಯಿಲ್ಲ. ಇಷ್ಟಾಪೂರ್ತವನ್ನು ಮಾಡಿ

ದವರು ಆಕಾಶ, ವಾಯು, ಧೂಮ, ಅಭ್ರ, ಮೇಘ– ಇವುಗಳಲ್ಲಿ ಸೇರಿ ಮಳೆಯೊಂದಿಗೆ ಕೆಳಕ್ಕೆ ಇಳಿದು ಬತ್ತ ಜವೆ, ಗಿಡಮರಗಳು, ಎಳ್ಳು ಉದ್ದು– ಇಂಥವುಗಳಲ್ಲಿ ಸೇರಿಕೊಳ್ಳುತ್ತಾರೆ. ಇಲ್ಲಿಂದ ಮುಂದಕ್ಕೆ ಹೊರಕ್ಕೆ ಬರುವದು ಬಹಳಕಷ್ಟ, ಈ ಅನ್ನವನ್ನು ಯಾವನಾದರೂ ತಿಂದು ರೇತಸ್ಸನ್ನು ಸೇಚನಮಾಡಿದರೆ ಅದರ ಭಾವದ ಆಕೃತಿಯೇ, ಇವರಿಗೂ ಬರುವದು.

೮. ವಿದ್ಯಾಕರ್ಮಗಳನ್ನು ಅನುಷ್ಠಾನಮಾಡದವರು ಮತ್ತೆಮತ್ತೆ ಹುಟ್ಟಿಸಾಯುವ ಕ್ಷುದ್ರಜಂತುಗಳಾಗುವರು. ಇದು ದೇವಯಾನಪಿತೃಯಾಣ– ಇವುಗಳಿಗಿಂತ ಬೇರೆಯಾದ ಮೂರನೆಯ ಗತಿಯ ಫಲವು. ಆದ್ದರಿಂದ ಈ ಸಂಸಾರಗತಿಯ ಪ್ರಕಾರವನ್ನು ತಿಳಿದವನು ಇದಕ್ಕೆ ಹೇಸಬೇಕು

ಹೀಗೆ ಇಷ್ಟಾಪೂರ್ತಗಳನ್ನು ಮಾಡಿದವರು ಮರಳಿಬರುವದರಿಂದಲೂ ಹಲವರು ಕ್ಷುದ್ರ ಜಂತುಗಳಾಗಿ ಹುಟ್ಟಿಸಾಯುತ್ತಿರುವದರಿಂದಲೂ ಆ ಪರಲೋಕವು ತುಂಬಿಕೊಳ್ಳದೆ ಇರುತ್ತದೆ– ಎಂಬುದು ನಾಲ್ಕನೆಯ ಪ್ರಶ್ನೆಗೆ ಉತ್ತರವು. ದೇವಯಾನಪಿತೃಯಾಣಗಳಲ್ಲಿ ಹೋಗುವವರು ಅಗಲುವ ಸ್ಥಾನವು ಯಾವದೆಂಬ ಮೂರನೆಯ ಪ್ರಶ್ನೆಗೆ ಆ ಗತಿಗಳ ವಿವರವನ್ನು ಹೇಳುವದ ರಿಂದಲೇ ಉತ್ತರವನ್ನು ಹೇಳಿದ್ದಾಗಿದೆ.

೯–೧೦. ಪಂಚಾಗ್ನಿವಿದ್ಯೆಯು ಬಹಳ ಪವಿತ್ರವಾದದ್ದು. ಏಕೆಂದರೆ ಪಂಚಮಹಾ ಪಾತಕಿಗಳ ಸವ್ಯವಹಾರದಿಂದಲೂ ಈ ವಿದ್ಯೆಯನ್ನು ಬಲ್ಲವನಿಗೆ ಪಾಪಲೇಪವಾಗುವದಿಲ್ಲ. ಅವನಿಗೆ ಬ್ರಹ್ಮಲೋಕವೇ ಮುಂತಾದ ಪುಣ್ಯಲೋಕಪ್ರಾಪ್ತಿಯೇ ಆಗುವದು.

---

# ಐದನೆಯ ಅಧ್ಯಾಯ-ಹನ್ನೊಂದನೆಯ ಖಂಡ

(ವೈಶ್ವಾನರವಿದ್ಯೆ)

## ವೈಶ್ವಾನರ ವಿದ್ಯೆಗಾಗಿ ಆಖ್ಯಾಯಿಕೆ

(ಉಪನಿಷತ್ತು)

**ಪ್ರಾಚೀನಶಾಲ ಔಪಮನ್ಯವಃ ಸತ್ಯಯಜ್ಞಃ ಪೌಲುಷಿರಿನ್ದ್ರ ದ್ಯುಮ್ನೋ ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯೋ ಬುಡಿಲ ಆಶ್ವ ತರಿರಾಶ್ವಿಸ್ತೇ ಹೈತೇ ಮಹಾಶಾಲಾ ಮಹಾಶ್ರೋತ್ರಿಯಾಃ ಸಮೇತ್ಯ ಮೀಮಾಗ್ಂಸಾಂಚಕ್ರುಃ ಕೋ ನ ಆತ್ಮಾ ಕಿಂ ಬ್ರಹ್ಮೇತಿ ॥ ೧ ॥**

೧. ಪ್ರಾಚೀನಶಾಲಔಪಮನ್ಯವ, ಸತ್ಯಯಜ್ಞಪೌಲುಷಿ, ಇಂದ್ರದ್ಯುಮ್ನ ಭಾಲ್ಲವೇಯ, ಜನಶಾರ್ಕರಾಕ್ಷ್ಯ, ಬುಡಿಲ ಆಶ್ವತರಾಶ್ವಿ- ಮಹಾಶಾಲರೂ ಮಹಾಶ್ರೋತ್ರಿಯರೂ ಆದ ಆ ಇವರು ಸಂಗತರಾಗಿ ನಮ್ಮಗಳ ಆತ್ಮನು ಯಾರು, ಬ್ರಹ್ಮವು ಯಾವದು? -ಎಂದು ಮೀಮಾಂಸೆಯನ್ನು ಮಾಡಿದರು.

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೪೧೯. ದಕ್ಷಿಣೇನ ಪಥಾ ಗಚ್ಛತಾಮ್ ಅನ್ನಭಾವ ಉಕ್ತಃ, 'ತದ್ದೇವಾನಾಮ್ ಅನ್ನಂ ತಂ ದೇವಾ ಭಕ್ಷಯನ್ತಿ' (೫-೧೦-೪), ಕ್ಷುದ್ರಜನ್ತುಲಕ್ಷಣಾ ಚ ಕಷ್ಟಾ ಸಂಸಾರಗತಿರುಕ್ತಾ (೩-೧೦-೮) ತದುಭಯದೋಷಪರಿಜಿಹೀರ್ಷಯಾ ವೈಶ್ವಾನರಾತ್ಮಭಾವಪ್ರತಿಪತ್ತ್ಯರ್ಥಮ್ ಉತ್ತರೋ ಗ್ರನ್ಥ ಆರಭ್ಯತೇ। ಅತ್ಸ್ಯನ್ನಂ ಪಶ್ಯಸಿ ಪ್ರಿಯಮ್' (೫-೧೨-೨) ಇತ್ಯಾದಿಲಿಙ್ಗಾತ್। ಆಖ್ಯಾಯಿಕಾ ತು ಸುಖಾವಬೋಧಾರ್ಥಾ ವಿದ್ಯಾಸಂಪ್ರದಾನನ್ಯಾಯಪ್ರದರ್ಶನಾರ್ಥಾ ಚ ॥

(ಭಾಷ್ಯಾರ್ಥ)

ದಕ್ಷಿಣಮಾರ್ಗದಿಂದ ಹೋಗುವವರು ಅನ್ನವಾಗುತ್ತಾರೆಂದು 'ಅದು ದೇವತೆಗಳ ಅನ್ನವು, ಅವನನ್ನು ದೇವತೆಗಳು ಭಕ್ಷಿಸುತ್ತಾರೆ' (೫-೧೦-೪) ಎಂಬ (ಶ್ರುತಿ

ವಾಕ್ಯದಲ್ಲಿ) ಹೇಳಿದ್ದಾಗಿದೆ ಅಲ್ಪಜಂತುಗಳಾಗಿ(ಹುಟ್ಟುವ) ಕಷ್ಟವಾದ ಸಂಸಾರ ಗತಿಯನ್ನೂ (೫-೧೦-೮) ಹೇಳಿದ್ದಾಗಿದೆ ಆ ಎರಡು ದೋಷಗಳನ್ನೂ ಪರಿಹರಿಸಿ ಕೊಳ್ಳುವದಕ್ಕಾಗಿ ವೈಶ್ವಾನರನೆಂಬ ಅತ್ತೃಭಾವವನ್ನು ಪಡೆದುಕೊಳ್ಳಲೆಂದು ಮುಂದಿನ ಗ್ರಂಥವನ್ನು ಆರಂಭಿಸಿರುತ್ತದೆ. 'ಅನ್ನವನ್ನು ತಿನ್ನುತ್ತಿದೀಯೆ, ಪ್ರಿಯ ವನ್ನು ಕಾಣುತ್ತಿದೀಯೆ' (೫-೧೨-೨) ಎಂದು ಮುಂತಾಗಿರುವ ಲಿಂಗದಿಂದ (ಹೀಗೆಂದು ಗೊತ್ತುಮಾಡಬಹುದು). ಆಖ್ಯಾಯಿಕೆಯಾದರೋ ಸುಲಭವಾಗಿ ವಿಷಯವು ತಿಳಿಯಲೆಂದು, ಮತ್ತು ವಿದ್ಯೆಯನ್ನು ಉಪದೇಶಮಾಡುವದಕ್ಕೆ (ಇರುವ) ನ್ಯಾಯವನ್ನು ತಿಳಿಸಿಕೊಡುವದಕ್ಕೆ[1].

## ಪ್ರಾಚೀನಶಾಲಾದಿಗಳು ಆತ್ಮವಿಚಾರವನ್ನು ಮಾಡಿದ್ದು

(ಭಾಷ್ಯ)

೪೨೦ ಪ್ರಾಚೀನಶಾಲ ಇತಿ ನಾಮತಃ। ಉಪಮನ್ಯೋರಪತ್ಯಮ್ ಔಪ ಮನ್ಯವಃ। ಸತ್ಯಯಜ್ಞೋ ನಾಮತಃ। ಪುಲುಷಸ್ಯಾಪತ್ಯಂ ಪೌಲುಷಿಃ। ತಥಾ ಇನ್ದ್ರದ್ಯುಮ್ನೋ ನಾಮತಃ। ಭಲ್ಲವೇರಪತ್ಯಂ ಭಾಲ್ಲವಿಃ, ತಸ್ಯಾಪತ್ಯಂ ಭಾಲ್ಲ ವೇಯಃ। ಜನ ಇತಿ ನಾಮತಃ। ಶರ್ಕರಾಕ್ಷಸ್ಯ ಅಪತ್ಯಂ ಶಾರ್ಕರಾಕ್ಷ್ಯಃ। ಬುಡಿಲೋ ನಾಮತಃ। ಅಶ್ವತರಾಶ್ವಸ್ಯ ಅಪತ್ಯಮ್ ಆಶ್ವತರಾಶ್ವಿಃ। ಪಞ್ಚಾಪಿ ತೇ ಹ ಏತೇ ಮಹಾಶಾಲಾ ಮಹಾಗೃಹಸ್ಥಾ ವಿಸ್ತೀರ್ಣಾಭಿಃ ಶಾಲಾಭಿರ್ಯುಕ್ತಾಃ ಸಂಪನ್ನಾ ಇತ್ಯರ್ಥಃ। ಮಹಾಶ್ರೋತ್ರಿಯಾಃ ಶ್ರುತಾಧ್ಯಯನವೃತ್ತಸಂಪನ್ನಾ ಇತ್ಯರ್ಥಃ। ತ ಏವಂಭೂತಾಃ ಸನ್ತಃ ಸಮೇತ್ಯ ಸಂಭೂಯ ಕ್ವಚಿತ್ ಮೀಮಾಂಸಾಂ ವಿಚಾ ರಣಾಂ ಚಕ್ರುಃ ಕೃತವನ್ತ ಇತ್ಯರ್ಥಃ। ಕಥಮ್ ? ಕೋ ನಃ ಅಸ್ಮಾಕಮ್ ಆತ್ಮಾ ಕಿಂ ಬ್ರಹ್ಮ- ಇತಿ ಆತ್ಮಬ್ರಹ್ಮಶಬ್ದಯೋರಿತರೇತರವಿಶೇಷಣವಿಶೇಷ್ಯತ್ವಮ್। ಬ್ರಹ್ಮ ಇತ್ಯಧ್ಯಾತ್ಮಪರಿಚ್ಛಿನ್ನಮ್ ಆತ್ಮಾನಂ ನಿವರ್ತಯತಿ। ಆತ್ಮಾ ಇತಿ ಚ ಆತ್ಮವ್ಯತಿರಿಕ್ತಸ್ಯ ಆದಿತ್ಯಾದಿಬ್ರಹ್ಮಣ ಉಪಾಸ್ಯತ್ವಂ ನಿವರ್ತಯತಿ। ಅಭೇದೇನ ಆತ್ಮೈವ ಬ್ರಹ್ಮ, ಬ್ರಹ್ಮೈವ ಆತ್ಮಾ- ಇತ್ಯೇವಂ ಸರ್ವಾತ್ಮಾ ವೈಶ್ವಾನರೋ ಬ್ರಹ್ಮ ಸ್ವ[2] ಆತ್ಮಾ ಇತ್ಯೇತತ್ ಸಿದ್ಧಂ ಭವತಿ। ಮೂರ್ಧಾ ತೇ ವ್ಯಪತಿಷ್ಯತ್ ಅನ್ಧೋಽಭವಿಷ್ಯತ್ ಇತ್ಯಾದಿಲಿಙ್ಗಾತ್ ॥

---

1. ವಿನೀತರಾಗಿ ಶಿಷ್ಯವೃತ್ತಿಯಿಂದ ಶಿಷ್ಯರಾಗಿ ಕೀಳುಜಾತಿಯ ಗುರುವಿನ ಬಳಿಗಾದರೂ ಹೋಗಬೇಕು; ಯೋಗ್ಯವಾದವರಿಗೆ ವಿದ್ಯೆಯನ್ನು ಗುರು ಹೇಳಬೇಕು ಎಂಬುದು ನ್ಯಾಯ.

2. 'ಸ ಆತ್ಮಾ' ಎಂಬ ಪಾಠಕ್ಕಿಂತ ಇದೇ ಮೇಲು.

(ಭಾಷ್ಯಾರ್ಥ)

ಪ್ರಾಚೀನಶಾಲ ಎಂಬ ಹೆಸರಿನವನು, ಉಪಮನ್ಯುವಿನ ಮಗನಾದ್ದರಿಂದ ಔಪಮನ್ಯವನು. ಸತ್ಯಯಜ್ಞನೆಂಬ ಹೆಸರಿನವನು, ಪುಲುಷನ ಮಗನಾದ್ದರಿಂದ ಪೌಲುಷಿ. ಹೀಗೆಯೇ ಇಂದ್ರದ್ಯುಮ್ನನೆಂಬ ಹೆಸರಿನವನು ; (ಅವನು ಭಾಲ್ಲವೇಯನು). ಭಲ್ಲವಿಯ ಮಗನು ಭಾಲ್ಲವಿ, ಅವನ ಮಗನು ಭಾಲ್ಲವೇಯನು. ಜನ ಎಂಬ ಹೆಸರಿನವನು, ಶರ್ಕರಾಕ್ಷನ ಮಗನು ಶಾರ್ಕರಾಕ್ಷ್ಯನು. ಬುಡಿಲನೆಂಬ ಹೆಸರಿನವನು, ಅಶ್ವತರಾಶ್ವನ ಮಗನು ಆಶ್ವತರಾಶ್ವಿಯು ಆ ಈ ಐವರೂ ಮಹಾಶಾಲರು, ದೊಡ್ಡ ಗೃಹಸ್ಥರು[1] , ವಿಸ್ತಾರವಾದ ಮನೆಗಳಿಂದ ಕೂಡಿದ ಸಂಪನ್ನರು ಎಂದರ್ಥ. (ಅವರು) ಮಹಾಶ್ರೋತ್ರಿಯರು, ಶ್ರುತಜ್ಞಾನ, ಅಧ್ಯಯನ, ನಡತೆ-ಇವುಗಳಿಂದ ಕೂಡಿದವರು[2] ಎಂದರ್ಥ ಹೀಗಿರುವವರಾಗಿ ಅವರು ಸಂಗತರಾಗಿ ಯಾವದೋ ಒಂದು ಕಡೆಯಲ್ಲಿ ಒಟ್ಟುಗೂಡಿ ಮೀಮಾಂಸೆಯನ್ನು ವಿಚಾರವನ್ನು ಮಾಡಿದರು, ಮಾಡಿದವರಾದರು ಎಂದರ್ಥ.

ಹೇಗೆ ವಿಚಾರಮಾಡಿದರು ? -ಎಂದರೆ, (ನಃ=ಅಸ್ಮಾಕಮ್) ನಮ್ಮಗಳಿಗೆ ಆತ್ಮನು ಯಾರು ? ಬ್ರಹ್ಮವು ಯಾವದು ಎಂದು (ವಿಚಾರಮಾಡಿದರು. ಇಲ್ಲಿ), ಆತ್ಮ, ಬ್ರಹ್ಮ- ಎಂಬ ಶಬ್ದಗಳು ಒಂದಕ್ಕೊಂದು ವಿಶೇಷ್ಯವಿಶೇಷಣವಾಗಿವೆ[3] , ಬ್ರಹ್ಮ ಎಂದದ್ದರಿಂದ ಅಧ್ಯಾತ್ಮಪರಿಚ್ಛಿನ್ನನಾದ ಆತ್ಮನನ್ನು[4] ಬಿಡಿಸಿದಂತಾಯಿತು. ಮತ್ತು ಆತ್ಮ ಎಂದದ್ದರಿಂದ ಆತ್ಮನಿಗಿಂತ ಬೇರೆಯಾಗಿರುವ ಆದಿತ್ಯಾದಿಬ್ರಹ್ಮವು (ಇಲ್ಲಿ) ಉಪಾಸ್ಯವೆಂಬುದನ್ನು ಬಿಡಿಸಿದಂತಾಯಿತು-[5] **ಅಭಿನ್ನವಾಗಿ ಆತ್ಮನೇ ಬ್ರಹ್ಮವು, ಬ್ರಹ್ಮವೇ ಆತ್ಮನು ಎಂದು (ವಿಶೇಷಣವಿಶೇಷ್ಯಭಾವ). ಹೀಗೆ ಹೇಳಿದ್ದರಿಂದ ಸರ್ವಾತ್ಮನಾದ ವೈಶ್ವಾನರಬ್ರಹ್ಮವೇ ನಮ್ಮ ಆತ್ಮನು ಎಂಬಿದು ಸಿದ್ಧವಾಗುತ್ತದೆ.** 'ನಿನ್ನ ತಲೆಯು ಬಿದ್ದುಹೋಗುತ್ತಿತ್ತು'

---

1. ಗೃಹಸ್ಥರಿಗೂ ಅಹಂಗ್ರಹೋಪಾಸನೆಯಲ್ಲಿ ಅಧಿಕಾರವಿದೆ ಎಂದು ಇದರಿಂದ ಏರ್ಪಡುತ್ತದೆ.

2. ಉಪಾಸನೆಗೆ ಅಧಿಕಾರಿಗಳಾದವರಲ್ಲಿ ಈ ಗುಣಗಳೂ ಇರಬೇಕು ಎಂದು ಭಾವ.

3. ಈ ವಿಶೇಷ್ಯವಿಶೇಷಣಭಾವದಿಂದ ಒಂದರ ಸಂಬಂಧದಿಂದ ಇನ್ನೊಂದರ ಅರ್ಥದಲ್ಲಿ ಅನಿಷ್ಟವಾದದ್ದನ್ನು ಕೈಬಿಟ್ಟು ವಿವಕ್ಷಿತವಾದದ್ದನ್ನೇ ತೆಗೆದುಕೊಳ್ಳುವಂತೆ ಆಗುತ್ತದೆ. ಇದನ್ನು ಮುಂದಿನ ವಾಕ್ಯದಲ್ಲಿ ವಿವರಿಸಿದೆ.

4. ದೇಹಪರಿಚ್ಛಿನ್ನನಾದ ಆತ್ಮನನ್ನು.

5. ಉಪಾಸಕನು ನಾನು, ಉಪಾಸ್ಯವು ಆದಿತ್ಯಾದಿದೇವತೆ- ಎಂದು ಹೀಗೆ ಬೇರೆಯಾಗಿ ಮಾಡುವ ಉಪಾಸನೆಯಲ್ಲ ಎಂದು ಭಾವ.

(೫–೧೨–೨), 'ಕುರುಡನಾಗಿಬಿಡುತ್ತಿದ್ದೆ' (೫–೧೩–೨)[1] ಮುಂತಾದ (ವಚನಗಳ) ಲಿಂಗದಿಂದಲೂ ಹೀಗೆಂದು ಸಿದ್ಧವಾಗುತ್ತದೆ.[2]

## ಉದ್ದಾಲಕನ ಬಳಿಗೆ ಬಂದದ್ದು

(ಉಪನಿಷತ್ತು)

**ತೇ ಹ ಸಂಪಾದಯಾಂಚಕ್ರುರುದ್ದಾಲಕೋ ವೈ ಭಗವನ್ತೋಽಯಮಾರುಣಿಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತಗ್ಂ ಹನ್ತಾಭ್ಯಾಗಚ್ಛಾಮೇತಿ ತಗ್ಂ ಹಾಭ್ಯಾಜಗ್ಮುಃ ॥ ೨ ॥**

೨. ಅವರು ಗೊತ್ತುಪಡಿಸಿಕೊಂಡರು : "ಭಗವಂತರೆ, ಈ ಉದ್ದಾಲಕಆರುಣಿಯು ಈ ವೈಶ್ವಾನರಾತ್ಮನನ್ನು ಚೆನ್ನಾಗಿ ಬಲ್ಲನು. ಒಳ್ಳೆಯದು, ಅವನಲ್ಲಿಗೆ ಹೋಗೋಣ!" ಅವನಲ್ಲಿಗೆ ಹೋದರು.

## ವೈಶ್ವಾನರವಿದ್ಯೆಗಾಗಿ ಉದ್ದಾಲಕನಲ್ಲಿಗೆ ಹೋದದ್ದು

(ಭಾಷ್ಯ)

೪೨೧. ತೇ ಹ ಮೀಮಾಂಸನ್ತೋಽಪಿ ನಿಶ್ಚಯಮಲಭಮಾನಾಃ ಸಂಪಾದಯಾಂಚಕ್ರುಃ ಸಂಪಾದಿತವನ್ತ ಆತ್ಮನ ಉಪದೇಷ್ಟಾರಮ್ । ಉದ್ದಾಲಕೋ ವೈ ಪ್ರಸಿದ್ಧೋ ನಾಮತಃ । ಭಗವನ್ತಃ ಪೂಜಾವನ್ತಃ ಅಯಮ್ ಆರುಣಿಃ ಅರುಣಸ್ಯಾಪತ್ಯಂ ಸಂಪ್ರತಿ ಸಮ್ಯಕ್ ಇಮಮ್ ಆತ್ಮಾನಂ ವೈಶ್ವಾನರಮ್ ಅಸ್ಮದಭಿಪ್ರೇತಮ್ ಅಧ್ಯೇತಿ ಸ್ಮರತಿ । ತಂ ಹನ್ತ ಇದಾನೀಮ್ ಅಭ್ಯಾಗಚ್ಛಾಮ ಇತಿ ಏವಂ ನಿಶ್ಚಿತ್ಯ ತಂ ಹ ಅಭ್ಯಾಜಗ್ಮುರ್ಗತವನ್ತಸ್ತಮ್ ಆರುಣಿಮ್ ॥

(ಭಾಷ್ಯಾರ್ಥ)

ಅವರು (ಹೀಗೆ) ವಿಚಾರಮಾಡಿದರೂ ನಿಶ್ಚಯವನ್ನು ಹೊಂದದೆ ತಮಗೆ ಉಪದೇಶಮಾಡುವ (ಆಚಾರ್ಯನೊಬ್ಬ)ನನ್ನು ಗೊತ್ತುಮಾಡಿಕೊಂಡರು.

---

1. ಆತ್ಮಾಭಿನ್ನವಾದ ಬ್ರಹ್ಮನೇ ಇಲ್ಲಿ ಉಪಾಸ್ಯವೆಂಬುದಕ್ಕೆ ಪರಿಚ್ಛಿನ್ನಬ್ರಹ್ಮದ ನಿಂದೆಯನ್ನು ಮಾಡಿರುವದೂ ಉಪಾಸಕನ ಆಯಾ ಅವಯವವು ಹೋಗಿಬಿಡುತ್ತಿತ್ತೆಂದು ಹೇಳಿರುವದೂ ಲಿಂಗವು– ಎಂದರ್ಥ.

2 ಎಲ್ಲರಿಗೂ ಆತ್ಮನಾಗಿರುವ ವೈಶ್ವಾನರನೇ ನನ್ನ ಆತ್ಮನು – ಎಂದು ಉಪಾಸನೆ ಮಾಡಬೇಕೆಂದು ಸಿದ್ಧವಾಗುತ್ತದೆ ವಸ್ತುಸ್ಥಿತಿಯೇ ಹೀಗಿರುತ್ತದೆಯಾದರೂ ಇಲ್ಲಿ ಜ್ಞಾನವನ್ನೇನೂ ಹೇಳಿಲ್ಲ; ಹೀಗೆಂದು ಉಪಾಸನೆಮಾಡಬೇಕೆಂದು ತಿಳಿಸಿದೆ. ಈ ಉಪದೇಶವನ್ನು ಜ್ಞಾನಪ್ರಕರಣಕ್ಕೂ ಉಪಯೋಗಿಸಿಕೊಂಡಿರುವದನ್ನು ಮಾಂ. ೩ ರ ಭಾಷ್ಯ (ಭಾ. ಭಾ. ೧೧) ರಲ್ಲಿ ಕಾಣಬಹುದು.

“ಭಗವಂತರೆ, ಪೂಜ್ಯರೆ[1], ಈ ಉದ್ದಾಲಕನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಆರುಣಿಯು ಅರುಣನ ಮಗನು (ಸಂಪ್ರತಿ=ಸಮ್ಯಕ್) ಚೆನ್ನಾಗಿ ನಮಗೆ ಬೇಕಾಗಿರುವ ಈ ವೈಶ್ವಾನರನೆಂಬ ಆತ್ಮನನ್ನು (ಅಧ್ಯೇತಿ=ಸ್ಮರತಿ) ಅವನ ಬಳಿಗೆ ಈಗ ಹೋಗೋಣ!” ಎಂದು ನಿಶ್ಚಯಿಸಿ ಆ ಆರುಣಿಯ ಬಳಿಗೆ ಹೋದರು, ಹೋದವರಾದರು.

(ಉಪನಿಷತ್ತು)

**ಸ ಹ ಸಂಪಾದಯಾಂಚಕಾರ ಪ್ರಕ್ಷ್ಯಂತಿ ಮಾಮಿಮೇ ಮಹಾಶಾಲಾ ಮಹಾಶ್ರೋತ್ರಿಯಾಸ್ತೇಭ್ಯೋ ನ ಸರ್ವಮಿವ ಪ್ರತಿಪತ್ಸ್ಯೇ ಹನ್ತಾಹಮನ್ಯಮಭ್ಯನುಶಾಸಾನೀತಿ ॥ ೩ ॥**

**ತಾನ್ ಹೋವಾಚಾಶ್ವಪತಿರ್ವೈ ಭಗವನ್ತೋಽಯಂ ಕೈಕೇಯಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತಗ್ಂ ಹನ್ತಾಭ್ಯಾಗಚ್ಛಾಮೇತಿ ತಗ್ಂ ಹಾಭ್ಯಾಜಗ್ಮುಃ ॥ ೪ ॥**

೩. ಅವನು (ಹೀಗೆಂದು) ನಿಶ್ಚಯಿಸಿದನು. “ನನ್ನನ್ನು ಮಹಾಶಾಲರೂ ಮಹಾಶ್ರೋತ್ರಿಯರೂ ಆದ ಇವರು ಕೇಳುವರು. ಅವರಿಗೆ ಎಲ್ಲವನ್ನೂ ತಿಳಿಸಲಾರೆನು. ಒಳ್ಳೆಯದು, ನಾನು ಮತ್ತೊಬ್ಬನನ್ನು ತಿಳಿಸೋಣ!”

೪. ಅವರನ್ನು ಕುರಿತು (ಅವನು) ಇಂತೆಂದನು: “ಭಗವಂತರೆ, ಈ ಅಶ್ವಪತಿಕೈಕೇಯನು ಚೆನ್ನಾಗಿ ಈ ವೈಶ್ವಾನರಾತ್ಮನನ್ನು ಬಲ್ಲನು. ಒಳ್ಳೆಯದು, ಅವನಲ್ಲಿಗೆ ಹೋಗೋಣ!” ಅವನಲ್ಲಿಗ ಹೋದರು.

## ಉದ್ದಾಲಕನು ಅವರೊಡನೆ ಅಶ್ವಪತಿಯ ಬಳಿಗೆ ಹೋದದ್ದು

(ಭಾಷ್ಯ)

೪೨೨. ಸ ಹ ತಾನ್ ದೃಷ್ಟ್ವೈವ ತೇಷಾಮ್ ಆಗಮನಪ್ರಯೋಜನಂ ಬುದ್ಧ್ವಾ ಸಂಪಾದಯಾಂಚಕಾರ । ಕಥಮ್? ಪ್ರಕ್ಷ್ಯನ್ತಿ ಮಾಂ ವೈಶ್ವಾನರಮ್ ಇಮೇ ಮಹಾಶಾಲಾ ಮಹಾಶ್ರೋತ್ರಿಯಾಃ । ತೇಭ್ಯೋಽಹಂ ನ ಸರ್ವಮಿವ ಪೃಷ್ಟಂ ಪ್ರತಿಪತ್ಸ್ಯೇ ವಕ್ತುಂ ನೋತ್ಸಹೇ । ಅತೋ ಹನ್ತ ಅಹಮಿದಾನೀಮ್ ಅನ್ಯಮೇಷಾಮ್ ಅಭ್ಯನುಶಾಸಾನಿ ವಕ್ಷ್ಯಾಮ್ಯುಪದೇಷ್ಟಾರಮ್ ಇತಿ । ಏವಂ ಸಂಪಾದ್ಯ ತಾನ್ ಹೋವಾಚ । ಅಶ್ವಪತಿರ್ವೈ ನಾಮತಃ ಭಗವನ್ತಃ ಅಯಂ

1. ತೇ ಭಗವನ್ತಃ ಪೂಜ್ಯರಾದ ಅವರು ಎಂದು ಟೀಕೆಗೆ ಸಮ್ಮತವಾದ ಅನ್ವಯ.

ಕೇಕಯಸ್ಯಾಪತ್ಯಂ ಕೈಕೇಯಃ ಸಂಪ್ರತಿ ಸಮ್ಯಕ್ ಇಮಮಾತ್ಮಾನಂ ವೈಶ್ವಾನರಮ್ ಅಧ್ಯೇತಿ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಅವನು ಅವರನ್ನು ನೋಡಿದಮಾತ್ರದಿಂದಲೇ ಅವರು ಬಂದ ಕಾರಣವನ್ನು ಅರಿತುಕೊಂಡು (ಹೀಗೆಂದು) ನಿಶ್ಚಯಿಸಿದನು ಹೇಗೆಂದರೆ, ಮಹಾಶಾಲರೂ ಮಹಾಶ್ರೋತ್ರಿಯರೂ ಆದ ಇವರು ನನ್ನನ್ನು ವೈಶ್ವಾನರನನ್ನು ಕೇಳುವರು. ಅವರಿಗೆ (ಅವರು) ಕೇಳಿದ್ದೆಲ್ಲವನ್ನೂ (ನಾನು) ಅರಿಯೆನು, ಹೇಳಲು ನಾನು ಶಕ್ತನಲ್ಲ ಆದ್ದರಿಂದ, ಒಳ್ಳೆಯದು, ನಾನು ಈಗ ಮತ್ತೊಬ್ಬ ಉಪದೇಶಕನನ್ನು ಇವರಿಗೆ ತಿಳಿಸೋಣ, ಹೇಳೋಣ !

ಹೀಗೆಂದು ನಿಶ್ಚಯಿಸಿಕೊಂಡು ಅವರನ್ನು ಕುರಿತು ಇಂತೆಂದನು : ಭಗವಂತರೆ, ಅಶ್ವಪತಿಯೆಂಬ ಹೆಸರಿನಿಂದ ಪ್ರಸಿದ್ಧನಾದ ಈ ಕೈಕೇಯನು, ಕೇಕಯನ ಮಗನು, (ಸಂಪ್ರತಿ=ಸಮ್ಯಕ್) ಚೆನ್ನಾಗಿ ಈ ವೈಶ್ವಾನರನನ್ನು ಬಲ್ಲನು– ಮುಂತಾದ (ಗ್ರಂಥವು ಹಿಂದೆ ೨ನೆಯ ಕಂಡಿಕೆಗೆ) ಸಮಾನವು

## ಅಶ್ವಪತಿಯಲ್ಲಿ ಪ್ರಾಚೀನಶಾಲಾದಿಗಳು ಶಿಷ್ಯರಾದದ್ದು

(ಉಪನಿಷತ್ತು)

**ತೇಭ್ಯೋ ಹ ಪ್ರಾಪ್ತೇಭ್ಯಃ ಪೃಥಗರ್ಹಾಣಿ ಕಾರಯಾಂಚಕಾರ ಸ ಹ ಪ್ರಾತಃ ಸಂಜಿಹಾನ ಉವಾಚ ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪೋ ನಾನಾಹಿತಾಗ್ನಿರ್ನಾವಿದ್ವಾನ್ನ ಸ್ವೈರೀ ಸ್ವೈರಿಣೀ ಕುತೋ ಯಕ್ಷ್ಯಮಾಣೋ ವೈ ಭಗವನ್ತೋಽಹಮಸ್ಮಿ ಯಾವದೇಕೈಕಸ್ಮಾ ಋತ್ವಿಜೇ ಧನಂ ದಾಸ್ಯಾಮಿ ತಾವದ್ ಭಗವದ್ಭ್ಯೋ ದಾಸ್ಯಾಮಿ ವಸನ್ತು ಭಗವನ್ತ ಇತಿ ॥ ೫ ॥**

೫. ಬಂದ ಅವರಿಗೆ ಬೇರೆಯಾಗಿ ಸತ್ಕಾರಗಳನ್ನು ಮಾಡಿಸಿದನು, ಅವನು ಬೆಳಗ್ಗೆ ಎದ್ದು ಇಂತೆಂದನು: "ನನ್ನ ದೇಶದಲ್ಲಿ ಕಳ್ಳನಿಲ್ಲ, ಜಿಪುಣನಿಲ್ಲ, ಮದ್ಯಪನಿಲ್ಲ, ಅನಾಹಿತಾಗ್ನಿಯಿಲ್ಲ, ಅವಿದ್ವಾಂಸನಿಲ್ಲ, ಸ್ವೈರಿಯಿಲ್ಲ, ಸ್ವೈರಿಣಿಯೆಲ್ಲಿದ್ದಾಳು ? ಭಗವಂತರೆ, ನಾನು ಯಾಗಮಾಡಲಿರುವೆನು. ಒಬ್ಬೊಬ್ಬ ಋತ್ವಿಜನಿಗೆ ಎಷ್ಟು ಕೊಡುವೆನೋ ಅಷ್ಟನ್ನೂ ಭಗವಂತ(ರಾದ ನಿಮಗೆ) ಕೊಡುವೆನು. ಭಗವಂತರಾದ (ತಾವು ಇರಬೇಕು !)"

## ಅಶ್ವಪತಿಯು ಯಾಗಕ್ಕೆ ನಿಲ್ಲಬೇಕೆಂದು ಕೇಳಿಕೊಂಡದ್ದು

(ಭಾಷ್ಯ)

೪೨೩. ತೇಭ್ಯೋ ಹ ರಾಜಾ ಪ್ರಾಪ್ತೇಭ್ಯಃ ಪೃಥಕ್ ಪೃಥಕ್ ಅರ್ಹಾಣಿ ಅರ್ಹಣಾನಿ ಪುರೋಹಿತೈರ್ಭೃತ್ಯೈಶ್ಚ ಕಾರಯಾಂಚಕಾರ ಕಾರಿತವಾನ್। ಸ ಹ ಅನ್ಯೇದ್ಯುಃ ರಾಜಾ ಪ್ರಾತಃ ಸಂಜಿಹಾನ ಉವಾಚ ವಿನಯೇನ ಉಪಗಮ್ಯ ಏತದ್ಧನಂ ಮತ್ತ ಉಪಾದದ್ಧ್ವಮ್ ಇತಿ । ತೈಃ ಪ್ರತ್ಯಾಖ್ಯಾತೋ ಮಯಿ ದೋಷಂ ಪಶ್ಯನ್ತಿ ನೂನಂ ಯತೋ ನ ಪ್ರತಿಗೃಹ್ಣನ್ತಿ ಮತ್ತೋ ಧನಮಿತಿ ಮನ್ವಾನ ಆತ್ಮನಃ ಸದ್ವೃತ್ತತಾಂ ಪ್ರತಿಪಿಪಾದಯಿಷನ್ ಆಹ। ನ ಮೇ ಮಮ ಜನಪದೇ ಸ್ತೇನಃ ಪರಸ್ವಹರ್ತಾ ವಿದ್ಯತೇ। ನ ಕದರ್ಯಃ ಅದಾತಾ ಸತಿ ವಿಭವೇ। ನ ಮದ್ಯಪಃ ದ್ವಿಜೋತ್ತಮಃ ಸನ್ । ನಾನಾಹಿತಾಗ್ನಿಃ ಶತಗುಃ । ನಾವಿದ್ವಾನ್ ಅಧಿಕಾರಾನುರೂಪಮ್ । ಸ ಸ್ವೈರೀ ಪರದಾರೇಷು ಗನ್ತಾ। ಅತ ಏವ ಸ್ವೈರಿಣೀ ಕುತೋ ದುಷ್ಟಚಾರಿಣೀ ? ನ ಸಂಭವತಿ ಇತ್ಯರ್ಥಃ। ತೈಶ್ಚ ನ ವಯಂ ಧನೇನ ಅರ್ಥಿನಃ ಇತ್ಯುಕ್ತ ಆಹ। ಅಲ್ಪಂ ಮತ್ವೈತೇ ಧನಂ ನ ಗೃಹ್ಣನ್ತೀತಿ। ಯಕ್ಷ್ಯಮಾಣೋ ವೈ ಕತಿಭಿರಹೋಭಿಃ ಅಹಂ ಹೇ ಭಗವನ್ತೋಽಸ್ಮಿ । ತದರ್ಥಂ ಕ್ಲೃಪ್ತಂ ಧನಂ ಮಯಾ ಯಾವದೇಕೈಕಸ್ಮೈ ಯಥೋಕ್ತಮ್ ಋತ್ವಿಜೇ ಧನಂ ದಾಸ್ಯಾಮಿ ತಾವತ್ ಪ್ರತ್ಯೇಕಂ ಭಗವದ್ಭ್ಯೋಽಪಿ ದಾಸ್ಯಾಮಿ । ವಸನ್ತು ಭಗವನ್ತಃ ಪಶ್ಯನ್ತು ಚ ಮಮ ಯಾಗಮ್ ॥

(ಭಾಷ್ಯಾರ್ಥ)

ಬಂದ ಅವರಿಗೆ ರಾಜನು ಬೇರೆಬೇರೆಯಾಗಿ (ಅರ್ಹಾಣಿ=ಅರ್ಹಣಾನಿ) ಸತ್ಕಾರಗಳನ್ನು ಪುರೋಹಿತರಿಂದಲೂ ಭೃತ್ಯರಿಂದಲೂ ಮಾಡಿಸಿದನು, ಮಾಡಿಸಿದವನಾದನು. ಮಾರನೆಯ ದಿನ ಆ ರಾಜನು ಬೆಳಗ್ಗೆ ಏಳುತ್ತಲೂ ವಿನಯದಿಂದ ಅವರು ಬಳಿಗೆ ಬಂದು "ಈ ಧನವನ್ನು ನನ್ನಿಂದ ತೆಗೆದುಕೊಳ್ಳಿರಿ" ಎಂದನು. ಅವರು ಬೇಡವೆನ್ನಲು "ನನ್ನಲ್ಲಿ (ಇವರು) ದೋಷವನ್ನು ಎಣಿಸಿರಬೇಕು, ಏಕೆಂದರೆ ನನ್ನಿಂದ ಧನವನ್ನು ತೆಗೆದುಕೊಳ್ಳುತ್ತಿಲ್ಲ" ಎಂದು ಯೋಚಿಸಿಕೊಂಡು ತಾನು ಸದ್ವೃತ್ತಿಯುಳ್ಳವನೆಂದು ತಿಳಿಸುವದಕ್ಕಾಗಿ ಇಂತೆಂದನು : (ಮೇ=ಮಮ) ನನ್ನ ದೇಶದಲ್ಲಿ ಕಳ್ಳನು ಮತ್ತೊಬ್ಬರೊಡವೆಯನ್ನು ಕಳುವವನು ಇಲ್ಲ. ಜಿಪುಣನು, ಸಂಪತ್ತಿದ್ದರೆ ದಾನಮಾಡದಿರುವವನು, ಇಲ್ಲ ದ್ವಿಜೋತ್ತಮನಾಗಿದ್ದುಕೊಂಡು ಮದ್ಯಪಾನಮಾಡುವವನೂ ಇಲ್ಲ. ಅನಾಹಿತಾಗ್ನಿಯಾದವನು ನೂರು ಗೋಗಳುಳ್ಳವ(ನಲ್ಲ)ದವನೂ ಇಲ್ಲ. ಅಧಿಕಾರಕ್ಕೆ ತಕ್ಕಂತೆ[1] ವಿದ್ವಾಂಸ

---

1. ಯೋಗ್ಯತೆಯಿದ್ದಷ್ಟುಮಟ್ಟಿಗೆ.

ನಲ್ಲದವನೂ ಇಲ್ಲ. ಸ್ವೈರಿಯು ಮತ್ತೊಬ್ಬರ ಹೆಂಡಿರನ್ನು ಗಮಿಸುವವನು ಇಲ್ಲ. ಆದ್ದರಿಂದಲೇ ಸ್ವೈರಿಣಿಯು ದುಷ್ಟಚಾರಿಣಿಯಾದವಳು ಎಲ್ಲಿದ್ದಾಳು ? ಇರುವಹಾಗಿಲ್ಲ ಎಂದರ್ಥ.

(ಆಮೇಲೂ) ಅವರು ನಮಗೆ ಧನವು ಬೇಕಿಲ್ಲ ಎನ್ನಲು 'ಸ್ವಲ್ಪವೆಂದೆಣಿಸಿ ಇವರು ಧನವನ್ನು ತೆಗೆದುಕೊಳ್ಳುತ್ತಿಲ್ಲ' ಎಂದು (ಭಾವಿಸಿಕೊಂಡು) ಇಂತೆಂದನು : "ಎಲೈ ಭಗವಂತರೆ, ಕೆಲವು ದಿನಗಳೊಳಗೆ ನಾನು ಯಾಗಮಾಡುವವನಿದ್ದೇನೆ. ಅದಕ್ಕಾಗಿ (ಶಾಸ್ತ್ರದಲ್ಲಿ) ಹೇಳಿರುವಂತೆ ಒಬ್ಬೊಬ್ಬನಿಗೆ ಗೊತ್ತಾಗಿ ಎಷ್ಟು ಧನವನ್ನು ಕೊಡುವೆನೋ ಅಷ್ಟಷ್ಟನ್ನು ನಿಮಗೆ ಪ್ರತಿಯೊಬ್ಬರಿಗೂ ಕೊಡುವೆನು. ಭಗವಂತರಾದ (ತಾವು) ಇದ್ದುಕೊಂಡಿರಬೇಕು, ನನ್ನ ಯಾಗವನ್ನು ನೋಡಬೇಕು !"

(ಉಪನಿಷತ್ತು)

**ತೇ ಹೋಚುರ್ಯೇನ ಹೈವಾರ್ಥೇನ ಪುರುಷಶ್ಚರೇತ್ತಗ್ಂ ಹೈವ ವದೇದಾತ್ಮಾನಮೇವೇಮಂ ವೈಶ್ವಾನರಗ್ಂ ಸಂಪ್ರತ್ಯಧ್ಯೇಷಿ ತಮೇವ ನೋ ಬ್ರೂಹೀತಿ ॥ ೬ ॥**

೬. ಅವರಿಂತೆಂದರು : "ಯಾವ ಅರ್ಥಕ್ಕಾಗಿ ಪುರುಷನು ಬರುತ್ತಾನೋ ಅದನ್ನೇ ಹೇಳಬೇಕು. ಈ ವೈಶ್ವಾನರಾತ್ಮನನ್ನೇ ಚೆನ್ನಾಗಿ (ನೀನು) ಬಲ್ಲೆ ; ಅವನನ್ನೇ ನಮಗೆ ಹೇಳಿಕೊಡು !"

## ಧನವು ಬೇಡ, ವೈಶ್ವಾನರವಿದ್ಯೆಯನ್ನೇ ತಿಳಿಸೆಂದು ಬ್ರಾಹ್ಮಣರು ಕೇಳಿದ್ದು

(ಭಾಷ್ಯ)

೪೨೪. ಇತ್ಯುಕ್ತಾಃ ತೇ ಹ ಊಚುಃ । ಯೇನ ಹೈವ ಅರ್ಥೇನ ಪ್ರಯೋಜನೇನ ಯಂ ಪ್ರತಿ ಚರೇತ್ ಗಚ್ಛೇತ್ ಪುರುಷಃ ತಂ ಹೈವಾರ್ಥಂ ವದೇತ್। ಇದಮೇವ ಪ್ರಯೋಜನಮ್ ಆಗಮನಸ್ಯ ಇತಿ । ಅಯಂ ನ್ಯಾಯಃ ಸತಾಮ್। ವಯಂ ಚ ವೈಶ್ವಾನರಜ್ಞಾನಾರ್ಥಿನಃ । ಆತ್ಮಾನಮೇವ ಇಮಂ ವೈಶ್ವಾನರಂ ಸಂಪ್ರತಿ ಅಧ್ಯೇಷಿ ಸಮ್ಯಗ್ ಜಾನಾಸಿ। ಅತಸ್ತಮೇವ ನೋಽಸ್ಮಭ್ಯಂ ಬ್ರೂಹಿ ॥

(ಭಾಷ್ಯಾರ್ಥ)

ಹೀಗೆನ್ನಲು ಅವರು ಇಂತೆಂದರು. ಯಾವ ಅರ್ಥಕ್ಕಾಗಿ ಪ್ರಯೋಜನಕ್ಕಾಗಿ ಯಾವನ ಬಳಿಗೆ ಮನುಷ್ಯನು (ಚರೇತ್=ಗಚ್ಛೇತ್) ಬರುವನೋ ಅದೇ ಅರ್ಥವನ್ನೇ ಹೇಳಬೇಕು. (ನಾನು) ಬಂದಿರುವದಕ್ಕೆ ಇದೇ ಪ್ರಯೋಜನವು ಎಂದು

(ಹೇಳಬೇಕು) ಎಂಬುದು ಸತ್ಪುರುಷರ ನ್ಯಾಯವು. ನಾವೋ ವೈಶ್ವಾನರವಿದ್ಯೆಯನ್ನು ಬಯಸಿ (ಬಂದಿರು)ತ್ತೇವೆ. ನೀನು ಈ ವೈಶ್ವಾನರಾತ್ಮನನ್ನೇ ಚೆನ್ನಾಗಿ ಬಲ್ಲೆ, ಆದ್ದರಿಂದ ಅವನನ್ನೇ (ನಃ=ಅಸ್ಮಭ್ಯಮ್) ನಮಗೆ ಹೇಳಿಕೊಡು.

(ಉಪನಿಷತ್ತು)

**ತಾನ್ ಹೋವಾಚ ಪ್ರಾತರ್ವಃ ಪ್ರತಿವಕ್ತಾಸ್ಮೀತಿ ತೇ ಹ ಸಮಿತ್ಪಾಣಯಃ ಪೂರ್ವಾಹ್ಣೇ ಪ್ರತಿಚಕ್ರಮಿರೇ ತಾನ್ ಹಾನುಪನೀಯ್ಯೈವೈತದುವಾಚ || ೭ ||**

೭. (ಅವನು) ಅವರನ್ನು ಕುರಿತು "ಬೆಳಗ್ಗೆ ನಿಮಗೆ ಪ್ರತಿ ಹೇಳುವೆನು'' ಎಂದನು. ಅವರು ಬೆಳಗ್ಗೆ ಸಮಿತ್ಪಾಣಿಗಳಾಗಿ ಬಂದರು. ಅವರಿಗೆ ಉಪನಯನವನ್ನು ಮಾಡದೆಯೆ, ಇದನ್ನು ಹೇಳಿದನು.

## ರಾಜನು ಉಪದೇಶಮಾಡಲು ಒಪ್ಪಿದ್ದು

(ಭಾಷ್ಯ)

**೪೩೫.** ಇತ್ಯುಕ್ತಃ ತಾನ್ ಹ ಉವಾಚ। ಪ್ರಾತಃ ವಃ ಯುಷ್ಮಭ್ಯಂ ಪ್ರತಿವಕ್ತಾಸ್ಮಿ ಪ್ರತಿವಾಕ್ಯಂ ದಾತಾ ಅಸ್ಮಿ। ಇತ್ಯುಕ್ತಾಸ್ತೇ ಹ ರಾಜ್ಞೋಽಭಿಪ್ರಾಯಜ್ಞಾಃ ಸಮಿತ್ಪಾಣಯಃ ಸಮಿದ್ಭಾರಹಸ್ತಾಃ ಅಪರೇದ್ಯುಃ ಪೂರ್ವಾಹ್ಣೇ ರಾಜಾನಂ ಪ್ರತಿಚಕ್ರಮಿರೇ ಗತವಂತಃ। ಯತ ಏವಂ ಮಹಾಶಾಲಾ ಮಹಾಶ್ರೋತ್ರಿಯಾಃ ಬ್ರಾಹ್ಮಣಾಃ ಸಂತೋ ಮಹಾಶಾಲತ್ವಾದ್ಯಭಿಮಾನಂ ಹಿತ್ವಾ ಸಮಿದ್ಭಾರಹಸ್ತಾ ಜಾತಿತೋ ಹೀನಂ ರಾಜಾನಂ ವಿದ್ಯಾರ್ಥಿನೋ ವಿನಯೇನ ಉಪಜಗ್ಮುಃ, ತಥಾ ಅನ್ಯೈರ್ವಿದ್ಯೋಪಾದಿತ್ಸುಭಿರ್ಭವಿತವ್ಯಮ್। ತೇಭ್ಯಶ್ಚ ಅದಾದ್ ವಿದ್ಯಾಮ್। ಅನುಪನೀಯ್ಯೈವ ಉಪನಯನಮ್ ಅಕೃತ್ವೈವ ತಾನ್ ಯಥಾಯೋಗ್ಯೇಭ್ಯೋ ವಿದ್ಯಾಮ್ ಅದಾತ್। ತಥಾ ಅನ್ಯೇನಾಪಿ ವಿದ್ಯಾ ದಾತವ್ಯಾ ಇತಿ ಆಖ್ಯಾಯಿಕಾರ್ಥಃ। ಏತದ್ ವೈಶ್ವಾನರವಿಜ್ಞಾನಮ್ ಉವಾಚ ಇತಿ ವಕ್ಷ್ಯಮಾಣೇನ ಸಂಬಂಧಃ ॥

(ಭಾಷ್ಯಾರ್ಥ)

ಹೀಗೆನ್ನಲು (ಅವನು) ಅವರನ್ನು ಕುರಿತು 'ಬೆಳಗ್ಗೆ (ವಃ=ಯುಷ್ಮಭ್ಯಮ್) ನಿಮಗೆ ಪ್ರತಿಹೇಳುವೆನು, ಉತ್ತರದ ವಾಕ್ಯವನ್ನು ಹೇಳುವೆನು' ಎಂದನು.

ಹೀಗೆನ್ನಲು ಅವರು ರಾಜನ ಅಭಿಪ್ರಾಯವನ್ನು ಅರಿತುಕೊಂಡು[1] ಮಾರನೆಯ ದಿನ ಬೆಳಗ್ಗೆ ಸಮಿತ್ಪಾಣಿಗಳಾಗಿ ಸಮಿತ್ತಿನ ಕಟ್ಟನ್ನು ಕೈಯಲ್ಲಿಟ್ಟುಕೊಂಡು ರಾಜನ ಬಳಿಗೆ ಬಂದರು, ಬಂದವರಾದರು **ಹೀಗೆ ಮಹಾಶಾಲರೂ ಮಹಾಶ್ರೋತ್ರಿಯರೂ ಬ್ರಾಹ್ಮಣರೂ ಆಗಿದ್ದು (ತಾವು) ಮಹಾಶಾಲರು ಎಂದು ಮುಂತಾದ ಅಭಿಮಾನವನ್ನು ಬಿಟ್ಟು ಸಮಿತ್ತಿನ ಕಟ್ಟನ್ನು ಕೈಯಲ್ಲಿ ಹಿಡಿದುಕೊಂಡು ಜಾತಿಯಲ್ಲಿ ತಮಗಿಂತ ಕಡಿಮೆಯಾಗಿರುವ ರಾಜನನ್ನು ವಿದ್ಯೆಯನ್ನು ಬಯಸಿ ವಿನಯದಿಂದ ಬಳಿಸಾರಿದರಷ್ಟೆ, ಹಾಗೆಯೇ ವಿದ್ಯೆಯನ್ನು ಸಂಪಾದಿಸಿಕೊಳ್ಳಬೇಕೆನ್ನುವ ಬೇರೆಯವರೂ ಇರಬೇಕು.** ಮತ್ತು ಅವರಿಗೆ (ಅನುಪನೀಯೈವ=ಉಪನಯನಮಕೃತ್ವೈವ) ಉಪನಯನವನ್ನು ಮಾಡದೆಯೇ[2] ವಿದ್ಯೆಯನ್ನು ಅವರಿಗೆ (ಹೇಳಿ)ಕೊಟ್ಟನು. **ಯೋಗ್ಯರಿಗೆ (ಅವನು) ಹೇಗೆ ವಿದ್ಯೆಯನ್ನು (ಹೇಳಿ)ಕೊಟ್ಟನೋ ಹಾಗೆಯೇ ಮಿಕ್ಕವರೂ (ಹೇಳಿ)ಕೊಡಬೇಕು.**[3] ಎಂಬುದು ಆಖ್ಯಾಯಿಕೆಯ ಅರ್ಥವು. ಇದನ್ನು ಎಂದರೆ ವೈಶ್ವಾನರವಿದ್ಯೆಯನ್ನು ಹೇಳಿಕೊಟ್ಟನು ಎಂದು ಮುಂದೆ ಹೇಳಲಿರುವದಕ್ಕೆ ಸಂಬಂಧ.

---

1. ವಿಧಿವತ್ತಾಗಿ ಶಿಷ್ಯರಾಗಿ ಬಂದವರಿಗೇ ವಿದ್ಯೆಯನ್ನು ಹೇಳಿಕೊಡಬೇಕೆಂಬುದು ರಾಜನ ಅಭಿಪ್ರಾಯ.

2. ನ್ಯಾಯವಾಗಿ ಉಪನಯನಸಂಸ್ಕಾರವನ್ನು ಮಾಡಿಸಿಯೇ ವಿದ್ಯೆಯನ್ನು ಹೇಳಿಕೊಡಬೇಕು. ಶೌಚೇಯ ಪ್ರಾಚೀನಯೋಗ್ಯನಿಗೆ ಉದ್ದಾಲಕಆರುಣಿಯು ಉಪನಯನ ಮಾಡಿಸಿದ್ದು (ಶತ. ಬ್ರಾ. ೧೧-೫-೩-೧೩), ಸನತ್ಕುಮಾರರು ನಾರದರಿಗೆ ಮಾಡಿಸಿದ್ದು (ಛಾಂ ೭-೧-೧), ಪಿಪ್ಪಲಾದನು ಸುಕೇಶಾದಿಗಳಿಗೆ ಮಾಡಿಸಿದ್ದು (ಪ್ರ ೧-೧)- ಇವುಗಳೆಲ್ಲ ಇದಕ್ಕೆ ಉದಾಹರಣೆ. ಪ್ರಕೃತದಲ್ಲಿ ರಾಜನು ಬ್ರಾಹ್ಮಣರಲ್ಲಿ ಗೌರವದಿಂದ ಉಪನಯನ ಮಾಡಿಸದೆ ಹೇಳಿಕೊಟ್ಟನೆಂದದ್ದು ಈ ನಿಯಮಕ್ಕೆ ಪ್ರತಿಷೇಧ. ಸೂ. ಭಾ ೧-೩-೩೬ನ್ನು ನೋಡಿ.

3. ಶಿಷ್ಯರಿಗೆ ವಿನಯವು ಹೇಗೆ ನಿಯಮವೋ ಗುರುವಿಗೆ ಅಧಿಕಾರಿಗಳಿಗೆ ವಿದ್ಯೆಯನ್ನು ಹೇಳಿಕೊಡುವದೂ ಹಾಗೆಯೇ ನಿಯಮ.

# ಐದನೆಯ ಅಧ್ಯಾಯ-ಹನ್ನೆರಡನೆಯ ಖಂಡ

( ವೈಶ್ವಾನರವಿದ್ಯೆ )

## ದ್ಯುಲೋಕವು ವೈಶ್ವಾನರಾತ್ಮನ ತಲೆ

( ಉಪನಿಷತ್ತು )

**ಔಪಮನ್ಯವ ಕಂ ತ್ವಮಾತ್ಮಾನಮುಪಾಸ್ಸ ಇತಿ ದಿವಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತವ ಸುತಂ ಪ್ರಸುತಮಾಸುತಂ ಕುಲೇ ದೃಶ್ಯತೇ ॥ ೧ ॥**

**ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಮೂರ್ಧಾ ತ್ವೇಷ ಆತ್ಮನ ಇತಿ ಹೋವಾಚ ಮೂರ್ಧಾ ತೇ ವ್ಯಪತಿಷ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧-೨. 'ಔಪಮನ್ಯವನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ ?' 'ಭಗವಂತನಾದ ರಾಜನೆ, ದ್ಯುಲೋಕವನ್ನೇ' ಎಂದನು. 'ನೀನು ಆತ್ಮನನ್ನು ಉಪಾಸನೆಮಾಡುತ್ತಿರುವೆಯಲ್ಲ, ಇವನು ಸುತೇಜನೆಂಬ ವೈಶ್ವಾನರಾತ್ಮನು. ಆದ್ದರಿಂದ ನಿನ್ನ ಕುಲದಲ್ಲಿ ಸುತವೂ ಪ್ರಸುತವೂ ಆಸುತವೂ ಕಾಣಿಸುತ್ತಿದೆ. ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಈ ವೈಶ್ವಾನರಾತ್ಮನನ್ನು ಹೀಗೆಂದು ಯಾವನು ಉಪಾಸನೆಮಾಡುತ್ತಾನೋ (ಅವನು) ಅನ್ನವನ್ನು ಉಣ್ಣುತ್ತಾನೆ, ಪ್ರಿಯವನ್ನು ಕಾಣುತ್ತಾನೆ. ಅವನ ಕುಲದಲ್ಲಿ ಬ್ರಹ್ಮವರ್ಚಸವು ಇರುತ್ತದೆ. ಆದರೆ ಇದು ಆತ್ಮನ ತಲೆಯೇ; (ನೀನು) ನನ್ನ ಬಳಿಗೆ ಬಾರದೆ ಇದ್ದರೆ ನಿನ್ನ ತಲೆ ಬಿದ್ದುಹೋಗುತ್ತಿತ್ತು!'- ಎಂದನು.

### ದ್ಯುಲೋಕವೆಂಬ ವೈಶ್ವಾನರನ ತಲೆ

( ಭಾಷ್ಯ )

೪೨೬. ಸ ಕಥಮುವಾಚೇತಿ ? ಆಹ। ಔಪಮನ್ಯವ ಹೇ ಕಮಾತ್ಮಾನಂ ವೈಶ್ವಾನರಂ ತ್ವಮ್ ಉಪಾಸ್ಸ ಇತಿ ಪಪ್ರಚ್ಛ। ನನ್ವಯಮ್ ಅನ್ಯಾಯಃ

ಆಚಾರ್ಯಃ ಸನ್ ಶಿಷ್ಯಂ ಪೃಚ್ಛತೀತಿ। ನೈಷ ದೋಷಃ। "ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮಿ" (೬-೧-೧) ಇತಿ ನ್ಯಾಯದರ್ಶನಾತ್। ಅನ್ಯತ್ರಾಪಿ ಆಚಾರ್ಯಸ್ಯ ಅಪ್ರತಿಭಾನವತಿ ಶಿಷ್ಯೇ ಪ್ರತಿಭೋತ್ಪಾದನಾರ್ಥಃ ಪ್ರಶ್ನೋ ದೃಷ್ಟೋಽಜಾತಶತ್ರೋಃ "ಕ್ವೈಷ ತದಾಽಭೂತ್ ಕುತ ಏತದಾಗಾತ್" (ಬೃ. ೨-೧-೧೬) ಇತಿ। ದಿವಮೇವ ದ್ಯುಲೋಕಮೇವ ವೈಶ್ವಾನರಮುಪಾಸೇ ಭಗವೋ ರಾಜನ್ನಿತಿ ಹೋವಾಚ। ಏಷ ವೈ ಸುತೇಜಾಃ ಶೋಭನಂ ತೇಜೋ ಯಸ್ಯ ಸೋಽಯಂ ಸುತೇಜಾ ಇತಿ ಪ್ರಸಿದ್ಧೋ ವೈಶ್ವಾನರ ಆತ್ಮಾ, ಆತ್ಮನೋಽವಯವಭೂತತ್ವಾತ್। ಯಂ ತ್ವಮ್ ಆತ್ಮಾನಮ್ ಆತ್ಮೈಕದೇಶಮ್ ಉಪಾಸ್ಸೇ। ತಸ್ಮಾತ್ ಸುತೇಜಸೋ ವೈಶ್ವಾನರಸ್ಯ ಉಪಾಸನಾತ್ ತವ ಸುತಮ್ ಅಭಿಷುತಂ ಸೋಮರೂಪಂ ಕರ್ಮಣಿ ಪ್ರಸುತಂ ಪ್ರಕರ್ಷೇಣ ಚ ಸುತಮ್, ಆಸುತಂ ಚ ಅಹರ್ಗಣಾದಿಷು ತವ ಕುಲೇ ದೃಶ್ಯತೇ। ಅತೀವ ಕರ್ಮಿಣಸ್ತ್ವತ್ಕುಲೀನಾ ಇತ್ಯರ್ಥಃ। ಅತ್ಸಿ ಅನ್ನಂ ದೀಪ್ತಾಗ್ನಿಃ ಸನ್। ಪಶ್ಯಸಿ ಚ ಪುತ್ರಪೌತ್ರಾದಿಪ್ರಿಯಮಿಷ್ಟಮ್। ಅನ್ಯೋಽಪಿ ಅತ್ತಿ ಅನ್ನಂ ಪಶ್ಯತಿ ಚ ಪ್ರಿಯಮ್, ಭವತ್ಯಸ್ಯ ಸುತಂ ಪ್ರಸುತಮ್, ಆಸುತಮ್ ಇತ್ಯಾದಿ ಕರ್ಮಿತ್ವಂ ಬ್ರಹ್ಮವರ್ಚಸಂ ಕುಲೇ ಯಃ ಕಶ್ಚಿದೇತಂ ಯಥೋಕ್ತಮೇವಂ ವೈಶ್ವಾನರಮುಪಾಸ್ತೇ। ಮೂರ್ಧಾತ್ವಾತ್ಮನೋ ವೈಶ್ವಾನರಸ್ಯ ಏಷ ನ ಸಮಸ್ತೋ ವೈಶ್ವಾನರಃ। ಅತಃ ಸಮಸ್ತಬುದ್ಧ್ಯಾ ವೈಶ್ವಾನರಸ್ಯೋಪಾಸನಾತ್ ಮೂರ್ಧಾ ಶಿರಸ್ತೇ ವಿಪರೀತಗ್ರಾಹಿಣೋ ವ್ಯಪತಿಷ್ಯತ್ ವಿಪತಿತಮ್ ಅಭವಿಷ್ಯತ್ ಯದ್ ಯದಿ ಮಾಂ ನಾಗಮಿಷ್ಯಃ ನಾಽಽಗತೋಽಭವಿಷ್ಯಃ। ಸಾಧ್ವಕಾರ್ಷೀಃ ಯನ್ಮಾಮಾಮಾಗತೋಽಸಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅವನು ಹೇಗೆ ಹೇಳಿದನು ? ಎಂದು (ಶ್ರುತಿ) ಹೇಳುತ್ತದೆ ಎಲೈ ಔಪಮನ್ಯವನೆ, ಯಾವನನ್ನು ನೀನು ವೈಶ್ವಾನರಾತ್ಮನೆಂದು ಉಪಾಸನೆಮಾಡುತ್ತಿದ್ದೀಯೆ ?-ಎಂದು ಕೇಳಿದನು

(ಆಕ್ಷೇಪ).- ಆಚಾರ್ಯನಾಗಿದ್ದು (ಅಶ್ವಪತಿಯು) ಶಿಷ್ಯನನ್ನು ಕೇಳುತ್ತಾನೆ ಎಂದು ನ್ಯಾಯವಲ್ಲವಲ್ಲ[1] !

(ಪರಿಹಾರ).- ಇದೇನೂ ತಪ್ಪಲ್ಲ (ಏಕೆಂದರೆ) "ಏನು ತಿಳಿದಿರುವೆಯೋ ಅದನ್ನು ತಿಳಿಸಿ ನನ್ನ ಬಳಿಗೆ ಬಾ, ಅದರಿಂದ ಮುಂದಕ್ಕೆ (ನಿನಗೆ) ಹೇಳುವೆನು" (೬-೧-೧) ಎಂಬ ನ್ಯಾಯವು (ಶ್ರುತಿಯಲ್ಲಿ) ಕಂಡಿರುತ್ತದೆ. ಬೇರೊಂದು (ಶ್ರುತಿ) ಯಲ್ಲಿಯೂ ಶಿಷ್ಯನಿಗೆ ಏನೂ ತೋಚದಿರುವಲ್ಲಿ ತಿಳಿವಳಿಕೆಯನ್ನುಂಟುಮಾಡುವ

1. ಗುರುವಿಗೆ ತಿಳಿದೇ ಇರುತ್ತದೆ, ಅವನೇಕೆ ಪ್ರಶ್ನೆಮಾಡಬೇಕು ?

ದಕ್ಕಾಗಿ ಆಚಾರ್ಯನಾದ ಅಜಾತಶತ್ರುವು "ಇವನು ಆಗ ಎಲ್ಲಿದ್ದನು, ಎಲ್ಲಿಂದ ಹೀಗೆ ಬಂದನು ?" (ಬೃ. ೨-೧-೧೬) ಎಂದು ಕೇಳಿರುವದು ಕಂಡುಬರುತ್ತದೆ.

(ಅವನು) 'ಭಗವಂತನಾದ ರಾಜನೆ, ದಿವವನ್ನೇ ದ್ಯುಲೋಕವನ್ನೇ ವೈಶ್ವಾನರನೆಂದು ಉಪಾಸನೆಮಾಡುತ್ತಿರುವೆನು' ಎಂದನು. (ರಾಜನು ಇಂತೆಂದನು) ' ನೀನು ಆತ್ಮನೆಂದು ಆತ್ಮನ ಒಂದಂಶವನ್ನೇ ಉಪಾಸನೆಮಾಡುತ್ತಿರುವೆಯಲ್ಲ, ಇವನು ಸುತೇಜನೆಂಬ- ಒಳ್ಳೆಯ ತೇಜಸ್ಸು ಯಾವನಿಗಿರುವದೋ ಆ ಇವನು ಸುತೇಜನು ಎಂದು ಪ್ರಸಿದ್ಧನಾಗಿರುವ ವೈಶ್ವಾನರಾತ್ಮನು, ಆತ್ಮನ ಅವಯವವಾಗಿರುವದರಿಂದ (ಆತ್ಮನು) [1] ಆದ್ದರಿಂದ ಸುತೇಜನೆಂಬ ವೈಶ್ವಾನರನ ಉಪಾಸನೆಯಿಂದ ನಿನ್ನ ಕುಲದಲ್ಲಿ ಸುತವು ಎಂದರೆ ಕರ್ಮದಲ್ಲಿ ಸೋಮವನ್ನು ಹಿಂಡುವದು, ಪ್ರಸುತವು ಹೆಚ್ಚಾಗಿ ಹಿಂಡುವದು, ಮತ್ತು ಆಸುತವು- (ಇವು) ಅಹರ್ಗಣಾದಿಗಳಲ್ಲಿ[2] ಕಂಡುಬರುತ್ತವೆ ನಿನ್ನ ಕುಲದವರು ಹೆಚ್ಚಿನ ಕರ್ಮಿಗಳು ಎಂದರ್ಥ. ಅನ್ನವನ್ನು ದೀಪ್ತಾಗ್ನಿಯಾಗಿ ಉಣ್ಣುತ್ತಿರುವೆ , ಪುತ್ರಪೌತ್ರಾದಿಪ್ರಿಯವನ್ನು ಇಷ್ಟ(ವಸ್ತು)ವನ್ನು ಕಾಣುತ್ತಿರುವೆ ಯಾವನು ಈ ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುತ್ತಾನೋ ಆ ಇನ್ನೊಬ್ಬನೂ ಅನ್ನವನ್ನು ಉಣ್ಣುತ್ತಾನೆ, ಪ್ರಿಯವನ್ನು ಕಾಣುತ್ತಾನೆ, ಅವನ ಕುಲದಲ್ಲಿ ಸುತ, ಪ್ರಸುತ, ಆಸುತ- ಮುಂತಾದವೂ ಉಂಟಾಗಿ ಕರ್ಮಿತ್ವವು ಇರುತ್ತದೆ, ಬ್ರಹ್ಮವರ್ಚಸವೂ (ಇರುತ್ತದೆ)

ಆದರೆ ಇದು ವೈಶ್ವಾನರಾತ್ಮನ ತಲೆಯೇ ಹೊರತು ಸಮಸ್ತವೈಶ್ವಾನರನಲ್ಲ, ಆದ್ದರಿಂದ ಸಮಸ್ತವೆಂಬ ಬುದ್ಧಿಯಿಂದ (ಈ) ವೈಶ್ವಾನರನನ್ನು ಉಪಾಸನೆಮಾಡುತ್ತಿರುವದರಿಂದ ತಲೆಯು (ಯದ್=ಯದಿ) ನನ್ನ ಬಳಿಗೆ ಬರಲಿಲ್ಲವಾಗಿದ್ದರೆ ಬರದವನಾಗಿದ್ದರೆ ತಪ್ಪುತಿಳಿವಳಿಕೆಯುಳ್ಳ ನಿನ್ನ (ಮೂರ್ಧಾ=ಶಿರಃ) ತಲೆಯು ಬಿದ್ದುಹೋಗುತ್ತಿತ್ತು, ಬಿದ್ದದ್ದಾಗುತ್ತಿತ್ತು ನನ್ನ ಬಳಿಗೆ ಬಂದೆಯಲ್ಲ, ಒಳ್ಳೆಯದನ್ನೇ ಮಾಡಿದೆ- ಎಂದು ಅಭಿಪ್ರಾಯ.[3]

---

1. ಮೂಲದಲ್ಲಿ ಆತ್ಮನು ಎಂದೇ ಇದೆ, ಆದರೆ ಇದು ಪೂರ್ಣಾತ್ಮನಲ್ಲ, ಆತ್ಮನ ಒಂದು ಅವಯವವೇ ಎಂದು ಮುಂದೆ ಗೊತ್ತಾಗುತ್ತದೆ. ಅವಯವವನ್ನು ಅವಯವಿಯೆಂದು ಉಪಚಾರಕ್ಕೆ ಕರೆಯುವದುಂಟು.

2. ಏಕಾಹವೇ ಮುಂತಾದ ರೂಪದಲ್ಲಿರುವ ಜ್ಯೋತಿಷ್ಟೋಮಾದಿಗಳು ಅಹರ್ಗಣವೆನಿಸುವವು. ಅದರಲ್ಲಿ ಸುತವೆಂಬ ಸೋಮರೂಪವಾದ ಲತಾದ್ರವ್ಯವಿರುತ್ತದೆ, ಅಹೀನದಲ್ಲಿ ಪ್ರಸುತ, ಸತ್ರದಲ್ಲಿ ಆಸುತ- ಹೀಗೆ ಭೇದವಿರುತ್ತದೆ ಆ. ಗಿ.

3. ಇಲ್ಲಿ ಅವಯವೋಪಾಸನೆಯನ್ನು ನಿಂದೆಮಾಡಿರುವದರಿಂದ ಸಮಸ್ತೋಪಾಸನೆಯೊಂದೇ ವಿಧಿಸಿದೆಯೆಂದು ತಿಳಿಯಬೇಕೆಂದು ಸೂ. ಭಾ ೩-೩-೫೮ರಲ್ಲಿ ನಿರ್ಣಯಿಸಿದೆ.

# ಐದನೆಯ ಅಧ್ಯಾಯ-ಹದಿಮೂರನೆಯ ಖಂಡ

( ವೈಶ್ವಾನರವಿದ್ಯೆ )

## ಆದಿತ್ಯನು ವೈಶ್ವಾನರಾತ್ಮನ ಕಣ್ಣು

( ಉಪನಿಷತ್ತು )

**ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ ಪ್ರಾಚೀನಯೋಗ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾದಿತ್ಯಮೇವ ಭಗವೋ ರಾಜ ನ್ನಿತಿ ಹೋವಾಚೈಷ ವೈ ವಿಶ್ವರೂಪ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವ ಬಹು ವಿಶ್ವರೂಪಂ ಕುಲೇ ದೃಶ್ಯತೇ ॥ ೧ ॥**

**ಪ್ರವೃತ್ತೋಽಶ್ವತರೀರಥೋ ದಾಸೀನಿಷ್ಕೋಽತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಚಕ್ಷುಷ್ಟ್ವೇತದಾತ್ಮನ ಇತಿ ಹೋವಾಚಾನ್ಧೋಽಭವಿಷ್ಯೋ ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧-೨. ಆಮೇಲೆ ಸತ್ಯಯಜ್ಞಪೌಲುಷಿಯನ್ನು 'ಎಲೈ ಪ್ರಾಚೀನ ಯೋಗ್ಯನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡು ತ್ತಿರುವೆ?' ಎಂದು ಕೇಳಿದನು. 'ಭಗವಂತನಾದ ರಾಜನೆ, ಆದಿತ್ಯ ನನ್ನೇ' ಎಂದನು. 'ನೀನು ಆತ್ಮನನ್ನು ಉಪಾಸನೆಮಾಡುತ್ತಿರುವೆ ಯಲ್ಲ, ಇವನು ವಿಶ್ವರೂಪನೆಂಬ ವೈಶ್ವಾನರಾತ್ಮನು, ಆದ್ದರಿಂದ ನಿನ್ನ ಕುಲದಲ್ಲಿ ಬಹು ವಿಶ್ವರೂಪವು ಕಾಣಿಸುತ್ತಿದೆ. ಅಶ್ವತರೀ ರಥವೂ ದಾಸೀನಿಷ್ಕವೂ ಇರುತ್ತದೆ. , ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಯಾವನು ಈ ವೈಶ್ವಾನರಾತ್ಮನನ್ನೇ ಹೀಗೆಂದು ಉಪಾಸನೆಮಾಡುವನೋ (ಅವನು) ಅನ್ನವನ್ನು ಉಣ್ಣು ತ್ತಿರುವನು, ಪ್ರಿಯವನ್ನು ಕಾಣುತ್ತಿರುವನು, ಅವನ ಕುಲದಲ್ಲಿ ಬ್ರಹ್ಮ ವರ್ಚಸವು ಇರುತ್ತದೆ ಆದರೆ ಇದು ಆತ್ಮನ ಕಣ್ಣೇ, (ನೀನು) ನನ್ನ ಬಳಿಗೆ ಬಾರದೆ ಇದ್ದರೆ ಕುರುಡನಾಗಿಬಿಡುತ್ತಿದ್ದೆ!'- ಎಂದನು.

## ಆದಿತ್ಯನೆಂಬ ವೈಶ್ವಾನರನ ಕಣ್ಣು

(ಭಾಷ್ಯ)

೪೨೭. ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ ಹೇ ಪ್ರಾಚೀನ ಯೋಗ್ಯ, ಕಂ ತ್ವಮಾತ್ಮಾನಮ್ ಉಪಾಸ್ಸೇ ಇತಿ। ಆದಿತ್ಯಮೇವ ಭಗವೋ ರಾಜನ್ ಇತಿ ಹೋವಾಚ। ಶುಕ್ಲನೀಲಾದಿರೂಪತ್ವಾತ್ ವಿಶ್ವರೂಪತ್ವಮಾದಿತ್ಯಸ್ಯ। ಸರ್ವರೂಪತ್ವಾದ್ವಾ। ಸರ್ವಾಣಿ ರೂಪಾಣಿ ಹಿ ತ್ವಾಷ್ಟ್ರಾಣಿ ಯತೋಽತೋ ವಾ ವಿಶ್ವರೂಪ ಆದಿತ್ಯಃ। ತದುಪಾಸನಾತ್ ತವ ಬಹು ವಿಶ್ವರೂಪಮ್ ಇಹಾಮುತ್ರಾರ್ಥಮ್ ಉಪಕರಣಂ ದೃಶ್ಯತೇ ಕುಲೇ। ಕಿಂ ಚ ತ್ವಾಮನುಪ್ರವೃತ್ತೋಽಶ್ವತರೀಭ್ಯಾಂ ಯುಕ್ತೋ ರಥೋಽಶ್ವತರೀರಥಃ। ದಾಸೀನಿಷ್ಕಃ। ದಾಸೀಭಿರ್ಯುಕ್ತೋ ನಿಷ್ಕೋ ಹಾರೋ ದಾಸೀನಿಷ್ಕಃ। ಅತ್ಸ್ಯನ್ನಮ್ ಇತ್ಯಾದಿ ಸಮಾನಮ್। ಚಕ್ಷುರ್ವೈಶ್ವಾನರಸ್ಯ ತು ಸವಿತಾ। ತಸ್ಯ ಸಮಸ್ತಬುದ್ಧ್ಯಾ ಉಪಾಸನಾದ್ ಅನ್ಧೋಽಭವಿಷ್ಯಶ್ಚಕ್ಷುರ್ಹೀನೋಽಭವಿಷ್ಯಃ ಯನ್ಮಾಂ ನಾಗಮಿಷ್ಯ ಇತಿ ಪೂರ್ವವತ್ ॥

(ಭಾಷ್ಯಾರ್ಥ)

ಆಮೇಲೆ ಸತ್ಯಯಜ್ಞಪೌಲುಷಿಯನ್ನು 'ಎಲೈ ಪ್ರಾಚೀನಯೋಗ್ಯನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ?' ಎಂದು ಕೇಳಿದನು (ಅವನು) 'ಭಗವಂತನಾದ ರಾಜನೆ, ಆದಿತ್ಯನನ್ನೇ ಉಪಾಸನೆಮಾಡುತ್ತಿದೇನೆ' ಎಂದನು ಶುಕ್ಲ, ನೀಲ- ಮುಂತಾದ ರೂಪಗಳುಳ್ಳವನಾದ್ದರಿಂದ[1] ಆದಿತ್ಯನು ವಿಶ್ವರೂಪನು ಅಥವಾ ಸರ್ವರೂಪನಾಗಿರುವದರಿಂದ (ಅವನು ವಿಶ್ವರೂಪನು) ಎಲ್ಲಾ ರೂಪಗಳೂ ಸೂರ್ಯನವೇ ಅಲ್ಲವೆ? ಆದ್ದರಿಂದಲಾದರೂ ಆದಿತ್ಯನಿಗೆ ವಿಶ್ವರೂಪನೆಂದು ಹೆಸರು ಅವನ ಉಪಾಸನೆಯಿಂದ ನಿನ್ನ ಕುಲದಲ್ಲಿ ಬಹು ವಿಶ್ವರೂಪವು, ಇಹಪರಕ್ಕೆ ಬೇಕಾದ ಉಪಕರಣವು ಕಾಣಬರುತ್ತಿದೆ. ಮತ್ತು ನಿನ್ನ ಹಿಂದೆ ಅಶ್ವತರೀರಥವು ಎಂದರೆ ಹೇಸರುಗತ್ತೆಗಳನ್ನು ಕಟ್ಟಿರುವ ರಥವೂ ದಾಸೀನಿಷ್ಕವೂ- ದಾಸಿಯರಿಂದ ಕೂಡಿರುವ ನಿಷ್ಕವು ಎಂದರೆ ಹಾರವು ದಾಸೀ ನಿಷ್ಕವು (ಇದೂ)- ಇರುತ್ತಿರುವದು 'ಅನ್ನವನ್ನು ಉಣ್ಣುತ್ತಿರುವೆ' ಮುಂತಾದ ಗ್ರಂಥವು (ಹಿಂದಿನ ಕಂಡಿಕೆಗೆ) ಸಮಾನವಾಗಿದೆ.

ಆದರೆ ಸೂರ್ಯನು ವೈಶ್ವಾನರನಿಗೆ ಕಣ್ಣೇ. ಅವನನ್ನು ಸಮಸ್ತಬುದ್ಧಿಯಿಂದ ಉಪಾಸನೆಮಾಡಿದ್ದರಿಂದ, ನೀನು ನನ್ನ ಬಳಿಗೆ ಬಾರದಿದ್ದರೆ ಕುರುಡನಾಗುತ್ತಿದ್ದೆ, ಕಣ್ಣಿಲ್ಲದವನಾಗುತ್ತಿದ್ದೆ -ಎಂಬುದನ್ನು ಹಿಂದಿನಂತೆ (ಅರ್ಥಮಾಡಿಕೊಳ್ಳಬೇಕು).

---

1 ೩ನೆಯ ಅಧ್ಯಾಯದಲ್ಲಿರುವ ಮಧುವಿದ್ಯೆಯಲ್ಲಿ ಹೇಳಿರುವ ರೂಪಗಳುಳ್ಳವನಾದ್ದರಿಂದ ಎಂಬ ಅಭಿಪ್ರಾಯವಿರಬಹುದು.

# ಐದನೆಯ ಅಧ್ಯಾಯ–ಹದಿನಾಲ್ಕನೆಯ ಖಂಡ

( ವೈಶ್ವಾನರವಿದ್ಯೆ )

## ವಾಯುವು ವೈಶ್ವಾನರನ ಪ್ರಾಣ

(ಉಪನಿಷತ್ತು)

**ಅಥ ಹೋವಾಚೇನ್ದ್ರದ್ಯುಮ್ನಂ ಭಾಲ್ಲವೇಯಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತಿ ವಾಯುಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಪೃಥಗ್ವರ್ತ್ಮಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ ತ್ವಾಂ ಪೃಥಗ್ಬಲಯ ಆಯನ್ತಿ ಪೃಥಗ್ರಥಶ್ರೇಣಯೋಽನುಯನ್ತಿ ॥ ೧ ॥ ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪ್ರಾಣಸ್ತ್ವೇಷ ಆತ್ಮನ ಇತಿ ಹೋವಾಚ ಪ್ರಾಣಸ್ತ ಉದಕ್ರಮಿಷ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧-೨. ಆಮೇಲೆ ಇಂದ್ರದ್ಯುಮ್ನ ಭಾಲ್ಲವೇಯನನ್ನು 'ವೈಯಾಘ್ರಪದ್ಯನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ ?' ಎಂದು ಕೇಳಿದನು. 'ಭಗವಂತನಾದ ರಾಜನೆ, ವಾಯುವನ್ನೇ (ಉಪಾಸನೆಮಾಡುತ್ತಿರುವೆನು)' ಎಂದನು. 'ನೀನು ಆತ್ಮನನ್ನು ಉಪಾಸನೆ ಮಾಡುತ್ತಿರುವೆಯಲ್ಲ, ಇವನು ಪೃಥಗ್ವರ್ತ್ಮಾತ್ಮನೆಂಬ ವೈಶ್ವಾನರನು. ಆದ್ದರಿಂದ ನಿನ್ನಬಳಿಗೆ ಬೇರೆಬೇರೆಯಾದ ಕಾಣಿಕೆಗಳು ಬರುತ್ತಿವೆ ; ಬೇರೆಬೇರೆಯ ರಥಶ್ರೇಣಿಗಳು ಹಿಂಬಾಲಿಸುತ್ತಿವೆ. ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಯಾವನು ಈ ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುತ್ತಾನೋ ಅವನು ಅನ್ನವನ್ನು ಉಣ್ಣುತ್ತಿರುವನು, ಪ್ರಿಯವನ್ನು ಕಾಣುತ್ತಿರುವನು, ಅವನ ಕುಲದಲ್ಲಿ ಬ್ರಹ್ಮವರ್ಚಸವು ಇದ್ದುಕೊಂಡಿರುವದು. ಆದರೆ ಇದು ಆತ್ಮನ ಪ್ರಾಣವು. (ನೀನು) ನನ್ನಬಳಿಗೆ ಬಾರದಿದ್ದರೆ ನಿನ್ನ ಪ್ರಾಣವು ಉತ್ಕ್ರಮಿಸಿಬಿಡುತ್ತಿತ್ತು' ಎಂದನು.

## ವಾಯುವೆಂಬ ವೈಶ್ವಾನರನ ಪ್ರಾಣ

(ಭಾಷ್ಯ)

೪೨೮. ಅಥ ಹೋವಾಚ ಇನ್ದ್ರದ್ಯುಮ್ನಂ ಭಾಲ್ಲವೇಯಮ್ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸೇ ಇತ್ಯಾದಿ ಸಮಾನಮ್ । ಪೃಥಗ್ವರ್ತ್ಮಾ ನಾನಾವರ್ತ್ಮಾನಿ ಯಸ್ಯ ವಾಯೋರಾವಹೋದ್ವಹಾದಿಭಿರ್ಭೇದೈರ್ವರ್ತಮಾನಸ್ಯ ಸೋಽಯಂ ಪೃಥಗ್ವರ್ತ್ಮಾತ್ಮಾ ವಾಯುಃ । ತಸ್ಮಾತ್ ಪೃಥಗ್ವರ್ತ್ಮಾತ್ಮನೋ ವೈಶ್ವಾನರಸ್ಯ ಉಪಾಸನಾತ್ ಪೃಥಕ್ ನಾನಾದಿಕ್ಕಾಃ ತ್ವಾಂ ಬಲಯಃ ವಸ್ತ್ರಾನ್ನಾದಿಲಕ್ಷಣಾ ಬಲಯಃ ಆಯನ್ತಿ ಆಗಚ್ಛನ್ತಿ । ಪೃಥಗ್ರಥಶ್ರೇಣಯಃ ರಥಪಙ್ಕ್ತಯೋಽಪಿ ತ್ವಾಮ್ ಅನುಯನ್ತಿ । ಅತ್ಸ್ಯನ್ನಮ್ ಇತ್ಯಾದಿ ಸಮಾನಮ್ । ಪ್ರಾಣಸ್ತ್ವೇಷ ಆತ್ಮನ ಇತಿ ಹ ಉವಾಚ । ಪ್ರಾಣಸ್ತೇ ತವ ಉದಕ್ರಮಿಷ್ಯತ್ ಉತ್ಕ್ರಾನ್ತೋಽಭವಿಷ್ಯತ್ ಯನ್ಮಾಂ ನಾಗಮಿಷ್ಯ ಇತಿ ॥

(ಭಾಷ್ಯಾರ್ಥ)

ಆಮೇಲೆ ಇಂದ್ರದ್ಯುಮ್ನಭಾಲ್ಲವೇಯನನ್ನು 'ವೈಯಾಘ್ರಪದ್ಯನೆ, ನೀನು ಯಾವನನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ ?' ಎಂದು ಮುಂತಾಗಿರುವದು (ಹಿಂದಿನ ಗ್ರಂಥಕ್ಕೆ) ಸಮಾನವಾಗಿದೆ. ಪೃಥಗ್ವರ್ತ್ಮಾತ್ಮನು , ಆವಹ, ಉದ್ವಹ-ಮುಂತಾದ ಭೇದಗಳಿಂದೊಡಗೂಡಿರುವ ವಾಯುವಿಗೆ ಬೇರೆಬೇರೆಯಾದ ಮಾರ್ಗಗಳು ಇರುವದರಿಂದ ಆ ಈ ವಾಯು ಪೃಥಗ್ವರ್ತ್ಮ(ನೆನಿಸಿರುವನು) ಆದ್ದರಿಂದ ಪೃಥಗ್ವರ್ತ್ಮಾತ್ಮನೆಂಬ ವೈಶ್ವಾನರನನ್ನು ಉಪಾಸನೆಮಾಡುತ್ತಿರುವದರಿಂದ ಬೇರೆ ಬೇರೆಯ ದಿಕ್ಕಿನಿಂದ ಬರುವ ಕಾಣಿಕೆಗಳು, ಅನ್ನಬಟ್ಟೆ ಮುಂತಾದ ಕಾಣಿಕೆಗಳು ನಿನ್ನ ಬಳಿಗೆ ಬರುತ್ತಿವೆ. ಮತ್ತು ಬೇರೆಬೇರೆಯ ರಥಶ್ರೇಣಿಗಳು ರಥಗಳ ಸಾಲುಗಳು ನಿನ್ನನ್ನು ಹಿಂಬಾಲಿಸುತ್ತಿರುವವು 'ಅನ್ನವನ್ನು ಉಣ್ಣುತ್ತಿರುವೆ' ಎಂದು ಮುಂತಾಗಿರುವ (ಗ್ರಂಥವು ಹಿಂದಿನದಕ್ಕೆ) ಸಮಾನವು

ಆದರೆ ಇದು ಆತ್ಮನ ಪ್ರಾಣವೇ ಎಂದನು. (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಪ್ರಾಣವು ಉತ್ಕ್ರಮಿಸಿಬಿಡುತ್ತಿತ್ತು, ಉತ್ಕ್ರಾಂತವಾಗಿ ಬಿಡುತ್ತಿತ್ತು.

---

# ಐದನೆಯ ಅಧ್ಯಾಯ–ಹದಿನೈದನೆಯ ಖಂಡ

( ವೈಶ್ವಾನರವಿದ್ಯೆ )

## ಆಕಾಶವು ವೈಶ್ವಾನರನ ನಡುಮೈ

(ಉಪನಿಷತ್ತು)

**ಅಥ ಹೋವಾಚ ಜನಗ್ಂ ಶಾರ್ಕರಾಕ್ಷ್ಯ ಕಂ ತ್ವಮಾತ್ಮಾನ ಮುಪಾಸ್ಸ ಇತ್ಯಾಕಾಶಮೇವ ಭಗವೋ ರಾಜನ್ನಿತಿ ಹೋವಾ ಚೈಷ ವೈ ಬಹುಲ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನ ಮುಪಾಸ್ಸೇ ತಸ್ಮಾತ್ತ್ವಂ ಬಹುಲೋಽಸಿ ಪ್ರಜಯಾ ಚ ಧನೇನ ಚ ॥ ೧ ॥**

**ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರ ಮುಪಾಸ್ತೇ ಸಂದೇಹಸ್ತ್ವೇಷ ಆತ್ಮನ ಇತಿ ಹೋವಾಚ ಸಂದೇ ಹಸ್ತೇ ವ್ಯಶೀರ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧–೨. ಆಮೇಲೆ ಜನನನ್ನು 'ಶಾರ್ಕರಾಕ್ಷ್ಯನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ?' ಎಂದು ಕೇಳಿದನು. 'ಭಗವಂತನಾದ ರಾಜನೆ. ಆಕಾಶವನ್ನೇ (ಉಪಾಸನೆಮಾಡುತ್ತಿರು ವೆನು)' ಎಂದನು. 'ನೀನು ಉಪಾಸನೆಮಾಡುತ್ತಿರುವೆಯಲ್ಲ, ಇವನು ಬಹುಲನೆಂಬ ವೈಶ್ವಾನರಾತ್ಮನು. ಆದ್ದರಿಂದ ನೀನು ಪ್ರಜೆಯಿಂದಲೂ ಧನದಿಂದಲೂ ಬಹುಲನಾಗಿರುವೆ. ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಯಾವನು ಈ ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುವನೋ ಅವನು ಅನ್ನವನ್ನು ಉಣ್ಣುತ್ತಿರು ವನು, ಪ್ರಿಯವನ್ನು ಕಾಣುತ್ತಿರುವನು, ಅವನ ಕುಲದಲ್ಲಿ ಬ್ರಹ್ಮ ವರ್ಚಸವು ಇದ್ದುಕೊಂಡಿರುವದು. ಆದರೆ ಇದು ಆತ್ಮನ ಸಂದೇಹವೇ; (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಸಂದೇಹವು ವಿಶೀರ್ಣ ವಾಗುತ್ತಿತ್ತು' ಎಂದನು.

## ಆಕಾಶವೆಂಬ ವೈಶ್ವಾನರನ ನಡುಮೈ

(ಭಾಷ್ಯ)

೪೨೯. ಅಥ ಹೋವಾಚ ಜನಮ್ ಇತ್ಯಾದಿ ಸಮಾನಮ್ । ಏಷ ವೈ ಬಹುಲ ಆತ್ಮಾ ವೈಶ್ವಾನರಃ । ಬಹುತ್ವಮ್ ಆಕಾಶಸ್ಯ ಸರ್ವಗತತ್ವಾತ್ । ಬಹುಲ ಗುಣೋಪಾಸನಾಚ್ಚ । ತ್ವಂ ಬಹುಲೋಽಸಿ ಪ್ರಜಯಾ ಚ ಪುತ್ರಪೌತ್ರಾದಿ ಲಕ್ಷಣಯಾ, ಧನೇನ ಚ ಹಿರಣ್ಯಾದಿನಾ । ಸಂದೇಹಸ್ತ್ವೇಷಃ । ಸಂದೇಹಃ ಮಧ್ಯಮಂ ಶರೀರಂ ವೈಶ್ವಾನರಸ್ಯ । ದಿಹೇರುಪಚಯಾರ್ಥತ್ವಾತ್ ಮಾಂಸರುಧಿರಾ ಸ್ಥ್ಯಾದಿಭಿಶ್ಚ ಬಹುಲಂ ಶರೀರಂ ತತ್ಸಂದೇಹಃ ತೇ ತವ ಶರೀರಂ ವ್ಯಶೀರ್ಯತ್ ಶೀರ್ಣಮಭವಿಷ್ಯತ್ ಯನ್ಮಾಂ ನಾಗಮಿಷ್ಯ ಇತಿ ॥

(ಭಾಷ್ಯಾರ್ಥ)

'ಆಮೇಲೆ ಜನನನ್ನು ಹೀಗೆಂದು ಕೇಳಿದನು' –ಎಂದು ಮುಂತಾಗಿರುವ ಗ್ರಂಥವು (ಹಿಂದಿನದಕ್ಕೆ) ಸಮಾನವು. ಇವನು ಬಹುಲನೆಂಬ ವೈಶ್ವಾನರಾತ್ಮನು. ಆಕಾಶವು ಬಹುಲವೆಂಬುದು (ಅದು) ಸರ್ವಗತವಾಗಿರುವದರಿಂದಲೂ ಬಹುಲಗುಣ ದಿಂದ ಉಪಾಸ್ಯವಾಗಿರುವದರಿಂದಲೂ ಆಗಿದೆ. ನೀನು ಪುತ್ರಪೌತ್ರಾದಿರೂಪ ವಾದ ಪ್ರಜೆಯಿಂದಲೂ ಹಿರಣ್ಯವೇ ಮುಂತಾದ ಧನದಿಂದಲೂ ಬಹುಲನಾಗಿರುವೆ.

ಆದರೆ ಇದು ವೈಶ್ವಾನರನ ಸಂದೇಹವೇ, ನಡುಮೈಯೇ ದಿಹ್‌ಧಾತುವಿಗೆ ಕೂಡಿಹಾಕು ಎಂಬರ್ಥವಿರುವದರಿಂದಲೂ ಶರೀರವು ಮಾಂಸ, ರಕ್ತ, ಮೂಳೆ– ಮುಂತಾದವುಗಳಿಂದ ಬಹುಲವಾಗಿರುವದರಿಂದಲೂ ಅದು ಸಂದೇಹವು. (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಶರೀರವು ವಿಶೀರ್ಣವಾಗಿಬಿಡುತ್ತಿತ್ತು, ನಾಶವಾಗಿಬಿಡುತ್ತಿತ್ತು– (ಎಂದನು).

---

# ಐದನೆಯ ಅಧ್ಯಾಯ-ಹದಿನಾರನೆಯ ಖಂಡ

(ವೈಶ್ವಾನರವಿದ್ಯೆ)

## ಅಪ್ಪು ವೈಶ್ವಾನರನ ಬಸ್ತಿ

(ಉಪನಿಷತ್ತು)

**ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಪ ಏವ ಭಗವೋ ರಾಜನ್ನಿತಿ ಹೋವಾಚೈಷ ವೈ ರಯಿರಾತ್ಮಾ ವೈಶ್ವಾನರೋ ಯಂ ತ್ವಮಾ ತ್ಮಾನಮುಪಾಸ್ಸೇ ತಸ್ಮಾತ್ತ್ವಗ್ಂ ರಯಿಮಾನ್ ಪುಷ್ಟಿಮಾನಸಿ ॥**

**ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರ ಮುಪಾಸ್ತೇ ಬಸ್ತಿಸ್ತ್ವೇಷ ಆತ್ಮನ ಇತಿ ಹೋವಾಚ ಬಸ್ತಿಸ್ತೇ ವ್ಯಭೇತ್ಸ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧-೨. ಆಮೇಲೆ ಬುಡಿಲಆಶ್ವತರಾಶ್ವಿಯನ್ನು 'ವೈಯಾಘ್ರಪದ್ಯನೆ, ನೀನು ಯಾವನನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ?' ಎಂದು ಕೇಳಿದನು. 'ಭಗವಂತನಾದ ರಾಜನೆ, ಅಪ್ಪನ್ನೇ (ಉಪಾಸನೆ ಮಾಡುತ್ತಿರುವೆನು)' ಎಂದನು. 'ನೀನು ಉಪಾಸನೆಮಾಡುತ್ತಿರುವೆಯಲ್ಲ, ಇವನು ರಯಿ ಎಂಬ ವೈಶ್ವಾನರಾತ್ಮನು. ಆದ್ದರಿಂದ ನೀನು ರಯಿಯುಳ್ಳವನೂ ಪುಷ್ಟಿವಂತನೂ ಆಗಿರುವೆ. ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಯಾವನು ಈ ವೈಶ್ವಾನರನನ್ನು ಹೀಗೆಂದು ಉಪಾಸನೆಮಾಡುತ್ತಾನೋ ಅವನು ಅನ್ನವನ್ನು ಉಣ್ಣುತ್ತಿರುವನು, ಪ್ರಿಯವನ್ನು ಕಾಣುತ್ತಿರುವನು, ಅವನ ಕುಲದಲ್ಲಿ ಬ್ರಹ್ಮವರ್ಚಸವು ಇದ್ದುಕೊಂಡಿರುವದು. ಆದರೆ ಇದು ಆತ್ಮನ ಬಸ್ತಿಯೇ ; (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಬಸ್ತಿಯು ವಿಭಿನ್ನವಾಗಿಬಿಡುತ್ತಿತ್ತು' ಎಂದನು.

## ಅಪ್ಪೆಂಬ ವೈಶ್ವಾನರನ ನಡುಮೈ

### (ಭಾಷ್ಯ)

೪೩೦. ಅಥ ಹೋವಾಚ ಬುಡಿಲಮಾಶ್ವತರಾಶ್ವಿಮ್ ಇತ್ಯಾದಿ ಸಮಾನಮ್ । ಏಷ ವೈ ರಯಿರಾತ್ಮಾ ವೈಶ್ವಾನರೋ ಧನರೂಪಃ । ಅದ್ಭ್ಯೋಽನ್ನಂ ತತೋ ಧನಮಿತಿ । ತಸ್ಮಾದ್ ರಯಿಮಾನ್ ಧನವಾನ್ ತ್ವಂ ಪುಷ್ಟಿಮಾಂಶ್ಚ ಶರೀರೇಣ । ಪುಷ್ಟೇಶ್ಚ ಅನ್ನನಿಮಿತ್ತತ್ವಾತ್ । ಬಸ್ತಿಸ್ತು ಏಷ ಆತ್ಮನೋ ವೈಶ್ವಾನರಸ್ಯ । ಬಸ್ತಿಃ ಮೂತ್ರಸಂಗ್ರಹಸ್ಥಾನಮ್ । ಬಸ್ತಿಸ್ತೇ ವ್ಯಭೇತ್ಸ್ಯತ್ ಭಿನ್ನೋಽಭವಿಷ್ಯತ್ ಯನ್ಮಾಂ ನಾಗಮಿಷ್ಯ ಇತಿ ॥

### (ಭಾಷ್ಯಾರ್ಥ)

'ಆಮೇಲೆ ಬುಡಿಲಆಶ್ವತರಾಶ್ವಿಯನ್ನು (ಹೀಗೆಂದು) ಕೇಳಿದನು' ಎಂದು ಮುಂತಾಗಿರುವ ಗ್ರಂಥವು (ಹಿಂದಿನದಕ್ಕೆ) ಸಮಾನವು. ಇವನು ರಯಿ ಎಂಬ ಧನರೂಪನಾದ ವೈಶ್ವಾನರಾತ್ಮನು. ಏಕೆಂದರೆ ಅಪ್ಪಿನಿಂದ ಅನ್ನವೂ ಅದರಿಂದ

ಧನವೂ (ದೊರಕುತ್ತದೆ). ಆದ್ದರಿಂದ ನೀನು ರಯಿವಂತನೂ ಎಂದರೆ ಧನವಂತ (ನಾಗಿದ್ದೀಯೆ) ; ಶರೀರದಲ್ಲಿ ಪುಷ್ಟಿವಂತನೂ (ಆಗಿದ್ದೀಯೆ), ಏಕೆಂದರೆ ಪುಷ್ಟಿಯು ಅನ್ನದ ನಿಮಿತ್ತದಿಂದಾಗಿರುತ್ತದೆ

ಆದರೆ ಇದು ವೈಶ್ವಾನರಾತ್ಮನ ಬಸ್ತಿಯೇ. ಬಸ್ತಿ ಎಂದರೆ ಮೂತ್ರವನ್ನು ಕೂಡಿಹಾಕುವ ಸ್ಥಾನವು. (ನೀನು) ನನ್ನ ಬಳಿಗೆ ಬಾರದೆಇದ್ದಿದ್ದರೆ ನಿನ್ನ ಬಸ್ತಿಯು ವಿಭಿನ್ನವಾಗಿಬಿಡುತ್ತಿತ್ತು, ಒಡೆದುಕೊಂಡುಬಿಡುತ್ತಿತ್ತು (ಎಂದನು).

---

# ಐದನೆಯ ಅಧ್ಯಾಯ-ಹದಿನೇಳನೆಯ ಖಂಡ

( ವೈಶ್ವಾನರವಿದ್ಯೆ )

## ಪೃಥಿವಿಯು ವೈಶ್ವಾನರನ ಪಾದಗಳು

(ಉಪನಿಷತ್ತು)

**ಅಥ ಹೋವಾಚೋದ್ದಾಲಕಮಾರುಣಿಂ ಗೌತಮ ಕಂ ತ್ವ ಮಾತ್ಮಾನಮುಪಾಸ್ಸ ಇತಿ ಪೃಥಿವೀಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಪ್ರತಿಷ್ಠಾತ್ಮಾ ವೈಶ್ವಾನರೋ ಯಂ ತ್ವ ಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಪ್ರತಿಷ್ಠಿತೋಽಸಿ ಪ್ರಜಯಾ ಚ ಪಶುಭಿಶ್ಚ ॥ ೧ ॥**

**ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವ ತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪಾದೌ ತ್ವೇತಾವಾತ್ಮನ ಇತಿ ಹೋವಾಚ ಪಾದೌ ತೇ ವ್ಯಮ್ಲಾಸ್ಯೇತಾಂ ಯನ್ಮಾಂ ನಾಗಮಿಷ್ಯ ಇತಿ ॥ ೨ ॥**

೧–೨. ಆಮೇಲೆ ಉದ್ದಾಲಕಆರುಣಿಯನ್ನು 'ಗೌತಮನೆ, ನೀನು ಯಾರನ್ನು ಆತ್ಮನೆಂದು ಉಪಾಸನೆಮಾಡುತ್ತಿರುವೆ ?' ಎಂದು ಕೇಳಿದನು. 'ಭಗವಂತನಾದ ರಾಜನೆ, ಪೃಥಿವಿಯನ್ನೇ (ಉಪಾಸನೆ ಮಾಡುತ್ತಿರುವೆನು)' ಎಂದನು. 'ನೀನು ಉಪಾಸನೆಮಾಡುತ್ತಿರುವೆ ಯಲ್ಲ ಇವನು ಪ್ರತಿಷ್ಠಾ ಎಂಬ ವೈಶ್ವಾನರಾತ್ಮನು. ಆದ್ದರಿಂದ ನೀನು ಪ್ರಜೆಯಿಂದಲೂ ಪಶುಗಳಿಂದಲೂ ಪ್ರತಿಷ್ಠಿತನಾಗಿರುವೆ.

ಅನ್ನವನ್ನು ಉಣ್ಣುತ್ತಿರುವೆ, ಪ್ರಿಯವನ್ನು ಕಾಣುತ್ತಿರುವೆ. ಯಾವನು ಈ ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುತ್ತಾನೋ (ಅವನು) ಅನ್ನವನ್ನು ಉಣ್ಣುತ್ತಿರುವನು, ಪ್ರಿಯವನ್ನು ಕಾಣುತ್ತಿರುವನು, ಅವನ ಕುಲದಲ್ಲಿ ಬ್ರಹ್ಮವರ್ಚಸವು ಇದ್ದುಕೊಂಡಿರುವದು. ಆದರೆ ಇವು ಆತ್ಮನ ಪಾದಗಳೇ. (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಪಾದಗಳು ಬತ್ತಿಹೋಗುತ್ತಿದ್ದವು' ಎಂದನು.

## ಪೃಥಿವಿಯೆಂಬ ವೈಶ್ವಾನರನ ಪಾದಗಳು

(ಭಾಷ್ಯ)

೪೩೧ ಅಥ ಹೋವಾಚೋದ್ದಾಲಕಮಿತ್ಯಾದಿ ಸಮಾನಮ್। ಪೃಥಿವೀಮೇವ ಭಗವೋ ರಾಜನ್ನಿತಿ ಹೋವಾಚ। ಏಷ वै ಪ್ರತಿಷ್ಠಾ। ಪಾದೌ ವೈಶ್ವಾನರಸ್ಯ। ಪಾದೌ ತೇ ವ್ಯಮ್ಲಾಸ್ಯೇತಾಂ ವಿಮ್ಲಾನೌ ಅಭವಿಷ್ಯತಾಂ ಶ್ಲಥೀಭೂತೌ ಯನ್ಮಾಂ ನಾಗಮಿಷ್ಯ ಇತಿ ॥

(ಭಾಷ್ಯಾರ್ಥ)

'ಆಮೇಲೆ ಉದ್ದಾಲಕನನ್ನು (ಹೀಗೆಂದು) ಕೇಳಿದನು' ಎಂಬಿದೇ ಮುಂತಾದ ಗ್ರಂಥವು (ಹಿಂದಿನದಕ್ಕೆ) ಸಮಾನವು. 'ಭಗವಂತನಾದ ರಾಜನೆ, ಪೃಥಿವಿಯನ್ನೇ (ಉಪಾಸನೆಮಾಡುತ್ತಿರುವೆನು)' ಎಂದನು. ಇವನೇ ಪ್ರತಿಷ್ಠಾ (ಎಂಬ ವೈಶ್ವಾನರಾತ್ಮನು).

(ಇವು) ವೈಶ್ವಾನರನ ಪಾದಗಳು, (ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ಪಾದಗಳು ಬತ್ತಿಹೋಗುತ್ತಿದ್ದವು ; ಬಾಡಿದವಾಗುತ್ತಿದ್ದವು, ಸಡಿಲವಾಗುತ್ತಿದ್ದವು.

---

# ಐದನೆಯ ಅಧ್ಯಾಯ-ಹದಿನೆಂಟನೆಯ ಖಂಡ

( ವೈಶ್ವಾನರವಿದ್ಯೆ )

## ಸಮಸ್ತವೈಶ್ವಾನರೋಪಾಸನೆ

(ಉಪನಿಷತ್ತು)

**ತಾನ್ ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ ವೈಶ್ವಾನರಂ ವಿದ್ವಾಗ್ಂಸೋಽನ್ನಮತ್ಥ ಯಸ್ತ್ವೇತ**

**ಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರ ಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ॥ ೧ ॥**

೧. ಅವರನ್ನು ಕುರಿತು ಇಂತೆಂದನು: ಈ ನೀವು ಈ ವೈಶ್ವಾನರಾತ್ಮನನ್ನು ಬೇರೆಯಾಗಿರುವಂತೆ ಅರಿತುಕೊಂಡವರಾಗಿ ಅನ್ನವನ್ನುಣ್ಣುತ್ತಿರುವಿರಿ. ಆದರ ಯಾವನು ಈ ಪ್ರಾದೇಶಮಾತ್ರನಾದ, ಅಭಿವಿಮಾನನಾದ, ವೈಶ್ವಾನರಾತ್ಮನನ್ನು ಹೀಗೆಂದು ಉಪಾಸನೆಮಾಡುತ್ತಿರುವನೋ ಅವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವ ಆತ್ಮರುಗಳಲ್ಲಿಯೂ ಅನ್ನವನ್ನು ಉಣ್ಣುತ್ತಿರುವನು.

## ಸಮಸ್ತ ವೈಶ್ವಾನರೋಪಾಸನೆಯ ಹೆಚ್ಚುಗಾರಿಕೆ

(ಭಾಷ್ಯ)

೪೩೨. ತಾನ್ ಯಥೋಕ್ತವೈಶ್ವಾನರದರ್ಶನವತೋ ಹೋವಾಚ। ಏತೇ ಯೂಯಮ್। ವೈ ಖಲು ಇತ್ಯನರ್ಥಕೌ। ಯೂಯಂ ಪೃಥಗಿವ ಅಪೃಥಕ್ಸನ್ತಮ್ ಇಮಮೇಕಂ ವೈಶ್ವಾನರಮ್ ಆತ್ಮಾನಂ ವಿದ್ವಾಂಸಃ, ಅನ್ನಮತ್ಥ। ಪರಿಚ್ಛಿನ್ನಾತ್ಮಬುದ್ಧ್ಯಾ ಇತ್ಯೇತತ್, ಹಸ್ತಿದರ್ಶನ ಇವ ಜಾತ್ಯನ್ಧಾಃ। ಯಸ್ತ್ವೇತಮೇವಂ ಯಥೋಕ್ತಾವಯವೈರ್ದ್ಯುಮೂರ್ಧಾದಿಭಿಃ ಪೃಥಿವೀಪಾದಾನ್ತೈರ್ವಿಶಿಷ್ಟಮ್ ಏಕಂ ಪ್ರಾದೇಶಮಾತ್ರಂ ಪ್ರಾದೇಶೈ(?)ರ್ದ್ಯುಮೂರ್ಧಾದಿಭಿಃ ಪೃಥಿವೀಪಾದಾನ್ತೈಃ ಅಧ್ಯಾತ್ಮಂ ಮೀಯತೇ ಜ್ಞಾಯತ ಇತಿ ಪ್ರಾದೇಶಮಾತ್ರಮ್। ಮುಖಾದಿಷು ವಾ ಕರಣೇಷು ಅತ್ತೃತ್ವೇನ ಮೀಯತೇ ಇತಿ ಪ್ರಾದೇಶಮಾತ್ರಃ। ದ್ಯುಲೋಕಾದಿ ಪೃಥಿವ್ಯನ್ತಪ್ರದೇಶಪರಿಮಾಣೋ ವಾ ಪ್ರಾದೇಶಮಾತ್ರಃ। ಪ್ರಕರ್ಷೇಣ ಶಾಸ್ತ್ರೇಣ ಆದಿಶ್ಯನ್ತ ಇತಿ ಪ್ರಾದೇಶಾಃ ದ್ಯುಲೋಕಾದಯ ಏವ। ತಾವತ್ಪರಿಮಾಣಃ ಪ್ರಾದೇಶಮಾತ್ರಃ। ಶಾಖಾನ್ತರೇ ತು ಮೂರ್ಧಾದಿಶ್ಚಿಬುಕಪ್ರತಿಷ್ಠ ಇತಿ ಪ್ರಾದೇಶಮಾತ್ರಂ ಕಲ್ಪಯನ್ತಿ। ಇಹ ತು ನ ತಥಾ ಅಭಿಪ್ರೇತಃ। 'ತಸ್ಯ ಹ ವಾ ಏತಸ್ಯಾತ್ಮನಃ' (೫–೧೮–೨) ಇತ್ಯಾದ್ಯುಪಸಂಹಾರಾತ್। ಪ್ರತ್ಯಗಾತ್ಮತಯಾ ಅಭಿವಿಮೀಯತೇ ಅಹಮಿತಿ ಜ್ಞಾಯತೇ ಇತ್ಯಭಿವಿಮಾನಃ। ತಮೇತಮಾತ್ಮಾನಂ ವೈಶ್ವಾನರಂ ವಿಶ್ವಾನ್ನರಾನ್ ನಯತಿ ಪುಣ್ಯಪಾಪಾನುರೂಪಾಂ ಗತಿಂ ಸರ್ವಾತ್ಮೈವ ಈಶ್ವರೋ ವೈಶ್ವಾನರಃ। ವಿಶ್ವೋ ನರ ಏವ ವಾ। ಸರ್ವಾತ್ಮತ್ವಾತ್। ವಿಶ್ವೈರ್ವಾ ನರೈಃ ಪ್ರತ್ಯಗಾತ್ಮತಯಾ ಪ್ರವಿಭಜ್ಯ ನೀಯತ ಇತಿ ವೈಶ್ವಾನರಃ। ತಮೇವಮ್ ಉಪಾಸ್ತೇ ಯಃ ಸೋಽದನ್ ಅನ್ನಾದೀ ಸರ್ವೇಷು ಲೋಕೇಷು ದ್ಯುಲೋಕಾದಿಷು ಸರ್ವೇಷು ಭೂತೇಷು ಚರಾಚರೇಷು ಸರ್ವೇಷ್ವಾತ್ಮಸು ಶರೀರೇನ್ದ್ರಿಯ

ಮನೋಬುದ್ಧಿಷು । ತೇಷು ಹಿ ಆತ್ಮಕಲ್ಪನಾವ್ಯಪದೇಶಃ ಪ್ರಾಣಿನಾಮ್। ಅನ್ನಮತ್ತಿ ವೈಶ್ವಾನರವಿತ್ ಸರ್ವಾತ್ಮಾ ಸನ್ ಅನ್ನಮತ್ತಿ। ನ ಯಥಾಽಜ್ಞಃ ಪಿಣ್ಡಮಾತ್ರಾಭಿಮಾನಃ ಸನ್ನಿತ್ಯರ್ಥಃ ॥

(ಭಾಷ್ಯಾರ್ಥ)

ಆ ಹಿಂದೆ ತಿಳಿಸಿರುವಂತೆ ವೈಶ್ವಾನರನನ್ನು ಕಂಡುಕೊಂಡಿದ್ದ ಅವರನ್ನು ಕುರಿತು (ರಾಜನು) ಇಂತೆಂದನು ಈ ನೀವು—ವೈ ಖಲು ಎಂಬಿವು ಅರ್ಥರಹಿತವಾದ (ನಿಪಾತಗಳು). ನೀವು—ಬೇರೆಬೇರೆಯಲ್ಲದ ಈ ಒಬ್ಬ ವೈಶ್ವಾನರಾತ್ಮನನ್ನು ಬೇರೆಬೇರೆಯಾಗಿದ್ದಂತೆ ಅರಿತುಕೊಂಡು ಅನ್ನವನ್ನು ಉಣ್ಣುತ್ತಿರುವಿರಿ, ಆನೆಯನ್ನು ಕಾಣುವಲ್ಲಿ ಹುಟ್ಟುಗುರುಡರಂತೆ ಪರಿಚ್ಛಿನ್ನನಾದ ಆತ್ಮನೆಂಬ ಭಾವನೆಯಿಂದ (ಅನ್ನವನ್ನುಣ್ಣುತ್ತಿರುವಿರಿ) ಎಂದರ್ಥ.

ಆದರೆ ಈ ಹಿಂದೆ ಹೇಳಿರುವ ದ್ಯುಲೋಕವೆಂಬ ತಲೆಯನ್ನು ಮೊದಲು ಮಾಡಿಕೊಂಡು ಪೃಥಿವಿಯೆಂಬ ಪಾದಗಳವರೆಗಿನ ಅವಯವಗಳಿಂದೊಡಗೂಡಿರುವ ಒಬ್ಬನೇ ಆದ **ಪ್ರಾದೇಶಮಾತ್ರ**ನಾದ—ದ್ಯುಲೋಕವೆಂಬ ತಲೆಯೇ ಮುಂತಾದ ಪೃಥಿವಿಯೆಂಬ ಪಾದಗಳವರೆಗಿನ ಪ್ರಾದೇಶಗಳಿಂದ (ಕೂಡಿರುವಂತೆ)[1] ಅಧ್ಯಾತ್ಮವಾಗಿ (ಮೀಯತೇ=ಜ್ಞಾಯತೇ) ಅರಿಯಲ್ಪಡುತ್ತಾನಾದ್ದರಿಂದ[2] ಪ್ರಾದೇಶಮಾತ್ರನು, ಅಥವಾ ಮುಖಾದಿಗಳೆಂಬ ಕರಣಗಳಲ್ಲಿ[3] ಆತ್ಮನಾಗಿ ಅರಿಯಲ್ಪಡುತ್ತಾನಾದ್ದರಿಂದ ಪ್ರಾದೇಶಮಾತ್ರನು. ಅಥವಾ ದ್ಯುಲೋಕವು ಮೊದಲಾಗಿ ಪೃಥಿವ್ಯಂತವಾದ ಪ್ರದೇಶದ ಪರಿಣಾಮವುಳ್ಳವನಾದ್ದರಿಂದ ಪ್ರಾದೇಶಮಾತ್ರನು[4]. ಶಾಸ್ತ್ರದಲ್ಲಿ ಪ್ರಕರ್ಷದಿಂದ ಉಪದೇಶಿಸಲ್ಪಡುವುದರಿಂದ ಪ್ರಾದೇಶಗಳೆಂದರೆ ದ್ಯುಲೋಕಾದಿಗಳೇ, ಅಥವಾ ಅಷ್ಟು ಪರಿಮಾಣದವನಾದ್ದರಿಂದ ಪ್ರಾದೇಶಮಾತ್ರನು ಬೇರೊಂದು ಶಾಖೆಯಲ್ಲಿಯಾದರೋ[5] ಮೂರ್ಧಾದಿಚಿಬುಕಪರ್ಯಂತವಾಗಿರುವನೆಂದು ಪ್ರಾದೇಶಮಾತ್ರನೆಂದು ಕಲ್ಪಿಸಿದೆ. ಆದರೆ ಇಲ್ಲಿ

---

1. ಇದು ಪ್ರದೇಶಗಳಿಂದ ಎಂದಿದ್ದರೆ ಉತ್ತಮ. ಮೂಲದಲ್ಲಿ ಪ್ರಾದೇಶೈಃ ಎಂಬ ದೀರ್ಘಪಾಠವು ಬರೆದವರ ತಪ್ಪಾಗಿರಬಹುದೆ ?

2. ದ್ಯುಲೋಕಾದಿಪ್ರದೇಶಗಳಿಂದೊಡಗೂಡಿದವನೆಂದು ಉಪಾಸ್ಯನಾಗಿರುತ್ತಾನಾದ್ದರಿಂದ ಎಂದರ್ಥ.

3. ಪ್ರದೇಶೇಷು ಎಂಬುದಕ್ಕೆ ಕರಣಗಳಲ್ಲಿ ಎಂಬರ್ಥವನ್ನು ಮಾಡಿದೆ.

4. ಸರ್ವವ್ಯಾಪಕನು ಎಂದರ್ಥ.

5. ಶತಪಥಬ್ರಾಹ್ಮಣ, ಜಾಬಾಲಶ್ರುತಿ- ಇವುಗಳಲ್ಲಿ ಸೂ. ಭಾ. ೧-೨-೩೧, ೩೨ನ್ನು ನೋಡಿ.

ಹಾಗೇನೂ ಅಭಿಪ್ರಾಯವಿಲ್ಲ[1] ; ಏಕೆಂದರೆ 'ಆ ಈ ಆತ್ಮನಿಗೆ ' (೫-೧೮-೨) ಎಂದು ಮುಂತಾಗಿ ಉಪಸಂಹಾರಮಾಡಿರುತ್ತದೆ.

ಪ್ರತ್ಯಗಾತ್ಮನೆಂದು (ಅಭಿವಿಮೀಯತೇ=) ನಾನೆಂದು ಅರಿಯಲ್ಪಡುತ್ತಾನಾದ್ದರಿಂದ (ಇವನು) **ಅಭಿವಿಮಾನನು[2].** ಆ ಈ ಪ್ರಾದೇಶಮಾತ್ರನಾದ (ಅಭಿವಿಮಾನನಾದ) ವೈಶ್ವಾನರಾತ್ಮನನ್ನು—(ವಿಶ್ವಾನ್) ಎಲ್ಲಾ (ನರಾನ್) ನರರನ್ನೂ ಪುಣ್ಯಪಾಪಾನುರೂಪವಾದ ಗತಿಗೆ ಒಯ್ಯುತ್ತಾನಾದ್ದರಿಂದ ಸರ್ವಾತ್ಮನಾದ ಈ ಈಶ್ವರನು **ವೈಶ್ವಾನರನೆನಿಸಿರುವನು.** (ವಿಶ್ವ) ಎಲ್ಲಾ (ನರ)ನರನೂ ಆಗಿರುವದರಿಂದ (ವೈಶ್ವಾನರನು) ಎಂದಾದರೂ (ಅರ್ಥಮಾಡಬಹುದು). ಅಥವಾ (ವಿಶ್ವೈಃ) ಎಲ್ಲ (ನರೈಃ) ನರರಿಂದ ಪ್ರತ್ಯಗಾತ್ಮನೆಂದು ವಿಂಗಡಿಸಿಕೊಂಡು ಒಯ್ಯಲ್ಪಡುತ್ತಾನೆ. ಆದ್ದರಿಂದ ವೈಶ್ವಾನರನು (ಎಂದೂ ಅರ್ಥಮಾಡಬಹುದು), ಏಕೆಂದರೆ ಸರ್ವಾತ್ಮನಾಗಿರುತ್ತಾನೆ. ಆ (ವೈಶ್ವಾನರನನ್ನು ಹೀಗೆಂದು ಯಾವನು ಉಪಾಸನೆ ಮಾಡುತ್ತಾನೋ ಆ ಅನ್ನವನ್ನುಣ್ಣುವ ಅನ್ನಾದಿಯು ದ್ಯುಲೋಕವೇ ಮುಂತಾದ ಸರ್ವಲೋಕಗಳಲ್ಲಿಯೂ ಚರಾಚರರೂಪವಾದ ಸರ್ವಭೂತಗಳಲ್ಲಿಯೂ ಸರ್ವಾತ್ಮಗಳಲ್ಲಿಯೂ ಎಂದರೆ ಶರೀರೇಂದ್ರಿಯಮನೋಬುದ್ಧಿಗಳಲ್ಲಿ, ಅವುಗಳಲ್ಲಲ್ಲವೆ ಜೀವರುಗಳು ಆತ್ಮನೆಂದು ಕಲ್ಪಿಸಿಕೊಂಡು ವ್ಯವಹರಿಸುತ್ತಾರೆ ? (ಹೀಗೆ ಎಲ್ಲೆಲ್ಲಿಯೂ) ಅನ್ನವನ್ನು ಉಣ್ಣುತ್ತಾನೆ. ವೈಶ್ವಾನರನನ್ನು ಅರಿತವನು ಸರ್ವಾತ್ಮನಾಗಿದ್ದುಕೊಂಡು ಅನ್ನವನ್ನು ಉಣ್ಣುತ್ತಾನೆಯೇ ಹೊರತು, ಅಜ್ಞನಾದವನಂತೆ ತನ್ನ ಶರೀರಮಾತ್ರದಲ್ಲಿಯೇ (ಇರುವ) ಅಭಿಮಾನವುಳ್ಳವನಾಗಿ (ಉಣ್ಣು)ವದಿಲ್ಲ ಎಂದರ್ಥ.

(ಉಪನಿಷತ್ತು)

**ತಸ್ಯ ಹ ವಾ ಏತಸ್ಯಾಽಽತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ ॥**

---

1. ಈ ಅಭಿಪ್ರಾಯವನ್ನು ಸೂ. ಭಾ. ೧-೨-೩೧ರಲ್ಲಿ ಒಪ್ಪಿದೆ. ಪ್ರಾದೇಶಮಾತ್ರನು ಎಂಬ ವಿಶೇಷಣಕ್ಕೆ ಸೂ. ಭಾ. ೧-೨-೨೯,೩೦,೩೧ರಲ್ಲಿ ಕೊಟ್ಟಿರುವ ಅರ್ಥವನ್ನು ಪ್ರಕೃತ ಭಾಷ್ಯದ ಅರ್ಥಕ್ಕೆ ಹೋಲಿಸಿ. ಸೂತ್ರಭಾಷ್ಯಕ್ಕೂ ಈ ಭಾಷ್ಯಕ್ಕೂ ಇಲ್ಲಿ ಮತಭೇದವೇಕೆ ಆಗಿದೆ ಎಂಬುದು ವಿಚಾರಣೀಯವಾಗಿದೆ.

2. ಸೂ. ಭಾ. ೧-೨-೩೨ (ಭಾ. ಭಾ. ೨೧೯)ರಲ್ಲಿ ಇನ್ನೆರಡು ಅರ್ಥಗಳನ್ನು ಹೆಚ್ಚಾಗಿ ಕೊಟ್ಟಿದೆ.

೨. ಆ ಈ ವೈಶ್ವಾನರಾತ್ಮನಿಗೆ ಸುತೇಜನು ತಲೆಯೇ, ವಿಶ್ವರೂಪನು ಕಣ್ಣು, ಪೃಥಗ್ವರ್ತ್ಮಾತ್ಮನು ಪ್ರಾಣವು, ಬಹುಲನು ಸಂದೇಹವು, ರಯಿಯು ಬಸ್ತಿಯೇ, ಪೃಥಿವಿಯೇ ಪಾದವು, ಉರಸ್ಸೇ ವೇದಿ, ಲೋಮಗಳು ಬರ್ಹಿ, ಹೃದಯವು ಗಾರ್ಹಪತ್ಯವು, ಮನಸ್ಸು ಅನ್ವಾಹಾರ್ಯಪಚನವು, ಆಸ್ಯವು ಆಹವನೀಯ.

## ವೈಶ್ವಾನರಾತ್ಮನ ಅವಯವಗಳು

(ಭಾಷ್ಯ)

೪೩೩. ಕಸ್ಮಾದೇವಮ್? ಯಸ್ಮಾತ್ ತಸ್ಯ ಹ ವೈ ಪ್ರಕೃತಸ್ಯೈವ ಏತಸ್ಯ ಆತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ, ಚಕ್ಷುರ್ವಿಶ್ವರೂಪಃ, ಪ್ರಾಣಃ ಪೃಥಗ್ವರ್ತ್ಮಾತ್ಮಾ, ಸಂದೇಹೋ ಬಹುಲಃ, ಬಸ್ತಿರೇವ ರಯಿಃ, ಪೃಥಿವ್ಯೇವ ಪಾದೌ। ಅಥವಾ ವಿಧ್ಯರ್ಥಮೇತದ್ವಚನಮ್ ಏವಮುಪಾಸ್ಯಃ ಇತಿ ॥

(ಭಾಷ್ಯಾರ್ಥ)

ಇದು ಏತರಿಂದ[1] ? ಎಂದರೆ ಏಕೆಂದರೆ ಈ ಪ್ರಕೃತವಾಗಿರುವ ಅವನಿಗೇ ಈ ವೈಶ್ವಾನರಾತ್ಮನಿಗೆ ಸುತೇಜನೇ[2] ತಲೆ, ವಿಶ್ವರೂಪನೇ ಕಣ್ಣು, ಪೃಥಗ್ವರ್ತ್ಮಾತ್ಮನೇ ಪ್ರಾಣವು, ಬಹುಲನೇ ಸಂದೇಹವು, ರಯಿಯೇ ಬಸ್ತಿ, ಪೃಥಿವಿಯೇ ಪಾದಗಳು.

ಅಥವಾ[3] (ವೈಶ್ವಾನರನನ್ನು) ಹೀಗೆಂದು ಉಪಾಸನೆಮಾಡಬೇಕು– ಎಂದು ವಿಧಿಸುವದಕ್ಕಾಗಿ ಈ ವಾಕ್ಯವು (ಬಂದಿದೆ) ಎಂದಾದರೂ ವ್ಯಾಖ್ಯಾನಮಾಡಬಹುದು.

---

1. ಪರಿಚ್ಛಿನ್ನಾಭಿಮಾನದಿಂದ ಅನ್ನವನ್ನುಣ್ಣುವದಿಲ್ಲವೆಂಬುದೇಕೆ ?

2. ಭಾಷ್ಯದಲ್ಲಿ ಶ್ರುತಿಯ ಮೂಲವನ್ನೇ ಅನುಸರಿಸಿ ಏವಕಾರವನ್ನು ಇಟ್ಟಿದೆ. ನಾವು ಹಿಂದಿನ ಸಂದರ್ಭಕ್ಕೆ ಅನುಗುಣವಾಗಿ ಸುತೇಜವೈಶ್ವಾನರನನ್ನು ತಲೆಯೆಂದು ತಿಳಿಯಬೇಕೆಂದು ಸ್ಪಷ್ಟಪಡಿಸುವದಕ್ಕೆ 'ಸುತೇಜನೇ' ಎಂದು ಮುಂತಾಗಿ ಕನ್ನಡಿಸಿರುತ್ತೇವೆ.

3. ಹಿಂದಿನ ವ್ಯಾಖ್ಯಾನದ ಪ್ರಕಾರ ಪ್ರಾದೇಶಮಾತ್ರನು, ಅಭಿವಿಮಾನನು– ಎಂಬ ಎರಡು ಗುಣಗಳಿಂದ ಕೂಡಿಯೇ ಉಪಾಸನೆಮಾಡಬೇಕೆಂದಾಗುತ್ತದೆ. ಈ ವ್ಯಾಖ್ಯಾನದಂತೆ ವೈಶ್ವಾನರನ ಅವಯವಗಳನ್ನೂ ಉಪಾಸನೆಮಾಡಬೇಕೆಂದಾಗುತ್ತದೆ. ಈ ಎರಡನೆಯ ವ್ಯಾಖ್ಯಾನವೇ ಯುಕ್ತತರವೆಂದು ಹೇಳಬೇಕಾಗಿದೆ. ಏಕೆಂದರೆ ಶಿಷ್ಯರು ಇವುಗಳೊಂದೊಂದನ್ನೇ ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದದ್ದನ್ನು ನಿಂದಿಸಿಯೇ ಸಮಸ್ತೋಪಾಸನೆಯನ್ನು ಹೇಳುವದಕ್ಕೆ ಅಶ್ವಪತಿಯು ಪ್ರಾರಂಭಿಸಿರುತ್ತಾನೆ.

# ವೈಶ್ವಾನರೋಪಾಸಕನ ಭೋಜನವೇ ಅಗ್ನಿಹೋತ್ರ

(ಭಾಷ್ಯ)

೪೩೪. ಅಥೇದಾನೀಂ ವೈಶ್ವಾನರವಿದೋ ಭೋಜನೇಽಗ್ನಿಹೋತ್ರಂ ಸಂಪಿಪಾದಯಿಷನ್ನಾಹ। ಏತಸ್ಯ ವೈಶ್ವಾನರಸ್ಯ ಭೋಕ್ತುಃ ಉರ ಏವ ವೇದಿಃ। ಆಕಾರಸಾಮಾನ್ಯಾತ್। ಲೋಮಾನಿ ಬರ್ಹಿಃ। ವೇದ್ಯಾಮಿವ ಉರಸಿ ಲೋಮಾನಿ ಆಸ್ತೀರ್ಣಾನಿ ದೃಶ್ಯನ್ತೇ। ಹೃದಯಂ ಗಾರ್ಹಪತ್ಯಃ। ಹೃದಯಾದ್ಧಿ ಮನಃ ಪ್ರಣೀತಮಿವ ಅನನ್ತರೀಭವತಿ, ಅತಃ ಅನ್ವಾಹಾರ್ಯಪಚನೋಽಗ್ನಿರ್ಮನಃ। ಆಸ್ಯಂ ಮುಖಮ್ ಆಹವನೀಯ ಇವಾಽಽಹವನೀಯಃ। ಹೂಯತೇಽಸ್ಮಿನ್ನನ್ನಮಿತಿ ॥

(ಭಾಷ್ಯಾರ್ಥ)

ಇನ್ನು ಈಗ ವೈಶ್ವಾನರೋಪಾಸಕನ ಭೋಜನದಲ್ಲಿ ಅಗ್ನಿಹೋತ್ರವನ್ನು ಸಂಪಾದನೆಮಾಡೋಣವೆಂದು[1] (ಶ್ರುತಿ) ಹೇಳುತ್ತದೆ ಈ ಭೋಕ್ತೃವಾದ ವೈಶ್ವಾನರನ ಎದೆಯೇ ವೇದಿ[2], ಏಕೆಂದರೆ (ಇವೆರಡಕ್ಕೂ) ಆಕಾರವು ಸಮಾನವಾಗಿರುತ್ತದೆ. ಲೋಮಗಳು ಬರ್ಹಿ[3], (ಏಕೆಂದರೆ) ವೇದಿಯಮೇಲೆ (ಬರ್ಹಿಸ್ಸುಗಳಂತೆ) ಎದೆಯಮೇಲೆ ಮೈಗೂದಲುಗಳು ಹರಡಿಕೊಂಡಿರುವದು ಕಂಡುಬರುತ್ತದೆ ಹೃದಯವೇ ಗಾರ್ಹಪತ್ಯವು. ಹೃದಯದಿಂದ ತೆಗೆದುಕೊಂಡಂತಲ್ಲವೆ, ಮನಸ್ಸು ಹಿಂದೆಯೇ ತೋರಿಕೊಳ್ಳುತ್ತದೆ ? ಆದ್ದರಿಂದ ಮನಸ್ಸು ಅನ್ವಾಹಾರ್ಯಪಚನಾಗ್ನಿಯು.[4] ಆಸ್ಯವು, ಮುಖವು ಆಹವನೀಯವು, ಆಹವನೀಯದಂತೆ ಇರುವದರಿಂದ ಆಹವನೀಯವು ಏಕೆಂದರೆ ಇದರಲ್ಲಿ (ಉಪಾಸಕನು) ಹೋಮ ಮಾಡುತ್ತಾನೆ.

---

1. ಹಾಗೆಂದು ಭಾವನೆಮಾಡಬೇಕೆಂದು ವಿಧಿಸುವದಕ್ಕಾಗಿ
2. ಇಲ್ಲಿ ಬರಿಯ ಸ್ಥಂಡಿಲವನ್ನೇ ವೇದಿಯೆಂದು ಕರೆದಿದೆ. ಆ. ಗಿ.
3. ವೇದಿಯಮೇಲೆ ಹರಡಿದ ದರ್ಭೆಗಳು.
4. ಗಾರ್ಹಪತ್ಯದಿಂದ ಈ ಅಗ್ನಿಯನ್ನು ತೆಗೆದುಕೊಂಡು ಕಲ್ಪಿಸುತ್ತಾರೆ ; ಹೃದಯದಿಂದ ಮನಸ್ಸು ಹಾಗೆಯೇ ಹುಟ್ಟಿ ತೋರಿಕೊಳ್ಳುತ್ತದೆ.

# ಐದನೆಯ ಅಧ್ಯಾಯ-ಹತ್ತೊಂಬತ್ತನೆಯ ಖಂಡ

( ಪ್ರಾಣಾಗ್ನಿಹೋತ್ರ )

## ಪ್ರಾಣಾಗ್ನಿಹೋತ್ರದ ಹೋಮಗಳು

(ಉಪನಿಷತ್ತು)

**ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಗ್ಂ ಸ ಯಾಂ ಪ್ರಥಮಾಮಾಹುತಿಂ ಜುಹುಯಾತ್ತಾಂ ಜುಹುಯಾತ್ ಪ್ರಾಣಾಯ ಸ್ವಾಹೇತಿ ಪ್ರಾಣಸ್ತೃಪ್ಯತಿ ॥ ೧ ॥**

**ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾದಿತ್ಯೇ ತೃಪ್ಯತಿ ದ್ಯೌಸ್ತೃಪ್ಯತಿ ದಿವಿ ತೃಪ್ಯನ್ತ್ಯಾಂ ಯತ್ಕಿಂಚ ದ್ಯೌಶ್ಚಾಽಽದಿತ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥**

೧-೨. ಅಲ್ಲಿ ಯಾವ ಅನ್ನವು ಮೊದಲು ಬರುವದೋ ಅದು ಹೋಮಮಾಡತಕ್ಕದ್ದು. ಅವನು ಪ್ರಥಮಾಹುತಿಯನ್ನು ಹೋಮಮಾಡುತ್ತಾನಷ್ಟು, ಅದನ್ನು 'ಪ್ರಾಣಾಯ ಸ್ವಾಹಾ!' ಎಂದು ಹೋಮಮಾಡಬೇಕು. ಪ್ರಾಣನು ತೃಪ್ತನಾಗುತ್ತಾನೆ. ಪ್ರಾಣವು ತೃಪ್ತವಾಗಲು ಚಕ್ಷುಸ್ಸು ತೃಪ್ತವಾಗುತ್ತದೆ; ಚಕ್ಷುಸ್ಸು ತೃಪ್ತವಾಗಲು ಆದಿತ್ಯನು ತೃಪ್ತನಾಗುತ್ತಾನೆ; ಆದಿತ್ಯನು ತೃಪ್ತನಾಗಲು ದ್ಯುಲೋಕವು ತೃಪ್ತವಾಗುತ್ತದೆ; ದ್ಯುಲೋಕವು ತೃಪ್ತವಾಗಲು ದ್ಯುಲೋಕವೂ ಆದಿತ್ಯನೂ ಯಾವಯಾವದರ ಮೇಲಿರುವವೋ ಅದು ತೃಪ್ತವಾಗುತ್ತದೆ. ಅದು ತೃಪ್ತಿಯಾದದ್ದರ ಹಿಂದೆಯೇ ಪ್ರಜೆಯಿಂದಲೂ ಪಶುಗಳಿಂದಲೂ ಅನ್ನಾದ್ಯದಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸದಿಂದಲೂ (ಕೂಡಿ) ತೃಪ್ತನಾಗುತ್ತಾನೆ.

## ಪ್ರಾಣಾಗ್ನಿಹೋತ್ರದ ಮೊದಲನೆಯ ಹೋಮ

(ಭಾಷ್ಯ)

೪೩೫. ತತ್ ತತ್ರ ಏವಂ ಸತಿ ಯದ್ ಭಕ್ತಂ ಪ್ರಥಮಂ[1] ಭೋಜನಕಾಲೇ ಆಗಚ್ಛೇದ್ ಭೋಜನಾರ್ಥಮ್, ತದ್ ಹೋಮೀಯಂ ತದ್ ಹೋತ

1. ಈ ಮಾತು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ.

ವ್ಯಮ್। ಅಗ್ನಿಹೋತ್ರಸಂಪನ್ಮಾತ್ರಸ್ಯ ವಿವಕ್ಷಿತತ್ವಾತ್ ನಾಗ್ನಿಹೋತ್ರಾಙ್ಗೇತಿಕರ್ತವ್ಯತಾಪ್ರಾಪ್ತಿರಿಹ । ಸ ಭೋಕ್ತಾ ಯಾಂ ಪ್ರಥಮಾಮ್ ಆಹುತಿಂ ಜುಹುಯಾತ್ ತಾಂ ಕಥಂ ಜುಹುಯಾದಿತಿ ? ಆಹ | 'ಪ್ರಾಣಾಯ ಸ್ವಾಹಾ' ಇತ್ಯನೇನ ಮನ್ತ್ರೇಣ । ಆಹುತಿಶಬ್ದಾತ್ ಅವದಾನಪ್ರಮಾಣಮನ್ನಂ ಪ್ರಕ್ಷಿಪೇತ್ ಇತ್ಯರ್ಥಃ ॥

(ಭಾಷ್ಯಾರ್ಥ)

(ತತ್=ತತ್ರ) ಅಲ್ಲಿ ಹೀಗಿರುವಲ್ಲಿ ಯಾವ ಅನ್ನವು ಭೋಜನಕಾಲದಲ್ಲಿ ಮೊದಲು ಭೋಜನಕ್ಕೆ ಬರುವದೋ ಅದು ಹೋಮಮಾಡತಕ್ಕದ್ದು, ಅದನ್ನು ಹೋಮಮಾಡಬೇಕು[1]. ಇಲ್ಲಿ ಅಗ್ನಿಹೋತ್ರದ ಸಂಪತ್ತು ಮಾತ್ರವೇ ವಿವಕ್ಷಿತವಾಗಿರುವದರಿಂದ ಅಗ್ನಿಹೋತ್ರದ ಅಂಗಗಳು ಮತ್ತು ಇತಿಕರ್ತವ್ಯತೆಯು ಇಲ್ಲಿ ಬಂದೊದಗುವದಿಲ್ಲ[2]. ಆ ಭೋಕ್ತೃವು ಯಾವ ಪ್ರಥಮಾಹುತಿಯನ್ನು ಹೋಮ ಮಾಡಬೇಕೋ ಅದನ್ನು ಹೇಗೆ ಹೋಮಮಾಡಬೇಕು ? ಎಂದರೆ ಹೇಳುತ್ತಾನೆ 'ಪ್ರಾಣಾಯ ಸ್ವಾಹಾ !' ಎಂಬ ಮಂತ್ರದಿಂದ (ಹೋಮಮಾಡಬೇಕು) (ಇಲ್ಲಿ) ಆಹುತಿ ಎಂಬ ಶಬ್ದವನ್ನು (ಪ್ರಯೋಗಿಸಿರುವದರಿಂದ) ಅವದಾನದ ಪ್ರಮಾಣದ ಅನ್ನವನ್ನು ಹಾಕಬೇಕು ಎಂದರ್ಥ.

## ಪ್ರಾಣಾಹುತಿಯಿಂದಾಗುವ ತೃಪ್ತಿ

(ಭಾಷ್ಯ)

೪೩೭. ತೇನ ಪ್ರಾಣಸ್ತೃಪ್ಯತಿ[3] । ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತಿ[4] ಆದಿತ್ಯೋ ದ್ಯೌಶ್ಚೇತ್ಯಾದಿ ತೃಪ್ಯತಿ । ಯಚ್ಚಾನ್ಯತ್ ದ್ಯೌಶ್ಚ ಆದಿತ್ಯಶ್ಚ ಸ್ವಾಮಿತ್ವೇನ ಅಧಿತಿಷ್ಠತಃ। ತಚ್ಚ ತೃಪ್ಯತಿ । ತಸ್ಯ ತೃಪ್ತಿಮನು ಸ್ವಯಂ ಭುಞ್ಜಾನಸ್ತೃಪ್ಯತಿ ಏವಂ ಪ್ರತ್ಯಕ್ಷಮ್ । ಕಿಂಚ ಪ್ರಜಾದಿಭಿಶ್ಚ । ತೇಜಃ ಶರೀರಸ್ಥಾ ದೀಪ್ತಿಃ | ಉಜ್ಜ್ವಲತ್ವಂ ಪ್ರಾಗಲ್ಭ್ಯಂ ವಾ | ಬ್ರಹ್ಮವರ್ಚಸಂ ವೃತ್ತಸ್ವಾಧ್ಯಾಯನಿಮಿತ್ತಂ ತೇಜಃ ॥

---

1. ಭೋಜನವಿಲ್ಲದಿದ್ದರೆ ಈ ಹೋಮವಿಲ್ಲ. ಸೂ.ಭಾ. ೬-೩-೪೧ (ಛಾ.ಭಾ.೩೯೭).

2. ಅಗ್ನಿಯನ್ನು ತರುವದು ; ಅಗ್ನಿಹೋತ್ರವನ್ನು ಮಾಡುವ ಬಗೆ- ಮುಂತಾದವುಗಳೆಲ್ಲ ಈ ಹೋಮಕ್ಕಿಲ್ಲ ; ಏಕೆಂದರೆ ಭೋಜನವನ್ನು ಅಗ್ನಿಹೋತ್ರವೆಂದು ಇಲ್ಲಿ ಭಾವನೆ ಮಾತ್ರ ಮಾಡಿದೆ.

3. ಈ ವಾಕ್ಯವು ಮೊದಲನೆಯ ಕಂಡಿಕೆಗೆ ಸೇರಿದರೂ ಮುಂದಕ್ಕೆ ಅನ್ವಯವಾಗಿುತ್ತದೆ.

4. "ಚಕ್ಷುಷಿ ತೃಪ್ಯತಿ" ಎಂಬಿದು ಮೂಲಾನುಸಾರಿಯಾಗಿ ಬರೆದುಕೊಂಡದ್ದು ; ಅಚ್ಚಿನ ಭಾಷ್ಯದಲ್ಲಿ "ಚಕ್ಷುರಾದಿತ್ಯೋ ದ್ಯೌಶ್ಚೇತ್ಯಾದಿ" ಎಂದೇ ಇದೆ. ಅದೇ ಮೂಲಭಾಷ್ಯವಾಪ[illegible] '[illegible]ವಿ ತೃಪ್ಯನ್ತ್ಯಂ" ಎಂಬವರೆಗಿನ ಮೂಲದ ತಾತ್ಪರ್ಯವಿದೆಂದು ಗ್ರಹಿಸಬೇಕು.

(ಭಾಷ್ಯಾರ್ಥ)

ಅದರಿಂದ ಪ್ರಾಣವು ತೃಪ್ತವಾಗುತ್ತದೆ ಪ್ರಾಣವು ತೃಪ್ತವಾಗಲು ಚಕ್ಷುಸ್ಸು ತೃಪ್ತವಾಗುತ್ತದೆ, ಚಕ್ಷುಸ್ಸು ತೃಪ್ತವಾಗಲು ಆದಿತ್ಯನೂ ದ್ಯುಲೋಕವೂ ಮುಂತಾದದ್ದು ತೃಪ್ತವಾಗುತ್ತದೆ. ದ್ಯುಲೋಕವೂ ಆದಿತ್ಯನೂ ಒಡೆಯರಾಗಿ ಯಾವಯಾವದಕ್ಕೆ ಮೇಲಿದ್ದುಕೊಂಡಿರುವರೋ[1] ಅದೂ ತೃಪ್ತವಾಗುತ್ತದೆ. ಅದು ತೃಪ್ತವಾದಮೇಲೆ ಊಟಮಾಡತಕ್ಕವನು ತಾನೂ ತೃಪ್ತನಾಗುತ್ತಾನೆ ಎಂಬುದು ಪ್ರತ್ಯಕ್ಷವು ಮತ್ತು ಪ್ರಜಾದಿಗಳಿಂದಲೂ (ಕೂಡಿ ತೃಪ್ತನಾಗುತ್ತಾನೆ.) ತೇಜಸ್ಸೆಂದರೆ ಶರೀರದ ಹೊಳಪು, ಉಜ್ಜ್ವಲವಾಗಿರುವಿಕೆ, ಅಥವಾ (ತೇಜಸ್ಸೆಂದರೆ) ದಿಟ್ಟತನ ಬ್ರಹ್ಮವರ್ಚಸವೆಂದರೆ ಹಿಂದೆ (ಮಾಡಿರುವ) ಅಧ್ಯಯನನಿಮಿತ್ತವಾದ ತೇಜಸ್ಸು

---

# ಐದನೆಯ ಅಧ್ಯಾಯ—ಇಪ್ಪತ್ತನೆಯ ಖಂಡ

## ( ಪ್ರಾಣಾಗ್ನಿಹೋತ್ರ )

(ಉಪನಿಷತ್ತು)

**ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ ಸ್ವಾಹೇತಿ ವ್ಯಾನಸ್ತೃಪ್ಯತಿ ॥ ೧ ॥**

**ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚನ್ದ್ರಮಾಸ್ತೃಪ್ಯತಿ ಚನ್ದ್ರಮಸಿ ತೃಪ್ಯತಿ ದಿಶಸ್ತೃಪ್ಯನ್ತಿ ದಿಕ್ಷು ತೃಪ್ಯನ್ತೀಷು ಯತ್ಕಿಂಚ ದಿಶಶ್ಚ ಚನ್ದ್ರಮಾಶ್ಚಾಧಿತಿಷ್ಠನ್ತಿ ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥**

೧-೨. ಇನ್ನು ಎರಡನೆಯದನ್ನು ಹೋಮಮಾಡುತ್ತಾನಲ್ಲ, ಅದನ್ನು 'ವ್ಯಾನಾಯ ಸ್ವಾಹಾ'-[2] ಎಂದು ಹೋಮಮಾಡಬೇಕು. ವ್ಯಾನವು ತೃಪ್ತವಾಗುತ್ತದೆ. ವ್ಯಾನವು ತೃಪ್ತವಾಗಲು ಶ್ರೋತ್ರವು

1. ಅಧಿಷ್ಠಾತೃವಾಗಿರುವವೆಂದದ್ದರಿಂದ ಇಲ್ಲಿ ಆಯಾ ದೇವತೆಗಳೇ ವಿವಕ್ಷಿತವೆಂದು ತೋರುತ್ತದೆ.

2. ರೂಢಿಯಲ್ಲಿ "ಅಪಾನಾಯ ಸ್ವಾಹಾ!" ಎಂದೇ ಎರಡನೆಯ ಹೋಮವನ್ನು ಮಾಡುವದು ಕಂಡುಬರುತ್ತಿದೆ. ಇದಕ್ಕೆ ಶಾಖಾಂತರದ ಆಧಾರವಿರಬಹುದು. ನಾರಾಯಣ ದ "ಪ್ರಾಣಾಪಾನವ್ಯಾನೋದಾನಸಮಾನಾಃ" ಎಂಬ ಅನುಕ್ರಮದ ಪಾಠವಿದೆ.

ತೃಪ್ತವಾಗುತ್ತದೆ, ಶ್ರೋತ್ರವು ತೃಪ್ತವಾಗಲು ಚಂದ್ರನು ತೃಪ್ತನಾಗುತ್ತಾನೆ. ಚಂದ್ರನು ತೃಪ್ತನಾಗಲು ದಿಕ್ಕುಗಳು ತೃಪ್ತವಾಗುತ್ತವೆ. ದಿಕ್ಕುಗಳು ತೃಪ್ತವಾಗಲು ದಿಕ್ಕುಗಳೂ ಚಂದ್ರನೂ ಯಾವಯಾವದರ ಮೇಲೆ ಇರುವವೋ ಅದು ತೃಪ್ತವಾಗುತ್ತದೆ. ಅದಕ್ಕೆ ತೃಪ್ತಿಯಾದ್ದರ ಹಿಂದೆಯೇ ಪ್ರಜೆಯಿಂದಲೂ ಪಶುಗಳಿಂದಲೂ ಅನ್ನಾದ್ಯದಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸದಿಂದಲೂ (ಕೂಡ) ತೃಪ್ತನಾಗುತ್ತಾನೆ.

# ಐದನೆಯ ಅಧ್ಯಾಯ-ಇಪ್ಪತ್ತೊಂದನೆಯ ಖಂಡ

( ಪ್ರಾಣಾಗ್ನಿಹೋತ್ರ )

(ಉಪನಿಷತ್ತು)

**ಅಥ ಯಾಂ ತೃತೀಯಾಂ ಜುಹುಯಾತ್ ತಾಂ ಜುಹುಯಾದಪಾನಾಯ ಸ್ವಾಹೇತ್ಯಪಾನಸ್ತೃಪ್ಯತಿ ॥ ೧ ॥**

**ಅಪಾನೇ ತೃಪ್ಯತಿ ವಾಕ್ತೃಪ್ಯತಿ ವಾಚಿ ತೃಪ್ಯನ್ತ್ಯಾಮಗ್ನಿಸ್ತೃಪ್ಯತ್ಯಗ್ನೌ ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯನ್ತ್ಯಾಂ ಯತ್ಕಿಂಚ ಪೃಥಿವೀ ಚಾಗ್ನಿಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥**

೧-೨. ಇನ್ನು ಮೂರನೆಯದನ್ನು ಹೋಮಮಾಡುತ್ತಾನಲ್ಲ, ಅದನ್ನು 'ಅಪಾನಾಯ ಸ್ವಾಹಾ !' ಎಂದು ಹೋಮಮಾಡಬೇಕು. ಅಪಾನವು ತೃಪ್ತವಾಗುತ್ತದೆ. ಅಪಾನವು ತೃಪ್ತವಾಗಲು ವಾಕ್ಕು ತೃಪ್ತವಾಗುತ್ತದೆ. ವಾಕ್ಕು ತೃಪ್ತವಾಗಲು ಅಗ್ನಿ ತೃಪ್ತನಾಗುತ್ತಾನೆ. ಅಗ್ನಿಯು ತೃಪ್ತನಾಗಲು ಪೃಥಿವಿಯು ತೃಪ್ತವಾಗುತ್ತನೆ. ಪೃಥಿವಿಯು ತೃಪ್ತವಾಗಲು ಪೃಥಿವಿಯೂ ಅಗ್ನಿಯೂ ಯಾವಯಾವದರ ಮೇಲೆ ಇರುವವೋ ಅದು ತೃಪ್ತವಾಗುತ್ತದೆ. ಅದಕ್ಕೆ ತೃಪ್ತಿಯಾದ್ದರ ಹಿಂದೆಯೇ ಪ್ರಜೆಯಿಂದಲೂ ಪಶುಗಳಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ (ಕೂಡಿ) ತೃಪ್ತನಾಗುತ್ತಾನೆ.

# ಐದನೆಯ ಅಧ್ಯಾಯ—ಇಪ್ಪತ್ತೆರಡನೆಯ ಖಂಡ

( ಪ್ರಾಣಾಗ್ನಿಹೋತ್ರ )

(ಉಪನಿಷತ್ತು)

**ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ ಸಮಾನಾಯ ಸ್ವಾಹೇತಿ ಸಮಾನಸ್ತೃಪ್ಯತಿ ॥ ೧ ॥**

**ಸಮಾನೇ ತೃಪ್ಯತಿ ಮನಸ್ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯ ಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯ ನ್ತ್ಯಾಂ ಯತ್ಕಿಂಚ ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥**

೧-೨. ಇನ್ನು ನಾಲ್ಕನೆಯದನ್ನು ಹೋಮಮಾಡುತ್ತಾನಲ್ಲ, ಅದನ್ನು 'ಸಮಾನಾಯ ಸ್ವಾಹಾ!' ಎಂದು ಹೋಮಮಾಡಬೇಕು. ಸಮಾನವು ತೃಪ್ತವಾಗಲು ಮನಸ್ಸು ತೃಪ್ತವಾಗುತ್ತದೆ. ಮನಸ್ಸು ತೃಪ್ತವಾಗಲು ಪರ್ಜನ್ಯನು ತೃಪ್ತನಾಗುತ್ತಾನೆ. ಪರ್ಜನ್ಯನು ತೃಪ್ತ ನಾಗಲು ಮಿಂಚು ತೃಪ್ತವಾಗುತ್ತದೆ. ಮಿಂಚು ತೃಪ್ತವಾಗಲು ಮಿಂಚೂ ಪರ್ಜನ್ಯನೂ ಯಾವಯಾವದರಮೇಲೆ ಇರುತ್ತವೆಯೋ ಅದು ತೃಪ್ತವಾಗುತ್ತದೆ. ಅದರ ತೃಪ್ತಿಯ ಹಿಂದೆಯೇ ಪ್ರಜೆ ಯಿಂದಲೂ ಪಶುಗಳಿಂದಲೂ ಅನ್ನಾದ್ಯದಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸದಿಂದಲೂ (ಕೂಡಿ) ತೃಪ್ತನಾಗುತ್ತಾನೆ.

# ಐದನೆಯ ಅಧ್ಯಾಯ—ಇಪ್ಪತ್ತುಮೂರನೆಯ ಖಂಡ

( ಪ್ರಾಣಾಗ್ನಿಹೋತ್ರ )

(ಉಪನಿಷತ್ತು)

**ಅಥ ಯಾಂ ಪಞ್ಚಮೀಂ ಜುಹುಯಾತ್ತಾಂ ಜುಹುಯಾದುದಾ ನಾಯ ಸ್ವಾಹೇತ್ಯುದಾನಸ್ತೃಪ್ಯತಿ ॥ ೧ ॥**

**ಉದಾನೇ ತೃಪ್ಯತಿ ತ್ವಕ್ತೃಪ್ಯತಿ ತ್ವಚಿ ತೃಪ್ಯನ್ತ್ಯಾಂ ವಾಯು ಸ್ತೃಪ್ಯತಿ ವಾಯೌ ತೃಪ್ಯತ್ಯಾಕಾಶಸ್ತೃಪ್ಯತ್ಯಾಕಾಶೇ ತೃಪ್ಯತಿ**

**ಯತ್ಕಿಂಚ ವಾಯುಶ್ಚಾಕಾಶಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ೨ ॥**

೧-೨. ಇನ್ನು ಐದನೆಯದನ್ನು ಹೋಮಮಾಡುತ್ತಾನಲ್ಲ, ಅದನ್ನು 'ಉದಾನಾಯ ಸ್ವಾಹಾ!' ಎಂದು ಹೋಮಮಾಡಬೇಕು. ಉದಾನವು ತೃಪ್ತವಾಗುತ್ತದೆ. ಉದಾನವು ತೃಪ್ತವಾಗಲು ತ್ವಕ್ಕು ತೃಪ್ತವಾಗುತ್ತದೆ. ತ್ವಕ್ಕು ತೃಪ್ತವಾಗಲು ವಾಯು ತೃಪ್ತವಾಗುತ್ತದೆ; ವಾಯು ತೃಪ್ತವಾಗಲು ಆಕಾಶವು ತೃಪ್ತವಾಗುತ್ತದೆ. ಆಕಾಶವು ತೃಪ್ತವಾಗಲು, ಯಾವಯಾವದರಮೇಲೆ ವಾಯುವೂ ಆಕಾಶವೂ ಇರುವವೋ ಅದು ತೃಪ್ತವಾಗುವದು. ಅದರ ತೃಪ್ತಿಯ ಹಿಂದೆಯೇ ಪ್ರಜೆಯಿಂದಲೂ ಪಶುಗಳಿಂದಲೂ ಅನ್ನಾದ್ಯದಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸದಿಂದಲೂ (ಕೂಡಿ) ತೃಪ್ತನಾಗುತ್ತಾನೆ.

## ಅಪಾನಾದ್ಯಾಹುತಿಗಳು

(ಭಾಷ್ಯ)

೪೩೭. ಅಥ ಯಾಂ ದ್ವಿತೀಯಾಂ ತೃತೀಯಾಂ ಚತುರ್ಥೀಂ ಪಞ್ಚಮೀಮಿತಿ ಸಮಾನಮ್ ॥

(ಭಾಷ್ಯಾರ್ಥ)

ಇನ್ನು ಎರಡನೆಯದನ್ನೂ, ಮೂರನೆಯದನ್ನೂ, ನಾಲ್ಕನೆಯದನ್ನೂ ಐದನೆಯದನ್ನೂ (ಹೋಮಮಾಡುವನಲ್ಲ)- (ಎಂಬ ಗ್ರಂಥಭಾಗವು ಹಿಂದಿನದಕ್ಕೆ) ಸಮಾನವು.

---

# ಐದನೆಯ ಅಧ್ಯಾಯ-

# ಇಪ್ಪತ್ತುನಾಲ್ಕನೆಯ ಖಂಡ

( ವೈಶ್ವಾನರವಿದ್ಯೆಯ ಉಪಸಂಹಾರ )

## ವೈಶ್ವಾನರಾಗ್ನಿಹೋತ್ರದ ಮಹಿಮೆ

(ಉಪನಿಷತ್ತು)

**ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಙ್ಗಾರಾನಪೋಹ್ಯ ಭಸ್ಮನಿ ಜುಹುಯಾತ್ತಾದೃಕ್ತತ್ ಸ್ಯಾತ್ ॥ ೧ ॥**

೧. ಯಾವನು ಇದನ್ನು ಅರಿತುಕೊಳ್ಳದೆ ಅಗ್ನಿಹೋತ್ರವನ್ನು ಹೋಮಮಾಡುವನೋ ಅದು ಕೆಂಡವನ್ನು ತೆಗೆದುಹಾಕಿ ಬೂದಿಯಲ್ಲಿ ಹೋಮಮಾಡಿದರೆ (ಹೇಗೋ) ಹಾಗೆ ಆಗುವದು.

## ಪ್ರಾಣಾಗ್ನಿಹೋತ್ರಸ್ತುತಿಗಾಗಿ ಕೇವಲಾಗ್ನಿಹೋತ್ರದ ನಿಂದೆ

(ಭಾಷ್ಯ)

೪೩೮. ಸ ಯಃ ಕಶ್ಚಿತ್ ಇದಂ ವೈಶ್ವಾನರದರ್ಶನಂ ಯಥೋಕ್ತಮ್ ಅವಿದ್ವಾನ್ ಸನ್ ಅಗ್ನಿಹೋತ್ರಂ ಪ್ರಸಿದ್ಧಂ ಜುಹೋತಿ ಯಥಾ ಅಙ್ಗಾರಾನ್ ಆಹುತಿಯೋಗ್ಯಾನ್ ಅಪೋಹ್ಯ ಅನಾಹುತಿಸ್ಥಾನೇ ಭಸ್ಮನಿ ಜುಹುಯಾತ್ ತಾದೃಕ್ತತ್ ತುಲ್ಯಂ ತಸ್ಯ ತದಗ್ನಿಹೋತ್ರಹವನಂ ಸ್ಯಾತ್ । ವೈಶ್ವಾನರವಿದೋಽಗ್ನಿಹೋತ್ರಮಪೇಕ್ಷ್ಯ ಇತಿ ಪ್ರಸಿದ್ಧಾಗ್ನಿಹೋತ್ರನಿನ್ದಯಾ ವೈಶ್ವಾನರವಿದೋಽಗ್ನಿಹೋತ್ರಂ ಸ್ತೂಯತೇ ॥

(ಭಾಷ್ಯಾರ್ಥ)

ಯಾವನಾದರೊಬ್ಬನು ಈ ಹೇಳಿರುವಂಥ ವೈಶ್ವಾನರದರ್ಶನವನ್ನು ಅರಿಯದವನಾಗಿ ಪ್ರಸಿದ್ಧವಾದ ಅಗ್ನಿಹೋತ್ರವನ್ನು ಹೋಮಮಾಡುವನೋ– ಹೇಗೆ ಆಹುತಿಗೆ ಯೋಗ್ಯವಾಗಿರುವ ಕೆಂಡವನ್ನು ತೆಗೆದುಹಾಕಿ ಆಹುತಿಗೆ ತಕ್ಕದ್ದಲ್ಲದ ಭಸ್ಮದಲ್ಲಿ ಹೋಮಮಾಡುತ್ತಾರಲ್ಲ, ಅವನ (ಆ) ಅಗ್ನಿಹೋತ್ರಹವನವು ವೈಶ್ವಾನರೋಪಾಸಕನ ಅಗ್ನಿಹೋತ್ರಕ್ಕೆ ಹೋಲಿಸಿದರೆ, ಅಂಥದ್ದೇ ಅದಕ್ಕೆ ಸಮಾನವೇ ಆಗುವದು– ಎಂದು ಪ್ರಸಿದ್ಧವಾದ ಅಗ್ನಿಹೋತ್ರವನ್ನು ನಿಂದಿಸುವದರಿಂದ ವೈಶ್ವಾನರನ ಅಗ್ನಿಹೋತ್ರವನ್ನು ಹೊಗಳಿರುತ್ತದೆ.[1]

(ಉಪನಿಷತ್ತು)

**ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ॥ ೨ ॥**

೨. ಇನ್ನು ಯಾವನು ಇದನ್ನು 'ಹೀಗೆಂದು ಅರಿತು ಅಗ್ನಿಹೋತ್ರವನ್ನು ಹೋಮಮಾಡುತ್ತಾನೋ ಅವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವಆತ್ಮಗಳಲ್ಲಿಯೂ ಹುತವಾದದ್ದಾಗುತ್ತದೆ.

---

1. ಪ್ರಸಿದ್ಧವಾದ ಅಗ್ನಿಹೋತ್ರವನ್ನು ನಿಂದಿಸುವದರಲ್ಲಿ ಈ ವಾಕ್ಯಕ್ಕೆ ತಾತ್ಪರ್ಯವಿಲ್ಲ.

## ಈ ಅಗ್ನಿಹೋತ್ರದ ವೈಶಿಷ್ಟ್ಯ

(ಭಾಷ್ಯ)

೪೩೯. ಅತಶ್ಚೈತದ್ ವಿಶಿಷ್ಟಮ್ ಅಗ್ನಿಹೋತ್ರಮ್ । ಕಥಮ್ ? ಅಥ ಯ ಏತದೇವಂ ವಿದ್ವಾನ್ ಅಗ್ನಿಹೋತ್ರಂ ಜುಹೋತಿ । ತಸ್ಯ ಯಥೋಕ್ತ ವೈಶ್ವಾನರವಿಜ್ಞಾನವತಃ ಸರ್ವೇಷು ಲೋಕೇಷು ಇತ್ಯಾದ್ಯುಕ್ತಾರ್ಥಮ್ । 'ಹುತಮ್', 'ಅನ್ನಮತ್ತಿ' ಇತ್ಯನಯೋರೇಕಾರ್ಥತ್ವಾತ್ ॥

(ಭಾಷ್ಯಾರ್ಥ)

ಆದ್ದರಿಂದಲೂ ಈ ಅಗ್ನಿಹೋತ್ರವು ವಿಶಿಷ್ಟವಾಗಿರುತ್ತದೆ. ಹೇಗೆಂದರೆ, ಇನ್ನು ಯಾವನು ಇದನ್ನು ಹೀಗೆಂದರಿತುಕೊಂಡು ಅಗ್ನಿಹೋತ್ರವನ್ನು ಮಾಡುತ್ತಾನೋ ಅವನು, ಈವರೆಗೆ ಹೇಳಿರುವ ವೈಶ್ವಾನರೋಪಾಸಕನು. ಸರ್ವಲೋಕಗಳಲ್ಲಿಯೂ ಎಂದು ಮುಂತಾದದ್ದಕ್ಕೆ ಹಿಂದೆ (೫-೧೮-೧) ಹೇಳಿರುವಂತೆ ಅರ್ಥ. ಏಕೆಂದರೆ (ಇಲ್ಲಿರುವ) ಹುತಮ್ ಎಂಬುದಕ್ಕೂ (ಅಲ್ಲಿ) 'ಅನ್ನಮತ್ತಿ' ಎಂದಿರುವದಕ್ಕೂ ಒಂದೇ ಅರ್ಥ.[1]

(ಉಪನಿಷತ್ತು)

**ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಗ್ಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ॥ ೩ ॥**

೩. ಅಲ್ಲಿ ಯಾವನು ಇದನ್ನು ಹೀಗೆಂದರಿತುಕೊಂಡು ಅಗ್ನಿಹೋತ್ರವನ್ನು ಹೋಮಮಾಡುವನೋ (ಅವನಿಗೆ) ಹೇಗೆ ನೊದೆಹುಲ್ಲಿನ ತೂಲವನ್ನು ಬೆಂಕಿಯಲ್ಲಿ ಹಾಕಿದರೆ ಸುಡುವದೋ ಹಾಗೆಯೇ ಇವನ ಎಲ್ಲಾ ಪಾಪಗಳೂ ಸುಡುತ್ತವೆ.

## ಉಪಾಸಕನಿಗೆ ಪಾಪನಾಶ

(ಭಾಷ್ಯ)

೪೪೦. ಕಿಂಚ ತದ್ ಯಥಾ ಇಷೀಕಾಯಾಃ ತೂಲಮ್ ಅಗ್ರಮ್[2] ಅಗ್ನೌ ಪ್ರೋತಂ ಪ್ರಕ್ಷಿಪ್ತಂ ಪ್ರದೂಯೇತ ಪ್ರದಹ್ಯೇತ ಕ್ಷಿಪ್ರಮ್ ಏವಂ ಹಾಸ್ಯ ವಿದುಷಃ ಸರ್ವಾತ್ಮಭೂತಸ್ಯ ಸರ್ವಾನ್ನಾನಾಮತ್ತುಃ ಸರ್ವೇ ನಿರವಶಿಷ್ಟಾಃ

---

1. ಇವೆರಡಕ್ಕೂ ಒಂದೇ ಅಭಿಪ್ರಾಯ. ಹೀಗೆ ಪ್ರಾಣಾಗ್ನಿಹೋತ್ರವನ್ನು ಹೋಮಮಾಡುವದರಿಂದ ಆ ಫಲವಾಗುವದು ಎಂದು ಅಭಿಪ್ರಾಯ.

2 ವಾ॥ ಪಾಠದಲ್ಲಿ ಈ ಮಾತಿಲ್ಲ.

ಪಾಪ್ಮಾನೋ ಧರ್ಮಾಧರ್ಮಾಖ್ಯಾ ಅನೇಕಜನ್ಮಸಂಚಿತಾ ಇಹ ಚ ಪ್ರಾಗ್ ಜ್ಞಾನೋತ್ಪತ್ತೇಃ, ಜ್ಞಾನಸಹಭಾವಿನಶ್ಚ ಪ್ರದೂಯಸ್ತೇ ಪ್ರದಹ್ಯೇರನ್ । ವರ್ತಮಾನಶರೀರಾರಂಭಕಪಾಪ್ಮವರ್ಜಮ್ । ಲಕ್ಷ್ಯಂ ಪ್ರತಿ ಮುಕ್ತೇಷುವತ್ ಪ್ರವೃತ್ತಫಲತ್ವಾತ್ ತಸ್ಯ ನ ದಾಹಃ । ಯ ಏತದೇವಮ್ ವಿದ್ವಾನ್ ಅಗ್ನಿಹೋತ್ರಂ ಜುಹೋತಿ ಭುಙ್ಕ್ತೇ ॥

(ಭಾಷ್ಯಾರ್ಥ)

ಮತ್ತು ಅಲ್ಲಿ[1] (ಈ ದೃಷ್ಟಾಂತವಿದೆ). ಯಾವನು ಇದನ್ನು ಹೀಗೆಂದರಿತುಕೊಂಡು ಅಗ್ನಿಹೋತ್ರವನ್ನು ಹೋಮಮಾಡುವನೋ, ಎಂದರೆ (ಅನ್ನವನ್ನು) ಭುಂಜಿಸುವನೋ, (ಅವನಿಗೆ) ಹೇಗೆ ನೊದೆಹುಲ್ಲಿನ ತೂಲವನ್ನು ತುದಿಯ (ಕಡ್ಡಿಯನ್ನು) ಬೆಂಕಿಯಲ್ಲಿ ಹಾಕಿದರೆ ಬಿಸುಟರೆ (ಪ್ರದೂಯೇತ=ಪ್ರದಹ್ಯೇತ) ಬೇಗನೆ ಉರಿದುಹೋಗುವದೋ ಹಾಗೆಯೇ ಈ ಸರ್ವಾತ್ಮನಾದ ಜ್ಞಾನಿಯಾಗಿ ಎಲ್ಲಾ ಅನ್ನವನ್ನೂ ಉಣ್ಣುತ್ತಿರುವ (ಈ ಉಪಾಸಕನ) ಧರ್ಮಾಧರ್ಮಗಳೆಂಬ[2] ಎಲ್ಲಾ ಪಾಪಗಳೂ ಒಂದೂ ಉಳಿಯದಂತೆ– ಅನೇಕಜನ್ಮಗಳಲ್ಲಿ ಕೂಡಿಹಾಕಿಕೊಂಡಿದ್ದ ಜ್ಞಾನವುಂಟಾಗುವ ಮೊದಲು[3] (ಕೂಡಿಹಾಕಿರುವ) ಮತ್ತು ಜ್ಞಾನದೊಡನೆ (ಇರಬಹುದಾದ)[4] ಧರ್ಮಾಧರ್ಮಗಳು ಸುಟ್ಟುಹೋಗುತ್ತವೆ ಈಗಿನ ಶರೀರವನ್ನುಂಟುಮಾಡಿರುವ ಪಾಪಗಳನ್ನು ಬಿಟ್ಟು[5] (ಮಿಕ್ಕೆಲ್ಲವೂ ಸುಟ್ಟುಹೋಗುತ್ತವೆ). ಗುರಿಯನ್ನು ನೋಡಿ ಬಿಟ್ಟಾಗಿರುವ ಬಾಣದಂತೆ[6] (ಅದರ) ಫಲವು ಪ್ರಾರಂಭವಾಗಿಬಿಟ್ಟಿರುವದರಿಂದ ಅದಕ್ಕೆ ದಾಹವಿಲ್ಲ.[7]

(ಉಪನಿಷತ್ತು)

**ತಸ್ಮಾದು ಹೈವಂವಿದ್ಯದ್ಯಪಿ ಚಣ್ಡಾಲಾಯೋಚ್ಛಿಷ್ಟಂ ಪ್ರಯುಚ್ಛೇದಾತ್ಮನಿ ಹೈವಾಸ್ಯ ತದ್ವೈಶ್ವಾನರೇ ಹುತಗ್ಂ ಸ್ಯಾದಿತಿ ತದೇಷ ಶ್ಲೋಕಃ ॥ ೪ ॥**

---

1. ಈ ಅಗ್ನಿಹೋತ್ರದ ಮಹಿಮೆಯ ವಿಷಯದಲ್ಲಿ ದೃಷ್ಟಾಂತವೇನೆಂದರೆ.
2. ಪಾಪವೆಂಬುದು ಧರ್ಮಕ್ಕೆ ಉಪಲಕ್ಷಣ. ಸೂ. ಭಾ. ೪-೧-೧೪ (ಭಾ. ಭಾ. ೫೨೯).
3. ಜ್ಞಾನವುಂಟಾಗುವ ಮೊದಲು ಇರುವ ಪಾಪವೂ ಸಂಚಿತಪಾಪದಂತೆ.
4. ಜ್ಞಾನದೊಡನೆ ಪಾಪವಿಲ್ಲದಿದ್ದರೂ ಪುಣ್ಯಕರ್ಮವಿರಬಹುದು.
5. ಪ್ರಾರಬ್ಧಕರ್ಮವು ಮಾತ್ರ ನಾಶವಾಗುವದಿಲ್ಲ. ಸೂ. ಭಾ. ೪-೧-೧೫.
6. ಅನುಭವದಿಂದಲೇ ಅದಕ್ಕೆ ನಾಶ.
7. ಉಪಾಸನೆಯ ಸಾಕ್ಷಾತ್ಕಾರವೂ ತತ್ತ್ವಜ್ಞಾನವೂ ಉಂಟಾದಮೇಲೆ ಹಿಂದಿನ ಪಾಪಪುಣ್ಯಗಳು ನಾಶವಾಗುವವು, ಮುಂದಿನದು ಅಂಟದೆ ಇರುವದು. ಸೂ. ಭಾ. ೪-೧-೧೩, ೧೪- ಇವುಗಳ ಭಾಷ್ಯವನ್ನು ನೋಡಿ.

**ಯಥೇಹ ಕ್ಷುಧಿತಾ ಬಾಲಾ ಮಾತರಂ ಪರ್ಯುಪಾಸತ ಏವಗ್ಂ ಸರ್ವಾಣಿ ಭೂತಾನ್ಯಗ್ನಿಹೋತ್ರಮುಪಾಸತೇ ಇತ್ಯಗ್ನಿಹೋತ್ರ ಮುಪಾಸತ ಇತಿ ॥ ೫ ॥**

೪-೫. ಮತ್ತು ಆದ್ದರಿಂದಲೇ ಹೀಗೆಂದರಿತಿರುವವನು ಚಂಡಾಲನಿಗೆ ಉಚ್ಛಿಷ್ಟವನ್ನು ಕೊಟ್ಟರೂ ಅವನ ವೈಶ್ವಾನರಾತ್ಮನಲ್ಲಿಯೇ ಅದು ಹುತವಾಗಿರುವದು. ಅಲ್ಲಿ ಈ ಶ್ಲೋಕವಿದೆ: 'ಹೇಗೆ ಇಲ್ಲಿ ಕ್ಷುಧಿತರಾದ ಹುಡುಗರು ತಾಯಿಯನ್ನೇ ಉಪಾಸನೆ ಮಾಡುತ್ತಿರುವರೋ ಹಾಗೆ ಸರ್ವಭೂತಗಳೂ ಅಗ್ನಿಹೋತ್ರವನ್ನು ಉಪಾಸನೆಮಾಡುತ್ತಿರುವರು, ಅಗ್ನಿಹೋತ್ರವನ್ನು ಉಪಾಸನೆ ಮಾಡುತ್ತಿರುವರು.'

## ವೈಶ್ವಾನರೋಪಾಸಕನಿಗೆ ನೀಚರಿಗೆ ಉಚ್ಛಿಷ್ಟದಾನಮಾಡಿದ ದೋಷವಿಲ್ಲ

(ಭಾಷ್ಯ)

೪೪೧. ಸ ಯದ್ಯಪಿ ಚಣ್ಡಾಲಾಯ ಉಚ್ಛಿಷ್ಟಾನರ್ಹಾಯ ಉಚ್ಛಿಷ್ಟಂ ಪ್ರಯಚ್ಛೇತ್, ಉಚ್ಛಿಷ್ಟಂ ದದ್ಯಾತ್ ಪ್ರತಿಷಿದ್ಧಮ್ ಉಚ್ಛಿಷ್ಟದಾನಂ ಯದ್ಯಪಿ ಕುರ್ಯಾತ್, ಆತ್ಮನಿ ಹೈವ ಅಸ್ಯ ಚಣ್ಡಾಲದೇಹಸ್ಥೇ ವೈಶ್ವಾನರೇ ತದ್ ಹುತಂ ಸ್ಯಾತ್ ನ ಅಧರ್ಮನಿಮಿತ್ತಮ್ । ಇತಿ ವಿದ್ಯಾಮೇವ ಸ್ತೌತಿ। ತದೇತಸ್ಮಿನ್ ಸ್ತುತ್ಯರ್ಥೇ ಶ್ಲೋಕೋ ಮನ್ತ್ರೋಽಪ್ಯೇಷ ಭವತಿ ॥

(ಭಾಷ್ಯಾರ್ಥ)

ಅವನು ಉಚ್ಛಿಷ್ಟಕ್ಕೆ ಯೋಗ್ಯನಲ್ಲದ ಚಂಡಾಲನಿಗೆಕೂಡ ಉಚ್ಛಿಷ್ಟವನ್ನು ದಾನಮಾಡಿದರೆ- (ಅವನಿಗೆ) ಉಚ್ಛಿಷ್ಟವನ್ನು ಕೊಡಬಾರದೆಂದು (ಶಾಸ್ತ್ರದಲ್ಲಿ) ಪ್ರತಿಷಿದ್ಧವಾಗಿದ್ದರೂ- (ಹಾಗೆ) ಮಾಡಿದರೆ ಚಂಡಾಲದೇಹದಲ್ಲಿರುವ ವೈಶ್ವಾನರನೆಂಬ ತನ್ನ ಆತ್ಮನಲ್ಲಿಯೇ ಅದು ಹುತವಾಗುವದೇ ಹೊರತು, ಅಧರ್ಮಕ್ಕೆ ಕಾರಣವಾಗುವದಿಲ್ಲ- ಎಂದು ವಿದ್ಯೆಯನ್ನೇ ಹೊಗಳಿದೆ.[1] ಆ ಈ ಸ್ತುತಿಯೆಂಬ ಅರ್ಥದ ಈ[2] ಶ್ಲೋಕವೂ ಮಂತ್ರವೂ ಇದೆ.

---

1. ಉಚ್ಛಿಷ್ಟದಾನಮಾಡಬೇಕೆಂದೇನೂ ಇಲ್ಲಿ ಹೇಳಿಲ್ಲ.
2. ಮುಂದೆ ಉದಾಹರಿಸಿರುವ.

## ಈ ಉಪಾಸಕನ ಭೋಜನವನ್ನು ಎಲ್ಲರೂ ಕಾದುಕೊಂಡಿರುತ್ತಾರೆ

(ಭಾಷ್ಯ)

೪೪೨. ಯಥಾ ಇಹ ಲೋಕೇ ಕ್ಷುಧಿತಾ ಬುಭುಕ್ಷಿತಾ ಬಾಲಾ ಮಾತರಂ ಪರ್ಯುಪಾಸತೇ ಕದಾ ನೋ ಮಾತಾ ಅನ್ನಂ ಪ್ರಯಚ್ಛತಿ ಇತಿ। ಏವಂ ಸರ್ವಾಣಿ ಭೂತಾನ್ಯನ್ನಾದಾನಿ ಏವಂವಿದೋಽಗ್ನಿಹೋತ್ರಂ ಭೋಜನಮ್ ಉಪಾಸತೇ ಕದಾ ನ್ವಸೌ[1] ಭೋಕ್ಷ್ಯತ ಇತಿ। ಜಗತ್ಸರ್ವಂ ವಿದ್ವದ್ಭೋಜನೇನ ತೃಪ್ತಂ ಭವತೀತ್ಯರ್ಥಃ। ದ್ವಿರುಕ್ತಿರಧ್ಯಾಯಪರಿಸಮಾಪ್ತ್ಯರ್ಥಾ ॥

(ಭಾಷ್ಯಾರ್ಥ)

ಹೇಗೆ ಈ ಲೋಕದಲ್ಲಿ ಕ್ಷುಧಿತರಾದ ಹಸಿದಿರುವ ಹುಡುಗರು ತಾಯಿಯನ್ನು–ಅಮ್ಮನು ನಮಗೆ ಯಾವಾಗ ಅನ್ನವನ್ನು ಕೊಡುವಳೊ ಎಂದು– ಸುತ್ತಲೂ ಕಾದುಕೊಂಡು ಕುಳಿತಿರುವರೋ, ಹಾಗೆಯೇ ಅನ್ನವನ್ನುಣ್ಣುವ ಸರ್ವಭೂತಗಳೂ ಹೀಗೆಂದರಿತಿರುವಾತನ ಅಗ್ನಿಹೋತ್ರವನ್ನು –ಎಂದರೆ ಭೋಜನವನ್ನು ಇವನು ಯಾವಾಗ ಭೋಜನಮಾಡಿಯಾನು ? ಎಂದು– ಕಾದುಕೊಂಡಿರುವರು. ಜಗತ್ತೆಲ್ಲವೂ ಈ ಉಪಾಸಕನ ಭೋಜನದಿಂದ ತೃಪ್ತವಾಗುವದು ಎಂದರ್ಥ. (ಅಗ್ನಿಹೋತ್ರಮುಪಾಸತ ಇತಿ ಎಂದು) ಎರಡು ಸಲ ಹೇಳಿರುವದು ಅಧ್ಯಾಯವು ಮುಗಿಯಿತೆಂದು (ತಿಳಿಸು)ವದಕ್ಕೆ.

---

1. ಮೂಲದಲ್ಲಿರುವ ಕದಾ ತ್ವಸೌ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

# ಐದನೆಯ ಅಧ್ಯಾಯ: ಹನ್ನೊಂದನೆಯ ಖಂಡದಿಂದ ಸಮಾಪ್ತಿಯವರೆಗಿನ ಗ್ರಂಥದ ಸಾರ

ಈ ಭಾಗದಲ್ಲಿ ವೈಶ್ವಾನರವಿದ್ಯೆಯನ್ನು ವರ್ಣಿಸಿರುತ್ತದೆ.

## ಹನ್ನೊಂದನೆಯ ಖಂಡ

ಪ್ರಾಚೀನಶಾಲ ಔಪಮನ್ಯವ, ಸತ್ಯಯಜ್ಞ ಪೌಲುಷಿ, ಇಂದ್ರದ್ಯುಮ್ನ ಭಾಲ್ಲವೇಯ, ಜನ ಶಾರ್ಕರಾಕ್ಷ್ಯ, ಬುಡಿಲ ಅಶ್ವತರಾಶ್ವಿ- ಎಂಬ ಮಹಾಶ್ರೋತ್ರಿಯರಾದ ಗೃಹಸ್ಥರು ಒಕ್ಕಡೆಯಲ್ಲಿ ಸೇರಿ 'ನಮ್ಮ ಆತ್ಮನಾಗಿರುವ ಬ್ರಹ್ಮವು ಯಾವದು ?' ಎಂದು ತಮ್ಮತಮ್ಮೊಳಗೆ ವಿಚಾರಮಾಡಿ ನಿಶ್ಚಯಿಸಲಾರದೆ ಉದ್ದಾಲಕ ಆರುಣಿಯ ಬಳಿಗೆ ಬಂದರು ಆತನಿಗೂ ಎಲ್ಲವೂ ತಿಳಿದಿರಲಿಲ್ಲವಾಗಿ 'ಅಶ್ವಪತಿ ಕೈಕೇಯನಬಳಿಗೆ ಹೋಗೋಣ' ಎಂದು ಎಲ್ಲರನ್ನೂ ಕರೆದುಕೊಂಡು ಅವನಲ್ಲಿಗೆ ಹೋದನು.

ರಾಜನು ತನ್ನಲ್ಲಿಗೆ ಬಂದ ಆ ಬ್ರಾಹ್ಮಣರಿಗೆ ಸತ್ಕಾರವನ್ನು ಮಾಡಿ ಅವರಿಗೆ ತಾನು ಇಷ್ಟರಲ್ಲಿಯೇ ಯಜ್ಞವನ್ನು ಮಾಡಲಿರುವದಾಗಿಯೂ ಅಲ್ಲಿಯವರೆಗೆ ಉಳಿದುಕೊಂಡರೆ ಒಬ್ಬೊಬ್ಬ ಋತ್ವಿಜನಿಗೆ ಕೊಡುವಷ್ಟು ಹಣವನ್ನು ನಿಮಗೂ ಒಬ್ಬೊಬ್ಬರಿಗೆ ಕೊಡುವೆನು ಎಂದನು ಆದರೆ ಅವರು 'ನಾವು ಧನಕ್ಕಾಗಿ ಬಂದಿಲ್ಲ, ನೀನರಿತಿರುವ ವೈಶ್ವಾನರವಿದ್ಯೆಯನ್ನೇ ಹೇಳಿಕೊಡು' ಎಂದು ಕೇಳಿಕೊಂಡರು

## ಹನ್ನೆರಡನೆಯ ಖಂಡದಿಂದ ಹದಿನೇಳನೆಯ ಖಂಡದವರೆಗೆ

ಮಾರನೆಯ ದಿನ ರಾಜನು ಅವರನ್ನು 'ನೀವು ಯಾರನ್ನು ವೈಶ್ವಾನರನನ್ನು ಆತ್ಮನೆಂದು ಉಪಾಸನೆಮಾಡುತ್ತಿರುವಿರಿ ?_' ಎಂದು ಒಬ್ಬೊಬ್ಬರನ್ನಾಗಿ ಹೆಸರುಹಿಡಿದು ಕರೆದು ಕೇಳಿದನು.

ಔಪಮನ್ಯವನು ದ್ಯುಲೋಕವನ್ನೇ ವೈಶ್ವಾನರಾತ್ಮನೆಂದು ಉಪಾಸನೆಮಾಡುತ್ತಿದ್ದನು. ಆ ಆತ್ಮನಿಗೆ ಸುತೇಜನೆಂಬ ಹೆಸರು. ಅವನ ಉಪಾಸನೆಯಿಂದ ಕೆಲವು ಉತ್ತಮಫಲಗಳಿದ್ದರೂ ಅವನು ಪೂರ್ಣಾತ್ಮನಲ್ಲ, ವೈಶ್ವಾನರನ ತಲೆ ಮಾತ್ರ ಆದ್ದರಿಂದ ಒಂದು ಭಾಗವನ್ನೇ ಪೂರ್ಣವೈಶ್ವಾನರನೆಂದು ಭಾವಿಸುತ್ತಿದ್ದ ದೋಷದಿಂದಾಗಿ ಪೂರ್ಣಾತ್ಮನನ್ನು ತಿಳಿಯುವದಕ್ಕೆ ಪ್ರಯತ್ನಿಸದೆಹೋಗಿದ್ದರೆ 'ನಿನ್ನ ತಲೆಯೇ ಬಿದ್ದುಹೋಗುತ್ತಿತ್ತು' ಎಂದು ರಾಜನು ತಿಳಿಸಿದನು.

ಸತ್ಯಯಜ್ಞ ಪೌಲುಷಿಯು ಆದಿತ್ಯನನ್ನು ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು ಅವನಿಗೆ ವಿಶ್ವರೂಪನೆಂದು ಹೆಸರು. ಆದರೆ ಅದು ವೈಶ್ವಾನರನ ಚಕ್ಷುಸ್ಸು ಮಾತ್ರ ಪೂರ್ಣಾತ್ಮನನ್ನು ತಿಳಿಯುವದಕ್ಕೆ ಬಾರದಿದ್ದರೆ 'ನಿನ್ನ ಕಣ್ಣು ಹೋಗಿಬಿಡುತ್ತಿತ್ತು' ಎಂದು ರಾಜನು ತಿಳಿಸಿದನು.

ಇಂದ್ರದ್ಯುಮ್ನ ಭಾಲ್ಲವೇಯನು ವಾಯುವನ್ನು ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು. ಅವನಿಗೆ ಪೃಥಗ್ವರ್ತ್ಮಾತ್ಮನೆಂದು ಹೆಸರು. ಆದರೆ ವಾಯುವು ವೈಶ್ವಾನರನ

ಪ್ರಾಣವು ಮಾತ್ರ. ‹ನೀನು ನನ್ನ ಬಳಿಗೆ ಬಾರದಿದ್ದರೆ ನಿನ್ನ ಪ್ರಾಣವು ಉತ್ಕ್ರಾಂತ ವಾಗುತ್ತಿತ್ತು '' ಎಂದು ರಾಜನು ನುಡಿದನು

ಜನ ಶಾರ್ಕರಾಕ್ಷ್ಯನು ಆಕಾಶವನ್ನು ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು. ಅವನಿಗೆ ಬಹುಲನೆಂದು ಹೆಸರು. ಆದರೆ ಅವನು ವೈಶ್ವಾನರನ ಶರೀರವು ಮಾತ್ರ. ‹ನೀನು ನನ್ನಲ್ಲಿಗೆ ಬಾರದಿದ್ದರೆ ನಿನ್ನ ಶರೀರವು ಶಿಥಿಲವಾಗಿಹೋಗುತ್ತಿತ್ತು' ಎಂದು ರಾಜನು ಹೇಳಿದನು

ಬುಡಿಲ ಆಶ್ವತರಾಶ್ವಿಯು ಅಪ್ಪನ್ನೇ ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು. ಅವನಿಗೆ ರಯಿ ಎಂದು ಹೆಸರು. ಆದರೆ ಅವನು ವೈಶ್ವಾನರನಿಗೆ ಬಸ್ತಿ ಮಾತ್ರ. ‹ನೀನು ನನ್ನಲ್ಲಿಗೆ ಬಾರದಿದ್ದರೆ ನಿನ್ನ ಮೂತ್ರಕೋಶವು ಒಡೆದುಕೊಳ್ಳುತ್ತಿತ್ತು' ಎಂದು ರಾಜನು ನುಡಿದನು.

ಉದ್ದಾಲಕ ಆರುಣಿಯು ಪೃಥಿವಿಯನ್ನು ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು. ಆ ಆತ್ಮನಿಗೆ ಪ್ರತಿಷ್ಠಾತ್ಮನೆಂದು ಹೆಸರು ‹ನೀನು ಇಲ್ಲಿಗೆ ಬಾರದೇಇದ್ದಿದ್ದರೆ ನಿನ್ನ ಪಾದಗಳು ಬತ್ತಿಹೋಗುತ್ತಿದ್ದವು' ಎಂದು ರಾಜನೆಂದನು.

## ಹದಿನೆಂಟನೆಯ ಖಂಡ

ರಾಜನು ಅವರನ್ನು ಕುರಿತು "ನೀವು ಈ ವೈಶ್ವಾನರಾತ್ಮನು ಪೂರ್ಣನಾಗಿದ್ದರೂ ಇವನ ಒಂದೊಂದು ಅವಯವವನ್ನೇ ಬೇರೆಬೇರೆಯಾಗಿ ಸಮಸ್ತಾತ್ಮನೆಂದು ಉಪಾಸನೆಮಾಡುತ್ತಿರು ವದರಿಂದ ಪರಿಚ್ಛಿನ್ನಾತ್ಮರಾಗಿಯೇ ಅನ್ನವನ್ನುಣ್ಣುತ್ತಿರುವಿರಿ ಆದರೆ ಈ ಎಲ್ಲಾ ಪ್ರದೇಶ ಗಳಲ್ಲಿಯೂ ಇರುವ ಅಭಿವಿಮಾನಾತ್ಮನನ್ನು ವೈಶ್ವಾನರನೆಂದು ಯಾವನು ಉಪಾಸನೆಮಾಡು ವನೋ ಅವನು ಎಲ್ಲಾ ಲೋಕಗಳಲ್ಲಿಯೂ ಎಲ್ಲಾ ಭೂತಗಳಲ್ಲಿಯೂ ಎಲ್ಲಾ ಕಾರ್ಯಕರಣ ಸಂಘಾತಗಳಲ್ಲಿ ಎಲ್ಲರ ಆತ್ಮನಾಗಿ ಅನ್ನವನ್ನುಣ್ಣುತ್ತಿರುವನು."

ಈ ವೈಶ್ವಾನರಾತ್ಮನಿಗೆ ಸುತೇಜನು ತಲೆ, ವಿಶ್ವರೂಪನು ಕಣ್ಣು, ಪೃಥಗ್ವರ್ತ್ಮಾತ್ಮನು ಪ್ರಾಣವು, ಬಹುಲನು ಶರೀರವು, ರಯಿಯು ಬಸ್ತಿ, ಪೃಥಿವಿಯು ಪಾದವು; ಹೀಗೆಂದು ಉಪಾಸನೆಮಾಡುವವನ ಎದೆಯೇ ವೇದಿ, ಲೋಮಗಳೇ ಬರ್ಹಿಸ್ಸು, ಹೃದಯವೇ ಗಾರ್ಹ ಪತ್ಯವು, ಮನಸ್ಸೇ ಅನ್ವಾಹಾರ್ಯಪಚನವು, ಮುಖವೇ ಆಹವನೀಯವು. ಹೀಗೆಂದು ಮೇಲೆ ಹೇಳಿದ ಗುಣಗಳಿಂದ ಸಮಸ್ತವೈಶ್ವಾನರನನ್ನೇ ಉಪಾಸನೆಮಾಡಬೇಕು.

## ಹತ್ತೊಂಬತ್ತರಿಂದ ಇಪ್ಪತ್ತುಮೂರನೆಯ ಖಂಡದವರೆಗೆ

ಈ ಉಪಾಸಕನು ತನ್ನ ಭೋಜನವನ್ನೇ ಅಗ್ನಿಹೋತ್ರವೆಂದು ಕಲ್ಪಿಸಬೇಕು. ಮೊದಲ ನೆಯ ಸಲ ಬರುವ ಆಹಾರವನ್ನು ಹೋಮಮಾಡಬೇಕು. ಮೊದಲನೆಯ ಹೋಮವನ್ನು ‹ಪ್ರಾಣಾಯ ಸ್ವಾಹಾ '' ಎಂದು ತನ್ನ ಮುಖದಲ್ಲಿ ಹೋಮಮಾಡಬೇಕು. ಇದರಿಂದ ಕ್ರಮಕ್ರಮವಾಗಿ ಪ್ರಾಣ, ಚಕ್ಷುಸ್ಸು, ಆದಿತ್ಯ, ದ್ಯುಲೋಕ, ದ್ಯುಲೋಕಾದಿತ್ಯರ ಅಧೀನದಲ್ಲಿರು ವವರು- ಇವರು ತೃಪ್ತರಾಗುವರು. ಉಪಾಸಕನೂ ತೃಪ್ತನಾಗಿ ಪ್ರಜೆ, ಪಶುಗಳು, ಅನ್ನಾದ್ಯ, ತೇಜಸ್ಸು, ಬ್ರಹ್ಮವರ್ಚಸ್ಸುಗಳಿಂದ ಕೂಡಿರುವನು.

ಎರಡನೆಯದನ್ನು "ವ್ಯಾನಾಯ ಸ್ವಾಹಾ" ಎಂದು ಹೋಮಮಾಡಬೇಕು ಅದರಿಂದ ವ್ಯಾನ, ಶ್ರೋತ್ರ, ಚಂದ್ರ, ದಿಕ್ಕುಗಳು, ದಿಕ್ಚಂದ್ರರ ಅಧೀನರು- ಇವು ಕ್ರಮವಾಗಿ ತೃಪ್ತರಾಗುವರು. ಇದರಿಂದ ಉಪಾಸಕನಿಗೆ ಮೇಲೆ ಹೇಳಿದಂತೆ ಫಲವಾಗುವದು.

ಮೂರನೆಯದನ್ನು "ಅಪಾನಾಯ ಸ್ವಾಹಾ" ಎಂದು ಹೋಮಮಾಡಬೇಕು. ಅದರಿಂದ ಅಪಾನ, ವಾಕ್ಕು, ಅಗ್ನಿ, ಪೃಥಿವಿ, ಪೃಥಿವ್ಯಗ್ನಿಗಳ ಅಧೀನದಲ್ಲಿರುವವರು- ಎಲ್ಲವೂ ತೃಪ್ತರಾಗುವವು. ಉಪಾಸಕನೂ ಮೇಲೆ ಹೇಳಿದಂತೆ ತೃಪ್ತನಾಗುವನು.

ನಾಲ್ಕನೆಯದನ್ನು "ಸಮಾನಾಯ ಸ್ವಾಹಾ" ಎಂದು ಹೋಮಮಾಡಬೇಕು. ಅದರಿಂದ ಸಮಾನ, ಮನಸ್ಸು, ಪರ್ಜನ್ಯ, ವಿದ್ಯುತ್ತು, ವಿದ್ಯುತ್ಪರ್ಜನ್ಯರಧೀನದಲ್ಲಿರುವವರು ಎಲ್ಲವೂ ತೃಪ್ತರಾಗುವವು. ಉಪಾಸಕನೂ ಮೇಲೆ ಹೇಳಿದಂತೆಯೇ ತೃಪ್ತನಾಗುವನು

ಇನ್ನು ಐದನೆಯದನ್ನು "ಉದಾನಾಯ ಸ್ವಾಹಾ" ಎಂದು ಹೋಮಮಾಡಬೇಕು. ಅದರಿಂದ ಉದಾನ, ತ್ವಕ್ಕು, ವಾಯು, ಆಕಾಶ, ವಾಯ್ವಾಕಾಶಗಳ ಅಧೀನದಲ್ಲಿರುವವರು- ಎಲ್ಲರೂ ತೃಪ್ತರಾಗುವರು, ಉಪಾಸಕನೂ ತೃಪ್ತನಾಗಿ ಪ್ರಜೆ, ಪಶು, ಅನ್ನಾದ್ಯ, ತೇಜಸ್ಸು, ಬ್ರಹ್ಮವರ್ಚಸ್ಸು- ಇವುಗಳಿಂದ ಕೂಡಿರುವನು

## ಇಪ್ಪತ್ತುನಾಲ್ಕನೆಯ ಖಂಡ

ಈ ವಿದ್ಯೆಯನ್ನರಿಯದೆ ಅಗ್ನಿಹೋತ್ರಮಾಡುವದು ಇದನ್ನರಿತು ಮಾಡಿದ್ದಕ್ಕೆ ಹೋಲಿಸಿದಾಗ ಕೆಂಡವಿಲ್ಲದ ಬರಿಯ ಬೂದಿಯಲ್ಲಿ ಹೋಮಮಾಡಿದಷ್ಟು ಅಲ್ಪಫಲವುಳ್ಳದ್ದಾಗಿರುವದು ಇದನ್ನರಿತು ಮಾಡಿದವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವಸಂಘಾತಗಳಲ್ಲಿಯೂ ಹೋಮಮಾಡಿದವನಾಗುವನಾದ್ದರಿಂದ ವೈಶ್ವಾನರನಾಗಿ ಎಲ್ಲದರಲ್ಲಿಯೂ ಅನ್ನವನ್ನುಣ್ಣುವನು.

ಹೀಗೆಂದಂತು ಅಗ್ನಿಹೋತ್ರವನ್ನು ಮಾಡುವವನ ಪಾಪಪುಣ್ಯಗಳೆಲ್ಲವೂ ನೊದೆಹುಲ್ಲಿನ ಕಡ್ಡಿಯನ್ನು ಬೆಂಕಿಯಲ್ಲಿ ಹಾಕಿದರೆ ಹೇಗೋ ಹಾಗೆ ಸುಟ್ಟುಹೋಗುವವು. ಪ್ರಾರಬ್ಧಕರ್ಮವು ಮುಗಿಯಲು ಅಪರಬ್ರಹ್ಮವನ್ನೇ ಪಡೆದುಕೊಳ್ಳುವನು

ಈ ಉಪಾಸಕನು ತನ್ನ ಉಚ್ಛಿಷ್ಟವನ್ನು ಚಂಡಾಲನಿಗೆ ಕೊಟ್ಟರೂ ದೋಷವಾಗುವದಿಲ್ಲ ಅದು ವೈಶ್ವಾನರಾತ್ಮನಲ್ಲಿ ಹೋಮಮಾಡಿದಂತೆಯೇ ಸತ್ಫಲವನ್ನು ಕೊಡುವದು. ಲೋಕದಲ್ಲೆಲ್ಲರೂ ಇವನ ಭೋಜನದಿಂದ ತೃಪ್ತರಾಗುವರಾದ್ದರಿಂದ ಈತನು ಪ್ರಾಣಾಗ್ನಿಹೋತ್ರವನ್ನು ಯಾವಾಗ ಮಾಡುವನೋ ಎಂದು ಕಾಯುಕೊಂಡಿರುವರು.

# ಆರನೆಯ ಅಧ್ಯಾಯ-ಒಂದನೆಯ ಖಂಡ

( ಆತ್ಮೈಕತ್ವಜ್ಞಾನ )

## ಶ್ವೇತಕೇತುವು ಬ್ರಹ್ಮಚರ್ಯೆಯನ್ನು ಮುಗಿಸಿಕೊಂಡು ಹಿಂತಿರುಗಿದ್ದು

(ಉಪನಿಷತ್ತು)

**ಶ್ವೇತಕೇತುರ್ಹಾರುಣೇಯ ಆಸ ತꣳ ಹ ಪಿತೋವಾಚ ಶ್ವೇತಕೇತೋ ವಸ ಬ್ರಹ್ಮಚರ್ಯಂ ನ ವೈ ಸೋಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬನ್ಧುರಿವ ಭವತೀತಿ ॥ ೧ ॥**

೧. ಶ್ವೇತಕೇತು ಆರುಣೇಯನಿದ್ದನು. ಅವನನ್ನು ಕುರಿತು ತಂದೆಯು 'ಶ್ವೇತಕೇತುವೆ, ಬ್ರಹ್ಮಚರ್ಯವನ್ನು ವಾಸಮಾಡು. ಸೋಮ್ಯ, ನಮ್ಮ ಕುಲದವನು ಅನುವಚನಮಾಡದೆ 'ಬ್ರಹ್ಮಬಂಧು ವಿನಂತೆ ಇರುವದಿಲ್ಲ' ಎಂದನು.

### ಅಧ್ಯಾಯದ ಸಂಬಂಧ

(ಭಾಷ್ಯ)

೪೪೩. 'ಶ್ವೇತಕೇತುರ್ಹಾರುಣೇಯ ಆಸ' ಇತ್ಯಾದ್ಯಧ್ಯಾಯಸಂಬನ್ಧಃ । ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತ್ಯುಕ್ತಮ್[1] । ಕಥಂ ತಸ್ಮಾಜ್ಜಗದಿದಂ ಜಾಯತೇ। ತಸ್ಮಿನ್ನೇವ ಚ ಲೀಯತೇ । ಅನಿತಿ ಚ ತೇನೈವ—ಇತ್ಯೇತದ್ ವಕ್ತವ್ಯಮ್ । ಅನನ್ತರಂ ಚ ಏಕಸ್ಮಿನ್ ಭುಕ್ತೇ ವಿದುಷಿ ಸರ್ವಂ ಜಗತ್ ತೃಪ್ತಂ ಭವತಿ ಇತ್ಯುಕ್ತಮ್ । ತದೇಕತ್ವೇ ಸತಿ ಆತ್ಮನಃ ಸರ್ವಭೂತಸ್ಥಸ್ಯ ಉಪಪದ್ಯತೇ ನಾಽಽತ್ಮಭೇದೇ। ಕಥಂ ಚ ತದೇಕತ್ವಮಿತಿ ? ತದರ್ಥೋಽಯಂ ಷಷ್ಠೋಽಧ್ಯಾಯ ಆರಭ್ಯತೇ। ಪಿತಾಪುತ್ರಾಖ್ಯಾಯಿಕಾ ವಿದ್ಯಾಯಾಃ ಸಾರಿಷ್ಠತ್ವಪ್ರದರ್ಶನಾರ್ಥಾ ॥

(ಭಾಷ್ಯಾರ್ಥ)

'ಶ್ವೇತಕೇತುರ್ಹ ಆರುಣೇಯ ಆಸ' ಎಂದು ಮುಂತಾಗಿರುವ (ಈ) ಅಧ್ಯಾಯದ ಸಂಬಂಧ(ವೇನೆಂದರೆ): 'ಇದೆಲ್ಲವೂ ಬ್ರಹ್ಮವೇ, ಏಕೆಂದರೆ ತಜ್ಜ

---

1. 'ತಜ್ಜಲಾನಿತೀತ್ಯುಕ್ತಮ್' ಎಂಬ ಪಾಠವೂ ಉಂಟು. ಅಲ್ಲಿ ಮೊದಲನೆಯ ಇತಿಯು ಉಪನಿಷದ್ವಾಕ್ಯಕ್ಕೇ ಸೇರಿದ್ದು ; ಎರಡನೆಯದು ಭಾಷ್ಯದ್ದು.

ಲಾನ್ (ಆಗಿದೆ)' ಎಂದು ಹಿಂದೆ (೩-೧೪-೧) ಹೇಳಿರುತ್ತದೆ(ಯಷ್ಟೆ) ? ಆ (ಬ್ರಹ್ಮ)ದಿಂದ ಈ ಜಗತ್ತು ಹುಟ್ಟುತ್ತದೆ ಎಂದರೆ ಹೇಗೆ ? ಅದರಲ್ಲಿಯೇ ಅಡಗುತ್ತದೆ, ಅದರಿಂದಲೇ ವ್ಯಾಪಾರಮಾಡುತ್ತಿದೆ (ಎಂದರೆ ಹೇಗೆ ?)- ಎಂಬಿದನ್ನು ಹೇಳಬೇಕಾಗಿರುತ್ತದೆ. ಆ ಬಳಿಕ (ಹಿಂದಿನ ಅಧ್ಯಾಯ)ದಲ್ಲಿ ಉಪಾಸಕನೊಬ್ಬನೇ ಭೋಜನಮಾಡಿದರೆ ಜಗತ್ತೆಲ್ಲವೂ ತೃಪ್ತವಾಗುತ್ತದೆ ಎಂದೂ ಹೇಳಲಾಗಿದೆ, ಅದು ಸರ್ವಭೂತಗಳಲ್ಲಿಯೂ ಇರುವ ಆತ್ಮನು ಒಬ್ಬನೇ ಆದರೆ ಹೊಂದುತ್ತದೆಯೇ ಹೊರತು ಆತ್ಮರು ಬೇರೆಬೇರೆಯಾಗಿದ್ದರೆ (ಹೊಂದು)ವದಿಲ್ಲ. ಹಾಗಾದರೆ ಆ (ಆತ್ಮನು) ಒಬ್ಬನೇ ಎನ್ನುವದು ಹೇಗೆ ?- ಎಂಬುದನ್ನೂ (ಹೇಳಬೇಕಾಗಿದೆ) ಇದಕ್ಕಾಗಿ ಈ ಆರನೆಯ ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ. ತಂದೆಮಕ್ಕಳ (ಸಂಭಾಷಣೆಯ ರೂಪದ) ಕಥೆಯು (ಈ) ವಿದ್ಯೆಯು ಸಾರಿಷ್ಠವಾದದ್ದೆಂದು ತಿಳಿಸುವದಕ್ಕೆ[1]

## ಶ್ವೇತಕೇತುವನ್ನು ತಂದೆಯು ಬ್ರಹ್ಮಚರ್ಯವಾಸಕ್ಕೆ ಕಳುಹಿಸಿದ್ದು

(ಭಾಷ್ಯ)

೪೬೪ ಶ್ವೇತಕೇತುರಿತಿ ನಾಮತಃ। ಹ ಇತ್ಯೈತಿಹ್ಯಾರ್ಥಃ। ಆರುಣೇಯ ಅರುಣಸ್ಯ ಪೌತ್ರಃ, ಆಸ। ಬಭೂವ। ತಂ ಪುತ್ರಂ ಹ ಆರುಣಿಃ ಪಿತಾ ಯೋಗ್ಯಂ ವಿದ್ಯಾಭಾಜನಂ ಮನ್ವಾನಃ, ತಸ್ಯೋಪನಯನಕಾಲಾತ್ಯಯಂ ಚ ಪಶ್ಯನ್ ಉವಾಚ। ಹೇ ಶ್ವೇತಕೇತೋ ಅನುರೂಪಂ ಗುರುಂ ಕುಲಸ್ಯ ನೋ ಗತ್ವಾ ವಸ ಬ್ರಹ್ಮಚರ್ಯಮ್। ನ ಚೈತದ್ ಯುಕ್ತಂ ಯದಸ್ಮತ್ಕುಲೀನೋ ಹೇ ಸೋಮ್ಯ ಅನನೂಚ್ಯ ಅನಧೀತ್ಯ ಬ್ರಹ್ಮಬನ್ಧುರಿವ ಭವತೀತಿ। ಬ್ರಾಹ್ಮಣಾನ್ ಬನ್ಧೂನ್ ವ್ಯಪದಿಶತಿ ನ ಸ್ವಯಂ ಬ್ರಾಹ್ಮಣವೃತ್ತ ಇತಿ। ತಸ್ಯ ಅತಃ ಪ್ರವಾಸೋಽನುಮೀಯತೇ ಪಿತುಃ, ಯೇನ ಸ್ವಯಂ ಗುಣವಾನ್ ಸನ್ ಪುತ್ರಂ ನೋಪನೇಷ್ಯತಿ॥

(ಭಾಷ್ಯಾರ್ಥ)

ಶ್ವೇತಕೇತು ಎಂಬುದು (ಅವನ) ಹೆಸರು, ಹ ಎಂಬುದು ಹಿಂದೆ ನಡೆದದ್ದೆಂಬುದನ್ನು ತಿಳಿಸುವದಕ್ಕೆ. ಆರುಣೇಯನು, ಅರುಣನ ಮೊಮ್ಮಗನು. (ಆಸ= ಬಭೂವ) ಇದ್ದನು. ಆ ಪುತ್ರನನ್ನು ತಂದೆಯಾದ ಆರುಣಿಯು (ಇವನು) ಯೋಗ್ಯನು ವಿದ್ಯೆಗೆ ತಕ್ಕವನು ಎಂದೆಣಿಸಿ ಅವನಿಗೆ ಉಪನಯನದ ಕಾಲವು ಮೀರುತ್ತಿದೆಯೆಂಬುದನ್ನು ಕಂಡುಕೊಂಡು ಹೀಗೆಂದನು : ಎಲೈ ಶ್ವೇತಕೇತುವೆ,

---

1. ಈ ಬ್ರಹ್ಮವಿದ್ಯೆಯು ವೇದದಲ್ಲೆಲ್ಲ ಸಾರವಾದದ್ದು, ಏಕೆಂದರೆ ತಂದೆಯು ತನ್ನ ಪ್ರಿಯನಾದ ಮಗನಿಗೆ ಹೇಳಿರುತ್ತಾನೆ ಎಂದು ತಿಳಿಸುವದಕ್ಕೆ.

ನಮ್ಮ ಕುಲಕ್ಕೆ ಅನುರೂಪನಾಗಿರುವ ಗುರುವಿನ ಬಳಿಗೆ ಹೋಗಿ ಬ್ರಹ್ಮಚರ್ಯ ವನ್ನು ಮಾಡಿಕೊಂಡಿರು. ನಮ್ಮ ಕುಲದಲ್ಲಿ ಹುಟ್ಟಿದವನು ಅನುವಚನಮಾಡದೆ ಅಧ್ಯಯನಮಾಡದೆ ಬ್ರಹ್ಮಬಂಧುವಿನಂತಿರುವದು ಯುಕ್ತವೂ ಅಲ್ಲ. ಬ್ರಾಹ್ಮಣ ರನ್ನು (ತನ್ನ) ಬಂಧುಗಳೆಂದು ಹೇಳಿಕೊಳ್ಳುವನೇ ಹೊರತು ತಾನು ಬ್ರಾಹ್ಮಣನ ನಡೆನುಡಿಗಳವನಲ್ಲದಿರುವನು (ಯಾರೋ ಅವನು ಬ್ರಹ್ಮಬಂಧುವೆನಿಸುವನು).

ಆ ತಂದೆಯು ಇಲ್ಲಿಂದ (ದೇಶಾಂತರಕ್ಕೆ) ಹೊರಟುಹೋಗುವವನಿದ್ದನೆಂದು ಕಲ್ಪಿಸಬೇಕಾಗಿದೆ, ಏಕೆಂದರೆ ತಾನು ಗುಣವಂತನಾಗಿದ್ದರೂ[1] ಮಗನಿಗೆ ಉಪ ನಯನಮಾಡಿಸಲಿಲ್ಲ

(ಉಪನಿಷತ್ತು)

**ಸ ಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ ತಗ್‍ಂ ಹ ಪಿತೋವಾಚ ॥ ೨ ॥**

೨. ಅವನು ಹನ್ನೆರಡು ವರ್ಷದವನಾಗಿ (ಆಚಾರ್ಯನ) ಬಳಿಗೆ ಹೋಗಿದ್ದು ಇಪ್ಪತ್ತುನಾಲ್ಕು ವರ್ಷದವನಾಗುವವರೆಗೆ ಸರ್ವ ವೇದಗಳನ್ನೂ ಅಧ್ಯಯನಮಾಡಿ ಮಹಾಮನನೂ ಅನೂಚಾನಮಾನಿ ಯೂ ಸ್ತಬ್ಧನೂ ಆಗಿ ಬಂದನು. ಅವನನ್ನು ತಂದೆ ಹೀಗೆಂದು ಕೇಳಿದನು :

## ಶ್ವೇತಕೇತು ಬ್ರಹ್ಮಚರ್ಯದಿಂದ ಹಿಂದಿರುಗಿದ್ದು

(ಭಾಷ್ಯ)

೪೪೫. ಸ ಪಿತ್ರಾ ಉಕ್ತಃ ಶ್ವೇತಕೇತುಃ ಹ ದ್ವಾದಶವರ್ಷಃ ಸನ್ ಉಪೇತ್ಯ ಆಚಾರ್ಯಂ ಯಾವತ್ ಚತುರ್ವಿಂಶತಿವರ್ಷೋ ಬಭೂವ ತಾವತ್ ಸರ್ವಾನ್ ವೇದಾನ್ ಚತುರೋಽಪಿ ಅಧೀತ್ಯ ತದರ್ಥಂ ಚ ಬುದ್ಧ್ವಾ ಮಹಾ ಮನಾಃ ಮಹದ್ ಗಂಭೀರಂ ಮನೋ ಯಸ್ಯ ಅಸಮಮ್ ಆತ್ಮಾನಂ ಅನ್ಯೈ ರ್ಮನ್ಯಮಾನಂ ಮನೋ ಯಸ್ಯ ಸೋಽಯಂ ಮಹಾಮನಾಃ । ಅನೂಚಾನ ಮಾನೀ ಅನೂಚಾನಮ್ ಆತ್ಮಾನಂ ಮನ್ಯತ ಇತ್ಯೇವಂಶೀಲೋ ಯಃ ಸೋಽನೂ ಚಾನಮಾನೀ । ಸ್ತಬ್ಧಃ ಅಪ್ರಣತಸ್ವಭಾವಃ ಏಯಾಯ ಗೃಹಮ್ । ತಮ್ ಏವಂಭೂತಂ ಹ ಆತ್ಮನೋ ಅನನುರೂಪಶೀಲಂ ಸ್ತಬ್ಧಂ ಮಾನಿನಂ ಪುತ್ರಂ ದೃಷ್ಟ್ವಾ ಪಿತಾ ಉವಾಚ ಸದ್ಧರ್ಮಾವತಾರಚಿಕೀರ್ಷಯಾ ॥

---

1. ವಿದ್ಯಾವಂತನಾಗಿದ್ದರೂ ಎಂದರ್ಥ.

(ಭಾಷ್ಯಾರ್ಥ)

ಆ ಶ್ವೇತಕೇತುವು ತಂದೆಯು (ಹೀಗೆಂದು) ಹೇಳಲು, ಹನ್ನೆರಡು ವರ್ಷದವನಾಗಿದ್ದು ಇಪ್ಪತ್ತನಾಲ್ಕುವರ್ಷದವನಾಗುವವರೆಗೂ ಅಲ್ಲಿಯವರೆಗೆ ಎಲ್ಲಾ ನಾಲ್ಕು ವೇದಗಳನ್ನೂ ಅಧ್ಯಯನಮಾಡಿ ಅವುಗಳ ಅರ್ಥವನ್ನೂ ತಿಳಿದುಕೊಂಡು[1] ಮಹಾಮನನೂ-ಮಹತ್ತಾದ ಗಂಭೀರವಾದ ಮನಸ್ಸುಳ್ಳವನು, ನಾನು ಮಿಕ್ಕವರಿಗೆ ಸಮಾನ(ಮಾತ್ರ)ನಲ್ಲವೆಂದು ತನ್ನನ್ನು ತಿಳಿದುಕೊಂಡವನು ಮಹಾಮನನು (ಅಂಥವನೂ), ಅನೂಚಾನಮಾನಿಯೂ- ತಾನು ಅನೂಚಾನನು[2] ಎಂದು ತಿಳಿದುಕೊಳ್ಳುವ ಸ್ವಭಾವದವನು ಯಾರೋ ಅವನು ಅನೂಚಾನಮಾನಿ, (ಅಂಥವನೂ), ಸ್ತಬ್ಧನೂ ಎಂದರೆ (ಮತ್ತೊಬ್ಬರಿಗೆ) ತಲೆಬಾಗದ ಸ್ವಭಾವದವನೂ (ಆಗಿ) ಮನೆಗೆ ಬಂದನು.

ಹೀಗೆ ತನಗೆ ಅನುರೂಪವಲ್ಲದ ಶೀಲವುಳ್ಳ ಸ್ತಬ್ಧನಾಗಿ ಅಭಿಮಾನಿಯಾಗಿರುವ ಆ ಪುತ್ರನನ್ನು ಕಂಡು ತಂದೆಯು (ಮಗನನ್ನು) ಸದ್ಧರ್ಮಕ್ಕೆ (ಅವನ ಬುದ್ಧಿಯನ್ನು) ಇಳಿಸಬೇಕೆಂಬ ಇಚ್ಛೆಯಿಂದ ಇಂತೆಂದನು[3]

## ಆತ್ಮೋಪದೇಶವನ್ನು ಪಡೆದಿದ್ದೀಯೋ ?- ಎಂದು ತಂದೆ ಕೇಳಿದ್ದು

(ಉಪನಿಷತ್ತು)

**ಶ್ವೇತಕೇತೋ ಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಗ್‌ಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ ಕಥಂ ನು ಭಗವಃ ಸ ಆದೇಶೋ ಭವತೀತಿ || ೩ ||**[4]

೩. 'ಶ್ವೇತಕೇತುವೆ, ಸೋಮ್ಯ, ಹೀಗೆ ಮಹಾಮನನೂ ಅನೂಚಾನಮಾನಿಯೂ ಸ್ತಬ್ಧನೂ ಆಗಿರುವೆಯಲ್ಲ, ಆ ಆದೇಶವನ್ನು

---

1. ವೇದವನ್ನು ಅಧ್ಯಯನಮಾಡಿದಮೇಲೆ ಅದರ ಅರ್ಥವನ್ನು ತಿಳಿದುಕೊಳ್ಳಬೇಕು ಎಂದು ಸ್ಮೃತಿ. ಜೈ.ಸೂ. ೧-೧-೧ರ ಶಾ.ಭಾ.ವನ್ನು ನೋಡಿ.

2. ಅಧ್ಯಯನಸಮರ್ಥನು.

3. ಸಮ್ಯಗ್ಜ್ಞಾನವುಳ್ಳವರು ಧರ್ಮಮಾರ್ಗವನ್ನು ಬಿಡುವದಿಲ್ಲವೆಂದು ಭಾವ.

4. ಆ|| ಪಾಠದಲ್ಲಿ ಸ ಹ . ತಮಾದೇಶಮಪ್ರಾಕ್ಷ್ಯಃ || ಇದು ೨ನೆಯ ಕಂಡಿಕೆ ; ಯೇನಾಶ್ರುತಂ ಭವತೀತಿ || ಇದು ಮೂರನೆಯ ಕಂಡಿಕೆ. ಆದರೆ ಅ|| ವಾ|| ತೇ|| ಪಾಠಗಳನ್ನನುಸರಿಸಿಯೇ ನಾವು ಇಲ್ಲಿ ಉಪನಿಷತ್ತಿನ ಮೂಲವನ್ನು ಬರೆದುಕೊಂಡಿರುತ್ತೇವೆ ; ಅದಕ್ಕನುಗುಣವಾಗಿಯೇ ಭಾಷ್ಯವನ್ನು ವಿಂಗಡಿಸಿಕೊಂಡಿರುತ್ತೇವೆ.

ಕೂಡ- ಯಾವದರಿಂದ ಅಶ್ರುತವಾದದ್ದು ಶ್ರುತವಾಗುವದೋ ಅಮತವಾದದ್ದು ಮತವೂ ಅವಿಜ್ಞಾತವಾದದ್ದು ವಿಜ್ಞಾತವೂ (ಆಗುವದೋ ಅದನ್ನುಕೂಡ)- ಕೇಳಿ (ತಿಳಿದು)ಕೊಂಡಿರುವೆಯಾ ?'
'ಭಗವಂತನೆ, ಆ ಆದೇಶವು ಹೇಗೆ ಇರುತ್ತದೆ ?'

## ಸರ್ವವನ್ನೂ ತಿಳಿದಂತೆ ಮಾಡುವ ಉಪದೇಶದ ವರ್ಣನೆ

(ಭಾಷ್ಯ)

೪೪೬ ಶ್ವೇತಕೇತೋ ಯನ್ನು ಇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸಿ, ಕಸ್ತೇಽತಿಶಯಃ ಪ್ರಾಪ್ತ ಉಪಾಧ್ಯಾಯಾತ್ ? ಉತ ಅಪಿ ತಮಾದೇಶಮ್ । ಆದಿಶ್ಯತ ಇತ್ಯಾದೇಶಃ । ಕೇವಲಶಾಸ್ತ್ರಾಚಾರ್ಯೋಪದೇಶಗಮ್ಯಮ್ ಇತ್ಯೇತತ್ । ಯೇನ ವಾ ಪರಂ ಬ್ರಹ್ಮ ಆದಿಶ್ಯತೇ ಸ ಆದೇಶಃ। ತಮ್ ಅಪ್ರಾಕ್ಷ್ಯಃ ಪೃಷ್ಟವಾನಸಿ ಆಚಾರ್ಯಮ್ । ತಮಾದೇಶಂ ವಿಶಿನಷ್ಟಿ। ಯೇನಾಽಽದೇಶೇನ ಶ್ರುತೇನ ಅಶ್ರುತಮಪಿ ಅನ್ಯಚ್ಛ್ರುತಂ ಭವತಿ । ಅಮತಂ ಮತಮ್, ಅತರ್ಕಿತಂ ತರ್ಕಿತಂ ಭವತಿ, ಅವಿಜ್ಞಾತಂ ವಿಜ್ಞಾತಮ್ ಅನಿಶ್ಚಿತಂ ನಿಶ್ಚಿತಂ ಭವತೀತಿ। ಸರ್ವಾನಪಿ ವೇದಾನಧೀತ್ಯ ಸರ್ವಂ ಚಾನ್ಯದ್ ವೇದ್ಯಮಧಿಗಮ್ಯಾಪ್ಯಕೃತಾರ್ಥ ಏವ ಭವತಿ ಯಾವದಾತ್ಮತತ್ತ್ವಂ ನ ಜಾನಾತೀತ್ಯಾಖ್ಯಾಯಿಕಾತೋಽವಗಮ್ಯತೇ। ತದೇತದದ್ಭುತಂ ಶ್ರುತ್ವಾಽಽಹ ಕಥಂ ನು ಏತದಪ್ರಸಿದ್ಧಮ್ ಅನ್ಯವಿಜ್ಞಾನೇನ ಅನ್ಯದ್ವಿಜ್ಞಾತಂ ಭವತೀತ್ಯೇವಂ ಮನ್ವಾನಃ ಪೃಚ್ಛತಿ ಕಥಂ ನು ಕೇನ ಪ್ರಕಾರೇಣ ಹೇ ಭಗವಃ ಸ ಆದೇಶೋ ಭವತೀತಿ ॥

(ಭಾಷ್ಯಾರ್ಥ)

ಶ್ವೇತಕೇತುವೆ, ಹೀಗೆ ಮಹಾಮನನೂ ಅನೂಚಾನಮಾನಿಯೂ ಸ್ತಬ್ಧನೂ ಆಗಿರುವೆಯಲ್ಲ, ಉಪಾಧ್ಯಾಯರಿಂದ ಯಾವ ಹೆಚ್ಚುಗಾರಿಕೆಯು (ನಿನಗೆ) ದೊರಕಿದೆ ? (ಉತ=ಅಪಿ) ಆ ಆದೇಶವನ್ನುಕೂಡ— ಆದಿಷ್ಟವಾಗುವದರಿಂದ ಆದೇಶವೆಂದು ಹೆಸರು, ಕೇವಲ ಶಾಸ್ತ್ರಾಚಾರ್ಯರ ಉಪದೇಶದಿಂದಲೇ ತಿಳಿಯಬರತಕ್ಕದ್ದು[1] ಎಂದು ಅಭಿಪ್ರಾಯ. ಅಥವಾ ಯಾವದರಿಂದ ಬ್ರಹ್ಮವನ್ನು ತಿಳಿಸಬಹುದೋ ಆ (ಉಪದೇಶವೇ) ಆದೇಶವು[2]— ಅದನ್ನು ಆಚಾರ್ಯರನ್ನು ಕೇಳಿ (ತಿಳಿದು)ಕೊಂಡಿರುತ್ತೀಯೇನು ? ಆ ಉಪದೇಶಕ್ಕೆ ವಿಶೇಷಣವನ್ನು ಹೇಳುತ್ತಾನೆ:

---

1. ಆದೇಶವೆಂದರೆ ಬ್ರಹ್ಮವು ; ಏಕೆಂದರೆ ಇದು ಆದೇಶದಿಂದ – ಉಪದೇಶದಿಂದ– ತಿಳಿಯಬರತಕ್ಕದ್ದೇ ಹೊರತು ಪ್ರತ್ಯಕ್ಷಾದಿಗಳಿಂದ ತಿಳಿಯಬರತಕ್ಕದ್ದಲ್ಲ.

2. ಉಪದೇಶವು, ಬ್ರಹ್ಮವನ್ನು ತಿಳಿಸುವ ಆಗಮದ ರೀತಿಯು.

ಯಾವ ಆದೇಶವನ್ನು ಶ್ರವಣಮಾಡಿದ್ದರಿಂದ ಮತ್ತೊಂದು ಅಶ್ರುತವಾದದ್ದು ಶ್ರುತವಾಗುವದೋ, ಅಮತವಾದದ್ದು ಮತವಾಗುವದೋ ಎಂದರೆ ತರ್ಕಮಾಡದ ಇದ್ದದ್ದನ್ನು ತರ್ಕಮಾಡಿದ್ದಾಗುವದೋ, ಅವಿಜ್ಞಾತವಾದದ್ದು ವಿಜ್ಞಾತವಾಗುವದೋ ಎಂದರೆ ಅನಿಶ್ಚಿತವಾದದ್ದು ನಿಶ್ಚಿತವಾದದ್ದಾಗುವದೋ (ಅದನ್ನು) ಕೇಳಿರುತ್ತೀಯೇನು ?

**ಸರ್ವವೇದಗಳನ್ನೂ ಅಧ್ಯಯನಮಾಡಿ ತಿಳಿಯತಕ್ಕ ಬೇರೆಯೆಲ್ಲವನ್ನೂ ತಿಳಿದುಕೊಂಡರೂ ಆತ್ಮತತ್ತ್ವವನ್ನು ಅರಿತುಕೊಳ್ಳದೆ ಇರುವವರೆಗೆ ಅಕೃತಾರ್ಥನೇ ಆಗಿರುತ್ತಾನೆ -ಎಂದು (ಈ) ಕಥೆಯಿಂದ ಗೊತ್ತಾಗುತ್ತದೆ.** ಆ ಈ ಅದ್ಭುತವನ್ನು ಕೇಳಿ (ಹೀಗೆ) ಅನ್ನುತ್ತಾನೆ: ಒಂದನ್ನು ಅರಿತರೆ ಮತ್ತೊಂದನ್ನು ಅರಿತುಕೊಂಡಂತೆ ಆಗುವದೆಂಬುದು ಅಪ್ರಸಿದ್ಧವು ಇದು ಹೇಗಾದೀತು ? -ಎಂದುಕೊಂಡು 'ಎಲೈ ಭಗವಂತನೆ, ಆ ಆದೇಶವು ಹೇಗೆ ಯಾವ ಪ್ರಕಾರದಿಂದ ಇರುತ್ತದೆ?' ಎಂದು ಕೇಳಿರುತ್ತಾನೆ.

## ಒಂದರ ಜ್ಞಾನದಿಂದ ಎಲ್ಲದರ ಜ್ಞಾನವಾಗುವದಕ್ಕೆ ದೃಷ್ಟಾಂತಗಳು

(ಉಪನಿಷತ್ತು)

**ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥ ೪ ॥**

**ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಗ್ಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಮ್ ॥ ೫ ॥**

**ಯಥಾ ಸೋಮ್ಯೈಕೇನ ನಖನಿಕೃನ್ತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಗ್ಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯಮೇವಗ್ಂ ಸೋಮ್ಯ ಸ ಆದೇಶೋ ಭವತೀತಿ ॥ ೬ ॥**

೪-೬. 'ಸೋಮ್ಯನೆ, ಹೇಗೆ ಒಂದು ಮೃತ್ಪಿಂಡವನ್ನು ಅರಿತುಕೊಂಡದ್ದರಿಂದ ಮೃನ್ಮಯವಾದದ್ದೆಲ್ಲವೂ ಅರಿಯಲ್ಪಟ್ಟದ್ದಾಗುವದೋ ವಿಕಾರವೆಂಬುದು ವಾಚಾರಮ್ಭಣವಾದ ನಾಮಧೇಯವೋ ಮೃತ್ತಿಕೆ

ಯೆಂಬುದೇ ಸತ್ಯವೋ ; ಸೋಮ್ಯನೆ, ಹೇಗೆ ಒಂದೇ ಲೋಹಮಣಿ ಯಿಂದ ಲೋಹಮಯವಾದದ್ದೆಲ್ಲವೂ ಅರಿಯಲ್ಪಟ್ಟದ್ದಾಗುವದೋ, ವಿಕಾರವೆಂಬುದು ವಾಚಾರಮ್ಭಣವಾದ ನಾಮಧೇಯವೋ ಲೋಹ ವೆಂಬುದೇ ಸತ್ಯವೋ ; ಸೋಮ್ಯನೆ, ಹೇಗೆ ಒಂದೇ ಉಗುರುಕತ್ತರಿ ಯಿಂದ ಕಬ್ಬಿಣದ್ದೆಲ್ಲವೂ ಅರಿಯಲ್ಪಟ್ಟದ್ದಾಗುವದೋ ವಿಕಾರವು ವಾಚಾರಂಭಣವಾದ ನಾಮಧೇಯವೋ ಕಬ್ಬಿಣವೆಂಬುದೇ ಸತ್ಯವೋ, ಹೀಗೆಯೇ ಸೋಮ್ಯನೆ, ಆ ಆದೇಶವು ಇರುತ್ತದೆ.'

## ಕಾರಣಗಳಿಗಿಂತ ಕಾರ್ಯವು ಬೇರೆಯಲ್ಲ

(ಭಾಷ್ಯ)

೪೪೭ ಯಥಾ ಸ ಆದೇಶೋ ಭವತಿ ತಚ್ಛೃಣು । ಹೇ ಸೋಮ್ಯ ಯಥಾ ಲೋಕೇ ಏಕೇನ ಮೃತ್ಪಿಣ್ಡೇನ ಕುಮ್ಭಾದಿಕಾರಣಭೂತೇನ[1] ವಿಜ್ಞಾತೇನ ಸರ್ವಮನ್ಯತ್ ತದ್ವಿಕಾರಜಾತಂ[2] ಮೃನ್ಮಯಂ ಮೃದ್ವಿಕಾರಜಾತಂ ಸ್ಯಾತ್ ವಿಜ್ಞಾತಂ ಸ್ಯಾತ್ । ಕಥಂ ಮೃತ್ಪಿಣ್ಡೇ ಕಾರಣೇ ವಿಜ್ಞಾತೇ ಕಾರ್ಯಮನ್ಯದ್ ವಿಜ್ಞಾತಂ ಸ್ಯಾತ್ ? ನೈಷ ದೋಷಃ । ಕಾರಣೇನಾನನ್ಯತ್ವಾತ್ ಕಾರ್ಯಸ್ಯ । ಯನ್ಮನ್ಯಸೇ ಅನ್ಯಸ್ಮಿನ್ ವಿಜ್ಞಾತೇ ಅನ್ಯನ್ನ ವಿಜ್ಞಾಯತ ಇತಿ । ಸತ್ಯಮೇವಂ ಸ್ಯಾತ್ ಯದ್ಯನ್ಯತ್ ಕಾರಣಾತ್ ಕಾರ್ಯಂ ಸ್ಯಾತ್, ನ ತ್ವೇವಮನ್ಯತ್ ಕಾರಣಾತ್ ಕಾರ್ಯಮ್ । ಕಥಂ ತರ್ಹಿ ಇದಂ 'ಲೋಕೇ ಇದಂ ಕಾರಣಮ್ । ಅಯಮಸ್ಯ ವಿಕಾರಃ ಇತಿ ? ಶೃಣು । ವಾಚಾರಮ್ಭಣಂ ವಾಗಾರಮ್ಭಣಂ ವಾಗಾಲಮ್ಬನಮ್ ಇತ್ಯೇತತ್ । ಕೋಸೌ ? ವಿಕಾರಃ । ನಾಮಧೇಯಮ್, ನಾಮೈವ ನಾಮಧೇಯಮ್ । ಸ್ವಾರ್ಥೇ ಧೇಯಪ್ರತ್ಯಯಃ । ವಾಗಾಲಮ್ಬನ ಮಾತ್ರಂ ನಾಮೈವ ಕೇವಲಂ ನ ವಿಕಾರೋ ನಾಮ ವಸ್ತ್ವಸ್ತಿ ಪರಮಾರ್ಥತಃ । ಮೃತ್ತಿಕೇತ್ಯೇವ ಮೃತ್ತಿಕೈವ ತು ಸತ್ಯಂ ವಸ್ತ್ವಸ್ತಿ । ಯಥಾ ಸೋಮ್ಯ ಏಕೇನ ಲೋಹಮಣಿನಾ ಸುವರ್ಣಪಿಣ್ಡೇನ ಸರ್ವಮನ್ಯದ್ ವಿಕಾರಜಾತಂ ಕಟಕಮುಕುಟ ಕೇಯೂರಾದಿವಿಜ್ಞಾತಂ ಸ್ಯಾತ್ । ವಾಚಾ ಆರಮ್ಭಣಮ್ ಇತ್ಯಾದಿಸಮಾನಮ್ । ಯಥಾ ಸೋಮ್ಯ ಏಕೇನ ನಖನಿಕೃನ್ತನೇನೋಪಲಕ್ಷಿತೇನ ಕೃಷ್ಣಾಯಸ ಪಿಣ್ಡೇನ ಇತ್ಯರ್ಥಃ । ಸರ್ವಂ ಕಾರ್ಷ್ಣಾಯಸಂ ಕೃಷ್ಣಾಯಸವಿಕಾರಜಾತಂ ವಿಜ್ಞಾತಂ ಸ್ಯಾತ್ । ಸಮಾನಮನ್ಯತ್ । ಅನೇಕದೃಷ್ಟಾನ್ತೋಪಾದಾನಂ

---

1. ಇಲ್ಲಿ ಅಚ್ಚಿನಲ್ಲಿರುವ ರುಚಕ ಎಂಬ ಮಾತನ್ನು ಬಿಟ್ಟುಬಿಟ್ಟಿದೇವೆ. ಅನುವಾದದ ಟಿಪ್ಪಣಿಯನ್ನು ನೋಡಿ.

ದಾರ್ಷ್ಟಾನ್ತಿಕಾನೇಕಭೇದಾನುಗಮಾರ್ಥಂ ದೃಢಪ್ರತೀತ್ಯರ್ಥಂ ಚ। ಏವಂ ಸೋಮ್ಯ ಸ ಆದೇಶೋ ಯೋ ಮಯೋಕ್ತೋ ಭವತಿ । ಇತ್ಯುಕ್ತವತಿ ಪಿತರಿ ಆಹ ಇತರಃ ॥

(ಭಾಷ್ಯಾರ್ಥ)

ಆ ಆದೇಶವು ಹೇಗೆ ಇರುತ್ತದೆಯೋ ಅದನ್ನು (ಹೇಳುತ್ತೇನೆ) ಕೇಳು. ಎಲೈ ಸೋಮ್ಯನೆ, ಲೋಕದಲ್ಲಿ ಹೇಗೆ ಗಡಿಗೆಯೇ[1] ಮುಂತಾದವಕ್ಕೆ ಕಾರಣ ವಾಗಿರುವ ಮಣ್ಣುಮುದ್ದೆಯೊಂದನ್ನೇ ತಿಳಿದುಕೊಂಡರೆ, ಎಲ್ಲವೂ ಮಿಕ್ಕ ಅದರ ವಿಕಾರಜಾತವು[2] ವೃನ್ಮಯವಾದದ್ದು ಮಣ್ಣಿನ ವಿಕಾರಜಾತವೂ ಅರಿಯಲ್ಪಟ್ಟ ದ್ದಾಗುವದೋ-

(ಆಕ್ಷೇಪ) .- ಮಣ್ಣಿನಮುದ್ದೆಯೆಂಬ ಕಾರಣವನ್ನು ಅರಿತುಕೊಂಡರೆ ಮತ್ತೊಂದಾದ ಕಾರ್ಯವೂ ಹೇಗೆ ಅರಿಯಲ್ಪಟ್ಟೀತು ?

(ಪರಿಹಾರ) .- ಇದೇನೂ ದೋಷವಲ್ಲ ಏಕೆಂದರೆ ಕಾರ್ಯವು ಕಾರಣ ಕ್ಕಿಂತ ಅನನ್ಯವಾಗಿದೆ. ಒಂದನ್ನು ಅರಿತರೆ ಮತ್ತೊಂದು ಅರಿಯಲ್ಪಟ್ಟದ್ದಾಗ ಲಾರದು ಎಂದು ಎಣಿಸಿರುವೆಯಷ್ಟೆ ? ಕಾರಣಕ್ಕಿಂತ ಕಾರ್ಯವು ಬೇರೆಯಾಗಿದ್ದರೆ ನಿಜ, ಹೀಗೆ (ಆಗಲಾರದು) ಎಂದಾಗುತ್ತಿತ್ತು. ಆದರೆ ಹಾಗೆ ಕಾರಣಕ್ಕಿಂತ ಕಾರ್ಯವು ಬೇರೆಯಲ್ಲ[3]

(ಆಕ್ಷೇಪ) .- 'ಇದು ಕಾರಣವು, ಇದು ಇದರ ವಿಕಾರವು' ಎಂದು ಲೋಕದಲ್ಲಿ ಈ (ವ್ಯವಹಾರವಿದೆಯಲ್ಲ, ಅದು) ಹೇಗೆ (ಸರಿ) ?

(ಪರಿಹಾರ) :- ಕೇಳು . ವಾಚಾರಮ್ಭಣವು ವಾಕ್ಕಿನ ಆರಂಭಣವು, ವಾಕ್ಕಿಗೆ ಆಲಂಬನವಾಗಿರುವದು ಎಂದು ಅಭಿಪ್ರಾಯ.[4] ಅದು ಯಾವದು ? ಎಂದರೆ ವಿಕಾರವು. ನಾಮಧೇಯವು, ನಾಮವೇ ನಾಮಧೇಯವೆನಿಸುವದು ,

---

1. ರುಚಕಕುಮ್ಭಾದಿ- ಎಂಬುದಕ್ಕೆ ಅಸಲಿ, ಗಡಿಗೆ-ಎಂದರ್ಥ ; ಆದರೆ ಮಣ್ಣಿನಿಂದ ಅಸಲಿಯಾಗುವದಿಲ್ಲವಾದ್ದರಿಂದ ಇದು ಬರೆದವರ ಕೈತಪ್ಪೆಂದು ತಿಳಿದು ಬಿಟ್ಟುಬಿಟ್ಟಿದೆ.

2. ‹ತದ್ವಿಕಾರಜಾತಮ್› ಎಂಬುದರ ಅನುವಾದವಿದು. ಇದೂ ಅಲ್ಲದೆ ಅನ್ಯತ್ (ಮಿಕ್ಕದ್ದು) ಎಂದಿಷ್ಟೇ ಇದ್ದರೂ ಅರ್ಥವೇನೂ ಹೆಚ್ಚುಕಡಿಮೆಯಾಗುವದಿಲ್ಲ.

3. ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ. ಬ್ರಹ್ಮಕ್ಕಿಂತ ಜಗತ್ತು ಬೇರೆಯಲ್ಲ, ಎಂಬುದನ್ನು ಸ್ಥಾಪಿಸುವ ಯುಕ್ತಿಗಳನ್ನು ಸೂ. ಭಾ. ೨-೧-೧೪ರಿಂದ ೨೦ರವರೆಗೆ ಕೊಟ್ಟು ಚರ್ಚಿಸಿದೆ.

4 ಆಲಂಬನ ಎಂಬರ್ಥವು ಸೂ ಭಾ. ದಲ್ಲಿಲ್ಲ. ಬರಿಯ ಮಾತಿನಿಂದಲೇ ಆಗಿರುತ್ತದೆ ಎಂದಿಷ್ಟೇ ಅಲ್ಲಿ ಹೇಳಿದೆ.

(ಇಲ್ಲಿ) ಧೇಯಪ್ರತ್ಯಯವು ಸ್ವಾರ್ಥದಲ್ಲಿ ಬಂದಿರುತ್ತದೆ. ವಾಗಾಲಂಬನಮಾತ್ರವಾಗಿರುವ ಬರಿಯ ಹೆಸರೇ, ವಿಕಾರವೆಂಬ ವಸ್ತುವು (ಬೇರೆ) ಪರಮಾರ್ಥವಾಗಿ ಇಲ್ಲ. ಮೃತ್ತಿಕೆಯೆಂಬುದೇ ಮಣ್ಣೇ ಸತ್ಯವಾದ ವಸ್ತುವಾಗಿದೆ.

ಎಲೈ, ಸೋಮ್ಯ, ಹೇಗೆ ಲೋಹಮಣಿಯೊಂದರಿಂದಲೇ ಚಿನ್ನದ ಗಟ್ಟಿ(ಯೊಂದ)ರಿಂದಲೇ ಮಿಕ್ಕ ಕಡಗ, ಕಿರೀಟ, ತೋಳಬಂದಿ –ಮುಂತಾದ ವಿಕಾರಜಾತವೆಲ್ಲವೂ ಅರಿಯಲ್ಪಟ್ಟದ್ದಾಗುವದೋ , 'ವಾಚಾರಮ್ಭಣಂ' ಮುಂತಾದ ಗ್ರಂಥವು (ಹಿಂದಿನದಕ್ಕೆ) ಸಮಾನವಾಗಿರುತ್ತದೆ.

ಎಲೈ ಸೋಮ್ಯನೆ, ಹೇಗೆ ಒಂದು ಉಗುರುಗತ್ತಿಯನ್ನು ಕಂಡುಕೊಂಡರೆ ಕಬ್ಬಿಣದ ಗಟ್ಟಿಯನ್ನು (ಅರಿತು)ಕೊಂಡದ್ದರಿಂದ ಎಂದರ್ಥ. ಕಬ್ಬಿಣದ್ದೆಲ್ಲವೂ ಕಬ್ಬಿಣದ ವಿಕಾರಜಾತವೆಲ್ಲವೂ ಅರಿಯಲ್ಪಟ್ಟದ್ದಾಗುವದೋ—(ಇಲ್ಲಿಂದ ಮುಂದಕ್ಕಿರುವ) ಮಿಕ್ಕ (ಗ್ರಂಥವು ಹಿಂದಿನದಕ್ಕೆ) ಸಮಾನವಾಗಿರುತ್ತದೆ

ಅನೇಕ ದೃಷ್ಟಾಂತಗಳನ್ನು ತೆಗೆದುಕೊಂಡು (ಹೇಳಿರು)ವದು ದಾರ್ಷ್ಟಾಂತಿಕದಲ್ಲಿ ಅನೇಕ ಭೇದಗಳಲ್ಲೆಲ್ಲ ಅನುಗಮವನ್ನು (ತಿಳಿಸು)ವದಕ್ಕೆ, ಮತ್ತು ಗಟ್ಟಿಯಾಗಿ ತಿಳಿಯಲೆಂದು [1] ಎಲೈ ಸೋಮ್ಯನೆ, ನಾನು ಹೇಳಿದೆನಲ್ಲ ಆ ಆದೇಶವು ಹೀಗೆ ಇರುತ್ತದೆ [2] ಹೀಗೆಂದು ತಂದೆಯು ಹೇಳಲು ಇನ್ನೊಬ್ಬನಾದ (ಆ ಶ್ವೇತಕೇತು)ವಿಂತೆಂದನು [3]

## ಶ್ವೇತಕೇತುವು ತಂದೆಯನ್ನು ಉಪದೇಶಮಾಡಬೇಕೆಂದು ಕೇಳಿಕೊಂಡದ್ದು

(ಉಪನಿಷತ್ತು)

**ನ ವೈ ನೂನಂ ಭಗವನ್ತಸ್ತ ಏತದವೇದಿಷುರ್ಯದ್ಧ್ಯೇತದವೇದಿಷ್ಯನ್ ಕಥಂ ಮೇ ನಾವಕ್ಷ್ಯನ್ನಿತಿ ಭಗವಾಗ್‌ಂಸ್ತ್ವೇವ ಮೇ ತದ್ಬ್ರವೀತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೭ ॥**

---

1. ಬಗೆಬಗೆಯ ವಿಕಾರಗಳಲ್ಲೆಲ್ಲ ಬ್ರಹ್ಮವು ಅನುಗತವಾಗಿವೆ ಎಂದು ತಿಳಿಸುವದಕ್ಕೂ ಕಾರಣವಾದದ್ದು ಕಾರ್ಯದಲ್ಲಿ ಅನುಗತವೇ ಆಗಿದೆ ಎಂಬ ವ್ಯಾಪ್ತಿಯು ಚೆನ್ನಾಗಿ ಮನಸ್ಸಿಗೆ ಹಿಡಿಯುವವದಕ್ಕೂ ಅನುಕೂಲಿಸಲೆಂದು ಅನೇಕ ದೃಷ್ಟಾಂತಗಳನ್ನು ಕೊಟ್ಟಿದೆ.

2. ಈ ದೃಷ್ಟಾಂತಗಳಂತೆಯೇ ಜಗತ್ತಿನ ಸರ್ವವಿಶೇಷಗಳಿಗೂ ಉಪಾದಾನವೂ ಅವುಗಳಲ್ಲಿ ಅನುಗತವಾಗಿರುವ ಪರಮಾರ್ಥವೇ ನಾನು ಹೇಳಿದ ಆದೇಶವು.

3. ಇದು ಮುಂದಿನ ವಾಕ್ಯಕ್ಕೆ ಸಂಬಂಧಪಟ್ಟದ್ದು.

೭. '(ಆ) ಭಗವಂತರು ನಿಜವಾಗಿ ಅದನ್ನು ಅರಿತಿರಲಿಲ್ಲ (ವೇನೊ). ಇದನ್ನು (ಅವರು) ಅರಿತಿದ್ದರೆ ನನಗೆ ಹೇಗೆತಾನೆ ಹೇಳಿ ಕೊಡದೆ ಇರುತ್ತಿದ್ದರು? ಭಗವಂತನಾದ (ನೀನೇ) ನನಗೆ ಅದನ್ನು ಹೇಳಿಕೊಡಬೇಕು'. 'ಸೋಮ್ಯನೆ, ಹಾಗೇ ಆಗಲಿ' ಎಂದನು.

## ಶ್ವೇತಕೇತು ತಂದೆಯನ್ನು ಉಪದೇಶವನ್ನು ಮಾಡುವಂತೆ ಕೇಳಿಕೊಂಡದ್ದು

(ಭಾಷ್ಯ)

೪೪೮. ನ ವೈ ನೂನಂ ಭಗವನ್ತಃ ಪೂಜಾವನ್ತೋ ಗುರವೋ ಮಮ ಯೇ ತೇ ಏತದ್ ಯದ್ಭವದುಕ್ತಂ ವಸ್ತು ನಾವೇದಿಷುಃ ನ ವಿಜ್ಞಾತವನ್ತೋ ನೂನಮ್। ಯದ್ ಯದಿ ಹಿ ಅವೇದಿಷ್ಯನ್ ವಿದಿತವನ್ತಃ ಏತದ್ ವಸ್ತು ಕಥಂ ಮೇ ಗುಣವತೇ ಭಕ್ತಾಯ ಅನುಗತಾಯ ನಾವಕ್ಷ್ಯನ್ ನೋಕ್ತವನ್ತಃ। ತೇ ನಾಽಹಂ ಮನ್ಯೇ ನ ವಿದಿತವನ್ತ ಇತಿ । ಅವಾಚ್ಯಮಪಿ ಗುರೋರ್ನ್ಯಗ್ಭಾವಮ್ ಅವಾದೀತ್। ಪುನರ್ಗುರುಕಾಲಂ ಪ್ರತಿ ಪ್ರೇಷಣಭಯಾತ್ । ಅತೋ ಭಗವಾಂ ಸ್ತ್ವೇವ ಮೇ ಮಹ್ಯಂ ತದ್ ವಸ್ತು ಯೇನ ಸರ್ವಜ್ಞತ್ವಂ ಜ್ಞಾತೇನ ಮೇ ಸ್ಯಾತ್ ತದ್ಬ್ರವೀತು ಕಥಯತು। ಇತ್ಯುಕ್ತಃ ಪಿತೋವಾಚ ತಥಾಸ್ತು ಸೋಮ್ಯೇತಿ ॥

(ಭಾಷ್ಯಾರ್ಥ)

ಭಗವಂತರಾದ ಪೂಜಾವಂತರಾದ ನನ್ನ ಗುರುಗಳಿದಾರಲ್ಲ, ನಿಜವಾಗಿ ಅವರು ಇವನ್ನು ಅರಿತಿರಲಿಲ್ಲ(ವೇನೊ), ತಿಳಿದಿರಲಿಲ್ಲವಾಗಿರಬೇಕು (ಯತ್=ಯದಿ) ಈ ವಸ್ತುವನ್ನು (ಅವರು) ಅರಿತಿದ್ದಿದ್ದರೆ ತಿಳಿದುಕೊಂಡಿದ್ದರೆ ಗುಣವಂತನೂ ಭಕ್ತನೂ ಅನುಸರಿಸಿಕೊಂಡಿರುವವನೂ ಆದ ನನಗೆ ಹೇಗೆ ಹೇಳಿಕೊಡದೆ ಇರುತ್ತಿದ್ದರು, ತಿಳಿಸಿಕೊಡದೆ ಇರುತ್ತಿದ್ದರು ? ಇದರಿಂದ (ಅವರಿಗೆ) ಇದು ತಿಳಿದಿರಲಿಲ್ಲವೆಂದು ನಾನು ಎಣಿಸುತ್ತೇನೆ- ಎಂದು ಗುರುವಿನ ಕೀಳ್ಮೆಯನ್ನು ಹೇಳಬಾರದಾದರೂ (ತಂದೆಯು) ಮತ್ತೆ ಗುರುಕುಲಕ್ಕೆ ಕಳುಹಿಸಿಯಾನೆಂಬ ಅಂಜಿಕೆಯಿಂದ, ಹೇಳಿದನು. ಆದ್ದರಿಂದ ಭಗವಂತನಾದ ನೀನೇ (ಮೇ=ಮಹ್ಯಮ್) ನನಗಾಗಿ ಆ ವಸ್ತುವನ್ನು—ಯಾವದನ್ನರಿತರೆ ನಾನು ಎಲ್ಲವನ್ನೂ ಅರಿತಂತೆ ಆಗುವದೋ ಅದನ್ನು—ಹೇಳಬೇಕು, ತಿಳಿಸಿಕೊಡಬೇಕು.

ಹೀಗೆನ್ನಲು ತಂದೆಯು 'ಸೋಮ್ಯನೆ, ಹಾಗೇ ಆಗಲಿ !' ಎಂದನು.

---

# ಆರನೆಯ ಅಧ್ಯಾಯ-ಎರಡನೆಯ ಖಂಡ

(ಅದ್ವಿತೀಯಸತ್ತಿನಿಂದಲೇ ಎಲ್ಲದರ ಸೃಷ್ಟಿ)

## ಅದ್ವಿತೀಯಸತ್ತಿನಿಂದಲೇ ಎಲ್ಲವೂ ಆಗಿದೆ

(ಉಪನಿಷತ್ತು)

**ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ।**
**ತದ್ಧೈಕ ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ**
**ತಸ್ಮಾದಸತಃ ಸಜ್ಜಾಯತ ॥ ೧ ॥**

೧. ಸೋಮ್ಯನೆ, ಇದು ಮೊದಲು ಎರಡನೆಯದಿಲ್ಲದ ಒಂದೇ ಆದ ಸತ್ತೇ ಆಗಿತ್ತು. 'ಅಲ್ಲಿ ಕೆಲವರು ಹೀಗೆಂದು ಹೇಳುತ್ತಾರೆ : ಇದು ಮೊದಲು ಎರಡನೆಯದಿಲ್ಲವ ಒಂದೇ ಆದ ಅಸತ್ತೇ ಆಗಿತ್ತು, ಆ ಅಸತ್ತಿನಿಂದ ಸತ್ತು ಉಂಟಾಯಿತು.

## ಸೃಷ್ಟಿಗೆ ಪೂರ್ವದಲ್ಲಿ ಅದ್ವಿತೀಯವಾದ ಸನ್ಮಾತ್ರ

(ಭಾಷ್ಯ)

೪೪೯. ಸದೇವ। ಸದಿತಿ ಅಸ್ತಿತಾಮಾತ್ರಂ ವಸ್ತು ಸೂಕ್ಷ್ಮಂ ನಿರ್ವಿಶೇಷಂ ಸರ್ವಗತಮ್ ಏಕಂ ನಿರಞ್ಜನಂ ನಿರವಯವಂ ವಿಜ್ಞಾನಂ ಯದವಗಮ್ಯತೇ ಸರ್ವ ವೇದಾನ್ತೇಭ್ಯಃ। ಏವಶಬ್ದೋಽವಧಾರಣಾರ್ಥಃ । ಕಿಂ ತದವಧ್ರಿಯತೇ ಇತಿ ? ಆಹ। ಇದಂ ಜಗತ್ ನಾಮರೂಪಕ್ರಿಯಾವದ್ ವಿಕೃತಮುಪಲಭ್ಯತೇ ಯತ್ ತತ್ ಸದೇವ ಆಸೀತ್ ಇತಿ ಆಸೀಚ್ಛಬ್ದೇನ ಸಂಬಧ್ಯತೇ । ಕದಾ ಸದೇವೇದ ಮಾಸೀದಿತಿ ? ಉಚ್ಯತೇ । ಅಗ್ರೇ ಜಗತಃ ಪ್ರಾಗುತ್ಪತ್ತೇಃ। ಕಿಂ ನೇದಾನೀ ಮಿದಂ ಸತ್, ಯೇನ 'ಅಗ್ರೇ ಆಸೀತ್' ಇತಿ ವಿಶೇಷ್ಯತೇ ? ನ। ಕಥಂ ತರ್ಹಿ ವಿಶೇಷಣಮ್ ? ಇದಾನೀಮಪಿ ಇದಂ ಸದೇವ ಕಿಂ ತು ನಾಮರೂಪವಿಶೇಷ(ಣ) ವತ್[1] ಇದಂಶಬ್ದಬುದ್ಧಿವಿಷಯಂ ಚ ಇತೀದಂ ಚ ಭವತಿ । ಪ್ರಾಗುತ್ಪತ್ತೇಸ್ತು ಅಗ್ರೇ ಕೇವಲಸಚ್ಛಬ್ದಬುದ್ಧಿಮಾತ್ರಗಮ್ಯಮೇವೇತಿ 'ಸದೇವೇದಮಗ್ರ ಆಸೀತ್' ಇತ್ಯವಧಾರ್ಯತೇ । ನ ಹಿ ಪ್ರಾಗುತ್ಪತ್ತೇರ್ನಾಮವದ್ ರೂಪವದ್ವಾ ಇದಮಿತಿ ಗ್ರಹೀತುಂ ಶಕ್ಯಂ ಸುಷುಪ್ತಕಾಲ ಇವ। ಯಥಾ ಸುಷುಪ್ತಾದುತ್ಥಿತಃ ಸತ್ತ್ವಮಾತ್ರಮವಗಚ್ಛತಿ 'ಸುಷುಪ್ತೇ ಸನ್ಮಾತ್ರಮೇವ ಕೇವಲಂ ವಸ್ತು' ಇತಿ

1. ನಾಮರೂಪವಿಶೇಷವತ್ ಎಂದಿಷ್ಟೇ ಇದ್ದರೆ ಸಾಕಾಗಿತ್ತೆಂದು ತೋರುತ್ತದೆ ; ಅನುವಾದದ ಟಿಪ್ಪಣಿಯನ್ನು ನೋಡಿರಿ.

ತಥಾ ಪ್ರಾಗುತ್ಪತ್ತೇರಿತ್ಯಭಿಪ್ರಾಯಃ। ಯಥೇದಮುಚ್ಯತೇ ಲೋಕೇ ಪೂರ್ವಾಹ್ಣೇ ಘಟಾದಿ ಸಿಸೃಕ್ಷುಣಾ ಕುಲಾಲೇನ ಮೃತ್ಪಿಂಡಂ ಪ್ರಸಾರಿತಮ್ ಉಪಲಭ್ಯ ಗ್ರಾಮಾನ್ತರಂ ಗತ್ವಾ ಪ್ರತ್ಯಾಗತೋಽಪರಾಹ್ಣೇ ತತ್ರೈವ ಘಟಶರಾವಾದ್ಯನೇಕಭೇದಭಿನ್ನಂ ಕಾರ್ಯಮುಪಲಭ್ಯ 'ಮೃದೇವೇದಂ ಘಟಶರಾವಾದಿ ಕೇವಲಂ ಪೂರ್ವಾಹ್ಣ ಆಸೀತ್' ಇತಿ, ತಥಾ ಇಹಾಪ್ಯುಚ್ಯತೇ ಸದೇವೇದಮಗ್ರ ಆಸೀದಿತಿ। ಏಕಮೇವೇತಿ। ಸ್ವಕಾರ್ಯಪತಿತಮನ್ಯನ್ನಾಸ್ತಿ ಇತ್ಯೇಕಮೇವೇತ್ಯುಚ್ಯತೇ। ಅದ್ವಿತೀಯಮಿತಿ। ಮೃದ್ವ್ಯತಿರೇಕೇಣ ಮೃದೋ ಯಥಾ ಅನ್ಯದ್ ಘಟಾದ್ಯಾಕಾರೇಣ ಪರಿಣಮಯಿತೃ ಕುಲಾಲಾದಿನಿಮಿತ್ತಕಾರಣಂ ದೃಷ್ಟಮ್, ತಥಾ ಸದ್ವ್ಯತಿರೇಕೇಣ ಸತಃ ಸಹಕಾರಿಕಾರಣಂ ದ್ವಿತೀಯಂ ವಸ್ತ್ವನ್ತರಂ ಪ್ರಾಪ್ತಂ ಪ್ರತಿಷಿಧ್ಯತೇ ಅದ್ವಿತೀಯಮ್' ಇತಿ। ನಾಸ್ಯ ದ್ವಿತೀಯಂ ವಸ್ತ್ವನ್ತರಂ ವಿದ್ಯತ ಇತ್ಯದ್ವಿತೀಯಮ್ ॥

(ಭಾಷ್ಯಾರ್ಥ)

ಸತ್ತೇ (ಆಗಿತ್ತು) **ಸತ್ತು ಎಂದರೆ ಬರಿಯ ಇರವಾಗಿರುವ[1] ವಸ್ತು, ಸೂಕ್ಷ್ಮವೂ[2] ನಿರ್ವಿಶೇಷವೂ[3] ಸರ್ವಗತವೂ ಒಂದೇ ಒಂದೂ ಮತ್ತೊಂದರ ಅಂಟಿಲ್ಲದ್ದೂ ಯಾವ ಅವಯವವೂ ಇಲ್ಲದ್ದೂ ಆದ ಚೈತನ್ಯವು;** ಸರ್ವವೇದಾಂತಗಳಿಂದಲೂ ಗೊತ್ತಾಗಿ ತಿಳಿಯಬರುವ (ಆತ್ಮವಸ್ತು).[4]

ಏವ (ಎಂಬ) ಶಬ್ದವು ಒತ್ತಿಹೇಳುವದಕ್ಕೆ. (ಇಲ್ಲಿ) ಒತ್ತಿಹೇಳಿದೆಯಲ್ಲ, ಅದು ಯಾವದು? ಎಂದರೆ (ಶ್ರುತಿ) ಹೇಳುತ್ತದೆ ನಾಮರೂಪಕರ್ಮಗಳುಳ್ಳದ್ದಾಗಿ ವಿಕಾರರೂಪವಾಗಿ ಕಾಣುತ್ತಿರುವದಲ್ಲ, ಈ (ಜಗತ್ತು) ಸತ್ತೇ ಆಗಿತ್ತು ಎಂದು (ಮುಂದಿರುವ) 'ಆಗಿತ್ತು' ಎಂಬ ಶಬ್ದಕ್ಕೆ ಸಂಬಂಧಿಸಿರುತ್ತದ

ಇದು ಯಾವಾಗ ಸತ್ತೇ ಆಗಿತ್ತು? ಎಂದರೆ (ಶ್ರುತಿ) ಹೇಳುತ್ತದೆ: ಮೊದಲು, ಜಗತ್ತು ಹುಟ್ಟುವ ಮೊದಲು[5] (ಎಂದರ್ಥ).

---

1. ಸತ್ತಾಸಾಮಾನ್ಯವೆಂದು ತಾರ್ಕಿಕರು ಹೇಳುವದಲ್ಲವೆಂಬುದನ್ನು ಸೂಚಿಸುವದಕ್ಕೆ ಹೀಗೆಂದಿದೆ. 2. ಅತೀಂದ್ರಿಯವೂ.

3. ದ್ರವ್ಯ, ಗುಣ, ಕರ್ಮ -ಮುಂತಾದ ಶಬ್ದಪ್ರವೃತ್ತಿನಿಮಿತ್ತಗಳು ಯಾವವೂ ಇಲ್ಲದ.

4. ಇಲ್ಲಿ ಸತ್ತೆಂದಿರುವದು ಬೃ. ೪-೩-೭ ಮುಂತಾದ ವೇದಾಂತವಾಕ್ಯಗಳಲ್ಲಿ ಹೇಳಿರುವ ಆತ್ಮನೇ ಎಂದು ಸೂ. ಭಾ. ೧-೩-೧೬ (ಭಾ ಭಾ. ೩೪೮ರಿಂದ ೩೫೦)ರಲ್ಲಿ ನಿರ್ಣಯಿಸಿದೆ.

5. ಇಲ್ಲಿ 'ಮೊದಲು' ಎಂದಿರುವದು ಕಾಲಾವಚ್ಛಿನ್ನವಾದ ಸೃಷ್ಟಿಯ ದೃಷ್ಟಿಯಿಂದ, ನಿಜವಾಗಿ ಪ್ರಲಯದಲ್ಲಿ ಕಾಲವೂ ಇರುವದಿಲ್ಲ.

(ಆಕ್ಷೇಪ) :- (ಹಾಗಾದರೆ) ಈ (ಜಗತ್ತು) ಈಗ ಸತ್ತಲ್ಲವೇನು ? 'ಮೊದಲು' (ಸತ್ತೇ) ಆಗಿತ್ತು ಎಂದು ವಿಶೇಷಣವನ್ನು (ಕೊಟ್ಟಿದೆ)ಯಲ್ಲ !

(ಪರಿಹಾರ) – ಹಾಗೇನೂ ಅಲ್ಲ ಹಾಗಾದರೆ (ಈ) ವಿಶೇಷಣವನ್ನು ಕೊಟ್ಟದ್ದು ಹೇಗೆ (ಸರಿ) ? –ಎಂದರೆ, ಈಗಲೂ ಈ (ಜಗತ್ತು) ಸತ್ತೇ ; ಆದರೆ ನಾಮರೂಪಗಳೆಂಬ ವಿಶೇಷಣಗಳಿಂದೊಡಗೂಡಿಯೂ[1] ಇದು ಎಂಬ ಶಬ್ದಬುದ್ಧಿಗಳಿಗೆ ವಿಷಯನಾಗಿಯೂ ಇದೆ, ಉತ್ಪತ್ತಿಗಿಂತ ಮುಂಚೆಯಾಗಿರುವಾಗ ಮೊದಲೊ ಎಂದರೆ ಬರಿಯ ಸತ್ತೆಂಬ ಶಬ್ದಬುದ್ಧಿಗಳಿಂದ ಮಾತ್ರವೇ ತಿಳಿಯಬರತಕ್ಕದ್ದಾಗಿರುವದರಿಂದ[2] ಇದು ಮೊದಲು ಸತ್ತೇ ಆಗಿತ್ತು ಎಂದು ಒತ್ತಿಹೇಳಿರುತ್ತದೆ. ಮುಂಚೆ ವಸ್ತುವು ನಾಮವುಳ್ಳದ್ದು, ಅಥವಾ ರೂಪವುಳ್ಳದ್ದು, 'ಇದು' ಎಂದು ಗ್ರಹಿಸುವದಕ್ಕೆ ಶಕ್ಯವಲ್ಲವಷ್ಟೆ ? ಸುಷುಪ್ತಿಕಾಲದಲ್ಲಿ ಹೇಗೋ ಹಾಗೆಯೇ ಇದು. (ಇದರ ವಿವರ) : **ಹೇಗೆ ಸುಷುಪ್ತದಿಂದ ಎಚ್ಚತ್ತವನು 'ತನಿನಿದ್ರೆಯಲ್ಲಿ ವಸ್ತುವು ಸನ್ಮಾತ್ರವೇ (ಆಗಿತ್ತು)' ಎಂದು ಹೇಗೆ ಇರವನ್ನು ಮಾತ್ರ ನಿಶ್ಚಯಿಸುತ್ತಾನೋ ಹೀಗೆಯೇ ಉತ್ಪತ್ತಿಗೆ ಮುಂಚೆಯೂ (ಎಂದು ಗ್ರಹಿಸಬೇಕು) ಎಂದಭಿಪ್ರಾಯ.** ಗಡಿಗೆಯೇ ಮುಂತಾದದ್ದನ್ನು ಮಾಡಬೇಕೆಂದಿಚ್ಛಿಸುವ ಕುಂಬಾರನು ಮಣ್ಣುಮುದ್ದೆಯನ್ನು ಹರಡಿರುವದನ್ನು ಬೆಳಗ್ಗೆ ಕಂಡು, ಬೇರೊಂದೂರಿಗೆ ಹೋಗಿದ್ದು ಹಿಂತಿರುಗಿದವನು ಅಪರಾಹ್ಣದಲ್ಲಿ ಅಲ್ಲಿಯೇ ಗಡಿಗೆ, ಶ್ರಾವೆ–ಮುಂತಾದ ಅನೇಕ ವಿಶೇಷಗಳಿಂದ ಬೇರಬೇರೆಯಾಗಿರುವ ಕಾರ್ಯವನ್ನು ಕಂಡು 'ಬೆಳಗ್ಗೆ ಈ ಗಡಿಗೆ, ಶ್ರಾವೆ– ಮುಂತಾದದ್ದು ಬರಿಯ ಮಣ್ಣೇ ಆಗಿತ್ತು' ಎಂದು ಹೇಗೆ ಲೋಕದಲ್ಲಿ ಹೇಳುತ್ತಾನೋ ಹಾಗೆಯೇ ಇಲ್ಲಿಯೂ 'ಇದು ಮೊದಲು ಸತ್ತೇ ಆಗಿತ್ತು' ಎಂದಿರುತ್ತದೆ.[3]

ಒಂದೇ : ತನ್ನ ಕಾರ್ಯದೊಳಗೆ ಸೇರಿರುವ ಮತ್ತೊಂದು ವಸ್ತು ಇಲ್ಲವಾದ್ದರಿಂದ 'ಒಂದೇ' ಎಂದಿದೆ. ಎರಡನೆಯದಿಲ್ಲದ . ಮಣ್ಣಿಗಿಂತ ವ್ಯತಿರಿಕ್ತವಾಗಿ ಮಣ್ಣಿಗೆ ಗಡಿಗೆ ಮುಂತಾದ ಬೇರೊಂದು ಆಕಾರದಿಂದ ಪರಿಣಾಮಗೊಳಿಸುವ ಕುಂಬಾರನೇ ಮುಂತಾದ ಬೇರೊಂದು ನಿಮಿತ್ತಕಾರಣ(ವಿರುವದು) ಹೇಗೆ ಕಂಡಿದೆಯೋ ಹಾಗೆ ಸತ್ತಿಗಿಂತ ವ್ಯತಿರಿಕ್ತವಾಗಿ ಸತ್ತಿಗೆ ಸಹಕಾರಿಯಾದ

---

1. ನಾಮರೂಪಗಳೆಂಬ ವಿಶೇಷಗಳಿಂದ 'ಎಂದಿಷ್ಟೇ ಇದ್ದರೆ ಸಾಕು ; ಏಕೆಂದರೆ ನಾಮರೂಪಗಳೆಂಬ ವಿಶೇಷಗಳಿರುವ ಜಗತ್ತು ಅವುಗಳಿಗಿಂತ ಬೇರೆಯಾಗಿಲ್ಲ.

2. ಸೃಷ್ಟಿಯ ದೃಷ್ಟಿಯಿಂದ ಅದನ್ನು ಸನ್ಮಾತ್ರವೆಂದು ತಿಳಿಯಬೇಕು, ಕರೆಯಬೇಕು.

3. ಬ್ರಹ್ಮವು ನಿಜವಾಗಿ ಕಾರಣವೂ ಅಲ್ಲ, ಸಚ್ಛಬ್ದವಾಚ್ಯವೂ ಅಲ್ಲ ; ಆದರೂ ಅದರಲ್ಲಿ ಕಾರಣತ್ವವನ್ನೂ ಇರವನ್ನೂ ಅಧ್ಯಾರೋಪಮಾಡಿ ಅದನ್ನು ಕಾರಣವೆಂದೂ ಸತ್ತೆಂದೂ ಇಲ್ಲಿ ಹೇಳಿರುವದು ಕಾರ್ಯವಲ್ಲ, ಅಸತ್ತಲ್ಲ– ಎಂದು ತಿಳಿಸುವದಕ್ಕೇ

ಎರಡನೆಯ ಕಾರಣವು (ಇರಬಹುದು ಎಂದು) ಬಂದೊದಗುವದರಿಂದ 'ಅದ್ವಿತೀಯವು' ಎಂದು ಅದನ್ನು ಅಲ್ಲಗಳೆದಿದೆ. ಇದಕ್ಕೆ ಎರಡನೆಯದಾಗಿ ಮತ್ತೊಂದು ವಸ್ತುವಿಲ್ಲವಾದ್ದರಿಂದ ಇದು ಅದ್ವಿತೀಯವು[1]

## ಶ್ರುತಿಯಲ್ಲಿರುವದು ವೈಶೇಷಿಕರ ಸತ್ತಾಸಾಮಾನ್ಯವಲ್ಲ

(ಭಾಷ್ಯ)

೪೫೦ ನನು ವೈಶೇಷಿಕಪಕ್ಷೇಽಪಿ ಸತ್ಸಾಮಾನಾಧಿಕರಣ್ಯಂ ಸರ್ವಸ್ಯೋಪಪದ್ಯತೇ। ದ್ರವ್ಯಗುಣಾದಿಷು ಸಚ್ಛಬ್ದಬುದ್ಧ್ಯನುವೃತ್ತೇಃ। ಸದ್ ದ್ರವ್ಯಂ ಸನ್ ಗುಣಃ ಸತ್ ಕರ್ಮ- ಇತ್ಯಾದಿದರ್ಶನಾತ್। ಸತ್ಯಮೇವಂ ಸ್ಯಾದಿದಾನೀಮ್। ಪ್ರಾಗುತ್ಪತ್ತೇಸ್ತು ನೈವೇದಂ ಕಾರ್ಯಂ ಸದೇವಾಸೀತ್ ಇತ್ಯಭ್ಯುಪಗಮ್ಯತೇ ವೈಶೇಷಿಕೈಃ। ಪ್ರಾಗುತ್ಪತ್ತೇಃ ಕಾರ್ಯಸ್ಯ ಅಸತ್ತ್ವಾಭ್ಯುಪಗಮಾತ್ । ನ ಚೈಕಮೇವ ಸದದ್ವಿತೀಯಂ ಪ್ರಾಗುತ್ಪತ್ತೇರಿಚ್ಛನ್ತಿ। ತಸ್ಮಾದ್ ವೈಶೇಷಿಕಪರಿಕಲ್ಪಿತಾತ್ ಸತೋಽನ್ಯತ್ ಕಾರಣಮಿದಂ ಸದುಚ್ಯತೇ। ಮೃದಾದಿದೃಷ್ಟಾನ್ತೇಭ್ಯಃ ॥

(ಭಾಷ್ಯಾರ್ಥ)

(ಆಕ್ಷೇಪ) – ವೈಶೇಷಿಕರ ಪಕ್ಷದಲ್ಲಿಯೂ ಎಲ್ಲದರೊಡನೆ ಸತ್ತು ಸಮಾನಾಧಿಕರಣವಾಗಿರುವದು ಹೊಂದುತ್ತದೆಯಲ್ಲ, ಏಕೆಂದರೆ ಇರುವ ದ್ರವ್ಯ, ಇರುವ ಗುಣ, ಇರುವ ಕರ್ಮ- ಎಂದು ಮುಂತಾಗಿ ಕಂಡುಬರುತ್ತದೆಯಲ್ಲವೆ[2] ?

(ಪರಿಹಾರ) .– ನಿಜ, ಈಗ ಹೀಗೆ ಆಗಬಹುದು. ಆದರೆ ಉತ್ಪತ್ತಿಗಿಂತ ಮುಂಚೆ ಈ ಕಾರ್ಯವು ಸತ್ತೇ ಆಗಿತ್ತೆಂದು ವೈಶೇಷಿಕರು ಒಪ್ಪುವದಿಲ್ಲ, ಏಕೆಂದರೆ (ಅವರು) ಉತ್ಪತ್ತಿಗಿಂತ ಮುಂಚೆ ಕಾರ್ಯವು ಅಸತ್ತಾಗಿತ್ತೆಂದು ಸ್ವೀಕರಿಸಿರುತ್ತಾರೆ[3] (ಅವರು) ಎರಡನೆಯದಿಲ್ಲದ ಸತ್ತು ಒಂದೇ ಇತ್ತು ಎಂಬುದನ್ನು ಒಪ್ಪುವದಿಲ್ಲ[4] ಆದ್ದರಿಂದ ವೈಶೇಷಿಕರು ಕಲ್ಪಿಸಿಕೊಂಡಿರುವ ಸತ್ತಿಗಿಂತ[5] ಬೇರೆಯಾದ ಕಾರಣವನ್ನೇ ಈ ಸತ್ತೆಂದು ಹೇಳಿರುತ್ತದೆ, ಮಣ್ಣು ಮುಂತಾದ ದೃಷ್ಟಾಂತಗಳಿಂದ (ಹೀಗೆಂದು ಒಪ್ಪಬೇಕು).[6]

---

1. ಸದ್ಬ್ರಹ್ಮವು ನಿಜವಾಗಿ ಸಜಾತೀಯ, ವಿಜಾತೀಯ, ಸ್ವಗತ –ಎಂಬ ಯಾವ ದ್ವೈತವೂ ಇಲ್ಲದ್ದು ಎಂಬ ಭಾವವು 'ಏಕಮೇವಾದ್ವಿತೀಯಮ್' ಎಂಬ ವಿಶೇಷಣದಲ್ಲಿ ಅಡಗಿದೆ.

2. ಆದ್ದರಿಂದ ವೈಶೇಷಿಕರ ಪಕ್ಷವೂ ಶ್ರುತಿಸಮ್ಮತವೆನ್ನಬಹುದಾಯಿತಲ್ಲ !

3. ಕಾರ್ಯವು ಮೊದಲು ಇರುವದಿಲ್ಲ, ಹುಟ್ಟಿದಮೇಲೆ ಸತ್ತೆಯನ್ನೂ ಕಾರಣದೊಡನೆ ಸಂಬಂಧವನ್ನೂ ಪಡೆಯುತ್ತದೆ ಎಂಬುದು ವೈಶೇಷಿಕರ ಮತ.

4. ಪರಮಾಣುಗಳು ಮುಂತಾದವೂ ಪ್ರಲಯದಲ್ಲಿದ್ದವೆಂದು ಅವರು ಹೇಳಿರುತ್ತಾರೆ.

5. ಸತ್ತಾಸಾಮಾನ್ಯಕ್ಕಿಂತ.

6. ಇಲ್ಲಿ ಪರಿಣಾಮಿಕಾರಣಗಳನ್ನು ಹೇಳಿರುವದರಿಂದ ಕಾರಣವೇ ಕಾರ್ಯವಾಯಿತೆಂಬ ಮತವು ಸೂಚಿತವಾಗಿದೆ; ಇದು ವೈಶೇಷಿಕರ ಅಸತ್ಕಾರ್ಯವಾದಕ್ಕೆ ವಿರುದ್ಧ

# ಬೌದ್ಧರ ಅಸತ್ಕಾರ್ಯವಾದದಲ್ಲಿ ದೋಷ

(ಭಾಷ್ಯ)

೪೫೧ ತತ್ ತತ್ರ ಹ ಏತಸ್ಮಿನ್ ಪ್ರಾಗುತ್ಪತ್ತೇರ್ವಸ್ತುನಿರೂಪಣೇ ಏಕೇ ವೈನಾಶಿಕಾ ಆಹುರ್ವಸ್ತು ನಿರೂಪಯನ್ತಃ। ಅಸತ್ ಸದಭಾವಮಾತ್ರಂ ಪ್ರಾಗುತ್ಪತ್ತೇಃ ಇದಂ ಜಗತ್ ಏಕಮೇವ ಅಗ್ರೇ ಅದ್ವಿತೀಯಮ್ ಆಸೀತ್ ಇತಿ। ಸದಭಾವಮಾತ್ರಂ ಹಿ ಪ್ರಾಗುತ್ಪತ್ತೇಃ ತತ್ತ್ವಂ ಕಲ್ಪಯನ್ತಿ ಬೌದ್ಧಾಃ। ನ ತು ಸತ್ಪ್ರತಿದ್ವಂದ್ವಿ ವಸ್ತ್ವನ್ತರಮಿಚ್ಛನ್ತಿ। ಯಥಾ ಅಸಚ್ಚ[1] ಅಸದಿತಿ ಗೃಹ್ಯ ಮಾಣಂ ಯಥಾಭೂತಂ ತದ್ವಿಪರೀತಂ ತತ್ತ್ವಂ ಭವತೀತಿ ನೈಯಾಯಿಕಾಃ। ನನು ಸದಭಾವಮಾತ್ರಂ ಪ್ರಾಗುತ್ಪತ್ತೇಶ್ಚೇದಭಿಪ್ರೇತಂ ವೈನಾಶಿಕೈಃ ಕಥಂ ಪ್ರಾಗುತ್ಪತ್ತೇರಿದಮ್ ಆಸೀತ್ ಅಸದೇಕಮೇವಾದ್ವಿತೀಯಂ ಚ ಇತಿ ಕಾಲ ಸಂಬನ್ಧಃ ಸಂಖ್ಯಾಸಂಬನ್ಧೋಽದ್ವಿತೀಯತ್ವಂ ಚ ಉಚ್ಯತೇ ತೈಃ। ಬಾಢಮ್, ನ ಯುಕ್ತಂ ತೇಷಾಂ ಭಾವಾಭಾವಮಾತ್ರಮಭ್ಯುಪಗಚ್ಛತಾಮ್। ಅಸತ್ತ್ವ ಮಾತ್ರಾಭ್ಯುಪಗಮೋಽಪಿ ಅಯುಕ್ತ ಏವ। ಅಭ್ಯುಪಗನ್ತುರನಭ್ಯುಪಗಮಾನು ಪಪತ್ತೇಃ। ಇದಾನೀಮ್ ಅಭ್ಯುಪಗನ್ತಾ ಅಭ್ಯುಪಗಮ್ಯತೇ, ನ ಪ್ರಾಗುತ್ಪತ್ತೇರಿತಿ ಚೇತ್। ನ। ಪ್ರಾಗುತ್ಪತ್ತೇಃ ಸದಭಾವಸ್ಯ ಪ್ರಮಾಣಾಭಾವಾತ್। ಪ್ರಾಗುತ್ಪತ್ತೇ ರಸದೇವ ಇತಿ ಕಲ್ಪನಾನುಪಪತ್ತಿಃ॥

(ಭಾಷ್ಯಾರ್ಥ)

(ತತ್-ತತ್ರ) ಇಲ್ಲಿ, ಉತ್ಪತ್ತಿಗಿಂತ ಮೊದಲು (ಇದ್ದ) ವಸ್ತುವಿನ ಈ ನಿರೂಪಣೆಯಲ್ಲಿ ಕೆಲವರು ವೈನಾಶಿಕರು[2] ವಸ್ತುವನ್ನು ನಿರೂಪಣೆಮಾಡಿ (ಹೀಗೆ)ನ್ನುತ್ತಿದಾರೆ : ಈ ಜಗತ್ತು ಮೊದಲು ಹುಟ್ಟುವ ಮುಂಚೆ ತನಗೆರಡನೆಯ ದಿಲ್ಲದ ಒಂದೇಆದ ಅಸತ್ತೇ, ಎಂದರೆ ಸತ್ತಿನ ಅಭಾವಮಾತ್ರವೇ, ಆಗಿತ್ತು, ಹುಟ್ಟುವಮುಂಚೆ ಸತ್ತಿನ ಅಭಾವಮಾತ್ರವೇ ತತ್ತ್ವವಾಗಿತ್ತು ಎಂದು ಬೌದ್ಧರು ಕಲ್ಪಿಸುತ್ತಿದಾರೆ, ಅಸತ್ತೆಂಬುದೂ ಅಸತ್ತೆಂದು ಗ್ರಹಿಸಲ್ಪಡುವ ಆ (ಸತ್ತಿಗಿಂತ) ವಿಪರೀತವಾದ ಯಥಾಭೂತತತ್ತ್ವವೇ ಆಗಿರುತ್ತದೆ[3] ಎಂದು ನೈಯಾಯಿಕರು ಹೇಗೆ (ಒಪ್ಪುತ್ತಾರೋ) ಹಾಗೆ (ಈ ಬೌದ್ಧರು) ಸತ್ತಿಗೆ ಪ್ರತಿದ್ವಂದ್ವಿಯಾದ ಬೇರೊಂದು ವಸ್ತುವನ್ನು ಒಪ್ಪುವದಿಲ್ಲ[4].

---

1. ಸಚ್ಚ ಎಂದು ಟೀಕಾಸಮ್ಮತವಾದ ಪಾಠಕ್ಕಿಂತ ಈ ಪಾಠವೇ ಸರಳವಾಗಿ ಅನ್ವಯ ವಾಗುತ್ತದೆ. ಅನುವಾದದ ಟಿಪ್ಪಣಿಯನ್ನು ನೋಡಿ. 2. ಬೌದ್ಧರು.

3. ಸತ್ತೆಂದು ಗ್ರಹಿಸಲ್ಪಡುವದು ಹೇಗೆ ಒಂದು ವಸ್ತುವೋ ಹಾಗೆಯೇ ಅಸತ್ತೆಂದು ಗ್ರಹಿಸಲ್ಪಡುವದೂ ಅದಕ್ಕೆ ವಿರುದ್ಧವಾಗಿ ಒಂದು ವಸ್ತುವೇ ಎಂಬುದು ನೈಯಾಯಿಕರ ಮತ.

4. ನೈಯಾಯಿಕಮತದಲ್ಲಿ ಸತ್ತೆಂಬುದರಂತೆ ಅಸತ್ತೆಂಬುದೂ ಒಂದು ವಸ್ತು; ಸತ್ತಲ್ಲದ್ದು ಅಸತ್ತು. ಬೌದ್ಧರ ಮತದಲ್ಲಿ ಸತ್ತು ಇಲ್ಲದಿರುವದೇ ಅಸತ್ತು, ಅದೊಂದು ಪದಾರ್ಥವಲ್ಲ. ಮೊದಲು ಇಲ್ಲದಿದ್ದ ಕಾರ್ಯವು ಹೊಸದಾಗಿ ಹುಟ್ಟುವದೆಂಬುದು ಇಬ್ಬರಿಗೂ ಸಮಾನವಾದ ವಾದ

(ಪ್ರಶ್ನೆ) :- ಉತ್ಪತ್ತಿಗಿಂತ ಮೊದಲು ಸತ್ತಿನ ಅಭಾವಮಾತ್ರವೇ ಎಂಬುದು ವೈನಾಶಿಕರ ಮತವಾದರೆ 'ಉತ್ಪತ್ತಿಗಿಂತ ಮೊದಲು ಇದು ಇತ್ತು, ತನಗೆರಡನೆಯದಿಲ್ಲದ ಒಂದೇ ಆಗಿತ್ತು' – ಎಂದು (ಅಸತ್ತಿಗೆ) ಕಾಲಸಂಬಂಧವನ್ನೂ ಸಂಖ್ಯಾಸಂಬಂಧವನ್ನೂ ಅದ್ವಿತೀಯತ್ವವನ್ನೂ ಹೇಳುವದು ಹೇಗೆ ಸರಿ ?

(ಉತ್ತರ) :- ನಿಜ, (ಅಸತ್ತೆಂದರೆ) ಭಾವದ ಅಭಾವಮಾತ್ರವೇ ಎಂದು ಒಪ್ಪಿರುವದರಿಂದ ಅವರು (ಹೀಗೆ ಕಾಲಸಂಖ್ಯಾಸಂಬಂಧವನ್ನು ಹೇಳುವದು) ಸರಿಯಲ್ಲ (ಆಗ) ಅಸತ್ತುಮಾತ್ರವೇ ಎಂದು ಒಪ್ಪಿರುವದೂ ಅಯುಕ್ತವೇ, ಏಕೆಂದರೆ (ಹಾಗೆಂದು) ಒಪ್ಪಿರುವವನನ್ನು ಒಪ್ಪದೆ ಇರುವದು ಸರಿಯಾಗಲಾರದು[1]

(ಬೌದ್ಧ) :- ಈಗ ಒಪ್ಪುವವನನ್ನು (ನಾವು) ಒಪ್ಪಿರುತ್ತೇವೆ, ಉತ್ಪತ್ತಿಗಿಂತ ಮೊದಲು (ಒಪ್ಪುವದಿಲ್ಲ)

(ಸಿದ್ಧಾಂತಿ) :- ಹಾಗಲ್ಲ. ಉತ್ಪತ್ತಿಗಿಂತ ಮೊದಲು ಸತ್ತಿನ ಅಭಾವವಿರುವದೆಂಬುದಕ್ಕೆ (ನಿಮಗೆ) ಯಾವ ಪ್ರಮಾಣವೂ ಇಲ್ಲವಾದ್ದರಿಂದ[2] ಉತ್ಪತ್ತಿಗಿಂತ ಮೊದಲು ಅಸತ್ತೇ ಎಂದು ಕಲ್ಪಿಸುವದು ಹೊಂದುವದಿಲ್ಲ.

## ತನಗೆರಡನೆಯದಿಲ್ಲದ ಅಸತ್ತೊಂದೇ ಎಂಬ ವಾಕ್ಯದ ಪ್ರಾಮಾಣ್ಯ ಹೇಗೆ?

(ಭಾಷ್ಯ)

೪೫೨. ನನು ಕಥಂ ವಸ್ತ್ವಾಕೃತೇಃ ಶಬ್ದಾರ್ಥತ್ವೇ 'ಅಸದೇಕಮೇವಾದ್ವಿತೀಯಮ್' ಇತಿ ಪದಾರ್ಥವಾಕ್ಯಾರ್ಥೋಪಪತ್ತಿಃ ? ತದನುಪಪತ್ತೌ ಚ ಇದಂ ವಾಕ್ಯಮ್ ಅಪ್ರಮಾಣಂ ಪ್ರಸಜ್ಯೇತ ಇತಿ ಚೇತ್ । ನೈಷ ದೋಷಃ । ಸದ್ಗ್ರಹಣನಿವೃತ್ತಿಪರತ್ವಾತ್ ವಾಕ್ಯಸ್ಯ । ಸದಿತ್ಯಯಂ ತಾವಚ್ಛಬ್ದಃ ಸದಾಕೃತಿವಾಚಕಃ । ಏಕಮೇವಾದ್ವಿತೀಯಮಿತ್ಯೇತೌ ಚ ಸಚ್ಛಬ್ದೇನ ಸಮಾನಾಧಿಕರಣೌ । ತಥಾ ಇದಮ್ ಆಸೀದಿತಿ ಚ । ತತ್ರ ನಞ್ ಸದ್ವಾಕ್ಯೇ ಪ್ರಯುಕ್ತಃ ಸದ್ವಾಕ್ಯಮೇವಾವಲಮ್ಬ್ಯ ಸದ್ವಾಕ್ಯಾರ್ಥವಿಷಯಾಂ ಬುದ್ಧಿಂ ಸದೇಕಮೇವಾದ್ವಿತೀಯ

---

1. ಅಸತ್ತಿಗೆ–ಅಭಾವಮಾತ್ರಕ್ಕೆ– ಇರುವಿಕೆ, ಕಾಲ, ಸಂಖ್ಯೆ– ಇವೆಲ್ಲ ಹೇಗೆ ಹೊಂದುತ್ತವೆ ?

2. ಯಾವದೂ ಇಲ್ಲವೆಂಬ ಸಾಕ್ಷಿಯನ್ನು ಒಪ್ಪದಿರುವ ಬೌದ್ಧರಿಗೆ ಅಸತ್ತೂ ಸಿದ್ಧಿಸುವದಿಲ್ಲ.

3. ಉತ್ಪತ್ತಿಗಿಂತ ಮೊದಲು ಪ್ರಮಾಣಪ್ರಮೇಯವ್ಯವಹಾರವೇ ಇಲ್ಲವೆಂಬುದು ಬೌದ್ಧರ ಮತ.

ಮಿದಮ್ ಆಸೀತ್ ಇತ್ಯೇವಂಲಕ್ಷಣಾಂ ತತಃ ಸದ್ವಾಕ್ಯಾರ್ಥಾತ್ ನಿವರ್ತಯತಿ ಅಶ್ವಾರೂಢ ಇವ ಅಶ್ವಾಲಮ್ಬನೋಽಶ್ವಂ ತದಭಿಮುಖವಿಷಯಾನ್ನಿವರ್ತಯತಿ ತದ್ವತ್[1]। ನ ತು ಪುನಃ ಸದಭಾವಮೇವಾಭಿವತ್ತೇ । ಅತಃ ಪುರುಷಸ್ಯ ವಿಪರೀತ ಗ್ರಹಣನಿವೃತ್ತ್ಯರ್ಥಪರಮಿದಮ್ ಅಸದೇವೇತ್ಯಾದಿವಾಕ್ಯಂ ಪ್ರಯುಜ್ಯತೇ । ದರ್ಶಯಿತ್ವಾ ಹಿ ವಿಪರೀತಗ್ರಹಣಂ ತತೋ ನಿವರ್ತಯಿತುಂ ಶಕ್ಯತ ಇತ್ಯರ್ಥ ವತ್ತ್ವಾತ್ ಅಸದಾದಿವಾಕ್ಯಸ್ಯ ಶ್ರೌತತ್ವಂ ಪ್ರಾಮಾಣ್ಯಂ ಚ ಸಿದ್ಧಮಿತ್ಯದೋಷಃ । ತಸ್ಮಾತ್ ಅಸತಃ ಸರ್ವಾಭಾವರೂಪಾತ್ ಸದ್ ವಿದ್ಯಮಾನಮ್ ಜಾಯತ ಸಮುತ್ಪನ್ನಮ್। ಅಡಭಾವಶ್ಛಾನ್ದಸಃ ॥

(ಭಾಷ್ಯಾರ್ಥ)

(ಆಕ್ಷೇಪ) .– ವಸ್ತುವಿನ ಆಕೃತಿಯೇ ಶಬ್ದದ ‹ಅರ್ಥವಾಗಿರುವಲ್ಲಿ[2] 'ತನಗೆರಡನೆಯದಿಲ್ಲದ ಅಸತ್ತೊಂದೇ' ಎಂಬುದು ಪದಾರ್ಥವೂ ವಾಕ್ಯಾರ್ಥವೂ ಆಗುವದು ಹೇಗೆ ?[3] ಅದು ಆಗದೆ ಇದ್ದರೆ ಈ ವಾಕ್ಯವು ಅಪ್ರಮಾಣವೆಂದೇ ಆಗುವದಲ್ಲ ![4]

(ಪರಿಹಾರ) .– ಇದೇನೂ ದೋಷವಲ್ಲ ಏಕೆಂದರೆ ಈ ವಾಕ್ಯವು ಸತ್ತೆಂದು ಗ್ರಹಿಸುವದನ್ನು ತಪ್ಪಿಸುವದರಲ್ಲಿ ತಾತ್ಪರ್ಯವುಳ್ಳದ್ದಾಗಿದೆ. (ಇದರ ವಿವರ) . ಮೊದಲನೆಯದಾಗಿ ಸತ್ತು ಎಂಬ ಶಬ್ದವು ಸತ್ತೆಂಬ ಆಕೃತಿಯನ್ನು ಹೇಳುತ್ತದೆ, 'ಏಕಮೇವ' (ಒಂದೇ), ಅದ್ವಿತೀಯಮ್ (ತನಗೆರಡನೆಯದಿಲ್ಲದ್ದು)– ಎಂಬೀ (ಶಬ್ದಗಳು) ಸತ್ತೆಂಬ ಶಬ್ದದೊಡನೆ ಸಮಾನಾಧಿಕರಣವಾಗಿರುತ್ತದೆ. ಇದರಂತೆ

1. ಈ ವಾಕ್ಯವು ಏನೋ ಹೆಚ್ಚುಕಡಿಮೆಯಾಗಿದೆ. ಇವಶಬ್ದಪ್ರಯೋಗವಿದ್ದರೆ ವಿಷಯಾತ್ – ಎಂಬಲ್ಲಿಗೆ ವಾಕ್ಯವು ಪರಿಸಮಾಪ್ತವಾಗುತ್ತದೆ. ಇವಶಬ್ದವನ್ನು ಬಿಟ್ಟರೆ ‹ತದ್ವತ್' ಎಂಬುದರ ಬದಲು ಯದ್ವತ್ ಎಂದಿರಬೇಕು. ಟೀಕೆಯಲ್ಲಿ ‹ಇವಶಬ್ದವು ಯದ್ವತ್ ಎಂಬರ್ಥದಲ್ಲಿ ಬಂದಿದೆ' ಎಂದು ಬರೆದಿದೆ.

2 ಆಕೃತಿಯೆಂದರೆ ದ್ರವ್ಯಗುಣಕರ್ಮಗಳ ಸಾಮಾನ್ಯವು, ವ್ಯಕ್ತಿ ಎಂದರೆ ಅಸಾಧಾರಣವಿಶೇಷವು. ಗೋವು ಎಂಬಲ್ಲಿ ಗೋಸಾಮಾನ್ಯವು ಶಬ್ದಾರ್ಥವೆ, ಗೋವ್ಯಕ್ತಿಯು ಶಬ್ದಾರ್ಥವೆ ?– ಎಂಬಿದನ್ನು ವಿಚಾರಮಾಡಿ ಆಕೃತಿಯೇ ಶಬ್ದಾರ್ಥವೆಂದು ಜೈಮಿನೀಯಸೂತ್ರ ಶಾ. ಭಾ ೧–೩–೩೨ರಲ್ಲಿ ನಿರ್ಣಯಿಸಿದೆ. ಈ ಅಭಿಪ್ರಾಯವನ್ನು ವೇದಾಂತಿಗಳೂ ಒಪ್ಪಿರುತ್ತಾರೆ. ಸೂ. ಭಾ. ೧–೩–೨೮ (ಭಾ. ಭಾ. ೨೮೬ನ್ನು) ನೋಡಿ.

3. ಅಸತ್ತೆಂಬುದು ಬರಿಯ ಅಭಾವವಾದ್ದರಿಂದ ಅದರ ಆಕೃತಿಯೆಲ್ಲಿ ಬಂತು ? ಅದಿಲ್ಲದಿದ್ದರೆ ಅಸತ್ತೆಂಬ ಪದಾರ್ಥವೇ ಇಲ್ಲ, ಆ ಪದಾರ್ಥಸಂಬಂಧವುಳ್ಳ ವಾಕ್ಯಾರ್ಥವೂ ಇಲ್ಲ– ಎಂದಾಯಿತಲ್ಲ '

4. ಏಕೆಂದರೆ ಈ ವಾಕ್ಯವು ಯಾವ ಅರ್ಥವನ್ನೂ ಹೇಳುವದಿಲ್ಲವಾಗಿ ಅಬೋಧಕತ್ವವೆಂಬ ಅಪ್ರಾಮಾಣ್ಯವು ಬಂದೊದಗುತ್ತದೆ.

'ಇದು', 'ಇತ್ತು'- ಎಂಬ ಶಬ್ದಗಳೂ (ಅದರೊಡನೆ ಸಮಾನಾಧಿಕರಣವಾಗಿರುತ್ತವೆ)[1] ಇಲ್ಲಿರುವ ನಞ್(ಪದವು) ಸದ್ವಾಕ್ಯದಲ್ಲಿ ಪ್ರಯುಕ್ತವಾಗಿರುವದರಿಂದ ಸದ್ವಾಕ್ಯವನ್ನೇ ಆಶ್ರಯಿಸಿಕೊಂಡು- ಸತ್ತೊಂದೇ ತನಗೆರಡನೆಯದಿಲ್ಲದೆ ಇತ್ತು ಎಂಬೀ ರೂಪದ- ಸದ್ವಾಕ್ಯಾರ್ಥದ ವಿಷಯವಾದ ಬುದ್ಧಿಯನ್ನು ಆ ಸದ್ವಾಕ್ಯಾರ್ಥದಿಂದ ತೊಲಗಿಸುತ್ತದೆ. ಕುದುರೆಯನ್ನೇರಿದವನು ಕುದುರೆಯನ್ನು ಆಶ್ರಯಿಸಿಕೊಂಡು ಕುದುರೆಯನ್ನು ಅದರ ಮುಂದಿರುವ ವಿಷಯದಿಂದ ಹಿಂತಿರುಗಿಸುತ್ತಾನಲ್ಲ, ಹಾಗೆ. ಇಷ್ಟೇ ಹೊರತು (ಈ ಪದವು) ಸತ್ತಿನ ಅಭಾವವನ್ನೇ ಹೇಳುವದಿಲ್ಲ[2] ಆದ್ದರಿಂದ ಈ 'ಅಸದೇವ' (ಅಸತ್ತೆಂದೇ) ಎಂದು ಮುಂತಾಗಿರುವ ಈ ವಾಕ್ಯವು ಮನುಷ್ಯನ ತಪ್ಪುತಿಳಿವಳಿಕೆಯನ್ನು ತೊಲಗಿಸುವದಕ್ಕಾಗಿ ಪ್ರಯೋಗಿಸಲ್ಪಟ್ಟಿರುತ್ತದೆ[3] ತಪ್ಪುತಿಳಿವಳಿಕೆಯನ್ನು ತೋರಿಸಿಕೊಟ್ಟಲ್ಲನೆ, ಅದರಿಂದ ಹಿಂತಿರುಗಿಸುವದಕ್ಕೆ ಆಗುತ್ತದೆ? ಆದ್ದರಿಂದ ಪ್ರಯೋಜನವುಳ್ಳದ್ದಾಗಿರುವದರಿಂದ ಅಸದಾದಿ ವಾಕ್ಯವು ಶ್ರೌತವೆಂದೂ ಪ್ರಮಾಣವೆಂದೂ ಸಿದ್ಧವಾಯಿತಾಗಿ (ಇಲ್ಲಿ ಯಾವ) ದೋಷವೂ ಇರುವದಿಲ್ಲ[4]

ಆ ಸರ್ವಾಭಾವರೂಪವಾದ ಅಸತ್ತಿನಿಂದ ಸತ್ತು ಇರುವ (ವಸ್ತು) ಹುಟ್ಟಿತು (ಎಂದು ಹೇಳುತ್ತಾರೆ ಎಂದರ್ಥ. ಇಲ್ಲಿ ಜಾಯತ ಎಂಬಲ್ಲಿ) ಅಕಾರವಿಲ್ಲದೆ ಇರುವದು ವೈದಿಕಪ್ರಯೋಗವು.

(ಉಪನಿಷತ್ತು)

**ಕುತಸ್ತು ಖಲು ಸೋಮ್ಯೈವಗ್ಂ ಸ್ಯಾದಿತಿ ಹೋವಾಚ ಕಥಮಸತಃ ಸಜ್ಜಾಯೇತೇತಿ। ಸತ್ತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ॥ ೨ ॥**

---

1. ಆದ್ದರಿಂದ ಅದ್ವಿತೀಯವಾದ ಸತ್ತೊಂದೇ ಮೊದಲು ಇತ್ತು- ಎಂಬ ವಾಕ್ಯಕ್ಕೆ ಅರ್ಥವಿದೆ.

2. ಅಸತ್ತೆಂಬ ಪದಾರ್ಥವನ್ನು ಹೇಳುವದಿಲ್ಲ, ಸತ್ತೆಂಬ ಪದಾರ್ಥದ ಬುದ್ಧಿಯನ್ನು ತೆಗೆಯುತ್ತದೆ.

3. ಕಾರ್ಯವು ಉಂಟಾಗುವ ಮೊದಲು ಇರುವದೇ ಇಲ್ಲವೆಂದು ಸಾಮಾನ್ಯವಾಗಿ ಜನರು ತಪ್ಪಾಗಿ ತಿಳಿದುಕೊಳ್ಳುತ್ತಾರೆ; ಆ ತಪ್ಪುತಿಳಿವನ್ನು ತೊಲಗಿಸುವದಕ್ಕಾಗಿ ಇದನ್ನು ಇಲ್ಲಿ ಅನುವಾದಮಾಡಿಕೊಂಡಿದೆ.

4. ಈ ವಾಕ್ಯಕ್ಕೆ ಅಸದ್ವಾದಿಗಳ ತಪ್ಪುತಿಳಿವಳಿಕೆಯನ್ನು ತೊಲಗಿಸುವದೆಂಬ ಪ್ರಯೋಜನವಿದೆ; ಸತ್ತಿನ ನಿಷೇಧವನ್ನು ತಿಳಿಸುವ ಪದವಿರುವದರಿಂದ ಅಬೋಧಕತ್ವವೆಂಬ ಅಪ್ರಾಮಾಣ್ಯವೂ ಇಲ್ಲ. ವೇದವು ಅರ್ಥಶೂನ್ಯವಾದ ವಾಕ್ಯವನ್ನು ಹೇಳಲಾರದಾದ್ದರಿಂದ ಇದು ವೇದಕ್ಕೆ ವಿವಕ್ಷಿತವಲ್ಲ- ಎಂದು ಹೇಳುವದಕ್ಕೆ ಬರುವಂತಿಲ್ಲ, ಏಕೆಂದರೆ ಇಲ್ಲಿ ವಿವಕ್ಷಿತಾರ್ಥವೂ ಇದೆ- ಎಂದು ಅಭಿಪ್ರಾಯ.

೨. ಸೋಮ್ಯನೆ, ಏತರಿಂದತಾನೆ ಹೀಗೆ ಆದೀತು? ಅಸತ್ತಿನಿಂದ ಸತ್ತು ಹೇಗೆ ಉಂಟಾದೀತು? ಸೋಮ್ಯನೆ, ಇದು ಮೊದಲು ತನಗೆರಡನೆಯದಿಲ್ಲದ ಒಂದೇ ಆದ ಸತ್ತೇ ಆಗಿತ್ತು ಎಂದನು.

## ಅಸದ್ವಾದದ ನಿರಾಕರಣೆ: ಬೀಜಾಂಕುರದೃಷ್ಟಾಂತವು ಸರಿಯಲ್ಲ

(ಭಾಷ್ಯ)

೪೫೩. ತದೇತದ್ ವಿಪರೀತಗ್ರಹಣಂ ಮಹಾವೈನಾಶಿಕಪಕ್ಷಂ ದರ್ಶಯಿತ್ವಾ ಪ್ರತಿಷೇಧತಿ । ಕುತಸ್ತು ಪ್ರಮಾಣಾತ್ ಖಲು ಹೇ ಸೋಮ್ಯೈವಂ ಸ್ಯಾತ್ ಅಸತಃ ಸಜ್ಜಾಯೇತೇತ್ಯೇವಂ ಕುತೋ ಭವೇತ್? ನ ಕುತಶ್ಚಿತ್ ಪ್ರಮಾಣಾದೇವಂ ಸಂಭವತೀತ್ಯರ್ಥಃ । ಯದಪಿ ಬೀಜೋಪಮರ್ದೇ ಅಙ್ಕುರೋ ಜಾಯಮಾನೋ ದೃಷ್ಟೋಽಭಾವಾದೇವೇತಿ, ತದಪಿ ಅಭ್ಯುಪಗಮವಿರುದ್ಧಂ ತೇಷಾಮ್। ಕಥಮ್? ಯೇ ತಾವದ್ ಬೀಜಾವಯವಾ ಬೀಜಸಂಸ್ಥಾನವಿಶಿಷ್ಟಾಸ್ತೇಽಙ್ಕುರೇಽಪಿ ಅನುವರ್ತನ್ತ ಏವ ನ ತೇಷಾಮುಪಮರ್ದೋಽಙ್ಕುರಜನ್ಮನಿ । ಯತ್ಪುನರ್ಬೀಜಾಕಾರಸಂಸ್ಥಾನಂ ತದ್ಬೀಜಾವಯವವ್ಯತಿರೇಕೇಣ ವಸ್ತುಭೂತಂ ನ ವೈನಾಶಿಕೈರಭ್ಯುಪಗಮ್ಯತೇ ಯದಙ್ಕುರಜನ್ಮನ್ಯುಪಮೃದ್ಯೇತ । ಅಥ ತದಸ್ತ್ಯವಯವವ್ಯತಿರಿಕ್ತಂ ವಸ್ತುಭೂತಮ್, ತಥಾ ಚ ಸತಿ ಅಭ್ಯುಪಗಮವಿರೋಧಃ । ಅಥ ಸಂವೃತ್ಯಾ ಅಭ್ಯುಪಗತಂ ಬೀಜಸಂಸ್ಥಾನರೂಪಮ್ ಉಪಮೃದ್ಯತ ಇತಿ ಚೇತ್ । ಕೇಯಂ ಸಂವೃತಿರ್ನಾಮ ಕಿಮಸಾವಭಾವ ಉತ ಭಾವ ಇತಿ? ಯದ್ಯಭಾವೋ ದೃಷ್ಟಾನ್ತಾಭಾವಃ । ಅಥ ಭಾವಃ, ತಥಾಪಿ ನಾಭಾವಾದಙ್ಕುರೋತ್ಪತ್ತಿಃ, ಬೀಜಾವಯವೇಭ್ಯೋ ಹ್ಯಙ್ಕುರೋತ್ಪತ್ತಿಃ । ಅವಯವಾ ಅಪಿ ಉಪಮೃದ್ಯನ್ತ ಇತಿ ಚೇತ್ । ನ । ತದವಯವೇಷು ತುಲ್ಯತ್ವಾತ್ । ಯಥಾ ವೈನಾಶಿಕಾನಾಂ ಬೀಜಸಂಸ್ಥಾನರೂಪೋಽವಯವೀ ನಾಸ್ತಿ ತಥಾ ಅವಯವಾ ಅಪೀತಿ ತೇಷಾಮುಪಮರ್ದಾನುಪಪತ್ತಿಃ । ಬೀಜಾವಯವಾನಾಮಪಿ ಸೂಕ್ಷ್ಮಾವಯವಾಃ, ತದವಯವಾನಾಮಪ್ಯನ್ಯೇ ಸೂಕ್ಷ್ಮತರಾವಯವಾಃ ಇತ್ಯೇವಂ ಪ್ರಸಙ್ಗಸ್ಯ ಅನಿವೃತ್ತೇಃ ಸರ್ವತ್ರೋಪಮರ್ದಾನುಪಪತ್ತಿಃ ॥

(ಭಾಷ್ಯಾರ್ಥ)

ಆ ಈ ಮಹಾವೈನಾಶಿಕಪಕ್ಷವಾದ[1] ತಪ್ಪುತಿಳಿವಳಿಕೆಯನ್ನು ತೋರಿಸಿ

---

1 ವೈನಾಶಿಕರೆಂದರೆ ವಸ್ತು ಸ್ಥಿರವಾಗಿಲ್ಲವೆಂಬ ಬೌದ್ಧರು, ಮಹಾವೈನಾಶಿಕರೆಂದರೆ ಯಾವ ವಸ್ತುವೂ ಇಲ್ಲವೇಇಲ್ಲವೆಂಬ ಶೂನ್ಯವಾದಿಗಳು. ಶ್ರುತಿಯು ಅನಾದಿಯಾಗಿರುವವರಿಂದ ಬೌದ್ಧರ ಪರಾಮರ್ಶವು ಹೇಗೆ ಆದರಲ್ಲಿ ಬಂದಿತೆಂದು ಶಂಕಿಸಬಾರದು. ಅಸದ್ವಾದವೂ ಜನರಿಗೆ ಹೊಳೆಯಬಹುದೆಂಬುದಿಷ್ಟೇ ವಿವಕ್ಷಿತ. ಈ ಪಕ್ಷವನ್ನು ಶೂನ್ಯವಾದಿಗಳು ಅಂಗೀಕರಿಸಿರುತ್ತಾರೆಂಬುದನ್ನು ಭಾಷ್ಯದಲ್ಲಿ ತಿಳಿಸಿದೆ.

ಕೊಟ್ಟು ಅಲ್ಲಗಳೆಯುತ್ತಿದಾನೆ. ಎಲೈ ಸೋಮ್ಯನೆ, ಯಾವ ಪ್ರಮಾಣದಿಂದತಾನೆ ಹೀಗೆ ಆದೀತು ? ಅಸತ್ತಿನಿಂದ ಸತ್ತು ಉಂಟಾಗುತ್ತದೆ ಎಂದಿಂತು ಹೇಗೆ ಆದೀತು ? ಯಾವ ಪ್ರಮಾಣದಿಂದಲೂ ಹೀಗೆ ಸಂಭವಿಸುವದಿಲ್ಲ ಎಂಬರ್ಥ.

ಬೀಜವು ನಷ್ಟವಾದರೆ ಅಭಾವದಿಂದಲೇ ಮೊಳಕೆಯು ಹುಟ್ಟುವದು ಕಂಡಿರುತ್ತದೆ ಎಂದು (ಬೌದ್ಧರು) ಹೇಳುತ್ತಾರಷ್ಟೆ[1] ? ಅದೂ ಅವರ ಅಂಗೀಕಾರಕ್ಕೆ ವಿರುದ್ಧವೇ ಆಗಿರುತ್ತದೆ. ಹೇಗೆಂದರೆ, ಬೀಜದ ಆಕಾರದಿಂದೊಡಗೂಡಿರುವ ಬೀಜದ ಅವಯವಗಳುಂಟಷ್ಟೆ, ಅವಂತೂ ಮೊಳಕೆಯಲ್ಲಿಯೂ ಇದ್ದುಕೊಂಡೇ ಇರುತ್ತವೆ, ಮೊಳಕೆಯು ಹುಟ್ಟಿದಾಗ ಅವುಗಳು ನಾಶವಾಗಿರುವದಿಲ್ಲ. ಇನ್ನು ಬೀಜಾಕಾರವೆಂಬ ರೂಪವಿದೆಯಲ್ಲ, ಅದು ಬೀಜದ ಅವಯವಗಳಿಗಿಂತ ಬೇರೆ ವಸ್ತುವಾಗಿರುವದೆಂದು ವೈನಾಶಿಕರು ಒಪ್ಪುವದಿಲ್ಲ, ಹಾಗೆ ಒಪ್ಪಿದ್ದರೆ ಅದು ಮೊಳಕೆಯು ಹುಟ್ಟಿದಾಗ ನಾಶವಾಗುವದೆ(ನ್ನಬಹುದಾಗಿತ್ತು). ಹೀಗಲ್ಲದೆ, ಅವಯವಗಳಿಗಿಂತ ಬೇರೆಯಾಗಿ (ನಿಜವಾದ) ವಸ್ತುವೇ ಆಗಿದೆ ಎನ್ನುವದಾದರೆ, ಹಾಗಾದರೆ (ಅವರ) ಅಂಗೀಕಾರಕ್ಕೆ ವಿರೋಧವಾಗುವದು[2] ಹೀಗಲ್ಲದೆ, ಬೀಜಸಂಸ್ಥಾನವೆಂಬುದನ್ನು ಸಂವೃತಿಯಿಂದ[3] ಅಂಗೀಕರಿಸಿರುತ್ತದೆ, (ಅದು ಮೊಳಕೆಯುಂಟಾದಾಗ) ನಾಶವಾಗುತ್ತದೆ ಎಂದರೆ, ಈ ಸಂವೃತಿ ಎಂಬುದು ಯಾವದು ? ಅದು ಅಭಾವವೊ, ಭಾವವೊ ?- ಎಂದು (ಕೇಳುತ್ತೇವೆ). ಅದು ಅಭಾವವೇ ಎನ್ನುವದಾದರೆ ದೃಷ್ಟಾಂತವೇ ಇಲ್ಲ[4] ಹಾಗಲ್ಲದೆ (ಅದು) ಭಾವವೇ ಎಂದರೆ,[5] ಹಾಗೂ ಅಭಾವದಿಂದ ಮೊಳಕೆಯುಂಟಾಗುತ್ತದೆ (ಎಂದಾಗು)ವದಿಲ್ಲ, ಬೀಜಾವಯಗಳಿಂದಲ್ಲವೆ, ಮೊಳಕೆಯುಂಟಾಗುತ್ತದೆ ?[6] ಅವಯವಗಳೂ ನಾಶವಾಗುತ್ತವೆಯಲ್ಲ !- ಎಂದರೆ ಹಾಗಲ್ಲ, ಏಕೆಂದರೆ ಅವುಗಳಲ್ಲಿಯೂ (ಈ ದೋಷವು) ಸಮಾನವಾಗಿರುತ್ತದೆ (ಇದರ ವಿವರ) · ವೈನಾಶಿಕರ (ಪಕ್ಷದಲ್ಲಿ) ಬೀಜಸಂಸ್ಥಾನ

---

1. ಸೂ ಭಾ. ೨-೨-೨೬ (ಭಾ. ಭಾ. ೫೧,೫೪)ರಲ್ಲಿಯೂ ಬೀಜಾಂಕುರದೃಷ್ಟಾಂತದ ಯುಕ್ತಿಯನ್ನು ಖಂಡಿಸಿದೆ.

2. ಅವಯವಿಯು ಅವಯವಗಳಿಗಿಂತ ಬೇರೆಯಿಲ್ಲ, ಸಾಲೆಂಬುದು ವ್ಯಕ್ತಿಗಳಿಗಿಂತ ಬೇರೆಯಿಲ್ಲ, ಕಾಡೆಂಬುದು ಮರಗಳಿಗಿಂತ ಬೇರೆಯಿಲ್ಲ, ಸೇನೆಯೆಂಬುದು ಅದರಲ್ಲಿನ ಶಿಪಾಯಿಗಳಿಗಿಂತ ಬೇರೆಯಿಲ್ಲ- ಎಂಬುದು ಅವರ ಅಂಗೀಕಾರ.

3. ಸಂವೃತಿ ಎಂದರೆ ವಸ್ತುತತ್ತ್ವವನ್ನು ಮುಚ್ಚಿಕೊಂಡಿರುವ ಅವಿದ್ಯೆ.

4. ಸಂವೃತಿ ಎಂದರೆ ಅವಿದ್ಯೆ, ವಿದ್ಯೆಯ ಅಭಾವ- ಎನ್ನುವದಾದರೆ ಅಭಾವದಿಂದ ಭಾವವುಂಟಾದದ್ದಕ್ಕೆ ದೃಷ್ಟಾಂತವೆಲ್ಲಿಬಂತು ? ಅವಿದ್ಯೆಯಿಂದಲ್ಲವೆ, ಅವಯವಿಯನ್ನು ಹೇಳುತ್ತಿದೀರಿ ?

5. ತತ್ತ್ವವನ್ನರಿಯದ ಲೌಕಿಕಬುದ್ಧಿಯೇ ಸಂವೃತಿ ಎಂದರೆ ಎಂದರ್ಥ.

6. ಆ ಬೀಜಾವಯವಗಳು ಕಾರ್ಯದಲ್ಲಿದ್ದೇ ಇವೆಯಾದ್ದರಿಂದ, ಅಭಾವದಿಂದ ಭಾವದ ಉತ್ಪತ್ತಿಗೆ ದೃಷ್ಟಾಂತವಿಲ್ಲ

ವೆಂಬ ಅವಯವಿ ಹೇಗೆ ಇಲ್ಲವೋ, ಹಾಗೆಯೇ ಅವಯವಗಳೂ (ಇಲ್ಲ)[1] ವಾದ್ದ ರಿಂದ ಅವುಗಳೂ ನಾಶವಾಗುವಂತಿಲ್ಲ ಬೀಜದ ಅವಯವಗಳಿಗೂ ಸೂಕ್ಷ್ಮ ವಾದ ಅವಯವಗಳು (ಇರುತ್ತವೆ), ಆ ಅವಯವಗಳಿಗೂ ಸೂಕ್ಷ್ಮತರವಾದ (ಬೇರೆ) ಅವಯವಗಳು- ಎಂಬೀ ಬಗೆಯ ಪ್ರಸಂಗಗಳು ತೊಲಗದಿರುವದರಿಂದ ಎಲ್ಲಿಯೂ ನಾಶವಾಗುವಂತಿಲ್ಲ.

## ಅಸದ್ವಾದಕ್ಕೆ ಯಾವ ದೃಷ್ಟಾಂತವೂ ಇಲ್ಲ, ಸದ್ವಾದಕ್ಕ ಇದೆ

(ಭಾಷ್ಯ)

೪೫೪ ಸದ್ಬುದ್ಧ್ಯನುವೃತ್ತೇಃ[2] ಸತ್ತ್ವಾನಿವೃತ್ತೇಶ್ಚೇತಿ ಸದ್ವಾದಿನಾಂ ಸತ ಏವ ಸಮುತ್ಪತ್ತಿಃ ಸೇತ್ಸ್ಯತಿ। ನ ತ್ವಸದ್ವಾದಿನಾಂ ದೃಷ್ಟಾನ್ತೋಽಸ್ತ್ಯಸತಃ ಸದುತ್ಪತ್ತೇಃ। ಮೃತ್ಪಿಣ್ಡಾದ್ ಘಟೋತ್ಪತ್ತಿರ್ದೃಶ್ಯತೇ ಸದ್ವಾದಿನಾಂ ತದ್ಭಾವೇ ಭಾವಾತ್ ತದಭಾವೇ ಚಾಭಾವಾತ್। ಯದ್ಯಭಾವಾದೇವ ಘಟ ಉತ್ಪದ್ಯೇತ ಘಟಾರ್ಥಿನಾ ಮೃತ್ಪಿಣ್ಡೋ ನೋಪಾದೀಯೇತ। ಅಭಾವಶಬ್ದಬುದ್ಧ್ಯನುವೃತ್ತಿಶ್ಚ ಘಟಾದೌ ಪ್ರಸಜ್ಯೇತ। ನ ತ್ವೇತದಸ್ತಿ। ಅತೋ ನಾಸತಃ ಸದುತ್ಪತ್ತಿಃ। ಯದಪ್ಯಾಹುರ್ಮೃದ್ಬುದ್ಧಿರ್ಘಟಬುದ್ಧೇರ್ನಿಮಿತ್ತಮಿತಿ ಮೃದ್ಬುದ್ಧಿರ್ಘಟಬುದ್ಧೇಃ ಕಾರಣಮುಚ್ಯತೇ, ನ ತು ಪರಮಾರ್ಥತ ಏವ ಮೃದ್ ಘಟೋ ವಾಽಸ್ತೀತಿ, ತದಪಿ[3] ಮೃದ್ಬುದ್ಧಿರ್ವಿದ್ಯಮಾನಾ ವಿದ್ಯಮಾನಾಯಾ ಏವ ಘಟಬುದ್ಧೇಃ ಕಾರಣ ಮಿತಿ ನಾಸತಃ ಸದುತ್ಪತ್ತಿಃ। ಮೃದ್ಘಟಬುದ್ಧ್ಯೋರ್ನಿಮಿತ್ತನೈಮಿತ್ತಿಕತಯಾ ಆನನ್ತರ್ಯಮಾತ್ರಂ ನ ತು ಕಾರ್ಯಕಾರಣತ್ವಮ್ ಇತಿ ಚೇತ್। ನ। ಬುದ್ಧೀ ನಾಂ ನೈರನ್ತರ್ಯೇ ಗಮ್ಯಮಾನೇ ವೈನಾಶಿಕಾನಾಂ ಬಹಿರ್ದೃಷ್ಟಾನ್ತಾಭಾವಾತ್। ಅತಃ ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ। ಕಥಂ ಕೇನ ಪ್ರಕಾ ರೇಣಾಸತಃ ಸಜ್ಜಾಯೇತ ಇತಿ? ಅಸತಃ ಸದುತ್ಪತ್ತೌ ನ ಕಶ್ಚಿದಪಿ ದೃಷ್ಟಾನ್ತ ಪ್ರಕಾರೋಽಸ್ತಿ ಇತ್ಯಭಿಪ್ರಾಯಃ। ಏವಮ್ ಅಸದ್ವಾದಿಪಕ್ಷಮುನ್ಮಥ್ಯ ಉಪಸಂಹ ರತಿ ಸತ್ತ್ವೇವ ಸೋಮ್ಯೇದಮಗ್ರ ಆಸೀದಿತಿ ಸ್ವಪಕ್ಷಸಿದ್ಧಿಮ್ ॥

---

1. ಏಕೆಂದರೆ ತಮ್ಮತಮ್ಮ ಅವಯವಗಳ ದೃಷ್ಟಿಯಿಂದ ಎಲ್ಲಾ ಅವಯವಗಳೂ ಅವಯವಿಗಳೇ ಆಗಿವೆ, ಆದ್ದರಿಂದ ನಾಶವಾದವೆಂಬ ಅವಯವಗಳೇ ಇಲ್ಲ ಎಂದರ್ಥ

2. 'ಸದ್ಬುದ್ಧ್ಯನುವೃತ್ತೇಃ' ಎಂದಿದ್ದು ಲೇಖಕರು ಹೀಗೆ ಬರೆದುಕೊಂಡಿರಬಹುದೆ?

3. ತದಪಿ ಎಂಬುದು ತದಾಪಿ ಎಂದಿರಬೇಕು, ಅಥವಾ ಆ ಅರ್ಥದಲ್ಲಿಯೇ ತದಪಿ ಎಂದು ಪ್ರಯೋಗವಾಗಿದೆ ಎಂದು ಇಟ್ಟುಕೊಳ್ಳಬಹುದು.

(ಭಾಷ್ಯಾರ್ಥ)

ಸದ್ಬುದ್ಧಿಯು ಅನುವೃತ್ತಿಯಾಗುವದರಿಂದ[1] ಸತ್ತ್ವವು ನಿವೃತ್ತಿಯಾಗುವದಿಲ್ಲವಾಗಿ ಸದ್ವಾದಿಗಳಿಗೆ ಸತ್ತಿನಿಂದಲೇ ಸತ್ತುಂಟಾಗುವದೆಂಬುದಕ್ಕೆ ಸಿದ್ಧವಾಗುತ್ತದೆ. ಆದರೆ ಅಸದ್ವಾದಿಗಳಿಗೆ ಅಸತ್ತಿನಿಂದ ಸತ್ತು ಉಂಟಾಗುವದು (ಯಾವ) ದೃಷ್ಟಾಂತವೂ ಇರುವದಿಲ್ಲ ಸದ್ವಾದಿಗಳ (ಮತದಲ್ಲಿ) ಮಣ್ಣುಮುದ್ದೆಯಿಂದ ಗಡಿಗೆಯು ಉಂಟಾಗುವದು ಕಂಡುಬರುತ್ತದೆ, ಏಕೆಂದರೆ ಅದು ಇದ್ದರೆ (ಗಡಿಗೆ) ಇರುತ್ತದೆ, ಮತ್ತು ಅದು ಇಲ್ಲದಿದ್ದರೆ (ಗಡಿಗೆ) ಇರುವದಿಲ್ಲ[2] ಅಭಾವದಿಂದಲೇ ಗಡಿಗೆಯು ಉಂಟಾಗುವದಾದರೆ, ಗಡಿಗೆಯು ಬೇಕಾದವನು (ಅದಕ್ಕಾಗಿ) ಮಣ್ಣುಮುದ್ದೆಯನ್ನು ತೆಗೆದುಕೊಳ್ಳಬಾರದಾಗುವದು[3] (ಇದಲ್ಲದೆ) ಇಲ್ಲವೆಂಬ ಶಬ್ದವೂ ಬುದ್ಧಿಯೂ ಗಡಿಗೆಯೇ ಮುಂತಾದವುಗಳಲ್ಲಿರಬೇಕಾಗುತ್ತದೆ[4], ಆದರೆ ಹಾಗಿಲ್ಲ. ಆದ್ದರಿಂದ ಅಸತ್ತಿನಿಂದ ಸತ್ತು ಉತ್ಪನ್ನವಾಗುವದಿಲ್ಲ

ಇನ್ನು ಮಣ್ಣೆಂಬ ಬುದ್ಧಿಯು ಗಡಿಗೆಯೆಂಬ ಬುದ್ಧಿಗೆ ನಿಮಿತ್ತವಾಗಿರುವದರಿಂದ ಮಣ್ಣಿನ ಬುದ್ಧಿಯು ಗಡಿಗೆಯ ಬುದ್ಧಿಗೆ ಕಾರಣವೆನ್ನುತ್ತೇವೆಯೇ ಹೊರತು, ನಿಜವಾಗಿಯೂ ಮಣ್ಣಾಗಲಿ ಗಡಿಗೆಯಾಗಲಿ ಇರುವದಿಲ್ಲ[5] -ಎಂದು (ಬೌದ್ಧರು) ಅನ್ನುತ್ತಾರಷ್ಟೆ. ಆಗಲೂ ಇರುವ ಮಣ್ಣಿನ ಬುದ್ಧಿಯೇ ಇರುವ ಗಡಿಗೆಯ ಬುದ್ಧಿಗಳಿಗೇ ಕಾರಣವಾಗಿರುವದರಿಂದ ಅಸತ್ತಿನಿಂದ ಸತ್ತುಂಟಾಗುವದಿಲ್ಲ(ವೆಂದೇ ಆಗುತ್ತದೆ).[6]

---

1. 'ಸದ್ಬುದ್ಧ್ಯನುವೃತ್ತೇಃ' ಎಂದಿದ್ದರೆ ಕಾರ್ಯದಲ್ಲಿ ಸದ್ಬುದ್ಧಿಯು ಇದ್ದುಕೊಂಡೇ ಇರುವದರಿಂದಲೂ ಸತ್ತ್ವವು (ಯಾವಾಗಲೂ) ಹೋಗುವದಿಲ್ಲವಾದ್ದರಿಂದಲೂ ಎಂದು ಕನ್ನಡಿಸಿಕೊಳ್ಳಬೇಕು.

2. ಅನ್ವಯವ್ಯತಿರೇಕರೂಪಪ್ರಮಾಣದಿಂದ ಮಣ್ಣು ಕಾರಣ, ಗಡಿಗೆಯು ಕಾರ್ಯ-ಎಂದು ಸಿದ್ಧವಾಗುತ್ತದೆ ಎಂದರ್ಥ

3. ಮಣ್ಣುಗಡಿಗೆಗಳಿಗೆ ಕಾರ್ಯಕಾರಣಭಾವವಿಲ್ಲದಿದ್ದರೆ, ಬರಿಯ ಅಭಾವವೇ ಗಡಿಗೆಗೆ ಕಾರಣವಾಗಿದ್ದರೆ ಮಣ್ಣಿನ ಬದಲು ಹತ್ತಿಯನ್ನೇಕೆ ತೆಗೆದುಕೊಳ್ಳಬಾರದು ? ಅದರಲ್ಲಿಯೂ ಅಭಾವವಿದ್ದೇ ಇದೆಯಲ್ಲ ! -ಎಂದು ಭಾವ.

4. ಅಭಾವವು ಕಾರಣವಾದರೆ ಆ ಬುದ್ಧಿಯೂ ಅದರ ಮಾತೂ, ವ್ಯವಹಾರದಲ್ಲಿ ಗಡಿಗೆಯಲ್ಲಿ ತೋರಬಹುದಾಗಿತ್ತು. ಆದರೆ ಮಣ್ಣೆಂಬ ಬುದ್ಧಿಶಬ್ದಗಳು ಮಾತ್ರ ಇರುತ್ತವೆ.

5. ಬುದ್ಧಿಗಳು ಮಾತ್ರ ಒಂದಕ್ಕೊಂದು ನಿಮಿತ್ತ; ಹೊರಗೆ ಮಣ್ಣೂ ಇಲ್ಲ, ಗಡಿಗೆಯೂ ಇಲ್ಲ- ಎಂದು ಬೌದ್ಧನ ಅಭಿಪ್ರಾಯ.

6. ಒಂದು ಬುದ್ಧಿಯು ಇನ್ನೊಂದರಲ್ಲಿ ಅನುವೃತ್ತವಾಗಿರುವದರಿಂದ ಆ ಬುದ್ಧಿಯು ಈ ಬುದ್ಧಿಗೆ ಕಾರಣವು, ಇವೆರಡೂ ಇರುವ ಬುದ್ಧಿಗಳು, ಇಲ್ಲದ ಬುದ್ಧಿಗಳಲ್ಲ. ಆದ್ದರಿಂದ ಇಲ್ಲಿ [illegible] ಅಸದ್ವಾದಕ್ಕೆ ಅವಕಾಶವಿಲ್ಲ ಎಂದು ಭಾವ.

(ಬೌದ್ಧ) :- ಮೃದ್ಬುದ್ಧಿ, ಘಟಬುದ್ಧಿ- ಇವುಗಳಿಗೆ ನಿಮಿತ್ತನೈಮಿತ್ತಿಕ (ಭಾವ)ವಿರುವದರಿಂದ ಒಂದಾಗುತ್ತಲೂ ಒಂದು ಉಂಟಾಗುತ್ತದೆ, ಅಷ್ಟೇಹೊರತು (ಅವುಗಳಿಗೆ) ಕಾರ್ಯಕಾರಣಭಾವವೇನೂ ಇಲ್ಲ.

(ಸಿದ್ಧಾಂತಿ) - ಹಾಗಲ್ಲ ಏಕೆಂದರೆ ಬುದ್ಧಿಗಳು ಒಂದಾಗುತ್ತಲೂ ಒಂದು ಉಂಟಾಗುವವು- ಎಂದು ತಿಳಿಯುವದಕ್ಕೆ ವೈನಾಶಿಕರಿಗೆ ಹೊರಗೆ ಯಾವ ದೃಷ್ಟಾಂತವೂ ಇರುವದಿಲ್ಲ[1]

ಆದ್ದರಿಂದ ಸೋಮ್ಯನೆ, ಏತರಿಂದಲಾದರೆ ಹೀಗೆ ಆದೀತು ಎಂದು (ತಂದೆಯು) ನುಡಿದನು ಹೇಗೆ ಯಾವ ಪ್ರಕಾರದಿಂದ ಅಸತ್ತಿನಿಂದ ಸತ್ತು ಉಂಟಾದೀತು? ಅಸತ್ತಿನಿಂದ ಸತ್ತು ಉಂಟಾಗುವದಕ್ಕೆ ಯಾವ ದೃಷ್ಟಾಂತಪ್ರಕಾರವೂ ಇಲ್ಲ- ಎಂದು ಅಭಿಪ್ರಾಯ. ಹೀಗೆ ಅಸದ್ವಾದಿಗಳ ಪಕ್ಷಗಳನ್ನು ಕಡೆದುಹಾಕಿ 'ಸೋಮ್ಯನೆ, ಇದು ಮೊದಲು ಸತ್ತೇ ಆಗಿತ್ತು-' ಎಂದು ತನ್ನ ಪಕ್ಷವು ಸಿದ್ಧಿಯಾಯಿತೆಂದು ಉಪಸಂಹಾರಮಾಡಿರುತ್ತಾನೆ.

## ಸತ್ಕಾರ್ಯವಾದದಲ್ಲಿ ಆಕ್ಷೇಪಸಮಾಧಾನಗಳು

(ಭಾಷ್ಯ)

೪೨೫ ನನು ಸದ್ವಾದಿನೋಽಪಿ ಸತಃ ಸದುತ್ಪದ್ಯತ ಇತಿ ನೈವ ದೃಷ್ಟಾನ್ತೋಽಸ್ತಿ। ಘಟಾದ್ ಘಟಾನ್ತರೋತ್ಪತ್ತ್ಯದರ್ಶನಾತ್। ಸತ್ಯಮೇವಮ್, ನ ಸತಃ ಸದನ್ತರಮುತ್ಪದ್ಯತೇ। ಕಿಂ ತರ್ಹಿ ಸದೇವ ಸಂಸ್ಥಾನಾನ್ತರೇಣಾವತಿಷ್ಠತೇ। ಯಥಾ ಸರ್ಪಃ ಕುಣ್ಡಲೀ ಭವತಿ। ಯಥಾ ಚ ಮೃತ್ ಚೂರ್ಣಪಿಣ್ಡಘಟಕಪಾಲಾದಿಪ್ರಭೇದೈಃ। ಯದ್ಯೇವಂ ಸದೇವ ಸರ್ವಪ್ರಕಾರಾವಸ್ಥಮ್, ಕಥಂ ಪ್ರಾಗುತ್ಪತ್ತೇರಿದಮಾಸೀತ್ ಇತ್ಯುಚ್ಯತೇ? ನನು ನ ಶ್ರುತಂ ತ್ವಯಾ ಸದೇವೇತ್ಯವಧಾರಣಮ್ ಇದಂಶಬ್ದವಾಚ್ಯಸ್ಯ ಕಾರ್ಯಸ್ಯ? ಪ್ರಾಪ್ತಂ ತರ್ಹಿ ಪ್ರಾಗುತ್ಪತ್ತೇರಸದೇ[2]ವಾಸೀನ್ನೇದಂ ಶಬ್ದವಾಚ್ಯಮ್, ಇದಾನೀಮಿದಂ ಜಾತಮಿತಿ। ನ। ಸತ

---

1 ಬುದ್ಧಿಗಳಲ್ಲಿ ನೈಮಿತ್ತಿಕಭಾವಮಾತ್ರವಿದೆಯೆಂದು ಇಟ್ಟುಕೊಳ್ಳುವ ಬೌದ್ಧನು ಅಸತ್ತಿನಿಂದ ಸತ್ತು ಉಂಟಾಯಿತು ಎಂದು ಹೇಳುವವಕ್ಕೆ ಯಾವ ದೃಷ್ಟಾಂತವೂ ಇಲ್ಲ. ಹೊರಗೆ ಮೃತ್ತಾಗಲಿ ಘಟವಾಗಲಿ ಇಲ್ಲದಿರುವಾಗ ಇದು ಮೃದ್ಬುದ್ಧಿ, ಇದು ಘಟಬುದ್ಧಿ- ಎನ್ನುವದಕ್ಕೂ ಕಾರಣವಿಲ್ಲ ಹಾಗೆ ಅನುಭವವಿರುವದರಿಂದ ಹಾಗೆನ್ನುತ್ತೇವೆ ಎನ್ನುವದಾದರೆ ಹೊರಗೆ ಮೃದ್ಘಟಗಳು ಇವೆಯೆಂದೂ ಮಣ್ಣು ಗಡಿಗೆಯಲ್ಲಿ ಅನುಗತವಾಗಿದೆಯೆಂದೂ ಅನುಭವದಲ್ಲಿರುವದರಿಂದ ಹಾಗೆಯೇ ಕಾರಣಭಾವವನ್ನೂ ಒಪ್ಪಬೇಕಾಗುವದು ಎಂದು ಭಾವ.

2. ಇದು ಸದೇವ ಎಂದಿದ್ದರೆ ಸ್ಪಷ್ಟತರವಾಗುತ್ತಿತ್ತೆಂದು ಕಾಣುತ್ತದೆ, ಅನುವಾದದ ಟಿಪ್ಪಣಿಯನ್ನು ನೋಡಿ.

ಏವೇದಂಶಬ್ದ ಬುದ್ಧಿ ವಿಷಯತಯಾ ಅವಸ್ಥಾನಾತ್, ಯಥಾ ಮೃದೇವ ಪಿಣ್ಡ ಘಟಾದಿಶಬ್ದ ಬುದ್ಧಿ ವಿಷಯತ್ವೇನ ಅವತಿಷ್ಠತೇ ತದ್ವತ್। ನನು ಯಥಾ ಮೃದ್ ವಸ್ತು ಏವಂ ಪಿಣ್ಡ ಘಟಾದ್ಯಪಿ ತದ್ವತ್ ಸದ್ಬುದ್ಧೇರನ್ಯಬುದ್ಧಿ ವಿಷಯತ್ವಾತ್ ಕಾರ್ಯಸ್ಯ ಸತೋಽನ್ಯದ್ವಸ್ತ್ವನ್ತರಂ ಸ್ಯಾತ್ ಕಾರ್ಯಜಾತಂ ಯಥಾ ಅಶ್ವಾದ್ ಗೌಃ। ನ। ಪಿಣ್ಡ ಘಟಾದೀನಾಮಿತರೇತರವ್ಯಭಿಚಾರೇಽಪಿ ಮೃತ್ತ್ವಾವ್ಯಭಿಚಾರಾತ್। ಯದ್ಯಪಿ ಘಟಃ ಪಿಣ್ಡಂ ವ್ಯಭಿಚರತಿ ಪಿಣ್ಡಶ್ಚ ಘಟಮ್, ತಥಾಪಿ ಪಿಣ್ಡ ಘಟೌ ಮೃತ್ತ್ವಂ ನ ವ್ಯಭಿಚರತಃ। ತಸ್ಮಾದ್ ಮೃನ್ಮಾತ್ರಂ ಪಿಣ್ಡಘಟೌ। ವ್ಯಭಿಚರತಿ ತ್ವಶ್ವಂ ಗೌರಶ್ವೋ ವಾ ಗಾಮ್ । ತಸ್ಮಾನ್ಮೃದಾದಿಸಂಸ್ಥಾನಮಾತ್ರಂ ಘಟಾದಯಃ। ಏವಂ ಸತ್ಸಂಸ್ಥಾನಮಾತ್ರಮಿದಂ ಸರ್ವಮಿತಿ ಯುಕ್ತಂ ಪ್ರಾಗುತ್ಪತ್ತೇಃ ಸದೇವೇತಿ। ವಾಚಾರಮ್ಭಣಮಾತ್ರತ್ವಾದ್ ವಿಕಾರಸಂಸ್ಥಾನಮಾತ್ರಸ್ಯ। ನನು ನಿರವಯವಂ ಸತ್ "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್" (ಶ್ವೇ ೬-೧೯), "ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) ಇತ್ಯಾದಿಶ್ರುತಿಭ್ಯಃ । ನಿರವಯವಸ್ಯ ಸತಃ ಕಥಂ ವಿಕಾರಸಂಸ್ಥಾನಮುಪಪದ್ಯತೇ ? ನೈಷ ದೋಷಃ। ರಜ್ಜ್ವಾದ್ಯವಯವೇಭ್ಯಃ ಸರ್ಪಾದಿಸಂಸ್ಥಾನವದ್ ಬುದ್ಧಿ ಪರಿಕಲ್ಪಿತೇಭ್ಯಃ ಸದವಯವೇಭ್ಯೋ ವಿಕಾರ ಸಂಸ್ಥಾನೋಪಪತ್ತೇಃ। "ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (೬-೧-೪) ಏವಂ ಸದೇವ ಸತ್ಯಮಿತಿ ಶ್ರುತೇಃ। ಏಕಮೇವಾದ್ವಿತೀಯಂ ಪರಮಾರ್ಥತಃ ಇದಂಬುದ್ಧಿ ಕಾಲೇಽಪಿ ॥

(ಭಾಷ್ಯಾರ್ಥ)

(ಆಕ್ಷೇಪ) .- ಸದ್ವಾದಿಗೂ ಸತ್ತಿನಿಂದ ಸತ್ತುಂಟಾಗುತ್ತದೆ ಎಂಬುದಕ್ಕೆ ದೃಷ್ಟಾಂತವು ಇಲ್ಲವೇ ಇಲ್ಲ, ಏಕೆಂದರೆ (ಒಂದು) ಗಡಿಗೆಯಿಂದ ಮತ್ತೊಂದು ಗಡಿಗೆ ಹುಟ್ಟುವದು ಕಂಡಿಲ್ಲವಲ್ಲ[1] !

(ಪರಿಹಾರ) :- ನಿಜ, ಹೀಗೆಯೇ ಸರಿ, ಸತ್ತಿನಿಂದ ಮತ್ತೊಂದು ಸತ್ತು ಹುಟ್ಟುವದಿಲ್ಲ. ಮತ್ತೇನೆಂದರೆ ಸತ್ತೇ ಮತ್ತೊಂದು ಆಕಾರದಿಂದ ತೋರಿಕೊಳ್ಳುತ್ತದೆ. ಹೇಗೆ, ಹಾವೇ ಮುಂಡಲವನ್ನು ಹಾಕಿಕೊಳ್ಳುವದೋ, ಮಣ್ಣೇ ಹೇಗೆ ಹುಡಿ, ಮುದ್ದೆ, ಗಡಿಗೆ, ಹೋಳುಗಳು -ಮುಂತಾದ ಪ್ರಕಾರಗಳಿಂದ ತೋರಿಕೊಳ್ಳುವದೋ ಹಾಗೆ.[2]

---

1. ಅಸದ್ವಾದಿಗೆ ಸದ್ವಾದಿಯ ಅಭಿಪ್ರಾಯವು ತಿಳಿದಿಲ್ಲ, ಕಾರ್ಯವು ಕಾರಣಕ್ಕಿಂತ ಬೇರೆ ಎಂದು ಅವನ ಭಾವನೆ.

2. ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ, ಕಾರಣವೇ ಕಾರ್ಯವಾಗಿ ತೋರುತ್ತದೆ ಎಂಬುದು ಸದ್ವಾದಿಯ ಮತ.

(ಅಸದ್ವಾದಿ):- ಹಾಗಾದರೆ ಎಲ್ಲಾ ಪ್ರಕಾರದ ಅವಸ್ಥೆಗಳಲ್ಲಿರುವದೂ ಸತ್ತೇ (ಎಂದಾಯಿತು), ಇದು ಉತ್ಪತ್ತಿಗಿಂತ ಮೊದಲು (ಸತ್ತೇ) ಆಗಿತ್ತು ಎಂದು ಹೇಳಿದ್ದು ಹೇಗೆ (ಸರಿ)?

(ಸಿದ್ಧಾಂತಿ) - ಇದು ಎಂಬ ಶಬ್ದಕ್ಕೆ ವಾಚ್ಯವಾದ ಕಾರ್ಯವನ್ನು ಸತ್ತೇ ಎಂದು (ಶ್ರುತಿಯಲ್ಲಿ) ಒತ್ತಿಹೇಳಿರುವದು ನಿನಗೆ ಕೇಳಿಸಿಲ್ಲವೇನು?

(ಪೂರ್ವಪಕ್ಷಿ).- ಹಾಗಾದರೆ ಹುಟ್ಟುವದಕ್ಕೆ ಮೊದಲು (ಇದು) ಅಸತ್ತೇ ಆಗಿತ್ತೇ ಹೊರತು, ಇದು ಎಂಬ ಶಬ್ದಕ್ಕೆ ವಾಚ್ಯವಾಗಿರಲಿಲ್ಲ, ಈಗ ಇದು ಹುಟ್ಟಿತು ಎಂದು ಆಯಿತಲ್ಲ[1]!

(ಸದ್ವಾದಿ).- ಹಾಗಲ್ಲ. ಏಕೆಂದರೆ ಸತ್ತೇ ಇದು ಎಂಬ ಶಬ್ದಬುದ್ಧಿಗಳಿಗೆ ವಿಷಯವಾಗಿ ತೋರಿಕೊಳ್ಳುತ್ತದೆ ಹೇಗೆ ಮಣ್ಣೇ ಮುದ್ದೆ, ಗಡಿಗೆ-ಮುಂತಾದ ಶಬ್ದಬುದ್ಧಿಗಳಿಗೆ ವಿಷಯವಾಗಿ ತೋರಿಕೊಳ್ಳುವದೋ ಹಾಗೆ.[2]

(ಅಸದ್ವಾದಿ) - ಹೇಗೆ ಮಣ್ಣು ವಸ್ತುವೋ ಹಾಗೆಯೇ ಮುದ್ದೆ, ಗಡಿಗೆ-ಮುಂತಾದದ್ದು (ವಸ್ತುವೇ) ಇವರಂತೆ ಕಾರ್ಯವು ಸದ್ಬುದ್ಧಿಗಿಂತ ಬೇರೆಯಾದ ಬುದ್ಧಿಗೆ ವಿಷಯವಾಗಿರುವದರಿಂದ ಕಾರ್ಯಜಾತವು ಸತ್ತಿಗಿಂತ ಬೇರೆ ವಸ್ತುವೆಂದು-ಕುದುರೆಗಿಂತ ಎತ್ತು (ಬೇರೆಯಾಗಿರುವಂತೆ ಬೇರೆ ಎಂದು)[3] ಆಗುವದಲ್ಲ!-

(ಸದ್ವಾದಿ):- ಹಾಗಲ್ಲ ಏಕೆಂದರೆ ಮುದ್ದೆ, ಗಡಿಗೆ- ಮುಂತಾದವುಗಳು ಒಂದನ್ನೊಂದು ಬಿಟ್ಟಗಲಿದರೂ ಮಣ್ಣಾಗಿರುವದನ್ನು ಬಿಟ್ಟಗಲುವದಿಲ್ಲ. (ಇದರ ವಿವರ) ಗಡಿಗೆಯು ಮುದ್ದೆಯನ್ನು ಬಿಟ್ಟಿದ್ದರೂ ಮುದ್ದೆಯು ಗಡಿಗೆಯನ್ನು ಬಿಟ್ಟಿದ್ದರೂ, ಮುದ್ದೆಗಡಿಗೆಗಳು ಮಣ್ಣಾಗಿರುವದನ್ನು ಬಿಟ್ಟಿರುವದಿಲ್ಲ, ಆದ್ದರಿಂದ ಮುದ್ದೆಗಡಿಗೆಗಳು ಬರಿಯ ಮಣ್ಣೇ (ಎಂದಾಯಿತು). ಆದರೆ ಎತ್ತುಕುದುರೆ

---

1. ಇದು ಎನ್ನಿಸಿಕೊಂಡಿದ್ದು ಈಗತೇ, ಉತ್ಪತ್ತಿಗಿಂತ ಮೊದಲು ಇದಂಶಬ್ದವಾಚ್ಯತ್ವವಿರಲಿಲ್ಲ- ಎಂದಾಯಿತು. ಆದ್ದರಿಂದ ಅಸತ್ಕಾರ್ಯವಾದವೇ ಶ್ರುತಿಸಂಮತವೆಂದಾಗುವದಲ್ಲ! ಅಸದೇವಾಸೀತ್ ಎಂಬ ವಾಕ್ಯಕ್ಕೆ ಅನುವಾದವಿದು. ಇದು ಎಂಬ ಶಬ್ದಕ್ಕೆ ಗೋಚರವಾದದ್ದು ಅಸತ್ತೇ ಆಗಿತ್ತು ಎಂದರ್ಥ. ಸದೇವಾಸೀತ್ ಎಂದಿದ್ದರೆ ಶ್ರುತಿಯಪ್ರಕಾರ ಇದು ಸತ್ತೇ ಆಗಿತ್ತೇ ಹೊರತು ಇದು ಎಂಬ ಶಬ್ದಕ್ಕೆ ಗೋಚರವಾಗಿರಲಿಲ್ಲವಾದ್ದರಿಂದ ಅಸತ್ಕಾರ್ಯವುಂಟಾಯಿತು ಎಂಬ ಅರ್ಥವು ಸ್ಫುಟತರವಾಗುತ್ತಿತ್ತೆಂದು ನಮ್ಮ ಅಭಿಪ್ರಾಯ. ಇದು ಎಂಬ ಶಬ್ದಕ್ಕೆ ವಿಷಯವಾದದ್ದು ಸತ್ತಿಗಿಂತ ಬೇರೆಯಲ್ಲವಾದ್ದರಿಂದ ಈ ದೋಷವಿಲ್ಲ ಈಗಲೂ ಇದು ಸಚ್ಛಬ್ದಗೋಚರವಾದ ಆತ್ಮನೇ ಆಗಿದೆ. ಐ.ಭಾ. ೧-೧.

2. ಬುದ್ಧಿ, ಶಬ್ದ- ಎರಡನ್ನೂ ಇಲ್ಲಿ ಹಿಡಿಯಬೇಕು.

3. ಏಕೆಂದರೆ ಕುದುರೆ, ಎತ್ತು-ಎಂಬ ಶಬ್ದಬುದ್ಧಿಗಳು ಬೇರೆಬೇರೆ; ಹಾಗೆಯೇ ಇಲ್ಲಿ.

ಯನ್ನೂ ಕುದುರೆಯು ಎತ್ತನ್ನೂ ಬಿಟ್ಟಿರುತ್ತವೆ[1] ಆದ್ದರಿಂದ[2] ಗಡಿಗೆಯೇ ಮುಂತಾದವುಗಳು ಮಣ್ಣೇ ಮುಂತಾದವುಗಳ ಆಕಾರಮಾತ್ರವೇ. ಇದರಂತೆ ಇದೆಲ್ಲವೂ ಸತ್ತಿನ ಆಕಾರಮಾತ್ರವೇ ಆಗಿರುವದರಿಂದ ಹುಟ್ಟುವದಕ್ಕಿಂತ ಮುಂಚೆ ಸತ್ತೇ ಎಂದು ಹೇಳಿದ್ದು ಸರಿ[3], ಏಕೆಂದರೆ ವಿಕಾರರೂಪವಾದ ಬರಿಯ ಆಕಾರವು ವಾಚಾರಂಭಣಮಾತ್ರವಾಗಿದೆ.[4]

(ಆಕ್ಷೇಪ) .- ಸತ್ತು ಅವಯವಗಳಿಲ್ಲದ್ದು ಏಕೆಂದರೆ "ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ನಿರ್ದುಷ್ಟವೂ ಅಂಟಿಲ್ಲದ್ದೂ" (ಶ್ವೇ ೬-೧೯), "ದಿವ್ಯನೂ ಅಮೂರ್ತನೂ ಆದ ಪುರುಷನು ಹೊರಗುಒಳಗುಗಳಿಂದ ಕೂಡಿ ಅಜನು" (ಮುಂ. ೨-೧-೨)- ಎಂದು ಮುಂತಾಗಿ ಶ್ರುತಿಗಳಿವೆ ನಿರವಯವವಾಗಿರುವ ಸತ್ತಿಗೆ ವಿಕಾರದ ಆಕಾರ(ವನ್ನು ಪಡೆಯುವದೆಂಬುದು) ಹೇಗೆ ಹೊಂದುತ್ತದೆ ?

(ಪರಿಹಾರ) :- ಇದೇನೂ ದೋಷವಲ್ಲ. ಹಗ್ಗವೇ ಮುಂತಾದವುಗಳ ಅವಯವಗಳಿಂದ ಹಾವೇ ಮುಂತಾದ ಆಕಾರಗಳುಂಟಾಗುವಂತೆ ಬುದ್ಧಿಕಲ್ಪಿತವಾಗಿರುವ[5] ಸತ್ತಿನ ಅವಯವಗಳಿಂದ[6] ವಿಕಾರದ ಆಕಾರವುಂಟಾಗಬಹುದಾಗಿದೆ.

---

1. ಎತ್ತು, ಕುದುರೆ- ಎಂಬಲ್ಲಿ ಶಬ್ದಬುದ್ಧಿಗಳು ಬೇರೆಬೇರೆಯಾಗಿರುವದು ಮಾತ್ರವಲ್ಲ, ಪದಾರ್ಥಗಳೂ ಬೇರೆಬೇರೆ. ಎತ್ತಿನಲ್ಲಿ ಕುದುರೆಯ ಅಂಶವಿಲ್ಲ, ಕುದುರೆಯಲ್ಲಿ ಎತ್ತಿನ ಅಂಶವಿಲ್ಲ. ಆದರೆ ಇದು ಎಂಬ ಶಬ್ದಕ್ಕೆ ವಿಷಯವಾದ ಪ್ರಪಂಚವು ಸತ್ತೇ ಆಗಿರುತ್ತದೆ. ಗಡಿಗೆ ಮುಂತಾದವುಗಳಲ್ಲಿ ಮಣ್ಣು ಇದ್ದೇಇರುವಂತೆ ಇದರಲ್ಲಿಯೂ ಸದಾತ್ಮನ ಸಂಬಂಧವು ಇದ್ದೇ ಇದೆ.

2. ಗಡಿಗೆ ಮುಂತಾದ ಕಾರ್ಯಜಾತವು ಮಣ್ಣಿನ ಸ್ವರೂಪವನ್ನು ಬಿಡದೆಯೇ ಇರುವದರಿಂದ

3. ಸತ್ತಿಗಿಂತ ಬೇರೆಯಾಗಿ ಏನೂ ಉಂಟಾಗಿರುವದಿಲ್ಲ, ಸತ್ತೇ ಆಗಿತ್ತು ಎಂದು ಹೇಳಿದ್ದರಲ್ಲಿ ತಪ್ಪಿಲ್ಲ.

4. ವಿಕಾರವು, ಎಂದರೆ ಕಾರ್ಯವು ಬೇರೆಯಾಗಿ ಸ್ವತಂತ್ರವಾಗಿದ್ದರೆ ಸತ್ತೇ ಎಂದು ಹೇಳುವದಕ್ಕೆ ಆಗುತ್ತಿರಲಿಲ್ಲ ; ಆದರೆ ಹಾಗಿಲ್ಲ, ಕಾರ್ಯವು ಕಾರಣಕ್ಕಿಂತ ಅನನ್ಯವಾಗಿದ್ದು ಅದಕ್ಕೆ ಹೆಸರು ಮಾತ್ರ ಬೇರೆ ಬಂದಿದೆ.

5. ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಲಾದ.

6. ಸತ್ತಿನ ಅವಯವಗಳು ಬುದ್ಧಿಕಲ್ಪಿತವಾಗಿರುತ್ತವೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿರುವದರಿಂದ ಆತ್ಮನು ನಿಮಿತ್ತಕಾರಣ, ಅವನನ್ನು ಆಶ್ರಯಿಸಿಕೊಂಡಿರುವ ಮೂಲಾವಿದ್ಯೆಯು ಉಪಾದಾನಕಾರಣ- ಎಂಬ ವಾದಿಗಳ ಮತವು ಈ ಭಾಷ್ಯಕ್ಕೆ ವಿರುದ್ಧವೆಂದು ಗೊತ್ತಾಗುತ್ತದೆ.

"ವಿಕಾರವೆಂಬುದು ವಾಕ್ಕಿನಿಂದಾಗಿರುವ ಬರಿಯ ಹೆಸರು, ಮಣ್ಣೆಂಬುದೇ ಸತ್ಯವು" (೬–೧–೪), ಹೀಗೆಯೇ ಸತ್ತೇ ಸತ್ಯವು[1]– ಎಂದು ಶ್ರುತಿಯಿರುವದರಿಂದ ಇದು ಎಂಬ ಬುದ್ಧಿಯಿರುವಾಗಲೂ ನಿಜವಾಗಿ ತನಗೆರಡನೆಯದಿಲ್ಲದ ಒಂದೇ ಪರಮಾರ್ಥವು.[2]

## ಸತ್ತಿನಿಂದ ತೇಜೋಽಬನ್ನಗಳ ಸೃಷ್ಟಿ

(ಉಪನಿಷತ್ತು)

**ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ। ತಸ್ಮಾದ್ಯತ್ರ ಕ್ವಚ ಶೋಚತಿ ಸ್ವೇದತೇ ವಾ ಪುರುಷಸ್ತೇಜಸ ಏವ ತದಧ್ಯಾಪೋ ಜಾಯನ್ತೇ ॥ ೩ ॥**

೩. ಅದು 'ಬಹುವಾಗುವೆನು, ಹುಟ್ಟುವೆನು' ಎಂದು (ಯೋಚಿಸಿ) ನೋಡಿತು. ಅದು ತೇಜಸ್ಸನ್ನು ಸೃಜಿಸಿತು. ಆ ತೇಜಸ್ಸು 'ಬಹುವಾಗುವೆನು, ಹುಟ್ಟುವೆನು' ಎಂದು (ಯೋಚಿಸಿ) ನೋಡಿತು. ಅದು ಅಪ್ಪನ್ನು ಸೃಜಿಸಿತು. ಆದ್ದರಿಂದ ಪುರುಷನು ಎಲ್ಲೆಲ್ಲಿ ಶೋಕಿಸುವನೋ ಅಥವಾ ಬೆವರುವನೋ ಅಲ್ಲಲ್ಲಿ ತೇಜಸ್ಸಿನಿಂದಲೇ ಅಪ್ಪು ಉಂಟಾಗುತ್ತದೆ.

## ಕಾಣುವ ಕಾರ್ಯವು ಅಸತ್ತಲ್ಲ

(ಭಾಷ್ಯ)

೪೫೬. ತತ್ ಸತ್ ಐಕ್ಷತ ಈಕ್ಷಾಂ ದರ್ಶನಂ ಕೃತವತ್। ಅತಶ್ಚ ನ ಪ್ರಧಾನಂ ಸಾಂಖ್ಯಪರಿಕಲ್ಪಿತಂ ಜಗತ್ಕಾರಣಮ್। ಪ್ರಧಾನಸ್ಯಾಽಚೇತನತ್ವಾಭ್ಯುಪಗಮಾತ್। ಇದಂ ತು ಸತ್ ಚೇತನಮ್। ಈಕ್ಷಿತೃತ್ವಾತ್। ತತ್ಕಥಮ್ ಐಕ್ಷತೇತಿ? ಆಹ। ಬಹು ಪ್ರಭೂತಂ ಸ್ಯಾಂ ಭವೇಯಂ ಪ್ರಜಾಯೇಯ ಪ್ರಕರ್ಷೇಣ ಉತ್ಪದ್ಯೇಯ। ಯಥಾ ಮೃದ್ ಘಟಾದ್ಯಾಕಾರೇಣ ಯಥಾ ವಾ ರಜ್ಜ್ವಾದಿ ಸರ್ಪಾದ್ಯಾಕಾರೇಣ ಬುದ್ಧಿಪರಿಕಲ್ಪಿತೇನ। ಅಸದೇವ ತರ್ಹಿ ಸರ್ವಂ ಯದ್ಗೃಹ್ಯತೇ ರಜ್ಜುರಿವ ಸರ್ಪಾದ್ಯಾಕಾರೇಣ। ನ। ಸತ ಏವ ದ್ವೈತಭೇದೇನ ಅನ್ಯಥಾಗೃಹ್ಯಮಾಣತ್ವಾನ್ನಾಸತ್ತ್ವಂ ಕಸ್ಯಚಿತ್ ಕ್ವಚಿತ್ ಇತಿ ಬ್ರೂಮಃ। ಯಥಾ

---

1. 'ತತ್ಸತ್ಯಮ್' ಎಂದು (೬–೮–೭) ಅದೇ ಸತ್ಯವು, ಅದೇ ಆತ್ಮನು– ಎಂದು ಹೇಳಿರುವದನ್ನು ಈ ದೃಷ್ಟಾಂತಕ್ಕೆ ಹೊಂದಿಸಿಕೊಳ್ಳಬೇಕೆಂದು ಭಾವ.

2. ಈಗಲೂ ಸದ್ರೂಪವೇ ಆಗಿದ್ದರೂ ಇದು ಎಂಬ ಬುದ್ಧಿಗೆ ವಿಷಯವಾಗಿರುವದೊಂದೇ ವಿಶೇಷವೆಂದು ಭಾವ. ಐ. ಭಾ. ೧–೧ (ಭಾ.ಭಾ. ೨೪)ನ್ನು ನೋಡಿರಿ.

ಸತೋಽನ್ಯದ್ ವಸ್ತ್ವನ್ತರಂ ಪರಿಕಲ್ಪ್ಯ ಪುನಸ್ತಸ್ಯೈವ ಪ್ರಾಗುತ್ಪತ್ತೇಃ ಪ್ರಧ್ವಂಸಾಚ್ಚೋರ್ಧ್ವಮ್ ಅಸತ್ತ್ವಂ ಬ್ರುವತೇ ತಾರ್ಕಿಕಾಃ । ನ ತಥಾಽಸ್ಮಾಭಿಃ ಕದಾಚಿತ್ ಕ್ವಚಿದಪಿ ಸತೋಽನ್ಯತ್ ಅಭಿಧಾನಮ್ ಅಭಿಧೇಯಂ ವಾ ವಸ್ತು ಪರಿಕಲ್ಪ್ಯತೇ । ಸದೇವ ತು ಸರ್ವಮ್ ಅಭಿಧಾನಮ್ ಅಭಿಧೀಯತೇ ಚ ಯದನ್ಯಬುದ್ಧ್ಯಾ । ಯಥಾ ರಜ್ಜುರೇವ ಸರ್ಪಬುದ್ಧ್ಯಾ ಸರ್ಪ ಇತ್ಯಭಿಧೀಯತೇ । ಯಥಾ ವಾ ಪಿಣ್ಡಘಟಾದಿ ಮೃದೋಽನ್ಯಬುದ್ಧ್ಯಾ ಪಿಣ್ಡಘಟಾದಿಶಬ್ದೇನಾಭಿಧೀಯತೇ ಲೋಕೇ । ರಜ್ಜುವಿವೇಕದರ್ಶಿನಾಂ ತು[1] ಸರ್ಪಾಭಿಧಾನಬುದ್ಧೀ ನಿವರ್ತೇತೇ, ಯಥಾ ಚ ಮೃದ್ವಿವೇಕದರ್ಶಿನಾಂ ಘಟಾದಿಶಬ್ದಬುದ್ಧೀ । ತದ್ವತ್ ಸದ್ವಿವೇಕದರ್ಶಿನಾಮ್ ಅನ್ಯವಿಕಾರಶಬ್ದಬುದ್ಧೀ ನಿವರ್ತೇತೇ। "ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ" (ತೈ ೨-೯) ಇತಿ, "ಅನಿರುಕ್ತೇಽನಿಲಯನೇ" (ತೈ. ೨-೭) ಇತ್ಯಾದಿಶ್ರುತಿಭ್ಯಃ ॥

(ಭಾಷ್ಯಾರ್ಥ)

ಆ ಸತ್ತು (ಯೋಚಿಸಿ) ನೋಡಿತು, ನೋಟವನ್ನು, ನೋಡುವಿಕೆಯನ್ನು ಮಾಡಿತು ಆದ್ದರಿಂದಲೇ ಸಾಂಖ್ಯರು ಕಲ್ಪಿಸಿರುವ ಪ್ರಧಾನವು (ಈ) ಜಗತ್ಕಾರಣವಲ್ಲ, ಏಕೆಂದರೆ (ಅವರು) ಪ್ರಧಾನವು ಅಚೇತನವೆಂದು ಒಪ್ಪಿರುತ್ತಾರೆ ಆದರೆ ಈ ಸತ್ತು ಚೇತನವು, ಏಕೆಂದರೆ (ಇದು ಯೋಚಿಸಿ) ನೋಡುವದಾಗಿದೆ.[2]

ಇದು ಹೇಗೆ (ಯೋಚಿಸಿ) ನೋಡಿತು ? -ಎಂದರೆ ಹೇಳುತ್ತಾನೆ ಬಹು ಬಹಳವಾಗಿ (ಸ್ಯಾಮ್=ಭವೇಯಮ್) ಆಗುವೆನು; (ಪ್ರಜಾಯೇಯ=) ಪ್ರಕರ್ಷದಿಂದ ಹುಟ್ಟುವೆನು, ಹೇಗೆ ಮಣ್ಣು ಘಟವೇ ಮುಂತಾದ ಆಕಾರದಿಂದ (ಹುಟ್ಟುವದೋ), ಅಥವಾ ಹೇಗೆ ಹಗ್ಗವೇ ಮುಂತಾದದ್ದು ಬುದ್ಧಿಪರಿಕಲ್ಪಿತವಾದ[3] ಹಾವೇ ಮುಂತಾದದ್ದರ ಆಕಾರದಿಂದ ಹುಟ್ಟುವದೋ ಹಾಗೆ[4]

(ಆಕ್ಷೇಪ).- ಹಾಗಾದರೆ (ಯಾವಯಾವದು) ತಿಳಿಯಬರುತ್ತಿದೆಯೋ ಅದೆಲ್ಲವೂ ಹಗ್ಗವು ಹಾವೇ ಮುಂತಾದದ್ದರಂತೆ (ತೋರುತ್ತಿರುವದರಿಂದ) ಹುಸಿಯೇ ಆಯಿತಲ್ಲ !

---

1. ಇಲ್ಲೊಂದು ಯಥಾ ಇದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

2 ಇಲ್ಲಿ ಸತ್ತು ಎಂದರೆ ಇರುವದು, ಈ ಶಬ್ದವು ಪ್ರಧಾನವೂ ಆಗಬಹುದೆಂಬ ಸಾಂಖ್ಯರ ಶಂಕೆಯನ್ನು ತೆಗೆದು ಚೇತನನಾಗಿರುವದರಿಂದ ಬ್ರಹ್ಮವೇ ಹೊರತು ಪ್ರಧಾನವಲ್ಲ ಎಂದು ಸೂ. ಭಾ. ೧-೧-೫ (ಭಾ. ಭಾ. ೬೭)ರಲ್ಲಿ ತೀರ್ಮಾನಿಸಿದೆ. ಆ ಅಧಿಕರಣದಲ್ಲಿ ಸತ್ತು ಪ್ರಧಾನವಲ್ಲವೆಂಬುದಕ್ಕೆ ಮತ್ತೂ ಕೆಲವು ಕಾರಣಗಳನ್ನು ಕೊಟ್ಟಿದೆ.

3 ಈ ವಿಶೇಷಣವು ಹಿಂದಕ್ಕೂ ಅನ್ವಯಿಸುತ್ತದೆ, ಕಾರ್ಯವೂ ಬುದ್ಧಿಕಲ್ಪಿತವೇ, ಅದು ಕಾರಣಕ್ಕಿಂತ ಬೇರೆಯಾಗಿರುವದೇ ಇಲ್ಲ

4. ಬೇರೊಂದು ಪದಾರ್ಥವು ಸೇರದಿದ್ದರೂ ಬಹಳವಾಗುವದು ಹೇಗೆ ? -ಎಂಬ ಆಕ್ಷೇಪಕ್ಕೆ ಇದು ಉತ್ತರ. ಸದ್ರೂಪವಾಗಿಯೇ ಇದ್ದುಕೊಂಡು ಬೇರೆಬೇರೆಯಾಗಿ ತೋರುವದೇ ಬಹುತ್ವ ತೈ. ಭಾ ೨-೬ (ಭಾ ಭಾ. ೧೬೪)ನ್ನು ನೋಡಿ.

(ಪರಿಹಾರ) – ಹಾಗಲ್ಲ ಏಕೆಂದರೆ **ಸತ್ತೇ ದ್ವೈತವೆಂಬ ವಿಶೇಷವಾಗಿ ತಪ್ಪಾಗಿ ತಿಳಿದುಬರುತ್ತಿರುವದರಿಂದ ಯಾವದೂ ಎಂದಿಗೂ ಅಸತ್ತಲ್ಲ ಎಂದು ಹೇಳುತ್ತೇವೆ.**[1] **ಹೇಗೆ ತಾರ್ಕಿಕರು ಸತ್ತಿಗಿಂತ ಬೇರೆಯಾದ ವಸ್ತುವನ್ನು ಕಲ್ಪಿಸಿ, ಮತ್ತೆ ಅದಕ್ಕೇ ಹುಟ್ಟುವದಕ್ಕೆ ಮೊದಲೂ ಹಾಳಾದಮೇಲೂ ಅಸತ್ತ್ವವನ್ನು ಹೇಳುತ್ತಾರೋ ಹಾಗೆ ನಾವು ಎಂದಿಗೂ ಎಲ್ಲಿಯೂ ಸತ್ತಿಗಿಂತ ಬೇರೆಯಾದ ಅಭಿಧಾನವನ್ನಾಗಲಿ ಅಭಿಧೇಯವಸ್ತುವನ್ನಾಗಲಿ ಕಲ್ಪಿಸಿರುವದಿಲ್ಲ.**[2] ಎಲ್ಲಾ ಅಭಿಧಾನವೂ ಬೇರೆಯೆಂಬ ಬುದ್ಧಿಯಿಂದ (ಹೇಳಲ್ಪಡುವ) ಅಭಿಧೇಯವೂ ಸತ್ತೇ ಆಗಿರುತ್ತದೆ. ಹೇಗೆ ಲೋಕದಲ್ಲಿ ಹಗ್ಗವೇ ಹಾವೆಂದು ಕರೆಯಲ್ಪಡುತ್ತದೆಯೋ ಅಥವಾ ಹೇಗೆ ಮುದ್ದೆ, ಗಡಿಗೆ ಮುಂತಾದದ್ದು ಮಣ್ಣಿಗಿಂತ ಬೇರೆಯೆಂಬ ಬುದ್ಧಿಯಿಂದ ಮುದ್ದೆ, ಗಡಿಗೆ ಮುಂತಾದ ಶಬ್ದದಿಂದ ಕರೆಯಲ್ಪಡುತ್ತದೆಯೋ (ಹಾಗೆ). ಆದರೆ ಹಗ್ಗವನ್ನು ವಿಂಗಡಿಸಿ ತಿಳಿದುಕೊಂಡವರಿಗೆ ಹೇಗೆ ಹಾವೆಂಬ ಹೆಸರೂ ಬುದ್ಧಿಯೂ ತೊಲಗುವವೋ, ಮತ್ತು ಮಣ್ಣನ್ನು ವಿಂಗಡಿಸಿ ಅರಿತುಕೊಂಡವರಿಗೆ ಗಡಿಗೆ ಮುಂತಾದ ಶಬ್ದಬುದ್ಧಿಗಳು ತೊಲಗುವವೋ ಹಾಗೆ ಸತ್ತನ್ನು ವಿಂಗಡಿಸಿ ಅರಿತುಕೊಂಡವರಿಗೆ ಮತ್ತೊಂದು ಕಾರ್ಯದ ಶಬ್ದಬುದ್ಧಿಗಳು ತೊಲಗುವವು[3] "ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಯಾವದನ್ನು) ಸೇರದೆ ಹಿಂತಿರುಗುವವೋ" (ತೈ. ೨-೯), "ಅನಿರುಕ್ತವೂ ಅನಿಲಯವೂ (ಆದ ಆತ್ಮನಲ್ಲಿ) " (ತೈ. ೨-೭) –ಎಂದು ಮುಂತಾಗಿರುವ ಶ್ರುತಿಗಳಿಂದ (ಹೀಗೆಂದು ಸಿದ್ಧವಾಗುತ್ತದೆ)

## ತೇಜಆದಿಯಾಗಿ ಸೃಷ್ಟಿಯನ್ನು ಹೇಳಿರುವದೇಕೆ ?

(ಭಾಷ್ಯ)

೪೫೭. ಏವಮೀಕ್ಷಿತ್ವಾ ತತ್ ತೇಜಃ ಅಸೃಜತ ತೇಜಃ ಸೃಷ್ಟವತ್ । ನನು "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತಿ ಶ್ರುತ್ಯನ್ತರೇ ಆಕಾಶಾದ್ವಾಯುಃ, ತತಸ್ತೃತೀಯಂ ತೇಜಃ ಶ್ರುತಮ್। ಇಹ ಕಥಂ ಪ್ರಾಥಮ್ಯೇನ?

---

1. ಪ್ರಪಂಚವು ತೋರುವ ಆಕಾರವಿಶೇಷದಿಂದ ಹುಸಿಯೇ ಆದರೂ ಅದು ಸರ್ವಥಾ ಹುಸಿಯಲ್ಲ, ಸದ್ಬ್ರಹ್ಮವೇ ಆ ರೂಪದಿಂದ ತೋರಿಕೊಳ್ಳುತ್ತಿದೆ ಎಂದು ಅಭಿಪ್ರಾಯ.

2. ಕಾರ್ಯರೂಪವಾಗಿ ತೋರುವ ವಸ್ತುವೂ ಅದರ ಹೆಸರೂ ಎಲ್ಲವೂ ಸತ್ತೇ– ಎಂಬುದು ವೇದಾಂತಸಿದ್ಧಾಂತ ತಾರ್ಕಿಕರು ಸತ್ತಿಗಿಂತ ವ್ಯತಿರಿಕ್ತವಾಗಿ ದ್ರವ್ಯ, ಗುಣ, ಕರ್ಮಗಳನ್ನು ಒಪ್ಪಿ, ಅವಕ್ಕೆ ಪ್ರಾಗಭಾವಪ್ರಧ್ವಂಸಾಭಾವರೂಪಗಳುಂಟೆಂದು ಹೇಳುವದನ್ನು ವೇದಾಂತಿಗಳು ಒಪ್ಪುವದಿಲ್ಲ , ಎಲ್ಲವೂ ಸತ್ತಿನ ರೂಪಾಂತರವೇ ಎಂಬುದು ಅವರ ಮತ.

3. ಏಕೆಂದರೆ ಸತ್ತು ಅಭಿಧಾನಾಭಿಧೇಯವಿಭಾಗವಿಲ್ಲದೆ ತದ್ವಿಲಕ್ಷಣತತ್ತ್ವವಾಗಿರುತ್ತದೆ. ಮಾಂ. ಭಾ. ಮಂ. ೨ರ ಅವತರಣಿಕೆ (ಭಾ. ಭಾ. ೫)ನ್ನು ನೋಡಿ.

ತಸ್ಮಾದೇವ ತೇಜಃ ಸೃಜ್ಯತೇ ತತ ಏವ ಚಾಕಾಶಮಿತಿ ವಿರುದ್ಧಮ್। ನೈಷ ದೋಷಃ। ಆಕಾಶವಾಯುಸರ್ಗಾನನ್ತರಂ ತತ್ ಸತ್ತೇಜೋಽಸೃಜತ ಇತಿ ಕಲ್ಪನೋಪಪತ್ತೇಃ। ಅಥವಾ ಅವಿವಕ್ಷಿತ ಇಹ ಸೃಷ್ಟಿಕ್ರಮಃ। ಸತ್ಕಾರ್ಯಮಿದಂ ಸರ್ವಮತಃ ಸದೇಕಮೇವಾದ್ವಿತೀಯಮ್ ಇತ್ಯೇತದ್ ವಿವಕ್ಷಿತಮ್। ಮೃದಾದಿ ದೃಷ್ಟಾನ್ತಾತ್। ಅಥವಾ ತ್ರಿವೃತ್ಕರಣಸ್ಯ ವಿವಕ್ಷಿತತ್ವಾತ್ ತೇಜೋಽಬನ್ನಾನಾಮೇವ ಸೃಷ್ಟಿಮಾಚಷ್ಟೇ। ತೇಜ ಇತಿ ಪ್ರಸಿದ್ಧಂ ಲೋಕೇ ದಗ್ಧೃ ಪಕ್ತೃ ಪ್ರಕಾಶಕಂ ರೋಹಿತಂ ಚೇತಿ ॥

(ಭಾಷ್ಯಾರ್ಥ)

ಹೀಗೆಂದು (ಆಲೋಚಿಸಿ) ನೋಡಿ ಆ (ಸತ್ತು) ತೇಜಸ್ಸನ್ನು ಸೃಜಿಸಿತು, ತೇಜಸ್ಸನ್ನು ಸೃಷ್ಟಿಮಾಡಿತು

(ಆಕ್ಷೇಪ) :– "ಆ ಈ ಆತ್ಮನಿಂದ ಆಕಾಶವು ಉಂಟಾಯಿತು" (ತೈ. ೨-೧) ಎಂದು ಬೇರೊಂದು ಶ್ರುತಿಯಲ್ಲಿ ಆಕಾಶದಿಂದ ವಾಯುವು ಅದರಿಂದ ತೇಜಸ್ಸು (ಎಂದು) ಮೂರನೆಯದಾಗಿ (ಇದನ್ನು) ಹೇಳಿರುತ್ತದೆ, ಇಲ್ಲಿ ಮೊದಲೇ (ಹೇಳಿದ್ದು ಹೇಗೆ)? ಅದರಿಂದಲೇ (ಮೊದಲು) ತೇಜಸ್ಸು ಸೃಷ್ಟವಾಗುತ್ತದೆ, ಅದರಿಂದಲೇ ಆಕಾಶವು (ಮೊದಲು) ಸೃಷ್ಟವಾಗುತ್ತದೆ– ಎಂಬುದು ವಿರುದ್ಧವಲ್ಲವೆ?

(ಪರಿಹಾರ):– ಇದೇನೂ ದೋಷವಲ್ಲ ಏಕೆಂದರೆ ಆಕಾಶವಾಯುಗಳ ಸೃಷ್ಟಿಯಾದ ಬಳಿಕ ಆ ಸತ್ತು ತೇಜಸ್ಸನ್ನು ಸೃಜಿಸಿತು ಎಂದು ಕಲ್ಪಿಸಬಹುದಾಗಿರುತ್ತದೆ[1]. ಅಥವಾ ಇಲ್ಲಿ ಸೃಷ್ಟಿಕ್ರಮವು ವಿವಕ್ಷಿತವಲ್ಲ, ಇದೆಲ್ಲವೂ ಸತ್ಕಾರ್ಯವಾಗಿರುತ್ತದೆಯಾದ್ದರಿಂದ ಸತ್ತು ತನಗೆರಡನೆಯದಿಲ್ಲದ ಒಂದೇ ಎಂಬುದು ವಿವಕ್ಷಿತವು. ಏಕೆಂದರೆ ಮಣ್ಣು ಮುಂತಾದವುಗಳ ದೃಷ್ಟಾಂತವನ್ನು (ಕೊಟ್ಟಿದೆ ಎಂದೂ ವ್ಯಾಖ್ಯಾನಮಾಡಬಹುದು). ಅಥವಾ (ಇಲ್ಲಿ) ತ್ರಿವೃತ್ಕರಣವನ್ನು ಹೇಳಬೇಕೆಂದಿರುವದರಿಂದ ತೇಜೋಬನ್ನಗಳ ಸೃಷ್ಟಿಯನ್ನು ಮಾತ್ರ ಹೇಳಿರುತ್ತದೆ (ಎಂದೂ ಹೇಳಬಹುದು).[2] ತೇಜಸ್ಸು ಎಂದರೆ ಸುಡುವದು, ಬೇಯಿಸುವದು, ಬೆಳಗುವದು ಮತ್ತು ಕೆಂಪಾಗಿರುವದು– ಎಂದು ಲೋಕದಲ್ಲಿ ಪ್ರಸಿದ್ಧವಾಗಿರುವ (ತತ್ತ್ವವು).

## ತೇಜಸ್ಸಿನಿಂದ ಅಪ್ಪಿನ ಸೃಷ್ಟಿ

(ಭಾಷ್ಯ)

೪೫೮. ತತ್ ಸತ್ಸೃಷ್ಟಂ ತೇಜಃ ಐಕ್ಷತ। ತೇಜೋರೂಪಸಂಸ್ಥಿತಂ ಸತ್ ಐಕ್ಷತ ಇತ್ಯರ್ಥಃ। ಬಹು ಸ್ಯಾಂ ಪ್ರಜಾಯೇಯ ಇತಿ ಪೂರ್ವವತ್। ತದಪೋಽ

1. ಸೂ. ಭಾ. ೨-೩-೬ (ಭಾ ಭಾ. ೯೬)ನ್ನು ನೋಡಿ.

2. ಕೊನೆಯ ಎರಡು ವ್ಯಾಖ್ಯಾನಗಳನ್ನು ಅನುಸರಿಸಿದರೆ ತೇಜಸ್ಸು ಮೊದಲು ಸೃಷ್ಟವಾಯಿತು ಎಂದು ಇಲ್ಲಿ ಹೇಳಿಯೇ ಇಲ್ಲವಾದ್ದರಿಂದ ಶ್ರುತ್ಯಂತರಕ್ಕೆ ವಿರೋಧವಿಲ್ಲ ಎಂದಾಗುವದು.

ಸೃಜತ। ಆಪೋ ದ್ರವಾಃ ಸ್ನಿಗ್ಧಾಃ ಸ್ಯನ್ದಿನ್ಯಃ ಶುಕ್ಲಾಶ್ಚೇತಿ ಪ್ರಸಿದ್ಧಾ ಲೋಕೇ ಯಸ್ಮಾತ್ತೇಜಸಃ ಕಾರ್ಯಭೂತಾ ಆಪಃ, ತಸ್ಮಾದ್ಯತ್ರ ಕ್ವಚ ದೇಶೇ ಕಾಲೇ ವಾ ಶೋಚತಿ ಸಂತಪ್ಯತೇ ಸ್ವೇದತೇ ಪ್ರಸ್ವಿದ್ಯತೇ ವಾ ಪುರುಷಃ, ತೇಜಸ ಏವ ತತ್ ತದಾ ಆಪೋಽಧಿಜಾಯನ್ತೇ ॥

(ಭಾಷ್ಯಾರ್ಥ)

ಸತ್ತು ಸೃಜಿಸಿದ ಆ ತೇಜಸ್ಸು (ಯೋಚಿಸಿ)ನೋಡಿತು. ತೇಜೋರೂಪದಲ್ಲಿದ್ದ ಸತ್ತು ನೋಡಿತು ಎಂದರ್ಥ[1] 'ಬಹುವಾಗುವೆನು, ಹುಟ್ಟುವೆನು' ಎಂಬ (ವಾಕ್ಯವು) ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು) ಅದು ಅಪ್ಪನ್ನು ಸೃಜಿಸಿತು ಅಪ್ಪು ಎಂದರೆ ನೀರಾಗಿ ಜಿಗಟಾಗಿ ಹರಿಯುವ ಶುಭ್ರವಾದ (ವಸ್ತು) ಎಂದು ಲೋಕದಲ್ಲಿ ಪ್ರಸಿದ್ಧವಾಗಿರುವ (ತತ್ತ್ವವು). ಅಪ್ಪು (ಹೀಗೆ) ತೇಜಸ್ಸಿನ ಕಾರ್ಯವಾಗಿರುವುದರಿಂದ ಎಲ್ಲೆಲ್ಲಿ (ಯಾವಯಾವ) ದೇಶದಲ್ಲಿ ಅಥವಾ ಕಾಲದಲ್ಲಿ ಮನುಷ್ಯನು ಶೋಕಿಸುತ್ತಾನೋ ಸಂತಪ್ತನಾಗುತ್ತಾನೋ (ಅಥವಾ) (ಸ್ವೇದತೇ=ಪ್ರಸ್ವಿದ್ಯತೇ) ಬೆವರುತ್ತಾನೋ, (ತತ್=ತದಾ) ಆಗ ತೇಜಸ್ಸಿನಿಂದಲೇ ಅಪ್ಪು ಉಂಟಾಗುತ್ತದೆ

(ಉಪನಿಷತ್ತು)

**ತಾ ಆಪ ಐಕ್ಷನ್ತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜನ್ತ ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತ್ಯದ್ಭ್ಯ ಏವ ತದಧ್ಯನ್ನಾದ್ಯಂ ಜಾಯತೇ ॥ ೪ ॥**

೪. ಆ ಅಪ್ಪು 'ಬಹುವಾಗುವೆನು, ಹುಟ್ಟುವೆನು' ಎಂದು (ಯೋಚಿಸಿ)ನೋಡಿತು. ಅದು ಅನ್ನವನ್ನು ಸೃಜಿಸಿತು. ಆದ್ದರಿಂದ ಎಲ್ಲೆಲ್ಲಿ ಮಳೆಗರೆಯುತ್ತದೆಯೋ ಅಲ್ಲಿಯೇ ಹೆಚ್ಚಿನ ಅನ್ನವಾಗುತ್ತದೆ. ಅಪ್ಪಿನಿಂದಲೇ ಆ ಅನ್ನಾದ್ಯವು ಉಂಟಾಗುತ್ತದೆ.

## ಅಪ್ಪಿನಿಂದ ಅನ್ನದ ಸೃಷ್ಟಿ

(ಭಾಷ್ಯ)

೪೫. ತಾ ಆಪ ಐಕ್ಷನ್ತ ಪೂರ್ವವದೇವ ಅಬಾಕಾರಸಂಸ್ಥಿತಂ ಸದೈಕ್ಷತೇತ್ಯರ್ಥಃ। ಬಹ್ವ್ಯಃ ಪ್ರಭೂತಾಃ ಸ್ಯಾಮ ಭವೇಮ ಪ್ರಜಾಯೇಮಹಿ ಉತ್ಪದ್ಯೇಮಹಿ। ಇತಿ। ತಾ ಅನ್ನಮಸೃಜನ್ತ ಪೃಥಿವೀಲಕ್ಷಣಮ್। ಪಾರ್ಥಿವಂ ಹಿ ಅನ್ನಮ್। ಯಸ್ಮಾದಪ್ಕಾರ್ಯಮನ್ನಂ ತಸ್ಮಾದ್ ಯತ್ರ ಕ್ವಚ ವರ್ಷತಿ ದೇಶೇ ತತ್ ತತ್ರೈವ

1. ಸೂ. ಭಾ. ೨–೩–೧೩ (ಭಾ. ಭಾ. ೧೮೩)ರಲ್ಲಿ ಪರಮೇಶ್ವರನೇ ಆಯಾ ರೂಪದಿಂದ ಇದ್ದುಕೊಂಡು ಮುಂದಿನ ಕಾರ್ಯವನ್ನು ಸೃಷ್ಟಿಮಾಡುತ್ತಾನೆಂದು ನಿರ್ಣಯಿಸಿದೆ.

ಭೂಯಿಷ್ಠಂ ಪ್ರಭೂತಮನ್ನಂ ಭವತಿ। ಅತೋಽದ್ಭ್ಯ ಏವ ತದನ್ನಾದ್ಯಮ್ ಅಧಿಜಾಯತೇ। ತಾ ಅನ್ನಮಸೃಜನ್ತ ಇತಿ ಪೃಥಿವ್ಯುಕ್ತಾ ಪೂರ್ವಮ್। ಇಹ ತು ದೃಷ್ಟಾನ್ತೇಽನ್ನಂ ಚ ತದಾದ್ಯಂ ಚ ಇತಿ ವಿಶೇಷಣಾದ್ ವ್ರೀಹಿಯವಾದ್ಯಾ ಉಚ್ಯನ್ತೇ। ಅನ್ನಂ ಚ ಗುರು ಸ್ಥಿರಂ ಧಾರಣಂ ಕೃಷ್ಣಂ ಚ ರೂಪತಃ ಪ್ರಸಿದ್ಧಮ್॥

(ಭಾಷ್ಯಾರ್ಥ)

'ಆ ಅಪ್ಪು (ಆಲೋಚಿಸಿ)ನೋಡಿತು' ಎಂದರೆ ಹಿಂದಿನಂತೆಯೇ ಇಲ್ಲಿಯೂ ಅಪ್ಪಿನ ಆಕಾರದಿಂದಾದ ಸತ್ತೇ ನೋಡಿತು ಎಂದರ್ಥ ಬಹು, ಬಹಳವಾಗಿ ಆಗುವೆನು, ಹುಟ್ಟುವೆನು -ಎಂದು (ನೋಡಿತು) ಅದು ಪೃಥಿವೀರೂಪವಾದ ಅನ್ನವನ್ನು ಸೃಜಿಸಿತು. ಅನ್ನವು ಪಾರ್ಥಿವವಷ್ಟೆ[1]? ಅನ್ನವು ಅಪ್ಪಿನ ಕಾರ್ಯವಾಗಿದೆ ಯಷ್ಟೆ, ಆದ್ದರಿಂದ ಯಾವಯಾವ ದೇಶದಲ್ಲಿ ಮಳೆಗರೆಯುವದೋ (ತತ್=ತತ್ರ) ಅಲ್ಲಿಯೇ ಹೆಚ್ಚಿನ ಬಹಳ ಅನ್ನವುಂಟಾಗುತ್ತದೆ ಆದ್ದರಿಂದ ನೀರಿನಿಂದಲೇ ಆ ಅನ್ನಾದ್ಯವುಂಟಾಗುತ್ತದೆ ಅವು ಅನ್ನವನ್ನು ಸೃಜಿಸಿತು -ಎಂದು ಹಿಂದಿನ (ವಾಕ್ಯ)ದಲ್ಲಿ ಪೃಥಿವಿಯನ್ನು ಹೇಳಿರುತ್ತದೆ, ಇಲ್ಲಿಯಾದರೆ ದೃಷ್ಟಾಂತವಾದ್ದರಿಂದ ಅನ್ನವೂ ಆದ್ಯವೂ ಆದದ್ದು -ಎಂದು ವಿಶೇಷಣವನ್ನು ಕೊಟ್ಟಿರುವದರಿಂದ ಬತ್ತ, ಜವೆ- ಮುಂತಾದವುಗಳನ್ನು ಹೇಳಿದೆ[2] ಅನ್ನವೆಂಬುದು ಭಾರವಾಗಿಯೂ ಗಟ್ಟಿ ಯಾಗಿಯೂ ಧಾರಕವಾಗಿಯೂ ಕಪ್ಪುಬಣ್ಣದ್ದಾಗಿಯೂ ಪ್ರಸಿದ್ಧವಾಗಿರುವ (ವಸ್ತು).

## ಈಕ್ಷಿತೃತ್ವದ ವಿಷಯಕ್ಕೆ ಆಕ್ಷೇಪಸಮಾಧಾನಗಳು

(ಭಾಷ್ಯ)

೪೬೦ ನನು ತೇಜಃಪ್ರಭೃತಿಷು ಈಕ್ಷಣಂ ನ ಗಮ್ಯತೇ। ಹಿಂಸಾದಿ ಪ್ರತಿಷೇಧಾಭಾವಾತ್। ತ್ರಾಸಾದಿಕಾರ್ಯಾನುಪಲಮ್ಭಾಚ್ಚ। ತತ್ರ ಕಥಂ "ತತ್ತೇಜ ಐಕ್ಷತ" ಇತ್ಯಾದಿ? ನೈಷ ದೋಷಃ। ಈಕ್ಷಿತೃಕಾರಣಪರಿಣಾಮತ್ವಾತ್ ತೇಜಃ ಪ್ರಭೃತೀನಾಮ್, ಸತ ಏವೇಕ್ಷಿತುರ್ನಿಯತಕ್ರಮವಿಶಿಷ್ಟಕಾರ್ಯೋತ್ಪಾದಕತ್ವಾಚ್ಚ ತೇಜಃಪ್ರಭೃತಿ ಈಕ್ಷತ ಇವ ಈಕ್ಷತ[3] ಇತ್ಯುಚ್ಯತೇ ಭೂತಮ್। ನನು ಸತೋಽ ಪ್ಯುಪಚರಿತಮೇವೇಕ್ಷಿತೃತ್ವಮ್। ನ। ಸದೀಕ್ಷಣಸ್ಯ ಕೇವಲಶಬ್ದಗಮ್ಯತ್ವಾನ್ನ ಶಕ್ಯಮುಪಚರಿತಂ ಕಲ್ಪಯಿತುಮ್ ತೇಜಃಪ್ರಭೃತೀನಾಂ ತ್ವನುಮೀಯತೇ

1. ಆದ್ದರಿಂದ ಪೃಥಿವಿಯನ್ನು ಅನ್ನವೆಂದಿರುತ್ತದೆ.

2. ನೀರಿನಿಂದ ಬತ್ತ, ಜವೆ- ಮುಂತಾದ ಅನ್ನವಾಗುವೆಂಬುದು ದೃಷ್ಟಾಂತ, ಅಪ್ಪಿನಿಂದ ಪೃಥಿವಿಯಾಯಿತೆಂಬುದು ದಾರ್ಷ್ಟಾಂತಿಕ.

3. 'ಐಕ್ಷತ ಇವೈಕ್ಷತ' ಎಂದೇ ಮೂಲದಲ್ಲಿದ್ದು ಹೀಗೆ ಲೇಖಕರು ಬರೆದುಕೊಂಡಿರ ಬಹುದೆಂದು ಊಹಿಸುವದಕ್ಕೆಡೆಯಿದೆ: ಮುಂದೆ ಹಾಗೆಂದೇ ಪ್ರಯೋಗವಿದೆ.

ಮುಖ್ಯೇಕ್ಷಣಾಭಾವ ಇತಿ ಯುಕ್ತಮುಪಚರಿತಂ ಕಲ್ಪಯಿತುಮ್ । ನನು ಸತೋಽಪಿ ಮೃದ್ವತ್ಕಾರಣತ್ವಾತ್ ಅಚೇತನತ್ವಂ ಶಕ್ಯಮನುಮಾತುಮ್ । ಅತಃ ಪ್ರಧಾನಸ್ಯೈವಾಚೇತನಸ್ಯ ಸತಶ್ಚೇತನಾರ್ಥತ್ವಾತ್ । ನಿಯತಕಾಲಕ್ರಮವಿಶಿಷ್ಟ ಕಾರ್ಯೋತ್ಪಾದಕತ್ವಾಚ್ಚ ಐಕ್ಷತೈವೈಕ್ಷತ ಇತಿ ಶಕ್ಯಮನುಮಾತುಮ್ ಉಪ ಚರಿತಮೇವೇಕ್ಷಣಮ್ । ದೃಷ್ಟಶ್ಚ ಲೋಕೇಽಚೇತನೇ ಚೇತನವದುಪಚಾರಃ । ಯಥಾ ಕೂಲಂ ಪಿಪತಿಷತೀತಿ । ತದ್ವತ್ಸತೋಽಪಿ ಸ್ಯಾತ್ । ನ । "ತತ್ಸತ್ಯಂ ಸ ಆತ್ಮಾ" (೬-೧೪-೩) ಇತಿ ತಸ್ಮಿನ್ನಾತ್ಮೋಪದೇಶಾತ್ । ಆತ್ಮೋಪದೇಶೋಽಪ್ಯುಪಚರಿತ ಇತಿ ಚೇತ್ । ಯಥಾ ಮಮಾಽಽತ್ಮಾ ಭದ್ರಸೇನ ಇತಿ ಸರ್ವಾರ್ಥ ಕಾರಿಣ್ಯನಾತ್ಮನಿ ಆತ್ಮತ್ವೋಪಚಾರಸ್ತದ್ವತ್ । ನ । ಸದಸ್ಮೀತಿ ಸತ್ಸತ್ಯಾಭಿ ಸಂಧಸ್ಯ "ತಸ್ಯ ತಾವದೇವ ಚಿರಮ್" (೬-೧೪-೨) ಇತಿ ಮೋಕ್ಷೋಪದೇಶಾತ್ । ಸೋಽಪ್ಯುಪಚಾರ ಇತಿ ಚೇತ್ । ಪ್ರಧಾನಾತ್ಮಾಭಿಸಂಧಸ್ಯ ಮೋಕ್ಷಸಾಮೀಪ್ಯಂ ವರ್ತತ ಇತಿ ಮೋಕ್ಷೋಪದೇಶೋಽಪ್ಯುಪಚರಿತ ಏವ । ಯಥಾ ಲೋಕೇ ಗ್ರಾಮಂ ಗನ್ತುಂ ಪ್ರಸ್ಥಿತಃ । 'ಪ್ರಾಪ್ತವಾನಹಂ ಗ್ರಾಮಮ್' ಇತಿ ಬ್ರೂಯಾ ತ್ತ್ವರಾಪೇಕ್ಷಯಾ, ತದ್ವತ್ । ನ । "ಯೇನ ವಿಜ್ಞಾತೇನಾಽವಿಜ್ಞಾತಂ ವಿಜ್ಞಾತಂ ಭವತಿ" (೬-೧-೩) ಇತ್ಯುಪಕ್ರಮಾತ್ । ಸತ್ಯೇಕಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ । ತದನನ್ಯತ್ವಾತ್ ಸರ್ವಸ್ಯ । ಅದ್ವಿತೀಯತ್ವವಚನಾಚ್ಚ । ನ ಚಾನ್ಯದ್ ವಿಜ್ಞಾತವ್ಯಮ್ ಅವಶಿಷ್ಟಂ ಶ್ರಾವಿತಂ ಶ್ರುತ್ಯಾ, ಅನುಮೇಯಂ ವಾ ಲಿಙ್ಗತೋಽಸ್ತಿ । ಯೇನ ಮೋಕ್ಷೋಪದೇಶ ಉಪಚರಿತಃ ಸ್ಯಾತ್ । ಸರ್ವಸ್ಯ ಚ ಪ್ರಪಾಠಕಾರ್ಥಸ್ಯ ಉಪಚರಿತತ್ವಪರಿಕಲ್ಪನಾಯಾಂ ವೃಥಾ ಶ್ರಮಃ ಪರಿಕಲ್ಪ ಯಿತುಃ ಸ್ಯಾತ್ । ಪುರುಷಾರ್ಥಸಾಧನವಿಜ್ಞಾನಸ್ಯ ತರ್ಕೇಣೈವಾಧಿಗತತ್ವಾತ್ ತಸ್ಯ । ತಸ್ಮಾದ್ ವೇದಪ್ರಾಮಾಣ್ಯಾನ್ನ ಯುಕ್ತಃ ಶ್ರುತಾರ್ಥಪರಿತ್ಯಾಗಃ । ಅತಶ್ಚೇತನಾವತ್ ಕಾರಣಂ ಜಗತಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ) :– ತೇಜಸ್ಸು ಮುಂತಾದವುಗಳಲ್ಲಿ (ಆಲೋಚಿಸಿ) ನೋಡುವಿಕೆ (ಯು ಇದೆ ಎಂದು) ಗೊತ್ತಾಗುವದಿಲ್ಲವಲ್ಲ ! ಏಕೆಂದರೆ (ಅವನ್ನು) ಹಿಂಸೆಮಾಡ ಬಾರದು– ಎಂದು ಮುಂತಾಗಿ (ಶಾಸ್ತ್ರದಲ್ಲಿ) ನಿಷೇಧಿಸಿರುವದಿಲ್ಲ , (ಅವುಗಳಲ್ಲಿ) ಅಂಜಿಕೆಯೇ ಮುಂತಾದ (ಚೇತನ)ಕಾರ್ಯವೂ ಕಂಡುಬರುವದಿಲ್ಲವಲ್ಲ ! ಹೀಗಿರು ವಲ್ಲಿ "ಆ ತೇಜಸ್ಸು ನೋಡಿತು" ಎಂದು ಮುಂತಾಗಿ (ಹೇಳಿರುವದು) ಹೇಗೆ (ಸರಿ)?

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ತೇಜಸ್ಸೇ ಮುಂತಾದವು ಗಳು ನೋಡುವ ಕಾರಣದ ಪರಿಣಾಮವಾಗಿರುತ್ತವೆ, ನೋಡುವ ಸತ್ತೇ ಗೊತ್ತಾದ ಕ್ರಮದಲ್ಲಿ ಕಾರ್ಯವನ್ನು ಉಂಟುಮಾಡುತ್ತಿರುವದರಿಂದ (ತೇಜಸ್ಸು) ನೋಡಿ ದಂತೆ (ಎಂಬರ್ಥದಲ್ಲಿ) ನೋಡಿತು ಎಂದು ಭೂತವು (ನೋಡಿತೆಂದು) ಹೇಳಿದೆ.

(ಆಕ್ಷೇಪ) :– ಸತ್ತು ನೋಡಿತೆಂಬುದೂ ಗೌಣವೇ ಅಲ್ಲವೆ ?

(ಪರಿಹಾರ) :– ಸತ್ತು ನೋಡಿತು ಎಂಬುದು ಬರಿಯ ಶಬ್ದದಿಂದಲೇ ತಿಳಿದುಬರತಕ್ಕದ್ದಾದ್ದರಿಂದ[1] (ಇದು) ಗೌಣವೆಂದು ಹೇಳುವದಕ್ಕೆ ಆಗುವದಿಲ್ಲ[2] ತೇಜಸ್ಸೇ ಮುಂತಾದವುಗಳಿಗಾದರೋ ಮುಖ್ಯವಾದ ಈಕ್ಷಣವು ಇಲ್ಲ ಎಂದು ಅನುಮಾನಪ್ರಮಾಣದಿಂದ ಗೊತ್ತುಪಡಿಸಬಹುದಾದ್ದರಿಂದ[3] (ಆ ಈಕ್ಷಣವು) ಗೌಣವೆಂದು ಕಲ್ಪಿಸುವದು ಯುಕ್ತವು.

(ಆಕ್ಷೇಪ) .– ಸತ್ತು ಮಣ್ಣಿನಂತೆ ಕಾರಣವಾಗಿರುವದರಿಂದ (ಅದೂ) ಅಚೇತನವೇ ಎಂದು ಕಲ್ಪಿಸಬಹುದಲ್ಲವೆ[4] ? ಆದ್ದರಿಂದ ಅಚೇತನವಾಗಿರುವ ಪ್ರಧಾನವೇ ಚೇತನಾರ್ಥವಾಗಿ (ಕೆಲಸಮಾಡು)ವದರಿಂದ ಗೊತ್ತಾದ ಕಾಲಕ್ರಮದಿಂದ ಕೂಡಿದ ಕಾರ್ಯವನ್ನುಂಟುಮಾಡುವದರಿಂದ (ಆಲೋಚನೆಮಾಡಿ) ನೋಡಿದಂತೆ ಎಂದು ಗೌಣವಾಗಿಯೇ ಈಕ್ಷಣವನ್ನು (ಹೇಳಿರುತ್ತದೆ)[5]. ಲೋಕದಲ್ಲಿ ಅಚೇತನವನ್ನು ಚೇತನವೆಂದು ಗೌಣವಾಗಿ ಕರೆದಿರುವದು ಕಂಡೂಬರುತ್ತದೆ ; ಉದಾಹರಣೆಗೆ 'ಕೂಲವು ಬೀಳುವೆನೆನ್ನುತ್ತಿದೆ' (ಎನ್ನುವರು) ಅದರಂತೆ ಸತ್ತಿಗೂ ಆಗಬಹುದಲ್ಲ !

(ಪರಿಹಾರ) .– ಹಾಗಲ್ಲ "ಅದೇ ಸತ್ಯವು, ಅದೇ ಆತ್ಮನು" (೬-೧೪-೩) ಎಂದು ಅದರಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಿರುತ್ತದೆ.

(ಆಕ್ಷೇಪ) :– ಆತ್ಮನೆಂದು ಹೇಳಿರುವದೂ ಗೌಣವೇ ಎಂದರೊ ? ಹೇಗೆ 'ಭದ್ರಸೇನನು ನನ್ನ ಆತ್ಮನು' ಎಂದು ತಾನಲ್ಲದ (ಭದ್ರಸೇನನಲ್ಲಿ) ತಾನೆಂದು ಗೌಣವಾಗಿ (ಪ್ರಯೋಗಿಸುವರೋ) ಹಾಗೆ (ಇದೂ ಆಗಬಹುದಲ್ಲ) !

(ಪರಿಹಾರ) :– ಹಾಗಲ್ಲ ಸತ್ತೇ ನಾನಾಗಿದೇನೆ ಎಂದು ಸತ್ತೆಂಬ ಸತ್ಯದಲ್ಲಿ ನಿಷ್ಠನಾಗಿರುವವನಿಗೆ "ಅವನಿಗೆ ಅಳಿಯುವವರೆಗೇ ತಡ" (೬–೧೪–೨) ಎಂದು ಮೋಕ್ಷ(ಫಲ)ವನ್ನು ಹೇಳಿರುತ್ತದೆ

---

1. ಜಗತ್ಕಾರಣವು ಸತ್ತು– ಎಂಬುದು ಶಾಸ್ತ್ರದಿಂದ ಮಾತ್ರ ತಿಳಿಯಬಹುದು ; ಏಕೆಂದರ ಜಗತ್ಕಾರಣವನ್ನು ಪ್ರತ್ಯಕ್ಷದಿಂದ ತಿಳಿಯುವದಕ್ಕೆ ಆಗುವದಿಲ್ಲ

2 ಸತ್ತು ಪ್ರತ್ಯಕ್ಷವೂ ಅಲ್ಲ, ಅದಕ್ಕೆ ಯಾವ ಲಿಂಗವೂ ಇಲ್ಲ ; ಆದ್ದರಿಂದ ಅದರ ಈಕ್ಷಣವು ಮುಖ್ಯವಲ್ಲವೆಂದು ಕಲ್ಪಿಸುವದಕ್ಕೆ ಯಾವ ಪ್ರಮಾಣದ ಆಧಾರವೂ ಇಲ್ಲ

3. ಹಿಂಸಾದಿಪ್ರತಿಷೇಧವಿಲ್ಲದಿರುವದೇ ಮುಂತಾದ ಕಾರಣಗಳಿಂದ ತೇಜಆದಿಗಳಿಗೆ ಮುಖ್ಯೇಕ್ಷಣವಿಲ್ಲ ಎಂದು ಕಲ್ಪಿಸಬಹುದು.

4. ಅಚೇತನವಾದ ಮಣ್ಣು ಅನೇಕಾತ್ಮಕವಾಗಿರುವದರಿಂದ ಅದಕ್ಕೆ ಪರಿಣಾಮವು ಸಂಭವಿಸುತ್ತದೆಯಾಗಿ ಅದು ಕಾರಣವಾಗಬಹುದು, ಅಸಂಹತನಾದ ಆತ್ಮನಿಗೆ ಸಂಭವಿಸುವದಿಲ್ಲ– ಎಂದು ಪೂರ್ವಪಕ್ಷಿಯ ಭಾವ ಸೂ ಭಾ. ೧–೧–೫ ಅವತರಣಿಕೆ (ಭಾ ಭಾ. ೭೨)ನ್ನು ನೋಡಿ.

5. ಪ್ರಧಾನಕ್ಕೆ ಗೌಣವಾದ ಈಕ್ಷಣವಿರಬಹುದೆಂಬುವನ್ನು ಸೂ. ಭಾ. ೧–೧–೬ರ ಅವತರಣಿಕೆ (ಭಾ. ಭಾ. ೭೩)ಯಲ್ಲಿ ಶಂಕಿಸಿ ಖಂಡಿಸಿದೆ.

(ಆಕ್ಷೇಪ) – ಅದೂ ಗೌಣವೇ ಎಂದರೊ ? ಪ್ರಧಾನಾತ್ಮನಲ್ಲಿ ನಿಷ್ಠನಾದವನಿಗೆ ಮೋಕ್ಷಕ್ಕೆ ಸಾಮೀಪ್ಯವುಂಟಾಗುತ್ತದೆಯಾದ್ದರಿಂದ (ಈ) ಮೋಕ್ಷೋಪದೇಶವೂ ಗೌಣವೇ ಲೋಕದಲ್ಲಿ ಊರಿಗೆ ಹೋಗುವದಕ್ಕೆ ಹೊರಟವನು 'ಊರನ್ನು ಮುಟ್ಟಿದೆನು' ಎಂದು ಬೇಗ (ಮುಟ್ಟುವೆನೆಂಬ) ಅಭಿಪ್ರಾಯದಿಂದ ಹೇಗೆ ಹೇಳುವನೋ ಹಾಗೆ

(ಪರಿಹಾರ) – ಹಾಗಲ್ಲ ಏಕೆಂದರೆ "ಯಾವದನ್ನು ಅರಿತುಕೊಂಡರೆ ಅರಿಯದೆ ಇದ್ದದ್ದೂ ಅರಿಯಲ್ಪಟ್ಟಂತೆ ಆಗುವದೋ" (೬-೧-೩) ಎಂದು ಉಪಕ್ರಮದಲ್ಲಿ ಹೇಳಿರುತ್ತವೆ. ನತ್ತೊಂದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಆಗುವದು ಏಕೆಂದರೆ ಯಾವದೂ ಅವಕ್ಕಿಂತ ಬೇರೆಯಾಗಿರುವದಿಲ್ಲ ಅದು ಅದ್ವಿತೀಯವೆಂದು (೬-೨-೧) ಹೇಳಿರುವದರಿಂದಲೂ (ಇದು ಸಿದ್ಧವಾಗುತ್ತದೆ) ಇನ್ನೊಂದು ಅರಿಯತಕ್ಕದ್ದೆಂದು ಶ್ರುತಿಯಲ್ಲಿ ಹೇಳಿರುವದಾಗಲಿ (ಯಾವದಾದರೊಂದು) ಲಿಂಗದಿಂದ ಅನುಮಾನಿಸಬಹುದಾದದ್ದಾಗಲಿ ಇರುವದೂ ಇಲ್ಲ, ಹಾಗಿದ್ದರೆ ಮೋಕ್ಷೋಪದೇಶವು ಗೌಣವೆಂದೂ ಆಗಬಹುದಾಗಿತ್ತು (ಈ) ಅಧ್ಯಾಯದ ವಿಷಯವೆಲ್ಲ ಉಪಚರಿತಾರ್ಥವೇ ಎಂದು ಕಲ್ಪಿಸಿದರೆ (ಹಾಗೆ) ಕಲ್ಪಿಸಿದವನಿಗೆ ಬರಿಯ ಭ್ರಮವೇ ಆಗುತ್ತದೆ, ಏಕೆಂದರೆ ಆತನ (ಮತದಲ್ಲಿ) ಪುರುಷಾರ್ಥಕ್ಕೆ ಸಾಧನವಾದದ್ದರ ತಿಳಿವಳಿಕೆಯು ತರ್ಕದಿಂದಲೇ ಬಂದಿದೆ ಎಂದಾಗುತ್ತದೆ[1] ಆದ್ದರಿಂದ ವೇದವು ಪ್ರಮಾಣವಾಗಬೇಕಾದರೆ[2] ಶ್ರುತಾರ್ಥವನ್ನು ಬಿಡುವದು ಯುಕ್ತವಲ್ಲ. ಆದ್ದರಿಂದ ಚೇತನಾವಂತವಾದ (ಆತ್ಮತತ್ತ್ವವೇ) ಜಗತ್ತಿಗೆ ಕಾರಣವು ಎಂದು ಸಿದ್ಧವಾಯಿತು.

---

# ಆರನೆಯ ಅಧ್ಯಾಯ-ಮೂರನೆಯ ಖಂಡ

(ಸೃಷ್ಟಿಯಲ್ಲಿ ಆತ್ಮನ ಪ್ರವೇಶ, ತ್ರಿವೃತ್ಕರಣ)

## ಪರಮಾತ್ಮನು ಭೂತಗಳಲ್ಲಿ ಪ್ರವೇಶಿಸಿ ನಾಮರೂಪವ್ಯಾಕರಣಮಾಡಿದ್ದು

(ಉಪನಿಷತ್ತು)

**ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವನ್ತ್ಯಾಣ್ಡಜಂ ಜೀವಜಮುದ್ಭಿಜ್ಜಮಿತಿ ॥ ೧ ॥**

1 ಸಾಂಖ್ಯರಿಗೆ ತರ್ಕವೇ ಪ್ರಧಾನ, ಶಬ್ದವು ಅದಕ್ಕೆ ಎರಡನೆಯದು.

2. ವೇದವು ಪ್ರತ್ಯಕ್ಷಾನುಮಾನಗಳಿಂದ ಅರಿತುಕೊಳ್ಳುವದಕ್ಕಾಗದ ಅತೀಂದ್ರಿಯ ತತ್ತ್ವವನ್ನು ತಿಳಿಸುವದರಿಂದ ಪ್ರಮಾಣವೆಂಬುದು ವೇದಾಂತಿಗಳ ಮತ.

೧. ಆ ಈ ಭೂತಗಳಿಗೆ ಆಂಡಜ, ಜೀವಜ, ಉದ್ಭಿಜ್ಜ- ಎಂದು ಮೂರೇ ಬೀಜಗಳಾಗಿರುತ್ತವೆ.

## ಪ್ರಾಣಿಗಳಿಗೆ ಆಯಾ ಜಾತಿಯ ಪ್ರಾಣಿಗಳು ಕಾರಣ

(ಭಾಷ್ಯ)

೪೬೧ ತೇಷಾಂ ಜೀವಾವಿಷ್ಟಾನಾಂ ಖಲು ಏಷಾಂ ಪಕ್ಷ್ಯಾದೀನಾಂ ಭೂತಾನಾಮ್। 'ಏಷಾಮ್' ಇತಿ ಪ್ರತ್ಯಕ್ಷನಿರ್ದೇಶಾತ್। ನ ತು ತೇಜಃ ಪ್ರಭೃತೀನಾಮ್। ತೇಷಾಂ ತ್ರಿವೃತ್ಕರಣಸ್ಯ ವಕ್ಷ್ಯಮಾಣತ್ವಾತ್। ಅಸತಿ ತ್ರಿವೃತ್ಕರಣೇ ಪ್ರತ್ಯಕ್ಷನಿರ್ದೇಶಾನುಪಪತ್ತೇಃ। ದೇವತಾಶಬ್ದಪ್ರಯೋಗಾಚ್ಚ ತೇಜಃ ಪ್ರಭೃತಿಷು "ಇಮಾಸ್ತಿಸ್ರೋ ದೇವತಾಃ" ಇತಿ। ತಸ್ಮಾತ್ ತೇಷಾಂ ಖಲ್ವೇಷಾಂ ಭೂತಾನಾಂ ಪಕ್ಷಿಪಶುಸ್ಥಾವರಾದೀನಾಂ ತ್ರೀಣ್ಯೇವ ನಾತಿರಿಕ್ತಾನಿ ಬೀಜಾನಿ ಕಾರಣಾನಿ ಭವನ್ತಿ। ಕಾನಿ ತಾನೀತಿ? ಉಚ್ಯನ್ತೇ। ಆಣ್ಡಜಮ್ ಅಣ್ಡಾಜ್ಜಾತಮ್ ಅಣ್ಡಜಮ್। ಅಣ್ಡಜಮೇವಾಽಽಣ್ಡಜಂ ಪಕ್ಷ್ಯಾದಿ। ಪಕ್ಷಿಸರ್ಪಾದಿಭ್ಯೋ ಹಿ ಪಕ್ಷಿಸರ್ಪಾದಯೋ ಜಾಯಮಾನಾ ದೃಶ್ಯನ್ತೇ। ತೇನ ಪಕ್ಷೀ ಪಕ್ಷಿಣಾಂ ಬೀಜಂ ಸರ್ಪಃ ಸರ್ಪಾಣಾಮ್। ತಥಾ ಅನ್ಯದಪಿ ಅಣ್ಡಾಜ್ಜಾತಂ ತಜ್ಜಾತೀಯಾನಾಂ ಬೀಜಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಜೀವಾವಿಷ್ಟವಾದ ಈ ಪಕ್ಷಿಗಳೇ ಮುಂತಾದ ಭೂತಗಳಿಗೆ[1]- ಈ (ಭೂತಗಳಿಗೆ) ಪ್ರತ್ಯಕ್ಷವಾಗಿ(ರುವಂತೆ) ಹೇಳಿರುವದರಿಂದ (ಇವು ಪ್ರತ್ಯಕ್ಷಾದಿ ಭೂತಗಳೇ ಹೊರತು) ತೇಜಸ್ಸೇ ಮುಂತಾದ (ಭೂತ)ಗಳಲ್ಲ ಏಕೆಂದರೆ ಅವುಗಳ ತ್ರಿವೃತ್ಕರಣವನ್ನು ಮುಂದೆ ಹೇಳಲಾಗುತ್ತಿದೆ, ತ್ರಿವೃತ್ಕರಣವಾಗದಿದ್ದರೆ (ಅವನ್ನು) ಪ್ರತ್ಯಕ್ಷವೆಂದು ನಿರ್ದೇಶಮಾಡುವದು ಸರಿಯಾಗುವದಿಲ್ಲ[2]. ತೇಜಸ್ಸು ಮುಂತಾದ (ಭೂತಗಳಲ್ಲಿ) "ಈ ಮೂರು ದೇವತೆಗಳನ್ನು" (೬-೩-೨) ಎಂದು ದೇವತಾಶಬ್ದವನ್ನು ಪ್ರಯೋಗಮಾಡಿರುವದರಿಂದಲೂ (ಹೀಗೆಂದು ಸಿದ್ಧವಾಗುತ್ತದೆ)[3]. ಆದ್ದರಿಂದ- ಆ ಈ ಪಶುಪಕ್ಷಿಸ್ಥಾವರಾದಿಭೂತಗಳಿಗೆ ಮೂರೇ, ಹೆಚ್ಚಲ್ಲ, ಬೀಜಗಳು ಕಾರಣಗಳು ಇರುತ್ತವೆ ಅವು ಯಾವವು? ಎಂದರೆ

---

1. ಇಲ್ಲಿ ಶರೀರಸಹಿತವಾದ ಜೀವರುಗಳನ್ನೇ ಭೂತಗಳೆಂದಿದೆ ಎಂದು ಭಾವ.

2. ತ್ರಿವೃತ್ಕರಣವಾದ ಮೇಲೆಯೇ ಅವು ಸ್ಥೂಲವಾಗಿರುವದರಿಂದ ಪ್ರತ್ಯಕ್ಷವಿಷಯವಾಗುತ್ತವೆ. 'ದೇವತೆಗಳು ಪರೋಕ್ಷವೆಂದು ಪ್ರಸಿದ್ಧರಾಗಿರುವದರಿಂದ ಮುಂದಿನ ಕಂಡಿಕೆಯಲ್ಲಿ ಪರೋಕ್ಷವಾದ ಭೂತಗಳನ್ನು ಹೇಳಿದೆಯೆಂದು ಗೊತ್ತಾಗುತ್ತದೆ' ಎಂದು ಟೀಕೆ.

3 ಮೂಲಭೂತಗಳನ್ನು ದೇವತೆಗಳೆಂದು ಮುಂದಿನ ಕಂಡಿಕೆಯಲ್ಲಿ ಕರೆದಿದೆ; ಇಲ್ಲಿ ಸುಮ್ಮ[illegible]ತಶಬ್ದವನ್ನು ಪ್ರಯೋಗಿಸಿದೆ. ಆದ್ದರಿಂದ ಇದು ಪ್ರಾಣಿವಾಚಕವೇ -ಎಂದರ್ಥ.

ಆಂಡಜವು- ಅಂಡದಿಂದ ಹುಟ್ಟಿದ್ದು ಅಂಡಜವು, ಅಂಡಜನಾದದ್ದೇ ಆಂಡಜವು[1]. ಪಕ್ಷಿಗಳು ಮುಂತಾದದ್ದು, ಪಕ್ಷಿ, ಹಾವು- ಮುಂತಾದವುಗಳಿಂದ ಪಕ್ಷಿ, ಹಾವು- ಮುಂತಾದವುಗಳೇ ಹುಟ್ಟುವದು ಕಂಡುಬರುತ್ತದೆ ಆದ್ದರಿಂದ ಪಕ್ಷಿಯು ಪಕ್ಷಿ ಗಳಿಗೂ ಹಾವು ಹಾವುಗಳಿಗೂ ಬೀಜವು[2] ಹೀಗೆಯೇ (ಇನ್ನೂ) ಬೇರೆಯಾಗಿ ಅಂಡದಿಂದ ಹುಟ್ಟಿದ (ಪ್ರಾಣಿಯು) ತನ್ನ ಜಾತಿಯ (ಪ್ರಾಣಿಗಳಿಗೆ) ಕಾರಣವು ಎಂದರ್ಥ

## ಅಂಡವು ಅಂಡಜಪ್ರಾಣಿಗಳಿಗೆ ಕಾರಣವಲ್ಲ, ಅಂಡಜವೇ ಕಾರಣ

(ಭಾಷ್ಯ)

೪೬೨ ನನು ಅಣ್ಡಾಜ್ಜಾತಮ್ ಅಣ್ಡಜಮ್ ಉಚ್ಯತೇ । ಅತೋಽಣ್ಡ ಮೇವ ಬೀಜಮಿತಿ ಯುಕ್ತಮ್ । ಕಥಮಣ್ಡಜಂ ಬೀಜಮುಚ್ಯತೇ ? ಸತ್ಯ ಮೇವಂ ಸ್ಯಾತ್ ಯದಿ ತ್ವದಿಚ್ಛಾತನ್ತ್ರಾ ಶ್ರುತಿಃ ಸ್ಯಾತ್ । ಸ್ವತನ್ತ್ರಾ ತು ಶ್ರುತಿಃ । ಯತ ಆಹ ಅಣ್ಡಜಾದ್ಯೇವ ಬೀಜಮ್ ನ ಅಣ್ಡಾದೀತಿ । ದೃಶ್ಯತೇ ಚ ಅಣ್ಡಜಾದ್ಯಭಾವೇ ತಜ್ಜಾತೀಯಸಂತತ್ಯಭಾವಃ, ನ ಅಣ್ಡಾದ್ಯಭಾವೇ । ಅತಃ ಅಣ್ಡಜಾದೀನ್ಯೇವ ಬೀಜಾನಿ ಅಣ್ಡಜಾದೀನಾಮ್ । ತಥಾ ಜೀವಾಜ್ಜಾತಂ ಜೀವಜಮ್ । ಜರಾಯುಜಮಿತ್ಯೇತತ್, ಪುರುಷಪಶ್ವಾದಿ । ಉದ್ಭಿಜ್ಜಮ್ ಉದ್ಭಿನತ್ತೀತ್ಯುದ್ಭಿತ್ ಸ್ಥಾವರಮ್ । ತತೋ ಜಾತಮ್ ಉದ್ಭಿಜ್ಜಮ್ । ಧಾನಾ ವಾ ಉದ್ಭಿತ್ । ತತೋ ಜಾಯತ ಇತ್ಯುದ್ಭಿಜ್ಜಮ್ । ಸ್ಥಾವರಬೀಜಂ ಸ್ಥಾವರಾ ಣಾಂ ಬೀಜಮ್ ಇತ್ಯರ್ಥಃ । ಸ್ವೇದಜಸಂಶೋಕಜಯೋರಣ್ಡಜೋದ್ಭಿಜ್ಜ ಯೋರೇವ ಯಥಾಸಂಭವಮನ್ತರ್ಭಾವಃ । ಏವಂ ಹ್ಯವಧಾರಣಂ ತ್ರೀಣ್ಯೇವ ಬೀಜಾನಿ ಇತ್ಯುಪಪನ್ನಂ ಭವತಿ ॥

(ಭಾಷ್ಯಾರ್ಥ)

(ಆಕ್ಷೇಪ) :- ಅಂಡದಿಂದ ಹುಟ್ಟಿದ್ದು ಅಂಡಜವೆನಿಸುತ್ತದೆ ಆದ್ದರಿಂದ ಅಂಡವೇ (ಅದಕ್ಕೆ) ಬೀಜವು ಎಂಬುದು ಯುಕ್ತ. ಅಂಡಜವು ಬೀಜವು ಎಂದದ್ದು ಹೇಗೆ ಸರಿ ?

(ಪರಿಹಾರ) - ನಿಜ, ಶ್ರುತಿಯು ನಿನ್ನ ಇಚ್ಛೆಗೆ ಅಧೀನವಾಗಿದ್ದಿದ್ದರೆ ಹೀಗಾಗಬಹುದಿತ್ತು ಆದರೆ ಶ್ರುತಿಯು ಸ್ವತಂತ್ರವಾಗಿರುತ್ತದೆ, ಆದ್ದರಿಂದ

1. ಅಂಡಜವೆಂಬುದು ಅಂಡಜಶಬ್ದಕ್ಕೆ ಸ್ವಾರ್ಥಪ್ರತ್ಯಯವು ಬಂದು ಹುಟ್ಟಿದೆ ಎಂದರ್ಥ.

2. ಕಾರಣವು ಎಂದರ್ಥ.

ಅಂಡಜಾದಿಯೇ ಬೀಜವೇ ಹೊರತು ಅಂಡಾದಿಯಲ್ಲ ಎಂದಿರುತ್ತದೆ. ಮತ್ತು ಅಂಡಜಾದಿಗಳು ಇಲ್ಲದಿದ್ದರೆ ಆ ಜಾತಿಯ ಸಂತತಿಯು ಇಲ್ಲದ್ದು ಕಂಡಿರುತ್ತದೆಯೇ ಹೊರತು ಅಂಡಾದಿಗಳಿಲ್ಲದಿದ್ದರೆ (ಹಾಗೆ) ಕಂಡುಬಂದಿಲ್ಲ[1]. ಆದ್ದರಿಂದ ಅಂಡಜಾದಿಗಳಿಗೆ ಅಂಡಜಾದಿಗಳೇ ಬೀಜಗಳು[2] ಇದರಂತೆ ಜೀವಸಿಂದ ಹುಟ್ಟಿದ್ದು ಜೀವಜವು, ಪುರುಷ, ಪಶು- ಮುಂತಾದ ಜರಾಯುಜವು ಎಂದರ್ಥ. ಉದ್ಭಿಜ್ಜವು- (ಉದ್ಭಿನತ್ತಿ) ಒಡೆದುಕೊಂಡು ಮೇಲಕ್ಕೆ ಬರುತ್ತದೆಯಾದ್ದರಿಂದ ಸ್ಥಾವರವು ಉದ್ಭಿತ್ತು, ಅದರಿಂದ ಹುಟ್ಟಿದ್ದು ಉದ್ಭಿಜ್ಜವು ಅಥವಾ ಬೀಜವೇ ಉದ್ಭಿತ್ತು, ಅದರಿಂದ ಹುಟ್ಟಿದ್ದಾದ್ದರಿಂದ ಉದ್ಭಿಜ್ಜವು, ಸ್ಥಾವರಬೀಜವು ಸ್ಥಾವರಗಳಿಗೆ ಕಾರಣವು ಎಂದರ್ಥ. ಸ್ವೇದಜಸಂಶೋಕಜಗಳು[3] ಹೇಗೋ ಅಂಡಜೋದ್ಭಿಜ್ಜಗಳಲ್ಲಿಯೇ ಅಡಕವಾಗಿರುತ್ತವೆ. ಹೀಗಾದರೆ ತಾನೆ ಮೂರೇ ಬೀಜಗಳು ಎಂಬ ಶ್ರುತಿ ಹೊಂದುತ್ತದ?

(ಉಪನಿಷತ್ತು)

**ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾಽಽತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ॥ ೨ ॥**

೨. ಆ ಈ ದೇವತೆಯು, 'ಒಳ್ಳೆಯದು, ನಾನು ಈ ಮೂರು ದೇವತೆಗಳನ್ನು ಈ ಜೀವನೆಂಬ ಆತ್ಮನ (ರೂಪ)ದಿಂದ ಅನುಪ್ರವೇಶ ಮಾಡಿ ನಾಮರೂಪಗಳನ್ನು ವ್ಯಾಕರಣಮಾಡುವೆನು' ಎಂದು (ಯೋಚಿಸಿ) ನೋಡಿತು.

---

1. ಅಂಡವಿಲ್ಲದಿದ್ದರೆ ಅಂಡಜವು ಉಂಟಾಗುವದೇ ಇಲ್ಲವೆಂಬುದಿಲ್ಲ, ಪ್ರಾಣಿಯಿದ್ದರೆ ಅದು ಅಂಡದ ದ್ವಾರವಾಗಿ ಸಂತತಿಯನ್ನು ಪಡೆಮುಕೊಳ್ಳಬಹುದು.

2. 'ಅಂಡಜಗಳಿದ್ದರೇ ಅಂಡಜಗಳು ಹುಟ್ಟುತ್ತವೆ, ಇಲ್ಲದಿದ್ದರೆ ಇಲ್ಲ- ಎಂಬ ಅನ್ವಯ ವ್ಯತಿರೇಕಗಳಿವೆ. ಅಂಡವಿಲ್ಲದಿದ್ದರೆ ಅಂಡಜವು ಹುಟ್ಟುವದಿಲ್ಲವೆಂಬುದು ಸಿಜ, ಅಂಡಾದಿಗಳಿದ್ದರೆ ಅಂಡಜಾದಿಗಳಿಲ್ಲದಿದ್ದರೂ ಅದಾಗುತ್ತದೆಯಾದ್ದರಿಂದ ಅನ್ವಯವಿಲ್ಲ' ಎಂದು ಟೀಕೆ. ಇಲ್ಲಿ ಟೀಕಾಗ್ರಂಥದಲ್ಲಿ ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುತ್ತದೆ. ಭಾಷ್ಯಕಾರರು ಪ್ರತ್ಯಕ್ಷಾದಿಗಮ್ಯವಾದ ಈ ವಿಷಯವನ್ನುದಾಹರಿಸಿ ಶ್ರುತಿಯನ್ನು ಏತಕ್ಕೆ ಚರ್ಚೆಮಾಡಿದ್ದಾರೆಂಬುದೂ ವಿಚಾರಣೀಯವಾಗಿವೆ.

3. ಸೂ. ಭಾ. ೩-೧-೨೧ರಲ್ಲಿ ಸಂಶೋಕಜವೆಂದರೇ ಸ್ವೇದಜವೆಂದು ಬರೆದಿದೆ. ಇಲ್ಲಿ ಇವೆರಡನ್ನು ಬೇರೆಬೇರೆಯಾಗಿ ಬರೆದಿರುವದೇಕೆಂಬುದು ತಿಳಿಯಲಿಲ್ಲ. ಟೀಕೆಯಲ್ಲಿ ಸಂಶೋಕಜವೆಂದ[illegible]ಷ್ಣ್ಯದಿಂದ ಹುಟ್ಟಿದ್ದು -ಎಂದು ಬರೆದಿದೆ.

## ಸದ್ಬ್ರಹ್ಮದ ಸಂಕಲ್ಪ

(ಭಾಷ್ಯ)

೪೬೩ ಸೇಯಂ ಪ್ರಕೃತಾ ಸದಾಖ್ಯಾ ತೇಜೋಽಬನ್ನಯೋನಿರ್ದೇವತಾ ಐಕ್ಷತ ಈಕ್ಷಿತವತೀ ಯಥಾಪೂರ್ವಂ ಬಹುಸ್ಯಾಮಿತಿ। ತದೇವ ಬಹುಭವನಂ ಪ್ರಯೋಜನಂ ನಾದ್ಯಾಪಿ ನಿರ್ವೃತ್ತಮಿತ್ಯತ ಈಕ್ಷಾಂ ಪುನಃ ಕೃತವತೀ ಬಹು ಭವನಮೇವ ಪ್ರಯೋಜನಮ್ ಉರರೀಕೃತ್ಯ। ಕಥಮ್ ? ಹನ್ತ ಇದಾನೀಮ್ ಅಹಮಿಮಾ ಯಥೋಕ್ತಾಸ್ತೇಜಆದ್ಯಾಸ್ತಿಸ್ರೋ ದೇವತಾ ಅನೇನ ಜೀವೇನ ಇತಿ ಸ್ವಬುದ್ಧಿಸ್ಥಂ ಪೂರ್ವಸೃಷ್ಟ್ಯನುಭೂತಪ್ರಾಣಧಾರಣಮ್ ಆತ್ಮಾನಮೇವ ಸ್ಮರನ್ತೀ ಆಹ ಅನೇನ ಜೀವೇನಾಽಽತ್ಮನಾ ಇತಿ ಪ್ರಾಣಧಾರಣಕರ್ತ್ರಾತ್ಮನಾ ಇತಿ। ಆತ್ಮನಾ ಇತಿ[1] ವಚನಾತ್ ಸ್ವಾತ್ಮನೋಽವ್ಯತಿರಿಕ್ತೇನ ಚೈತನ್ಯಸ್ವರೂಪತಯಾ ಅವಿಶಿಷ್ಟೇನ ಇತ್ಯೇತದ್ದರ್ಶಯತಿ। ಅನುಪ್ರವಿಶ್ಯ ತೇಜೋಽಬನ್ನಭೂತಮಾತ್ರಾ ಸಂಸರ್ಗೇಣ ಲಬ್ಧವಿಶೇಷವಿಜ್ಞಾನಾ ಸತೀ, ನಾಮ ಚ ರೂಪಂ ಚ ನಾಮರೂಪೇ ವ್ಯಾಕರವಾಣಿ ವಿಸ್ಪಷ್ಟಮ್ ಆಕರವಾಣಿ ಅಸೌನಾಮಾಯಮ್ ಇದಂರೂಪ ಇತಿ ವ್ಯಾಕುರ್ಯಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಈ ಪ್ರಕೃತವಾಗಿರುವ ಸತ್ತೆಂಬ ಹೆಸರಿನ ತೇಜೋಬನ್ನಗಳಿಗೆ ಕಾರಣವಾದ ಮೇಲೆ ಹೇಳಿದ ದೇವತೆಯು[2] ನೋಡಿತು. ಮೊದಲಿನಂತೆಯೇ ಬಹುವಾಗುವೆನು (ಎಂದು ಯೋಚಿಸಿ ನೋಡಿತು). ಆ ಬಹುವಾಗುವದೆಂಬ ಪ್ರಯೋಜನವೇ ಇನ್ನೂ ಆಗಿರುವದಿಲ್ಲವಾದ್ದರಿಂದ ಬಹುಭವನವನ್ನೇ ಪ್ರಯೋಜನವಾಗಿ ಅಂಗೀಕರಿಸಿ[3] ಮತ್ತೆ ಈಕ್ಷೆಯನ್ನು ಮಾಡಿತು.[4] ಹೇಗೆಂದರೆ, ಒಳ್ಳೆಯದು, ಈಗ ನಾನು ಈ ತೇಜಸ್ಸೇ ಮುಂತಾದ ಮೇಲೆ ಹೇಳುವ ಮೂರು ದೇವತೆಗಳನ್ನು ಈ ಜೀವನೆಂಬ– ಎಂದು ತನ್ನ ಬುದ್ಧಿಯಲ್ಲಿದ್ದ[5] ಪೂರ್ವಸೃಷ್ಟಿಯಲ್ಲಿ ಅನುಭವಿಸಿದ್ದ ಪ್ರಾಣಧಾರಿಯಾದ ಆತ್ಮನನ್ನೇ ನೆನೆಸಿಕೊಂಡು ಈ ಜೀವನೆಂಬ ಆತ್ಮನ ರೂಪದಿಂದ ಎಂದು ಹೇಳಿದೆ, ಪ್ರಾಣಧಾರಣಕರ್ತೃರೂಪದಿಂದ ಎಂದು ಹೇಳಿರು

---

1. ಈ ಮಾತುಗಳು ಇಲ್ಲಿ ಬಿಟ್ಟುಹೋಗಿವೆಯೆಂದು ಇಟ್ಟುಕೊಳ್ಳಲಾಗಿದೆ.
2. ಪರಮಾತ್ಮನು.
3. ಆ ಪ್ರಯೋಜನಕ್ಕಾಗಿಯೇ ಎಂದರ್ಥ.
4 ಯೋಚಿಸಿ ನೋಡಿತು.
5. ಅನೇನ ಎಂಬ ಸರ್ವನಾಮವು ಹಿಂದೆ ಅನುಭವಿಸಿ ನೆನಪಿನಲ್ಲಿದ್ದ ಜೀವಸ್ವರೂಪವನ್ನು ಪರಾಮರ್ಶಿಸುತ್ತದೆ ಎಂದು ಭಾವ.

ತ್ತದೆ.[1] ಆತ್ಮನಾ (ಆತ್ಮರೂಪದಿಂದ) ಎಂದು ಹೇಳಿರುವದರಿಂದ ತನ್ನ ಆತ್ಮಕ್ಕಿಂತ ಬೇರೆಯಲ್ಲದ, ಚೈತನ್ಯಸ್ವರೂಪವುಳ್ಳದ್ದೇ ಆಗಿರುವ ಸಮಾನ(ರೂಪ)ದಿಂದ (ಪ್ರವೇಶಿಸಿತು) ಎಂಬುದನ್ನು ತಿಳಿಸಿರುತ್ತದೆ.[2] ಅನುಪ್ರವೇಶಮಾಡಿ, ತೇಜೋಬನ್ನಗಳ ಮಾತ್ರೆಗಳ ಸಂಬಂಧದಿಂದ[3] ವಿಶೇಷಜ್ಞಾನವನ್ನು ಪಡೆದುಕೊಂಡು, ನಾಮರೂಪಗಳನ್ನು ನಾಮವನ್ನೂ ರೂಪವನ್ನೂ ವ್ಯಾಕರಣಮಾಡುವೆನು ವಿಸ್ಪಷ್ಟವಾಗಿ ಆಕಾರಗೊಳಿಸುವೆನು,[4] ಇದು ಇಂಥ ಹೆಸರಿನದು, (ಇದು) ಇಂಥ ರೂಪವುಳ್ಳದ್ದು- ಎಂದು ವಿಂಗಡಿಸುವೆನು- ಎಂದು (ಯೋಚಿಸಿತು) ಎಂದರ್ಥ

# ಚರ್ಚೆ : ಆತ್ಮನು ದೇಹದಲ್ಲಿ ಪ್ರವೇಶಿಸಿರುವ ಬಗೆ

## ಜೀವನು ಪರಮಾತ್ಮನ ಆಭಾಸರೂಪನು

(ಭಾಷ್ಯ)

೪೬೪. ನನು ನ ಯುಕ್ತಮಿದಮ್ ಅಸಂಸಾರಿಣ್ಯಾಃ ಸರ್ವಜ್ಞಾಯಾ ದೇವತಾಯಾ ಬುದ್ಧಿಪೂರ್ವಕಮ್ ಅನೇಕಶತಸಹಸ್ರಾನರ್ಥಾಶ್ರಯಂ ದೇಹಮ್ ಅನುಪ್ರವಿಶ್ಯ ದುಃಖಮನುಭವಿಷ್ಯಾಮಿ ಇತಿ ಸಂಕಲ್ಪನಮ್ ಅನುಪ್ರವೇಶಶ್ಚ ಸ್ವಾತನ್ತ್ರ್ಯೇ ಸತಿ । ಸತ್ಯಮೇವಂ ನ ಯುಕ್ತಂ ಸ್ಯಾದ್ ಯದಿ ಸ್ವೇನೈವಾವಿಕೃತೇನ ರೂಪೇಣ ಅನುಪ್ರವಿಶೇಯಂ ದುಃಖಮನುಭವೇಯಮ್ ಇತಿ ಚ ಸಂಕಲ್ಪಿತವತೀ । ನ ತ್ವೇವಮ್ । ಕಥಂ ತರ್ಹಿ[5] ಅನೇನ ಜೀವೇನಾಽಽತ್ಮನಾನುಪ್ರವಿಶ್ಯ ಇತಿ ವಚನಾತ್ । ಜೀವೋ ಹಿ ನಾಮ ದೇವತಾಯಾ ಆಭಾಸಮಾತ್ರಮ್ ಬುದ್ಧ್ಯಾದಿಭೂತಮಾತ್ರಾಸಂಸರ್ಗಜನಿತ ಆದರ್ಶ ಇವ ಪ್ರವಿಷ್ಟಃ ಪುರುಷಪ್ರತಿಬಿಮ್ಬೋ ಜಲಾದಿಷ್ವಿವ ಚ ಚನ್ದ್ರಸೂರ್ಯಾದೀನಾಮ್ । ಅಚಿನ್ತ್ಯಾನನ್ತಶಕ್ತಿಮತ್ಯಾ ದೇವತಾಯಾ ಬುದ್ಧ್ಯಾದಿಸಂಬನ್ಧಶ್ಚೈತನ್ಯಾಭಾಸೋ ದೇವತಾ

---

1. ಜೀವನೆಂದರೆ ಪ್ರಾಣಧಾರಣಮಾಡುವವನು ಎಂದರ್ಥ. ವಾಗಾದಿಕರಣಗಳನ್ನು ಧರಿಸುವ ವಿಶೇಷರೂಪದಿಂದ ಪ್ರವೇಶ.

2. ಜೀವರೂಪದಿಂದ ಪ್ರವೇಶಮಾಡಿದ್ದರೂ ಜೀವನಿಗೆ ಆಗಲೂ ಆತ್ಮಸ್ವರೂಪವು ತಪ್ಪಿಸುವದಿಲ್ಲ ಎಂಬುದನ್ನು 'ಆತ್ಮನಾ' ಎಂಬ ಮಾತು ತಿಳಿಸುತ್ತದೆ ಎಂದು ಭಾವ.

3. ಮಾತ್ರೆಗಳ ಸಂಸರ್ಗದಿಂದ ಜಾಗ್ರತ್ಸ್ವಪ್ನಗಳಲ್ಲಿ ವಿಶೇಷಜ್ಞಾನವುಂಟಾಗುತ್ತದೆ, ಅದಿಲ್ಲದ ಸುಷುಪ್ತಿಕೈವಲ್ಯಗಳಲ್ಲಿ ವಿಶೇಷಜ್ಞಾನವಿರುವದಿಲ್ಲ. ಬೃ.ಭಾ. ೨-೪-೧೧ (ಭಾ.ಭಾ ೩೬೪, ೩೬೫)ನ್ನು ನೋಡಿ ಬೃ. ಮಾ ೪-೩-೧೫೨ 'ಮಾತ್ರಾಸಂಸರ್ಗಸ್ತ್ವಸ್ಯ ಭವತಿ' ಎಂಬ ವಾಕ್ಯವನ್ನು ಇಲ್ಲಿ ಸೂಚಿಸಿದೆ.

4. ಅವ್ಯಾಕೃತರೂಪವೆಂದರೆ ಮಣ್ಣಿನಂತೆ ಒಂದಾಗಿರುವದು, ವ್ಯಾಕರಣಮಾಡುವದೆಂದರೆ ಮಡಕೆ, ಕುಡಿಕೆ- ಎಂಬಂತೆ ವಿಸ್ಪಷ್ಟವಾಗಿ ಬೇರೆಬೇರೆ ರೂಪದಿಂದ ವಿಂಗಡಿಸಿ ತೋರಿಸುವದು

5. ಈ ಎರಡು ಮಾತುಗಳು ಇಲ್ಲದಿದ್ದರೂ ಸರಳವಾಗಿ ಅನ್ವಯವಾಗುತ್ತದೆ.

ಸ್ವರೂಪವಿವೇಕಾಗ್ರಹಣನಿಮಿತ್ತಃ ಸುಖೀ ದುಃಖೀ ಮೂಢ ಇತ್ಯಾದ್ಯನೇಕವಿಕಲ್ಪ ಪ್ರತ್ಯಯಹೇತುಃ। ಛಾಯಾಮಾತ್ರೇಣ ಜೀವರೂಪೇಣಾನುಪ್ರವಿಷ್ಟತ್ವಾದ್ದೇವತಾ ನ ದೈಹಿಕೈಃ ಸ್ವತಃ ಸುಖದುಃಖಾದಿಭಿಃ ಸಂಬಧ್ಯತೇ। ಯಥಾ ಪುರುಷಾದಿತ್ಯಾದಯ ಆದರ್ಶೋದಕಾದಿಷು ಚ್ಛಾಯಾಮಾತ್ರೇಣಾನುಪ್ರವಿಷ್ಟಾ ಆದರ್ಶೋದಕಾದಿ ದೋಷೈರ್ನ ಸಂಬಧ್ಯನ್ತೇ ತದ್ವದ್ದೇವತಾಪಿ। "ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ। ಏಕಸ್ತಥಾ ಸರ್ವಭೂತಾನ್ತ ರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ ೧-೨-೧), "ಆಕಾಶ ವತ್ಸರ್ವಗತಶ್ಚ ನಿತ್ಯಃ" ( ? ) ಇತಿ ಹಿ ಕಾಠಕೇ। "ಧ್ಯಾಯತೀವ ಲೇಲಾಯತೀವ" (ಬೃ ೪-೩-೭) ಇತಿ ಚ ವಾಜಸನೇಯಕೇ ॥

(ಭಾಷ್ಯಾರ್ಥ)

(ಆಕ್ಷೇಪ) – ಅಸಂಸಾರಿಯೂ ಸರ್ವಜ್ಞನೂ ಆಗಿರುವ ದೇವತೆಯು[1] ಬುದ್ಧಿಪೂರ್ವಕವಾಗಿ ಅನೇಕಶತಸಹಸ್ರ ಅನರ್ಥಗಳಿಗೆ ಆಶ್ರಯವಾಗಿರುವ ದೇಹವನ್ನು ಒಳಹೊಕ್ಕು ದುಃಖವನ್ನು ಅನುಭವಿಸುವೆನು ಎಂದು ಸಂಕಲ್ಪಿಸು ವದೂ, ಸ್ವತಂತ್ರನಿದ್ದರೂ[2] ಪ್ರವೇಶಮಾಡುವದೂ ಎಂಬುದಿದು ಹೊಂದುವದಿಲ್ಲ ವಲ್ಲ !

(ಪರಿಹಾರ) – ತನ್ನ ಅಧಿಕೃತವಾದ ರೂಪದಿಂದ ಒಳಹೊಕ್ಕು ದುಃಖ ವನ್ನನುಭವಿಸುವೆನು ಎಂದು ಸಂಕಲ್ಪಿಸಿದ್ದರೆ ಹೀಗೆ ಅಯುಕ್ತವಾಗುತ್ತಿತ್ತು, ನಿಜ. ಆದರೆ ಹಾಗಿಲ್ಲ ಏಕೆಂದರೆ ಈ ಜೀವಾತ್ಮರೂಪದಿಂದ ಒಳಹೊಕ್ಕು ಎಂದು ವಚನ ವಿದೆ.[3] **ಜೀವನೆಂದರೆ ಬುದ್ಧಿಯೇ ಮುಂತಾದ ಭೂತಮಾತ್ರೆಗಳ ಸಂಬಂಧ ದಿಂದಾಗಿರುವ ದೇವತೆಯ ಆಭಾಸಮಾತ್ರ(ವಾಗಿರುತ್ತದೆ) ; (ಅವನು) ಕನ್ನಡಿಯೊಳಗೆ ಹೊಕ್ಕಿರುವ ಮನುಷ್ಯನ ಪ್ರತಿಬಿಂಬದಂತೆಯೂ ನೀರು ಮುಂತಾದವುಗಳಲ್ಲಿ (ಹೊಕ್ಕಿರುವ) ಚಂದ್ರಸೂರ್ಯಾದಿಗಳ (ಪ್ರತಿ ಬಿಂಬ)ದಂತೆಯೂ (ಇರುತ್ತಾನೆ)** ಅಚಿಂತ್ಯವಾದ ಅನಂತಶಕ್ತಿಗಳುಳ್ಳ[4] ದೇವತೆಗೆ ಬುದ್ಧ್ಯಾದಿಗಳ ಸಂಬಂಧದಿಂದ ಚೈತನ್ಯದ ಆಭಾಸವುಂಟಾಗುವದು

1. ಬ್ರಹ್ಮವು.
2. ಅಸ್ವತಂತ್ರನಾದವನನ್ನು ಅಧಿಕಾರಿಗಳು ಬಂಧದಲ್ಲಿಡಬಹುದು. ಆದರೆ ಸ್ವತಂತ್ರ ನಾದವನು ಹೇಗೆತಾನೇ ಬದ್ಧನಾದಾನು ?
3. ಆಕ್ಷೇಪಕ್ಕೆ ಬೇರೊಂದು ಬಗೆಯ ದೃಷ್ಟಾಂತದಿಂದ ಸಮಾಧಾನವನ್ನು ಹೇಳಿರು ವವನ್ನು ಸೂ. ಭಾ. ೨-೧-೨೩ರಲ್ಲಿ ಕಾಣಬಹುದು.
4. ವ್ಯವಹಾರದೃಷ್ಟಿಯಿಂದ ಪರಮಾತ್ಮನಿಗೆ ಅನೇಕಶಕ್ತಿಗಳುಂಟು ಸೂ. ಭಾ. ೨-೧-೩೦ (ಭಾ. ಭಾ. ೪೬೮), ೪-೩-೧೪ (ಭಾ. ಭಾ. ೫೮೭) ಇವನ್ನು ನೋಡಿ.

ದೇವತೆಯು ಸ್ವರೂಪವನ್ನು ವಿಂಗಡಿಸಿ ಗ್ರಹಿಸದೆ ಇರುವ ನಿಮಿತ್ತದಿಂದಾಗಿ ಸುಖಿ, ದುಃಖಿ, ಮೂಢ- ಮುಂತಾದ ಅನೇಕ ವಿಕಲ್ಪಪ್ರತ್ಯಯಗಳಿಗೆ ಕಾರಣವಾಗಿರುತ್ತದೆ. **(ಹೀಗೆ) ಬರಿಯ ನೆರಳಿನಂತಿರುವ ಜೀವರೂಪದಿಂದ ಒಳಹೊಕ್ಕಿರುವದರಿಂದ ದೇವತೆಯು ತಾನೇ ದೇಹದ ಸಂಬಂಧದಿಂದಾದ ಸುಖದುಃಖಗಳ ಸಂಬಂಧವನ್ನು ಪಡೆಯುವದಿಲ್ಲ. ಹೇಗೆ ಮನುಷ್ಯನು, ಸೂರ್ಯನು -ಮುಂತಾದವರು ಕನ್ನಡಿ, ನೀರು- ಮುಂತಾದವುಗಳಲ್ಲಿ ಬರಿಯ ನೆರಳಿನ ರೂಪದಿಂದ ಹೊಕ್ಕಿರುವದರಿಂದ (ಆ) ಕನ್ನಡಿ, ನೀರು -ಮುಂತಾದವುಗಳ ದೋಷಗಳಿಂದಸಂಬದ್ಧನಾಗುವದಿಲ್ಲವೋ, ದೇವತೆಯೂ ಹಾಗೆಯೇ (ಸಂಬದ್ಧವಾಗುವದಿಲ್ಲ).**[1] "ಎಲ್ಲಾ ಜನಕ್ಕೂ ಚಕ್ಷುವಾಗಿರುವ ಸೂರ್ಯನು ಹೇಗೆ ಚಕ್ಷುಸ್ಸಿನ ಸಂಬಂಧದಿಂದಾಗಿರುವ ಹೊರಗಿನ ದೋಷಗಳಿಂದ ಲಿಪ್ತನಾಗುವದಿಲ್ಲವೋ, ಹಾಗೆಯೇ ಸರ್ವಭೂತಗಳಿಗೂ ಅಂತರಾತ್ಮನಾಗಿರುವ ಒಬ್ಬನೇ (ಆದ ಪರಮಾತ್ಮನು) ಲೋಕದುಃಖದಿಂದ ಲಿಪ್ತನಾಗುವದಿಲ್ಲ (ಏಕೆಂದರೆ ಅದಕ್ಕೆ) ಹೊರಚ್ಚಾಗಿರುತ್ತಾನೆ" (ಕ. ೧-೩-೧೧), "ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುತ್ತಾನೆ" ( ? )[2] ಎಂದಲ್ಲವೆ, ಕಾಠಕದಲ್ಲಿದೆ? "ಧ್ಯಾನಮಾಡುವವನಂತೆಯೂ ಅಲುಗಾಡುತ್ತಿರುವವನಂತೆಯೂ (ಇರುತ್ತಾನೆ)"[3] (ಬೃ. ೪-೩-೭) ಎಂದು ವಾಜಸನೇಯಕದಲ್ಲಿಯೂ ಇದೆ.

## ಜೀವನು ಸ್ವರೂಪದಿಂದ ಪರಮಾತ್ಮನೇ

(ಭಾಷ್ಯ)

೪೬೫. ನನು ಛಾಯಾಮಾತ್ರಶ್ಚೇಜ್ಜೀವೋ ಮೃಷೈವ ಪ್ರಾಪ್ತಃ । ತಥಾ ಪರಲೋಕೇಹಲೋಕಾದಿ ಚ ತಸ್ಯ । ನೈಷ ದೋಷಃ । ಸದಾತ್ಮನಾ ಸತ್ಯತ್ವಾಭ್ಯುಪಗಮಾತ್ । ಸರ್ವಂ ಚ ನಾಮರೂಪಾದಿ ಸದಾತ್ಮನೈವ ಸತ್ಯಂ ವಿಕಾರಜಾತಮ್, ಸ್ವತಸ್ತು ಅನೃತಮೇವ । 'ವಾಚಾರಮ್ಭಣಂ ವಿಕಾರೋ ನಾಮಧೇಯಮ್' (೬-೧-೪) ಇತ್ಯುಕ್ತತ್ವಾತ್ । ತಥಾ ಜೀವೋಽಪೀತಿ । ಯಕ್ಷಾನುರೂಪೋ ಹಿ ಬಲಿಃ ಇತಿ ನ್ಯಾಯಪ್ರಸಿದ್ಧಿಃ । ಅತಃ ಸದಾತ್ಮನಾ ಸರ್ವವ್ಯವಹಾರಾಣಾಂ ಸರ್ವ

---

1. ಸೂ. ಭಾ. ೩-೨-೨೦ (ಭಾ. ಭಾ. ೨೮೭)ರಲ್ಲಿ ಪ್ರತಿಬಿಂಬದೃಷ್ಟಾಂತದಲ್ಲಿ ವಿವಕ್ಷಿತಾಂಶವು ಯಾವದೆಂಬುದನ್ನು ತಿಳಿಸಿರುತ್ತದೆ.

2. ಈ ವಾಕ್ಯವು ಇಲ್ಲಿದ್ದಿತೋ ಇಲ್ಲವೋ ಎಂಬುದು ಸಂಶಯಾಸ್ಪದ ; ಇದು ಕಠದಲ್ಲಿಲ್ಲ, ಪ್ರಕೃತಕ್ಕೆ ಅಷ್ಟು ಸಮಂಜಸವಾಗಿ ಹೊಂದುವದೂ ಇಲ್ಲ. ಟೀಕೆಯಲ್ಲಿ ಇದರ ಪರಾಮರ್ಶವಿಲ್ಲ.

3. ಬುದ್ಧಿಧರ್ಮದಿಂದಲೇ ವಿಶೇಷಜ್ಞಾನವುಂಟಾದಂತೆ ತೋರುತ್ತದೆ ಎಂಬುದಕ್ಕೆ ಪ್ರಮಾಣವಿದು.

ವಿಕಾರಾಣಾಂ ಚ ಸತ್ಯತ್ವಂ ಸತೋಽನ್ಯತ್ವೇ ಚಾನೃತತ್ವಮಿತಿ ನ ಕಶ್ಚಿದ್ದೋಷ ಸ್ತಾರ್ಕಿಕೈರಿಹಾನುವಕ್ತುಂ ಶಕ್ಯಃ । ಯಥಾ ಇತರೇತರವಿರುದ್ಧಾ ದ್ವೈತವಾದಾ ಸ್ವಬುದ್ಧಿವಿಕಲ್ಪಮಾತ್ರಾ ಅತತ್ತ್ವನಿಷ್ಠಾ ಇತಿ ಶಕ್ಯಂ ವಕ್ತುಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಜೀವನು (ಪರಮಾತ್ಮನ) ನೆರಳುಮಾತ್ರವಾದರೆ ಹುಸಿಯೆಂದೇ ಆಯಿತು, ಮತ್ತು ಅವನಿಗೆ ಪರಲೋಕ, ಇಹಲೋಕ- ಮುಂತಾದವುಗಳೂ (ಹುಸಿಯೆಂದೇ) ಆಯಿತಲ್ಲ !

(ಪರಿಹಾರ) :- ಈ ದೋಷವಿಲ್ಲ. ಏಕೆಂದರೆ ಸದ್ರೂಪದಿಂದ ಸತ್ಯವೆಂದೇ ಒಪ್ಪಿರುತ್ತೇವೆ. (ಇದರ ವಿವರ)· **ನಾಮ, ರೂಪ-ಮುಂತಾದ ವಿಕಾರಜಾತವೆಲ್ಲವೂ ಸದ್ರೂಪದಿಂದಲೇ ಸತ್ಯವು, ತಾನುತಾನಾದರೆ ಅನೃತವೇ; ಏಕೆಂದರೆ 'ವಿಕಾರವೆಂಬುದು ವಾಕ್ಕಿನಿಂದಾಗಿರುವ ಹೆಸರೇ' (೬-೧-೪) ಎಂದು (ಶ್ರುತಿಯಲ್ಲಿ) ಹೇಳಿರುತ್ತದೆ. ಇದರಂತೆ ಜೀವನೂ (ತಾನುತಾನು ಹುಸಿಯೇ, ಸದ್ರೂಪದಿಂದ ಸತ್ಯನೇ).** 'ಯಕ್ಷನಿಗೆ ಅನುಗುಣವಾಗಿಯಲ್ಲವೆ ಬಲಿ ?'- ಎಂಬ ನ್ಯಾಯವು ಪ್ರಸಿದ್ಧವಾಗಿದೆ[1]. ಆದ್ದರಿಂದ ಸರ್ವವ್ಯವಹಾರಗಳೂ ಸರ್ವವಿಕಾರಗಳೂ ಸದ್ರೂಪದಿಂದ ಸತ್ಯವು, ಸತ್ತಿಗಿಂತ ಬೇರೆಯಾದರೆ ಅನೃತವೇ ಆಗಿರುವದರಿಂದ (ಇಲ್ಲಿ) ಯಾವ ದೋಷವನ್ನೂ ತಾರ್ಕಿಕರು ಹೇಳುವದಕ್ಕೆ ಆಗುವದಿಲ್ಲ, ಹೇಗೆ ದ್ವೈತವಾದಗಳು ಒಂದಕ್ಕೊಂದು ವಿರುದ್ಧವಾಗಿ ಅವರ ಬುದ್ಧಿಯ ವಿಕಲ್ಪಮಾತ್ರಗಳಾಗಿರುವದರಿಂದ ತತ್ತ್ವದಲ್ಲಿ ಪರ್ಯವಸಾನವಾಗಿರುವದಿಲ್ಲ ಎಂದು ಹೇಳುವದಕ್ಕೆ ಶಕ್ಯವೋ (ಇಲ್ಲಿ ಹಾಗೆ ಶಕ್ಯವಿಲ್ಲ)[2].

## ತ್ರಿವೃತ್ಕರಣ

(ಉಪನಿಷತ್ತು)

**ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾಽಽತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ॥ ೩ ॥**

---

1. ನಾಮರೂಪಗಳು ಯಕ್ಷನ ಬಲಿಯಂತೆ, ಜೀವನು ಯಕ್ಷನಂತೆ; ಜೀವನೂ ತೋರಿಕೆಯರೂಪದಿಂದ ಹುಸಿಯೇ, ಅವನಿಗೆ ಭೋಗ್ಯವಾಗಿರುವ ನಾಮರೂಪಗಳೂ ಹುಸಿಯೇ. ನಿಜವಾದ ಸ್ವರೂಪದಿಂದ ಎರಡೂ ಸದ್ಬ್ರಹ್ಮವೇ ಎಂದರ್ಥ.

2. ಮಾಂ. ಕಾ. ಭಾ ೩-೧೬, ೪-೩, ೪- ಇವುಗಳನ್ನು ನೋಡಿ.

೩. 'ಅವುಗಳಲ್ಲಿ ಒಂದೊಂದನ್ನೂ ತ್ರಿವೃತತ್ರಿವೃತವಾಗಿ ಮಾಡುವೆನು' ಎಂದು (ಯೋಚಿಸಿನೋಡಿತು). ಆ ಈ ದೇವತೆಯು ಈ ಮೂರು ದೇವತೆಗಳನ್ನು ಇದೇ ಜೀವಾತ್ಮನ ರೂಪದಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡಿತು.

## ಒಂದೊಂದು ಭೂತವನ್ನೂ ತ್ರಿವೃತ್ಕರಣಮಾಡಿದ್ದು

(ಭಾಷ್ಯ)

೪೭೬. ಸೈವಂ ತಿಸ್ರೋ ದೇವತಾ ಅನುಪ್ರವಿಶ್ಯ ಸ್ವಾತ್ಮಾವಸ್ಥೇ ಬೀಜಭೂತೇ ಅವ್ಯಾಕೃತೇ ನಾಮರೂಪೇ ವ್ಯಾಕರವಾಣಿ ಇತೀಕ್ಷಿತ್ವಾ ತಾಸಾಂ ಚ ತಿಸೃಣಾಂ ದೇವತಾನಾಮ್ ಏಕೈಕಾಂ ತ್ರಿವೃತಂ ತ್ರಿವೃತಂ ಕರವಾಣಿ। ಏಕೈಕಸ್ಯಾಸ್ತ್ರಿವೃತ್ಕರಣೇ ಏಕೈಕಸ್ಯಾಃ ಪ್ರಾಧಾನ್ಯಂ ದ್ವಯೋರ್ದ್ವಯೋರ್ಗುಣಭಾವಃ। ಅನ್ಯಥಾ ಹಿ ರಜ್ಜ್ವಾ ಇವ ಏಕಮೇವ ತ್ರಿವೃತ್ಕರಣಂ ಸ್ಯಾತ್, ನ ತು ತಿಸೃಣಾಂ ಪೃಥಕ್ ಪೃಥಕ್ ತ್ರಿವೃತ್ಕರಣಮಿತಿ। ಏವಂ ಹಿ ತೇಜೋಽಬನ್ನಾನಾಂ ಪೃಥಙ್ನಾಮಪ್ರತ್ಯಯಲಾಭಃ ಸ್ಯಾತ್. ತೇಜ ಇದಮ್, ಇಮಾ ಆಪಃ, ಅನ್ನಮಿದಮ್ ಇತಿ ಚ। ಸತಿ ಚ ಪೃಥಙ್ನಾಮಪ್ರತ್ಯಯಲಾಭೇ ದೇವತಾನಾಂ ಸಮ್ಯಗ್ವ್ಯವಹಾರಸ್ಯ ಪ್ರಸಿದ್ಧಿಃ ಪ್ರಯೋಜನಂ ಸ್ಯಾತ್। ಏವಮ್ ಈಕ್ಷಿತ್ವಾ ಸೇಯಂ ದೇವತಾ ಇಮಾಸ್ತಿಸ್ರೋ ದೇವತಾ ಅನೇನೈವ ಯಥೋಕ್ತೇನೈವ ಜೀವೇನಾತ್ಮನಾ[1] ಸೂರ್ಯಬಿಮ್ಬವತ್ ಅನ್ತಃಪ್ರವಿಶ್ಯ ವೈರಾಜಂ ಪಿಣ್ಡಂ ಪ್ರಥಮಂ ದೇವಾದೀನಾಂ ಚ ಪಿಣ್ಡಾನ್ ಅನುಪ್ರವಿಶ್ಯ ಯಥಾಸಂಕಲ್ಪಮೇವ ನಾಮರೂಪೇ ವ್ಯಾಕರೋತ್। ಅಸೌನಾಮಾಯಮ್ ಇದಂರೂಪ ಇತಿ ॥

(ಭಾಷ್ಯಾರ್ಥ)

ಆ (ದೇವತೆಯು) ಮೂರು ದೇವತೆಗಳನ್ನೂ ಒಳಹೊಕ್ಕು ತನ್ನಲ್ಲಿದ್ದುಕೊಂಡಿರುವ ಬೀಜಭೂತವಾಗಿರುವ ಅವ್ಯಾಕೃತನಾಮರೂಪಗಳನ್ನು[2] ವ್ಯಾಕರಣಮಾಡುವೆನು ಎಂದು ನೋಡಿ ಆ ಮೂರು ದೇವತೆಗಳಲ್ಲಿ ಒಂದೊಂದನ್ನು ತ್ರಿವೃತತ್ರಿವೃತ

1. ಆತ್ಮನಾ ಎಂಬ ಮಾತು ಭಾಷ್ಯದಲ್ಲಿದ್ದು ಲೇಖಕರ ಪ್ರಮಾದದಿಂದ ಬಿಟ್ಟು ಹೋಗಿವೆ ಎಂದು ಸೇರಿಸಿಕೊಂಡಿವೇವೆ.

2. ನೀರಿನಲ್ಲಿ ಅವ್ಯಕ್ತವಾಗಿರುವ ನೊರೆಯಂತೆ ನಾಮರೂಪಗಳು ಸೃಷ್ಟಿಗೆ ಮೊದಲು ಆತ್ಮರೂಪದಲ್ಲಿಯೇ ಅವ್ಯಕ್ತವಾಗಿರುವವು, ಇವುಗಳನ್ನೇ ಪರಮಾತ್ಮನು ವ್ಯಾಕರಣಮಾಡುವನು. ಐ. ಭಾ. ೧ ೧ (ಭಾ. ಭಾ. ೨೮), ಬೃ. ಭಾ. ೨-೪-೧೦ (ಭಾ. ಭಾ ೩೬೫), ೩-೫-೧ (ಭಾ. ಭಾ. ೫೪)- ಇವನ್ನು ನೋಡಿ. ನಾಮರೂಪವ್ಯಾಕರಣವು ಪರಮಾತ್ಮಕರ್ತೃಕವೇ ಎಂದು ಸೂ. ಭಾ. ೨-೪-೨೦ (ಭಾ. ಭಾ. ೭೦೭)ರಲ್ಲಿ ತೀರ್ಮಾನಿಸಿದೆ.

ವಾಗಿ[1] ಮಾಡುವೆನು—ಒಂದೊಂದನ್ನು ತ್ರಿವೃತ್ಕರಣಮಾಡಿದರೆ ಒಂದೊಂದಕ್ಕೆ ಪ್ರಾಧಾನ್ಯವು (ಮಿಕ್ಕ) ಎರಡೆರಡಕ್ಕೆ ಗುಣಭಾವವು (ಉಂಟಾಗುತ್ತದೆ)[2]. ಹಾಗಿಲ್ಲದಿದ್ದರೆ ಹಗ್ಗದಂತೆ ಒಂದೇ ತ್ರಿವೃತ್ಕರಣವಾಗುವದೇ[3] ಹೊರತು ಮೂರಲ್ಲ. ಒಂದೊಂದನ್ನೂ ಬೇರೆಬೇರೆಯಾಗಿ ತ್ರಿವೃತ್ಕರಣಮಾಡಿದಂತೆ ಆಗುವದಿಲ್ಲ ಹೀಗೆ (ಒಂದೊಂದೂ ತ್ರಿವೃತ್ಕೃತವಾದ)ರಲ್ಲವೆ, ಇದು ತೇಜಸ್ಸು, ಇದು ಅಪ್ಪು, ಇದು ಅನ್ನ -ಎಂದು ತೇಜೋಬನ್ನಗಳಿಗೆ (ಒಂದೊಂದಕ್ಕೂ) ಬೇರೆಬೇರೆಯಾದ ಹೆಸರಿನ ಮತ್ತು ಪ್ರತ್ಯಯದ ಲಾಭವಾದೀತು ?[4] (ಹಾಗೆ ಬೇರೆ)ಬೇರೆಯ ನಾಮಪ್ರತ್ಯಯಗಳು ದೇವತೆಗಳಿಗೆ ದೊರಕಿದರೆ ಸರಿಯಾದ ವ್ಯವಹಾರವು ಸಿದ್ಧಿಯಾಗುವದೆಂಬ ಪ್ರಯೋಜನವಾಗುವದು[5].

ಹೀಗೆಂದು ಯೋಚಿಸಿ ಆ ಈ ದೇವತೆಯು ಈ ಮೂರು ದೇವತೆಗಳನ್ನು ಇದೇ ಮೇಲೆ ಹೇಳಿರುವ ಜೀವಾತ್ಮರೂಪದಿಂದ ಸೂರ್ಯಬಿಂಬದಂತೆ ಒಳಹೊಕ್ಕು, ಮೊದಲು ವಿರಾಟ್ಪುರುಷನ ದೇಹವನ್ನು ದೇವತೆಗಳೇ ಮುಂತಾದವರ ದೇಹಗಳನ್ನು[6] ಒಳಹೊಕ್ಕು (ತಾನು) ಸಂಕಲ್ಪಿಸಿದಂತೆಯೇ ಇದು ಈ ಹೆಸರಿನದು, ಈ ರೂಪದ್ದು -ಎಂದು ನಾಮರೂಪಗಳನ್ನು ವ್ಯಾಕರಣಮಾಡಿತು.

(ಉಪನಿಷತ್ತು)

**ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋದ್ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಸ್ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹೀತಿ ॥ ೪ ॥**

---

1. ಮೂರುಮೂರರ ಕಟ್ಟಾಗಿರುವಂತೆ, ಒಂದೊಂದರಲ್ಲಿಯೂ ಮೂರೂ ಸೇರಿರುವಂತೆ.

2. ತೇಜಸ್ಸು ಹೆಚ್ಚಾಗಿದ್ದರೆ ಅಪ್ಪೂ ಅನ್ನವೂ ಕಮ್ಮಿಯಾಗಿರುತ್ತವೆ, ಅದು ತ್ರಿವೃತ್ಕೃತತೇಜಸ್ಸು ಹೀಗೆಯೇ ಮಿಕ್ಕೆರಡನ್ನೂ ಅರಿಯಬೇಕು.

3. ಮೂರು ಸಮಾನಪ್ರಮಾಣಗಳಾದ ಬೇರೆಬೇರೆಯ ಬಣ್ಣದ ಹುರಿಗಳಿಂದ ಮಾಡಿದ ಹಗ್ಗದಂತೆ ಆಗುವದು , ಅಂಥ ಹಗ್ಗವು ಇಂಥ ಬಣ್ಣದ ಹಗ್ಗವೆಂಬ ವಿಶೇಷವ್ಯವಹಾರಕ್ಕೆ ತಕ್ಕದ್ದಾಗುವದಿಲ್ಲ.

4 ಇದು ಇಂಥ ಭೂತವೆಂದು ಅರಿಯುವದೂ ಅವಕ್ಕೆ ಹೆಸರುಕೊಡುವದೂ ಆದೀತು. ಸೂ. ಭಾ. ೨-೪-೨೨ (ಭಾ. ಭಾ ೨೧೦) ವನ್ನು ನೋಡಿ.

5. ಬರಿಯ ಅತ್ರಿವೃತ್ಕೃತಭೂತಗಳು ವ್ಯವಹಾರಗೋಚರವಾಗಿರುವದಿಲ್ಲ ; ಅವು ಅತೀಂದ್ರಿಯವಾಗಿರುತ್ತವೆ.

6. ಹೀಗೆಯೇ ಎಲ್ಲ ಶರೀರಗಳನ್ನೂ ಎಂದರ್ಥ. ಆದ್ದರಿಂದಲೇ ಯಾರಿಗೆ ತತ್ತ್ವಜ್ಞಾನವಾಗುವದೋ ಅವರು ನಾನು ಬ್ರಹ್ಮವೆಂದು ತಿಳಿದುಕೊಳ್ಳುವದಕ್ಕೆ ಆಗುತ್ತದೆ.

೪. ಆ (ದೇವತೆಗಳಲ್ಲಿ) ಒಂದೊಂದನ್ನೂ ತ್ರಿವೃತತ್ರಿವೃತವಾಗಿ ಮಾಡಿತು. ಈ ಮೂರು ದೇವತೆಗಳು ಹೇಗೆ ಒಂದೊಂದೂ ತ್ರಿವೃತ ತ್ರಿವೃತವಾಗುವವೋ ಅದನ್ನು ನನ್ನಿಂದ ಅರಿತುಕೊ.

## ಒಂದೊಂದು ಭೂತವೂ ತ್ರಿವೃತ್ಕೃತವಾದದ್ದರ ವಿವರಣೆಗೆ ಪ್ರತಿಜ್ಞೆ

(ಭಾಷ್ಯ)

೪೬೭. ತಾಸಾಂ ಚ ದೇವತಾನಾಂ ಗುಣಪ್ರಧಾನಭಾವೇನ ತ್ರಿವೃತಂ ತ್ರಿವೃತಮೇಕ್ಕೈಕಾಮ್ ಅಕರೋತ್ ಕೃತವತೀ ದೇವತಾ। ತಿಷ್ಠತು ತಾವದ್ ದೇವತಾದಿಪಿಣ್ಡಾನಾಂ ನಾಮರೂಪಾಭ್ಯಾಂ ವ್ಯಾಕೃತಾನಾಂ ತೇಜೋಽಬನ್ನಮಯ ತ್ವೇನ ತ್ರಿಧಾತ್ವಮ್, ಯಥಾ ತು[1] ಬಹಿರಿಮಾಃ ಪಿಣ್ಡೇಭ್ಯಸ್ತಿಸ್ರೋ ದೇವತಾ ಸ್ತ್ರಿವೃತ್ತ್ರಿವೃದೇಕ್ಕೈಕಾ ಭವತಿ ತನ್ಮೇ ಮಮ ನಿಗದತೋ ವಿಜಾನೀಹಿ ವಿಸ್ಪಷ್ಟ ಮವಧಾರಯೋದಾಹರಣತಃ ॥

(ಭಾಷ್ಯಾರ್ಥ)

ಮತ್ತು (ಆ ಪರ)ದೇವತೆಯು ಆ ದೇವತೆಗಳಲ್ಲಿ ಒಂದೊಂದನ್ನೂ ಗುಣ ಪ್ರಧಾನಭಾವದಿಂದ[2] ತ್ರಿವೃತತ್ರಿವೃತವಾಗಿ ಮಾಡಿತು. ನಾಮರೂಪಗಳಾಗಿ ವ್ಯಾಕೃತವಾದ ದೇವತಾದಿಶರೀರಗಳನ್ನು ತೇಜೋಬನ್ನಮಯವಾಗಿ ಮೂರು (ಮೂರು) ಬಗೆಯಾಗಿರುವ (ವಿಷಯವು) ಹಾಗಿರಲಿ[3], ಆದರೆ ಹೇಗೆ ದೇಹಗಳ ಹೊರಗಿರುವ ಈ ದೇವತೆಗಳಲ್ಲಿ ಪ್ರತಿಯೊಂದೂ ತ್ರಿವೃತತ್ರಿವೃತವಾಗಿ ಆಗುವ ದೆಂಬುದನ್ನು ಹೇಳುವ (ಮೇ=ಮಮ) ನನ್ನಿಂದ (ವಿಜಾನೀಹಿ=) ವಿಸ್ಪಷ್ಟವಾಗಿ ಉದಾಹರಣೆಯಿಂದ (ಅರಿತು) ನಿಶ್ಚಯಿಸಿಕೊ.

---

1. ಖಲು ಸೋಮ್ಯ- ಎಂಬ ಉಪನಿಷತ್ತಿನ ಮಾತುಗಳು ಭಾಷ್ಯದಲ್ಲಿದ್ದು ಬರೆದವರು ಕೈಬಿಟ್ಟಿರುವರೋ ಭಾಷ್ಯಕಾರರೇ ಕೈಬಿಟ್ಟಿದ್ದಾರೋ ತಿಳಿಯುವಹಾಗಿಲ್ಲ.

2. ಒಂದೊಂದು ಭೂತವು ಮುಖ್ಯ, ಮಿಕ್ಕವು ಅದಕ್ಕಿಂತ ಕಡಿಮೆಯಾಗಿ ಸೇರಿ ಕೊಂಡಿರುವವು- ಹೀಗೆ.

3. ದೇಹದಲ್ಲಾಗುವ ತ್ರಿವೃತ್ಕರಣವನ್ನು ಮುಂದೆ ೬-೫-೧ರಿಂದ ಹೇಳಲಾಗುವವು. ಇಲ್ಲಿ ಬಾಹ್ಯಭೂತಗಳ ತ್ರಿವೃತ್ಕರಣವನ್ನೇ ಹೇಳುತ್ತೇನೆ ಎಂದು ಭಾವ.

# ಆರನೆಯ ಅಧ್ಯಾಯ-ನಾಲ್ಕನೆಯ ಖಂಡ

(ಬಾಹ್ಯತ್ರಿವೃತ್ಕರಣ)

## ಬಾಹ್ಯತ್ರಿವೃತ್ಕರಣಕ್ಕೆ ಉದಾಹರಣೆಗಳು

(ಉಪನಿಷತ್ತು)

**ಯದಗ್ನೇ ರೋಹಿತಗ್ಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಗ್ನೇ ರಗ್ನಿತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ ॥ ೧ ॥**

೧. ಅಗ್ನಿಯ ಕೆಂಪನೆಯ ರೂಪವಿದೆಯಲ್ಲ, ಅದು ತೇಜಸ್ಸಿನ ರೂಪವು; ಬಿಳಿಯ ರೂಪವಿದೆಯಲ್ಲ, ಅದು ಅಪ್ಪಿನ (ರೂಪವು); ಕರಿಯ (ರೂಪ)ವಿದೆಯಲ್ಲ, ಅದು ಅನ್ನದ (ರೂಪವು). ಅಗ್ನಿಯಿಂದ ಅಗ್ನಿತ್ವವು ಹೋಯಿತು; ವಿಕಾರವೆಂಬುದು ವಾಕ್ಕಿನಿಂದಾಗಿರುವ ಹೆಸರು, ಮೂರು ರೂಪಗಳೆಂಬುದೇ ಸತ್ಯವು.

### ತ್ರಿವೃತ್ಕೃತಾಗ್ನಿಯ ರೂಪಗಳು

(ಭಾಷ್ಯ)

೪೬೮. ಯತ್ತದ್ ದೇವತಾನಾಂ ತ್ರಿವೃತ್ಕರಣಮುಕ್ತಮ್ । ತಸ್ಯೈವ ಉದಾಹರಣಮುಚ್ಯತೇ। ಉದಾಹರಣಂ ನಾಮ ಏಕದೇಶಪ್ರಸಿದ್ಧ್ಯಾ ಅಶೇಷ ಪ್ರಸಿದ್ಧ್ಯರ್ಥಮ್ ಉದಾಹ್ರಿಯತ ಇತಿ। ತದೇತದಾಹ। ಯದಗ್ನೇಃ ತ್ರಿವೃತ್ಕೃತಸ್ಯ ರೋಹಿತಂ ರೂಪಂ ಪ್ರಸಿದ್ಧಂ ಲೋಕೇ ತದತ್ರಿವೃತ್ಕೃತಸ್ಯ ತೇಜಸೋ ರೂಪಮಿತಿ ವಿದ್ಧಿ। ತಥಾ ಯತ್ ಶುಕ್ಲಂ ರೂಪಮಗ್ನೇರೇವ, ತದಪಾಮ್ ಅತ್ರಿವೃತ್ಕೃತಾನಾಮ್। ಯತ್ಕೃಷ್ಣಂ ತಸ್ಯೈವಾಗ್ನೇ ರೂಪಮ್ ತದನ್ನಸ್ಯ ಪೃಥಿವ್ಯಾ ಅತ್ರಿವೃತ್ಕೃತಾಯಾ ಇತಿ ವಿದ್ಧಿ। ತತ್ರ ಏವಂ ಸತಿ ರೂಪತ್ರಯವ್ಯತಿರೇಕೇಣ ಅಗ್ನಿರಿತಿ ಯನ್ಮನ್ಯಸೇ ತ್ವಂ ತಸ್ಯಾಗ್ನೇಃ ಅಗ್ನಿತ್ವಮಿದಾನೀಮ್ ಅಪಾಗಾತ್ ಅಪಗತಮ್। ಪ್ರಾಗ್ರೂಪತ್ರಯವಿವೇಕವಿಜ್ಞಾನಾದ್ ಯಾ ಅಗ್ನಿಬುದ್ಧಿರಾಸೀತ್ ತೇ, ಸಾ ಅಗ್ನಿಬುದ್ಧಿರಪಗತಾ ಅಗ್ನಿಶಬ್ದಶ್ಚ ಇತ್ಯರ್ಥಃ। ಯಥಾ ದೃಶ್ಯಮಾನ ರಕ್ತೋಪಧಾನಸಂಯುಕ್ತಃ ಸ್ಫಟಿಕೋ ಗೃಹ್ಯಮಾಣಃ ಪದ್ಮರಾಗೋಽಯಮಿತಿ ಶಬ್ದಬುದ್ಧ್ಯೋಃ ಪ್ರಯೋಜಕೋ ಭವತಿ ಪ್ರಾಗ್ ಉಪಧಾನರೂಪಸ್ಫಟಿಕಯೋ

ರ್ವಿವೇಕವಿಜ್ಞಾನಾತ್, ತದ್ವಿವೇಕವಿಜ್ಞಾನೇ ತು ಪದ್ಮರಾಗಶಬ್ದಬುದ್ಧೀ ನಿವರ್ತೇತೇ ತದ್ವಿವೇಕವಿಜ್ಞಾತುಃ, ತದ್ವತ್। ನನು ಕಿಮತ್ರ ಬುದ್ಧಿಶಬ್ದಕಲ್ಪನಯಾ ಕ್ರಿಯತೇ ? ಪ್ರಾಗ್ರೂಪತ್ರಯವಿವೇಕಕರಣಾತ್ ಅಗ್ನಿರೇವಾಽಽಸೀತ್, ತದಗ್ನೇರಗ್ನಿತ್ವಂ ರೋಹಿತಾದಿರೂಪವಿವೇಕಕರಣಾತ್ ಅಪಾಗಾತ್ ಇತಿ ಯುಕ್ತಮ್। ಯಥಾ ತನ್ತ್ವಪಕರ್ಷಣೇ ಪಟಾಭಾವಃ। ನೈವಮ್। ಬುದ್ಧಿಶಬ್ದಮಾತ್ರಮೇವ ಹಿ ಅಗ್ನಿಃ। ಯತ ಆಹ ವಾಚಾರಮ್ಭಣಮಗ್ನಿರ್ನಾಮ ವಿಕಾರೋ ನಾಮಧೇಯಂ ನಾಮಮಾತ್ರಮ್ ಇತ್ಯರ್ಥಃ। ಅತೋಽಗ್ನಿಬುದ್ಧಿರಪಿ ಮೃಷೈವ। ಕಿಂ ತರ್ಹಿ ತತ್ರ ಸತ್ಯಮ್ ? ತ್ರೀಣಿ ರೂಪಾಣಿ ಇತ್ಯೇವ ಸತ್ಯಂ ನಾಣುಮಾತ್ರಮಪಿ ರೂಪತ್ರಯವ್ಯತಿರೇಕೇಣ ಸತ್ಯಮಸ್ತಿ ಇತ್ಯವಧಾರಣಾರ್ಥಃ ॥

(ಭಾಷ್ಯಾರ್ಥ)

ದೇವತೆಗಳ ತ್ರಿವೃತ್ಕರಣವೆಂದು ಹೇಳಿತ್ತಷ್ಟೆ, ಅದರ ಉದಾಹರಣೆಯನ್ನೇ ಈಗ ಹೇಳಲಾಗುತ್ತದೆ. **ಉದಾಹರಣ** ಎಂದರೆ, ಒಂದಂಶವು ಸಿದ್ಧವಾಗುವದರಿಂದ ಎಲ್ಲವೂ ಸಿದ್ಧವಾಗಲೆಂದು ತೋರಿಸಿಹೇಳುತ್ತಾರಲ್ಲ, (ಅದು).[1]

ಆ ಇದನ್ನು ಹೇಳುತ್ತಿದಾನೆ. ತ್ರಿವೃತ್ಕೃತವಾದ ಅಗ್ನಿಯ ಕೆಂಪುರೂಪವೆಂದು ಲೋಕದಲ್ಲಿ, ಪ್ರಸಿದ್ಧವಾಗಿದೆಯಷ್ಟೆ, ಅದು ತ್ರಿವೃತ್ಕೃತವಾಗದೆ ಇದ್ದ ತೇಜಸ್ಸಿನ ರೂಪವೆಂದು ತಿಳಿ ಹಾಗೆಯೇ ಅಗ್ನಿಗೇ (ಇರುವ) ಬಿಳಿಯ ರೂಪವಿದೆಯಲ್ಲ, ಅದು ತ್ರಿವೃತ್ಕೃತವಾಗದೆ ಇದ್ದ ಅಪ್ಪಿನ (ರೂಪವು). ಅದೇ ಅಗ್ನಿಯ ಕರಿಯ ರೂಪವಿದೆಯಲ್ಲ, ಅದು ಅನ್ನದ್ದು ಎಂದರೆ ತ್ರಿವೃತ್ಕೃತವಾಗದೆ ಇದ್ದ ಪೃಥಿವಿಯದು ಎಂದು ತಿಳಿ.

ಇದು ಹೀಗಿರುವಲ್ಲಿ (ಈ) ರೂಪತ್ರಯಕ್ಕಿಂತಲೂ ಬೇರೆಯಾಗಿ ಅಗ್ನಿ ಎಂದು ನೀನು ತಿಳಿದಿರುವೆಯಲ್ಲ, ಆ ಅಗ್ನಿಯ ಅಗ್ನಿತ್ವವು ಈಗ (ಅಪಾಗಾತ್=ಅಪಗತಮ್) ಹೋಗಿಬಿಟ್ಟಿತು. **ರೂಪತ್ರಯವನ್ನು ವಿಂಗಡಿಸಿ ಅರಿಯುವದಕ್ಕಿಂತ ಮುಂಚೆ ಅಗ್ನಿಬುದ್ಧಿಯಿತ್ತಷ್ಟೆ, ಆ ಅಗ್ನಿಬುದ್ಧಿಯೂ ಹೋಯಿತು, ಅಗ್ನಿಶಬ್ದವೂ ಹೋಯಿತು- ಎಂದರ್ಥ. ಹೇಗೆ (ಹತ್ತಿರ) ಕಾಣುತ್ತಿರುವ ರಕ್ತವೆಂಬ ಉಪಾಧಿಯೊಡನೆ ಕೂಡಿದ್ದ ಸ್ಫಟಿಕವನ್ನು ಗ್ರಹಿಸುವಾಗ ಉಪಾಧಿ ಮತ್ತು ಸ್ಫಟಿಕ- ಇವುಗಳನ್ನು ವಿಂಗಡಿಸಿ ಅರಿಯುವ ಮುಂಚೆ ಇದು ಪದ್ಮರಾಗವು ಎಂಬ ಶಬ್ದ**

1. ಅಗ್ನ್ಯಾದಿಗಳನ್ನು ಇಲ್ಲಿ ಉದಾಹರಿಸಿರುವನು ಹೊರಗಿನವೆಲ್ಲ ಅತ್ರಿವೃತ್ಕೃತ ಭೂತಗಳ ಕಾರ್ಯವೇ ಆಗಿರುತ್ತದೆಯಾದ್ದರಿಂದ ಅದು ಆ ಭೂತಗಳಿಗಿಂತ ವ್ಯತಿರಿಕ್ತವಾಗಿಲ್ಲ ಎಂದು ತೋರಿಸಿಕೊಡುವದಕ್ಕೆ ಎಂದು ಭಾವ.

**ಬುದ್ಧಿಗಳಿಗೆ ಹೇತುವಾಗಿರುತ್ತದೆಯೋ, ಆದರೆ ಅವುಗಳನ್ನು ವಿಂಗಡಿಸಿ ಅರಿತುಕೊಂಡರೋ ಪದ್ಮರಾಗವೆಂಬ ಶಬ್ದಬುದ್ಧಿಗಳೆರಡೂ ಅವುಗಳನ್ನು ವಿಂಗಡಿಸಿ ಅರಿತುಕೊಂಡವನಿಗೆ ಹೋಗಿಬಿಡುವವೋ, ಹಾಗೆಯೇ (ಇದು).**

(ಆಕ್ಷೇಪ) :- ಇಲ್ಲಿ ಬುದ್ಧಿಶಬ್ದಗಳನ್ನು ಕಲ್ಪಿಸುವದರಿಂದೇನು ಪ್ರಯೋಜನವಾಗುತ್ತದೆ[1] ? ಮೂರು ರೂಪಗಳನ್ನು ವಿಂಗಡಿಸುವದಕ್ಕಿಂತ ಮುಂಚೆ- ಅಗ್ನಿಯೇ ಆಗಿತ್ತು, ಆ ಅಗ್ನಿಯ ಅಗ್ನಿತ್ವವು ರೋಹಿತವೇ ಮುಂತಾದ ರೂಪಗಳನ್ನು ವಿಂಗಡಿಸಿಕೊಂಡದ್ದರಿಂದ ಹೋಯಿತು- ಎಂದು (ತಿಳಿಯುವದೇ) ಯುಕ್ತ ಹೇಗೆ ನೂಲುಗಳನ್ನು ಎಳೆದುಕೊಂಡರೆ ಬಟ್ಟೆಯಿಲ್ಲವಾಗುವದೋ ಹಾಗೆಯೇ ಇದು [2]

(ಪರಿಹಾರ) :- ಹಾಗಲ್ಲ. ಏಕೆಂದರೆ **ಅಗ್ನಿ ಎಂಬುದು ಬುದ್ಧಿಶಬ್ದಗಳು ಮಾತ್ರವೇ.** ಏಕೆಂದರೆ (ತಂದೆ) ಹೀಗೆಂದು ಹೇಳಿರುತ್ತಾನೆ. **ಅಗ್ನಿ ಎಂಬುದು ವಾಕ್ಕಿನಿಂದಾದ ನಾಮಧೇಯವು, ನಾಮಮಾತ್ರವು ಎಂದರ್ಥ. ಆದ್ದರಿಂದ ಅಗ್ನಿಬುದ್ಧಿಯೂ ತಪ್ಪೇ.** ಹಾಗಾದರೆ ಇಲ್ಲಿ ಸತ್ಯವಾದದ್ದು ಯಾವದು ? ಎಂದರೆ ಮೂರು ರೂಪಗಳು ಎಂಬುದೇ ಸತ್ಯವು, ರೂಪತ್ರಯಕ್ಕಿಂತ ಬೇರೆಯಾಗಿ ಒಂದಿಷ್ಟೂ ಸತ್ಯವಾದದ್ದು ಇಲ್ಲ ಎಂಬುದು ಅವಧಾರಣೆಯ ಅರ್ಥ.[3]

---

1. 'ಅಗ್ನಿಯ ಅಗ್ನಿತ್ವವು ಹೋಯಿತು' ಎಂದೇ ಮೂಲದಲ್ಲಿರುವಾಗ ಅಗ್ನಿಶಬ್ದಬುದ್ಧಿಗಳು ಹೋದವು ಎಂದು ಹೇಳುವದರಿಂದ ಏನು ಪ್ರಯೋಜನ ? ನಿಜವಾಗಿ ಅಗ್ನಿತ್ವವಿತ್ತು, ವಿವೇಕವನ್ನು ಮಾಡಿಕೊಂಡ ಬಳಿಕ ಹೋಯಿತು ಎಂದೇಕೆ ಅರ್ಥವನ್ನು ಮಾಡಬಾರದು ?- ಎಂದು ಆಕ್ಷೇಪ

2. ನೂಲುಗಳು ಒಂದು ಬಗೆಯಲ್ಲಿ ಹಾಸುಹೊಕ್ಕಾಗಿ ಸೇರಿದಾಗ ನಿಜವಾಗಿಯೇ ಬಟ್ಟೆಯು ಉಂಟಾಗಿರುತ್ತದೆ, ನೂಲುಗಳನ್ನು ಕಿತ್ತುಹಾಕಿದರೆ ಬಟ್ಟೆಯು ಹೋಗಿಬಿಡುತ್ತದೆ- ಎಂಬುದು ದೃಷ್ಟಾಂತವನ್ನು ಕೊಟ್ಟದ್ದರ ಭಾವ. ಇದು ಅಸತ್ಕಾರ್ಯವಾದ. ಮೊದಲು ಇಲ್ಲದಿದ್ದ ಬಟ್ಟೆ ಉಂಟಾಗಿ ಆ ಬಳಿಕ ನಾಶವಾಗುತ್ತದೆ ಎಂಬುದು ಈ ವಾದದ ಅಭಿಪ್ರಾಯ.

3. 'ಮೂರು ರೂಪಗಳೇ ಸತ್ಯ' ಎಂದು ಒತ್ತಿ ಹೇಳಿದ್ದರಿಂದಲೂ ಅಗ್ನಿ ಎಂಬುದು ಬರಿಯ ಹೆಸರೇ ಎಂದಿರುವದರಿಂದಲೂ ಅಗ್ನಿಯೆಂಬುದು ಬರಿಯ ಹೆಸರೇ, ಆ ಹೆಸರಿರುವಾಗ ಇದು ಅಗ್ನಿ ಎಂಬ ಶಬ್ದಬುದ್ಧಿಗಳ ಹೊರತು ಅಗ್ನಿ ಎಂಬ ಕಾರ್ಯವು ಇಲ್ಲ - ಎಂಬ ಅಭಿಪ್ರಾಯವು ಹೊರಡುತ್ತದೆ ಎಂದು ಭಾವ. ಕಾರ್ಯವೆಂಬುದು ಕಾರಣಕ್ಕಿಂತ ವ್ಯತಿರಿಕ್ತವಾಗಿ ಮೂರುಕಾಲದಲ್ಲಿಯೂ ಇರುವವೇ ಇಲ್ಲ ಎಂಬ ವೇದಾಂತಿಗಳ ಮತವಿದು. ಸೂ. ಭಾ. ೨-೧-೧೪ (ಭಾ. ಭಾ. ೪೩೩)ನ್ನು ನೋಡಿ.

(ಉಪನಿಷತ್ತು)

**ಯದಾದಿತ್ಯಸ್ಯ ರೋಹಿತಗ್ಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಾದಿತ್ಯಾದಾದಿತ್ಯತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ ॥ ೨ ॥**

**ಯಚ್ಚನ್ದ್ರಮಸೋ ರೋಹಿತಗ್ಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾಚ್ಚನ್ದ್ರಾಚ್ಚನ್ದ್ರತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ ॥ ೩ ॥**

**ಯದ್ವಿದ್ಯುತೋ ರೋಹಿತಗ್ಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದ್ವಿದ್ಯುತೋ ವಿದ್ಯುತ್ತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್ ॥ ೪ ॥**

೨. ಆದಿತ್ಯನ ಕೆಂಪುರೂಪವಿದೆಯಲ್ಲ, ಅದು ತೇಜಸ್ಸಿನ ರೂಪವು; ಬಿಳಿಯದಾಗಿರುವದಲ್ಲ, ಅದು ಅಪ್ಪಿನದು; ಕರಿಯದಿರುವದಲ್ಲ, ಅದು ಅನ್ನದ್ದು. ಆದಿತ್ಯನಿಂದ ಆದಿತ್ಯತ್ವವು ಹೋಯಿತು; ವಿಕಾರವು ವಾಚಾರಂಭಣವಾದ ನಾಮಧೇಯವು, ಮೂರು ರೂಪಗಳೆಂಬುದೇ ಸತ್ಯವು.

೩. ಚಂದ್ರಮಸನ ಕೆಂಪುರೂಪವಿದೆಯಲ್ಲ, ಅದು ತೇಜಸ್ಸಿನ ರೂಪವು; ಬಿಳಿಯದಿರುವದಲ್ಲ, ಅದು ಅಪ್ಪಿನದು; ಕರಿಯದಿರುವದಲ್ಲ, ಅದು ಅನ್ನದ್ದು. ಚಂದ್ರನಿಂದ ಚಂದ್ರತ್ವವು ಹೋಯಿತು; ವಿಕಾರವು ವಾಚಾರಂಭಣವಾದ ನಾಮಧೇಯವು; ಮೂರು ರೂಪಗಳೆಂಬುದೇ ಸತ್ಯವು.

೪. ವಿದ್ಯುತ್ತಿನ (ಮಿಂಚಿನ) ಕೆಂಪುರೂಪವಿದೆಯಲ್ಲ, ಅದು ತೇಜಸ್ಸಿನ ರೂಪವು; ಬಿಳಿಯದಿರುವದಲ್ಲ, ಅದು ಅಪ್ಪಿನದು, ಕರಿಯದಿರುವದಲ್ಲ, ಅದು ಅನ್ನದ್ದು. ವಿದ್ಯುತ್ತಿನಿಂದ ವಿದ್ಯುತ್ತ್ವವು ಹೋಯಿತು; ವಿಕಾರವು ವಾಚಾರಂಭಣವಾದ ನಾಮಧೇಯವು, ಮೂರು ರೂಪಗಳೆಂಬುದೇ ಸತ್ಯವು.

## ತ್ರಿವೃತ್ಕೃತಾದಿತ್ಯಾದಿಗಳ ರೂಪಗಳು

(ಭಾಷ್ಯ)

೪೭೯. ತಥಾ ಯದಾದಿತ್ಯಸ್ಯ, ಯಚ್ಚನ್ದ್ರಮಸಃ, ಯದ್ವಿದ್ಯುತಃ- ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಹೀಗೆಯೇ 'ಆದಿತ್ಯನ', 'ಚಂದ್ರಮಸನ', 'ವಿದ್ಯುತ್ತಿನ'- ಎಂದುಮುಂತಾ ಗಿರುವದು (ಹಿಂದಿನದಕ್ಕೆ) ಸಮಾನವಾಗಿರುತ್ತದೆ.[1]

## ತೇಜೋರೂಪಮಾತ್ರದ ತ್ರಿವೃತ್ಕರಣವನ್ನು ಹೇಳಿದ್ದರ ತಾತ್ಪರ್ಯ

(ಭಾಷ್ಯ)

೪೮೦ ನನು 'ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾ ಸ್ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹಿ' (೬-೪-೪) ಇತ್ಯುಕ್ತ್ವಾ ತೇಜಸ ಏವ ಚತುರ್ಭಿರಪ್ಯುದಾಹರಣೈರಗ್ನ್ಯಾದಿಭಿಸ್ತ್ರಿವೃತ್ಕರಣಂ ದರ್ಶಿತಮ್, ನಾಬನ್ನಯೋರುದಾಹರಣಂ ದರ್ಶಿತಂ ತ್ರಿವೃತ್ಕರಣೇ । ನೈಷ ದೋಷಃ । ಅಬನ್ನ ವಿಷಯಾಣ್ಯಪ್ಯುದಾಹರಣಾನಿ ಏವಮೇವ ಚ ದ್ರಷ್ಟವ್ಯಾನಿ ಇತಿ ಮನ್ಯತೇ ಶ್ರುತಿಃ । ತೇಜಸ ಉದಾಹರಣಮ್ ಉಪಲಕ್ಷಣಾರ್ಥಮ್ । ರೂಪವತ್ತ್ವಾತ್ ಸ್ಪಷ್ಟಾರ್ಥತ್ವೋಪಪತ್ತೇಶ್ಚ । ಗನ್ಧರಸಯೋರನುದಾಹರಣಂ ತ್ರಯಾಣಾಮ ಸಂಭವಾತ್ । ನ ಹಿ ಗನ್ಧರಸೌ ತೇಜಸಿ ಸ್ತಃ । ಸ್ಪರ್ಶಶಬ್ದಯೋರನುದಾಹರಣಂ ವಿಭಾಗೇನ ದರ್ಶಯಿತುಮಶಕ್ಯತ್ವಾತ್ । ಯದಿ ಸರ್ವಂ ಜಗತ್ತ್ರಿವೃತ್ಕೃತಮಿತಿ ಅಗ್ನ್ಯಾದಿವತ್ ತ್ರೀಣಿ ರೂಪಾಣಿ ಇತ್ಯೇವ ಸತ್ಯಮ್ ಅಗ್ನೇರಗ್ನಿತ್ವವತ್ ಅಪಾ ಗಾಜ್ಜಗತೋ ಜಗತ್ತ್ವಮ್ । ತಥಾಽನ್ನಸ್ಯಾಪಿ ಅಪ್ಶುಙ್ಗತ್ವಾತ್ ಆಪ ಇತ್ಯೇವ ಸತ್ಯಂ ವಾಚಾರಮ್ಭಣಮಾತ್ರಮನ್ನಮ್ । ತಥಾ ಅಪಾಮಪಿ ತೇಜಃಶುಙ್ಗತ್ವಾತ್ ವಾಚಾರಮ್ಭಣತ್ವಂ ತೇಜ ಇತ್ಯೇವ ಸತ್ಯಮ್ । ತೇಜಸೋಽಪಿ ಸಚ್ಛುಙ್ಗತ್ವಾತ್ ವಾಚಾರಮ್ಭಣತ್ವಂ ಸದಿತ್ಯೇವ ಸತ್ಯಮ್ ಇತ್ಯೇಷೋಽರ್ಥೋ ವಿವಕ್ಷಿತಃ ॥

(ಭಾಷ್ಯಾರ್ಥ)

(ಆಕ್ಷೇಪ) :- 'ಸೋಮ್ಯನೆ, ಈ ಮೂರು ದೇವತೆಗಳು ಒಂದೊಂದೂ ತ್ರಿವೃತತ್ರಿವೃತವಾಗುತ್ತದೆಯೋ ಅದನ್ನು ನನ್ನಿಂದ ತಿಳಿದುಕೊ' (೬-೪-೪) ಎಂದು

1. ಅವುಗಳಲ್ಲಿ ಅತ್ರಿವೃತ್ಕೃತಭೂತಗಳ ರೂಪಗಳೇ ಸತ್ಯವಾಗಿರುತ್ತವೆ- ಎಂದು ಅರ್ಥಮಾಡಿಕೊಳ್ಳಬೇಕು.

ಹೇಳಿ ನಾಲ್ಕು ಉದಾಹರಣೆಗಳಿಂದ ತೇಜಸ್ಸಿನ ತ್ರಿವೃತ್ಕರಣ(ವೊಂದ)ನ್ನೇ ಅಗ್ನಿ ಮುಂತಾದವುಗಳ (ಉದಾಹರಣೆ)ಯಿಂದ ತೋರಿಸಿಕೊಡಲಾಗಿದೆ. ತ್ರಿವೃತ್ಕರಣಕ್ಕೆ ಅಬನ್ನಗಳ ಉದಾಹರಣೆಯನ್ನು ತೋರಿಸಲೇ ಇಲ್ಲವಲ್ಲ !

(ಪರಿಹಾರ) :- ಇದೇನೂ ದೋಷವಲ್ಲ ಅಪ್ಪು, ಅನ್ನ- ಇವುಗಳ ವಿಷಯದ ಉದಾಹರಣಗಳನ್ನೂ ಹೀಗೆಯೇ ತಿಳಿಯಬೇಕು ಎಂದೇ ಶ್ರುತಿಯ ಅಭಿಪ್ರಾಯವಾಗಿದೆ. ತೇಜಸ್ಸಿನ (ತ್ರಿವೃತ್ಕರಣದ) ಉದಾಹರಣೆಯನ್ನು (ಕೊಟ್ಟಿರುವದು) ಉಪಲಕ್ಷಣಕ್ಕಾಗಿಯೂ ಮತ್ತು (ಅದು) ರೂಪವುಳ್ಳದ್ದಾಗಿರುವದ ರಿಂದ ಸ್ಪಷ್ಟವಾಗಿ (ತಿಳಿಯುವ) ವಿಷಯವಾಗಿದೆ- ಎಂಬ ಕಾರಣದಿಂದಲೂ (ಆಗಿದೆ). ಗಂಧರಸಗಳ ಉದಾಹರಣೆಯನ್ನು (ಕೊಡದಿರುವದು) ಮೂರಕ್ಕೂ ಹೊಂದದಿರುವದರಿಂದ : ಗಂಧರಸಗಳು ತೇಜಸ್ಸಿನಲ್ಲಿಲ್ಲವಷ್ಟೆ ? ಸ್ಪರ್ಶಶಬ್ದಗಳ ಉದಾಹರಣೆಯನ್ನು (ಕೊಡದೆ ಇರುವದು) ವಿಂಗಡಿಸಿ ತೋರಿಸುವದು ಆಗುವಂತಿಲ್ಲ ವಾದ್ದರಿಂದ **ಅಗ್ನ್ಯಾದಿಗಳಂತೆ ಜಗತ್ತೆಲ್ಲವೂ ತ್ರಿವೃತ್ಕೃತವಾಗಿರುವದ ರಿಂದ ಮೂರು ರೂಪಗಳೇ ಸತ್ಯವೆಂದಾದರೆ, ಅಗ್ನಿಯ ಅಗ್ನಿತ್ವವು (ಹೋದಂತೆ) ಜಗತ್ತಿನ ಜಗತ್ತ್ವವು ಹೋಯಿತು** (ಎಂದಾಗುತ್ತದೆ). **ಹೀಗೆಯೇ ಅನ್ನವೂ ಅಪ್ಪಿನ ಶುಂಗವಾದ್ದರಿಂದ ಅಪ್ಪೆಂಬುದೇ ಸತ್ಯ, ಅನ್ನವು ವಾಚಾರಂಭಣಮಾತ್ರವು ; ಹಾಗೆಯೇ ಅಪ್ಪು ತೇಜಸ್ಸಿನ ಶುಂಗವಾದ್ದರಿಂದ (ಅದೂ) ವಾಚಾರಂಭಣವೇ, ತೇಜಸ್ಸೆಂಬುದೇ ಸತ್ಯವು ; ತೇಜಸ್ಸೂ ಸತ್ತಿನ ಶುಂಗವಾದ್ದರಿಂದ (ಅದೂ) ವಾಚಾ ರಂಭಣವೇ, ಸತ್ತೆಂಬುದೇ ಸತ್ಯವು- ಎಂಬೀ ಅರ್ಥವು (ಇಲ್ಲಿ) ವಿವಕ್ಷಿತವಾಗಿರುತ್ತದೆ.**[1]

## ವಾಯ್ವಾಕಾಶಗಳನ್ನು ಇಲ್ಲಿ ಸೂಚಿಸಿಯೇ ಇದೆ

(ಭಾಷ್ಯ)

೪೭೧. ನನು ವಾಯ್ವನ್ತರಿಕ್ಷೇ ತು ಅತ್ರಿವೃತ್ಕೃತೇ ತೇಜಃಪ್ರಭೃತಿಷು ಅನನ್ತರ್ಭೂತತ್ವಾದವಶಿಷ್ಯೇತೇ । ಏವಂ ಗನ್ಧರಸಶಬ್ದಸ್ಪರ್ಶಾಶ್ಚ ಅವಶಿಷ್ಟಾಃ ಇತಿ ಕಥಂ ಸತಾ ವಿಜ್ಞಾತೇನ ಸರ್ವಮನ್ಯದ್ ಅವಿಜ್ಞಾತಂ ವಿಜ್ಞಾತಂ ಭವೇತ್ ? ತದ್ವಿಜ್ಞಾನೇ ವಾ ಪ್ರಕಾರಾನ್ತರಂ ವಾಚ್ಯಮ್ । ನೈಷ ದೋಷಃ । ರೂಪವದ್ದ್ರವ್ಯೇ ಸರ್ವಸ್ಯ ದರ್ಶನಾತ್ । ಕಥಮ್ ? ತೇಜಸಿ ತಾವದ್ರೂಪವತಿ ಶಬ್ದಸ್ಪರ್ಶಯೋರಪಿ

---

1. ಶುಂಗವೆಂದರೆ ಕಾರ್ಯವು ; ಕಾರ್ಯವು ಕಾರಣಕ್ಕಿಂತ ಅನನ್ಯವಾಗಿರುವದರಿಂದ ಆಯಾ ಕಾರ್ಯದಿಂದ ಕಾರಣವನ್ನು ಹುಡುಕಿ ತೆಗೆಯುತ್ತಾ ಪರಮಕಾರಣವಾದ ಸತ್ತನ್ನು ಅರಿತುಕೊಳ್ಳಬೇಕು ಎಂದು ಅಭಿಪ್ರಾಯ. ೬-೮-೪ನ್ನು ನೋಡಿ.

ಉಪಲಮ್ಭಾತ್ ವಾಯ್ವನ್ತರಿಕ್ಷಯೋಸ್ತತ್ರ ಸ್ಪರ್ಶಶಬ್ದಗುಣವತೋಃ ಸದ್ಭಾವೋಽನುಮೀಯತೇ । ತಥಾ ಅಬನ್ನಯೋಃ ರೂಪವತೋಃ ರಸಗನ್ಧಾನ್ತರ್ಭಾವ ಇತಿ ರೂಪವತಾಂ ತ್ರಯಾಣಾಂ ತೇಜೋಽಬನ್ನಾನಾಂ ತ್ರಿವೃತ್ಕರಣಪ್ರದರ್ಶನೇನ ಸರ್ವಂ ತದನ್ತರ್ಭೂತಂ ಸದ್ವಿಕಾರತ್ವಾತ್ ತ್ರೀಣ್ಯೇವ ರೂಪಾಣಿ ವಿಜ್ಞಾತಂ ಮನ್ಯತೇ ಶ್ರುತಿಃ । ನ ಹಿ ಮೂರ್ತಂ ರೂಪವದ್ದ್ರವ್ಯಂ ಪ್ರತ್ಯಾಖ್ಯಾಯ ವಾಯ್ವಾಕಾಶಯೋಃ, ತದ್ಗುಣಯೋರ್ಗನ್ಧರಸಯೋರ್ವಾ ಗ್ರಹಣಮಸ್ತಿ । ಅಥವಾ ರೂಪವತಾಮಪಿ ತ್ರಿವೃತ್ಕರಣಂ ಪ್ರದರ್ಶನಾರ್ಥಮೇವ ಮನ್ಯತೇ ಶ್ರುತಿಃ । ಯಥಾ ತು ತ್ರಿವೃತ್ಕೃತೇ ತ್ರೀಣಿ ರೂಪಾಣೀತ್ಯೇವ ಸತ್ಯಮ್, ತಥಾ ಪಞ್ಚೀಕರಣೇಽಪಿ ಸಮಾನೋ ನ್ಯಾಯಃ ಇತ್ಯತಃ ಸರ್ವಸ್ಯ ಸದ್ವಿಕಾರತ್ವಾತ್ ಸತಾ ವಿಜ್ಞಾತೇನ ಸರ್ವಮಿದಂ ವಿಜ್ಞಾತಂ ಸ್ಯಾತ್, ಸದೇಕಮೇವಾದ್ವಿತೀಯಂ ಸತ್ಯಮ್ ಇತಿ ಸಿದ್ಧಮೇವ ಭವತಿ । ತದೇಕಸ್ಮಿನ್ ಸತಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ಸೂಕ್ತಮ್ ॥

(ಭಾಷ್ಯಾರ್ಥ)

(ಆಕ್ಷೇಪ) .- ಆದರೆ ತ್ರಿವೃತ್ಕೃತವಲ್ಲದ ವಾಯ್ವಾಕಾಶಗಳು ತೇಜಸ್ಸೇ ಮುಂತಾದವುಗಳಲ್ಲಿ ಅಡಕವಾಗದೆ ಇರುವದರಿಂದ ಉಳಿದುಕೊಂಡಿರುತ್ತವೆ. ಹೀಗೆಯೇ ಗಂಧ, ರಸ, ಶಬ್ದ, ಸ್ಪರ್ಶ- ಇವುಗಳೂ (ಇಲ್ಲಿ ಹೇಳದೆ ಇರುವದರಿಂದ) ಉಳಿದುಕೊಂಡಿರುತ್ತವೆ. ಹೀಗಿರುವದರಿಂದ ಸತ್ತನ್ನು ಅರಿತುಕೊಂಡರೆ ಅರಿತುಕೊಳ್ಳದೆ ಇರುವ ಮಿಕ್ಕೆಲ್ಲವೂ ವಿಜ್ಞಾತವಾಗುವದು ಹೇಗಾದೀತು ? ಅಥವಾ ಅವುಗಳನ್ನು ಅರಿತುಕೊಳ್ಳುವದಕ್ಕೆ (ತ್ರಿವೃತ್ಕರಣಕ್ಕಿಂತ) ಬೇರೆಯ ಪ್ರಕಾರವನ್ನಾದರೂ ಹೇಳಬೇಕಲ್ಲವೆ ?

(ಪರಿಹಾರ) .- ಇದೇನೂ ದೋಷವಲ್ಲ. ಏಕೆಂದರೆ ರೂಪವುಳ್ಳ ದ್ರವ್ಯದಲ್ಲಿ ಎಲ್ಲವೂ ಕಂಡುಬರುತ್ತಿದೆ ಹೇಗೆಂದರೆ, ಮೊದಲನೆಯದಾಗಿ ರೂಪವುಳ್ಳ ತೇಜಸ್ಸಿನಲ್ಲಿ ಶಬ್ದಸ್ಪರ್ಶಗಳೂ ಕಾಣುತ್ತಿರುವದರಿಂದ ಸ್ಪರ್ಶ, ಶಬ್ದ - ಎಂಬ ಗುಣವುಳ್ಳ ವಾಯ್ವಾಕಾಶಗಳೂ ಅದರಲ್ಲಿರಬೇಕೆಂದು ಅನುಮಾನಿಸಬಹುದಾಗಿದೆ. ಇದರಂತೆ ರೂಪವುಳ್ಳ ಅಬನ್ನಗಳಲ್ಲಿ ರಸಗಂಧಗಳೂ ಅಡಕವಾಗಿರುತ್ತವೆ. ಆದ್ದರಿಂದ ರೂಪವುಳ್ಳ (ಈ) ತೇಜೋಬನ್ನಗಳೆಂಬ ಮೂರಕ್ಕೂ **ತ್ರಿವೃತ್ಕರಣವನ್ನು ತೋರಿಸಿಕೊಟ್ಟಿದ್ದರಿಂದ ಅವುಗಳಲ್ಲಿ ಅಡಕವಾಗಿರುವದೆಲ್ಲವೂ ಸತ್ತಿನ ಕಾರ್ಯವಾಗಿರುವದರಿಂದ ಮೂರೇ ರೂಪಗಳು ಎಂದು ವಿಜ್ಞಾತವಾದಂತೆ ಎಂದು ಶ್ರುತಿಯ ಅಭಿಪ್ರಾಯವಿರುತ್ತದೆ.** ಮೂರ್ತವಾದ ರೂಪವುಳ್ಳ ದ್ರವ್ಯವನ್ನು ಬಿಟ್ಟರೆ ವಾಯ್ವಾಕಾಶಗಳನ್ನಾಗಲಿ ಅವುಗಳ ಗುಣಗಳನ್ನಾಗಲಿ ಗಂಧರಸ

ಗಳನ್ನಾಗಲಿ ಗ್ರಹಿಸುವದು ಆಗಲಾರದಷ್ಟೆ? ಅಥವಾ[1] ರೂಪವುಳ್ಳ (ತೇಜೋಬನ್ನಗಳ) ತ್ರಿವೃತ್ಕರಣವನ್ನು ಹೇಳಿರುವದೂ ಉಪಲಕ್ಷಣಕ್ಕಾಗಿಯೇ ಎಂದು ಶ್ರುತಿಯ ಅಭಿಪ್ರಾಯ. **ತ್ರಿವೃತ್ಕೃತವಾದಲ್ಲಿ ಹೇಗೆ ಮೂರು ರೂಪಗಳೇ ಸತ್ಯವೆಂದಾಗುವದೋ ಹಾಗೆಯೇ ಪಂಚೀಕರಣವಾದರೂ ನ್ಯಾಯವು ಸಮಾನವಾಗಿಯೇ ಇರುತ್ತದೆ**[2]. ಆದ್ದರಿಂದ ಎಲ್ಲವೂ ಸತ್ತಿನ ವಿಕಾರವಾಗಿರುವದರಿಂದ ಸತ್ತನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತೆ ಆಗುವದು ; ಎರಡನೆಯದಿಲ್ಲದ ಸತ್ತೊಂದೇ ಸತ್ಯವು -ಎಂದು ಸಿದ್ಧವೇ ಆಗುತ್ತದೆ. ಆದ್ದರಿಂದ ಸತ್ತೊಂದನ್ನು ಅರಿತುಕೊಂಡರೆ ಇದೆಲ್ಲವೂ ವಿಜ್ಞಾತವಾಗುವದು ಎಂದು ಹೇಳಿದ್ದು ಸರಿಯೇ.

## ತ್ರಿವೃತ್ಕರಣವನ್ನು ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕು

(ಉಪನಿಷತ್ತು)

**ಏತದ್ಧ ಸ್ಮ ವೈ ತದ್ವಿದ್ವಾಗ್ಂಸ ಆಹುಃ ಪೂರ್ವೇ ಮಹಾಶಾಲಾ ಮಹಾಶ್ರೋತ್ರಿಯಾ ನ ನೋಽದ್ಯ ಕಶ್ಚನಾಶ್ರುತಮಮತಮವಿಜ್ಞಾತಮುದಾಹರಿಷ್ಯತೀತಿ ಹ್ಯೇಭ್ಯೋ ವಿದಾಂಚಕ್ರುಃ ॥ ೫ ॥**

೫. ಆ ಇದನ್ನು ಅರಿತ ಪೂರ್ವದ ಮಹಾಶಾಲರೂ ಮಹಾಶ್ರೋತ್ರಿಯರೂ 'ಈಗ ನಮ್ಮಲ್ಲಿ ಯಾವನೂ ಅಶ್ರುತವಾದದ್ದನ್ನು ಅಮತವಾದದ್ದನ್ನು ಅವಿಜ್ಞಾತವಾದದ್ದನ್ನು ಉದಾಹರಿಸುವದಿಲ್ಲ' ಎಂದರು. ಇವುಗಳಿಂದಲೇ ಅರಿತುಕೊಂಡರು.

## ತ್ರಿವೃತ್ಕೃತದೃಷ್ಟಾಂತಗಳಿಂದ ಎಲ್ಲವನ್ನೂ ಅರಿತುಕೊಳ್ಳಬಹುದು

(ಭಾಷ್ಯ)

೪೭೨. ಏತತ್ತದ್[3] ವಿದ್ವಾಂಸೋ ವಿದಿತವನ್ತಃ ಪೂರ್ವೇಽತಿಕ್ರಾನ್ತಾ

---

1. ಹಿಂದಿನ ವ್ಯಾಖ್ಯಾನದಲ್ಲಿ ರೂಪವದ್ದ್ರವ್ಯದಲ್ಲಿಯೇ ವಾಯ್ವಾಕಾಶಗಳನ್ನೂ ಅಡಕವಾಗಿವೆ ಎಂದು ತೋರಿಸಿದೆ. ಈಗ ಆ ಪ್ರಯಾಸವಿಲ್ಲದೆಯೇ ವಾಯ್ವಾಕಾಶಗಳನ್ನು ಸೂಚಿಸಿದೆ ಎಂದು ವ್ಯಾಖ್ಯಾನಮಾಡಲಾಗುತ್ತದೆ.

2. ಪಂಚೀಕೃತವಾದ ಪದಾರ್ಥಗಳಲ್ಲಿ ಅಪಂಚೀಕೃತವಾದ ಐದು ಭೂತಗಳ ಧರ್ಮವು ಇರುತ್ತವೆ ; ಅವು ಸತ್ತಿನಿಂದಲೇ ಆಗಿರುತ್ತವೆ- ಎಂಬ ನ್ಯಾಯವು ಅಲ್ಲಿಯೂ ಇರುತ್ತದೆ.

3. ಇಲ್ಲಿ ಮೂಲದಲ್ಲಿದ್ದ ತತ್ ಎಂಬ ಮಾತು ಬಿಟ್ಟುಹೋಗಿದೆ ಎಂದು ಸೇರಿಸಿಕೊಡಿ.

ಮಹಾಶಾಲಾ ಮಹಾಶ್ರೋತ್ರಿಯಾ ಆಹುಃ ಹ ಸ್ಮ ವೈ ಕಿಲ। ಕಿಮುಕ್ತವನ್ತಃ ಇತಿ? ಆಹ। ನ ನೋಽಸ್ಮಾಕಂ ಕುಲೇ ಅದ್ಯ ಇದಾನೀಂ ಯಥೋಕ್ತವಿಜ್ಞಾನವತಾಂ ಕಶ್ಚನ ಕಶ್ಚಿದಪಿ ಅಶ್ರುತಮಮತಮವಿಜ್ಞಾತಮುದಾಹರಿಷ್ಯತಿ ನೋದಾಹರಿಷ್ಯತಿ ಸರ್ವಂ ವಿಜ್ಞಾತಮೇವ ಅಸ್ಮತ್ಕುಲೀನಾನಾಂ ಸದ್ವಿಜ್ಞಾನವತ್ತ್ವಾತ್ ಇತ್ಯಭಿಪ್ರಾಯಃ। ತೇ ಪುನಃ ಕಥಂ ಸರ್ವಂ ವಿಜ್ಞಾತವನ್ತ ಇತಿ? ಆಹ। ಏಭ್ಯಸ್ತ್ರಿಭ್ಯೋ ರೋಹಿತಾದಿರೂಪೇಭ್ಯಸ್ತ್ರಿವೃತ್ಕೃತೇಭ್ಯೋ ವಿಜ್ಞಾತೇಭ್ಯಃ ಸರ್ವಮಪ್ಯನ್ಯತ್ ಶಿಷ್ಟಮ್ ಏವಮೇವ ಇತಿ ವಿದಾಂಚಕ್ರುಃ ವಿಜ್ಞಾತವನ್ತೋ ಯಸ್ಮಾತ್ ತಸ್ಮಾತ್ ಸರ್ವಜ್ಞಾ ಏವ ಸದ್ವಿಜ್ಞಾನಾತ್ ತೇ ಆಸುರಿತ್ಯರ್ಥಃ। ಅಥವಾ ಏಭ್ಯೋ ವಿದಾಂಚಕ್ರುರಿತಿ ಅಗ್ನ್ಯಾದಿಭ್ಯೋ ದೃಷ್ಟಾನ್ತೇಭ್ಯೋ ವಿಜ್ಞಾತೇಭ್ಯಃ ಸರ್ವಮನ್ಯದ್ ವಿದಾಂಚಕ್ರುಃ ಇತ್ಯೇತತ್ ॥

(ಭಾಷ್ಯಾರ್ಥ)

ಆ ಇದನ್ನು ಅರಿತು ತಿಳಿದುಕೊಂಡ ಪೂರ್ವದ ಹಿಂದೆ ಆಗಿಹೋದ ಮಹಾಶಾಲರೂ[1] ಮಹಾಶ್ರೋತ್ರಿಯರೂ (ಹೀಗೆಂದು) ಹೇಳಿದರಂತೆ. ಏನು ಹೇಳಿದರು? –ಎಂದರೆ ಹೇಳುತ್ತಾನೆ. (ನಃ=ಅಸ್ಮಾಕಮ್) ನಮ್ಮಗಳ ಕುಲದಲ್ಲಿ (ಅದ್ಯ=ಇದಾನೀಮ್) ಈಗ ಮೇಲೆ ಹೇಳಿದ ತಿಳಿವಳಿಕೆಯುಳ್ಳ (ನಮ್ಮ ಕುಲದಲ್ಲಿ ಕಶ್ಚನ=ಕಶ್ಚಿದಪಿ) ಯಾವನೊಬ್ಬನೂ ಅಶ್ರುತವಾದದ್ದನ್ನು ಅಮತವಾದದ್ದನ್ನು ಅವಿಜ್ಞಾತವಾದದ್ದನ್ನು ಹೇಳುವದಿಲ್ಲ. ಸತ್ತಿನ ವಿಜ್ಞಾನವುಳ್ಳವರಾದ್ದರಿಂದ ನಮ್ಮ ಕುಲದವರಿಗೆ ಎಲ್ಲವೂ ವಿಜ್ಞಾತವೇ ಆಗಿರುತ್ತದೆ ಎಂದು ಅಭಿಪ್ರಾಯ.

ಹಾಗಾದರೆ ಅವರು ಎಲ್ಲವನ್ನೂ ಹೇಗೆ ಅರಿತುಕೊಂಡರು? ಎಂದರೆ ಹೇಳುತ್ತಾನೆ: ಈ ತ್ರಿವೃತ್ಕೃತವಾದ ರೋಹಿತಾದಿರೂಪಗಳೆಂಬ ಈ ಮೂರನ್ನೂ ಅರಿತುಕೊಂಡದ್ದರಿಂದ (ಇವುಗಳಿಂದ) ಉಳಿದ ಬೇರೆ ಎಲ್ಲವನ್ನೂ ಹೀಗೆಯೇ ಎಂದು (ವಿದಾಂಚಕ್ರುಃ=ವಿಜ್ಞಾತವನ್ತಃ) ಅರಿತುಕೊಂಡರಷ್ಟೆ, ಆದ್ದರಿಂದ ಅವರು ಸದ್ವಿಜ್ಞಾನದಿಂದ ಸರ್ವಜ್ಞರೇ ಆಗಿದ್ದರು ಎಂದರ್ಥ. ಅಥವಾ[2] ಇವುಗಳಿಂದ ತಿಳಿದುಕೊಂಡರು ಎಂದರೆ (ಈ) ಅಗ್ನ್ಯಾದಿದೃಷ್ಟಾಂತಗಳನ್ನು ಅರಿತುಕೊಂಡದ್ದರಿಂದ ಮಿಕ್ಕದ್ದೆಲ್ಲವನ್ನೂ ಅರಿತುಕೊಂಡರು ಎಂದು ತಾತ್ಪರ್ಯ.

(ಉಪನಿಷತ್ತು)

**ಯದು ರೋಹಿತಮಿವಾಭೂದಿತಿ ತೇಜಸಸ್ತದ್ರೂಪಮಿತಿ**

---

1. ಮಹಾಗೃಹಸ್ಥರೂ ಎಂದರ್ಥ. ಈ ವಿಶೇಷಣವು ಜ್ಞಾನಕರ್ಮಸಮುಚ್ಚಯವಾದಕ್ಕೆ ಪೋಷಕವಲ್ಲವೆಂಬ ಬಗ್ಗೆ ಮುಂ. ಭಾ. ಅವ. (ಭಾ. ಭಾ. ೫)ನ್ನು ನೋಡಿ.

2. ಅಗ್ನ್ಯಾದಿಗಳನ್ನು ಉಪಲಕ್ಷಣವಾಗಿ ಹೇಳಿವೆ. ಆದ್ದರಿಂದ ಎಲ್ಲವನ್ನೂ ಹೀಗೆಯೇ ಎಲ್ಲದರಲ್ಲಿಯೂ ಗ್ರಹಿಸಿದರು ಎಂದರ್ಥ.

**ತದ್ವಿದಾಂಚಕ್ರುರ್ಯದು ಶುಕ್ಲಮಿವಾಭೂದಿತ್ಯಪಾಗ್ಂ ರೂಪ ಮಿತಿ ತದ್ವಿದಾಂಚಕ್ರುರ್ಯದು ಕೃಷ್ಣಮಿವಾಭೂದಿತ್ಯನ್ನಸ್ಯ ರೂಪಮಿತಿ ತದ್ವಿದಾಂಚಕ್ರುಃ ॥ ೬ ॥**

**ಯದ್ವವಿಜ್ಞಾತಮಿವಾಭೂದಿತ್ಯೇತಾಸಾಮೇವ ದೇವತಾನಾಗ್ಂ ಸಮಾಸ ಇತಿ ತದ್ವಿದಾಂಚಕ್ರುರ್ಯಥಾ ನು ಖಲು[1] ಸೋಮ್ಯೇ ಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹೀತಿ ॥ ೭ ॥**

೬. ಯಾವದು ಕೆಂಪಿನಂತೆ ಆಯಿತೋ ಅದು ತೇಜಸ್ಸಿನ ರೂಪವೆಂದು ಅದನ್ನು ಅರಿತುಕೊಂಡರು. ಯಾವದು ಬಿಳುಪಿನಂತೆ ಆಯಿತೋ ಅದು ಅಪ್ಪಿನ ರೂಪವೆಂದು ಅರಿತುಕೊಂಡರು. ಮತ್ತು ಯಾವದು ಕಪ್ಪಿನಂತೆ ಆಯಿತೋ ಅದು ಅನ್ನದ ರೂಪವೆಂದು ಅದನ್ನು ಅರಿತುಕೊಂಡರು.

೭. ಯಾವದು ಅವಿಜ್ಞಾತದಂತೆ ಆಗಿತ್ತೋ (ಅದು) ಈ ದೇವತೆಗಳದ್ದೇ ಸಮಾಸವೆಂದು ಅದನ್ನು ಅರಿತುಕೊಂಡರು. ಸೋಮ್ಯನೆ, ಆದರೆ ಈ ಮೂರುದೇವತೆಗಳೂ ಪುರುಷನನ್ನು ಸೇರಿ ಒಂದೊಂದು ತ್ರಿವೃತತ್ರಿವೃತವಾಗುತ್ತದೆಯೋ ಅದನ್ನು ನನ್ನಿಂದ ಅರಿತುಕೊ- (ಎಂದನು).

## ಉದಾಹರಣೆಗಳಿಂದ ಎಲ್ಲವನ್ನೂ ಅರಿತುಕೊಂಡ ಬಗೆ

(ಭಾಷ್ಯ)

೪೭೩. ಕಥಮ್? ಯದನ್ಯದ್ರೂಪೇಣ ಸಂದಿಹ್ಯಮಾನೇ ಕಪೋತಾದಿ ರೂಪೇ ರೋಹಿತಮಿವ ಯದ್ ಗೃಹ್ಯಮಾಣಮಭೂತ್ ತೇಷಾಂ ಪೂರ್ವೇಷಾಂ ಬ್ರಹ್ಮವಿದಾಂ, ತತ್ ತೇಜಸೋ ರೂಪಮಿತಿ ವಿದಾಂಚಕ್ರುಃ। ತಥಾ ಯತ್ ಶುಕ್ಲ ಮಿವ ಅಭೂತ್ ಗೃಹ್ಯಮಾಣಂ ತದಪಾಂ ರೂಪಂ ಯತ್ಕೃಷ್ಣಮಿವ ಗೃಹ್ಯಮಾಣಂ ತದನ್ನಸ್ಯ ಇತಿ ವಿದಾಂಚಕ್ರುಃ। ಏವಮೇವ ಅತ್ಯನ್ತದುರ್ಲಕ್ಷ್ಯಂ ಯದು ಅಪಿ ಅವಿಜ್ಞಾತಮಿವ ವಿಶೇಷತೋಽಗೃಹ್ಯಮಾಣಮ್ ಅಭೂತ್ ತದಪಿ ಏತಾಸಾಮೇವ ತಿಸೃಣಾಂ ದೇವತಾನಾಂ ಸಮಾಸಃ ಸಮುದಾಯಃ ಇತಿ ವಿದಾಂಚಕ್ರುಃ ॥

---

1 ಇದು ಭಾಷ್ಯಾನುಸಾರಿಯಾದ ಪಾಠ. ‹ಯಥಾ ಖಲು ನು' ಎಂದು ಅ॥ ‹ಯಥಾ ತು ಖಲು' ಎಂದು ವಾ॥

(ಭಾಷ್ಯಾರ್ಥ)

ಹೇಗೆ (ಅರಿತುಕೊಂಡರು)? ಎಂದರೆ ಯಾವದು ಮತ್ತೊಂದು ರೂಪವೆಂದು ಸಂದೇಹವಾಗಿರುವಲ್ಲಿ, ಚಿತ್ರರೂಪವೇ ಮುಂತಾದದ್ದರಲ್ಲಿ ಯಾವದು ಕೆಂಪಿನಂತೆ ಆ ಹಿಂದಿನ ಬ್ರಹ್ಮಜ್ಞಾನಿಗಳಿಗೆ ಗೊತ್ತಾಯಿತೋ[1], ಅದು ತೇಜಸ್ಸಿನ ರೂಪವು ಎಂದು ಅರಿತುಕೊಂಡರು ಹಾಗೆಯೇ ಯಾವದು ಬಿಳುಪಿನಂತೆ ಗೃಹೀತವಾಯಿತೋ ಅದು ಅಪ್ಪಿನ ರೂಪವೆಂದು, ಯಾವದು ಕಪ್ಪಿನಂತೆ (ಗೃಹೀತವಾಯಿತೋ) ಅದು ಅನ್ನದ (ರೂಪವೆಂದು) ಅರಿತುಕೊಂಡರು. ಹೀಗೆಯೇ ಅತ್ಯಂತವಾಗಿ ಕಾಣಿಸದೆ ಯಾವದು ಅವಿಜ್ಞಾತವಾದಂತೆ ಇಂಥದ್ದೆಂದು ಗೃಹೀತವಾಗದೆ ಇದ್ದಿತೋ ಅದನ್ನು ಈ ಮೂರು ದೇವತೆಗಳ ಸಮಾಸವೇ ಒಟ್ಟೇ ಎಂದು ಅರಿತುಕೊಂಡರು.

## ಆಧ್ಯಾತ್ಮಿಕತ್ರಿವೃತ್ಕರಣವನ್ನು ಹೇಳುವೆನೆಂಬ ಪ್ರತಿಜ್ಞೆ

(ಭಾಷ್ಯ)

೪೭೪ ಏವಂ ತಾವದ್ ಬಾಹ್ಯಂ ವಸ್ತ್ವಗ್ನ್ಯಾದಿವದ್ ವಿಜ್ಞಾತಮ್ । ತಥೇದಾನೀಂ ಯಥಾ ನು ಖಲು ಹೇ ಸೋಮ್ಯ ಇಮಾ ಯಥೋಕ್ತಾಃ ತಿಸ್ರೋ ದೇವತಾಃ ಪುರುಷಂ ಶಿರಃಪಾಣ್ಯಾದಿಲಕ್ಷಣಂ ಕಾರ್ಯಕಾರಣಸಂಘಾತಂ ಪ್ರಾಪ್ಯ ಪುರುಷೇಣ ಉಪಯುಜ್ಯಮಾನಾಃ । ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹಿ ನಿಗದತಃ ಇತ್ಯುಕ್ತ್ವಾ ಆಹ ॥

(ಭಾಷ್ಯಾರ್ಥ)

ಹೀಗೆ ಮೊದಲನೆಯದಾಗಿ ಹೊರಗಿನ ವಸ್ತುವನ್ನು ಅಗ್ನ್ಯಾದಿಗಳಂತೆ (ತ್ರಿವೃತ್ಕೃತತೇಜಆದಿಗಳ ರೂಪವುಳ್ಳದ್ದೆಂದು) ಅರಿತುಕೊಂಡದ್ದಾಯಿತಷ್ಟೆ. ಇನ್ನು ಈಗ ಎಲೈ ಸೋಮ್ಯನೆ, ಹೇಗೆ ಈ ಮೇಲೆ ಹೇಳಿದ ಮೂರು ದೇವತೆಗಳು ಪುರುಷನನ್ನು ಎಂದರೆ ತಲೆ ಕೈ(ಕಾಲು) ಮುಂತಾದ ರೂಪದ ಕಾರ್ಯಕರಣಸಂಘಾತವನ್ನು ಸೇರಿ (ಆ) ಪುರುಷನು (ಇವನ್ನು) ಉಪಯೋಗಿಸಿಕೊಳ್ಳಲಾಗಿ ಒಂದೊಂದೂ ತ್ರಿವೃತತ್ರಿವೃತವಾಗುವದೋ ಆ (ಆಧ್ಯಾತ್ಮಿಕತ್ರಿವೃತ್ಕರಣ)ವನ್ನು ನಾನು ಹೇಳುವೆನು, ಅರಿತುಕೊ—ಎಂದು (ತಂದೆಯು) ಇಂತೆಂದನು :

---

1. ಅನೇಕ ರೂಪಗಳು ಸೇರಿರುವ ಕಡೆಯಲ್ಲಿ ಇಂಥದ್ದೊಂದು ಯಾವ ರೂಪವೆಂದು ವಿಚಾರಿಸುತ್ತಿರುವಲ್ಲಿ ಕೆಂಪೆಂದು ತೋರಿದರೆ ಇದು ತೇಜಸ್ಸಿನ ರೂಪವು ಎಂದು ಗೊತ್ತು ಮಾಡುತ್ತಿದ್ದರು. ಹೀಗೆಯೇ ಮುಂದಿನ ವಾಕ್ಯಗಳಿಗೂ ಅರ್ಥ.

# ಆರನೆಯ ಅಧ್ಯಾಯ-ಐದನೆಯ ಖಂಡ

(ತ್ರಿವೃತ್ಕರಣ ಮುಂದುವರಿದದ್ದು)

## ಆಧ್ಯಾತ್ಮಿಕತ್ರಿವೃತ್ಕರಣ

(ಉಪನಿಷತ್ತು)

**ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತು ಸ್ತತ್ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾಗ್ಂಸಂ ಯೋಽಣಿಷ್ಠಂ ತನ್ಮನಃ ॥ ೧ ॥**

೧. ಉಂಡ ಅನ್ನವು ಮೂರು ಬಗೆಯಾಗಿ ಮಾಡಲ್ಪಡುತ್ತದೆ. ಯಾವದು ಸ್ಥವಿಷ್ಠವಾದ ಧಾತುವೋ ಅದು ಮಲವಾಗುತ್ತದೆ ; ಯಾವದು ಮಧ್ಯಮ(ಧಾತುವೋ) ಅದು ಮಾಂಸ(ವಾಗುತ್ತದೆ), ಯಾವದು ಅಣಿಷ್ಠವಾಗಿರುವದೋ ಅದು ಮನಸ್ಸು.

## ಅನ್ನವು ಮೂರು ವಿಧವಾಗಿ ಪರಿಣಮಿಸುತ್ತದೆ

(ಭಾಷ್ಯ)

೪೭೪. ಅನ್ನಮ್ ಅಶಿತಂ ಭುಕ್ತಂ ತ್ರೇಧಾ ವಿಧೀಯತೇ ಜಾಠರೇಣಾಗ್ನಿನಾ ಪಚ್ಯಮಾನಂ ತ್ರಿಧಾ ವಿಭಜ್ಯತೇ ಕಥಮ್? ತಸ್ಯಾನ್ನಸ್ಯ ತ್ರಿಧಾ ವಿಧೀಯಮಾನಸ್ಯ ಯಃ ಸ್ಥವಿಷ್ಠಃ ಸ್ಥೂಲತಮೋ ಧಾತುಃ ಸ್ಥೂಲತಮಂ ವಸ್ತು ವಿಭಕ್ತಸ್ಯ ಸ್ಥೂಲೋಽಂಶಃ, ತತ್ ಪುರೀಷಂ ಭವತಿ। ಯೋ ಮಧ್ಯಮೋಽಂಶೋ[1] ಧಾತುರನ್ನಸ್ಯ ತದ್ರಸಾದಿಕ್ರಮೇಣ ಪರಿಣಮ್ಯ ಮಾಂಸಂ ಭವತಿ। ಯೋಽಣಿಷ್ಠೋಽಣುತಮೋ ಧಾತುಃ ಸ ಊರ್ಧ್ವಂ ಹೃದಯಂ ಪ್ರಾಪ್ಯ ಸೂಕ್ಷ್ಮಾಸು ಹಿತಾಖ್ಯಾಸು ನಾಡೀಷು ಅನುಪ್ರವಿಶ್ಯ ವಾಗಾದಿಕರಣಸಂಘಾತಸ್ಯ ಸ್ಥಿತಿಮ್ ಉತ್ಪಾದಯನ್ ಮನೋ ಭವತಿ ಮನೋರೂಪೇಣ ವಿಪರಿಣಮನ್ (?) ಮನಸ ಉಪಚಯಂ ಕರೋತಿ। ತತಶ್ಚ ಅನ್ನೋಪಚಿತತ್ವಾನ್ಮನಸೋ ಭೌತಿಕತ್ವಮೇವ ನ ವೈಶೇಷಿಕತನ್ತ್ರೋಕ್ತಲಕ್ಷಣಂ ನಿತ್ಯಂ ನಿರವಯವಂ ಚೇತಿ ಗೃಹ್ಯತೇ। ಯದಪಿ 'ಮನೋಽಸ್ಯ ದೈವಂ ಚಕ್ಷುಃ' (೮-೧೨-೫) ಇತಿ ವಕ್ಷ್ಯತಿ ತದಪಿ ನ ನಿತ್ಯತ್ವಾಪೇಕ್ಷಯಾ ಕಿಂ ತರ್ಹಿ ಸೂಕ್ಷ್ಮವ್ಯವಹಿತವಿಪ್ರಕೃಷ್ಟಾದಿಸರ್ವೇನ್ದ್ರಿಯವಿಷಯವ್ಯಾಪಕತ್ವಾ[2]

1. ಈ ಮಾತು ಹೆಚ್ಚಾಗಿ ಬರೆದವರು ಸೇರಿಸಿಕೊಂಡದ್ದೆಂದು ಕಾಣುತ್ತದೆ.

2. 'ವ್ಯಾಪಾರಕತ್ವಾಪೇಕ್ಷಯಾ' ಎಂಬ ಆ॥ ವಾ॥ ಪಾಠಗಳಿಗಿಂತ ಈ ಆ॥ ತೆ॥ ಪಾಠವೇ ಮೇಲು.

ಪೇಕ್ಷಯಾ । ಯಚ್ಚಾನ್ಯೇನ್ದ್ರಿಯವಿಷಯಾಪೇಕ್ಷಯಾ ನಿತ್ಯತ್ವಂ ತದಪಿ ಆಪೇಕ್ಷಿಕಮೇವ ಇತಿ ವಕ್ಷ್ಯಾಮಃ । "ಸತ್ ಏಕಮೇವಾದ್ವಿತೀಯಮ್" ಇತಿ ಶ್ರುತೇಃ ॥

(ಭಾಷ್ಯಾರ್ಥ)

(ಅಶಿತಂ=ಭುಕ್ತಂ) ಉಂಡ ಅನ್ನವು ಮೂರು ಬಗೆಯಾಗಿ ಮಾಡಲ್ಪಡುತ್ತದೆ. ಹೊಟ್ಟೆಯೊಳಗಿನ ಅಗ್ನಿಯಿಂದ ಪಕ್ವವಾಗಿ ಮೂರು ಬಗೆಯಾಗಿ ವಿಂಗಡವಾಗುತ್ತದೆ. ಹೇಗೆಂದರೆ, ಮೂರು ಬಗೆಯಾಗಿ ಮಾಡಲ್ಪಡುವ ಆ ಅನ್ನದ ಸ್ಥವಿಷವಾದ, ಯಾವದು ಅತ್ಯಂತಸ್ಥೂಲವಾದ ಧಾತುವೋ ಅತ್ಯಂತಸ್ಥೂಲವಾದ ವಸ್ತುವೋ, ವಿಂಗಡವಾದ (ಅನ್ನದ) ದಪ್ಪನೆಯ ಅಂಶವೋ, ಅದು ಮಲವಾಗುತ್ತದೆ. ಯಾವದು ಅನ್ನದ ಮಧ್ಯಮಧಾತುವೋ, ಅದು ರಸಾದಿಕ್ರಮದಿಂದ[1] ಪರಿಣಮಿಸಿ ಮಾಂಸವಾಗುತ್ತದೆ. ಯಾವದು ಅಣಿಷ್ಠವಾದ ಅತ್ಯಂತಸೂಕ್ಷ್ಮವಾದ ಧಾತುವೋ ಅದು ಮೇಲಕ್ಕೆ ಹೃದಯಕ್ಕೆ ಹೋಗಿ ಸೇರಿ ಸೂಕ್ಷ್ಮವಾದ ಹಿತವಾದಗಳೆಂಬ[2] ನಾಡಿಗಳಲ್ಲಿ ಒಳಹೊಕ್ಕು ವಾಕ್ಕೇ ಮುಂತಾದ ಕರಣಸಂಘಾತಕ್ಕೆ ಸ್ಥಿತಿಯನ್ನುಂಟುಮಾಡುತ್ತಾ ಮನಸ್ಸಾಗುತ್ತದೆ, ಮನಸ್ಸಿನ ರೂಪದಿಂದ ವಿಪರಿಣಾಮವನ್ನು ಹೊಂದಿ ಮನಸ್ಸಿನ ಬೆಳವಣಿಗೆಯನ್ನುಂಟುಮಾಡುತ್ತದೆ. **ಅನ್ನದಿಂದ ಬೆಳೆದಿರುವದರಿಂದ ಮನಸ್ಸು ಭೌತಿಕವೇ ಹೊರತು ವೈಶೇಷಿಕ ಶಾಸ್ತ್ರದಲ್ಲಿ ಹೇಳಿರುವಂತೆ (ಇದು) ನಿತ್ಯವೂ ನಿರವಯವವೂ ಅಲ್ಲ ಎಂದು ತಿಳಿಯಬೇಕಾಗಿದೆ.**[3] 'ಇವನಿಗೆ ಮನಸ್ಸು ದೈವಚಕ್ಷುಸ್ಸು' (೮–೧೨–೫) ಎಂದು ಮುಂದೆ ಹೇಳಿದೆಯಲ್ಲ, ಅದು (ಮನಸ್ಸು) ನಿತ್ಯವೆಂಬ ಅಭಿಪ್ರಾಯದಿಂದಲ್ಲ, ಮತ್ತೇನೆಂದರೆ ಸೂಕ್ಷ್ಮವು, ವ್ಯವಧಾನವುಳ್ಳದ್ದು, ದೂರವಿರುವದು– ಮುಂತಾದ ಎಲ್ಲಾ ಇಂದ್ರಿಯವಿಷಯಗಳನ್ನೂ ವ್ಯಾಪಿಸಿರುವದೆಂಬ ಅಭಿಪ್ರಾಯದಿಂದ.[4] ಇನ್ನು ಮಿಕ್ಕ ಇಂದ್ರಿಯಗಳ ವಿಷಯಗಳಿಗಿಂತಲೂ ನಿತ್ಯವಾಗಿದೆ

---

1. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ಲ– ಇದು ರಸಾದಿಕ್ರಮ.

2. ಈ ನಾಡಿಗಳ ವಿಷಯಕ್ಕೆ ಬೃ. ಭಾ. ೪–೨–೩ (ಭಾ. ಭಾ. ೧೫೪)ನ್ನೂ ಅದರ ಅನುವಾದದ ಟಿಪ್ಪಣಿಯನ್ನೂ ನೋಡಿ.

3. ಸೂ.ಭಾ. ೨–೩–೧೫ (ಭಾ.ಭಾ ೧೧೭)ರಲ್ಲಿ ಮನಸ್ಸು ಭೌತಿಕವೊ, ಅಭೌತಿಕವೊ –ಎಂಬಿದನ್ನು ಅನಿಶ್ಚಿತವಾಗಿ ಹೇಳಿದೆ. ಈ ವಿಷಯವಲ್ಲಿ ಅನುವಾದವ ಟಿಪ್ಪಣಿಯನ್ನೂ ಪ್ರಶ್ನ ಬೃಹದಾರಣ್ಯಕಭಾಷ್ಯಗಳ ಪೀಠಿಕೆಯನ್ನೂ ನೋಡಿ.

4. ಇಂದ್ರಿಯಗಳು ತಮಗೆ ಸಂಬಂಧಪಟ್ಟ ವರ್ತಮಾನಕಾಲದ ವಿಷಯಗಳನ್ನು ಮಾತ್ರ ಅರಿಯಬಲ್ಲವು, ಮನಸ್ಸು ಹಾಗಲ್ಲ. ಇಂದ್ರಿಯಗಳಿಗೆ ನಿಲುಕದ ವಿಷಯಗಳನ್ನೂ ಅರಿಯಬಲ್ಲದು ಎಂಬ ಅಭಿಪ್ರಾಯದಿಂದ ಎಂದರ್ಥ.

ಯಲ್ಲ, ಅದೂ ಆಪೇಕ್ಷಿಕವೇ ಎಂದು ಮುಂದೆ ತಿಳಿಸಿಕೊಡುವೆವು.[1] "ಸತ್ತು ತನಗೆರಡನೆಯದಿಲ್ಲದ ಒಂದೇ" (೬-೨-೧) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತ)ದೆ.[2]

(ಉಪನಿಷತ್ತು)

**ಆಪಃ ಪೀತಾಸ್ತ್ರೇಧಾ ವಿಧೀಯನ್ತೇ ತಾಸಾಂ ಯಃ ಸ್ಥವಿಷ್ಠೋ ಧಾತುಸ್ತನ್ಮೂತ್ರಂ ಭವತಿ ಯೋ ಮಧ್ಯಮಸ್ತಲ್ಲೋಹಿತಂ ಯೋಽಣಿಷ್ಠಃ ಸ ಪ್ರಾಣಃ ॥ ೨ ॥**

೨. ಕುಡಿದ ನೀರು ಮೂರು ಬಗೆಯಾಗಿ ಮಾಡಲ್ಪಡುತ್ತದೆ. ಯಾವದು ಅದರ ಸ್ಥವಿಷ್ಠವಾದ ಧಾತುವೋ ಅದು ಮೂತ್ರವಾಗುತ್ತದೆ; ಯಾವದು ಮಧ್ಯಮ(ಧಾತುವೋ) ಅದು ಲೋಹಿತ; ಯಾವದು ಅಣಿಷ್ಠವೋ ಅದು ಪ್ರಾಣವು.

## ನೀರು ಮೂರು ವಿಧವಾಗಿ ಪರಿಣಮಿಸುತ್ತದೆ

(ಭಾಷ್ಯ)

೪೭೬. ತಥಾ ಆಪಃ ಪೀತಾಸ್ತ್ರೇಧಾ ವಿಧೀಯನ್ತೇ ತಾಸಾಂ ಯಃ ಸ್ಥವಿಷ್ಠೋ ಧಾತುಃ, ತನ್ಮೂತ್ರಂ ಭವತಿ । ಯೋ ಮಧ್ಯಮಸ್ತಲ್ಲೋಹಿತಂ ಭವತಿ । ಯೋಽಣಿಷ್ಠಃ ಸ ಪ್ರಾಣೋ ಭವತಿ। ವಕ್ಷ್ಯತಿ ಹಿ "ಆಪೋಮಯಃ ಪ್ರಾಣೋ ನ ಪಿಬತೋ ವಿಚ್ಛೇತ್ಸ್ಯತ" (೬-೭-೧) ಇತಿ ॥

(ಭಾಷ್ಯಾರ್ಥ)

ಹೀಗೆಯೇ ಕುಡಿದ ನೀರು ಮೂರು ಬಗೆಯಾಗಿ ಮಾಡಲ್ಪಡುತ್ತದೆ. ಅದರ ಸ್ಥವಿಷ್ಠವಾದ ಧಾತುವಿದೆಯಲ್ಲ, ಅದು ಮೂತ್ರವಾಗುತ್ತದೆ ; ನಡುವಿನ (ಧಾತು) ವಿರುವದಲ್ಲ, ಅದು ರಕ್ತವಾಗುತ್ತದೆ, ತೀರಸೂಕ್ಷ್ಮವಾದ (ಧಾತು)ವಿರುವದಲ್ಲ, ಅದು ಪ್ರಾಣವಾಗುತ್ತದೆ. "ಪ್ರಾಣವು ಆಪೋಮಯವು, ಕುಡಿಯದೆ ಇದ್ದವನಿಗೆ (ಅದು) ಹೋಗಿಬಿಡುತ್ತದೆ" (೬-೭-೧) ಎಂದು ಮುಂದೆ ಹೇಳಲಾಗುವದಷ್ಟೆ ?

---

1. ಇಂದ್ರಿಯವ್ಯಾಪಾರವಿಲ್ಲದಾಗಲೂ ಮನಸ್ಸು ವ್ಯಾಪಾರಮಾಡುತ್ತಿರುವದೆಂಬ ಅಭಿಪ್ರಾಯದಿಂದ ಹೇಳಿದ್ದು ಎಂದರ್ಥ.

2. ಆತ್ಮನಂತೆ ಮನಸ್ಸು ಎಂದಿಗೂ ನಿತ್ಯವಾಗಲಾರದು ಎಂಬುದಕ್ಕೆ ಈ ಶ್ರುತಿಯು ಪ್ರಮಾಣವೆಂದು ಭಾವ.

(ಉಪನಿಷತ್ತು)

**ತೇಜೋಽಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತದಸ್ಥಿ ಭವತಿ ಯೋ ಮಧ್ಯಮಃ ಸ ಮಜ್ಜಾ ಯೋಽಣಿಷ್ಠಃ ಸಾ ವಾಕ್ ॥ ೩ ॥**

೩. ತಿಂದ ತೇಜಸ್ಸು ಮೂರುಬಗೆಯಾಗಿ ಮಾಡಲ್ಪಡುತ್ತದೆ. ಯಾವದು ಅದರ ಸ್ಥವಿಷ್ಠವಾದ ಧಾತುವೋ ಅದು ಅಸ್ಥಿಯಾಗುತ್ತದೆ, ಯಾವದು ಮಧ್ಯಮ(ಧಾತುವೋ) ಅದು ಮಜ್ಜೆಯಾಗುತ್ತದೆ, ಯಾವದು ಅಣಿಷ್ಠವಾದದ್ದೋ ಅದು ವಾಕ್ಕು.

## ತೇಜೋದ್ರವ್ಯವು ಮೂರು ವಿಧವಾಗಿ ಪರಿಣಮಿಸುತ್ತದೆ

(ಭಾಷ್ಯ)

೪೭೭. ತಥಾ ತೇಜೋಽಶಿತಂ ತೈಲಘೃತಾದಿ ಭಕ್ಷಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತದಸ್ಥಿ ಭವತಿ । ಯೋ ಮಧ್ಯಮಃ ಸ ಮಜ್ಜಾ ಅಸ್ಥ್ಯನ್ತರ್ಗತಃ ಸ್ನೇಹಃ । ಯೋಽಣಿಷ್ಠಃ ಸಾ ವಾಕ್ । ತೈಲಘೃತಾದಿಭಕ್ಷಣಾದ್ಧಿ ವಾಗ್ವಿಶದಾ ಭಾಷಣೇ ಸಮರ್ಥಾ ಭವತೀತಿ ಪ್ರಸಿದ್ಧಂ ಲೋಕೇ ॥

(ಭಾಷ್ಯಾರ್ಥ)

ಹೀಗೆಯೇ ತೈಲ, ತುಪ್ಪ- ಮುಂತಾದ ತಿಂದ, ಭಕ್ಷಿಸಿದ ತೇಜಸ್ಸು ಮೂರಾಗಿ ಮಾಡಲ್ಪಡುತ್ತದೆ. ಅದರ ಸ್ಥೂಲತಮವಾದ ಧಾತುವಿದೆಯಲ್ಲ, ಅದು ಎಲುಬಾಗುತ್ತದೆ. ನಡುವಿನ (ಧಾತು)ವಿದೆಯಲ್ಲ, ಅದು ಮಜ್ಜೆ, ಎಂದರೆ ಎಲುಬಿನೊಳಗಿನ ಜಿಡ್ಡು (ಆಗುತ್ತದೆ). ತೀರ ಸೂಕ್ಷ್ಮವಾದ(ಧಾತು)ವಿದೆಯಲ್ಲ, ಅದು ವಾಕ್ಕು (ಆಗುತ್ತದೆ) ತೈಲ, ಘೃತ- ಮುಂತಾದವುಗಳನ್ನು ಸೇವಿಸುವದರಿಂದ ಮಾತಾಡುವವರ ವಾಕ್ಕು ಶುದ್ಧವಾಗಿ .ಮಾತನಾಡುವದಕ್ಕೆ ಶಕ್ತವಾಗುತ್ತದೆ ಎಂದು ಲೋಕದಲ್ಲಿ ಪ್ರಸಿದ್ಧವಷ್ಟೆ ?

(ಉಪನಿಷತ್ತು)

**ಅನ್ನಮಯಗ್ಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೪ ॥**

೪. ಸೋಮ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಆಪೋಮಯವೇ, ವಾಕ್ಕು ತೇಜೋಮಯವೇ. 'ಭಗವಂತನು ನನಗೆ ಮತ್ತೂ ತಿಳಿಸಬೇಕು'- ಎನ್ನಲು 'ಸೋಮ್ಯನೆ, ಹಾಗೇ (ಆಗಲಿ)' ಎಂದನು.

# ಮನಃಪ್ರಾಣವಾಕ್ಕುಗಳು ಅನ್ನಾದಿಮಯವೆಂಬದರ ಉಪಸಂಹಾರ

(ಭಾಷ್ಯ)

೪೭೮. ಯತ ಏವಮ್ ಅನ್ನಮಯಂ ಹಿ ಸೋಮ್ಯ ಮನ ಆಪೋ ಮಯಃ ಪ್ರಾಣಃ, ತೇಜೋಮಯೀ ವಾಕ್ ॥

(ಭಾಷ್ಯಾರ್ಥ)

ಹೀಗಿರುವದರಿಂದ ಸೋಮ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಆಪೋಮಯವೇ, ವಾಕ್ಕು ತೇಜೋಮಯವೇ

# ಉಕ್ತತ್ರಿವೃತ್ಕರಣದ ವಿಷಯಕ್ಕೆ ಆಕ್ಷೇಪಸಮಾಧಾನಗಳು

(ಭಾಷ್ಯ)

೪೭೯. ನನು ಕೇವಲಾನ್ನಭಕ್ಷಿಣ ಆಖುಪ್ರಭೃತಯೋ ವಾಗ್ಮಿನಃ ಪ್ರಾಣವನ್ತಶ್ಚ । ತಥಾ ಅಬ್ಮಾತ್ರಭಕ್ಷ್ಯಾಃ ಸಾಮುದ್ರಾ ಮೀನನಕರಪ್ರಭೃತಯೋ ಮನಸ್ವಿನೋ ವಾಗ್ಮಿನಶ್ಚ । ತಥಾ ಸ್ನೇಹಪಾನಾಮಪಿ ಪ್ರಾಣವತ್ತ್ವಂ ಮನಸ್ವಿತ್ವಂ ಚ ಅನುಮೇಯಂ ಯದಿ ಸನ್ತಿ[1] । ತತ್ರ ಕಥಮನ್ನಮಯಂ ಹಿ ಸೋಮ್ಯ ಮನ ಇತ್ಯಾದ್ಯುಚ್ಯತೇ ? ನೈಷ ದೋಷಃ । ಸರ್ವಸ್ಯ ತ್ರಿವೃತ್ಕೃತತ್ವಾತ್ ಸರ್ವತ್ರ ಸರ್ವೋಪಪತ್ತೇಃ । ನ ಹ್ಯತ್ರಿವೃತ್ಕೃತಮನ್ನಮಶ್ನಾತಿ ಕಶ್ಚಿತ್ । ಆಪೋ ವಾ ಅತ್ರಿವೃತ್ಕೃತಾಃ ಪೀಯನ್ತೇ[2], ತೇಜೋ ವಾಽತ್ರಿವೃತ್ಕೃತಮಶ್ನಾತಿ ಕಶ್ಚಿದಿತಿ ಅನ್ನಾದಾನಾಮಾಖುಪ್ರಭೃತೀನಾಂ ವಾಗ್ಮಿತ್ವಂ ಪ್ರಾಣವತ್ತ್ವಂ ಚೇತ್ಯಾದ್ಯ ವಿರುದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಬರಿಯ ಅನ್ನವನ್ನು ತಿನ್ನುವ ಇಲಿ ಮುಂತಾದವುಗಳು ವಾಕ್ಕುಳ್ಳವೂ ಪ್ರಾಣವುಳ್ಳವೂ ಆಗಿರುತ್ತವೆ, ಹೀಗೆಯೇ ಬರಿಯ ನೀರನ್ನು ಕುಡಿಯುತ್ತಿರುವ ಸಮುದ್ರದ ಮೀನು ಮೊಸಳೆ ಮುಂತಾದವು ಮನಸ್ಸುಳ್ಳವಾಗಿಯೂ ವಾಕ್ಕುಳ್ಳವಾಗಿಯೂ ಇವೆ, ಇದರಂತೆ (ಬರಿಯ) ಜಿಡ್ಡನ್ನು ತಿನ್ನುವ (ಪ್ರಾಣಿಗಳೂ) ಇವೆಯಾದರೆ (ಅವಕ್ಕೆ) ಪ್ರಾಣವೂ ಮನಸ್ಸೂ (ಇವೆಯೆಂದು)

1. 'ಯದಿ ಸನ್ತಿ' ಎಂಬುದು ಎಲ್ಲಿಗೆ ಅನ್ವಯವೆಂಬುದು ಸರಿಯಾಗಿ ತಿಳಿಯುವ ಹಾಗಿಲ್ಲ. ವಾ॥ ಪಾಠದಲ್ಲಿ ಮುಂದಿನ ವಾಕ್ಯಕ್ಕೆ ಅನ್ವಯಿಸಿವೆ.

2. 'ಅಪೋ ವಾ ಅತ್ರಿವೃತ್ಕೃತಾಃ ಪಿಬತಿ' ಎಂದಿದ್ದರೆ ಹಿಂದಿನಮುಂದಿನ ವಾಕ್ಯಗಳಿಗೆ ಹೊಂದುತ್ತಿತ್ತು.

ಅನುಮಾನಿಸಬಹುದು. ಹೀಗಿರುವಲ್ಲಿ 'ಸೋಮ್ಯನೆ, ಮನಸ್ಸು ಅನ್ನಮಯವು' ಎಂದುಮುಂತಾಗಿ ಹೇಳಿದ್ದು ಹೇಗೆ (ಸರಿಯಾಯಿತು)[1] ?

(ಪರಿಹಾರ) – ಇದೇನೂ ದೋಷವಲ್ಲ. ಏಕೆಂದರೆ ಎಲ್ಲವೂ ತ್ರಿವೃತ್ಕೃತವಾಗಿರುವದರಿಂದ ಎಲ್ಲದರಲ್ಲಿಯೂ ಎಲ್ಲವೂ ಇರಬಹುದಾಗಿದೆ. ತ್ರಿವೃತ್ಕೃತವಲ್ಲದ ಅನ್ನವನ್ನು ಯಾರೂ ತಿನ್ನುವದಿಲ್ಲವಷ್ಟೆ ? ಅತ್ರಿವೃತ್ಕೃತವಾದ ನೀರನ್ನು ಕುಡಿಯುವದಿಲ್ಲ. ತ್ರಿವೃತ್ಕೃತವಲ್ಲದ ತೇಜಸ್ಸನ್ನಾದರೂ ಯಾವನೂ ತಿನ್ನುವದಿಲ್ಲವಷ್ಟೆ ? ಆದ್ದರಿಂದ (ಬರಿಯ) ಅನ್ನವನ್ನು ತಿನ್ನುತ್ತಿರುವ ಇಲಿ ಮುಂತಾದವುಗಳಿಗೂ ವಾಕ್ಕು ಇರುವದೂ ಪ್ರಾಣವಿರುವದೂ ಮುಂತಾದದ್ದು ವಿರುದ್ಧವಲ್ಲ.[2]

## ಶ್ವೇತಕೇತುವಿನ ಶಂಕೆ

(ಭಾಷ್ಯ)

೪೮೦ ಇತ್ಯೇವಂ ಪ್ರತ್ಯಾಯಿತಃ ಶ್ವೇತಕೇತುರಾಹ । ಭೂಯ ಏವ ಪುನರೇವ ಮಾ ಮಾಂ ಭಗವಾನ್ ಅನ್ನಮಯಂ ಹಿ ಸೋಮ್ಯ ಮನ ಇತ್ಯಾದಿ ವಿಜ್ಞಾಪಯತು ದೃಷ್ಟಾನ್ತೇನ ಅವಗಮಯತು । ನಾದ್ಯಾಪಿ ಮಮ ಅಸ್ಮಿನ್ನರ್ಥೇ ಸಮ್ಯಙ್ನಿಶ್ಚಯೋ ಜಾತಃ । ಯಸ್ಮಾತ್ತೇಜೋಽಬನ್ನಮಯತ್ವೇನ ಅವಿಶಿಷ್ಟೇ ದೇಹೇ ಏಕಸ್ಮಿನ್ ಉಪಯುಜ್ಯಮಾನಾನಿ ಅನ್ನಾಪ್ಸ್ನೇಹಜಾತಾನಿ ಅಣಿಷ್ಠಧಾತುರೂಪೇಣ ಮನಃಪ್ರಾಣವಾಚ ಉಪಚಿನ್ವನ್ತಿ ಸ್ವಜಾತ್ಯತಿಕ್ರಮೇಣ[3] ಇತಿ ದುರ್ವಿಜ್ಞೇಯಮ್ ಇತ್ಯಭಿಪ್ರಾಯಃ । ಅತೋ ಭೂಯ ಏವೇತ್ಯಾದ್ಯಾಹ । ತಮೇವಮುಕ್ತವನ್ತಂ ತಥಾಸ್ತು ಸೋಮ್ಯ ಇತಿ ಹೋವಾಚ ಪಿತಾ । ಶೃಣ್ವತ್ರ ದೃಷ್ಟಾನ್ತಂ ಯದ್ಯೈತದುಪಪದ್ಯತೇ ಯತ್ ಪೃಚ್ಛಸಿ ॥

(ಭಾಷ್ಯಾರ್ಥ)

ಹೀಗೆಂಬುದನ್ನು ಮನಗಂಡ ಶ್ವೇತಕೇತುವು ಹೇಳುತ್ತಾನೆ. ಮತ್ತೂ ಇನ್ನೊಮ್ಮೆಯೂ (ಮಾ=ಮಾಂ) ನನಗೆ 'ಮನಸ್ಸು ಅನ್ನಮಯವೇ' ಎಂದು ಮುಂತಾದದ್ದನ್ನು ಭಗವಂತನು ದೃಷ್ಟಾಂತದಿಂದ ತಿಳಿಸಿಕೊಡಬೇಕು. ಈ ವಿಷಯದಲ್ಲಿ

1. ಅನ್ನವಿಲ್ಲದಿದ್ದರೂ ಮನಸ್ಸಿದೆ, ಅಪ್ಪಿಲ್ಲದಿದ್ದರೂ ವಾಕ್ಕಿದೆ, ತೇಜಸ್ಸಿಲ್ಲದಿದ್ದರೂ ಪ್ರಾಣವಿದೆಯಲ್ಲ !

2. ಏಕೆಂದರೆ ಅನ್ನದಲ್ಲಿಯೂ ವಾಕ್ಪ್ರಾಣಗಳಿಗೆ ಕಾರಣವಾದ ಅಪ್ತೇಜಸ್ಸುಗಳಿವೆ ಎಂದು ಮುಂತಾಗಿ ಕಲ್ಪಿಸಬೇಕು. ಆದರೆ ಅನ್ನದಲ್ಲಿ ಪೃಥಿವ್ಯಂಶವೇ ಹೆಚ್ಚಾಗಿದೆ ; ಆದ್ದರಿಂದ ಅದಕ್ಕೆ ಅನ್ನವೆಂದು ಹೆಸರು– ಇತ್ಯಾದಿ. ಸೂ. ಭಾ. ೨–೪–೨೨ (ಭಾ. ಭಾ. ೨೧೦) ನೋಡಿ.

3. ಸ್ವಜಾತ್ಯನತಿಕ್ರಮೇಣ ಎಂಬ ಮೂಲವನ್ನು ಹೀಗೆ ತಿದ್ದಿಕೊಂಡಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

ಈಗಲೂ ನನಗೆ ಸರಿಯಾಗಿ ನಿಶ್ಚಯವಾಗಿರುವದಿಲ್ಲ. ಏಕೆಂದರೆ, ತೇಜೋಬನ್ನ ಮಯವೆಂಬುದು ಸಮಾನವಾಗಿರುವಲ್ಲಿ, **ಒಂದೇ ದೇಹದಲ್ಲಿ ಉಪಯುಕ್ತ ವಾಗುವ ಅನ್ನ, ನೀರು, ಜಿಡ್ಡು ಇವುಗಳು ಅಣಿಷ್ಠವಾದ ಧಾತುರೂಪ ದಿಂದ- ತಮ್ಮ ಜಾತಿಯನ್ನು ಮೀರಿ**[1] **ಮನಃಪ್ರಾಣವಾಕ್ಕುಗಳನ್ನೇ ಬೆಳಸುತ್ತವೆ ಎಂಬುದನ್ನು ತಿಳಿದುಕೊಳ್ಳುವದು ಕಷ್ಟ** ಎಂದು- ಅಭಿಪ್ರಾಯ. ಆದ್ದರಿಂದ 'ಮತ್ತೂ (ತಿಳಿಸಬೇಕು)' ಎಂದುಮುಂತಾಗಿ ಕೇಳಿರು ತ್ತಾನೆ.[2]

ಹೀಗೆಂದು ಕೇಳಿದ ಆ (ಶ್ವೇತಕೇತುವನ್ನು ಕುರಿತು) 'ಸೋಮ್ಯನೆ, ಹಾಗೇ ಆಗಲಿ' ಎಂದು ತಂದೆ ಹೇಳಿದನು. 'ನೀನು ಕೇಳಿದೆಯಲ್ಲ, ಇದು ಹೇಗೆ ಹೊಂದು ತ್ತದೆ ? ಎಂಬುದಕ್ಕೆ ದೃಷ್ಟಾಂತವನ್ನು (ಹೇಳುತ್ತೇನೆ) ಕೇಳು.'

---

1. ಸ್ವಜಾತ್ಯನತಿಕ್ರಮೇಣ -ಎಂಬ ಅಚ್ಚಿನ ಮೂಲಕ್ಕೆ ತಮ್ಮ ಜಾತಿಯನ್ನು ಮೀರದೆ ಎಂದರ್ಥ. ತಮ್ಮ ಜಾತಿಸ್ವಭಾವವನ್ನು ಮೀರದೇಇದ್ದರೆ ಅದರಲ್ಲಿ ಆಶ್ಚರ್ಯಕರವಾದದ್ದು ಏನೂ ಇಲ್ಲವಾದ್ದರಿಂದ 'ಸ್ವಜಾತ್ಯತಿಕ್ರಮೇಣ' ಎಂಬ ಪಾಠವಿದ್ದರೆ ಸರಿಯಾದೀತೆಂದು ತಿದ್ದಿಕೊಂಡಿ ದೇವೆ.

2. 'ಒಂದೇ ಹೊಟ್ಟೆಯಲ್ಲಿ ಮಿಶ್ರವಾಗಿ ಸೇರಿಕೊಂಡಿರುವದರಿಂದಲೂ ಮನಸ್ಸು ಎಲ್ಲಾ ಭೂತಗಣಗಳ ಗುಣಗಳನ್ನು ತೋರಿಸಿಕೊಡುತ್ತಿರುವದರಿಂದ ಸರ್ವಭೂತಗಳಿಂದಲೂ ಆರಬ್ಧವಾಗಿರುವದರಿಂದಲೂ ಅದು ಪಾರ್ಥಿವವೆಂದು ನೀವು ಹೇಳಿದಂತೆ ಮನಸ್ಸು ಅನ್ನಮಯ- ಎಂದು ಮುಂತಾದ ವಿಶೇಷವು ಹೊಂದುವದಿಲ್ಲವಲ್ಲ'' ಎಂದು ಶಂಕೆಯನ್ನು ಟೀಕೆಯಲ್ಲಿ ವಿವರಿಸಿದೆ. ಆದರೆ ಇದಕ್ಕೆ ದೃಷ್ಟಾಂತದಲ್ಲಾಗಲಿ ಭಾಷ್ಯದಲ್ಲಾಗಲಿ ಗಮಕವಿರುವದಿಲ್ಲ' ದೇಹವು ಸರ್ವಭೂತಗಳಿಂದ ಆರಬ್ಧವಾಗಿದೆ ; ಅನ್ನ, ನೀರು, ಜಿಡ್ಡು- ಇವುಗಳನ್ನು ಆ ದೇಹವು ಉಪಯೋಗಿಸಿದರೆ ಅವುಗಳ ಸೂಕ್ಷ್ಮಾಂಶವು ಮನಸ್ಸು, ಪ್ರಾಣ, ವಾಕ್ಕು- ಹೀಗೆ ಬೇರೆಬೇರೆ ದೇಹಭಾಗಕ್ಕೆ ಉಪಯೋಗವಾಗುತ್ತದೆ ಎಂಬುದು ಹೇಗೆ ? ಸೂಕ್ಷ್ಮಾಂಶವಾದರೂ ಅನ್ನಾದಿ ರೂಪದಿಂದಲೇ ಇರಬೇಕಲ್ಲವೆ? ಮನಆದಿರೂಪಾಂತರವನ್ನು ಹೇಗೆ ಪಡೆಯಿತು ? -ಎಂದು ಶಂಕೆಯನ್ನಿಟ್ಟುಕೊಂಡರೆ ಮೊಸರಿನ ಸೂಕ್ಷ್ಮಾಂಶವು ಬೆಣ್ಣೆಯಾಗುವಂತೆ ಎಂಬ ದೃಷ್ಟಾಂತ ದಿಂದ ಅದಕ್ಕೆ ಪರಿಹಾರವು ದೊರಕುತ್ತದೆ ಎಂದು ನಮ್ಮ ಮತ.

# ಆರನೆಯ ಅಧ್ಯಾಯ-ಆರನೆಯ ಖಂಡ

(ತ್ರಿವೃತ್ಕರಣ ಮುಂದುವರಿದದ್ದು)

## ವಾಙ್ಮನಃಪ್ರಾಣಗಳಾಗುವದಕ್ಕೆ ದೃಷ್ಟಾಂತ

(ಉಪನಿಷತ್ತು)

**ದಧ್ನಃ ಸೋಮ್ಯ ಮಥ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ತತ್ಸರ್ಪಿರ್ಭವತಿ ॥ ೧ ॥**

೧. ಸೋಮ್ಯನೆ, ಕಡೆದ ಮೊಸರಿನ ಅಣಿಮೆಯಿದೆಯಲ್ಲ, ಅದು ಮೇಲಕ್ಕೆ ಏಳುತ್ತದೆ, ಅದು ಬೆಣ್ಣೆಯಾಗುತ್ತದೆ.

ಮೊಸರಿನ ಸೂಕ್ಷ್ಮಾಂಶವು
ಬೆಣ್ಣೆಯಾಗುವಂತೆ ಅನ್ನಾದಿಗಳು ಮನಆದಿಗಳಾಗಿರುತ್ತವೆ

(ಭಾಷ್ಯ)

೪೮೧. ದಧ್ನಃ ಸೋಮ್ಯ ಮಥ್ಯಮಾನಸ್ಯ ಯೋಽಣಿಮಾ ಅಣುಭಾವಃ ಸ ಊರ್ಧ್ವಃ ಸಮುದೀಷತಿ ಸಂಭೂಯೋರ್ಧ್ವಂ ನವನೀತಭಾವೇನ ಗಚ್ಛತಿ । ತತ್ಸರ್ಪಿರ್ಭವತಿ ॥

(ಭಾಷ್ಯಾರ್ಥ)

ಸೋಮ್ಯನೆ, ಕಡೆದ ಬೆಣ್ಣೆಯ ಅಣಿಮೆಯು, ಅಣುಭಾವವು ಇದೆಯಲ್ಲ, ಅದು ಮೇಲಕ್ಕೆ (ಸಮುದೀಷತಿ=) ಬೆಣ್ಣೆಯ ರೂಪದಲ್ಲಿ ಮುದ್ದೆಯಾಗಿ ಕೂಡಿಕೊಂಡು ಹೋಗುತ್ತದೆ. ಅದು ಬೆಣ್ಣೆಯಾಗುತ್ತದೆ.

(ಉಪನಿಷತ್ತು)

**ಏವಮೇವ ಖಲು ಸೋಮ್ಯಾಽನ್ನಸ್ಯಾಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ತನ್ಮನೋ ಭವತಿ ॥ ೨ ॥**

೨. ಹೀಗೆಯೇ, ಸೋಮ್ಯನೆ, ಉಂಡ ಅನ್ನದ ಅಣಿಮೆಯಿದೆಯಲ್ಲ, ಅದು ಮೇಲಕ್ಕೆ ಕೂಡಿಕೊಂಡು ಹೋಗುತ್ತದೆ, ಅದು ಮನಸ್ಸಾಗುತ್ತದೆ.

(ಭಾಷ್ಯ)

೪೮೨. ಯಥಾ ಅಯಂ ದೃಷ್ಟಾನ್ತ ಏವಮೇವ ಖಲು ಸೋಮ್ಯ, ಅನ್ನಸ್ಯ ಓದನಾದೇಃ ಅಶ್ಯಮಾನಸ್ಯ ಭುಜ್ಯಮಾನಸ್ಯ ಉದರ್ಯೇಣಾಗ್ನಿನಾ ವಾಯುಸಹಿತೇನ ಖಜೇನೇವ ಮಥ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ತನ್ಮನೋ ಭವತಿ ಮನೋಽವಯವೈಃ ಸಹ ಸಂಭೂಯ ಮನ ಉಪಚಿನೋತೀತ್ಯೇತತ್ ॥

(ಭಾಷ್ಯಾರ್ಥ)

ಈ ದೃಷ್ಟಾಂತವು ಹೇಗೋ ಇದರಂತೆಯೇ ಸೋಮ್ಯನೆ, ಉಂಡ ಭುಂಜಿಸಿದ ಅನ್ನದ- ಅಕ್ಕಿಯನ್ನವೇ ಮುಂತಾದ (ಆಹಾರದ)- ಅಣಿಮೆಯಿರುವದಲ್ಲ, ಅದು (ಅನ್ನವನ್ನು) ಹೊಟ್ಟೆಯಲ್ಲಿರುವ ವಾಯುಸಹಿತವಾದ ಅಗ್ನಿಯಿಂದ ಕಡೆಗೋಲಿನಿಂದ (ಬೆಣ್ಣೆಯು) ಹೇಗೋಹಾಗೆ ಕಡೆಯಲ್ಪಟ್ಟಾಗ (ಅದರ) ಅಣಿಮೆಯಿದೆಯಲ್ಲ, ಅದು ಮೇಲಕ್ಕೆ ಏರುತ್ತದೆ. ಅದು ಮನಸ್ಸಾಗುತ್ತದೆ, ಮನಸ್ಸಿನ ಅವಯವಗಳೊಡನೆ ಸೇರಿಕೊಂಡು ಮನಸ್ಸನ್ನು ಬೆಳೆಯಿಸುತ್ತದೆ ಎಂದು ಅರ್ಥ.[1]

(ಉಪನಿಷತ್ತು)

**ಅಪಾಗ್ಂ ಸೋಮ್ಯ ಪೀಯಮಾನಾನಾಂ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸ ಪ್ರಾಣೋ ಭವತಿ ॥ ೩ ॥**

೩. ಸೋಮ್ಯನೆ, ಪಾನಮಾಡಿದ ನೀರಿನ ಅಣಿಮೆಯಿರುವದಲ್ಲ, ಅದು ಮೇಲಕ್ಕೇಳುತ್ತದೆ, ಅದು ಪ್ರಾಣವಾಗುತ್ತದೆ.

(ಭಾಷ್ಯ)

೪೮೩. ತಥಾ ಅಪಾಂ ಸೋಮ್ಯ ಪೀಯಮಾನಾನಾಂ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸ ಪ್ರಾಣೋ ಭವತೀತಿ ॥

(ಭಾಷ್ಯಾರ್ಥ)

ಹೀಗೆಯೇ, ಸೋಮ್ಯನೆ, ಕುಡಿದ ನೀರಿನ ಅಣಿಮೆಯಿದೆಯಲ್ಲ, ಅದು ಮೇಲಕ್ಕೇಳುತ್ತದೆ, ಅದು ಪ್ರಾಣವಾಗುತ್ತದೆ ಎಂಬುದನ್ನು (ತಿಳಿಯಬೇಕು).

(ಉಪನಿಷತ್ತು)

**ತೇಜಸಃ ಸೋಮ್ಯಾಽಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸಾ ವಾಗ್ಭವತಿ ॥ ೪ ॥**

1. ಹೀಗೆಯೇ ಪ್ರಾಣವಾಗುತ್ತದೆ, ವಾಕ್ಕಾಗುತ್ತದೆ -ಎಂಬ ಮುಂದಿನ ವಾಕ್ಯಗಳಿಗೂ ಅರ್ಥ.

೪. ಸೋವ್ಯನೆ, ತಿಂದ ತೇಜಸ್ಸಿನ ಅಣಿಮೆಯಿದೆಯಲ್ಲ, ಅದು ಮೇಲಕ್ಕೇಳುತ್ತದೆ. ಅದು ವಾಕ್ಕಾಗುತ್ತದೆ.

(ಭಾಷ್ಯ)

೪೮೪. ಏವಮೇವ ಖಲು ಸೋಮ್ಯ ತೇಜಸೋಽಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸಾ ವಾಗ್ಭವತಿ ॥

(ಭಾಷ್ಯಾರ್ಥ)

ಹೀಗೆಯೇ ಸೋವ್ಯನೆ, ತಿಂದ ತೇಜಸ್ಸಿನ ಅಣಿಮೆಯಿದೆಯಲ್ಲ, ಅದು ಮೇಲಕ್ಕೇಳುತ್ತದೆ. ಅದು ವಾಕ್ಕಾಗುತ್ತದೆ.

(ಉಪನಿಷತ್ತು)

**ಅನ್ನಮಯಗ್ಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೫ ॥**

೫. ಸೋವ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಅಮ್ಮಯವೇ, ವಾಕ್ಕು ತೇಜೋಮಯವೇ. 'ಭಗವಂತನು ಮತ್ತೂ ತಿಳಿಸಿಕೊಡಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ' ಎಂದು (ತಂದೆಯೆಂದನು).

## ಮನಆದಿಗಳು ಅನ್ನಾದಿಮಯವೇ ಎಂದು ಉಪಸಂಹಾರ

(ಭಾಷ್ಯ)

೪೮೫. ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಯುಕ್ತಮೇವ ಮಯೋಕ್ತಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಸೋಮ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಆಪೋಮಯವೇ, ವಾಕ್ಕು ತೇಜೋಮಯವೇ – ಎಂದು ನಾನು ಹೇಳಿದ್ದು ಯುಕ್ತವೇ ಎಂದು ಅಭಿಪ್ರಾಯ.

## ಶ್ವೇತಕೇತುವಿನ ಶಂಕೆ

(ಭಾಷ್ಯ)

೪೮೬. ಅತೋಽಪ್ತೇಜಸೋರಸ್ತು ಏತತ್ಸರ್ವಮೇವಮ್ । ಮನಸ್ತು ಅನ್ನಮಯಮ್ ಇತ್ಯತ್ರ ನೈಕಾನ್ತೇನ ಮಮ ನಿಶ್ಚಯೋ ಜಾತಃ । ಅತೋ

ಭೂಯ ಏವ ಮಾ ಭಗವಾನ್ ಮನಸೋಽನ್ನಮಯತ್ವಂ ದೃಷ್ಟಾನ್ತೇನ ವಿಜ್ಞಾಪಯತ್ವಿತಿ । ತಥಾ ಸೋಮ್ಯೇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಇದರಿಂದ ಅಪ್ತೇಜಸ್ಸುಗಳಿಗೆ ಇದೆಲ್ಲವೂ ಹೀಗೆಯೇ ಎಂದಾಗಲಿ. ಆದರೆ ಮನಸ್ಸು ಅನ್ನಮಯವೇ ಎಂಬುದರಲ್ಲಿ ನನಗೆ ನಿಯತವಾಗಿ ನಿಶ್ಚಯವಾಗಿರುವದಿಲ್ಲ.[1] ಆದ್ದರಿಂದ ಮತ್ತೊಮ್ಮೆ ಭಗವಂತನಾದ (ನೀನು) ಮನಸ್ಸು ಅನ್ನಮಯವೆಂಬುದನ್ನು ದೃಷ್ಟಾಂತದಿಂದ ತಿಳಿಸಿಕೊಡಬೇಕು – ಎನ್ನಲು ತಂದೆಯು 'ಸೋಮ್ಯನೆ, ಹಾಗೇ ಆಗಲಿ !' – ಎಂದನು.

---

# ಆರನೆಯ ಅಧ್ಯಾಯ-ಏಳನೆಯ ಖಂಡ

## (ತ್ರಿವೃತ್ಕರಣ ಮುಂದುವರಿದದ್ದು)

## ಖಂಡದ ಸಂಬಂಧ

(ಭಾಷ್ಯ)

೪೮೭. ಅನ್ನಸ್ಯ ಭುಕ್ತಸ್ಯ ಯೋಽಣಿಷ್ಠೋ ಧಾತುಃ ಸ ಮನಸಿ ಶಕ್ತಿಮಧಾತ್। ಸಾಽನ್ನೋಪಚಿತಾ ಮನಸಃ ಶಕ್ತಿಃ ಷೋಡಶಧಾ ಪ್ರವಿಭಜ್ಯ ಪುರುಷಸ್ಯ ಕಲಾತ್ವೇನ ನಿರ್ದಿದಿಕ್ಷಿತಾ । ತಯಾ ಮನಸಿ ಅನ್ನೋಪಚಿತಯಾ ಶಕ್ತ್ಯಾ ಷೋಡಶಧಾ ಪ್ರವಿಭಕ್ತಯಾ ಸಂಯುಕ್ತಃ, ತದ್ವಾನ್ ಕಾರ್ಯಕರಣಸಂಘಾತಲಕ್ಷಣೋ ಜೀವವಿಶಿಷ್ಟಃ ಪುರುಷಃ ಷೋಡಶಕಲ ಉಚ್ಯತೇ। ಯಸ್ಯಾಂ ಸತ್ಯಾಂ ದ್ರಷ್ಟಾ ಶ್ರೋತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾತಾ ಸರ್ವಕ್ರಿಯಾಸಮರ್ಥಃ ಪುರುಷೋ ಭವತಿ। ಹೀಯಮಾನಾಯಾಂ ಚ ಯಸ್ಯಾಂ ಸಾಮರ್ಥ್ಯಹಾನಿಃ। ವಕ್ಷ್ಯತಿ ಚ 'ಅಥಾನ್ನಸ್ಯಾಯಿ[2] ದ್ರಷ್ಟಾ . ' (೭-೯-೧)। ಸರ್ವಸ್ಯ ಕಾರ್ಯಕರಣಸ್ಯ[3] ಸಾಮರ್ಥ್ಯಂ ಮನಃಕೃತಮೇವ। ಮಾನಸೇನ ಹಿ ಬಲೇನ ಸಂಪನ್ನಾ

---

1. ಹೃದಯಪ್ರದೇಶದಲ್ಲಿ ಪ್ರಾಣಾದಿಗಳೂ ಇರುತ್ತವೆ; ಹೀಗಿರುವಲ್ಲಿ ಅನ್ನದಿಂದ ಮನಸ್ಸೇ ಉಪಚಿತವಾಗುತ್ತದೆ ಎಂಬುದು ಮನಸ್ಸಿಗೆ ಚೆನ್ನಾಗಿ ಹಿಡಿಯಲಿಲ್ಲ–ಎಂದು ಟೀಕೆ.

2. ಈ ಪಾಠವನ್ನೇ ಆ ಕಂಡಿಕೆಯಲ್ಲಿ ಆಚಾರ್ಯರು ಒಪ್ಪಿರುತ್ತಾರೆಂದು ನಮ್ಮ ಮತವು. ಅದರ ಅನುವಾದದ ಟಿಪ್ಪಣಿಯನ್ನು ನೋಡಿರಿ.

3. 'ಕಾರ್ಯಕಾರಣಸ್ಯ' ಎಂಬ ಅಚ್ಚಿನ ಪಾಠಕ್ಕಿಂತ ಇದೇ ಮೇಲು.

ಬಲಿನೋ ದೃಶ್ಯನ್ತೇ ಲೋಕೇ, ಧ್ಯಾನಾಹಾರಾಶ್ಚ ಕೇಚಿತ್। ಅನ್ನಸ್ಯ ಸರ್ವಾತ್ಮಕತ್ವಾತ್ । ಅತೋಽನ್ನಕೃತಂ ಮಾನಸಂ ವೀರ್ಯಮ್[1] ॥

(ಭಾಷ್ಯಾರ್ಥ)

ಉಂಡ ಅನ್ನದ ಸೂಕ್ಷ್ಮತಮವಾದ ಧಾತುವಿದೆಯಲ್ಲ, ಅದು ಮನಸ್ಸಿನಲ್ಲಿ ಶಕ್ತಿಯನ್ನುಂಟುಮಾಡಿರುತ್ತದೆ. ಆ ಅನ್ನದಿಂದ ಬೆಳೆಯುವ ಮನಸ್ಸಿನ ಶಕ್ತಿಯನ್ನು ಹದಿನಾರುಪಾಲಾಗಿ ವಿಭಾಗಿಸಿ ಪುರುಷನ ಕಲೆಗಳೆಂದು ತೋರಿಸಬೇಕೆಂದು (ಈಗ) ಹೊರಟಿರುತ್ತಾನೆ ಆ ಮನಸ್ಸಿನಲ್ಲಿರುವ ಅನ್ನದಿಂದ ಬೆಳೆದ ಶಕ್ತಿಯನ್ನು ಹದಿನಾರುಭಾಗವಾಗಿ ಮಾಡಿ, ಅದರಿಂದ, ಕೂಡಿದ ಜೀವವಿಶಿಷ್ಟವಾದ ಕಾರ್ಯಕರಣ ಸಂಘಾತರೂಪನಾದ ಪುರುಷನನ್ನು (ಇಲ್ಲಿ) ಷೋಡಶಕಲನೆಂದಿರುತ್ತದೆ ಈ (ಶಕ್ತಿ) ಯಿದ್ದರೆ ದ್ರಷ್ಟೃ, ಶ್ರೋತೃ, ಮಂತೃ, ಬೋದ್ಧೃ, ಕರ್ತೃ, ವಿಜ್ಞಾತೃ- (ಹೀಗೆ) ಸರ್ವಕ್ರಿಯೆಗಳನ್ನೂ (ಮಾಡಲು) ಪುರುಷನು ಸಮರ್ಥನಾಗಿರುತ್ತಾನೆ, ಅದು ನಾಶವಾದರೆ ಸಾಮರ್ಥ್ಯವೂ ನಾಶವಾಗಿಬಿಡುತ್ತದೆ 'ಇನ್ನು ಅನ್ನದ ಲಾಭವಾದರೆ ದ್ರಷ್ಟೃ ' (೭-೯-೧) ಎಂದು ಮುಂತಾಗಿ ಮುಂದೆ ಹೇಳಿಯೂ ಇದೆ. ಎಲ್ಲಾ ಕಾರ್ಯಕರಣದ ಸಾಮರ್ಥ್ಯವೂ ಮನಸ್ಸಿನಿಂದಲೇ ಆದದ್ದು. ಮಾನಸಬಲದಿಂದ ಕೂಡಿದವರಲ್ಲವೆ, ಲೋಕದಲ್ಲಿ ಬಲವುಳ್ಳವರೂ ಆಗಿರುತ್ತಾರೆ ? ಕೆಲವರು ಧ್ಯಾನಾಹಾರವುಳ್ಳವರೂ ಆಗಿರುತ್ತಾರೆ , ಏಕೆಂದರೆ ಅನ್ನವು ಸರ್ವಾತ್ಮಕವಾಗಿರುತ್ತದೆ.[2] ಆದ್ದರಿಂದ ಮಾನಸವೀರ್ಯವು ಅನ್ನದಿಂದಲೇ ಆದದ್ದು.

## ಷೋಡಶಕಲಪುರುಷನ ಉದಾಹರಣೆ

(ಉಪನಿಷತ್ತು)

**ಷೋಡಶಕಲಃ ಸೋಮ್ಯ ಪುರುಷಃ ಪಞ್ಚದಶಾಹಾನಿ ಮಾಶೀಃ ಕಾಮಮಪಃ ಪಿಬಾಽಽಪೋಮಯಃ ಪ್ರಾಣೋ ನ ಪಿಬತೋ ವಿಚ್ಛೇತ್ಸ್ಯತ ಇತಿ ॥ ೧ ॥**

೧. ಸೋಮ್ಯನೆ, ಪುರುಷನು ಷೋಡಶಕಲನು. ಹದಿನೈದು ದಿನಗಳವರೆಗೆ ಉಣ್ಣದಿರು, ಬೇಕಾದಷ್ಟು ನೀರುಕುಡಿ ; ಪ್ರಾಣನು ಆಪೋಮಯನು, ಕುಡಿಯದಿರುವವನಿಗೆ (ಪ್ರಾಣವು) ವಿಚ್ಛಿನ್ನವಾಗುವದು.

---

1. ಈ ವಾಕ್ಯವನ್ನು ಟೀಕೆಯಲ್ಲಿ ಮುಂದಕ್ಕೆ ಅನ್ವಯಿಸಿದ್ದರೂ ವಾ॥ ಪಾಠವನ್ನು ಅನುಸರಿಸಿ ನಾವು ಇಲ್ಲಿಗೇ ಸೇರಿಸಿಕೊಂಡಿರುತ್ತೇವೆ.

2. ಆದ್ದರಿಂದ ಧ್ಯಾನಶಕ್ತಿಯೂ ಅನ್ನಾತ್ಮಕವೇ ; ಧ್ಯಾನಬಲದಿಂದಲೇ ಕೆಲವು ದಿನಗಳು ಆಹಾರವಿಲ್ಲದೆ ಕೆಲವರು ಇರುವದಕ್ಕೆ ಇದೇ ಕಾರಣ -ಎಂದು ಭಾವ.

# ಹದಿನೈದು ದಿನಗಳು ಊಟಮಾಡದಿರು ಎಂದು ಮಗನಿಗೆ ಹೇಳಿದ್ದು

(ಭಾಷ್ಯ)

೪೮೮. ಷೋಡಶ ಕಲಾ ಯಸ್ಯ ಪುರುಷಸ್ಯ ಸೋಽಯಂ ಷೋಡಶಕಲಃ ಪುರುಷಃ। ಏತಚ್ಚೇತ್ ಪ್ರತ್ಯಕ್ಷೀಕರ್ತುಮ್ ಇಚ್ಛಸಿ ಪಞ್ಚದಶಸಂಖ್ಯಾಕಾನಿ ಅಹಾನಿ ಮಾಽಶೀಃ ಅಶನಂ ಮಾ ಕಾರ್ಷೀಃ। ಕಾಮಮ್ ಇಚ್ಛಾತೋಽಪಃ ಪಿಬ। ಯಸ್ಮಾತ್ ನ ಪಿಬತೋಽಪಃ ತೇ ಪ್ರಾಣೋ ವಿಚ್ಛೇತ್ಸ್ಯತೇ ವಿಚ್ಛೇದಮಾಪತ್ಸ್ಯತೇ। ಯಸ್ಮಾದಾಪೋಮಯೋಽಬ್ವಿಕಾರಃ ಪ್ರಾಣ ಇತ್ಯವೋಚಾಮ। ನ ಹಿ ಕಾರ್ಯಂ ಸ್ವಕಾರಣೋಪಷ್ಟಮ್ಭಮನ್ತರೇಣ ಅವಿಭ್ರಂಶಮಾನಂ ಸ್ಥಾತುಮ್ ಉತ್ಸಹತೇ ॥

(ಭಾಷ್ಯಾರ್ಥ)

ಹದಿನಾರುಕಲೆಗಳು ಈ ಪುರುಷನಿಗಿರುವದರಿಂದ ಈ ಪುರುಷನು ಷೋಡಶಕಲನು. ಇದನ್ನು ಪ್ರತ್ಯಕ್ಷಮಾಡಿಕೊಳ್ಳಬೇಕೆಂದು ಬಯಸುವೆಯಾದರೆ ಹದಿನೈದು ಸಂಖ್ಯೆಯ ದಿನಗಳವರೆಗೆ ಉಣ್ಣದಿರು, ಊಟವನ್ನು ಮಾಡದಿರು. ಬೇಕಾದಷ್ಟು, ಇಚ್ಛೆಯಿದ್ದಷ್ಟು, ನೀರುಕುಡಿ, ಏಕೆಂದರೆ ನೀರನ್ನು ಕುಡಿಯದೆ ಇದ್ದರೆ ನಿನ್ನ ಪ್ರಾಣವು ವಿಚ್ಛಿನ್ನವಾಗುವದು, ವಿಚ್ಛೇದವನ್ನು ಹೊಂದುವದು. ಪ್ರಾಣವು ನೀರಿನ ವಿಕಾರವೆಂದು ಹೇಳಿರುತ್ತೇವಷ್ಟೆ? ಕಾರ್ಯವು ತನ್ನ ಕಾರಣದ ಒತ್ತಾಸೆಯಿಲ್ಲದೆ ಹೋಗದೆ ನಿಂತಿರಲಾರದಷ್ಟೆ?

(ಉಪನಿಷತ್ತು)

**ಸ ಹ ಪಞ್ಚದಶಾಹಾನಿ ನಾಽಽಶಾಽಥ ಹೈನಮುಪಸಸಾದ ಕಿಂ ಬ್ರವೀಮಿ ಭೋ ಇತ್ಯೃಚಃ ಸೋಮ್ಯ ಯಜೂꣳಷಿ ಸಾಮಾನೀತಿ ಸ ಹೋವಾಚ ನ ವೈ ಮಾ ಪ್ರತಿಭಾನ್ತಿ ಭೋ ಇತಿ ॥ ೨ ॥**

೨. ಅವನು ಹದಿನೈದು ದಿನಗಳವರೆಗೆ ಉಣ್ಣಲಿಲ್ಲ. ಇನ್ನು ಇವನ ಬಳಿಗೆ ಬಂದನು. 'ಏನು ಹೇಳಲಿ ಸ್ವಾಮಿ?' ಎಂದನು. 'ಸೋಮ್ಯ, ಋಕ್ಕುಗಳನ್ನು, ಯಜುಸ್ಸುಗಳನ್ನು, ಸಾಮಗಳನ್ನು (ಹೇಳು)' ಎನ್ನಲು ಅವನು 'ನನಗೆ (ಅವು) ತೋಚುವದೇ ಇಲ್ಲ' ಎಂದನು.

# ಹಸಿವಿನ ಸಂಕಟದಿಂದ ಏನು ಹೇಳಲಿಕ್ಕೂ ತೋಚದೆ ಇದ್ದದ್ದು

(ಭಾಷ್ಯ)

ಅರ್ಲ ಸ ಹ ಏವಂ ಶ್ರುತ್ವಾ ಮನಸೋಽನ್ನಮಯತ್ವಂ ಪ್ರತ್ಯಕ್ಷೀಕರ್ತುಮಿಚ್ಛನ್ ಪಞ್ಚದಶಾಹಾನಿ ನಾಽಽಶ ಅಶನಂ ನ ಕೃತವಾನ್। ಅಥ ಷೋಡಶೇಽಹನಿ ಹೈನಂ ಪಿತರಮ್ ಉಪಸಸಾದ ಉಪಗತವಾನ್ ಉಪಗಮ್ಯ ಚೋವಾಚ ಕಿಂ ಬ್ರವೀಮಿ ಭೋ ಇತಿ। ಇತರ ಆಹ ಋಚಃ ಸೋಮ್ಯ ಯಜೂಂಷಿ ಸಾಮಾನಿ ಅಧೀಷ್ವ ಇತಿ। ಏವಮುಕ್ತಃ ಪಿತ್ರಾ ಆಹ—ನ ವೈ ಮಾ ಮಾಮ್ ಋಗಾದೀನಿ ಪ್ರತಿಭಾನ್ತಿ ಮಮ ಮನಸಿ ನ ದೃಶ್ಯನ್ತ ಇತ್ಯರ್ಥಃ। ಹೇ ಭೋ ಭಗವನ್ ಇತಿ ॥

(ಭಾಷ್ಯಾರ್ಥ)

ಅವನು ಹೀಗೆಂಬ (ಮಾತನ್ನು) ಕೇಳಿ ಮನಸ್ಸು ಅನ್ನಮಯವೆಂಬುದನ್ನು ಪ್ರತ್ಯಕ್ಷಮಾಡಿಕೊಳ್ಳಲೆಳಸಿ ಹದಿನೈದುದಿನಗಳವರೆಗೆ ಉಣ್ಣದೆ ಇದ್ದನು, ಊಟ ಮಾಡಲಿಲ್ಲ. ಇನ್ನು ಹದಿನಾರನೆಯ ದಿನ ಈ ತಂದೆಯ ಬಳಿಗೆ ಬಂದನು, ಬಳಿ ಸಾರಿದನು. (ಹಾಗೆ) ಬಂದು 'ಸ್ವಾಮಿ, ಏನನ್ನು ಹೇಳಲಿ?' ಎಂದನು. ಇನ್ನೊಬ್ಬ(ನಾದ ತಂದೆಯು) 'ಸೋಮ್ಯ, ಋಕ್ಕುಗಳನ್ನೂ ಯಜುಸ್ಸುಗಳನ್ನೂ ಸಾಮಗಳನ್ನೂ ಹೇಳು' ಎಂದನು. ಹೀಗೆಂದು ತಂದೆ ಹೇಳಲು (ಅವನು) ಇಂತೆಂದನು: (ಮಾ= ಮಾಮ್) ನನಗೆ ಋಗಾದಿಗಳು ತೋಚುವದೇ ಇಲ್ಲ, ಮನಸ್ಸಿನಲ್ಲಿ ಕಾಣುವದೇ ಇಲ್ಲ ಎಂದರ್ಥ. ಭೋಃ ಎಂದರೆ ಎಲೈ ಪೂಜ್ಯನೆ ಎಂದರ್ಥ.

(ಉಪನಿಷತ್ತು)

**ತಗ್ಂ ಹೋವಾಚ ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕೋಽಙ್ಗಾರಃ ಖದ್ಯೋತಮಾತ್ರಃ ಪರಿಶಿಷ್ಟಃ ಸ್ಯಾತ್ತೇನ ತತೋಽಪಿ ನ ಬಹು ದಹೇದೇವಗ್ಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾಽತಿಶಿಷ್ಟಾ ಸ್ಯಾತ್ತಯೈತರ್ಹಿ ವೇದಾನ್ನಾನುಭವಸ್ಯಶಾನಾಽಥ ಮೇ ವಿಜ್ಞಾಸ್ಯಸೀತಿ ॥ ೩ ॥**

೩. ಅವನನ್ನು ಕುರಿತು ಇಂತೆಂದನು. 'ಸೋಮ್ಯನೆ, ಹೇಗೆ ದೊಡ್ಡದಾಗಿ ಬೆಳೆದ (ಬೆಂಕಿಯು) ಒಂದು ದೀಪದ ಹುಳುವಿನ ಗಾತ್ರದ ಒಂದು ಕೆಂಡವು ಉಳಿದರೆ, ಅದರಿಂದ ಅದಕ್ಕಿಂತ ಬಹಳವನ್ನು ಸುಡಲಾಗುವದಿಲ್ಲವೋ, ಹಾಗೆ ಸೋಮ್ಯನೆ, ನಿನ್ನ ಹದಿನಾರು

ಕಲೆಗಳಲ್ಲಿ ಒಂದು ಕಲೆ ಉಳಿದುಕೊಂಡಿರಬಹುದು. ಅದರಿಂದ ಈಗ ನೀನು ವೇದಗಳನ್ನು ಅನುಭವಿಸದೆ ಇರುವೆ. ಊಟಮಾಡು, ಬಳಿಕ ನನ್ನ (ಮಾತನ್ನು) ತಿಳಿದುಕೊಳ್ಳಬಹುದು.

## ವೇದಗಳು ಹೊಳೆಯದೆ ಇದ್ದದ್ದಕ್ಕೆ ಕಾರಣ

(ಭಾಷ್ಯ)

೪೯೦ ಏವಮುಕ್ತವನ್ತಂ ಪಿತಾ ಆಹ ಶೃಣು ತತ್ರ ಕಾರಣಂ ಯೇನ ತೇ ತಾನಿ ಋಗಾದೀನಿ ನ ಪ್ರತಿಭಾನ್ತೀತಿ ತಂ ಹೋವಾಚ। ಯಥಾ ಲೋಕೇ ಹೇ ಸೋಮ್ಯ ಮಹತೋ ಮಹತ್ಪರಿಮಾಣಸ್ಯ ಅಭ್ಯಾಹಿತಸ್ಯ ಉಪಚಿತಸ್ಯೇನ್ಧನೈಃ ಅಗ್ನೇಃ, ಏಕೋಽಙ್ಗಾರಃ ಖದ್ಯೋತಮಾತ್ರಃ ಖದ್ಯೋತಪರಿಮಾಣಃ ಶಾನ್ತಸ್ಯ ಪರಿಶಿಷ್ಟೋಽವಶಿಷ್ಟಃ ಸ್ಯಾತ್ ಭವೇತ್, ತೇನಾಙ್ಗಾರೇಣ ತತೋಽಪಿ ತತ್ಪರಿಮಾಣಾತ್ ಈಷದಪಿ ನ ಬಹು ದಹೇತ್, ಏವಮೇವ ಖಲು ಸೋಮ್ಯ ತೇ ತವ ಅನ್ನೋಪಚಿತಾನಾಂ ಷೋಡಶಾನಾಂ ಕಲಾನಾಮ್ ಏಕಾ ಕಲಾ ಅವಯವಃ ಅತಿಶಿಷ್ಟಾ ಅವಶಿಷ್ಟಾ ಸ್ಯಾತ್ ತಯಾ ತ್ವಂ ಖದ್ಯೋತಮಾತ್ರಾಙ್ಗಾರತುಲ್ಯಯಾ ಏತರ್ಹಿ ಇದಾನೀಂ ವೇದಾನ್ ನಾನುಭವಸಿ ನ ಪ್ರತಿಪದ್ಯಸೇ ಶ್ರುತ್ವಾ ಚ ಮೇ ಮಮ ವಾಚಮ್ ಅಥ ಅಶೇಷಂ ವಿಜ್ಞಾಸ್ಯಸಿ ಅಶಾನ ಭುಙ್ಕ್ಷ್ವ ತಾವತ್ ॥

(ಭಾಷ್ಯಾರ್ಥ)

ಹೀಗೆನ್ನಲು ತಂದೆ ಇಂತೆಂದನು : ನಿನಗೆ ಆ ಋಗಾದಿಗಳು ತೋಚದೆಯಿವೆಯಲ್ಲ, ಅದಕ್ಕೆ ಕಾರಣವನ್ನು (ಹೇಳುತ್ತೇನೆ), ಕೇಳು ಎಂದು ಅವನಿಗೆ ಹೇಳಿದನು.[1] ಎಲೆ ಸೋಮ್ಯನೆ, ಹೇಗೆ ಲೋಕದಲ್ಲಿ ದೊಡ್ಡದಾದ ದೊಡ್ಡ ಪರಿಮಾಣದ ಬೆಳೆದಿರುವ, ಕಟ್ಟಿಗೆಯನ್ನು (ಹಾಕಿ) ಬೆಳೆಯಿಸಿರುವ ಬೆಂಕಿಯ, ಖದ್ಯೋತಮಾತ್ರವಾದ ದೀಪದ ಹುಳುವಿನ ಗಾತ್ರದ ಒಂದು ಕೆಂಡವು (ಬೆಂಕಿಯು) ಆರಲು (ಪರಿಶಿಷ್ಟಃ=ಅವಶಿಷ್ಟಃ) ಉಳಿದದ್ದು (ಸ್ಯಾತ್=ಭವೇತ್) ಆಗುವದೋ, ಆ ಕೆಂಡದಿಂದ ಅದಕ್ಕಿಂತಲೂ ಆ ಗಾತ್ರಕ್ಕಿಂತಲೂ ಸ್ವಲ್ಪವೂ ಹೆಚ್ಚಾಗಿ[2] ಸುಡಲಾಗುವದಿಲ್ಲವೋ, ಹಾಗೆಯೇ ಸೋಮ್ಯನೆ, (ತೇ=ತವ) ನಿನ್ನ, ಅನ್ನದಿಂದ ಬೆಳೆದಿದ್ದ ಹದಿನಾರು ಕಲೆಗಳಲ್ಲಿ ಒಂದು ಕಲೆಯ ಅವಯುವವು (ಅತಿಶಿಷ್ಟಾ=ಅವಶಿಷ್ಟಾ

---

1. 'ತಂ ಹೋವಾಚ' ಎಂಬುದು ಉಪನಿಷತ್ತಿನಲ್ಲಿ ಮೊದಲೇ ಇದೆ ; ಆಚಾರ್ಯರು 'ಪಿತಾ ಆಹ' ಎಂದು ಬರೆದುಕೊಂಡು ವಾಕ್ಯದ ಕೊನೆಯಲ್ಲಿ ಸಂಬಂಧವನ್ನು ತಿಳಿಸುವದಕ್ಕೆ ಇದನ್ನು ಬರೆದಿರುತ್ತಾರೆ.

2. ಸ್ವಲ್ಪವನ್ನು ಸುಡಲಾರನು, ಬಹಳವನ್ನು ಸುಡಲಾರನೆಂಬುದನ್ನು ಹೇಳುವದೇನಿದೆ ಎಂ.. ಟೀಕೆಗಿಂತಲೂ ಈ ವ್ಯಾಖ್ಯಾನವೇ ಭಾಷ್ಯಕ್ಕೆ ಹತ್ತಿರವೆಂದು ನಮಗೆ ತೋರುತ್ತದೆ.

ಸ್ಯಾತ್) ಉಳಿದುಕೊಂಡಿದ್ದೀತು. ಆ ದೀಪದ ಹುಳುವಿನ ಪರಿಮಾಣದ ಕೆಂಡ ದಂತಿರುವ ಆ (ಕಲೆ)ಯಿಂದ (ಏತರ್ಹಿ=ಇದಾನೀಮ್) ಈಗ ವೇದಗಳನ್ನು ಅನುಭವಿಸದೆ ಇರುವೆ, ತಿಳಿಯಲಾರದೆಇದ್ದೀಯೆ. ನನ್ನ ಮಾತನ್ನು ಕೇಳಿದರೆ ಬಳಿಕ ಎಲ್ಲವನ್ನೂ ಅರಿತುಕೊಳ್ಳುವೆ. ಮೊದಲು ಉಣ್ಣು, ಊಟಮಾಡು.

(ಉಪನಿಷತ್ತು)

**ಸ ಹಾऽऽಶಾऽಥ ಹೈನಮುಪಸಸಾದ ತಗ್ಂ ಹ ಯತ್ಕಿಂಚ ಪಪ್ರಚ್ಛ ಸರ್ವಗ್ಂ ಹ ಪ್ರತಿಪೇದೇ ॥ ೪ ॥**

೪. ಅವನು ಉಂಡನು. ಬಳಿಕ ಇವನಬಳಿಗೆ ಬಂದನು. ಅವನನ್ನು ಏನೇನು ಕೇಳಿದನೋ ಎಲ್ಲವನ್ನೂ ತಿಳಿದಿದ್ದನು.

## ಊಟಮಾಡಲು ಎಲ್ಲವೂ ತೋಚಿದ್ದು

(ಭಾಷ್ಯ)

೪೯೧. ಸ ಹ ತಥೈವ ಆಶ ಭುಕ್ತವಾನ್ । ಅಥ ಅನನ್ತರಂ ಹ ಏನಂ ಪಿತರಂ ಶುಶ್ರೂಷುರುಪಸಸಾದ । ತಂ ಹ ಉಪಗತಂ ಪುತ್ರಂ ಯತ್ಕಿಂಚ ಋಗಾದಿಷು ಪಪ್ರಚ್ಛ ಗ್ರನ್ಥರೂಪಮ್ ಅರ್ಥಜಾತಂ ವಾ ಪಿತಾ ಸ ಶ್ವೇತಕೇತುಃ ಸರ್ವಂ ಹ ತತ್ ಪ್ರತಿಪೇದೇ ಋಗಾದಿ ಅರ್ಥತೋ ಗ್ರನ್ಥತಶ್ಚ ॥

(ಭಾಷ್ಯಾರ್ಥ)

ಅವನು ಅದರಂತೆಯೇ ಉಂಡನು, ಊಟಮಾಡಿದನು. ಬಳಿಕ ಆಮೇಲೆ ಈ ತಂದೆಯಲ್ಲಿ ಶ್ರವಣಮಾಡಬೇಕೆಂದು ಬಂದನು. (ಹಾಗೆ) ಬಂದ ಆ ಮಗನಿಗೆ ಋಗಾದಿಗಳಲ್ಲಿ ಯಾವದೊಂದಿಷ್ಟನ್ನು ತಂದೆಯು ಕೇಳಿದರೂ, ಆ ಶ್ವೇತಕೇತುವು ಗ್ರಂಥರೂಪವಾಗಿರಲಿ ಅರ್ಥವಾಗಿರಲಿ, ಆ ಋಗಾದಿಯಾದ ಎಲ್ಲವನ್ನೂ ಗ್ರಂಥ ರೂಪದಿಂದಲೂ ಅರ್ಥರೂಪದಿಂದಲೂ ಅರಿತುಕೊಂಡಿದ್ದನು.

(ಉಪನಿಷತ್ತು)

**ತಗ್ಂ ಹೋವಾಚ ಯಥಾ ಸೋಮ್ಯ ಮಹತೋऽಭ್ಯಾಹಿತಸ್ಯೈಕ ಮಙ್ಗಾರಂ ಖದ್ಯೋತಮಾತ್ರಂ ಪರಿಶಿಷ್ಟಂ ತಂ ತೃಣೈರುಪಸಮಾ ಧಾಯ ಪ್ರಾಜ್ವಲಯೇತ್ ತೇನ ತತೋऽಪಿ ಬಹು ದಹೇತ್ ॥ ೫ ॥**

**ಏವಗ್ಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾऽ ತಿಶಿಷ್ಟಾಭೂತ್ಸಾನ್ನೇನೋಪಸಮಾಹಿತಾ ಪ್ರಾಜ್ವಾಲೀ ತಯೈತರ್ಹಿ ವೇದಾನನುಭವಸ್ಯನ್ನಮಯಗ್ಂ ಹಿ ಸೋಮ್ಯ ಮನ ಆಪೋ ಮಯಃ ಪ್ರಾಣಸ್ತೇಜೋಮಯೀ ವಾಗಿತಿ ತದ್ಧಾಸ್ಯ ವಿಜಜ್ಞಾ ವಿತಿ ವಿಜಜ್ಞಾವಿತಿ ॥ ೬ ॥**

೫-೬. ಅವನನ್ನು ಕುರಿತು ಇಂತೆಂದನು : ಸೋಮ್ಯನೆ, ಹೇಗೆ ದೊಡ್ಡದಾಗಿ ಬೆಳೆದ (ಬೆಂಕಿಯ) ಒಂದು ಕೆಂಡವು ದೀಪದಹುಳುವಿನ ಗಾತ್ರದ್ದು ಉಳಿದಿದ್ದು, ಅದನ್ನು ಕಡ್ಡಿಗಳನ್ನು ಹಾಕಿ ಉರಿಯಿಸ ಬಹುದೋ ಅದರಿಂದ ಅವಕ್ಕಿಂತಲೂ ಹೆಚ್ಚಾಗಿ ಸುಡಬಹುದೋ, ಹಾಗೆಯೇ, ಸೋಮ್ಯನೆ, ನಿನ್ನ ಹದಿನಾರು ಕಲೆಗಳಲ್ಲಿ ಒಂದು ಕಲೆಯು ಉಳಿದಿತ್ತು ; ಅದು ಅನ್ನವನ್ನು ಹಾಕಿದ್ದರಿಂದ ಪ್ರಜ್ವಲಿಸಿತು. ಅದರಿಂದ ಈಗ ವೇದಗಳನ್ನು ಅನುಭವಿಸುತ್ತಿರುವೆ. ಸೋಮ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಆಪೋಮಯವೇ, ವಾಕ್ಕು ತೇಜೋ ಮಯವೇ- ಎಂದನು. ಇವನ ಆ (ಮಾತನ್ನು) ಅರಿತುಕೊಂಡನು, ಅರಿತುಕೊಂಡನು.

## ಊಟವಾದಬಳಿಕ ಋಗಾದಿಗಳು ತಿಳಿದದ್ದಕ್ಕೆ ಕಾರಣ

(ಭಾಷ್ಯ)

೪೯೨. ತಂ ಹೋವಾಚ ಪುನಃ ಪಿತಾ । ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯ ಇತ್ಯಾದಿ ಸಮಾನಮ್ । ಏಕಮಙ್ಗಾರಂ ಶಾನ್ತಸ್ಯಾಗ್ನೇಃ ಖದ್ಯೋತಮಾತ್ರಂ ಪರಿಶಿಷ್ಟಂ ತಂ ತೃಣೈಶ್ಚೂರ್ಣೈಶ್ಚ ಉಪಸಮಾಧಾಯ ಪ್ರಾಜ್ವಲಯೇದ್ ವರ್ಧಯೇತ್ । ತೇನೇದ್ಧೇನ ಅಙ್ಗಾರೇಣ ತತೋಽಪಿ ಪೂರ್ವಪರಿಮಾಣಾದ್ ಬಹು ದಹೇತ್ । ಏವಂ ಸೋಮ್ಯ ತೇ ಷೋಡಶಾನಾಮ್ ಅನ್ನಕಲಾನಾಂ ಸಾಮರ್ಥ್ಯರೂಪಾಣಾಮ್ ಏಕಾ ಕಲಾ ಅತಿಶಿಷ್ಟಾಽಭೂತ್ ಅತಿಶಿಷ್ಟಾ ಆಸೀತ್। ಪಞ್ಚದಶಾಹಾನ್ಯಭುಕ್ತವತಃ ಏಕೈಕೇನ ಅಹ್ನಾ ಏಕೈಕಾ ಕಲಾ ಚನ್ದ್ರಮಸ ಇವ ಅಪರಪಕ್ಷೇ ಕ್ಷೀಣಾ ಸಾಽತಿಶಿಷ್ಟಾ ಕಲಾ ತವಾಽನ್ನೇನ ಭುಕ್ತೇನ ಉಪಸಮಾಹಿತಾ ವರ್ಧಿತಾ ಉಪಚಿತಾ ಪ್ರಾಜ್ವಾಲೀ । ದೈರ್ಘ್ಯಂ ಛಾನ್ದಸಮ್ । ಪ್ರಜ್ವಲಿತಾ ವರ್ಧಿತಾ ಇತ್ಯರ್ಥಃ। ಪ್ರಾಜ್ವಾಲೀತ್ ಇತಿ ಪಾಠಾನ್ತರಮ್ । ತದಾ ತೇನೋಪಸಮಾಹಿತಾ ಸ್ವಯಂ ಪ್ರಜ್ವಲಿತವತೀ ಇತ್ಯರ್ಥಃ । ತಯಾ ವರ್ಧಿತಯಾ ಏತರ್ಹಿ ಇದಾನೀಂ ವೇದಾನ್ ಅನುಭವಸಿ ಉಪಲಭಸೇ ॥

(ಭಾಷ್ಯಾರ್ಥ)

ಅವನನ್ನು ಕುರಿತು ತಂದೆಯು ಮತ್ತೆ ಇಂತೆಂದನು. 'ಸೋಮ್ಯನೆ, ಹೇಗೆ ದೊಡ್ಡದಾಗಿ ಬೆಳೆದ (ಬೆಂಕಿಯ)' ಎಂದು ಮುಂತಾಗಿರುವ (ಗ್ರಂಥವು ಹಿಂದಿನದಕ್ಕೆ) ಸಮಾನವು. ಆರಿದ ಬೆಂಕಿಗೆ ದೀಪದಹುಳುವಿನ ಗಾತ್ರದ ಒಂದು ಕೆಂಡವು

ಉಳಿದಿದ್ದು ಅದನ್ನು ಕಡ್ಡಿಗಳಿಂದಲೂ ಹೊಟ್ಟಿನಿಂದಲೂ ಹಾಕಿ ಉರಿಸುತ್ತಾರೋ ಬೆಳೆಯಿಸುತ್ತಾರೋ ಆದರಿಂದ ಹೊತ್ತಿಕೊಂಡ ಕೆಂಡದಿಂದ ಅದಕ್ಕಿಂತಲೂ ಹಿಂದಿನ ಪರಿಮಾಣಕ್ಕಿಂತ ಹೆಚ್ಚಾಗಿ ಸುಡಬಹುದೋ ಹಾಗೆಯೇ, ಸೋಮ್ಯನೆ, ನಿನ್ನ ಶಕ್ತಿ ರೂಪವಾದ ಹದಿನಾರು ಅನ್ನಕಲೆಗಳಲ್ಲಿ ಒಂದು ಉಳಿದಿತ್ತು, ಉಳಿದುಕೊಂಡಿತ್ತು. ಹದಿನೈದು ದಿನಗಳವರೆಗೆ ಊಟಮಾಡದೆ ಇದ್ದದ್ದರಿಂದ ಒಂದೊಂದು ದಿನಕ್ಕೆ ಒಂದೊಂದು ಕಲೆಯು ಕೃಷ್ಣಪಕ್ಷದಲ್ಲಿ ಚಂದ್ರನ (ಕಲೆ)ಯಂತೆ ಕ್ಷೀಣವಾಯಿತು ಆ ಉಳಿದ (ಒಂದು) ಕಲೆಯು ನಿನ್ನ ಉಂಡ ಅನ್ನದಿಂದ ಸೇರಿಕೊಂಡು ಬೆಳೆದು ಹೆಚ್ಚಾಗಿ - (ಪ್ರಾಜ್ವಾಲೀ ಎಂದು ಮೂಲದಲ್ಲಿ) ದೀರ್ಘವಿರುವದು ವೈದಿಕ ಪ್ರಯೋಗವು- ಉರಿಯಿಸಲ್ಪಟ್ಟಿತು , ಹೆಚ್ಚಾಗಿ ಮಾಡಲ್ಪಟ್ಟಿತು ಎಂದರ್ಥ. ಪ್ರಾಜ್ವಾಲೀತ್ ಎಂಬ ಪಾಠಾಂತರವಿದೆ. ಆಗ ಆ (ಅನ್ನ) ವನ್ನು ಹಾಕಿದ್ದರಿಂದ ತಾನೇ ಹೊತ್ತಿಕೊಂಡುರಿಯಿತು ಎಂದರ್ಥ ಹೀಗೆ ಹೆಚ್ಚಿಸಿದ (ಕಲೆಯಿಂದ ಏತರ್ಹಿ =ಇದಾನೀಮ್) ಈಗ ವೇದಗಳನ್ನು ಅನುಭವಿಸುತ್ತಿರುವೆ, ಅರಿಯುತ್ತಿದ್ದೀಯೆ.

## ಮನಸ್ಸು ಅನ್ನಮಯವೇ ಎಂಬುದರ ಉಪಸಂಹಾರ

(ಭಾಷ್ಯ)

೪೯೩. ಏವಂ ವ್ಯಾವೃತ್ತ್ಯನುವೃತ್ತಿಭ್ಯಾಮನ್ನಮಯತ್ವಂ ಮನಸಃ ಸಿದ್ಧಮ್ ಇತ್ಯುಪಸಂಹರತಿ । ಅನ್ನಮಯಂ ಹಿ ಸೋಮ್ಯ ಮನಃ ಇತ್ಯಾದಿ । ಯಥೈತತ್ ಮನಸೋಽನ್ನಮಯತ್ವಂ ತವ ಸಿದ್ಧಂ ತಥಾ ಆಪೋಮಯಃ ಪ್ರಾಣಸ್ತೇಜೋ ಮಯೀ ವಾಕ್ ಇತ್ಯೇತದಪಿ ಸಿದ್ಧಮೇವೇತ್ಯಭಿಪ್ರಾಯಃ । ತದೇತತ್ ಹ ಅಸ್ಯ ಪಿತುರುಕ್ತಂ ಮನಆದೀನಾಮನ್ನಾದಿಮಯತ್ವಂ ವಿಜಜ್ಞೌ ವಿಜ್ಞಾತವಾನ್ ಶ್ವೇತ ಕೇತುಃ । ದ್ವಿರಭ್ಯಾಸಸ್ತ್ರಿವೃತ್ಕರಣಪ್ರಕರಣಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ (ಮನಸ್ಸಿನ ಶಕ್ತಿಯು) ಹೋಗುವದು, ಅನುಸರಿಸಿಕೊಂಡು ಬರುವದು -ಈ ಎರಡರಿಂದ[1] ಮನಸ್ಸು ಅನ್ನಮಯವೆಂಬುದು ಸಿದ್ಧವಾಯಿತು ಎಂದು 'ಸೋಮ್ಯನೆ, ಮನಸ್ಸು ಅನ್ನಮಯವೇ' . ಎಂದುಮುಂತಾಗಿ ಉಪಸಂಹಾರ ಮಾಡಿರುತ್ತಾನೆ ಹೇಗೆ ಮನಸ್ಸು ಅನ್ನಮಯವೆಂಬಿದು ನಿನಗೆ ಸಿದ್ಧವಾಗಿದೆಯೋ ಹಾಗೆಯೇ ಪ್ರಾಣವು ಆಪೋಮಯ(ವೆಂಬಿದೂ) ವಾಕ್ಕು ತೇಜೋಮಯವೆಂಬಿದೂ ಸಿದ್ಧವಾಗಿಯೇ ಇರುತ್ತದೆ ಎಂದು ಅಭಿಪ್ರಾಯ. ಮನಸ್ಸೇ ಮುಂತಾದವು ಅನ್ನಾದಿ

1. ಅನ್ನವನ್ನು ಬಿಟ್ಟಿದ್ದರಿಂದ ಮನಃಶಕ್ತಿಯು ಹೋಯಿತು, ಉಂಡದ್ದರಿಂದ ಬಂದಿತು ಎಂಬ ಅನ್ವಯವ್ಯತಿರೇಕಗಳಿಂದ ಎಂದರ್ಥ.

ಮಯವೆಂದು ತಂದೆ ಹೇಳಿದ ಈ (ವಿಷಯ)ವನ್ನು ಶ್ವೇತಕೇತುವು ಅರಿತು ಕೊಂಡನು. ಅರಿತುಕೊಂಡವನಾದನು. ('ಅರಿತುಕೊಂಡನು' ಎಂದು) ಎರಡು ಸಲ ಹೇಳಿರುವದು ತ್ರಿವೃತ್ಕರಣಪ್ರಕರಣವು ಮುಗಿಯಿತೆಂದು ತಿಳಿಸುವದಕ್ಕೆ

---

# ಆರನೆಯ ಅಧ್ಯಾಯ–ಎಂಟನೆಯ ಖಂಡ

(ಸುಷುಪ್ತಿವಿಚಾರದಿಂದ ಜೀವನ ಸತ್ಸ್ವರೂಪನಿರ್ಧಾರಣ)

## ಸ್ವಪಿತಿ ಎಂಬ ಹೆಸರಿನಲ್ಲಡಗಿರುವ ತತ್ತ್ವ

(ಉಪನಿಷತ್ತು)

**ಉದ್ದಾಲಕೋ ಹಾರುಣಿಃ ಶ್ವೇತಕೇತುಂ ಪುತ್ರಮುವಾಚ ಸ್ವಪ್ನಾನ್ತಂ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನಗ್ಂ ಸ್ವಪಿತೀತ್ಯಾಚಕ್ಷತೇ ಸ್ವಗ್ಂ ಹ್ಯಪೀತೋ ಭವತಿ ॥ ೧ ॥**

೧. ಉದ್ದಾಲಕ ಆರುಣಿಯು ಶ್ವೇತಕೇತುವೆಂಬ ಮಗನನ್ನು ಕುರಿತು 'ಎಲೈ ಸೋಮ್ಯನೆ, ಸ್ವಪ್ನಾಂತವನ್ನು ನನ್ನಿಂದ ಅರಿತುಕೊ. ಎಲ್ಲಿ ಹೀಗೆ ಪುರುಷನು ಸ್ವಪಿತಿ ಎನ್ನಿಸಿಕೊಳ್ಳುತ್ತಾನೋ, ಸೋಮ್ಯನೆ, ಆಗ ಸತ್ತಿನೊಡನೆ ಸಂಪನ್ನನಾಗಿರುತ್ತಾನೆ; ಸ್ವವನ್ನು (ತನ್ನನ್ನು) ಅಪೀತನಾಗಿರುತ್ತಾನೆ, ಆದ್ದರಿಂದ ಇವನನ್ನು ಸ್ವಪಿತಿ ಎನ್ನುತ್ತಾರೆ. ಸ್ವವನ್ನಲ್ಲವೆ, ಅಪೀತನಾಗಿರುತ್ತಾನೆ?

### ಸುಷುಪ್ತಿನಿರೂಪಣಕ್ಕೆ ಅವತರಣಿಕೆ

(ಭಾಷ್ಯ)

೪೫೪. ಯಸ್ಮಿನ್ ಮನಸಿ ಜೀವೇನಾಽಽತ್ಮನಾಽನುಪ್ರವಿಷ್ಟಾ ಪರಾ ದೇವತಾ ಆದರ್ಶ ಇವ ಪುರುಷಃ ಪ್ರತಿಬಿಮ್ಬೇನ ಜಲಾದಿಷ್ವಿವ ಚ ಸೂರ್ಯಾದಯಃ ಪ್ರತಿಬಿಮ್ಬೈಃ, ತನ್ಮನೋಽನ್ನಮಯಂ ತೇಜೋಽಮ್ಮಯಾಭ್ಯಾಂ ವಾಕ್ಪ್ರಾಣಾಭ್ಯಾಂ ಸಂಗತಮಧಿಗತಮ್। ಯನ್ಮಯೋ ಯತ್ಸ್ಥಶ್ಚ ಜೀವೋ ಮನನ ದರ್ಶನಶ್ರವಣಾದಿವ್ಯವಹಾರಾಯ ಕಲ್ಪತೇ, ತದುಪರಮೇ ಚ ಸ್ವಂ ದೇವತಾರೂಪ

ಮೇವ ಪ್ರತಿಪದ್ಯತೇ। ತದುಕ್ತಂ ಶ್ರುತ್ಯನ್ತರೇ "ಧ್ಯಾಯತೀವ ಲೇಲಾಯತೀವ ಸಧೀಃ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ" (ಬೃ. ಮಾ ೪-೧-೭), "ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ" (ಬೃ. ೪-೪-೫, ಬೃ ಮಾ. ೪-೨-೬) ಇತ್ಯಾದಿ, "ಸ್ವಪ್ನೇನ ಶಾರೀರಮ್" (ಬೃ ೪-೩-೧೧) ಇತ್ಯಾದಿ, "ಪ್ರಾಣನ್ನೇವ ಪ್ರಾಣೋ ನಾಮ ಭವತಿ" (ಬೃ. ೧-೪-೭) ಇತ್ಯಾದಿ ಚ ॥

(ಭಾಷ್ಯಾರ್ಥ)

ಯಾವ ಮನಸ್ಸಿನಲ್ಲಿ ಜೀವನೆಂಬ ತನ್ನ ರೂಪದಿಂದ ಪರದೇವತೆಯು ಕನ್ನಡಿಯೊಳಗೆ ಪ್ರತಿಬಿಂಬವಾಗಿ ಪುರುಷನೂ ನೀರು ಮುಂತಾದವುಗಳಲ್ಲಿ ಪ್ರತಿಬಿಂಬಗಳಾಗಿ ಸೂರ್ಯಾದಿಗಳೂ (ಒಳಹೊಕ್ಕಿರುವಂತೆ) ಅನುಪ್ರವೇಶಮಾಡಿರುವದೋ[1] ಆ ಮನಸ್ಸು ಅನ್ನಮಯವು, ತೇಜಸ್ಸು ಅಪ್ಪು- ಇವುಗಳಿಂದಾಗಿರುವ ವಾಕ್ಪ್ರಾಣಗಳೊಡನೆ ಸೇರಿಕೊಂಡಿರುತ್ತದೆ- ಎಂಬುದನ್ನು ತಿಳಿದುಕೊಂಡದ್ದಾಯಿತು. ಆ (ಮನೋ)ಮಯನಾಗಿ ಅದರಲ್ಲಿಯೇ ಇರುವನಾಗಿರುವದರಿಂದ ಜೀವನು ಮನನ, ದರ್ಶನ, ಶ್ರವಣ -ಮುಂತಾದ ವ್ಯವಹಾರಗಳನ್ನು ಮಾಡುವದಕ್ಕೆ ತಕ್ಕವನಾಗಿರುತ್ತಾನೆ[2] ಅದು ಇಲ್ಲವಾಗಲು ತನ್ನ ದೇವತಾರೂಪವನ್ನೇ ಪಡೆದುಕೊಳ್ಳುತ್ತಾನೆ[3]. ಇದನ್ನು ಬೇರೊಂದು ಶ್ರುತಿಯಲ್ಲಿ 'ಧ್ಯಾನಮಾಡುವಂತೆ (ಇರುತ್ತಾನೆ), ಅಲುಗಾಡುವಂತೆ (ಇರುತ್ತಾನೆ), ಬುದ್ಧಿಯೊಡಗೂಡಿದವನಾಗಿ ಸ್ವಪ್ನವಾಗಿ ಈ ಲೋಕವನ್ನು ಮೀರುತ್ತಾನೆ' (ಬೃ. ಮಾ. ೪-೧-೭), "ಆ ಈ ಆತ್ಮನೇ ಬ್ರಹ್ಮವು. ವಿಜ್ಞಾನಮಯನು, ಮನೋಮಯನು" (ಬೃ. ೪-೪-೫)[4], "ಸ್ವಪ್ನದಿಂದ ಶಾರೀರವನ್ನು (ಬದಿಗಿಟ್ಟು)" (ಬೃ ೪-೩-೧೧) ಎಂದು ಮುಂತಾಗಿಯೂ[5] "ಪ್ರಾಣನಮಾಡುವವನಾಗಿಯೇ ಪ್ರಾಣನೆನಿಸಿಕೊಳ್ಳುವನಾಗುತ್ತಾನೆ"[6] (ಬೃ. ೧-೪-೭) ಎಂದು ಮುಂತಾಗಿಯೂ ಹೇಳಿದೆ.

---

1. ೬-೩-೨ 2. ಈ ವಿಶೇಷರೂಪವು ಮನಸ್ಸೆಂಬ ಉಪಾಧಿಯಿಂದಲೇ ಆತ್ಮನಿಗೆ ತೋರುತ್ತಿರುತ್ತದೆ ಎಂದರ್ಥ.

3. ಪರಮಾತ್ಮಸ್ವರೂಪವನ್ನೇ ಪಡೆದುಕೊಳ್ಳುತ್ತಾನೆ. ಅಲ್ಲಿಯೂ ಅವಿದ್ಯೆಯಿದೆಯಾದ್ದರಿಂದ ಜೀವನೇ ಆಗಿರುತ್ತಾನೆ ಎಂಬ ವ್ಯಾಖ್ಯಾನಪ್ರಸ್ಥಾನವು ಈ ಭಾಷ್ಯಕ್ಕೆ ವಿರುದ್ಧವೆಂಬುದು ಸ್ಪಷ್ಟ.

4. ಆಯಾ ಉಪಾಧಿಗಳಿಂದ ಆಯಾ ರೂಪದವನಾದರೂ ಸ್ವರೂಪದಿಂದ ಬ್ರಹ್ಮವೇ ಆಗಿರುತ್ತಾನೆಂಬುದಕ್ಕೆ ಪ್ರಮಾಣವಿದು.

5. ಶರೀರವಿಲ್ಲದಿದ್ದರೂ ಅಂತಃಕರಣದಿಂದಾಗಿರುವ ಭಾವಗಳನ್ನು ಕಾಣುತ್ತಾ ಕನಸು ಕಾಣುತ್ತಿರುತ್ತಾನೆ ಎಂದರ್ಥ.

6. ಪ್ರಾಣಾದ್ಯುಪಾಧಿಗಳಿಂದ ಪ್ರಾಣನು ಎಂದು ಮುಂತಾಗಿ ಹೆಸರು. ಸ್ವತಃ ಅವನು ಆತ್ಮನೇ ಎಂದರ್ಥ.

# ಮನಸ್ಸು ಇಲ್ಲವಾದರೆ ಜೀವನು ಪರಮಾತ್ಮನಲ್ಲಿ ಸೇರಿಹೋಗುತ್ತಾನೆ

(ಭಾಷ್ಯ)

೪೯೫ ತಸ್ಯಾಸ್ಯ ಮನಃಸ್ಥಸ್ಯ ಮನಆಖ್ಯಾಂ ಗತಸ್ಯ ಮನಉಪಶಮದ್ವಾರೇಣ ಇನ್ದ್ರಿಯವಿಷಯೇಭ್ಯೋ ನಿವೃತ್ತಸ್ಯ ಯಸ್ಯಾಂ ಪರಸ್ಯಾಂ ದೇವತಾಯಾಂ ಸ್ವಾತ್ಮಭೂತಾಯಾಂ ಯದವಸ್ಥಾನಂ ತತ್ ಪುತ್ರಾಯ ಆಚಿಖ್ಯಾಸುರುದ್ದಾಲಕೋ ಹ ಕಿಲ ಆರುಣಿಃ ಶ್ವೇತಕೇತುಂ ಪುತ್ರಮುವಾಚ ಉಕ್ತವಾನ್। ಸ್ವಪ್ನಾನ್ತಂ ಸ್ವಪ್ನಮಧ್ಯಮ್। ಸ್ವಪ್ನ ಇತಿ ದರ್ಶನವೃತ್ತೇಃ ಸ್ವಪ್ನಸ್ಯ ಆಖ್ಯಾ। ತಸ್ಯ ಮಧ್ಯಂ ಸ್ವಪ್ನಾನ್ತಮ್। ಸುಷುಪ್ತಮಿತ್ಯೇತತ್। ಅಥವಾ ಸ್ವಪ್ನಾನ್ತಂ ಸ್ವಪ್ನಸತತ್ತ್ವಮ್ ಇತ್ಯರ್ಥಃ। ತತ್ರಾಪಿ ಅರ್ಥಾತ್ ಸುಷುಪ್ತಮೇವ ಭವತಿ। ಸ್ವಮ್ ಅಪೀತೋ ಭವತೀತಿ ವಚನಾತ್। ನ ಹಿ ಅನ್ಯತ್ರ ಸುಷುಪ್ತಾತ್ ಸ್ವಮಪೀತಿಂ ಜೀವಸ್ಯ ಇಚ್ಛನ್ತಿ ಬ್ರಹ್ಮವಿದಃ। ತತ್ರ ಹಿ ಆದರ್ಶಾಪನಯನೇ ಪುರುಷಪ್ರತಿಬಿಮ್ಬ ಆದರ್ಶಗತೋ ಯಥಾ ಸ್ವಮೇವ ಪುರುಷಮ್ ಅಪೀತೋ ಭವತಿ ಏವಂ ಮನಆದ್ಯುಪರಮೇ ಚೈತನ್ಯಪ್ರತಿಬಿಮ್ಬರೂಪೇಣ ಜೀವೇನಾಽಽತ್ಮನಾ ಮನಸಿ ಪ್ರವಿಷ್ಟಾ ನಾಮರೂಪವ್ಯಾಕರಣಾಯ ಪರಾ ದೇವತಾ[1] ಸಾ ಸ್ವಮೇವ ಆತ್ಮಾನಂ ಪ್ರತಿಪದ್ಯತೇ ಜೀವರೂಪತಾಂ ಮನಆಖ್ಯಾಂ ಹಿತ್ವಾ। ಅತಃ ಸುಷುಪ್ತ ಏವ ಸ್ವಪ್ನಾನ್ತಶಬ್ದವಾಚ್ಯಃ ಇತ್ಯವಗಮ್ಯತೇ। ಯತ್ರ ತು ಸುಪ್ತಃ ಸ್ವಪ್ನಾನ್ ಪಶ್ಯತಿ ತತ್ ಸ್ವಾಪ್ನಂ ದರ್ಶನಂ ಸುಖದುಃಖಸಂಯುಕ್ತಮಿತಿ ಪುಣ್ಯಾಪುಣ್ಯಕಾರ್ಯಮ್। ಪುಣ್ಯಾಪುಣ್ಯಯೋರ್ಹಿ ಸುಖದುಃಖಾರಮ್ಭಕತ್ವಂ ಪ್ರಸಿದ್ಧಮ್। ಪುಣ್ಯಾಪುಣ್ಯಯೋಶ್ಚ ಅವಿದ್ಯಾಕಾಮೋಪಷ್ಟಮ್ಭೇನೈವ ಸುಖದುಃಖತದ್ದರ್ಶನಕಾರ್ಯಾರಮ್ಭಕತ್ವಮುಪಪದ್ಯತೇ ನಾನ್ಯಥಾ ಇತ್ಯವಿದ್ಯಾಕಾಮಕರ್ಮಭಿಃ ಸಂಸಾರಹೇತುಭಿಃ ಸಂಯುಕ್ತ ಏವ ಸ್ವಪ್ನ ಇತಿ ನ ಸ್ವಮಪೀತೋ ಭವತಿ। "ಅನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾಞ್ಶೋಕಾನ್ ಹೃದಯಸ್ಯ ಭವತಿ" (ಬೃ. ೪-೩-೨೨), "ತದ್ವಾ ಅಸ್ಯೈತದತಿಚ್ಛನ್ದಾಃ" (ಬೃ ೪-೩-೨೧), "ಏಷ ಏವ ಪರಮ ಆನನ್ದಃ"[2] (ಬೃ ೪-೩-೩೩) ಇತ್ಯಾದಿಶ್ರುತಿಭ್ಯಃ ಸುಷುಪ್ತ ಏವ

---

1. 'ಯಾ ಪರಾ ದೇವತಾ' ಎಂದಿದ್ದರೆ ಸ್ಪಷ್ಟತರವಾಗುತ್ತಿತ್ತು, ಈಗಿರುವಂತೆಯೂ ಅದನ್ನು ಅಧ್ಯಾಹಾರಮಾಡಿಕೊಳ್ಳಬೇಕು.

2. 'ಏಷ ಪರಮ ಆನನ್ದಃ' ಎಂಬ ಪಾಠಕ್ಕಿಂತ ಇದು ಮೇಲು, 'ಏಷೋಽಸ್ಯ ಪರಮ ಆನನ್ದಃ' (ಬೃ. ೪-೩ ೩೨) ಎಂದಿದ್ದರೆ ಮತ್ತೂ ಸ್ಫುಟತರವಾಗಿ ಸುಷುಪ್ತಿಗೇ ಅನ್ವಯಿಸುತ್ತಿತ್ತು

ಸ್ವಂ ದೇವತಾರೂಪಂ ಜೀವತ್ವವಿನಿರ್ಮುಕ್ತಂ ದರ್ಶಯಿಷ್ಯಾಮಿತ್ಯಾಹ । ಸ್ವಪ್ನಾನ್ತಂ ಮೇ ಮಮ ನಿಗದತೋ ಹೇ ಸೋಮ್ಯ ವಿಜಾನೀಹಿ ವಿಸ್ಪಷ್ಟಮವಧಾರಯೇತ್ಯರ್ಥಃ ॥

(ಭಾಷ್ಯಾರ್ಥ)

ಆ ಈ ಮನಸ್ಸಿನಲ್ಲಿದ್ದು ಮನಸ್ಸೆಂಬ ಹೆಸರನ್ನು ಪಡೆದಿರುವ (ಜೀವನಿಗೆ) ಮನಸ್ಸು ಇಲ್ಲವಾಗುವದರ ಮೂಲಕ ಇಂದ್ರಿಯವಿಷಯಗಳಿಂದ ಹಿಮ್ಮೆಟ್ಟಲು ತನ್ನ ಆತ್ಮನೇ ಆಗಿರುವ ಯಾವ ಪರದೇವತೆಯಲ್ಲಿ ನಿಲ್ಲುವಿಕೆಯಾಗುವದೋ ಅದನ್ನು ಮಗನಿಗೆ ಹೇಳಿಕೊಡಬೇಕೆಂದು ಉದ್ದಾಲಕ ಆರುಣಿಯು ಶ್ವೇತಕೇತುವೆಂಬ ಮಗನಿಗೆ ಇಂತೆಂದನು, (ಹೀಗೆಂದು) ಹೇಳಿದನಂತೆ

ಸ್ವಪ್ನಾಂತವನ್ನು (ಅರಿತುಕೊ), ಸ್ವಪ್ನಮಧ್ಯವನ್ನು— ಸ್ವಪ್ನವೆಂಬುದು ದರ್ಶನವೃತ್ತಿಯಾದ[1] ಕನಸಿನ ಹೆಸರು,. ಅದರ ಮಧ್ಯವೇ ಸ್ವಪ್ನಾಂತವು, ಎಂದರೆ ಸುಷುಪ್ತವು ಎಂದರ್ಥ ಅಥವಾ ಸ್ವಪ್ನಾಂತವೆಂದರೆ ಸ್ವಪ್ನದ ತತ್ತ್ವವು ಎಂದರ್ಥ, ಅಲ್ಲಿಯೂ ಅರ್ಥವಶದಿಂದ ಸುಷುಪ್ತವೆಂದೇ ಆಗುತ್ತದೆ ಏಕೆಂದರೆ (ಇಲ್ಲಿ) 'ಸ್ವವನ್ನು (ತನ್ನನ್ನು) ಅಪೀತನಾಗುತ್ತಾನೆ' ಎಂಬ ವಚನವಿದೆ **ಸುಷುಪ್ತಿಯಲ್ಲದೆ ಬೇರೊಂದವಸ್ಥೆಯಲ್ಲಿ[2] ಜೀವನು ತನ್ನಲ್ಲಿ ಅಪೀತಿಯನ್ನು ಹೊಂದುತ್ತಾನೆಂದು ಬ್ರಹ್ಮಜ್ಞಾನಿಗಳು ಒಪ್ಪುವದಿಲ್ಲವಷ್ಟೆ?** ಆ (ಸುಷುಪ್ತಿ) ಯಲ್ಲಲ್ಲವೆ, ಕನ್ನಡಿಯನ್ನು ತೆಗೆದುಹಾಕಿದರೆ ಮನುಷ್ಯನ ಪ್ರತಿಬಿಂಬವು ಕನ್ನಡಿಯಲ್ಲಿದ್ದದ್ದು ಹೇಗೆ ತನ್ನ (ಸ್ವರೂಪ)ವೇ ಆದ ಮನುಷ್ಯನನ್ನು ಸೇರಿಕೊಳ್ಳುವದೋ, ಹಾಗೆ ಮನಸ್ಸೇ ಮುಂತಾದದ್ದು ಇಲ್ಲವಾಗಲು ಚೈತನ್ಯದ ಪ್ರತಿಬಿಂಬರೂಪದಿಂದ[3] ಜೀವಾತ್ಮನಾಗಿ ಮನಸ್ಸಿನಲ್ಲಿ ನಾಮರೂಪವ್ಯಾಕರಣಕ್ಕಾಗಿ ಒಳಹೊಕ್ಕಿರುವ ಪರದೇವತೆಯಿದೆಯಲ್ಲ, ಅದು ಮನಸ್ಸೆಂಬ ಜೀವರೂಪವನ್ನು ಬಿಟ್ಟು ತನ್ನ ಸ್ವರೂಪವನ್ನೇ ಪಡೆದುಕೊಳ್ಳುತ್ತದೆ ಆದ್ದರಿಂದ ಸುಷುಪ್ತಿಯೇ (ಇಲ್ಲಿ) ಸ್ವಪ್ನಾಂತಶಬ್ದವಾಚ್ಯವಾದ (ಅವಸ್ಥೆ) ಎಂದು ಗೊತ್ತಾಗುತ್ತದೆ. ಎಲ್ಲಿಯಾದರೆ

1. ಏನನ್ನಾದರೂ ನೋಡುವ ವ್ಯಾಪಾರವುಳ್ಳ.

2. ದರ್ಶನವೃತ್ತಿಯುಳ್ಳ ಅವಸ್ಥೆಯಲ್ಲಿ ಜೀವನು ಉಪಾಧಿವಶದಿಂದ ಪರಮಾತ್ಮನನ್ನು ಬಿಟ್ಟು ಬೇರೆಯಿರುವಂತೆ ತೋರುತ್ತಿರುತ್ತಾನೆ, ಆದ್ದರಿಂದ ಸುಷುಪ್ತಿಯಲ್ಲಿಯೇ ತನ್ನ ಸ್ವರೂಪದಲ್ಲಿ ಸೇರಿಕೊಳ್ಳುತ್ತಾನೆ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಸೂ. ಭಾ. ೧-೧-೯, ೧-೩-೨೦ (ಭಾ. ಭಾ. ೮೫,೨೭೦), ಸೂ. ಭಾ. ೧-೪-೧೮, ೩-೨-೭ (ಭಾ. ಭಾ. ೨೭೫,೩೭೬) ೩-೨-೧೧, ೩-೩-೩೫- ಇವುಗಳನ್ನೂ ಬೃ. ಭಾ. ೨-೧-೭ (ಭಾ. ಭಾ. ೨೯೧)- ಮುಂತಾದ ಕಡೆಗಳಲ್ಲಿ ಹೀಗೆಂದು ಹೇಳಿರುವದನ್ನೂ ನೋಡಿ.

3 ಆತ್ಮನು ನೀರೂಪನಾಗಿರುವದರಿಂದ ಅವನಿಗೆ ನಿಜವಾದ ಪ್ರತಿಬಿಂಬವೇನೂ ಮನಸ್ಸಿನಲ್ಲಿ ಆಗುವದಿಲ್ಲ. ಆತ್ಮಚೈತನ್ಯದ ಸಂನಿಧಿಯಿಂದ ಮನಸ್ಸಿನಲ್ಲಿಯೇ ಚೈತನ್ಯವಿರುವಂತೆ ಭ್ರಮಿಸಿ ತಮ್ಮನ್ನು ಜೀವನೆಂದುಕೊಳ್ಳುತ್ತಿದಾರೆ ಎಂಬುದಕ್ಕೆ ಮಾತ್ರ ಈ ದೃಷ್ಟಾಂತವನ್ನು ಉಪಯೋಗಿಸಿಕೊಳ್ಳಬೇಕು.

ನಿದ್ರಿಸಿದವನು ಸ್ವಪ್ನಗಳನ್ನು ಕಾಣುತ್ತಿರುವನೋ ಆ ಸ್ವಾಪ್ನದರ್ಶನವು ಸುಖದುಃಖ ಗಳಿಂದೊಡಗೂಡಿರುತ್ತದೆಯಾದ್ದರಿಂದ ಪುಣ್ಯಾಪುಣ್ಯಗಳ ಕಾರ್ಯವು. ಪುಣ್ಯಾ ಪುಣ್ಯಗಳಲ್ಲವೆ, ಸುಖದುಃಖಗಳನ್ನುಂಟುಮಾಡುತ್ತವೆ ಎಂದು ಪ್ರಸಿದ್ಧವಾಗಿದೆ? ಪುಣ್ಯಾಪುಣ್ಯಗಳೋ ಅವಿದ್ಯಾಕಾಮಗಳ ಒತ್ತಾಸೆಯಿಂದಲೇ ಸುಖದುಃಖದರ್ಶನ ವೆಂಬ ಕಾರ್ಯವನ್ನು ಉಂಟುಮಾಡುವದು ಹೊಂದುತ್ತದೆಯೇ ಹೊರತು ಬೇರೊಂದು ಬಗೆಯಿಂದಲ್ಲ. **ಆದ್ದರಿಂದ ಸ್ವಪ್ನದಲ್ಲಿ ಅವಿದ್ಯಾಕಾಮಕರ್ಮ ಗಳೆಂಬ ಸಂಸಾರಕಾರಣಗಳಿಂದ ಕೂಡಿಯೇ ಇರುತ್ತಾನಾದ್ದರಿಂದ ಸ್ವ (ತನ್ನ ರೂಪ)ವನ್ನು ಸೇರಿಕೊಂಡಿರುವದಿಲ್ಲ. "ಪುಣ್ಯದಿಂದ ಅನುಗತ ನಾಗಿರುವದಿಲ್ಲ, ಪಾಪದಿಂದ ಅನುಗತನಾಗಿರುವದಿಲ್ಲ; ಏಕೆಂದರೆ ಆಗ ಅವನು ಹೃದಯದ ಶೋಕಗಳನ್ನೆಲ್ಲ ದಾಟಿರುವನು"** (ಬೃ. ೪-೩-೨೨), **"ಇದೇ ಇವನ ಅತಿಚ್ಛಂದವಾದ (ರೂಪವು)"**[1] (ಬೃ ೪-೩-೨೦), **"ಇದೇ ಪರಮಾನಂದವು"**[2] (ಬೃ. ೪-೩-೩೩) **ಮುಂತಾದ ಶ್ರುತಿಗಳ (ಪ್ರಮಾಣ ದಿಂದ) ಸುಷುಪ್ತಿಯಲ್ಲಿಯೇ ಸ್ವ (ತನ್ನದಾದ) ಜೀವತ್ವವಿಲ್ಲದ ದೇವತಾ ರೂಪವನ್ನು ತೋರಿಸಿಕೊಡುವೆನು**[3] ಎಂದು (ಮೇ-ಮುಮ) ನಾನು ಹೇಳುವ ಸ್ವಪ್ನಾಂತವನ್ನು ಅರಿತುಕೊ, ವಿಸ್ಪಷ್ಟವಾಗಿ ನಿಶ್ಚಯಿಸಿಕೊ ಎಂದಿರುತ್ತಾನೆ

## ಸ್ವಪಿತಿ ಎಂಬ ನಾಮದಿಂದ ಸಿದ್ಧವಾಗುವ ಅರ್ಥ

(ಭಾಷ್ಯ)

೪೯೬ ಕದಾ ಸ್ವಪ್ನಾನ್ತೋ ಭವತೀತಿ? ಉಚ್ಯತೇ। ಯತ್ರ ಯಸ್ಮಿನ್ ಕಾಲೇ ಏತನ್ನಾಮ[4] ಭವತಿ ಪುರುಷಸ್ಯ ಸ್ವಪ್ಸ್ಯತಃ। ಪ್ರಸಿದ್ಧಂ ಹಿ ಲೋಕೇ ಸ್ವಪಿತೀತಿ। ಗೌಣಂ ಚೇದಂ ನಾಮೇತ್ಯಾಹ। ಯದಾ ಸ್ವಪಿತೀತ್ಯುಚ್ಯತೇ ಪುರುಷಃ ತದಾ ತಸ್ಮಿನ್ ಕಾಲೇ ಸತಾ ಸಚ್ಛಬ್ದವಾಚ್ಯಯಾ ಪ್ರಕೃತಯಾ ದೇವತಯಾ ಸಂಪನ್ನೋ ಭವತಿ ಸಂಗತ ಏಕೀಭೂತೋ ಭವತಿ। ಮನಸಿ ಪ್ರವಿಷ್ಟಂ ಮನಆದಿ

---

1. ಅವಿದ್ಯಾಕಾಮಕರ್ಮಗಳು ಸುಷುಪ್ತಿಯಲ್ಲಿಲ್ಲವೆಂಬುದಕ್ಕೆ ಶ್ರುತಿಗಳಿವು.

2. ಸುಷುಪ್ತಿಯಲ್ಲಿ ಆನಂದಸ್ವರೂಪನಾದ ಪರಮಾತ್ಮನೇ ಆಗಿರುತ್ತಾನೆಂಬುದಕ್ಕೆ ಶ್ರುತಿಪ್ರಮಾಣವಿದು.

3. ಸುಷುಪ್ತಿಯಲ್ಲಿ ಜೀವತ್ವವಿಲ್ಲದ ಪರದೇವತಾರೂಪವೇ ಇರುವದೆಂದು ಸ್ಪಷ್ಟವಾಗಿ ಹೇಳಿರುವಲ್ಲಿ ವ್ಯಾಖ್ಯಾನಕಾರರು ಕೆಲವರು ಇಲ್ಲಿಯೂ ಮೂಲಾವಿದ್ಯೆಯೆಂಬ ಶಕ್ತಿಯಿರುವ ಕಾರಣ ಜೀವಬ್ರಹ್ಮವಿಭಾಗವು ಇದೆ - ಎಂದು ಹೇಳುತ್ತಿರುವದು ಭಾಷ್ಯಕ್ಕೂ ಪ್ರಕೃತ ಶ್ರುತಿಗೂ ಅತ್ಯಂತವಿರುದ್ಧವಾಗಿರುತ್ತದೆ.

4. 'ಸ್ವಪಿತೀತ್ಯೇತನ್ನಾಮ' ಎಂದಿರಬೇಕಾಗಿತ್ತೆಂದು ತೋರುತ್ತದೆ.

ಸಂಸರ್ಗಕೃತಂ ಜೀವರೂಪಂ ಪರಿತ್ಯಜ್ಯ ಸ್ವಂ ಸದ್ರೂಪಂ ಯತ್ ಪರಮಾರ್ಥ ಸತ್ಯಮ್ ಅಪೀತೋ ಅಪಿಗತೋ ಭವತಿ । ಅತಸ್ತಸ್ಮಾತ್ ಸ್ವಪಿತಿ ಇತ್ಯೇನಮಾಚಕ್ಷತೇ ಲೌಕಿಕಾಃ। ಸ್ವಮ್ ಆತ್ಮಾನಂ ಹಿ ಯಸ್ಮಾತ್ ಅಪೀತೋ ಭವತಿ। ಗುಣನಾಮಪ್ರಸಿದ್ಧಿತೋಽಪಿ ಸ್ವಾತ್ಮಪ್ರಾಪ್ತಿರ್ಗಮ್ಯತ ಇತ್ಯಭಿಪ್ರಾಯಃ। ಕಥಂ ಪುನರ್ಲೌಕಿಕಾನಾಂ ಪ್ರಸಿದ್ಧಾ ಸ್ವಾತ್ಮಸಂಪತ್ತಿಃ? ಜಾಗ್ರಚ್ಛ್ರಮನಿಮಿತ್ತೋದ್ಭವತ್ವಾತ್ ಸ್ವಾಪಸ್ಯ ಇತ್ಯಾಹುಃ। ಜಾಗರಿತೇ ಹಿ ಪುಣ್ಯಾಪುಣ್ಯನಿಮಿತ್ತಸುಖದುಃಖಾದ್ಯನೇಕಾಯಾಸಾನುಭವಾತ್ ಶ್ರಾನ್ತೋ ಭವತಿ । ತತಶ್ಚ ಆಯಸ್ತಾನಾಂ ಕರಣಾನಾಮ್ ಅನೇಕವ್ಯಾಪಾರನಿಮಿತ್ತಗ್ಲಾನಾನಾಂ ಸ್ವವ್ಯಾಪಾರೇಭ್ಯ ಉಪರಮೋ ಭವತಿ । ಶ್ರುತೇಶ್ಚ "ಶ್ರಾಮ್ಯತ್ಯೇವ ವಾಕ್ಶ್ರಾಮ್ಯತಿ ಚಕ್ಷುಃ" (ಬೃ. ೧-೫-೨೧) ಇತ್ಯೇವಮಾದಿ[1] । ತಥಾ ಚ "ಗೃಹೀತಾ ವಾಗ್ಗೃಹೀತಂ ಚಕ್ಷುರ್ಗೃಹೀತಂ ಶ್ರೋತ್ರಂ ಗೃಹೀತಂ ಮನಃ" (ಬೃ. ೨-೧-೧೭) ಇತಿ। ಏವಮಾದೀನಿ ಕರಣಾನಿ ಪ್ರಾಣಗ್ರಸ್ತಾನಿ । ಪ್ರಾಣ ಏಕೋಽಶ್ರಾನ್ತೋ ದೇಹೇ ಕುಲಾಯೇ ಯೋ[2] ಜಾಗರ್ತಿ ತದಾ ಜೀವಃ ಶ್ರಮಾಪನುತ್ತಯೇ ಸ್ವಂ ದೇವತಾರೂಪಮಾತ್ಮಾನಂ ಪ್ರತಿಪದ್ಯತೇ । ನಾನ್ಯತ್ರ ಸ್ವರೂಪಾವಸ್ಥಾನಾತ್ ಶ್ರಮಾಪನೋದಃ ಸ್ಯಾದಿತಿ ಯುಕ್ತಾ ಪ್ರಸಿದ್ಧಿರ್ಲೌಕಿಕಾನಾಂ ಸ್ವಂ ಹ್ಯಪೀತೋ ಭವತೀತಿ । ದೃಶ್ಯತೇ ಹಿ ಲೋಕೇ ಜ್ವರಾದಿರೋಗಗ್ರಸ್ತಾನಾಂ ತದ್ವಿನಿರ್ಮೋಕೇ ಸ್ವಾತ್ಮಸ್ಥಾನಾಂ ವಿಶ್ರಮಣಮ್ । ತದ್ವದಿಹಾಪಿ ಸ್ಯಾದಿತಿ ಯುಕ್ತಮ್ । "ತದ್ಯಥಾ ಶ್ಯೇನೋ ವಾ ಸುಪರ್ಣೋ ವಾ ವಿಪರಿಪತ್ಯ ಶ್ರಾನ್ತಃ" (ಬೃ. ೪-೩-೧೯) ಇತ್ಯಾದಿ ಶ್ರುತೇಶ್ಚ ॥

(ಭಾಷ್ಯಾರ್ಥ)

ಸ್ವಪ್ನಾಂತವು ಯಾವಾಗ ಆಗುತ್ತದೆ? ಎಂದರೆ ಹೇಳುತ್ತೇನೆ. ಎಲ್ಲಿ ಯಾವಕಾಲದಲ್ಲಿ (ಸ್ವಪಿತಿ) ಎಂಬೀ ನಾಮವು ನಿದ್ರಿಸುತ್ತಿರುವ ಪುರುಷನಿಗೆ ಆಗುತ್ತದೆಯೋ ಆಗ. ಲೋಕದಲ್ಲಿ 'ಸ್ವಪಿತಿ' (ನಿದ್ರಿಸುತ್ತಾನೆ ಎಂಬ ಹೆಸರು) ಪ್ರಸಿದ್ಧವಷ್ಟೆ? ಈ ಹೆಸರು ಗುಣಕ್ಕೆ (ಅನುರೂಪ)ವಾಗಿಯೂ ಇದೆ ಎಂದು ಹೇಳುತ್ತಿದಾನೆ. ಯಾವಾಗ ಪುರುಷನು 'ಸ್ವಪಿತಿ' ಎನ್ನಿಸಿಕೊಳ್ಳುತ್ತಾನೋ ಆಗ ಆ ಕಾಲದಲ್ಲಿ ಸತ್ತಿನೊಡನೆ, ಸಚ್ಛಬ್ದವಾಚ್ಯವಾದ ಪ್ರಕೃತವಾಗಿರುವ ದೇವತೆಯೊಡನೆ[3], ಸಂಪನ್ನನಾಗುತ್ತಾನೆ, ಸೇರಿಕೊಂಡು ಒಂದಾದವನಾಗುತ್ತಾನೆ. **ಮನಸ್ಸಿನಲ್ಲಿ ಒಳಹೊಕ್ಕು ಮನಸ್ಸೇ**

---

1. ಇತಿ ಎಂದಿಷ್ಟೇ ಇದ್ದರೆ ಸಾಕು.

2. ಇದು 'ಯದಾ' ಎಂದಿರಬೇಕಿತ್ತೆಂದು ತೋರುತ್ತದೆ.

3. 'ಸತ್ತೆಂಬುದು ಪ್ರಧಾನವೂ ಆಗಬಹುದಲ್ಲ' -ಎಂಬ ಸಾಂಖ್ಯನ ಶಂಕೆಗೆ ಪರಿಹಾರವಿದು. ಇದು ಪ್ರಧಾನದ ಪ್ರಕರಣವಲ್ಲ; ಈಕ್ಷಣಶಕ್ತಿಯುಳ್ಳ ಸತ್ತೆಂಬ ಪರದೇವತೆಯ ವಿಚಾರ.

**ಮುಂತಾದವುಗಳ ಸಂಪರ್ಕದಿಂದಾದ ಜೀವರೂಪವನ್ನು ಬಿಟ್ಟು ಪರಮಾರ್ಥಸತ್ಯವಾದ ತನ್ನದೇ ಆದ ಸದ್ರೂಪವಿದೆಯಲ್ಲ, (ಅದನ್ನು) ಅಪೀತನಾಗುತ್ತಾನೆ, (ಅದರಲ್ಲಿ) ಲಯವಾಪವನಾಗುತ್ತಾನೆ**[1]. ಆದ್ದರಿಂದ ಆ ಕಾರಣದಿಂದ ಲೌಕಿಕರು ಇವನನ್ನು 'ಸ್ವಪಿತಿ' ಎನ್ನುತ್ತಾರೆ ಸ್ವವನ್ನು (ಎಂದರೆ) ತನ್ನ ಸ್ವರೂಪವನ್ನಲ್ಲವೆ, ಇವನು ಸೇರಿ ಲಯವಾಗಿರುತ್ತಾನೆ? ಆದ್ದರಿಂದ (ಈ) ಗುಣನಾಮದ ಪ್ರಸಿದ್ಧಿಯಿಂದಲೂ ತನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಾನೆಂದು ಗೊತ್ತಾಗುತ್ತದೆ ಎಂದು ಅಭಿಪ್ರಾಯ.

ಲೌಕಿಕರಿಗೆ ತನ್ನ ಸ್ವರೂಪದಲ್ಲಿ ಒಂದಾಗುತ್ತಾನೆಂಬುದು ಪ್ರಸಿದ್ಧವಾಗಿದೆ ಎಂಬುದು ಹೇಗೆ? ಎಂದರೆ ಎಚ್ಚರದ ಶ್ರಮದ ನಿಮಿತ್ತದಿಂದ ನಿದ್ರೆಯುಂಟಾಗುವದರಿಂದ ಎಂದು ಹೇಳುತ್ತಾರೆ (ಇದರ ವಿವರ). ಎಚ್ಚರದಲ್ಲಿ ಪುಣ್ಯಪಾಪಗಳ ನಿಮಿತ್ತದಿಂದಾದ ಸುಖದುಃಖಗಳೇ ಮುಂತಾದ ಅನೇಕಾಯಾಸವನ್ನು ಅನುಭವಿಸುವದರಿಂದ ಶ್ರಾಂತನಾಗುತ್ತಾನೆ. ಅದರಿಂದ ಅನೇಕವ್ಯಾಪಾರಗಳ ನಿಮಿತ್ತದಿಂದ ಬಳಲಿ ಆಯಾಸಪಟ್ಟ ಕರಣಗಳಿಗೆ ತಮ್ಮತಮ್ಮ ವ್ಯಾಪಾರಗಳನ್ನು ಬಿಟ್ಟು ಸುಮ್ಮನಿರುವಂತೆ ಆಗುತ್ತದೆ. "ವಾಕ್ಕು ಶ್ರಾಂತವೇ ಆಗುತ್ತದೆ, ಚಕ್ಷುಸ್ಸೂ ಶ್ರಾಂತವೇ ಆಗುತ್ತದೆ" (ಬೃ ೧-೫-೨೧) ಎಂದು ಮುಂತಾಗಿಯೂ ಮತ್ತು "(ಆಗ) ವಾಕ್ಕು ಗೃಹೀತವಾಗಿರುತ್ತದೆ, ಚಕ್ಷುಸ್ಸು ಗೃಹೀತವೇ ಆಗಿರುತ್ತದೆ, ಶ್ರೋತ್ರವು ಗೃಹೀತವೇ ಆಗಿರುತ್ತದೆ, ಮನಸ್ಸೂ ಗೃಹೀತವೇ ಆಗಿರುತ್ತದೆ" (ಬೃ. ೨-೧-೧೭) ಎಂದೂ ಶ್ರುತಿಯಿರುವದರಿಂದಲೂ (ಹೀಗೆ) ಇವೇ ಮುಂತಾದ ಕರಣಗಳು ಪ್ರಾಣಗ್ರಸ್ತವಾಗಿರುತ್ತವೆ. ಪ್ರಾಣವೊಂದೇ ಶ್ರಮವಿಲ್ಲದೆ ದೇಹವೆಂಬ ಗೂಡಿನಲ್ಲಿ[2] ಯಾವಾಗ ಎಚ್ಚರವಾಗಿರುತ್ತದೆಯೋ[3] ಆಗ **ಜೀವನು ಶ್ರಮವನ್ನು ಹೋಗಲಾಡಿಸಿಕೊಳ್ಳುವದಕ್ಕೋಸ್ಕರ ತನ್ನ ದೇವತಾರೂಪವಾದ ಆತ್ಮನನ್ನು ಪಡೆದುಕೊಳ್ಳುತ್ತಾನೆ. ಸ್ವರೂಪದಲ್ಲಿ ನಿಂತಹೊರತು ಮತ್ತೆಲ್ಲಿಯೂ ಶ್ರಮದ ಪರಿಹಾರವು ಆಗಲಾರದು.** ಆದ್ದರಿಂದ ಲೋಕದ ಜನರಿಗೆ ಸ್ವ (ತನ್ನ ಸ್ವರೂಪ)ವನ್ನೇ (ಸೇರಿಕೊಂಡು) ಅಪೀತನಾಗಿರುತ್ತಾನೆ ಎಂದು ಪ್ರಸಿದ್ಧವಾಗಿರುವದು ಯುಕ್ತವಾಗಿರುತ್ತದೆ. ಲೋಕದಲ್ಲಿ ಜ್ವರವೇ ಮುಂತಾದ ಬೇನೆಯು

---

1. ಅಚೇತನವಾದ ಪ್ರಧಾನವು ಚೇತನನ ಸ್ವರೂಪವಾಗಲಾರದಾದ್ದರಿಂದಲೂ ಸಚ್ಛಬ್ದವಾಚ್ಯವಾದದ್ದು ಪ್ರಧಾನವಲ್ಲ. ಸೂ. ಭಾ. ೧-೧-೯ (ಭಾ. ಭಾ. ೮೫)ನ್ನು ನೋಡಿ.

2. ಬೃ. ೪-೩-೧೨ರಲ್ಲಿ ಕುಲಾಯವೆಂಬ ಹೆಸರನ್ನು ಶರೀರಕ್ಕೆ ಉಪಯೋಗಿಸಿವೆ, ಪ್ರಾಣವೇ ಅದನ್ನು ನಿದ್ರೆಯ ಕಾಲಕ್ಕೆ ಕಾಪಾಡುತ್ತಿರುತ್ತದೆ ಎಂದು ಅಲ್ಲಿ ಹೇಳಿದೆ.

3. ಪ್ರ. ೪-೩ರ ಸೂಚನೆ. ಮಿಕ್ಕ ಕರಣಗಳೆಲ್ಲವೂ ತಮ್ಮ ವ್ಯಾಪಾರವನ್ನು ಬಿಡಲು ಪ್ರಾಣಾಗ್ನಿಗಳೇ ಅಲ್ಲಿ ಎಚ್ಚರವಾಗಿರುತ್ತವೆ ಎಂದು ಅಲ್ಲಿ ಹೇಳಿದೆ.

ಹಿಡಿದವರಿಗೆ ಅದರಿಂದ ಬಿಡುಗಡೆಯಾಗಲು ಸ್ವರೂಪದಲ್ಲಿರುವದರಿಂದ ವಿಶ್ರಾಂತಿ ಯಾಗುವದು ಕಂಡಿದೆಯಲ್ಲವೆ? ಅದರಂತೆ ಇಲ್ಲಿಯೂ ಆಗಬಹುದೆಂಬುದು ಯುಕ್ತ ವಾಗಿರುತ್ತದೆ. "ಅದು ಹೇಗೆಂದರೆ, (ಹೇಗೆ) ಶ್ಯೇನವಾಗಲಿ ಸುಪರ್ಣವಾಗಲಿ ಹಾರಾಡಿ ಬಳಲಿ " (ಬೃ ೪-೩ ೧೯) ಮುಂತಾದ ಶ್ರುತಿಯಿಂದಲೂ (ಹೀಗೆಂದು ಸಿದ್ಧವಾಗುತ್ತದೆ)[1].

## ಸುಷುಪ್ತಿಯಲ್ಲಿ ಪರಮಾತ್ಮಪ್ರಾಪ್ತಿಗೆ ದೃಷ್ಟಾಂತ

(ಉಪನಿಷತ್ತು)

**ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಬನ್ಧನಮೇವೋಪಶ್ರಯತ ಏವಮೇವ ಖಲು ಸೋಮ್ಯ ತನ್ಮನೋ ದಿಶಂ ದಿಶಂ ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಶ್ರಯತೇ ಪ್ರಾಣ ಬನ್ಧನಗ್ಂ ಹಿ ಸೋಮ್ಯ ಮನ ಇತಿ ॥ ೨ ॥**

೨. ಅದು ಹೇಗೆಂದರೆ, (ಹೇಗೆ) ಶಕುನಿಯು ದಾರದಿಂದ ಕಟ್ಟುವಪದು ದಿಕ್ಕುದಿಕ್ಕಿಗೆ ಹಾರಾಡಿ ಮತ್ತೊಂದೆಡೆಯಲ್ಲಿ ಇಂಬನ್ನು ಪಡೆಯದೆ ಕಟ್ಟಿದ (ಸ್ಥಲ)ವನ್ನೇ ಆಶ್ರಯಿಸುವದೋ ಹಾಗೆಯೇ ಸೋಮ್ಯನೆ, ಆ ಮನಸ್ಸು ದಿಕ್ಕುದಿಕ್ಕಿಗೂ ಹಾರಾಡಿ ಮತ್ತೊಂದೆಡೆ ಯಲ್ಲಿ ಇಂಬನ್ನು ಪಡೆಯದ ಪ್ರಾಣವನ್ನೇ ಆಶ್ರಯಿಸುತ್ತದೆ. ಸೋಮ್ಯನೆ, ಮನಸ್ಸು ಪ್ರಾಣಬಂಧನವಲ್ಲವೆ?

## ಜೀವನಿಗೆ ಪರಮಾತ್ಮನೇ ಆಶ್ರಯ

(ಭಾಷ್ಯ)

೪೯೭. ತತ್ರಾಯಂ ದೃಷ್ಟಾನ್ತೋ ಯಥೋಕ್ತೇ ಅರ್ಥೇ। ಸ ಯಥಾ ಶಕುನಿಃ ಪಕ್ಷೀ ಶಕುನಿಘಾತಕಸ್ಯ ಹಸ್ತಗತೇನ ಸೂತ್ರೇಣ ಪ್ರಬದ್ಧಃ ಪಾಶಿತಃ ದಿಶಂ ದಿಶಂ ಬನ್ಧನಮೋಕ್ಷಾರ್ಥೀ ಸನ್ ಪ್ರತಿದಿಶಂ ಪತಿತ್ವಾ ಅನ್ಯತ್ರ ಬನ್ಧನಾತ್ ಆಯತನಮ್ ಆಶ್ರಯಮ್ ವಿಶ್ರಮಣಾಯ ಅಲಬ್ಧ್ವಾ ಅಪ್ರಾಪ್ಯ ಬನ್ಧನಮೇವ ಉಪಶ್ರಯತೇ। ಏವಮೇವ ಯಥಾಯಂ ದೃಷ್ಟಾನ್ತಃ ಖಲು ಹೇ ಸೋಮ್ಯ

---

1. ಹಕ್ಕಿಯು ಶ್ರಾಂತವಾದಾಗ ಗೂಡಿಗೆ ಹೋಗಿ ಸೇರುವಂತೆ ಜೀವನು ಸುಷುಪ್ತಿ ಯನ್ನು ಸೇರುತ್ತಾನೆ ಎಂಬರ್ಥದ ಈ ಶ್ರುತಿಯಲ್ಲಿ ಶ್ರಮಪರಿಹಾರವೇ ತನ್ನ ಆಶ್ರಯವಾದ ಪರಮಾತ್ಮನಲ್ಲಾಗುವದೆಂದು ಹೇಳಿದೆ. ಇಲ್ಲಿಯೂ ಮುಂದಿನ ಕಂಡಿಕೆಯಲ್ಲಿ ಇದನ್ನೇ ಹೇಳಿದೆ.

ತನ್ಮನಃ, ತತ್ ಪ್ರಕೃತಂ ಷೋಡಶಕಲಮ್ ಅನ್ನೋಪಚಿತಂ ಮನೋ ನಿರ್ಧಾರಿತಮ್। ತತ್ಪ್ರವಿಷ್ಟಃ, ತತ್ಸ್ಥಸ್ತದುಪಲಕ್ಷಿತೋ ಜೀವಃ, ತನ್ಮನಃ ಇತಿ ನಿರ್ದಿಶ್ಯತೇ ಮಞ್ಚಾಕ್ರೋಶನವತ್ । ಸ ಮನಆಖ್ಯೋಪಾಧಿರ್ಜೀವಃ, ಅವಿದ್ಯಾಕಾಮಕರ್ಮೋಪದಿಷ್ಟಾಂ ದಿಶಂ ದಿಶಂ ಸುಖದುಃಖಾದಿಲಕ್ಷಣಾಂ ಜಾಗ್ರತ್ಸ್ವಪ್ನಯೋಃ ಪತಿತ್ವಾ ಗತ್ವಾ। ಅನುಭೂಯ ಇತ್ಯರ್ಥಃ। ಅನ್ಯತ್ರ ಸದಾಖ್ಯಾತ್ ಸ್ವಾತ್ಮನಃ ಆಯತನಂ ವಿಶ್ರಮಣಸ್ಥಾನಮ್ ಅಲಬ್ಧ್ವಾ ಪ್ರಾಣಮೇವ। ಪ್ರಾಣೇನ ಸರ್ವಕಾರ್ಯಕರಣಾಶ್ರಯೇಣ ಉಪಲಕ್ಷಿತಾ ಪ್ರಾಣ ಇತ್ಯುಚ್ಯತೇ ಸದಾಖ್ಯಾ ಪರಾ ದೇವತಾ। "ಪ್ರಾಣಸ್ಯ ಪ್ರಾಣಮ್" (ಬೃ. ೪-೪-೧೮), "ಪ್ರಾಣಶರೀರೋ ಭಾರೂಪಃ" (೩-೧೪-೨) ಇತ್ಯಾದಿಶ್ರುತೇಃ। ಅತಸ್ತಾಂ ದೇವತಾಂ ಪ್ರಾಣಂ ಪ್ರಾಣಾಖ್ಯಾಮೇವ ಉಪಶ್ರಯತೇ। ಪ್ರಾಣೋ ಬನ್ಧನಂ ಯಸ್ಯ ಮನಸಸ್ತತ್ ಪ್ರಾಣಬನ್ಧನಂ ಹಿ ಯಸ್ಮಾತ್ ಸೋಮ್ಯ ಮನಃ। ಪ್ರಾಣೋಪಲಕ್ಷಿತದೇವತಾಶ್ರಯಂ ಮನ ಇತಿ ತದುಪಲಕ್ಷಿತೋ ಜೀವ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಈ) ಹೇಳಿದ ವಿಷಯಕ್ಕೆ ಇದು ದೃಷ್ಟಾಂತವು. ಅದು ಹೇಗೆಂದರೆ (ಹೇಗೆ) ಶಕುನಿಯು, ಹಕ್ಕಿಯು, ಹಕ್ಕಿಗಳನ್ನು ಹೊಡೆಯುವವನ ಕೈಯಲ್ಲಿರುವ ದಾರಕ್ಕೆ ಕಟ್ಟುವಡೆದು, ಬಿಗಿದುಬಿದ್ದು, (ಆ) ಬಂಧನವನ್ನು ತಪ್ಪಿಸಿಕೊಳ್ಳಲಿಚ್ಛಿಸಿ ದಿಕ್ಕುದಿಕ್ಕಿಗೂ ಒಂದೊಂದು ದಿಕ್ಕಿಗೂ ಹಾರಾಡಿ ಕಟ್ಟಿದ ಸ್ಥಲವನ್ನು ಬಿಟ್ಟು ಮತ್ತೊಂದೆಡೆಯಲ್ಲಿ ಇಂಬು ದೊರೆಯದೆ, ಆಸರೆಯು ಸಿಕ್ಕದೆ, ಕಟ್ಟಿದ ಸ್ಥಲವನ್ನೇ ಆಶ್ರಯಿಸುವದೋ, ಹಾಗೆಯೇ, ಈ ದೃಷ್ಟಾಂತದಂತೆಯೇ, ಎಲೈ ಸೋಮ್ಯನೆ, ಆ ಮನಸ್ಸು- ಆ ಪ್ರಕೃತವಾದ ಅನ್ನದಿಂದ ಬೆಳೆಯುವ ಹದಿನಾರು ಕಲೆಗಳ ಮನಸ್ಸೆಂದು ಗೊತ್ತುಮಾಡಿದೆಯಷ್ಟೆ, ಅದನ್ನು ಹೊಕ್ಕು ಅದರಲ್ಲಿದ್ದುಕೊಂಡು ಅದರಿಂದುಪಲಕ್ಷಿತನಾದ ಜೀವನನ್ನೇ 'ಆ ಮನಸ್ಸು' ಎಂದು (ಇಲ್ಲಿ) ತಿಳಿಸಿದೆ. ಮಂಚಿಕೆಗಳು ಕೂಗುತ್ತವೆ ಎಂಬಂತೆ (ಇದು)[1]- ಆ ಮನಸ್ಸೆಂಬ ಉಪಾಧಿಯುಳ್ಳ ಜೀವನು, ಅವಿದ್ಯಾಕಾಮಕರ್ಮಗಳು ತಿಳಿಸಿಕೊಟ್ಟ ಸುಖದುಃಖಾದಿರೂಪವಾದ ದಿಕ್ಕುದಿಕ್ಕಿಗೆ, ಎಚ್ಚರಕನಸುಗಳಲ್ಲಿ ಹಾರಾಡಿ, (ಅಲ್ಲಿಗೆ) ಹೋಗಿ ಅನುಭವಿಸಿ ಎಂದರ್ಥ. ಸತ್ತೆಂಬ ತನ್ನ ಆತ್ಮನಿಗಿಂತ ಮತ್ತೊಂದೆಡೆಯಲ್ಲಿ ಇಂಬನ್ನು, ವಿಶ್ರಾಂತಿಯ ಸ್ಥಲವನ್ನು, ಪಡೆಯದೆ ಪ್ರಾಣನನ್ನೇ - ಕಾರ್ಯಕರಣಗಳಿಗೆಲ್ಲ ಆಶ್ರಯವಾಗಿರುವ ಪ್ರಾಣದಿಂದ ಉಪಲಕ್ಷಿತವಾಗಿರುವ ಸತ್ತೆಂಬ ಪರದೇವತೆ

---

1. ಮಂಚಿಕೆಯ ಮೇಲಿರುವವರು ಹಕ್ಕಿಗಳನ್ನು ಹಾರಿಸುವದಕ್ಕೆ ಕೂಗಿದರೆ ಮಂಚಿಕೆಗಳು ಕೂಗುತ್ತವೆ ಎನ್ನುತ್ತಾರೆ. ಇದರಂತೆ ಇಲ್ಲಿ ಮನಸ್ಸು ಎಂಬ ಮಾತನ್ನು ಮನಸ್ಸಿನಲ್ಲಿರುವ ಜೀವನು ಎಂಬರ್ಥದಲ್ಲಿ ಪ್ರಯೋಗಿಸಿದೆ ಎಂದು ಅಭಿಪ್ರಾಯ.

ಯನ್ನು ಪ್ರಾಣ ಎಂದಿವೆ.[1] "ಪ್ರಾಣಕ್ಕೂ ಪ್ರಾಣವು" (ಬೃ ೪-೪-೧೮), "ಪ್ರಾಣಶರೀರನು, ಭಾರೂಪನು" (೩-೧೪-೨) ಮುಂತಾದ ಶ್ರುತಿಯಿಂದ (ಪ್ರಾಣನೆಂಬ ಹೆಸರು ಪರಮಾತ್ಮನಿಗೂ ಉಂಟೆಂದು ಸಿದ್ಧವಾಗುತ್ತದೆ). ಆದ್ದರಿಂದ ಆ ಪ್ರಾಣನನ್ನು ಎಂದರೆ – ಪ್ರಾಣನೆಂಬ ದೇವತೆಯನ್ನೇ ಆಶ್ರಯಿಸುತ್ತಾನೆ. (ಪ್ರಾಣಬಂಧನಮ್)[2] ಪ್ರಾಣವು ಯಾವ ಮನಸ್ಸಿಗೆ ಬಂಧನವೋ ಅದು ಪ್ರಾಣಬಂಧನವು, ಸೋಮ್ಯನೆ, ಮನಸ್ಸು ಪ್ರಾಣೋಪಲಕ್ಷಿತದೇವತೆಯನ್ನೇ ಆಶ್ರಯಿಸಿರುವದಲ್ಲವೆ? ಮನಸ್ಸು ಎಂದರೆ ಆ (ಮನಸ್ಸಿನಿಂದ) ಉಪಲಕ್ಷಿತನಾದ ಜೀವನು ಎಂದರ್ಥ[3].

# ಅನ್ನಾದಿಕಾರ್ಯಕಾರಣಪರಂಪರೆಯಿಂದ ಜಗನ್ಮೂಲಸಿದ್ಧಿ

(ಉಪನಿಷತ್ತು)

**ಅಶನಾಪಿಪಾಸೇ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ ಪುರುಷೋಽಶಿಶಿಷತಿ ನಾಮಾಽಽಪ ಏವ ತದಶಿತಂ ನಯನ್ತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವಂ ತದಪ ಆಚಕ್ಷತೇಽಶನಾಯೇತಿ ತತ್ರೈತಚ್ಛುಙ್ಗಮುತ್ಪತಿತಗ್ಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತೀತಿ ॥ ೩ ॥**

೩. ಅಶನಾಪಿಪಾಸೆಗಳನ್ನು ಸೋಮ್ಯನೆ, ನನ್ನಿಂದ ಅರಿತುಕೊ. ಎಲ್ಲಿ ಹೀಗೆ ಪುರುಷನು **ಅಶಿಶಿಷತಿ** (ಉಣ್ಣಲೆಳಸುತ್ತಾನೆ) ಎಂಬ ಹೆಸರಿನವನಾಗುತ್ತಾನೋ ಆಗ ಅಶಿತವನ್ನು ಅಪ್ಪೇ ನಯನ (ತೆಗೆದುಕೊಂಡು ಹೋಗೋಣ)ವನ್ನು ಮಾಡುತ್ತದೆ. ಇಲ್ಲಿ ಗೋನಾಯ,

---

1. ಬಾಹ್ಯದೃಷ್ಟಿಯಿಂದ ನೋಡಿದಾಗ ಸುಷುಪ್ತಿಯಲ್ಲಿ ಪ್ರಾಣವೊಂದೇ ಇರುತ್ತದೆ, ಮಿಕ್ಕ ಕರಣಗಳಿರುವದಿಲ್ಲ, ಪ್ರಾಣವು ಕಾರ್ಯಕರಣಗಳ ವ್ಯಾಪಾರಕ್ಕೆಲ್ಲ ಆಶ್ರಯವಾಗಿರುವಂತೆ ಪರಮಾತ್ಮನು ಇದೆಲ್ಲಕ್ಕೂ ಆಶ್ರಯನೆಂದು ತಿಳಿಸುವದಕ್ಕೆ ಪ್ರಾಣನೆಂಬ ಹೆಸರನ್ನು ಅವನಿಗೆ ಕೊಟ್ಟಿದೆ ಎಂದು ಅಭಿಪ್ರಾಯ.

2. 'ಪ್ರಾಣಬನ್ಧನಂ' ಎಂಬ ಮಾತು ಮೂಲಭಾಷ್ಯದಲ್ಲಿ ಇಲ್ಲಿದ್ದು ಕೈಬಿಟ್ಟುಹೋಗಿರಬೇಕೆಂದು ತೋರುತ್ತದೆ

3. ಮನಸ್ಸು ಪ್ರಾಣಬಂಧನವು ಎಂದರೆ ಜೀವನು ಪರಮಾತ್ಮನಿಗೆ ಕಟ್ಟುಬಿದ್ದಿರುತ್ತಾನೆ, ಪರಮಾತ್ಮನೇ ಜೀವನಿಗೆ ನಿಜವಾದ ಆಶ್ರಯ, ಏಕೆಂದರೆ ಅವನ ಸ್ವರೂಪವಾಗಿರುತ್ತಾನೆ ಎಂದರ್ಥ ಮನಸ್ಸನ್ನು ಜೀವನಿಗೂ ಪ್ರಾಣವನ್ನು ಪರಮಾತ್ಮನಿಗೂ ಉಪಲಕ್ಷಣವಾಗಿ ಹೇಳಿದೆ.

ಅಶ್ವನಾಯ, ಪುರುಷನಾಯ- ಎನ್ನುವದು ಹೇಗೋ ಹಾಗೆ ಆ ಅಪ್ಪನ್ನು ಅಶನಾಯಾ (ಹಸಿವು) ಎನ್ನುವರು. ಅಲ್ಲಿ ಈ ಎದ್ದು ಕೊಂಡಿರುವ ಶುಂಗವನ್ನು, ಸೋಮ್ಯನೆ, ಅರಿತುಕೊ ; ಇದು ಅಮೂಲವಾಗಿರಲಾರದು.

## ಗ್ರಂಥದ ಸಂಬಂಧ

(ಭಾಷ್ಯ)

೪೯೮. ಏವಂ ಸ್ವಪಿತಿನಾಮಪ್ರಸಿದ್ಧಿದ್ವಾರೇಣ ಯಜ್ಜೀವಸ್ಯ ಸತ್ಯಸ್ವರೂಪಂ[1] ಜಗತೋ ಮೂಲಂ ತತ್ ಪುತ್ರಸ್ಯ ದರ್ಶಯಿತ್ವಾ ಆಹ ಅನ್ನಾದಿಕಾರ್ಯಕಾರಣಪರಮ್ಪರಯಾಽಪಿ ಜಗತೋ ಮೂಲಂ ಸದ್ದಿದರ್ಶಯಿಷುಃ ॥

(ಭಾಷ್ಯಾರ್ಥ)

ಹೀಗೆ ಸ್ವಪಿತಿ ಎಂಬ ಹೆಸರಿನ ಪ್ರಸಿದ್ಧಿಯ ಮೂಲಕ ಜೀವನ ಸತ್ಯಸ್ವರೂಪವಾದ ಜಗತ್ತಿನ ಮೂಲವಿದೆಯಷ್ಟೆ, ಅದನ್ನು ಮಗನಿಗೆ ತೋರಿಸಿಕೊಟ್ಟು, ಅನ್ನಾದಿಕಾರ್ಯಕಾರಣಪರಂಪರೆಯಿಂದಲೂ (ಆ) ಜಗತ್ತಿನ ಮೂಲವಾದ ಸತ್ತನ್ನು ತೋರಿಸಿಕೊಡಬೇಕೆಂದು ಹೇಳುತ್ತಿದಾನೆ

## ಅಶಿಶಿಷತಿ ಎಂಬ ಗೌಣನಾಮ

(ಭಾಷ್ಯ)

೪೯೯. ಅಶನಾಪಿಪಾಸೇ ಅಶಿತುಮಿಚ್ಛಾ ಅಶನಾ, ಯಾಲೋಪೇನ[2] । ಪಾತುಮಿಚ್ಛಾ ಪಿಪಾಸಾ । ತೇ ಅಶನಾಪಿಪಾಸೇ । ಅಶನಾಪಿಪಾಸಯೋಃ ಸತತ್ತ್ವಂ ವಿಜಾನೀಹಿ ಇತ್ಯೇತತ್ । ಯತ್ರ ಯಸ್ಮಿನ್ ಕಾಲೇ ಏತನ್ನಾಮ ಪುರುಷೋ ಭವತಿ । ಕಿಂ ತತ್ ? ಅಶಿಶಿಷತಿ ಅಶಿತುಮಿಚ್ಛತೀತಿ । ತದಾ ತಸ್ಯ ಪುರುಷಸ್ಯ ಕಿಂನಿಮಿತ್ತಂ ನಾಮ ಭವತಿ ಇತ್ಯಾಹ । ಯತ ತತ್ ಪುರುಷೇಣಾಶಿತಮನ್ನಂ ಕಠಿನಂ ಪೀತಾ ಆಪೋ ನಯನ್ತೇ ದ್ರವೀಕೃತ್ಯ ರಸಾದಿಭಾವೇನ ವಿಪರಿಣಮಯನ್ತೇ ತದಾ ಭುಕ್ತಮನ್ನಂ ಜೀರ್ಯತಿ । ಅಥ[3] ಭವತ್ಯಸ್ಯ ನಾಮ ಅಶಿಶಿಷತೀತಿ ಗೌಣಮ್ । ಜೀರ್ಣೇ ಹಿ ಅನ್ನೇಽಶಿತುಮಿಚ್ಛತಿ ಸರ್ವೋ ಹಿ ಜನ್ತುಃ ॥

---

1. ಇಲ್ಲಿ 'ಸತ್ಯಸ್ವರೂಪಂ' ಎಂದೇ ಅಚ್ಚಿನ ಪುಸ್ತಕಗಳಲ್ಲಿದೆ , ಅದರಂತೆಯೇ ನಾವೂ ಕನ್ನಡಿಸಿರುತ್ತೇವೆ. ಇದು 'ಸತ್ಸ್ವರೂಪಂ' ಸತ್ತಿನ ಸ್ವರೂಪವಾದ- ಎಂದೇ ಇದ್ದಿರಬಹುದು. ಏಕೆಂದರೆ ಸತ್ತೇ ಜಗತ್ತಿನ ಮೂಲವೆಂದು ಈ ಪ್ರಕರಣವಲ್ಲಿ ಹೇಳಿರುತ್ತದೆ. ಮುಂದೆಯೂ 'ಸದ್ದಿದರ್ಶಯಿಷುಃ' ಎಂದೇ ಇದೆ.

2. 'ಸನ್ ಯಲೋಪೇನ' ಎಂಬ ಪಾಠಕ್ಕಿಂತ ಇದೇ ಮೇಲು.

3. ಚ ಬೇಕಿಲ್ಲ.

(ಭಾಷ್ಯಾರ್ಥ)

ಅಶನಾಪಿಪಾಸೆಗಳನ್ನು—ಊಟಮಾಡುವ ಇಚ್ಛೆಯು ಅಶನೆ. (ಇಲ್ಲಿ) ಯಾ ಲೋಪವಾಗಿ (ಅಶನಾ ಎಂದಾಗಿದೆ)[1] ಕುಡಿಯುವ ಇಚ್ಛೆಯು ಪಿಪಾಸೆ. ಆ (ಅಶನಾಪಿಪಾಸೆಗಳನ್ನು) ಅಶನಾಪಿಪಾಸೆಗಳ ತತ್ತ್ವವನ್ನು ಅರಿತುಕೊ ಎಂದರ್ಥ. (ಯತ್ರ) ಯಾವ ಕಾಲದಲ್ಲಿ ಮನುಷ್ಯನಿಗೆ ಈ ಹೆಸರು ಬರುವದೋ, ಯಾವದದು ? ಅಶಿಶಿಷತಿ ಊಟಮಾಡಲಿಚ್ಛಿಸುತ್ತಾನೆ ಎಂಬ (ಹೆಸರು ಯಾವಾಗ ಬರುವದೋ), ಆಗ ಆ ಮನುಷ್ಯನಿಗೆ ಯಾವ ನಿಮಿತ್ತದಿಂದ (ಈ) ಹೆಸರು ಬರುತ್ತದೆ ? ಎಂದರೆ ಹೇಳುತ್ತಾನೆ ಪುರುಷನು ಉಂಡ (ಅಶಿತಂ) ಗಟ್ಟಿಯಾದ ಅನ್ನವನ್ನು ಅಪ್ಪು ತೆಗೆದುಕೊಂಡು ಹೋಗುತ್ತದೆಯೋ (ನಯನ್ತೇ) ನೀರುಮಾಡಿ ರಸಾದಿರೂಪದಿಂದ ಮಾರ್ಪಡಿಸುತ್ತದೆಯಲ್ಲ, ಆಗ ಉಂಡ ಅನ್ನವು ಅರಗುತ್ತದೆ ಆಗ ಇವನಿಗೆ ಅಶಿಶಿಷತಿ ಎಂಬ ಗೌಣನಾಮವು ಬರುತ್ತದೆ[2] ಅನ್ನವು ಅರಗಿದಮೇಲಲ್ಲವೆ, ಪ್ರತಿಯೊಂದು ಪ್ರಾಣಿಯೂ ಊಟಮಾಡಬಯಸುತ್ತದೆ ?

## ಶರೀರವು ಅನ್ನದ ಕಾರ್ಯ

(ಭಾಷ್ಯ)

೫೦೦ ತತ್ರ ಅಪಾಮಶಿತನೇತೃತ್ವಾತ್ ಅಶನಾಯಾ ಇತಿ ನಾಮ ಪ್ರಸಿದ್ಧಮ್ ಏತಸ್ಮಿನ್ನರ್ಥೇ। ಯಥಾ ಗೋನಾಯಃ। ಗಾಃ[3] ನಯತೀತಿ ಗೋನಾಯ ಇತ್ಯುಚ್ಯತೇ ಗೋಪಾಲಃ। ತಥಾ ಅಶ್ವಾನ್ ನಯತೀತಿ ಅಶ್ವನಾಯೋಽಶ್ವಪಾಲ ಇತ್ಯುಚ್ಯತೇ। ಪುರುಷನಾಯಃ ಪುರುಷಾನ್ನಯತೀತಿ ರಾಜಾ ಸೇನಾಪತಿರ್ವಾ। ಏವಂ ತತ್ ತದಾ ಅಪ ಆಚಕ್ಷತೇ ಲೌಕಿಕಾ ಅಶನಾಯೇತಿ ವಿಸರ್ಜನೀಯ ಲೋಪೇನ। ತತ್ರ ಏವಂ ಸತಿ ಅದ್ಭಿಃ ರಸಾದಿಭಾವೇನ ನೀತೇನ ಅಶಿತೇನ ಅನ್ನೇನ ನಿಷ್ಪಾದಿತಮ್ ಇದಂ ಶರೀರಂ ವಟಕಣಿಕಾಯಾಮಿವ ಶುಙ್ಗೋಽಙ್ಕುರ ಉತ್ಪತಿತಃ ಉದ್ಗತಃ। ತಮಿಮಂ ಶುಙ್ಗಂ ಕಾರ್ಯಂ ಶರೀರಾಖ್ಯಂ ವಟಾದಿಶುಙ್ಗವ ದುತ್ಪತಿತಂ ಹೇ ಸೋಮ್ಯ ವಿಜಾನೀಹಿ। ಕಿಂ ತತ್ರ ವಿಜ್ಞೇಯಮಿತಿ ? ಉಚ್ಯತೇ। ಶೃಣು, ಇದಂ ಶುಙ್ಗವತ್ ಕಾರ್ಯತ್ವಾತ್ ಶರೀರಂ ನಾಮೂಲಂ ಮೂಲರಹಿತಂ ಭವಿಷ್ಯತೀತ್ಯುಕ್ತ ಆಹ ಶ್ವೇತಕೇತುಃ ॥

---

1. 'ಅಶನಾಯಾ' ಎಂಬ ಶಬ್ದವೇ ಪ್ರಕೃತಕ್ಕೆ ಬೇಕಾಗಿದೆ, 'ಅಶನಾ' ಎಂಬುದು ವೈದಿಕಪ್ರಯೋಗ. ಅಶ್ ಧಾತುವಿಗೆ ಸನ್‌ಪ್ರತ್ಯಯವು ಬಂದು 'ಅಶನಾಯಾ' ಎಂಬ (ಕೃದನ್ತ) ಶಬ್ದವಾಗಿದೆ ಎಂದರ್ಥ.

2. ಸ್ವಪಿತಿ ಎಂಬ ಹೆಸರಿನಂತೆ ಈ ಹೆಸರೂ ಅನ್ವರ್ಥವಾಗಿದೆ ಎಂದರ್ಥ.

3. ಮುಂದಿನ ಉದಾಹರಣೆಗಳಂತೆ ಇಲ್ಲಿಯೂ ಗಾಃ ಎಂದು ಬಹುವಚನವೇ ಇರಬೇಕೆಂದು ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಇಲ್ಲಿ ನೀರು ಅಶಿತವನ್ನು ನಯನಮಾಡುವದರಿಂದ (ಉಂಡದ್ದನ್ನು ತೆಗೆದು ಕೊಂಡು ಹೋಗುವದರಿಂದ) ಅಶನಾಯಾ ಎಂಬ ಹೆಸರು ಈ ಅರ್ಥದಲ್ಲಿ ಪ್ರಸಿದ್ಧ ವಾಗಿರುತ್ತದೆ ಹೇಗೆ ಗೋನಾಯ, ಗೋಗಳನ್ನು ಅಟ್ಟಿಕೊಂಡು ಹೋಗುತ್ತಾ ನಾದ್ದರಿಂದ ದನಕಾಯುವವನನ್ನು ಗೋನಾಯ, ಎನ್ನುವರೋ, ಮತ್ತು ಅಶ್ವ ಗಳನ್ನು ಅಟ್ಟಿಕೊಂಡು ಹೋಗುವವನಾದ್ದರಿಂದ ಕುದುರೆಕಾಯುವವನ್ನು ಅಶ್ವ ನಾಯ ಎನ್ನುವರೋ, ಪುರುಷರನ್ನು ನಡೆಯಿಸಿಕೊಂಡು ಹೋಗುತ್ತಾನಾದ್ದರಿಂದ ರಾಜನನ್ನಾಗಲಿ ಸೇನಾಪತಿಯನ್ನಾಗಲಿ ಪುರುಷನಾಯ ಎನ್ನುವರೋ- ಹಾಗೆ (ತತ್=ತದಾ) ಆಗ ನೀರನ್ನು ಜನರು 'ಅಶನಾಯಾ' ಎಂದು ವಿಸರ್ಗಲೋಪವನ್ನು ಮಾಡಿ[1] ಕರೆಯುತ್ತಾರೆ. ಇಲ್ಲಿ (ಇದು) ಹೀಗಿರುವಲ್ಲಿ, ಅಪ್ಪಿನಿಂದ ರಸಾದಿರೂಪ ದಿಂದ ಒಯ್ಯಲ್ಪಟ್ಟ, ಉಂಡ ಅನ್ನದಿಂದ ಉಂಟಾಗಿರುವ ಈ (ಶುಂಗವು) ಶರೀರವು, ಆಲದಬೀಜದಲ್ಲಿ ಶುಙ್ಗವು ಮೊಳಕೆಯು ಹೇಗೋ ಹಾಗೆ, ಮೇಲಕ್ಕೆದ್ದಿದೆ, ಎದ್ದು ಬಂದಿದೆ ಆ ಈ ಶುಂಗವನ್ನು, ಶರೀರವೆಂಬ ಕಾರ್ಯವನ್ನು, ಆಲದ ಮೊಳಕೆಯೇ ಮುಂತಾದದ್ದರಂತೆ ಮೇಲಕ್ಕೆದ್ದಿರುವ (ಇದನ್ನು) ಎಲೈ ಸೋಮ್ಯನೆ, ಅರಿತುಕೊ ಅಲ್ಲಿ ಅರಿತುಕೊಳ್ಳತಕ್ಕದ್ದೇನಿದೆ? ಎಂದರೆ ಹೇಳುತ್ತಾನೆ ಕೇಳು, ಇದು ಶುಂಗ ದಂತೆ ಕಾರ್ಯವಾಗಿರುವದರಿಂದ ಅಮೂಲವಾಗಿ ಮೂಲವಿಲ್ಲದೆ ಇರಲಾರದು[2] ಹೀಗೆನ್ನಲು ಶ್ವೇತಕೇತು ಹೇಳುತ್ತಾನೆ[3]

(ಉಪನಿಷತ್ತು)

**ತಸ್ಯ ಕ್ವ ಮೂಲಗ್ಂ ಸ್ಯಾದನ್ಯತ್ರಾಽನ್ನಾದೇವಮೇವ ಖಲು ಸೋಮ್ಯಾನ್ನೇನ ಶುಙ್ಗೇನಾಪೋ ಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಙ್ಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಙ್ಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ ॥ ೪ ॥**

---

1. 'ಅಪಃ' ಎಂಬುದು ಬಹುವಚನವಾದ್ದರಿಂದ ಅಶನಾಯಾಃ ಎಂದಿರಬೇಕು, ಆದರೂ ವಿಸರ್ಗವನ್ನು ಲೋಪಮಾಡಿ ಅಶನಾಯಾ ಎಂದೇ ಕರೆಯುತ್ತಾರೆ ಎಂದರ್ಥ.

2. ಪರಮಮೂಲವನ್ನು ಹುಡುಕುವದಕ್ಕೆ ಇದನ್ನು ಉಪಯೋಗಿಸಿಕೊ ಎಂದಭಿ ಪ್ರಾಯ. ಸೃಷ್ಟಿಶ್ರುತಿಯು ಸೃಷ್ಟಿಯನ್ನು ಹೇಳುವದಕ್ಕೆ ಬಂದದ್ದಲ್ಲ, ಆತ್ಮತತ್ತ್ವವನ್ನು ಅರಿಯುವದಕ್ಕೇ ಸೃಷ್ಟಿಯನ್ನು ಹೇಳಿದೆ. ಸೂ. ಭಾ. ೧-೪-೧೪ (ಭಾ. ಭಾ. ೩೬೭)ನ್ನು ನೋಡಿರಿ.

3. ಇದನ್ನು ಮುಂದಿನ ವಾಕ್ಯಕ್ಕೆ ಅನ್ವಯಿಸಿಕೊಳ್ಳಬೇಕು.

೪. ಅದಕ್ಕೆ ಅನ್ನವಲ್ಲದೆ ಮತ್ತೆಲ್ಲಿ ಮೂಲವಿದ್ದೀತು ? ಹೀಗೆಯೇ, ಸೋಮ್ಯನೆ, ಅನ್ನವೆಂಬ ಶುಂಗದಿಂದ ಅಪ್ಪೆಂಬ ಮೂಲವನ್ನು ಹುಡುಕು; ಅಪ್ಪೆಂಬ ಶುಂಗದಿಂದ, ಸೋಮ್ಯನೆ, ತೇಜಸ್ಸೆಂಬ ಮೂಲವನ್ನು ಹುಡುಕು. ತೇಜಸ್ಸೆಂಬ ಶುಂಗದಿಂದ, ಸೋಮ್ಯನೆ, ಸತ್ತೆಂಬ ಮೂಲವನ್ನು ಹುಡುಕು. ಸೋಮ್ಯನೆ, ಈ ಎಲ್ಲಾ ಪ್ರಜೆಗಳೂ ಸನ್ಮೂಲವಾದವು, ಸದಾಯತನಗಳು, ಸತ್ಪ್ರತಿಷ್ಠೆಗಳು.

## ಅನ್ನಾದಿಪರಂಪರೆಯಿಂದ ಸತ್ತನ್ನು ಕಂಡುಕೊಳ್ಳುವದು

(ಭಾಷ್ಯ)

೫೦೧ ಯದ್ಯೇವಂ ಸಮೂಲಮಿದಂ ಶರೀರಂ ವಟಾದಿಶುಙ್ಗವತ್ ತಸ್ಯಾಸ್ಯ ಶರೀರಸ್ಯ ಕ್ವ ಮೂಲಂ ಸ್ಯಾತ್ ಭವೇತ್ ? ಇತ್ಯೇವಂ ಪೃಷ್ಟ ಆಹ ಪಿತಾ । ತಸ್ಯ ಕ್ವ ಮೂಲಂ ಸ್ಯಾದನ್ಯತ್ರಾನ್ನಾತ್ ? ಅನ್ನಂ ಮೂಲಮ್ ಇತ್ಯಭಿಪ್ರಾಯಃ । ಕಥಮ್ ? ಅಶಿತಂ ಹಿ ಅನ್ನಮ್ ಅದ್ಭಿರ್ದ್ರವೀಕೃತಂ ಜಾಠರೇಣ ಅಗ್ನಿನಾ ಪಚ್ಯಮಾನಂ ರಸಭಾವೇನ ಪರಿಣಮತೇ । ರಸಾಚ್ಛೋಣಿತಂ ಶೋಣಿತಾನ್ಮಾಂಸಂ ಮಾಂಸಾನ್ಮೇದಃ, ಮೇದಸೋಽಸ್ಥೀನಿ, ಅಸ್ಥಿಭ್ಯೋ ಮಜ್ಜಾ, ಮಜ್ಜಾಯಾಃ ಶುಕ್ರಮ್ । ತಥಾ ಯೋಷಿದ್ಭುಕ್ತಂ ಚಾನ್ನಂ ರಸಾದಿಕ್ರಮೇಣೈವ ಪರಿಣತಂ ಶೋಣಿತಂ[1] ಭವತಿ । ತಾಭ್ಯಾಂ ಶುಕ್ರಶೋಣಿತಾಭ್ಯಾಮ್ ಅನ್ನಕಾರ್ಯಾಭ್ಯಾಂ ಸಂಯುಕ್ತಾಭ್ಯಾಮ್ ಅನ್ನೇನ ಏವಂ ಪ್ರತ್ಯಹಂ ಭುಜ್ಯಮಾನೇನ ಆಪೂರ್ಯಮಾಣಾಭ್ಯಾಂ ಕುಡ್ಯಮಿವ ಮೃತ್ಪಿಣ್ಡೈಃ ಪ್ರತ್ಯಹಮುಪಚೀಯಮಾನೋಽನ್ನಮೂಲೋ ದೇಹಶುಙ್ಗಃ ಪರಿನಿಷ್ಪನ್ನ ಇತ್ಯರ್ಥಃ । ಯತ್ತು ದೇಹಶುಙ್ಗಸ್ಯ ಮೂಲಮ್ ಅನ್ನಂ ನಿರ್ದಿಷ್ಟಮ್, ತದಪಿ ದೇಹವತ್ ವಿನಾಶೋತ್ಪತ್ತಿಮತ್ತ್ವಾತ್ ಕಸ್ಮಾಚ್ಚಿನ್ಮೂಲಾದುತ್ಪತಿತಂ ಶುಙ್ಗ ಏವೇತಿ ಕೃತ್ವಾ ಆಹ । ಯಥಾ ದೇಹಶುಙ್ಗೋಽನ್ನಮೂಲಃ, ಏವಮೇವ ಖಲು ಸೋಮ್ಯ, ಅನ್ನೇನ ಶುಙ್ಗೇನ ಕಾರ್ಯಭೂತೇನ ಅಪೋ ಮೂಲಮ್ ಅನ್ನಸ್ಯ ಶುಙ್ಗಸ್ಯ ಅನ್ವಿಚ್ಛ ಪ್ರತಿಪದ್ಯಸ್ವ । ಅಪಾಮಪಿ ವಿನಾಶೋತ್ಪತ್ತಿಮತ್ತ್ವಾಚ್ಛುಙ್ಗತ್ವಮೇವೇತಿ ಅದ್ಭಿಃ ಸೋಮ್ಯ ಶುಙ್ಗೇನ ಕಾರ್ಯೇಣ ಕಾರಣಂ ತೇಜೋಮೂಲಮನ್ವಿಚ್ಛ । ತೇಜಸೋಽಪಿ ವಿನಾಶೋತ್ಪತ್ತಿಮತ್ತ್ವಾತ್ ಶುಙ್ಗತ್ವಮಿತಿ ತೇಜಸಾ ಸೋಮ್ಯ ಶುಙ್ಗೇನ

1 'ಶೋಣಿತಂ' ಎಂಬ ಪಾಠವನ್ನೇ ಇಟ್ಟುಕೊಂಡಿದೆ.

ಸನ್ಮೂಲಮ್ ಏಕಮೇವಾದ್ವಿತೀಯಂ ಪರಮಾರ್ಥಸತ್ಯಮ್। ಯಸ್ಮಿನ್ ಸರ್ವ ಮಿದಂ ವಾಚಾರಮ್ಭಣಂ ವಿಕಾರೋ ನಾಮಧೇಯಮ್ ಅನೃತಂ ರಜ್ಜ್ವಾಮಿವ ಸರ್ಪಾದಿವಿಕಲ್ಪಜಾತಮ್ ಅಧ್ಯಸ್ತಮವಿದ್ಯಯಾ ತದಸ್ಯ ಜಗತೋ ಮೂಲಮ್[1]। ಅತಃ ಸನ್ಮೂಲಾಃ ಸತ್ಕಾರಣಾ ಹೇ ಸೋಮ್ಯ ಇಮಾಃ ಸ್ಥಾವರಜಙ್ಗಮಲಕ್ಷಣಾಃ ಸರ್ವಾಃ ಪ್ರಜಾಃ। ನ ಕೇವಲಂ ಸನ್ಮೂಲಾ ಏವ, ಇದಾನೀಮಪಿ ಸ್ಥಿತಿಕಾಲೇ ಸದಾಯತನಾಃ ಸದಾಶ್ರಯಾ ಏವ। ನ ಹಿ ಮೃದಮನಾಶ್ರಿತ್ಯ ಘಟಾದೇಃ ಸತ್ತ್ವಂ ಸ್ಥಿತಿರ್ವಾ ಅಸ್ತಿ। ಅತೋ ಮೃದ್ವತ್ ಸನ್ಮೂಲತ್ವಾತ್ ಪ್ರಜಾನಾಂ ಸದಾಯತನಂ ಯಾಸಾಂ ತಾಃ ಸದಾಯತನಾಃ ಪ್ರಜಾಃ। ಅನ್ತೇ ಚ ಸತ್ಪ್ರತಿಷ್ಠಾಃ ಸದೇವ ಪ್ರತಿಷ್ಠಾ ಲಯಃ ಸಮಾಪ್ತಿರವಸಾನಂ ಪರಿಶೇಷೋ ಯಾಸಾಂ ತಾಃ ಸತ್ಪ್ರತಿಷ್ಠಾಃ॥

(ಭಾಷ್ಯಾರ್ಥ)

'ಈ ಶರೀರವು ಆಲವೇ ಮುಂತಾದವುಗಳ ಮೊಳಕೆಯಂತೆ ಸಮೂಲವಾಗಿದ್ದರೆ, ಈ ಶರೀರದ ಮೂಲವು ಎಲ್ಲಿದ್ದೀತು ?' ಎಂದು ಕೇಳಲು ತಂದೆ ಹೇಳುತ್ತಿದ್ದಾನೆ. ಅದರ ಮೂಲವು ಅನ್ನಕ್ಕಿಂತ ಮತ್ತೆಲ್ಲಿದ್ದೀತು ? ಅನ್ನವೇ ಮೂಲವು ಎಂದು ಅಭಿಪ್ರಾಯ. ಹೇಗೆಂದರೆ, ಉಂಡ ಅನ್ನವು ನೀರಿನಿಂದ ದ್ರವವಾಗಿ ಮಾಡಲ್ಪಟ್ಟು ಜಾಠರಾಗ್ನಿಯಿಂದ ಪಕ್ವವಾಗಿ ರಸರೂಪವಾಗಿ ಪರಿಣಮಿಸುತ್ತದೆಯಷ್ಟೆ ? ರಸದಿಂದ ಶೋಣಿತವೂ ಶೋಣಿತದಿಂದ ಮಾಂಸವೂ ಮಾಂಸದಿಂದ ಮೇದಸ್ಸೂ, ಮೇದಸ್ಸಿನಿಂದ ಎಲುಬುಗಳೂ ಎಲುಬುಗಳಿಂದ ಮಜ್ಜೆಯೂ ಮಜ್ಜೆಯಿಂದ ಶುಕ್ರವೂ ಆಗುತ್ತದೆ[2]. ಹೀಗೆಯೇ ಸ್ತ್ರೀಯು ಉಂಡ ಅನ್ನವು ರಸಾದಿಕ್ರಮದಿಂದಲೇ ಹೀಗೆ ಪರಿಣತವಾಗಿ ಶೋಣಿತವಾಗುತ್ತದೆ. ಆ ಅನ್ನಕಾರ್ಯವಾದ ಶುಕ್ರಶೋಣಿತಗಳು ಒಂದುಗೂಡಿ ಹೇಗೆ ಪ್ರತಿದಿನವೂ ಉಣ್ಣುವ ಅನ್ನದಿಂದ ಗೋಡೆಯು ಮಣ್ಣಿನ ಮುದ್ದೆಗಳಿಂದ ಭರ್ತಿಯಾಗುವದೋ ಹಾಗೆ ಭರ್ತಿಯಾಗುತ್ತಾ ಪ್ರತಿದಿನವೂ ಬೆಳೆಯುತ್ತಿರುವ ಅನ್ನಮೂಲವುಳ್ಳ ದೇಹಶುಂಗವು ಉಂಟಾಗಿರುತ್ತದೆ ಎಂದರ್ಥ.

ಆದರೆ (ಈ) ದೇಹಶುಂಗಕ್ಕೆ ಮೂಲವೆಂದು ತಿಳಿಸಿದ ಅನ್ನವಿದೆಯಲ್ಲ, ಅದೂ ದೇಹದಂತೆ ಹುಟ್ಟುಹೊಂದುಗಳುಳ್ಳದ್ದಾದ್ದರಿಂದ ಯಾವದೋ ಒಂದು ಮೂಲದಿಂದ ಹುಟ್ಟಿದ ಶುಂಗವೇ ಎಂದುಕೊಂಡು ಹೇಳುತ್ತಿದ್ದಾನೆ . ಹೇಗೆ ದೇಹಶುಂಗಕ್ಕೆ ಅನ್ನವು ಮೂಲವೋ ಹಾಗೆಯೇ ಸೋಮ್ಯನೆ, ಅನ್ನವೆಂಬ ಶುಂಗದಿಂದ ಕಾರ್ಯವಾಗಿರುವ (ಅನ್ನದಿಂದ) ಅಪ್ಪೆಂಬ ಮೂಲವನ್ನು ಹುಡುಕಿ, ಅರಿತುಕೊ.

---

1. ಇಲ್ಲಿಯೋ ಅಥವಾ 'ಪರಮಾರ್ಥತತ್ತ್ವಮ್' ಎಂಬ ಮಾತಿನ ಮುಂದೆಯೋ 'ಅನ್ವಿಚ್ಛ' ಎಂಬ ಮಾತು ಭಾಷ್ಯದಲ್ಲಿದ್ದು ಕೈಬಿಟ್ಟುಹೋಗಿದೆ.

2. ಇದೇ ರಸಾದಿಭಾವಕ್ರಮ.

(೫) ಅಪ್ಪುಕೂಡ ಹುಟ್ಟುಹೊಂದುಗಳುಳ್ಳದ್ದಾದ್ದರಿಂದ ಶುಂಗವೇ ಆಗಿರುವದರಿಂದ ಸೋಮ್ಯನೆ, ಅಪ್ಪೆಂಬ ಶುಂಗದಿಂದ ಕಾರ್ಯದಿಂದ ಕಾರಣವಾದ ತೇಜಸ್ಸೆಂಬ ಮೂಲವನ್ನು ಹುಡುಕು. ತೇಜಸ್ಸೂ ಹುಟ್ಟುಹೊಂದುಗಳುಳ್ಳದ್ದಾದ್ದರಿಂದ ಶುಂಗವೇ ಆಗಿರುವದಾದ್ದರಿಂದ ಸೋಮ್ಯನೆ, ತೇಜಸ್ಸೆಂಬ ಶುಂಗದಿಂದ **ಸತ್ತೆಂಬ ಮೂಲವನ್ನು ತನಗೆರಡನೆಯದಿಲ್ಲದ ಪರಮಾರ್ಥಸತ್ಯವನ್ನು- ಯಾವದರಲ್ಲಿ ಈ ಎಲ್ಲ ವಾಚಾರಂಭಣವಾದ ವಿಕಾರವು, ನಾಮಧೇಯವಾಗಿರುವ ಅನೃತವು ಹಗ್ಗದಲ್ಲಿ ಹಾವಿನಂತೆ ಅವಿದ್ಯೆಯಿಂದ ಅಧ್ಯಸ್ತವಾಗಿರುವದೋ[1] ಆ ಈ ಜಗತ್ತಿನ ಮೂಲವನ್ನು-** (ಹುಡುಕಿಕೊ).

ಆದ್ದರಿಂದ ಸೋಮ್ಯನೆ, ಈ ಸ್ಥಾವರಜಂಗಮರೂಪವಾದ ಪ್ರಜೆಗಳೆಲ್ಲ ಸನ್ಮೂಲಗಳು, ಸತ್ತೆಂಬ ಕಾರಣವುಳ್ಳವು. ಬರಿಯ ಸನ್ಮೂಲಗಳೇ ಅಲ್ಲ, ಸ್ಥಿತಿಕಾಲದಲ್ಲಿ ಈಗಲೂ ಸದಾಯತನಗಳು, ಸತ್ತನ್ನಾಶ್ರಯಿಸಿಕೊಂಡೇ ಇವೆ ಮಣ್ಣನ್ನು ಆಶ್ರಯಿಸಿಕೊಳ್ಳದೆ ಗಡಿಗೆಯೇ ಮುಂತಾದದ್ದಕ್ಕೆ ಇರವಾಗಲಿ ನಿಂತಿರುವಿಕೆಯಾಗಲಿ ಇಲ್ಲವಷ್ಟೆ? ಆದ್ದರಿಂದ ಮಣ್ಣಿನಂತೆ ಪ್ರಜೆಗಳಿಗೆ ಸತ್ತೇ ಮೂಲವಾಗಿರುವದರಿಂದ ಆ ಪ್ರಜೆಗಳು ಸದಾಯತನಗಳು, ಸತ್ತೇ ಆಯತನವಾಗಿ ಉಳ್ಳವುಗಳು. ಮತ್ತು ಕೊನೆಯಲ್ಲಿ ಸತ್ಪ್ರತಿಷ್ಠಗಳು, ಸತ್ತೇ ಪ್ರತಿಷ್ಠೆ ಎಂದರೆ ಲಯವು, ಸಮಾಪ್ತಿ, ಕೊನೆ, ಉಳಿಮೆಯುಳ್ಳವು ಯಾವವೋ ಅವು ಸತ್ಪ್ರತಿಷ್ಠಗಳು.

(ಉಪನಿಷತ್ತು)

**ಅಥ ಯತ್ರೈತತ್ ಪುರುಷಃ ಪಿಪಾಸತಿ ನಾಮ ತೇಜ ಏವ ತತ್ಪೀತಂ ನಯತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವಂ ತತ್ತೇಜ ಆಚಷ್ಟ ಉದನ್ಯೇತಿ ತತ್ರೈತದೇವ ಶುಙ್ಗಮುತ್ಪತಿತಗ್ಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತೀತಿ || ೫ ||**

೫. ಎಲ್ಲಿ ಹೀಗೆ ಪುರುಷನು ಪಿಪಾಸತಿ (ನೀರುಕುಡಿಯಲೆಳಸುತ್ತಾನೆ) ಎಂಬ ಹೆಸರಿನವನಾಗುತ್ತಾನೋ ಆಗ ತೇಜಸ್ಸೇ ಪೀತವನ್ನು ನಯನಮಾಡುತ್ತದೆ. ಇಲ್ಲಿ ಗೋನಾಯ್ಯ, ಅಶ್ವನಾಯ, ಪುರುಷನಾಯ- ಎನ್ನುವದು ಹೇಗೋ ಹಾಗೆ ಆ ತೇಜಸ್ಸನ್ನು ಉದನ್ಯಾ (ಬಾಯಾರಿಕೆ) ಎನ್ನುವರು. ಅಲ್ಲಿ ಎದ್ದುಕೊಂಡಿರುವ ಇದೇ ಶುಂಗವನ್ನು ಸೋಮ್ಯನೆ, ಅರಿತುಕೊ, ಇದು ಅಮೂಲವಾಗಿರಲಾರದು.

---

1. ಶ್ರುತ್ಯುಕ್ತಕಾರ್ಯಕಾರಣಭಾವವೆಂದರ, ಹೀಗೆ ಅಧ್ಯಾಸವಾಗಿರುವದೇ, ಆದ್ದರಿಂದಲೇ ಕಾರ್ಯವು ವಾಚಾರಂಭಣವೆಂದದ್ದು.

## ಪಿಪಾಸತಿ ಎಂಬ ಗೌಣನಾಮ

(ಭಾಷ್ಯ)

೫೦೨. ಅಥ ಇದಾನೀಮ್ ಅಪ್ಶುಙ್ಗದ್ವಾರೇಣ ಸತೋ ಮೂಲಸ್ಯಾನುಗಮಃ ಕಾರ್ಯ ಇತ್ಯಾಹ। ಯತ್ರ ಯಸ್ಮಿನ್ ಕಾಲೇ ಏತನ್ನಾಮ ಪಿಪಾಸತಿ ಪಾತುಮಿಚ್ಛತೀತಿ ಪುರುಷೋ ಭವತಿ। ಅಶಿಶಿಷತಿ ಇತಿವತ್ ಇದಮಪಿ ಗೌಣಮೇವ ನಾಮ ಭವತಿ। ದ್ರವೀಕೃತಸ್ಯ ಅಶಿತಸ್ಯ ಅನ್ನಸ್ಯ ನೇತ್ರ್ಯ ಆಪೋಽನ್ನಶುಙ್ಗಂ ದೇಹಂ ಕ್ಲೇದಯನ್ತ್ಯಃ ಶಿಥಿಲೀಕುರ್ಯುರಬ್ಬಾಹುಲ್ಯಾದ್ ಯದಿ ತೇಜಸಾ ನ ಶೋಷ್ಯನ್ತೇ। ನಿತರಾಂ ಚ ತೇಜಸಾ ಶೋಷ್ಯಮಾಣಾಸ್ವಪ್ಸು ದೇಹಭಾವೇನ ಪರಿಣಮಮಾನಾಸು ಪಾತುಮಿಚ್ಛಾ ಪುರುಷಸ್ಯ ಜಾಯತೇ। ತದಾ ಪುರುಷಃ ಪಿಪಾಸತಿ ನಾಮ। ತದೇತದಾಹ। ತೇಜ ಏವ ತತ್ ತದಾ ಪೀತಮ್ ಅಬಾದಿ ಶೋಷಯತ್ ದೇಹಗತಲೋಹಿತಪ್ರಾಣಭಾವೇನ ನಯತೇ ಪರಿಣಮಯತಿ। ತದ್ಯಥಾ ಗೋನಾಯ ಇತ್ಯಾದಿ ಸಮಾನಮ್। ಏವಂ ತತ್ತೇಜ ಆಚಷ್ಟೇ ಲೋಕಃ ಉದನ್ಯಾ ಇತಿ ಉದಕಂ ನಯತೀತ್ಯುದನ್ಯಮ್। ಉದನ್ಯಾ ಇತಿ ಚ್ಛಾನ್ದಸಂ ತತ್ರಾಪಿ ಪೂರ್ವವತ್। ಅಪಾಮಪಿ ಏತದೇವ ಶರೀರಾಖ್ಯಂ ಶುಙ್ಗಂ ನಾನ್ಯದ್ ಇತ್ಯೇವಮಾದಿ ಸಮಾನಮನ್ಯತ್॥

(ಭಾಷ್ಯಾರ್ಥ)

ಇನ್ನು ಈಗ ಅಪ್ಪೆಂಬ ಶುಂಗದ ಮೂಲಕ ಸತ್ತೆಂಬ ಮೂಲವನ್ನು ಅನುಸರಿಸಿ (ಕಂಡುಹಿಡಿಯುವದನ್ನು) ಮಾಡಬೇಕು ಎಂದು ಹೇಳುತ್ತಿದಾನೆ.

ಎಲ್ಲಿ, ಯಾವ ಕಾಲದಲ್ಲಿ ಪುರುಷನು ಪಿಪಾಸತಿ (ಕುಡಿಯಲೆಳಸುತ್ತಾನೆ) ಎಂಬೀ ಹೆಸರುಳ್ಳವನಾಗುತ್ತಾನೋ—ಅಶಿಶಿಷತಿ ಎಂಬಂತೆ ಇದೂ ಗೌಣವೇ ಆದ ನಾಮವಾಗಿರುತ್ತದೆ. ಉಂಡ (ಬಳಿಕ) ದ್ರವವಾಗಿ ಮಾಡಲ್ಪಟ್ಟ ಅನ್ನವನ್ನು ಒಯ್ಯುವ ಅಪ್ಪು ತೇಜಸ್ಸಿನಿಂದ ಒಣಗಿಸಲ್ಪಡದೆ ಇದ್ದರೆ, ಅಪ್ಪು ಹೆಚ್ಚಾಗಿರುವದರಿಂದ ಅನ್ನಶುಂಗವಾದ ದೇಹವನ್ನು ನೆನೆಯಿಸಿ ಸಡಿಲುಮಾಡಿಬಿಟ್ಟೀತು. ತೇಜಸ್ಸಿನಿಂದ ಅಪ್ಪು ತೀರ ಒಣಗಿಸಲ್ಪಟ್ಟು ದೇಹವಾಗಿ ಪರಿಣಾಮವಾಗಲು ಮನುಷ್ಯನಿಗೆ ನೀರು ಕುಡಿಯಬೇಕೆಂಬ ಇಚ್ಛೆಯಾಗುತ್ತದೆ. ಆಗ ಮನುಷ್ಯನು ಪಿಪಾಸತಿ (ಕುಡಿಯಲೆಳಸುತ್ತಾನೆ) ಎನ್ನಿಸಿಕೊಳ್ಳುತ್ತಾನೆ. ಆ ಇದನ್ನೇ ಹೇಳುತ್ತಿದಾನೆ— (ತತ್=ತದಾ) ಆಗ ತೇಜಸ್ಸೇ ಪೀತವನ್ನು (ಕುಡಿದ) ನೀರು ಮುಂತಾದದ್ದನ್ನು ಒಣಗಿಸಿ ದೇಹಗತವಾದ ರಕ್ತಪ್ರಾಣಗಳ ರೂಪಕ್ಕೆ (ನಯತೇ=ಪರಿಣಮಯತಿ) ಮಾರ್ಪಡಿಸುತ್ತದೆ.

'ತದ್ಯಥಾ ಗೋನಾಯಃ' (ಹೇಗೆ ಗೋನಾಯನು) ಎಂದು ಮುಂತಾಗಿರುವ ಗ್ರಂಥವು ಹಿಂದಿನದಕ್ಕೆ ಸಮಾನವಾಗಿರುತ್ತದೆ. ಹೀಗೆಯೇ ಆ ತೇಜಸನ್ನು ಉದನ್ಯಾ (ನೀರಡಿಕೆ) ಎಂದು ಜನರು ಕರೆಯುವರು ಉದಕಂ ನಯತೀತಿ (ನೀರನ್ನು ಒಯ್ಯುತ್ತದೆಯಾದ್ದರಿಂದ) ಉದನ್ಯವು (ಉದನ್ಯವನ್ನು) ಉದನ್ಯಾ ಎಂದಿರುವದು ಇಲ್ಲಿಯೂ ಹಿಂದಿನಂತೆ ವೈದಿಕಪ್ರಯೋಗವು

ಅಪ್ಪಿಗೂ ಇದೇ ಶರೀರವೇ ಶುಂಗವು ಬೇರೆಯದಲ್ಲ- ಎಂದುಮುಂತಾಗಿರುವ ಗ್ರಂಥವು (ಹಿಂದಿನದಕ್ಕೆ) ಸಮಾನವಾಗಿರುತ್ತದೆ.

(ಉಪನಿಷತ್ತು)

**ತಸ್ಯ ಕ್ವ ಮೂಲಗ್ಂ ಸ್ಯಾದನ್ಯತ್ರಾದ್ಭ್ಯೋಽದ್ಭಿಃ ಸೋಮ್ಯ ಶುಙ್ಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಙ್ಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಯಥಾ ನು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತದುಕ್ತಂ ಪುರಸ್ತಾದೇವ ಭವತ್ಯಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮ್ ॥ ೬ ॥**

೬. ಅದಕ್ಕೆ ಅಪ್ಪಲ್ಲದೆ ಮತ್ತೆಲ್ಲಿ ಮೂಲವಿದ್ದೀತು? ಅಪ್ಪೆಂಬ ಶುಂಗದಿಂದ, ಸೋಮ್ಯನೆ, ತೇಜಸ್ಸೆಂಬ ಮೂಲವನ್ನು ಹುಡುಕು; ತೇಜಸ್ಸೆಂಬ ಶುಂಗದಿಂದ, ಸೋಮ್ಯನೆ, ಸನ್ಮೂಲವನ್ನು ಹುಡುಕು. ಸೋಮ್ಯನೆ, ಈ ಎಲ್ಲಾ ಪ್ರಜೆಗಳೂ ಸನ್ಮೂಲವಾದವು, ಸದಾಯತನಗಳು, ಸತ್ಪ್ರತಿಷ್ಠಗಳು. ಸೋಮ್ಯನೆ, ಹೇಗೆ ಈ ಮೂರು ದೇವತೆಗಳು ಪುರುಷನನ್ನು ಸೇರಿ ಒಂದೊಂದೂ ತ್ರಿವೃತತ್ರಿವೃತವಾಗುವದೋ ಅದನ್ನು ಮುಂಚೆಯೇ ಹೇಳಿದ್ದೇ ಆಗಿದೆ. ಸೋಮ್ಯನೆ, ಈ ಹೊರಟು ಹೋಗುವ ಪುರುಷನ ವಾಕ್ಕು ಮನಸ್ಸಿನಲ್ಲಿ ಸೇರುತ್ತದೆ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರದೇವತೆಯಲ್ಲಿ.

## ಅಪ್ಪು ಮೊದಲಾದ ಪರಂಪರೆಯಿಂದ ಸತ್ತನ್ನು ಕಂಡುಕೊಳ್ಳುವದು

(ಭಾಷ್ಯ)

೫೦೩ ಸಾಮರ್ಥ್ಯಾತ್ ತೇಜಸೋಽಸ್ಯೈತಸ್ಯೈವ ಶರೀರಾಖ್ಯಂ ಶುಙ್ಗಮ್ । ಅತೋಽಪ್ಶುಙ್ಗೇನ ದೇಹೇನ ಆಪೋ ಮೂಲಂ ಗಮ್ಯತೇ । ಅದ್ಭಿಃ ಶುಙ್ಗೇನ

ತೇಜೋಮೂಲಂ ಗಮ್ಯತೇ। ತೇಜಸಾ ಶುಙ್ಗೇನ ಸನ್ಮೂಲಂ ಗಮ್ಯತೇ ಪೂರ್ವವತ್। ಏವಂ ಹಿ ತೇಜೋಬನ್ನಮಯಸ್ಯ ದೇಹಶುಙ್ಗಸ್ಯ ವಾಚಾರಮ್ಭಣಮಾತ್ರಸ್ಯಾನ್ನಾದಿಪರಮ್ಪರಯಾ ಪರಮಾರ್ಥಸತ್ಯಂ ಸನ್ಮೂಲಮ್। ಅಭಯಮ್ ಅಸಂತ್ರಾಸಂ ನಿರಾಯಾಸಂ ಸನ್ಮೂಲಮ್ ಅಸ್ಮಿಚ್ಛ ಇತಿ ಪುತ್ರಂ ಗಮಯಿತ್ವಾ ಅಶಿಶಿಷತಿ ಪಿಪಾಸತೀತಿ ನಾಮಪ್ರಸಿದ್ಧಿದ್ವಾರೇಣ, ಯದನ್ಯದ್ ಇಹಾಸ್ಮಿನ್ ಪ್ರಕರಣೇ ತೇಜೋಬನ್ನಾನಾಂ ಪುರುಷೇಣೋಪಯುಜ್ಯಮಾನಾನಾಂ ಕಾರ್ಯಕರಣಸಂಘಾತಸ್ಯ ದೇಹಶುಙ್ಗಸ್ಯ ಸ್ವಜಾತ್ಯಸಾಂಕರ್ಯೇಣ ಉಪಚಯಕರತ್ವಂ ವಕ್ತವ್ಯಂ ಪ್ರಾಪ್ತಮ್. ತದಿಹೋಕ್ತಮೇವ ದ್ರಷ್ಟವ್ಯಮ್ ಇತಿ ಪೂರ್ವೋಕ್ತಂ ವ್ಯಪದಿಶತಿ। ಯಥಾ ನು ಖಲು (ಸೋಮ್ಯ) ಯೇನ ಪ್ರಕಾರೇಣ ಇಮಾಸ್ತೇಜೋಽಬನ್ನಾಖ್ಯಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತದುಕ್ತಂ ಪುರಸ್ತಾದೇವ ಭವತಿ "ಅನ್ನಮಶಿತಂ ತ್ರೇಧಾ ವಿಧೀಯತೇ" (೬-೫-೧) ಇತ್ಯಾದಿ। ತತ್ರೈವೋಕ್ತಮ್ ಅನ್ನಾದೀನಾಮಶಿತಾನಾಂ ಯೇ ಮಧ್ಯಮಾ ಧಾತವಸ್ತೇ ಸಾಪ್ತಧಾತುಕಂ ಶರೀರಮ್ ಉಪಚಿನ್ವನ್ತೀತಿ ಉಕ್ತಮ್ ಮಾಂಸಂ ಭವತಿ ಲೋಹಿತಂ ಭವತಿ ಮಜ್ಜಾ ಭವತೀತಿ[1]। ಯೇ ತ್ವಣಿಷ್ಠಾ ಧಾತವೋ ಮನಃ ಪ್ರಾಣಂ ವಾಚಂ ದೇಹಸ್ಯಾನ್ತಃಕರಣಸಂಘಾತಮುಪಚಿನ್ವನ್ತೀತಿ ಇತಿ ಚೋಕ್ತಂ ತನ್ಮನೋ ಭವತಿ ಸ ಪ್ರಾಣೋ ಭವತಿ ಸಾ ವಾಗ್ಭವತೀತಿ ॥

(ಭಾಷ್ಯಾರ್ಥ)

ಅರ್ಥವಶದಿಂದ ಈ ಶರೀರವೆಂಬುದೇ ತೇಜಸ್ಸಿಗೂ ಶುಂಗವೆಂದು (ತಿಳಿಯಬೇಕು)[2] ಆದ್ದರಿಂದ[3] ಅಪ್ಪಿನ ಶುಂಗವಾದ ದೇಹದಿಂದ ಅಪ್ಪೆಂಬ ಮೂಲವು ತಿಳಿಯಬರುತ್ತದೆ, ಅಪ್ಪೆಂಬ ಶುಂಗದಿಂದ ತೇಜಸ್ಸೆಂಬ ಮೂಲವು ತಿಳಿಯಬರುತ್ತದೆ, ತೇಜಸ್ಸೆಂಬ ಶುಂಗದಿಂದ ಮುನ್ನಿನಂತೆಯೇ[4] ಸತ್ತೆಂಬ ಮೂಲವು ತಿಳಿಯಬರುತ್ತದೆ.

---

1. ಅಸ್ಥಿ ಭವತಿ- ಎಂಬುದು ಹೆಚ್ಚಾಗಿದೆಯಾದ್ದರಿಂದ ಬಿಟ್ಟುಬಿಟ್ಟಿವೆ.

2. ಈ ವಾಕ್ಯವು 'ಗಮ್ಯತೇ ಪೂರ್ವವತ್' ಆದಮೇಲೆ ಇದ್ದರೆ ಚೆನ್ನಾಗಿರುತ್ತಿತ್ತು ; ಏಕೆಂದರೆ ಅನ್ನದಿಂದಲೂ ಅಪ್ಪಿನಿಂದಲೂ ಹುಟ್ಟಿದ ಕಾರ್ಯವಾಗಿರುವಂತೆ ತೇಜಸ್ಸಿನಿಂದಲೂ ದೇಹವು ಹುಟ್ಟಿದೆ ಎಂಬುದನ್ನು ಈ ಎರಡು ವಿವರಣೆಗಳಿಂದಲೇ ಊಹಿಸಿ ತಿಳಿದುಕೊಳ್ಳಬಹುದು -ಎಂಬರ್ಥವು ಆಗ ಸ್ಫುಟತರವಾಗುತ್ತದೆ

3. ಅಪ್ಪಿಗೂ ಇದೇ ಶುಂಗವಾದ್ದರಿಂದ ಎಂದರ್ಥ. ಹಿಂದಿನ ಕಂಡಿಕೆಯ ಕೊನೆಯ ವಾಕ್ಯಕ್ಕೆ ಇದರ ಸಂಬಂಧ.

4. ಹಿಂದಿನ ಕಂಡಿಕೆಯ ಭಾಷ್ಯದಲ್ಲಿ (ಛಾ. ಭಾ. ೫೦೦) ಹೇಳಿರುವಂತೆಯೇ ವಿಶೇಷಣಗಳನ್ನು ತಿಳಿಯಬೇಕೆಂದು ಭಾವ.

ಹೀಗೆ ತೇಜೋಬನ್ನಮಯವಾಗಿರುವ ವಾಚಾರಂಭಣಮಾತ್ರವಾಗಿರುವ ದೇಹ ಶುಂಗಕ್ಕೆ ಅನ್ನಾದಿಪರಂಪರೆಯಿಂದ ಪರಮಾರ್ಥಸತ್ಯವಾದ ಸತ್ತೇ ಮೂಲವಷ್ಟೆ? ಅಂಜಿಕೆಯಿಲ್ಲದ್ದೂ ಅಂಜಿಕೆಗೆ ಕಾರಣವಿಲ್ಲದ್ದೂ ನಿರಾಯಾಸವೂ ಆಗಿರುವ ಸನ್ಮೂಲ ವನ್ನು ಹುಡುಕಿ (ತಿಳಿದು)ಕೊ ಎಂದು ಪುತ್ರನಿಗೆ ಅಶಿಶಿಷತಿ ಪಿಪಾಸತಿ- ಎಂಬ ಹೆಸರುಗಳ ಪ್ರಸಿದ್ಧಿಯ ದ್ವಾರದಿಂದ ತಿಳಿಸಿಕೊಟ್ಟು ಈ ಪ್ರಕರಣದಲ್ಲಿ ತೇಜೋಬನ್ನ ಗಳನ್ನು ಮನುಷ್ಯನು ಉಪಯೋಗಿಸಿದಾಗ ಕಾರ್ಯಕರಣಸಂಘಾತವಾದ ದೇಹ ಶುಂಗವನ್ನು ತಮ್ಮತಮ್ಮ ಜಾತಿಯು ಸಂಕರವಾಗದಂತೆ[1] ಬೆಳೆಯಿಸುವವೆಂದು ಇನ್ನು ಬೇರೆ ಯಾವುದನ್ನು ಹೇಳಬೇಕಾಗಿತ್ತೋ ಅದನ್ನು ಇಲ್ಲಿ ಹೇಳಿದಂತೆಯೇ ಇಟ್ಟುಕೊಳ್ಳಬೇಕೆಂದು ಹಿಂದೆ ಹೇಳಿದ್ದನ್ನೇ[2] ತಿಳಿಸುತ್ತಾನೆ: (ಸೋಮ್ಯನೆ), ಹೇಗೆ ಯಾವ ಪ್ರಕಾರದಿಂದ ಈ ತೇಜೋಬನ್ನಗಳೆಂಬ ಮೂರು ದೇವತೆಗಳು ಪುರುಷನನ್ನು ಸೇರಿ ಒಂದೊಂದೂ, ತ್ರಿವೃತತ್ರಿವೃತವಾಗಿ ಆಗುತ್ತವೆಯೋ ಅದನ್ನು ಹಿಂದೆ 'ಉಂಡ ಅನ್ನವು ಮೂರಾಗಿ ಮಾಡಲ್ಪಡುತ್ತದೆ' (೬-೫-೧) ಎಂದು ಮುಂತಾಗಿ ಹೇಳಿದ್ದೇ ಆಗಿದೆ. ಉಂಡ ಅನ್ನವೇ ಮುಂತಾದವುಗಳ ಮಧ್ಯಮ ಧಾತುಗಳಿವೆಯಲ್ಲ, ಅವು ಸಾಪ್ತಧಾತುಕವಾದ ಶರೀರವನ್ನು ಬೆಳೆಯಿಸುತ್ತವೆ ಎಂಬುದನ್ನು 'ಮಾಂಸವಾಗುತ್ತದೆ' (೬-೫-೧), 'ಲೋಹಿತವಾಗುತ್ತದೆ' (೬-೫-೨), 'ಮಜ್ಜೆಯಾಗುತ್ತದೆ' (೬-೫-೩)[3] – ಎಂದು ಹೇಳಿದೆ. ಇನ್ನು ಅಣಿಷ್ಠವಾದ ಧಾತುಗಳಿವೆಯಲ್ಲ (ಅವು) 'ಮನಸ್ಸು' (೬-೫-೧), 'ಪ್ರಾಣ' (೬-೫-೨), 'ವಾಕ್ಕು' (೬-೫-೩) –(ಹೀಗೆ) ದೇಹದೊಳಗಿನ ಕರಣಸಂಘಾತ ವನ್ನು ಬೆಳೆಯಿಸುತ್ತವೆ ಎಂಬುದನ್ನು ಅದು ಮನಸ್ಸಾಗುತ್ತದೆ, ಅದು ಪ್ರಾಣ ವಾಗುತ್ತದೆ, ಅದು ವಾಕ್ಕಾಗುತ್ತದೆ –ಎಂದು ಹೇಳಲಾಗಿದೆ[4].

---

1. ತೇಜೋಬನ್ನಗಳು ತಮ್ಮತಮ್ಮ ಜಾತಿಗೆ ಅನುಗುಣವಾಗಿಯೇ ಶರೀರದಲ್ಲಿ ಕಾರ್ಯ ವನ್ನುಂಟುಮಾಡುವವು.

2. 'ಅನ್ನಮಶಿತಮ್' ಎಂಬಲ್ಲಿ ಹಿಂದೆ ಹೇಳಿರುವದನ್ನೇ ಇಲ್ಲಿಯೂ ಇಟ್ಟುಕೊಳ್ಳ ಬೇಕೆಂದು ಎಂದರ್ಥ.

3. 'ಅಸ್ಥಿ ಭವತಿ' (ಎಲುಬು ಆಗುತ್ತದೆ) ಎಂಬುದು ಮೂಲಭಾಷ್ಯದಲ್ಲಿ ಯಾರೋ ಹೆಚ್ಚಾಗಿ ಸೇರಿಸಿದ್ದು, ಏಕೆಂದರೆ ಅಸ್ಥಿಯು ಮಧ್ಯಮಾಂಶವಲ್ಲ, ಸ್ಥೂಲಾಂಶವೆಂದ ೬-೫-೩ರಲ್ಲಿ ಹೇಳಿದೆ.

4 ಭವತಿ ಎಂಬ ಮಾತು ಉಪನಿಷತ್ತಿನಲ್ಲಿ ಪ್ರತಿಯೊಂದಕ್ಕೂ ಸೇರಿಲ್ಲವಾದರೂ ಸ್ಪಷ್ಟತೆಗಾಗಿ ಭಾಷ್ಯಕಾರರು ಅನುಷಂಗಮಾಡಿಕೊಂಡಿರುತ್ತಾರೆ.

# ಉತ್ಕ್ರಾಂತಿಕಾಲದಲ್ಲಿ ವಾಗಾದಿಗಳು ಸತ್ತಿನಲ್ಲಿಯೇ ಸೇರಿಕೊಳ್ಳುತ್ತವೆ

(ಉಪನಿಷದ್ಭಾಗ)[1]

**[ಅಸ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮ್ ॥೬**

೬. ಸೋಮ್ಯನೆ, ಈ ಹೊರಟುಹೋಗುವ ಪುರುಷನ ವಾಕ್ಕು ಮನಸ್ಸಿನಲ್ಲಿ ಸೇರುತ್ತದೆ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರದೇವತೆಯಲ್ಲಿ].[1]

## ಉತ್ಕ್ರಾಂತಿಕ್ರಮ

(ಭಾಷ್ಯ)

೫೦೪ ಸೋಽಯಂ ಪ್ರಾಣಕರಣಸಂಘಾತೋ ದೇಹೇ ವಿಶೀರ್ಣೇ ದೇಹಾನ್ತರಂ ಜೀವಾಧಿಷ್ಠಿತೋ ಯೇನ ಕ್ರಮೇಣ ಪೂರ್ವದೇಹಾತ್ ಪ್ರಚ್ಯುತೋ ಗಚ್ಛತಿ ತದಾಹ । ಅಸ್ಯ ಹೇ ಸೋಮ್ಯ ಪುರುಷಸ್ಯ ಪ್ರಯತೋ ಮ್ರಿಯಮಾಣಸ್ಯ ವಾಙ್ಮನಸಿ ಸಂಪದ್ಯತೇ ಮನಸ್ಯುಪಸಂಹ್ರಿಯತೇ । ಅಥ ತದಾಹುರ್ಜ್ಞಾತಯೋ ನ ವದತೀತಿ । ಮನಃಪೂರ್ವಕೋ ಹಿ ವಾಗ್ವ್ಯಾಪಾರಃ । "ಯದ್ವೈ ಮನಸಾ ಧ್ಯಾಯತಿ ತದ್ವಾಚಾ ವದತಿ" ( ? ) ಇತಿ ಶ್ರುತೇಃ । ವಾಚ್ಯುಪಸಂಹೃತಾಯಾಂ ಮನಸಿ ಮನೋ ಮನನವ್ಯಾಪಾರೇಣ ಕೇವಲೇನ ವರ್ತತೇ । ಮನೋಽಪಿ ಯದಾ ಉಪಸಂಹ್ರಿಯತೇ ತದಾ ಮನಃ ಪ್ರಾಣೇ ಸಂಪನ್ನಂ ಭವತಿ ಸುಷುಪ್ತಕಾಲೇ ಇವ । ತದಾ ಪಾರ್ಶ್ವಸ್ಥಾ ಜ್ಞಾತಯೋ ನ ವಿಜಾನಾತೀತ್ಯಾಹುಃ । ಪ್ರಾಣಶ್ಚ ತದಾ ಊರ್ಧ್ವೋಚ್ಛ್ವಾಸೀ ಸ್ವಾತ್ಮನ್ಯುಪಸಂಹೃತಬಾಹ್ಯಕರಣಃ ಸಂವರ್ಗವಿದ್ಯಾಯಾಂ ದರ್ಶನಾತ್, ಹಸ್ತಪಾದಾದೀನ್ ವಿಕ್ಷಿಪನ್, ಮರ್ಮಸ್ಥಾನಾನಿ ನಿಕೃನ್ತನ್ನಿವ ಉತ್ಸೃಜನ್[2] ಕ್ರಮೇಣೋಪಸಂಹೃತಸ್ತೇಜಸಿ ಸಂಪದ್ಯತೇ । ತದಾಽಽಹುರ್ಜ್ಞಾತಯೋ ನ ಚಲತೀತಿ । ಮೃತೋ ನೇತಿ ವಾ ವಿಚಿಕಿತ್ಸನ್ತೋ ದೇಹಮಾಲಭಮಾನಾ ಉಷ್ಣಂ ಚೋಪಲಭಮಾನಾ ದೇಹ ಉಷ್ಣೋ ಜೀವತೀತಿ । ಯದಾ ತದಪ್ಯೌಷ್ಣ್ಯಲಿಙ್ಗಂ ತೇಜ ಉಪಸಂಹ್ರಿಯತೇ ತದಾ ತತ್ತೇಜಃ ಪರಸ್ಯಾಂ ದೇವತಾಯಾಂ ಪ್ರಶಾಮ್ಯತಿ । ತದೇವಂಕ್ರಮೇಣ

---

1. ಈ ಭಾಗವನ್ನು ಆಗಲೆ ಒಂದು ಸಲ ಬರೆದದ್ದಾಗಿದ್ದರೂ ಇದು ಪ್ರಕರಣಾಂತರಕ್ಕೆ ಸೇರಿದ್ದೆಂದು ಸ್ಫುಟಗೊಳಿಸುವದಕ್ಕಾಗಿ ಇಲ್ಲಿ ಮತ್ತೆ ಬರೆದುಕೊಂಡಿದೆ.

2 ಇದು ವಾ। ಪಾಠ

ಉಪಸಂಹೃತೇ ಸ್ವಮೂಲಂ ಪ್ರಾಪ್ತೇ ಚ ಮನಸಿ ತತ್ಸ್ಥೋ ಜೀವೋಽಪಿ ಸುಷುಪ್ತ ಕಾಲವತ್ ನಿಮಿತ್ತೋಪಸಂಹಾರಾದುಪಸಂಹ್ರಿಯಮಾಣಃ ಸನ್ ಸತ್ಯಾಭಿಸಂಧಿ ಪೂರ್ವಕಂ ಚೇದುಪಸಂಹ್ರಿಯತೇ ಸದೇವ ಸಂಪದ್ಯತೇ ನ ಪುನರ್ದೇಹಾನ್ತರಾಯ ಸುಷುಪ್ತಾದಿವೋತ್ತಿಷ್ಠತಿ । ಯಥಾ ಲೋಕೇ ಸಭಯೇ ದೇಶೇ ವರ್ತಮಾನಃ ಕಥಂಚಿದಿವಾಭಯಂ ದೇಶಂ ಪ್ರಾಪ್ತಸ್ತದ್ವತ್ । ಇತರಸ್ತು ಅನಾತ್ಮಜ್ಞಸ್ತಸ್ಮಾದೇವ ಮೂಲಾತ್ ಸುಷುಪ್ತಾದಿವೋತ್ಥಾಯ ಮೃತ್ವಾ ಪುನರ್ದೇಹಜಾಲಮ್ ಆವಿಶತಿ । ಯಸ್ಮಾನ್ಮೂಲಾದುತ್ಥಾಯ ದೇಹಮಾವಿಶತಿ ಜೀವಃ ॥

(ಭಾಷ್ಯಾರ್ಥ)

ಆ ಈ ಪ್ರಾಣಕರಣಗಳ ಸಂಘಾತವು ದೇಹವು ನಾಶವಾಗಲು ಜೀವನಿಂದ ಅಧಿಷ್ಠಿತವಾಗಿ ಯಾವ ಕ್ರಮದಿಂದ ಹಿಂದಿನ ದೇಹವನ್ನು ಬಿಟ್ಟು ಮತ್ತೊಂದು ದೇಹಕ್ಕೆ ಹೋಗುತ್ತದೆಯೋ ಅದನ್ನು ಹೇಳುತ್ತಿದಾನೆ.

ಎಲೈ ಸೋಮ್ಯನೆ, ಈ ಹೊರಟುಹೋಗುತ್ತಿರುವ ಸಾಯುತ್ತಿರುವ ಪುರುಷನ ವಾಕ್ಕು ಮನಸ್ಸಿನಲ್ಲಿ ಸೇರುತ್ತದೆ, ಮನಸ್ಸಿನಲ್ಲಿ ಉಪಸಂಹಾರವಾಗುತ್ತದೆ.[1] ಇನ್ನು ಆಗ ಜ್ಞಾತಿಗಳು '(ಅವನು) ಮಾತಾಡುತ್ತಿಲ್ಲ' ಎನ್ನುವರು.[2] ವಾಗ್ವ್ಯಾಪಾರವು ಮನಸ್ಸಿನ ಮೂಲಕವಲ್ಲವೆ? "ಯಾವದನ್ನು ಮನಸ್ಸಿನಿಂದ ಚಿಂತಿಸಿಕೊಳ್ಳುತ್ತಾನೋ ಅದನ್ನು ಮಾತಿನಿಂದ ಹೇಳುತ್ತಾನೆ" ( ? ) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು). ವಾಕ್ಕು ಮನಸ್ಸಿನಲ್ಲಿ ಉಪಸಂಹೃತವಾಗಲು ಬರಿಯ ಮನನವ್ಯಾಪಾರದೊಡನೆ ಕೂಡಿರುತ್ತಾನೆ. ಯಾವಾಗ ಮನಸ್ಸೂ ಉಪಸಂಹೃತವಾಗುವದೋ ಆಗ ಮನಸ್ಸು ಸುಷುಪ್ತಿಕಾಲದಂತೆ ಪ್ರಾಣದಲ್ಲಿ ಸೇರಿಹೋಗುವದು[3]; ಆಗ ಪಕ್ಕದಲ್ಲಿರುವ ಜ್ಞಾತಿಗಳು ತಿಳಿಯುತ್ತಿಲ್ಲ ಎನ್ನುವರು. ಆಗ ಪ್ರಾಣನೂ ಮೇಲುಸಿರಿಡುತ್ತಾ ತನ್ನಲ್ಲಿ ಹೊರಗಿನ ಕರಣಗಳನ್ನೆಲ್ಲ ಉಪಸಂಹಾರ ಮಾಡಿಕೊಂಡು – ಏಕೆಂದರೆ (ಹೀಗೆಂದು) ಸಂವರ್ಗವಿದ್ಯೆಯಲ್ಲಿ ಕಂಡುಬಂದಿದೆ[4] –ಕೈಕಾಲುಮುಂತಾದವುಗಳನ್ನು ಕೊಡಹುತ್ತಾ ಮರ್ಮಸ್ಥಾನಗಳನ್ನು ಕತ್ತರಿಸುವಂತೆ ಬಿಡುತ್ತಾ ಕ್ರಮವಾಗಿ ಉಪಸಂಹೃತನಾಗಿ ತೇಜಸ್ಸಿನಲ್ಲಿ ಸೇರುತ್ತಾನೆ.[5] ಆಗ

---

1. ವಾಗ್ವೃತ್ತಿಯು ಮನಸ್ಸಿನಲ್ಲಿ ಸೇರುತ್ತದೆ; ವಾಕ್ಕೇ ಸೇರುವದಿಲ್ಲ. ಸೂ. ಭಾ ೪-೨-೧ (ಭಾ. ಭಾ ೫೪೦)ನ್ನು ನೋಡಿ.

2. ಬೃ. ೪-೪-೨ ರಲ್ಲಿ ಇದರ ವರ್ಣನೆಯನ್ನು ನೋಡಿ.

3. ಇಲ್ಲಿಯೂ ವೃತ್ತಿದ್ವಾರದಿಂದ ಮನಸ್ಸಿನ ಲಯವಾಗುತ್ತದೆಯೆಂದು ತಿಳಿಯಬೇಕು. ಗೀ. ಭಾ. ೪-೩-೩ (ಭಾ. ಭಾ ೫೪೩).

4. ಅಲ್ಲಿ ವಾಗಾದಿಗಳು ಪ್ರಾಣದಲ್ಲಿ ಸೇರುವವೆಂಬುದನ್ನು ವಿವರಿಸಿವೆ.

5. ಜೀವನೊಡನೆ ಪ್ರಾಣನು ತೇಜಸ್ಸಿನೊಡನೆ ಸೇರಿದ ಸೂಕ್ಷ್ಮಭೂತಗಳಲ್ಲಿ ಸೇರುತ್ತಾನೆ ಎಂದರ್ಥ. ಸೂ ಭಾ. ೪-೨-೫ (ಭಾ ಭಾ. ೫೪೫, ೫೪೬).

ಜ್ಞಾತಿಗಳು (ಇವನು) ಅಲುಗಾಡುತ್ತಿಲ್ಲ ಎನ್ನುವರು ಸತ್ತನೊ ಇಲ್ಲವೊ ಎಂದು ಸಂಶಯಪಡುತ್ತಾ ದೇಹವನ್ನು ಮುಟ್ಟಿ ಬಿಸಿಯು ತೋರಲು ಮೈಬಿಸಿಯಾಗಿದೆ ಬದುಕಿದಾನೆ (ಎನ್ನುವರು). ಯಾವಾಗ ಆ ಬಿಸಿಯೆಂಬ ಗುರುತೂ ಉಪಸಂಹಾರ ವಾಗುವದೋ ಆಗ ಆ ತೇಜಸ್ಸು ಪರದೇವತೆಯಲ್ಲಿ ಸೇರಿಹೋಗುತ್ತದೆ[1]. ಆಗ ಈ ಕ್ರಮದಿಂದ[2] ಮನಸ್ಸು ಉಪಸಂಹಾರವಾಗಿ ತನ್ನ ಮೂಲವನ್ನು ಸೇರಲು ಅದರಲ್ಲಿರುವ ಜೀವನು ಸುಷುಪ್ತಿಕಾಲದಲ್ಲಿ ಹೇಗೋಹಾಗೆ ನಿಮಿತ್ತಗಳು ಉಪಸಂಹಾರವಾಗುವದ ರಿಂದ (ತಾನೂ) ಉಪಸಂಹೃತನಾಗುವನಾಗಿ ಸತ್ಯಾಭಿಸಂಧಿಪೂರ್ವಕವಾಗಿ ಉಪ ಸಂಹೃತನಾಗುವನಾದರೆ ಸತ್ತನ್ನೇ ಸೇರುತ್ತಾನೆ, ಸುಷುಪ್ತಿಯಿಂದ ಹೇಗೋ ಹಾಗೆ ಮತ್ತೆ ಇನ್ನೊಂದು ದೇಹವನ್ನು ಪಡೆಯುವದಕ್ಕೆ ಏಳುವದಿಲ್ಲ ಹೇಗೆ ಲೋಕದಲ್ಲಿ ಭಯಸಹಿತವಾದ ದೇಶದಲ್ಲಿ ಇರುವವನಾಗಿ ಹೇಗೋ ಅಭಯದೇಶಕ್ಕೆ ಹೋದವನು (ಮತ್ತೆ ಆ ದೇಶಕ್ಕೆ ಹಿಂತಿರುಗನೋ) ಅದರಂತೆ ಆದರೆ ಇನ್ನೊಬ್ಬನಾದ ಆತ್ಮಜ್ಞನಲ್ಲ ದವನೋ ಅದೇ ಮೂಲದಿಂದ – ಸುಷುಪ್ತಿಯಿಂದ ಹೇಗೋ ಹಾಗೆ – ಎದ್ದು ಸತ್ತಬಳಿಕ ಮತ್ತೆ ದೇಹದ ಬಲೆಯನ್ನು ಹೊಗುವನು. ಯಾವ ಮೂಲದಿಂದ ಎದ್ದು (ಹೀಗೆ) ಜೀವನು ದೇಹವನ್ನು ಹೊಗುವನೋ —

## ಜಗನ್ಮೂಲವಾದ ಸದ್ರೂಪಬ್ರಹ್ಮವೇ ಜೀವನ ಆತ್ಮನು

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥**

೭. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಏತದಾತ್ಮ್ಯವು. ಅದು ಸತ್ಯವು, ಅದೇ ಆತ್ಮನು ; ಶ್ವೇತಕೇತುವೆ, ಅದೇ ನೀನಾಗಿರುವೆ, ಭಗವಂತನು ಮತ್ತೂ ತಿಳಿಸಿಹೇಳಬೇಕು ! - ಎನ್ನಲು 'ಸೋಮ್ಯನೆ, ಹಾಗೇ ಆಗಲಿ' ಎಂದನು.

---

1. ಸುಷುಪ್ತಿಪ್ರಲಯಗಳಂತೆ ಸಬೀಜವಾಗಿ ಇರುತ್ತದೆ. ಸೂ. ಭಾ. ೪-೨-೮.

2. ಉತ್ಕ್ರಾಂತಿಕ್ರಮವು ಅಜ್ಞಾನಿಗಳಿಗೂ ಆತ್ಮಜ್ಞಾನಿಗಳಿಗೂ ಸಮಾನವು ; ಆದರೆ ಉಪಾಸಕರು ಉತ್ತರಮಾರ್ಗದಿಂದ ತೆರಳುವರು. ಸೂ. ಭಾ. ೪-೨-೪ (ಛಾ. ಭಾ. ೫೪೮)'

3. ಜ್ಞಾನಿಗಳಿಗೆ ಈ ಉತ್ಕ್ರಾಂತಿಯಿಲ್ಲ ; ಸೂ. ಭಾ. ೪-೨-೧೪ ; ಉಪಾಸಕರಿಗೆ ಉಂಟು. ಸೂ. ಭಾ. ೪-೨ ೭.

# ಸೂಕ್ಷ್ಮವಾದ ಜಗನ್ಮೂಲಾತ್ಮನೇ ಜೀವನ ಸ್ವರೂಪ

(ಭಾಷ್ಯ)

೫೦೫ ಸ ಯಃ ಸದಾಖ್ಯ ಏಷ ಉಕ್ತೋಽಣಿಮಾ ಅಣುಭಾವಃ ಜಗತೋ ಮೂಲಮ್ ಐತದಾತ್ಮ್ಯಮ್ ಏತತ್ ಸತ್ ಆತ್ಮಾ ಯಸ್ಯ ಸರ್ವಸ್ಯ ತದೇತದಾತ್ಮ। ತಸ್ಯ ಭಾವಃ ಐತದಾತ್ಮ್ಯಮ್। ಏತೇನ ಸದಾಖ್ಯೇನ ಆತ್ಮನಾ ಆತ್ಮವತ್ ಸರ್ವಮಿದಂ ಜಗತ್। ನಾನ್ಯೋಽಸ್ತಿ ಅಸ್ಯಾಽಽತ್ಮಾ ಸಂಸಾರೀ। "ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ" (ಬೃ ೩-೮ ೧೧) ಇತ್ಯಾದಿಶ್ರುತ್ಯನ್ತರಾತ್। ಯೇನ ಚಾಽಽತ್ಮನಾ ಆತ್ಮವತ್ ಸರ್ವಮಿದಂ ಜಗತ್ ತದೇವ ಸದಾಖ್ಯಂ ಕಾರಣಂ ಸತ್ಯಂ ಪರಮಾರ್ಥಸತ್। ಅತಃ ಸ ಏವ ಆತ್ಮಾ ಜಗತಃ ಪ್ರತ್ಯಕ್ಸ್ವರೂಪಂ ಸತತ್ತ್ವಂ ಯಾಥಾತ್ಮ್ಯಮ್। ಆತ್ಮಶಬ್ದಸ್ಯ ನಿರುಪಪದಸ್ಯ ಪ್ರತ್ಯಗಾತ್ಮನಿ ಗವಾದಿಶಬ್ದವನ್ನಿರೂಢತ್ವಾತ್। ಅತಃ ತತ್ಸತ್ ತ್ವಮಸಿ[1] ಹೇ ಶ್ವೇತಕೇತೋ॥

(ಭಾಷ್ಯಾರ್ಥ)

ಈ ಸತ್ತೆಂಬ (ಮೇಲೆ) ಹೇಳಿದ ಅಣಿಮೆಯು ಅಣುಭಾವವು ಜಗನ್ಮೂಲವಿದೆಯಷ್ಟೆ, ಈ ಜಗತ್ತೆಲ್ಲವೂ ಐತದಾತ್ಮ್ಯವು – ಈ ಸತ್ತೆಂಬುದು ಯಾವ ಸರ್ವಕ್ಕೂ ಆತ್ಮನೋ ಆ ಇದು ಏತದಾತ್ಮವು, ಅದರ ಭಾವವು, ಐತದಾತ್ಮ್ಯವು – ಈ ಸತ್ತೆಂಬ ಆತ್ಮನಿಂದಲೇ (ಈ ಜಗತ್ತೆಲ್ಲವೂ) ಆತ್ಮವುಳ್ಳದ್ದಾಗಿದೆ. ಇದಕ್ಕೆ ಮತ್ತೊಬ್ಬ ಸಂಸಾರಿಯಾದ ಆತ್ಮನು ಇರುವದಿಲ್ಲ, ಏಕೆಂದರೆ "ಇದಕ್ಕಿಂತ ಬೇರೆ ಯಾವ (ಮತ್ತೊಂದು) ದ್ರಷ್ಟೃವಿಲ್ಲ, ಇದಕ್ಕಿಂತ ಬೇರೆಯಾವ (ಮತ್ತೊಂದು) ಶ್ರೋತೃವಿಲ್ಲ" (ಬೃ ೩-೮-೧೧) ಎಂದುಮುಂತಾಗಿ ಬೇರೊಂದು ಶ್ರುತಿಯಲ್ಲಿದೆ, ಮತ್ತು ಈ ಜಗತ್ತೆಲ್ಲ ಯಾವ ಆತ್ಮನಿಂದಲೇ ಆತ್ಮವಂತವಾಗಿದೆಯೋ, ಅದೇ ಸತ್ತೆಂಬ ಕಾರಣವೇ ಸತ್ಯವು, ನಿಜವಾದ ಸತ್ತು, ಆದ್ದರಿಂದ ಅದೇ ಆತ್ಮನು, ಜಗತ್ತಿನ ಒಳಸ್ವರೂಪವು, ತತ್ತ್ವವು, ಯಾಥಾತ್ಮ್ಯವು (ಎಂದರ್ಥ). ಏಕೆಂದರೆ **ಯಾವ ಉಪಪದವೂ ಇಲ್ಲದಿದ್ದರೆ[2] ಆತ್ಮಶಬ್ದವು ಗೋಶಬ್ದವೇ ಮುಂತಾದವುಗಳಂತೆ ಪ್ರತ್ಯಗಾತ್ಮನಲ್ಲಿ ರೂಢವಾಗಿರುತ್ತದೆ[3].** ಆದ್ದರಿಂದ ಆ ಸತ್ತು ನೀನೇ ಆಗಿರುತ್ತೀಯಯ್ಯಾ, ಶ್ವೇತಕೇತುವೆ

---

1. ಇದರ ಮುಂದಿರುವ ಇತಿಶಬ್ದವು ಬೇಕಿಲ್ಲ.
2. ಇಂದ್ರಿಯಾತ್ಮಾ, ದೇವತಾತ್ಮಾ ಎಂಬಂತೆ ಉಪಪದವಿದ್ದರೆ ಬೇರೊಂದು ಅರ್ಥವು ಆಗುತ್ತದೆ.
3. ಆತ್ಮನೆಂದರೆ ತಾನು ಎಂದೇ ಅರ್ಥ. ಕ. ಭಾ. ೨-೧-೧ (ಭಾ. ಭಾ. ೧೧೦) ನ್ನು ನೋಡಿ.

## ಸುಷುಪ್ತಿಯ ವಿಷಯಕ್ಕೆ ಶಂಕೆ

(ಭಾಷ್ಯ)

೫೦೬. ಇತ್ಯೇವಂ ಪ್ರತ್ಯಾಯಿತಃ ಪುತ್ರ ಆಹ। ಭೂಯ ಏವ ಮಾ ಭಗವಾನ್ ವಿಜ್ಞಾಪಯತು। ಯದ್ ಭವದುಕ್ತಂ ತತ್ ಸಂದಿಗ್ಧಂ ಮಮ ಅಹನ್ಯಹನಿ ಸರ್ವಾಃ ಪ್ರಜಾಃ ಸುಷುಪ್ತೌ ಸತ್ ಸಂಪದ್ಯನ್ತ ಇತ್ಯೇತತ್। ಯೇನ ಸತ್ ಸಂಪದ್ಯ ನ ವಿದುಃ ಸತ್ ಸಂಪನ್ನಾ ವಯಮಿತಿ। ಅತೋ ದೃಷ್ಟಾನ್ತೇನ ಮಾಂ ಪ್ರತ್ಯಾಯಯತು ಇತ್ಯರ್ಥಃ। ಏವಮುಕ್ತಸ್ತಥಾಸ್ತು ಸೋಮ್ಯ ಇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಹೀಗೆಂದು ತಿಳಿಯಹೇಳಲು ಮಗನು ಹೇಳುತ್ತಾನೆ: ಮತ್ತೂ ನನಗೆ ಭಗವಂತನಾದ (ನೀನು) ತಿಳಿಸಿಕೊಡಬೇಕು. ನೀನು ಹೇಳಿದೆಯಲ್ಲ, ದಿನದಿನವೂ ಎಲ್ಲಾ ಪ್ರಜೆಗಳೂ ಸುಷುಪ್ತಿಯಲ್ಲಿ ಸತ್ತನ್ನು ಸೇರಿರುತ್ತಾರೆ ಎಂದು, ಅದು ನನಗೆ ಸಂದಿಗ್ಧವಾಗಿರುತ್ತದೆ ಏಕೆಂದರೆ ಸತ್ತನ್ನು ಸೇರಿದರೂ ನಾವು ಸತ್ತನ್ನು ಸೇರಿದೇವೆ ಎಂದು ಅರಿಯದೆ ಇರುತ್ತಾರಲ್ಲ! ಆದ್ದರಿಂದ ದೃಷ್ಟಾಂತದಿಂದ ನನಗೆ ತಿಳಿಯಹೇಳಬೇಕು– ಎಂದರ್ಥ. ಹೀಗೆಂದು ಹೇಳಲು 'ಸೋಮ್ಯನೆ, ಹಾಗೇ ಆಗಲಿ' ಎಂದು ತಂದೆ ಹೇಳಿದನು.

---

# ಆರನೆಯ ಅಧ್ಯಾಯ-ಒಂಭತ್ತನೆಯ ಖಂಡ

( ಸತ್ಸಂಪತ್ತಿಯ ವಿಷಯಕ್ಕ ಆಕ್ಷೇಪಸಮಾಧಾನಗಳು )

## ಸತ್ಸಂಪತ್ತಿಯಲ್ಲಿ ಏಕತ್ವಕ್ಕೆ ಮಧುದೃಷ್ಟಾಂತ

(ಉಪನಿಷತ್ತು)

**ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠನ್ತಿ ನಾನಾತ್ಯಯಾನಾಂ ವೃಕ್ಷಾಣಾಗ್ಂ ರಸಾನ್ ಸಮವಹಾರಮೇಕತಾಗ್ಂ ರಸಂ ಗಮಯನ್ತಿ ॥ ೧ ॥**

**ತೇ ಯಥಾ ತತ್ರ ನ ವಿವೇಕಂ ಲಭನ್ತೇಽಮುಷ್ಯಾಹಂ ವೃಕ್ಷಸ್ಯ ರಸೋಽಸ್ಮ್ಯಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ ॥ ೨ ॥**

೧-೨. ಸೋಮ್ಯನೆ, ಹೇಗೆ ಮಧುಕೃತ್ತುಗಳು ಜೇನುತುಪ್ಪವನ್ನು ಏರ್ಪಡಿಸುವವೋ ನಾನಾತ್ಯಯದ ಮರಗಳ ರಸಗಳನ್ನು ಒಟ್ಟುಗೂಡಿಸಿ ಒಂದಾಗಿ ರಸವನ್ನು ಮಾಡುವವೋ, ಅವು ಹೇಗೆ ಅಲ್ಲಿ 'ನಾನು ಆ ವೃಕ್ಷದ ರಸವಾಗಿರುವೆನು', 'ನಾನು ಆ ವೃಕ್ಷದ ರಸವಾಗಿರುವೆನು' ಎಂದು ವಿವೇಕವನ್ನು ಹೊಂದುವದಿಲ್ಲವೋ ಹಾಗೆಯೇ ಸೋಮ್ಯನೆ, ಈ ಸರ್ವಪ್ರಜೆಗಳೂ ಸತ್ತಿನಲ್ಲಿ ಸಂಪನ್ನರಾಗಿ ಸತ್ತಿನಲ್ಲಿ ಸಂಪನ್ನರಾಗಿರುವೆವು ಎಂದು ಅರಿಯದೆ ಇರುವರು.

## ಏಕತ್ವವೇ ಸತ್ಸಂಪನ್ನರಾಗಿದ್ದೇವೆಂದು ಅರಿಯದಿರುವದಕ್ಕೆ ಕಾರಣ

(ಭಾಷ್ಯ)

೫೦೭. ಯತ್ ಪೃಚ್ಛಸಿ ಅಹನ್ಯಹನಿ ಸತ್ಸಂಪದ್ಯ ನ ವಿದುಃ ಸತ್ಸಂಪನ್ನಾಃ ಸ್ಮಃ ಇತಿ ತತ್ ಕಸ್ಮಾದಿತಿ ಶೃಣು ದೃಷ್ಟಾನ್ತಮ್ । ಯಥಾ ಲೋಕೇ ಹೇ ಸೋಮ್ಯ, ಮಧುಕೃತೋ ಮಧು ಕುರ್ವನ್ತೀತಿ ಮಧುಕೃತಃ, ಮಧುಕರಮಕ್ಷಿಕಾಃ ಮಧು ನಿಸ್ತಿಷ್ಠನ್ತಿ ಮಧು ನಿಷ್ಪಾದಯನ್ತಿ ತತ್ಪರಾಃ ಸನ್ತಃ । ಕಥಮ್ ? ನಾನಾತ್ಯಯಾನಾಂ ನಾನಾಗತೀನಾಂ ನಾನಾದಿಕ್ಕಾನಾಂ ವೃಕ್ಷಾಣಾಂ ರಸಾನ್ ಸಮವಹಾರಂ ಸಮಾಹೃತ್ಯ ಏಕತಾಮ್ ಏಕಭಾವಂ ಮಧುತ್ವೇನ ರಸಂ[1] ಗಮಯನ್ತಿ ಮಧುತ್ವಮಾಪಾದಯನ್ತಿ । ತೇ ರಸಾ ಯಥಾ ಮಧುತ್ವೇನ ಏಕತಾಂ ಗತಾಃ, ತತ್ರ ಮಧುನಿ ವಿವೇಕಂ ನ ಲಭನ್ತೇ । ಕಥಮ್ ? ಅಮುಷ್ಯ ಅಹಮ್ ಆಮ್ರಸ್ಯ ಪನಸಸ್ಯ ವಾ ವೃಕ್ಷಸ್ಯ ರಸೋಽಸ್ಮಿ ಇತಿ । ಯಥಾ ಹಿ ಲೋಕೇ ಬಹೂನಾಂ ಚೇತನಾವತಾಂ ಸಮೇತಾನಾಂ ಪ್ರಾಣಿನಾಂ ವಿವೇಕಲಾಭೋ ಭವತಿ ಅಮುಷ್ಯಾಽಹಂ ಪುತ್ರಃ, ಅಮುಷ್ಯಾಽಹಂ ನಪ್ತಾಽಸ್ಮೀತಿ । ತೇ ಚ ಲಬ್ಧವಿವೇಕಾಃ ಸನ್ತೋ ನ ಸಂಕೀರ್ಯನ್ತೇ । ನ ತಥೇಹ ಅನೇಕಪ್ರಕಾರವೃಕ್ಷರಸಾನಾಮಪಿ ಮಧುರಾಮ್ಲತಿಕ್ತಕಟುಕಾದೀನಾಂ ಮಧುತ್ವೇನ ಏಕತಾಂ ಗತಾನಾಂ ಮಧುರಾದಿಭಾವೇನ ವಿವೇಕೋ ಗೃಹ್ಯತ ಇತ್ಯಭಿಪ್ರಾಯಃ । ಯಥಾ ಅಯಂ ದೃಷ್ಟಾನ್ತ ಇತಿ ಏವಮೇವ ಖಲು ಸೋಮ್ಯ ಇಮಾಃ ಸರ್ವಾಃ ಪ್ರಜಾ ಅಹನ್ಯಹನಿ ಸತಿ ಸಂಪದ್ಯ ಸುಷುಪ್ತಿಕಾಲೇ ಮರಣಪ್ರಲಯಯೋಶ್ಚ ನ ವಿದುರ್ನ ವಿಜಾನೀಯುಃ ಸತಿ ಸಂಪದ್ಯಾಮಹ ಇತಿ, ಸಂಪನ್ನಾ ಇತಿ ವಾ ॥

---

1. 'ರಸಾನ್' ಎಂಬ ಅಚ್ಚಿನ ಪಾಠವನ್ನು ಬಿಟ್ಟು ಉಪನಿಷನ್ಮೂಲಕ್ಕೆ ತಕ್ಕಂತೆ ರಸಮ್ ಎಂದೇ ಬರೆದುಕೊಂಡಿದೇವೆ.

(ಭಾಷ್ಯಾರ್ಥ)

'ದಿನದಿನವೂ ಸತ್ತನ್ನು ಸೇರಿದ್ದೂ ಸತ್ತನ್ನು ಸೇರಿರುತ್ತೇವೆ ಎಂದು ಅರಿಯರಲ್ಲ, ಅದೇಕೆ ?' ಎಂದು ಕೇಳುತ್ತೀಯಲ್ಲ, ಇದಕ್ಕೆ ದೃಷ್ಟಾಂತವನ್ನು (ಹೇಳುತ್ತೇನೆ) ಕೇಳು, ಎಲೈ ಸೋಮ್ಯನೆ, ಹೇಗೆ ಲೋಕದಲ್ಲಿ (ಮಧುಕೃತ್ತುಗಳು) ಮಧುವನ್ನು ಮಾಡುವದರಿಂದ ಮಧುಕೃತ್ತುಗಳೆಂದು (ಹೆಸರು)—ಜೇನುತುಪ್ಪವನ್ನು ಮಾಡುವ ನೊಣಗಳು ಜೇನನ್ನು ಏರ್ಪಡಿಸುವವೋ ತತ್ಪರವಾಗಿ ಜೇನನ್ನುಂಟು ಮಾಡುತ್ತವೆಯೋ ಹೇಗೆಂದರೆ, ನಾನಾತ್ಯಯದ ನಾನಾಗತಿಯುಳ್ಳ, ಬೇರೆಬೇರೆ ದಿಕ್ಕಿನಲ್ಲಿರುವ ಮರಗಳ ರಸಗಳನ್ನು (ಸಮವಹಾರಂ=ಸಮಾಹೃತ್ಯ) ಒಟ್ಟುಗೂಡಿಸಿ (ಏಕತಾಂ=ಏಕಭಾವಮ್) ಒಂದಾಗಿ ಮಧುವೆಂಬ (ಒಂದು) ರಸವನ್ನು ಮಾಡುವವೋ, (ಅವುಗಳನ್ನು) ಜೇನಾಗಿಯೇ ಮಾಡುವವೋ, ಆ ರಸಗಳು ಹೇಗೆ ಜೇನಿನ ರೂಪದಿಂದ ಒಂದಾಗಿ ಆ ಜೇನಿನಲ್ಲಿ ವಿವೇಕವನ್ನು ಹೊಂದುವದಿಲ್ಲವೋ, –ಹೇಗೆಂದರೆ ಆ ಮಾವಿನ ಅಥವಾ ಹಲಸಿನ ಮರದ ರಸವು ನಾನಾಗಿರುವೆನು ಎಂದು (ವಿವೇಕವನ್ನು ಹೊಂದುವದಿಲ್ಲವೋ),– ಹೇಗೆ ಲೋಕದಲ್ಲಿ ಚೇತನಾವಂತರಾದ ಅನೇಕ ಜೀವರು ಒಂದು ಕಡೆ ಸೇರಿದರೆ ನಾನು ಇಂಥವನ ಮಗನು, ನಾನು ಇಂಥವನ ಮೊಮ್ಮಗನಾಗಿರುವೆನು ಎಂದು ವಿವೇಕವನ್ನು ಹೊಂದಿರುವರೋ, ಹಾಗೆ ವಿವೇಕವನ್ನು ಹೊಂದಿರುವದರಿಂದ ಒಬ್ಬರಲ್ಲೊಬ್ಬರು ಬೆರೆಯುವದಿಲ್ಲವೋ ಹಾಗೆ ಇಲ್ಲಿ ಸಿಹಿ, ಹುಳಿ, ಕಹಿ, ಕಾರ– ಮುಂತಾದ ಅನೇಕ ಪ್ರಕಾರದ ವೃಕ್ಷರಸಗಳು ಜೇನುತುಪ್ಪವಾಗಿ ಒಂದಾಗಲು ಸಿಹಿ ಮುಂತಾದ ರೂಪದಿಂದ ವಿವೇಕವು ಕಾಣಬರುವದಿಲ್ಲ ಎಂದು ಅಭಿಪ್ರಾಯ ಈ ದೃಷ್ಟಾಂತವು ಹೇಗೋ ಹಾಗೆಯೇ, ಸೋಮ್ಯನೆ, **ಈ ಸರ್ವಪ್ರಜೆಗಳೂ ದಿನದಿನವೂ ಸುಷುಪ್ತಿಕಾಲದಲ್ಲಿಯೂ ಮರಣಪ್ರಲಯಗಳಲ್ಲಿಯೂ**[1] **ಸತ್ತಿನಲ್ಲಿ ಸಂಪನ್ನರಾದರೂ ಸತ್ತಿನಲ್ಲಿ ಸೇರುತ್ತೇವೆ ಎಂದಾಗಲಿ, ಸೇರಿದೆವು ಎಂದಾಗಲಿ ಅರಿಯದೆ ಇರುತ್ತಾರೆ, ತಿಳಿದುಕೊಳ್ಳದೆ ಇರುತ್ತಾರೆ.**[2]

---

1. ಸುಷುಪ್ತಿಯನ್ನೂ ಮರಣವನ್ನೂ ಇಲ್ಲಿ ಹೇಳಿಯೇ ಇವೆ, ಪ್ರಲಯವೂ ಈ ಗುಂಪಿಗೇ ಸೇರಿದ್ದು ಈ ಎಲ್ಲಾ ಅವಸ್ಥೆಗಳಲ್ಲಿಯೂ ಸ್ವಾಭಾವಿಕವಾದ ಸತ್ಸಂಪತ್ತಿಯಾಗುತ್ತದೆ.

2. ಶ್ವೇತಕೇತುವು 'ಸತ್ಸಂಪನ್ನರಾಗಿದೇವೆ ಎಂಬ ಅರಿವು ಏತಕ್ಕಿಲ್ಲ?' ಎಂದೇ ಕೇಳಿರುತ್ತಾನೆ; ಆದ್ದರಿಂದ ಇಲ್ಲಿ 'ಸಂಪದ್ಯ ನ ವಿದುಃ' ಎಂಬುದೇನೂ ಪ್ರತಿಪಾದ್ಯವಲ್ಲ. ಏಕತ್ವವೇ ಅರಿಯದಿರುವದಕ್ಕೆ ಕಾರಣ ಎಂಬುದೇ ವಿವಕ್ಷಿತ. ಈ ಶ್ರುತಿಯನ್ನು ಮೂಲಾವಿದ್ಯೆಯು ಸುಷುಪ್ತಿಯಲ್ಲಿದೆ ಎಂಬುದಕ್ಕೆ ಪ್ರಮಾಣವಾಗಿ ವ್ಯಾಖ್ಯಾನಕಾರರುಗಳು ಉದಾಹರಿಸುವದು ಶ್ರುತಿ [illegible]ವಿರುದ್ಧವೆಂಬುದು ಸ್ಪಷ್ಟವಾಗಿವೆ

(ಉಪನಿಷತ್ತು)

**ತ ಇಹ ವ್ಯಾಘ್ರೋ ವಾ ಸಿಗ್ಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಗ್ಂಶೋ ವಾ ಮಶಕೋ ವಾ ಯದ್ಯದ್ಭವನ್ತಿ ತದಾ ಭವನ್ತಿ ॥ ೩ ॥**

೩. ಅವು ಇಲ್ಲಿ ಹುಲಿಯೋ, ಸಿಂಹವೋ, ತೋಳವೋ, ಕಾಡು ಹಂದಿಯೋ, ಹುಳುವೋ, ಜಿಟ್ಟೆಯೋ, ಕಾಡುನೊಣವೋ, ಸೊಳ್ಳೆಯೋ- ಯಾವಯಾವದಾಗಿರುವವೋ ಅದವೇ ಆಗುವವು

## ಸತ್ಸಂಪತ್ತಿಯನ್ನು ಅರಿಯದವರ ಫಲ

(ಭಾಷ್ಯ)

ಇಂತ ಯಸ್ಮಾಚ್ಚ ಏವಮಾತ್ಮನಃ ಸದ್ರೂಪತಾಮ್ ಅಜ್ಞಾತ್ವೈವ ಸತ್ ಸಂಪದ್ಯನ್ತೇ ಅತಸ್ತ ಇಹ ಲೋಕೇ ಯತ್ಕರ್ಮನಿಮಿತ್ತಾಂ ಯಾಂ ಯಾಂ ಜಾತಿಂ ಪ್ರತಿಪನ್ನಾ ಆಸುರ್ವ್ಯಾಘ್ರಾದೀನಾಂ ವ್ಯಾಘ್ರೋಽಹಂ ಸಿಂಹೋಽಹಮ್ ಇತ್ಯೇವಮ್, ತೇ ತತ್ಕರ್ಮಜ್ಞಾನವಾಸನಾಙ್ಕಿತಾಃ ಸನ್ತಃ ಸತ್ಪ್ರವಿಷ್ಟಾ ಅಪಿ ತದ್ಭಾವೇನೈವ ಪುನರಾಭವನ್ತಿ ಪುನಃ ಸತ ಆಗತ್ಯ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಂಶೋ ವಾ ಮಶಕೋ ವಾ ಯದ್ಯತ್ ಪೂರ್ವಮಿಹ ಲೋಕೇ ಭವನ್ತಿ । ಬಭೂವುರಿತ್ಯರ್ಥಃ । ತದೇವ ಪುನರಾಗತ್ಯ ಭವನ್ತಿ । ಯುಗಸಹಸ್ರಕೋಟ್ಯನ್ತರಿತಾಽಪಿ ಸಂಸಾರಿಣೋ ಜನ್ತೋರ್ಯಾ ಪುರಾ ಭಾವಿತಾ ವಾಸನಾ ಸಾ ನ ನಶ್ಯತೀತ್ಯರ್ಥಃ । "ಯಥಾಪ್ರಜ್ಞಂ ಹಿ ಸಂಭವಾಃ" (ಐ ಆ. ೨-೩-೨) ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

**ಹೀಗೆ ತಾವು ಸದ್ರೂಪರೆಂಬುದನ್ನು ಅರಿತುಕೊಳ್ಳದೆಯೇ ಸತ್ತಿನಲ್ಲಿ ಸೇರಿರುತ್ತಾರಷ್ಟೆ, ಆದ್ದರಿಂದ** ಅವು ಈ ಲೋಕದಲ್ಲಿ ಯಾವ (ಯಾವ) ಕರ್ಮನಿಮಿತ್ತದಿಂದ ಹುಲಿಯೇ ಮುಂತಾದ ಯಾವ ಯಾವ ಜನ್ಮವನ್ನು ಪಡೆದಿದ್ದವಾಗಿದ್ದವೋ, 'ನಾನು ಹುಲಿಯು', 'ನಾನು ಸಿಂಹವು' ಎಂದಿಂತು ಅವು ಆ(ಯಾ) ಕರ್ಮಜ್ಞಾನಗಳ ವಾಸನೆಯಿಂದ ಮುದ್ರಿತವಾಗಿಯೇ **ಸತ್ತನ್ನು ಹೊಕ್ಕಿದ್ದವಾದರೂ (ಮೊದಲಿನ) ಅದೇ ಭಾವನೆಯಿಂದೊಡಗೂಡಿಯೇ ಮತ್ತೆ ಆಗುವವು.** ಮತ್ತೆ ಸತ್ತಿನಿಂದ ಬಂದು ಹುಲಿಯೋ ಸಿಂಹವೋ ತೋಳವೋ ಕಾಡುಹಂದಿಯೋ ಹುಳುವೋ ಜಿಟ್ಟೆಯೋ ಕಾಡುನೊಣವೋ

ಸೊಳ್ಳೆಯೋ ಯಾವಯಾವದಾಗಿ ಹಿಂದೆ ಈ ಲೋಕದಲ್ಲಿ ಇರುವವೋ, ಎಂದರೆ ಇದ್ದವೋ ಎಂದರ್ಥ, ಮತ್ತೆ ಬಂದು ಅದದೇ ಆಗುವವು. **ಯುಗಸಹಸ್ರ ಕೋಟಿಯ ವ್ಯವಧಾನವಿದ್ದರೂ ಸಂಸಾರಿಯಾದ ಜೀವನಿಗೆ ಹಿಂದೆ ಭಾವಿತವಾದ ವಾಸನೆಯಿತ್ತಲ್ಲ, ಅದು ನಾಶವಾಗುವದಿಲ್ಲ ಎಂದರ್ಥ**[1] 'ಪ್ರಜ್ಞೆಯಂತೆಯೇ ಹುಟ್ಟುಗಳಲ್ಲವೆ?' (ಬೃ. ೪-೪-೨)[2] ಎಂದು ಮತ್ತೊಂದು ಶ್ರುತಿಯಿಂದ (ಹೀಗೆಂದು ನಿಶ್ಚಿತವಾಗುತ್ತದೆ).

## ಸುಷುಪ್ತ್ಯಾದಿಗಳಲ್ಲಿ ಸೇರುವ ಸತ್ತೇ ಜೀವನ ಆತ್ಮನು

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ||೪||**

೪. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಏತದಾತ್ಮ್ಯವು. ಅದು ಸತ್ಯವು, ಅದೇ ಆತ್ಮನು; ಶ್ವೇತಕೇತುವೆ, ಅದೇ ನೀನಾಗಿರುವೆ. 'ಭಗವಂತನು ಮತ್ತೂ ತಿರುಗಿ ಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ!' ಎಂದನು.

### ಜ್ಞಾನ್ಯಜ್ಞಾನಿಗಳ ಸತ್ಪ್ರವೇಶದ ತಾರತಮ್ಯ

(ಭಾಷ್ಯ)

೫೧೯. ತಾಃ ಪ್ರಜಾ ಯಸ್ಮಿನ್ ಪ್ರವಿಶ್ಯ ಪುನರಾವಿರ್ಭವನ್ತಿ, ಯೇ ತ್ವಿತೋಽನ್ಯೇ ಸತ್ಸತ್ಯಾತ್ಮಾಭಿಸಂಧಾ ಯಮ್ ಅಣುಭಾವಂ ಸದಾತ್ಮಾನಂ ಪ್ರವಿಶ್ಯ ನಾಽಽವರ್ತನ್ತೇ ಸ ಯ ಏಷೋಽಣಿಮಾ ಇತ್ಯಾದಿ ವ್ಯಾಖ್ಯಾತಮ್ ||

---

1. ಮತ್ತೆ ಜೀವತ್ವವನ್ನು ಪಡೆಯಬೇಕಾಗಿದ್ದು ಸ್ವಾಭಾವಿಕಸತ್ಸಂಪತ್ತಿಯನ್ನೇ ಸುಷುಪ್ತಿಮರಣಪ್ರಲಯಗಳಲ್ಲಿ ಎಲ್ಲರೂ ಪಡೆಯುತ್ತಾರೆ. ಸೂ. ಭಾ. ೪-೨-೮ (ಭಾ. ಭಾ. ೫೪೯). ಹಗ್ಗವನ್ನು ಹಾವೆಂದು ಕಲ್ಪಿಸಿಕೊಂಡವನಿಗೆ ಹಾವು ಮರೆಯಾದಮಾತ್ರದಿಂದ ಹಾವಿನ ಅಂಜಿಕೆ ಹೇಗೆ ಹೋಗುವದಿಲ್ಲವೋ ಹಾಗೆ ಸುಷುಪ್ತ್ಯಾದಿಗಳಲ್ಲಿ ಸತ್ಸಂಪತ್ತಿಯಾದಮಾತ್ರ ದಿಂದ ಮುಕ್ತಿಯಾಗಲಾರದು; ಏಕೆಂದರೆ ಜ್ಞಾನವು ಬಂದಾಗಲೇ ಅವಿದ್ಯಾವಾಸನೆಯು ಹೋದೀತು.

2. ಇಲ್ಲಿ ಪ್ರಜ್ಞೆ ಎಂದರೆ ಬೃ. ಭಾ. ೪-೪-೨ (ಭಾ. ಬಾ. ೨೬೦)ರಲ್ಲಿ ಪೂರ್ವ ಪ್ರಜ್ಞೆ ಎಂದಿರುವ ಭಾವನೆಯೇ.

(ಭಾಷ್ಯಾರ್ಥ)

ಆ ಪ್ರಜೆಗಳು[1] ಯಾವದರಲ್ಲಿ ಹೊಕ್ಕು ಮತ್ತೆ ತೋರಿಕೊಳ್ಳುವರೋ, ಇನ್ನು ಅವರಿಗಿಂತ ಬೇರೆಯಾವ ಯಾರು ಸತ್ತೆಂಬ ಸತ್ಯಾತ್ಮನಲ್ಲಿಯೇ ಮನಸ್ಸಿಟ್ಟು[2] ಯಾವ ಅಣುಭಾವವಾದ ಸವಾತ್ಮನನ್ನು ಹೊಕ್ಕು ಹಿಂತಿರುಗದಿರುವರೋ 'ಆ ಈ ಅಣಿಮೆಯಿದೆಯಲ್ಲ ' ಎಂದು ಮುಂತಾಗಿರುವ (ಗ್ರಂಥವನ್ನು ಹಿಂದೆಯೇ) ವ್ಯಾಖ್ಯಾನಮಾಡಿದೆ.[3]

## ಸುಷುಪ್ತಿಯಿಂದೆಚ್ಚರುವ ವಿಷಯಕ್ಕೆ ಶಂಕೆ

(ಭಾಷ್ಯ)

೫೧೦ ಯಥಾ ಲೋಕೇ ಸ್ವಕೀಯೇ ಗೃಹೇ ಸುಪ್ತ ಉತ್ಥಾಯ ಗ್ರಾಮಾಸ್ತರಂ ಗತೋ ಜಾನಾತಿ ಸ್ವಗೃಹಾದಾಗತೋಽಸ್ಮೀತಿ, ಏವಂ ಸತ ಆಗತೋಽಸ್ಮಿ ಇತಿ[4] ಜನ್ತೂನಾಂ ಕಸ್ಮಾದ್ ವಿಜ್ಞಾನಂ ನ ಭವತೀತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತು ಇತ್ಯುಕ್ತಃ, ತಥಾ ಸೋಮ್ಯ ಇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ತಮ್ಮ ಮನೆಯಲ್ಲಿ ನಿದ್ರಿಸಿ ಎಚ್ಚತ್ತು ಮತ್ತೊಂದೂರಿಗೆ ಹೋದವನು ನಮ್ಮ ಮನೆಯಿಂದ ಬಂದಿರುವೆನು ಎಂದು ತಿಳಿದಿರುವನೋ, ಹಾಗೆ ಸತ್ತಿನಿಂದ ಬಂದಿರುವೆನು ಎಂದು ಜೀವರಿಗೆ ಏತಕ್ಕೆ ಅರಿವು ಇರುವದಿಲ್ಲ ?– ಎಂಬ (ವಿಷಯಕ್ಕೆ) ಮತ್ತೂ ನನಗೆ ಭಗವಂತನು ತಿಳಿಯಹೇಳಬೇಕು– ಎನ್ನಲು ತಂದೆಯು 'ಸೋಮ್ಯನೆ, ಹಾಗೇ ಆಗಲಿ !'– ಎಂದನು.

---

1 ಅಜ್ಞರಾದ ಜೀವರುಗಳು.

2. ನಿಜವಾಗಿಯೂ ಆತ್ಮನಾಗಿರುವ ಪರಮಾತ್ಮನಲ್ಲಿಯೇ ಮನಸ್ಸಿಟ್ಟು ಎಂದರ್ಥ. ಜ್ಞಾನಿಗಳ ದೃಷ್ಟಿಯಿಂದ ಯಾವಾಗಲೂ ಅವರು ಅಸಂಸಾರಿಯಾದ ಆತ್ಮಸ್ವರೂಪದಲ್ಲಿಯೇ ಇರುತ್ತಾರಾದ್ದರಿಂದ ಅವರಿಗೆ ಮತ್ತೆ ಸಂಸಾರವಿಲ್ಲ.

3. ಆ ಸೂಕ್ಷ್ಮತಮನಾದ ಪರಮಾತ್ಮನೇ ನೀನು ಎಂದು ಈ ವಾಕ್ಯಕ್ಕೆ ಅರ್ಥವೆಂದು ಭಾವ.

4. ಇಲ್ಲಿ ಅಚ್ಚಿನ ಪುಸ್ತಕಗಳಲ್ಲಿರುವ ಚಕಾರವು ಬೇಕಿಲ್ಲ.

# ಆರನೆಯ ಅಧ್ಯಾಯ-ಹತ್ತನೆಯ ಖಂಡ

(ಸತ್ಸಂಪತ್ತಿಯ ವಿಷಯಕ್ಕೆ ಆಕ್ಷೇಪಸಮಾಧಾನಗಳು)

## ಸತ್ತಿನಿಂದ ಬಂದದ್ದಕ್ಕೆ ನದಿಗಳ ದೃಷ್ಟಾಂತ

(ಉಪನಿಷತ್ತು)

**ಇಮಾಃ ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯನ್ದನ್ತೇ ಪಶ್ಚಾತ್ ಪ್ರತೀಚ್ಯಸ್ತಾಃ ಸಮುದ್ರಾತ್ ಸಮುದ್ರಮೇವಾಪಿ ಯನ್ತಿ ಸ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ ॥ ೧ ॥**

**ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಗ್ಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಗ್ಂಶೋ ವಾ ಮಶಕೋ ವಾ ಯದ್ಯದ್ಭವನ್ತಿ ತದಾ ಭವನ್ತಿ ॥ ೨ ॥**

೧-೨. ಸೋಮ್ಯನೆ, ಈ ಪೂರ್ವದಿಕ್ಕಿನ ನದಿಗಳು ಮುಂದಕ್ಕೂ ಪಶ್ಚಿಮದಿಕ್ಕಿನ ನದಿಗಳು ಹಿಂದಕ್ಕೂ ಹರಿಯುತ್ತವೆ(ಯಷ್ಟೆ). ಅವು ಸಮುದ್ರದಿಂದ ಸಮುದ್ರವನ್ನೇ ಹೋಗಿ ಸೇರುತ್ತವೆ, ಅದು ಸಮುದ್ರವೇ ಆಗುತ್ತದೆ. ಅವು ಹೇಗೆ 'ನಾನು ಇದಾಗಿರುವೆ.' 'ನಾನು ಇದಾಗಿರುವೆ' ಎಂದು ಅರಿಯದಿರುವವೋ ಹೀಗೆಯೇ ಸೋಮ್ಯನೆ, ಈ ಪ್ರಜೆಗಳೆಲ್ಲರೂ ಸತ್ತಿನಿಂದ ಬಂದು ಸತ್ತಿನಿಂದ ಬಂದಿದೇವೆ ಎಂದರಿಯರು. ಅವು ಇಲ್ಲಿ ಹುಲಿಯೋ ಸಿಂಹವೋ ತೋಳವೋ ಕಾಡುಹಂದಿಯೋ ಹುಳುವೋ ಜಿಟ್ಟೆಯೋ ಕಾಡುನೊಣವೋ ಸೊಳ್ಳೆಯೋ-ಯಾವಯಾವದಾಗಿರುವವೋ ಅದದೇ ಆಗುವವು.

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಗ್ಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ೩ ॥**

೩. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಐತದಾತ್ಮ್ಯವು. ಅದು ಸತ್ಯವು, ಅದೇ ಆತ್ಮನು ; ಶ್ವೇತಕೇತುವೆ, ಅದೇ ನೀನಾಗಿರುವೆ. 'ಭಗವಂತನು ಮತ್ತೂ ನನಗ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ!' ಎಂದನು.

## ಸತ್ತಿನಿಂದ ಬಂದವರಿಗೆ ಅದರ ಅರಿವಿಲ್ಲದಿರುವದಕ್ಕೆ ಕಾರಣ

(ಭಾಷ್ಯ)

೫೧೧. ಶೃಣು ತತ್ರ ದೃಷ್ಟಾನ್ತಮ್ । ಯಥಾ ಸೋಮ್ಯ ಇಮಾ ನದ್ಯೋ ಗಙ್ಗಾದ್ಯಾಃ ಪುರಸ್ತಾತ್ ಪೂರ್ವಾಂ ದಿಶಂ ಪ್ರತಿ ಪ್ರಾಚ್ಯಃ ಪ್ರಾಗಞ್ಚನಾಃ ಸ್ಯನ್ದನ್ತೇ ಸ್ರವನ್ತಿ । ಪಶ್ಚಾತ್ ಪ್ರತೀಚೀಂ ದಿಶಂ ಪ್ರತಿ ಸಿನ್ಧ್ವಾದ್ಯಾಃ ಪ್ರತೀಚೀಮ್ ಅಞ್ಚನ್ತಿ ಗಚ್ಛನ್ತೀತಿ ಪ್ರತೀಚ್ಯಃ । ತಾಃ ಸಮುದ್ರಾತ್ ಅಮ್ಭೋನಿಧೇರ್ಜಲಧರೈ ರಾಕ್ಷಿಪ್ತಾಃ ಪುನರ್ವೃಷ್ಟಿರೂಪೇಣ ಪತಿತಾ ಗಙ್ಗಾದಿನದೀರೂಪಿಣ್ಯಃ ಪುನಃ ಸಮುದ್ರಮ್ ಅಮ್ಭೋನಿಧಿಮೇವ ಅಪಿಯನ್ತಿ ಸ ಸಮುದ್ರ ಏವ ಭವತಿ । ತಾ ನದ್ಯೋ ಯಥಾ ತತ್ರ ಸಮುದ್ರೇ ಸಮುದ್ರಾತ್ಮನಾ ಏಕತಾಂ ಗತಾ ನ ವಿದುರ್ನ ಜಾನನ್ತಿ ಇಯಂ ಗಙ್ಗಾಽಹಮಸ್ಮಿ, ಇಯಂ ಯಮುನಾಽಹಮಸ್ಮೀತಿ ಚ[1] । ಏವಮೇವ ಖಲು ಸೋಮ್ಯ, ಇಮಾಃ ಸರ್ವಾಃ ಪ್ರಜಾ ಯಸ್ಮಾತ್ ಸತಿ ಸಂಪದ್ಯ ನ ವಿದುಃ, ತಸ್ಮಾತ್ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ, ಆಗತಾ ಇತಿ ವಾ । ತ ಇಹ ವ್ಯಾಘ್ರಃ ಇತ್ಯಾದಿ ಸಮಾನಮನ್ಯತ್ ॥

(ಭಾಷ್ಯಾರ್ಥ)

ಈ (ವಿಷಯ)ದಲ್ಲಿ ದೃಷ್ಟಾಂತವನ್ನು ಹೇಳುತ್ತೇನೆ, ಕೇಳು . ಸೋಮ್ಯನೆ, ಹೇಗೆ (ಪ್ರಾಚ್ಯಃ=ಪ್ರಾಗಞ್ಚನಾಃ) ಪೂರ್ವದಿಕ್ಕಿಗೆ ಹೋಗುತ್ತಿರುವ ಈ ಗಂಗಾದಿ ನದಿಗಳು ಮುಂದಕ್ಕೆ ಪೂರ್ವದಿಕ್ಕಿಗೇ (ಸ್ಯನ್ದನ್ತೇ=ಸ್ರವನ್ತಿ) ಹರಿಯುತ್ತಿರುವವೋ (ಪ್ರತೀಚ್ಯಃ=ಪ್ರತೀಚೀಮ್ ಅಞ್ಚನ್ತಿ, ಗಚ್ಛನ್ತೀತಿ) ಪಶ್ಚಿಮಕ್ಕೇ ಹೋಗುತ್ತಿರುವ ಸಿಂಧು ಮುಂತಾದ (ನದಿಗಳು) ಹಿಂದಕ್ಕೆ ಪಶ್ಚಿಮದಿಕ್ಕಿಗೇ (ಹೋಗುತ್ತಿರುವವೋ), ಅವು ಸಮುದ್ರದಿಂದ ಕಡಲಿನಿಂದ, ಮೋಡಗಳು ಎಳೆದುಕೊಳ್ಳಲಾಗಿ ಮತ್ತೆ ಮಳೆಯಾಗಿ ಬಿದ್ದು ಗಂಗಾದಿನದಿಗಳ ರೂಪವುಳ್ಳವಾಗಿ ಮತ್ತೆ ಸಮುದ್ರವನ್ನು ಕಡಲನ್ನೇ ಸೇರುವವೋ, ಅದು (ಆಗ ಎಲ್ಲವೂ) ಸಮುದ್ರವೇ ಆಗಿಬಿಡುವದೋ, ಆ ನದಿಗಳು ಹೇಗೆ ಆ ಸಮುದ್ರದಲ್ಲಿ ಸಮುದ್ರವಾಗಿ ಏಕತ್ವವನ್ನು ಹೊಂದಿದವುಗಳಾಗಿ 'ನಾನು ಈ ಗಂಗೆಯಾಗಿರುವೆನು,' 'ನಾನು ಈ ಯಮುನೆಯಾಗಿರುವೆನು'

1. 'ಇಯಂ ಮಹ್ಯಹಮಸ್ಮೀತಿ ಚ' ಎಂದು ಆ॥ ಪಾಠದಲ್ಲಿ ಹೆಚ್ಚಾಗಿದೆ. ಚಶಬ್ದವೂ ಅವಶ್ಯವಿಲ್ಲವೆಂದೇ ಕಾಣುತ್ತದೆ.

ಎಂದು ಅರಿಯದಿರುವವೋ ತಿಳಿದುಕೊಳ್ಳಲಾರದೆ ಇರುವವೋ[1] ಹೀಗೆಯೇ ಸೋಮ್ಯನೆ, ಈ ಪ್ರಜೆಗಳೆಲ್ಲ **ಸತ್ತಿನಲ್ಲಿ ಒಂದಾಗಿ ಅರಿಯದೆ ಇರುವವಲ್ಲ, ಆದ್ದರಿಂದಲೇ ಸತ್ತಿನಿಂದ ಬಂದವೇಲೂ ಸತ್ತಿನಿಂದ ಬರುತ್ತಿದೇವೆ, (ಎಂದಾಗಲಿ) ಬಂದೆವು ಎಂದಾಗಲಿ ಅರಿಯದೆ ಇರುಪವು.**[2] 'ಅವು ಇಲ್ಲಿ ಹುಲಿಯೋ ' ಮುಂತಾದ ಮಿಕ್ಕ (ಗ್ರಂಥವು ಹಿಂದಿನವಕ್ಕೆ) ಸಮಾನವಾಗಿದೆ ।

## ಶಂಕೆ: ಕಾರಣದಲ್ಲಿ ಸೇರಿದರೂ ಜೀವರಿಗೆ ನಾಶವಿಲ್ಲವೇಕೆ?

(ಭಾಷ್ಯ)

೫೧೨ ದೃಷ್ಟಂ ಲೋಕೇ ಜಲೇ ವೀಚೀತರಙ್ಗಫೇನಬುದ್ಬುದಾದಯ ಉತ್ಥಿತಾಃ ಪುನಸ್ತದ್ಭಾವಂ ಗತಾ ವಿನಷ್ಟಾ ಇತಿ । ಜೀವಾಸ್ತು ತತ್ಕಾರಣಭಾವಂ ಪ್ರತ್ಯಹಂ ಗಚ್ಛನ್ತೋಽಪಿ ಸುಷುಪ್ತೇ ಮರಣಪ್ರಲಯಯೋಶ್ಚ ನ ವಿನಶ್ಯನ್ತಿ ಇತ್ಯೇತದ್ ಭೂಯ ಏವ ಮಾ ಭಗವಾನ್ ವಿಜ್ಞಾಪಯತು ದೃಷ್ಟಾನ್ತೇನ । ತಥಾ ಸೋಮ್ಯ ಇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಲೋಕದಲ್ಲಿ ನೀರಿನಲ್ಲಿ ಅಲೆ, ತೆರೆ, ನೊರೆ, ಗುಳ್ಳೆ - ಮುಂತಾದವು ಎದ್ದು ಕೊಂಡು ಮತ್ತೆ ಆ (ನೀರಿನ) ಭಾವವನ್ನು ಹೊಂದಿದರೆ ನಾಶವಾಗುವವು ಎಂದು ಕಂಡುಬರುತ್ತದೆ ಜೀವರಾದರೋ ದಿನದಿನವೂ ಸುಷುಪ್ತಿಯಲ್ಲಿ ಸಾವು, ಪ್ರಲಯ - ಇವುಗಳಲ್ಲಿಯೂ ತಮ್ಮ ಕಾರಣದ ಸ್ವರೂಪವನ್ನು[4] ನಾಶವಾಗುವ ದಿಲ್ಲವಲ್ಲ! ಇದನ್ನು ಮತ್ತೂ ನನಗೆ ಭಗವಂತನಾದ (ನೀನು) ದೃಷ್ಟಾಂತದಿಂದ ತಿಳಿಯಹೇಳಬೇಕು -(ಎಂದು ಕೇಳಲು) ತಂದೆಯು 'ಸೋಮ್ಯನೆ, ಹಾಗೇ ಆಗಲಿ!' ಎಂದನು.

---

1. ಎಲ್ಲವೂ ಸಮುದ್ರವೇ ಆಗಿರುವದರಿಂದ ಅವನ್ನು ಹೇಗೆ ಬೇರೆಬೇರೆಯಾಗಿ ಅರಿಯುವದಕ್ಕೆ ಬರುವದಿಲ್ಲವೋ ಎಂದರ್ಥ.

2. ಸುಷುಪ್ತಿಯಲ್ಲಿ ಒಂದಾಗಿರುವದರಿಂದ ವಿಶೇಷವಾಗಿ ಇಂಥವನೆಂದು ಅರಿಯುವದಕ್ಕೆ ಆಗುವದಿಲ್ಲ; ಆದ್ದರಿಂದ ಎಚ್ಚರುವಾಗ ಸತ್ತಿನಿಂದ ಬರುತ್ತಿದೇನೆ ಎಂದಾಗಲಿ, ಎಚ್ಚತ್ತಮೇಲೆ ಸತ್ತಿನಿಂದ ಬಂದೆನು ಎಂದಾಗಲಿ ಜ್ಞಾನವಾಗಲಾರದು ಗ್ರಾಮದ ದೃಷ್ಟಾಂತದಲ್ಲಿ ಹೊಂದು ವಾಗಲೇ ಅರಿವು ಇರುತ್ತದೆ, ಏಕೆಂದರೆ ಹೊರಟವನು ವ್ಯಕ್ತಿಯಾಗಿ ಬೇರೆಯಿರುತ್ತಾನೆ.

3. ಜ್ಞಾನವಿಲ್ಲದೆ ಒಂದಾಗಿರುವದರಿಂದ ವಾಸನೆಯು ಹಾಗೇ ಉಳಿದುಕೊಂಡಿರುತ್ತದೆ- ಎಂದು ಇಲ್ಲಿಯೂ ಇಟ್ಟುಕೊಳ್ಳಬೇಕು ಎಂದರ್ಥ.

4. ಪರಮಾತ್ಮನನ್ನು ಎಂದರ್ಥ. ಜೀವನು ಕಾರ್ಯವೆಂಬ ಭಾವನೆಯಿಂದ ಈ ಶಂಕೆ ಯನ್ನು ಮಾಡಿದೆ, ನಿಜವಾಗಿ ಹಾಗಿಲ್ಲ.

# ಆರನೆಯ ಅಧ್ಯಾಯ—ಹನ್ನೊಂದನೆಯ ಖಂಡ

(ಸತ್ಸಂಪತ್ತಿಯ ವಿಷಯಕ್ಕೆ ಆಕ್ಷೇಪಸಮಾಧಾನಗಳು)

## ಜೀವನಿಗೆ ನಾಶವಿಲ್ಲವೆಂಬುದಕ್ಕೆ ವೃಕ್ಷದೃಷ್ಟಾಂತ

(ಉಪನಿಷತ್ತು)

**ಅಸ್ಯ ಸೋಮ್ಯ ಮಹತೋ ವೃಕ್ಷಸ್ಯ ಯೋ ಮೂಲೇऽಭ್ಯಾಹನ್ಯಾಜ್ಜೀವನ್ ಸ್ರವೇದ್ಯೋ ಮಧ್ಯೇऽಭ್ಯಾಹನ್ಯಾಜ್ಜೀವನ್ ಸ್ರವೇದ್ಯೋऽಗ್ರೇऽಭ್ಯಾಹನ್ಯಾಜ್ಜೀವನ್ ಸ್ರವೇತ್ಸ ಏಷ ಜೀವೇನಾऽऽತ್ಮನಾऽನುಪ್ರಭೂತಃ ಪೇಪೀಯಮಾನೋ ಮೋದಮಾನಸ್ತಿಷ್ಠತಿ ॥ ೧ ॥**

**ಅಸ್ಯ ಯದೇಕಾಗ್ಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ ದ್ವಿತೀಯಾಂ ಜಹಾತ್ಯಥ ಸಾ ಶುಷ್ಯತಿ ತೃತೀಯಾಂ ಜಹಾತ್ಯಥ ಸಾ ಶುಷ್ಯತಿ ಸರ್ವಂ ಜಹಾತಿ ಸರ್ವಃ ಶುಷ್ಯತಿ ॥ ೨ ॥**

೧. ಸೋಮ್ಯನೆ, ಈ ದೊಡ್ಡ ವೃಕ್ಷದ ಬುಡದಲ್ಲಿ ಯಾವನಾದರೂ ಹೊಡೆಯುತ್ತಾನಾದರೆ ಬದುಕಿದ್ದು ಸ್ರವಿಸುವದು ; ಯಾವನಾದರೂ ನಡುವೆ ಹೊಡೆಯುತ್ತಾನಾದರೆ ಬದುಕಿದ್ದು ಸ್ರವಿಸುವದು ; ಯಾವನಾದರೂ ಮೇಲುಗಡೆ ಹೊಡೆಯುತ್ತಾನಾದರ ಬದುಕಿದ್ದು ಸ್ರವಿಸುವದು. ಆ ಇದು ಜೀವಾತ್ಮನಿಂದ ತುಂಬಿಕೊಂಡು ಕುಡಿಕುಡಿಯುತ್ತಾ ಮೋದವನ್ನು ಅನುಭವಿಸುತ್ತಾ ಇರುತ್ತದೆ.

೨. ಇದರ ಒಂದು ಕೊಂಬೆಯನ್ನು ಜೀವನು ಬಿಡುತ್ತಾನಾದರೆ, ಆಗ ಅದು ಒಣಗುತ್ತದೆ; ಎರಡನೆಯದನ್ನು ಬಿಡುತ್ತಾನಾದರೆ, ಆಗ ಅದು ಒಣಗುತ್ತದೆ; ಮೂರನೆಯದನ್ನು ಬಿಡುತ್ತಾನಾದರೆ, ಆಗ ಅದು ಒಣಗುತ್ತದೆ ; ಎಲ್ಲವನ್ನೂ ಬಿಡುತ್ತಾನಾದರೆ, ಎಲ್ಲವೂ ಒಣಗುತ್ತದೆ.

## ಜೀವನ ಸಂಪರ್ಕದಿಂದ ಶರೀರವು ಬದುಕಿಗುತ್ತದೆ

(ಭಾಷ್ಯ)

೫೧೩. ಶೃಣು ದೃಷ್ಟಾನ್ತಮ್ । ಅಸ್ಯ ಹೇ ಸೋಮ್ಯ ಮಹತೋऽನೇಕಶಾಖಾದಿಯುಕ್ತಸ್ಯ ವೃಕ್ಷಸ್ಯ । ಅಸ್ಯ ಇತ್ಯಗ್ರತಃ ಸ್ಥಿತಂ ವೃಕ್ಷಂ ದರ್ಶಯನ್ ಆಹ ।

ಯದಿ ಯಃ ಕಶ್ಚಿತ್ ಅಸ್ಯ ಮೂಲೇ ಅಭ್ಯಾಹನ್ಯಾತ್ ಪರಶ್ವಾದಿನಾ ಸಕೃದ್ ಘಾತಮಾತ್ರೇಣ ನ ಶುಷ್ಯತಿ,[1] ಜೀವನ್ನೇವ ಭವತಿ । ತದಾ ತಸ್ಯ ರಸಃ ಸ್ರವೇತ್ । ತಥಾ ಯೋ ಮಧ್ಯೇಽಭ್ಯಾಹನ್ಯಾತ್ ಜೀವನ್ ಸ್ರವೇತ್ । ತಥಾ ಯೋಽಗ್ರೇ ಅಭ್ಯಾಹನ್ಯಾತ್ ಜೀವನ್ ಸ್ರವೇತ್ । ಸ ಏಷ ವೃಕ್ಷ ಇದಾನೀಂ ಜೀವೇನಾಽಽತ್ಮನಾ ಅನುಪ್ರಭೂತಃ ಅನುವ್ಯಾಪ್ತಃ ಪೇಪೀಯಮಾನಃ ಅತ್ಯರ್ಥಂ ಪಿಬನ್ನುದಕಂ ಭೌಮಾಂಶ್ಚ ರಸಾನ್ ಮೂಲೈರ್ಗೃಹ್ಣನ್ ಮೋದಮಾನಃ ಹರ್ಷಂ ಪ್ರಾಪ್ನುವನ್ ತಿಷ್ಠತಿ ॥

ತಸ್ಯಾಸ್ಯ ಯದೇಕಾಂ ಶಾಖಾಂ ರೋಗಗ್ರಸ್ತಾಮ್ ಆಹತಾಂ ವಾ ಜೀವೋ ಜಹಾತಿ ಉಪಸಂಹರತಿ ಶಾಖಾಯಾಂ ವಿಪ್ರಸೃತಮ್ ಆತ್ಮಾಂಶಮ್ । ಅಥ ಸಾ ಶುಷ್ಯತಿ । ವಾಙ್ಮನಃಪ್ರಾಣಕರಣಗ್ರಾಮಾನುಪ್ರವಿಷ್ಟೋ ಹಿ ಜೀವ ಇತಿ ತದುಪಸಂಹಾರೇ ಉಪಸಂಹ್ರಿಯತೇ । ಜೀವೇನ ಚ ಪ್ರಾಣಯುಕ್ತೇನ ಅಶಿತಂ ಪೀತಂ ಚ ರಸತಾಂ ಗತಂ ಜೀವಚ್ಛರೀರಂ ವೃಕ್ಷಂ ಚ ವರ್ಧಯತ್ ರಸರೂಪೇಣ ಜೀವಸ್ಯ ಸದ್ಭಾವೇ ಲಿಙ್ಗಂ ಭವತಿ । ಅಶಿತಪೀತಾಭ್ಯಾಂ ಹಿ ದೇಹೇ ಜೀವಸ್ತಿಷ್ಠತಿ । ತೇ ಚಾಶಿತಪೀತೇ ಜೀವಕರ್ಮಾನುಸಾರಿಣೀ ಇತಿ ತಸ್ಯ ಏಕಾಙ್ಗವೈಕಲ್ಯನಿಮಿತ್ತಂ ಕರ್ಮ ಯದಾ ಉಪಸ್ಥಿತಂ ಭವತಿ ತದಾ ಜೀವ ಏಕಾಂ ಶಾಖಾಂ ಜಹಾತಿ । ಶಾಖಾಯಾ ಆತ್ಮಾನಮ್ ಉಪಸಂಹರತಿ । ಅಥ ತದಾ ಸಾ ಶಾಖಾ ಶುಷ್ಯತಿ । ಜೀವಸ್ಥಿತಿನಿಮಿತ್ತೋ ರಸೋ ಜೀವಕರ್ಮಾಕ್ಷಿಪ್ತೋ ಜೀವೋಪಸಂಹಾರೇ ನ ತಿಷ್ಠತಿ । ರಸಾಪಗಮೇ ಚ ಶಾಖಾ ಶೋಷಮುಪೈತಿ । ತಥಾ ಸರ್ವಂ ವೃಕ್ಷಮೇವ ಯದಾ ಅಯಂ ಜಹಾತಿ ತದಾ ಸರ್ವೋಽಪಿ ವೃಕ್ಷಃ ಶುಷ್ಯತಿ । ವೃಕ್ಷಸ್ಯ ರಸಸ್ರವಣ ಶೋಷಣಾದಿಲಿಙ್ಗಾತ್, ಜೀವವತ್ತ್ವಮ್ । ದೃಷ್ಟಾನ್ತಶ್ರುತೇಶ್ಚ ಚೇತನಾವನ್ತಃ ಸ್ಥಾವರಾ ಇತಿ ಬೌದ್ಧಕಾಣಾದಮತಮಚೇತನಾಃ ಸ್ಥಾವರಾ ಇತ್ಯೇತದಸಾರಮಿತಿ ದರ್ಶಿತಂ ಭವತಿ ॥

(ಭಾಷ್ಯಾರ್ಥ)

ದೃಷ್ಟಾಂತವನ್ನು ಕೇಳು. ಎಲೈ ಸೋಮ್ಯನೆ, ಈ ದೊಡ್ಡದಾದ ಹಲವು ಕೊಂಬೆಗಳೇ ಮುಂತಾದವುಗಳಿಂದೊಡಗೂಡಿರುವ ಮರದ– (ಇಲ್ಲಿ) 'ಈ (ಮರದ)' ಎಂದು ಎದುರಿಗಿರುವ ಮರವನ್ನು ತೋರಿಸಿ ಹೇಳುತ್ತಿದಾನೆ– ಯಾವನಾದರೂ ಇವರ ಬುಡದಲ್ಲಿ ಕೊಡಲಿಯೇ ಮುಂತಾದದ್ದರಿಂದ ಹೊಡೆಯುತ್ತಾನಾದರೆ, ಒಂದು ಸಲ ಹೊಡೆದಮಾತ್ರದಿಂದ ಒಣಗುವದಿಲ್ಲ, ಬದುಕಿಯೇ ಇರುತ್ತದೆ, ಆಗ ಅದರ ರಸವು ಸುರಿಯುತ್ತದೆ. ಹೀಗೆಯೇ ನಡುವೆ ಯಾವನಾದರೂ ಹೊಡೆಯುತ್ತಾನಾದರೆ ಬದುಕಿದ್ದು ಸ್ರವಿಸುತ್ತದೆ; ಹೀಗೆಯೇ ಯಾವ

1. ಈ ಮಾತಿನ ಮುಂದೆ ಅಚ್ಚಿನ ಪುಸ್ತಕದಲ್ಲಿರುವ ಇತಿ ಬೇಕಿಲ್ಲವೆಂದು ಬಿಟ್ಟಿದೆ.

ನಾದರೂ ಮೇಲುಗಡೆ ಹೊಡೆಯುತ್ತಾನಾದರೆ ಬದುಕಿದ್ದು ಸ್ರವಿಸುತ್ತದೆ. ಆ ಈ ವೃಕ್ಷವು ಈಗ ಜೀವಾತ್ಮನಿಂದ ತುಂಬಿಕೊಂಡು ಎಲ್ಲೆಲ್ಲಿಯೂ ವ್ಯಾಪ್ತವಾಗಿದ್ದು ಕುಡಿ ಕುಡಿಯುತ್ತಾ ನೀರನ್ನೂ ಭೂಮಿಯ ರಸಗಳನ್ನೂ ಬೇಕಾದಷ್ಟು ಕುಡಿಯುತ್ತಾ ಬೇರುಗಳಿಂದ ಹೀರಿಕೊಳ್ಳುತ್ತಾ ಮೋದವನ್ನನುಭವಿಸುತ್ತಾ ಹರ್ಷಪಡುತ್ತಾ ಇರುತ್ತದೆ

ಆ ಇದರ ರೋಗಗ್ರಸ್ತವಾದ ಅಥವಾ (ಯಾರಾದರೂ) ಹೊಡೆದ ಒಂದು ಕೊಂಬೆಯನ್ನು ಜೀವನು ಬಿಡುತ್ತಾನಾದರೆ, ಅಂದರೆ (ಆ) ಕೊಂಬೆಯಲ್ಲಿ ಹರಡಿದ್ದ ತನ್ನ ಅಂಶವನ್ನು ಒಳಸರಿಯಿಸಿಕೊಳ್ಳುತ್ತಾನಾದರೆ, ಆಗ ಆ (ಕೊಂಬೆಯು) ಒಣಗುತ್ತದೆ. ವಾಕ್ಕು. ಮನಸ್ಸು, ಪ್ರಾಣ, ಕರಣಸಮೂಹ- ಇವುಗಳೊಳಗೆ ಹೊಕ್ಕವನಲ್ಲವೆ, ಜೀವನು[1] ? ಆದ್ದರಿಂದ ಅವುಗಳ ಉಪಸಂಹಾರವಾದರೆ (ಅವನೂ) ಉಪಸಂಹೃತನಾಗುತ್ತಾನೆ.[2] ಪ್ರಾಣದಿಂದೊಡಗೂಡಿದ[3] ಜೀವನು ಉಂಡದ್ದು, ಕುಡಿದದ್ದು (ಇವು) ರಸವಾಗಿ ಬದುಕಿರುವ ಶರೀರವನ್ನೂ ವೃಕ್ಷವನ್ನೂ ಬೆಳೆಯಿಸುತ್ತಿರುವದರಿಂದ ರಸರೂಪವನ್ನು ಹೊಂದಿರುವದರಿಂದ ಜೀವನು (ಆ ಶರೀರದಲ್ಲಿ ಅಥವಾ ಮರದಲ್ಲಿ) ಇದಾನೆಂಬುದಕ್ಕೆ ಲಿಂಗವಾಗಿರುತ್ತದೆ. ಉಂಡನ್ನ, ಕುಡಿದ ನೀರು- ಇವುಗಳಿಂದಲ್ಲವೆ, ಜೀವನು ದೇಹದಲ್ಲಿ ಇದ್ದುಕೊಂಡಿರುತ್ತಾನೆ ? ಆ ಉಂಡದ್ದು, ಕುಡಿದದ್ದು -(ಇವು) ಜೀವನ ಕರ್ಮಕ್ಕೆ ಅನುಸಾರವಾಗಿರುತ್ತವೆ ಯಾದ್ದರಿಂದ ಅವನು ಒಂದು ಅಂಗವು ವಿಕಲವಾಗುವದಕ್ಕೆ ನಿಮಿತ್ತವಾದ ಕರ್ಮವು ಯಾವಾಗ ಬಂದೊದಗುತ್ತದೆಯೋ ಆಗ ಜೀವನು ಒಂದು ಕೊಂಬೆಯನ್ನು ಬಿಡುತ್ತಾನೆ ಕೊಂಬೆಯಿಂದ ತನ್ನ (ಅಂಶವ)ನ್ನು ಒಳಸರಿಯಿಸಿಕೊಳ್ಳುತ್ತಾನೆ. (ಅಥವಾ) ಆಗ ಆ ಶಾಖೆಯು ಒಣಗುತ್ತದೆ ಜೀವನು ಇದ್ದುಕೊಂಡಿರುವದಕ್ಕೆ ಕಾರಣವಾಗಿರುವ ರಸವು ಜೀವನ ಕರ್ಮದಿಂದ ಉಂಟಾಗಿರುವದರಿಂದ ಜೀವನು ಉಪಸಂಹೃತನಾಗಲು (ಅಲ್ಲಿ) ನಿಲ್ಲುವದಿಲ್ಲ ರಸವು ಹೋಗಲು ಕೊಂಬೆಯು ಒಣಕಲಾಗುತ್ತದೆ. ಹೀಗೆಯೇ ಮರವೆಲ್ಲವನ್ನೂ ಯಾವಾಗ ಈ (ಜೀವನು) ಬಿಟ್ಟುಬಿಡುತ್ತಾನೋ ಆಗ ಮರವೆಲ್ಲವೂ ಒಣಗುತ್ತದೆ ರಸವು ಸುರಿಯುವದು, (ಮರವು) ಒಣಗುವದು- ಮುಂತಾದ ಲಿಂಗದಿಂದ ಮರವು ಜೀವವುಳ್ಳದ್ದೆಂದು

1. 'ಜೀವೇನಾಽಽತ್ಮನಾನುಪ್ರವಿಶ್ಯ' ಎಂಬ (೬-೩-೨) ವಚನದ ಸೂಚನೆಯಿದು. ಆತ್ಮನು ತನ್ನ ಸ್ವರೂಪದಲ್ಲಿಯೇ ಇದ್ದು ವಾಗಾದಿಕರಣಕಲಾಪದಲ್ಲಿ ವಿಶೇಷರೂಪದಿಂದ ಜ್ಞಾನ ಕರ್ಮಗಳನ್ನು ವ್ಯಕ್ತಪಡಿಸುತ್ತಿರುವದೇ ಪ್ರವೇಶವು. ಆತ್ಮಸ್ವರೂಪವು ಆಗಲೂ ಹಾಗೆಯೇ ಇರುತ್ತದೆ.

2. ಜೀವನೆಂದರೇ ಪ್ರಾಣಧಾರಣಮಾಡಿದವನು , ವಾಗಾದಿಗಳಿಂದ ಕೂಡಿದವನು ಎಂದು ಅರ್ಥ. ಆದ್ದರಿಂದ ವಾಗಾದಿಗಳಿಲ್ಲವಾಗಲು ಜೀವತ್ವವೂ ಇಲ್ಲವಾಗುತ್ತದೆ.

3. ಪ್ರಾಣದಿಂದೊಡಗೂಡಿದ ಜೀವನಿರುವಾಗಲೇ ಮರವು ಹಸಿಯಾಗಿರುತ್ತದೆ ಎಂದು ಭಾವ.

(ಗೊತ್ತಾಗುತ್ತದೆ). ಮತ್ತು (ಈ) ದೃಷ್ಟಾಂತಶ್ರುತಿಯಿಂದ ಸ್ಥಾವರಗಳೂ ಚೇತನಾವಂತವೇ[1] ಆಗಿರುತ್ತವೆ ಎಂದು (ಗೊತ್ತಾಗುತ್ತದೆ)ಯಾದ್ದರಿಂದ **ಸ್ಥಾವರಗಳು ಅಚೇತನವು ಎಂದು (ಹೇಳುವ) ಬೌದ್ಧರ ಮತ್ತು ಕಾಣಾದರ ಮತವು ಸಾರವಿಲ್ಲದ್ದೆಂದು ತಿಳಿಸಿದಂತೆ ಆಗಿರುತ್ತದೆ.**

(ಉಪನಿಷತ್ತು)

**ಏವಮೇವ ಖಲು ಸೋಮ್ಯ ವಿದ್ಧೀತಿ ಹೋವಾಚ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ || ೩ ||**

೩. 'ಹೀಗೆಯೇ, ಸೋಮ್ಯನೆ, (ಇದನ್ನು) ತಿಳಿದುಕೊ. ಜೀವನಿಂದ ರಹಿತವಾಗಿಯೇ ಈ (ಶರೀರ)ವು ಸಾಯುತ್ತದೆ, ಜೀವನು ಸಾಯುವದಿಲ್ಲ. ಆ ಈ ಅಣಿಮೆಯುಳ್ಳದೆಯಲ್ಲ, ಇದೆಲ್ಲವೂ ಐತದಾತ್ಮ್ಯವು. ಅದು ಸತ್ಯವು, ಅದೇ ಆತ್ಮನು, ಶ್ವೇತಕೇತುವೆ, ಅದೇ ನೀನಾಗಿರುವೆ' ಎಂದನು. 'ಭಗವಂತನು ಮತ್ತೂ ನನಗೆ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ!' ಎಂದನು.

## ಶರೀರಕ್ಕೆ ನಾಶವೇ ಹೊರತು ಜೀವನಿಗಲ್ಲ

(ಭಾಷ್ಯ)

೫೧೪. ಯಥಾ ಅಸ್ಮಿನ್ ವೃಕ್ಷದೃಷ್ಟಾನ್ತೇ ದರ್ಶಿತಂ ಜೀವೇನ ಯುಕ್ತೋ ವೃಕ್ಷೋ ಅಶುಷ್ಕೋ ರಸಪಾನಾದಿಯುಕ್ತೋ ಜೀವತೀತ್ಯುಚ್ಯತೇ, ತದಪೇತಶ್ಚ ಮ್ರಿಯತ ಇತ್ಯುಚ್ಯತೇ । ಏವಮೇವ ಖಲು ಸೋಮ್ಯ ವಿದ್ಧೀತಿ ಹ ಉವಾಚ । ಜೀವಾಪೇತಂ ಜೀವವಿಯುಕ್ತಂ ವಾವ ಕಿಲ ಇದಂ ಶರೀರಂ ಮ್ರಿಯತೇ ನ ಜೀವೋ ಮ್ರಿಯತ ಇತಿ । ಕಾರ್ಯಶೇಷೇ ಚ ಸುಪ್ತೋತ್ಥಿತಸ್ಯ ಮಮೇದಂ ಕಾರ್ಯಶೇಷಮಪರಿಸಮಾಪ್ತಮಿತಿ ಸ್ಮೃತ್ವಾ ಸಮಾಪನದರ್ಶನಾತ್ । ಜಾತಮಾತ್ರಾಣಾಂ ಚ

---

1. ಸ್ಥಾವರಗಳು ಒಳಅರಿವುಳ್ಳವು, ಜಂಗಮಗಳು ಹೊರಅರಿವುಳ್ಳವು, ಮನುಷ್ಯನು ವಿವೇಕವುಳ್ಳವನು– ಹೀಗೆ ಮಾತ್ರ ಪ್ರಾಣಿಗಳಲ್ಲಿ ಭೇದ ಎಂದು ಬ್ರಾಹ್ಮಣಗಳಲ್ಲಿದೆ. ವೃಕ್ಷಾದಿಗಳೂ ಚೇತನಾವಂತಗಳೆಂಬುದನ್ನು ಭಾರತಾದಿಗಳಲ್ಲಿಯೂ ಹೇಳಿವೆ

ಜನ್ತೂನಾಂ ಸ್ತನ್ಯಾಭಿಲಾಷಭಯಾದಿದರ್ಶನಾಚ್ಚ ಅತೀತಜನ್ಮಾನ್ತರಾನುಭೂತ ಸ್ತನ್ಯಪಾನದುಃಖಾನುಭವಸ್ಮೃತಿರ್ಗಮ್ಯತೇ । ಅಗ್ನಿಹೋತ್ರಾದೀನಾಂ ಚ ವೈದಿಕಾನಾಂ ಕರ್ಮಣಾಮ್ ಅರ್ಥವತ್ತ್ವಾತ್, ನ ಜೀವೋ ಮ್ರಿಯತ ಇತಿ । 'ಸ ಯ ಏಷೋಽಣಿಮಾ' ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಈ ಮರದ ದೃಷ್ಟಾಂತದಲ್ಲಿ ಹೇಗೆ ತೋರಿಸಲಾಗಿದೆಯೋ, (ಹೇಗೆ) ಜೀವನಿಂದೊಡಗೂಡಿದ ಮರವು ಒಣಗದೆ ರಸವನ್ನು ಕುಡಿಯುವದೇ ಮುಂತಾದವುಗಳಿಂದ ಕೂಡಿರುವದರಿಂದ ಬದುಕಿದೆ ಎನ್ನುವರೋ, ಅವನಿಲ್ಲದ್ದಾದರೆ ಸತ್ತಿತೆನ್ನುವರೋ, ಹಾಗೆಯೇ ಸೋಮ್ಯನೆ, ಜೀವರಹಿತವಾದರೇ ಜೀವನಿಂದಗಲಿದರೇ ಈ ಶರೀರವು ಸಾಯುತ್ತದೆ , ಜೀವನು ಸಾಯುವದಿಲ್ಲ[1] ಎಂದು ಇದನ್ನು ತಿಳಿದುಕೊ ಎಂದನು ನಿದ್ರಿಸಿ ಎಚ್ಚತ್ತವನಿಗೆ ಕಾರ್ಯವು ಉಳಿದಿದ್ದರೆ 'ನನಗೆ ಈ ಕಾರ್ಯಶೇಷವು ಮುಗಿಯದೆ ಇದೆ' ಎಂದು ನೆನಪಿಗೆ ತಂದುಕೊಂಡು (ಅದನ್ನು) ಮುಗಿಸುವದು ಕಂಡುಬರುವದರಿಂದ (ಹೀಗೆಂದರಿಯಬೇಕು)[2]. ಹುಟ್ಟಿದಕೂಡಲೆ ಜೀವರಿಗೆ ಸ್ತನ್ಯದ ಅಭಿಲಾಷೆ, ಅಂಜಿಕೆ- ಮುಂತಾದವುಗಳು (ಇರುವದು) ಕಂಡುಬರುವದರಿಂದಲೂ ಹಿಂದೆ ಬೇರೊಂದು ಜನ್ಮದಲ್ಲಿ ಅನುಭವಿಸಿದ ಸ್ತನ್ಯಪಾನ, ದುಃಖದ ಅನುಭವ- ಇವುಗಳ ನೆನಹು ಎಂದು ಗೊತ್ತಾಗುತ್ತದೆ.[3] ಅಗ್ನಿಹೋತ್ರಗಳೇ ಮುಂತಾದ ವೈದಿಕಕರ್ಮಗಳು ಸಾರ್ಥಕವಾಗಬೇಕಾಗಿರುವದರಿಂದಲೂ ಜೀವನು ಸಾಯುವದಿಲ್ಲ (ಎಂದು ನಿಶ್ಚಯಿಸಬೇಕು)[4]

'ಆ ಈ ಅಣಿಮೆಯಿದೆಯಲ್ಲ' ಎಂದು ಮುಂತಾಗಿರುವ (ಗ್ರಂಥವು ಹಿಂದಿನದಕ್ಕೆ) ಸಮಾನವು.[5]

---

1. ಸ್ಥೂಲಶರೀರದ ಜನ್ಮಮರಣಗಳನ್ನೇ ಜೀವನ ಜನ್ಮಮರಣಗಳೆಂದು ಜನರು ಗೌಣವಾಗಿ ವ್ಯವಹರಿಸುತ್ತಾರೆ ಎಂದರ್ಥ. ಬೃ. ೪-೩-೮, ಸೂ. ಭಾ. ೨-೩-೧೬ (ಭಾ. ಭಾ. ೧೧೮).

2. ನಿದ್ರೆಯಲ್ಲಿ ಬ್ರಹ್ಮದೊಡನೆ ಒಂದಾದ ಜೀವನೇ ಮತ್ತೆ ಎಚ್ಚರುತ್ತಾನೆ ಎಂಬುದಕ್ಕೆ ಇದು ಗಮಕವೆಂದು ಭಾವ ಸೂ ಭಾ ೩-೨-೯ (ಭಾ ಭಾ. ೨೭೦ರಿಂದ ೨೭೨).

3 ಮರಣದಲ್ಲಿ ಜೀವನು ಬ್ರಹ್ಮವನ್ನು ಸೇರಿದ್ದಮೇಲೂ ಸುಷುಪ್ತಿಯಂತೆಯೇ ಮತ್ತೆ ಅದೇ ಜೀವನೇ ಜನ್ಮಾಂತರವನ್ನು ಹೊಂದುತ್ತಾನೆ ಎಂದು ಭಾವ.

4. ಕರ್ಮವನ್ನು ಮಾಡಿದವನಿಗೆ ಸ್ವರ್ಗಾದಿಫಲಗಳು ಆಗುತ್ತವೆ ಎಂಬ ಶ್ರುತಿಯು ಪ್ರಮಾಣವಾಗಬೇಕಾದರೆ ಜೀವನಿಗೆ ಮರಣವಿಲ್ಲವೆಂದು ಒಪ್ಪಬೇಕು- ಎಂದು ಭಾವ.

5. ಯಾವದರಲ್ಲಿ ಸೇರಿಕೊಂಡರೆ ಜೀವನು ಸ್ವರೂಪದಿಂದಿರುವದರಿಂದ ಸಾಯದ ಇರುವನೋ ಅದೇ ಸೂಕ್ಷ್ಮವಾದ ಎಲ್ಲರ ಆತ್ಮನು, ಅದೇ ನೀನು- ಎಂದು ಈ ವಾಕ್ಯಕ್ಕೆ ಅರ್ಥ ಮಾಡಿಕೊಳ್ಳಬೇಕು ಎಂದು ಭಾವ.

## ಶಂಕೆ: ಸ್ಥೂಲವಾದ ಜಗತ್ತು ಸೂಕ್ಷ್ಮವಾದ ಸದಾತ್ಮನಿಂದ ಆದದ್ದು ಹೇಗೆ?

(ಭಾಷ್ಯ)

೫೧೫ ಕಥಂ ಪುನರಿದಮತ್ಯನ್ತಸ್ಥೂಲಂ ಪೃಥಿವ್ಯಾದಿನಾಮರೂಪವಜ್ಜಗತ್ ಅತ್ಯನ್ತಸೂಕ್ಷ್ಮಾತ್ ಸದ್ರೂಪಾತ್, ನಾಮರೂಪರಹಿತಾತ್, ಸತೋ ಜಾಯತ ಇತ್ಯೇತದ್ ದೃಷ್ಟಾನ್ತೇನ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ। ತಥಾ ಸೋಮ್ಯ ಇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಇನ್ನು ಈ ಅತ್ಯಂತಸ್ಥೂಲವಾದ ಪೃಥಿವಿಯೇ ಮುಂತಾದ ನಾಮರೂಪಗಳುಳ್ಳ ಜಗತ್ತು ಅತ್ಯಂತಸೂಕ್ಷ್ಮವಾದ ನಾಮರೂಪರಹಿತವಾದ ಸತ್ತಿನಿಂದ ಉಂಟಾಗುತ್ತದೆ (ಎಂಬುದು) ಹೇಗೆ[1]? -ಎಂಬುದನ್ನು ದೃಷ್ಟಾಂತದಿಂದ ಮತ್ತೂ ನನಗೆ ಭಗವಂತನಾದ (ನೀನು) ತಿಳಿಯಹೇಳಬೇಕು ಎನ್ನಲು, 'ಸೋಮ್ಯನೆ, ಹಾಗೇ ಆಗಲಿ!' ಎಂದು ತಂದೆ ಹೇಳಿದನು.

---

# ಆರನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಸತ್ತಿನಿಂದ ಜಗತ್ತುಂಟಾಗುವ ಬಗ್ಗೆ ಶಂಕಾಸಮಾಧಾನಗಳು)

## ಸೂಕ್ಷ್ಮದಿಂದ ಸ್ಥೂಲವುಂಟಾಗುವದಕ್ಕೆ ಆಲದಬೀಜದ ದೃಷ್ಟಾಂತ

(ಉಪನಿಷತ್ತು)

**ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ ಭಿನ್ಧೀತಿ ಭಿನ್ನಂ ಭಗವ ಇತಿ ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾ ಧಾನಾ ಭಗವ ಇತ್ಯಾಸಾಮಙ್ಗೈಕಾಂ ಭಿನ್ಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ॥ ೧ ॥**

೧. 'ಆಲದಹಣ್ಣನ್ನು ಅಲ್ಲಿಂದ ತೆಗೆದುಕೊಂಡು ಬಾ', 'ಇಗೊ ಭಗವಂತನೆ, (ತಂದೆ)', 'ಒಡಿ'. 'ಒಡೆದೆ, ಭಗವಂತ!', 'ಇಲ್ಲಿ

1. ಕಾರಣವು ಕಾರ್ಯಕ್ಕಿಂತ ವಿಲಕ್ಷಣವಾಯಿತಲ್ಲ! -ಎಂದು ಶಂಕೆ.

(ನಿನಗೆ) ಏನು ಕಾಣುತ್ತದೆ?', 'ಅಣುಗಳಾದ ಈ ಬೀಜಗಳು, ಭಗವಂತ!', 'ಇವುಗಳಲ್ಲಿ ಒಂದನ್ನು ಒಡೆಯಪ್ಪ!', 'ಒಡೆದೆ, ಭಗವಂತ!', 'ಇಲ್ಲಿ (ನಿನಗೆ) ಏನು ಕಾಣುತ್ತದೆ!', 'ಏನೂ ಇಲ್ಲ, ಭಗವಂತ!'

## ಆಲದಬೀಜವನ್ನು ಒಡೆಯಿಸಿದ್ದು

(ಭಾಷ್ಯ)

೫೧೬ ಯದ್ಯೇತತ್ ಪ್ರತ್ಯಕ್ಷೀಕರ್ತುಮಿಚ್ಛಸಿ ಅತಃ ಅಸ್ಮಾನ್ಮಹತೋ ನ್ಯಗ್ರೋಧಾತ್ ಫಲಮೇಕಮಾಹರ ಇತ್ಯುಕ್ತಸ್ತಥಾ ಚಕಾರ ಸಃ। 'ಇದಂ ಭಗವ ಉಪಹೃತಂ ಫಲಮ್' ಇತಿ ದರ್ಶಿತವನ್ತಂ ಪ್ರತ್ಯಾಹ ಫಲಂ ಭಿನ್ಧಿ ಇತಿ। ಭಿನ್ನಮ್ ಇತ್ಯಾಹೇತರಃ। ತಮಾಹ ಪಿತಾ ಕಿಮತ್ರ ಪಶ್ಯಸಿ ? ಇತ್ಯುಕ್ತಃ ಆಹ ಅಣ್ವ್ಯಃ ಅಣುತರಾಃ ಇವ ಇಮಾ ಧಾನಾ ಬೀಜಾನಿ ಪಶ್ಯಾಮಿ ಭಗವಃ ಇತಿ। ಆಸಾಂ ಧಾನಾನಾಮ್ ಏಕಾಂ ಧಾನಾಮ್ ಅಙ್ಗ ಹೇ ವತ್ಸ ಭಿನ್ಧಿ ಇತ್ಯುಕ್ತ ಆಹ ಭಿನ್ನಾ ಭಗವ ಇತಿ। ಯದಿ ಭಿನ್ನಾ ಧಾನಾ ತಸ್ಯಾಂ ಭಿನ್ನಾಯಾಂ ಕಿಂ ಪಶ್ಯಸೀತ್ಯುಕ್ತ ಆಹ ನ ಕಿಂಚನ ಪಶ್ಯಾಮಿ ಭಗವ ಇತಿ ॥

(ಭಾಷ್ಯಾರ್ಥ)

ಇದನ್ನು ಪ್ರತ್ಯಕ್ಷಗೊಳಿಸಿಕೊಳ್ಳಲಿಚ್ಛಿಸುವೆಯಾದರೆ, (ಅಗೊ), ಆ ದೊಡ್ಡ ಆಲದಮರದಿಂದ ಒಂದು ಹಣ್ಣನ್ನು ತೆಗೆದುಕೊಂಡು ಬಾ -ಎನ್ನಲು ಅವನು ಹಾಗೇ ಮಾಡಿದನು. 'ಇಗೊ, ಭಗವಂತನೆ, ಹಣ್ಣನ್ನು ತಂದೆನು' -ಎಂದು ತೋರಿಸಲು (ಅವನನ್ನು ಕುರಿತು) 'ಹಣ್ಣನ್ನು ಒಡೆ' ಎಂದನು. (ಆ) ಇನ್ನೊಬ್ಬ(ನಾದ ಶ್ವೇತಕೇತು) ಒಡೆದೆನು ಎಂದನು. ಅವನನ್ನು (ಕುರಿತು) ತಂದೆ ಇಂತೆಂದನು. ಇಲ್ಲಿ ಏನು ಕಾಣಿಸುತ್ತದೆ? ಎನ್ನಲು (ಅವನು) (ಅಣ್ವ್ಯಃ=ಅಣುತರಾಃ) ಬಹಳ ಸೂಕ್ಷ್ಮವಾದಂತಿರುವ ಈ ಧಾನಗಳು ಬೀಜಗಳು ಕಾಣಿಸುತ್ತಿವೆ, ಭಗವಂತ! -ಎಂದನು. 'ಈ ಬೀಜಗಳಲ್ಲಿ ಒಂದು ಬೀಜವನ್ನು ಒಡೆಯಪ್ಪ, ಮಗು' ಎನ್ನಲು (ಅವನು) ಇಂತೆಂದನು. 'ಒಡೆದೆ, ಭಗವಂತ!' ಬೀಜವನ್ನು ಒಡೆದೆಯಾದರೆ ಅದನ್ನು ಒಡೆದ ಬಳಿಕ ಏನುಕಾಣಿಸುತ್ತದೆ?- ಎನ್ನಲು (ಶ್ವೇತಕೇತುವು) 'ಏನೂ ಕಾಣಿಸುವದಿಲ್ಲ, ಭಗವಂತ!' ಎಂದನು.

(ಉಪನಿಷತ್ತು)

**ತಗ್ಂ ಹೋವಾಚ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯೈಷೋಽಣಿಮ್ನ ಏವಂ ಮಹಾನ್ ನ್ಯಗ್ರೋಧಸ್ತಿಷ್ಠತಿ ಶ್ರದ್ಧತ್ಸ್ವ ಸೋಮ್ಯೇತಿ ॥ ೨ ॥**

೨. ಅವನನ್ನು ಕುರಿತು ಇಂತೆಂದನು : 'ಸೋಮ್ಯ, ಯಾವ ಈ ಅಣಿಮೆಯನ್ನು ಕಾಣದಿರುವೆಯೊ, ಇದೇ ಅಣಿಮೆಯಿಂದಲೇ' ಸೋಮ್ಯನೆ, ಹೀಗೆ ದೊಡ್ಡದಾಗಿರುವ ಆಲದಮರವು (ಎದ್ದು) ನಿಂತಿದೆ. ಸೋಮ್ಯನೆ, ಶ್ರದ್ಧೆಯಿಡು !'

## ಬೀಜದಿಂದ ಮರವಾಗಿರುವಂತೆ ಅಣುವಾದ ಸತ್ತಿನಿಂದಲೇ ಜಗತ್ತು ಆಗಿದೆ

(ಭಾಷ್ಯ)

೫೧೭ ತಂ ಪುತ್ರಂ ಹೋವಾಚ ವಟಧಾನಾಯಾಂ ಭಿನ್ನಾಯಾಂ ಯಂ ವಟಬೀಜಾಣಿಮಾನಂ ಹೇ ಸೋಮ್ಯ ಏತಂ ನ ನಿಭಾಲಯಸೇ ನ ಪಶ್ಯಸಿ। ತಥಾಪಿ ಏತಸ್ಯ ವೈ ಕಿಲ ಸೋಮ್ಯ, ಏಷ ಮಹಾನ್ ನ್ಯಗ್ರೋಧೋ ಬೀಜಸ್ಯ ಅಣಿಮ್ನಃ ಸೂಕ್ಷ್ಮಸ್ಯ ಅದೃಶ್ಯಮಾನಸ್ಯ ಕಾರ್ಯಭೂತಃ ಸ್ಥೂಲಶಾಖಾಸ್ಕಂಧಫಲಪಲಾಶವಾನ್ ತಿಷ್ಠತಿ ಉತ್ಪನ್ನಃ ಸನ್। ಉತ್ತಿಷ್ಠತಿ ಇತಿ ವಾ ಉಚ್ಛಬ್ದೋಽಧ್ಯಾಹಾರ್ಯಃ। ಅತಃ ಶ್ರದ್ಧತ್ಸ್ವ ಸೋಮ್ಯ ಸತ ಏವ ಅಣಿಮ್ನಃ ಸ್ಥೂಲಂ ನಾಮರೂಪಾದಿಮತ್ ಕಾರ್ಯಂ ಜಗತ್ ಉತ್ಪನ್ನಮಿತಿ। ಯದ್ಯಪಿ ನ್ಯಾಯಾಗಮಾಭ್ಯಾಂ ನಿರ್ಧಾರಿತೋಽರ್ಥಃ ತಥೈವೇತ್ಯವಗಮ್ಯತೇ, ತಥಾಪಿ ಅತ್ಯನ್ತಸೂಕ್ಷ್ಮೇಷು ಅರ್ಥೇಷು ಬಾಹ್ಯವಿಷಯಾಸಕ್ತಮನಸಃ ಸ್ವಭಾವಪ್ರವೃತ್ತಸ್ಯ ಅಸತ್ಯಾಂ ಗುರುತರಾಯಾಂ ಶ್ರದ್ಧಾಯಾಂ ದುರವಗಮತ್ವಂ ಸ್ಯಾತ್ ಇತ್ಯಾಹ ಶ್ರದ್ಧತ್ಸ್ವ ಇತಿ। ಶ್ರದ್ಧಾಯಾಂ ತು ಸತ್ಯಾಂ ಮನಸಃ ಸಮಾಧಾನಂ ಬುಭುತ್ಸಿತೇಽರ್ಥೇ ಭವೇತ್ ತತಶ್ಚ ತದರ್ಥಾವಗತಿಃ। "ಅನ್ಯತ್ರ ಮನಾ ಅಭೂವಮ್" (ಬೃ. ೧-೫-೩) ಇತ್ಯಾದಿಶ್ರುತೇಃ॥

(ಭಾಷ್ಯಾರ್ಥ)

ಆ ಮಗನನ್ನು ಕುರಿತು ಇಂತೆಂದನು. ಆಲದಬೀಜವನ್ನು ಒಡೆದಮೇಲೆ ಆಲದಬೀಜದ ಯಾವ ಈ ಸೂಕ್ಷ್ಮಾಂಶವನ್ನು (ನ ನಿಭಾಲಯಸೇ=ನ ಪಶ್ಯಸಿ) ಕಾಣಲಾರದೆ ಇರುವೆಯೋ ಆದರೂ ಇದೇ ಬೀಜದ ಅಣಿಮೆಯ ಕಾಣದಿರುವ ಸೂಕ್ಷ್ಮ(ವಾದ ಅಂಶದ) ಕಾರ್ಯವಾಗಿ ಸ್ಥೂಲವಾದ ಕೊಂಬೆ, ಬುಡ, ಹಣ್ಣು, ಎಲೆ-ಮುಂತಾದವುಗಳುಳ್ಳ ಈ ದೊಡ್ಡ ಆಲದಮರವು ಹುಟ್ಟಿ ನಿಂತಿರುತ್ತದೆ, ಎದ್ದುನಿಂತಿದೆ ಎಂದು ಉಚ್ಛಬ್ದವನ್ನು (ಇಲ್ಲಿ) ಅಧ್ಯಾಹಾರಮಾಡಿಕೊಂಡಾದರೂ (ಅರ್ಥಮಾಡ)ಬೇಕು.[1]

---

1. ತಿಷ್ಠತಿ ಎಂದರೆ ನಿಂತಿದೆ ಎಂದರ್ಥ. ಹುಟ್ಟಿನಿಂತಿದೆ ಎಂಬರ್ಥವು ಅದರಿಂದಲೇ ಆಗುತ್ತದೆ ಅಥವಾ ತಿಷ್ಠತಿ ಎಂಬುದು ಉತ್ತಿಷ್ಠತಿ ಎಂಬುದರ ರೂಪವು ಎಂದು ಇಟ್ಟುಕೊಂಡರೆ ಹುಟ್ಟಿ ಎದ್ದುನಿಂತಿದೆ ಎಂಬರ್ಥವು ಸ್ಫುಟವಾಗಿ ತೋರುತ್ತದೆ ಎಂದಭಿಪ್ರಾಯ.

ನ್ಯಾಯ, ಆಗಮ[1]- ಇವುಗಳಿಂದ ನಿಶ್ಚಯಿಸಿದ ಅರ್ಥವು ಹಾಗೆಯೇ ಎಂದು ತೀರ್ಮಾನವಾಗುತ್ತದೆಯಾದರೂ ಅತ್ಯಂತಸೂಕ್ಷ್ಮವಾದ ವಿಷಯಗಳಲ್ಲಿ ಹೊರಗಿನ ವಿಷಯಗಳಲ್ಲಿ ಆಸಕ್ತವಾದ ಮನಸ್ಸು ಸ್ವಭಾವದಿಂದಲೇ (ಹೊರಕ್ಕೆ) ಪ್ರವೃತ್ತವಾಗಿರುವದರಿಂದ ಬಹಳ ಹೆಚ್ಚಿನ ಶ್ರದ್ಧೆಯಿಲ್ಲದಿದ್ದರೆ ನಿಶ್ಚಯಿಸುವದು ಕಷ್ಟವಾದೀತೆಂದು 'ಶ್ರದ್ಧೆಯಿಡು' ಎಂದು ಹೇಳಿರುತ್ತಾನೆ.[2] ಆದ್ದರಿಂದ ಸೋಮ್ಯನೆ, ಸೂಕ್ಷ್ಮವಾದ ಸತ್ತಿನಿಂದಲೇ ಸ್ಥೂಲವಾದ ನಾಮರೂಪಾದಿಗಳುಳ್ಳ ಕಾರ್ಯವಾದ ಜಗತ್ತು ಹುಟ್ಟಿದೆ ಎಂಬುದನ್ನು ಶ್ರದ್ಧೆಯಿಂದ ತಿಳಿದುಕೊ ಶ್ರದ್ಧೆಯಿದ್ದರಾದರೋ ಅರಿತುಕೊಳ್ಳಬೇಕಾಗಿರುವ ಅರ್ಥವು ಮನಸ್ಸಿನಲ್ಲಿ ನಿಲ್ಲುವದು. ಅದರಿಂದ ಆ ಅರ್ಥದ ನಿಶ್ಚಯವೂ ಆಗುವದು "ಮತ್ತೊಂದು ಕಡೆಯಲ್ಲಿ ಮನಸ್ಸಿದ್ದವನಾಗಿದ್ದೆನು" (ಬೃ. ೧-೫-೩) ಮುಂತಾದ ಶ್ರುತಿಯಿಂದ (ಹೀಗೆಂದು ಗೊತ್ತಾಗುತ್ತದೆ)[3]

## ಜಗನ್ಮೂಲವಾದ ಅಣಿಮೆಯೇ ಜೀವನ ಆತ್ಮ

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥**

೩. 'ಆ ಈ ಅಣಿಮೆಯುಂಟಲ್ಲ, ಇದೆಲ್ಲವೂ ಏತದಾತ್ಮ್ಯವು, ಅದು ಸತ್ಯವು ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನಾಗಿರುವೆ' ಎಂದನು. 'ಭಗವಂತನು ನನಗೆ ಮತ್ತೂ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ !', ಎಂದನು.

(ಭಾಷ್ಯ)

೫೧೮ 'ಸ ಯ' ಇತ್ಯಾದ್ಯುಕ್ತಾರ್ಥಮ್ ॥

---

1. ಆಗಮವೆಂದರೆ ಅನುಭವಕ್ಕೆ ಹೊಂದಿಕೊಂಡಿರುವ ಉಪದೇಶ, ನ್ಯಾಯವೆಂದರೆ ಆಗಮಾನುಸಾರಿಯಾದ ಯುಕ್ತಿ. ಇವುಗಳಿಂದ ತೋರಿಸಿಕೊಟ್ಟದ್ದರಲ್ಲಿ ಸಂಶಯವಾಗುವ ಸಂಭವವಿಲ್ಲ.

2 ಶ್ರದ್ಧೆಯಿಂದ ಆತ್ಮವಸ್ತುವಿನಲ್ಲಿ ಮನಸ್ಸಮಾಧಾನವುಂಟಾಗುತ್ತದೆ ಅದರಿಂದ ಶಾಸ್ತ್ರಯುಕ್ತಿಗಳ ಮೂಲಕ ತಿಳಿಯಬೇಕಾದ ವಸ್ತುವಿನ ಜ್ಞಾನವಾಗುತ್ತದೆ ಎಂದು ಅಭಿಪ್ರಾಯ.

3. ಈ ಶ್ರುತಿಯಲ್ಲಿ ಮನಸ್ಸು ವ್ಯಗ್ರವಾಗಿದ್ದರೆ ವಿಷಯಜ್ಞಾನವಾಗುವದಿಲ್ಲವೆಂದು ಹೇಳಿದೆ ; ಶ್ರದ್ಧೆಯೂ ಮನಸ್ಸಿನ ವೃತ್ತಿಯಿಂದೇ ಹೇಳಿದೆ.

(ಭಾಷ್ಯಾರ್ಥ)

'ಆ ಈ (ಅಣಿಮೆಯಿದೆಯಲ್ಲ)' ಎಂದು ಮುಂತಾಗಿರುವದಕ್ಕೆ ಅರ್ಥವನ್ನು ಹೇಳಿದ್ದಾಗಿದೆ.[1]

## ಶಂಕೆ : ಜಗನ್ಮೂಲವಾದ ಸತ್ತು ಏತಕ್ಕೆ ಕಾಣಿಸುವದಿಲ್ಲ ?

(ಭಾಷ್ಯ)

೫೧೯. ಯದಿ ತತ್ ಸತ್ ಜಗತೋ ಮೂಲಮ್ । ಕಸ್ಮಾನ್ನೋಪಲಭ್ಯತ ಇತ್ಯೇತದ್ ದೃಷ್ಟಾನ್ತೇನ ಮಾ ಭಗವಾನ್ ಭೂಯ ಏವ ವಿಜ್ಞಾಪಯತ್ವಿತಿ । ತಥಾ ಸೋಮ್ಯ ಇತಿ ಹೋವಾಚ ಪಿತಾ ॥

(ಭಾಷ್ಯಾರ್ಥ)

ಆ ಸತ್ತು ಜಗತ್ತಿನ ಮೂಲವಾಗಿದ್ದರೆ, ಏತಕ್ಕೆ ಕಾಣಿಸುವದಿಲ್ಲ ?– ಎಂಬಿದನ್ನು ದೃಷ್ಟಾಂತದಿಂದ ನನಗೆ ಭಗವಂತನು ಮತ್ತೂ ತಿಳಿಯಹೇಳಬೇಕು– ಎನ್ನಲು ತಂದೆಯು 'ಸೋಮ್ಯನೆ, ಹಾಗೇ ಆಗಲಿ !' ಎಂದನು.

---

# ಆರನೆಯ ಅಧ್ಯಾಯ-ಹದಿಮೂರನೆಯ ಖಂಡ

(ಸದಾತ್ಮನ ದರ್ಶನಕ್ಕೆ ಉಪಾಯವಿದೆ)

## ಸದಾತ್ಮಜ್ಞಾನಕ್ಕೆ ಉಪಾಯವಿದೆ ಎಂಬುದಕ್ಕೆ ಲವಣದೃಷ್ಟಾಂತ

(ಉಪನಿಷತ್ತು)

**ಲವಣಮೇತದುದಕೇಽವಧಾಯಾಥ ಮಾ ಪ್ರಾತರುಪಸೀದಥಾ ಇತಿ ಸ ಹ ತಥಾ ಚಕಾರ ತಗ್ಂ ಹೋವಾಚ ಯದ್ದೋಷಾ ಲವಣಮುದಕೇಽವಾಧಾ ಅಙ್ಗ ತದಾಹರೇತಿ ತದ್ಧಾವಮೃಶ್ಯ ನ ವಿವೇದ ॥ ೧ ॥**

---

1 ಅತ್ಯಂತಸೂಕ್ಷ್ಮವಾಗಿದ್ದರೂ ವ್ಯಾಕೃತಜಗತ್ತಿಗೆಲ್ಲ ಮೂಲವಾಗಿರುವ ಅದ್ವಿತೀಯ ಸತ್ತೇ ನಿನ್ನ ಆತ್ಮನು ಎಂದರ್ಥ.

೧. 'ಉಪ್ಪನ್ನು ಈ ನೀರಿನಲ್ಲಿ ಹಾಕಿಟ್ಟು ಇನ್ನು ಬೆಳಗ್ಗೆ ನನ್ನ ಬಳಿಗೆ ಬಾ' ಎಂದನು. ಅವನು ಹಾಗೇ ಮಾಡಿದನು. 'ಎಲಾ, ರಾತ್ರಿ ನೀರಿನಲ್ಲಿ ಉಪ್ಪನ್ನು ಹಾಕಿದ್ದೆಯಲ್ಲ, ಅದನ್ನು ತೆಗೆದುಕೊ' ಎಂದನು. ಅದನ್ನು ತಡಕಾಡಿ ಅರಿಯಲಾರದೆಹೋದನು.

## ನೀರಿನಲ್ಲಿ ಕರಗಿದ ಉಪ್ಪು ಕೈಗೆ ಸಿಕ್ಕದಿದ್ದದ್ದು

(ಭಾಷ್ಯ)

೫೨೦ ವಿದ್ಯಮಾನಮಪಿ ವಸ್ತು ನೋಪಲಭ್ಯತೇ ಪ್ರಕಾರಾನ್ತರೇಣ ತೂಪ ಲಭ್ಯತ ಇತಿ ಶೃಣ್ವತ್ರ ದೃಷ್ಟಾನ್ತಮ್। ಯದಿ ಚೇಮಮರ್ಥಂ ಪ್ರತ್ಯಕ್ಷೀಕರ್ತು ಮಿಚ್ಛಸಿ ಪಿಣ್ಡರೂಪಂ ಲವಣಮೇತದ್ ಘಟಾದೌ ಉದಕೇ ಅವಧಾಯ ಪ್ರಕ್ಷಿಪ್ಯ ಅಥ ಮಾ ಮಾಂ ಶ್ವಃ ಪ್ರಾತರುಪಸೀದಥಾ ಉಪಗಚ್ಛೇಥಾ ಇತಿ। ಸ ಹ ಪಿತ್ರಾ ಉಕ್ತಮರ್ಥಂ ಪ್ರತ್ಯಕ್ಷೀಕರ್ತುಮಿಚ್ಛನ್ ತಥಾ ಚಕಾರ। ತಂ ಹೋವಾಚ ಪರೇದ್ಯುಃ ಪ್ರಾತಃ। ಯಲ್ಲವಣಂ ದೋಷಾ ರಾತ್ರೌ ಉದಕೇ ಅವಾಧಾಃ ನಿಕ್ಷಿಪ್ತ ವಾನಸಿ ಅಙ್ಗ ಹೇ ವತ್ಸ ತದಾಹರ ಇತ್ಯುಕ್ತಃ ತಲ್ಲವಣಮ್ ಆಜಿಹೀರ್ಷುರ್ಹ ಕಿಲ ಅವಮೃಶ್ಯ ಉದಕೇ ನ ವಿವೇದ ನ ವಿಜ್ಞಾತವಾನ್ ಯಥಾ ತಲ್ಲವಣಂ ವಿದ್ಯಮಾನ ಮೇವ ಸತ್ ಅಪ್ಸು ಲೀನಂ ಸಂಶ್ಲಿಷ್ಟಮಭೂತ್ ॥

(ಭಾಷ್ಯಾರ್ಥ)

ಇದ್ದರೂ ವಸ್ತುವು ಕಾಣಿಸುವದಿಲ್ಲ, ಆದರೆ ಮತ್ತೊಂದು ಪ್ರಕಾರದಿಂದ ತಿಳಿಯಬರುತ್ತದೆ ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಕೇಳು ಮತ್ತು ಈ ಅರ್ಥವನ್ನು ಪ್ರತ್ಯಕ್ಷಗೊಳಿಸಿಕೊಳ್ಳುವದಕ್ಕೆ ಇಚ್ಛಿಸುವೆಯಾದರೆ ಗಟ್ಟಿಯಾಗಿರುವ ಈ ಉಪ್ಪನ್ನು ಗಡಿಗೆಯೇ ಮುಂತಾದದ್ದರಲ್ಲಿರುವ ನೀರಿನಲ್ಲಿ ಹಾಕಿ ಎಸೆದಿದ್ದು ಆಮೇಲೆ (ಮಾ=ಮಾಂ) ನನ್ನ ಬಳಿಗೆ ನಾಳೆ ಬೆಳಗ್ಗೆ (ಉಪಸೀದಥಾಃ- ಉಪ ಗಚ್ಛೇಥಾಃ) ಬಾ- ಎಂದನು.

ಅವನು ತಂದೆ ಹೇಳಿದ ವಿಷಯವನ್ನು ಪ್ರತ್ಯಕ್ಷಗೊಳಿಸಿಕೊಳ್ಳಲಿಚ್ಛಿಸಿದವ ನಾಗಿ ಹಾಗೆಯೇ ಮಾಡಿದನು. ಅವನನ್ನು (ಕುರಿತು) ಮಾರನೆಯ ದಿನ ಬೆಳಗ್ಗೆ (ತಂದೆ) ಇಂತೆಂದನು. ಯಾವ ಉಪ್ಪನ್ನು (ದೋಷಾ=ರಾತ್ರೌ ನಿನ್ನೆಯ) ರಾತ್ರಿ ನೀರಿನಲ್ಲಿ ಹಾಕಿದ್ದೆಯಲ್ಲ, ಎಸೆದಿದ್ದೆಯಲ್ಲ, ಎಲಾ, ಏನಪ್ಪ ಮಗು, ಅದನ್ನು ತೆಗೆದು ಕೊಂಡುಬಾ ಎನ್ನಲು ಆ ಉಪ್ಪನ್ನು ತೆಗೆದುಕೊಂಡು ಬರಲೆಳಸಿದವನಾಗಿ ನೀರಿನಲ್ಲಿ ಗರಬಾಡಿ ತಿಳಿಯಲಿಲ್ಲ, ಅರಿತುಕೊಳ್ಳಲಿಲ್ಲ ಏಕೆಂದರೆ ಆ ಉಪ್ಪು ಇದ್ದೇಇದ್ದರೂ ನೀರಿನಲ್ಲಿ ಕರಗಿ ಸೇರಿಹೋಗಿತ್ತು.

(ಉಪನಿಷತ್ತು)

**ಯಥಾ ವಿಲೀನಮೇವಾಙ್ಗಾಸ್ಯಾನ್ತಾದಾಚಾಮೇತಿ ಕಥಮಿತಿ ಲವಣಮಿತಿ ಮಧ್ಯಾದಾಚಾಮೇತಿ ಕಥಮಿತಿ ಲವಣಮಿತ್ಯನ್ತಾದಾಚಾಮೇತಿ ಕಥಮಿತಿ ಲವಣಮಿತ್ಯಭಿಪ್ರಾಸ್ಯೈತದಥ ಮೋಪಸೀದಥಾ ಇತಿ ತದ್ಧ ತಥಾ ಚಕಾರ ತಚ್ಛಶ್ವತ್ಸಂವರ್ತತೇ ತಗ್ಂ ಹೋವಾಚಾತ್ರ ವಾವ ಕಿಲ ಸತ್ಸೋಮ್ಯ ನ ನಿಭಾಲಯಸೇಽತ್ರೈವ ಕಿಲೇತಿ ॥ ೨ ॥**

೨. ‘ಕರಗಿರುವದನ್ನೇ (ಅರಿಯದಿರುವೆ)ಯಪ್ಪ, ಇದನ್ನು ಮೇಲುಗಡೆ ಕುಡಿ, ಹೇಗಿದೆ?’, ‘ಉಪ್ಪು’; ‘ನಡುವೆ ಕುಡಿ, ಹೇಗಿದೆ?’ ‘ಉಪ್ಪು’; ‘ಕೆಳಗಡೆ ಕುಡಿ, ಹೇಗಿದೆ?’, ‘ಉಪ್ಪು’. ಇದನ್ನು ಚೆಲ್ಲಿ ಆಮೇಲೆ ನನ್ನ (ಬಳಿಗೆ) ಬಾ. ಆಗ ಹಾಗೇ ಮಾಡಿದನು. ಅದು ಯಾವಾಗಲೂ ಚೆನ್ನಾಗಿಯೇ ಇರುತ್ತದೆ- (ಎಂದನು). ಅವನನ್ನು (ಕುರಿತು) ಇಂತೆಂದನು ‘ಸೋಮ್ಯ, ಅದು ಇಲ್ಲಿಯೇ ಇದ್ದುಕೊಂಡಿಪ ಯಲ್ಲ, ಕಾಣದ ಇರುವೆಯಲ್ಲ! ಇಲ್ಲಿಯೇ (ಇದ)ಯಲ್ಲ!’.

## ಕೈಕಣ್ಣುಗಳಿಗೆ ಕಾಣಿಸದ ಉಪ್ಪು ನಾಲಗೆಗೆ ತಿಳಿಯಬಂದದ್ದು

(ಭಾಷ್ಯ)

೫೨೧. ಯಥಾ ವಿಲೀನಂ ಲವಣಂ ನ ವೇತ್ಥ ತಥಾಪಿ ತತ್ ಚಕ್ಷುಷಾ ಸ್ಪರ್ಶನೇನ ಚ ಪಿಣ್ಡರೂಪಂ ಲವಣಮ್ ಅಗೃಹ್ಯಮಾಣಂ ವಿದ್ಯತ ಏವ ಅಪ್ಸು, ಉಪಲಭ್ಯತೇ ಚ ಉಪಾಯಾನ್ತರೇಣ ಇತ್ಯೇತತ್ ಪುತ್ರಂ ಪ್ರತ್ಯಾಯಯಿತುಮ್ ಇಚ್ಛನ್ ಆಹ। ಅಙ್ಗ, ಅಸ್ಯ ಉದಕಸ್ಯ ಅನ್ತಾತ್ ಉಪರಿ ಗೃಹೀತ್ವಾ ಆಚಾಮ ಇತ್ಯುಕ್ತ್ವಾ ಪುತ್ರಂ ತಥಾ ಕೃತವನ್ತಮ್ ಉವಾಚ ಕಥಮಿತಿ? ಇತರ ಆಹ ಲವಣಂ ಸ್ವಾದುತ ಇತಿ। ತಥಾ ಮಧ್ಯಾದುದಕಸ್ಯ ಗೃಹೀತ್ವಾ ಆಚಾಮೇತಿ। ಕಥಮಿತಿ। ಲವಣಮಿತಿ। ತಥಾ ಅನ್ತಾತ್ ಅಧೋದೇಶಾದ್ ಗೃಹೀತ್ವಾ ಆಚಾಮ ಇತಿ। ಕಥಮಿತಿ? ಲವಣಮಿತಿ। ಯದ್ಯೇವಮ್ ಅಭಿಪ್ರಾಸ್ಯ ಪರಿತ್ಯಜ್ಯ ಏತದುದಕಮ್ ಆಚಮ್ಯ ಅಥ ಮೋಪಸೀದಥಾ ಇತಿ। ತದ್ ಹ ತಥಾ ಚಕಾರ। ಲವಣಂ ಪರಿತ್ಯಜ್ಯ ಪಿತೃಸಮೀಪಮ್ ಆಜಗಾಮ ಇತ್ಯರ್ಥಃ। ಇದಂ ವಚನಂ ಬ್ರುವನ್ ತಲ್ಲವಣಂ ತಸ್ಮಿನ್ನೇವ ಉವಕೇ ಯನ್ಮಯಾ ರಾತ್ರೌ ಕ್ಷಿಪ್ತಂ ಶಶ್ವತ್ ನಿತ್ಯಂ ಸಂವರ್ತತೇ ವಿದ್ಯಮಾನಮೇವ, ಸತ್ ಸಮ್ಯಗ್ ವರ್ತತೇ ಇತಿ। ಏವಮುಕ್ತವನ್ತ[illegible]ಂ ಹೋವಾಚ ಪಿತಾ। ಯಥೇದಂ ಲವಣಂ ದರ್ಶನಸ್ಪರ್ಶನಾಭ್ಯಾಂ

ಪೂರ್ವಂ ಗೃಹೀತಂ ಪುನರುದಕೇ ವಿಲೀನಂ ತಾಭ್ಯಾಮ್ ಅಗೃಹ್ಯಮಾಣಮಪಿ ವಿದ್ಯತ ಏವ ಉಪಾಯಾನ್ತರೇಣ ಜಿಹ್ವಯಾ ಉಪಲಭ್ಯಮಾನತ್ವಾತ್, ಏವಮೇವ ಅತ್ರೈವ ಅಸ್ಮಿನ್ನೇವ ತೇಜೋಽಬನ್ನಾದಿಕಾರ್ಯೇ ಶುಙ್ಗೇ ದೇಹೇ। ವಾವ ಕಿಲ ಇತಿ ಆಚಾರ್ಯೋಪದೇಶಸ್ಮರಣಪ್ರದರ್ಶನಾರ್ಥೌ। ಸತ್ ತೇಜೋಽಬನ್ನಾದಿ ಶುಙ್ಗಕಾರಣಂ ವಟಬೀಜಾಣಿಮವದ್ ವಿದ್ಯಮಾನಮೇವೇನ್ದ್ರಿಯೈ ರ್ನೋಪ ಲಭಸೇ ನ ನಿಭಾಲಯಸೇ। ಯಥಾ ಅತ್ರೈವ ಉದಕೇ ದರ್ಶನಸ್ಪರ್ಶನಾಭ್ಯಾಮ್ ಅನುಪಲಭ್ಯಮಾನಂ ಲವಣಂ ವಿದ್ಯಮಾನಮೇವ ಜಿಹ್ವಯಾ ಉಪಲಬ್ಧವಾನಸಿ, ಏವಮೇವ ಅತ್ರೈವ ಕಿಲ ವಿದ್ಯಮಾನಂ ಸಜ್ಜಗನ್ಮೂಲಮ್ ಉಪಾಯಾನ್ತರೇಣ ಲವಣಾಣಿಮವದುಪಲಪ್ಸ್ಯಸ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

ಕರಗಿದ ಉಪ್ಪನ್ನು ಅರಿಯಲಾರೆಯಷ್ಟೆ, ಕಣ್ಣಿನಿಂದಲೂ (ಕೈಯಿಂದ) ಮುಟ್ಟುವಿಕೆಯಿಂದಲೂ ಗಟ್ಟಿಯಾಗಿದ್ದ ಉಪ್ಪು ಕಾಣಿಸದಿದ್ದರೂ ನೀರಿನಲ್ಲಿ ಇದ್ದೇ ಇದೆ, ಮತ್ತು ಬೇರೊಂದು ಉಪಾಯದಿಂದ ತಿಳಿಯುವದಕ್ಕೂ ಆಗುತ್ತದೆ- ಎಂಬುದನ್ನು ಮಗನಿಗೆ ತಿಳಿಸಿಕೊಡುವದಕ್ಕೆಂದು (ಹೀಗೆ) ಹೇಳುತ್ತಿದ್ದಾನೆ. 'ಅಪ್ಪ, ಈ ನೀರನ್ನು (ಅನ್ತಾತ್=ಉಪರಿ) ಮೇಲುಗಡೆ ತೆಗೆದುಕೊಂಡು ಕುಡಿ' ಎಂದು ಮಗನಿಗೆ ಹೇಳಿ, (ಅವನು) ಹಾಗೆ ಮಾಡಲು 'ಹೇಗಿದೆ?' ಎಂದು ಕೇಳಿದನು (ಆ) ಇನ್ನೊಬ್ಬನಾದ (ಮಗನು) 'ರುಚಿಯಲ್ಲಿ ಉಪ್ಪಾಗಿದೆ' ಎಂದನು. ಹೀಗೆಯೇ ನಡುವಿನ(ಭಾಗದ) ನೀರನ್ನು ತೆಗೆದುಕೊಂಡು ಕುಡಿ, ಹೇಗಿದೆ? -(ಎನ್ನಲು) 'ಉಪ್ಪು' (ಎಂದನು). ಹೀಗೆಯೇ (ಅನ್ತಾತ್=ಅಧೋದೇಶಾತ್) ಕೆಳಗಡೆ(ಯ ಭಾಗದ) ನೀರನ್ನು ತೆಗೆದುಕೊಂಡು ಕುಡಿ, ಹೇಗಿದೆ?- (ಎನ್ನಲು) 'ಉಪ್ಪು' ಎಂದನು.

ಹಾಗಾದರೆ ಈ ನೀರನ್ನು ಚೆಲ್ಲಿ ಆಚೆಗೆ ಹಾಕಿಬಿಟ್ಟು ಆಚಮನಮಾಡಿ[1] ಆಮೇಲೆ ನನ್ನ ಬಳಿಗೆ ಬಾ (ಎನ್ನಲು) ಆಗ (ಅವನು) ಹಾಗೇ ಮಾಡಿದನು, ನೀರನ್ನು ಚೆಲ್ಲಿಬಿಟ್ಟು ತಂದೆಯ ಬಳಿಗೆ ಬಂದನು ಎಂದರ್ಥ 'ರಾತ್ರೆ ನೀರಿನಲ್ಲಿ ನಾನು ಹಾಕಿದ್ದೆನಲ್ಲ ಆ ಉಪ್ಪು (ಶಶ್ವತ್=ನಿತ್ಯಮ್) ಯಾವಾಗಲೂ ಅದೇ ನೀರಿ ನಲ್ಲಿಯೇ (ಸಂವರ್ತತೇ=) ಇದ್ದುಕೊಂಡೇ ಸರಿಯಾಗಿರುತ್ತದೆ' ಎಂಬೀ ಮಾತನ್ನು ಆಡುತ್ತಾ (ಬಂದನು).

ಹೀಗೆಂದ ಮಗನಿಗೆ ತಂದೆ ಇಂತೆಂದನು **ಹೇಗೆ ಈ ಉಪ್ಪು ಕಣ್ಣು ಕೈಗಳಿಗೆ ಮೊದಲು ನೋಡುವದಕ್ಕೂ ಮುಟ್ಟುವದಕ್ಕೂ ಕಾಣಿಸು ತ್ತಿದ್ದದ್ದು ಮತ್ತೆ ನೀರಿನಲ್ಲಿ ಕರಗಲು ಅವುಗಳಿಗೆ ಸಿಕ್ಕದೆಇದ್ದರೂ**

---

1. ಇದು ಶುದ್ಧ್ಯಾಚಮನ

ಮತ್ತೊಂದು ಉಪಾಯದಿಂದ ನಾಲಗೆಗೆ ಕಾಣಿಸುತ್ತಿರುವದರಿಂದ ಇದ್ದೇಇದೆಯೋ, ಹಾಗೆಯೇ ಇಲ್ಲಿಯೇ ಇದೇ ತೇಜೋಬನ್ನಗಳ ಕಾರ್ಯವಾದ ಮೊಳಕೆಯಾಗಿರುವ ದೇಹದಲ್ಲಿಲ್ಲವೆ,-ವಾವ=ಕಿಲ ಎಂಬ (ಮಾತುಗಳು) ಆಚಾರ್ಯನ ಉಪದೇಶವನ್ನು ನೆನಪಿಗೆ ತರುವದಕ್ಕಾಗಿ (ಹೇಳಿದವು)—ತೇಜೋಬನ್ನಾದಿಗಳ ಮೊಳಕೆಗೆ ಕಾರಣವಾದ ಸತ್ತು ಆಲದಬೀಜದ ಸೂಕ್ಷ್ಮಾಂಶದಂತೆ ಇದ್ದುಕೊಂಡಿದ್ದರೂ ಇಂದ್ರಿಯಗಳಿಂದ (ನ ನಿಭಾಲಯಸೇ=ನೋಪಲಭಸೇ) ಕಾಣಲಾರದೆ ಇರುತ್ತೀಯೆ. ಹೇಗೆ ಅದೇ ನೀರಿನಲ್ಲಿಯೇ ಕಣ್ಣುಕೈಗಳಿಗೆ ಕಾಣಿಸದೆ ಇರುವ ಉಪ್ಪನ್ನು (ಅಲ್ಲಿ) ಇದ್ದುಕೊಂಡೇ ಇರುವದನ್ನೇ ನಾಲಗೆಯಿಂದ ಅರಿತುಕೊಂಡೆಯೋ, ಹೀಗೆಯೇ ಇಲ್ಲಿಯೇ ಇದ್ದುಕೊಂಡಿರುವ ಸತ್ತೆಂಬ ಜಗನ್ಮೂಲವನ್ನು ಬೇರೊಂದು ಉಪಾಯದಿಂದ ಉಪ್ಪಿನ ಸೂಕ್ಷ್ಮರೂಪದಂತೆ ನೀನು ಕಂಡುಕೊಳ್ಳಬಹುದು -ಎಂದು ವಾಕ್ಯಶೇಷವು.

## ದೇಹದಲ್ಲಿಯೇ ಇದ್ದು ಕಾಣಿಸದಿರುವ ಅಣಿಮೆಯೇ ನಮ್ಮೆಲ್ಲರ ಆತ್ಮನು

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥**

೩. 'ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಐತದಾತ್ಮ್ಯವು ಅದು ಸತ್ಯವು, ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನಾಗಿರುವೆ' ಎಂದನು. 'ಭಗವಂತನು ನನಗೆ ಮತ್ತೂ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೆ ಆಗಲಿ!' ಎಂದನು.

## ನಮ್ಮ ದೇಹದಲ್ಲಿರುವ ಆತ್ಮನನ್ನು ಉಪಾಯಾಂತರದಿಂದ ಅರಿತುಕೊಳ್ಳಬಹುದು

(ಭಾಷ್ಯ)

೫೨೨ ಸ ಯ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಆ ಈ (ಅಣಿಮೆಯಿದೆಯಲ್ಲ) ಎಂಬುದೇ ಮುಂತಾದದ್ದು (ಹಿಂದಿನ ಗ್ರಂಥಕ್ಕೆ) ಸಮಾನವು

## ಪ್ರಶ್ನೆ : ಆತ್ಮನನ್ನು ಅರಿತುಕೊಳ್ಳುವ ಉಪಾಯವು ಯಾವದು ?

(ಭಾಷ್ಯ)

೫೨೩. ಯದ್ಯೇವಂ ಲವಣಾಣಿಮವತ್, ಇನ್ದ್ರಿಯೈರನುಪಲಭ್ಯಮಾನಮಪಿ ಜಗನ್ಮೂಲಂ ಸತ್ ಉಪಾಯಾನ್ತರೇಣ ಉಪಲಬ್ಧುಂ ಶಕ್ಯತೇ, ಯದುಪಲಮ್ಭಾತ್ ಕೃತಾರ್ಥಃ ಸ್ಯಾಮ್ ಅನುಪಲಮ್ಭಾಚ್ಚ ಅಕೃತಾರ್ಥಃ ಸ್ಯಾಮಹಮ್ । ತಸ್ಯೋಪಲಬ್ಧೌ[1] ಕ ಉಪಾಯ ಇತ್ಯೇತದ್ ಭೂಯ ಏವ ಮಾ ಭಗವಾನ್ ವಿಜ್ಞಾಪಯತು ದೃಷ್ಟಾನ್ತೇನ । ತಥಾ ಸೋಮ್ಯ ಇತಿ ಹೋವಾಚ ॥

(ಭಾಷ್ಯಾರ್ಥ)

ಹೀಗೆ ಉಪ್ಪಿನ ಸೂಕ್ಷ್ಮರೂಪದಂತೆ ಜಗತ್ಕಾರಣವಾದ ಸತ್ತು ಇಂದ್ರಿಯಗಳಿಗೆ ಕಾಣಿಸದಿದ್ದರೂ ಬೇರೊಂದು ಉಪಾಯದಿಂದ ಅರಿತುಕೊಳ್ಳಬಹುದಾಗಿದ್ದರೆ, ಯಾವದನ್ನು ಅರಿತುಕೊಂಡರೆ ನಾನು ಕೃತಾರ್ಥನಾಗುವೆನೋ ಮತ್ತು ಅರಿತುಕೊಳ್ಳದೆಇರುವದರಿಂದ ಅಕೃತಾರ್ಥನಾಗಿರುವೆನೋ ಅದನ್ನು ಅರಿತುಕೊಳ್ಳುವದಕ್ಕೆ ಉಪಾಯವು ಯಾವದು ? – ಎಂಬುದನ್ನು ನನಗೆ ಭಗವಂತನಾದ (ನೀನು) ಮತ್ತೂ ದೃಷ್ಟಾಂತದಿಂದ ಹೇಳಿಕೊಡಬೇಕು (ಎನ್ನಲು ತಂದೆಯು) 'ಸೋಮ್ಯನೆ, ಹಾಗೇ ಹಾಗಲಿ ! ' – ಎಂದನು.

---

# ಆರನೆಯ ಅಧ್ಯಾಯ–ಹದಿನಾಲ್ಕನೆಯ ಖಂಡ

(ಸತ್ತನ್ನರಿತುಕೊಳ್ಳುವದಕ್ಕೆ ಉಪಾಯ)

## ಆಚಾರ್ಯೋಪದೇಶದಿಂದ ಜ್ಞಾನ ಎಂಬುದಕ್ಕೆ ದೃಷ್ಟಾಂತ

(ಉಪನಿಷತ್ತು)

**ಯಥಾ ಸೋಮ್ಯ ಪುರುಷಂ ಗನ್ಧಾರೇಭ್ಯೋಽಭಿನದ್ಧಾಕ್ಷಮಾನೀಯ ತಂ ತತೋಽತಿಜನೇ ವಿಸೃಜೇತ್ ಸ ಯಥಾ ತತ್ರ ಪ್ರಾಙ್ವೋದಙ್ವಾಧರಾಙ್ವಾ ಪ್ರತ್ಯಙ್ವಾ ಪ್ರಧ್ಮಾಯೀತಾಭಿನದ್ಧಾಕ್ಷ ಆನೀತೋಽಭಿನದ್ಧಾಕ್ಷೋ ವಿಸೃಷ್ಟಃ ॥ ೧ ॥**

---

1. 'ತಸ್ಯೈವ' ಎಂಬ ಪಾಠದಲ್ಲಿ 'ಏವ' ಹೆಚ್ಚು.

**ತಸ್ಯ ಯಥಾಭಿನಹನಂ ಪ್ರಮುಚ್ಯ ಪ್ರಬ್ರೂಯಾದೇತಾಂ ದಿಶಂ ಗನ್ಧಾರಾ ಏತಾಂ ದಿಶಂ ವ್ರಜೇತಿ ಸ ಗ್ರಾಮಾದ್ ಗ್ರಾಮಂ ಪೃಚ್ಛನ್ ಪಣ್ಡಿತೋ ಮೇಧಾವೀ ಗನ್ಧಾರಾನೇವೋಪಸಂಪದ್ಯೇತೈವಮೇವೇಹಾಽಽಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯ ಇತಿ ॥ ೨ ॥**

೧-೨. ಸೋಮ್ಯನೆ, ಹೇಗೆ ಗಂಧಾರದೇಶದಿಂದ ಮನುಷ್ಯನನ್ನು ಕಣ್ಣುಕಟ್ಟಿ ಕರತಂದು ಅವನನ್ನು ಅದಕ್ಕಿಂತ ಅತಿಜನವಾದಲ್ಲಿ ಬಿಟ್ಟುಬಿಡುತ್ತಾನೋ ಅವನು ಹೇಗೆ ಅಲ್ಲಿ ಪೂರ್ವಕ್ಕೊ ಉತ್ತರಕ್ಕೊ ದಕ್ಷಿಣಕ್ಕೊ ಪಶ್ಚಿಮಕ್ಕೊ (ನನ್ನನ್ನು) 'ಕಣ್ಣುಕಟ್ಟಿ ತಂದಿದ್ದಾರೆ, ಕಣ್ಣು ಕಟ್ಟಿ ಬಿಟ್ಟುಬಿಟ್ಟಿದಾರ!' ಎಂದು ಕೂಗಿಕೊಳ್ಳುವನೋ ಅವನ ಕಟ್ಟನ್ನು ಬಿಚ್ಚಿ 'ಈ ದಿಕ್ಕಿಗೆ ಗಂಧಾರದೇಶವು, ಈ ದಿಕ್ಕಿಗೆ ಹೋಗು' -ಎಂದು ಹೇಳಿದರೆ ಹೇಗೆ ಆ ಪಂಡಿತನೂ ಮೇಧಾವಿಯೂ (ಆದವನು) ಊರಿಂದೂರಿಗೆ ಕೇಳುತ್ತಾ, ಗಂಧಾರವನ್ನೇ ಸೇರಿಕೊಳ್ಳುವನೋ, ಹಾಗೆಯೇ ಇಲ್ಲಿ ಆಚಾರ್ಯವಂತನಾದ ಪುರುಷನೇ ಅರಿತುಕೊಳ್ಳುತ್ತಾನೆ. ಅವನಿಗೆ ಎಲ್ಲಿಯವರೆಗೆ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ ತಡ; ಆಗಲೇ ಸಂಪನ್ನನಾಗುವನು.

## ಕಳ್ಳರು ಕಣ್ಣುಕಟ್ಟಿ ಹಿಡಿದು ತಂದುಬಿಟ್ಟ ಪುರುಷ

(ಭಾಷ್ಯ)

೫೨೪ ಯಥಾ ಲೋಕೇ ಹೇ ಸೋಮ್ಯ ಪುರುಷಂ ಯಂ ಕಂಚಿದ್ ಗನ್ಧಾರೇಭ್ಯೋ ಜನಪದೇಭ್ಯಃ ಅಭಿನದ್ಧಾಕ್ಷಂ ಬದ್ಧಚಕ್ಷುಷಮ್ ಆನೀಯ ದ್ರವ್ಯಹರ್ತಾ ತಸ್ಕರಃ, ತಮ್ ಅಭಿನದ್ಧಾಕ್ಷಮೇವ ಬದ್ಧಹಸ್ತಮ್ ಅರಣ್ಯೇ ತತೋಽಪ್ಯತಿಜನೇ ಅತಿಗತಜನೇ ಅತ್ಯನ್ತವಿಗತಜನೇ ದೇಶೇ ವಿಸೃಜೇತ್ । ಸ ತತ್ರ ದಿಗ್ಭ್ರಮೋಪೇತೋ ಯಥಾ ಪ್ರಾಙ್ವಾ ಪ್ರಾಗಞ್ಚನಃ । ಪ್ರಾಙ್ಮುಖೋ ವಾ ಇತ್ಯರ್ಥಃ । ತಥಾ ಉದಙ್ವಾ ಅಧರಾಙ್ ವಾ ಪ್ರತ್ಯಙ್ ವಾ ಪ್ರಧ್ಮಾಯೀತ ಶಬ್ದಂ ಕುರ್ಯಾತ್ ವಿಕ್ರೋಶೇತ್ । ಅಭಿನದ್ಧಾಕ್ಷೋಽಹಂ ಗನ್ಧಾರೇಭ್ಯಸ್ತಸ್ಕರೇಣಾಽಽನೀತಃ, ಅಭಿನದ್ಧಾಕ್ಷ ಏವ ವಿಸೃಷ್ಟಃ ಇತಿ ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ, ಎಲೈ ಸೋಮ್ಯನೆ, ಯಾವನಾದರೊಬ್ಬ ಮನುಷ್ಯನನ್ನು ಗಂಧಾರದೇಶದಿಂದ (ಅಭಿನದ್ಧಾಕ್ಷಂ=ಬದ್ಧಚಕ್ಷುಷಮ್) ಕಣ್ಣುಕಟ್ಟಿ ತಂದು

ಧನಾಪಹಾರಮಾಡುವ ಕಳ್ಳನು ಅವನನ್ನು ಕಣ್ಣುಕಟ್ಟಿದಂತೆಯೇ ಕೈಕಟ್ಟಿಹಾಕಿ ಕಾಡಿನಲ್ಲಿ ಅದಕ್ಕಿಂತಲೂ ಅತಿಜನವಾದ ಎಂದರೆ ಅತ್ಯಂತವಾಗಿ ನಿರ್ಜನವಾದ ಪ್ರದೇಶದಲ್ಲಿ ಬಿಟ್ಟುಬಿಡುವನಾದರೆ, ಆ (ಮನುಷ್ಯನು) ಅಲ್ಲಿ ದಿಕ್ಕುಗಾಣದವನಾಗಿ ಹೇಗೆ ಪೂರ್ವಕ್ಕಾಗಲಿ, ಪೂರ್ವಕ್ಕೆ ತಿರುಗಿದವನಾಗಿ, ಪೂರ್ವದ ಕಡೆಗೆ ಮುಖವುಳ್ಳವನಾಗಿ(ಯಾಗಲಿ) ಎಂದರ್ಥ. ಹೀಗೆಯೇ ಉತ್ತರಕ್ಕಾಗಲಿ, ದಕ್ಷಿಣಕ್ಕಾಗಲಿ, ಪಶ್ಚಿಮಕ್ಕಾಗಲಿ, 'ಕಣ್ಣುಕಟ್ಟಿ ನನ್ನನ್ನು ಗಂಧಾರದೇಶದಿಂದ ಕಳ್ಳನು ತಂದಿರುತ್ತಾನೆ ಕಣ್ಣುಕಟ್ಟಿಯೇ ಬಿಟ್ಟುಬಿಟ್ಟಿದ್ದಾನೆ' ಎಂದು ಕೂಗಿಕೊಳ್ಳುವನೋ ಗದ್ದಲವನ್ನು ಮಾಡುವನೋ, ಅರಚಿಕೊಳ್ಳುವನೋ—

## ದಾರಿಹೋಕನ ಉಪದೇಶದಿಂದ ಗಂಧಾರದೇಶವನ್ನು ಸೇರುವದು

(ಭಾಷ್ಯ)

೫೨೫. ಏವಂ ವಿಕ್ರೋಶತಸ್ತಸ್ಯ ಯಥಾ ಅಭಿನಹನಂ ಬನ್ಧನಂ[1] ಪ್ರಮುಚ್ಯ ಮುಕ್ತ್ವಾ ಕಾರುಣಿಕಃ ಕಶ್ಚಿತ್ ಏತಾಂ ದಿಶಮ್ ಉತ್ತರತಃ ಗನ್ಧಾರಾಃ, ಏತಾಂ ದಿಶಂ ವ್ರಜ – ಇತಿ ಪ್ರಬ್ರೂಯಾತ್। ಸ ಏವಂ ಕಾರುಣಿಕೇನ ಬನ್ಧನಾನ್ಮೋಕ್ಷಿತೋ ಗ್ರಾಮಾದ್ ಗ್ರಾಮಾನ್ತರಂ ಪೃಚ್ಛನ್ ಪಣ್ಡಿತಃ ಉಪದೇಶವಾನ್ ಮೇಧಾವೀ ಪರೋಪದಿಷ್ಟಗ್ರಾಮಪ್ರವೇಶಮಾರ್ಗಾವಧಾರಣಸಮರ್ಥಃ ಸನ್ ಗನ್ಧಾರಾನೇವ ಉಪಸಂಪದ್ಯೇತ ನೇತರೋ ಮೂಢಮತಿಃ, ದೇಶಾನ್ತರದರ್ಶನತೃಡ್ವಾ ॥

(ಭಾಷ್ಯಾರ್ಥ)

ಹೀಗೆ ಕೂಗಿಕೊಳ್ಳುತ್ತಿರುವ ಅವನ (ಅಭಿನಹನಂ=ಬನ್ಧನಂ)[2] ಕಣ್ಣುಕಟ್ಟನ್ನು ಹೇಗೆ ಕಾರುಣಿಕನೊಬ್ಬನು[3] ಬಿಚ್ಚಿ 'ಈ ದಿಕ್ಕಿಗೆ, ಉತ್ತರಕ್ಕೆ, ಗಂಧಾರ (ದೇಶವಿದೆ), ಈ ದಿಕ್ಕಿಗೆ ಹೋಗು' ಎಂದು ಹೇಳುವನೋ, ಅವನು ಹೀಗೆ (ಆ) ಕಾರುಣಿಕನಿಂದ ಕಟ್ಟಿನಿಂದ ಬಿಡುಗಡೆಹೊಂದಿದವನಾಗಿ (ಒಂದು) ಊರಿಂದ ಮತ್ತೊಂದು ಊರಿಗೆ (ದಾರಿ)ಕೇಳುತ್ತಾ ಪಂಡಿತನು ಎಂದರೆ (ದಾರಿಹೋಕನ) ಉಪದೇಶವನ್ನು ಪಡೆದವನೂ[4], ಮೇಧಾವಿಯೂ ಮತ್ತೊಬ್ಬರು ಹೇಳಿದ ಊರಿಗೆ

---

1. ಈ ಮಾತಿನ ಹಿಂದೆ ಇರುವ 'ಯಥಾ' ಎಂಬುದು ಅವಶ್ಯವಿಲ್ಲವೆಂದು ಬಿಟ್ಟಿದೆ.

2. 'ಯಥಾಬನ್ಧನಂ' ಎಂಬ ಪಾಠವನ್ನು ಇಟ್ಟುಕೊಂಡು ಕಟ್ಟನ್ನನುಸರಿಸಿ, ಹೇಗೆ ಕಟ್ಟಿದ್ದರೆ ಅದಕ್ಕನುಗುಣವಾಗಿ ಎಂಬ ಅರ್ಥವನ್ನು ಟೀಕೆಯಲ್ಲಿ ಬರೆದಿದೆ. ಇದು ಅವಶ್ಯವಿಲ್ಲವೆಂದು ತೋರುತ್ತದೆ

3. ಮರುಕವಿಲ್ಲದವನಿಗೆ ಕೂಗು ಕೇಳಿದರೂ ಸುಮ್ಮನೆ ಹೋಗಬಹುದು, ಆದ್ದರಿಂದ ಕಾರುಣಿಕನಾದ ಎಂಬ ವಿಶೇಷಣವನ್ನು ಕೊಟ್ಟಿದೆ.

4. ಪಂಡಿತನೆಂದರೆ ಶ್ರವಣಜ್ಞಾನವನ್ನು ಪಡೆದವನು.

ಸೇರುವ ಮಾರ್ಗವನ್ನು ನಿಶ್ಚಯಿಸುವದಕ್ಕೆ ಶಕ್ತನಾಗಿರುವವನೂ ಆದವನು[1] ಗಂಧಾರ(ದೇಶ)ವನ್ನೇ ಸೇರುತ್ತಾನೋ, (ಹೇಗೆ ಹಾಗಿಲ್ಲದ) ಮಂದಮತಿಯಾಗಲಿ, ಮತ್ತೊಂದು ದೇಶವನ್ನು ನೋಡಬೇಕೆಂಬ ಆಶೆಯುಳ್ಳವನಾಗಲಿ, (ಹೋಗು) ವದಿಲ್ಲವೋ[2] —

## ಆಚಾರ್ಯೋಪದೇಶದಿಂದ ಮುಕ್ತನಾಗುತ್ತಾನೆಂಬುದಕ್ಕೆ ದೃಷ್ಟಾಂತಸಮನ್ವಯ

(ಭಾಷ್ಯ)

೫೨೬. ಯಥಾಽಯಂ ದೃಷ್ಟಾನ್ತೋ ವರ್ಣಿತಃ, ಸ್ವವಿಷಯೇಭ್ಯೋ ಗನ್ಧಾರೇಭ್ಯಃ ಪುರುಷಃ, ತಸ್ಕರೈರಭಿನದ್ಧಾಕ್ಷಃ, ಅವಿವೇಕೋ ದಿಙ್ಮೂಢೋಽಶನಾಯಾಪಿಪಾಸಾದಿಮಾನ್ ವ್ಯಾಘ್ರತಸ್ಕರಾದ್ಯನೇಕಭಯಾನರ್ಥವ್ರಾತಯುತಮ್ ಅರಣ್ಯಂ ಪ್ರವೇಶಿತೋ ದುಃಖಾರ್ತೋ ವಿಕ್ರೋಶನ್ ಬನ್ಧನೇಭ್ಯೋ ಮುಮುಕ್ಷುಸ್ತಿಷ್ಠತಿ ಸ ಕಥಂಚಿದೇವ ಕಾರುಣಿಕೇನ ಕೇನಚಿನ್ಮೋಕ್ಷಿತಃ ಸ್ವದೇಶಾನ್ ಗನ್ಧಾರಾನೇವ ಆಪನ್ನೋ ನಿರ್ವೃತಃ ಸುಖೀ ಅಭೂತ್ । ಏವಮೇವ ಸತೋ ಜಗದಾತ್ಮಸ್ವರೂಪಾತ್ ತೇಜೋಽಬನ್ನಾದಿಮಯಂ ದೇಹಾರಣ್ಯಂ ವಾತಪಿತ್ತಕಫರುಧಿರಮೇದೋಮಾಂಸಾಸ್ಥಿಮಜ್ಜಾಶುಕ್ರಕೃಮಿಮೂತ್ರಪುರೀಷವತ್, ಶೀತೋಷ್ಣಾದ್ಯನೇಕದ್ವಂದ್ವದುಃಖವಚ್ಚೇದಂ ಮೋಹಪಟಾಭಿನದ್ಧಾಕ್ಷೋ ಭಾರ್ಯಾಪುತ್ರಮಿತ್ರಪಶುಬನ್ಧ್ವಾದಿದೃಷ್ಟಾದೃಷ್ಟಾನೇಕವಿಷಯತೃಷ್ಣಾಪಾಶಿತಃ ಪುಣ್ಯಾಪುಣ್ಯಾದಿತಸ್ಕರೈಃ ಪ್ರವೇಶಿತಃ, ಅಹಮಮುಷ್ಯ ಪುತ್ರೋ, ಮಮೈತೇ ಬಾನ್ಧವಾಃ, ಸುಖ್ಯಹಂ ದುಃಖೀ, ಮೂಢಃ ಪಣ್ಡಿತಃ, ಧಾರ್ಮಿಕೋ, ಬನ್ಧುಮಾನ್, ಜಾತೋ, ಮೃತೋ, ಜೀರ್ಣಃ, ಪಾಪೀ, ಪುತ್ರೋ ಮೇ ಮೃತೋ, ಧನಂ ಮೇ ನಷ್ಟಂ, ಹಾ ಹತೋಽಸ್ಮಿ, ಕಥಂ ಜೀವಿಷ್ಯಾಮಿ, ಕಾ ಮೇ ಗತಿಃ, ಕಿಂ ಮೇ ತ್ರಾಣಮ್– ಇತ್ಯೇವಮ್ ಅನೇಕಶತಸಹಸ್ರಾನರ್ಥಜಾಲವಾನ್ ವಿಕ್ರೋಶನ್ ಕಥಂಚಿದೇವ ಪುಣ್ಯಾತಿಶಯಾತ್ ಪರಮಕಾರುಣಿಕಂ ಕಂಚಿತ್ ಸದ್ಬ್ರಹ್ಮಾತ್ಮವಿದಂ ವಿಮುಕ್ತಬನ್ಧನಂ ಬ್ರಹ್ಮಿಷ್ಠಂ ಯದಾ ಆಸಾದಯತಿ ತೇನ ಚ ಬ್ರಹ್ಮವಿದಾ ಕಾರುಣ್ಯಾದ್ ದರ್ಶಿತಸಂಸಾರವಿಷಯದೋಷದರ್ಶನಮಾರ್ಗಃ, ವಿರಕ್ತಃ ಸಂಸಾರವಿಷಯೇಭ್ಯೋ ನಾಸಿ ತ್ವಂ ಸಂಸಾರೀ ಅಮುಷ್ಯಪುತ್ರತ್ವಾದಿಧರ್ಮವಾನ್, ಕಿಂ ತರ್ಹಿ ಸದ್ ಯತ್ ತತ್ತ್ವಮಸಿ ಇತಿ

---

1. ಮನನಜ್ಞಾನವನ್ನು ಸೂಚಿಸುವ ವಿಶೇಷಣವಿದು. ಸೂ. ಭಾ. ೧-೧-೨ (ಭಾ. ಭಾ. ೨೮)ನ್ನು ನೋಡಿ.

2. ವಿಕ್ಷೇಪವನ್ನು ಬಿಟ್ಟು ನಿದಿಧ್ಯಾಸನಮಾಡುವದೂ ಅವಶ್ಯವೆಂಬುದನ್ನು ಸೂಚಿಸುವ ವಿಶೇಷಣವಿದು.

ಅವಿದ್ಯಾಮೋಹಪಟಾಭಿನಹನಾತ್ ಮೋಕ್ಷಿತೋ ಗನ್ಧಾರಪುರುಷವಚ್ಚ ಸ್ವಂ ಸದಾತ್ಮಾನಮ್ ಉಪಸಂಪದ್ಯ ಸುಖೀ ನಿರ್ವೃತಃ ಸ್ಯಾತ್ ಇತ್ಯೇತಮೇವಾರ್ಥಮಾಹ। ಆಚಾರ್ಯವಾನ್ ಪುರುಷೋ ವೇದ ಇತಿ ॥

(ಭಾಷ್ಯಾರ್ಥ)

ಈ (ಮೇಲೆ) ವರ್ಣಿಸಿರುವ ದೃಷ್ಟಾಂತವು ಹೇಗೋ- ತನ್ನ ದೇಶವಾದ ಗಂಧಾರದಿಂದ ಕಳ್ಳರು ಕಣ್ಣುಕಟ್ಟಿ ಆ (ತಂದ) ಪುರುಷನು ವಿವೇಕವಿಲ್ಲದೆ ದಿಕ್ಕುತೋಚದವನಾಗಿ ಹಸಿವುಬಾಯಾರಿಕೆ ಮುಂತಾದವುಗಳುಳ್ಳವನಾಗಿ ಹುಲಿ, ಕಳ್ಳರು- ಮುಂತಾದ ಅನೇಕ ಭಯಗಳಿಂದಲೂ ಅನರ್ಥಸಮೂಹದಿಂದಲೂ ಕೂಡಿರುವ ಅರಣ್ಯವನ್ನು ಹೊಕ್ಕು ದುಃಖದಿಂದ ಸಂಕಟಪಡುತ್ತಾ ಅಳುತ್ತಾ ಕಟ್ಟುಗಳಿಂದ ಬಿಡುಗಡೆಹೊಂದಬೇಕೆಂದಿದ್ದನೋ, ಅವನನ್ನು ಯಾರೋ ಒಬ್ಬ ಕಾರುಣಿಕನು (ಆ ಬಂಧದಿಂದ) ಬಿಡಿಸಲು ತನ್ನ ದೇಶವಾದ ಗಂಧಾರವನ್ನೇ ಸೇರಿ (ಹೇಗೆ) ಸಮಾಧಾನಹೊಂದಿ ಸುಖಿಯಾದನೋ, ಹಾಗೆಯೇ ಜಗತ್ತಿನ ಆತ್ಮಸ್ವರೂಪವಾದ ಸತ್ತಿನಿಂದ ತೇಜೋಬನ್ನಾದಿಮಯವಾದ, ವಾತ, ಪಿತ್ತ, ಕಫ, ರಕ್ತ, ಕೊಬ್ಬು, ಮಾಂಸ, ಎಲುಬು, ಮಜ್ಜೆ, ರೇತಸ್ಸು, ಕ್ರಿಮಿಗಳು, ಮೂತ್ರಪುರೀಷಗಳು ಇವುಗಳುಳ್ಳದ್ದೂ ಶೀತೋಷ್ಣಗಳೇ ಮುಂತಾದ ಅನೇಕ ದ್ವಂದ್ವದುಃಖವುಳ್ಳದ್ದೂ ಆದ ಈ ದೇಹಾರಣ್ಯವನ್ನು- ಮೋಹವೆಂಬ ಬಟ್ಟೆಯನ್ನು (ಕಣ್ಣಿಗೆ) ಕಟ್ಟಿಸಿಕೊಂಡು ಹೆಂಡತಿ, ಮಗ, ಸ್ನೇಹಿತ, ದನಕರು, ನೆಂಟರಿಷ್ಟರು ಮುಂತಾದ ದೃಷ್ಟಾದೃಷ್ಟ (ರೂಪವಾದ)[1] ಅನೇಕ ವಿಷಯಗಳ ಆಶೆಯಿಂದ ಬಿಗಿಯಲ್ಪಟ್ಟು ಪುಣ್ಯಪಾಪಗಳೇ ಮುಂತಾದ ಕಳ್ಳರು (ಕರೆತಂದು)-ಹೊಗಿಸಲಾಗಿ ನಾನು ಇಂಥವನ ಮಗನು, ನನಗೆ ಇಂಥವರು ನಂಟರು, ನಾನು ಸುಖಿ ದುಃಖಿ, ದಡ್ಡನು ಜಾಣನು, ಧಾರ್ಮಿಕನು, ಬಂಧುಗಳುಳ್ಳವನು, ಹುಟ್ಟಿದೆನು, ಸತ್ತೆನು, ಮುದುಕನಾದೆನು, ಪಾಪಿಯು, ನನ್ನ ಮಗನು ಸತ್ತನು, ನನ್ನ ಧನವು ನಷ್ಟವಾಯಿತು, ಅಯ್ಯೋ ಕೆಟ್ಟೆನು ! ಹೇಗೆ ಬದುಕಿರಲಿ ? ನನಗೆ ಗತಿಯೇನು ? ನನ್ನನ್ನು ಕಾಪಾಡುವದು ಯಾವದು ? -ಎಂದಿಂತು ಅನೇಕ ಶತಸಹಸ್ರಅನರ್ಥಸಮೂಹಗಳುಳ್ಳವನಾಗಿ ಅಳುತ್ತಾ ಹೇಗೋ ಹೆಚ್ಚಿನ ಪುಣ್ಯದಿಂದ ಪರಮಕಾರುಣಿಕನಾದ[2] ಯಾವನೋ ಒಬ್ಬ ಸದ್ಬ್ರಹ್ಮಾತ್ಮನನ್ನು ಅರಿತಿರುವ ಬಂಧನಗಳಿಂದ ವಿಮುಕ್ತನಾದ ಬ್ರಹ್ಮಿಷ್ಠನನ್ನು ಹೇಗೋ ಯಾವಾಗ ಪಡೆದು

---

1. ಈ ಲೋಕದ ಮತ್ತು ಪರಲೋಕದ.

2 ಗುರುವಿಗೆ 'ಕಾರುಣಿಕ'ನೆಂಬ ದೃಷ್ಟಾಂತವನ್ನು ಕೊಡುವದು ಪ್ರಸ್ಥಾನತ್ರಯಭಾಷ್ಯದಲ್ಲೆಲ್ಲ ಕಂಡುಬರುತ್ತದೆ ಮುಂ. ಭಾ ೩-೧-೨ (ಭಾ. ಭಾ. ೯೯) ಮಾಂ. ಕಾ. ಭಾ. ೧-೧-೬ (ಭಾ. ಭಾ. ೫೩), ಐ. ಭಾ. ೧-೩ (ಭಾ. ಭಾ. ೫೭) ಬೃ. ಭಾ. ೨-೧-೨೦ (ಭಾ. ಭಾ. ೩೧೬), ೪-೪-೧೫ (ಭಾ. ಭಾ. ೨೯೧) -ಇವನ್ನು ನೋಡಿ

ಕೊಳ್ಳುತ್ತಾನೋ, ಆ ಬ್ರಹ್ಮಜ್ಞಾನಿಯು ಕರುಣೆಯಿಂದ ಸಂಸಾರವಿಷಯಗಳ ದೋಷಗಳನ್ನು ಕಂಡುಕೊಳ್ಳುವ ಮಾರ್ಗವನ್ನು ತೋರಿಸಿಕೊಡಲು ಸಂಸಾರ ವಿಷಯಗಳಲ್ಲಿ ವಿರಕ್ತನಾಗಿ 'ನೀನು ಸಂಸಾರಿಯಲ್ಲ, ಇಂಥವನ ಪುತ್ರನಾಗಿರುವದೇ ಮುಂತಾದ (ಈ) ಧರ್ಮಗಳುಳ್ಳವನಲ್ಲ, ಮತ್ತೇನೆಂದರೆ ಆ ಸತ್ತೆಂಬುದುಂಟಲ್ಲ, ಅದೇ ನೀನಾಗಿರುವೆ –ಎಂದು ಅವಿದ್ಯಾಮೋಹದ ಬಟ್ಟೆಯ ಕಣ್ಣುಕಟ್ಟನ್ನು ಬಿಚ್ಚಿ ಕಳೆಯಲಾಗಿ ಗಂಧಾರದೇಶದ (ಆ) ಪುರುಷನಂತೆಯೇ ತನ್ನದೇ ಆಗಿರುವ ಸದಾತ್ಮನೆಂಬ (ಸ್ವರೂಪವನ್ನು) ಸೇರಿ ಸುಖಿಯೂ ಸಮಾಧಾನಹೊಂದಿದವನೂ ಆಗುವನು ಎಂಬೀ ವಿಷಯವನ್ನೇ 'ಆಚಾರ್ಯವಂತನಾದ ಪುರುಷನೇ ಅರಿತುಕೊಳ್ಳುತ್ತಾನೆ' ಎಂದು ಹೇಳಿರುತ್ತಾನೆ

## ಪ್ರಾರಬ್ಧಕರ್ಮವು ಕಳೆದ ಬಳಿಕ ಜ್ಞಾನಿಯು ಸದ್ಬ್ರಹ್ಮದಲ್ಲಿಯೇ ಸೇರಿಬಿಡುತ್ತಾನೆ

(ಭಾಷ್ಯ)

೫೨೭. ತಸ್ಯಾಸ್ಯ ಏವಮಾಚಾರ್ಯವತಃ ಮುಕ್ತಾವಿದ್ಯಾಭಿನಹನಸ್ಯ ತಾವದೇವ ತಾವಾನೇವ ಕಾಲಃ ಚಿರಂ ಕ್ಷೇಪಃ । ಸದಾತ್ಮಸ್ವರೂಪಸಂಪತ್ತೇರಿತಿ ವಾಕ್ಯಶೇಷಃ । ಕಿಯಾನ್ ಕಾಲಶ್ಚಿರಮಿತಿ ? ಉಚ್ಯತೇ । ಯಾವನ್ನ ವಿಮೋಕ್ಷ್ಯೇ । ನ ವಿಮೋಕ್ಷ್ಯತೇ ಇತ್ಯೇತತ್ ಪುರುಷವ್ಯತ್ಯಯೇನ । ಸಾಮರ್ಥ್ಯಾತ್ ಯೇನ ಕರ್ಮಣಾ ಶರೀರಮಾರಬ್ಧಂ ತಸ್ಯ ಉಪಭೋಗೇನ ಕ್ಷಯಾದ್ ದೇಹಪಾತೋ ಯಾವತ್ ಇತ್ಯರ್ಥಃ । ಅಥ ತದೈವ ಸತ್ ಸಂಪತ್ಸ್ಯೇ ಸಂಪತ್ಸ್ಯತೇ ಇತಿ ಪೂರ್ವವತ್ । ನ ಹಿ ದೇಹಮೋಕ್ಷಸ್ಯ ಸತ್ಸಂಪತ್ತೇಶ್ಚ ಕಾಲಭೇದೋಽಸ್ತಿ ಯೇನ ಅಥ ಶಬ್ದ ಆನನ್ತರ್ಯಾರ್ಥಃ ಸ್ಯಾತ್ ॥

(ಭಾಷ್ಯಾರ್ಥ)

ಹೀಗೆ ಆಚಾರ್ಯನ (ಉಪದೇಶ)ವುಳ್ಳ ಆ ಇವನಿಗೆ ಅವಿದ್ಯೆಯೆಂಬ ಕಣ್ಣು ಕಟ್ಟು ಬಿಚ್ಚಿಹೋಗಲು ಅಷ್ಟೇ ಎಂದರೆ ಅಷ್ಟು ಕಾಲವೇ ತಡವು ಕಾಲವಿಲಂಬವು, ಸದಾತ್ಮಸ್ವರೂಪದಲ್ಲಿ ಸೇರಿಹೋಗುವದಕ್ಕೆ ಎಂದು ವಾಕ್ಯಶೇಷವು.[1] ಎಷ್ಟು ಕಾಲವು ತಡ ?– ಎಂದರೆ ಹೇಳುತ್ತಾನೆ, 'ಯಾವತ್ ನ ವಿಮೋಕ್ಷ್ಯೇ' (ಎಂಬ ಮೂಲವನ್ನು) ಪುರುಷವಿಪರಿಣಾಮಮಾಡಿಕೊಂಡು ಎಲ್ಲಿಯವರೆಗೆ ಬಿಡುಗಡೆ

1. ಶರೀರವು ಬಿದ್ದುಹೋದಮೇಲೆ ಆಗುವ ಬ್ರಹ್ಮೈಕ್ಯಕ್ಕೆ ಇಷ್ಟುಮಾತ್ರತಡ ಎಂದರ್ಥ. ಜ್ಞಾನಿಯು ಮತ್ತೆ ಶರೀರಾಂತರವನ್ನು ಹೊಂದುವದಿಲ್ಲ ಎಂಬುದಕ್ಕಾಗಿಮಾತ್ರ ಈ ವಿದೇಹಕೈವಲ್ಯವನ್ನು ಹೇಳಿದೆ ಇದು ಗೌಣಮುಕ್ತಿಎಂಬುದಕ್ಕೆ ಬೃ ಭಾ ೪-೪-೬ (ಭಾ. ಭಾ. ೭೭೧, ೨೭೫) ವನ್ನು ನೋಡಿ.

ಯನ್ನು ಹೊಂದದೆ ಇರುವನೋ ಎಂದರ್ಥ(ವನ್ನು ಮಾಡಿಕೊಳ್ಳಬೇಕು).[1] ಯಾವ ಕರ್ಮದಿಂದ (ಈ) ಶರೀರವು ಆರಬ್ಧವಾಗಿರುವದೋ ಅದು ಉಪಭೋಗದಿಂದಲೇ ಕ್ಷಯವಾಗಬೇಕಾಗಿರುವದರಿಂದ ದೇಹಪಾತವಾಗುವವರೆಗೆ ಎಂದರ್ಥವೆಂದು ಅರ್ಥವಶದಿಂದ ಗೊತ್ತಾಗುತ್ತದೆ.[2] (ಅಥ=ತದ್ವೈವ) ಆಗಲೇ ಸತ್ತನ್ನು ಸಂಪತ್ಸ್ಯೇ (ಸೇರುತ್ತೇನೆ) ಎಂಬುದಕ್ಕೆ ಮೊದಲಿನಂತೆಯೇ[3] 'ಸಂಪತ್ಸ್ಯತೇ ಸಂಪನ್ನನಾಗುವನು ಎಂದರ್ಥ. ಏಕೆಂದರೆ ದೇಹದಿಂದ ಬಿಡುಗಡೆಯಾಗುವದು, ಸತ್ಸಂಪತ್ತಿ - ಇವುಗಳಿಗೆ ಕಾಲಭೇದವಿರುವದಿಲ್ಲವಷ್ಟೆ ? ಹಾಗಿದ್ದರೆ ತಾನೆ ಅಥಶಬ್ದಕ್ಕೆ ಆ ಬಳಿಕ ಎಂಬ ಅರ್ಥವು ಆಗಬಹುದಾಗಿತ್ತು ?

## ಚರ್ಚೆ :
## ಜ್ಞಾನಿಗೆ ಮತ್ತೊಂದು ಶರೀರದ ಪ್ರಾಪ್ತಿಯುಂಟೆ ?
## ಪೂರ್ವಪಕ್ಷ: ಕರ್ಮಕ್ಕೆ ಫಲವಾಗಲೇಬೇಕಾದ್ದರಿಂದ ಜ್ಞಾನಿಗೂ ಜನ್ಮಾಂತರವುಂಟು

(ಭಾಷ್ಯ)

೫೨೮. ನನು ಯಥಾ ಸದ್ವಿಜ್ಞಾನಾನನ್ತರಮೇವ ದೇಹಪಾತಃ ಸತ್ಸಂಪತ್ತಿಶ್ಚ ನ ಭವತಿ ಕರ್ಮಶೇಷವಶಾತ್, ತಥಾ ಅಪ್ರವೃತ್ತಫಲಾನಿ ಪ್ರಾಗ್ಜ್ಞಾನೋತ್ಪತ್ತೇಃ ಜನ್ಮಾನ್ತರಸಂಚಿತಾನ್ಯಪಿ ಕರ್ಮಾಣಿ ಸನ್ತಿ ಇತಿ ತತ್ಫಲೋಪಭೋಗಾರ್ಥಂ ಪತಿತೇ ಅಸ್ಮಿನ್ ಶರೀರಾನ್ತರಮ್ ಆರಬ್ಧವ್ಯಮ್, ಉತ್ಪನ್ನೇ ಚ ಜ್ಞಾನೇ ಯಾವಜ್ಜೀವಂ ವಿಹಿತಾನಿ ಪ್ರತಿಷಿದ್ಧಾನಿ ವಾ ಕರ್ಮಾಣಿ ಕರೋತ್ಯೇವ ಇತಿ ತತ್ಫಲೋಪಭೋಗಾರ್ಥಂ ಚ ಅವಶ್ಯಂ ಶರೀರಾನ್ತರಮ್ ಆರಬ್ಧವ್ಯಮ್। ತತಶ್ಚ ಕರ್ಮಾಣಿ ತತಃ ಶರೀರಾನ್ತರಮ್ ಇತಿ ಜ್ಞಾನಾನರ್ಥಕ್ಯಮ್। ಕರ್ಮಣಾಂ ಫಲವತ್ತ್ವಾತ್। ಅಥ ಜ್ಞಾನವತಃ ಕ್ಷೀಯನ್ತೇ ಕರ್ಮಾಣಿ ತದಾ ಜ್ಞಾನಪ್ರಾಪ್ತಿಸಮಕಾಲಮೇವ ಜ್ಞಾನಸ್ಯ ಸತ್ಸಂಪತ್ತಿಹೇತುತ್ವಾತ್ ಮೋಕ್ಷಃ ಸ್ಯಾದಿತಿ ಶರೀರಪಾತಃ ಸ್ಯಾತ್। ತಥಾ ಚ ಆಚಾರ್ಯಾಭಾವ ಇತಿ ಆಚಾರ್ಯವಾನ್ ಪುರುಷೋ ವೇದ ಇತ್ಯನುಪಪತ್ತಿಃ ಜ್ಞಾನಾನ್ಮೋಕ್ಷಾಭಾವಪ್ರಸಙ್ಗಶ್ಚ। ದೇಶಾನ್ತರಪ್ರಾಪ್ತ್ಯುಪಾಯಜ್ಞಾನವತ್ ಅನೈಕಾನ್ತಿಕಫಲತ್ವಂ ವಾ ಜ್ಞಾನಸ್ಯ ॥

---

1 ನ ವಿಮೋಕ್ಷ್ಯೇ ಎಂದರೆ ನೀನು ಬಿಡುಗಡೆಹೊಂದವನೆ ಇರುವೆಯೋ ಎಂದು ಮಧ್ಯಮಪುರುಷದ ಪ್ರಯೋಗವು ಇದ್ದರೂ ಹೀಗೆ ಪ್ರಥಮಪುರುಷಕ್ಕೆ ತಿರುಗಿಸಿಕೊಂಡು ಅರ್ಥಮಾಡಿಕೊಳ್ಳಬೇಕು.

2. ಇಲ್ಲಿ ಸಾಮರ್ಥ್ಯಾತ್ ಎಂಬ ಮಾತನ್ನು ಹಿಂದಿನ ವಾಕ್ಯಕ್ಕೆ ಅನ್ವಯಿಸಿ ಪುರುಷವಿಪರಿಣಾಮವನ್ನು ಮಾಡುವದಕ್ಕೆ ಕಾರಣವನ್ನು ಈ ಮಾತು ಹೇಳುವದೆಂದು ಟೀಕೆ. ಅದಕ್ಕಿಂತಲೂ 'ಎಲ್ಲಿಯವರೆಗೆ ವಿಮುಕ್ತನಾಗುವದಿಲ್ಲವೋ' ಎಂದರೆ ದೇಹದಿಂದ ವಿಮುಕ್ತನಾಗುವವರೆಗೆ ಎಂದೇ ಅರ್ಥವಶದಿಂದ ತಿಳಿಯಬೇಕಾಗಿದೆ ಎಂದು ವಾಕ್ಯಾಭಿಪ್ರಾಯವನ್ನು ಕಲ್ಪಿಸುವದು ಯುಕ್ತತರ.

3. ಇಲ್ಲಿಯೂ ಪುರುಷವಿಪರಿಣಾಮವನ್ನು ಮಾಡಿಕೊಳ್ಳಬೇಕೆಂದು ಭಾವ.

(ಭಾಷ್ಯಾರ್ಥ)

(ಆಕ್ಷೇಪ) - ಹೇಗೆ ಸದ್ಬ್ರಹ್ಮದ ಅರಿವಾದಕೂಡಲೆ ದೇಹವು ಬಿದ್ದು ಹೋಗುವದಾಗಲಿ ಸತ್ಸಂಪತ್ತಿಯಾಗಲಿ ಕರ್ಮಶೇಷವಿರುವದರಿಂದ ಆಗವೆ ಇರುವವೋ[1] ಹಾಗೆಯೇ ಜ್ಞಾನವುಂಟಾಗುವ ಮುಂಚೆ ಜನ್ಮಾಂತರಗಳಲ್ಲಿ ಕೂಡಿಹಾಕಿಕೊಂಡಿರುವ ಫಲವನ್ನು ಕೊಡದೆ ಇರುವ ಕರ್ಮಗಳು ಇರುವದರಿಂದ ಅವುಗಳ ಫಲವನ್ನು ಉಪಭೋಗಿಸುವದಕ್ಕಾಗಿ ಈ (ಶರೀರವು) ಬಿದ್ದಮೇಲೆ ಮತ್ತೊಂದು ಶರೀರವು ಉಂಟಾಗಬೇಕು. ಜ್ಞಾನವು ಉಂಟಾದಮೇಲೂ ಜೀವವಿರುವವರೆಗೂ ವಿಹಿತಕರ್ಮಗಳನ್ನೂ ಪ್ರತಿಷಿದ್ಧಕರ್ಮಗಳನ್ನೂ ಅವಶ್ಯವಾಗಿ ಮಾಡುತ್ತಲೇಇರುತ್ತಾನಾದ್ದರಿಂದ ಅವುಗಳ ಫಲವನ್ನು ಉಪಭೋಗಿಸುವದಕ್ಕೂ ಅವಶ್ಯವಾಗಿ ಮತ್ತೊಂದು ಶರೀರವು ಉಂಟಾಗಬೇಕು. ಆ (ಶರೀರ)ದಿಂದಲೂ ಕರ್ಮಗಳು, ಅವುಗಳಿಂದ ಮತ್ತೊಂದು ಶರೀರ- ಹೀಗಾಗುವದರಿಂದ ಜ್ಞಾನವು ವ್ಯರ್ಥವಾಗುವದು. ಏಕೆಂದರೆ ಕರ್ಮಗಳಿಗೆ ಫಲವಿರಲೇಬೇಕಷ್ಟೆ? ಹೀಗಲ್ಲದೆ ಜ್ಞಾನಿಗೆ ಕರ್ಮಗಳು ಕ್ಷಯವಾಗುತ್ತವೆ ಎನ್ನುವದಾದರೆ, ಆಗ ಜ್ಞಾನಪ್ರಾಪ್ತಿಯಾದ ಕಾಲದಲ್ಲಿಯೇ, ಜ್ಞಾನವು ಸತ್ಸಂಪತ್ತಿಗೆ ಕಾರಣವಾಗಿರುವದರಿಂದ, ಮೋಕ್ಷವು ಆಗಬೇಕಾದ್ದರಿಂದ ಶರೀರವು ಬಿದ್ದುಹೋಗಬೇಕಾಗುವದು. ಹಾಗಾದರೆ ಆಚಾರ್ಯನೇ ಇಲ್ಲವಾಗುವದಾಗಿ 'ಆಚಾರ್ಯನುಳ್ಳ ಪುರುಷನು ಅರಿತುಕೊಳ್ಳುತ್ತಾನೆ' ಎಂಬ (ಶ್ರುತಿಯು) ಹೊಂದುವದಿಲ್ಲ. ಜ್ಞಾನದಿಂದ ಮೋಕ್ಷವುಂಟಾಗುವದಿಲ್ಲವೆಂಬ ಪ್ರಸಂಗವೂ (ಬರುವದು), ಅಥವಾ ಮತ್ತೊಂದು ದೇಹವನ್ನು ಪಡೆಯುವದಕ್ಕೆ ಉಪಾಯವಾದ ಜ್ಞಾನದಂತೆ (ಈ ಆತ್ಮ)ಜ್ಞಾನಕ್ಕೂ ನಿಯತಫಲವಿಲ್ಲ ಎಂದಾಗುವದಲ್ಲ!

## ಅಪ್ರವೃತ್ತಫಲವುಳ್ಳ ಕರ್ಮವೆಲ್ಲ ಜ್ಞಾನದಿಂದ ನಾಶವಾಗುವದು

(ಭಾಷ್ಯ)

೫೨೯. ನ । ಕರ್ಮಣಾಂ ಪ್ರವೃತ್ತಾಪ್ರವೃತ್ತಫಲವತ್ತ್ವವಿಶೇಷೋಪಪತ್ತೇಃ । ಯದುಕ್ತಮ್ ಅಪ್ರವೃತ್ತಫಲಾನಾಂ ಕರ್ಮಣಾಂ ಧ್ರುವಫಲತ್ವಾದ್

---

1. ಇಲ್ಲಿ ಸತ್ಸಂಪತ್ತಿ ಎಂದರೆ ವಿದೇಹಕೈವಲ್ಯ. ಕರ್ಮಶೇಷವು ಫಲವನ್ನು ಕೊಡುತ್ತಿರುವದರಿಂದ ದೇಹವು ಇನ್ನೇ ಇರುವದಾದ್ದರಿಂದ ವಿದೇಹಕೈವಲ್ಯವಾಗದೆ ಇರುತ್ತದೆ ಎಂಬುದು ಕರ್ಮದೃಷ್ಟಿ. ಆದರೆ ಜ್ಞಾನದೃಷ್ಟಿಯಿಂದ ನೋಡಿದರೆ ಜ್ಞಾನಿಯು ಈಗಲೇ ಅಶರೀರಿಯು, ಅವನು ಬ್ರಹ್ಮವೇ ಆಗಿರುತ್ತಾನೆ. ಇದಕ್ಕೆ ಬೃ. ಭಾ. ೪-೪-೭ (ಭಾ. ಭಾ. ೨೭೮), ೪-೪-೬ (ಭಾ. ಭಾ. ೨೭೦, ೨೭೧) ಇವನ್ನು ನೋಡಿ. ಜ್ಞಾನಿಯ ದೃಷ್ಟಿಯಿಂದ ಮೂರುಕಾಲಕ್ಕೂ ಕರ್ತೃತ್ವವಾಗಲಿ ಭೋಕ್ತೃತ್ವವಾಗಲಿ ಇರುವದೇ ಇಲ್ಲ, ಸೂ. ಭಾ. ೪-೧-೧೩ (ಭಾ. ಭಾ. ೫೨೮)ನ್ನು ನೋಡಿ.

ಬ್ರಹ್ಮವಿದಃ ಶರೀರೇ ಪತಿತೇ ಶರೀರಾನ್ತರಮಾರಬ್ಧವ್ಯಮ್ ಅಪ್ರವೃತ್ತಕರ್ಮ ಫಲೋಪಭೋಗಾರ್ಥಮ್ ಇತಿ । ಏತದಸತ್ । ವಿದುಷಃ 'ತ ಸ್ಯ ತಾ ವ ದೇ ವ ಚಿರಮ್' ಇತಿ ಶ್ರುತೇಃ ಪ್ರಾಮಾಣ್ಯಾತ್ । ನನು 'ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ' (ಬೃ. ೩-೨-೧೫) ಇತ್ಯಾದಿಶ್ರುತೇರಪಿ ಪ್ರಾಮಾಣ್ಯಮೇವ। ಸತ್ಯಮೇವಮ್ । ತಥಾಪಿ ಪ್ರವೃತ್ತಫಲಾನಾಮ್ ಅಪ್ರವೃತ್ತಫಲಾನಾಂ ಚ ಕರ್ಮಣಾಂ ವಿಶೇಷೋಽಸ್ತಿ। ಕಥಮ್? ಯಾನಿ ಪ್ರವೃತ್ತಫಲಾನಿ ಕರ್ಮಾಣಿ ಯೈರ್ವಿದ್ವಚ್ಛರೀರಮ್ ಆರಬ್ಧಮ್ । ತೇಷಾಮ್ ಉಪಭೋಗೇನೈವ ಕ್ಷಯಃ । ಯಥಾ ಆರಬ್ಧವೇಗಸ್ಯ ಲಕ್ಷ್ಯಮುಕ್ತೇಷ್ವಾದೇರ್ವೇಗಕ್ಷಯಾದೇವ ಸ್ಥಿತಿಃ । ನ ತು ಲಕ್ಷ್ಯವೇಧಸಮಕಾಲಮೇವ ಪ್ರಯೋಜನಮ್ ನಾಸ್ತೀತಿ। ತದ್ವತ್। ಅನ್ಯಾನಿ ತು ಅಪ್ರವೃತ್ತಫಲಾನಿ ಇಹ ಪ್ರಾಗ್ ಜ್ಞಾನೋತ್ಪತ್ತೇರೂರ್ಧ್ವಂ ಚ ಕೃತಾನಿ ವಾ ಕ್ರಿಯಮಾಣಾನಿ ವಾ ಅತೀತಜನ್ಮಾನ್ತರಕೃತಾನಿ ವಾ ಅಪ್ರವೃತ್ತಫಲಾನಿ ಜ್ಞಾನೇನ ದಹ್ಯನ್ತೇ ಪ್ರಾಯಶ್ಚಿತ್ತೇನೇವ। "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ" (ಗೀ ೪-೩೭) ಇತಿ ಸ್ಮೃತೇಶ್ಚ[1] । "ಕ್ಷೀಯನ್ತೇ ಚಾಸ್ಯ ಕರ್ಮಾಣಿ" (ಮುಂ ೨-೨-೮) ಇತಿ ಚಾಽಽಥರ್ವಣೇ। ಅತೋ ಬ್ರಹ್ಮ ವಿದೋ ಜೀವನಾದಿಪ್ರಯೋಜನಾಭಾವೇಽಪಿ ಪ್ರವೃತ್ತಫಲಾನಾಂ ಕರ್ಮಣಾಮ್ ಅವಶ್ಯಮೇವ ಫಲೋಪಭೋಗಃ ಸ್ಯಾದಿತಿ ಮುಕ್ತೇಷುವತ್ ತಸ್ಯ ತಾವದೇವ ಚಿರಮ್ ಇತಿ ಯುಕ್ತಮೇವೋಕ್ತಮ್ ಇತಿ ಯಥೋಕ್ತದೋಷಚೋದನಾ ನುಪಪತ್ತಿಃ। ಜ್ಞಾನೋತ್ಪತ್ತೇರೂರ್ಧ್ವಂ ಚ ಬ್ರಹ್ಮವಿದಃ ಕರ್ಮಾಭಾವಮ್ ಅವೋ ಚಾಮ "ಬ್ರಹ್ಮಸಂಸ್ಥೋಽಮೃತತ್ವಮೇತಿ" (೨-೨೩-೧) ಇತ್ಯತ್ರ । ತಚ್ಚ ಸ್ಮರ್ತುಮರ್ಹಸಿ ॥

(ಭಾಷ್ಯಾರ್ಥ)

(ಸಮಾಧಾನ) - ಹಾಗಲ್ಲ ಏಕೆಂದರೆ ಕರ್ಮಗಳಿಗೆ ಫಲವುಂಟಾಗಿರುವದು, (ಇನ್ನೂ) ಉಂಟಾಗದೆ ಇರುವದು- ಎಂಬ ತಾರತಮ್ಯವಿರಬಹುದಾಗಿದೆ. (ಇದರ ವಿವರ). ಫಲವು (ಇನ್ನೂ) ಉಂಟಾಗದೆ ಇರುವ ಕರ್ಮಗಳಿಗೆ ಅವಶ್ಯವಾಗಿ ಫಲವು ಉಂಟಾಗಬೇಕಾಗಿರುವದರಿಂದ ಬ್ರಹ್ಮಜ್ಞಾನಿಗೆ (ಈ) ಶರೀರವು ಬಿದ್ದುಹೋದಮೇಲೆ (ಇನ್ನೂ) ಫಲವುಂಟಾಗದಿರುವ ಕರ್ಮಗಳ ಫಲವನ್ನು ಉಪಭೋಗಿಸುವದಕ್ಕಾಗಿ ಮತ್ತೊಂದು ಶರೀರವುಂಟಾಗಬೇಕು ಎಂದಿರಲ್ಲ, ಅದು ಸರಿಯಲ್ಲ ಏಕೆಂದರೆ ಜ್ಞಾನಿಗೆ 'ಅವನಿಗೆ ಅಲ್ಲಿಯವರೆಗೇ ತಡ' ಎಂಬ ಶ್ರುತಿಯು ಪ್ರಮಾಣವಾಗಿರುತ್ತದೆ.[2]

---

1. 'ಸ್ಮೃತಿಶ್ಚ' ಎಂದಿದ್ದರೆ ಚೆನ್ನಾಗಿರುತ್ತಿತ್ತೆಂದು ತೋರುತ್ತದೆ.

2. ಶರೀರವು ಬೀಳುವವರೆಗೇ ತಡ- ಎಂಬ ಶ್ರುತಿಯ ಪ್ರಾಮಾಣ್ಯದಿಂದ ಮಿಕ್ಕ ಕರ್ಮಗಳು ಮತ್ತೆ ಶರೀರಾಂತರದಲ್ಲಿ ಫಲವನ್ನು ಕೊಡುವದಿಲ್ಲವೆಂದು ಸಿದ್ಧವಾಗುತ್ತದೆ ಎಂದು ಭಾವ. ಬ್ರ. ಸೂ. ೪-೧-೧೫ (ಭಾ. ಭಾ ೫೩೧)

(ಆಕ್ಷೇಪ) .- "ಪುಣ್ಯಕರ್ಮದಿಂದ ಒಳ್ಳೆಯವನಾಗುತ್ತಾನೆ." (ಬೃ. ೩-೨-೧೩) ಎಂಬ ಶ್ರುತಿಗೂ ಪ್ರಾಮಾಣ್ಯವೇ (ಇದೆ)ಯಲ್ಲವೆ ?

(ಪರಿಹಾರ) .- ನಿಜ, ಹಾಗೆಯೇ ಸರಿ ಹಾಗಿದ್ದರೂ ಫಲವನ್ನು ಕೊಟ್ಟಿರುವ ಕರ್ಮಗಳಿಗೂ ಫಲವನ್ನು ಕೊಡದೆ ಇರುವ ಕರ್ಮಗಳಿಗೂ (ಒಂದು) ವಿಶೇಷವುಂಟು. ಹೇಗೆಂದರೆ, 'ಯಾವ ಕರ್ಮಗಳು ಫಲವನ್ನು ಕೊಟ್ಟುಬಿಟ್ಟವೆಯೋ, ಯಾವ (ಕರ್ಮ)ಗಳಿಂದ ಜ್ಞಾನಿಯ ಶರೀರವು ಉಂಟಾಗಿರುತ್ತದೆಯೋ[1]' ಅವುಗಳು ಉಪಭೋಗದಿಂದಲೇ ನಾಶವಾಗುತ್ತವೆ.[2] ಹೇಗೆ ಗುರಿಯನ್ನು ನೋಡಿ ಬಿಟ್ಟ ಬಾಣವೇ ಮುಂತಾದದ್ದಕ್ಕೆ ವೇಗವು ಪ್ರಾರಂಭವಾಗಿಬಿಟ್ಟಿರುವದರಿಂದ (ಅದು ಆ) ವೇಗವು ನಾಶವಾದಮೇಲೆಯೇ ಮುಗಿಯುತ್ತದೆಯೋ, ಗುರಿಯನ್ನು ಹೊಡೆದ ಸಮಕಾಲದಲ್ಲಿಯೇ- (ಇನ್ನು ತನಗೆ) ಯಾವ ಪ್ರಯೋಜನವೂ ಇಲ್ಲವೆಂಬ ಕಾರಣದಿಂದ-(ನಾಶವಾಗು)ವದಿಲ್ಲವೋ, ಹಾಗೆ.[3] ಆದರೆ ಫಲವನ್ನು ಕೊಡದೆ ಇರುವ ಮಿಕ್ಕ ಕರ್ಮಗಳಿವೆಯಲ್ಲ, ಅವಾದರೋ—ಇಲ್ಲಿ ಜ್ಞಾನವುಂಟಾಗುವದಕ್ಕೆ ಮೊದಲೂ ಆಮೇಲೂ[4] ಉಂಟುಮಾಡುವ (ಕರ್ಮಗಳಿವೆಯಲ್ಲ, ಅವೇ) ಆಗಲಿ, ಹಿಂದಿನ ಬೇರೆಯ ಜನ್ಮಗಳಲ್ಲಿ ಮಾಡಿದ್ದು ಫಲವನ್ನು ಕೊಡದೆ ಇರುವ (ಕರ್ಮ)ಗಳಾಗಲಿ—ಪ್ರಾಯಶ್ಚಿತ್ತದಿಂದ ಹೇಗೋ ಹಾಗೆ[5] ಜ್ಞಾನದಿಂದ ದಗ್ಧವಾಗುತ್ತವೆ. "ಹಾಗೆ ಜ್ಞಾನಾಗ್ನಿಯು ಎಲ್ಲಾ ಕರ್ಮಗಳನ್ನೂ ಬೂದಿಗೈದುಬಿಡುತ್ತದೆ" (ಗೀ ೪-೩೭) ಎಂದು ಸ್ಮೃತಿಯೂ (ಇದೆ) "ಮತ್ತು ಇವನ ಕರ್ಮಗಳೂ ಕ್ಷಯವಾಗುವವು" (ಮುಂ ೨-೨-೯) ಎಂದು **ಅಥರ್ವಣ**ದಲ್ಲಿಯೂ ಇದೆ ಆದ್ದರಿಂದ ಬ್ರಹ್ಮಜ್ಞಾನಿಗೆ ಬದುಕಿರುವದೇ ಮುಂತಾದ ಪ್ರಯೋಜನವಿಲ್ಲದಿದ್ದರೂ ಫಲವು ಪ್ರಾರಂಭವಾಗಿಬಿಟ್ಟಿರುವ ಕರ್ಮಗಳಿಗೆ ಅವಶ್ಯವಾಗಿಯೇ ಫಲಭೋಗವು

---

1. ಜ್ಞಾನಿಗೆ ಶರೀರವುಂಟೆಂಬುದು ವ್ಯವಹಾರದ ದೃಷ್ಟಿಯಿಂದಲೇ, ಜ್ಞಾನಿಯ ದೃಷ್ಟಿಯಿಂದ ಶರೀರವೇ ಇಲ್ಲ, ಏಕೆಂದರೆ ಶರೀರವಿರುವದೆಂಬುದು ಮಿಥ್ಯಾಭಿಮಾನಮಾತ್ರ. ಸೂ. ಭಾ. ೧-೧-೪ (ಛಾ. ಭಾ. ೫೮)ನ್ನು ನೋಡಿ.

2. ಪ್ರಾರಬ್ಧಕರ್ಮವನ್ನು ಬಿಟ್ಟು ಉಳಿದ ಕರ್ಮಗಳಿಗೆ ಮಾತ್ರ ಜ್ಞಾನದಿಂದ ನಾಶವೆಂಬುದನ್ನು ಸೂ. ಭಾ ೪-೧-೧೫ (ಛಾ ಭಾ ೫೩೧)ರಲ್ಲಿ ನಿರ್ಣಯಿಸಿದೆ.

3. ಆರಬ್ಧಕರ್ಮಕ್ಕೆ ಫಲವನ್ನು ಕೊಡುವದೊಂದೇ ಕೆಲಸವೇ ಹೊರತು, ಕರ್ತೃವಿಗೆ ಪ್ರಯೋಜನವಿದೆಯೆ ಇಲ್ಲವೆ, ಎಂಬುದೇನೂ ಅದಕ್ಕೆ ಬೇಕಿಲ್ಲ. ಜ್ಞಾನಿಗೆ ಯಾವ ಪ್ರಯೋಜನವೂ ಇಲ್ಲದಿದ್ದರೂ ಕರ್ಮವು ಫಲವನ್ನು ಕೊಡುವದೂ ಹೀಗೆಯೇ.

4. ಇವು ನಿಜವಾಗಿ ಕರ್ಮಾಭಾಸಗಳಾದರೂ ವ್ಯವಹಾರದೃಷ್ಟಿಯಿಂದ ಕರ್ಮಗಳೇ ಆಗಿರುತ್ತವೆ. ಗೃಹಸ್ಥನಾದ ಜ್ಞಾನಿಗೂ ಈ ಬಗೆಯ ಕರ್ಮಾಭಾಸವುಂಟು ಗೀ. ಭಾ. ೪ ೨೦.

5. ಪ್ರಾಯಶ್ಚಿತ್ತಕರ್ಮಗಳು ದುರಿತವನ್ನು ಹೋಗಲಾಡಿಸುವಂತೆ ಜ್ಞಾನವೂ ಕರ್ಮವು ಫಲದಾಯಕವಾಗದಂತೆ ಮಾಡುತ್ತದೆ- ಎಂಬುದಿಷ್ಟೇ ಹೋಲಿಕೆ. ಜ್ಞಾನವು ಕಾರಕವೆಂಬ ಅಭಿಪ್ರಾಯವೇನೂ ಇಲ್ಲಿಲ್ಲ

ಆಗುವದಾದ್ದರಿಂದ ಬಿಟ್ಟಬಾಣದಂತೆ[1] 'ಅವನಿಗೆ ಅಲ್ಲಿಯವರೆಗೇ ತಡ' ಎಂದು ಹೇಳಿದ್ದು ಯುಕ್ತವೇ ಆಗಿದೆಯಾಗಿ ಮೇಲೆ ಹೇಳಿದ ದೋಷವನ್ನು ಎತ್ತುವದು ಸರಿಯಲ್ಲ.[2] ಜ್ಞಾನವು ಉಂಟಾದಬಳಿಕ ಬ್ರಹ್ಮಜ್ಞಾನಿಗೆ ಕರ್ಮವು ಇಲ್ಲ ಎಂದು "ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುತ್ತಾನೆ" (೨-೨೩-೧ ಭಾ ಭಾ ೧೭೯) ಎಂಬಲ್ಲಿ ಹೇಳಿರುತ್ತೇವೆ ಅದನ್ನು (ನೀನು) ನೆನಸಿಗೆ ತಂದುಕೊಳ್ಳಬೇಕು[3]

## ಆಚಾರ್ಯನಿಂದ ತಿಳಿದುಕೊಳ್ಳಬೇಕಾದ ಅಣಿಮೆಯೇ ನಮ್ಮ ಆತ್ಮ

(ಉಪನಿಷತ್ತು)

**ಸ ಯ ಏಷೋಽಣಿಮೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥೩॥**

೩. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಐತದಾತ್ಮ್ಯವು; ಅದು ಸತ್ಯವು, ಅದೇ ಆತ್ಮನು ಶ್ವೇತಕೇತುವೆ, ಅದೇ ನೀನಾಗಿರುವೆ - ಎನ್ನಲು 'ಭಗವಂತನು ಮತ್ತೂ ನನಗೆ ತಿಳಿಯಹೇಳಬೇಕು' ಎಂದನು. 'ಸೋಮ್ಯನೆ, ಹಾಗೇ ಆಗಲಿ !' ಎಂದು (ತಂದೆ) ನುಡಿದನು.

### ನಮ್ಮ ಆತ್ಮನನ್ನು ಜ್ಞಾನದಿಂದ ತಿಳಿದುಕೊಳ್ಳಬಹುದು

(ಭಾಷ್ಯ)

೫೩೦ ಸ ಯ ಇತ್ಯಾದ್ಯುಕ್ತಾರ್ಥಮ್ ॥

---

1. ಪ್ರಯೋಜನವು ಮುಗಿದಮೇಲೂ ವೇಗವು ಮುಗಿಯುವವರೆಗೂ ಬಾಣವು ಹೋಗುತ್ತಿರುವಂತೆಯೇ.

2. ಈ ಪ್ರಾರಬ್ಧಕರ್ಮದ ಚರ್ಚೆಯು ವ್ಯವಹಾರದೃಷ್ಟಿಯಿಂದ ನಡೆದದ್ದು. ಹೀಗೆಯೇ ಗೀ. ಭಾ. ೪-೩೭ (ಭಾ. ಭಾ. ೩೮೧), ಮುಂ. ಭಾ. ೨-೨-೯, ಸೂ ಭಾ. ೪-೧-೧೫ (ಭಾ. ಭಾ. ೫೩೩) ಮುಂತಾದ ಕಡೆಗಳಲ್ಲಿಯೂ ಪ್ರಾರಬ್ಧಕರ್ಮವು ಭೋಗದಿಂದಲೇ ಕ್ಷಯವಾಗುವದೆಂದು ಹೇಳಿದೆ. ಜ್ಞಾನದಿಂದ ಮಿಥ್ಯಾಜ್ಞಾನವು ಬಾಧಿತವಾದರೂ ಸಂಸ್ಕಾರವಶದಿಂದ ಭೋಗವೂ ಇದ್ದುಕೊಂಡಿರಬಹುದೆಂಬ ಅಭಿಪ್ರಾಯದಿಂದ ಹೇಳಿದ ಮಾತಿದು. ಪರಮಾರ್ಥದೃಷ್ಟಿಯಿಂದ ಮೂರುಕಾಲಕ್ಕೂ ಜ್ಞಾನಿಗೆ ಕರ್ಮಸಂಬಂಧವಿಲ್ಲವೆಂಬ ಪರಮ ಸಿದ್ಧಾಂತವನ್ನು ಸೂ. ಭಾ. ೪-೧-೧೩ (ಭಾ. ಭಾ ೫೨೮)ರಲ್ಲಿ ಕಾಣಬಹುದು.

3. ಬ್ರಹ್ಮಜ್ಞಾನಿಗೆ ಜ್ಞಾನದಿಂದ ಭೇದಪ್ರತ್ಯಯವು ಹೋಗಿಬಿಟ್ಟಿರುವದರಿಂದ ಮೊದಲಿನಂತೆ ಕರ್ಮದಲ್ಲಿ ಅವನು ತೊಡಗುವ ಸಂಭವವಿಲ್ಲ ಎಂದು ಅಲ್ಲಿ ಹೇಳಿದೆ.

(ಭಾಷ್ಯಾರ್ಥ)

೬ ಈ (ಅಣಿಮೆಯಿದೆ)ಯಲ್ಲ ಎಂದುಮುಂತಾಗಿರುವ ಗ್ರಂಥಕ್ಕೆ (ಹಿಂದೆ) ಹೇಳಿರುವಂತೆ ಅರ್ಥ.

## ಪ್ರಶ್ನೆ: ಸತ್ಸಂಪತ್ತಿಯ ಕ್ರಮವು ಯಾವದು?

(ಭಾಷ್ಯ)

೫೩೧. ಆಚಾರ್ಯವಾನ್ ವಿದ್ವಾನ್ ಯೇನ ಕ್ರಮೇಣ ಸತ್ ಸಂಪದ್ಯತೇ ತಂ ಕ್ರಮಂ ದೃಷ್ಟಾನ್ತೇನ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ। ತಥಾ ಸೋಮ್ಯೇತಿ ಹೋವಾಚ ॥

(ಭಾಷ್ಯಾರ್ಥ)

ಆಚಾರ್ಯವಂತನಾದ ಜ್ಞಾನಿಯು ಯಾವ ಕ್ರಮದಿಂದ[1] ಸತ್ತನ್ನು ಸೇರಿಕೊಳ್ಳುವನೋ ಆ ಕ್ರಮವನ್ನು ದೃಷ್ಟಾಂತದಿಂದ ಭಗವಂತನಾದ ನೀನು ನನಗೆ ತಿಳಿಯಹೇಳಬೇಕು - ಎಂದು (ಕೇಳಲು ತಂದೆಯು) 'ಸೋಮ್ಯನೆ, ಹಾಗೇ ಆಗಲಿ' ಎಂದನು.

---

# ಆರನೆಯ ಅಧ್ಯಾಯ-ಹದಿನೈದನೆಯ ಖಂಡ

(ಸತ್ಸಂಪತ್ತಿಯ ಕ್ರಮ)

## ಮುಮುಕ್ಷುವು ಸತ್ತಿನಲ್ಲಿ ಸೇರುವ ಕ್ರಮ

(ಉಪನಿಷತ್ತು)

**ಪುರುಷಗ್ಂ ಸೋಮ್ಯೋತೋಪತಾಪಿನಂ ಜ್ಞಾತಯಃ ಪರ್ಯುಪಾಸತೇ ಜಾನಾಸಿ ಮಾಂ ಜಾನಾಸಿ ಮಾಮಿತಿ ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ತಾವಜ್ಜಾನಾತಿ ॥ ೧ ॥**

೧. ಸೋಮ್ಯನೆ, ನರಳುತ್ತಿರುವ ಪುರುಷನನ್ನು ಜ್ಞಾತಿಗಳು ಸುತ್ತುಗಟ್ಟಿ 'ನನ್ನನ್ನು ಬಲ್ಲೆಯ, ನನ್ನನ್ನು ಬಲ್ಲೆಯ ?' ಎಂದು

---

1 ಸಾಮಾನ್ಯರು ಸಾಯುವ ಕ್ರಮಕ್ಕಿಂತ ಇದು ಬೇರೆಯೊ, ಅಲ್ಲವೊ ? ಎಂಬುದು ಪ್ರಶ್ನೆ [illegible]ತಗಿರುವ ಭಾವ.

(ಕೂತುಕೊಂಡು ಕೇಳುತ್ತಾರೆ). ಅವನಿಗೆ ಎಲ್ಲಿಯವರೆಗೆ ವಾಕ್ಕು ಮನಸ್ಸಿನಲ್ಲಿ ಸೇರುವದಿಲ್ಲವೋ ಮನಸ್ಸು ಪ್ರಾಣದಲ್ಲಿಯೂ ಪ್ರಾಣವು ತೇಜಸ್ಸಿನಲ್ಲಿಯೂ ತೇಜಸ್ಸು ಪರದೇವತೆಯಲ್ಲಿಯೂ ಸೇರಿಕೊಳ್ಳುವದಿಲ್ಲವೋ ಅಲ್ಲಿಯವರೆಗೂ ಅರಿಯುತ್ತಿರುತ್ತಾನೆ.

## ಮುಮುಕ್ಷುವಿಗೆ ಹೊರಗಿನರಿವು ಎಲ್ಲಿಯವರೆಗೆ ಇರುತ್ತದೆ?

(ಭಾಷ್ಯ)

೫೩೨. ಪುರುಷಂ ಹೇ ಸೋಮ್ಯ ಉತ ಉಪತಾಪಿನಂ ಜ್ವರಾದ್ಯುಪತಾಪವನ್ತಂ ಜ್ಞಾತಯೋ ಬಾನ್ಧವಾಃ ಪರಿವಾರ್ಯ ಉಪಾಸತೇ ಮುಮೂರ್ಷುಂ ಜಾನಾಸಿ ಮಾಂ ತವ ಪಿತರಂ ಪುತ್ರಂ ಭ್ರಾತರಂ ವಾ? ಇತಿ ಪೃಚ್ಛನ್ತಃ। ತಸ್ಯ ಮುಮೂರ್ಷೋರ್ಯಾವನ್ನ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮ್ ಇತ್ಯೇತದುಕ್ತಾರ್ಥಮ್ ॥

(ಭಾಷ್ಯಾರ್ಥ)

ಎಲೈ ಸೋಮ್ಯನೆ, ನರಳುತ್ತಿರುವ ಜ್ವರವೇ ಮುಂತಾದದ್ದರ ಸಂಕಟವುಳ್ಳ ಮನುಷ್ಯನನ್ನು ಜ್ಞಾತಿಗಳು, ನೆಂಟರು, ಸಾಯಲಿರುವ (ಅವನನ್ನು) ಸುತ್ತುಗಟ್ಟಿಕೊಂಡು 'ನಿನ್ನ ತಂದೆಯಾದ, ಮಗನಾದ, ಅಥವಾ ಒಡಹುಟ್ಟಿದವನಾದ ನನ್ನನ್ನು ಬಲ್ಲೆಯ ?' ಎಂದು ಕೇಳುತ್ತಾ ಕುಳಿತಿರುವರು. ಆ ಸಾಯಲಿರುವವನ ವಾಕ್ಕು ಎಲ್ಲಿಯವರೆಗೆ ಮನಸ್ಸಿನಲ್ಲಿ ಸೇರುವದಿಲ್ಲವೋ, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ತೇಜಸ್ಸಿನಲ್ಲಿಯೂ ತೇಜಸ್ಸು ಪರದೇವತೆಯಲ್ಲಿಯೂ (ಸೇರುವದಿಲ್ಲವೋ) ಎಂಬಿದೇ (ಮುಂತಾದದ್ದಕ್ಕೆ) ಹಿಂದೆ (ಭಾ. ಭಾ. ೫೦೩ರಲ್ಲಿ) ಅರ್ಥವನ್ನು ಹೇಳಿದೆ.[1]

(ಉಪನಿಷತ್ತು)

**ಅಥ ಯದಾಽಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮಥ ನ ಜಾನಾತಿ ॥೨॥**

೨. ಇನ್ನು ಯಾವಾಗ ಇವನ ವಾಕ್ಕು ಮನಸ್ಸಿನಲ್ಲಿ ಸೇರಿಕೊಳ್ಳುವದೋ ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರದೇವತೆಯಲ್ಲಿ (ಸೇರುವದೋ) ಆಗ ಅರಿಯದೆ ಇರುತ್ತಾನೆ.

---

1. ಅಲ್ಲಿ ಸಾಯುವವನು ಸತ್ಸಂಪತ್ತಿಯನ್ನು ಪಡೆಯುವ ಕ್ರಮವನ್ನು ಹೇಳಿದೆ ; ಇಲ್ಲಿ ಅದನ್ನೇ ಮುಮುಕ್ಷುವಿಗೆ ಹೇಳಿದೆ.

'ಭಗವಂತನಾದ (ನೀನು) ನನಗೆ ಮತ್ತೂ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ !' ಎಂದನು.

## ಜ್ಞಾನಿಯು ಕೊನೆಗೆ ಪರಮಾತ್ಮನಲ್ಲಿಯೇ ಸೇರಿಹೋಗುತ್ತಾನೆ

(ಭಾಷ್ಯ)

೫೩೫. ಸ ಯ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಆ ಈ (ಅಣಿಮೆಯಿದೆ)ಯಲ್ಲ– ಎಂದುಮುಂತಾದ (ಗ್ರಂಥವು ಹಿಂದಿನದಕ್ಕೆ) ಸಮಾನವು.

## ಪ್ರಶ್ನೆ : ಜ್ಞಾನ್ಯಜ್ಞಾನಿಗಳಿಗೆ ಪುನರಾವೃತ್ತಿಯಲ್ಲಿ ತಾರತಮ್ಯವೇಕೆ ?

(ಭಾಷ್ಯ)

೫೩೬. ಯದಿ ಮರಿಷ್ಯತೋ ಮುಮುಕ್ಷುತಶ್ಚ ತುಲ್ಯಾ ಸತ್ಸಂಪತ್ತಿಸ್ತತ್ರ ವಿದ್ವಾನ್ ಸತ್ಸಂಪನ್ನೋ ನಾಽಽವರ್ತತೇ । ಆವರ್ತತೇ ತ್ವವಿದ್ವಾನ್ ಇತ್ಯತ್ರ ಕಾರಣಂ ದೃಷ್ಟಾನ್ತೇನ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥

(ಭಾಷ್ಯಾರ್ಥ)

ಸಾಯಲಿರುವವನಿಗೂ ಮೋಕ್ಷವನ್ನು ಪಡೆಯಲಿರುವವನಿಗೂ ಸತ್ಸಂಪತ್ತಿ (ಕ್ರಮವು) ಸಮಾನವಾದರೆ, ಅವರಲ್ಲಿ ಜ್ಞಾನಿಯು ಸತ್ತಿನಲ್ಲಿ ಸೇರಿದವನು ಹಿಂದಕ್ಕೆ ಬರುವದಿಲ್ಲ, ಅಜ್ಞನು ಮಾತ್ರ ಹಿಂತಿರುಗುತ್ತಾನೆ ಎಂಬಿದಕ್ಕೆ ಕಾರಣವನ್ನು ದೃಷ್ಟಾಂತದಿಂದ ಮತ್ತೂ ಭಗವಂತನು ನನಗೆ ತಿಳಿಯಹೇಳಬೇಕು ! ಎಂದು (ಕೇಳಲು ತಂದೆಯು) 'ಸೋಮ್ಯನೆ, ಹಾಗೇ ಆಗಲಿ !' ಎಂದನು.

———

# ಆರನೆಯ ಅಧ್ಯಾಯ—ಹದಿನಾರನೆಯ ಖಂಡ

( ಸತ್ಯನಿರತವನಿಗೆ ಅಪುನರಾವೃತ್ತಿ )

## ಕಾದ ಕೊಡಲಿಯನ್ನು ಮುಟ್ಟುವವನ ದೃಷ್ಟಾಂತ

(ಉಪನಿಷತ್ತು)

**ಪುರುಷಗ್ಂ ಸೋಮ್ಯೋತ ಹಸ್ತಗೃಹೀತಮಾನಯನ್ತ್ಯಪ ಹಾರ್ಷೀತ್ ಸ್ತೇಯಮಕಾರ್ಷೀತ್ ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽನೃತೇನಾಽಽತ್ಮಾನಮನ್ತ ರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ ॥೧॥**

೧. ಸೋಮ್ಯನೆ, (ಒಬ್ಬ) ಮನುಷ್ಯನನ್ನು ಕೈಕಟ್ಟಿ ಕರೆತರುತ್ತಾರೆ; 'ತೆಗೆದುಕೊಂಡು ಹೋದನು, ಸ್ತೇಯವನ್ನು ಮಾಡಿದನು, ಇವನಿಗಾಗಿ ಕೊಡಲಿಯನ್ನು ಕಾಯಿಸಿರಿ!' ಎನ್ನುತ್ತಾರೆ. ಅವನು ಅದನ್ನು ಮಾಡಿದವನಾಗಿದ್ದರೆ ಅದರಿಂದಲೇ ತನ್ನನ್ನು ಸುಳ್ಳುಗಾರನನ್ನಾಗಿ ಮಾಡಿಕೊಳ್ಳುತ್ತಾನೆ. ಆ ಸುಳ್ಳನ್ನು ನಂಬಿದವನು, ಸುಳ್ಳಿನಿಂದ ತನ್ನನ್ನು ಮರೆಮಾಡಿಕೊಂಡು ಕಾದ ಕೊಡಲಿಯನ್ನು ಹಿಡಿದುಕೊಳ್ಳುತ್ತಾನೆ. ಅವನು ಸುಡಲ್ಪಡುತ್ತಾನೆ, ಆಗ ಹೊಡೆಯಲ್ಪಡುತ್ತಾನೆ.

### ಸುಳ್ಳನ್ನು ನಂಬಿದವನಿಗೆ ಬಂಧ

(ಭಾಷ್ಯ)

೫೩೭. ಶೃಣು ಯಥಾ ಸೋಮ್ಯ ಪುರುಷಂ ಚೌರ್ಯಕರ್ಮಣಿ ಸಂದಿಹ್ಯಮಾನಂ ನಿಗ್ರಹಾಯ ಪರೀಕ್ಷಣಾಯ ವಾ[1] ಉತ ಅಪಿ ಹಸ್ತಗೃಹೀತಂ ಬದ್ಧಹಸ್ತಮ್ ಆನಯನ್ತಿ ರಾಜಪುರುಷಾಃ। ಕಿಂ ಕೃತವಾನಯಮ್ ? ಇತಿ ಪೃಷ್ಟಾಶ್ಚ ಆಹುಃ ಅಪಹಾರ್ಷೀದ್ ಧನಮಸ್ಯಾಯಮ್ । ತೇ ಚಾಽಽಹುಃ। ಕಿಮಪಹರಣಮಾತ್ರೇಣ ಬನ್ಧನಮರ್ಹತಿ ? ಅನ್ಯಥಾ ದತ್ತೇಽಪಿ ಧನೇ ಬನ್ಧನಪ್ರಸಙ್ಗಾತ್। ಇತ್ಯುಕ್ತಾಃ ಪುನರಾಹುಃ। ಸ್ತೇಯಮ್ ಅಕಾರ್ಷೀತ್ ಚೌರ್ಯೇಣ ಧನಮ್ ಅಪಹಾರ್ಷೀದಿತಿ । ತೇಷ್ವೇವಂ ವದತ್ಸು ಇತರೋಽಪಹ್ನುತೇ ನಾಽಹಂ ತತ್ಕರ್ತಾ,

1. 'ಚ' ಎಂಬುದಕ್ಕಿಂತ ಈ ಪಾಠವೇ ಮೇಲು.

'ಭಗವಂತನಾದ (ನೀನು) ನನಗೆ ಮತ್ತೂ ತಿಳಿಯಹೇಳಬೇಕು' ಎನ್ನಲು 'ಸೋಮ್ಯನೆ, ಹಾಗೇ ಆಗಲಿ !' ಎಂದನು.

## ಜ್ಞಾನಿಯು ಕೊನೆಗೆ ಪರಮಾತ್ಮನಲ್ಲಿಯೇ ಸೇರಿಹೋಗುತ್ತಾನೆ

(ಭಾಷ್ಯ)

೫೩೫. ಸ ಯ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಆ ಈ (ಅಣಿಮೆಯಿದೆ)ಯಲ್ಲ- ಎಂದುಮುಂತಾದ (ಗ್ರಂಥವು ಹಿಂದಿನದಕ್ಕೆ) ಸಮಾನವು.

## ಪ್ರಶ್ನೆ : ಜ್ಞಾನ್ಯಜ್ಞಾನಿಗಳಿಗೆ ಪುನರಾವೃತ್ತಿಯಲ್ಲಿ ತಾರತಮ್ಯವೇಕೆ ?

(ಭಾಷ್ಯ)

೫೩೬. ಯದಿ ಮರಿಷ್ಯತೋ ಮುಮುಕ್ಷೂತಶ್ಚ ತುಲ್ಯಾ ಸತ್ಸಂಪತ್ತಿಸ್ತತ್ರ ವಿದ್ವಾನ್ ಸತ್ಸಂಪನ್ನೋ ನಾಽಽವರ್ತತೇ । ಆವರ್ತತೇ ತ್ವವಿದ್ವಾನ್ ಇತ್ಯತ್ರ ಕಾರಣಂ ದೃಷ್ಟಾನ್ತೇನ ಭೂಯ ಏವ ಮಾ ಭಗವಾನ್ ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥

(ಭಾಷ್ಯಾರ್ಥ)

ಸಾಯಲಿರುವವನಿಗೂ ಮೋಕ್ಷವನ್ನು ಪಡೆಯಲಿರುವವನಿಗೂ ಸತ್ಸಂಪತ್ತಿ (ಕ್ರಮವು) ಸಮಾನವಾದರೆ, ಅವರಲ್ಲಿ ಜ್ಞಾನಿಯು ಸತ್ತಿನಲ್ಲಿ ಸೇರಿದವನು ಹಿಂದಕ್ಕೆ ಬರುವದಿಲ್ಲ, ಅಜ್ಞನು ಮಾತ್ರ ಹಿಂತಿರುಗುತ್ತಾನೆ ಎಂಬಿದಕ್ಕೆ ಕಾರಣವನ್ನು ದೃಷ್ಟಾಂತದಿಂದ ಮತ್ತೂ ಭಗವಂತನು ನನಗೆ ತಿಳಿಯಹೇಳಬೇಕು ! ಎಂದು (ಕೇಳಲು ತಂದೆಯು) 'ಸೋಮ್ಯನೆ, ಹಾಗೇ ಆಗಲಿ !' ಎಂದನು.

---

# ಆರನೆಯ ಅಧ್ಯಾಯ—ಹದಿನಾರನೆಯ ಖಂಡ

( ಸತ್ಯನಿರತವನಿಗೆ ಅಪುನರಾವೃತ್ತಿ )

## ಕಾದ ಕೊಡಲಿಯನ್ನು ಮುಟ್ಟುವವನ ದೃಷ್ಟಾಂತ

(ಉಪನಿಷತ್ತು)

**ಪುರುಷಗ್ಂ ಸೋಮ್ಯೋತ ಹಸ್ತಗೃಹೀತಮಾನಯನ್ತ್ಯಪ ಹಾರ್ಷೀತ್ ಸ್ತೇಯಮಕಾರ್ಷೀತ್ ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾಽನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽನೃತೇನಾಽಽತ್ಮಾನಮನ್ತ ರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ ॥೧॥**

೧. ಸೋಮ್ಯನೆ, (ಒಬ್ಬ) ಮನುಷ್ಯನನ್ನು ಕೈಕಟ್ಟಿ ಕರೆತರು ತ್ತಾರೆ; 'ತೆಗೆದುಕೊಂಡು ಹೋದನು, ಸ್ತೇಯವನ್ನು ಮಾಡಿದನು, ಇವನಿಗಾಗಿ ಕೊಡಲಿಯನ್ನು ಕಾಯಿಸಿರಿ!' ಎನ್ನುತ್ತಾರೆ. ಅವನು ಅದನ್ನು ಮಾಡಿದವನಾಗಿದ್ದರೆ ಅದರಿಂದಲೇ ತನ್ನನ್ನು ಸುಳ್ಳುಗಾರ ನನ್ನಾಗಿ ಮಾಡಿಕೊಳ್ಳುತ್ತಾನೆ. ಆ ಸುಳ್ಳನ್ನು ನಂಬಿದವನು, ಸುಳ್ಳಿ ನಿಂದ ತನ್ನನ್ನು ಮರೆಮಾಡಿಕೊಂಡು ಕಾದ ಕೊಡಲಿಯನ್ನು ಹಿಡಿದು ಕೊಳ್ಳುತ್ತಾನೆ. ಅವನು ಸುಡಲ್ಪಡುತ್ತಾನೆ, ಆಗ ಹೊಡೆಯಲ್ಪಡು ತ್ತಾನೆ.

### ಸುಳ್ಳನ್ನು ನಂಬಿದವನಿಗೆ ಬಂಧ

(ಭಾಷ್ಯ)

೫೩೭. ಶೃಣು ಯಥಾ ಸೋಮ್ಯ ಪುರುಷಂ ಚೌರ್ಯಕರ್ಮಣಿ ಸಂದಿಹ್ಯ ಮಾನಂ ನಿಗ್ರಹಾಯ ಪರೀಕ್ಷಣಾಯ ವಾ[1] ಉತ ಅಪಿ ಹಸ್ತಗೃಹೀತಂ ಬದ್ಧ ಹಸ್ತಮ್ ಆನಯನ್ತಿ ರಾಜಪುರುಷಾಃ। ಕಿಂ ಕೃತವಾನಯಮ್ ? ಇತಿ ಪೃಷ್ಟಾಶ್ಚ ಆಹುಃ ಅಪಹಾರ್ಷೀದ್ ಧನಮಸ್ಯಾಯಮ್। ತೇ ಚಾಽಽಹುಃ। ಕಿಮಪಹರಣ ಮಾತ್ರೇಣ ಬನ್ಧನಮರ್ಹತಿ ? ಅನ್ಯಥಾ ದತ್ತೇಽಪಿ ಧನೇ ಬನ್ಧನಪ್ರಸಙ್ಗಾತ್। ಇತ್ಯುಕ್ತಾಃ ಪುನರಾಹುಃ। ಸ್ತೇಯಮ್ ಅಕಾರ್ಷೀತ್ ಚೌರ್ಯೇಣ ಧನಮ್ ಅಪಹಾರ್ಷೀದಿತಿ। ತೇಷ್ವೇವಂ ವದತ್ಸು ಇತರೋಽಪಹ್ನುತೇ ನಾಽಹಂ ತತ್ಕರ್ತಾ,

1. 'ಚ' ಎಂಬುದಕ್ಕಿಂತ ಈ ಪಾಠವೇ ಮೇಲು.

ಇತಿ । ತೇ ಚಾಽಽಹುಃ ಸನ್ದಿಹ್ಯಮಾನಂ ಸ್ತೇಯಮಕಾರ್ಷೀಸ್ತ್ವಮ್ ಅಸ್ಯ ಧನಸ್ಯೇತಿ । ತಸ್ಮಿಂಶ್ಚಾಽಪಹ್ನುವಾನ ಆಹುಃ ಪರಶುಮಸ್ಮೈ ತಪತೇತಿ ಶೋಧ ಯತ್ವಾತ್ಮಾನಮಿತಿ । ಸ ಯದಿ ತಸ್ಯ ಸ್ತೈನ್ಯಸ್ಯ ಕರ್ತಾ ಭವತಿ ಬಹಿಶ್ಚಾಽ ಪಹ್ನುತೇ, ಸ ಏವಂಭೂತಸ್ತತ ಏವ ಅನೃತಮ್ ಅನ್ಯಥಾಭೂತಂ[1] ಸನ್ತಮ್ ಅನ್ಯಥಾಽಽತ್ಮಾನಂ ಕುರುತೇ । ಸ ತಥಾಽನೃತಾಭಿಸಂಧೋಽನೃತೇನಾಽಽತ್ಮಾನ ಮನ್ತರ್ಧಾಯ ವ್ಯವಹಿತಂ ಕೃತ್ವಾ ಪರಶುಂ ತಪ್ತಂ ಮೋಹಾತ್ ಪ್ರತಿಗೃಹ್ಣಾತಿ । ಸ ದಹ್ಯತೇ, ಅಥ ಹನ್ಯತೇ ರಾಜಪುರುಷೈಃ ಸ್ವಕೃತೇನಾಽನೃತಾಭಿಸಂಧಿ ದೋಷೇಣ ॥

(ಭಾಷ್ಯಾರ್ಥ)

(ಅದು) ಹೇಗೆಂಬುದನ್ನು (ಹೇಳುವೆನು) ಕೇಳು : ಸೋಮ್ಯನೆ, ಕಳ್ಳತನ ವನ್ನು (ಮಾಡಿರುವನೆಂಬ) ಸಂಶಯಕ್ಕೆ ಒಳಗಾದ ಪುರುಷನನ್ನು ದಂಡಿಸುವದಕ್ಕೊ, ಅಥವಾ ಪರೀಕ್ಷೆಮಾಡುವದಕ್ಕೊ,[2] (ಉತ=ಅಪಿ) ಕೈಹಿಡಿದುಕೊಂಡು ಕೈಕಟ್ಟಿ ರಾಜಭೃತ್ಯರು ಕರೆತರುತ್ತಾರೆ 'ಇವನು ಏನು ಮಾಡಿರುತ್ತಾನೆ ?' ಎಂದು ಕೇಳಲಾಗಿ 'ಇಂಥವನ ಹಣವನ್ನು ತೆಗೆದುಕೊಂಡಿರುತ್ತಾನೆ'. ಆ (ಪೃಚ್ಛಕರು) 'ತೆಗೆದು ಕೊಂಡಮಾತ್ರದಿಂದ ಬಂಧಿಸಬಹುದೇನು ? (ಕೂಡದು). ಹಾಗಲ್ಲವಾದರೆ ಹಣ ವನ್ನು ದಾನಮಾಡಿದಾಗ (ತೆಗೆದುಕೊಂಡರೂ) ಬಂಧಿಸಬೇಕಾಗಿಬರುವದಲ್ಲ !' ಎನ್ನಲಾಗಿ ಮತ್ತೆ ಹೇಳುತ್ತಾರೆ: 'ಕಳ್ಳತನಮಾಡಿರುತ್ತಾನೆ, ಕದ್ದು ಧನವನ್ನು ತೆಗೆದುಕೊಂಡಿರುತ್ತಾನೆ'. ಅವರು ಹೀಗೆಂದು ಹೇಳಲು 'ನಾನು ಹಾಗೆ ಮಾಡಿಲ್ಲ' ಎಂದು (ಆ) ಇನ್ನೊಬ್ಬನು ಅಲ್ಲಗಳೆಯುತ್ತಾನೆ. ಆ (ವಿಚಾರಕರು) ಸಂದೇಹ ಕ್ಕೆಡೆಯಾಗಿದ್ದ (ಪುರುಷನನ್ನು) 'ಇಂಥವನ ಹಣವನ್ನು ಕಳವುಮಾಡಿರುವೆಯೊ?' ಎಂದು ಕೇಳುತ್ತಾರೆ. ಅವನು ಇಲ್ಲವೆಂದರೆ 'ಇವನಿಗಾಗಿ (ಪರೀಕ್ಷೆಮಾಡುವದಕ್ಕೆ) ಕೊಡಲಿಯನ್ನು ಕಾಯಿಸಿರಿ, ತಾನು ಶುದ್ಧನೆಂದು (ತೋರಿಸಲಿ) !' ಎನ್ನುತ್ತಾರೆ. ಅವನು ಆ ಕಳವನ್ನು ಮಾಡಿದವನಾಗಿದ್ದರೆ, ಹೊರಗೆ ಮಾತ್ರ ಇಲ್ಲವೆನ್ನುವನಾದರೆ, ಇಂಥ ಅವನು ಅದರಿಂದಲೇ[3] ತನ್ನನ್ನು ಸುಳ್ಳುಗಾರನನ್ನಾಗಿ (ಮಾಡಿಕೊಳ್ಳು ತ್ತಾನೆ), ತಾನು ಒಂದು ಪ್ರಕಾರದಿಂದ ಇದ್ದರೂ ಇನ್ನೊಂದು ಪ್ರಕಾರದವನನ್ನಾಗಿ

1. 'ಅನ್ಯಥಾಸನ್ತಮ್' ಎಂದಿಷ್ಟೇ ಇದ್ದರೆ ಸಾಕಾಗಿತ್ತು ; ಅಚ್ಚಿನ ಪುಸ್ತಕಗಳಲ್ಲೇನೋ 'ಅನ್ಯಥಾಭೂತಂ ಸನ್ತಮ್' ಎಂದೇ ಇವೆ.

2. ಪರೀಕ್ಷೆಯಿಂದ ತಪ್ಪಿತಸ್ಥನಲ್ಲವೆಂದು ತಿಳಿದು ಬಿಟ್ಟುಬಿಡುವದಕ್ಕೊ ಎಂದು ಅಭಿಪ್ರಾಯ

3. ತಾನು ಕಳ್ಳನಾಗಿದ್ದೂ ಕಳವುಮಾಡಿಲ್ಲವೆಂದು ಸುಳ್ಳನ್ನು ಹೊರತೋರಿಸಿ ಕೊಂಡದ್ದರಿಂದಲೇ.

ಮಾಡಿ(ಕೊಂಡು ಹೇಳಿ)ಕೊಳ್ಳುತ್ತಾನೆ. ಹೀಗೆ ಸುಳ್ಳನ್ನು ನಂಬಿರುವ ಅವನು, ಸುಳ್ಳಿನಿಂದ ತನ್ನನ್ನು ಮರೆಮಾಡಿಕೊಂಡು ಕಾದ ಕೊಡಲಿಯನ್ನು ಮೋಹದಿಂದ ಹಿಡಿದುಕೊಳ್ಳುತ್ತಾನೆ, ಸುಳ್ಳನ್ನು ನಂಬಿದ್ದೆಂಬ ತನ್ನ ದೋಷದಿಂದ ಅವನು ಸುಡಲ್ಪಡುತ್ತಾನೆ, ಅರಸನ ಭೃತ್ಯರಿಂದ ಹೊಡೆಯಲ್ಪಡುತ್ತಾನೆ.

(ಭಾಷ್ಯಾರ್ಥ)

**ಅಥ ಯದಿ ತಸ್ಯಾಽಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನಾಽಽತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ ॥೨**

೨. ಇನ್ನು ಅದನ್ನು ಮಾಡಿದವನಾಗಿರದಿದ್ದರೆ, ಅದರಿಂದಲೇ, ತನ್ನನ್ನು ನಿಜವನ್ನು ಹೇಳಿದವನಾಗಿ ಮಾಡಿಕೊಳ್ಳುತ್ತಾನೆ. ಸತ್ಯವನ್ನು ನಂಬಿದ ಅವನು ಸತ್ಯದಿಂದ ತನ್ನನ್ನು ಮರೆಮಾಡಿಕೊಂಡು ಕಾದ ಕೊಡಲಿಯನ್ನು ಹಿಡಿದುಕೊಳ್ಳುತ್ತಾನೆ. ಅವನು ಸುಡಲ್ಪಡುವದಿಲ್ಲ, ಆಗ ಬಿಡಲ್ಪಡುತ್ತಾನೆ.

## ಸತ್ಯವನ್ನು ನಂಬಿದವನಿಗೆ ಬಿಡುಗಡೆ

(ಭಾಷ್ಯ)

೫೩೮ ಅಥ ಯದಿ ತಸ್ಯ ಕರ್ಮಣೋಽಕರ್ತಾ ಭವತಿ ತತ ಏವ ಸತ್ಯಮ್ ಆತ್ಮಾನಂ ಕುರುತೇ । ಸ ಸತ್ಯೇನ ತಯಾ ಸ್ತೈನ್ಯಾಕರ್ತೃತಯಾ ಆತ್ಮಾನಮ್ ಅಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ಸತ್ಯಾಭಿಸಂಧಃ ಸನ್ ನ ದಹ್ಯತೇ ಸತ್ಯವ್ಯವಧಾನಾತ್ । ಅಥ ಮುಚ್ಯತೇ ಮೃಷಾಭಿಯೋಕ್ತೃಭ್ಯಃ । ತಪ್ತಪರಶುಹಸ್ತತಲಸಂಯೋಗಸ್ಯ ತುಲ್ಯತ್ವೇಽಪಿ ಸ್ತೇಯಕರ್ತ್ರಕರ್ತ್ರೋರನೃತಾಭಿಸಂಧೋ ದಹ್ಯತೇ ನ ತು ಸತ್ಯಾಭಿಸಂಧಃ ॥

(ಭಾಷ್ಯಾರ್ಥ)

ಇನ್ನು ಆ (ಕಳವನ್ನು) ಮಾಡಿದವನಾಗದಿದ್ದರೆ ಅದರಿಂದಲೇ[1] ತನ್ನನ್ನು ಸತ್ಯವಂತನಾಗಿ ಮಾಡಿಕೊಳ್ಳುತ್ತಾನೆ. ಅವನು ಸತ್ಯದಿಂದ ಕಳವನ್ನು ಮಾಡದೆ ಇರುವದರಿಂದ ತನ್ನನ್ನು ಮರೆಮಾಡಿಕೊಂಡು ಕಾದ ಕೊಡಲಿಯನ್ನು ಹಿಡಿದುಕೊಳ್ಳುತ್ತಾನೆ. ಅವನು ಸತ್ಯವನ್ನು ನಂಬಿಕೊಂಡಿರುವದರಿಂದ ಸುಡಲ್ಪಡುವದಿಲ್ಲ,

---

1 ಕಳ್ಳನಲ್ಲದೆ ಇದ್ದು ಕಳ್ಳನಲ್ಲವೆಂದು ನಿಜವನ್ನು ಹೇಳಿದ್ದರಿಂದಲೇ.

ಏಕೆಂದರೆ ಸತ್ಯವು ವ್ಯವಧಾನವಾಗಿರುತ್ತದೆ.[1] ಆಗ ಸುಳ್ಳುಸುಳ್ಳೇ ತಪ್ಪುಹೊರಿಸಿದ್ದವರಿಂದ ಬಿಡುಗಡೆಯನ್ನು ಹೊಂದುತ್ತಾನೆ. ಕಾದ ಕೊಡಲಿ, ಅಂಗೈ- ಇವುಗಳ ಸಂಬಂಧವು ಕಳ್ಳತನಮಾಡಿದವನು, ಮಾಡದವನು- (ಇಬ್ಬರಿಗೂ) ಸಮಾನವಾಗಿದ್ದರೂ ಸುಳ್ಳನ್ನು ನಂಬಿದವನು ಸುಡಲ್ಪಡುತ್ತಾನೆಯೇ ಹೊರತು ಸತ್ಯವನ್ನು ನಂಬಿದವನು (ಸುಡಲ್ಪಡು)ವದಿಲ್ಲ.

## ಸತ್ಯವಾದ ಬ್ರಹ್ಮವನ್ನು ನಂಬಿದವನಿಗೇ ಮುಕ್ತಿ

(ಉಪನಿಷತ್ತು)

**ಸ ಯಥಾ ತತ್ರ ನಾದಾಹ್ಯೇತೈತದಾತ್ಮ್ಯಮಿದಗ್ಂ ಸರ್ವಂ ತತ್ಸತ್ಯಗ್ಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ॥ ೩ ॥**

೩. ಅವನು ಹೇಗೆ ಅಲ್ಲಿ ಸುಡಲ್ಪಡುವದಿಲ್ಲವೋ (ಹಾಗೆಯೇ ಇಲ್ಲಿಯೂ) ಇದೆಲ್ಲವೂ ಐತದಾತ್ಮ್ಯವು. ಅದು ಸತ್ಯವು, ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನಾಗಿರುವೆ- ಎನ್ನಲು ಇವನ ಆ (ಉಪದೇಶ)ವನ್ನು ಅರಿತುಕೊಂಡನು, ಅರಿತುಕೊಂಡನು.

## ಜ್ಞಾನಿಗೆ ಮತ್ತೆ ಶರೀರಗ್ರಹಣವಾಗದ್ದಕ್ಕೆ ಕಾರಣ

(ಭಾಷ್ಯ)

೫೩೯. ಸ ಯಥಾ ಸತ್ಯಾಭಿಸಂಧಸ್ತತ್ರ[2] ತಪ್ತಪರಶುಗ್ರಹಣಕರ್ಮಣಿ ಸತ್ಯವ್ಯವಹಿತಹಸ್ತತಲತ್ವಾತ್ ನಾದಾಹ್ಯೇತ। ನ ದಹ್ಯೇತೇತ್ಯೇತತ್। ಏವಂ ಸದ್ಬ್ರಹ್ಮಸತ್ಯಾಭಿಸಂಧೀತರಯೋಃ ಶರೀರಪಾತಕಾಲೇ (ಚ)[3] ತುಲ್ಯಾಯಾಂ ಸತ್ಸಂಪತ್ತಾ ವಿದ್ವಾನ್ ಸತ್ ಸಂಪದ್ಯ ನ ಪುನರ್ವ್ಯಾಘ್ರದೇವಾದಿದೇಹಗ್ರಹಣಾಯಾಽಽವರ್ತತೇ । ಅವಿದ್ವಾಂಸ್ತು ವಿಕಾರಾನೃತಾಭಿಸಂಧಃ ಪುನರ್ವ್ಯಾಘ್ರಾದಿಭಾವಂ ದೇವತಾದಿಭಾವಂ ವಾ ಯಥಾಕರ್ಮ ಯಥಾಶ್ರುತಂ ಪ್ರತಿಪದ್ಯತೇ। ಯದಾತ್ಮಾಭಿಸಂಧ್ಯನಭಿಸಂಧಿಕೃತೇ ಮೋಕ್ಷಬನ್ಧನೇ, ಯಚ್ಚ ಮೂಲಂ ಜಗತಃ, ಯದಾಯತನಾ ಯತ್ಪ್ರತಿಷ್ಠಾಶ್ಚ ಸರ್ವಾಃ ಪ್ರಜಾಃ, ಯದಾತ್ಮಕಂ ಸರ್ವಮ್, ಯಚ್ಚ

---

1. ಸುಳ್ಳು ಕೈಗೂ ಬೆಂಕಿಗೂ ನಡುವೆ ಇದ್ದಾಗ ಬೆಂಕಿಯ ಕಾವನ್ನು ತಡೆಯಲಾರದು ; ನಿಜವು ನಡುವೆಯಿದ್ದಾಗ ಬೆಂಕಿಯ ಕಾವು ಕೈಗೆ ತಟ್ಟದಂತೆ ಮಾಡುತ್ತದೆ.
2. ತತ್ರ ಎಂಬ ಮಾತು ಇಲ್ಲಿರಬೇಕಾದದ್ದು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ.
3. ಈ ಚಕಾರವು ಹೆಚ್ಚೆಂದು ತೋರುತ್ತದೆ.

ಅಜಮಮೃತಮಭಯಂ ಶಿವಮದ್ವಿತೀಯಮ್, ತತ್ ಸತ್ಯಂ ಸ ಆತ್ಮಾ ತವ।
ಅತಸ್ತತ್ತ್ವಮಸಿ ಹೇ ಶ್ವೇತಕೇತೋ ಇತ್ಯುಕ್ತಾರ್ಥಮಸಕೃದ್ ವಾಕ್ಯಮ್ ॥

(ಭಾಷ್ಯಾರ್ಥ)

ಆ ಸತ್ಯವನ್ನು ನಂಬಿರುವ (ಪುರುಷನು) ಹೇಗೆ ಆ ಕಾದ ಕೊಡಲಿಯನ್ನು ಹಿಡಿಯುವದೆಂಬ ಕ್ರಿಯೆಯಲ್ಲಿ ಸತ್ಯವು ಮರೆಮಾಡಿದ ಅಂಗೈಯುಳ್ಳವನಾದ್ದರಿಂದ ಸುಡಲ್ಪಡದೆ ಇರುವನೋ[1]- ನಾದಾಹ್ಯೇತ ಎಂಬ ಮೂಲವನ್ನು ನ ದಹ್ಯೇತ ಎಂದು ಇಟ್ಟುಕೊಂಡು ಅರ್ಥಮಾಡಿಕೊಳ್ಳಬೇಕು— ಹಾಗೆಯೇ ಸದ್ಬ್ರಹ್ಮವೆಂಬ ಸತ್ಯವನ್ನು (ಅರಿತು) ನಂಬಿರುವವನು, ಮತ್ತೊಬ್ಬನು- (ಈ ಇಬ್ಬ)ರಿಗೂ ಶರೀರಪಾತ ಕಾಲದಲ್ಲಿ ಸತ್ತನ್ನು ಸೇರುವದು ಸಮಾನವಾದರೂ ಜ್ಞಾನಿಯು ಸತ್ತನ್ನು ಸೇರಿಕೊಂಡ ಬಳಿಕ ಹುಲಿ, ದೇವತೆ- ಮುಂತಾದವರ ದೇಹವನ್ನು ಧರಿಸುವದಕ್ಕೆ ಮತ್ತೆ (ಸಂಸಾರಕ್ಕೆ) ಹಿಂತಿರುಗುವದಿಲ್ಲ ಅಜ್ಞಾನಾದರೋ ಕಾರ್ಯವಾದ ಅನೃತವನ್ನು ನಂಬಿರುವದರಿಂದ ಮತ್ತೆ ಹುಲಿಮುಂತಾದದ್ದರ ರೂಪವನ್ನೋ ದೇವತಾದಿಗಳ ರೂಪವನ್ನೋ[2] ಕರ್ಮಕ್ಕೆ ಜ್ಞಾನಕ್ಕೂ ಅನುಗುಣವಾಗಿ[3] ಹೊಂದುತ್ತಾನೆ

ಯಾವದರ ರೂಪವನ್ನು (ಅರಿತು) ನಂಬುವದು, ನಂಬದಿರುವದು -ಇವುಗಳಿಂದ ಬಂಧಮೋಕ್ಷಗಳು ಆಗುವವೋ, ಯಾವದು ಜಗತ್ತಿಗೆ ಮೂಲವಾಗಿರುವದೋ, ಎಲ್ಲಾ ಪ್ರಾಣಿಗಳೂ ಯಾವದನ್ನೇ ಆಶ್ರಯಿಸಿಕೊಂಡಿರುವವೋ, ಯಾವದನ್ನೇ ಕೊನೆಗೆ ಸೇರುವವೋ[4], ಮತ್ತು ಯಾವದು ಜನ್ಮರಹಿತವೂ ಅಮೃತವೂ ಅಭಯವೂ ಶಿವವೂ ಅದ್ವಿತೀಯವೂ ಆಗಿರುವದೋ[5] ಅದೇ ಸತ್ಯವು, ಅದೇ ನಿನ್ನ ಆತ್ಮನು, ಎಲೈ ಶ್ವೇತಕೇತುವೆ, ಅದೇ ನೀನಾಗಿರುವೆ- ಎಂಬೀ ವಾಕ್ಯಕ್ಕೆ ಹಲವು ಬಾರಿ ಅರ್ಥವನ್ನು ಹೇಳಿದ್ದಾಗಿರುತ್ತದೆ.

---

1. ಸತ್ಯವನ್ನು ನಂಬಿರುವವನನ್ನು ಅಗ್ನಿಯೂ ಸುಡುವದಿಲ್ಲವೆಂಬುದು ಆಸ್ತಿಕರ ನಂಬಿಕೆ. ಬೆಂಕಿಯ ಸ್ವಭಾವವೇನೂ ಮಾರ್ಪಡುವದಿಲ್ಲವಾದರೂ ಸತ್ಯವಂತನು ಎಂಥ ಅಗ್ನಿಪರೀಕ್ಷೆಗೂ ಸಿದ್ಧನಾಗುವನೇ ಹೊರತು ಸತ್ಯವನ್ನು ಬಿಡುವದಿಲ್ಲ ಎಂದು ಅಭಿಪ್ರಾಯ.

2. ಸತ್ತಿನಲ್ಲಿ ಸೇರುತ್ತೇನೆಂಬ ಅರಿವಿಲ್ಲದೆ ಸುಷುಪ್ತಿಯಲ್ಲಿ ಸತ್ತಿನಲ್ಲಿ ಲಯವಾದವರು ಮತ್ತೂ ವ್ಯಾಘ್ರಾದಿಭಾವವನ್ನು ಹೊಂದುತ್ತಾರೆ- ಎಂದು (೬-೯-೩ರಲ್ಲಿ) ಹೇಳಿತ್ತು. ಮರಣದಲ್ಲಿಯೂ ಹಾಗೆಯೇ ಎಂದು ಭಾವ.

3. ಕ. ೨-೨-೭ರ ಸೂಚನೆ.

4. ೬-೮-೪ರ ಪರಾಮರ್ಶವಿದು.

5. ಬೃ. ೪-೫-೨೫ರ ಅರ್ಥದ ಪರಾಮರ್ಶವಿದು ಉಪನಿಷತ್ತುಗಳಲ್ಲೆಲ್ಲ ಹೇಳಿರುವ ಜಗತ್ಕಾರಣವಾದ ನಿರ್ವಿಶೇಷಾದ್ವಿತೀಯಬ್ರಹ್ಮವೇ ಪರಮಾರ್ಥವು, ಮತ್ತು ಅದೇ ಎಲ್ಲರ ಆತ್ಮನು ಎಂದು ಅಭಿಪ್ರಾಯ.

# ಶ್ವೇತಕೇತುವು ಸದ್ಬ್ರಹ್ಮವೇ ತಾನೆಂದು ಅರಿತುಕೊಂಡದ್ದು

(ಭಾಷ್ಯ)

ಇಹಂ ಕಃ ಪುನರಸೌ ಶ್ವೇತಕೇತುಸ್ತ್ವಂಶಬ್ದಾರ್ಥಃ? ಯೋಽಹಂ ಶ್ವೇತಕೇತುರುದ್ದಾಲಕಸ್ಯ ಪುತ್ರಃ ಇತಿ ವೇದ, ಆತ್ಮಾನಮಾದೇಶಂ ಶ್ರುತ್ವಾ ಮತ್ವಾ ವಿಜ್ಞಾಯ ಚ ಅಶ್ರುತಮಮತಮವಿಜ್ಞಾತಂ ವಿಜ್ಞಾತುಂ ಪಿತರಂ ಪಪ್ರಚ್ಛ "ಕಥಂ ನು ಭಗವಃ ಸ ಆದೇಶೋ ಭವತಿ" (೬–೧–೩) ಇತಿ। ಸ ಏಷೋಽಧಿಕೃತಃ ಶ್ರೋತಾ ಮನ್ತಾ ವಿಜ್ಞಾತಾ ತೇಜೋಽಬನ್ನಮಯಂ ಕಾರ್ಯಕರಣಸಂಘಾತಂ ಪ್ರವಿಷ್ಟಾ ಪರೈವ ದೇವತಾ ನಾಮರೂಪವ್ಯಾಕರಣಾಯ ಆದರ್ಶ ಇವ ಪುರುಷಃ ಸೂರ್ಯಾದಿರಿವ ಜಲಾದೌ ಪ್ರತಿಬಿಮ್ಬರೂಪೇಣ। ಸ ಆತ್ಮಾನಂ ಕಾರ್ಯಕರಣೇಭ್ಯಃ ಪ್ರವಿಭಕ್ತಂ ಸದ್ರೂಪಂ ಸರ್ವಾತ್ಮಾನಂ ಪ್ರಾಕ್ ಪಿತುಃ ಶ್ರವಣಾನ್ನ ವಿಜಜ್ಞೌ। ಅಥೇದಾನೀಂ ಪಿತ್ರಾ ಪ್ರತಿಬೋಧಿತಃ 'ತತ್ತ್ವಮಸಿ' ಇತಿ ದೃಷ್ಟಾನ್ತೈರ್ಹೇತುಭಿಶ್ಚ ತತ್ಪಿತುರಸ್ಯ ಹ ಕಿಲ ಉಕ್ತಂ ಸದೇವಾಽಹಮಸ್ಮಿ ಇತಿ ವಿಜಜ್ಞೌ ವಿಜ್ಞಾತವಾನ್। ದ್ವಿರ್ವಚನಮಧ್ಯಾಯಪರಿಸಮಾಪ್ತ್ಯರ್ಥಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :– ನೀನು ಎಂಬ ಶಬ್ದಕ್ಕೆ ಅರ್ಥವಾಗಿರುವ[1] ಈ ಶ್ವೇತಕೇತುವು ಯಾರು[2] ?

(ಉತ್ತರ) :– ಯಾವನು 'ನಾನು ಉದ್ದಾಲಕನ ಮಗನಾದ ಶ್ವೇತಕೇತು' –ಎಂದು ಅರಿತುಕೊಂಡಿದ್ದನೋ ಆತ್ಮನೆಂಬ ಆದೇಶವನ್ನು ಶ್ರವಣಮಾಡಿ, ಮನನ ಮಾಡಿ, ಮತ್ತು ಅರಿತುಕೊಂಡು[3] (ಇದುವರೆಗೆ) ಅಶ್ರುತವೂ ಅಮತವೂ ಅವಿಜ್ಞಾತವೂ ಆಗಿರುವವನ್ನು ಅರಿತುಕೊಳ್ಳುವದಕ್ಕಾಗಿ[4] ತಂದೆಯನ್ನು "ಭಗವಂತನೆ, ಆ ಆದೇಶವು ಹೇಗಿರುವದೊ!" (೬–೧–೩) ಎಂದು ಕೇಳಿದನೋ, ಆ ಈ **ಅಧಿಕಾರಿಯು[5] ಶ್ರೋತೃವೂ ಮಂತೃವೂ ವಿಜ್ಞಾತೃವೂ ಆಗಿ ತೇಜೋ**

1. ತತ್ತ್ವಮಸಿ ಎಂಬ ವಾಕ್ಯದಲ್ಲಿ ತ್ವಂ (ನೀನು) ಎಂದು ಸಂಬೋಧಿತನಾಗಿರುವ.

2. ಅವನ ಸ್ವರೂಪವು ಯಾವದು ?

3. ನಿದಿಧ್ಯಾಸನದಿಂದ ಅನುಭವಕ್ಕೆ ತಂದುಕೊಂಡು ಎಂದರ್ಥ. ಪ್ರಕೃತವಾಕ್ಯದಲ್ಲಿ ವಿಜಜ್ಞೌ (ಅರಿತುಕೊಂಡನು) ಎಂದು ಹೇಳಿರುವ ಅನುಭವವೇ ಇದು

4. ೬–೧–೩ರ ಪರಾಮರ್ಶವಿದು.

5. ಶ್ರವಣಾದಿಗಳನ್ನು ಮಾಡಿ ತತ್ತ್ವವನ್ನು ತಿಳಿದುಕೊಳ್ಳಬೇಕು ಎಂಬ ಭಾವನೆಯು ಜಿಜ್ಞಾಸುವನ್ನೇ ತ್ವಂಶಬ್ದವಾಚ್ಯನನ್ನಾಗಿ ಹೇಳಿದೆ ಎಂದು ಭಾವ.

ಅನ್ನಮಯವಾದ ಕಾರ್ಯಕರಣಸಂಘಾತವನ್ನು ನಾಮರೂಪಗಳ ವ್ಯಾಕರಣಕ್ಕಾಗಿ, ಕನ್ನಡಿಯಲ್ಲಿ ಪುರುಷನೂ ನೀರೇ ಮುಂತಾದದ್ದರಲ್ಲಿ ಸೂರ್ಯಾದಿಗಳೂ (ಒಳಹೊಕ್ಕಿರು)ವಂತೆ, ಪ್ರತಿಬಿಂಬರೂಪದಿಂದ ಒಳಹೊಕ್ಕಿರುವ ಪರದೇವತೆಯೇ.[1] ಅವನು ತಂದೆಯಿಂದ ಶ್ರವಣ ಮಾಡುವದಕ್ಕಿಂತ ಮುಂಚೆ ಕಾರ್ಯಕರಣಗಳಿಗಿಂತ ಬೇರೆಯಾಗಿರುವ ಸದ್ರೂಪನಾದ ಸರ್ವಾತ್ಮನೇ ತಾನು ಎಂಬುದನ್ನು ಅರಿತಿರಲಿಲ್ಲ. ಇನ್ನು ಈಗ ತಂದೆಯು ದೃಷ್ಟಾಂತಗಳಿಂದಲೂ ಹೇತುಗಳಿಂದಲೂ[2] ಅದೇ ನೀನಾಗಿರುವೆ ಎಂದು ತಿಳಿಸಿಕೊಡಲಾಗಿ ಆ ತಂದೆಯು ಹೇಳಿದ್ದನ್ನು, ಸತ್ತೇ ನಾನು ಎಂಬುದನ್ನು, ಅರಿತುಕೊಂಡನು.[3] ('ಅರಿತುಕೊಂಡನು' ಎಂದು) ಎರಡು ಸಲ ಹೇಳಿರುವದು ಅಧ್ಯಾಯವು ಮುಗಿಯಿತೆಂದು (ತಿಳಿಸುವದಕ್ಕೆ).

# ಚರ್ಚೆ : ತತ್ತ್ವಮಸಿ ಎಂಬ ವಾಕ್ಯಕ್ಕೆ ತಾತ್ಪರ್ಯ

## ಕರ್ತೃತ್ವಭೋಕ್ತೃತ್ವಬುದ್ಧಿನಿವೃತ್ತಿಯೇ ವಾಕ್ಯಜ್ಞಾನದ ಫಲ

(ಭಾಷ್ಯ)

೫೪೧ ಕಿಂ ಪುನರತ್ರ ಷಷ್ಠೇ ವಾಕ್ಯಪ್ರಮಾಣೇನ ಜನಿತಂ ಫಲಮಾತ್ಮನಿ? ಕರ್ತೃತ್ವಭೋಕ್ತೃತ್ವಯೋರಧಿಕೃತತ್ವವಿಜ್ಞಾನನಿವೃತ್ತಿಸ್ತಸ್ಯ ಫಲಂ ವಯಮವೋಚಾಮ । ತ್ವಂಶಬ್ದವಾಚ್ಯಮರ್ಥಂ ಶ್ರೋತುಂ ಮನ್ತುಂ ಚಾಧಿಕೃತತ್ವಮ್ ಅವಿಜ್ಞಾತವಿಜ್ಞಾನಫಲಾರ್ಥಮ್ । ಪ್ರಾಕ್ಚೈತಸ್ಮಾದ್ ವಿಜ್ಞಾನಾತ್ 'ಅಹಮೇವಂ ಕರಿಷ್ಯಾಮ್ಯಗ್ನಿಹೋತ್ರಾದೀನಿ ಕರ್ಮಾಣಿ, ಅಹಮತ್ರಾಧಿಕೃತಃ, ಏಷಾಂ ಚ ಕರ್ಮಣಾಂ ಫಲಮಿಹಾಽಮುತ್ರ ಚ ಭೋಕ್ಷ್ಯೇ, ಕೃತೇಷು ವಾ ಕರ್ಮಸು ಕೃತಕರ್ತವ್ಯಃ ಸ್ಯಾಮ್' ಇತ್ಯೇವಂ ಕರ್ತೃತ್ವಭೋಕ್ತೃತ್ವಯೋರಧಿಕೃತೋಽಸ್ಮೀತಿ ಆತ್ಮನಿ ಯದ್ವಿಜ್ಞಾನಮಭೂತ್ ತಸ್ಯ 'ಯತ್ ಸಜ್ಜಗತೋ ಮೂಲಮ್ ಏಕ

---

1. ೬-೩-೨ರ ಪರಾಮರ್ಶವಿದು ಶ್ರೋತೃ, ಮಂತೃ -ಎಂದು ಮುಂತಾಗಿರುವ ವಿಶೇಷವಿಜ್ಞಾನಕರ್ತೃರೂಪವು ಈ ಶರೀರದಲ್ಲಿ ಒಳಹೊಕ್ಕಿತೆಂದು ಹೇಳಿರುವ ಆತ್ಮರೂಪವೇ. ಪ್ರತಿಬಿಂಬವು ಬಿಂಬಕ್ಕಿಂತ ವ್ಯತಿರಿಕ್ತವಾಗಿರದೆ ಯಾವಾಗಲೂ ಬಿಂಬಸ್ವರೂಪವೇ ಆಗಿರುವಂತೆ, ಈ ಜೀವಸ್ವರೂಪವು ಯಾವಾಗಲೂ ಪರಮಾತ್ಮಸ್ವರೂಪವುಳ್ಳದ್ದೇ ಆಗಿರುತ್ತದೆ.

2. ಇದನ್ನೇ ಅನುಭವಾಂಗತರ್ಕವೆಂದು ಶ್ರುತಿಯಲ್ಲಿ ಹೇಳಿರುವದು. ತಾರ್ಕಿಕರು ಒಪ್ಪಿರುವ ಅನುಮಾನತರ್ಕಗಳನ್ನು ಇಲ್ಲಿ ಒಪ್ಪಿಲ್ಲ.

3. ಅರಿತುಕೊಂಡಾಗ ಅಧಿಕಾರಿಯಾದ ಜೀವನು ಪ್ರಮಾತೃತ್ವವನ್ನು ಅಸತ್ಯವೆಂದೂ ಸರ್ವಸಾಕ್ಷಿಯಾದ ಪರಮಾತ್ಮನೇ ತನ್ನ ಸ್ವರೂಪವೆಂದೂ ಅರಿತುಕೊಳ್ಳುತ್ತಾನೆ. ಸೂ. ಭಾ. ೧-೧ ೪ರ ಕೊನೆಯಲ್ಲಿ ಉದಾಹರಿಸಿರುವ ಎರಡನೆಯ ಶ್ಲೋಕವನ್ನು ನೋಡಿರಿ.

ಮೇವಾದ್ವಿತೀಯಮ್, ತತ್ತ್ವಮಸಿ' ಇತ್ಯನೇನ ವಾಕ್ಯೇನ ಪ್ರತಿಬುದ್ಧಸ್ಯ ನಿವರ್ತತೇ । ವಿರೋಧಾತ್ । ನ ಹಿ ಏಕಸ್ಮಿನ್ ಅದ್ವಿತೀಯ ಆತ್ಮನಿ ಅಯಮಹಮಸ್ಮೀತಿ ವಿಜ್ಞಾತೇ 'ಮಮೇದಮನ್ಯತ್, ಅನೇನ ಕರ್ತವ್ಯಮ್', 'ಇದಂ ಕೃತ್ವಾ ಅಸ್ಯ ಫಲಂ ಭೋಕ್ಷ್ಯೇ' ಇತಿ ವಾ ಭೇದವಿಜ್ಞಾನಮ್ ಉಪಪದ್ಯತೇ । ತಸ್ಮಾತ್ ಸತ್ಸತ್ಯಾದ್ವಿತೀಯಾತ್ಮವಿಜ್ಞಾನೇ ವಿಕಾರಾನೃತಜೀವಾತ್ಮವಿಜ್ಞಾನಂ ನಿವರ್ತತ ಇತಿ ಯುಕ್ತಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :– ಈ ಆರನೆಯ (ಪ್ರಪಾಠಕದಲ್ಲಿ) ವಾಕ್ಯಪ್ರಮಾಣದಿಂದ ಆತ್ಮನಲ್ಲಿ ಉಂಟಾದ ಫಲವು ಯಾವದು[1] ?

(ಉತ್ತರ) :– ಕರ್ತೃತ್ವಭೋಕ್ತೃತ್ವಗಳಲ್ಲಿ (ನಾನು) ಅಧಿಕೃತನು ಎಂಬ ಅರಿವಿನ ನಿವೃತ್ತಿಯೇ ಅದರ ಫಲವೆಂದು ನಾವು ಹೇಳಿರುತ್ತೇವೆ. (ಇದರ ವಿವರ): ತ್ವಂಶಬ್ದವಾಚ್ಯವಾದ ಅರ್ಥವನ್ನು ಶ್ರವಣಮಾಡುವದಕ್ಕೂ ಮನನಮಾಡುವದಕ್ಕೂ ಅಧಿಕಾರಿಯಾಗಿರುವದು (ಮೊದಲು) ಅರಿಯದೆ, ಇರುವವನ್ನು ಅರಿಯುವದೆಂಬ ಫಲಕ್ಕಾಗಿ[2] ಈ ಅರಿವು (ಉಂಟಾಗುವ) ಮುಂಚೆ 'ನಾನು ಅಗ್ನಿಹೋತ್ರವೇ ಮುಂತಾದ ಕರ್ಮಗಳನ್ನು ಹೀಗೆ ಮಾಡುವೆನು, ನಾನು ಇವುಗಳಿಗೆ ಅಧಿಕಾರಿಯು, ಮತ್ತು ಈ ಕರ್ಮಗಳ ಫಲವನ್ನು ಇಲ್ಲಿಯೂ (ಪರಲೋಕ)ದಲ್ಲಿಯೂ ಅನುಭವಿಸುವೆನು, ಅಥವಾ ಕರ್ಮಗಳನ್ನು ಮಾಡಿದರೆ (ನಾನು) ಕೃತಕೃತ್ಯನಾದೇನು' ಎಂದಿಂತು ಕರ್ತೃತ್ವಭೋಕ್ತೃತ್ವಗಳಲ್ಲಿ ಅಧಿಕೃತನಾಗಿರುತ್ತೇನೆಂದು ತನ್ನ (ಸ್ವರೂಪದ ವಿಷಯ)ದಲ್ಲಿ ಯಾವ ತಿಳಿವಳಿಕೆಯಿತ್ತೋ ಅದು, ಎರಡನೆಯದಿಲ್ಲದ ಒಂದೇ ಆದ ಯಾವ ಸತ್ತು ಜಗತ್ತಿಗೆ ಮೂಲವೋ 'ಅದೇ ನೀನು' ಎಂಬೀ ವಾಕ್ಯದಿಂದ ಜ್ಞಾನಿಯಾದವನಿಗೆ ತೊಲಗುತ್ತದೆ. ಏಕೆಂದರೆ (ಎರಡಕ್ಕೂ) ವಿರೋಧವಿದೆ. ಎರಡನೆಯದಿಲ್ಲದ ಒಬ್ಬನೇ ಆಗಿರುವ ಆತ್ಮನನ್ನು 'ಇವನೇ ನಾನಾಗಿರುವೆನು' ಎಂದು ಅರಿತುಕೊಂಡಮೇಲೆ 'ನನಗೆ ಬೇರೆಯಾಗಿರುವ ಇದನ್ನು ಇದರಿಂದ ಮಾಡಬೇಕಾಗಿದೆ' ಎಂದಾಗಲಿ 'ಇದನ್ನು ಮಾಡಿ ಇದರ ಫಲವನ್ನು ಭೋಗಿಸು

---

1. ವಾಕ್ಯವು ವಸ್ತುಮಾತ್ರವನ್ನು ತಿಳಿಸುವಪರಲ್ಲಿ ಪರ್ಯವಸಾನವಾಗಿದೆಯೆ, ಅಥವಾ ಯಾವದಾದರೊಂದು ಕರ್ತವ್ಯವನ್ನು ತಿಳಿಸುತ್ತದೆಯೆ ? –ಎಂದು ಅಭಿಪ್ರಾಯ. ಶಾಸ್ತ್ರಕ್ಕೆ ಕೇವಲ ವಸ್ತುಬೋಧಕತ್ವವಿಲ್ಲವೆಂಬವರ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕಾಗಿ ಈ ಪ್ರಶ್ನೆಯನ್ನು ಎಬ್ಬಿಸಿದೆ.

2. ಶ್ವೇತಕೇತುವು ತನ್ನ ಆತ್ಮಸ್ವರೂಪದ ನಿಜವನ್ನು ತಿಳಿಯಬೇಕೆಂದೇ ಶ್ರವಣಮನನಗಳನ್ನು ಮಾಡುತ್ತಿದಾನೆ

ವೆನು' ಎಂದಾಗಲಿ ಭೇದದರಿವು[1] ಉಂಟಾಗಲಾರದಷ್ಟೆ. ಆದ್ದರಿಂದ ಸತ್ತೆಂಬ ಸತ್ಯವೂ ಅದ್ವಿತೀಯವೂ ಆದ ಆತ್ಮನ ಅರಿವು (ಉಂಟಾದರೆ) ಕಾರ್ಯವೂ ಅನೃತವೂ[2] ಆದ ಜೀವನು ನಾನೆಂಬ ಅರಿವು ತೊಲಗುತ್ತದೆ ಎಂಬುದು ಯುಕ್ತವಾಗಿದೆ.

## ಇಲ್ಲಿ ತ್ವಂಪದಾರ್ಥದಲ್ಲಿ ಬ್ರಹ್ಮಬುದ್ಧಿಯನ್ನು ವಿಧಿಸಿಲ್ಲ

(ಭಾಷ್ಯ)

೫೪೨. ನನು 'ತತ್ತ್ವಮಸಿ' ಇತ್ಯತ್ರ ತ್ವಂಶಬ್ದವಾಚ್ಯೇಽರ್ಥೇ ಸದ್ಬುದ್ಧಿರಾದಿಶ್ಯತೇ ಯಥಾ ಆದಿತ್ಯಮನಆದಿಷು ಬ್ರಹ್ಮಬುದ್ಧಿಃ[3]। ಯಥಾ ಚ ಲೋಕೇ ಪ್ರತಿಮಾದಿಷು ವಿಷ್ಣ್ವಾದಿಬುದ್ಧಿಸ್ತದ್ವತ್। ನ ತು ಸದೇವ ತ್ವಮಿತಿ। ಯದಿ ಸದೇವ ಶ್ವೇತಕೇತುಃ ಸ್ಯಾತ್ ಕಥಮಾತ್ಮಾನಂ ನ ವಿಜಾನೀಯಾದ್ ಯೇನ ತಸ್ಮೈ ತತ್ತ್ವಮಸೀತ್ಯುಪದಿಶ್ಯತೇ ? ನ। ಆದಿತ್ಯಾದಿವಾಕ್ಯವೈಲಕ್ಷಣ್ಯಾತ್। 'ಆದಿತ್ಯೋ ಬ್ರಹ್ಮ' (೩-೧೯-೧) ಇತ್ಯಾದೌ ಇತಿಶಬ್ದವ್ಯವಧಾನಾತ್ ನ ಸಾಕ್ಷಾದ್ಬ್ರಹ್ಮತ್ವಂ ಗಮ್ಯತೇ । ರೂಪಾದಿಮತ್ತ್ವಾಚ್ಚಾಽಽದಿತ್ಯಾದೀನಾಮ್। ಆಕಾಶಮನಸೋಶ್ಚ ಇತಿಶಬ್ದವ್ಯವಧಾನಾದೇವ ಅಬ್ರಹ್ಮತ್ವಮ್। ಇಹ ತು ಸತ ಏವೇಹ ಪ್ರವೇಶಂ ದರ್ಶಯಿತ್ವಾ 'ತತ್ತ್ವಮಸಿ' ಇತಿ ನಿರಙ್ಕುಶಂ ಸದಾತ್ಮಭಾವಮ್ ಉಪದಿಶತಿ ॥

(ಭಾಷ್ಯಾರ್ಥ)

(ಆಕ್ಷೇಪ) :- 'ತತ್ತ್ವಮಸಿ' ಎಂಬಲ್ಲಿ ತ್ವಂಶಬ್ದವಾಚ್ಯವಾದ ವಸ್ತುವಿನಲ್ಲಿ ಸತ್ತೆಂಬ ಬುದ್ಧಿಯನ್ನು (ಮಾಡಬೇಕೆಂದು) ಉಪದೇಶಿಸಿರುತ್ತದೆಯಲ್ಲವೆ ? ಹೇಗೆ ಆದಿತ್ಯ, ಮನಸ್ಸು- ಮುಂತಾದವುಗಳಲ್ಲಿ[4] ಬ್ರಹ್ಮಬುದ್ಧಿಯನ್ನು (ಮಾಡಬೇಕೆಂದು ಉಪದೇಶಿಸಿರುತ್ತದೆಯೋ, ಮತ್ತು ಹೇಗೆ ಲೋಕದಲ್ಲಿ[5] ಪ್ರತಿಮೆ ಮುಂತಾದವುಗಳಲ್ಲಿ ವಿಷ್ಣು ಮುಂತಾದವುಗಳ ಬುದ್ಧಿಯನ್ನು (ಮಾಡಬೇಕೆಂದು ಉಪದೇಶಿಸುತ್ತಾರೋ ಹಾಗೆ).[6] ಇಷ್ಟೇ ಹೊರತು (ಇಲ್ಲಿ) 'ನೀನು ಸತ್ತೇ' ಎಂದು (ಉಪ

---

1. ಕ್ರಿಯಾಕಾರಕಫಲಗಳು ಬೇರೆಬೇರೆಯಾಗಿರುವವೆಂಬ ಅರಿವು.

2. ಜೀವತ್ವವು ಕಾರ್ಯವೂ ಅನೃತವೂ ಆಗಿದೆ ಎಂದರ್ಥ; ಅಥವಾ ಕಾರ್ಯವಾದ ಅನೃತವಾದ ಕ್ರಿಯಾಕಾರಕಫಲಗಳ ಜ್ಞಾನವೂ ಮತ್ತು ಜೀವನು ನಾನೆಂಬ ಜ್ಞಾನವೂ ತೊಲಗುತ್ತದೆ – ಎಂದು ಈ ವಾಕ್ಯಕ್ಕೆ ಅರ್ಥವನ್ನು ಮಾಡಿಕೊಳ್ಳಬೇಕು.

3. ಅಚ್ಚಿನ ಪುಸ್ತಕದಲ್ಲಿರುವ 'ಬ್ರಹ್ಮಾದಿ' ಎಂಬ ಪಾಠದಲ್ಲಿ 'ಆದಿ' ಹೆಚ್ಚು.

4 ಮುಂತಾದ ಎಂಬ ಮಾತಿನಿಂದ ಆಕಾಶ, ನಾಮ- ಮುಂತಾದವುಗಳನ್ನು ಗ್ರಹಿಸಬೇಕು.

5. ಸ್ಮೃತಿಯಲ್ಲಿ.

6. ಇಲ್ಲಿ ಒಂದನ್ನು ಇನ್ನೊಂದೆಂದು ಭಾವಿಸಬೇಕೆಂದು ವಿಧಿಸಿದೆ; ನಿಜವಾಗಿ ಆ ವಸ್ತುವೇ ಅದೆಂದು ಹೇಳಿಲ್ಲ. ಇದಕ್ಕೆ ದೃಷ್ಟಿಯ 'ಅಧ್ಯಾಸ' ಎಂದು ಹೆಸರು.

ದೇಶಿಸಿರು)ವದಿಲ್ಲ. ಶ್ವೇತಕೇತು (ನಿಜವಾಗಿ) ಸತ್ತೇ ಆಗಿದ್ದರೆ (ಅವನು) ಹೇಗೆ ತಾನೆ ತನ್ನನ್ನೇ ಅರಿತುಕೊಳ್ಳದೆ ಇದ್ದಾನು ? ಹಾಗೆ (ಅರಿತುಕೊಳ್ಳದೆ) ಇದ್ದರಲ್ಲವೆ, ನೀನು ಅದೇ ಎಂದು ಅವನಿಗೆ ಉಪದೇಶಿಸಬೇಕು ?

(ಪರಿಹಾರ) – ಹಾಗಲ್ಲ ಏಕೆಂದರೆ ಆದಿತ್ಯಾದಿ(ವಿಷಯದ) ವಾಕ್ಯಗಳಿಗಿಂತ (ಇಲ್ಲಿ), ವೈಲಕ್ಷಣ್ಯವಿದೆ (ಇದರ ವಿವರ) : 'ಆದಿತ್ಯನು ಬ್ರಹ್ಮ(ವೆಂಬುದು ಉಪದೇಶವು)' (೩-೧೯-೧) ಮುಂತಾದ (ವಾಕ್ಯ)ದಲ್ಲಿ ಇತಿ ಎಂಬ ಶಬ್ದವು ನಡುವೆ ಬಂದಿರುವದರಿಂದ (ಅದು) ತಾನೇ ಬ್ರಹ್ಮವಲ್ಲ ಎಂದು ನಿಶ್ಚಯವಾಗುತ್ತದೆ. ಆದಿತ್ಯಾದಿಗಳಿಗೆ ರೂಪವೇ ಮುಂತಾದ (ಧರ್ಮಗಳು) ಇರುವದರಿಂದಲೂ[1] (ಹೀಗೆಂದು ಗೊತ್ತಾಗುತ್ತದೆ). ಆಕಾಶಮನಸ್ಸುಗಳು ಇತಿಶಬ್ದವ್ಯವಧಾನವಿರುವದರಿಂದಲೇ[2] ಬ್ರಹ್ಮವಲ್ಲ ಎಂದು ನಿಶ್ಚಯವಾಗುತ್ತದೆ ಇಲ್ಲಿಯಾದರೋ ಸತ್ತೇ ಈ (ಕಾರ್ಯಕರಣಸಂಘಾತ)ದಲ್ಲಿ ಪ್ರವೇಶ(ಮಾಡಿತೆಂದು) ತಿಳಿಸಿ 'ಅದೇ ನೀನಾಗಿರುವೆ' ಎಂದು ಯಾವ ಅಡ್ಡಿಯೂ ಇಲ್ಲದ[3] ಸತ್ಸ್ವರೂಪತ್ವವನ್ನೇ ಉಪದೇಶಿಸಿರುತ್ತದೆ[4]

## ಗೌಣವಾಗಿ 'ಅದೇ ನೀನು' ಎಂದಿದೆ ಎಂಬುದೂ ಸರಿಯಲ್ಲ

(ಭಾಷ್ಯ)

೫೪೩. ನನು ಪರಾಕ್ರಮಾದಿಗುಣೈಃ ಸಿಂಹೋಽಸಿ ತ್ವಮ್ ಇತಿವತ್ ತತ್ತ್ವಮಸೀತಿ ಸ್ಯಾತ್ । ನ । ಮೃದಾದಿವತ್ ಸದೇಕಮೇವ ಅದ್ವಿತೀಯಂ ಸತ್ಯಮ್ ಇತ್ಯುಪದೇಶಾತ್ । ನ ಚೋಪಚಾರವಿಜ್ಞಾನಾತ್ "ತಸ್ಯ ತಾವದೇವ ಚಿರಮ್" (೬-೧೪-೨) ಇತಿ ಸತ್ಸಂಪತ್ತಿರುಪದಿಶ್ಯತೇ[5] । ಮೃಷಾತ್ವಾದುಪಚಾರ ವಿಜ್ಞಾನಸ್ಯ । 'ತ್ವಮಿನ್ದ್ರೋ ಯಮಃ' ಇತಿವತ್ । ನಾಪಿ ಸ್ತುತಿಃ । ಅನುಪಾಸ್ಯತ್ವಾಚ್ಛ್ವೇತಕೇತೋಃ । ನಾಽಪಿ ಸತ್ ಶ್ವೇತಕೇತುತ್ವೋಪದೇಶೇನ ಸ್ತೂಯತೇ[6] । ನ ಹಿ ರಾಜಾ ದಾಸಸ್ತ್ವಮಿತಿ ಸ್ತುತ್ಯಃ ಸ್ಯಾತ್ । ನಾಪಿ ಸತಃ ಸರ್ವಾತ್ಮನ ಏಕದೇಶನಿರೋಧೋ ಯುಕ್ತಸ್ತತ್ತ್ವಮಸೀತಿ । ದೇಶಾಧಿಪತೇರಿವ ಗ್ರಾಮಾಧ್ಯಕ್ಷಸ್ತ್ವಮಿತಿ । ನ ಚಾಽನ್ಯಾ ಗತಿರಿಹ ಸದಾತ್ಮತ್ವೋಪದೇಶಾದರ್ಥಾನ್ತರಭೂತಾ ಸಂಭವತಿ ॥

---

1 'ಬ್ರಹ್ಮಕ್ಕೆ ರೂಪಾದಿಗಳಿರುವದಿಲ್ಲವಾದ್ದರಿಂದಲೂ' ಎಂದು ಸೇರಿಸಿಕೊಳ್ಳಬೇಕು.

2 ೩ ೧೮ ೧ರಲ್ಲಿ 'ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತಿ' ಎಂದು ಉಪದೇಶಿಸಿದೆ

3. ಶ್ವೇತಕೇತುವೇ ಬ್ರಹ್ಮವೆಂದು ಹೇಳುವದಕ್ಕೆ ಉದಾಹೃತವಾಕ್ಯಗಳಲ್ಲಿರುವಂತೆ ಇಲ್ಲಿ ಯಾವ ಅಡ್ಡಿಯೂ ಇರುವದಿಲ್ಲ. 4 ಆದ್ದರಿಂದ ಇದು ಬರಿಯ ದೃಷ್ಟ್ಯಧ್ಯಾಸವಲ್ಲ.

5 'ಉಪದಿಶ್ಯೇತ' ಪಾ॥. 6. ಸ್ತೂಯೇತ' ಎಂದು ಪಾ॥

(ಭಾಷ್ಯಾರ್ಥ)

(ಆಕ್ಷೇಪ) :- 'ನೀನು ಪರಾಕ್ರಮವೇ ಮುಂತಾದ ಗುಣಗಳುಳ್ಳ(ವನಾದ್ದರಿಂದ) ಸಿಂಹವೇ ಆಗಿರುವೆ' ಎಂಬಂತೆ 'ಅದೇ ನೀನು' ಎಂಬ (ವಾಕ್ಯವೂ) ಇರಬಹುದಲ್ಲ![1]

(ಪರಿಹಾರ) - ಹಾಗಲ್ಲ ಏಕೆಂದರೆ ಮಣ್ಣು ಮುಂತಾದವುಗಳಂತೆ[2] ತನಗೆರಡನೆಯದಿಲ್ಲದ ಒಂದೇ ಆದ ಸತ್ತೇ ಸತ್ಯ-ಎಂದು ಉಪದೇಶಿಸಿದೆ[3] ಗೌಣವಾದ ಜ್ಞಾನದಿಂದ "ಅವನಿಗೆ ಅಲ್ಲಿಯವರೆಗೇ ತಡ" (೬-೧೪-೨) ಎಂದು ಸತ್ಸಂಪತ್ತಿಯನ್ನು ಉಪದೇಶಿಸಿದೆ (ಎನ್ನುವದೂ) ಸರಿಯಲ್ಲ ಏಕೆಂದರೆ ನೀನು ಇಂದ್ರನು, ಯಮನು- ಎಂಬಂತೆ ಗೌಣಜ್ಞಾನವು ಮಿಥ್ಯಾ(ಜ್ಞಾನವಾಗಿರುತ್ತದೆ).[4] ಇದು ಸ್ತುತಿಯೂ ಅಲ್ಲ, ಏಕೆಂದರೆ ಶ್ವೇತಕೇತುವು (ಇಲ್ಲಿ) ಉಪಾಸ್ಯನಲ್ಲ[5] ಸತ್ತನ್ನು ಶ್ವೇತಕೇತುವೆಂದು ಹೊಗಳಿದೆ (ಎಂಬಿದೂ) ಆಗುವದಿಲ್ಲ ರಾಜನನ್ನು 'ನೀನು ದಾಸನು' ಎಂದು ಸ್ತುತಿಸುವದು ಸರಿಯಾಗಲಾರದಷ್ಟೆ. ಸರ್ವಾತ್ಮವಾಗಿರುವ ಸದ್ಬ್ರಹ್ಮವನ್ನು ಒಂದಂಶದಲ್ಲಿ ಪರಿಚ್ಛೇದಮಾಡಿ ಅದೇ ನೀನು ಎಂದು- ದೇಶಾಧಿಪತಿಯಾದವನನ್ನು 'ನೀನು ಗ್ರಾಮಾಧ್ಯಕ್ಷನು' ಎನ್ನುವಂತೆ- 'ಅದೇ ನೀನು' ಎನ್ನುವದೂ ಸರಿಯಾಗುವದಿಲ್ಲ.[6] (ಆದ್ದರಿಂದ) ಸದ್ರೂಪನೇ (ನೀನು) ಎಂದು ಉಪದೇಶಿಸಿದೆ ಎಂಬುದನ್ನು ಬಿಟ್ಟರೆ (ಈ ವಾಕ್ಯಕ್ಕೆ) ಮತ್ತೆಯಾವ ಅರ್ಥವೂ ಹೊಂದುವದಿಲ್ಲ.

## ತ್ವಂಶಬ್ದವಾಚ್ಯನಿಗೆ ಸದ್ರೂಪತ್ವವನ್ನೇ ಹೇಳಿದೆ ಎಂಬುದಕ್ಕೆ ಲಿಂಗಗಳು

(ಭಾಷ್ಯ)

೫೪೪ ನನು ಸದಸ್ಮೀತಿ ಬುದ್ಧಿಮಾತ್ರಮಿಹ ಕರ್ತವ್ಯತಯಾ ಚೋದ್ಯತೇ ನ ತ್ವಜ್ಞಾತಂ ಸದಸೀತಿ ಜ್ಞಾಪ್ಯತ ಇತಿ ಚೇತ್ । ನನ್ವಸ್ಮಿನ್ ಪಕ್ಷೇಽಪಿ

---

1. ಚೈತನ್ಯ, ನಿತ್ಯತ್ವ- ಮುಂತಾದ ಗುಣಗಳಿರುವದರಿಂದ ನೀನೂ ಸದ್ಬ್ರಹ್ಮದಂತೆ ಎಂದು ತಿಳಿಸುವದಕ್ಕೆ ಗೌಣಪ್ರಯೋಗವನ್ನು ಮಾಡಿದೆ- ಎನ್ನಬಹುದಲ್ಲ!

2. ಮುಂತಾದ ಎಂಬ ಮಾತಿಗೆ ಚಿನ್ನ, ಕಬ್ಬಿಣ- ಇವುಗಳು ಅರ್ಥ

3. ಕಾರ್ಯವು ಮಿಥ್ಯೆ, ಕಾರಣವೊಂದೇ ಸತ್ಯ- ಎಂದು ದೃಷ್ಟಾಂತದಿಂದ ತಿಳಿಸಿ ಸತ್ತೇ ಸತ್ಯ ಎಂದು ಹೇಳಿರುವದರಿಂದ ಜೀವತ್ವವು ಮಿಥ್ಯೆ ಎಂದಂತೆ ಆಗಿದೆ.

4. ಮಿಥ್ಯಾಜ್ಞಾನದಿಂದ ಸತ್ಸಂಪತ್ತಿ ಎಂಬ ಫಲವನ್ನು ಶ್ರುತಿ ಹೇಳಿದೆಯೆಂಬುದು ಸರಿಯಾಗುವದಿಲ್ಲ.

5. ಉಪಾಸ್ಯವಾದದ್ದನ್ನು ಸ್ತುತಿಸುವದು ಯುಕ್ತ.

6. ಆದ್ದರಿಂದ ತ್ವಂಪದಾರ್ಥವನ್ನು ಸತ್ತೆಂದು ಉಪಾಸನೆಮಾಡಬೇಕೆಂದು ಅದನ್ನು 'ನೀನು' ಎಂದು ಹೊಗಳಿದೆಯೆನ್ನುವದಕ್ಕಾಗುವದಿಲ್ಲ.

"ಅಶ್ರುತಂ ಶ್ರುತಂ ಭವತಿ" (೬–೧–೩) ಇತ್ಯಾದ್ಯನುಪಪನ್ನಮ್ । ನ । ಸದಸ್ಮೀತಿ ಬುದ್ಧಿವಿಧೇಃ ಸ್ತುತ್ಯರ್ಥತ್ವಾತ್ । ನ । "ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಮ್" (೬–೧೪–೨) ಇತ್ಯುಪದೇಶಾತ್ । ಯದಿ ಹಿ ಸದಸ್ಮೀತಿ ಬುದ್ಧಿಮಾತ್ರಂ ಕರ್ತವ್ಯತಯಾ ವಿಧೀಯತೇ ನ ತು ತ್ವಂಶಬ್ದವಾಚ್ಯಸ್ಯ ಸದ್ರೂಪತ್ವಮೇವ ತದಾ ನಾಽಽಚಾರ್ಯವಾನ್ ವೇದೇತಿ ಜ್ಞಾನೋಪಾಯೋಪದೇಶೋ ವಾಚ್ಯಃ ಸ್ಯಾತ್ । ಯಥಾ "ಅಗ್ನಿಹೋತ್ರಂ ಜುಹುಯಾತ್" (?) ಇತ್ಯೇವಮಾದಿಷು ಅರ್ಥಪ್ರಾಪ್ತಮೇವಾಽಽಚಾರ್ಯವತ್ತ್ವಮಿತಿ ತದ್ವತ್ । 'ತಸ್ಯ ತಾವದೇವ ಚಿರಮ್' ಇತಿ ಚ ಕ್ಷೇಪಕರಣಂ ನ ಯುಕ್ತಂ ಸ್ಯಾತ್ । ಸದಾತ್ಮತತ್ತ್ವೇಽವಿಜ್ಞಾತೇಽಪಿ ಸಕೃದ್ಬುದ್ಧಿಮಾತ್ರಕರಣೇ ಮೋಕ್ಷಪ್ರಸಙ್ಗಾತ್ । ನ ಚ ತತ್ತ್ವಮಸೀತ್ಯುಕ್ತೇ ನಾಽಹಂ ಸದಿತಿ ಪ್ರಮಾಣವಾಕ್ಯಜನಿತಾ ಬುದ್ಧಿರ್ನಿವರ್ತಯಿತುಂ ಶಕ್ಯಾ, ನೋತ್ಪನ್ನೇತಿ ವಾ ಶಕ್ಯಂ ವಕ್ತುಮ್ । ಸರ್ವೋಪನಿಷದ್ವಾಕ್ಯಾನಾಂ ತತ್ಪರತಯೈವೋಪಕ್ಷಯಾತ್ । ಯಥಾಽಗ್ನಿಹೋತ್ರಾದಿವಿಧಿಜನಿತಾಗ್ನಿಹೋತ್ರಾದಿಕರ್ತವ್ಯತಾಬುದ್ಧೀನಾಮ್ ಅತಥಾರ್ಥತ್ವಮನುತ್ಪನ್ನತ್ವಂ ವಾ ನ ಶಕ್ಯತೇ ವಕ್ತುಂ ತದ್ವತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :– 'ಸತ್ತೇ ಆಗಿರುತ್ತೇನೆ' ಎಂಬ ಬುದ್ಧಿಯನ್ನು ಮಾತ್ರವೇ ಇಲ್ಲಿ ಮಾಡಬೇಕೆಂದು ವಿಧಿಸಿದೆಯೇ ಹೊರತು ಅಜ್ಞಾತವಾಗಿರುವ ಸತ್ತೇ ನೀನು ಎಂದು ತಿಳಿಸಿಕೊಟ್ಟಿರುವದಿಲ್ಲ– ಎಂದರೊ[1] ?

(ಸಿದ್ಧಾಂತಿ) .– ಈ ಪಕ್ಷದಲ್ಲಿಯೂ 'ಅಶ್ರುತವಾದದ್ದನ್ನು ಶ್ರವಣ ಮಾಡಿದಂತಾಗುವದು' ಎಂದುಮುಂತಾಗಿ ಹೇಳಿದ್ದು ಹೊಂದುವದಿಲ್ಲವಲ್ಲ !

(ಪೂರ್ವಪಕ್ಷಿ) :– ಹಾಗಲ್ಲ ಏಕೆಂದರೆ ಸತ್ತೇ ಆಗಿದೇನೆ ಎಂಬ ಬುದ್ಧಿಯನ್ನು ವಿಧಿಸಿರುವವನ್ನು ಹೊಗಳುವದಕ್ಕೆ (ಆ ವಾಕ್ಯವು ಬಂದಿದೆ ಎಂದು ಹೇಳಬಹುದಾಗಿದೆ).

(ಸಿದ್ಧಾಂತಿ) :– ಹಾಗಲ್ಲ. "ಏಕೆಂದರೆ ಆಚಾರ್ಯವಂತನಾದ ಪುರುಷನು ಅರಿತುಕೊಳ್ಳುತ್ತಾನೆ, ಅವನಿಗೆ ಅಲ್ಲಿಯವರೆಗೇ ತಡ" (೬–೧೪–೨) ಎಂದು

---

1. ಸ್ತುತಿಯೆಂಬ ಪಕ್ಷವನ್ನು ಬಿಟ್ಟು ಸತ್ತಿನ ಗುಣದ ಹೋಲಿಕೆಯಿಂದ ಸತ್ತೆಂದು ಉಪಾಸನೆಮಾಡಬೇಕು ಎಂಬ– ಮನಸ್ಸನ್ನು ಅನಂತಗುಣಸಾಮ್ಯದಿಂದ ವಿಶ್ವೇದೇವತೆಗಳೆಂದು ಉಪಾಸನೆಮಾಡುವಂತೆ– ಉಪದೇಶಿಸಿದೆ ಎಂದರೊ ? ಎಂಬ ಅಭಿಪ್ರಾಯ. ಹಿಂದೆ ಹೇಳಿರುವದು ದೃಷ್ಟ್ಯಧ್ಯಾಸ, ಇದು ಸಂಪತ್ತು. ಸೂ. ಭಾ. ೧–೧–೪ (ಭಾ. ಭಾ. ೪೬)ನ್ನು ನೋಡಿ

ಉಪದೇಶಿಸಿರುತ್ತದೆ. (ಇದರ ವಿವರ) : ಸತ್ತೇ ಆಗಿರುತ್ತೇನೆ ಎಂಬ ಬುದ್ಧಿಯನ್ನು ಮಾತ್ರವೇ ಮಾಡಬೇಕೆಂದು ಇಲ್ಲಿ ವಿಧಿಸಿರುತ್ತದೆಯೇ ಹೊರತು ತ್ವಂಶಬ್ದವಾಚ್ಯನಾದ (ಜೀವ)ನಿಗೆ ಸದ್ರೂಪತ್ವವನ್ನೇ (ಇಲ್ಲಿ ಹೇಳಿಲ್ಲ- ಎನ್ನುವವಾವರೆ 'ಆಚಾರ್ಯವಂತನು ಅರಿತುಕೊಳ್ಳುತ್ತಾನೆ' ಎಂದು ಜ್ಞಾನಕ್ಕಾಗಿ ಉಪಾಯವನ್ನು ಹೇಳಬೇಕಾದದ್ದೇನೂ ಇರಲಾರದು. ಹೇಗೆ "ಅಗ್ನಿಹೋತ್ರವನ್ನು ಹೋಮ ಮಾಡಬೇಕು" (?) ಎಂಬಿದೇ ಮುಂತಾದ (ಸ್ಥಲ)ಗಳಲ್ಲಿ ಆಚಾರ್ಯನಿರಬೇಕೆಂಬುದು ಹೇಗೆ ತಾನೇ ಬಂದೊದಗಿದೆಯೋ ಹಾಗೆಯೇ (ಇಲ್ಲಿಯೂ ಒದಗಿರುತ್ತದೆ).[1] 'ಅವನಿಗೆ ಅಲ್ಲಿಯವರೆಗೇ ತಡ' ಎಂದು ವಿಲಂಬವನ್ನು ಹೇಳಿರುವದೂ ಯುಕ್ತವಾಗಲಾರದು. ಏಕೆಂದರೆ ಸದಾತ್ಮತತ್ತ್ವವನ್ನು ಅರಿತುಕೊಳ್ಳದೆ ಒಂದು ಸಲ (ಸದ್ಬ್ರಹ್ಮ)ಬುದ್ಧಿಯನ್ನು ಮಾಡಿದಮಾತ್ರದಿಂದ ಮೋಕ್ಷವಾಗಬೇಕಾಗುವದು[2] 'ಅದೇ ನೀನಾಗಿರುವೆ' ಎಂದು ಹೇಳಿದರೆ ನಾನು ಸತ್ತಲ್ಲ ಎಂದು, ಪ್ರಮಾಣದಿಂದಾಗಿರುವ ಜ್ಞಾನವನ್ನು, ಹೋಗಲಾಡಿಸುವದಕ್ಕೂ ಶಕ್ಯವಲ್ಲ, ಅದು ಹುಟ್ಟಲಿಲ್ಲವೆಂದು ಹೇಳುವದಕ್ಕೂ ಶಕ್ಯವಲ್ಲ[3], ಏಕೆಂದರೆ ಎಲ್ಲಾ ಉಪನಿಷತ್ತುಗಳೂ ಇದರಲ್ಲಿಯೇ ತಾತ್ಪರ್ಯವನ್ನಿಟ್ಟುಮುಗಿದಿವೆ[4] ಹೇಗೆ ಅಗ್ನಿಹೋತ್ರಾದಿ ವಿಧಿಗಳಿಂದ ಉಂಟಾದ ಅಗ್ನಿಹೋತ್ರಾದಿಗಳನ್ನು ಮಾಡಬೇಕು ಎಂಬೀ ಬುದ್ಧಿಗಳು

---

1. ಉಪಾಸನೆಯೂ ಅಗ್ನಿಹೋತ್ರದಂತೆ ಕ್ರಿಯೆಯಾಗಿರುವದರಿಂದ ಅದಕ್ಕೆ ಆಚಾರ್ಯನು ಬೇಕೇಬೇಕು, ಆದ್ದರಿಂದ ಅದನ್ನು ಬಾಯಿಬಿಟ್ಟು ಹೇಳತಕ್ಕದ್ದೇನೂ ಇಲ್ಲ ತತ್ತ್ವಜ್ಞಾನಮಾತ್ರದಿಂದಲೇ ಕೃತಕೃತ್ಯನಾಗುತ್ತಾನೆ ಎಂಬುದು ವಿವಕ್ಷಿತವಾದರೆ ಅದಕ್ಕೆ ಆಚಾರ್ಯನ ಉಪದೇಶವು ಉಪಾಯವೆಂಬುದನ್ನು ಹೇಳಬೇಕಾದದ್ದು ಅವಶ್ಯವಾಗುತ್ತದೆ. ತಾನೇ ಆ ಬುದ್ಧಿಯನ್ನು ಪ್ರಯತ್ನದಿಂದ ಮಾಡಿಕೊಂಡರೆ ಸಾಲದು, ಗುರೂಪದೇಶದಿಂದ ಅರಿತುಕೊಳ್ಳುವದೂ ಅವಶ್ಯ ಎಂಬರ್ಥವು ಇದರಿಂದ ಹೊರಡುತ್ತದೆ ಎಂದು ಭಾವ ಜ್ಞಾನಕ್ಕೆ ಗುರುವಿನ ಆವಶ್ಯಕತೆಯಿದೆ ಎಂಬುದಕ್ಕೆ ಮುಂ. ಭಾ. ೧-೨-೧೨ (ಭಾ. ಭಾ. ೪೭)ನ್ನು ನೋಡಿ.

2. 'ಅವನಿಗೆ ಅಲ್ಲಿಯವರೆಗೇ ತಡ' ಎಂದು ದೇಹಪಾತಕಾಲದವರೆಗೇ ಸತ್ಸಂಪತ್ತಿಗೆ ತಡವಾಗಿರುತ್ತದೆ, ಆಮೇಲೆ ಸತ್ಸಂಪತ್ತಿಯಾಗಿಬಿಡುತ್ತದೆ - ಎಂದು ಉಪಾಸನೆಯ ವಿಷಯಕ್ಕೆ ಹೇಳಲು ಕಾರಣವಿಲ್ಲ, ಏಕೆಂದರೆ ಉಪಾಸನೆಯನ್ನು ವಿಧಿಸಿದ ರೀತಿಯಲ್ಲಿ ಮಾಡಿದವನಿಗೆ ಮೋಕ್ಷವು ಕೂಡಲೆ ಆಗಬೇಕೆಂದು ಯಾರೂ ನಿರೀಕ್ಷಿಸುವದಿಲ್ಲ, ಜ್ಞಾನವಿಲ್ಲದೆ ಮೋಕ್ಷವು ಎಂದಿಗೂ ಆಗಲಾರದೆಂದು ಹೇಳುವದಂತೂ ಈ ಪಕ್ಷದಲ್ಲಿ ಹೊಂದುವದೇ ಇಲ್ಲ. ಜ್ಞಾನಕ್ಕಾದರೆ ಪ್ರಾರಬ್ಧಕರ್ಮಶೇಷವಿರುವಂತೆ ಮಿಕ್ಕ ಕರ್ಮಗಳಿಗೂ ಫಲವು ಬೇಕೆಂಬ ಶಂಕೆಯುಂಟಾಗುತ್ತದೆ; ಅದರ ನಿವೃತ್ತಿಗಾಗಿ 'ಅಲ್ಲಿಯವರೆಗೇ ತಡ'- ಎಂಬ ವಾಕ್ಯವು ಬೇಕಾಗುತ್ತದೆ ಎಂದು ಭಾವ.

3. ವಾಕ್ಯವು ಪ್ರಮಾಣವಾದ್ದರಿಂದ ಅದರಿಂದ ಜ್ಞಾನೋತ್ಪತ್ತಿಯಾಗುವದು, ಆ ಜ್ಞಾನವು ಬಾಧಿತವೂ ಆಗುವದಿಲ್ಲ.

4. ಉಪನಿಷದ್ವಾಕ್ಯಕ್ಕೆ ಮತ್ತೊಂದರಲ್ಲಿಯೇ ತಾತ್ಪರ್ಯವಿದೆ, ಐಕ್ಯಜ್ಞಾನದಲ್ಲಿಲ್ಲ- ಎಂಬ ಶಂಕೆಗೆ ಪರಿಹಾರವಿದು.

ಪರಮಾರ್ಥವಲ್ಲವೆಂದಾಗಲಿ, (ಅವು) ಹುಟ್ಟಿಲ್ಲವೆಂದಾಗಲಿ ಹೇಳುವದಕ್ಕೆ ಆಗುವದಿಲ್ಲವೋ ಹಾಗೆ.[1]

## ಸದಾತ್ಮವಿಜ್ಞಾನವಾಗದಿರುವದಕ್ಕೆ ಕಾರಣ

(ಭಾಷ್ಯ)

೫೪೫. ಯತ್ತೂಕ್ತಂ ಸದಾತ್ಮಾ ಸನ್ ಆತ್ಮಾನಂ ಕಥಂ ನ ಜಾನೀಯಾದಿತಿ । ನಾಽಸೌ ದೋಷಃ । ಕಾರ್ಯಕರಣಸಂಘಾತವ್ಯತಿರಿಕ್ತೋಽಹಂ ಜೀವಃ (ಕರ್ತಾ ಭೋಕ್ತಾ) ಇತ್ಯಪಿ ಸ್ವಭಾವತಃ ಪ್ರಾಣಿನಾಂ ವಿಜ್ಞಾನಾದರ್ಶನಾತ್ ಕಿಮು ತಸ್ಯ ಸದಾತ್ಮಾವಿಜ್ಞಾನಮ್[2] (?) ಕಥಮೇವಂ ವ್ಯತಿರಿಕ್ತವಿಜ್ಞಾನೇ ಸತಿ ತೇಷಾಂ ಕರ್ತೃತ್ವಾದಿವಿಜ್ಞಾನಂ ಸಂಭವತಿ ? ದೃಶ್ಯತೇ ಚ । ತದ್ವತ್ ತಸ್ಯಾಽಪಿ ದೇಹಾದಿಷು ಆತ್ಮಬುದ್ಧಿತ್ವಾನ್ನ ಸ್ಯಾತ್ ಸದಾತ್ಮವಿಜ್ಞಾನಮ್ । ತಸ್ಮಾದ್ ವಿಕಾರಾನೃತಾಧಿಕೃತಜೀವಾತ್ಮವಿಜ್ಞಾನನಿವರ್ತಕಮೇವೇದಂ ವಾಕ್ಯಂ ತತ್ತ್ವಮಸೀತಿ ಸಿದ್ಧಮಿತಿ ॥

(ಭಾಷ್ಯಾರ್ಥ)

ಇನ್ನು ಸದಾತ್ಮನೇ ಆಗಿದ್ದುಕೊಂಡು (ಶ್ವೇತಕೇತುವು) ತನ್ನನ್ನು ತಾನು ಹೇಗೆ ಅರಿತುಕೊಳ್ಳದೆ ಇದ್ದಾನು ? -ಎಂದು ಕೇಳಿದಿರಲ್ಲ, ಅದೇನೂ ದೋಷವಲ್ಲ. ಏಕೆಂದರೆ ಕಾರ್ಯಕರಣಸಂಘಾತವ್ಯತಿರಿಕ್ತನಾದ ಜೀವನು ನಾನು (ಕರ್ತೃವು ಭೋಕ್ತೃವು)[3] ಎಂದುಕೂಡ ಸ್ವಭಾವದಿಂದ ಪ್ರಾಣಿಗಳಿಗೆ ಅರಿವು ಇರುವದಿಲ್ಲವೆಂಬುದು ಕಂಡಿರುತ್ತದೆ, ಹೀಗಿರುವಲ್ಲಿ ಸದಾತ್ಮನೆಂಬ ಅರಿವು ಇರುವದಿಲ್ಲವೆಂದು ಹೇಳತಕ್ಕದ್ದೇನು[4] ? ಹೀಗೆ (ಕಾರ್ಯಕರಣಸಂಘಾತಕ್ಕಿಂತ) ಬೇರೆಯಾದವನು

---

1 ಕರ್ಮವಾಕ್ಯದಂತೆ ಜ್ಞಾನವಾಕ್ಯಕ್ಕೂ ಪ್ರಾಮಾಣ್ಯವನ್ನು ಒಪ್ಪುವದು ಯುಕ್ತವೆಂದು ಭಾವ. ಗೀ. ಭಾ. ೨-೨೧ (ಭಾ. ಭಾ. ೪೦)ವನ್ನು ನೋಡಿ

2. ಈ ವಾಕ್ಯದಲ್ಲಿ ಏನೋ ಹೆಚ್ಚುಕಡಿಮೆಯಾಗಿರುವಂತಿದೆ, ಅನುವಾದವನ್ನೂ ಅದರ ಟಿಪ್ಪಣಿಯನ್ನೂ ನೋಡಿ. 'ಸದಾತ್ಮಾವಿಜ್ಞಾನಮ್' ಎಂಬ ಪಾಠವಿದ್ದರೇ ಹೇಗೋ ಅರ್ಥ ಮಾಡಿಕೊಳ್ಳಬಹುದಾಗಿದೆ.

3. ಎಷ್ಟೋ ಜನರಿಗೆ ದೇಹಾತ್ಮಬುದ್ಧಿಯೇ ಇರುತ್ತದೆ, ಅಷ್ಟುಮಾತ್ರದಿಂದ ದೇಹವ್ಯತಿರಿಕ್ತಾತ್ಮನೊಬ್ಬನು ಇಲ್ಲವೆಂದೂ ಅವನು ಮಾಡುವ ಶಾಸ್ತ್ರೀಯಕರ್ಮಗಳಿಗೆ ಫಲವಿಲ್ಲವೆಂದೂ ಆಗುವದಿಲ್ಲ ತಾನು ದೇಹವ್ಯತಿರಿಕ್ತನು ಎಂಬ ಜ್ಞಾನವೇಕಿಲ್ಲ ? ಎಂದು ಸಾಮಾನ್ಯರು ಆಕ್ಷೇಪಿಸಬಹುದು, ಆ ಜ್ಞಾನಾಭಾವಕ್ಕೆ ಅವಿದ್ಯೆಯೇ ಕಾರಣವೆಂದು ಮೀಮಾಂಸಕರು ಹೇಳುತ್ತಾರೆ, ಅವರಂತೆ ಇಲ್ಲಿಯೂ ಆಗಬಹುದು.

4. ಸುಖದುಃಖಜ್ಞಾನಾದಿಗಳಿರುವ ಸಂಸಾರಿಯು ನಾನೆಂಬ ಅರಿವು ಆಗುವದೇ ಇಷ್ಟು ಕಷ್ಟವಾಗಿರುವಾಗ ಯಾವ ವಿಶೇಷವೂ ಇಲ್ಲದ ಸನ್ಮಾತ್ರವು ನಾನೆಂಬ ಅರಿವು ಆಗುವದು ಇನ್ನೂ ಕಷ್ಟವೆ. ಎಲ್ಲಿಯೋ ಒಬ್ಬ ಮಹಾತ್ಮನಿಗೆ ಮಾತ್ರ ಈ ಅರಿವು ಆದೀತು. ಗೀ. ೭-೩.

ನಾನೆಂಬ) ವಿಜ್ಞಾನವಿದ್ದರೆ ಅವರಿಗೆ ಕರ್ತೃತ್ವವೇ ಮುಂತಾದದ್ದರ ಅರಿವು ಹೇಗೆ ಸಂಭವಿಸೀತು[1] ? ಆದರೆ (ಅದು ಇರುವದು) ಕಂಡುಬರುತ್ತಿದೆ.[2] ಅದರಂತೆ ಆ (ಶ್ವೇತಕೇತುವಿಗೂ) ದೇಹಾದಿಗಳಲ್ಲಿ ತಾನೆಂಬ ಬುದ್ಧಿಯಿದ್ದದ್ದರಿಂದ ಸದಾತ್ಮನು (ತಾನೆಂಬ) ಅರಿವು ಇಲ್ಲದೆ ಇರಬಹುದಾಗಿದೆ.

ಆದ್ದರಿಂದ ಈ ತತ್ತ್ವಮಸಿ ಎಂಬ ವಾಕ್ಯವು ಕಾರ್ಯವೂ ಅನೃತವೂ (ಆದ ಕರ್ತೃತ್ವಭೋಕ್ತೃತ್ವಗಳಲ್ಲಿ) ಅಧಿಕೃತ(ನು ತಾನೆಂಬ) ಜೀವಾತ್ಮವಿಜ್ಞಾನವನ್ನು ಕಳೆಯತಕ್ಕದ್ದೇ ಎಂದು ಸಿದ್ಧವಾಯಿತು.

---

1. ನಾನು ಸರ್ವಥಾ ದೇಹಾದಿವ್ಯತಿರಿಕ್ತನೇ ಎಂಬ ನಿಶ್ಚಯವು ಅವರಿಗೆ ಇದ್ದರೆ ನಾನು ಕರ್ತೃ, ಫಲಭೋಕ್ತೃ - ಎಂಬ ಜ್ಞಾನವು ಇರುವದಕ್ಕೆ ಆಗುವದಿಲ್ಲ, ಏಕೆಂದರೆ ದೇಹಾತ್ಮಜ್ಞಾನವಿಲ್ಲದೆ ಕರ್ಮಕರ್ತೃತ್ವವಿರುವದಿಲ್ಲ ; ಅದಿಲ್ಲದವನಿಗೆ ಮಾಡಿದ ಕರ್ಮಫಲವನ್ನು ಅನುಭವಿಸುವೆನೆಂಬ ಅರಿವು ಆಗಲಾರದು.

2. ಆದ್ದರಿಂದ ಅವಿದ್ಯೆಯಿಂದಲೇ ಅವರಿಗೆ ಕರ್ತೃತ್ವಭೋಕ್ತೃತ್ವಜ್ಞಾನವಿರುತ್ತದೆಯೆಂದಾಯಿತು - ಎಂದು ಅಭಿಪ್ರಾಯ. ಈ ಒಟ್ಟುವಾಕ್ಯಕ್ಕೆ ಹಿಂದುಮುಂದಕ್ಕೆ ಹೊಂದುವಂತೆ ಅರ್ಥಮಾಡುವದು ಕಷ್ಟವಾಗಿದೆ. ನೈಷ್ಕರ್ಮ್ಯಸಿದ್ಧಿಯ ೧-೯೧ರಿಂದ ೯೪ನೆಯ ವರೆಗಿನ ಶ್ಲೋಕಗಳ ಅಭಿಪ್ರಾಯವೇ ಇಲ್ಲಿರಬಹುದೆ ?

# ಆರನೆಯ ಅಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಸದ್ಬ್ರಹ್ಮವಿದ್ಯೆಯನ್ನು ತಿಳಿಸಿಕೊಟ್ಟಿದೆ.

## ಒಂದನೆಯ ಖಂಡ

೧-೩. ಶ್ವೇತಕೇತು ಆರುಣೇಯನಿಗೆ ತಂದೆಯು ಬ್ರಹ್ಮಚರ್ಯವಾಸವನ್ನು ಮಾಡಿಕೊಂಡು ಬರುವಂತೆ ಹೇಳಿದನು. ಅವನು ಹನ್ನೆರಡುವರ್ಷಗಳವರೆಗೆ ಬ್ರಹ್ಮಚರ್ಯವನ್ನು ಮಾಡಿ ವೇದಗಳನ್ನೆಲ್ಲ ಅಧ್ಯಯನಮಾಡಿಕೊಂಡು ತಾನು ಅನೂಚಾನನೆಂಬ ಅಭಿಮಾನದಿಂದ ಕೂಡಿ ಹಿಂತಿರುಗಿಬಂದನು. ಅವಿನೀತನಾಗಿದ್ದ ಅವನನ್ನು ಕುರಿತು "ಇದೇನು, ಹೀಗೆ ಸ್ತಬ್ಧನಾಗಿರುವೆಯಲ್ಲ! ಯಾವದನ್ನು ಅರಿತರೆ ಅಶ್ರುತವಾದದ್ದು ಶ್ರುತವಾಗುವದೋ ಅಮತವಾದದ್ದು ಮತವಾಗುವದೋ ಅವಿಜ್ಞಾತವಾದದ್ದು ವಿಜ್ಞಾತವಾಗುವದೋ ಅದರ ಉಪದೇಶವನ್ನು ಕೇಳಿದ್ದೀಯೊ?" ಎಂದು ತಂದೆಯು ಕೇಳಿದನು "ಆ ಉಪದೇಶವು ಎಂಥದ್ದು?" -ಎಂದು ಕೇಳಲು ತಂದೆಯು ಇಂತೆಂದನು.

೪-೬. "ಏನಯ್ಯ, ಒಂದು ಮಣ್ಣುಮುದ್ದೆಯನ್ನು ಅರಿತರೆ ಮಣ್ಣಿನವೆಲ್ಲವನ್ನೂ ಹೇಗೆ ಅರಿತಂತೆ ಆಗುವದೋ, ಒಂದು ಚಿನ್ನದ ಗಟ್ಟಿಯನ್ನು ಅಥವಾ ಕಬ್ಬಿಣದ ಗಟ್ಟಿಯನ್ನು ಅರಿತರೆ ಹೇಗೆ ಚಿನ್ನದಿಂದಾದ ಅಥವಾ ಕಬ್ಬಿಣದಿಂದಾದ ವಸ್ತುಗಳೆಲ್ಲವನ್ನೂ ಅರಿತುಕೊಂಡಂತೆ ಆಗುವದೋ ಹಾಗೆ ಒಂದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತಾಗುವದು. ಅದನ್ನು ಕೇಳಿರುವೆಯೇನು?"

೭. "ನಮ್ಮ ಗುರುಗಳಿಗೆ ಇದು ತಿಳಿಯದೆ ಇದ್ದಿರಬಹುದು. ತಿಳಿದಿದ್ದರೆ ನನಗೆ ಹೇಗೆ ತಾನೆ ಹೇಳದೆ ಇರುತ್ತಿದ್ದರು? ಪೂಜ್ಯನಾದ ನೀನೇ ನನಗೆ ಅದನ್ನು ಹೇಳಿಕೊಡಬೇಕು" ಎಂದನು.

## ಎರಡನೆಯ ಖಂಡ

೧-೪. ತಂದೆ ಇಂತೆಂದನು: ಮೊದಲು ತನಗೆರಡನೆಯದಿಲ್ಲದ ಸತ್ತೊಂದೇ ಇತ್ತು; ಅದರಿಂದಲೇ ಇದೆಲ್ಲವೂ ಆಯಿತು. ಅಸತ್ತಿನಿಂದಲೇ ಇದೆಲ್ಲವೂ ಆಗಿದೆ- ಎಂದು ಕೆಲವರೆನ್ನುವರು. ಅದು ಹೇಗೆ ಸರಿಯಾದೀತು? ಸತ್ತೊಂದೇ ಇದ್ದಿತು. ಅದು ತನ್ನೊಳಗೆ ಆಲೋಚಿಸಿಕೊಂಡು 'ಬಹುವಾಗುವೆನು, ಹುಟ್ಟುವೆನು'- ಎಂದುಕೊಂಡಿತು. ತೇಜಸ್ಸನ್ನು ಸೃಷ್ಟಿಸಿತು. ತೇಜಸ್ಸಾದ ಅದು ಮತ್ತೆ ಹಾಗೇ ಯೋಚಿಸಿ ಅಪ್ಪನ್ನುಂಟುಮಾಡಿತು. ಆ ಅಪ್ಪು ಯೋಚಿಸಿ ಅನ್ನವನ್ನು ಸೃಷ್ಟಿಮಾಡಿತು. ಆದ್ದರಿಂದಲೇ ಈಗಲೂ ತೇಜಸ್ಸಿನಿಂದ ಅಪ್ಪು, ಅಪ್ಪಿನಿಂದ ಅನ್ನ ಹೀಗೆ ಆಗುವದು ಕಂಡುಬರುತ್ತದೆ

## ಮೂರನೆಯ ಖಂಡ

೧-೪. ಪ್ರಪಂಚದಲ್ಲಿರುವ ಪಕ್ಷ್ಯಾದಿಭೂತಗಳಿಗೆ ಅಂಡಜ, ಜೀವಜ, ಉದ್ಭಿಜ್ಜ- ಎಂಬ ಮೂರು ಬೀಜಗಳು. ಈ ತೇಜೋಬನ್ನಕಾರ್ಯವಾದ ಭೂತಗಳಲ್ಲಿ ಮೂಲಕಾರಣ

ವಾದ ಸತ್ತೆಂಬ ದೇವತೆಯು ಜೀವರೂಪದಿಂದ ಒಳಹೊಕ್ಕು ನಾಮರೂಪಗಳನ್ನು ವಿಂಗಡಿಸು ವೆನು ಎಂದುಕೊಂಡು ಅವುಗಳಲ್ಲಿ ಒಂದೊಂದರಲ್ಲಿಯೂ ಉಳಿದೆರಡರ ಬೆರಕೆಯನ್ನು ಮಾಡಿ ಕೊಂಡು ತ್ರಿವೃತ್ಕರಣಮಾಡಿ ಅವುಗಳೊಳಗೆ ಹೊಕ್ಕಿತು

## ನಾಲ್ಕನೆಯ ಖಂಡ

೧–೪. ಅಗ್ನಿಯಲ್ಲಿರುವ ಕೆಂಪುರೂಪವು ತೇಜಸ್ಸಿನದು, ಬಿಳಿಯದು ಅಪ್ಪಿನದು, ಕಪ್ಪಾದದ್ದು ಅನ್ನದ್ದು ; ಹೀಗೆ ಅರಿತುಕೊಂಡರೆ ಅಗ್ನಿಯು ಅಗ್ನಿಯಲ್ಲದೆ ಹೋಗುವದು, ರೋಹಿತಾದಿರೂಪತ್ರಯಮಾತ್ರವೇ ಆಗುವದು. ಹೀಗೆಯೇ ಆದಿತ್ಯ, ಚಂದ್ರ, ಮಿಂಚು– ಇವುಗಳಲ್ಲಿಯೂ ತೇಜೋಽಬನ್ನಗಳ ರೂಪಗಳೇ ಇರುವವು

೫–೭. ಈ ತತ್ತ್ವವನ್ನರಿತ ಹಿಂದಿನ ವಿದ್ವಾಂಸರು ಈ ಉದಾಹರಣೆಗಳಿಂದ ಎಲ್ಲವೂ ಹೀಗೆಯೇ ತ್ರಿವೃತ್ಕೃತವಾಗಿದೆ ಎಂದು ನಿಶ್ಚಯಿಸಿಕೊಂಡರು. ಯಾವವರಲ್ಲಿಯೇ ಆಗಲಿ, ಈ ತೇಜೋಽಬನ್ನಗಳ ರೂಪವೇ ಇರುತ್ತದೆ ಎಂದು ನಿಶ್ಚಯಿಸಿದರು.

ಈ ತೇಜೋಽಬನ್ನಗಳು ಪುರುಷಶರೀರದಲ್ಲಿ ಹೇಗೆ ತ್ರಿವೃತ್ಕೃತವಾಗಿರುವವೆಂಬುದನ್ನು ಹೇಳುವೆನು ಕೇಳು .

## ಐದನೆಯ ಖಂಡದಿಂದ ಏಳನೆಯ ಖಂಡ ಪೂರ

೫–೧ರಿಂದ ೪. ಉಂಡ ಅನ್ನವು ಮೂರು ಬಗೆಯಾಗಿರುತ್ತದೆ ಅದರಲ್ಲಿ ತೀರ ಸ್ಥೂಲ ವಾದ ಭಾಗವು ಪುರೀಷವಾಗುವದು, ನಡುವಿನ ಭಾಗವು ಮಾಂಸವಾಗುತ್ತದೆ, ತೀರ ಸೂಕ್ಷ್ಮ ವಾದದ್ದು ಮನಸ್ಸಾಗುತ್ತದೆ ಕುಡಿದ ಅಪ್ಪು ಹೀಗೆಯೇ ಮೂರು ಬಗೆಯಾಗಿ ಪರಿಣಮಿಸು ತ್ತದೆ ಸ್ಥೂಲತಮವಾದದ್ದು ಮೂತ್ರವು, ನಡುವಣ ಭಾಗವು ರಕ್ತವು, ಅಣುತಮವಾದದ್ದು ಪ್ರಾಣವು. ಹೀಗೆಯೇ ಮನುಷ್ಯನು ತೆಗೆದುಕೊಂಡ ಎಣ್ಣೆ ತುಪ್ಪ ಮುಂತಾದ ತೇಜೋ ದ್ರವ್ಯವೂ ಮೂರು ಬಗೆಯಾಗುತ್ತದೆ: ಸ್ಥೂಲತಮವಾದದ್ದು ಎಲುಬು, ನಡುವಣ ಭಾಗವು ಮಜ್ಜೆ, ಅಣುತಮವಾದದ್ದು ವಾಕ್ಕು ಅಂತೂ ಹೀಗೆ ಮನಸ್ಸು ಅನ್ನಮಯ, ಪ್ರಾಣವು ಅಮ್ಮಯ, ವಾಕ್ಕು ತೇಜೋಮಯವು.

೬–೧ರಿಂದ ೫. ಶ್ವೇತಕೇತುವು ಇದನ್ನು ಇನ್ನಷ್ಟು ಸ್ಪಷ್ಟಪಡಿಸಬೇಕೆನ್ನಲು ತಂದೆ ಇಂತೆಂದನು: ಕಡೆದ ಮೊಸರಿನ ಸೂಕ್ಷ್ಮಾಂಶವು ಮೇಲಕ್ಕೆ ಬೆಣ್ಣೆಯಾಗಿ ಏರುತ್ತದೆಯಷ್ಟೆ ? ಇದರಂತೆ ಉಂಡ ಅನ್ನದ ಸೂಕ್ಷ್ಮಾಂಶವು ಮನಸ್ಸಾಗುತ್ತದೆ, ಅಪ್ಪಿನ ಸೂಕ್ಷ್ಮಾಂಶವು ಪ್ರಾಣ ವಾಗುತ್ತದೆ, ತೇಜಸ್ಸಿನ ಸೂಕ್ಷ್ಮಾಂಶವು ವಾಕ್ಕಾಗುತ್ತದೆ. ಆದ್ದರಿಂದ ಮನಸ್ಸು ಅನ್ನಮಯ, ಪ್ರಾಣವು ಅಮ್ಮಯ, ವಾಕ್ಕು ತೇಜೋಮಯ.

೭–೧. ಈಗ ಶ್ವೇತಕೇತುವು ಮನಸ್ಸು ಅನ್ನಮಯವೆಂಬುದನ್ನು ಇನ್ನಷ್ಟು ಸ್ಪಷ್ಟಪಡಿಸಿ ಹೇಳಬೇಕೆಂದು ಕೇಳಿಕೊಂಡನು ತಂದೆ ಇಂತೆಂದನು ಅಪ್ಪ, ಈ ಮನುಷ್ಯನು ಹದಿನಾರು ಕಲೆಗಳುಳ್ಳವನು ನೀನು ಹದಿನೈದು ದಿನಗಳು ಊಟಮಾಡದೆ ಇರು, ಬೇಕಾದಷ್ಟು ನೀರು ಕುಡಿಯಬಹುದು –ಎಂದನು.

೭–೨ರಿಂದ ೩. ಶ್ವೇತಕೇತು ಹದಿನೈದು ದಿನಗಳು ಉಪವಾಸದಿಂದಿದ್ದು ಬಂದು "ಏನು ಹೇಳಲಿ?" ಎಂದನು. "ಋಕ್ಕುಗಳು, ಯಜುಸ್ಸುಗಳು, ಸಾಮಗಳು– ಇವನ್ನು ಹೇಳು'

ಎಂದು ತಂದೆ ಕೇಳಲು ಅವನಿಗೆ ಯಾವನೊಂದೂ ತೋಚಲಿಲ್ಲ. ಆಗ ತಂದೆ ಹೇಳುತ್ತಾನೆ: "ದೊಡ್ಡ ಉರಿಯುವ ಕೆಂಡದಲ್ಲಿ ಒಂದು ಸಣ್ಣ ಕಿಡಿ ಮಾತ್ರ ಉಳಿದಿರುವಲ್ಲಿ ಹೇಗೆ ಏನನ್ನೂ ಬಲವಾಗಿ ಸುಡಲಾರದೆ ಇರುವದೋ ಹಾಗೆ ನಿನ್ನಲ್ಲಿ ಹದಿನಾರರಲ್ಲಿ ಒಂದು ಕಲೆಮಾತ್ರ ಉಳಿದಿರುವದರಿಂದ ಏನೂ ತೋಚದೆ ಇವೆ. ಊಟಮಾಡು, ಆಮೇಲೆ ಎಲ್ಲವೂ ತಿಳಿಯುವದು"

೪ರಿಂದ ೬. ಮಗನು ಅದರಂತೆ ಊಟಮಾಡಿ ಬಳಿಗೆ ಬಂದನು, ಕೇಳಿದ್ದೆಲ್ಲವನ್ನೂ ಹೇಳಿದನು. ತಂದೆಯು "ಅಪ್ಪ, ಉಳಿದಿರುವ ಒಂದು ಸಣ್ಣ ಕಿಡಿಯನ್ನೇ ಹುಲ್ಲುಕಡ್ಡಿಗಳನ್ನು ಹಾಕಿ ಹೊತ್ತಿಸಿದರೆ ಹೇಗೆ ಅದು ಇನ್ನೂ ಬಲವಾಗಿ ಸುಡುವದೋ ಹಾಗೆಯೇ ನಿನ್ನಲ್ಲಿದ್ದ ಒಂದು ಕಲೆಯು ಅನ್ನದಿಂದ ಬೆಳೆದುಕೊಂಡು ಉರಿಯಿತು, ಅದರಿಂದಲೇ ವೇದಗಳನ್ನೆಲ್ಲ ಈಗ ಅರಿಯುತ್ತಿರುವೆ. ಆದ್ದರಿಂದ ಮನಸ್ಸು ಅನ್ನಮಯವೆಂದೂ ಪ್ರಾಣವು ಅಮ್ಮಯವೆಂದೂ ವಾಕ್ಕು ತೇಜೋಮಯವೆಂದೂ ನಾನು ಹೇಳುತ್ತಿದೇನೆ" ಎಂದನು. ಶ್ವೇತಕೇತುವಿಗೆ ಈ ಆಧ್ಯಾತ್ಮಿಕತ್ರಿವೃತ್ಕರಣದ ವಿವರವು ತಿಳಿಯಿತು

## ಎಂಟನೆಯ ಖಂಡ

೧–೨. ಉದ್ದಾಲಕ ಆರುಣಿಯು ಶ್ವೇತಕೇತುವಿಗೆ ತ್ರಿವೃತ್ಕೃತವಾದ ತೇಜೋಽಬನ್ನಗಳ ವಿಕಾರಗಳೊಳಗೆ ಅನ್ನವಿಕಾರವಾದ ಮನಸ್ಸಿನಲ್ಲಿ ಸದ್ರೂಪಪರದೇವತೆಯು ಜೀವರೂಪದಿಂದ ಒಳಹೊಕ್ಕು ತೇಜೋಽಮ್ಮಯಗಳಾದ ವಾಕ್ಪ್ರಾಣಗಳೊಡನೆ ಸೇರಿಕೊಂಡಿರುವದು. ಆ ಜೀವನು ಆಗ ಮನನದರ್ಶನಶ್ರವಣಾದಿವ್ಯವಹಾರಗಳನ್ನು ಮಾಡುತ್ತಿದ್ದು ಸುಷುಪ್ತಿಯಲ್ಲಿ ಅದೇ ಸದಾಖ್ಯಪರಮಾತ್ಮನಲ್ಲಿ ಸೇರುತ್ತಾನೆಂಬುದನ್ನು ತಿಳಿಸಬೇಕೆಂದು ಇಂತೆಂದನು: "ಅಪ್ಪ, ಈ ಪುರುಷನಿಗೆ 'ಸ್ವಪಿತಿ' (ನಿದ್ರಿಸುತ್ತಾನೆ) ಎಂಬ ಹೆಸರು ಬಂದಾಗ ತನ್ನ ಸ್ವರೂಪವಾದ ಸತ್ತಿನಲ್ಲಿಯೇ ಅವನು ಲಯವಾಗಿರುತ್ತಾನೆ ಹೇಗೆ ದಾರದಿಂದ ಕಟ್ಟಿರುವ ಹಕ್ಕಿಯು ಅತ್ತಿತ್ತ ಹಾರಾಡಿ ಮತ್ತೆಲ್ಲಿಯೂ ಆಶ್ರಯವು ಸಿಕ್ಕದೆ ತನ್ನನ್ನು ಕಟ್ಟಿಹಾಕಿರುವ ಸ್ಥಲಕ್ಕೇ ಬರುವದೋ ಹಾಗೆಯೇ ಈ ಮನಉಪಾಧಿಕನಾದ ಜೀವನು ಸುಷುಪ್ತಿಯಲ್ಲಿ ಪರಮಾತ್ಮನಲ್ಲಿಯೇ ಸೇರಿಕೊಳ್ಳುತ್ತಾನೆ.

೩–೪. ಇದರಂತೆ ಅಶನಾಯಾ (ಹಸಿವು) ಎಂಬ ಶಬ್ದವು ಅಪ್ಪಿಗೆ ಹೆಸರು; ಏಕೆಂದರೆ ಅದು ಅಶಿತವನ್ನು (ಉಂಡದ್ದನ್ನು) ತಗೆದುಕೊಂಡು ಹೋಗುತ್ತದೆ. ಈ ಅಪ್ಪಿನ ಸಹಾಯದಿಂದಾಗಿರುವ ಶರೀರವೆಂಬ ಕಾರ್ಯವು ಅನ್ನದಿಂದ ಉಂಟಾಗಿರುತ್ತದೆ, ಅನ್ನವು ಅಪ್ಪಿನಿಂದ, ಅಪ್ಪು ತೇಜಸ್ಸಿನಿಂದ, ತೇಜಸ್ಸು ಸತ್ತಿನಿಂದ, ಆಗಿರುವದು. ಈ ಪ್ರಜೆಗಳಿಗೆಲ್ಲ ಸತ್ತೇ ಮೂಲವು, ಸತ್ತೇ ಆಧಾರವು, ಸತ್ತಿನಕಡೆಗೇ ಇವೆಲ್ಲವೂ ತೆರಳುವವು.

೫–೬. ಇನ್ನು ಉದನ್ಯಾ (ಬಾಯಾರಿಕೆ) ಎಂಬ ಮಾತೂ ಹೀಗೆಯೇ ತೇಜಸ್ಸಿಗೆ ಸೇರಿದ್ದು. ಕುಡಿದದ್ದನ್ನು ತೇಜಸ್ಸೇ ಒಣಗಿಸಿ ಅತ್ತ ಒಯ್ಯುವದು. ಅನ್ನದಿಂದ ಹೇಗೆ ಈ ಶರೀರವೆಂಬ ಕಾರ್ಯವುಂಟಾಗಿರುವದೋ ಅಪ್ಪಿನಿಂದಲೂ ಹಾಗೆಯೇ ಉಂಟಾಗಿರುತ್ತದೆ, ಆದ್ದರಿಂದ ಅಪ್ಪೆಂಬ ಕಾರ್ಯದಿಂದ ತೇಜಸ್ಸನ್ನೂ ತೇಜಸ್ಸಿನಿಂದ ಸತ್ತನ್ನೂ ಕಾರಣವೆಂದು ತಿಳಿದುಕೊ. ಈ ಪ್ರಜೆಗಳೆಲ್ಲ ಸತ್ತಿನಿಂದಲೇ ಹುಟ್ಟಿ, ಅದರಲ್ಲಿಯೇ ಇದ್ದು, ಅದರಲ್ಲಿಯೇ ಹೋಗಿ ಸೇರುತ್ತಿರುವವು.

೬–೭. ಈ ಪುರುಷನಲ್ಲಿ ಈ ಮೂರು ದೇವತೆಗಳೂ ಸೇರಿ ತ್ರಿವೃತ್ಕರಣವಾಗುವ ಬಗೆಯನ್ನು ಆಗಲೇ ಹೇಳಿರುವೆನಷ್ಟೆ. ಈ ಪುರುಷನು ಸಾಯುವಾಗ ವಾಕ್ಕು ಮನಸ್ಸಿನಲ್ಲಿಯೂ ಮನಸ್ಸು ಪ್ರಾಣದಲ್ಲಿಯೂ ಪ್ರಾಣವು ತೇಜಸ್ಸಿನಲ್ಲಿಯೂ ತೇಜಸ್ಸು ಸತ್ತೆಂಬ ಪರದೇವತೆಯಲ್ಲಿ

ಯೂ ಸೇರಿಕೊಳ್ಳುವವು. ಸುಷುಪ್ತಿಯಲ್ಲಿಯೂ ಮರಣದಲ್ಲಿಯೂ ಯಾವ ಈ ಸತ್ತೆಂಬ ಪರಮಾತ್ಮನಲ್ಲಿ ಜೀವನು ಸೇರಿಕೊಳ್ಳುವನೋ ಆ ಸತ್ತೇ ಜಗತ್ತಿಗೆಲ್ಲ ಆತ್ಮನು, ಅದೇ ಸತ್ಯವು, ಅವೇ ಆತ್ಮನು. ಶ್ವೇತಕೇತುವೆ, ಅದೇ ನೀನು– ಎಂದು ತಂದೆಯು ಬೋಧಿಸಿದನು.

ಆಗ ಶ್ವೇತಕೇತುವು ಸುಷುಪ್ತಿಯಲ್ಲಿ ಜೀವರು ಈ ಸತ್ತಿನಲ್ಲಿ ಸೇರಿದರೂ ಹಾಗೆ ಸೇರಿಕೊಳ್ಳುತ್ತೇವೆಂದು ಅರಿತುಕೊಳ್ಳದೆ ಇರುವವರಲ್ಲ! ಇದನ್ನು ದೃಷ್ಟಾಂತದಿಂದ ಸ್ಪಷ್ಟಪಡಿಸಬೇಕು– ಎಂದು ಕೇಳಿಕೊಂಡನು. ತಂದೆಯು ಹಾಗೇ ಆಗಲಿ ಎಂದು ಹೀಗೆಂದನು :

## ಒಂಬತ್ತನೆಯ ಖಂಡ

೧–೩ ಜೇನುಹುಳುಗಳು ಬೇರೆಬೇರೆ ಕಡೆಯಿಂದ ಗಿಡಗಳ ರಸವನ್ನು ತಂದು ಒಟ್ಟುಗೂಡಿಸಿ ಒಂದು ರಸವನ್ನಾಗಿ ಮಾಡುತ್ತವೆ ಅಲ್ಲಿ ಎಲ್ಲವೂ ಸೇರಿರುವಾಗ ಹೇಗೆ, ಸಿಹಿ, ಹುಳಿ– ಮುಂತಾದ ಬಗೆಬಗೆಯ ರಸಗಳು ತಮ್ಮ ವಿಶೇಷಸ್ವರೂಪದಿಂದ ಗೊತ್ತಾಗುವಂತೆ ಇರುವದಿಲ್ಲವೋ ಹಾಗೆಯೇ ಈ ಜೀವರುಗಳು ಸುಷುಪ್ತಿಯಲ್ಲಿ ಸದ್ರೂಪನಾದ ಪರಮಾತ್ಮನಲ್ಲಿ ಒಂದಾಗಿರುವಲ್ಲಿ 'ನಾವು ಸತ್ತಿನಲ್ಲಿ ಸೇರಿರುತ್ತೇವೆ' ಎಂಬ ಅರಿವು ಅವರಿಗಿರುವದಿಲ್ಲ ಅವರು ಹುಲಿ, ಸಿಂಹ– ಮುಂತಾದ ಯಾವಯಾವ ವಾಸನೆಯಿಂದೊಡಗೂಡಿ ಸತ್ತಿನಲ್ಲಿ ಸೇರಿರುತ್ತಾರೋ ಆಯಾ ಶರೀರವನ್ನೇ ಪಡೆದುಕೊಳ್ಳುತ್ತಾರೆ.

೪. ಹೀಗೆ ಯಾವ ಸದ್ಬ್ರಹ್ಮದಲ್ಲಿ ಎಲ್ಲರೂ ಸುಷುಪ್ತಿಯಲ್ಲಿ ಒಂದಾಗಿರುವರೋ ಅದೇ ಎಲ್ಲಕ್ಕೂ ಆತ್ಮವು, ಅದೇ ಸತ್ಯವು, ಅದೇ ನೀನು– ಎಂದು ತಂದೆ ಹೇಳಲು ಸತ್ತಿನಿಂದ ಬಂದ ಮೇಲೆ ಎಚ್ಚರವಲ್ಲಾದರೂ 'ಸತ್ತಿನಿಂದ ನಾನು ಬಂದೆನು' ಎಂದೇಕೆ ತಿಳಿಯುವದಿಲ್ಲ ?– ಎಂದು ಶ್ವೇತಕೇತು ಕೇಳಿದನು ತಂದೆ ಹೇಳುತ್ತಾನೆ

## ಹತ್ತನೆಯ ಖಂಡ

೧–೩. ಗಂಗಾದಿನದಿಗಳು ಬೇರೆಬೇರೆ ದಿಕ್ಕಿಗೆ ಹರಿದು ಸಮುದ್ರದಲ್ಲಿ ಒಂದಾಗುತ್ತವೆ. ಆ ಸಮುದ್ರದಿಂದ ಮತ್ತೆ ಮೋಡಗಳಾಗಿ ಮೇಲಕ್ಕೇರಿ ಮಳೆಗರೆದು ಇನ್ನೊಂದು ಸಲ ನದಿಯಾಗಿ ಹರಿಯುವವು ಆ ನದಿಗಳು ಗಂಗೆ, ಸಿಂಧು– ಮುಂತಾದ ವಿಶೇಷರೂಪದಿಂದ ಸಮುದ್ರದಲ್ಲಿ ವಿವಿಕ್ತವಾಗಿರುವದಿಲ್ಲ, ಮತ್ತೆ ಬಂದಮೇಲೆ ಸಮುದ್ರದಿಂದ ಮತ್ತೆ ಬಂದ ನದಿಯಿದು ಎಂದೂ ಗೊತ್ತಾಗುವದಿಲ್ಲ. 'ಸತ್ತನ್ನು ಸೇರಿ ಮತ್ತೆ ಹೊರಕ್ಕೆ ಬಂದ ಜೀವರೂ ಹೀಗೆಯೇ ಸತ್ತಿನಿಂದ ಬಂದಿದೇವೆ ಎಂಬುದನ್ನು ತಿಳಿದುಕೊಳ್ಳದೆ ಇರುವವು. ಯಾವ ಸತ್ತಿನಿಂದ ಜೀವರೆಲ್ಲರೂ ಹೀಗೆ ಮತ್ತೆ ಎಚ್ಚರುವರೋ ಅದೇ ನೀನು.

ಹೀಗೆನ್ನಲು ಸತ್ತಿನಲ್ಲಿ ಪ್ರವಿಷ್ಟರಾದ ಜೀವರು ಅತ್ತಿ, ನೊರೆ, ಗುಳ್ಳೆ– ಮುಂತಾದವು ನೀರಿನಲ್ಲಿ ಸೇರಿಕೊಂಡಾಗ ನಷ್ಟವಾಗುವಂತೆ ಏತಕ್ಕೆ ನಾಶವಾಗುವದಿಲ್ಲ ?– ಎಂದು ಶಂಕಿಸಿದನು. ಅದಕ್ಕೆ ತಂದೆ ಹೇಳುತ್ತಾನೆ :

## ಹನ್ನೊಂದನೆಯ ಖಂಡ

ಒಂದು ದೊಡ್ಡ ಮರದ ಯಾವ ಭಾಗವನ್ನು ಕೊಡಲಿ ಮುಂತಾದದ್ದರಿಂದ ಹೊಡೆದರೂ ಅದರ ರಸವು ಸ್ರವಿಸುವದು. ಆ ಮರದಲ್ಲೆಲ್ಲ ಮರದ ಜೀವನು ವ್ಯಾಪಿಸಿಕೊಂಡಿರುತ್ತಾನೆ.

ಆ ಜೀವನು ಯಾವಯಾವ ಕೊಂಬೆಯನ್ನು ಬಿಡುತ್ತಾನೋ ಅದು ಒಣಗಿಹೋಗುತ್ತದೆ, ಆದರೆ ಜೀವನು ಮರದ ಮಿಕ್ಕ ಭಾಗದಲ್ಲಿ ವ್ಯಾಪಿಸಿಕೊಂಡಿರುತ್ತಾನೆ ಇದರಂತೆ ಜೀವನು ಬಿಟ್ಟ ಶರೀರವು ಸಾಯುವದೇ ಹೊರತು ಜೀವನು ಸಾಯುವದಿಲ್ಲ. ಹೀಗೆ ಜೀವರೆಲ್ಲರೂ ಹೋಗಿ ಸೇರಿಕೊಳ್ಳುವ ಸದ್ಬ್ರಹ್ಮವೇ ನೀನು.

ಈಗ ಶ್ವೇತಕೇತುವು ಅತ್ಯಂತಸೂಕ್ಷ್ಮವಾದ ಸದ್ಬ್ರಹ್ಮದಿಂದ ಅತ್ಯಂತಸ್ಥೂಲವಾದ ನಾಮರೂಪಗಳ ಜಗತ್ತು ಹೇಗೆ ಉಂಟಾಗುತ್ತದೆ? ಎಂದು ಕೇಳಲು ಅವಕ್ಕೆ ತಂದೆ ಹೀಗೆಂದನು

## ಹನ್ನೆರಡನೆಯ ಖಂಡ

೧-೩ ಆಲದಹಣ್ಣಿನಲ್ಲಿರುವ ಬೀಜವನ್ನು ಒಡೆದು ನೋಡಿದರ ಅದರಲ್ಲಿ ಮತ್ತೇನೂ ಕಾಣಿಸುವದಿಲ್ಲ ಆದರೆ ಆ ಸೂಕ್ಷ್ಮಾಂಶದಿಂದಲೇ ದೊಡ್ಡದಾದ ಆಲದಮರವು ಹುಟ್ಟಿ ಬೆಳೆದುಕೊಂಡಿರುವದು. ಇದರಂತೆ ಅಣುವಾದ ಸದಾತ್ಮನಿಂದ ಜಗತ್ತು ಹುಟ್ಟಿರುವದು ಆ ಸದ್ಬ್ರಹ್ಮವೇ ನೀನು

"ಜಗತ್ತಿಗೆ ಮೂಲವಾಗಿ ಈ ಸತ್ತು ಏತಕ್ಕೆ ತಿಳಿದುಬರುತ್ತಿಲ್ಲ" ಎಂದು ಶ್ವೇತಕೇತುವು ಕೇಳಲು ಅವಕ್ಕೆ ತಂದೆ ಹೀಗೆಂದು ಉತ್ತರವಿತ್ತನು

## ಹದಿಮೂರನೆಯ ಹದಿನಾಲ್ಕನೆಯ ಖಂಡಗಳು

೧೩ ೧ರಿಂದ ೩ ಉಪ್ಪಿನ ಹರಳನ್ನು ನೀರಿನಲ್ಲಿ ಹಾಕಿದರೆ ಕರಗಿಹೋಗುವದು ಆಗ ಅದನ್ನು ಕೈಯಿಂದ ತೆಗೆಯಲು ಆಗುವದಿಲ್ಲ. ಆದರೂ ಆ ನೀರನ್ನು ಸವಿದುನೋಡಿದರೆ ಎಲ್ಲಿ ಯೂ ಉಪ್ಪೇ ಆಗಿರುತ್ತದೆ. ಇದರಂತೆ ಜಗನ್ಮೂಲವಾದ ಸತ್ತನ್ನು ಸಾಮಾನ್ಯಸಾಧನದ ಮೂಲಕ ತಿಳಿಯುವದಕ್ಕೆ ಆಗದೆ ಇದ್ದರೂ ಉಪಾಯಾಂತರದಿಂದ ತಿಳಿದುಕೊಳ್ಳಬಹುದು

೧೪ ೧ರಿಂದ ೩ ಹೇಗೆಂದರೆ ಒಬ್ಬ ಗಂಧಾರದೇಶದ ಪುರುಷನನ್ನು ಕಳ್ಳರು ಕಣ್ಣುಕಟ್ಟಿ ತಂದು ನಿರ್ಜನವಾದ ಕಾಡಿನಲ್ಲಿ ಬಿಟ್ಟುಬಿಟ್ಟರು. ಅವನು ಕೂಗಿಕೊಳ್ಳುತ್ತಾ ಅಲ್ಲಿ ಅತ್ತಿತ್ತ ತಿರುಗಾಡುತ್ತಾ ಜನರ ಸಹಾಯವನ್ನು ಬೇಡಿಕೊಳ್ಳುತ್ತಿದ್ದನು. ಅಲ್ಲಿಗೆ ಬಂದಿದ್ದ ದಾರಿಹೋಕ ನೊಬ್ಬನು ಕರುಣೆಯಿಂದ ಅವನ ಕಣ್ಣುಕಟ್ಟನ್ನು ಬಿಚ್ಚಿ "ಗಂಧಾರದೇಶವು ಈ ದಿಕ್ಕಿಗೆ ಇದೆ, ಈ ಕಡೆಗೆ ಹೋಗು" ಎಂದು ತಿಳಿಸಲು ಆತನು ವಿವೇಕಿಯಾಗಿದ್ದರಿಂದ ಜನರಲ್ಲಿ ದಾರಿಯನ್ನು ಕೇಳುತ್ತಾ ಊರಿಂದೂರಿಗೆ ಹೋಗಿ ಕೊನೆಗೆ ಗಂಧಾರದೇಶವನ್ನೇ ಸೇರಿಕೊಂಡನು ಹೀಗೆ ಯೇ ಆತ್ಮನನ್ನು ಅರಿಯದವನು ಆಚಾರ್ಯನ ಉಪದೇಶವೆಂಬ ಉಪಾಯದಿಂದ ಆತ್ಮನನ್ನು ಅರಿತುಕೊಳ್ಳುವನು. ಪ್ರಾರಬ್ಧಕರ್ಮವು ಮುಗಿಯುತ್ತಲೂ ಅವನು ಸದ್ಬ್ರಹ್ಮದಲ್ಲಿಯೇ ಸೇರಿಕೊಂಡು ಮುಕ್ತನಾಗಿಬಿಡುವನು. ಆ ಸದ್ಬ್ರಹ್ಮವೇ ನೀನು.

ಹೀಗೆನ್ನಲು ಶ್ವೇತಕೇತುವು "ಜ್ಞಾನಿಯು ಯಾವ ಕ್ರಮದಿಂದ ಸದ್ಬ್ರಹ್ಮವನ್ನು ಸೇರಿ ಕೊಳ್ಳುತ್ತಾನೆ" ಎಂದು ಕೇಳಿದನು. ತಂದೆಯು ಹೀಗೆಂದು ಉತ್ತರವಿತ್ತನು .

## ಹದಿನೈದನೆಯ ಖಂಡ

೧-೩ ಜ್ವರಾದಿಗಳಿಂದ ನರಳುತ್ತಾ ಸಾಯಲಾಗಿರುವವನ ಜ್ಞಾತಿಗಳು ಹತ್ತಿರ ಬಂದು "ನಾನು ಯಾರು, ಹೇಳು" ಎಂದು ಕೇಳುತ್ತಿರುವರು. ಕೊನೆಗೆ ಅವನ ವಾಕ್ಕು ಮನಸ್ಸಿನಲ್ಲಿಯೂ

ಮನಸ್ಸು ಪ್ರಾಣವಲ್ಲಿಯೂ ಪ್ರಾಣವು ತೇಜಸ್ಸಿನಲ್ಲಿಯೂ ತೇಜಸ್ಸು ಪರದೇವತೆಯಾದ ಸದ್ಬ್ರಹ್ಮದಲ್ಲಿಯೂ ಸೇರಿಕೊಳ್ಳುವದು ಆಗ ಅವನಿಗೆ ಬಾಹ್ಯಜ್ಞಾನವು ಇಲ್ಲವಾಗುವದು. ಆ ಸದ್ಬ್ರಹ್ಮವೇ ನೀನು.

ಹೀಗೆನ್ನಲು ಶ್ವೇತಕೇತುವು 'ಹೀಗೆ ಜ್ಞಾನಿಯೂ ಅಜ್ಞಾನಿಯೂ ಸದ್ಬ್ರಹ್ಮವನ್ನೇ ಸೇರುತ್ತಾರಾದರೆ ಜ್ಞಾನಿಯು ಮಾತ್ರ ಹಿಂದಕ್ಕೆ ಬರುವದಿಲ್ಲವೇಕೆ ?' ಎಂದು ಕೇಳಿದನು. ತಂದೆಯು ಈ ದೃಷ್ಟಾಂತವನ್ನು ಹೇಳಿದನು :

## ಹದಿನಾರನೆಯ ಖಂಡ

೧–೩. ಕಳವುಮಾಡಿರುವನೆಂಬ ಸಂಶಯಕ್ಕೆ ಈಡಾದ ಪುರುಷನನ್ನು ಕೈಗೆ ಬೇಡಿಹಾಕಿ ಕರೆತಂದು 'ನೀನು ಇಂಥವನ ಸ್ವತ್ತನ್ನು ಕದ್ದಿರುವೆಯ ?'– ಎಂದು ರಾಜಪುರುಷರು ಕೇಳುವಾಗ ಅವನು ಇಲ್ಲವೆನ್ನುತ್ತಾನೆ. ಪರೀಕ್ಷೆಯಿಂದ ನಿಜವನ್ನು ಕಂಡುಹಿಡಿಯುವದಕ್ಕಾಗಿ 'ಕಾದ ಕೊಡಲಿಯನ್ನು ಹಿಡಿದುಕೊ '' ಎಂದು ಅವರು ಕೇಳುತ್ತಾರೆ. ಆಗ ಅವನು 'ನಾನು ಕದ್ದಿಲ್ಲ' ಎಂದು ಸುಳ್ಳೇ ಹೇಳಿ ಮುಟ್ಟಿದರೆ ಅವನನ್ನು ಬೆಂಕಿ ಸುಡುತ್ತದೆ, ನಿಜವನ್ನೇ ಹೇಳಿದ್ದರೆ, ಸುಡುವದಿಲ್ಲ. ಇದರಂತೆ ಯಾವನು ಸತ್ಯವಾದ ಸದ್ಬ್ರಹ್ಮವನ್ನೇ ಅರಿತು ಅದರಲ್ಲಿ ಸೇರಿಕೊಳ್ಳುತ್ತಾನೋ ಅವನು ಸಂಸಾರಕ್ಕೆ ಮರಳಿ ಬರುವದಿಲ್ಲ.

ತಂದೆಯು ಜ್ಞಾನದಿಂದ ಸದ್ಬ್ರಹ್ಮವನ್ನು ಸೇರಿದವನಿಗೆ ಮುಕ್ತಿಯಾಗುವ ಪರಿಯನ್ನು ಹೀಗೆ ತಿಳಿಸಿಕೊಡಲು ಶ್ವೇತಕೇತುವು ಅದನ್ನು ಅರಿತುಕೊಂಡು ಕೃತಕೃತ್ಯನಾದನು.

---

# ಏಳನೆಯ ಅಧ್ಯಾಯ–ಒಂದನೆಯ ಖಂಡ

( ಭೂಮವಿದ್ಯೆ )

## ನಾರದನು ಸನತ್ಕುಮಾರನ ಬಳಿಗೆ ಶಿಷ್ಯನಾಗಿ ಬಂದದ್ದು

(ಉಪನಿಷತ್ತು)

**ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದ ಸ್ತಗ್ಂ ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮೀತಿ ಸ ಹೋವಾಚ ॥ ೧ ॥**

೧. 'ಭಗವಂತನು ಹೇಳಿಕೊಡಬೇಕು!' ಎಂದು ನಾರದನು ಸನತ್ಕುಮಾರನನ್ನು ಬಳಿಸಾರಿದನು. ಅವನನ್ನು ಕುರಿತು ಇಂತೆಂದನು: 'ಯಾವದನ್ನು ಅರಿತುಕೊಂಡಿರುವೆಯೋ ಅದ(ನ್ನು ತಿಳಿಸುವದ)ರಿಂದ ನನ್ನ ಬಳಿಗೆ ಬಾ; ಅದಕ್ಕಿಂತ ಮುಂದಕ್ಕೆ ಹೇಳಿಕೊಡುವೆನು.' ಅವನಿಂತೆಂದನು.

### ಏಳನೆಯ ಅಧ್ಯಾಯದ ಸಂಬಂಧ

(ಭಾಷ್ಯ)

೫೪೬. ಪರಮಾರ್ಥತತ್ತ್ವೋಪದೇಶಪ್ರಧಾನಪರಃ ಷಷ್ಠೋಽಧ್ಯಾಯಃ ಸದಾತ್ಮೈಕತ್ವನಿರ್ಣಯಪರತಯೈವ ಉಪಯುಕ್ತಃ । ನ ಸತೋಽರ್ವಾಗ್ವಿಕಾರ ಲಕ್ಷಣಾನಿ ತತ್ತ್ವಾನಿ ನಿರ್ದಿಷ್ಟಾನಿ ಇತ್ಯತಸ್ತಾನಿ ನಾಮಾದೀನಿ ಪ್ರಾಣಾನ್ತಾನಿ ಕ್ರಮೇಣ ನಿರ್ದಿಶ್ಯ ತದ್ದ್ವಾರೇಣಾಽಪಿ ಭೂಮಾಖ್ಯಂ ನಿರತಿಶಯಂ ತತ್ತ್ವಂ ನಿರ್ದೇಕ್ಷ್ಯಾಮಿ[1] ಶಾಖಾಚನ್ದ್ರನಿದರ್ಶನವದಿತೀಮಂ[2] ಸಪ್ತಮಂ ಪ್ರಪಾಠಕಮ್ ಆರಭತೇ । ಅನಿರ್ದಿಷ್ಟೇಷು ಹಿ ಸತೋಽರ್ವಾಕ್ತತ್ತ್ವೇಷು ಸನ್ಮಾತ್ರೇ ಚ ನಿರ್ದಿಷ್ಟೇ ಅನ್ಯದಪ್ಯವಿಜ್ಞಾತಂ ಸ್ಯಾತ್ ಇತ್ಯಾಶಙ್ಕಾ ಕಸ್ಯಚಿತ್ ಸ್ಯಾತ್ । ಸಾ ಮಾ ಭೂದಿತಿ ವಾ ತಾನಿ ನಿರ್ದಿದಿಕ್ಷತಿ। ಅಥವಾ ಸೋಪಾನಾರೋಹಣವತ್ ಸ್ಥೂಲಾ ದಾರಭ್ಯ ಸೂಕ್ಷ್ಮಂ ಸೂಕ್ಷ್ಮತರಂ ಚ ಬುದ್ಧಿವಿಷಯಂ ಜ್ಞಾಪಯಿತ್ವಾ ತದತಿ ರಿಕ್ತೇ ಸ್ವಾರಾಜ್ಯೇ ಅಭಿಷೇಕ್ಷ್ಯಾಮೀತಿ ನಾಮಾದೀನಿ ನಿರ್ದಿದಿಕ್ಷತಿ । ಅಥವಾ ನಾಮಾದ್ಯುತ್ತರೋತ್ತರವಿಶಿಷ್ಟಾನಿ ತತ್ತ್ವಾನಿ, ಅತಿತರಾಂ ಚ ತೇಷಾಮ್

---

1. ಇಲ್ಲಿ ಆ॥ ಪಾಠದಲ್ಲಿರುವ ಇತಿಯು ಬೇಕಿಲ್ಲವೆಂದು ಬಿಟ್ಟಿವೆ.
2. 'ದರ್ಶನವತ್' ಎಂದೂ ಪಾ॥

ಉತ್ಕೃಷ್ಟತಮಂ ಭೂಮಾಖ್ಯಂ ತತ್ತ್ವಮಿತಿ ತತ್ಸ್ತುತ್ಯರ್ಥಂ ನಾಮಾದೀನಾಂ ಕ್ರಮೇಣೋಪನ್ಯಾಸಃ ॥

(ಭಾಷ್ಯಾರ್ಥ)

ಪರಮಾರ್ಥತತ್ತ್ವವನ್ನು ಉಪದೇಶಮಾಡುವದರಲ್ಲಿಯೇ ಮುಖ್ಯವಾದ ತಾತ್ಪರ್ಯವಾಗಿರುವ[1] ಆರನೆಯ ಅಧ್ಯಾಯವು ಸದಾತ್ಮನೊಬ್ಬನೇ (ತತ್ತ್ವವೆಂದು) ನಿರ್ಣಯಿಸುವದರಲ್ಲಿಯೇ ವಿನಿಯೋಗವಾಗಿರುತ್ತದೆ. ಸತ್ತಿಗಿಂತ ಈಚೆಗಿರುವ ಕಾರ್ಯರೂಪವಾದ ತತ್ತ್ವಗಳನ್ನು (ಅಲ್ಲಿ) ಹೇಳಿರುವದಿಲ್ಲ. ಆದ್ದರಿಂದ ನಾಮವನ್ನು ಮೊದಲುಗೊಂಡು ಪ್ರಾಣದವರೆಗಿನ ಆ (ತತ್ತ್ವ)ಗಳನ್ನು ಕ್ರಮವಾಗಿ ತಿಳಿಸಿ ಅವುಗಳ ದ್ವಾರದಿಂದಲೂ **'ಭೂಮ'**ವೆಂಬ ಹೆಸರಿನ ನಿರತಿಶಯತತ್ತ್ವವನ್ನು ಶಾಖಾಚಂದ್ರನನ್ನು ತೋರಿಸಿಕೊಡುವಂತೆ ತಿಳಿಸಿಕೊಡೋಣವೆಂದು[2] ಈ ಏಳನೆಯ ಪ್ರಪಾಠಕವನ್ನು ಆರಂಭಿಸಿರುತ್ತದೆ ಏಕೆಂದರೆ ಸತ್ತಿಗಿಂತ ಈಚಿನ ತತ್ತ್ವಗಳನ್ನು ನಿರ್ದೇಶಮಾಡದೆ ಸತ್ತೊಂದನ್ನೇ ತಿಳಿಸಿದರೆ ಇನ್ನೂ ಯಾವದಾದರೊಂದು ತತ್ತ್ವವು ಅವಿಜ್ಞಾತವಾಗಿರಬಹುದು ಎಂದು ಯಾವನಿಗಾದರೂ ಶಂಕೆಯುಂಟಾಗಬಹುದಷ್ಟೆ ? ಅದು ಉಂಟಾಗದಿರಲಿ- ಎಂದು ಅವುಗಳನ್ನು ತಿಳಿಸುವದಕ್ಕೆ ಹೊರಟಿದೆ ಎಂದಾದರೂ (ಹೇಳಬಹುದು)[3] ಅಥವಾ ಸೋಪಾನವನ್ನು ಏರುವಂತೆ ಸ್ಥೂಲವನ್ನು ಮೊದಲುಮಾಡಿಕೊಂಡು ಸೂಕ್ಷ್ಮವೂ ಅದಕ್ಕಿಂತಲೂ ಸೂಕ್ಷ್ಮವೂ ಆದ ಬುದ್ಧಿವಿಷಯವನ್ನು ತಿಳಿಸಿಕೊಟ್ಟು ಅದಕ್ಕಿಂತ ಬೇರೆಯಾಗಿರುವ ಸ್ವಾರಾಜ್ಯದಲ್ಲಿ[4] ಅಭಿಷೇಕಮಾಡೋಣ ಎಂದು ನಾಮಾದಿಗಳನ್ನು ತಿಳಿಸಲು ಹೊರಟಿದೆ

1. ತತ್ತ್ವೋಪದೇಶಪ್ರಧಾನಃ, ಅಥವಾ ತತ್ತ್ವೋಪದೇಶಪರಃ- ಎಂದಿಷ್ಟೇ ಇದ್ದರೆ ಸಾಕು, 'ಪ್ರಧಾನಪರಃ' ಎಂದಿರಬೇಕಾದದ್ದಿಲ್ಲ ಎಂದು ತೋರುತ್ತದೆ. ಆರನೆಯ ಪ್ರಪಾಠಕಕ್ಕೆ ತತ್ತ್ವೋಪದೇಶವೇ ಪ್ರಧಾನವು, ಅಲ್ಲಿ ಸೃಷ್ಟಿ, ಪ್ರವೇಶ- ಮುಂತಾದವುಗಳನ್ನು ಹೇಳಿದ್ದರಲ್ಲಿ ತಾತ್ಪರ್ಯವಿಲ್ಲ, ಅವನ್ನು ಆತ್ಮೈಕತ್ವಕ್ಕೆ ಉಪಾಯವಾಗಿಯೇ ಹೇಳಿದೆ.

2. ಕೊಂಬೆಯಮೇಲೆ ಚಂದ್ರನಿದಾನೆ ಎಂದು ಕೊಂಬೆಯನ್ನು ನೆಪವಾಗಿ ಮಾಡಿಕೊಂಡು ಚಂದ್ರನನ್ನು ತೋರಿಸುವಂತೆ ನಾಮಾದಿತತ್ತ್ವಗಳನ್ನು ನೆಪಮಾಡಿಕೊಂಡೂ ಪರಮಾರ್ಥವನ್ನು ತೋರಿಸುವದಕ್ಕೆಂದು. ಹಿಂದೆ ಸತ್ತೆಂಬ ಹೆಸರಿನಿಂದ ಪರಮಾರ್ಥಸತ್ಯವಾದ ಬ್ರಹ್ಮವನ್ನು ಉಪದೇಶಿಸಿತ್ತು, ಈಗ ಭೂಮವೆಂಬ ಹೆಸರಿನಿಂದ ಎಲ್ಲಕ್ಕಿಂತಲೂ ಮಿಗಿಲಾದ ಬ್ರಹ್ಮವನ್ನು ಉಪದೇಶಿಸಿದೆ.

3. ನಾಮಾದಿತತ್ತ್ವಗಳನ್ನು ದ್ವಾರಮಾಡಿಕೊಂಡು ಪರಮಾರ್ಥತತ್ತ್ವವನ್ನು ತಿಳಿಸಿದೆ ಎಂದು ಮೊದಲನೆಯ ವ್ಯಾಖ್ಯಾನ; ಬ್ರಹ್ಮವನ್ನು ಅರಿತರೂ ನಾಮಾದಿಗಳನ್ನು ಅರಿತುಕೊಳ್ಳದೆ ಇರಬಹುದು ಎಂಬ ಶಂಕೆಯುಂಟಾಗದಿರಲಿ, ನಾಮಾದಿಗಳೂ ಬ್ರಹ್ಮದ ವಿಕಾರವೇ ಆದ್ದರಿಂದ ಅವನ್ನೂ ಬ್ರಹ್ಮಜ್ಞಾನದಿಂದಲೇ ಅರಿತಂತಾಗುವವು ಎಂದು ತಿಳಿಸೋಣ- ಎಂದು ಗ್ರಂಥವು ಹೊರಟಿದೆ- ಎಂಬುದು ಎರಡನೆಯ ವ್ಯಾಖ್ಯಾನ.

4. 'ಸ ಸ್ವರಾಡ್ಭವತಿ' (೭-೨೫-೨)ರ ಸೂಚನೆಯಿದು.

(ಎಂದಾದರೂ ಹೇಳಬಹುದು).[1] ಅಥವಾ ನಾಮಾದಿಗಳು ಒಂದಕ್ಕಿಂತ ಒಂದು ಹೆಚ್ಚಿನ ತತ್ತ್ವಗಳು, ಅವುಗಳೆಲ್ಲಕ್ಕಿಂತಲೂ ಉತ್ಕೃಷ್ಟವಾದದ್ದು ಭೂಮವೆಂಬ ತತ್ತ್ವವು ಎಂದು ಅದನ್ನು ಹೊಗಳುವದಕ್ಕಾಗಿ ನಾಮಾದಿಗಳನ್ನು ಕ್ರಮಕ್ರಮವಾಗಿ ತಿಳಿಸಿದೆ (ಎಂದೂ ಹೇಳಬಹುದು) [2]

## ನಾರದಸನತ್ಕುಮಾರರ ಕಥೆಯ ಸಂಬಂಧ

(ಭಾಷ್ಯ)

೫೪೭. ಆಖ್ಯಾಯಿಕಾ ತು ಪರವಿದ್ಯಾಸ್ತುತ್ಯರ್ಥಾ । ಕಥಮ್ ? ನಾರದೋ ದೇವರ್ಷಿಃ ಕೃತಕರ್ತವ್ಯಃ ಸರ್ವವಿದ್ಯೋಽಪಿ ಸನ್ ಅನಾತ್ಮಜ್ಞತ್ವಾತ್ ಶುಶೋಚೈವ । ಕಿಮು ವಕ್ತವ್ಯಮನ್ಯೋಽಲ್ಪವಿಜ್ಜಂತುರಕೃತಪುಣ್ಯಾತಿಶಯೋಽಕೃತಾರ್ಥ ಇತಿ । ಅಥವಾ ನಾನ್ಯದಾತ್ಮಜ್ಞಾನಾನ್ನಿರತಿಶಯಶ್ರೇಯಃಸಾಧನಮಸ್ತೀತ್ಯೇತತ್ಪ್ರದರ್ಶನಾರ್ಥಂ ಸನತ್ಕುಮಾರನಾರದಾಖ್ಯಾಯಿಕಾ ಆರಭ್ಯತೇ । ಯೇನ ಸರ್ವವಿಜ್ಞಾನಸಾಧನಶಕ್ತಿಸಂಪನ್ನಸ್ಯಾಪಿ ನಾರದಸ್ಯ ದೇವರ್ಷೇಃ ಶ್ರೇಯೋ ನ ಬಭೂವ. ಯೇನ ಉತ್ತಮಾಭಿಜನವಿದ್ಯಾವೃತ್ತಸಾಧನಶಕ್ತಿಸಂಪತ್ತಿನಿಮಿತ್ತಾಭಿಮಾನಂ ಹಿತ್ವಾ ಪ್ರಾಕೃತಪುರುಷವತ್ ಸನತ್ಕುಮಾರಮ್ ಉಪಸಸಾದ ಶ್ರೇಯಃಸಾಧನಪ್ರಾಪ್ತಯೇ, ಅತಃ ಪ್ರಖ್ಯಾಪಿತಂ ಭವತಿ ನಿರತಿಶಯಶ್ರೇಯಃಪ್ರಾಪ್ತಿಸಾಧನತ್ವಮಾತ್ಮವಿದ್ಯಾಯಾ ಇತಿ ॥

(ಭಾಷ್ಯಾರ್ಥ)

(ಇಲ್ಲಿರುವ) ಆಖ್ಯಾಯಿಕೆಯಾದರೋ ಪರ(ಬ್ರಹ್ಮ)ವಿದ್ಯೆಯನ್ನು ಹೊಗಳುವದಕ್ಕೆ (ಬಂದಿದೆ). ಹೇಗೆಂದರೆ, ನಾರದನು ದೇವರ್ಷಿಯೂ ಮಾಡತಕ್ಕದ್ದನ್ನೆಲ್ಲ ಮಾಡಿದವನೂ ಎಲ್ಲಾ ವಿದ್ಯೆಗಳನ್ನೂ ಬಲ್ಲವನೂ ಆದರೂ ಆತ್ಮನನ್ನರಿತುಕೊಳ್ಳದ್ದರಿಂದ ಶೋಕಪಡುತ್ತಲೇ ಇದ್ದನು , ಇನ್ನು ಅಲ್ಪಜ್ಞನಾಗಿ ಹೆಚ್ಚಿನ ಪುಣ್ಯವನ್ನು

---

1. ಹಿಂದಿನ ಪ್ರಪಾಠಕದಲ್ಲಿ ನೇರಾಗಿ ಬ್ರಹ್ಮವನ್ನೇ ತಿಳಿಸಿಕೊಟ್ಟಿತ್ತು , ಇಲ್ಲಿ ಕ್ರಮಕ್ರಮವಾಗಿ ನಾಮವಾಗಾದಿಗಳನ್ನು ತಿಳಿಸಿ ಪರಂಪರೆಯಿಂದ ಅದನ್ನು ತಿಳಿಸಿಕೊಟ್ಟಿದೆ– ಎಂದು ಅಭಿಪ್ರಾಯ.

2. ಬ್ರಹ್ಮವು ಎಲ್ಲಕ್ಕೂ ಮಿಗಿಲಾದದ್ದು ಎಂದು ತಿಳಿಸಿಕೊಡುವದಕ್ಕೆ ಈ ಕ್ರಮವನ್ನನುಸರಿಸಿದೆ ಎಂಬುದು ಈ ವ್ಯಾಖ್ಯಾನದ ಸಾರ. ಇಲ್ಲಿ ಹೇಳಿರುವ ಮೂರು ವ್ಯಾಖ್ಯಾನಗಳನ್ನೂ ಸ್ವೀಕರಿಸಬಹುದು ; ಏಕೆಂದರೆ ಇವು ಒಂದಕ್ಕೊಂದು ವಿರುದ್ಧವಲ್ಲ. ಸೋಪಾನಾರೋಹಣ ನ್ಯಾಯದ ವ್ಯಾಖ್ಯಾನವು ಅಧಮಾಧಿಕಾರಿಗೆ ನಾಮಾದಿಗಳನ್ನು ಕ್ರಮಕ್ರಮವಾಗಿ ಉಪಾಸನೆ ಮಾಡಿ ಕೊನೆಗೆ ಬ್ರಹ್ಮಭಾವವನ್ನು ಪಡೆಯಲಿ ಎಂದು ಹೇಳಿದ್ದೆಂದೂ ಶಾಖಾಚಂದ್ರನ್ಯಾಯದ ವ್ಯಾಖ್ಯಾನವು ಮಧ್ಯಮಾಧಿಕಾರಿಗೆ ಧ್ಯಾನಾರ್ಥವಾಗಿ ಅಥವಾ ಕ್ರಮಕ್ರಮವಾಗಿ ವಿಜ್ಞಾನಾರ್ಥವಾಗಿ ಹೇಳಿದ್ದೆಂದೂ ಟೀಕೆಯಲ್ಲಿದೆ ಉಪಾಸನೆಯನ್ನು ಅವಾಂತರತಾತ್ಪರ್ಯದಿಂದಲೂ ಜ್ಞಾನವನ್ನು ಪರಮತಾತ್ಪರ್ಯದಿಂದಲೂ ಹೇಳಿದೆ ಎಂದು ತಿಳಿಯಬೇಕು.

ಮಾಡದೆ ಇರುವ ಅಕೃತಕೃತ್ಯನಾದ ಜೀವನು ಶೋಕಿಸುವನೆಂಬುದನ್ನು ಹೇಳು ವದೇನಿದೆ ?- ಎಂದು (ಆತ್ಮವಿದ್ಯೆಯನ್ನು ಹೊಗಳಿದೆ) ಅಥವಾ ಆತ್ಮಜ್ಞಾನ ಕ್ಕಿಂತಲೂ ಹೆಚ್ಚಿನ ಶ್ರೇಯಃಸಾಧನವು ಮತ್ತೊಂದಿಲ್ಲ ಎಂಬುದನ್ನು ತಿಳಿಸಿಕೊಡು ವದಕ್ಕಾಗಿ ಸನತ್ಕುಮಾರನಾರದರ ಆಖ್ಯಾಯಿಕೆಯನ್ನು ಆರಂಭಿಸಿದೆ. (ಹೇಗೆಂದರೆ) ಎಲ್ಲಾ ಬಗೆಯ ಜ್ಞಾನಗಳೂ ಸಾಧನಗಳೂ ಶಕ್ತಿಯೂ ಇದ್ದವನಾದರೂ[1] ದೇವರ್ಷಿಯಾದ ನಾರದನಿಗೆ ಶ್ರೇಯಸ್ಸು[2] ಆಗಲಿಲ್ಲವಷ್ಟೆ? ಉತ್ತಮವಾದ ವಂಶ[3], ವಿದ್ಯೆ[4], ನಡತೆ, ಸಾಧನ[5], ಶಕ್ತಿ- ಇವುಗಳಿರುವವೆಂಬ ನಿಮಿತ್ತದ ಅಭಿಮಾನ ವನ್ನು ಬಿಟ್ಟು (ಆತನು) ಸಾಮಾನ್ಯಜನರಂತೆ ಶ್ರೇಯಃಸಾಧನವನ್ನು ಪಡೆದು ಕೊಳ್ಳುವದಕ್ಕಾಗಿ ಸನತ್ಕುಮಾರನನ್ನು ಬಳಿಸಾರಿದನಷ್ಟೆ ? ಇದರಿಂದ ಆತ್ಮವಿದ್ಯೆ ಯು ಶ್ರೇಯಃಪ್ರಾಪ್ತಿಗೆ ಎಲ್ಲಕ್ಕಿಂತಲೂ ಹೆಚ್ಚಿನ ಸಾಧನವೆಂದು ತಿಳಿಸಿಕೊಟ್ಟಂತೆ ಆಗಿರುತ್ತದೆ.

## ಸನತ್ಕುಮಾರನು ನಾರದನನ್ನು ಏನೇನು ತಿಳಿದುಕೊಂಡಿದೀಯೆ? -ಎಂದು ಪ್ರಶ್ನೆಮಾಡಿದ್ದು

(ಭಾಷ್ಯ)

೫೪೮ ಅಧೀಹಿ ಅಧೀಷ್ವ ಭಗವೋ ಭಗವನ್ ಇತಿ ಹ ಕಿಲ ಉಪ ಸಸಾದ। 'ಅಧೀಹಿ ಭಗವಃ' ಇತಿ ಮನ್ತ್ರಃ। ಸನತ್ಕುಮಾರಂ ಯೋಗೀಶ್ವರಂ ಬ್ರಹ್ಮಿಷ್ಠಂ ನಾರದ ಉಪಸನ್ನವಾನ್। ತಂ ನ್ಯಾಯತ ಉಪಸನ್ನಂ ಹ ಉವಾಚ। ಯತ್ ಆತ್ಮವಿಷಯೇ ಕಿಂಚಿದ್ ವೇತ್ಥ ತೇನ ತತ್ಪ್ರಖ್ಯಾಪನೇನ ಮಾಮುಪಸೀದ। ಇದಮಹಂ ಜಾನ ಇತಿ। ತತೋಽಹಂ ಭವತೋ ವಿಜ್ಞಾನಾತ್ ತೇ ತುಭ್ಯಮ್ ಊರ್ಧ್ವಂ ವಕ್ಷ್ಯಾಮಿ ಇತ್ಯುಕ್ತವತಿ ಸ ಹೋವಾಚ ನಾರದಃ ॥

(ಭಾಷ್ಯಾರ್ಥ)

'(ಭಗವಃ=ಭಗವನ್) ಭಗವಂತನೆ, (ಅಧೀಹಿ=ಅಧೀಷ್ವ) ಹೇಳಿಕೊಡ ಬೇಕು!' ಎಂದು- (ಮೂಲದಲ್ಲಿರುವ) 'ಅಧೀಹಿ ಭಗವಃ' ಎಂಬುದು ಮಂತ್ರವು[6]

1. ಯಾವ ಫಲವನ್ನು ಪಡೆಯಬೇಕೋ ಅದರ ತಿಳಿವಳಿಕೆಯೂ, ಅದನ್ನು ಪಡೆಯುವ ಶಕ್ತಿಯೂ, ಅದಕ್ಕೆ ಬೇಕಾದ ಸಾಧನಗಳೂ ಇರಬೇಕು. ಮಿಕ್ಕ ಎಲ್ಲಾ ಫಲಗಳ ಪ್ರಾಪ್ತಿಗೆ ಬೇಕಾದ ಜ್ಞಾನಾದಿಗಳು ನಾರದನಲ್ಲಿದ್ದವು. 2. ಮೋಕ್ಷವು.

3. ಬ್ರಹ್ಮನ ಮಾನಸಪುತ್ರನಾದ್ದರಿಂದ ಉತ್ತಮವಂಶವಿತ್ತು

4. ಮುಂದಿನ ಕಂಡಿಕೆಯಲ್ಲಿ ಅವನ ವಿದ್ಯಾಸಂಪತ್ತನ್ನು ವಿವರಿಸಿದೆ.

5. ಧರ್ಮಾಚರಣೆಯೇ ಮುಂತಾದ ಸಾಧನಗಳಿದ್ದವು.

6. ಶಿಷ್ಯನಾಗಿ ಬಂದವನು ಹೇಳತಕ್ಕ ಮಂತ್ರವು, ತೈ. ೩-೧ರಲ್ಲಿ 'ಅಧೀಹಿ ಭಗವೋ ಬ್ರಹ್ಮ' ಎಂಬ ಮಂತ್ರವನ್ನು ಹೇಳಿದೆ

-ಯೋಗೀಶ್ವರನೂ ಬ್ರಹ್ಮಿಷ್ಠನೂ[1] ಆದ ಸನತ್ಕುಮಾರನನ್ನು ನಾರದನು (ಉಪಸ ಸಾದ=ಉಪಸನ್ನವಾನ್) ಬಳಿಸಾರಿದನು.[2] ನ್ಯಾಯಕ್ಕನುಗುಣವಾಗಿ[3] ಬಳಿಸಾರಿದ ಆ (ನಾರದನನ್ನು ಕುರಿತು) ಆತ್ಮವಿಷಯದಲ್ಲಿ 'ಯಾವದನ್ನು ಅರಿತುಕೊಂಡಿರುವೆ ಯೋ ಅದರಿಂದ ಇದನ್ನು ನಾನು ಬಲ್ಲೆನು ಎಂದು- ಅದನ್ನು ತಿಳಿಸುವದರ ಮೂಲಕ ನನ್ನ ಬಳಿಗೆ (ಶಿಷ್ಯನಾಗಿ) ಬಾ[4], ಅದಕ್ಕಿಂತ (ಆ) ನೀನು ತಿಳಿದಿರುವದಕ್ಕಿಂತ ಮುಂದಕ್ಕೆ ಹೇಳಿಕೊಡುವೆನು ಹೀಗೆನ್ನಲು ಆ ನಾರದನಿಂತೆಂದನು.

(ಉಪನಿಷತ್ತು)

**ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಗ್ಂ ಸಾಮವೇದ ಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯಗ್ಂ ರಾಶಿಂ ದೈವಂ ನಿಧಿಂ ವಾಕೋ ವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತ ವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಗ್ಂ ಸರ್ಪದೇವಜನವಿದ್ಯಾ ಮೇತದ್ ಭಗವೋಽಧ್ಯೇಮಿ ॥ ೨ ॥**

**ಸೋಽಹಂ ಭಗವೋ ಮನ್ತ್ರವಿದೇವಾಽಸ್ಮಿ ನಾಽಽತ್ಮವಿಚ್ಛ್ರುತಗ್ಂ ಹ್ಯೇವ ಮೇ ಭಗವದ್ದೃಶೇಭ್ಯ ಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತ್ವಿತಿ ತಗ್ಂ ಹೋವಾಚ ಯದ್ವೈ ಕಿಂ ಚೈತ ದಧ್ಯಗೀಷ್ಠಾ ನಾಮೈವೈತತ್ ॥ ೩ ॥**

೨-೩. 'ಭಗವಂತನೆ, ಋಗ್ವೇದವನ್ನು ಬಲ್ಲೆನು; ಯಜು ರ್ವೇದವನ್ನು, ಸಾಮವೇದವನ್ನು, ನಾಲ್ಕನೆಯದಾದ ಆಥರ್ವಣವನ್ನು, ಐದನೆಯದಾದ ಇತಿಹಾಸಪುರಾಣವನ್ನು, ವೇದಗಳ ವೇದವನ್ನು, ಪಿತ್ರ್ಯವನ್ನು, ರಾಶಿಯನ್ನು, ದೈವವನ್ನು, ನಿಧಿಯನ್ನು, ವಾಕೋವಾಕ್ಯ ವನ್ನು, ಏಕಾಯನವನ್ನು, ದೇವವಿದ್ಯೆಯನ್ನು, ಬ್ರಹ್ಮವಿದ್ಯೆಯನ್ನು, ಭೂತವಿದ್ಯೆಯನ್ನು, ಕ್ಷತ್ರವಿದ್ಯೆಯನ್ನು, ನಕ್ಷತ್ರವಿದ್ಯೆಯನ್ನು, ಸರ್ಪ

1. ಉತ್ಕೃಷ್ಟನಾದ ಬ್ರಹ್ಮಜ್ಞಾನಿಯೂ. ಬೃ. ೩-೧-೨ನ್ನು ನೋಡಿ.
2. ಉಪಸದನ, ಉಪಸರಣ, ಉಪಗಮನ- ಇವೆಲ್ಲ ವಿಧಿವತ್ತಾಗಿ ಶಿಷ್ಯನಾಗುವ ಕರ್ಮವನ್ನು ಹೇಳುವ ಶಬ್ದಗಳು.
3. ಕಾಣಿಕೆಯನ್ನು ತೆಗೆದುಕೊಂಡು ಬರುವದೇ ಮುಂತಾದ ಕ್ರಮಕ್ಕನುಸಾರವಾಗಿ.
4. ಶಿಷ್ಯನ ಯೋಗ್ಯತೆಯನ್ನು ತಿಳಿದು ಅವನಿಗೆ ತಿಳಿಯದೆ ಇದ್ದ ತತ್ತ್ವವನ್ನು ಹೇಳಿ ಕೊಡಬೇಕು ಎಂಬ ನ್ಯಾಯವನ್ನು ಈ ವಾಕ್ಯವು ಸೂಚಿಸುತ್ತದೆ.

ದೇವಜನವಿದ್ಯೆಯನ್ನು- ಇದನ್ನು ಭಗವಂತನೆ, ಬಲ್ಲೆನು. ಆ ನಾನು ಭಗವಂತನೆ, ಮಂತ್ರವಿದನೇ ಆಗಿರುವೆನು, ಆತ್ಮವಿದನಾಗಿಲ್ಲ. ಭಗವಂತನಂಥವರಿಂದ ಆತ್ಮನನ್ನು ಬಲ್ಲವನು ಶೋಕವನ್ನು ದಾಟುವನೆಂದು ನಾನು ಕೇಳಿರುತ್ತೇನೆ. ಭಗವಂತನೆ, ಆ ನಾನು ಶೋಕಿಸುತ್ತಿದೇನೆ; ಆ ನನ್ನನ್ನು ಭಗವಂತನು ಶೋಕದ ಪಾರವನ್ನು ದಾಟಿಸಬೇಕು!' ಎಂದನು. ಅವನನ್ನು ಕುರಿತು ಇಂತೆಂದನು: 'ಈ ಯಾವದನ್ನು ಬಲ್ಲೆಯೋ ಇದು ನಾಮವೇ.'

## ನಾರದನಿಗೆ ತಿಳಿದಿದ್ದ ವಿಷಯಗಳು

(ಭಾಷ್ಯ)

೫೪೯. ಋಗ್ವೇದಂ ಭಗವಃ ಅಧ್ಯೇಮಿ ಸ್ಮರಾಮಿ। ಯದ್ವೇತ್ಥ ಇತಿ ವಿಜ್ಞಾನಸ್ಯ ಪೃಷ್ಟತ್ವಾತ್। ತಥಾ ಯಜುರ್ವೇದಂ ಸಾಮವೇದಮ್ ಆಥರ್ವಣಂ ಚತುರ್ಥಂ ವೇದಮ್। ವೇದಶಬ್ದಸ್ಯ ಪ್ರಕೃತತ್ವಾತ್। ಇತಿಹಾಸಪುರಾಣಂ ಪಞ್ಚಮಂ ವೇದಮ್। ವೇದಾನಾಂ ಭಾರತಪಞ್ಚಮಾನಾಂ ವೇದಮ್। ವ್ಯಾಕರಣಮ್ ಇತ್ಯರ್ಥಃ। ವ್ಯಾಕರಣೇನ ಹಿ ಪದಾದಿವಿಭಾಗಶ ಋಗ್ವೇದಾದಯೋ ಜ್ಞಾಯನ್ತೇ। ಪಿತ್ರ್ಯಂ ಶ್ರಾದ್ಧಕಲ್ಪಮ್। ರಾಶಿಂ ಗಣಿತಮ್। ದೈವಮ್ ಉತ್ಪಾತಜ್ಞಾನಮ್। ನಿಧಿಂ ಮಹಾಕಾಲಾದಿನಿಧಿಶಾಸ್ತ್ರಮ್। ವಾಕೋವಾಕ್ಯಂ ತರ್ಕಶಾಸ್ತ್ರಮ್। ಏಕಾಯನಂ ನೀತಿಶಾಸ್ತ್ರಮ್। ದೇವವಿದ್ಯಾಂ ನಿರುಕ್ತಮ್। ಬ್ರಹ್ಮಣಃ ಋಗ್ಯಜುಃಸಾಮಾಖ್ಯಸ್ಯ ವಿದ್ಯಾ ಬ್ರಹ್ಮವಿದ್ಯಾ। ಶಿಕ್ಷಾಕಲ್ಪಚ್ಛನ್ದಶ್ಚಿತಯಃ[1]। ತಾಃ। ಭೂತವಿದ್ಯಾಂ ಭೂತತನ್ತ್ರಮ್। ಕ್ಷತ್ರವಿದ್ಯಾಂ ಧನುರ್ವೇದಮ್। ನಕ್ಷತ್ರವಿದ್ಯಾಂ ಜ್ಯೌತಿಷಮ್। ಸರ್ಪದೇವಜನವಿದ್ಯಾಮ್। ಸರ್ಪವಿದ್ಯಾಂ ಗಾರುಡಂ ದೇವಜನವಿದ್ಯಾಂ ಗನ್ಧಯುಕ್ತಿನೃತ್ಯಗೀತವಾದ್ಯಶಿಲ್ಪಾದಿವಿಜ್ಞಾನಾನಿ। ಏತತ್ ಸರ್ವಂ ಹೇ ಭಗವಃ ಅಧ್ಯೇಮಿ ॥

(ಭಾಷ್ಯಾರ್ಥ)

ಭಗವಂತನೆ, ಋಗ್ವೇದವನ್ನು ಬಲ್ಲೆನು. 'ಯಾವದನ್ನು ಬಲ್ಲೆಯೋ (ಅದನ್ನು ಹೇಳು)' ಎಂದು ಜ್ಞಾನವನ್ನು ಕೇಳಿರುವದರಿಂದ (ಇಲ್ಲಿ ಅಧ್ಯೇಮಿ

---

1. ಅಚ್ಚಿನ ಪುಸ್ತಕದಲ್ಲಿ 'ವಿದ್ಯಾಂ ಬ್ರಹ್ಮವಿದ್ಯಾಂ' ಎಂದು ದ್ವಿತೀಯೆಯೇ ಇದ್ದರೂ ಶಿಕ್ಷಾಕಲ್ಪಚ್ಛನ್ದಶ್ಚಿತಯಃ ಎಂದು ಪ್ರಥಮಾವಿಭಕ್ತಿಯಿಂದ ವ್ಯಾಖ್ಯಾನಮಾಡಿರುವದು ಹೊಂದುವದಕ್ಕಾಗಿ ಪ್ರಥಮಾವಿಭಕ್ತಿಗೆ ತಿರುಗಿಸಿಕೊಂಡು ಮುಂದಿರುವ 'ತಾಃ' ಎಂಬ ಪಾಠವನ್ನು ಅನುಸರಿಸಿ ದ್ವಿತೀಯಾವಿಭಕ್ತ್ಯಂತವಾಗಿ ಮಾಡಿಕೊಂಡಿದೆ.

ಎಂಬುದಕ್ಕೆ ಬಲ್ಲೆನು ಎಂದು ಅರ್ಥವೆಂದು ತಿಳಿಯಬೇಕು) ಮತ್ತು ಯಜು ರ್ವೇದವನ್ನು, ಸಾಮವೇದವನ್ನು, ಆಥರ್ವಣವೆಂಬ ನಾಲ್ಕನೆಯ ವೇದವನ್ನು (ಬಲ್ಲೆನು), ವೇದಶಬ್ದವು[1] ಪ್ರಕೃತವಾಗಿರುವದರಿಂದ (ಇಲ್ಲಿ ಆಥರ್ವಣವು ನಾಲ್ಕನೆಯ ವೇದವೆಂದು ತಿಳಿಯಬೇಕು) ಇತಿಹಾಸಪುರಾಣವೆಂಬ ಐದನೆಯ ವೇದವನ್ನು (ಬಲ್ಲೆನು) ಭಾರತವೇ ಐದನೆಯದಾಗಿರುವ[2] ವೇದಗಳ ವೇದವನ್ನು, ಎಂದರೆ ವ್ಯಾಕರಣವನ್ನು (ಬಲ್ಲೆನು) ಎಂದರ್ಥ. ವ್ಯಾಕರಣದಿಂದಲೇ ಅಲ್ಲವೆ, ಪದವೇ ಮುಂತಾದವನ್ನು ವಿಂಗಡಿಸಿ ಋಗ್ವೇದಾದಿಗಳನ್ನು ತಿಳಿದುಕೊಳ್ಳುತ್ತಾರೆ[3]? ಪಿತ್ರ್ಯವನ್ನು ಎಂದರೆ ಶ್ರಾದ್ಧಕಲ್ಪವನ್ನು, ರಾಶಿಯನ್ನು ಎಂದರೆ ಗಣಿತವನ್ನು, ದೈವವನ್ನು ಎಂದರೆ ಉತ್ಪಾತಗಳ ಜ್ಞಾನವನ್ನು ನಿಧಿಯನ್ನು ಎಂದರೆ **ಮಹಾಕಾಲವೇ** (?) ಮುಂತಾದ ನಿಧಿಶಾಸ್ತ್ರವನ್ನು, ವಾಕೋವಾಕ್ಯವನ್ನು ಎಂದರೆ ತರ್ಕ ಶಾಸ್ತ್ರವನ್ನು, ಏಕಾಯನವನ್ನು ಎಂದರೆ ನೀತಿಶಾಸ್ತ್ರವನ್ನು[4]; ದೇವವಿದ್ಯೆಯನ್ನು ಎಂದರೆ ನಿರುಕ್ತವನ್ನು, (ಬ್ರಹ್ಮವಿದ್ಯೆಯನ್ನು[5])· ಬ್ರಹ್ಮದ ಎಂದರೆ ಋಗ್ಯಜುಃ ಸಾಮಗಳೆಂಬ (ವೇದದ) ವಿದ್ಯೆಯು ಬ್ರಹ್ಮವಿದ್ಯೆಯು, ಶಿಕ್ಷಾ, ಕಲ್ಪ, ಛಂದೋ ಜ್ಞಾನಗಳು[6], ಅವುಗಳನ್ನು (ಎಂದರ್ಥ), ಭೂತವಿದ್ಯೆಯನ್ನು ಎಂದರೆ ಭೂತ ಗಳ ಶಾಸ್ತ್ರವನ್ನು, ಕ್ಷತ್ರವಿದ್ಯೆಯನ್ನು ಎಂದರೆ ಧನುರ್ವೇದವನ್ನು, ನಕ್ಷತ್ರವಿದ್ಯೆ ಯನ್ನು ಎಂದರೆ ಜ್ಯೌತಿಷವನ್ನು, ಸರ್ಪದೇವಜನವಿದ್ಯೆಯನ್ನು ಸರ್ಪವಿದ್ಯೆ ಯೆಂದರೆ ಗಾರುಡವಿದ್ಯೆ[7], ದೇವಜನವಿದ್ಯೆ ಎಂದರೆ ಪರಿಮಳದ್ರವ್ಯಗಳನ್ನು ಸೇರಿಸಿ ಮಾಡುವ ಕ್ರಮ ನೃತ್ಯ, ಗೀತವಾದ್ಯಶಿಲ್ಪಾದಿವಿಜ್ಞಾನಗಳು. ಇವೆಲ್ಲವನ್ನೂ ಎಲೈ ಭಗವಂತನೆ, ಬಲ್ಲೆನು

---

1. 'ಶಬ್ದ' ಎಂದು ಮೂಲದಲ್ಲಿದೆ. ಆದರೆ ಶಬ್ದವು ಪ್ರಕೃತವಾಗಿದೆಯೆನ್ನುವದಕ್ಕಿಂತ ವೇದವು ಪ್ರಕೃತವಾಗಿದೆ ಎನ್ನುವದೇ ಉತ್ತಮ. ಆದ್ದರಿಂದ 'ವೇದಸ್ಯ ಪ್ರಕೃತತ್ವಾತ್' ಎಂದಿಷ್ಟೇ ಇದ್ದರೆ ಸಾಕಾಗಿತ್ತೆಂದು ತೋರುತ್ತದೆ.

2. ಭಾರತವು ಐದನೆಯ ವೇದವೆಂದು ಇಲ್ಲಿ ಬರೆದಿರುವದನ್ನು ಲಕ್ಷಿಸಿ; ಶಬ್ದರಾಶಿ ಯನ್ನೆಲ್ಲ ವಿವರಿಸುವ ಸಂದರ್ಭದಲ್ಲಿ 'ಇತಿಹಾಸಃ ಪುರಾಣಮ್' ಎಂಬ ಮಾತುಗಳನ್ನು ಬ್ರಾಹ್ಮಣಪ್ರಕಾರವಾಚಕಗಳಾಗಿ ಬೃ. ಭಾ. ೨-೯-೧೦ (ಭಾ. ಭಾ. ೩೬೪)ರಲ್ಲಿ ವಿವರಿಸಿದೆ ಈ ವ್ಯಾಖ್ಯಾನಭೇದಕ್ಕೆ ಕಾರಣವೇನೆಂಬುದು ವಿಚಾರಣೀಯವಾಗಿದೆ.

3. ಆದ್ದರಿಂದ ವೇದಗಳ ವೇದವೆಂದರೆ ವ್ಯಾಕರಣವೇ.

4. ರಾಜನೀತಿ.

5. 'ಬ್ರಹ್ಮವಿದ್ಯಾಮ್' ಎಂಬ ಮಾತು ಮೂಲದಲ್ಲಿರಬೇಕಾಗಿತ್ತು.

6. ಬ್ರಹ್ಮವಿದ್ಯೆಯನ್ನು ಎಂದರೆ ಆತ್ಮವಿದ್ಯೆಯಲ್ಲ; ಅವನ್ನು ಕೇಳುವದಕ್ಕೇ ನಾರದನು ಬಂದಿರುತ್ತಾನೆ. ಆದ್ದರಿಂದ ಆದಕ್ಕೆ ಶಿಕ್ಷಾದಿಗಳು ಎಂಬರ್ಥವನ್ನು ಮಾಡಿದೆ.

7 ಹಾವಿನ ವಿಷವನ್ನು ತೆಗೆದುಹಾಕುವ ವಿದ್ಯೆ.

## ಆತ್ಮವಿದ್ಯೆಯನ್ನು ಹೇಳಿಕೊಡಬೇಕೆಂದು ಪ್ರಾರ್ಥಿಸಿದ್ದು

(ಭಾಷ್ಯ)

೫೫೦ ಸೋಽಹಂ ಭಗವಃ ಏತತ್ ಸರ್ವಂ ಜಾನನ್ನಪಿ ಮನ್ತ್ರವಿದೇವಾಸ್ಮಿ । ಶಬ್ದಾರ್ಥಮಾತ್ರವಿಜ್ಞಾನವಾನೇವಾಸ್ಮೀತ್ಯರ್ಥಃ । ಸರ್ವೋ ಹಿ ಶಬ್ದೋಽಭಿಧಾನಮಾತ್ರಮ್ । ಅಭಿಧಾನಂ ಚ ಸರ್ವಂ ಮನ್ತ್ರೇಷು ಅನ್ತರ್ಭವತಿ ಮನ್ತ್ರವಿದೇವಾಸ್ಮಿ । ಮನ್ತ್ರವಿತ್ ಕರ್ಮವಿತ್ ಇತ್ಯರ್ಥಃ ।"ಮನ್ತ್ರೇಷು ಕರ್ಮಾಣಿ" (೭-೪-೧) ಇತಿ ಹಿ ವಕ್ಷ್ಯತಿ । ನಾಽಽತ್ಮವಿತ್, ನಾಽಽತ್ಮಾನಂ ವೇದ್ಮಿ । ನನ್ವಾತ್ಮಾಽಪಿ ಮನ್ತ್ರೈಃ ಪ್ರಕಾಶ್ಯತ ಏವೇತಿ ಕಥಂ ಮನ್ತ್ರವಿಚ್ಚೇನ್ನಾಽಽತ್ಮವಿತ್ ? ನ । ಅಭಿಧಾನಾಭಿಧೇಯಭೇದಸ್ಯ ವಿಕಾರತ್ವಾತ್ । ನ ಚ ವಿಕಾರ ಆತ್ಮಾ ಇಷ್ಯತೇ । ನನ್ವಾತ್ಮಾಪಿ ಆತ್ಮಶಬ್ದೇನ ಅಭಿಧೀಯತೇ । ನ । "ಯತೋ ವಾಚೋ ನಿವರ್ತನ್ತೇ" (ತೈ. ೨-೯), "ಯತ್ರ ನಾನ್ಯತ್ ಪಶ್ಯತಿ" (೭-೨೪-೧) ಇತ್ಯಾದಿಶ್ರುತೇಃ । ಕಥಂ ತರ್ಹಿ "ಆತ್ಮೈವಾಽಧಸ್ತಾತ್" (೭-೨೫-೨), "ಸ ಆತ್ಮಾ" (೬-೧೬-೧) ಇತ್ಯಾದಿ ಶಬ್ದಾಃ ಆತ್ಮಾನಂ ಪ್ರತ್ಯಾಯಯನ್ತಿ ? ನೈಷ ದೋಷಃ । ದೇಹವತಿ ಪ್ರತ್ಯಗಾತ್ಮನಿ ಭೇದವಿಷಯೇ ಪ್ರಯುಜ್ಯಮಾನಃ ಶಬ್ದೋ ದೇಹಾದೀನಾಮಾತ್ಮತ್ವೇ ಪ್ರತ್ಯಾಖ್ಯಾಯಮಾನೇ ಯತ್ ಪರಿಶಿಷ್ಟಂ ತದವಾಚ್ಯಮಪಿ[1] ಪ್ರತ್ಯಾಯಯತಿ । ಯಥಾ ಸರಾಜಿಕಾಯಾಂ ದೃಶ್ಯಮಾನಾಯಾಂ ಸೇನಾಯಾಂ ಛತ್ರಧ್ವಜಪತಾಕಾದಿ ವ್ಯವಹಿತೇ ಅದೃಶ್ಯಮಾನೇಽಪಿ ರಾಜನಿ ಏಷ ರಾಜಾ ದೃಶ್ಯತ ಇತಿ ಭವತಿ ಶಬ್ದಪ್ರಯೋಗಃ । ತತ್ರ 'ಕೋಽಸೌ ರಾಜಾ ?' ಇತಿ ರಾಜವಿಶೇಷನಿರೂಪಣಾಯಾಂ ದೃಶ್ಯಮಾನೇತರಪ್ರತ್ಯಾಖ್ಯಾನೇ ಅನ್ಯಸ್ಮಿನ್ ಅದೃಶ್ಯಮಾನೇಽಪಿ ರಾಜನಿ ರಾಜಪ್ರತೀತಿರ್ಭವೇತ್ ತದ್ವತ್ । ತಸ್ಮಾತ್ ಸೋಽಹಂ ಮನ್ತ್ರವಿತ್ ಕರ್ಮವಿದೇವ ಅಸ್ಮಿ । ಕರ್ಮಕಾರ್ಯಂ ಚ ಸರ್ವಂ ವಿಕಾರ ಇತಿ ವಿಕಾರಜ್ಞ ಏವಾಽಸ್ಮಿ ನಾಽಽತ್ಮವಿತ್ । ನಾಽಽತ್ಮಪ್ರಕೃತಿಸ್ವರೂಪಜ್ಞ ಇತ್ಯರ್ಥಃ ॥ ಅತ ಏವೋಕ್ತಮ್ "ಆಚಾರ್ಯವಾನ್ ಪುರುಷೋ ವೇದ" (೬-೧೪-೨) ಇತಿ । "ಯತೋ ವಾಚೋ ನಿವರ್ತನ್ತೇ" (ತೈ. ೨-೯) ಇತ್ಯಾದಿಶ್ರುತಿಭ್ಯಶ್ಚ । ಶ್ರುತಮಾಗಮಜ್ಞಾನಮ್ ಅಸ್ತ್ಯೇವ ಹಿ ಯಸ್ಮಿನ್ ಮೇ ಮಮ ಭಗವದ್ದೃಶೇಭ್ಯಃ ಯುಷ್ಮತ್ಸದೃಶೇಭ್ಯಃ । ತರತಿ ಅತಿಕ್ರಾಮತಿ ಶೋಕಮ್ ಮನಸ್ತಾಪಮ್ ಅಕೃತಾರ್ಥಬುದ್ಧಿತಾಮ್ ಆತ್ಮವಿದಿತಿ । ಅತಃ ಸೋಽಹಮ್ ಅನಾತ್ಮವಿತ್ತ್ವಾದ್ ಹೇ ಭಗವಃ ಶೋಚಾಮಿ । ಅಕೃತಾರ್ಥಬುದ್ಧ್ಯಾ ಸಂತಪ್ಯೇ ಸರ್ವದಾ । ತಂ ಮಾ ಮಾಂ ಶೋಕಸ್ಯ ಶೋಕಸಾಗರಸ್ಯ ಪಾರಮ್ ಅನ್ತಂ ಭಗವಾನ್ ತಾರಯತು । ಆತ್ಮಜ್ಞಾನೋಡುಪೇನ ಕೃತಾರ್ಥಬುದ್ಧಿಮ್ ಆಪಾದಯತು । ಅಭಯಂ ಗಮಯತು ಇತ್ಯರ್ಥಃ ॥

---

1. 'ಸತ್' ಎಂಬ ಅಚ್ಚಿನ ಪಾಠವನ್ನು ತತ್ ಎಂದು ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಭಗವಂತನೆ, ಆ ನಾನು ಇದೆಲ್ಲವನ್ನೂ ಅರಿತಿರುವೆನಾದರೂ ಮಂತ್ರವಿದನೇ ಆಗಿರುವೆನು, ಶಬ್ದಾರ್ಥಮಾತ್ರವನ್ನು ಅರಿತುಕೊಂಡವನೇ ಆಗಿರುವೆನು ಎಂದರ್ಥ. **ಶಬ್ದವೆಲ್ಲ ಬರಿಯ ಹೆಸರಷ್ಟೆ? ಹೆಸರೆಲ್ಲವೂ ಮಂತ್ರಗಳಲ್ಲಿ ಅಡಕವಾಗಿರುತ್ತದೆ. ಮಂತ್ರವಿದನೇ ಆಗಿರುವೆನು ಎಂಬಲ್ಲಿ ಮಂತ್ರವಿದನು ಎಂದರೆ ಕರ್ಮವನ್ನು ಬಲ್ಲವನು ಎಂದರ್ಥ.** ''ಮಂತ್ರಗಳಲ್ಲಿ ಕರ್ಮಗಳು (ಒಂದಾಗಿರುತ್ತವೆ)'' (೭-೪-೧) ಎಂದಲ್ಲವೆ, ಮುಂದೆ ಹೇಳಿರುತ್ತಾನೆ[1]? (ಮಂತ್ರವಿದನೇ ಹೊರತು) ಆತ್ಮವಿದನಲ್ಲ, ಆತ್ಮನನ್ನು ಅರಿಯದೆ ಇರುವೆನು.

(ಆಕ್ಷೇಪ) —ಆತ್ಮನೂ ಮಂತ್ರಗಳಿಂದ ತಿಳಿಯಬರುತ್ತಲೇ ಇರುವನಲ್ಲ! ಹೀಗಿರುವಲ್ಲಿ ಮಂತ್ರವಿದನಾದರೆ ಆತ್ಮವಿದನಲ್ಲವೆಂಬುದು ಹೇಗೆ (ಸರಿ)?

(ಪರಿಹಾರ) :- ಹಾಗಲ್ಲ. ಏಕೆಂದರೆ ಅಭಿಧಾನ, ಅಭಿಧೇಯ – ಎಂಬ ಭೇದವು ವಿಕಾರವಾಗಿರುತ್ತದೆ. ಆದರೆ ಆತ್ಮನು ವಿಕಾರವೆಂದು (ಯಾರೂ) ಒಪ್ಪುವದಿಲ್ಲ[2]

(ಆಕ್ಷೇಪ) :- ಆತ್ಮನೂ ಆತ್ಮಶಬ್ದದಿಂದ ಹೇಳಲ್ಪಡುತ್ತಾನಲ್ಲವೆ[3]?

(ಪರಿಹಾರ) :- ಹಾಗಲ್ಲ, ಏಕೆಂದರೆ "ಯಾವದರಿಂದ ವಾಕ್ಕುಗಳು ಹಿಂತಿರುಗುತ್ತವೆಯೋ" (ತೈ ೨-೯). "ಎಲ್ಲಿ ಎರಡನೆಯದನ್ನು ಕಾಣುವದಿಲ್ಲವೋ." (೭-೨೪-೧) ಮುಂತಾಗಿ ಶ್ರುತಿಯಿದೆ[4].

(ಆಕ್ಷೇಪ) – ಹಾಗಾದರೆ "ಆತ್ಮನೇ ಕೆಳಗೆ" (೭-೨೫-೨) "ಅದೇ ಆತ್ಮನು" (೬-೧೬-೧)– ಇವೇ ಮುಂತಾದ ಶಬ್ದಗಳು ಆತ್ಮನನ್ನು ತಿಳಿಸಿಕೊಡುವದು ಹೇಗೆ?[5]

---

1. ಮಂತ್ರಗಳು ಕರ್ಮಗಳನ್ನು ತಿಳಿಸುವವಕ್ಕೇ ಬಂದಿಸುತ್ತವೆ ಎಂದರ್ಥ. ಇಲ್ಲಿಯವರೆಗೆ ಹೇಳಿದ್ದೆಲ್ಲವೂ 'ಅಪರವಿದ್ಯೆ' ಎಂದು ಮುಂಡಕ ೧-೧-೫ರಲ್ಲಿ ಹೇಳಿದ ವಿದ್ಯೆ.

2 ವಾಕ್ಕು ವಿಕಾರವನ್ನು ತಿಳಿಸುವ ಹೆಸರು, ಅದು ಸತ್ಯವಲ್ಲ –ಎಂದು (೬-೧-೪) ಶ್ರುತಿಯು ಹೇಳುತ್ತದೆ. ಆತ್ಮನು ಜಗತ್ಕಾರಣನಾದ್ದರಿಂದ ಅವನು ಪ್ರಕೃತಿಯು. ಆದ್ದರಿಂದ ಅವನು ಅಭಿಧೇಯನಲ್ಲ. ಆತ್ಮನು ಅಭಿಧಾನಾಭಿಧೇಯಗಳನ್ನು ಮೀರಿರುತ್ತಾನೆಂಬುದಕ್ಕೆ ಮಾಂ. ಭಾ ಅವತರಣಿಕೆ (ಭಾ. ಭಾ. ೧ರಿಂದ ೩)ನ್ನು ನೋಡಿ.

3. ಹೀಗಿರುವಲ್ಲಿ ವಿಕಾರವನ್ನು ಮಾತ್ರ ಶಬ್ದವು ಹೇಳುವವೆಂಬ ನಿರ್ಬಂಧವೇಕೆ?

4 ಯಾವ ಶಬ್ದಕ್ಕೂ ಆತ್ಮನು ವಿಷಯನಲ್ಲವೆಂದೂ ಅವನಲ್ಲಿ ಅಭಿಧಾನ, ಅಭಿಧೇಯ –ಎಂಬ ಭೇದವ್ಯವಹಾರವೂ ಇಲ್ಲವೆಂದೂ ಈ ಶ್ರುತಿಗಳು ಹೇಳುತ್ತವೆ ಎಂದು ಭಾವ.

5 ಆತ್ಮಶಬ್ದದಿಂದಲೂ ಆತ್ಮನು ತಿಳಿಯಬರುವದಿಲ್ಲವೆಂದರೆ ಆತ್ಮಶಬ್ದದಿಂದ ಅವನನ್ನು ತಿಳಿಸುವ ಶ್ರುತಿವಾಕ್ಯಗಳು ಅಪ್ರಮಾಣವಾಗುವವಲ್ಲ!– ಎಂದು ಶಂಕೆ.

(ಪರಿಹಾರ) :- ಇದೇನೂ ದೋಷವಲ್ಲ. ಭೇದವಿಷಯದಲ್ಲಿ[1] ದೇಹವುಳ್ಳ ಪ್ರತ್ಯಗಾತ್ಮನಲ್ಲಿ ಪ್ರಯುಕ್ತವಾಗುವ (ಆತ್ಮ)ಶಬ್ದವು ದೇಹಾದಿಗಳು ಆತ್ಮನಲ್ಲವೆಂದು ಅಲ್ಲಗಳೆದ ಬಳಿಕ ಯಾವದು ಉಳಿಯುವದೋ ಆ (ತತ್ತ್ವವು)[2] ಅವಾಚ್ಯವಾದರೂ (ಅದನ್ನು) ತಿಳಿಸಿಕೊಡುತ್ತದೆ.[3] ರಾಜಸಹಿತವಾದ ಸೇನೆಯು ಕಾಣಬರುತ್ತಿರುವಲ್ಲಿ ಛತ್ರಿ, ಬಾವುಟ, ಪತಾಕೆ - ಮುಂತಾದವುಗಳು ಮರೆಯಾಗಿರುವದರಿಂದ ರಾಜನು ಕಾಣಿಸದೆ ಇದ್ದರೂ 'ಇಗೋ, ರಾಜನು ಕಾಣಿಸುತ್ತಿದಾನೆ' ಎಂದು (ರಾಜ)ಶಬ್ದದ ಪ್ರಯೋಗವಾಗುವದೋ, ಆಗ 'ಈ ರಾಜನೆಂಬವನು ಯಾರು ?' ಎಂದು ರಾಜನನ್ನು ಗೊತ್ತಾಗಿ (ತಿಳಿಯಲು) ನೋಡುವಾಗ ಕಾಣಿಸುವ ಮಿಕ್ಕದ್ದೆಲ್ಲವನ್ನೂ ಅಲ್ಲಗಳೆದು ಬೇರೆಯವನಾದ (ಆ) ರಾಜನು ಕಾಣಿಸದಿದ್ದರೂ ರಾಜನೆಂಬ ಅರಿವು ಹೇಗೆ ಆಗುವದೋ ಹಾಗೆಯೇ (ಇದು).[4] ಆದ್ದರಿಂದ ಆ ನಾನು ಮಂತ್ರವಿದನೇ ಎಂದರೆ ಕರ್ಮವನ್ನು ಬಲ್ಲವನೇ ಆಗಿರುತ್ತೇನೆ, ಕರ್ಮದ ಕಾರ್ಯವೆಲ್ಲವೂ ವಿಕಾರವೇ ಆಗಿರುವದರಿಂದ ವಿಕಾರವನ್ನು ಬಲ್ಲವನೇ ಆಗಿರುತ್ತೇನೆ, ಆತ್ಮವಿದನಾಗಿಲ್ಲ ಆತ್ಮನೆಂಬ ಪ್ರಕೃತಿಯ ಸ್ವರೂಪವನ್ನು ಬಲ್ಲವನಾಗಿಲ್ಲ ಎಂದರ್ಥ. ಆದ್ದರಿಂದಲೇ "ಆಚಾರ್ಯನನ್ನುಳ್ಳ ಪುರುಷನೇ ಬಲ್ಲನು" (೬-೧೪-೨) ಎಂದು ಹೇಳಿದೆ "ಯಾವದರಿಂದ ವಾಕ್ಕುಗಳು ಹಿಂತಿರುಗುವವೋ" (ತೈ ೨-೯) ಮುಂತಾದ ಶ್ರುತಿಗಳಿಂದಲೂ (ಹೀಗೆಂದರಿಯಬೇಕು)[5]

(ಮೇ=ಮಮ) ನನಗೆ ಭಗವಂತನಂಥವರಿಂದ. ತಮ್ಮಂಥವರಿಂದ ಆತ್ಮವಿದನು ಶೋಕವನ್ನು, ಮನಸ್ಸಿನ ಸಂತಾಪವನ್ನು, (ತಾನು) ಕೃತಾರ್ಥನಲ್ಲವೆಂಬ ಬುದ್ಧಿಯನ್ನು ದಾಟುತ್ತಾನೆ, ಮೀರಿಹೋಗುತ್ತಾನೆ ಎಂಬ ಶ್ರುತವು ಎಂದರೆ

---

1. ಅವಿದ್ಯಾವಿಷಯದಲ್ಲಿ, ಅವಿದ್ಯಾದೃಷ್ಟಿಯಿಂದ ಎಂದರ್ಥ

2. 'ಯತ್ಪರಿಶಿಷ್ಟಂ ಸತ್' ಎಂಬ ಪಾಠಕ್ಕೆ ಯಾವದು ಉಳಿಯುವದೋ (ಆ) ಸತ್ತು -ಎಂದು ಅನುವಾದ. 'ಯತ್ಸನ್ಮಾತ್ರಂ ಪರಿಶಿಷ್ಟಂ ತತ್' ಎಂಬ ಟೀಕೆಗನುಸಾರವಾಗಿ ಯಾರೋ ಹೀಗೆ (ಭಾಷ್ಯವನ್ನು) ತಿದ್ದಿಕೊಂಡಿರಬೇಕೆಂದು ಕಾಣುತ್ತದೆ

3. ಲಕ್ಷಣೆಯಿಂದ ತಿಳಿಸುತ್ತದೆ, ವಾಚ್ಯವಾಗಿಯೇ ತಿಳಿಸುವದಿಲ್ಲ. ತೈ. ಭಾ. ವಲ್ಲಿ ಸತ್ಯಜ್ಞಾನಾದಿಶಬ್ದಗಳಿಗೆ ಆತ್ಮನು ಲಕ್ಷ್ಯನೇ ಹೊರತು ವಾಚ್ಯನಲ್ಲ (ಭಾ. ಭಾ. ೧೦೭) ಎಂದೂ ಹೇಳಿರುವದನ್ನು ಇದಕ್ಕೆ ಹೋಲಿಸಬೇಕು

4. ಅಲ್ಲಿ ರಾಜಶಬ್ದವು ರಾಜನನ್ನು ನೇರಾಗಿ ತೋರಿಸುವದಿಲ್ಲ, ಮಿಕ್ಕದ್ದೆಲ್ಲವನ್ನೂ ಅಲ್ಲಗಳೆದು ತಿಳಿಸುತ್ತದೆ ; ಆತ್ಮಶಬ್ದವೂ ಹಾಗೆಯೇ ಆತ್ಮನನ್ನು ತಿಳಿಸುತ್ತದೆ ಎಂದರ್ಥ.

5. ಆಚಾರ್ಯನಿಂದ ತಿಳಿದುಕೊಳ್ಳಬಹುದು, ವಾಕ್ಕುಗಳಿಗೆ ವಿಷಯವಲ್ಲ - ಎಂಬ ವಾಕ್ಯಗಳಿಗನುಸಾರವಾಗಿ ಆತ್ಮನು ಅವಿಷಯನೆಂಬುದನ್ನು ಗುರುವಾಕ್ಯದಿಂದ ಇತರವ್ಯಾವೃತ್ತಿಯಮೂಲಕವೇ ತಿಳಿದುಕೊಳ್ಳಬೇಕು ಎಂದರ್ಥ. ಮಂತ್ರವನ್ನು ತಿಳಿದುಕೊಳ್ಳುವದಲ್ಲದೆ ವೈರಾಗ್ಯದಿಂದ ಗುರುವನ್ನು ಬಳಿಸಂದು ಸೇವಿಸುವದು -ಮುಂತಾದವೂ ಅವಶ್ಯವೆಂದು ಹೇಳಿದಂತಾಯಿತು. ಮುಂ ಭಾ. ೧-೧-೫ (ಭಾ. ಭಾ. ೧೭)ನ್ನು ನೋಡಿ

ಆಗಮಜ್ಞಾನವು[1] ಇದ್ದೇ ಇದೆ (ಹಿ=ಯಸ್ಮಾತ್)ಯಷ್ಟೆ ಅದ್ದರಿಂದ ಆ ನಾನು ಆತ್ಮನನ್ನರಿಯದ್ದರಿಂದ, ಎಲೈ ಭಗವಂತನೆ, ಕೃತಾರ್ಥನಲ್ಲವೆಂಬ ಬುದ್ಧಿಯಿಂದ ಶೋಕಿಸುತ್ತಿರುವೆನು, ಯಾವಾಗಲೂ ಸಂತಾಪಡುತ್ತಿರುವೆನು. ಆ (ಮಾ=ಮಾಂ) ನನ್ನನ್ನು ಶೋಕದ ಶೋಕಸಾಗರದ ಪಾರವನ್ನು ಆಚೆಯ ದಡವನ್ನು ಭಗವಂತನಾದ (ನೀನು) ಆತ್ಮಜ್ಞಾನವೆಂಬ ದೋಣಿಯಿಂದ ದಾಟಿಸಬೇಕು, ಕೃತಾರ್ಥಬುದ್ಧಿಯನ್ನುಂಟುಮಾಡಬೇಕು, ಅಭಯವನ್ನು ಹೊಂದಿಸಬೇಕು ಎಂದರ್ಥ.

## ಸನತ್ಕುಮಾರನ ಉಪದೇಶ

(ಭಾಷ್ಯ)

೫೨೧ ತಮೇವಮುಕ್ತವನ್ತಂ ಹ ಉವಾಚ। ಯದ್ವೈ ಕಿಂ ಚ ಏತದ್ ಅಧ್ಯಗೀಷ್ಠಾ ಅಧೀತವಾನಸಿ। ಅಧ್ಯಯನೇನ ತದರ್ಥಜ್ಞಾನಮ್ ಉಪಲಕ್ಷ್ಯತೇ। ಜ್ಞಾತವಾನಸಿ ಇತ್ಯೇತತ್। ನಾಮೈವೈತತ್। "ವಾಚಾರಮ್ಭಣಂ ವಿಕಾರೋ ನಾಮಧೇಯಮ್" (೬-೧-೪) ಇತಿ ಶ್ರುತೇಃ॥

(ಭಾಷ್ಯಾರ್ಥ)

ಹೀಗೆಂದು ಹೇಳಲು ಅವನನ್ನು ಕುರಿತು (ಸನತ್ಕುಮಾರ)ನಿಂತೆಂದನು: ನೀನು ಏನೇನು (ಅಧ್ಯಗೀಷ್ಠಾಃ ಅಧೀತವಾನಸಿ) ಅಧ್ಯಯನಮಾಡಿರುವೆಯೋ-ಅಧ್ಯಯನ (ಎಂದು ಹೇಳಿದ್ದು) ಅದರರ್ಥದ ಜ್ಞಾನದ ಉಪಲಕ್ಷಣಕ್ಕಾಗಿ—ಅರಿತುಕೊಂಡಿರುವೆಯೋ ಎಂದರ್ಥ ಇದು ನಾಮವೇ. "ವಿಕಾರವೆಂಬುದು ವಾಕ್ಕಿನಿಂದಾದದ್ದು, ನಾಮಧೇಯವೇ" (೬-೧-೪) ಎಂಬ ಶ್ರುತಿಯಿಂದ (ಹೀಗೆಂದು ಗೊತ್ತಾಗುತ್ತದೆ).

## ನಾಮಬ್ರಹ್ಮ

(ಉಪನಿಷತ್ತು)

**ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದ ಆಥರ್ವಣಶ್ಚತುರ್ಥ ಇತಿಹಾಸಪುರಾಣಃ ಪಞ್ಚಮೋ ವೇದಾನಾಂ ವೇದಃ ಪಿತ್ರ್ಯೋ ರಾಶಿರ್ದೈವೋ ನಿಧಿರ್ವಾಕೋವಾಕ್ಯಮೇಕಾಯನಂ ದೇವವಿದ್ಯಾ ಬ್ರಹ್ಮವಿದ್ಯಾ ಭೂತವಿದ್ಯಾ ಕ್ಷತ್ರವಿದ್ಯಾ ನಕ್ಷತ್ರವಿದ್ಯಾ ಸರ್ಪದೇವಜನವಿದ್ಯಾ ನಾಮೈವೈತನ್ನಾಮೋಪಾಸ್ಸ್ವೇತಿ ॥೪॥**

---

1 ಬಲ್ಲವರ ಉಪದೇಶದಿಂದಾದ ಅರಿವು.

೪. ಋಗ್ವೇದವು ನಾಮವೇ ; ಯಜುರ್ವೇದ, ಸಾಮವೇದ, ನಾಲ್ಕನೆಯದಾದ ಆಥರ್ವಣ, ಐದನೆಯದಾದ ಇತಿಹಾಸಪುರಾಣ, ವೇದಗಳ ವೇದ, ಪಿತ್ರ್ಯ, ರಾಶಿ, ದೈವ, ನಿಧಿ, ವಾಕೋವಾಕ್ಯ, ಏಕಾಯನ, ದೇವವಿದ್ಯೆ, ಬ್ರಹ್ಮವಿದ್ಯೆ, ಭೂತವಿದ್ಯೆ, ಕ್ಷತ್ರವಿದ್ಯೆ, ನಕ್ಷತ್ರವಿದ್ಯೆ, ಸರ್ಪದೇವಜನವಿದ್ಯೆ- ಇದು ನಾಮವೇ. ನಾಮವನ್ನು ಉಪಾಸನೆಮಾಡು.

## ನಾಮವೇ ಬ್ರಹ್ಮವೆಂದು ಉಪಾಸನೆಮಾಡಬೇಕು

(ಭಾಷ್ಯ)

೫೫೨. ನಾಮ ವಾ ಋಗ್ವೇದಃ । ಯಜುರ್ವೇದ ಇತ್ಯಾದಿ ನಾಮೈವೈತತ್ । ನಾಮೋಪಾಸ್ಸ್ವ ಬ್ರಹ್ಮೇತಿ ಬ್ರಹ್ಮಬುದ್ಧ್ಯಾ । ಯಥಾ ಪ್ರತಿಮಾಂ ವಿಷ್ಣುಬುದ್ಧ್ಯಾ ಉಪಾಸ್ತೇ ತದ್ವತ್ ॥

(ಭಾಷ್ಯಾರ್ಥ)

ಋಗ್ವೇದವು ನಾಮವೇ. ಯಜುರ್ವೇದವೇ ಮುಂತಾದ ಇದು ನಾಮವೇ. ನಾಮವನ್ನು ಬ್ರಹ್ಮವೆಂದು-ಹೇಗೆ ಪ್ರತಿಮೆಯನ್ನು ವಿಷ್ಣುಬುದ್ಧಿಯಿಂದ ಉಪಾಸನೆ ಮಾಡುತ್ತಾರೋ ಹಾಗೆ- ಬ್ರಹ್ಮಬುದ್ಧಿಯಿಂದ ಉಪಾಸನೆಮಾಡು.[1]

## ನಾಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ನಾಮ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ನಾಮ್ನೋ ಭೂಯ ಇತಿ ನಾಮ್ನೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೫ ॥**

೫. ಯಾವನು ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನು ನಾಮದ ಗತಿಯು ಎಲ್ಲಿಯವರೆಗೆ (ಇರುವದೋ) ಅಲ್ಲಿ ಅವನಿಗೆ ಯಥಾಕಾಮಚಾರವಿರುತ್ತದೆ. ಯಾವನು ನಾಮ

1. ಇದು ಪ್ರತೀಕೋಪಾಸನೆ. ಪ್ರತೀಕಗಳಲ್ಲಿ ತಾನೇ ಅದೆಂಬ ಬುದ್ಧಿಯನ್ನು ಮಾಡಬಾರದು (ಸೂ. ಭಾ. ೪-೧-೪); ಅವುಗಳಲ್ಲಿ ಬ್ರಹ್ಮದೃಷ್ಟಿಯನ್ನು ಹಾಕಬೇಕು, ಬ್ರಹ್ಮದಲ್ಲಿ ಪ್ರತೀಕದೃಷ್ಟಿಯನ್ನು ಹಾಕಬಾರದು (ಸೂ. ಭಾ. ೪-೧-೫)- ಎಂದು ಸೂತ್ರಭಾಷ್ಯದಲ್ಲಿ ನಿರ್ಣಯಿಸಿದೆ.

ವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ). 'ಭಗವಂತನೆ, ನಾಮಕ್ಕಿಂತ ಹೆಚ್ಚಿನದು ಇದೆಯೆ ?' 'ನಾಮಕ್ಕಿಂತ ಹೆಚ್ಚಿನದು ಇದ್ದೇ ಇದೆ.' 'ಅದನ್ನು ಭಗವಂತನು ನನಗೆ ಹೇಳಬೇಕು.'

## ನಾಮೋಪಾಸನೆಗೆ ನಾಮಕ್ಷೇತ್ರದಲ್ಲೆಲ್ಲ ಸ್ವಾತಂತ್ರ್ಯಫಲ

(ಭಾಷ್ಯ)

೫೫೩. ಸ ಯಸ್ತು ನಾಮ ಬ್ರಹ್ಮೇತಿ ಉಪಾಸ್ತೇ ತಸ್ಯ ಯತ್ಫಲಂ ಭವತಿ ತಚ್ಛೃಣು । ಯಾವನ್ನಾಮ್ನೋ ಗತಂ ನಾಮ್ನೋ ಗೋಚರಂ ತತ್ರ ತಸ್ಮಿನ್ ನಾಮವಿಷಯೇ ಅಸ್ಯ ಯಥಾಕಾಮಚಾರಃ ಕಾಮಚರಣಂ ರಾಜ್ಞ ಇವ ಸ್ವವಿಷಯೇ ಭವತಿ । ಯೋ ನಾಮ ಬ್ರಹ್ಮೇತ್ಯುಪಾಸ್ತೇ ಇತ್ಯುಪಸಂಹಾರಃ ॥

(ಭಾಷ್ಯಾರ್ಥ)

ಯಾವನಾದರೆ ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನಿಗೆ ಯಾವ ಫಲವು ಆಗುವದೋ ಅದನ್ನು ಕೇಳು ಎಲ್ಲಿಯವರೆಗೆ ನಾಮದ ಗತಿಯು ಗೋಚರವು (ಇರುವದೋ) ಅಲ್ಲಿ ಆ ನಾಮದ ವಿಷಯದಲ್ಲಿ ಇವನಿಗೆ ಯಥಾಕಾಮಚಾರವು, ರಾಜನಿಗೆ ತನ್ನ ದೇಶದಲ್ಲಿ ಹೇಗೆ ಸ್ವೇಚ್ಛೆಯಿಂದ ಸಂಚಾರವಿರುವದೋ ಹಾಗೆ, ಇರುವದು. 'ಯೋ ನಾಮ ಬ್ರಹ್ಮೇತ್ಯುಪಾಸ್ತೇ' ಎಂದು (ಹೇಳಿರುವದು ನಾಮೋಪಾಸನೆಯ) ಉಪಸಂಹಾರವು.

## ನಾಮಕ್ಕಿಂತಲೂ ಹೆಚ್ಚಿನದುಂಟು

(ಭಾಷ್ಯ)

೫೫೪. ಕಿಮಸ್ತಿ ಭಗವೋ ನಾಮ್ನೋ ಭೂಯಃ ಅಧಿಕತರಂ ಯದ್ ಬ್ರಹ್ಮದೃಷ್ಟ್ಯರ್ಹಮ್ ಅನ್ಯತ್ ಇತ್ಯಭಿಪ್ರಾಯಃ । ಸನತ್ಕುಮಾರ ಆಹ । ನಾಮ್ನೋ ವಾವ ಭೂಯೋಽಸ್ತ್ಯೇವ ಇತ್ಯುಕ್ತ ಆಹ । ಯದ್ಯಸ್ತಿ ತನ್ಮೇ ಭಗವಾನ್ ಬ್ರವೀತ್ವಿತಿ ॥

(ಭಾಷ್ಯಾರ್ಥ)

ಭಗವಂತನೆ, ನಾಮಕ್ಕಿಂತ ಹೆಚ್ಚಿನದು ಇದೆಯೇನು ? ಇನ್ನೂ ದೊಡ್ಡದು, ಬ್ರಹ್ಮದೃಷ್ಟಿಗೆ ತಕ್ಕದ್ದು ಮತ್ತೊಂದು (ಇದೆಯೇನು) ?– ಎಂದು ಅಭಿಪ್ರಾಯ. ನಾಮಕ್ಕಿಂತ ಹೆಚ್ಚಿನದು ಇದ್ದೇ ಇದೆ ಎಂದು ಸನತ್ಕುಮಾರನು ಹೇಳಲು (ನಾರದನು) ಹೀಗೆನ್ನುತ್ತಾನೆ: 'ಇದೆಯಾದರೆ ಭಗವಂತನು ಅದನ್ನು ನನಗೆ ಹೇಳಬೇಕು.'

# ಏಳನೆಯ ಅಧ್ಯಾಯ-ಎರಡನೆಯ ಖಂಡ

( ಭೂ ಮ ವಿ ದ್ಯೆ )

## ವಾಗ್ಬ್ರಹ್ಮ

(ಉಪನಿಷತ್ತು)

**ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪ ಯತಿ ಯಜುರ್ವೇದಗ್ಂ ಸಾಮವೇದಮಾಥರ್ವಣಂ ಚತುರ್ಥ ಮಿತಿಹಾಸಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯ ಗ್ಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವ ವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರ ವಿದ್ಯಾಗ್ಂ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಽಽಕಾಶಂ ಚಾಪಶ್ಚ ತೇಜಶ್ಚ ದೇವಾಗ್ಂಶ್ಚ ಮನುಷ್ಯಾಗ್ಂಶ್ಚ ಪಶೂಗ್ಂಶ್ಚ ವಯಾಗ್ಂಸಿ ಚ ತೃಣವನಸ್ಪತೀ ಞ್ಶ್ವಾಪದಾನ್ಯಾಕೀಟಪತಙ್ಗಪಿಪೀಲಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ ಸಾಧು ಚಾಽಸಾಧು ಚ ಹೃದಯಜ್ಞಂ ಚಾಽಹೃದಯಜ್ಞಂ ಚ ಯದ್ವೈ ವಾಙ್ನಾಭವಿಷ್ಯನ್ನ ಧರ್ಮೋ ನಾಽಧರ್ಮೋ ವ್ಯಜ್ಞಾಪಯಿಷ್ಯನ್ನ ಸತ್ಯಂ ನಾಽನೃತಂ ನ ಸಾಧು ನಾಽಸಾಧು ನ ಹೃದಯಜ್ಞೋ ನಾಽಹೃದಯಜ್ಞೋ ವಾಗೇ ವೈತತ್ ಸರ್ವಂ ವಿಜ್ಞಾಪಯತಿ ವಾಚಮುಪಾಸ್ಸ್ವೇತಿ ॥ ೧ ॥**

೧. ವಾಕ್ಕೇ ನಾಮಕ್ಕಿಂತ ಹೆಚ್ಚಿನದು. ವಾಕ್ಕೇ ಋಗ್ವೇದ ವನ್ನು ತಿಳಿಸಿಕೊಡುತ್ತದೆ. ಯಜುರ್ವೇದವನ್ನು, ಸಾಮವೇದ ವನ್ನು ನಾಲ್ಕನೆಯದಾದ ಆಥರ್ವಣವನ್ನು, ಐದನೆಯದಾದ ಇತಿಹಾಸ ಪುರಾಣವನ್ನು, ವೇದಗಳ ವೇದವನ್ನು, ಪಿತ್ರ್ಯವನ್ನು, ರಾಶಿ ಯನ್ನು, ದೈವವನ್ನು, ನಿಧಿಯನ್ನು, ವಾಕೋವಾಕ್ಯವನ್ನು, ಏಕಾಯನವನ್ನು, ದೇವವಿದ್ಯೆಯನ್ನು, ಬ್ರಹ್ಮವಿದ್ಯೆಯನ್ನು, ಭೂತ ವಿದ್ಯೆಯನ್ನು, ಕ್ಷತ್ರವಿದ್ಯೆಯನ್ನು, ನಕ್ಷತ್ರವಿದ್ಯೆಯನ್ನು, ಸರ್ಪದೇವ ಜನವಿದ್ಯೆಯನ್ನು, ದ್ಯುಲೋಕವನ್ನೂ, ಪೃಥಿವಿಯನ್ನೂ, ವಾಯು ವನ್ನೂ, ಆಕಾಶವನ್ನೂ, ಅಪ್ಪನ್ನೂ, ತೇಜಸ್ಸನ್ನೂ, ದೇವತೆಗಳನ್ನೂ, ಮನುಷ್ಯರನ್ನೂ, ಪಶುಗಳನ್ನೂ, ಪಕ್ಷಿಗಳನ್ನೂ, ಹುಲ್ಲುಮರಗಳನ್ನೂ,

ಹಿಂಸ್ರಮೃಗಗಳನ್ನೂ, ಹುಳುಜಿಟ್ಟೆ ಇರುವೆಯವರೆಗೂ (ಎಲ್ಲವನ್ನೂ) ಧರ್ಮವನ್ನೂ ಅಧರ್ಮವನ್ನೂ, ಸತ್ಯವನ್ನೂ ಅನೃತವನ್ನೂ, ಒಳ್ಳೆಯ ದನ್ನೂ ಕೆಟ್ಟದ್ದನ್ನೂ, ಹೃದಯಜ್ಞವಾದದ್ದನ್ನೂ ಅಹೃದಯಜ್ಞವಾದ ದ್ದನ್ನೂ, (ಎಲ್ಲವನ್ನೂ ತಿಳಿಸಿಕೊಡುತ್ತದೆ). ವಾಕ್ಕು ಇಲ್ಲದಿದ್ದರೆ ಧರ್ಮವಾಗಲಿ ಅಧರ್ಮವಾಗಲಿ ತಿಳಿಯಬರುತ್ತಿರಲಿಲ್ಲ, ಸತ್ಯವಾಗಲಿ ಅನೃತವಾಗಲಿ, ಒಳ್ಳೆಯದಾಗಲಿ ಕೆಟ್ಟದ್ದಾಗಲಿ, ಹೃದಯಜ್ಞವಾಗಲಿ ಅಹೃದಯಜ್ಞವಾಗಲಿ (ತಿಳಿಯಬರುತ್ತಿರ)ಲಿಲ್ಲ. ವಾಕ್ಕೇ ಇದೆಲ್ಲ ವನ್ನೂ ತಿಳಿಸಿಕೊಡುತ್ತದೆ. ವಾಕ್ಕನ್ನು ಉಪಾಸನೆಮಾಡು.

## ವಾಕ್ಕಿನ ಹೆಚ್ಚುಗಾರಿಕೆ

(ಭಾಷ್ಯ)

೫೫೫. ವಾಗ್ವಾವ। ವಾಗಿತೀನ್ದ್ರಿಯಂ ಜಿಹ್ವಾಮೂಲಾದಿಷ್ವಷ್ಟಸು ಸ್ಥಾನೇಷು ಸ್ಥಿತಂ ವರ್ಣಾನಾಮಾಭಿವ್ಯಞ್ಜಕಮ್। ವರ್ಣಾಶ್ಚ ನಾಮ ಇತಿ ನಾಮ್ನೋ ವಾಗ್ಭೂಯಸೀ ಇತ್ಯುಚ್ಯತೇ। ಕಾರ್ಯಾದ್ ಹಿ ಕಾರಣಂ ಭೂಯೋ ದೃಷ್ಟಂ ಲೋಕೇ। ಯಥಾ ಪುತ್ರಾತ್ ಪಿತಾ। ತದ್ವತ್। ಕಥಂ ಚ ವಾಙ್ನಾಮ್ನೋ ಭೂಯ ಸೀತಿ ? ಆಹ। ವಾಗ್ವಾ ಋಗ್ವೇದಂ ವಿಜ್ಞಾಪಯತಿ। ಅಯಮೃಗ್ವೇದ ಇತಿ। ತಥಾ ಯಜುರ್ವೇದಮ್ ಇತ್ಯಾದಿ ಸಮಾನಮ್। ಹೃದಯಜ್ಞಂ ಹೃದಯಪ್ರಿಯಮ್। ತದ್ವಿಪರೀತಮ್ ಅಹೃದಯಜ್ಞಮ್। ಯದ್ ಯದಿ ವಾಙ್ನಾಽಭವಿಷ್ಯತ್, ಧರ್ಮಾದಿ ನ ವ್ಯಜ್ಞಾಪಯಿಷ್ಯತ್। ವಾಗಭಾವೇ ಅಧ್ಯಯನಾಭಾವಃ ಅಧ್ಯಯ ನಾಭಾವೇ ತದರ್ಥಶ್ರವಣಾಭಾವಃ। ತಚ್ಛ್ರವಣಾಭಾವೇ ಧರ್ಮಾದಿ ನ ವ್ಯಜ್ಞಾಪ ಯಿಷ್ಯತ್। ನ ವಿಜ್ಞಾತಮ್ ಅಭವಿಷ್ಯತ್ ಇತ್ಯರ್ಥಃ। ತಸ್ಮಾದ್ವಾಗೇವೈತತ್ ಶಬ್ದೋಚ್ಚಾರಣೇನ ಸರ್ವಂ ವಿಜ್ಞಾಪಯತಿ। ಅತೋ ಭೂಯಸೀ ವಾಙ್ನಾಮ್ನಃ। ತಸ್ಮಾದ್ ವಾಚಂ ಬ್ರಹ್ಮೇತ್ಯುಪಾಸ್ಸ್ವ॥

(ಭಾಷ್ಯಾರ್ಥ)

'ವಾಕ್ಕೇ **ವಾಕ್ಕೆಂದರೆ** ಜಿಹ್ವಾಮೂಲೀಯವೇ ಮುಂತಾದ ಎಂಟು ಸ್ಥಾನ ಗಳಲ್ಲಿ ಇದ್ದುಕೊಂಡು ವರ್ಣಗಳನ್ನು ಅಭಿವ್ಯಕ್ತಗೊಳಿಸುವ ಇಂದ್ರಿಯವು. ವರ್ಣ ಗಳೇ ನಾಮವು; ಆದ್ದರಿಂದ ವಾಕ್ಕು ನಾಮಕ್ಕಿಂತ ಹೆಚ್ಚಿನದು ಎಂದು ಹೇಳ ಲಾಗಿದೆ ಕಾರ್ಯಕ್ಕಿಂತ ಕಾರಣವು ಹೆಚ್ಚಿನದೆಂದು ಲೋಕದಲ್ಲಿ ಕಂಡಿದೆ. ಉದಾಹರಣೆಗೆ ಮಗನಿಗಿಂತ ತಂದೆಯು (ದೊಡ್ಡವನು). ಹಾಗೆಯೇ (ಇದು). ವಾಕ್ಕು ನಾಮಕ್ಕಿಂತ ಹೆಚ್ಚಿನದೆಂಬುದು ಮತ್ತೂ ಹೇಗೆ ? ಎಂದರೆ ಹೇಳುತ್ತಾನೆ :

ವಾಕ್ಕೇ ಋಗ್ವೇದವನ್ನು ಇದು ಋಗ್ವೇದವು ಎಂದು ತಿಳಿಸಿಕೊಡುತ್ತದೆ. ಇದರಂತೆ ಯಜುರ್ವೇದವನ್ನು (ತಿಳಿಸಿಕೊಡುತ್ತದೆ) –ಇದೇ ಮುಂತಾದ ಗ್ರಂಥವು (ಹಿಂದಿನದಕ್ಕೆ) ಸಮಾನವಾಗಿದೆ. ಹೃದಯಜ್ಞವನ್ನು ಎಂದರೆ ಹೃದಯಕ್ಕೆ ಮೆಚ್ಚಾಗಿರುವದನ್ನು , ಹೃದಯಜ್ಞವಲ್ಲದ್ದನ್ನು ಎಂದರೆ ಅದಕ್ಕೆ ವಿಪರೀತವಾಗಿರುವದನ್ನು. (ಯದ್=ಯದಿ) ವಾಕ್ಕು ಇಲ್ಲದಿದ್ದರೆ ಧರ್ಮಾದಿಗಳು ತಿಳಿಯಬರುತ್ತಿರಲಿಲ್ಲ ವಾಕ್ಕಿಲ್ಲದಿದ್ದರೆ ಅಧ್ಯಯನವಿಲ್ಲ, ಅಧ್ಯಯನವಿಲ್ಲದಿದ್ದರೆ ಅದರ ಅರ್ಥದ ಶ್ರವಣವಿಲ್ಲ, ಅದರ ಶ್ರವಣವಿಲ್ಲದಿದ್ದರೆ ಧರ್ಮಾದಿಗಳು ತಿಳಿಯಬರುತ್ತಿರಲಿಲ್ಲ, ತಿಳಿಯಲ್ಪಟ್ಟದ್ದಾಗುತ್ತಿರಲಿಲ್ಲ ಎಂದರ್ಥ ಆದ್ದರಿಂದ ವಾಕ್ಕೇ ಈ ಶಬ್ದವನ್ನು ಉಚ್ಚರಿಸುವದರಿಂದ ಎಲ್ಲವನ್ನೂ ತಿಳಿಸಿಕೊಡುತ್ತದೆಯಾಗಿ ವಾಕ್ಕು ನಾಮಕ್ಕಿಂತ ಹೆಚ್ಚಿನದು. ಆದ್ದರಿಂದ ವಾಕ್ಕನ್ನು ಬ್ರಹ್ಮವೆಂದು ಉಪಾಸನೆಮಾಡು.

## ವಾಗುಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ಯಾವದ್ವಾಚೋ ಗತಂ ತತ್ರಾಽಸ್ಯ ಯಥಾಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಾಚೋ ಭೂಯ ಇತಿ ವಾಚೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ವಾಕ್ಕನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ವಾಕ್ಕಿನ ಗತಿಯು ಎಲ್ಲಿಯವರೆಗೆ (ಇರುವದೋ) ಅಲ್ಲಿ ಅವನಿಗೆ ಯಥಾಕಾಮಚಾರವಿರುತ್ತದೆ. ಯಾವನು ವಾಕ್ಕನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ). 'ಭಗವಂತನೆ, ವಾಕ್ಕಿಗಿಂತ ಹೆಚ್ಚಿನದು ಇದೆಯೆ?' 'ವಾಕ್ಕಿಗಿಂತ ಹೆಚ್ಚಿನದು ಇದ್ದೇ ಇದೆ.' 'ಅದನ್ನು ಭಗವಂತನು ನನಗೆ ಹೇಳಬೇಕು.'

## ವಾಗ್ಬ್ರಹ್ಮೋಪಾಸನೆಗೆ ವಾಕ್ಕಿನ ಕ್ಷೇತ್ರದಲ್ಲೆಲ್ಲ ಸ್ವಾತಂತ್ರ್ಯಫಲ

(ಭಾಷ್ಯ)

೫೫೬. ಸಮಾನಮನ್ಯತ್ ॥

(ಭಾಷ್ಯಾರ್ಥ)

ಮಿಕ್ಕ (ಗ್ರಂಥವು ಹಿಂದಿನದಕ್ಕೆ) ಸಮಾನವು.

---

# ಏಳನೆಯ ಅಧ್ಯಾಯ—ಮೂರನೆಯ ಖಂಡ

( ಭೂಮವಿದ್ಯೆ )

## ಮನೋಬ್ರಹ್ಮ

(ಉಪನಿಷತ್ತು)

**ಮನೋ ವಾವ ವಾಚೋ ಭೂಯೋ ಯಥಾ ವೈ ದ್ವೇ ವಾಽಽಮಲಕೇ ದ್ವೇ ವಾ ಕೋಲೇ ದ್ವೌ ವಾಽಕ್ಷೌ ಮುಷ್ಟಿರನುಭವತ್ಯೇವಂ ವಾಚಂ ಚ ನಾಮ ಚ ಮನೋಽನುಭವತಿ ಸ ಯದಾ ಮನಸಾ ಮನಸ್ಯತಿ ಮನ್ತ್ರಾನಧೀಯೀಯೇತ್ಯಥಾಧೀತೇ ಕರ್ಮಾಣಿ ಕುರ್ವೀಯೇತ್ಯಥ ಕುರುತೇ ಪುತ್ರಾಗ್‍ಂಶ್ಚ ಪಶೂಗ್‍ಂಶ್ಚೇಚ್ಛೇಯೇತ್ಯಥೇಚ್ಛತ ಇಮಂ ಚ ಲೋಕಮಮುಂ ಚೇಚ್ಛೇಯೇತ್ಯಥೇಚ್ಛತೇ ಮನೋ ಹ್ಯಾತ್ಮಾ ಮನೋ ಹಿ ಲೋಕೋ ಮನೋ ಹಿ ಬ್ರಹ್ಮ ಮನ ಉಪಾಸ್ಸ್ವೇತಿ ॥ ೧ ॥**

೧. ಮನಸ್ಸೇ ವಾಕ್ಕಿಗಿಂತ ಹೆಚ್ಚಿನದು. ಹೇಗೆ ಎರಡು ಆಮಲಕಗಳನ್ನು ಅಥವಾ ಎರಡು ಕೋಲಗಳನ್ನು ಅಥವಾ ಎರಡು ಅಕ್ಷಗಳನ್ನು ಮುಷ್ಟಿಯು ಅನುಭವಿಸುತ್ತದೆಯೋ ಹಾಗೆ ವಾಕ್ಕನ್ನೂ ನಾಮವನ್ನೂ ಮನಸ್ಸು ಅನುಭವಿಸುತ್ತದೆ. ಅವನು ಯಾವಾಗ ಮನಸ್ಸಿನಿಂದ ಮಂತ್ರಗಳನ್ನು ಅಧ್ಯಯನಮಾಡುವೆನು ಎಂದು ಮನಸ್ಸು ಮಾಡುತ್ತಾನೋ ಆಗ ಅಧ್ಯಯನಮಾಡುತ್ತಾನೆ; ಕರ್ಮಗಳನ್ನು ಮಾಡುವೆನೆಂದು (ಯಾವಾಗ ಮನಸ್ಸುಮಾಡುವನೋ) ಆಗ ಮಾಡುತ್ತಾನೆ; ಪುತ್ರರನ್ನೂ ಪಶುಗಳನ್ನೂ ಇಚ್ಛಿಸುವೆನು ಎಂದು (ಯಾವಾಗ ಮನಸ್ಸುಮಾಡುವನೋ ಆಗ) ಇಚ್ಛಿಸುವನು; ಈ ಲೋಕವನ್ನೂ ಆ ಲೋಕವನ್ನೂ ಇಚ್ಛಿಸುವೆನೆಂದು (ಯಾವಾಗ ಮನಸ್ಸುಮಾಡುವನೋ) ಆಗ ಇಚ್ಛಿಸುವನು. ಮನಸ್ಸೇ ಆತ್ಮನು, ಮನಸ್ಸೇ ಲೋಕವು, ಮನಸ್ಸೇ ಬ್ರಹ್ಮವು. ಮನಸ್ಸನ್ನು ಉಪಾಸನೆಮಾಡು.

### ಮನಸ್ಸಿನ ಹೆಚ್ಚುಗಾರಿಕೆ

(ಭಾಷ್ಯ)

೫೫೭. ಮನೋ ಮನಸ್ಯನವಿಶಿಷ್ಟಮನ್ತಃಕರಣಂ ವಾಚೋ ಭೂಯಃ। ತದ್ಧಿ ಮನಸ್ಯನವ್ಯಾಪಾರವದ್ ವಾಚಂ ವಕ್ತವ್ಯೇ ಪ್ರೇರಯತಿ। ತೇನ ವಾಙ್ಮನಸಿ

ಅನ್ತರ್ಭವತಿ। ಯಚ್ಚ ಯಸ್ಮಿನ್ ಅನ್ತರ್ಭವತಿ ತತ್ ತಸ್ಯ ವ್ಯಾಪಕತ್ವಾತ್ ತತೋ ಭೂಯೋ ಭವತಿ। ಯಥಾ ವೈ ಲೋಕೇ ದ್ವೇ ವಾ ಆಮಲಕೇ ಫಲೇ, ದ್ವೇ ವಾ ಕೋಲೇ ಬದರಫಲೇ, ದ್ವೌ ವಾ ಅಕ್ಷೌ ವಿಭೀತಕಫಲೇ ಮುಷ್ಟಿರನು ಭವತಿ ಮುಷ್ಟಿಸ್ತೇ ಫಲೇ ವ್ಯಾಪ್ನೋತಿ। ಮುಷ್ಟೌ ಹಿ ತೇ ಅನ್ತರ್ಭವತಃ। ಏವಂ ವಾಚಂ ಚ ನಾಮ ಚ ಆಮಲಕಾದಿವತ್ ಮನೋಽನುಭವತಿ। ಸ ಯದಾ ಪುರುಷೋ ಯಸ್ಮಿನ್ ಕಾಲೇ ಮನಸಾ ಅನ್ತಃಕರಣೇನ ಮನಸ್ಯತಿ ಮನಸ್ಯನಂ ವಿವಕ್ಷಾಬುದ್ಧಿಃ। ಕಥಮ್ ? ಮನ್ತ್ರಾನ್ ಅಧೀಯೀಯ ಉಚ್ಚಾರಯೇಯಮ್ ಇತ್ಯೇವಂ ವಿವಕ್ಷಾಂ ಕೃತ್ವಾ ಅಥ ಅಧೀತೇ। ತಥಾ ಕರ್ಮಾಣಿ ಕುರ್ವೀಯ ಇತಿ ಚಿಕೀರ್ಷಾಬುದ್ಧಿಂ ಕೃತ್ವಾ ಅಥ ಕುರುತೇ। ಪುತ್ರಾಂಶ್ಚ ಪಶೂಂಶ್ಚ ಇಚ್ಛೇಯ ಇತಿ ಪ್ರಾಪ್ತೀಚ್ಛಾಂ ಕೃತ್ವಾ ತತ್ಪ್ರಾಪ್ತ್ಯುಪಾಯಾಽನುಷ್ಠಾನೇನ ಅಥ ಇಚ್ಛತೇ। ಪುತ್ರಾದೀನ್ ಪ್ರಾಪ್ನೋತಿ ಇತ್ಯರ್ಥಃ। ತಥಾ ಇಮಂ ಚ ಲೋಕಮ್ ಅಮುಂ ಚ ಉಪಾಯೇನ ಇಚ್ಛೇಯ ಇತಿ ತತ್ಪ್ರಾಪ್ತ್ಯುಪಾಯಾನುಷ್ಠಾನೇನ ಅಥ ಇಚ್ಛತೇ ಪ್ರಾಪ್ನೋತಿ। ಮನೋ ಹಿ ಆತ್ಮಾ। ಆತ್ಮನಃ ಕರ್ತೃತ್ವಂ ಭೋಕ್ತೃತ್ವಂ ಚ ಸತಿ ಮನಸಿ ನಾನ್ಯಥಾ ಇತಿ ಮನೋ ಹ್ಯಾತ್ಮಾ ಇತ್ಯುಚ್ಯತೇ। ಮನೋ ಹಿ ಲೋಕಃ। ಸತ್ಯೇವ ಹಿ ಮನಸಿ ಲೋಕೋ ಭವತಿ ತತ್ಪ್ರಾಪ್ತ್ಯುಪಾಯಾನುಷ್ಠಾನಂ ಚ ಇತಿ ಮನೋ ಹಿ ಲೋಕಃ। ಯಸ್ಮಾತ್ ತಸ್ಮಾನ್ಮನೋ ಹಿ ಬ್ರಹ್ಮ। ಯತ ಏವಂ ತಸ್ಮಾತ್ ಮನ ಉಪಾಸ್ಸ್ವ ಇತಿ ॥

(ಭಾಷ್ಯಾರ್ಥ)

**ಮನಸ್ಸು** ಮನಸ್ಯನ(ಶಕ್ತಿ)ಯಿಂದೊಡಗೂಡಿದ ಅಂತಃಕರಣವು ವಾಕ್ಕಿಗಿಂತ ಹೆಚ್ಚಿನದು, ಮನಸ್ಯನವೆಂಬ ವ್ಯಾಪಾರವುಳ್ಳ ಆ (ಅಂತಃಕರಣ)ವಲ್ಲವೆ, ವಾಕ್ಕನ್ನು ಹೇಳಬೇಕಾದ (ವಿಷಯದಲ್ಲಿ) ತೊಡಗಿಸುವದು ? ಅದರಿಂದ ವಾಕ್ಕು ಮನಸ್ಸಿನಲ್ಲಿ ಅಡಕವಾಗಿರುತ್ತದೆ. ಯಾವದು ಯಾವದರಲ್ಲಿ ಅಡಕವಾಗಿರುವದೋ ಅದು ಅದಕ್ಕೆ ವ್ಯಾಪಕವಾಗಿರುವದರಿಂದ ಅದಕ್ಕಿಂತಲೂ ಹೆಚ್ಚಿನದಾಗಿರುತ್ತದೆ. ಹೇಗೆ ಲೋಕದಲ್ಲಿ ಎರಡು ನೆಲ್ಲಿಕಾಯಿಗಳನ್ನು, ಅಥವಾ ಎರಡು ಕೋಲಗಳನ್ನು ಎಂದರೆ ಎಗಚೀಕಾಯಿಗಳನ್ನು, ಅಥವಾ ಎರಡು ಅಕ್ಷಗಳನ್ನು ಎಂದರೆ ವಿಭೀತಕ (ತಾರೆಕಾಯಿ) ಫಲಗಳನ್ನು ಮುಷ್ಟಿಯು ಅನುಭವಿಸುತ್ತದೆಯೋ, ಮುಷ್ಟಿಯು ಆ ಹಣ್ಣುಗಳನ್ನು ವ್ಯಾಪಿಸುವದೋ- ಮುಷ್ಟಿಯಲ್ಲಲ್ಲವೆ, ಅವು ಅಡಕವಾಗಿರುತ್ತವೆ ?- ಹಾಗೆ ವಾಕ್ಕನ್ನೂ ನಾಮವನ್ನೂ, ನೆಲ್ಲಿಕಾಯಿಗಳೇ ಮುಂತಾದವುಗಳನ್ನು (ಮುಷ್ಟಿಯು ಅನುಭವಿಸುವಂತೆ) ಮನಸ್ಸು ಅನುಭವಿಸುತ್ತದೆ. ಆ ಪುರುಷನು ಯಾವಾಗ ಯಾವ ಕಾಲದಲ್ಲಿ ಮನಸ್ಸಿನಿಂದ ಅಂತಃಕರಣದಿಂದ ಮನಸ್ಸಿನ ವ್ಯಾಪಾರಮಾಡುವನೋ—ಮನಸ್ಯನವೆಂದರೆ ಹೇಳಬೇಕೆಂಬ ಬುದ್ಧಿ, (ಅದನ್ನು

ಯಾವಾಗ ಮಾಡುವನೋ)—ಹೇಗೆ? ಎಂದರೆ, ಮಂತ್ರಗಳನ್ನು (ನಾನು) ಅಧ್ಯಯನ ಮಾಡಬೇಕು, ಉಚ್ಚರಿಸಬೇಕು ಎಂದಿಂತು ಹೇಳಬೇಕೆಂಬ ಇಚ್ಛೆಯನ್ನು ಮಾಡಿಕೊಂಡು, ಆಮೇಲೆ ಹೇಳುತ್ತಾನೆ. ಹೀಗೆಯೇ ಕರ್ಮಗಳನ್ನು (ನಾನು) ಮಾಡಬೇಕು ಎಂದು ಮಾಡುವ ಇಚ್ಛೆಯ ಬುದ್ಧಿಯನ್ನು ಮಾಡಿಕೊಂಡು ಆಮೇಲೆ ಮಾಡುತ್ತಾನೆ ಪುತ್ರರನ್ನೂ ಪಶುಗಳನ್ನೂ ಇಚ್ಛಿಸುವೆನು ಎಂದು ಪಡೆಯುವ ಇಚ್ಛೆಯನ್ನು ಮಾಡಬೇಕೆಂದು ಅವುಗಳನ್ನು ಪಡೆಯುವ ಸಾಧನವನ್ನು ಅನುಷ್ಠಾನ ಮಾಡಿ ಇಚ್ಛಿಸುತ್ತಾನೆ, ಎಂದರೆ (ಆ) ಪುತ್ರಾದಿಗಳನ್ನು ಪಡೆದುಕೊಳ್ಳುತ್ತಾನೆ ಎಂದರ್ಥ. ಹೀಗೆಯೇ ಈ ಲೋಕವನ್ನೂ ಆ ಲೋಕವನ್ನೂ ಸಾಧನದಿಂದ ಇಚ್ಛಿಸುವೆನು (ಪಡೆಯುವೆನು) ಎಂದು ಅವುಗಳನ್ನು ಪಡೆಯುವ ಸಾಧನವನ್ನು ಮಾಡುವದರಿಂದ ಆಮೇಲೆ (ಅವನ್ನು) ಇಚ್ಛಿಸುತ್ತಾನೆ, ಎಂದರೆ ಪಡೆದುಕೊಳ್ಳುತ್ತಾನೆ.

ಮನಸ್ಸೇ ಆತ್ಮನು. ಮನಸ್ಸಿದ್ದರೇ ಕರ್ತೃತ್ವವೂ ಭೋಕ್ತೃತ್ವವೂ (ಇರುತ್ತವೆಯೇ ಹೊರತು) ಅದಿಲ್ಲದಿದ್ದರೆ (ಇರು)ವದಿಲ್ಲವಾಗಿ 'ಮನಸ್ಸೇ ಆತ್ಮನು' ಎಂದಿದೆ. ಮನಸ್ಸೇ ಲೋಕವು, ಮನಸ್ಸು ಇದ್ದರೇ ಲೋಕವೂ ಅದನ್ನು ಪಡೆಯುವ ಸಾಧನದ ಅನುಷ್ಠಾನವೂ ಆಗುತ್ತದೆಯಾದ್ದರಿಂದ ಮನಸ್ಸೇ ಲೋಕವು. ಹೀಗಿರುವದಷ್ಟೆ, ಆದ್ದರಿಂದ ಮನಸ್ಸೇ ಬ್ರಹ್ಮವು. ಹೀಗಿರುವದಲ್ಲ, ಆದ್ದರಿಂದ ಮನಸ್ಸನ್ನು ಉಪಾಸನೆಮಾಡು.

## ಮನೋಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ಮನೋ ಬ್ರಹ್ಮೇತ್ಯುಪಾಸ್ತೇ ಯಾವನ್ಮನಸೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಮನೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಮನಸೋ ಭೂಯ ಇತಿ ಮನಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನು ಮನಸ್ಸಿನ ಗತಿಯು ಎಲ್ಲಿಯವರೆಗೆ (ಇರುವದೋ), ಅಲ್ಲಿ ಅವನಿಗೆ ಯಥಾಕಾಮಚಾರವಿರುತ್ತದೆ. ಯಾವನು ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ). 'ಭಗವಂತನೆ, ಮನಸ್ಸಿಗಿಂತ ಹೆಚ್ಚಿನದು ಇದೆಯೆ?', 'ಮನಸ್ಸಿಗಿಂತ ಹೆಚ್ಚಿನದು ಇದ್ದೇ ಇದೆ'. 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು'.

## ಮನೋಬ್ರಹ್ಮೋಪಾಸನೆಗೆ
## ಮನಸ್ಸಿನ ಕ್ಷೇತ್ರದಲ್ಲೆಲ್ಲ ಸ್ವಾತಂತ್ರ್ಯ

(ಭಾಷ್ಯ)

೫೫೮. ಸ ಯೋ ಮನ ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಯಾವನು ಮನಸ್ಸನ್ನು (ಬ್ರಹ್ಮವೆಂದು ಉಪಾಸನೆಮಾಡುವನೋ) ಅವನು ಇತ್ಯಾದಿ (ಗ್ರಂಥವು ಹಿಂದಿನದಕ್ಕೆ) ಸಮಾನವು.

---

# ಏಳನೆಯ ಅಧ್ಯಾಯ–ನಾಲ್ಕನೆಯ ಖಂಡ

(ಭೂಮವಿದ್ಯೆ)

## ಸಂಕಲ್ಪಬ್ರಹ್ಮ

(ಉಪನಿಷತ್ತು)

**ಸಂಕಲ್ಪೋ ವಾವ ಮನಸೋ ಭೂಯಾನ್ ಯದಾ ವೈ ಸಂಕಲ್ಪಯತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮನ್ತ್ರಾ ಏಕಂ ಭವನ್ತಿ ಮನ್ತ್ರೇಷು ಕರ್ಮಾಣಿ ॥೧॥**

೧. ಸಂಕಲ್ಪವೇ ಮನಸ್ಸಿಗಿಂತ ಹೆಚ್ಚಿನದು. ಯಾವಾಗ ಸಂಕಲ್ಪಿಸುವನೋ ಆಗ ಮನಸ್ಯನಮಾಡುತ್ತಾನೆ; ಆಮೇಲೆ ವಾಕ್ಕನ್ನು ಪ್ರೇರಿಸುತ್ತಾನೆ, ಅದನ್ನು ನಾಮದಲ್ಲಿ ಪ್ರೇರಿಸುತ್ತಾನೆ. ನಾಮದಲ್ಲಿ ಮಂತ್ರಗಳು ಒಂದಾಗಿರುತ್ತವೆ, ಮಂತ್ರಗಳಲ್ಲಿ ಕರ್ಮಗಳು.

## ಸಂಕಲ್ಪದ ಹೆಚ್ಚುಗಾರಿಕೆ

(ಭಾಷ್ಯ)

೫೫೯. ಸಂಕಲ್ಪೋ ವಾವ ಮನಸೋ ಭೂಯಾನ್। ಸಂಕಲ್ಪೋಽಪಿ ಮನಸ್ಯನವತ್ ಅನ್ತಃಕರಣವೃತ್ತಿಃ ಕರ್ತವ್ಯಾಕರ್ತವ್ಯವಿಷಯವಿಭಾಗೇನ ಸಮರ್ಥನಮ್[1] । ವಿಭಾಗೇನ ಹಿ ಸಮರ್ಥಿತೇ (?) ವಿಷಯೇ ಚಿಕೀರ್ಷಾಬುದ್ಧಿರ್ಮನಸ್ಯ

1. ಇದು 'ಸಮರ್ಪಣಮ್' ಎಂದಿರಬೇಕಾಗಿತ್ತೆ ?

ನಮನನ್ತರಂ¹ ಭವತಿ। ಕಥಮ್? ಯದಾ ವೈ ಸಂಕಲ್ಪಯತೇ, ಕರ್ತವ್ಯಾದಿ ವಿಷಯಾನ್ ವಿಭಜತ ಇದಂ ಕರ್ತುಂ ಯುಕ್ತಮ್ ಇದಂ ಕರ್ತುಮ್ ಅಯುಕ್ತಮ್ ಇತಿ ಅಥ ಮನಸ್ಯತಿ 'ಮನ್ತ್ರಾನ್ ಅಧೀಯೀಯ' ಇತ್ಯಾದಿ। ಅಥ ಅನನ್ತರಂ ವಾಚಮ್ ಈರಯತಿ ಮನ್ತ್ರಾದ್ಯುಚ್ಚಾರಣೇ ತಾಂ ಚ ವಾಚಮು ನಾಮ್ನಿನಾಮ್ನಾ ಉಚ್ಚಾರಣನಿಮಿತ್ತಂ ವಿವಕ್ಷಾಂ ಕೃತ್ವಾ ಈರಯತಿ। ನಾಮ್ನಿ ನಾಮಸಾಮಾನ್ಯೇ ಮನ್ತ್ರಾಃ ಶಬ್ದವಿಶೇಷಾಃ ಸನ್ತ ಏಕಂ ಭವನ್ತಿ ಅನ್ತರ್ಭವನ್ತೀತ್ಯರ್ಥಃ। ಸಾಮಾನ್ಯೇ ಹಿ ವಿಶೇಷೋಽನ್ತರ್ಭವತಿ। ಮನ್ತ್ರೇಷು ಕರ್ಮಾಣಿ ಏಕಂ ಭವನ್ತಿ। ಮನ್ತ್ರ ಪ್ರಕಾಶಿತಾನಿ ಕರ್ಮಾಣಿ ಕ್ರಿಯನ್ತೇ ನಾಽಮನ್ತ್ರಕಮಸ್ತಿ ಕರ್ಮ। ಯದ್ಧಿ ಮನ್ತ್ರ ಪ್ರಕಾಶನೇನ ಲಬ್ಧಸತ್ತಾಕಂ ತತ್ಕರ್ಮ² ಬ್ರಾಹ್ಮಣೇನ ಇದಂ ಕರ್ತವ್ಯಮ್ ಅಸ್ಮೈ ಫಲಾಯ ಇತಿ ವಿಧೀಯತೇ। ಯಾಽಪ್ಯುತ್ಪತ್ತಿರ್ಬ್ರಾಹ್ಮಣೇಷು ಕರ್ಮಣಾಂ ದೃಶ್ಯತೇ, ನಾಪಿ ಮನ್ತ್ರೇಷು ಲಬ್ಧಸತ್ತಾಕಾನಾಮೇವ ಕರ್ಮಣಾಂ ಸ್ಪಷ್ಟೀಕರಣಮ್। ನ ಹಿ ಮನ್ತ್ರಪ್ರಕಾಶಿತಂ ಕರ್ಮ ಕಿಂಚಿದ್ ಬ್ರಾಹ್ಮಣೇ ಉತ್ಪನ್ನಂ ದೃಶ್ಯತೇ। ತ್ರಯೀವಿಹಿತಂ ಕರ್ಮೇತಿ ಪ್ರಸಿದ್ಧಂ ಲೋಕೇ। ತ್ರಯೀ ಶಬ್ದಶ್ಚ ಋಗ್ಯಜುಃಸಾಮಸಮಾಖ್ಯಾ। "ಮನ್ತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್" (ಮುಂ ೧-೨-೧) ಇತಿ ಚಾಥರ್ವಣೇ। ತಸ್ಮಾದ್ ಯುಕ್ತಂ ಮನ್ತ್ರೇಷು ಕರ್ಮಾಣಿ ಏಕಂ ಭವನ್ತೀತಿ ॥

(ಭಾಷ್ಯಾರ್ಥ)

ಸಂಕಲ್ಪವೇ ಮನಸ್ಸಿಗಿಂತ ಹೆಚ್ಚಿನದು **ಸಂಕಲ್ಪವೂ** ಮನಸ್ಸಿನದಂತೆಯೇ ಅಂತಃಕರಣದ (ಒಂದು) ವೃತ್ತಿ, ಮಾಡತಕ್ಕದ್ದು, ಮಾಡತಕ್ಕದ್ದಲ್ಲ– ಎಂದು **ವಿಂಗಡಿಸಿ ಗೊತ್ತುಪಡಿಸತಕ್ಕದ್ದು.** ವಿಂಗಡಿಸಿ ಗೊತ್ತುಪಡಿಸಿಕೊಂಡರಲ್ಲದೆ, (ಆ) ವಿಷಯದಲ್ಲಿ (ಇದನ್ನು) ಮಾಡಬೇಕೆಂಬ ಬುದ್ಧಿಯ ರೂಪವಾದ ಮನಸ್ಸಿನವು ಅದರ ಬಳಿಕವೇ ಆಗುತ್ತದೆ? ಹೇಗೆಂದರೆ ಯಾವಾಗ ಸಂಕಲ್ಪಿಸುತ್ತಾನೋ, ಮಾಡತಕ್ಕದ್ದೇ ಮುಂತಾದ³ ವಿಷಯಗಳನ್ನು ಇದನ್ನು ಮಾಡತಕ್ಕದ್ದು ಎಂದು ವಿಂಗಡಿಸಿಕೊಳ್ಳುತ್ತಾನೋ, ಆಗ ಮಂತ್ರಗಳನ್ನು ಅಧ್ಯಯನಮಾಡೋಣವೆಂದು ಮನಸ್ಸಿನಮಾಡುತ್ತಾನೆ, ಆಮೇಲೆ ವಾಕ್ಕನ್ನು ಮಂತ್ರವೇ ಮುಂತಾದದ್ದನ್ನು ಉಚ್ಚರಿಸುವಲ್ಲಿ ವಾಕ್ಕನ್ನು ಪ್ರೇರಿಸುತ್ತಾನೆ, ಮತ್ತು ಆ ವಾಕ್ಕನ್ನು ನಾಮದಲ್ಲಿ, ನಾಮದಿಂದ ಉಚ್ಚರಿಸುವ ನಿಮಿತ್ತದಿಂದ, ವಿವಕ್ಷೆಯನ್ನು ಮಾಡಿ ನಾಮದಲ್ಲಿ

1 'ಮನಸ್ಯನಾನನ್ತರಂ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. 'ಸತ್ಕರ್ಮ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

3 ಮುಂತಾದ ಎಂದರೆ ಮಾಡತಕ್ಕದ್ದಲ್ಲದ್ದು, ಮಾಡತಕ್ಕದ್ದು, ಮಾಡಬಾರದ್ದು ಎಂದು ವಿಂಗಡಿಸಿಕೊಳ್ಳುವ ಮನಸ್ಸಿನವಾದ ಬಳಿಕ ಮಾಡಬೇಕಾದದ್ದನ್ನು ಮಾಡುತ್ತಾನೆ ಎಂದರ್ಥ.

ಪ್ರೇರಿಸುತ್ತಾನೆ (ಎಂದರ್ಥ)[1] ನಾಮದಲ್ಲಿ. ಎಂದರೆ ನಾಮಸಾಮಾನ್ಯದಲ್ಲಿ ಮಂತ್ರಗಳು ಶಬ್ದವಿಶೇಷಗಳಾಗಿರುವದರಿಂದ ಒಂದಾಗುತ್ತವೆ, ಅಡಕವಾಗಿರುತ್ತವೆ ಎಂದರ್ಥ[2] ಸಾಮಾನ್ಯದಲ್ಲಲ್ಲವೆ, ವಿಶೇಷವು ಅಡಕವಾಗಿರುತ್ತದೆ? ಮಂತ್ರಗಳಲ್ಲಿ ಕರ್ಮಗಳು ಒಂದಾಗುತ್ತವೆ ಮಂತ್ರದಿಂದ ತಿಳಿಸಲ್ಪಟ್ಟ ಕರ್ಮಗಳನ್ನೇ ಮಾಡುತ್ತಾರೆ, ಮಂತ್ರವಿಲ್ಲದ ಕರ್ಮವಿಲ್ಲ ಯಾವ ಕರ್ಮವು ಮಂತ್ರದಿಂದ ಹುಟ್ಟಿವದೋ[3] ಆ ಕರ್ಮವನ್ನು ಇಂಥ ಫಲಕ್ಕಾಗಿ ಇದನ್ನು ಮಾಡಬೇಕು ಎಂದು ಬ್ರಾಹ್ಮಣದಲ್ಲಿ ವಿಧಿಸಿರುತ್ತದೆ ಬ್ರಾಹ್ಮಣಗಳಲ್ಲಿಯೇ (ಕೆಲವು) ಕರ್ಮಗಳಿಗೆ ಉತ್ಪತ್ತಿಯು ಕಾಣಬರುತ್ತದೆಯಷ್ಟೆ, ಅದೂ ಮಂತ್ರಗಳಲ್ಲಿ ಹುಟ್ಟಿದ ಕರ್ಮಗಳದ್ದೇ ಸ್ಪಷ್ಟೀಕರಣವು, ಮಂತ್ರಗಳಲ್ಲಿ ಪ್ರಕಾಶಿತವಾಗದೆ ಇರುವ ಯಾವ ಕರ್ಮವೂ ಬ್ರಾಹ್ಮಣದಲ್ಲಿಯೇ ಉತ್ಪನ್ನವಾಗಿರುವದು ಕಾಣಬರುವದೇ ಇಲ್ಲವಷ್ಟೆ[4]? ಕರ್ಮವು ತ್ರಯೀವಿಹಿತವಾಗಿರುತ್ತದ ಎಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ ತ್ರಯೀ ಎಂಬ ಶಬ್ದವು ಋಗ್ಯಜುಃಸಾಮಗಳ ಹೆಸರು. "ತಿಳಿದವರು ಮಂತ್ರಗಳಲ್ಲಿ ಯಾವ ಕರ್ಮಗಳನ್ನು ಕಂಡುಕೊಂಡರೋ" (ಮುಂ ೧-೨-೧) ಎಂದು ಆಥರ್ವಣದಲ್ಲಿಯೂ (ಇದೆ) ಆದ್ದರಿಂದ ಮಂತ್ರಗಳಲ್ಲಿ ಕರ್ಮಗಳು ಒಂದಾಗುತ್ತವೆ –ಎಂದು ಹೇಳಿದ್ದು ಯುಕ್ತವೇ

## ಸಂಕಲ್ಪೋಪಾಸನೆಯ ವಿಧಿ

(ಉಪನಿಷತ್ತು)

**ತಾನಿ ಹ ವಾ ಏತಾನಿ ಸಂಕಲ್ಪೈಕಾಯನಾನಿ ಸಂಕಲ್ಪಾತ್ಮಕಾನಿ ಸಂಕಲ್ಪೇ ಪ್ರತಿಷ್ಠಿತಾನಿ ಸಮಕ್ಲೃಪತಾಂ ದ್ಯಾವಾಪೃಥಿವೀ ಸಮಕಲ್ಪೇತಾಂ ವಾಯುಶ್ಚಾಽಽಕಾಶಂ ಚ ಸಮಕಲ್ಪನ್ತಾಽಽಪಶ್ಚ ತೇಜಶ್ಚ ತೇಷಾಗ್ಂ ಸಂಕ್ಲೃಪ್ತ್ಯೈ ವರ್ಷಗ್ಂ ಸಂಕಲ್ಪತೇ ವರ್ಷಸ್ಯ ಸಂಕ್ಲೃಪ್ತ್ಯೈ ಅನ್ನಗ್ಂ ಸಂಕಲ್ಪತೇಽನ್ನಸ್ಯ ಸಂಕ್ಲೃ**

---

1. ವಾಕ್ಕನ್ನು ಪ್ರೇರಿಸುತ್ತಾನೆ, ಅದನ್ನು ನಾಮದಲ್ಲಿ ಪ್ರೇರಿಸುತ್ತಾನೆ– ಎಂದರೆ ವಾಗಿಂದ್ರಿಯವನ್ನು ಪ್ರೇರಿಸಿ ನಾಮವನ್ನುಚ್ಚರಿಸುವಂತೆ ಮಾಡುತ್ತಾನೆ ಎಂದರ್ಥ.

2. ಶಬ್ದವಿಶೇಷಗಳಾದ ಮಂತ್ರಗಳೆಲ್ಲ ನಾಮವೇ, ನಾಮವು ವಾಕ್ಕಿಗೆ ಅಧೀನವಾದ್ದರಿಂದ ಅದು ಮನಸ್ಸಿನದ್ವಾರದಿಂದ ಸಂಕಲ್ಪಕ್ಕೆ ಅಧೀನವೆಂದಾಯಿತು.

3. ಮಂತ್ರವು ಕರ್ಮವನ್ನು ತಿಳಿಸುವದಕ್ಕೇ ಬಂದಿರುತ್ತದೆ.

4. ಬ್ರಾಹ್ಮಣಗಳಲ್ಲಿ ಮಾತ್ರವೇ ಕಾಣಬರುತ್ತಿರುವ ಕರ್ಮಗಳು ಆಯಾ ಶಾಖೆಯ ಮಂತ್ರಗಳಲ್ಲಿರದಿದ್ದರೂ ಶಾಖಾಂತರದ ಮಂತ್ರಗಳಲ್ಲಿ ಕಾಣಬರುತ್ತವೆ ಆದ್ದರಿಂದ ಬ್ರಾಹ್ಮಣಗಳಲ್ಲಿ ಮಾತ್ರವೇ ಕಾಣುವ ಕರ್ಮಗಳೆಂಬವಕ್ಕೂ ಮಂತ್ರವೇ ಮೂಲವೆಂದು ಕಲ್ಪಿಸಬೇಕು ಎಂದರ್ಥ.

**ಪ್ತ್ಯೈ ಪ್ರಾಣಾಃ ಸಂಕಲ್ಪನ್ತೇ ಪ್ರಾಣಾನಾಗ್ಂ ಸಂಕ್ಲೃಪ್ತ್ಯೈ ಮನ್ತ್ರಾಃ ಸಂಕಲ್ಪನ್ತೇ ಮನ್ತ್ರಾಣಾಗ್ಂ ಸಂಕ್ಲೃಪ್ತ್ಯೈ ಕರ್ಮಾಣಿ ಸಂಕಲ್ಪನ್ತೇ ಕರ್ಮಣಾಗ್ಂ ಸಂಕ್ಲೃಪ್ತ್ಯೈ ಲೋಕಃ ಸಂಕಲ್ಪತೇ ಲೋಕಸ್ಯ ಸಂಕ್ಲೃಪ್ತ್ಯೈ ಸರ್ವಂ ಸಂಕಲ್ಪತೇ ಸ ಏಷ ಸಂಕಲ್ಪಃ ಸಂಕಲ್ಪಮುಪಾಸ್ಸ್ವೇತಿ ॥ ೨ ॥**

೨. ಆ ಇವುಗಳು ಸಂಕಲ್ಪವೆಂಬ ಏಕಾಯನವುಳ್ಳವು, ಸಂಕಲ್ಪಾತ್ಮಕಗಳು, ಸಂಕಲ್ಪದಲ್ಲಿ ಪ್ರತಿಷ್ಠಿತವಾಗಿರುವವು. ದ್ಯಾವಾ ಪೃಥಿವಿಗಳು ಸಂಕಲ್ಪಿಸುತ್ತವೆ, ವಾಯುವೂ ಆಕಾಶವೂ ಸಂಕಲ್ಪಿಸುತ್ತವೆ, ಅಪ್ಪೂ ತೇಜಸ್ಸೂ ಸಂಕಲ್ಪಿಸುತ್ತವೆ. ಅವುಗಳ ಸಂಕಲ್ಪಕ್ಕಾಗಿ ವರ್ಷವು ಸಂಕಲ್ಪಿಸುತ್ತದೆ, ವರ್ಷದ ಸಂಕಲ್ಪಕ್ಕಾಗಿ ಅನ್ನವು ಸಂಕಲ್ಪಿಸುತ್ತದೆ, ಅನ್ನದ ಸಂಕಲ್ಪಕ್ಕಾಗಿ ಪ್ರಾಣಗಳು ಸಂಕಲ್ಪಿಸುತ್ತವೆ, ಪ್ರಾಣಗಳ ಸಂಕಲ್ಪಕ್ಕಾಗಿ ಮಂತ್ರಗಳು ಸಂಕಲ್ಪಿಸುತ್ತವೆ, ಮಂತ್ರಗಳ ಸಂಕಲ್ಪಕ್ಕಾಗಿ ಕರ್ಮಗಳು ಸಂಕಲ್ಪಿಸುತ್ತವೆ. ಕರ್ಮಗಳ ಸಂಕಲ್ಪಕ್ಕಾಗಿ ಲೋಕವು ಸಂಕಲ್ಪಿಸುತ್ತದೆ, ಲೋಕದ ಸಂಕಲ್ಪಕ್ಕಾಗಿ ಎಲ್ಲವೂ ಸಂಕಲ್ಪಿಸುತ್ತದೆ. ಆ ಇದು ಸಂಕಲ್ಪವು. ಸಂಕಲ್ಪವನ್ನು ಉಪಾಸನೆ ಮಾಡು.

## ಸರ್ವವೂ ಸಂಕಲ್ಪಮೂಲವಾದ್ದರಿಂದ ಸಂಕಲ್ಪವನ್ನು ಉಪಾಸನೆಮಾಡಬೇಕು

(ಭಾಷ್ಯ)

೫೬೦. ತಾನಿ ಹ ವಾ ಏತಾನಿ ಮನಆದೀನಿ ಸಂಕಲ್ಪೈಕಾಯನಾನಿ ಸಂಕಲ್ಪ ಏಕೋಽಯನಂ ಗಮನಂ ಪ್ರಲಯಃ, ಯೇಷಾಂ ತಾನಿ ಸಂಕಲ್ಪೈಕಾಯನಾನಿ। ಸಂಕಲ್ಪಾತ್ಮಕಾನಿ ಉತ್ಪತ್ತೌ। ಸಂಕಲ್ಪೇ ಪ್ರತಿಷ್ಠಿತಾನಿ ಸ್ಥಿತೌ। ಸಮಕ್ಲೃಪತಾಂ ಸಂಕಲ್ಪಂ ಕೃತವತ್ಯಾವಿವ ಹಿ ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ನಿಶ್ಚಲೇ ಲಕ್ಷ್ಯೇತೇ। ತಥಾ ಸಮಕಲ್ಪೇತಾಂ ವಾಯುಶ್ಚ ಆಕಾಶಂ ಚ। ಏತಾವಪಿ ಸಂಕಲ್ಪಂ ಕೃತವನ್ತಾವಿವ। ತಥಾ ಸಮಕಲ್ಪನ್ತ ಆಪಶ್ಚ ತೇಜಶ್ಚ। ಸ್ವೇನ ರೂಪೇಣ ನಿಶ್ಚಲಾನಿ ಲಕ್ಷ್ಯನ್ತೇ। ಯತಸ್ತೇಷಾಂ ದ್ಯಾವಾಪೃಥಿವ್ಯಾದೀನಾಂ ಸಂಕ್ಲೃಪ್ತ್ಯೈ ಸಂಕಲ್ಪನಿಮಿತ್ತಂ ವರ್ಷಂ ಸಂಕಲ್ಪತೇ ಸಮರ್ಥೀ ಭವತಿ। ತಥಾ ವರ್ಷಸ್ಯ ಸಂಕ್ಲೃಪ್ತ್ಯೈ ಸಂಕಲ್ಪನಿಮಿತ್ತಮ್ ಅನ್ನಂ ಸಂಕಲ್ಪತೇ। ವೃಷ್ಟೇರ್ಹಿ ಅನ್ನಂ ಭವತಿ। ಅನ್ನಸ್ಯ ಸಂಕ್ಲೃಪ್ತ್ಯೈ ಪ್ರಾಣಾಃ ಸಂಕಲ್ಪನ್ತೇ। ಅನ್ನಮಯಾ ಹಿ ಪ್ರಾಣಾ ಅನ್ನೋಪಷ್ಟಮ್ಭಕಾಃ। "ಅನ್ನಂ ದಾಮ" (ಬೃ. ೨-೨-೧) ಇತಿ ಹಿ

ಶ್ರುತಿಃ। ತೇಷಾಂ ಸಂಕ್ಲೃಪ್ತ್ಯೈ ಮನ್ತ್ರಾಃ ಸಂಕಲ್ಪನ್ತೇ। ಪ್ರಾಣವಾನ್ ಹಿ ಮನ್ತ್ರಾನ್ ಅಧೀತೇ ನಾಽಬಲಃ। ಮನ್ತ್ರಾಣಾಂ ಹಿ ಸಂಕ್ಲೃಪ್ತ್ಯೈ ಕರ್ಮಾಣಿ ಅಗ್ನಿಹೋತ್ರಾದೀನಿ ಸಂಕಲ್ಪನ್ತೇಽನುಷ್ಠೀಯಮಾನಾನಿ ಮನ್ತ್ರಪ್ರಕಾಶಿತಾನಿ ಸಮರ್ಥೀ ಭವನ್ತಿ ಫಲಾಯ। ತತೋ ಲೋಕಃ ಫಲಂ ಸಂಕಲ್ಪತೇ। ಕರ್ಮ ಕರ್ತೃಸಮವಾಯಿತಯಾ ಸಮರ್ಥೀ ಭವತೀತ್ಯರ್ಥಃ। ಲೋಕಸ್ಯ ಸಂಕ್ಲೃಪ್ತ್ಯೈ ಸರ್ವಂ ಜಗತ್ ಸಂಕಲ್ಪತೇ ಸ್ವರೂಪಾವೈಕಲ್ಯಾಯ। ಏತದ್ಧೀದಂ ಸರ್ವಂ ಜಗದ್ ಯತ್ಫಲಾವಸಾನಮ್। ತತ್ಸರ್ವಂ ಸಂಕಲ್ಪಮೂಲಮ್। ಅತೋ ವಿಶಿಷ್ಟಃ ಸ ಏಷ ಸಂಕಲ್ಪಃ। ಅತಃ ಸಂಕಲ್ಪಮುಪಾಸ್ಸ್ವ। ಇತ್ಯುಕ್ತ್ವಾ ಫಲಮಾಹ ತದುಪಾಸಕಸ್ಯ ॥

(ಭಾಷ್ಯಾರ್ಥ)

ಈ ಮನಸ್ಸೇ ಮುಂತಾದವು ಸಂಕಲ್ಪವೆಂಬ ಏಕಾಯನವುಳ್ಳವು, ಸಂಕಲ್ಪವೊಂದೇ ಯಾವವಕ್ಕೆ ಅಯನವೋ, ಗಮನವೋ, ಪ್ರಲಯ(ಸ್ಥಾನವೋ), ಅವು ಸಂಕಲ್ಪೈಕಾಯನಗಳು [1] (ಅವು) ಉತ್ಪತ್ತಿ(ಕಾಲ)ದಲ್ಲಿ ಸಂಕಲ್ಪರೂಪಗಳಾಗಿರುವವು [2] ಸ್ಥಿತಿ(ಕಾಲ)ದಲ್ಲಿ ಸಂಕಲ್ಪದಲ್ಲಿ ನಿಂತಿರುವವು [3]

ದ್ಯುಲೋಕವೂ ಪೃಥಿವೀಲೋಕವೂ ಎಂಬ (ದ್ಯಾವಾಪೃಥಿವೀ=ದ್ಯಾವಾಪೃಥಿವ್ಯೌ) ದ್ಯಾವಾಪೃಥಿವಿಗಳು ಸಂಕಲ್ಪವನ್ನು ಮಾಡಿವೆಯೋ ಎಂಬಂತೆ ನಿಶ್ಚಲವಾಗಿ ಕಾಣುತ್ತಿವೆ.[4] ಹೀಗೆಯೇ ವಾಯು, ಆಕಾಶ- ಇವು ಸಂಕಲ್ಪಿಸುತ್ತವೆ, ಸಂಕಲ್ಪವನ್ನು ಮಾಡಿದಂತೆ ಇವೆ [5] ಮತ್ತು ಅಪ್ಪು, ತೇಜಸ್ಸು- (ಇವೂ) ತಮ್ಮ ರೂಪದಿಂದ ನಿಶ್ಚಲವಾಗಿ ಕಾಣುತ್ತವೆ.[6]

ಆ ದ್ಯಾವಾಪೃಥಿವಿ -ಮುಂತಾದವುಗಳ ಸಂಕಲ್ಪಕ್ಕಾಗಿ ಸಂಕಲ್ಪದ ನಿಮಿತ್ತದಿಂದ ಮಳೆಯು ಸಂಕಲ್ಪಿಸುತ್ತದೆ, ಸಮರ್ಥವಾಗುತ್ತದೆ[7], ಹೀಗೆಯೇ ಮಳೆಯ ಸಂಕಲ್ಪಕ್ಕಾಗಿ ಸಂಕಲ್ಪನಿಮಿತ್ತದಿಂದ ಅನ್ನವು ಸಂಕಲ್ಪಿಸುತ್ತದೆ. ಮಳೆಯಿಂದಲ್ಲವೆ,

1 ಸಂಕಲ್ಪವು ಅವ್ಯಕ್ತವಾಗಲು ಅದರಲ್ಲಿ ಮನಸ್ಸು, ವಾಕ್ಕು, ನಾಮ- ಇವೂ ಅಡಗುವವು.

2. ಸಂಕಲ್ಪಕ್ಕೆ ಅಧೀನವಾಗಿಯೇ ಹುಟ್ಟುವವು.

3. ಸಂಕಲ್ಪಕ್ಕೆ ಅಧೀನವಾಗಿಯೇ ಇರುವವು.

4. ಸಂಕಲ್ಪಿಸುತ್ತವೆ ಎಂಬುದು ಉಪಚಾರೋಕ್ತಿಯೆಂದು ಭಾವ.

5. ವಾಯುವೆಂದರೆ ಬೀಸುವ ಗಾಳಿಯ ಪೂರ್ವರೂಪ. ಅದೂ ಆಕಾಶವೂ ನಿಶ್ಚಲವಾಗಿರುತ್ತವೆ.

6. ಉಪಾಧಿಯಿಂದ ಚಲನವುಳ್ಳವಾಗಿದ್ದರೂ ತಮ್ಮ ರೂಪದಿಂದ ನಿಶ್ಚಲವೇ.

7. ಇನ್ನು ಮುಂದೆ ಸಂಕಲ್ಪಿಸುತ್ತವೆ ಎಂದರೆ ಆಗುತ್ತವೆ ಎಂದರ್ಥ; ಸಂಕಲ್ಪಕ್ಕಾಗಿ ಎಂದರೆ ಅದರ ನಿಮಿತ್ತದಿಂದ ಎಂದರ್ಥ.

ಅನ್ನವಾಗುವದು ? ಅನ್ನದ ಸಂಕಲ್ಪಕ್ಕಾಗಿ ಪ್ರಾಣಗಳು ಸಂಕಲ್ಪಿಸುತ್ತವೆ ; ಪ್ರಾಣಗಳು ಅನ್ನಮಯವಾಗಿದ್ದು, ಅನ್ನದ ಆಶ್ರಯದಿಂದಲೇ ನಿಂತಿರುತ್ತವೆಯಲ್ಲವೆ ? "ಅನ್ನವು (ಕಟ್ಟುವ) ಹಗ್ಗವು" (ಬೃ. ೨-೨-೧) ಎಂದಲ್ಲವೆ, ಶ್ರುತಿ ? ಅವುಗಳ ಸಂಕಲ್ಪದಿಂದಾಗಿ ಮಂತ್ರಗಳು ಸಂಕಲ್ಪಿಸುವವು. ಪ್ರಾಣಗಳುಳ್ಳವನು, ಮಂತ್ರಗಳನ್ನು ಅಧ್ಯಯನಮಾಡಿಯಾನೇ ಹೊರತು ದುರ್ಬಲನು (ಮಾಡ)ಲಾರನ.- ಮಂತ್ರಗಳ ಸಂಕಲ್ಪದಿಂದಾಗಿಯಲ್ಲವೆ, ಅಗ್ನಿಹೋತ್ರಾದಿಕರ್ಮಗಳು ಸಂಕಲ್ಪಿಸುತ್ತವೆ, ಮಂತ್ರಗಳಿಂದ ಪ್ರಕಾಶಿತವಾಗಿ ಫಲ(ವನ್ನು ಕೊಡುವದಕ್ಕೆ) ಸಮರ್ಥವಾಗುತ್ತವೆ ? ಅದರಿಂದ ಲೋಕವು, ಫಲವು, ಸಂಕಲ್ಪಿಸುತ್ತದೆ, ಕರ್ಮವನ್ನು ಮಾಡಿದವನಿಗೆ ಸಂಬದ್ಧವಾಗಿ ಸಮರ್ಥವಾಗುತ್ತದೆ ಎಂದರ್ಥ. ಲೋಕದ ಸಂಕಲ್ಪದಿಂದಾಗಿ ಎಲ್ಲಾ ಜಗತ್ತೂ ಸ್ವರೂಪದಲ್ಲಿ ಅವಿಕಲವಾಗಿರುವದಕ್ಕೆ ಸಮರ್ಥವಾಗುತ್ತದೆ. ಫಲದವರೆಗಿನ ಇದೇ ಅಲ್ಲವೆ, ಸರ್ವಜಗತ್ತೆಂಬುದು ? ಅದೆಲ್ಲವೂ ಸಂಕಲ್ಪಮೂಲವಾಗಿರುತ್ತದೆ ಆದ್ದರಿಂದ ಹೆಚ್ಚಿನದು, ಆ ಈ ಸಂಕಲ್ಪವು. ಆದ್ದರಿಂದ ಸಂಕಲ್ಪವನ್ನು ಉಪಾಸನೆಮಾಡು.

ಹೀಗೆಂದು ಹೇಳಿ ಅದನ್ನು ಉಪಾಸನೆಮಾಡುವವನಿಗೆ ಫಲವನ್ನು ಹೇಳುತ್ತಾನೆ .

## ಸಂಕಲ್ಪೋಪಾಸನೆಗೆ ಫಲ

(ಉಪನಿಷತ್ತು)

**ಸ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ ಸಂಕ್ಲೃಪ್ತಾನ್ ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವತ್ ಸಂಕಲ್ಪಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸಂಕಲ್ಪಾದ್ಭೂಯ ಇತಿ ಸಂಕಲ್ಪಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥**

೩. ಯಾವನು ಸಂಕಲ್ಪವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ಕ್ಲೃಪ್ತವಾದ ಧ್ರುವವಾದ ಲೋಕಗಳನ್ನು ಧ್ರುವವಾಗಿ, ಪ್ರತಿಷ್ಠಿತವಾದವನ್ನು ಪ್ರತಿಷ್ಠಿತವಾಗಿ, ಅವ್ಯಥಮಾನವಾದವುಗಳನ್ನು ಅವ್ಯಥಮಾನನಾಗಿ ಸಾಧಿಸಿಕೊಳ್ಳುತ್ತಾನೆ. ಎಲ್ಲಿಯವರೆಗೆ ಸಂಕಲ್ಪದ ಗತಿಯಿರುವದೋ (ಅಲ್ಲಿಯವರೆಗೆ) ಅಲ್ಲಿ ಇವನಿಗೆ ಯಥಾಕಾಮಚಾರವಿರುವದು. ಯಾವನು ಸಂಕಲ್ಪವನ್ನು ಬ್ರಹ್ಮವೆಂದು

ಉಪಾಸನೆಮಾಡುವನೋ (ಅವನಿಗೆ ಈ ಫಲವು). 'ಭಗವಂತನೆ, ಸಂಕಲ್ಪಕ್ಕಿಂತ ಹೆಚ್ಚಿನದು ಇದೆಯೆ?', 'ಸಂಕಲ್ಪಕ್ಕಿಂತ ಹೆಚ್ಚಿನದು ಇದ್ದೇಇದೆ'. 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

## ಸಂಕಲ್ಪೋಪಾಸಕನಿಗೆ ದೊರಕುವ ಲೋಕಗಳು

(ಭಾಷ್ಯ)

೫೬೧. ಸ ಯಃ ಸಂಕಲ್ಪಂ ಬ್ರಹ್ಮೇತಿ ಬ್ರಹ್ಮಬುದ್ಧ್ಯಾ ಉಪಾಸ್ತೇ ಸಂಕ್ಲೃಪ್ತಾನ್ ವೈ ಧಾತ್ರಾ ಅಸ್ಯ ಇಮೇ ಲೋಕಾಃ ಫಲಮಿತಿ ಕ್ಲೃಪ್ತಾನ್ ಸಮರ್ಥಿತಾನ್ ಸಂಕಲ್ಪಿತಾನ್ ಸ ವಿದ್ವಾನ್ ಧ್ರುವಾನ್ ನಿತ್ಯಾನ್ ಅತ್ಯನ್ತಾಧ್ರುವಾಪೇಕ್ಷಯಾ। ಧ್ರುವಶ್ಚ ಸ್ವಯಮ್। ಲೋಕಿನೋ ಹ್ಯಧ್ರುವತ್ವೇ ಲೋಕೇ ಧ್ರುವಕ್ಲೃಪ್ತಿರ್ವ್ಯರ್ಥಾ ಇತಿ ಧ್ರುವಃ ಸನ್। ಪ್ರತಿಷ್ಠಿತಾನ್ ಉಪಕರಣಸಂಪನ್ನಾನ್ ಇತ್ಯರ್ಥಃ। ಪಶುಪುತ್ರಾದಿಭಿಃ ಪ್ರತಿತಿಷ್ಠತಿ ಇತಿ ದರ್ಶನಾತ್। ಸ್ವಯಂ ಚ ಪ್ರತಿಷ್ಠಿತಃ। ಆತ್ಮೀಯೋಪಕರಣಸಂಪನ್ನಃ। ಅವ್ಯಥಮಾನಾನ್ ಅಮಿತ್ರಾದಿತ್ರಾಸರಹಿತಾನ್ ಅವ್ಯಥಮಾನಶ್ಚ ಸ್ವಯಮ್, ಅಭಿಸಿಧ್ಯತಿ ಅಭಿಪ್ರಾಪ್ನೋತಿ ಇತ್ಯರ್ಥಃ। ಯಾವತ್ ಸಂಕಲ್ಪಸ್ಯ ಗತಂ ಸಂಕಲ್ಪಗೋಚರಃ, ತತ್ರ ಅಸ್ಯ ಯಥಾಕಾಮಚಾರೋ ಭವತಿ ಆತ್ಮನಃ ಸಂಕಲ್ಪಸ್ಯ। ನ ತು ಸರ್ವೇಷಾಂ ಸಂಕಲ್ಪಸ್ಯೇತಿ। ಉತ್ತರಫಲವಿರೋಧಾತ್। ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಯಾವನು ಸಂಕಲ್ಪವನ್ನು ಬ್ರಹ್ಮವೆಂಬ ಬುದ್ಧಿಯಿಂದ ಉಪಾಸನೆಮಾಡುವನೋ ಅವನು ಸಂಕ್ಲೃಪ್ತವಾದ- ಇವನಿಗೆ ಈ ಲೋಕಗಳು ಫಲವು ಎಂದು ಧಾತೃವು ಗೊತ್ತುಮಾಡಿರುವ ಕ್ಲೃಪ್ತವಾದ- ಸಂಕಲ್ಪಿತವಾದ, ಧ್ರುವವಾದ ಅತ್ಯಂತವಾಗಿ ಅಧ್ರುವಗಳಾಗಿರುವ (ಲೋಕಗಳಿಗಿಂತ) ನಿತ್ಯವಾಗಿರುವ; (ಲೋಕಗಳನ್ನು), ಆ ಉಪಾಸಕನು ತಾನೂ ಧ್ರುವನಾಗಿ -ಲೋಕವನ್ನು (ಪಡೆದವನು) ಧ್ರುವನಲ್ಲದಿದ್ದರೆ ಲೋಕವು ಧ್ರುವವಾಗಿರಲೆಂಬ ಸಂಕಲ್ಪಿಸಿದ್ದು ವ್ಯರ್ಥವು. ಆದ್ದರಿಂದ (ತಾನೂ) ಧ್ರುವನಾಗಿ- ಪ್ರತಿಷ್ಠಿತವಾದ, ಎಂದರೆ ಉಪಕರಣಗಳಿಂದ ಕೂಡಿರುವ (ಲೋಕಗಳನ್ನು) ಎಂದರ್ಥ. ಪಶುಪುತ್ರಾದಿಗಳಿಂದ ಪ್ರತಿಷ್ಠಿತನಾಗುವನು ಎಂದು (ಶ್ರುತಿಯಲ್ಲಿ ಪ್ರಯೋಗಿಸಿರುವದು) ಕಂಡಿರುವದರಿಂದ (ಪ್ರತಿಷ್ಠಿತವಾದ ಎಂದರೆ ಈ ಅರ್ಥ- ತಾನೂ ಪ್ರತಿಷ್ಠಿತನಾಗಿ ತನ್ನ ಉಪಕರಣಗಳೊಂದಿಗೆ ಕೂಡಿದವನಾಗಿ, ಅವ್ಯಥಮಾನವಾದ, ಶತ್ರುಗಳೇ ಮುಂತಾದವರ ಅಂಜಿಕೆಯಿಲ್ಲದ

(ಲೋಕಗಳನ್ನು) ತಾನೂ ಅವ್ಯಥಮಾನನಾಗಿ ಸಾಧಿಸಿಕೊಳ್ಳುತ್ತಾನೆ, ಪಡೆದು ಕೊಳ್ಳುತ್ತಾನೆ ಎಂದರ್ಥ.

ಎಲ್ಲಿಯವರೆಗೆ ಸಂಕಲ್ಪದ ಗತಿಯಿರುವದೋ, ಅಲ್ಲಿ ಇವನಿಗೆ ಯಥಾಕಾಮ ಚಾರವಿರುವದು. ತನ್ನ ಸಂಕಲ್ಪಕ್ಕೆ (ಎಲ್ಲಿಯವರೆಗೆ ಗತಿಯಿರುವದೋ) ಎಂದರ್ಥ, (ಇಷ್ಟೇ ಹೊರತು) ಎಲ್ಲರ ಸಂಕಲ್ಪದ (ಗತಿಯಿರುವವರೆಗೂ) ಎಂದರ್ಥವಲ್ಲ. ಏಕೆಂದರೆ ಮುಂದೆ (ಹೇಳಿರುವ) ಫಲಕ್ಕೆ ವಿರುದ್ಧವಾಗುವದು.[1] 'ಯಾವನು ಸಂಕಲ್ಪವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ' ಎಂದುಮುಂತಾಗಿರುವ (ಗ್ರಂಥಕ್ಕೆ) ಹಿಂದಿನಂತೆ (ವ್ಯಾಖ್ಯಾನ).

---

# ಏಳನೆಯ ಅಧ್ಯಾಯ-ಐದನೆಯ ಖಂಡ

(ಭೂಮವಿದ್ಯೆ)

## ಚಿತ್ತಬ್ರಹ್ಮ

(ಉಪನಿಷತ್ತು)

**ಚಿತ್ತಂ ವಾವ ಸಂಕಲ್ಪಾದ್ಭೂಯೋ ಯದಾ ವೈ ಚೇತಯತೇಽಥ ಸಂಕಲ್ಪಯತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮನ್ತ್ರಾ ಏಕಂ ಭವನ್ತಿ । ಮನ್ತ್ರೇಷು ಕರ್ಮಾಣಿ ॥ ೧ ॥**

೧. ಚಿತ್ತವೇ ಸಂಕಲ್ಪಕ್ಕಿಂತ ಹೆಚ್ಚಿನದು. ಯಾವಾಗ ಚೇತನ ಮಾಡುತ್ತಾನೋ ಆಗ ಸಂಕಲ್ಪಿಸುತ್ತಾನೆ, ಆಗ ಮನಸ್ಯನಮಾಡು ತ್ತಾನೆ, ಆಮೇಲೆ ವಾಕ್ಕನ್ನು ಪ್ರೇರಿಸುತ್ತಾನೆ, ಮತ್ತು ಅದನ್ನು ನಾಮದಲ್ಲಿ ಪ್ರೇರಿಸುತ್ತಾನೆ. ನಾಮದಲ್ಲಿ ಮಂತ್ರಗಳು ಒಂದಾಗು ತ್ತವೆ, ಮಂತ್ರಗಳಲ್ಲಿ ಕರ್ಮಗಳು.

---

1. ಎಲ್ಲಿಯುವರೆಗೆ ಎಲ್ಲರ ಸಂಕಲ್ಪವೂ ಇರುವದೋ ಅಲ್ಲಿಯವರೆಗೂ ಕಾಮಚಾರ ವಾಯಿತೆಂದರೆ ಅವಕ್ಕಿಂತ ಹೆಚ್ಚಿನ ಗತಿಯಾಗಬೇಕಾದದ್ದೇನೂ ಉಳಿಯುವದೇ ಇಲ್ಲ; ಆದರೆ ಹಾಗೆಂದಿಟ್ಟುಕೊಂಡರೆ ಮುಂದೆ ಚಿತ್ತೋಪಾಸನೆಗೆ ಹೆಚ್ಚಿನ ಫಲವನ್ನು ಹೇಳಿರುವದರಿಂದ ಅದಕ್ಕೆ ಇದು ವಿರುದ್ಧವಾಗುವದು

## ಚಿತ್ತದ ಹೆಚ್ಚುಗಾರಿಕೆ

(ಭಾಷ್ಯ)

೫೬-೨ ಚಿತ್ತಂ ವಾವ ಸಂಕಲ್ಪಾದ್ ಭೂಯಃ । ಚಿತ್ತಂ ಚೇತಯಿತೃತ್ವಂ ಪ್ರಾಪ್ತಕಾಲಾನುರೂಪಬೋಧವತ್ತ್ವಮ್ ಅತೀತಾನಾಗತವಿಷಯಪ್ರಯೋಜನ ನಿರೂಪಣಸಾಮರ್ಥ್ಯಂ ಚ । ತತ್ಸಂಕಲ್ಪಾದಪಿ ಭೂಯಃ । ಕಥಮ್ ? ಯದಾ ವೈ ಪ್ರಾಪ್ತಂ ವಸ್ತು ಇದಮೇವಂ ಪ್ರಾಪ್ತಮಿತಿ ಚೇತಯತೇ ತದಾ ತದಾದಾನಾಯ ವಾ ಅಪೋಹಾಯ ವಾ ಅಥ ಸಂಕಲ್ಪಯತೇ । ಅಥ ಮನಸ್ಯತಿ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಚಿತ್ತವೇ ಸಂಕಲ್ಪಕ್ಕಿಂತ ಹೆಚ್ಚಿನದು. ಚಿತ್ತವೆಂದರೆ ಅರಿಯುವದು, ಬಂದೊದಗಿದ್ದನ್ನು ಕಾಲಾನುರೂಪವಾಗಿರುವದನ್ನು[1] ಅರಿತುಕೊಳ್ಳುವದು , ಆಗಿ ಹೋದ, ಇನ್ನೂ ಬಾರದೆ ಇರುವ, ವಿಷಯದ ಪ್ರಯೋಜನವನ್ನು ಗೊತ್ತುಪಡಿಸುವ ಸಾಮರ್ಥ್ಯವೂ (ಚಿತ್ತವೇ) ಅದು ಸಂಕಲ್ಪಕ್ಕಿಂತಲೂ ಹೆಚ್ಚಿನದು. ಹೇಗೆಂದರೆ, ಯಾವಾಗ ಪ್ರಾಪ್ತವಾದ ವಸ್ತುವನ್ನು ಇದು ಹೀಗೆಯೇ ಬಂದೊದಗಿದೆ ಎಂದು ತಿಳಿಯುತ್ತಾನೋ ಆಗ ಅದನ್ನು ತೆಗೆದುಕೊಳ್ಳುವದಕ್ಕೆ ಅಥವಾ ದೂರವಿರಿಸು ವದಕ್ಕೆ ಸಂಕಲ್ಪಿಸುತ್ತಾನೆ, ಆಗ 'ಮನಸ್ಯನಮಾಡುತ್ತಾನೆ' -ಮುಂತಾದ (ಗ್ರಂಥವು) ಹಿಂದಿನಂತೆ[2] (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು).

## ಚಿತ್ತೋಪಾಸನೆಯ ವಿಧಿ

(ಉಪನಿಷತ್ತು)

**ತಾನಿ ಹ ವಾ ಏತಾನಿ ಚಿತ್ತೈಕಾಯನಾನಿ ಚಿತ್ತಾತ್ಮಾನಿ[3] ಚಿತ್ತೇ ಪ್ರತಿಷ್ಠಿತಾನಿ ತಸ್ಮಾದ್ಯದ್ಯಪಿ ಬಹುವಿದಚಿತ್ತೋ ಭವತಿ ನಾಯ ಮಸ್ತೀತ್ಯೇವೈನಮಾಹುರ್ಯದಯಂ ವೇದ ಯದ್ವಾ ಅಯಂ ವಿದ್ವಾನ್ನೇತ್ಥಮಚಿತ್ತಃ ಸ್ಯಾದಿತ್ಯಥ ಯದ್ಯಲ್ಪವಿಚ್ಚಿತ್ತವಾನ್ ಭವತಿ ತಸ್ಮಾ ಏವೋತ ಶುಶ್ರೂಷನ್ತೇ ಚಿತ್ತಗ್ಂ ಹ್ಯೇವೈಷಾಮೇಕಾ ಯನಂ ಚಿತ್ತಮಾತ್ಮಾ ಚಿತ್ತಂ ಪ್ರತಿಷ್ಠಾ ಚಿತ್ತಮುಪಾಸ್ಸ್ವೇತಿ ॥೨**

೨. ಆ ಇವುಗಳು ಚಿತ್ತವೆಂಬ ಏಕಾಯನವುಳ್ಳವು, ಚಿತ್ತಾತ್ಮ ಗಳು, ಚಿತ್ತದಲ್ಲಿ ಪ್ರತಿಷ್ಠಿತವಾಗಿರುವವು. ಆದ್ದರಿಂದ ಬಹಳವನ್ನು

---

1. ಈಗ ಇದು ಹೀಗೆ ಪ್ರಾಪ್ತವಾಗಿದೆ ಎಂಬುದನ್ನು ಎಂದರ್ಥ.

2. ೭-೪-೧ ರಂತೆ.

3. ಹಿಂದಿನ ಗ್ರಂಥಕ್ಕೆ ಅನುಗುಣವಾಗಿ ಚಿತ್ತಾತ್ಮಕಾನಿ ಎಂದಿರಬೇಕೆಂದು ನಿರೀಕ್ಷಿಸು ವಂತಿದೆ, ಆದರೆ ಭಾಷ್ಯದಲ್ಲಿಯೂ 'ಚಿತ್ತಾತ್ಮಾನಿ' ಎಂದೇ ಇದೆ.

ತಿಳಿದವನಾದರೂ ಅಚಿತ್ತನಾಗಿದ್ದರೆ, ಇವನು ಇಲ್ಲ, ಇವನು ಏನು ಅರಿತಿರುವನೋ (ಅದೂ ಇಲ್ಲ) ; ಇವನು ಅರಿತಿದ್ದರೆ ಹೀಗೆ ಅಚಿತ್ತನಾಗಿರುತ್ತಿರಲಿಲ್ಲ' ಎಂದು ಇವನನ್ನುಕುರಿತು ಹೇಳುತ್ತಾರೆ. ಇನ್ನು ಸ್ವಲ್ಪವೇ ತಿಳಿದಿದ್ದರೂ ಚಿತ್ತವಂತನಾಗಿದ್ದರೆ ಅವನಿಗಾಗಿಯೇ ಕೇಳಲಿಚ್ಛಿಸುವರು. ಚಿತ್ತವೇ ಅಲ್ಲವೆ, ಇವುಗಳಿಗೆ ಏಕಾಯನವು? ಚಿತ್ತವೇ ಆತ್ಮನು, ಚಿತ್ತವೇ ಪ್ರತಿಷ್ಠೆ. ಚಿತ್ತವನ್ನು ಉಪಾಸನೆಮಾಡು.

## ಎಲ್ಲವೂ ಚಿತ್ತಮೂಲಕವಾಗಿರುವದರಿಂದ ಚಿತ್ತವನ್ನು ಉಪಾಸನೆಮಾಡಬೇಕು

(ಭಾಷ್ಯ)

೫.೨ ತಾನಿ ಸಂಕಲ್ಪಾದೀನಿ ಕರ್ಮಫಲಾನ್ತಾನಿ ಚಿತ್ತೈಕಾಯನಾನಿ ಚಿತ್ತಾತ್ಮಾನಿ ಚಿತ್ತೋತ್ಪತ್ತೀನಿ ಚಿತ್ತೇ ಪ್ರತಿಷ್ಠಿತಾನಿ ಚಿತ್ತಸ್ಥಿತಾನೀತ್ಯಪಿ ಪೂರ್ವವತ್ । ಕಿಂ ಚ ಚಿತ್ತಸ್ಯ ಮಾಹಾತ್ಮ್ಯಮ್ । ಯಸ್ಮಾಚ್ಚಿತ್ತಂ ಸಂಕಲ್ಪಾದಿಮೂಲಂ ತಸ್ಮಾದ್ ಯದ್ಯಪಿ ಬಹುವಿತ್ ಬಹುಶಾಸ್ತ್ರಾದಿಪರಿಜ್ಞಾನವಾನ್ ಸನ್ ಅಚಿತ್ತೋ ಭವತಿ ಪ್ರಾಪ್ತಾದಿಚೇತಯಿತೃತ್ವಸಾಮರ್ಥ್ಯವಿರಹಿತೋ ಭವತಿ .ತಂ ನಿಪುಣಾ ಲೌಕಿಕಾ ನಾಯಮಸ್ತಿ ವಿದ್ಯಮಾನೋಽಪಿ ಅಸತ್ಸಮ ಏವ ಇತ್ಯೇನಮ್ ಆಹುಃ । ಯಚ್ಚಾಽಯಂ ಕಿಂಚಿತ್ ಶಾಸ್ತ್ರಾದಿ ವೇದ ಶ್ರುತವಾನ್ ತದಪ್ಯಸ್ಯ ವೃಥೈವೇತಿ ಕಥಯನ್ತಿ । ಕಸ್ಮಾತ್ ? ಯದ್ಯಯಂ ವಿದ್ವಾನ್ ಸ್ಯಾತ್, ಇತ್ಥಮ್ ಏವಮ್ ಅಚಿತ್ತೋ ನ ಸ್ಯಾತ್। ತಸ್ಮಾದಸ್ಯ ಶ್ರುತಮಪ್ಯಶ್ರುತಮೇವ ಇತ್ಯಾಹುರಿತ್ಯರ್ಥಃ । ಅಥ ಅಲ್ಪವಿದಪಿ ಯದಿ ಚಿತ್ತವಾನ್ ಭವತಿ ತಸ್ಮೈ ಏತಸ್ಮೈ (ಏವ) ತದುಕ್ತಾರ್ಥಗ್ರಹಣಾಯೈವ ಉತ ಅಪಿ ಶುಶ್ರೂಷನ್ತೇ ಶ್ರೋತುಮಿಚ್ಛನ್ತಿ । ತಸ್ಮಾಚ್ಚ ಚಿತ್ತಂ ಹಿ ಏವ ಏಷಾಂ ಸಂಕಲ್ಪಾದೀನಾಮ್ ಏಕಾಯನಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಆ ಸಂಕಲ್ಪವು ಮೊದಲಾಗಿ ಕರ್ಮಫಲದವರೆಗಿನವುಗಳು[1] ಚಿತ್ತವೆಂಬ ಏಕಾಯನವುಳ್ಳವು, ಚಿತ್ತಾತ್ಮಗಳು, ಚಿತ್ತದಿಂದ ಹುಟ್ಟಿರುವವುಗಳು, ಚಿತ್ತದಲ್ಲಿ ಪ್ರತಿಷ್ಠಿತವಾಗಿಯೂ ಇರುವವು ಚಿತ್ತದಲ್ಲಿರುವವು- ಎಂಬ (ಇದನ್ನು)ಕೂಡ[2] ಹಿಂದಿನಂತೆ (ತಿಳಿಯಬೇಕು). ಮತ್ತು ಚಿತ್ತದ (ಮಾಹಾತ್ಮ್ಯವಿದು) : ಚಿತ್ತವು

1. ೭-೪-೨ರಲ್ಲಿ ಹೇಳಿದವು. 2. ೭-೪-೨ರ ಭಾಷ್ಯದಂತೆ.

ಸಂಕಲ್ಪಾದಿಗಳಿಗೆ ಮೂಲವಷ್ಟೆ, ಆದ್ದರಿಂದ ಬಹಳವನ್ನು ತಿಳಿದವನಾದರೂ ಬಹು ಶಾಸ್ತ್ರಾದಿಗಳ ತಿಳಿವಳಿಕೆಯುಳ್ಳವನಾಗಿದ್ದೂ ಅಚಿತ್ತನಾಗಿದ್ದರೆ, ಪ್ರಾಪ್ತವಾದದ್ದೇ ಮುಂತಾದದ್ದನ್ನು ಅರಿಯುವ ಸಾಮರ್ಥ್ಯವಿಲ್ಲದವನಾದರೆ, ಅವನನ್ನು ಜಾಣರಾದ ಜನರು 'ಇವನು ಇಲ್ಲ, ಇದ್ದರೂ ಇಲ್ಲದಂತೆಯೇ' ಎನ್ನುವರು. ಮತ್ತು ಇವನು ಶಾಸ್ತ್ರವೇ ಮುಂತಾಗಿ ಏನನ್ನು ತಿಳಿದಿರುವನೋ ಶ್ರವಣಮಾಡಿರುವನೋ ಅದೂ ಇವನಿಗೆ ವ್ಯರ್ಥವೇ ಎಂದು ನುಡಿಯುತ್ತಾರೆ. ಏಕೆ ? ಎಂದರೆ, ಇವನು ತಿಳಿದವನಾಗಿದ್ದರೆ, (ಇತ್ಥಮ್=ಏವಮ್) ಹೀಗೆ ಅಚಿತ್ತನಾಗಿರುತ್ತಿರಲಿಲ್ಲ, ಆದ್ದರಿಂದ ಇವನು ಶ್ರವಣಮಾಡಿದ್ದೂ ಶ್ರವಣಮಾಡಿದ್ದಲ್ಲ ಎಂದು ನುಡಿಯುತ್ತಾರೆ ಎಂದರ್ಥ. ಇನ್ನು ಸ್ವಲ್ಪವನ್ನು ತಿಳಿದುಕೊಂಡವನಾದರೂ ಚಿತ್ತವಂತನಾಗಿದ್ದರೆ, ಆ ಇವನಿಗೆ ಅವನು ಹೇಳಿದ ಅರ್ಥವನ್ನು ಗ್ರಹಣಮಾಡುವದಕ್ಕೇ (ಉತ=ಅಪಿ) ಕೂಡ (ಶುಶ್ರೂಷನ್ತೇ=) ಶ್ರವಣಮಾಡಲೆಳಸುತ್ತಾರೆ. ಆದ್ದರಿಂದಲೂ ಚಿತ್ತವೇ ಅಲ್ಲವೆ, 'ಈ ಸಂಕಲ್ಪಾದಿಗಳಿಗೆ ಏಕಾಯನವು' ಎಂದು ಹಿಂದಿನಂತೆ ಅರಿಯಬೇಕು.

## ಚಿತ್ತಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇ ಚಿತ್ತಾನ್ ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವಚ್ಚಿತ್ತಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಶ್ಚಿತ್ತಾದ್ ಭೂಯ ಇತಿ ಚಿತ್ತಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೩ ॥**

೩. ಯಾವನು ಚಿತ್ತವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ಚಿತ್ತವಾದ ಧ್ರುವವಾದ ಲೋಕಗಳನ್ನು ಧ್ರುವನಾಗಿ, ಪ್ರತಿಷ್ಠಿತವಾದದ್ದನ್ನು ಪ್ರತಿಷ್ಠಿತನಾಗಿ ಅವ್ಯಥಮಾನವಾದವನ್ನು ಅವ್ಯಥಮಾನನಾಗಿ ಸಾಧಿಸಿಕೊಳ್ಳುತ್ತಾನೆ. ಎಲ್ಲಿಯವರೆಗೆ ಚಿತ್ತದ ಗತಿಯಿರುವದೋ ಅಲ್ಲಿ(ಯವರೆಗೆ) ಇವನಿಗೆ ಯಥಾಕಾಮಚಾರ ವಿರುವದು. ಯಾವನು ಚಿತ್ತವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ ಈ ಫಲವು). 'ಭಗವಂತನೆ, ಚಿತ್ತಕ್ಕಿಂತ ಹೆಚ್ಚಿನದು ಇದೆಯೆ?', 'ಚಿತ್ತಕ್ಕಿಂತ ಹೆಚ್ಚಿನದು ಇದ್ದೇಇದೆ.', 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

## ಚಿತ್ತೋಪಾಸಕನಿಗೆ ಚಿತ್ತಕ್ಷೇತ್ರದಲ್ಲೆಲ್ಲ ಸ್ವಾತಂತ್ರ್ಯ

(ಭಾಷ್ಯ)

೫೬೪. ಚಿತ್ತಾನ್ ಉಪಚಿತಾನ್ ಬುದ್ಧಿಮದ್ಗುಣೈಃ। ಸ ಚಿತ್ತೋಪಾಸಕೋ ಧ್ರುವಾನ್ ಇತ್ಯಾದಿ ಚೋಕ್ತಾರ್ಥಮ್ ॥

(ಭಾಷ್ಯಾರ್ಥ)

ಚಿತ್ತವಾದ, ಎಂದರೆ ಬುದ್ಧಿವಂತರ ಗುಣಗಳಿಂದ ಹೆಚ್ಚಾಗಿ ಕೂಡಿರುವ (ಎಂದರ್ಥ). ಆ ಚಿತ್ತೋಪಾಸಕನು, 'ಧ್ರುವವಾದ (ಲೋಕಗಳನ್ನು)' ಮುಂತಾದದ್ದಕ್ಕೆ ಅರ್ಥವನ್ನು ಹೇಳಿದಂತಾಗಿದೆ.[1]

---

# ಏಳನೆಯ ಅಧ್ಯಾಯ–ಆರನೆಯ ಖಂಡ

(ಭೂಮವಿದ್ಯೆ)

## ಧ್ಯಾನಬ್ರಹ್ಮೋಪಾಸನಾವಿಧಿ

(ಉಪನಿಷತ್ತು)

**ಧ್ಯಾನಂ ವಾವ ಚಿತ್ತಾದ್ಭೂಯೋ ಧ್ಯಾಯತೀವ ಪೃಥಿವೀ ಧ್ಯಾಯತೀವಾಽನ್ತರಿಕ್ಷಂ ಧ್ಯಾಯತೀವ ದ್ಯೌರ್ಧ್ಯಾಯನ್ತೀವಾಽಽಪೋ ಧ್ಯಾಯನ್ತೀವ ಪರ್ವತಾ ಧ್ಯಾಯನ್ತೀವ ದೇವಮನುಷ್ಯಾಸ್ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವನ್ತಿ ಧ್ಯಾನಾಪಾದಾಗ್ಂಶಾ ಇವೈವ ತೇ ಭವನ್ತ್ಯಥ ಯೇಽಲ್ಪಾಃ ಕಲಹಿನಃ ಪಿಶುನಾ ಉಪವಾದಿನಸ್ತೇಽಥ ಯೇ ಪ್ರಭವೋ ಧ್ಯಾನಾಪಾದಾಗ್ಂಶಾ ಇವೈವ ತೇ ಭವನ್ತಿ ಧ್ಯಾನಮುಪಾಸ್ಸ್ವೇತಿ ॥೧॥**

೧. ಧ್ಯಾನವೇ ಚಿತ್ತಕ್ಕಿಂತ ಹೆಚ್ಚಿನದು. ಪೃಥಿವಿಯು ಧ್ಯಾನ ಮಾಡುವಂತಿದೆ, ಅಂತರಿಕ್ಷವು ಧ್ಯಾನಮಾಡುವಂತಿದೆ, ದ್ಯುಲೋಕವು ಧ್ಯಾನಮಾಡುವಂತಿದೆ, ಅಪ್ಪು ಧ್ಯಾನಮಾಡುವಂತಿದೆ, ಪರ್ವತಗಳು ಧ್ಯಾನಮಾಡುವಂತಿವೆ, ದೇವಮನುಷ್ಯರುಗಳು ಧ್ಯಾನಮಾಡುವಂತಿದಾರೆ. ಇಲ್ಲಿ ಮನುಷ್ಯರಲ್ಲಿ ಯಾರು ಮಹತ್ತೆಯನ್ನು ಪಡೆಯು

---

1. ೭-೪-೩ರಂತೆ ಹೊಂದಿಸಿಕೊಂಡು ಅರ್ಥವನ್ನು ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ

ತ್ತಾರೋ, ಅವರು ಧ್ಯಾನಾಪಾದಾಂಶರಿದ್ದಂತೆಯೇ ಇರುತ್ತಾರೆ. ಇನ್ನು ಯಾರು ಅಲ್ಪರಾಗಿರುತ್ತಾರೋ (ಅವರು) ಕಲಹಿಗಳು, ಪಿಶುನರು, ಉಪವಾದಿಗಳು (ಆಗಿರುತ್ತಾರೆ). ಇನ್ನು ಯಾರು ಪ್ರಭುಗಳೋ ಅವರು ಧ್ಯಾನಾಪಾದಾಂಶರಾಗಿದ್ದಂತೆಯೇ ಇರುತ್ತಾರೆ. ಧ್ಯಾನವನ್ನು ಉಪಾಸನೆಮಾಡು.

## ಧ್ಯಾನದ ಹೆಚ್ಚುಗಾರಿಕೆ

(ಭಾಷ್ಯ)

೫೬೩ ಧ್ಯಾನಂ ವಾವ ಚಿತ್ತಾದ್ಭೂಯಃ। ಧ್ಯಾನಂ ನಾಮ ಶಾಸ್ತ್ರೋಕ್ತ ದೇವತಾದ್ಯಾಲಮ್ಬನೇಷ್ವಚಲೋ ಭಿನ್ನಜಾತೀಯೈರನನ್ತರಿತಃ ಪ್ರತ್ಯಯಸಂತಾನಃ। ಏಕಾಗ್ರತೇತಿ ಯಮಾಹುಃ। ದೃಶ್ಯತೇ ಚ ಧ್ಯಾನಸ್ಯ ಮಾಹಾತ್ಮ್ಯಂ ಫಲತಃ। ಕಥಮ್? ಯಥಾ ಯೋಗೀ ಧ್ಯಾಯನ್ ನಿಶ್ಚಲೋ ಭವತಿ ಧ್ಯಾನಫಲಲಾಭೇ ಏವಂ ಧ್ಯಾಯತೀವ। ನಿಶ್ಚಲಾ ದೃಶ್ಯತೇ ಪೃಥಿವೀ। ಧ್ಯಾಯತೀವಾಽನ್ತರಿಕ್ಷಮ್ ಇತ್ಯಾದಿ ಸಮಾನಮನ್ಯತ್। ದೇವಾಶ್ಚ ಮನುಷ್ಯಾಶ್ಚ ದೇವಮನುಷ್ಯಾಃ। ಮನುಷ್ಯಾ ಏವ ವಾ ದೇವಸಮಾ ದೇವಮನುಷ್ಯಾಃ, ಶಮಾದಿಗುಣಸಂಪನ್ನಾ ಮನುಷ್ಯಾಃ। ದೇವಸ್ವರೂಪಂ ನ ಜಹತೀತ್ಯರ್ಥಃ। ಯಸ್ಮಾದೇವಂ ವಿಶಿಷ್ಟಂ ಧ್ಯಾನಂ ತಸ್ಮಾದ್ ಯ ಇಹ ಲೋಕೇ ಮನುಷ್ಯಾಣಾಮೇವ ಧನೈರ್ವಿದ್ಯಯಾ ಗುಣೈರ್ವಾ ಮಹತ್ತಾಂ ಮಹತ್ತ್ವಂ ಪ್ರಾಪ್ನುವನ್ತಿ ಧನಾದಿಮಹತ್ತ್ವಹೇತುಂ ಲಭನ್ತ ಇತ್ಯರ್ಥಃ। ಧ್ಯಾನಾಪಾದಾಂಶಾ ಇವ। ಧ್ಯಾನಸ್ಯ ಆಪಾದನಮ್ ಆಪಾದಃ। ಧ್ಯಾನಫಲಲಾಭ ಇತ್ಯೇತತ್। ತಸ್ಯಾಂಶಃ, ಅವಯವಃ ಕಲಾ ಕಾಚಿದ್। ಧ್ಯಾನಫಲಲಾಭಕಲಾವನ್ತ ಇವೈವ ಇತ್ಯರ್ಥಃ। ತೇ ಭವನ್ತಿ। ನಿಶ್ಚಲಾ ಇವ ಲಕ್ಷ್ಯನ್ತೇ ನ ಕ್ಷುದ್ರಾ ಇವ। ಅಥ ಯೇ ಪುನರಲ್ಪಾಃ ಕ್ಷುದ್ರಾಃ ಕಿಂಚಿದಪಿ ಧನಾದಿಮಹತ್ತ್ವೈಕದೇಶಮ್ ಅಪ್ರಾಪ್ತಾಃ, ತೇ ಪೂರ್ವೋಕ್ತವಿಪರೀತಾಃ ಕಲಹಿನಃ ಕಲಹಶೀಲಾಃ। ಪಿಶುನಾಃ ಪರದೋಷೋದ್ಭಾಸಕಾಃ, ಉಪವಾದಿನಃ ಪರದೋಷಂ ಸಾಮೀಪ್ಯಯುಕ್ತಮೇವ ವದಿತುಂ ಶೀಲಂ ಯೇಷಾಂ ತ ಉಪವಾದಿನಶ್ಚ ಭವನ್ತಿ। ಅಥ ಯೇ ಮಹತ್ತ್ವಂ ಪ್ರಾಪ್ತಾ ಧನಾದಿನಿಮಿತ್ತಂ ತೇಽನ್ಯಾನ್ ಪ್ರತಿ ಪ್ರಭವನ್ತೀತಿ ಪ್ರಭವಃ, ವಿದ್ಯಾಚಾರ್ಯರಾಜೇಶ್ವರಾದಯೋ ಧ್ಯಾನಾಪಾದಾಂಶಾ ಇವೇತ್ಯಾದಿ ಉಕ್ತಾರ್ಥಮ್। ಅತೋ ದೃಶ್ಯತೇ ಧ್ಯಾನಸ್ಯ ಮಹತ್ತ್ವಂ ಫಲತಃ। ಅತೋ ಭೂಯಶ್ಚಿತ್ತಾತ್। ಅತಸ್ತದುಪಾಸ್ಸ್ವ ಇತ್ಯಾದ್ಯುಕ್ತಾರ್ಥಮ್ ॥

(ಭಾಷ್ಯಾರ್ಥ)

ಧ್ಯಾನವೇ ಚಿತ್ತಕ್ಕಿಂತ ಹೆಚ್ಚಿನದು ಧ್ಯಾನವೆಂದರೆ ಶಾಸ್ತ್ರದಲ್ಲಿ ಹೇಳಿರುವ ದೇವತೆಯೇ ಮುಂತಾದ ಆಲಂಬನಗಳಲ್ಲಿ ನಿಶ್ಚಲವಾಗಿ ಬೇರೆಯ ಜಾತಿಯ

(ಪ್ರತ್ಯಯ)ಗಳು ನಡುವೆ ಬಾರದಂತೆ (ಸಾಗಿರುವ) ಪ್ರತ್ಯಯಪ್ರವಾಹವು ಅದನ್ನು 'ಏಕಾಗ್ರತೆ'ಯೆನ್ನುವರು. ಧ್ಯಾನದ ಹೆಚ್ಚುಗಾರಿಕೆಯು ಫಲದಿಂದ ಕಂಡೂಬರುತ್ತಿದೆ ಹೇಗೆಂದರೆ, ಹೇಗೆ **ಯೋಗಿಯು**[1] ಧ್ಯಾನಮಾಡುವಾಗ ಧ್ಯಾನದ ಫಲವು ಸಿಕ್ಕಲು ನಿಶ್ಚಲನಾಗಿರುತ್ತಾನೋ, ಹಾಗೆಯೇ ಪೃಥಿವಿಯೂ ಧ್ಯಾನಮಾಡುವಂತೆ ನಿಶ್ಚಲವಾಗಿರುವದು ಕಂಡುಬರುತ್ತದೆ 'ಅಂತರಿಕ್ಷವು ಧ್ಯಾನಮಾಡುವಂತಿದೆ' ಮುಂತಾದ ಮಿಕ್ಕ ಗ್ರಂಥಭಾಗವೂ (ಇದಕ್ಕೆ) ಸಮಾನ(ವಾದ ಅರ್ಥವುಳ್ಳದ್ದು), ದೇವಮನುಷ್ಯರು ಎಂದರೆ ದೇವತೆಗಳೂ ಮನುಷ್ಯರೂ ಎಂದರ್ಥ, ಅಥವಾ ದೇವಸಮಾನರಾಗಿ ಶಮಾದಿಗುಣಸಂಪನ್ನರಾಗಿರುವ ಮನುಷ್ಯರು ದೇವಮನುಷ್ಯರು, ದೇವಸ್ವರೂಪವನ್ನು ಬಿಡದೆ (ಇರುವವರು) ಎಂದರ್ಥ.

ಹೀಗೆ ಧ್ಯಾನವು ಹೆಚ್ಚಿನದಷ್ಟೆ ? ಆದ್ದರಿಂದ ಈ ಲೋಕದಲ್ಲಿ ಮನುಷ್ಯರುಗಳೊಳಗೇ ಧನಗಳಿಂದ, ವಿದ್ಯೆಯಿಂದ, ಅಥವಾ ಗುಣಗಳಿಂದ ಯಾರು ಮಹತ್ತೆಯನ್ನು, ದೊಡ್ಡತನವನ್ನು ಪಡೆದಿರುತ್ತಾರೋ, ದೊಡ್ಡಸ್ತಿಕೆಗೆ ಕಾರಣವಾದ ಧನವೇ ಮುಂತಾದ ದೊಡ್ಡಸ್ತಿಕೆಯ ನಿಮಿತ್ತವನ್ನು ಪಡೆದುಕೊಂಡಿರುತ್ತಾರೋ ಎಂದರ್ಥ ಅವರು ಧ್ಯಾನಾಪಾದಾಂಶರಂತೆ, ಧ್ಯಾನವನ್ನು ಉಂಟುಮಾಡುವದೇ ಧ್ಯಾನಾಪಾದವು, ಧ್ಯಾನಫಲದ ಲಾಭವು ಎಂದರ್ಥ ; ಅದರ ಅಂಶವು, ಅವಯವವು, ಒಂದಾನೊಂದು ಕಲೆಯು, (ಇರುವವರಂತೆ). ಧ್ಯಾನಫಲಲಾಭದ ಒಂದು ಕಲೆಯುಳ್ಳವರಂತೆಯೇ ಇರುತ್ತಾರೆ, ನಿಶ್ಚಲರಾದಂತೆ ಕಾಣುತ್ತಾರೆಯೇ ಹೊರತು ಸಣ್ಣ ಜನರಂತೆ ಕಾಣಿಸುವದಿಲ್ಲ. ಇನ್ನು ಯಾರು ಅಲ್ಪರೋ ಸಣ್ಣ ಜನರೋ ಧನವೇ ಮುಂತಾದ ದೊಡ್ಡಸ್ತಿಕೆಯ ಒಂದು ಭಾಗವನ್ನುಕೂಡ ಪಡೆದುಕೊಂಡಿಲ್ಲವೋ ಅವರು ಈ ಮೊದಲು ಹೇಳಿದವರಿಗೆ ವಿಪರೀತರಾಗಿ ಕಲಹಿಗಳೂ ಜಗಳವಾಡುವ ಸ್ವಭಾವದವರೂ ಪಿಶುನರೂ ಮತ್ತೊಬ್ಬರ ದೋಷವನ್ನು (ತೆಗೆದು) ಚಾಡಿಹೇಳುವವರೂ ಉಪವಾದಿಗಳೂ ಮತ್ತೊಬ್ಬರ ದೋಷವನ್ನು ಹತ್ತಿರವೇ ಆಡುವ ಸ್ವಭಾವದವರಾದ ಉಪವಾದಿಗಳಿರುತ್ತಾರಲ್ಲ ಅಂಥವರೂ ಆಗಿರುತ್ತಾರೆ. ಇದಕ್ಕೆ ಬದಲು ಧನಾದಿನಿಮಿತ್ತದ ದೊಡ್ಡಸ್ತಿಕೆಯನ್ನು ಸಂಪಾದಿಸಿಕೊಂಡಿರುವರಿದಾರಲ್ಲ, ಅವರು ಮತ್ತೊಬ್ಬರ ಮೇಲೆ ಪ್ರಭಾವವುಳ್ಳವರಾಗಿರುತ್ತಾರಾದ್ದರಿಂದ ಪ್ರಭುಗಳಾಗಿರುವವರು ; ವಿದ್ಯಾಚಾರ್ಯನು, ರಾಜನು, ಒಡೆಯನು- ಮುಂತಾದವರಿದಾರಲ್ಲ, (ಅವರು) 'ಧ್ಯಾನಾಪಾದಾಂಶರಂತೆಯೇ' ಎಂದು ಮುಂತಾದದ್ದಕ್ಕೆ ಅರ್ಥವನ್ನು ಹೇಳಿದೆ.

ಆದ್ದರಿಂದ ಧ್ಯಾನದ ಹೆಚ್ಚುಗಾರಿಕೆಯು ಫಲದಿಂದ ಕಂಡುಬರುತ್ತದೆ. ಆದ್ದರಿಂದ (ಅದು) ಚಿತ್ತಕ್ಕಿಂತ ಹೆಚ್ಚಿನದು. ಆದ್ದರಿಂದ ಅದನ್ನು ಉಪಾಸನೆ ಮಾಡು- ಎಂದು ಮುಂತಾದದ್ದಕ್ಕೆ ಅರ್ಥವನ್ನು ಹೇಳಿದಂತಾಗಿದೆ.

---

1. ಉಪಾಸಕನು.

## ಧ್ಯಾನಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇ ಯಾವದ್ಧ್ಯಾನಸ್ಯ ಗತಂ ತತ್ರಾಽಸ್ಯ ಯಥಾಕಾಮಚಾರೋ ಭವತಿ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಧ್ಯಾನಾದ್ ಭೂಯ ಇತಿ ಧ್ಯಾನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಧ್ಯಾನವನ್ನು ಬ್ರಹ್ಮವೆಂದು ಉಪಾಸನೆ ಮಾಡುವನೋ ಅವನಿಗೆ ಎಲ್ಲಿಯವರಗೆ ಧ್ಯಾನದ ಗತಿಯಿರುವದೋ ಅಲ್ಲಿ(ಯವರೆಗೆ) ಅವನಿಗೆ ಯಥಾಕಾಮಚಾರವಿರುವದು. ಯಾವನು ಧ್ಯಾನವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ ಫಲವಿದು). 'ಭಗವಂತನೆ, ಧ್ಯಾನಕ್ಕಿಂತ ಹೆಚ್ಚಿನದು ಇದೆಯೆ?' 'ಧ್ಯಾನಕ್ಕಿಂತ ಹೆಚ್ಚಿನದು ಇದ್ದೇ ಇದೆ'. 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

---

# ಏಳನೆಯ ಅಧ್ಯಾಯ-ಏಳನೆಯ ಖಂಡ

(ಭೂಮವಿದ್ಯೆ)

## ವಿಜ್ಞಾನಬ್ರಹ್ಮ

(ಉಪನಿಷತ್ತು)

**ವಿಜ್ಞಾನಂ ವಾವ ಧ್ಯಾನಾದ್ ಭೂಯೋ ವಿಜ್ಞಾನೇನ ವಾ ಋಗ್ವೇದಂ ವಿಜಾನಾತಿ ಯಜುರ್ವೇದಗ್ಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಞ್ಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಗ್ಂ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಽಪಶ್ಚ ತೇಜಶ್ಚ ದೇವಾಗ್ಂಶ್ಚ ಮನುಷ್ಯಾಗ್ಂಶ್ಚ ಪಶೂಗ್ಂಶ್ಚ ವಯಾಗ್ಂಸಿ ಚ ತೃಣವನಸ್ಪತೀಞ್ಶ್ವಾಪದಾನ್ಯಾಕೀಟಪತಙ್ಗಪಿಪೀಲಿಕಂ ಧರ್ಮಂ**

**ಚಾಧರ್ಮಂ ಚ ಸತ್ಯಂ ಚಾಽನೃತಂ ಚ ಸಾಧು ಚಾಽಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚಾನ್ನಂ ಚ ರಸಂ ಚೇಮಂ ಚ ಲೋಕಮಮುಂ ಚ ವಿಜ್ಞಾನೇನೈವ ವಿಜಾನಾತಿ ವಿಜ್ಞಾನಮುಪಾಸ್ಸ್ವೇತಿ ॥೧॥**

೧. ವಿಜ್ಞಾನವೇ ಧ್ಯಾನಕ್ಕಿಂತ ಹೆಚ್ಚಿನದು. ವಿಜ್ಞಾನದಿಂದಲೇ ಋಗ್ವೇದವನ್ನು ಅರಿಯುತ್ತಾನೆ. ಯಜುರ್ವೇದವನ್ನು, ಸಾಮವೇದವನ್ನು, ನಾಲ್ಕನೆಯದಾದ ಆಥರ್ವಣವನ್ನು, ಐದನೆಯದಾದ ಇತಿಹಾಸಪುರಾಣವನ್ನು, ವೇದಗಳ ವೇದವನ್ನು, ಪಿತ್ರ್ಯವನ್ನು, ರಾಶಿಯನ್ನು, ದೈವವನ್ನು, ನಿಧಿಯನ್ನು, ವಾಕೋವಾಕ್ಯವನ್ನು, ಏಕಾಯನವನ್ನು, ದೇವವಿದ್ಯೆಯನ್ನು, ಬ್ರಹ್ಮವಿದ್ಯೆಯನ್ನು, ಭೂತವಿದ್ಯೆಯನ್ನು, ಕ್ಷತ್ರವಿದ್ಯೆಯನ್ನು, ನಕ್ಷತ್ರವಿದ್ಯೆಯನ್ನು, ಸರ್ಪದೇವಜನವಿದ್ಯೆಯನ್ನು, ದ್ಯುಲೋಕವನ್ನು, ಪೃಥಿವಿಯನ್ನೂ, ವಾಯುವನ್ನೂ ಆಕಾಶವನ್ನೂ ಅಪ್ಪನ್ನೂ ತೇಜಸ್ಸನ್ನೂ ದೇವತೆಗಳನ್ನೂ ಮನುಷ್ಯರನ್ನೂ, ಪಶುಗಳನ್ನೂ ಪಕ್ಷಿಗಳನ್ನೂ, ಹುಲ್ಲುಮರಗಳನ್ನೂ, ಹಿಂಸ್ರಮೃಗಗಳನ್ನೂ, ಹುಳುಜಿಟ್ಟೆಇರುವೆಯವರೆಗೂ (ಎಲ್ಲವನ್ನೂ), ಧರ್ಮವನ್ನೂ ಅಧರ್ಮವನ್ನೂ, ಸತ್ಯವನ್ನೂ ಅನೃತವನ್ನೂ, ಒಳ್ಳೆಯದನ್ನೂ ಕೆಟ್ಟದ್ದನ್ನೂ, ಹೃದಯಜ್ಞವಾದದ್ದನ್ನೂ ಅಹೃದಯಜ್ಞವಾದದ್ದನ್ನೂ, ಅನ್ನವನ್ನೂ, ರಸವನ್ನೂ, ಈ ಲೋಕವನ್ನೂ ಆ (ಲೋಕ)ವನ್ನೂ ವಿಜ್ಞಾನದಿಂದಲೇ ಅರಿಯುತ್ತಾನೆ. ವಿಜ್ಞಾನವನ್ನು ಉಪಾಸನೆಮಾಡು.

## ವಿಜ್ಞಾನದ ಹೆಚ್ಚುಗಾರಿಕೆ

**(ಭಾಷ್ಯ)**

**೫೬೬.** ವಿಜ್ಞಾನಂ ವಾವ ಧ್ಯಾನಾದ್ ಭೂಯಃ। ವಿಜ್ಞಾನಂ ಶಾಸ್ತ್ರಾರ್ಥವಿಷಯಂ ಜ್ಞಾನಮ್। ತಸ್ಯ ಧ್ಯಾನಕಾರಣತ್ವಾದ್ ಧ್ಯಾನಾದ್ ಭೂಯಸ್ತ್ವಮ್ ಕಥಂ ಚ ತಸ್ಯ ಭೂಯಸ್ತ್ವಮಿತಿ ? ಆಹ । ವಿಜ್ಞಾನೇನ ವಾ ಋಗ್ವೇದಂ ವಿಜಾನಾತಿ ಅಯಮೃಗ್ವೇದ ಇತಿ ಪ್ರಮಾಣತಯಾ। ಯಸ್ಯಾರ್ಥಜ್ಞಾನಂ ಧ್ಯಾನಕಾರಣಮ್। ತಥಾ ಯಜುರ್ವೇದಮ್ ಇತ್ಯಾದಿ। ಕಿಂಚ ಪಶ್ವಾದೀಂಶ್ಚ ಧರ್ಮಾಧರ್ಮೌ ಶಾಸ್ತ್ರಸಿದ್ಧೌ ಸಾಧ್ವಸಾಧುನೀ ಲೋಕತಃ ಸ್ಮಾರ್ತೇ ವಾ ದೃಷ್ಟವಿಷಯಂ

ಚ ಸರ್ವಂ ವಿಜ್ಞಾನೇನೈವ ವಿಜಾನಾತೀತ್ಯರ್ಥಃ । ತಸ್ಮಾದ್ ಯುಕ್ತಂ ಧ್ಯಾನಾದ್ ವಿಜ್ಞಾನಸ್ಯ ಭೂಯಸ್ತ್ವಮ್ । ಅತೋ ವಿಜ್ಞಾನಮ್ ಉಪಾಸ್ಸ್ವೇತಿ ॥

(ಭಾಷ್ಯಾರ್ಥ)

ವಿಜ್ಞಾನವೇ ಧ್ಯಾನಕ್ಕಿಂತ ಹೆಚ್ಚಿನದು. **ವಿಜ್ಞಾನ**ವೆಂದರೆ ಶಾಸ್ತ್ರಾರ್ಥ ವಿಷಯದ ಜ್ಞಾನವು. ಅದು ಧ್ಯಾನಕ್ಕೆ ಕಾರಣವಾಗಿರುವದರಿಂದ ಧ್ಯಾನಕ್ಕಿಂತ (ಅದು) ಹೆಚ್ಚು. ಅದು ಹೆಚ್ಚೆಂಬುದು ಮತ್ತೂ ಹೇಗೆಂದರೆ, ಹೇಳುತ್ತಾನೆ : ವಿಜ್ಞಾನದಿಂದಲೇ ಋಗ್ವೇದವನ್ನು– ಇದು ಋಗ್ವೇದವೆಂದು, ಪ್ರಮಾಣವೆಂದು– ಅರಿತುಕೊಳ್ಳುತ್ತಾನೆ. ಅದರ ಅರ್ಥಜ್ಞಾನವೇ ಧ್ಯಾನಕ್ಕೆ[1] ಕಾರಣವು. ಹೀಗೆಯೇ 'ಯಜುರ್ವೇದವನ್ನು' (ಅರಿಯುತ್ತಾನೆ)– ಎಂದು ಮುಂತಾಗಿರುವ (ಗ್ರಂಥವನ್ನು ವ್ಯಾಖ್ಯಾನಮಾಡಿಕೊಳ್ಳಬೇಕು)[2]. ಮತ್ತು ಪಶ್ವಾದಿಗಳನ್ನೂ ಶಾಸ್ತ್ರಸಿದ್ಧವಾದ ಧರ್ಮಾಧರ್ಮಗಳನ್ನೂ ಲೋಕ(ಸಿದ್ಧವಾದ) ಅಥವಾ ಸ್ಮಾರ್ತವಾದ ಸಾಧ್ವಸಾಧು ಗಳನ್ನೂ– ಎಲ್ಲವನ್ನೂ ವಿಜ್ಞಾನದಿಂದಲೇ ಅರಿಯುತ್ತಾನೆ ಎಂದರ್ಥ. ಆದ್ದರಿಂದ ಧ್ಯಾನಕ್ಕಿಂತ ವಿಜ್ಞಾನವು ಹೆಚ್ಚಿನದು ಎಂಬುದು ಯುಕ್ತವು. ಆದ್ದರಿಂದ ವಿಜ್ಞಾನ ವನ್ನು ಉಪಾಸನೆಮಾಡು.

## ವಿಜ್ಞಾನಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ ವಿಜ್ಞಾನವತೋ ವೈ ಸ ಲೋಕಾಞ್ಜ್ಞಾನವತೋಽಭಿಸಿಧ್ಯತಿ ಯಾವದ್ವಿಜ್ಞಾನಸ್ಯ ಗತಂ ತತ್ರಾಽಸ್ಯ ಯಥಾಕಾಮಚಾರೋ ಭವತಿ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಿಜ್ಞಾನಾದ್ ಭೂಯ ಇತಿ ವಿಜ್ಞಾನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀ ತ್ವಿತಿ ॥ ೨ ॥**

೨. ಯಾವನು ವಿಜ್ಞಾನವನ್ನು ಬ್ರಹ್ಮವೆಂದು ಉಪಾಸನೆ ಮಾಡುತ್ತಾನೋ ಅವನು ವಿಜ್ಞಾನವುಳ್ಳ ಮತ್ತು ಜ್ಞಾನವುಳ್ಳ ಲೋಕ ಗಳನ್ನು ಸಾಧಿಸಿಕೊಳ್ಳುತ್ತಾನೆ. ಎಲ್ಲಿಯವರಿಗೆ ವಿಜ್ಞಾನದ ಗತಿ ಯಿರುವದೋ ಅಲ್ಲಿ(ಯವರೆಗೆ) ಅವನಿಗೆ ಯಥಾಕಾಮಚಾರವಿರು

---

1. ಗೀ. ಭಾ. ೧೨–೧೨ (ಭಾ. ಭಾ. ೧೯೮) ನೋಡಿ

2. ವಾಕ್ಕಿನ ಹೆಚ್ಚುಗಾರಿಕೆಯನ್ನು ತಿಳಿಸುವ ೭–೨–೧ರಂತೆ ಇದನ್ನು ವ್ಯಾಖ್ಯಾನ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

ವದು. ಯಾವನು ವಿಜ್ಞಾನವು ಬ್ರಹ್ಮವೆಂದು ಉಪಾಸನೆಮಾಡು ತ್ತಾನೋ (ಅವನಿಗೆ ಫಲವಿದು). 'ಭಗವಂತನೆ, ವಿಜ್ಞಾನಕ್ಕಿಂತ ಹೆಚ್ಚಿನದು ಇದೆಯೆ ?' 'ವಿಜ್ಞಾನಕ್ಕಿಂತ ಹೆಚ್ಚಿನದು ಇದ್ದೇ ಇದೆ.' 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

## ವಿಜ್ಞಾನೋಪಾಸಕನಿಗೆ ವಿಜ್ಞಾನಕ್ಷೇತ್ರದಲ್ಲೆಲ್ಲ ಸ್ವಾತಂತ್ರ್ಯ

(ಭಾಷ್ಯ)

೫೬೭. ಶೃಣು ಉಪಾಸನಾಫಲಮ್ । ವಿಜ್ಞಾನವತಃ– ವಿಜ್ಞಾನಂ ಯೇಷು ಲೋಕೇಷು ತಾನ್ ವಿಜ್ಞಾನವತಃ ಲೋಕಾನ್— ಜ್ಞಾನವತಶ್ಚ ಅಭಿಸಿಧ್ಯತಿ ಅಭಿಪ್ರಾಪ್ನೋತಿ । ವಿಜ್ಞಾನಂ ಶಾಸ್ತ್ರಾರ್ಥವಿಷಯಂ ಜ್ಞಾನಮ್ ಅನ್ಯವಿಷಯಂ ನೈಪುಣ್ಯಮ್ । ತದ್ವದ್ಭಿರ್ಯುಕ್ತಾನ್ ಲೋಕಾನ್ ಪ್ರಾಪ್ನೋತೀತ್ಯರ್ಥಃ । ಯಾವದ್ ವಿಜ್ಞಾನಸ್ಯ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಈ ಉಪಾಸನೆಯ ಫಲವನ್ನು (ಹೇಳುವೆನು) ಕೇಳು. ವಿಜ್ಞಾನವುಳ್ಳ –ವಿಜ್ಞಾನವು ಯಾವ ಲೋಕದಲ್ಲಿರುವದೋ ಅಂಥ ವಿಜ್ಞಾನವಂತವಾದ ಲೋಕ ಗಳನ್ನು, ಮತ್ತು ಜ್ಞಾನವುಳ್ಳ ಲೋಕಗಳನ್ನು ಸಾಧಿಸಿಕೊಳ್ಳುತ್ತಾನೆ, ಪಡೆದು ಕೊಳ್ಳುತ್ತಾನೆ. ವಿಜ್ಞಾನವೆಂದರೆ ಶಾಸ್ತ್ರಾರ್ಥವಿಷಯದ (ತಿಳಿವಳಿಕೆ), ಜ್ಞಾನ ವೆಂದರೆ ಮಿಕ್ಕ ವಿಷಯವಾದ ಜಾಣತನವು[1], ಅವುಗಳುಳ್ಳವರಿಂದೊಡಗೂಡಿದ ಲೋಕಗಳನ್ನು ಪಡೆದುಕೊಳ್ಳುತ್ತಾನೆ ಎಂದರ್ಥ. ಎಲ್ಲಿಯವರೆಗೆ ವಿಜ್ಞಾನದ (ಗತಿ ಯಿರುವದೊ) ಎಂದು ಮುಂತಾದದ್ದು ಹಿಂದಿನಂತೆ (ಅರ್ಥಮಾಡಿಕೊಳ್ಳತಕ್ಕದ್ದು).

---

# ಏಳನೆಯ ಅಧ್ಯಾಯ–ಎಂಟನೆಯ ಖಂಡ

(ಭೂಮವಿದ್ಯೆ)

## ಬಲಬ್ರಹ್ಮ

(ಉಪನಿಷತ್ತು)

**ಬಲಂ ವಾವ ವಿಜ್ಞಾನಾದ್ಭೂಯೋಽಪಿ ಹಿ ಶತಂ ವಿಜ್ಞಾನವತಾ ಮೇಕೋ ಬಲವಾನಾಕಂಪಯತೇ ಸ ಯದಾ ಬಲೀ ಭವ**

1. ಲೌಕಿಕವಾದ ಕಲೆಗಳಲ್ಲಿ ನೈಪುಣ್ಯವು ಎಂದರ್ಥ. ಜ್ಞಾನವೆಂದರೆ ಶಾಸ್ತ್ರವಿಚಾರದ ಜ್ಞಾನವೆಂದೂ ವಿಜ್ಞಾನವೆಂದರೆ ಅದರ ಅನುಭವವೆಂದೂ ವ್ಯಾಖ್ಯಾನಮಾಡುವದು ಭಾಷ್ಯದಲ್ಲಿ ಪದ್ಧತಿ, ಆದರೆ ಅದು ಪ್ರಕೃತಕ್ಕೆ ಹೊಂದುವದಿಲ್ಲವಾದ್ದರಿಂದ ಹೀಗೆ ಅರ್ಥಮಾಡಿರಬೇಕು.

**ತ್ಯೈಥೋತ್ಥಾತಾ ಭವತ್ಯುತ್ತಿಷ್ಠನ್ ಪರಿಚರಿತಾ ಭವತಿ ಪರಿ ಚರನ್ನುಪಸತ್ತಾ ಭವತ್ಯುಪಸೀದನ್ ದ್ರಷ್ಟಾ ಭವತಿ ಶ್ರೋತಾ ಭವತಿ ಮನ್ತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತಿ ಬಲೇನ ವೈ ಪೃಥಿವೀ ತಿಷ್ಠತಿ ಬಲೇನಾನ್ತರಿಕ್ಷಂ ಬಲೇನ ದ್ಯೌರ್ಬಲೇನ ಪರ್ವತಾ ಬಲೇನ ದೇವಮನುಷ್ಯಾ ಬಲೇನ ಪಶ ವಶ್ಚ ವಯಾಗ್ಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟ ಪತಙ್ಗಪಿಪೀಲಕಂ ಬಲೇನ ಲೋಕಸ್ತಿಷ್ಠತಿ ಬಲಮುಪಾ ಸ್ಸ್ವೇತಿ ॥ ೧ ॥**

೧. ಬಲವೇ ವಿಜ್ಞಾನಕ್ಕಿಂತ ಹೆಚ್ಚಿನದು. ವಿಜ್ಞಾನವುಳ್ಳವರು ನೂರು(ಮಂದಿ)ಯನ್ನೂ ಬಲವಂತನು ನಡುಗಿಸುತ್ತಾನೆ. ಅವನು ಯಾವಾಗ ಬಲಿಯಾಗುತ್ತಾನೋ ಆಗ ಏಳುತ್ತಾನೆ, ಎದ್ದು ಪರಿಚರ್ಯೆಯನ್ನು ಮಾಡುತ್ತಾನೆ, ಪರಿಚರ್ಯೆಯನ್ನು ಮಾಡಿದರೆ ಉಪಸತ್ತಿಮಾಡಿದವನಾಗುತ್ತಾನೆ, ಉಪಸತ್ತಿಯನ್ನು ಮಾಡಿದರೆ ನೋಡುವವನಾಗುತ್ತಾನೆ, ಕೇಳುವವನಾಗುತ್ತಾನೆ, ಆಲೋಚಿಸುವವನಾಗುತ್ತಾನೆ, ತಿಳಿದುಕೊಳ್ಳುವವನಾಗುತ್ತಾನೆ, ಮಾಡುವವನಾಗುತ್ತಾನೆ, ಅರಿತುಕೊಳ್ಳುವವನಾಗುತ್ತಾನೆ. ಬಲದಿಂದಲೇ ಪೃಥಿವಿಯು ನಿಂತಿದೆ; ಬಲದಿಂದಲೇ ಅಂತರಿಕ್ಷವು, ಬಲದಿಂದಲೇ ದ್ಯುಲೋಕವು, ಬಲದಿಂದಲೇ ಪರ್ವತಗಳು, ಬಲದಿಂದಲೇ ದೇವಮನುಷ್ಯರು, ಬಲದಿಂದಲೇ ಪಶುಗಳು, ಪಕ್ಷಿಗಳು, ಹುಲ್ಲುಮರಗಳು, ಹಿಂಸ್ರಮೃಗಗಳು, ಹುಳುಜಿಟ್ಟೆ ಇರುವೆಗಳವರೆಗೆ (ಎಲ್ಲವೂ). ಬಲದಿಂದಲೇ ಲೋಕವು ನಿಂತಿರುತ್ತದೆ. ಬಲವನ್ನು ಉಪಾಸನೆಮಾಡು.

## ಬಲದ ಹೆಚ್ಚುಗಾರಿಕೆ

**(ಭಾಷ್ಯ)**

೫೬೮. ಬಲಂ ವಾವ ವಿಜ್ಞಾನಾದ್ ಭೂಯಃ । ಬಲಮಿತಿ ಅನ್ನೋಪಯೋಗಜನಿತಂ ಮನಸೋ ವಿಜ್ಞೇಯೇ ಪ್ರತಿಭಾನಸಾಮರ್ಥ್ಯಮ್ । ಅನಶನಾದ್ ಋಗಾದೀನಿ "ನ ವೈ ಮಾ ಪ್ರತಿಭಾನ್ತಿ ಭೋಃ" (೬-೭-೨) ಇತಿ ಶ್ರುತೇಃ । ಶರೀರೇಽಪಿ ತದೇವೋತ್ಥಾನಾದಿಸಾಮರ್ಥ್ಯಂ ಯಸ್ಮಾದ್ ವಿಜ್ಞಾನವತಾಂ ಶತಮಪ್ಯೇಕಃ ಪ್ರಾಣೀ ಬಲವಾನ್ ಆಕಮ್ಪಯತೇ । ಯಥಾ ಹಸ್ತೀ ಮತ್ತೋ ಮನುಷ್ಯಾಣಾಂ ಶತಂ ಸಮುದಿತಮಪಿ । ಯಸ್ಮಾದೇವಮ್ ಅನ್ನಾದ್ಯುಪಯೋಗ

ನಿಮಿತ್ತಂ ಬಲಂ ತಸ್ಮಾತ್ ಸ ಪುರುಷೋ ಯದಾ ಬಲೀ ಬಲೇನ ತದ್ವಾನ್ ಭವತಿ ಅಥ ಉತ್ಥಾತಾ ಉತ್ಥಾನಸ್ಯ ಕರ್ತಾ । ಉತ್ತಿಷ್ಠಂಶ್ಚ ಗುರೂಣಾಮಾಚಾರ್ಯಸ್ಯ ಚ ಪರಿಚರಿತಾ ಪರಿಚರಣಸ್ಯ ಶುಶ್ರೂಷಾಯಾಃ ಕರ್ತಾ ಭವತಿ । ಪರಿಚರನ್ ಉಪಸತ್ತಾ ತೇಷಾಂ ಸಮೀಪಗತೋಽನ್ತರಙ್ಗಃ ಪ್ರಿಯೋ ಭವತೀತ್ಯರ್ಥಃ। ಉಪಸೀದಂಶ್ಚ ಸಾಮೀಪ್ಯಂ ಗಚ್ಛನ್ ಏಕಾಗ್ರತಯಾ ಆಚಾರ್ಯಸ್ಯ ಅನ್ಯಸ್ಯ ಚೋಪದೇಷ್ಟುರ್ಗುರೋರ್ದ್ರಷ್ಟಾ ಭವತಿ । ತತಸ್ತದುಕ್ತಸ್ಯ ಶ್ರೋತಾ ಭವತಿ । ತತ ಇದಮೇಭಿರುಕ್ತಮ್ ಏವಮುಪಪದ್ಯತೇ ಇತ್ಯುಪಪತ್ತಿತೋ ಮನ್ತಾ ಭವತಿ । ಮನ್ವಾನಶ್ಚ ಬೋದ್ಧಾ ಭವತ್ಯೇವಮೇವೇದಮಿತಿ । ತತ ಏವಂ ನಿಶ್ಚಿತ್ಯ ತದುಕ್ತಾರ್ಥಸ್ಯ ಕರ್ತಾ ಅನುಷ್ಠಾತಾ ಭವತಿ । ವಿಜ್ಞಾತಾ ಅನುಷ್ಠಾನಫಲಸ್ಯ ಅನುಭವಿತಾ ಭವತೀತ್ಯರ್ಥಃ । ಕಿಂಚ ಬಲಸ್ಯ ಮಾಹಾತ್ಮ್ಯಂ ಬಲೇನ ವೈ ಪೃಥಿವೀ ತಿಷ್ಠತಿ ಇತ್ಯಾದಿ ಋಜ್ವರ್ಥಮ್ ॥

(ಭಾಷ್ಯಾರ್ಥ)

ಬಲವೇ ವಿಜ್ಞಾನಕ್ಕಿಂತ ಹೆಚ್ಚಿನದು **ಬಲ**ವೆಂದರೆ ಅನ್ನವನ್ನು ಉಪಯೋಗಿಸುವದರಿಂದ ಉಂಟಾದ, ಮನಸ್ಸು ವಿಜ್ಞೇಯವಿಷಯದಲ್ಲಿ ಹೋಳೆಯುವ ಸಾಮರ್ಥ್ಯವು. ಊಟಮಾಡದ್ದರಿಂದ ಋಗಾದಿಗಳು 'ನನಗೆ ತೋಚುವದೇ ಇಲ್ಲ, ಸ್ವಾಮಿ' (೬-೭-೨) ಎಂದು ಶ್ರುತಿ (ಹೇಳುತ್ತಿರು)ವದರಿಂದ (ಹೀಗೆಂದು ಗೊತ್ತಾಗುತ್ತದೆ). ಶರೀರದಲ್ಲಿಯೂ ಏಳುವದೇ ಮುಂತಾದ ಸಾಮರ್ಥ್ಯವೂ ಅದೇ. ಏಕೆಂದರೆ ವಿಜ್ಞಾನವಂತರಾದ ನೂರು ಮಂದಿಯನ್ನು ಒಬ್ಬ ಬಲವಂತನಾದ ಪ್ರಾಣಿಯು ನಡುಗಿಸುತ್ತಾನೆ, ಉದಾಹರಣೆಗೆ ಮದಿಸಿದ ಆನೆಯು ಗುಂಪುಕೂಡಿದ ನೂರಾರು ಮನುಷ್ಯರನ್ನು (ನಡುಗಿಸುತ್ತದೆ) ಅನ್ನವೇ ಮುಂತಾದದ್ದನ್ನು ಉಪಯೋಗಿಸಿದ ನಿಮಿತ್ತದಿಂದಾದ ಬಲವು ಹೀಗಿರುವದಷ್ಟೆ. ಆದ್ದರಿಂದ ಆ ಪುರುಷನು ಯಾವಾಗ ಬಲಿಯು ಬಲವುಳ್ಳವನಾಗಿರುತ್ತಾನೋ, ಆಗ ಏಳುವವನು, ಎದ್ದುನಿಲ್ಲುವ (ಕ್ರಿಯೆಯ) ಕರ್ತೃ(ವಾಗುತ್ತಾನೆ). ಎದ್ದು(ನಿಂತರೆ) ಗುರುಗಳನ್ನೂ ಆಚಾರ್ಯರನ್ನೂ[1] ಪರಿಚರ್ಯೆಮಾಡುವವನು-ಪರಿಚರಣವೆಂದರೆ ಶುಶ್ರೂಷೆಯು, (ಅದನ್ನು) ಮಾಡುವವನು- ಆಗುತ್ತಾನೆ. ಪರಿಚರ್ಯೆಮಾಡಿದರೆ ಉಪಸತ್ತಿಮಾಡಿದವನು, ಅವರ ಹತ್ತಿರಬಂದು, (ಅವರ) ಅಂತರಂಗವಾಗಿ ಪ್ರಿಯನಾಗುತ್ತಾನೆ ಎಂದರ್ಥ. ಉಪಸತ್ತಿಮಾಡಿದರೆ, ಹತ್ತಿರಕ್ಕೆ ಬಂದರೆ, ಏಕಾಗ್ರತೆಯಿಂದ ಆಚಾರ್ಯನನ್ನು ಉಪದೇಶಮಾಡುವ ಮತ್ತೊಬ್ಬನಾದ ಗುರುವನ್ನು ನೋಡುವವನಾಗುತ್ತಾನೆ. ಅದರಿಂದ ಅವರು ಹೇಳಿದ್ದನ್ನು ಕೇಳುವವನಾಗು

---

1 ಗುರುವು ಎಂದರೆ ಉಪದೇಶಮಾಡಿದವನು, ಆಚಾರ್ಯನೆಂದರೆ ಮುಖ್ಯವಾಗಿ ತನ್ನ ನಡೆನುಡಿಗಳನ್ನು ತಿದ್ದುವದಕ್ಕೆ ಗೊತ್ತುಮಾಡಿಕೊಂಡಿರುವ ಗುರು.

ತ್ತಾನೆ. ಆಬಳಿಕ ಇವರು ಹೇಳಿದ ಇದು ಹೀಗೆ ಹೊಂದುಗಡೆಯಾಗುತ್ತದೆ ಎಂದು ಉಪಪತ್ತಿಯಿಂದ ಆಲೋಚಿಸುವವನಾಗುತ್ತಾನೆ. ಮನನಮಾಡಿದರೆ ಇದು ಹೀಗೆಯೇ (ಸರಿ) ಎಂದು (ನಿಶ್ಚಯಿಸಿ) ತಿಳಿದುಕೊಳ್ಳುವವನಾಗುತ್ತಾನೆ. ಆಮೇಲೆ ಹೀಗೆ ನಿಶ್ಚಯಿಸಿಕೊಂಡು ಅವರು ಹೇಳಿದ ಅರ್ಥವನ್ನು ಮಾಡುವವನು, ನಡೆಯಿಸುವವನಾಗುತ್ತಾನೆ, ಅರಿತುಕೊಳ್ಳುವವನು ಎಂದರೆ ಹಾಗೆ ಮಾಡಿದ್ದರ ಫಲವನ್ನು ಅನುಭವಿಸುವವನು ಆಗುತ್ತಾನೆ ಎಂದರ್ಥ

ಬಲದ ಹೆಚ್ಚುಗಾರಿಕೆಯು ಮತ್ತೂ ಏನೆಂದರೆ, ಬಲದಿಂದಲೇ ಪೃಥಿವಿಯು ನಿಂತುಕೊಂಡಿದೆ- ಎಂದು ಮುಂತಾದದ್ದಕ್ಕೆ ಅರ್ಥವನ್ನು ಹೇಳಿದಂತಾಗಿದೆ.[1]

## ಬಲಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋ ಬಲಂ ಬ್ರಹ್ಮೇತ್ಯುಪಾಸ್ತೇ ಯಾವದ್ ಬಲಸ್ಯ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋ ಬಲಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಬಲಾದ್ಭೂಯ ಇತಿ ಬಲಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಬಲವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನಿಗೆ ಎಲ್ಲಿಯವರೆಗೆ ಬಲದ ಗತಿಯಿರುವದೋ ಅಲ್ಲಿ(ಯವರೆಗೆ) ಯಥಾಕಾಮಚಾರವಿರುವದು. ಯಾವನು ಬಲವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನಿಗೆ (ಫಲವಿದು). 'ಭಗವಂತನೆ, ಬಲಕ್ಕಿಂತ ಹೆಚ್ಚಿನದು ಇದೆಯೆ ?', 'ಬಲಕ್ಕಿಂತ ಹೆಚ್ಚಿನದು ಇದ್ದೇ ಇದೆ.', 'ಭಗವಂತನು ಅದನ್ನು ನನಗೆ ಹೇಳಿಕೊಡಬೇಕು'.

---

# ಏಳನೆಯ ಅಧ್ಯಾಯ-ಒಂಬತ್ತನೆಯ ಖಂಡ

(ಭೂಮವಿದ್ಯೆ)

## ಅನ್ನಬ್ರಹ್ಮ

(ಉಪನಿಷತ್ತು)

**ಅನ್ನಂ ವಾವ ಬಲಾದ್ಭೂಯಸ್ತಸ್ಮಾದ್ಯದ್ಯಪಿ ದಶರಾತ್ರೀರ್ನಾಶ್ನೀಯಾದ್ಯದ್ಯು ಹ ಜೀವೇದಥವಾಽದ್ರಷ್ಟಾಽಶ್ರೋತಾಽಮನ್ತಾ**

1. ಇಲ್ಲಿರುವ ಪೃಥಿವ್ಯಾದಿಶಬ್ದಗಳಿಗೆ ಹಿಂದೆ ಅರ್ಥವನ್ನು ಹೇಳಿದೆ ಎಂದರ್ಥ.

**ಬೋದ್ಧಾಽಕರ್ತಾಽವಿಜ್ಞಾತಾ ಭವತ್ಯಥಾಽನ್ನಸ್ಯಾಽಯೀ[1] ದ್ರಷ್ಟಾ ಭವತಿ ಶ್ರೋತಾ ಭವತಿ ಮನ್ತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತ್ಯನ್ನಮುಪಾಸ್ಸ್ವೇತಿ ॥ ೧ ॥**

೧. ಅನ್ನವೇ ಬಲಕ್ಕಿಂತ ಹೆಚ್ಚಿನದು, ಆದ್ದರಿಂದ ಹತ್ತು ರಾತ್ರಿಗಳು ಊಟಮಾಡದೆ ಇದ್ದರೂ ಜೀವಿಸಿಕೊಂಡಿದ್ದರೆ, ಅಥವಾ ಅದ್ರಷ್ಟೃವಾಗಿ, ಅಶ್ರೋತೃವೂ, ಅಮಂತೃವೂ, ಅಬೋದ್ಧೃವೂ, ಅಕರ್ತೃವೂ, ಅವಿಜ್ಞಾತೃವೂ ಆಗುತ್ತಾನೆ. ಇನ್ನು ಅನ್ನದ ಆಯಿಯಾದರೆ ದ್ರಷ್ಟೃವಾಗುತ್ತಾನೆ, ಶ್ರೋತೃವಾಗುತ್ತಾನೆ, ಮಂತೃವಾಗುತ್ತಾನೆ, ಬೋದ್ಧೃವಾಗುತ್ತಾನೆ, ಕರ್ತೃವಾಗುತ್ತಾನೆ, ವಿಜ್ಞಾತೃವಾಗುತ್ತಾನೆ. ಅನ್ನವನ್ನು ಉಪಾಸನೆಮಾಡು.

## ಅನ್ನದ ಹೆಚ್ಚುಗಾರಿಕೆಯೂ ಉಪಾಸನಾವಿಧಿಯೂ

(ಭಾಷ್ಯ)

೫೭೯. ಅನ್ನಂ ವಾವ ಬಲಾದ್ ಭೂಯಃ । ಬಲಹೇತುತ್ವಾತ್ । ಕಥಮನ್ನಸ್ಯ ಬಲಹೇತುತ್ವಮಿತಿ ? ಉಚ್ಯತೇ । ಯಸ್ಮಾತ್ ಬಲಕಾರಣಮ್ ಅನ್ನಂ ತಸ್ಮಾದ್ ಯದ್ಯಪಿ ಕಶ್ಚಿದ್ದಶರಾತ್ರೀರ್ನಾಶ್ನೀಯಾತ್ ಸೋಽನ್ನೋಪಯೋಗನಿಮಿತ್ತಸ್ಯ ಬಲಸ್ಯ ಹಾನ್ಯಾ ಮ್ರಿಯತೇ । ನ ಚೇನ್ಮ್ರಿಯತೇ ಯದ್ಯು ಹ ಜೀವೇತ್ । ದೃಶ್ಯನ್ತೇ ಹಿ ಮಾಸಮಪಿ ಅನಶ್ನನ್ತೋ ಜೀವನ್ತಃ । ಅಥವಾ ಸ ಜೀವನ್ನಪಿ ಅದ್ರಷ್ಟಾ ಭವತಿ ಗುರೋರಪಿ । ತತ ಏವಾಶ್ರೋತಾ ಇತ್ಯಾದಿ ಪೂರ್ವವಿಪರೀತಂ ಸರ್ವಂ ಭವತಿ । ಅಥ ಯದಾ ಬಹೂನ್ಯಹಾನಿ ಅನಶಿತೋ ದರ್ಶನಾದಿಕ್ರಿಯಾಸು ಅಸಮರ್ಥಃ ಸನ್ ಅನ್ನಸ್ಯ ಆಯೀ । ಆಗಮನಮಾಯಃ । ಅನ್ನಸ್ಯ ಪ್ರಾಪ್ತಿರಿತ್ಯರ್ಥಃ । ಸ ಯಸ್ಯ ವಿದ್ಯತೇ ಸೋಽನ್ನಸ್ಯಾಽಽಯೀ । ಆಯೀ ಇತ್ಯೇತದ್ ವರ್ಣವ್ಯತ್ಯಯೇನ । 'ಅಥಾನ್ನಸ್ಯಾಯ್ಯೈ' ಇತ್ಯಪಿ ಪಾಠೇ ಏವಮೇವಾರ್ಥಃ । ದ್ರಷ್ಟೇತ್ಯಾದಿ ಕಾರ್ಯಶ್ರವಣಾತ್ । ದೃಶ್ಯತೇ ಹಿ ಅನ್ನೋಪಯೋಗೇ ದರ್ಶನಾದಿಸಾಮರ್ಥ್ಯಂ ನ ತದಪ್ರಾಪ್ತೌ । ಅತೋಽನ್ನಮ್ ಉಪಾಸ್ಸ್ವ ಇತಿ ॥

---

1 ಭಾಷ್ಯದಲ್ಲಿ ಮೊದಲು ತೆಗೆದುಕೊಂಡಿರುವ ಪಾಠವಿದು ; 'ಅನ್ನಸ್ಯಾಯ್ಯೈ' ಎಂಬ ಪಾಠವನ್ನು ಎರಡನೆಯದಾಗಿ ಭಾಷ್ಯದಲ್ಲಿ ಹಿಡಿದಿದೆ.

(ಭಾಷ್ಯಾರ್ಥ)

ಅನ್ನವೇ ಬಲಕ್ಕಿಂತಲೂ ಹೆಚ್ಚಿನದು ಏಕೆಂದರೆ (ಅದು) ಬಲಕ್ಕೆ ಕಾರಣವಾಗಿರುತ್ತದೆ. ಅನ್ನವು ಬಲಕ್ಕೆ ಕಾರಣವೆಂಬುದು ಹೇಗೆ ? ಎಂದರೆ ಹೇಳುತ್ತಾನೆ. ಅನ್ನವು ಬಲಕ್ಕೆ ಕಾರಣವಾಗಿದೆಯಲ್ಲ, ಅದರಿಂದಲೇ ಯಾವನಾದರೂ ಹತ್ತುರಾತ್ರಿಗಳವರೆಗೆ ಊಟಮಾಡದೆ ಇದ್ದರೆ, ಅವನು ಅನ್ನವನ್ನು ಉಪಯೋಗಿಸುವ ನಿಮಿತ್ತದಿಂದಾದ ಬಲವು ಹೋಗಿಬಿಡುವದರಿಂದ ಸಾಯುತ್ತಾನೆ. ಒಂದುವೇಳೆ ಬದುಕಿದ್ದರೆ –ತಿಂಗಳುವರೆಗೆ ಊಟಮಾಡದೆ ಬದುಕಿರುವವರೂ ಕಾಣಬರುತ್ತಾರಷ್ಟೆ ?– ಅವನು ಬದುಕಿದ್ದರೂ ಗುರುವನ್ನುಕೂಡ ಕಾಣಲಾರದವನಾದರೂ ಆಗುವನು ಆದರಿಂದ 'ಕೇಳದವನಾಗುವನು'– ಎಂದುಮುಂತಾಗಿ ಹಿಂದಿನ (ಗ್ರಂಥ) ದಲ್ಲಿ ಹೇಳಿದ್ದಕ್ಕೆ ವಿಪರೀತವಾಗಿಯೇ ಎಲ್ಲವೂ ಆಗುವದು.[1] ಇನ್ನು ಯಾವಾಗ ಒಹುದಿನಗಳವರೆಗೆ ಊಟಮಾಡದೆ ದರ್ಶನವೇ ಮುಂತಾದ ಕ್ರಿಯೆಗಳಲ್ಲಿ ಸಮರ್ಥನಾಗದೆ ಅನ್ನದ ಆಯಿಯಾಗುವನೋ– ಆಯವೆಂದರೆ (ಅನ್ನವು) ಬರುವಿಕೆ ಅನ್ನದ ಪ್ರಾಪ್ತಿ ಎಂದರ್ಥ , ಅದು ಯಾವನಿಗೆ ಇರುವದೋ ಅವನು ಅನ್ನದ ಆಯಿಯು ಆಯೀ (ಎಂದು ಮೂಲದಲ್ಲಿರುವ) ಈ (ಪಾದವು ಆಯೀ ಎಂಬುದರ) ವರ್ಣವನ್ನು ಮಾರ್ಪಡಿಸಿ ಆದದ್ದು. ಅನ್ನಸ್ಯ ಆಯ್ಯೈ ಎಂಬ ಪಾಠವಲ್ಲಿಯೂ ಹೀಗೆಯೇ ಅರ್ಥ , ಏಕೆಂದರೆ '(ಆಗ) ದ್ರಷ್ಟೃವಾಗುತ್ತಾನೆ' ಎಂದು (ಅನ್ನಪ್ರಾಪ್ತಿಯಿಂದಾದ) ಕಾರ್ಯವನ್ನು ಶ್ರುತಿಯಲ್ಲಿ ಹೇಳಿದೆ. ಅನ್ನವನ್ನು ಉಪಯೋಗಿಸಿದರೆ ನೋಡುವದು ಮುಂತಾದ ಸಾಮರ್ಥ್ಯವು ಕಾಣುತ್ತದೆಯೇ ಹೊರತು ಅದು ಪ್ರಾಪ್ತವಾಗದಿದ್ದರೆ (ಕಾಣಬರು)ವದಿಲ್ಲವಷ್ಟೆ ? ಆದ್ದರಿಂದ ಅನ್ನವನ್ನು ಉಪಾಸನೆಮಾಡು

## ಅನ್ನಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽನ್ನವತೋ ವೈ ಸ ಲೋಕಾನ್ ಪಾನವತೋಽಭಿಸಿಧ್ಯತಿ ಯಾವದನ್ನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽನ್ನಾದ್ಭೂಯ ಇತ್ಯನ್ನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಅನ್ನವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ಅನ್ನವುಳ್ಳ ಪಾನವುಳ್ಳ ಲೋಕಗಳನ್ನು ಸಾಧಿಸಿ

---

1. ಏಕೆಂದರೆ ಶ್ರೋತೃತ್ವಾದಿಗಳಿಗೆ ಬೇಕಾದ ಬಲವು ಅವನಿಗೆ ಇರುವದಿಲ್ಲ.

ಕೊಳ್ಳುತ್ತಾನೆ. ಅನ್ನದ ಗತಿಯು ಎಲ್ಲಿಯವರೆಗೆ ಇರುವದೋ ಅಲ್ಲಿ (ಯವರೆಗೆ) ಇವನಿಗೆ ಯಥಾಕಾಮಚಾರವಿರುವದು. ಯಾವನು ಅನ್ನವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ, ಅವನಿಗೆ (ಫಲವಿದು). 'ಭಗವಂತನೆ, ಅನ್ನಕ್ಕಿಂತ ಹೆಚ್ಚಿನದು ಇದೆಯೆ ?' 'ಅನ್ನಕ್ಕಿಂತ ಹೆಚ್ಚಿನದು ಇದ್ದೇ ಇದೆ.' 'ಭಗವಂತನು ನನಗೆ ಅದನ್ನು ಹೇಳಿಕೊಡಬೇಕು.'

## ಅನ್ನೋಪಾಸಕನಿಗೆ ಅನ್ನಲೋಕದಲ್ಲೆಲ್ಲ ಸ್ವಾತಂತ್ರ್ಯ

(ಭಾಷ್ಯ)

೫೭೦. ಫಲಂ ಚ । ಅನ್ನವತಃ ಪ್ರಭೂತಾನ್ನಾನ್ ವೈ ಸ ಲೋಕಾನ್ ಪಾನವತಃ ಪ್ರಭೂತೋದಕಾಂಶ್ಚಾನ್ನಪಾನಯೋರ್ನಿತ್ಯಸಂಬನ್ಧಾತ್ ಲೋಕಾನ್ ಅಭಿಸಿಧ್ಯತಿ । ಸಮಾನಮನ್ಯತ್ ॥

(ಭಾಷ್ಯಾರ್ಥ)

ಮತ್ತು (ಅನ್ನೋಪಾಸಕನಿಗೆ) ಫಲವೇನೆಂದರೆ, ಅನ್ನವುಳ್ಳ ಎಂದರೆ ಬೇಕಾದಷ್ಟು ಅನ್ನವಿರುವ, ಮತ್ತು ಪಾನವುಳ್ಳ ಬೇಕಾದಷ್ಟು ನೀರುಳ್ಳ ಲೋಕಗಳನ್ನು ಅನ್ನಪಾನಗಳು ಎಂದೆಂದಿಗೂ ಇದ್ದುಕೊಂಡಿರುವ ಲೋಕಗಳನ್ನು ಸಾಧಿಸಿಕೊಳ್ಳುತ್ತಾನೆ. ಮಿಕ್ಕ (ಗ್ರಂಥವು ಹಿಂದಿನದಕ್ಕೆ) ಸಮಾನವಾಗಿರುತ್ತದೆ.

---

# ಏಳನೆಯ ಅಧ್ಯಾಯ-ಹತ್ತನೆಯ ಖಂಡ

(ಭೂಮವಿದ್ಯೆ)

## ಅಬ್ರೂಪವಾದ ಬ್ರಹ್ಮ

(ಉಪನಿಷತ್ತು)

**ಆಪೋ ವಾವಾನ್ನಾದ್ಭೂಯಸ್ತಸ್ಮಾದ್ಯದಾ ಸುವೃಷ್ಟಿರ್ನ ಭವತಿ ವ್ಯಾಧೀಯನ್ತೇ ಪ್ರಾಣಾ ಅನ್ನಂ ಕನೀಯೋ ಭವಿಷ್ಯತೀತ್ಯಥ ಯದಾ ಸುವೃಷ್ಟಿರ್ಭವತ್ಯಾನನ್ದಿನಃ ಪ್ರಾಣಾ ಭವನ್ತ್ಯನ್ನಂ ಬಹು ಭವಿಷ್ಯತೀತ್ಯಾಪ ಏವೇಮಾ ಮೂರ್ತಾ ಯೇಯಂ ಪೃಥಿವೀ ಯದನ್ತರಿಕ್ಷಂ ಯದ್ದ್ಯೌರ್ಯತ್ ಪರ್ವತಾ ಯದ್ದೇವಮನುಷ್ಯಾ ಯತ್ಪಶವಶ್ಚ ವಯಾಗ್ಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟಪತಙ್ಗಪಿಪೀಲಕಮಾಪ ಏವೇಮಾ ಮೂರ್ತಾ ಅಪ ಉಪಾಸ್ಸ್ವೇತಿ ॥ ೧ ॥**

೧. ಅಪ್ಪೇ ಅನ್ನಕ್ಕಿಂತ ಹೆಚ್ಚಿನದು. ಆದ್ದರಿಂದ ಯಾವಾಗ ಸುವೃಷ್ಟಿಯಾಗುವದಿಲ್ಲವೋ ಆಗ ಪ್ರಾಣಗಳು ಅನ್ನವು ಕಡಿಮೆ ಯಾಗುವದೆಂದು ವ್ಯಾಧಿತವಾಗುತ್ತವೆ ; ಇನ್ನು ಯಾವಾಗ ಸುವೃಷ್ಟಿ ಯಾಗುವದೋ (ಆಗ) ಪ್ರಾಣಗಳು ಅನ್ನವು ಬಹುವಾಗಿ ಆಗುವದೆಂದು ಆನಂದಿಗಳಾಗಿರುತ್ತವೆ. ಇವು ಮೂರ್ತವಾದ ಅಪ್ಪೇ, (ಯಾವ ವೆಂದರೆ) ಈ ಪೃಥಿವಿಯಿದೆಯಲ್ಲ, ಅಂತರಿಕ್ಷವಿದೆಯಲ್ಲ, ದ್ಯುಲೋಕ ವಿದೆಯಲ್ಲ, ಪರ್ವತಗಳಿವೆಯಲ್ಲ, ದೇವಮನುಷ್ಯರಿದಾರಲ್ಲ, ಪಶು ಗಳಿವೆಯಲ್ಲ, ಪಕ್ಷಿಗಳಿವೆಯಲ್ಲ, ಹುಲ್ಲುಮರಗಳಿವೆಯಲ್ಲ, ಹಿಂಸ್ರಮೃಗ ಗಳಿವೆಯಲ್ಲ, ಹುಳುಜಿಟ್ಟೆಇರುವೆಗಳವರೆವಿಗೂ (ಎಲ್ಲವೂ) ಇವು ಮೂರ್ತವಾದ ಅಪ್ಪೇ. ಅಪ್ಪನ್ನು ಉಪಾಸನೆಮಾಡು.

## ಅಪ್ಪಿನ ಹೆಚ್ಚುಗಾರಿಕೆ, ಉಪಾಸನಾವಿಧಿ

(ಭಾಷ್ಯ)

೫೭೧ ಆಪೋ ವಾವ ಅನ್ನಾದ್ ಭೂಯಸ್ಯಃ । ಅನ್ನಕಾರಣತ್ವಾತ್ । ಯಸ್ಮಾದೇವಂ ತಸ್ಮಾತ್ ಯದಾ ಯಸ್ಮಿನ್ ಕಾಲೇ ಸುವೃಷ್ಟಿಃ ಸಸ್ಯಹಿತಾ ಶೋಭನಾ ವೃಷ್ಟಿಃ ನ ಭವತಿ ತದಾ ವ್ಯಾಧೀಯನ್ತೇ ಪ್ರಾಣಾಃ, ದುಃಖಿನೋ ಭವನ್ತಿ । ಕಿಂನಿಮಿತ್ತಮಿತಿ ? ಆಹ । ಅನ್ನಮಸ್ಮಿನ್ ಸಂವತ್ಸರೇ ನಃ ಕನೀಯೋಽ ಲ್ಪತರಂ ಭವಿಷ್ಯತೀತಿ । ಅಥ ಪುನರ್ಯದಾ ಸುವೃಷ್ಟಿರ್ಭವತಿ ತದಾ ಆನನ್ದಿನಃ ಸುಖಿನೋ ಹೃಷ್ಟಾಃ ಪ್ರಾಣಾಃ ಪ್ರಾಣಿನೋ ಭವನ್ತಿ । ಅನ್ನಂ ಬಹು ಪ್ರಭೂತಂ ಭವಿಷ್ಯತೀತಿ । ಅಪ್ಸಂಭವತ್ವಾನ್ಮೂರ್ತಸ್ಯ ಅನ್ನಸ್ಯ ಆಪ ಏವ ಇಮಾಃ ಮೂರ್ತಾಃ । ಮೂರ್ತಭೇದಾಕಾರಪರಿಣತಾ ಇತಿ ಮೂರ್ತಾಃ । ಯೇಯಂ ಪೃಥಿವೀ ಯದನ್ತ ರಿಕ್ಷಮ್ ಇತ್ಯಾದಿ । ಆಪ ಏವ ಇಮಾ ಮೂರ್ತಾಃ । ಅತೋ ಅಪ ಉಪಾಸ್ಸ್ವೇತಿ ॥

(ಭಾಷ್ಯಾರ್ಥ)

ಅಪ್ಪೇ ಅನ್ನಕ್ಕಿಂತ ಹೆಚ್ಚು, ಏಕೆಂದರೆ (ಅದು) ಅನ್ನಕ್ಕೆ ಕಾರಣವಾಗಿದೆ. ಹೀಗಿರುವದಲ್ಲ, ಆದ್ದರಿಂದಲೇ ಯಾವಾಗ ಸುವೃಷ್ಟಿಯು, ಸಸ್ಯಗಳಿಗೆ ಹಿತವಾಗಿ ರುವ ಒಳ್ಳೆಯ ಮಳೆಯು, ಆಗುವದಿಲ್ಲವೋ ಆಗ ಪ್ರಾಣಗಳು, ಪ್ರಾಣಿಗಳು, ವ್ಯಾಧಿತವಾಗುತ್ತವೆ, ದುಃಖಿಗಳಾಗುತ್ತವೆ. ಏನು ಕಾರಣ ? ಎಂದರೆ, ಹೇಳು ತ್ತಾನೆ : ಈ ವರ್ಷದಲ್ಲಿ ನಮಗೆ ಅನ್ನವು ಕಡಿಮೆಯಾಗುವದು (ಎಂದಿಗಿಂತ) ಸ್ವಲ್ಪವೇ ಆಗುವದು ಎಂದು (ದುಃಖಿಗಳಾಗುವವು). ಇದಕ್ಕೆ ಬದಲು ಯಾವಾಗ ಸುವೃಷ್ಟಿಯಾಗುವದೋ ಆಗ ಅನ್ನವು ನಮಗೆ ಬಹುವಾಗಿ ಬೇಕಾದಷ್ಟು

ಆಗುವದು ಎಂದು ಪ್ರಾಣಗಳು ಪ್ರಾಣಿಗಳು ಆನಂದಿಗಳಾಗಿರುವವು, ಸುಖಿಗಳಾಗಿ ಹರ್ಷದಿಂದೊಡಗೂಡಿರುವವು.

ಮೂರ್ತವಾದ ಅನ್ನವು ಅಪ್ಪಿನಿಂದಾಗಿರುವದರಿಂದ ಈ ಮೂರ್ತಗಳಾದ ಮೂರ್ತವಿಶೇಷಗಳ ಆಕಾರದಿಂದ ಪರಿಣಾಮವಾಗಿರುವ ಇವು ಮೂರ್ತವಾದ ಅಪ್ಪೇ. ಈ ಪೃಥಿವಿಯಿದೆಯಲ್ಲ, ಅಂತರಿಕ್ಷವಿದೆಯಲ್ಲ- ಎಂದುಮುಂತಾಗಿ ಇವೆಲ್ಲ ಮೂರ್ತವಾದ ಅಪ್ಪೇ.[1] ಆದ್ದರಿಂದ ಅಪ್ಪನ್ನು ಉಪಾಸನೆಮಾಡು.

## ಅಬ್ಬ್ರಹ್ಮದ ಉಪಾಸನೆಗೆ ಫಲ

(ಉಪನಿಷತ್ತು)

**ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ ಕಾಮಾಗ್ಂಸ್ತೃಪ್ತಿಮಾನ್ ಭವತಿ ಯಾವದಪಾಂ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯೋಽಪೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽದ್ಭ್ಯೋ ಭೂಯ ಇತ್ಯದ್ಭ್ಯೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಅಪ್ಪನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನು ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೆ, ತೃಪ್ತಿಯುಳ್ಳವನಾಗುತ್ತಾನೆ. ಎಲ್ಲಿಯವರೆಗೆ ಅಪ್ಪಿನ ಗತಿಯಿರುವದೋ ಅಲ್ಲಿ(ಯವರೆಗೆ) ಅವನಿಗೆ ಯಥಾಕಾಮಚಾರವಿರುವದು. ಯಾವನು ಅಪ್ಪನ್ನು ಬ್ರಹ್ಮವೆಂದು ಉಪಾಸನೆಮಾಡುವನೋ (ಅವನಿಗೆ ಫಲವಿದು). 'ಭಗವಂತನೆ, ಅಪ್ಪಿಗಿಂತ ಹೆಚ್ಚಿನದು ಇದೆಯೆ?' 'ಅಪ್ಪಿಗಿಂತ ಹೆಚ್ಚಿನದು ಇದ್ದೇಇದೆ.' 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

## ಅಬ್ಬ್ರಹ್ಮದ ಉಪಾಸಕನಿಗೆ ಕಾಮಸಮೃದ್ಧಿ

(ಭಾಷ್ಯ)

೫೭೨. ಫಲಮ್ । ಸ ಯ ಅಪೋ ಬ್ರಹ್ಮೇತ್ಯುಪಾಸ್ತೇ ಆಪ್ನೋತಿ ಸರ್ವಾನ್ ಕಾಮಾನ್ ಕಾಮ್ಯಾನ್ ಮೂರ್ತಿಮತೋ ವಿಷಯಾನ್ ಇತ್ಯರ್ಥಃ ಅಪ್ಸಂಭವತ್ವಾಚ್ಚ ತೃಪ್ತೇಃ ಅಬುಪಾಸನಾತ್ ತೃಪ್ತಿಮಾಂಶ್ಚ ಭವತಿ । ಸಮಾನಮನ್ಯತ್ ॥

---

1. ಹಾಲುಮೊಸರು- ಮುಂತಾದ ಆಹುತಿಗಳ ಪರಿಣಾಮವಾಗಿರುವದರಿಂದ ಅಂತರಿಕ್ಷಾದಿಗಳು ಅಪ್ಪಿನಿಂದಾಗಿವೆ ಎಂದು ನಿಶ್ಚಯಿಸಬೇಕು -ಎಂದು ಟೀಕೆ.

(ಭಾಷ್ಯಾರ್ಥ)

ಫಲವೇನೆಂದರೆ ಯಾವನು ಅಪ್ಪನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನು ಎಲ್ಲಾ ಕಾಮಗಳನ್ನೂ ಎಂದರೆ ಕಾಮ್ಯವಾದ ಮೂರ್ತಿವಂತ ವಿಷಯಗಳನ್ನು ಎಂದರ್ಥ. ಮತ್ತು ತೃಪ್ತಿಯು ಅಪ್ಪಿನಿಂದುಂಟಾಗುವದರಿಂದ ಅಪ್ಪನ್ನುಪಾಸನೆಮಾಡುವದರಿಂದ ತೃಪ್ತಿಯುಳ್ಳವನೂ ಆಗುತ್ತಾನೆ. ಮಿಕ್ಕದ್ದು (ಹಿಂದಿನದಕ್ಕೆ) ಸಮಾನವು.

---

# ಏಳನೆಯ ಅಧ್ಯಾಯ-ಹನ್ನೊಂದನೆಯ ಖಂಡ

(ಭೂಮವಿದ್ಯೆ)

## ತೇಜೋಬ್ರಹ್ಮ

(ಉಪನಿಷತ್ತು)

**ತೇಜೋ ವಾವಾದ್ಭ್ಯೋ ಭೂಯಸ್ತದ್ವಾ ಏತದ್ವಾಯುಮಾಗೃಹ್ಯಾಽಽಕಾಶಮಭಿತಪತಿ ತದಾಹುರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಽಥಾಽಪಃ ಸೃಜತೇ ತದೇತದೂರ್ಧ್ವಾಭಿಶ್ಚ ತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರನ್ತಿ ತಸ್ಮಾದಾಹುರ್ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಽಥಾಽಪಃ ಸೃಜತೇ ತೇಜ ಉಪಾಸ್ಸ್ವೇತಿ ॥ ೧ ॥**

೧. ತೇಜಸ್ಸೇ ಅಪ್ಪಿಗಿಂತ ಹೆಚ್ಚಿನದು. ಆ ಈ ತೇಜಸ್ಸೇ ಗಾಳಿಯನ್ನು ಹಿಡಿದು (ನಿಲ್ಲಿಸಿ) ಆಕಾಶದಲ್ಲೆಲ್ಲ ಅಭಿತಪಿಸುತ್ತದೆ. ಆಗ 'ಬಹಳ ಸೆಕೆಯಾಗಿದೆ, ಸುಡುತ್ತಿದೆ, ಮಳೆಗರೆದೇತೀರುವದು' ಎನ್ನುವರು. ಆ ತೇಜಸ್ಸೇ ಮೊದಲು ಕಾಣಿಸಿಕೊಂಡು, ಆ ಬಳಿಕ ಅಪ್ಪನ್ನು ಸೃಷ್ಟಿಸುತ್ತದೆ. ಆ ಇದೇ (ಕಾರ್ಯಾಂತರವೂ ಆಗುತ್ತದೆ). ಮೇಲುಗಡೆಗೆ ಹೋಗುವ ಮತ್ತು ಅಡ್ಡಡ್ಡಲಾಗಿರುವ ಮಿಂಚುಗಳಿಂದೊಡಗೂಡಿದ ಗುಡುಗುಗಳು ಸಂಚರಿಸುತ್ತವೆ. ಆದ್ದರಿಂದ 'ಮಿಂಚುತ್ತಿದೆ, ಗುಡುಗುತ್ತಿದೆ, ಮಳೆಗರೆದೇತೀರುವದು' ಎನ್ನುವರು. ಆ ತೇಜಸ್ಸೇ ಮೊದಲು ಕಾಣಿಸಿಕೊಂಡು ಆ ಬಳಿಕ ಅಪ್ಪನ್ನು ಸೃಷ್ಟಿಸುತ್ತದೆ. ತೇಜಸ್ಸನ್ನು ಉಪಾಸನೆಮಾಡು.

## ತೇಜಸ್ಸಿನ ಹೆಚ್ಚುಗಾರಿಕೆ, ಉಪಾಸನಾವಿಧಿ

(ಭಾಷ್ಯ)

೫೭೩. ತೇಜೋ ವಾವ ಅದ್ಭ್ಯೋ ಭೂಯಃ । ತೇಜಸೋಽಪ್ಕಾರಣತ್ವಾತ್ । ಕಥಮ್ ಅಪ್ಕಾರಣತ್ವಮಿತಿ ? ಆಹ । ಯಸ್ಮಾತ್ ಅಬ್ಯೋನಿಸ್ತೇಜಃ ತಸ್ಮಾತ್ ತದ್ವಾ ಏತತ್ ತೇಜೋ ವಾಯುಮ್ ಆಗೃಹ್ಯ ಅವಷ್ಟಭ್ಯ ಸ್ವಾತ್ಮನಾ ನಿಶ್ಚಲೀಕೃತ್ಯ ವಾಯುಮ್ ಆಕಾಶಮ್ ಅಭಿತಪತಿ ಆಕಾಶಮ್ ಅಭಿವ್ಯಾಪ್ನುವತ್ ತಪತಿ ಯದಾ ತದಾ ಆಹುರ್ಲೌಕಿಕಾ ನಿಶೋಚತಿ, ಸಂತಪತಿ ಸಾಮಾನ್ಯೇನ ಜಗತ್, ನಿತಪತಿ ದೇಹಾನ್. ಅತೋ ವರ್ಷಿಷ್ಯತಿ ವೈ ಇತಿ । ಪ್ರಸಿದ್ಧಂ ಹಿ ಲೋಕೇ ಕಾರಣಮ್ ಅಭ್ಯುದ್ಯತಂ ದೃಷ್ಟವತಃ ಕಾರ್ಯಂ ಭವಿಷ್ಯತೀತಿ ವಿಜ್ಞಾನಮ್ । ತೇಜ ಏವ ತತ್ ಪೂರ್ವಮಾತ್ಮಾನಮ್ ಉದ್ಭೂತಂ ದರ್ಶಯಿತ್ವಾ ಅಥ ಅನನ್ತರಮ್ ಅಪಃ ಸೃಜತೇ। ಅತೋಽಪ್ಸ್ರಷ್ಟೃತ್ವಾದ್ ಭೂಯೋಽದ್ಭ್ಯಸ್ತೇಜಃ । ಕಿಂ ಚಾನ್ಯತ್, ತದೇತತ್ ತೇಜ ಏವ ಸ್ತನಯಿತ್ನುರೂಪೇಣ ವರ್ಷಹೇತುರ್ಭವತಿ । ಕಥಮ್ ? ಊರ್ಧ್ವಾಭಿಶ್ಚ ಊರ್ಧ್ವಗಾಭಿರ್ವಿದ್ಯುದ್ಭಿಃ, ತಿರಶ್ಚೀಭಿಶ್ಚ ತಿರ್ಯಗ್ಗತಾಭಿಶ್ಚ ಸಹ ಆಹ್ರಾದಾಃ ಸ್ತನಯಿತ್ನುಶಬ್ದಾಃ ಚರನ್ತಿ । ತಸ್ಮಾತ್ ತದ್ದರ್ಶನಾತ್ ಆಹುರ್ಲೌಕಿಕಾಃ ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವೈ ಇತ್ಯಾದಿ ಉಕ್ತಾರ್ಥಮ್ । ಅತಸ್ತೇಜ ಉಪಾಸ್ಸ್ವ ಇತಿ ॥

(ಭಾಷ್ಯಾರ್ಥ)

ತೇಜಸ್ಸೇ ಅಪ್ಪಿಗಿಂತಲೂ ಹೆಚ್ಚಿನದು , ಏಕೆಂದರೆ ತೇಜಸ್ಸು ಅಪ್ಪಿಗೆ ಕಾರಣವಾಗಿರುತ್ತದೆ (ಅದು) ಅಪ್ಪಿಗೆ ಕಾರಣವೆಂಬುದು ಹೇಗೆ ? ಎಂದರೆ ಹೇಳುತ್ತಾನೆ ತೇಜಸ್ಸು ಅಪ್ಪಿಗೆ ಕಾರಣವಾಗಿದೆಯಲ್ಲ, ಅದರಿಂದಲೇ ಆ ಈ ತೇಜಸ್ಸೇ ವಾಯುವನ್ನು ಹಿಡಿದು ನಿಲ್ಲಿಸಿ ತನ್ನ ಸ್ವರೂಪದಿಂದ ವಾಯುವನ್ನು ನಿಶ್ಚಲಗೊಳಿಸಿ ಆಕಾಶವನ್ನು ಅಭಿತಪಿಸುತ್ತದೆ, ಆಕಾಶವನ್ನು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಯಾವಾಗ ತಪಿಸುತ್ತದೆಯೋ ಆಗ ಲೌಕಿಕರು ಇಂತೆನ್ನುವರು . 'ಬಹಳ ಸೆಕೆಯಾಗಿದೆ, ಜಗತ್ತೆಲ್ಲವನ್ನೂ ಸಾಮಾನ್ಯವಾಗಿ ಕಾಯಿಸುತ್ತಿದೆ, ದೇಹಗಳನ್ನು ಬಹಳವಾಗಿ ಸುಡುತ್ತಿದೆ, ಆದ್ದರಿಂದ ಮಳೆಯಾಗಿಯೇತೀರುವದು ' ಕಾರಣವು ಎದ್ದುಕೊಂಡದ್ದನ್ನು ಕಂಡವನಿಗೆ ಕಾರ್ಯವಾಗುವದು ಎಂಬ ಅರಿವಾಗುವದು ಲೋಕದಲ್ಲಿ ಪ್ರಸಿದ್ಧವಷ್ಟೆ ? ಆದ್ದರಿಂದ ತೇಜಸ್ಸೇ ಮೊದಲು ತಾನು ಎದ್ದುಕಾಣಿಸಿಕೊಂಡು ಆಬಳಿಕ ಅನಂತರದಲ್ಲಿ ಅಪ್ಪನ್ನು ಸೃಷ್ಟಿಸುತ್ತದೆ ಅಪ್ಪನ್ನು ಸೃಷ್ಟಿಸುವದಾದ್ದರಿಂದ ತೇಜಸ್ಸು ಅಪ್ಪಿಗಿಂತ ಹೆಚ್ಚಿನದು.

ಮತ್ತೂ ಏನೆಂದರೆ, ಆ ಈ ತೇಜಸ್ಸೇ ಗುಡುಗಿನ ರೂಪದಿಂದ ಮಳೆಗೆ ಕಾರಣವಾಗಿರುತ್ತದೆ ಹೇಗೆಂದರೆ, ಮೇಲುಗಡೆಗೆ ಹೋಗುವ ಮೇಲಕ್ಕೆ ಹರಿಯುವ

ಮಿಂಚುಗಳಿಂದಲೂ ಅಡ್ಡಡ್ಡಲಾಗಿರುವ ಅಡ್ಡಲಾಗಿ ಹರಿಯುವ ಮಿಂಚುಗಳಿಂದಲೂ ಒಡಗೂಡಿ ಗುಡುಗುಗಳು ಗುಡುಗಿನ ಶಬ್ದಗಳು ಸಂಚರಿಸುತ್ತವೆ ಆದ್ದರಿಂದ ಅದನ್ನು ಕಂಡು ಲೌಕಿಕರು ಇಂತೆನ್ನುವರು . 'ಮಿಂಚುತ್ತದೆ, ಗುಡುಗುತ್ತದೆ, ಮಳೆಗರವೇತೀರುವದು' ಎಂದುಮುಂತಾಗಿರುವದರ ಅರ್ಥವನ್ನು ಹೇಳಿದಂತಾಗಿದೆ. ಆದ್ದರಿಂದ ತೇಜಸ್ಸನ್ನು ಉಪಾಸನೆಮಾಡು

## ತೇಜೋಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ ತೇಜಸ್ವೀ ವೈ ಸ ತೇಜಸ್ವತೋ ಲೋಕಾನ್ ಭಾಸ್ವತೋಽಪಹತತಮಸ್ಕಾನಭಿಸಿಧ್ಯತಿ ಯಾವತ್ತೇಜಸೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಸ್ತೇಜಸೋ ಭೂಯ ಇತಿ ತೇಜಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ತೇಜಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ತೇಜಸ್ವಿಯಾಗಿಯೇ (ಆಗುವನು). ಅವನು ತೇಜಸ್ವಂತಗಳಾದ, ಭಾಸ್ವಂತಗಳಾದ ಅಪಹತತಮಸ್ಕಗಳಾದ ಲೋಕಗಳನ್ನು ಸಾಧಿಸಿಕೊಳ್ಳುತ್ತಾನೆ. ಎಲ್ಲಿಯವರೆಗೆ ತೇಜಸ್ಸಿನ ಗತಿಯಿರುವದೋ ಅಲ್ಲಿ(ಯವರಗೆ) ಅವನಿಗೆ ಯಥಾಕಾಮಚಾರವಿರುತ್ತದೆ. ಯಾವನು ತೇಜಸ್ಸು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ (ಅವನಿಗೆ ಫಲವಿದು). 'ಭಗವಂತನೆ, ತೇಜಸ್ಸಿಗಿಂತ ಹೆಚ್ಚಿನದು ಇದೆಯೆ?' 'ತೇಜಸ್ಸಿಗಿಂತ ಹೆಚ್ಚಿನದು ಇದ್ದೇ ಇದೆ.' 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

## ತೇಜೋಬ್ರಹ್ಮದ ಉಪಾಸನೆಯಿಂದ ತೇಜೋವಂತವಾದ ಲೋಕಗಳ ಪ್ರಾಪ್ತಿ

(ಭಾಷ್ಯ)

೫೭೪. ತಸ್ಯ ತೇಜಸ ಉಪಾಸನಫಲಮ್ । ತೇಜಸ್ವೀ ವೈ ಭವತಿ । ತೇಜಸ್ವತ ಏವ ಚ ಲೋಕಾನ್ ಭಾಸ್ವತಃ ಪ್ರಕಾಶವತೋಽಪಹತತಮಸ್ಕಾನ್ ಬಾಹ್ಯಾಧ್ಯಾತ್ಮಿಕಾಽಜ್ಞಾನಾದ್ಯಪನೀತತಮಸ್ಕಾನ್ ಅಭಿಸಿಧ್ಯತಿ । ಋಜ್ವರ್ಥಮನ್ಯತ್ ॥

(ಭಾಷ್ಯಾರ್ಥ)

ಆ ತೇಜಸ್ಸಿನ ಉಪಾಸನೆಗೆ ಫಲ(ವಿದು). ತೇಜಸ್ವಿಯೇ ಆಗಿರುತ್ತಾನೆ. ತೇಜಸ್ವಂತವೇ ಆದ, ಭಾಸ್ವಂತವಾದ ಪ್ರಕಾಶವುಳ್ಳ, ಅಪಹತತಮಸ್ಕವಾದ ಹೊರಗಿನ ಒಳಗಿನ ಅಜ್ಞಾನವೇ ಮುಂತಾದ ತಮಸ್ಸು ತೊಲಗಿದ ಲೋಕಗಳನ್ನು ಸಾಧಿಸಿಕೊಳ್ಳುತ್ತಾನೆ. ಉಳಿದ (ಗ್ರಂಥಕ್ಕೆ) ಅರ್ಥವು ಸ್ಫುಟವಾಗಿದೆ.

---

# ಏಳನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಭೂಮವಿದ್ಯೆ)

## ಆ ಕಾ ಶ ಬ್ರ ಹ್ಮ

(ಉಪನಿಷತ್ತು)

**ಆಕಾಶೋ ವಾವ ತೇಜಸೋ ಭೂಯಾನಾಕಾಶೇ ವೈ ಸೂರ್ಯಾ ಚನ್ದ್ರಮಸಾವುಭೌ ವಿದ್ಯುನ್ನಕ್ಷತ್ರಾಣ್ಯಗ್ನಿರಾಕಾಶೇನಾಽಽಹ್ವ ಯತ್ಯಾಕಾಶೇನ ಶೃಣೋತ್ಯಾಕಾಶೇನ ಪ್ರತಿಶೃಣೋತ್ಯಾಕಾಶೇ ರಮತ ಆಕಾಶೇ ನ ರಮತ ಆಕಾಶೇ ಜಾಯತ ಆಕಾಶಮಭಿ ಜಾಯತ ಆಕಾಶಮುಪಾಸ್ಸ್ವೇತಿ ॥ ೧ ॥**

೧. ಆಕಾಶವೇ ತೇಜಸ್ಸಿಗಿಂತ ಹೆಚ್ಚಿನದು. ಆಕಾಶದಲ್ಲಿಯೇ ಸೂರ್ಯಚಂದ್ರರಿಬ್ಬರೂ, ಮಿಂಚು, ನಕ್ಷತ್ರಗಳು, ಅಗ್ನಿಯು ; ಆಕಾಶ ದಿಂದ ಕರೆಯುತ್ತಾನೆ, ಆಕಾಶದಿಂದ ಕೇಳುತ್ತಾನೆ, ಆಕಾಶದಿಂದಲೇ ಪ್ರತಿಶ್ರವಣಮಾಡುತ್ತಾನೆ, ಆಕಾಶದಲ್ಲಿ ರತನಾಗಿರುತ್ತಾನೆ, ಆಕಾಶ ದಲ್ಲಿಯೇ ಅರತಿಯುಳ್ಳವನಾಗಿರುತ್ತಾನೆ, ಆಕಾಶದಲ್ಲಿಯೇ ಹುಟ್ಟು ತ್ತಾನೆ, ಆಕಾಶದಕಡೆಗೆ ಬೆಳೆಯುತ್ತದೆ. ಆಕಾಶವನ್ನು ಉಪಾಸನೆ ಮಾಡು.

### ಆಕಾಶದ ಹೆಚ್ಚುಗಾರಿಕೆ, ಉಪಾಸನಾವಿಧಿ

(ಭಾಷ್ಯ)

೫೭೫. ಆಕಾಶೋ ವಾವ ತೇಜಸೋ ಭೂಯಾನ್ । ವಾಯುಸಹಿತಸ್ಯ ತೇಜಸಃ ಕಾರಣತ್ವಾತ್ ವ್ಯೋಮ್ನಃ । 'ವಾಯುರ್ವಾವ ಸಂವರ್ಗಃ' (೪-೩-೧) ಇತಿ ತೇಜಸಾ ಸಹೋಕ್ತೋ ವಾಯುರಿತಿ ಪೃಥಗಿಹ ನೋಕ್ತಸ್ತೇಜಸಃ । ಕಾರಣಂ

ಪಿ ಲೋಕೇ ಕಾರ್ಯಾದ್ ಭೂಯೋ ದೃಷ್ಟಮ್। ಯಥಾ ಘಟಾದಿಭ್ಯೋ ಮೃತ್। ತಥಾ ಆಕಾಶೋ ವಾಯುಸಹಿತಸ್ಯ ತೇಜಸಃ ಕಾರಣಮಿತಿ ತತೋ ಭೂಯಾನ್ । ಕಥಮ್ ? ಆಕಾಶೇ ವೈ ಸೂರ್ಯಾಚನ್ದ್ರಮಸೌ ಉಭೌ ತೇಜೋರೂಪೌ ವಿದ್ಯುತ್, ನಕ್ಷತ್ರಾಣಿ, ಅಗ್ನಿಶ್ಚ ತೇಜೋರೂಪಾಣಿ ಆಕಾಶೇಽನ್ತಃ। ಯಚ್ಚ ಯಸ್ಯಾನ್ತರ್ವರ್ತಿ ತದಲ್ಪಮ್, ಭೂಯ ಇತರತ್। ಕಿಂಚ। ಆಕಾಶೇನ ಆಹ್ವಯತಿ ಚ ಅನ್ಯಮನ್ಯಃ। ಆಹೂತಶ್ಚ ಇತರ ಆಕಾಶೇನ ಶೃಣೋತಿ। ಅನ್ಯೋಕ್ತಂ ಚ ಶಬ್ದಮನ್ಯಃ ಪ್ರತಿಶೃಣೋತಿ। ಆಕಾಶೇ ರಮತೇ ಕ್ರೀಡತಿ ಅನ್ಯೋಽನ್ಯಂ ಸರ್ವಃ। ತಥಾ ನ ರಮತೇ ಚ ಆಕಾಶೇ ಬನ್ಧ್ವಾದಿ ವಿಯೋಗೇ। ಆಕಾಶೇ ಜಾಯತೇ ನ ಮೂರ್ತೇನ ಅವಷ್ಟಬ್ಧೇ। ತಥಾ ಆಕಾಶಮಭಿಲಕ್ಷ್ಯ ಅಙ್ಕುರಾದಿ ಜಾಯತೇ ನ ಪ್ರತಿಲೋಮಮ್। ಅತ ಆಕಾಶಮುಪಾಸ್ಸ್ವ ॥

(ಭಾಷ್ಯಾರ್ಥ)

ಆಕಾಶವೇ ತೇಜಸ್ಸಿಗಿಂತ ಹೆಚ್ಚಿನದು, ಏಕೆಂದರೆ ವಾಯುಸಹಿತವಾದ ತೇಜಸ್ಸಿಗೂ ಆಕಾಶವು ಕಾರಣವಾಗಿರುತ್ತದೆ. 'ವಾಯುವನ್ನು ಹಿಡಿದು' (೭-೧೧-೧) ಎಂದು ತೇಜಸ್ಸಿನ ಜೊತೆಯಲ್ಲಿಯೇ ವಾಯುವನ್ನು ಹೇಳಿತ್ತಾದ್ದರಿಂದ ಇಲ್ಲಿ ತೇಜಸ್ಸಿಗಿಂತ ಬೇರೆಯಾಗಿ (ವಾಯುವನ್ನು) ಹೇಳಿಲ್ಲ. ಕಾರಣವಲ್ಲವೆ, ಲೋಕದಲ್ಲಿ ಕಾರ್ಯಕ್ಕಿಂತ ಹೆಚ್ಚಿನದೆಂದು ಕಂಡಿರುತ್ತದೆ? ಉದಾಹರಣೆಗೆ ಗಡಿಗೆ ಮುಂತಾದವುಗಳಿಗಿಂತಲೂ ಮಣ್ಣು (ಹೆಚ್ಚಿನದು) ಹಾಗೆಯೇ ಆಕಾಶವು ವಾಯುಸಹಿತವಾದ ತೇಜಸ್ಸಿಗೆ ಕಾರಣವಾದ್ದರಿಂದ ಅದಕ್ಕಿಂತಲೂ ಹೆಚ್ಚಿನದು. ಹೇಗೆಂದರೆ, ಆಕಾಶದಲ್ಲಿಯೇ ತೇಜೋರೂಪರಾದ ಸೂರ್ಯಚಂದ್ರರಿಬ್ಬರೂ (ಇರುತ್ತಾರೆ). ಮಿಂಚು, ನಕ್ಷತ್ರಗಳು, ಅಗ್ನಿ- ಎಂಬ ತೇಜೋರೂಪಗಳೂ ಆಕಾಶದೊಳಗೇ (ಇವೆ) ಯಾವದು ಯಾವದಕ್ಕಿಂತ ಒಳಗೆ ಇರುತ್ತದೆಯೋ, ಅದು ಅಲ್ಪವು, (ಅದು ಯಾವದರೊಳಗೆ ಇದೆಯೋ ಆ) ಇನ್ನೊಂದು ಹೆಚ್ಚಿನದು. ಮತ್ತು ಆಕಾಶದಿಂದಲೇ ಒಬ್ಬನನ್ನು ಇನ್ನೊಬ್ಬನು ಕರೆಯುತ್ತಾನೆ, ಕರೆದಾಗ ಇನ್ನೊಬ್ಬನು ಆಕಾಶದಿಂದಲೇ (ಅದನ್ನು) ಕೇಳುತ್ತಾನೆ, ಒಬ್ಬನು ಹೇಳಿದ ಶಬ್ದವು ಇನ್ನೊಬ್ಬನಿಗೆ ಪ್ರತಿಶ್ರವಣವಾಗುವದೂ ಆಕಾಶದಲ್ಲಿಯೇ, ಆಕಾಶದಲ್ಲಿಯೇ ರತನಾಗಿರುತ್ತಾನೆ, ಪ್ರತಿಯೊಬ್ಬನೂ ಮತ್ತೊಂದರೊಡನೆ ಕ್ರೀಡಿಸುತ್ತಾನೆ, ನಂಟರೇ ಮುಂತಾದವರು ಅಗಲಿದರೆ ಅರತಿಯನ್ನು ಹೊಂದುವದೂ ಆಕಾಶದಲ್ಲಿಯೇ ಆಕಾಶದಲ್ಲಿಯೇ ಹುಟ್ಟುತ್ತಾನೆಯೇ ಹೊರತು, ಮೂರ್ತದ್ರವ್ಯದ ಆಶ್ರಯದಲ್ಲಲ್ಲ ಮತ್ತು ಆಕಾಶದ ಕಡೆಗೇ ಮೊಳಕೆ ಮುಂತಾದದ್ದು ಹುಟ್ಟಿ ಬೆಳೆಯುತ್ತದೆ, ಅದಕ್ಕೆ ಪ್ರತಿಲೋಮವಾಗಿ ಬೆಳೆಯುವದಿಲ್ಲ. ಆದ್ದರಿಂದ ಆಕಾಶವನ್ನು ಉಪಾಸನೆಮಾಡು.

## ಆಕಾಶಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಆಕಾಶಂ ಬ್ರಹ್ಮೇತ್ಯುಪಾಸ್ತ ಆಕಾಶವತೋ ವೈ ಸ ಲೋಕಾನ್ ಪ್ರಕಾಶವತೋಽಸಂಬಾಧಾನುರುಗಾಯವತೋಽಭಿ ಸಿಧ್ಯತಿ ಯಾವದಾಕಾಶಸ್ಯ ಗತಂ ತತ್ರಾಸ್ಯ ಯಥಾಕಾಮ ಚಾರೋ ಭವತಿ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಕಾಶಾದ್ಭೂಯ ಇತ್ಯಾಕಾಶಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಆಕಾಶವನ್ನು ಬ್ರಹ್ಮವೆಂದು ಉಪಾಸನ ಮಾಡುತ್ತಾನೋ ಆಕಾಶವಂತವಾದ, ಪ್ರಕಾಶವಂತವಾದ, ಅಸಂ ಬಾಧವಾದ, ಉರುಗಾಯವಂತವಾದ ಲೋಕಗಳನ್ನು ಸಾಧಿಸಿಕೊಳ್ಳು ತ್ತಾನೆ. ಎಲ್ಲಿಯವರೆಗೆ ಆಕಾಶದ ಗತಿಯಿರುವದೋ ಅಲ್ಲಿ(ಯವರೆಗೆ) ಇವನಿಗೆ ಯಥಾಕಾಮಚಾರವಿರುತ್ತದೆ. ಯಾವನು ಆಕಾಶವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ (ಅವನಿಗೆ ಫಲವಿದು). 'ಭಗವಂತನೆ, ಆಕಾಶಕ್ಕಿಂತ ಹೆಚ್ಚಿನದು ಇದೆಯೆ?', 'ಆಕಾಶಕ್ಕಿಂತ ಹೆಚ್ಚಿನದು ಇದ್ದೇಇದೆ', 'ಅದನ್ನು ಭಗವಂತನು ನನಗೆ ಹೇಳಿಕೊಡ ಬೇಕು.'

### ಆಕಾಶೋಪಾಸಕನಿಗೆ ಆಕಾಶವಂತವಾದ ಲೋಕದ ಪ್ರಾಪ್ತಿ

(ಭಾಷ್ಯ)

೫೭೬. ಫಲಂ ಶೃಣು। ಆಕಾಶವತೋ ವೈ ವಿಸ್ತಾರಯುಕ್ತಾನ್ ಸ ವಿದ್ವಾನ್ ಲೋಕಾನ್ ಪ್ರಕಾಶವತಃ। ಪ್ರಕಾಶಾಕಾಶಯೋರ್ನಿತ್ಯಸಂಬನ್ಧಾತ್ ಪ್ರಕಾಶವತಶ್ಚ ಲೋಕಾನ್। ಅಸಂಬಾಧಾನ್। ಸಂಬಾಧನಂ ಸಂಬಾಧಃ। ಅನ್ಯೋನ್ಯಪೀಡಾ। ತದ್ರಹಿತಾನ್ ಅಸಂಬಾಧಾನ್। ಉರುಗಾಯವತಃ, ವಿಸ್ತೀರ್ಣಗತೀನ್, ವಿಸ್ತೀರ್ಣಪ್ರಚಾರಾನ್। ಲೋಕಾನ್ ಅಭಿಸಿಧ್ಯತಿ। ಯಾವ ದಾಕಾಶಸ್ಯ ಇತ್ಯಾದಿ ಉಕ್ತಾರ್ಥಮ್ ॥

(ಭಾಷ್ಯಾರ್ಥ)

ಫಲವನ್ನು ಕೇಳು: ಆಕಾಶವಂತವಾದ ವಿಸ್ತಾರಯುಕ್ತವಾದ, ಲೋಕ ಗಳನ್ನೇ, ಆ ಉಪಾಸಕನು ಪ್ರಕಾಶವಂತವಾದ ಪ್ರಕಾಶಾಕಾಶಗಳಿಗೆ ನಿತ್ಯಸಂಬಂಧ

ವಿರುವದರಿಂದ ಪ್ರಕಾಶವುಳ್ಳವಾದ, ಅಸಂಬಾಧವಾದ- ಸಂಬಾಧವೆಂದರೆ ಸಂಬಾಧಿಸುವದು, ಒಬ್ಬರಿಂದೊಬ್ಬರಿಗೆ ಆಗುವ ತೊಂದರೆ, ಅದು ಇಲ್ಲದ ಅಸಂಬಾಧವಾದ- ಉರುಗಾಯವಂತವಾದ, ವಿಸ್ತೀರ್ಣವಾದ ಗತಿಯುಳ್ಳ, ವಿಸ್ತೀರ್ಣವಾದ ಪ್ರಚಾರವುಳ್ಳ, ಲೋಕಗಳನ್ನೇ ಸಾಧಿಸಿಕೊಳ್ಳುತ್ತಾನೆ. 'ಎಲ್ಲಿಯವರೆಗೆ ಆಕಾಶದ (ಗತಿಯಿರುವದೋ), ಮುಂತಾದ (ಗ್ರಂಥಕ್ಕೆ) ಅರ್ಥವನ್ನು ಹೇಳಿದಂತಾಗಿದೆ

---

# ಏಳನೆಯ ಅಧ್ಯಾಯ-ಹದಿಮೂರನೆಯ ಖಂಡ

( ಭೂಮವಿದ್ಯೆ )

## ಸ್ಮ ರ ಬ್ರ ಹ್ಮ

(ಉಪನಿಷತ್ತು)

**ಸ್ಮರೋ[1] ವಾವಾಽಽಕಾಶಾದ್ಭೂಯಸ್ತಸ್ಮಾದ್ಯದ್ಯಪಿ ಬಹವ ಆಸೀರನ್ನ ಸ್ಮರನ್ತೋ ನೈವ ತೇ ಕಂಚನ ಶೃಣುಯುರ್ನ ಮನ್ವೀರನ್ನ ವಿಜಾನೀರನ್ ಯದಾ ವಾವ ತೇ ಸ್ಮರೇಯುರಥ ಶೃಣುಯುರಥ ಮನ್ವೀರನ್ನಥ ವಿಜಾನೀರನ್ ಸ್ಮರೇಣ ವೈ ಪುತ್ರಾನ್ ವಿಜಾನಾತಿ ಸ್ಮರೇಣ ಪಶೂನ್ ಸ್ಮರಮುಪಾಸ್ಸ್ವೇತಿ ॥ ೧ ॥**

೧. ಸ್ಮರವೇ ಆಕಾಶಕ್ಕಿಂತ ಹೆಚ್ಚಿನದು. ಆದ್ದರಿಂದ ಸ್ಮರಣೆಯಿಲ್ಲದ ಬಹುಮಂದಿ ಕುಳಿತಿದ್ದರೂ ಅವರು ಏನನ್ನೂ ಶ್ರವಣಮಾಡಲಾರರು, ಮನನಮಾಡಲಾರರು, ಅರಿಯಲಾರರು. ಯಾವಾಗ ಅವರು ಸ್ಮರಣೆಮಾಡುವರೋ ಆಗ ಶ್ರವಣಮಾಡಿಯಾರು, ಆಗ ಮನನ ಮಾಡಿಯಾರು, ಆಗ ಅರಿತುಕೊಂಡಾರು. ಸ್ಮರದಿಂದಲೇ ಪುತ್ರರನ್ನು ಅರಿತುಕೊಳ್ಳುತ್ತಾನೆ, ಸ್ಮರದಿಂದ ಪಶುಗಳನ್ನು ಅರಿತುಕೊಳ್ಳುತ್ತಾನೆ. ಸ್ಮರವನ್ನು ಉಪಾಸನೆಮಾಡು.

### ಸ್ಮರಣದ ಹೆಚ್ಚುಗಾರಿಕೆ, ಉಪಾಸನಾವಿಧಿ

(ಭಾಷ್ಯ)

೫೭೭. ಸ್ಮರೋ ವಾವ ಆಕಾಶಾದ್ ಭೂಯಃ । ಸ್ಮರಣಂ ಸ್ಮರೋಽನ್ತಃಕರಣಧರ್ಮಃ । ಸ ಆಕಾಶಾದ್ ಭೂಯಾನಿತಿ ದ್ರಷ್ಟವ್ಯಂ ಲಿಙ್ಗವ್ಯತ್ಯಯೇನ ।

---

1. 'ಸ್ಮರೋ ವಾಕಾಶಾದ್' ಎಂಬ ಪಾಠವು ಕೆಲವು ಕೋಶಗಳಲ್ಲಿರುತ್ತದೆ.

ಸ್ಮರ್ತುಃ ಸ್ಮರಣೇ ಹಿ ಸತಿ ಆಕಾಶಾದಿ ಸರ್ವಮ್ ಅರ್ಥವತ್ । ಸ್ಮರಣವತೋ ಭೋಗ್ಯತ್ವಾತ್, ಅಸತಿ ತು ಸ್ಮರಣೇ ಸದಪಿ ಅಸದೇವ । ಸತ್ತ್ವಕಾರ್ಯಾಭಾವಾತ್ । ನಾಽಪಿ ಸತ್ತ್ವಂ ಸ್ಮೃತ್ಯಭಾವೇ ಶಕ್ಯಮ್ ಆಕಾಶಾದೀನಾಮವಗನ್ತುಮಿತ್ಯತಃ ಸ್ಮರಣಸ್ಯ ಆಕಾಶಾದ್ ಭೂಯಸ್ತ್ವಮ್ । ದೃಶ್ಯತೇ ಹಿ ಲೋಕೇ ಸ್ಮರಣಸ್ಯ ಭೂಯಸ್ತ್ವಮ್ । ಯಸ್ಮಾತ್ ತಸ್ಮಾದ್ ಯದ್ಯಪಿ ಸಮುದಿತಾ ಬಹವ ಏಕಸ್ಮಿನ್ ಆಸೀರನ್ ಉಪವಿಶೇಯುಃ । ತೇ ತತ್ರಾಽಽಸೀನಾಃ ಅನ್ಯೋನ್ಯಭಾಷಿತಮಪಿ ನ ಸ್ಮರಸ್ತಶ್ಚೇತ್ ಸ್ಯುರ್ನೈವ ತೇ ಕಂಚನ ಶಬ್ದಂ ಶೃಣುಯುಃ । ತಥಾ ನ ಮನ್ವೀರನ್ । ಮನ್ತವ್ಯಂ ಚೇತ್ ಸ್ಮರೇಯುಸ್ತದಾ ಮನ್ವೀರನ್ ಸ್ಮೃತ್ಯಭಾವಾತ್ ನ ಮನ್ವೀರನ್ ತಥಾ ನ ವಿಜಾನೀರನ್। ಯದಾ ವಾವ ತೇ ಸ್ಮರೇಯುರ್ಮನ್ತವ್ಯಂ ವಿಜ್ಞಾತವ್ಯಂ ಶ್ರೋತವ್ಯಂ ಚ ಅಥ ಶೃಣುಯುಃ, ಅಥ ಮನ್ವೀರನ್ ಅಥ ವಿಜಾನೀರನ್ । ತಥಾ ಸ್ಮರೇಣ ವೈ ಮಮ ಪುತ್ರಾ ಏತೇ ಇತಿ ಪುತ್ರಾನ್ ವಿಜಾನಾತಿ, ಸ್ಮರೇಣ ಪಶೂನ್ । ಅತೋ ಭೂಯಸ್ತ್ವಾತ್ ಸ್ಮರಮ್ ಉಪಾಸ್ಸ್ವೇತಿ ॥

(ಭಾಷ್ಯಾರ್ಥ)

ಸ್ಮರವೇ ಆಕಾಶಕ್ಕಿಂತ ಹೆಚ್ಚಿನದು ಸ್ಮರವು ಎಂದರೆ ನೆನಪಿಗೆ ತಂದುಕೊಳ್ಳುವ ಅಂತಃಕರಣಧರ್ಮವು. ಅದು ಆಕಾಶಕ್ಕಿಂತ ಹೆಚ್ಚಿನದು (ಮೂಲದಲ್ಲಿ ಭೂಯಃ ಎಂಬುದನ್ನು) ಭೂಯಾನ್ ಎಂದು ಲಿಂಗವನ್ನು ಮಾರ್ಪಡಿಸಿ ಅರ್ಥಮಾಡಿಕೊಳ್ಳಬೇಕು.[1] ಸ್ಮರಿಸುವವನಿಗೆ ಸ್ಮರಣೆಯಿದ್ದರಲ್ಲವೆ, ಆಕಾಶವೇ ಮುಂತಾದದ್ದೆಲ್ಲವೂ ಸಾರ್ಥಕವಾಗುವದು ? ಏಕೆಂದರೆ (ಅದೆಲ್ಲವೂ) ಸ್ಮರಣೆಯುಳ್ಳವನಿಗೇ ಭೋಗ್ಯವಾಗಿರುತ್ತವೆ. ಸ್ಮರಣೆಯಿಲ್ಲದಿದ್ದರೋ ಇದ್ದರೂ ಇಲ್ಲದಂತೆಯೇ, ಏಕೆಂದರೆ ಇದ್ದದ್ದರ ಕಾರ್ಯವು (ಅದರಲ್ಲಿ)ರುವದಿಲ್ಲ. ಸ್ಮೃತಿಯಿಲ್ಲದಿದ್ದರೆ ಆಕಾಶಾದಿಗಳು ಇರುವವೆಂದು ನಿಶ್ಚಯಿಸುವದುಕೂಡ ಆಗಲಾರದು ಆದ್ದರಿಂದ ಸ್ಮರಣವು ಆಕಾಶಕ್ಕಿಂತ ಹೆಚ್ಚಿನದು.

ಲೋಕದಲ್ಲಿ ಸ್ಮರಣೆಯ ಹೆಚ್ಚುಗಾರಿಕೆಯು ಕಂಡುಬರುತ್ತದೆಯಲ್ಲವೆ? ಆದ್ದರಿಂದಲೇ ಒಂದೇ ಕಡೆಯಲ್ಲಿ ಬಲುಮಂದಿ ಒಟ್ಟುಸೇರಿ ಕುಳಿತಿದ್ದರೂ ಕೂತುಕೊಂಡಿದ್ದರೂ ಅವರು ಅಲ್ಲಿ ಕುಳಿತಿದ್ದು ಒಬ್ಬೊಬ್ಬರ ಮಾತನ್ನುಕೂಡ ಸ್ಮರಿಸಿಕೊಳ್ಳದೆ ಇರುತ್ತಾರಾದರೆ, ಅವರಿಗೆ ಯಾವ ಶಬ್ದವೂ ಕೇಳಿಸಲೇ ಆರದು ,– ಮಂತವ್ಯವನ್ನು ಸ್ಮರಿಸಿಕೊಂಡರೆ ಆಗ ಮನನಮಾಡಿಯಾರು.[2] (ಆದರೆ)– ಸ್ಮೃತಿಯಿಲ್ಲದ್ದರಿಂದ (ಈಗ) ಮನನಮಾಡಲಾರರು. ಹಾಗೂ ಅರಿತುಕೊಳ್ಳಲಾರರು. ಯಾವಾಗ ಅವರು ಮಂತವ್ಯವನ್ನು ವಿಜ್ಞಾತವ್ಯವನ್ನು ಶ್ರೋತವ್ಯವನ್ನು ಸ್ಮರಿಸುವರೋ

---

1. ಏಕೆಂದರೆ ಸ್ಮರಶಬ್ದವು ಪುಲ್ಲಿಂಗವಾಗಿದೆ.
2. ಭಾಷ್ಯದಲ್ಲಿ ಈ ವಾಕ್ಯವು ಹೆಚ್ಚಾಗಿ ಬಿದ್ದಿದೆಯೋ ಎನಿಸುತ್ತಿದೆ.

ಆಗ ಕೇಳಿಯಾರು, ಮನನಮಾಡಿಯಾರು, ಆಗ ಅರಿತಾರು. ಮತ್ತು ಸ್ಮರದಿಂದಲೇ 'ನನ್ನ ಮಕ್ಕಳಿವರು' ಎಂದು ಪುತ್ರರನ್ನು ಅರಿತುಕೊಳ್ಳುತ್ತಾನೆ, ಸ್ಮರದಿಂದ ಪಶುಗಳನ್ನು (ಅರಿತುಕೊಳ್ಳುತ್ತಾನೆ), ಆದ್ದರಿಂದ (ಹೀಗೆ) ಹೆಚ್ಚಿನದಾಗಿರುವದ ರಿಂದ ಸ್ಮರವನ್ನು ಉಪಾಸನೆಮಾಡು

## ಸ್ಮರಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇ ಯಾವತ್ ಸ್ಮರಸ್ಯ ಗತಂ ತತ್ರಾಽಸ್ಯ ಯಥಾಕಾಮಚಾರೋ ಭವತಿ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸ್ಮರಾದ್ಭೂಯ ಇತಿ ಸ್ಮರಾದ್ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨ ಯಾವನು ಸ್ಮರವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನಿಗೆ ಎಲ್ಲಿಯವರೆಗೆ ಸ್ಮರದ ಗತಿಯಿರುವದೋ ಅಲ್ಲಿ(ಯವರೆಗೂ) ಯಥಾಕಾಮಚಾರವಿರುತ್ತದೆ. ಯಾವನು ಸ್ಮರವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ ಅವನಿಗೆ ಫಲವಿದು. 'ಭಗವಂತನೆ, ಸ್ಮರಕ್ಕಿಂತ ಹೆಚ್ಚಿನದು ಇದೆಯೆ ?' 'ಸ್ಮರಕ್ಕಿಂತ ಹೆಚ್ಚಿನದು ಇದ್ದೇ ಇದೆ.' 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

(ಭಾಷ್ಯ)

೫೭೮. ಉಕ್ತಾರ್ಥಮನ್ಯತ್ ॥

(ಭಾಷ್ಯಾರ್ಥ)

ಮಿಕ್ಕದ್ದರ ಅರ್ಥವನ್ನು ಹೇಳಿದ್ದಾಗಿದೆ.

# ಏಳನೆಯ ಅಧ್ಯಾಯ– ಹದಿನಾಲ್ಕನೆಯ ಖಂಡ

(ಭೂಮವಿದ್ಯೆ)

## ಆ ಶಾ ಬ್ರ ಹ್ಮ

(ಉಪನಿಷತ್ತು)

**ಆಶಾ ವಾವ ಸ್ಮರಾದ್ ಭೂಯಸ್ಯಾಶೇದ್ಧೋ ವೈ ಸ್ಮರೋ ಮನ್ತ್ರಾನಧೀತೇ ಕರ್ಮಾಣಿ ಕುರುತೇ ಪುತ್ರಾಗ್ಂಶ್ಚ ಪಶೂಗ್ಂಶ್ಚೇಚ್ಛತ ಇಮಂ ಚ ಲೋಕಮಮುಂ ಚ ಚೇಚ್ಛತ ಆಶಾಮುಪಾಸ್ಸ್ವೇತಿ ॥ ೧ ॥**

೧. ಆಶೆಯೇ ಸ್ಮರಕ್ಕಿಂತ ಹೆಚ್ಚಿನದು. ಆಶೇದ್ಧನಲ್ಲವೆ, ಸ್ಮರನಾಗಿ ಮಂತ್ರಗಳನ್ನು ಅಧ್ಯಯನಮಾಡುತ್ತಾನೆ, ಕರ್ಮಗಳನ್ನು ಮಾಡುತ್ತಾನೆ, ಪುತ್ರರನ್ನೂ ಪಶುಗಳನ್ನೂ ಇಚ್ಛಿಸುತ್ತಾನೆ, ಈ ಲೋಕವನ್ನು ಆ (ಲೋಕ)ವನ್ನು ಇಚ್ಛಿಸುತ್ತಾನೆ? ಆಶೆಯನ್ನು ಉಪಾಸನೆಮಾಡು.

### ಆಶೆಯ ಹೆಚ್ಚುಗಾರಿಕೆ, ಉಪಾಸನಾವಿಧಿ

(ಭಾಷ್ಯ)

೫೭೬. ಆಶಾ ವಾವ ಸ್ಮರಾದ್ ಭೂಯಸೀ । ಅಪ್ರಾಪ್ತವಸ್ತ್ವಾಕಾಙ್ಕ್ಷಾ । ಆಶಾ ತೃಷ್ಣಾ ಕಾಮ ಇತಿ ಯಾಮಾಹುಃ ಪರ್ಯಾಯೈಃ । ಸಾ ಚ ಸ್ಮರಾದ್ ಭೂಯಸೀ । ಕಥಮ್ ? ಆಶಯಾ ಹಿ ಅನ್ತಃಕರಣಸ್ಥಯಾ ಸ್ಮರತಿ ಸ್ಮರ್ತವ್ಯಮ್ । ಆಶಾವಿಷಯರೂಪಂ ಸ್ಮರನ್ ಅಸೌ ಸ್ಮರೋ ಭವತಿ । ಅತಃ ಆಶೇದ್ಧಃ ಆಶಯಾ ಅಭಿವರ್ಧಿತಃ ಸ್ಮರಭೂತಃ ಸ್ಮರನ್ ಋಗಾದೀನ್ ಮನ್ತ್ರಾನ್ ಅಧೀತೇ। ಅಧೀತ್ಯ ಚ ತದರ್ಥಂ ಬ್ರಾಹ್ಮಣೇಭ್ಯೋ ವಿಧೀಂಶ್ಚ ಶ್ರುತ್ವಾ ಕರ್ಮಾಣಿ ಕುರುತೇ ತತ್ಫಲಾಶಯೈವ। ಪುತ್ರಾಂಶ್ಚ ಪಶೂಂಶ್ಚ ಕರ್ಮಫಲಭೂತಾನ್ ಇಚ್ಛತೇ ಅಭಿವಾಞ್ಛತಿ । ಆಶಯೈವ ತತ್ಸಾಧನಾನಿ ಅನುತಿಷ್ಠತಿ । ಇಮಂ ಚ ಲೋಕಮ್ ಆಶೇದ್ಧ ಏವ ಸ್ಮರನ್ ಲೋಕಸಂಗ್ರಹಹೇತುಭಿರಿಚ್ಛತೇ । ಅಮುಂ ಚ ಲೋಕಮ್ ಆಶೇದ್ಧಃ ಸ್ಮರನ್ ತತ್ಸಾಧನಾನುಷ್ಠಾನೇನ ಇಚ್ಛತೇ । ಅತ ಆಶಾರಶನಾವಬದ್ಧಂ ಸ್ಮರಾಕಾಶಾದಿನಾಮಪರ್ಯನ್ತಂ ಜಗಚ್ಚಕ್ರೀಭೂತಂ ಪ್ರತಿಪ್ರಾಣಿ । ಅತ ಆಶಾಯಾಃ ಸ್ಮರಾದಪಿ ಭೂಯಸ್ತ್ವಮಿತ್ಯತ ಆಶಾಮ್ ಉಪಾಸ್ಸ್ವ ॥

(ಭಾಷ್ಯಾರ್ಥ)

ಆಶೆಯೇ ಸ್ಮರಕ್ಕಿಂತಲೂ ಹೆಚ್ಚಿನದು. **ಆಶೆ** ಎಂದರೆ ಸಿಕ್ಕದೆ ಇರುವ ವಸ್ತುವಿನ ಬಯಕೆ. ಆಶೆ, ತೃಷ್ಣೆ, ಕಾಮ– ಎಂದು ಇದನ್ನೇ ಪರ್ಯಾಯಗಳಿಂದ

ಕರೆಯುತ್ತಾರೆ ಅದು ಸ್ಮರಕ್ಕಿಂತಲೂ ಹೆಚ್ಚಿನದು ಹೇಗೆಂದರೆ ಅಂತಃಕರಣ ದಲ್ಲಿರುವ ಆಶೆಯಿಂದಲೇ ಅಲ್ಲವೆ, ಸ್ಮರ್ತವ್ಯವನ್ನು ಸ್ಮರಿಸುತ್ತಾನೆ. ಆಶೆಯ ವಿಷಯದ ರೂಪವನ್ನು ನೆನಪಿಸಿಕೊಂಡು ಇವನು ಸ್ಮರನಾಗುತ್ತಾನೆ ಆದ್ದರಿಂದ ಆಶೇದ್ಧನಾಗಿ ಆಶೆಯಿಂದ ಬೆಳೆದುಕೊಂಡು ಸ್ಮರನಾಗಿ ಋಗಾದಿಮಂತ್ರಗಳನ್ನು ಅಧ್ಯಯನಮಾಡುತ್ತಾನೆ. ಅಧ್ಯಯನಮಾಡಿ, ಬ್ರಾಹ್ಮಣಗಳಿಂದ ಅದರ ಅರ್ಥ ವನ್ನೂ ವಿಧಿಗಳನ್ನೂ ಶ್ರವಣಮಾಡಿ ಅದರ ಫಲದ ಆಶೆಯಿಂದಲೇ ಕರ್ಮಗಳನ್ನು ಮಾಡುತ್ತಾನೆ ಕರ್ಮಫಲವಾಗಿರುವ ಪುತ್ರರನ್ನೂ ಪಶುಗಳನ್ನೂ ಇಚ್ಛಿಸುತ್ತಾನೆ, ಬಯಸುತ್ತಾನೆ. ಆಶೆಯಿಂದಲೇ ಅವುಗಳಿಗೆ ಸಾಧನವಾದ (ಕರ್ಮಗಳನ್ನು) ಮಾಡುತ್ತಾನೆ ಈ ಲೋಕವನ್ನು ಆಶೇದ್ಧನಾಗಿಯೇ ಸ್ಮರಿಸಿಕೊಂಡು ಲೋಕ ವನ್ನು ಸಂಪಾದಿಸಿಕೊಳ್ಳುವದಕ್ಕೆ (ಬೇಕಾದ) ಸಾಧನಗಳಿಂದ ಇಚ್ಛಿಸುತ್ತಾನೆ[1] ಆ ಲೋಕವನ್ನು ಆಶೇದ್ಧನಾಗಿ ಸ್ಮರಿಸಿಕೊಂಡು ಅದರ ಸಾಧನಗಳನ್ನು ಅನುಷ್ಠಾನ ಮಾಡುವದರಿಂದ ಇಚ್ಛಿಸುತ್ತಾನೆ ಆದ್ದರಿಂದ ಆಶೆಯೆಂಬ ಪಾಶದಿಂದ ಬಿಗಿಯ ಲ್ಪಟ್ಟ ಸ್ಮರಾಕಾಶವೇ ಮುಂತಾಗಿ ನಾಮದವರೆಗಿನ ಜಗತ್ತು ಪ್ರತಿಜೀವನಿಗೂ ಚಕ್ರವಾಗಿರುತ್ತದೆ ಆದ್ದರಿಂದ ಆಶೆಯು ಸ್ಮರಕ್ಕಿಂತಲೂ ಹೆಚ್ಚಿನದಾಗಿರುತ್ತದೆ ಆದ್ದರಿಂದ ಆಶೆಯನ್ನು ಉಪಾಸನೆಮಾಡು

## ಆಶಾಬ್ರಹ್ಮೋಪಾಸನೆಗೆ ಫಲ

(ಉಪನಿಷತ್ತು)

**ಸ ಯ ಆಶಾಂ ಬ್ರಹ್ಮೇತ್ಯುಪಾಸ್ತ ಆಶಯಾಽಸ್ಯ ಸರ್ವೇ ಕಾಮಾಃ ಸಮೃಧ್ಯನ್ತ್ಯಮೋಘಾ ಹಾಸ್ಯಾಶಿಷೋ ಭವನ್ತಿ ಯಾವದಾಶಾಯಾ ಗತಂ ತತ್ರಾಽಸ್ಯ ಯಥಾಕಾಮಚಾರೋ ಭವತಿ ಯ ಆಶಾಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಶಾಯಾ ಭೂಯ ಇತ್ಯಾಶಾಯಾ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ೨ ॥**

೨. ಯಾವನು ಆಶೆಯನ್ನು ಬ್ರಹ್ಮವೆಂದು ಉಪಾಸನೆಮಾಡು ತ್ತಾನೋ ಅವನಿಗೆ ಆಶೆಯಿಂದ ಸರ್ವಕಾಮಗಳೂ ಸಮೃದ್ಧವಾಗು ತ್ತವೆ. ಅವನ ಆಶೆಗಳು ಅಮೋಘವಾಗುತ್ತವೆ. ಎಲ್ಲಿಯವರೆಗೆ ಆಶೆಯ ಗತಿ(ಯಿರುವದೋ), ಅಲ್ಲಿ(ಯವರೆಗೆ) ಅವನಿಗೆ ಯಥಾಕಾಮ ಚಾರವಿರುತ್ತದೆ. ಯಾವನು ಆಶೆಯನ್ನು ಬ್ರಹ್ಮವೆಂದು ಉಪಾಸನೆ ಮಾಡುತ್ತಾನೋ (ಅವನಿಗೆ ಫಲವಿದು). 'ಭಗವಂತನೆ, ಆಶೆಗಿಂತ ಹೆಚ್ಚಿನದು ಇದೆಯೆ ?' 'ಆಶೆಗಿಂತ ಹೆಚ್ಚಿನದು ಇದ್ದೇಇದೆ.' 'ಅದನ್ನು ಭಗವಂತನು ನನಗೆ ಹೇಳಿಕೊಡಬೇಕು.'

---

1. ಪಡೆದುಕೊಳ್ಳುತ್ತಾನೆ ಎಂದರ್ಥ.

## ಆಶೋಪಾಸಕನಿಗೆ ಸರ್ವಕಾಮಾವಾಪ್ತಿಫಲ

(ಭಾಷ್ಯ)

೫೮೧ ಯಸ್ತು ಆಶಾಂ ಬ್ರಹ್ಮೇತಿ ಉಪಾಸ್ತೇ ಶೃಣು ತಸ್ಯ ಫಲಮ್ । ಆಶಯಾ ಸದಾ ಉಪಾಸಿತಯಾ ಅಸ್ಯ ಉಪಾಸಕಸ್ಯ ಸರ್ವೇ ಕಾಮಾಃ ಸಮೃಧ್ಯನ್ತಿ ಸಮೃದ್ಧಿಂ ಗಚ್ಛನ್ತಿ । ಅಮೋಘಾ ಅಸ್ಯ ಆಶಿಷಃ ಪ್ರಾರ್ಥನಾ ಸರ್ವಾ ಭವನ್ತಿ । ಯತ್ ಪ್ರಾರ್ಥಿತಂ ಸರ್ವಂ ತತ್ ಅವಶ್ಯಂ ಭವತೀತ್ಯರ್ಥಃ । ಯಾವದಾಶಾಯಾ ಗತಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಯಾವನು ಆಶೆಯನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನಿಗೆ (ಆಗುವ) ಫಲವನ್ನು ಕೇಳು ಯಾವಾಗಲೂ ಉಪಾಸನೆಮಾಡಿದ ಆಶೆಯಿಂದ ಈ ಉಪಾಸಕನ ಎಲ್ಲಾ ಆಶೆಗಳೂ ಸಮೃದ್ಧವಾಗುತ್ತವೆ, ಸಮೃದ್ಧಿಯನ್ನು ಹೊಂದು ತ್ತವೆ. ಇವನ ಆಶೆಗಳು ಬಯಕೆಗಳೆಲ್ಲವೂ ಸಾರ್ಥಕವಾಗುವವು, ಅವನು ಯಾವ ಯಾವದನ್ನು ಬಯಸುವನೋ ಅದೆಲ್ಲವೂ ಅವಶ್ಯವಾಗಿ ಆಗುತ್ತದೆ ಎಂದರ್ಥ. 'ಎಲ್ಲಿಯವರೆಗೆ ಆಶೆಯ ಗತಿಯಿರುವದೋ' ಎಂದು ಮುಂತಾದ (ಗ್ರಂಥವು) ಹಿಂದಿ ನಂತೆ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು).

---

# ಏಳನೆಯ ಅಧ್ಯಾಯ-ಹದಿನೈದನೆಯ ಖಂಡ

(ಭೂಮವಿದ್ಯೆ)

## ಪ್ರಾಣಬ್ರಹ್ಮ

(ಉಪನಿಷತ್ತು)

**ಪ್ರಾಣೋ ವಾವ[1] ಆಶಾಯಾ ಭೂಯಾನ್ ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಗ್ಂ ಸಮರ್ಪಿತಂ ಪ್ರಾಣಃ ಪ್ರಾಣೇನ ಯಾತಿ ಪ್ರಾಣಃ ಪ್ರಾಣಂ ದದಾತಿ ಪ್ರಾಣಾಯ ದದಾತಿ ಪ್ರಾಣೋ ಹ ಪಿತಾ ಪ್ರಾಣೋ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ ॥ ೧ ॥**

---

1. ಅಚ್ಚಿನ ಪುಸ್ತಕಗಳಲ್ಲಿ ವಾ ಆಶಾಯಾ ಎಂದೇ ಇದೆ, ಆದರೆ ವಾವ ಎಂದು ಎರಡು ಕೋಶಗಳಲ್ಲಿದೆ, ಹಿಂದೆ ಎಲ್ಲಾ ಕಡೆಯಲ್ಲಿಯೂ ವಾವ ಎಂದೇ ಇದೆ. ಸೂ. ಭಾ. ೧-೩-೮ರಲ್ಲಿ (ಭಾ ಭಾ. ೨೩೬) 'ಅದೋ ವಾವ ಪ್ರಾಣಾದ್ಭೂಯಃ' ಎಂಬ ಅನುಕರಣವಾಕ್ಯ ವಿಷಯವು ವಾವ ಎಂಬುದೇ ಪಾಠವೆಂಬುದಕ್ಕೆ ಗಮಕವಾಗಿದೆ.

೧. ಪ್ರಾಣನೇ ಆಶೆಗಿಂತ ಹೆಚ್ಚಿನವನು. ಹೇಗೆ ಹಾರೆಕೋಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಹಾಗೆ ಈ ಪ್ರಾಣನಲ್ಲಿ ಎಲ್ಲವೂ ಸೇರಿಕೊಂಡಿರುತ್ತದೆ. ಪ್ರಾಣನು ಪ್ರಾಣನಿಂದಲೇ ಹೋಗುತ್ತಾನೆ, ಪ್ರಾಣನು ಪ್ರಾಣನನ್ನು ಕೊಡುತ್ತಾನೆ, ಪ್ರಾಣನಿಗೆ ಕೊಡುತ್ತಾನೆ. ಪ್ರಾಣನೇ ತಂದೆ, ಪ್ರಾಣನೇ ತಾಯಿ, ಪ್ರಾಣನೇ ಒಡಹುಟ್ಟಿದವನು, ಪ್ರಾಣನೇ ಒಡಹುಟ್ಟಿದಾಕೆ, ಪ್ರಾಣನೇ ಆಚಾರ್ಯನು. ಪ್ರಾಣನೇ ಬ್ರಾಹ್ಮಣನು.

## ಪ್ರಾಣನ ಹೆಚ್ಚುಗಾರಿಕೆ

( ಭಾಷ್ಯ )

ಶಾ೧ ನಾಮೋಪಕ್ರಮಮ್ ಆಶಾನ್ತಂ ಕಾರ್ಯಕಾರಣತ್ವೇನ ನಿಮಿತ್ತನೈಮಿತ್ತಿಕತ್ವೇನ ಚ ಉತ್ತರೋತ್ತರಭೂಯಸ್ತಯಾ ಅವಸ್ಥಿತಂ ಸ್ಮೃತಿನಿಮಿತ್ತಸದ್ಭಾವಂ, ಆಶಾರಶನಾಪಾಶೈರ್ವಿಪಾಶಿತಮ್ ಸರ್ವಂ ಸರ್ವತೋ ಬಿಸಮಿವ ತನ್ತುಭಿರ್ಯಸ್ಮಿನ್ ಪ್ರಾಣೇ ಸಮರ್ಪಿತಮ್, ಯೇನ ಚ ಸರ್ವತೋ ವ್ಯಾಪಿನಾ ಅನ್ತರ್ಬಹಿರ್ಗತೇನ ಸೂತ್ರೇ[1] ಮಣಿಗಣಾ ಇವ ಸೂತ್ರೇಣ ಗ್ರಥಿತಂ ವಿಧೃತಂ ಚ, ಸ ಏಷ ಪ್ರಾಣೋ ವಾ ಆಶಾಯಾ ಭೂಯಾನ್। ಕಥಮಸ್ಯ ಭೂಯಸ್ತ್ವಮಿತಿ ? ಆಹ ದೃಷ್ಟಾನ್ತೇನ ಸಮರ್ಥಯಂಸ್ತದ್ಭೂಯಸ್ತ್ವಮ್। ಯಥಾ ವೈ ಲೋಕೇ ರಥಚಕ್ರಸ್ಯ ಅರಾ ರಥನಾಭೌ ಸಮರ್ಪಿತಾಃ ಸಂಪ್ರೋತಾಃ। ಸಂಪ್ರವೇಶಿತಾ ಇತ್ಯೇತತ್, ಏವಮ್ ಅಸ್ಮಿನ್ ಲಿಙ್ಗಸಂಘಾತರೂಪೇ ಪ್ರಾಣೇ ಪ್ರಜ್ಞಾತ್ಮನಿ ದೈಹಿಕೇ ಮುಖ್ಯೇ ಯಸ್ಮಿನ್ ಪರಾ ದೇವತಾ ನಾಮರೂಪವ್ಯಾಕರಣಾಯ ಆದರ್ಶಾದೌ ಪ್ರತಿಬಿಮ್ಬವತ್ ಜೀವೇನಾಽಽತ್ಮನಾ ಅನುಪ್ರವಿಷ್ಟಾ, ಯಶ್ಚ ಮಹಾರಾಜಸ್ಯೇವ ಸರ್ವಾಧಿಕಾರೀ ಈಶ್ವರಸ್ಯ "ಕಸ್ಮಿನ್ನ್ವಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣಮಸೃಜತ" (ಪ್ರ. ೬-೩,೪) ಇತಿ ಶ್ರುತೇಃ, ಯಸ್ತು ಛಾಯೇವಾಽನುಗತ ಈಶ್ವರಮ್, 'ತದ್ಯಥಾ ರಥಸ್ಯಾಽರೇಷು ನೇಮಿರರ್ಪಿತೋ ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾ" (ಕೌ. ೩-೯) ಇತಿ ಕೌಷೀತಕಿನಾಮ್। ಅತ ಏವಮಸ್ಮಿನ್ ಪ್ರಾಣೇ ಸರ್ವಂ ಯಥೋಕ್ತಮ್ ಸಮರ್ಪಿತಮ್, ಅತಃ ಸ ಏಷ ಪ್ರಾಣೋಽಪರತನ್ತ್ರಃ ಪ್ರಾಣೇನ ಸ್ವಶಕ್ತ್ಯೈವ ಯಾತಿ ನಾನ್ಯಕೃತಂ ಗಮನಾದಿ

1. ಈ ಮಾತು ಅವಶ್ಯವಿಲ್ಲವೆಂದು ಕಾಣುತ್ತದೆ.

ಕ್ರಿಯಾಸ್ವಸ್ಯ ಸಾಮರ್ಥ್ಯಮ್ ಇತ್ಯರ್ಥಃ । ಸರ್ವಂ ಕ್ರಿಯಾಕಾರಕಫಲಭೇದಜಾತಂ ಪ್ರಾಣ ಏವ ನ ಪ್ರಾಣಾದ್ ಬಹಿರ್ಭೂತಮಸ್ತೀತಿ ಪ್ರಕರಣಾರ್ಥಃ । ಪ್ರಾಣಃ ಪ್ರಾಣಂ ದದಾತಿ । ಯದ್ ದದಾತಿ ತತ್ ಸ್ವಾತ್ಮಭೂತಮೇವ । ಯಸ್ಮೈ ದದಾತಿ ತದಪಿ ಪ್ರಾಣಾಯೈವ । ಅತಃ ಪಿತ್ರಾದ್ಯಾಖ್ಯೋಽಪಿ ಪ್ರಾಣ ಏವ ॥

(ಭಾಷ್ಯಾರ್ಥ)

ನಾಮವನ್ನು ಮೊದಲುಮಾಡಿಕೊಂಡು ಆಶೆಯವರೆಗೆ ಕಾರ್ಯಕಾರಣಭಾವದಿಂದಲೂ ನಿಮಿತ್ತನೈಮಿತ್ತಿಕಭಾವದಿಂದಲೂ[1] ಮುಂದುಮುಂದಿನದು ಹೆಚ್ಚಿನದೆಂದಾಗಿರುವ, ಸ್ಮೃತಿನಿಮಿತ್ತದಿಂದ ಇದ್ದುಕೊಂಡಿರುವದಾದ, ಆಶೆ ಎಂಬ ಹಗ್ಗದ ಬಿಗಿತಗಳಿಂದ ಕಟ್ಟುವಡದಿರುವ, ಎಲ್ಲವೂ ಎಲ್ಲಾಕಡೆಯಿಂದಲೂ ಕಮಲದ ನಾಳವು ತಂತುಗಳಿಂದ (ಬಿಗಿಪಡೆದಿರುವ ಎಲ್ಲವೂ) ಯಾವ ಪ್ರಾಣದಲ್ಲಿ ಬಂದುಸೇರಿಕೊಂಡಿದೆಯೋ ಯಾವ (ಪ್ರಾಣನು) ಸರ್ವವ್ಯಾಪಿಯಾಗಿ ಒಳಗೂ ಹೊರಗೂ ಇದ್ದುಕೊಂಡಿದ್ದರೂ ಸೂತ್ರಾತ್ಮನು- ದಾರವು ಮಣಿಸಮೂಹಗಳನ್ನು (ಕಟ್ಟಿರುವಂತೆ)-ಕಟ್ಟಿಹಾಕಿ ಎತ್ತಿಹಿಡಿದುಕೊಂಡಿರುವನೋ[2], ಆ ಈ ಪ್ರಾಣನೇ ಆಶೆಗಿಂತ ಹೆಚ್ಚಿನವನು.

ಈ (ಪ್ರಾಣನು) ಹೆಚ್ಚಿನವನೆಂಬುದು ಹೇಗೆ ? ಎಂದರೆ, ದೃಷ್ಟಾಂತದಿಂದ ಇವನ ಹೆಚ್ಚುಗಾರಿಕೆಯನ್ನು ಸಮರ್ಥಿಸಿ ಹೇಳುತ್ತಿದಾನೆ ಹೇಗೆ ಲೋಕದಲ್ಲಿ ಗಾಡಿಯ ಚಕ್ರದ ಹಾರೆಕೋಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಪೋಣಿಸಿಕೊಂಡಿರುತ್ತವೆಯೋ, ಒಳಹೊಕ್ಕಿರುತ್ತವೆಯೋ ಎಂದರ್ಥ. ಹಾಗೆಯೇ ಈ ಲಿಂಗಸಂಘಾತರೂಪನಾದ ಪ್ರಜ್ಞಾತ್ಮನಾದ ದೇಹದಲ್ಲಿರುವ ಮುಖ್ಯಪ್ರಾಣನಲ್ಲಿ-ಯಾವನಲ್ಲಿ (ಸದಾಖ್ಯನಾದ) ಪರದೇವತೆಯು ನಾಮರೂಪಗಳನ್ನು ವಿಂಗಡಿಸುವದಕ್ಕಾಗಿ ಕನ್ನಡಿಯೇ ಮುಂತಾದದ್ದರಲ್ಲಿ ಪ್ರತಿಬಿಂಬವು (ಹೊಗುವಂತೆ) ಜೀವನೆಂಬ ಆತ್ಮರೂಪದಿಂದ ಒಳಹೊಕ್ಕಿರುವದೋ[3] ಮತ್ತು ಯಾವನು ಮಹಾರಾಜನಿಗೆ ಸರ್ವಾಧಿಕಾರಿಯಂತೆ "ಯಾವನು ಉತ್ಕ್ರಾಂತನಾದರೆ ನಾನು ಉತ್ಕ್ರಾಂತನಾಗುವೆನೋ ಯಾವನು ನಿಂತಿದ್ದರೆ ನಾನೂ ನಿಂತಿರುವೆನೋ (ಎಂದು ಯೋಚಿಸಿ) ಅವನು

---

1. ಉಪಾದಾನೋಪಾದೇಯಭಾವವು ಕೆಲವು ಕಡೆಯಲ್ಲಿದೆ, ನಿಮಿತ್ತನೈಮಿತ್ತಿಕಭಾವವು ಕೆಲವು ಕಡೆಯಲ್ಲಿದೆ.

2. ಸೂತ್ರಾತ್ಮನಾದ ಪ್ರಾಣನು ಜಗತ್ತಿನ ಭಾಗಗಳು ಒಂದಕ್ಕೊಂದು ಕೂಡಿಕೊಂಡಿರುವದಕ್ಕೂ ಚದರಿಹೋಗದಂತಿರುವದಕ್ಕೂ ಕಾರಣನು ಎಂದು ಅಭಿಪ್ರಾಯ.

3. ೬-೩-೨ (ಭಾ. ಭಾ ೪೬೪) ನ್ನು ನೋಡಿ. ಯಾವ ಲಿಂಗರೂಪವಾದ ಮನಸ್ಸಿನಲ್ಲಿ ಜೀವನು ಮನನದರ್ಶನಶ್ರವಣಾದಿಗಳನ್ನು ಮಾಡುತ್ತಿರುವನೋ ಅದನ್ನೇ ಇಲ್ಲಿ ಕ್ರಿಯಾಶಕ್ತಿಪ್ರಧಾನವಾಗಿ ಪ್ರಾಣನೆಂದಿದೆ ೬-೨-೧ (ಭಾ.ಭಾ. ೪೯೪) ವನ್ನು ನೋಡಿ.

ಪ್ರಾಣನನ್ನು ಸೃಷ್ಟಿಸಿದನು" (ಪ್ರ. ೬-೩,೪) ಎಂಬ ಶ್ರುತಿಯ ಪ್ರಮಾಣದಿಂದ ಈಶ್ವರನಾದ ಪರಮಾತ್ಮನಿಗೆ ಸರ್ವಾಧಿಕಾರಿಯೋ, ಮತ್ತು ಯಾವನು (ಮನುಷ್ಯನನ್ನು) ನೆರಳಿನಂತೆ ಈಶ್ವರ(ನಾದ ಆತ್ಮನನ್ನು) ಅನುಸರಿಸಿಕೊಂಡಿರುವನೋ[1], "ಹೇಗೆ ಗಾಡಿಯ ಹಾರೆಕೋಲುಗಳಲ್ಲಿ ಹಳಿಯು ಸೇರಿಕೊಂಡಿರುವದೋ, ಗುಂಬದಲ್ಲಿ ಹಾರೆಕೋಲುಗಳು ಸೇರಿಕೊಂಡಿರುತ್ತವೆಯೋ, ಹಾಗೆಯೇ ಈ ಭೂತಮಾತ್ರೆಗಳು ಪ್ರಜ್ಞಾಮಾತ್ರೆಗಳಲ್ಲಿ ಸೇರಿಕೊಂಡಿರುವವು, ಪ್ರಜ್ಞಾಮಾತ್ರೆಗಳು ಪ್ರಾಣನಲ್ಲಿ ನೇರಿಕೊಂಡಿರುವವು, ಆ ಈ ಪ್ರಾಣನೇ ಪ್ರಜ್ಞಾತ್ಮನು"[2] (ಕೌ ೩-೯) ಎಂದು ಕೌಷೀತಕಿಗಳ (ಉಪನಿಷತ್ತಿನಲ್ಲಿ ಇದೆ), ಆದ್ದರಿಂದ ಹಾಗೆಯೇ ಈ ಪ್ರಾಣನಲ್ಲಿ —ಮೇಲೆ ಹೇಳಿದ ಎಲ್ಲವೂ[3] ಸೇರಿಕೊಂಡಿರುತ್ತದೆ

ಆದ್ದರಿಂದ ಆ ಈ ಪ್ರಾಣನು ಪರವಶನಲ್ಲದೆ ಪ್ರಾಣದಿಂದಲೇ ಎಂದರೆ ತನ್ನ ಶಕ್ತಿಯಿಂದಲೇ ಹೋಗುತ್ತಾನೆ, ಹೋಗುವದೇ ಮುಂತಾದ ಕ್ರಿಯೆಗಳಲ್ಲಿ ಇವನಿಗಿರುವ ಸಾಮರ್ಥ್ಯವು ಮತ್ತೊಬ್ಬರಿಂದ ಬಂದದ್ದಲ್ಲ ಎಂದರ್ಥ. **ಕ್ರಿಯಾಕಾರಕ ಫಲಸಮೂಹವೆಲ್ಲವೂ ಪ್ರಾಣನೇ, ಪ್ರಾಣನಿಗಿಂತ ಹೊರಚ್ಚಾಗಿರುವದು (ಯಾವದೂ) ಇಲ್ಲ ಎಂಬುದು (ಈ) ಪ್ರಕರಣದ ಅರ್ಥವು** ಪ್ರಾಣನು ಪ್ರಾಣನನ್ನು ಕೊಡುತ್ತಾನೆ. ಯಾವದನ್ನು ಕೊಡುತ್ತಾನೋ ಅದು ತನ್ನ ಸ್ವರೂಪವೇ, (ಮತ್ತು) ಯಾರಿಗೆ ಕೊಡುತ್ತಾನೋ ಅದೂ ಪ್ರಾಣನಿಗೇ (ಕೊಡುತ್ತಾನೆ). ಆದ್ದರಿಂದ ತಂದೆ ಮುಂತಾದ ಹೆಸರು ಪಡೆದಿರುವವನೂ ಪ್ರಾಣನೇ

(ಉಪನಿಷತ್ತು)

**ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಚಾಽಽರ್ಯಂ ವಾ ಬ್ರಾಹ್ಮಣಂ ವಾ ಕಿಂಚಿದ್ಭೃಶಮಿವ ಪ್ರತ್ಯಾಹ ಧಿಕ್ತ್ವಾಸ್ತ್ವಿತ್ಯೇವೈನಮಾಹುಃ ಪಿತೃಹಾ ವೈ ತ್ವಮಸಿ ಮಾತೃಹಾ ವೈ ತ್ವಮಸಿ ಭ್ರಾತೃಹಾ ವೈ ತ್ವಮಸಿ ಸ್ವಸೃಹಾ ವೈ ತ್ವಮಸ್ಯಾಚಾರ್ಯಹಾ ವೈ ತ್ವಮಸಿ ಬ್ರಾಹ್ಮಣಹಾ ವೈ ತ್ವಮಸೀತಿ**

೨. ಅವನು ತಂದೆಯನ್ನಾಗಲಿ ತಾಯಿಯನ್ನಾಗಲಿ ಒಡಹುಟ್ಟಿದವನನ್ನಾಗಲಿ ಒಡಹುಟ್ಟಿದವಳನ್ನಾಗಲಿ ಆಚಾರ್ಯನನ್ನಾಗಲಿ ಬ್ರಾಹ್ಮಣನನ್ನಾಗಲಿ ಒಂದಿಷ್ಟು ಬಲವಾಗಿ ಪ್ರತಿಹೇಳುವದಾದರೆ

---

1. ಪ್ರ. ೩-೩ರ ಪರಾಮರ್ಶವಿದು

2. ಸೂ. ಭಾ ೧-೧-೩೧ (ಭಾ. ಭಾ. ೧೪೪) ರಲ್ಲಿ ಇದು ಪರಮಾತ್ಮನನ್ನೇ ಹೇಳುವ ವಾಕ್ಯವೆಂದು ನಿರ್ಧರಿಸಿದೆ. ಅಲ್ಲಿ ಉಪಹಿತನಾದ ಆತ್ಮನನ್ನು ಪ್ರಧಾನವಾಗಿಟ್ಟುಕೊಂಡು ಹಾಗೆ ಹೇಳಿದ್ದರೂ ಇಲ್ಲಿ ಉಪಾಧಿಯಾದ ಪ್ರಾಣನನ್ನು ಪ್ರಧಾನವಾಗಿಟ್ಟುಕೊಂಡು ಪ್ರಾಣಪರವೆಂದು ಉದಾಹರಿಸಿರಬಹುದೆಂದು ತೋರುತ್ತದೆ.

3. ನಾಮಾದಿಯಾಗಿ ಆಶಾಂತವಾಗಿರುವದೆಲ್ಲವೂ ಎಂದರ್ಥ.

ನಿನಗೆ ಧಿಕ್ಕಾರವಿರಲಿ ! ನೀನು ಪಿತೃಹತ್ಯೆಮಾಡಿದವನಿದ್ದೀಯೆ, ನೀನು ಮಾತೃಹತ್ಯೆಮಾಡಿದವನಿದ್ದೀಯೆ, ನೀನು ಭ್ರಾತೃಹತ್ಯೆಮಾಡಿದವನಿದ್ದೀಯೆ, ನೀನು ಸ್ವಸೃಹತ್ಯೆಮಾಡಿದವನಿದ್ದೀಯೆ, ನೀನು ಆಚಾರ್ಯಹತ್ಯೆಮಾಡಿದವನಿದ್ದೀಯೆ, ನೀನು ಬ್ರಾಹ್ಮಣಹತ್ಯೆಮಾಡಿದವನಿದ್ದೀಯೆ' ಎಂದೇ ಹೇಳುವರು.

## ಪ್ರಾಣನೇ ಪಿತ್ರಾದಿಗಳೆಂಬುದು ಹೇಗೆ ?

(ಭಾಷ್ಯ)

೫೮೨ ಕಥಂ ಪಿತ್ರಾದಿಶಬ್ದಾನಾಂ ಪ್ರಸಿದ್ಧಾರ್ಥೋತ್ಸರ್ಗೇಣ ಪ್ರಾಣವಿಷಯತ್ವಮಿತಿ ? ಉಚ್ಯತೇ । ಸತಿ ಪ್ರಾಣೇ ಪಿತ್ರಾದಿಷು ಪಿತ್ರಾದಿಶಬ್ದಪ್ರಯೋಗಾತ್ ತದುತ್ಕ್ರಾಂತೌ ಚ ಪ್ರಯೋಗಾಭಾವಾತ್ । ಕಥಂ ತದಿತಿ ? ಆಹ । ಸ ಯಃ ಕಶ್ಚಿತ್ ಪಿತ್ರಾದೀನಾಮ್ ಅನ್ಯತಮಂ ಯದಿ ತಂ ಭೃಶಮಿವ ತದನನುರೂಪಮಿವ ಕಿಂಚಿದ್ವಚನಂ ತ್ವಂಕಾರಾದಿಯುಕ್ತಂ ಪ್ರತ್ಯಾಹ ತದಾ ಏನಂ ಪಾರ್ಶ್ವಸ್ಥಾ ಆಹುರ್ವಿವೇಕಿನಃ ಧಿಕ್ ತ್ವಾ ಅಸ್ತು । 'ಧಿಗಸ್ತು ತ್ವಾಮ್' ಇತ್ಯೇವಮ್ । ಪಿತೃಹಾ ವೈ ತ್ವಂ ಪಿತುರ್ಹಂತೇತ್ಯಾದಿ ॥

(ಭಾಷ್ಯಾರ್ಥ)

ತಂದೆ ಮುಂತಾದ ಶಬ್ದಗಳಿಗೆ ಪ್ರಸಿದ್ಧವಾಗಿರುವ ಅರ್ಥವನ್ನು ಕೈಬಿಟ್ಟು (ಅವು) ಪ್ರಾಣವಿಷಯವೆಂದು (ಹೇಳಿದ್ದು) ಹೇಗೆ ?– ಎಂದರೆ ಹೇಳುತ್ತಾನೆ, ಪ್ರಾಣವಿರುವಾಗ ತಂದೆಯೇ ಮುಂತಾದವರಲ್ಲಿ ತಂದೆ ಮುಂತಾದ ಶಬ್ದಗಳನ್ನು ಪ್ರಯೋಗಿಸುತ್ತಾರೆ, ಆ (ಪ್ರಾಣವು) ಉತ್ಕ್ರಾಂತವಾಗಲು ಪ್ರಯೋಗಿಸುವದಿಲ್ಲ. ಆದ್ದರಿಂದ (ಇದು ಸರಿ).

ಅದು ಹೇಗೆಂದರೆ ಹೇಳುತ್ತೇನೆ. ಅವನು ಎಂದರೆ ಯಾವನಾದರೊಬ್ಬನು ತಂದೆಯೇ ಮುಂತಾದವರಲ್ಲಿ ಒಬ್ಬನನ್ನು ಬಲವಾಗಿ ಅವನಿಗೆ ಅನುಗುಣವಲ್ಲದಿರುವಂತೆ ನೀನು ತಾನು ಮುಂತಾದ್ದರಿಂದ ಕೂಡಿದ ಯಾವದಾದರೊಂದು ಮಾತನ್ನು ಆಡಿದರೆ, ಆಗ ಅವನನ್ನು ಪಕ್ಕದಲ್ಲಿರುವ ವಿವೇಕಿಗಳು (ಧಿಕ್ ತ್ವಾ ಅಸ್ತು=ಧಿಗಸ್ತು ತ್ವಾಮ್) 'ನಿನಗೆ ಧಿಕ್ಕಾರವಿರಲಿ !' ಎನ್ನುವರು, ನೀನು ಪಿತೃಹತ್ಯೆಯನ್ನು ಮಾಡಿದವನೇ ಇದ್ದೀಯೆ, ತಂದೆಯನ್ನು ಕೊಂದವನು– ಎಂದು ಮುಂತಾಗಿ (ಎನ್ನುವರು)

(ಉಪನಿಷತ್ತು)

**ಅಥ ಯದ್ಯಪ್ಯೇನಾನುತ್ಕ್ರಾನ್ತಪ್ರಾಣಾಞ್ಛೂಲೇನ ಸಮಾಸಂ ವ್ಯತಿಷಂದಹೇನ್ನೈವೈನಂ ಬ್ರೂಯುಃ ಪಿತೃಹಾಸೀತಿ ನ**

**ಮಾತೃಹಾಽಸೀತಿ ನ ಭ್ರಾತೃಹಾಽಸೀತಿ ನ ಸ್ವಸೃಹಾಽಸೀತಿ ನಾಽಽಚಾರ್ಯಹಾಽಸೀತಿ ನ ಬ್ರಾಹ್ಮಣಹಾಽಸೀತಿ ॥ ೩ ॥**

೩. ಇನ್ನು ಉತ್ಕ್ರಾಂತಪ್ರಾಣರಾದ ಇವರನ್ನು ಶೂಲದಿಂದ ಸಮಾಸಮಾಡಿ ಬೇರೆಬೇರೆಯಾಗಿ ಸುಟ್ಟರೂ ಇವನನ್ನು ಪಿತೃಹತ್ಯೆ ಮಾಡಿದವನಾಗಿದೀಯೆ ಎನ್ನುವದಿಲ್ಲ, ಮಾತೃಹತ್ಯೆಮಾಡಿದವನಾಗಿದೀಯೆ (ಎನ್ನು)ವದಿಲ್ಲ, ಭ್ರಾತೃಹತ್ಯೆಮಾಡಿದವನಾಗಿದೀಯೆ (ಎನ್ನು)ವದಿಲ್ಲ, ಸ್ವಸೃಹತ್ಯೆಮಾಡಿದವನಾಗಿದೀಯೆ (ಎನ್ನು)ವದಿಲ್ಲ, ಆಚಾರ್ಯಹತ್ಯೆಮಾಡಿದವನಾಗಿದೀಯೆ (ಎನ್ನು)ವದಿಲ್ಲ, ಬ್ರಾಹ್ಮಣಹತ್ಯೆಮಾಡಿದವನಾಗಿದೀಯೆ (ಎನ್ನು)ವದಿಲ್ಲ.

(ಭಾಷ್ಯ)

೫೮೩. ಅಥ ಏನಾನೇವ ಉತ್ಕ್ರಾನ್ತಪ್ರಾಣಾನ್ ತ್ಯಕ್ತದೇಹನಾಥಾನ್ ಯದ್ಯಪಿ ಶೂಲೇನ ಸಮಾಸಂ ಸಮಸ್ಯ ವ್ಯತಿಷಂದಹೇತ್ ವ್ಯತ್ಯಸ್ಯ ಸಂದಹೇತ್ ಏವಮಪಿ ಅತಿಕ್ರೂರಂ ಕರ್ಮ ಸಮಾಸವ್ಯತ್ಯಾಸಾದಿಪ್ರಕಾರೇಣ ದಹನಲಕ್ಷಣಂ ತದ್ದೇಹಸಂಬದ್ಧಮೇವ ಕುರ್ವಾಣಂ ನೈವೈನಂ ಬ್ರೂಯುಃ ಪಿತೃಹಾ ಇತ್ಯಾದಿ। ತಸ್ಮಾತ್ ಅನ್ವಯವ್ಯತಿರೇಕಾಭ್ಯಾಮ್ ಅವಗಮ್ಯತ ಏತತ್ ಪಿತ್ರಾದ್ಯಾಖ್ಯೋಽಪಿ ಪ್ರಾಣ ಏವೇತಿ ॥

(ಭಾಷ್ಯಾರ್ಥ)

ಇನ್ನು ಉತ್ಕ್ರಾಂತಪ್ರಾಣರಾಗಲು ದೇಹದ ಒಡೆಯನನ್ನು ಬಿಟ್ಟವರಾಗಲು ಇವರನ್ನೇ ಶೂಲದಿಂದ ಸಮಾಸಮಾಡಿ ಒಟ್ಟುಗೂಡಿಸಿ, (ವ್ಯತಿಷಂದಹೇತ್) ಬೇರೆ ಬೇರೆಮಾಡಿ (ಬಿಡಿಸಿ) ಸುಟ್ಟರೂ[1] (ಹೀಗೆ) ಒಟ್ಟುಗೂಡಿಸುವದು, ಬಿಡಿಸುವದು ಮುಂತಾದ ಪ್ರಕಾರದಿಂದ ಅದೇ ದೇಹಕ್ಕೆ ಸಂಬಂಧಪಟ್ಟ ದಹನರೂಪವಾದ ಇಂಥ ಅತಿಕ್ರೂರಕರ್ಮವನ್ನು ಮಾಡಿದವನಾದರೂ ಇವನನ್ನು ಪಿತೃಹತ್ಯೆಮಾಡಿದವನು ಎಂದು ಮುಂತಾಗಿ ಎನ್ನರು. ಆದ್ದರಿಂದ ಅನ್ವಯವ್ಯತಿರೇಕಗಳಿಂದ ಈ ತಂದೆ ಮುಂತಾದ ಹೆಸರುಳ್ಳವನೂ ಪ್ರಾಣನೇ ಎಂದು ಗೊತ್ತಾಗುತ್ತದೆ.

## ಪ್ರಾಣೋಪಾಸಕನು ಅತಿವಾದಿಯಾಗುವನು

(ಉಪನಿಷತ್ತು)

**ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನತಿವಾದೀ ಭವತಿ ತಂ**

1. 'ಸಮಸ್ಯ ವ್ಯತಿಷನ್ದಹೇತ್ ವ್ಯತ್ಯಸ್ಯ ಸಂದಹೇತ್' ಎಂಬುದರ ಕನ್ನಡವಿದು ಇದರ ಅಭಿಪ್ರಾಯವು ನಮಗೆ ಸ್ಪಷ್ಟವಾಗಿಲ್ಲ.

**ಚೇದ್ಬ್ರೂಯುರತಿವಾದ್ಯಸೀತ್ಯತಿವಾದ್ಯಸ್ಮೀತಿ ಬ್ರೂಯಾನ್ನಾಪ ಹ್ನುವೀತ ॥ ೪ ॥**

೪. ಪ್ರಾಣನೇ ಇವುಗಳೆಲ್ಲವೂ ಆಗಿರುತ್ತಾನೆ. (ಯಾವನು) ಹೀಗೆಂದು ಕಂಡುಕೊಂಡಿರುವನೋ, ಹೀಗೆ ಮನನಮಾಡಿರುವನೋ, ಹೀಗೆ ಅರಿತುಕೊಂಡಿರುವನೋ- ಆ ಇವನು ಅತಿವಾದಿಯಾಗುವನು. ಅವನನ್ನು ಅತಿವಾದಿಯಾಗಿರುವೆ ಎನ್ನುತ್ತಾರಾದರೆ ಅತಿವಾದಿಯಾಗಿರುವೆನು ಎಂದೇ ಹೇಳಬೇಕು, ಅಲ್ಲಗಳೆಯಬಾರದು.

## ಪ್ರಾಣನೇ ನಾನೆಂದು ಅರಿತುಕೊಂಡರೆ ಅತಿವಾದಿ

(ಭಾಷ್ಯ)

೫೮೪ ತಸ್ಮಾತ್ ಪ್ರಾಣೋ ಹ್ಯೇವ ಏತಾನಿ ಪಿತ್ರಾದೀನಿ ಸರ್ವಾಣಿ ಭವತಿ ಚಲಾನಿ ಸ್ಥಿರಾಣಿ ಚ । ಸ ವಾ ಏಷ ಪ್ರಾಣವಿತ್ ಏವಂ ಯಥೋಕ್ತ ಪ್ರಕಾರೇಣ ಪಶ್ಯನ್ ಫಲತೋಽನುಭವನ್, ಏವಂ ಮನ್ವಾನಃ ಉಪಪತ್ತಿಭಿಶ್ಚಿನ್ತಯನ್, ಏವಂ ವಿಜಾನನ್ ಉಪಪತ್ತಿಭಿಃ ಸಂಯೋಜ್ಯ ಏವಮೇವ ಇತಿ ನಿಶ್ಚಯಂ ಕುರ್ವನ್ ಇತ್ಯರ್ಥಃ । ಮನನವಿಜ್ಞಾನಾಭ್ಯಾಂ ಹಿ ಸಂಭೂತಃ ಶಾಸ್ತ್ರಾರ್ಥೋ ನಿಶ್ಚಿತೋ ದೃಷ್ಟೋ ಭವೇತ್ । ಅತ ಏವಂ ಪಶ್ಯನ್ ಅತಿವಾದೀ ಭವತಿ ನಾಮಾದ್ಯಾಶಾನ್ತಮ್ ಅತೀತ್ಯ ವದನಶೀಲೋ ಭವತೀತ್ಯರ್ಥಃ । ತಂ ಚೇದ್ ಬ್ರೂಯುಃ । ತಂ ಯದ್ಯೇವಮತಿವಾದಿನಂ ಸರ್ವದಾ ಸರ್ವೈಃ ಶಬ್ದೈಃ ನಾಮಾದ್ಯಾಶಾನ್ತಮ್ ಅತೀತ್ಯ ವರ್ತಮಾನಂ ಪ್ರಾಣಮೇವಂ ವದನ್ತಂ ಏವಂ ಪಶ್ಯನ್ತಮ್ ಅತಿವದನಶೀಲಮ್ ಅತಿವಾದಿನಂ ಬ್ರಹ್ಮಾದಿಸ್ತಮ್ಬಪರ್ಯನ್ತಸ್ಯ ಹಿ ಜಗತಃ ಪ್ರಾಣ ಆತ್ಮಾ ಅಹಮಿತಿ ಬ್ರುವಾಣಂ ಯದಿ ಬ್ರೂಯುರತಿವಾದ್ಯಸೀತಿ । ಬಾಢಮ್, ಅತಿವಾದ್ಯಸ್ಮೀತಿ ಬ್ರೂಯಾತ್, ನಾಽಪಹ್ನುವೀತ । ಕಸ್ಮಾದ್ ಹಿ ಅಸೌ ಅಪಹ್ನುವೀತ ? ಯತ್ಪ್ರಾಣಂ ಸರ್ವೇಶ್ವರಮ್ ಅಯಮಹಮಸ್ಮೀತಿ ಆತ್ಮತ್ವೇನ ಉಪಗತಃ ॥

(ಭಾಷ್ಯಾರ್ಥ)

ಆದ್ದರಿಂದ ತಂದೆಯೇ ಮುಂತಾದ ಈ ಚಲಸ್ಥಿರ(ಭೂತ)ಗಳೆಲ್ಲವೂ ಪ್ರಾಣನೇ ಆಗಿರುತ್ತಾನೆ. ಆ ಈ ಪ್ರಾಣವಿದನು ಹೀಗೆ ಮೇಲೆ ಹೇಳಿದ ರೀತಿಯಿಂದ ಕಂಡುಕೊಂಡು ಫಲರೂಪವಾಗಿ ಅನುಭವಿಸುತ್ತಾ, ಹೀಗೆ ಮನನಮಾಡುತ್ತಾ ಉಪಪತ್ತಿಗಳಿಂದ ಚಿಂತಿಸುತ್ತಾ ಅರಿಯುತ್ತಾ ಉಪಪತ್ತಿಗಳಿಂದ ಕೂಡಿಸಿಕೊಂಡು ಹೀಗೆಯೇ ಸರಿ ಎಂದು ನಿಶ್ಚಯಮಾಡಿಕೊಂಡು ಎಂದರ್ಥ **ಮನನವಿಜ್ಞಾನಗಳೆರಡೂ**

**ಸೇರಿಯಲ್ಲವೆ, ನಿಶ್ಚಿತವಾದರೆ ಶಾಸ್ತ್ರವನ್ನು ಕಂಡುಕೊಂಡಂತೆ ಆಗು ವದು[1] ?** ಆದ್ದರಿಂದ ಹೀಗೆ ಕಂಡುಕೊಂಡವನು ಅತಿವಾದಿಯಾಗುವನು, ನಾಮಾದಿಯಾಗಿ ಆಶೆಯವರೆಗೆ (ಇರುವದೆಲ್ಲವನ್ನೂ) ಮೀರಿ ನುಡಿಯುವ ಸ್ವಭಾವ ದವನಾಗುವನು ಎಂದರ್ಥ ಅವನನ್ನು ಹೀಗೆನ್ನುವದಾದರೆ- ಹೀಗೆ ಅತಿವಾದಿ ಯಾಗಿರುವ ಯಾವಾಗಲೂ ಎಲ್ಲಾ ಶಬ್ದಗಳಿಂದಲೂ ನಾಮಾದಿಯಾಗಿ ಆಶೆಯ ವರೆಗೆ (ಇರುವದನ್ನೆಲ್ಲ) ಮೀರಿರುವವನಾಗಿ ಪ್ರಾಣನೇ ಆಗಿದುವ ಹೀಗೆಂದು ಹೇಳುತ್ತಿರುವ ಹೀಗೆ ಕಂಡುಕೊಂಡಿರುವ ಅತಿವದನಸ್ವಭಾವದ ಅತಿವಾದಿಯಾದ, ಬ್ರಹ್ಮನಿಂದ ಹಿಡಿದು ಸ್ತಂಬದವರೆಗಿನ ಜಗತ್ತಿಗೆಲ್ಲ ಆತ್ಮನಾದ ಪ್ರಾಣನೇ ನಾನು- ಎಂದು ಹೇಳುತ್ತಿರುವ ಅವನನ್ನು- 'ಅತಿವಾದಿಯಾಗಿದ್ದೀಯೆ' ಎನ್ನುವ ದಾದರೆ, 'ನಿಜ ಅತಿವಾದಿಯಾಗಿರುವೆನು' ಎಂದು ಹೇಳಬೇಕೇ ಹೊರತು ಅಲ್ಲ ಗಳೆಯಬಾರದು ಅವನು ಏತಕ್ಕೆತಾನೆ ಅಲ್ಲಗಳೆದಾನು ? ಸರ್ವೇಶ್ವರನಾದ ಪ್ರಾಣನನ್ನೇ ಇವನೇ ನಾನು ಎಂದು ಇಟ್ಟುಕೊಂಡಿರುವವನಲ್ಲವೆ ?[2]

---

# ಏಳನೆಯ ಅಧ್ಯಾಯ-ಹದಿನಾರನೆಯ ಖಂಡ

(ಭೂಮವಿದ್ಯೆ)

## ಸತ್ಯವನ್ನು ಅರಿತು ಅತಿವಾದಿಯಾಗಬೇಕು

(ಉಪನಿಷತ್ತು)

**ಏಷ ತು ವಾ ಅತಿವದತಿ ಯಃ ಸತ್ಯೇನಾऽತಿವದತಿ ಸೋऽಹಂ ಭಗವಃ ಸತ್ಯೇನಾऽತಿವದಾನೀತಿ ಸತ್ಯಂ ತ್ವೇವ ವಿಜಿಜ್ಞಾಸಿತವ್ಯ ಮಿತಿ ಸತ್ಯಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಆದರ ಯಾರು ಸತ್ಯದಿಂದ ಅತಿವಾದಮಾಡುತ್ತಾನೋ ಅವನೇ (ನಿಜವಾಗಿ) ಅತಿವಾದಮಾಡುತ್ತಾನೆ. 'ಭಗವಂತನೆ, ಆ ನಾನು ಸತ್ಯದಿಂದ ಅತಿವಾದಮಾಡುವೆನು.' 'ಸತ್ಯವೇ ವಿಜಿಜ್ಞಾಸ ಮಾಡತಕ್ಕದ್ದು.' 'ಭಗವಂತನೆ, ಸತ್ಯವನ್ನು ವಿಜಿಜ್ಞಾಸೆಮಾಡುತ್ತೇನೆ.'

---

1. ನಿಶ್ಚಯಕ್ಕೆ ಬರಿಯ ಮನನವು ಸಾಲದು, ಅದರ ಅನುಭವವೂ ಬೇಕು

2. ಮನ್ವಾನಃ, ವಿಜಾನನ್- ಎಂಬಿವು ಸಾಧನಗಳು, ಪಶ್ಯನ್- ಎಂಬುದು ಫಲರೂಪ ವಾದ ಸಾಕ್ಷಾತ್ಕಾರ- ಎಂದರ್ಥ.

# ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೫೬೫ ಸ ಏಷ ನಾರದಃ ಸರ್ವಾತಿಶಯಂ ಪ್ರಾಣಂ ಸ್ವಮ್ ಆತ್ಮಾನಂ ಸರ್ವಾತ್ಮಾನಂ ಶ್ರುತ್ವಾ ನಾತಃಪರಮಸ್ತೀತಿ ಉಪರರಾಮ । ನ ಪೂರ್ವವತ್ 'ಕಿಮಸ್ತಿ ಭಗವಃ ಪ್ರಾಣಾದ್ ಭೂಯಃ' ಇತಿ ಪಪ್ರಚ್ಛ । ಯತಸ್ತಮೇವಂ ವಿಕಾರಾನೃತಬ್ರಹ್ಮವಿಜ್ಞಾನೇನ ಪರಿತುಷ್ಟಮ್ ಅಕೃತಾರ್ಥಂ ಪರಮಾರ್ಥಸತ್ಯಾತಿವಾದಿನಮ್ ಆತ್ಮಾನಂ ಮನ್ಯಮಾನಂ ಯೋಗ್ಯಂ ಶಿಷ್ಯಂ ಮಿಥ್ಯಾಗ್ರಹವಿಶೇಷಾದ್ ವಿಪ್ರಚ್ಯಾವಯನ್ ಆಹ ಭಗವಾನ್ ಸನತ್ಕುಮಾರಃ ॥

(ಭಾಷ್ಯಾರ್ಥ)

ಆ ಈ ನಾರದನು ಎಲ್ಲಕ್ಕೂ ಮಿಗಿಲಾದ ಪ್ರಾಣನೇ ತನ್ನ ಆತ್ಮನು, ಸರ್ವರ ಆತ್ಮನು– ಎಂಬಿದನ್ನು ಕೇಳಿ ಇದಕ್ಕಿಂತ ಹೆಚ್ಚಿನ(ದೇನೂ) ಇಲ್ಲವೆಂದು ಸುಮ್ಮನಾದನು ಮುನ್ನಿನಂತೆ 'ಭಗವಂತನೆ, ಪ್ರಾಣಕ್ಕಿಂತ ಹೆಚ್ಚಿನದು ಇದೆಯೆ ?' ಎಂದು ಕೇಳಲಿಲ್ಲ ಆದ್ದರಿಂದ ಹೀಗೆ ವಿಕಾರವಾದ ಅನೃತಬ್ರಹ್ಮದ[1] ಜ್ಞಾನದಿಂದಲೇ ಸಂತುಷ್ಟನಾಗಿ ಅಕೃತಾರ್ಥನಾಗಿದ್ದುಕೊಂಡು ತಾನು ಪರಮಾರ್ಥಸತ್ಯದಿಂದ ಅತಿವಾದಿಯಾಗಿರುತ್ತೇನೆಂದು ಎಣಿಸಿಕೊಂಡಿರುವ ಯೋಗ್ಯನಾದ ಆ ಶಿಷ್ಯನನ್ನು ಆ ತಪ್ಪುತಿಳಿವಳಿಕೆಯಿಂದ ತಪ್ಪಿಸಬೇಕೆಂದು[2] ಭಗವಂತನಾದ ಸನತ್ಕುಮಾರನಿಂತೆಂದನು :

# ಪರಮಾರ್ಥಸತ್ಯವನ್ನು ಜಿಜ್ಞಾಸಮಾಡಬೇಕು

(ಭಾಷ್ಯ)

೫೬೬ ಏಷ ತು ವಾ ಅತಿವದತಿ ಯಮಹಂ ವಕ್ಷ್ಯಾಮಿ ನ ಪ್ರಾಣವಿದತಿವಾದೀ ಪರಮಾರ್ಥತಃ । ನಾಮಾದ್ಯಪೇಕ್ಷಂ ತು ತಸ್ಯ ಅತಿವಾದಿತ್ವಮ್ । ಯಸ್ತು ಭೂಮಾಖ್ಯಂ ಸರ್ವಾತಿಕ್ರಾನ್ತಂ ತತ್ತ್ವಂ ಪರಮಾರ್ಥಸತ್ಯಂ ವೇದ ಸೋಽತಿವಾದೀ ಇತ್ಯತ ಆಹ । ಏಷ ತು ವಾ ಅತಿವದತಿ ಯಃ ಸತ್ಯೇನ ಪರಮಾರ್ಥಸತ್ಯವಿಜ್ಞಾನವತ್ತಯಾ ಅತಿವದತಿ । ಸೋಽಹಂ ತ್ವಾಂ ಪ್ರಪನ್ನೋ ಭಗವನ್ ಸತ್ಯೇನ ಅತಿವದಾನಿ । ತಥಾ ಮಾಂ ನಿಯುನಕ್ತು ಭಗವಾನ್ ಯಥಾ ಅಹಂ ಸತ್ಯೇನ

1. ಪ್ರಾಣನು ಆತ್ಮನಿಂದ ಹುಟ್ಟುತ್ತಾನಾದ್ದರಿಂದ, ವಿಕಾರವು ನಾಮಧೇಯವು ಎಂಬ ಪ್ರತ್ಯನುಸಾರವಾಗಿ ಪ್ರಾಣನೂ ಅನೃತವೇ.

2. ಪ್ರಾಣಕ್ಕಿಂತ ಹೆಚ್ಚಿನ ತತ್ತ್ವವಿಲ್ಲವೆಂಬ ತಪ್ಪುತಿಳಿವಳಿಕೆಯನ್ನು ನೀಗಿಸಿ ಅನುಗ್ರಹಿಸಬೇಕೆಂದು ಎಂದರ್ಥ. ಇದು ಆಚಾರ್ಯನ ಧರ್ಮದ ಸೂಚನೆ

ಅತಿವದಾನಿ ಇತ್ಯಭಿಪ್ರಾಯಃ । ಯದ್ಯೇವಂ ಸತ್ಯೇನ ಅತಿವದಿತುಮಿಚ್ಛಸಿ ಸತ್ಯಮೇವ ತು ತಾವದ್ ವಿಜಿಜ್ಞಾಸಿತವ್ಯಮ್ । ಇತ್ಯುಕ್ತ ಆಹ ನಾರದಃ । ತಥಾಽಸ್ತು ತರ್ಹಿ ಸತ್ಯಂ ಭಗವೋ ವಿಜಿಜ್ಞಾಸೇ ವಿಶೇಷೇಣ ಜ್ಞಾತುಮಿಚ್ಛೇಯಂ ತ್ವತ್ತೋಽಹಮಿತಿ ॥

(ಭಾಷ್ಯಾರ್ಥ)

ಆದರೆ[1] ನಾನು ಮುಂದೆ ಹೇಳುವವನೇ ಅತಿವಾದಿಯು, ಪ್ರಾಣವನ್ನು ಅರಿತಿರುವವನು ನಿಜವಾದ ಅತಿವಾದಿಯಲ್ಲ ಎಂದರ್ಥ. ಆ (ಪ್ರಾಣವಿದನು) ಅತಿವಾದಿಯೆಂಬುದು ನಾಮಾದಿಗಳ ಅಪೇಕ್ಷೆಯಿಂದ (ಹೇಳಿದ್ದು) ಆದರೆ ಯಾರು **ಭೂಮವು**ವೆಂಬ ಹೆಸರಿನ ಎಲ್ಲವನ್ನೂ ಮೀರಿರುವ ತತ್ತ್ವವನ್ನು, ಪರಮಾರ್ಥಸತ್ಯವನ್ನು ಅರಿತಿರುವನೋ, ಅವನೇ (ನಿಜವಾದ) ಅತಿವಾದಿಯು ಎಂದು ಹೇಳುತ್ತಿದಾನೆ ಆದರೆ ಯಾವನು ಸತ್ಯದಿಂದ, ಪರಮಾರ್ಥಸತ್ಯವನ್ನು ಅರಿತುಕೊಂಡವನಾಗಿ, ಅತಿವಾದಮಾಡುತ್ತಾನೋ, ಅವನೇ ಅತಿವಾದಿಯು 'ಆ ನಾನು ಭಗವಂತನೆ, ನಿನ್ನನ್ನು ಶರಣುಹೊಕ್ಕಿರುತ್ತೇನೆ, ಸತ್ಯದಿಂದ ಅತಿವಾದಮಾಡಲಿಚ್ಛಿಸುವೆನು ಹೇಗಾದರೆ ನಾನು ಸತ್ಯದಿಂದ ಅತಿವಾದಮಾಡಿದವನಾಗುವೆನೋ ಹಾಗೆ ಭಗವಂತನು ನನ್ನನ್ನು ಕಟ್ಟುಮಾಡಬೇಕು' ಎಂದು ಅಭಿಪ್ರಾಯ ಹೀಗೆ ಸತ್ಯದಿಂದ ಅತಿವಾದಮಾಡಲಿಚ್ಛಿಸುವೆಯಾದರೆ, ಮೊದಲು ಸತ್ಯವನ್ನೇ ವಿಜಿಜ್ಞಾಸೆ ಮಾಡಬೇಕು- ಎಂದು ಹೇಳಲು ನಾರದನೆನ್ನುತ್ತಾನೆ 'ಹಾಗೇ ಆಗಲಿ, ಹಾಗಾದರೆ ಭಗವಂತನೆ, ಸತ್ಯವನ್ನೇ ವಿಜಿಜ್ಞಾಸೆಮಾಡಬೇಕೆನ್ನುವೆನು, ನಿನ್ನಿಂದ (ಸತ್ಯವನ್ನೇ) ವಿಶೇಷವಾಗಿ ಅರಿತುಕೊಳ್ಳುವದಕ್ಕೆ ಇಚ್ಛಿಸುವೆನು.'

---

# ಏಳನೆಯ ಅಧ್ಯಾಯ-ಹದಿನೇಳನೆಯ ಖಂಡ

## ( ಭೂಮವಿದ್ಯೆ )

## ವಿಜ್ಞಾನವೇ ಸತ್ಯವಾದಿತ್ವಕ್ಕೆ ಹೇತು

(ಉಪನಿಷತ್ತು)

**ಯದಾ ವೈ ವಿಜಾನಾತ್ಯಥ ಸತ್ಯಂ ವದತಿ ನಾವಿಜಾನನ್ ಸತ್ಯಂ ವದತಿ ವಿಜಾನನ್ನೇವ ಸತ್ಯಂ ವದತಿ ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮಿತಿ ವಿಜ್ಞಾನಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

---

1 ಆದರೆ, 'ಸತ್ಯವನ್ನೇ ವಿಜಿಜ್ಞಾಸೆಮಾಡಬೇಕು'- ಎಂಬ ಮಾತುಗಳು ಇದು ಪ್ರಾಣಕ್ಕಿಂತ ಬೇರೆಯಾದ ಪರಮಾರ್ಥಸತ್ಯವಿಷಯವೆಂಬುದನ್ನು ಸೂಚಿಸುತ್ತವೆ ಎಂದು (ಸೂ. ಭಾ. ೧ ೩-೮ ಭಾ. ಭಾ. ೨೪೯)ರಲ್ಲಿ ನಿರ್ಣಯಿಸಿದೆ.

೧. ಯಾವಾಗ ಅರಿತುಕೊಳ್ಳುವನೋ ಆಗ ಸತ್ಯವನ್ನು ಹೇಳು ತ್ತಾನೆ, ಅರಿಯದಿರುವವನು ಸತ್ಯವನ್ನು ಹೇಳುವದಿಲ್ಲ, ಅರಿತವನೇ ಸತ್ಯವನ್ನು ಹೇಳುತ್ತಾನೆ ವಿಜ್ಞಾನವನ್ನೇ ವಿಜಿಜ್ಞಾಸೆಮಾಡಬೇಕು. 'ಭಗವಂತನೆ, ವಿಜ್ಞಾನವನ್ನು ವಿಜಿಜ್ಞಾಸೆಮಾಡುತ್ತೇನೆ'

## ಪರಮಾರ್ಥಸತ್ಯದ ವಿಜ್ಞಾನವು ಸತ್ಯವದನಕ್ಕೆ ಹೇತು

(ಭಾಷ್ಯ)

೫೮೭ ಯದಾ ವೈ ಸತ್ಯಂ ಪರಮಾರ್ಥತೋ ವಿಜಾನಾತಿ ಇದಂ ಪರ ಮಾರ್ಥತಃ ಸತ್ಯಮಿತಿ, ತತೋಽನೃತಂ ವಿಕಾರಜಾತಂ ವಾಚಾರಮ್ಭಣಂ ಹಿತ್ವಾ ಸರ್ವವಿಕಾರಾವಸ್ಥಂ ಸದೇವೈಕಂ ಸತ್ಯಮಿತಿ ತದೇವಾಥ ವದತಿ ಯದ್ವದತಿ । ನನು ವಿಕಾರೋಽಪಿ ಸತ್ಯಮೇವ । "ನಾಮರೂಪೇ ಸತ್ಯಂ ತಾಭ್ಯಾಮಯಂ ಪ್ರಾಣ ಶ್ಛನ್ನಃ" (ಬೃ ೧-೬-೩), "ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್" (ಬೃ ೨-೧-೨೦) ಇತಿ ಶ್ರುತ್ಯನ್ತರಾತ್ । ಸತ್ಯಮುಕ್ತಂ ಸತ್ಯತ್ವಂ ಶ್ರುತ್ಯನ್ತರೇ ವಿಕಾರಸ್ಯ । ನ ತು ಪರಮಾರ್ಥಾಪೇಕ್ಷಮುಕ್ತಮ್, ಕಿಂ ತರ್ಹೀನ್ದ್ರಿಯ ವಿಷಯತ್ವಾಪೇಕ್ಷಂ ಸಚ್ಚ ತ್ಯಚ್ಚೇತಿ ಸತ್ಯಮಿತ್ಯುಕ್ತಮ್ । ತದ್ದ್ವಾರೇಣ ಚ ಪರಮಾರ್ಥಸತ್ಯಸ್ಯೋಪಲಬ್ಧಿರ್ವಿವಕ್ಷಿತೇತಿ "ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್" (ಬೃ ೨-೩-೬) ಇತಿ ಚೋಕ್ತಮ್ । ಇಹಾಽಪಿ ತದಿಷ್ಟಮೇವ । ಇಹ ತು ಪ್ರಾಣವಿಷಯಾತ್ ಪರಮಾರ್ಥಸತ್ಯವಿಜ್ಞಾನಾಭಿಮಾನಾದ್ ವ್ಯುತ್ಥಾಪ್ಯ ನಾರದಂ ಯತ್ ಸದೇವ ಸತ್ಯಂ ಪರಮಾರ್ಥತೋ ಭೂಮಾಖ್ಯಂ ತದ್ವಿಜ್ಞಾಪ ಯಿಷ್ಯಾಮಿತ್ಯೇಷ ವಿಶೇಷತೋ ವಿವಕ್ಷಿತೋಽರ್ಥಃ । ನಾಽವಿಜಾನನ್ ಸತ್ಯಂ ವದತಿ ಯಸ್ತ್ವವಿಜಾನನ್ ವದತಿ ಸೋಽಗ್ನ್ಯಾದಿಶಬ್ದೇನ ಅಗ್ನ್ಯಾದೀನ್ ಪರಮಾರ್ಥ ಸದ್ರೂಪಾನ್ ಮನ್ಯಮಾನೋ ವದತಿ ನ ತು ತೇ ರೂಪತ್ರಯವ್ಯತಿರೇಕೇಣ ಪರಮಾರ್ಥತಃ ಸನ್ತಿ । ತಥಾ ತಾನ್ಯಪಿ ರೂಪಾಣಿ ಸದಪೇಕ್ಷಯಾ ನೈವ ಸನ್ತಿ ಇತ್ಯತೋ ನಾವಿಜಾನನ್ ಸತ್ಯಂ ವದತಿ । ವಿಜಾನನ್ನೇವ ಸತ್ಯಂ ವದತಿ । ನ ಚ ತತ್ ಸತ್ಯವಿಜ್ಞಾನಮ್ ಅವಿಜಿಜ್ಞಾಸಿತಮ್ ಅಪ್ರಾರ್ಥಿತಂ ಜಾಯತ[1] ಇತ್ಯಾಹ —ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮ್ ಇತಿ । ಯದ್ಯೇವಂ ವಿಜ್ಞಾನಂ ಭಗವೋ ವಿಜಿಜ್ಞಾಸ ಇತಿ । ಏವಂ ಸತ್ಯಾದೀನಾಂ ಚ ಉತ್ತರೋತ್ತರಾಣಾಂ ಕರೋತ್ಯನ್ತಾನಾಂ ಪೂರ್ವಪೂರ್ವಹೇತುತ್ವಂ ವ್ಯಾಖ್ಯೇಯಮ್ ॥

(ಭಾಷ್ಯಾರ್ಥ)

ಯಾವಾಗ ಪರಮಾರ್ಥವಾದ ಸತ್ಯವನ್ನು ಇದು ಪರಮಾರ್ಥವಾಗಿ ಸತ್ಯವು ಎಂದು ಅರಿತುಕೊಳ್ಳುತ್ತಾನೋ, ಆಗ ವಾಚಾರಮ್ಭಣವಾದ ವಿಕಾರಸಮೂಹವಾದ

1 'ಜ್ಞಾಯತೇ' ಎಂಬುವನ್ನು ಹೀಗೆ ತಿದ್ದಿಕೊಂಡಿದೆ.

ಅನೃತವನ್ನು ಬಿಟ್ಟು, ಯಾವ ವಿಕಾರದ ಅವಸ್ಥೆಯಲ್ಲಾದರೂ ಇರುವದು ಸತ್ತೆಂಬ ಒಂದೇ ಸತ್ಯವೇ ಆಗಿರುವದರಿಂದ[1], ಆಗ ಅವನು ಹೇಳುವಾಗ ಅದನ್ನೇ ಹೇಳುತ್ತಾನೆ

(ಆಕ್ಷೇಪ) .- ವಿಕಾರವೂ ಸತ್ಯವೇ ಅಲ್ಲವೆ ? "ನಾಮರೂಪಗಳು ಸತ್ಯವು, ಅವುಗಳಿಂದ ಈ ಪ್ರಾಣನು ಮರೆಯಾಗಿರುತ್ತಾನೆ" (ಬೃ ೧-೬-೩), "ಪ್ರಾಣಗಳು ಸತ್ಯವಷ್ಟೆ, ಅವುಗಳಿಗೆ ಈತನು ಸತ್ಯವು" (ಬೃ. ೨-೩-೬) ಎಂದು ಬೇರೊಂದು ಶ್ರುತಿಯಲ್ಲಿದೆಯಲ್ಲ !

(ಸಮಾಧಾನ) .- ನಿಜ, ವಿಕಾರವು ಸತ್ಯವೆಂದು ಬೇರೊಂದು ಶ್ರುತಿಯಲ್ಲಿ ಹೇಳಿದೆ, ಆದರ ಪರಮಾರ್ಥ(ದೃಷ್ಟಿ)ಯಿಂದ (ಅದನ್ನು ಸತ್ಯವೆಂದು ಅಲ್ಲಿ) ಹೇಳಿರುವದಿಲ್ಲ ಮತ್ತೇನೆಂದರೆ ಇಂದ್ರಿಯಗಳಿಗೆ ವಿಷಯವಾಗಿವೆ ಎಂಬ (ದೃಷ್ಟಿ)ಯಿಂದ ಸತ್ತೂ ತ್ಯತ್ತೂ ಆಗಿದೆಯಾಗಿ ಸತ್ಯವು ಎಂದು ಹೇಳಿದೆ[2] ಆದರ ಮೂಲಕವಾಗಿ ಪರಮಾರ್ಥಸತ್ಯದ ಜ್ಞಾನವನ್ನು ಹೇಳಬೇಕೆಂದು (ಅಲ್ಲಿ) ಹೊರಟಿರುತ್ತದೆಯಾದ್ದರಿಂದ "ಪ್ರಾಣಗಳು ಸತ್ಯವಷ್ಟೆ, ಅವುಗಳಿಗೆ ಈತನು ಸತ್ಯವು" ಎಂದೂ ಹೇಳಿದೆ.[3] ಇಲ್ಲಿಯೂ ಅದು ಇಷ್ಟವೇ , ಆದರೆ ಪ್ರಾಣವಿಷಯದಲ್ಲಿ (ಇದೇ) ಪರಮಾರ್ಥ ಸತ್ಯವೆಂಬ ಅಭಿಮಾನದಿಂದ ನಾರದನನ್ನು ಎಬ್ಬಿಸಿ ಭೂಮವೆಂಬ ಪರಮಾರ್ಥಸತ್ಯವಾಗಿರುವ ಸತ್ತೇ ಇದೆಯಲ್ಲ[4], ಅದನ್ನು ತಿಳಿಸಿಕೊಡೋಣವೆಂಬುದೇ ಇಲ್ಲಿ ವಿಶೇಷವಾಗಿ ವಿವಕ್ಷಿತವಾಗಿರುವ ಅರ್ಥವು

ಅರಿತುಕೊಳ್ಳದೆ ಇರುವವನು ಸತ್ಯವನ್ನು ಹೇಳಲಾರನು. ಯಾವನು ಅರಿಯದೆ ನುಡಿಯುವವನೋ ಅವನು ಅಗ್ನಿಯೇ ಮುಂತಾದ ಶಬ್ದದಿಂದ

1. ವಿಕಾರಗಳೆಲ್ಲವೂ ಕಲ್ಪಿತವಾಗಿವೆಯಾಗಿ ಹಗ್ಗವೇ ಹಾವು, ನೀರಿನ ಕೋಡಿ-ಮುಂತಾದ ಕಲ್ಪಿತರೂಪದಿಂದ ತೋರುವಂತೆ, ಸತ್ತೆಂಬ ಬ್ರಹ್ಮವೇ ತೇಜಸ್ಸು, ಅಪ್ಪು, ಅನ್ನ-ಮುಂತಾದ ವಿಕಾರಗಳಾಗಿ ತೋರುತ್ತಿರುವದರಿಂದ ಎಂದರ್ಥ.

2. ಸತ್ತೆಂದರೆ ಪೃಥಿವ್ಯಪ್ತೇಜಸ್ಸುಗಳು, ತ್ಯತ್ತೆಂದರೆ ವಾಯ್ವಂತರಿಕ್ಷಗಳು , ಪ್ರತ್ಯಕ್ಷ ಪರೋಕ್ಷವಾಗಿರುವವನ್ನೇ ಅಲ್ಲಿ 'ಸತ್ಯ'ವೆಂದು ಕರೆದಿದೆ.

3. ಪ್ರಾಣಗಳು ಪಂಚಭೂತಾತ್ಮಕವಾಗಿರುವದರಿಂದ ಸತ್ತು ಮತ್ತು ತ್ಯತ್ತು-ಎಂಬರ್ಥದಲ್ಲಿ 'ಸತ್ಯ'ವೆನಿಸಿವೆ. ಆ ವ್ಯಾವಹಾರಿಕಸತ್ಯವಾದ ಪ್ರಾಣಗಳು ಯಾವ ಆತ್ಮನಲ್ಲಿ ಕಲ್ಪಿತವಾಗಿವೆಯೋ ಆ ಆತ್ಮನು ಪರಮಾರ್ಥಸತ್ಯವು ಎಂದರ್ಥ. ಬಿಸಿನೀರಿನ ಬಿಸಿಯು ಬೆಂಕಿಯೇ ಎಂದಂತೆ ಈ ಪ್ರಯೋಗವನ್ನು ತಿಳಿಯಬೇಕು- ಎಂದು ಭಾವ

4. ಹಿಂದಿನ ಅಧ್ಯಾಯದಲ್ಲಿ ಹೇಳಿರುವ ಸದ್ಬ್ರಹ್ಮವೇ ನಿಜವಾಗಿ ಸತ್ಯವು, ಅದನ್ನೇ ಈ ಅಧ್ಯಾಯದಲ್ಲಿ ಭೂಮವೆಂದಿದೆ ಅದನ್ನೇ ಇಲ್ಲಿ ಸತ್ಯವೆಂದಿದೆ. ಈ ದೃಷ್ಟಿಯಿಂದ ಪ್ರಾಣವು ಸತ್ಯವಲ್ಲವೆಂದಿದೆ, ವ್ಯಾವಹಾರಿಕವಾಗಿ ಸತ್ಯವಲ್ಲವೆಂದೇನೂ ಹೇಳಿಲ್ಲ.

ಅಗ್ನಿಯೇ ಮುಂತಾದವುಗಳು ನಿಜವಾಗಿಯೂ ಸದ್ರೂಪಗಳಿವೆ ಎಂದು ಎಣಿಸಿ ಕೊಂಡೇ ಹೇಳುತ್ತಾನೆ, ಆದರೆ ಅವು ಮೂರು ರೂಪಗಳಿಗಿಂತ ಬೇರೆಯಾಗಿ ನಿಜವಾಗಿರುವದಿಲ್ಲ.[1] ಹೀಗೆಯೇ ಆ (ಮೂರು) ರೂಪಗಳೂ ಸತ್ತಿಗಿಂತ (ಬೇರೆ ಯಾ)ಗಿರುವದೇ ಇಲ್ಲವಾದ್ದರಿಂದ ಅರಿಯದೆ ಇರುವವನು ಸತ್ಯವನ್ನು ಹೇಳು ವದಿಲ್ಲ, ಅರಿತವನೇ ಸತ್ಯವನ್ನು ಹೇಳುತ್ತಾನೆ.[2]

ಆ ಸತ್ಯದ ಅರಿವು ವಿಜಿಜ್ಞಾಸೆಯನ್ನು ಮಾಡದೆ, (ಅದಕ್ಕಾಗಿ) ಇಚ್ಛೆ ಮಾಡದೆ ಉಂಟಾಗಲಾರದಾದ್ದರಿಂದ, ವಿಜ್ಞಾನವನ್ನೇ ವಿಜಿಜ್ಞಾಸೆಮಾಡಬೇಕು– ಎಂದು ಹೇಳಿರುತ್ತಾನೆ. ಹಾಗಾದರೆ, 'ಭಗವಂತನೆ, ವಿಜ್ಞಾನವನ್ನು ವಿಜಿಜ್ಞಾಸೆ ಮಾಡುತ್ತೇನೆ' ಎಂದು (ನಾರದನೆಂದನು) ಹೀಗೆಯೇ ಸತ್ಯಾದಿಗಳನ್ನು ಕೃತಿಯ ವರೆಗೂ[3] ಇರುವ ಸಾಧನಗಳನ್ನು ಹಿಂದುಹಿಂದಿನಕ್ಕೆ ಕಾರಣವೆಂದು ಅರ್ಥ ಮಾಡಿಕೊಳ್ಳಬೇಕು.

---

# ಏಳನೆಯ ಅಧ್ಯಾಯ-ಹದಿನೆಂಟನೆಯ ಖಂಡ

( ಭೂಮವಿದ್ಯೆ )

## ಮನನದಿಂದ ವಿಜ್ಞಾನವನ್ನು ಸಂಪಾದಿಸಬೇಕು

(ಉಪನಿಷತ್ತು)

**ಯದಾ ವೈ ಮನುತೇಽಥ ವಿಜಾನಾತಿ ನಾಽಮತ್ವಾ ವಿಜಾನಾತಿ ಮತ್ವೈವ ವಿಜಾನಾತಿ ಮತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಮತಿಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವಾಗ ಮನನಮಾಡುತ್ತಾನೋ ಆಗ ಅರಿತುಕೊಳ್ಳು ತ್ತಾನೆ, ಮನನಮಾಡದೆ ಅರಿಯಲಾರನು, ಮನನಮಾಡಿಯೇ ಅರಿತು ಕೊಳ್ಳುತ್ತಾನೆ. ಮತಿಯನ್ನೇ ವಿಜಿಜ್ಞಾಸೆಮಾಡಬೇಕು. 'ಭಗ ವಂತನೆ, ಮತಿಯನ್ನೇ ವಿಜಿಜ್ಞಾಸೆಮಾಡುತ್ತೇನೆ.'

---

1. ೬-೪-೧ರ ಸೂಚನೆ.

2. ಆಯಾ ಶಬ್ದವನ್ನೂ ಆಯಾ ವಸ್ತುವನ್ನೂ ತಿಳಿಸುವದಕ್ಕೆ ಪ್ರಯೋಗಿಸುವದು ಇಬ್ಬರಿಗೂ ಸಮಾನವಾದರೂ ಇದು ಬರಿಯ ತೋರಿಕೆ. ಇದರ ಆಧಾರ ಸತ್ಯವು ಬೇರೆಯಿದೆ ಎಂದು ಅರಿತುಕೊಂಡಿರುವವನೇ ಶಬ್ದವನ್ನು ಸರಿಯಾಗಿ ಪ್ರಯೋಗಿಸಿದವನಾಗುತ್ತಾನೆ ಎಂ[illegible]

3. ೭-೧೬ನೆಯ ಖಂಡವನ್ನು ನೋಡಿ.

## ಮನನವು ವಿಜ್ಞಾನಕ್ಕೆ ಹೇತು

(ಭಾಷ್ಯ)

೫೮೮. ಯದಾ ವೈ ಮನುತ ಇತಿ । ಮತಿಃ ಮನನಂ ತರ್ಕಃ ॥

(ಭಾಷ್ಯಾರ್ಥ)

ಯಾವಾಗ ಮನನಮಾಡುತ್ತಾನೋ (ಎಂಬ ಕಂಡಿಕೆಯಲ್ಲಿ) ಮತಿ ಎಂದರೆ ಮನನವು, ತರ್ಕವು.

---

# ಏಳನೆಯ ಅಧ್ಯಾಯ-ಹತ್ತೊಂಬತ್ತನೆಯ ಖಂಡ

( ಭೂಮವಿದ್ಯೆ )

## ಶ್ರದ್ಧೆಯಿಂದ ಮನನಸಿದ್ಧಿ

(ಉಪನಿಷತ್ತು)

**ಯದಾ ವೈ ಶ್ರದ್ದಧಾತ್ಯಥ ಮನುತೇ ನಾಽಶ್ರದ್ದಧನ್ಮನುತೇ ಶ್ರದ್ದಧದೇವ ಮನುತೇ ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯೇತಿ ಶ್ರದ್ಧಾಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವಾಗ ಶ್ರದ್ಧೆಯನ್ನು ಮಾಡುತ್ತಾನೋ ಆಗ ಮನನ ಮಾಡುತ್ತಾನೆ. ಶ್ರದ್ಧೆಯನ್ನು ಮಾಡದವನು ಮನನಮಾಡುವದಿಲ್ಲ, ಶ್ರದ್ಧೆಯನ್ನು ಮಾಡುವವನೇ ಮನನಮಾಡುತ್ತಾನೆ. ಶ್ರದ್ಧೆಯನ್ನೇ ವಿಜಿಜ್ಞಾಸೆಮಾಡಬೇಕು. 'ಭಗವಂತನೆ, ಶ್ರದ್ಧೆಯನ್ನೇ ವಿಜಿಜ್ಞಾಸೆ ಮಾಡುತ್ತೇನೆ.'

## ಶ್ರದ್ಧೆಯು ಮನನಕ್ಕೆ ಕಾರಣ

(ಭಾಷ್ಯ)

೫೮೯. ಮನ್ತವ್ಯವಿಷಯೇ ಆದರಃ ಆಸ್ತಿಕ್ಯಬುದ್ಧಿಃ ಶ್ರದ್ಧಾ ॥

(ಭಾಷ್ಯಾರ್ಥ)

ಮನನಮಾಡಬೇಕಾಗಿರುವ ವಿಷಯದಲ್ಲಿರುವ ಆದರವೇ, ಆಸ್ತಿಕ್ಯಬುದ್ಧಿಯೇ, ಶ್ರದ್ಧೆ

---

# ಏಳನೆಯ ಅಧ್ಯಾಯ-ಇಪ್ಪತ್ತನೆಯ ಖಂಡ

(ಭೂಮವಿದ್ಯೆ)

## ನಿಷ್ಠೆಯಿಂದ ಶ್ರದ್ಧಾಸಿದ್ಧಿ

(ಉಪನಿಷತ್ತು)

**ಯದಾ ವೈ ನಿಸ್ತಿಷ್ಠತ್ಯಥ ಶ್ರದ್ದಧಾತಿ ನಾನಿಸ್ತಿಷ್ಠಞ್ಛ್ರದ್ದಧಾತಿ ನಿಸ್ತಿಷ್ಠನ್ನೇವ ಶ್ರದ್ದಧಾತಿ ನಿಷ್ಠಾತ್ವೇವ ವಿಜಿಜ್ಞಾಸಿತವ್ಯೇತಿ ನಿಷ್ಠಾಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವಾಗ ನಿಷ್ಠೆಯನ್ನು ಮಾಡುತ್ತಾನೋ ಆಗ ಶ್ರದ್ಧೆಯನ್ನು ಮಾಡುತ್ತಾನೆ. ನಿಷ್ಠೆಯಿಲ್ಲದವನು ಶ್ರದ್ಧೆಮಾಡುವದಿಲ್ಲ, ನಿಷ್ಠೆಯಿದ್ದವನೇ ಶ್ರದ್ಧೆಮಾಡುತ್ತಾನೆ. ನಿಷ್ಠೆಯನ್ನೇ ವಿಜಿಜ್ಞಾಸೆ ಮಾಡಬೇಕು. 'ಭಗವಂತನೆ, ನಿಷ್ಠೆಯನ್ನು ವಿಜಿಜ್ಞಾಸೆಮಾಡುತ್ತೇನೆ.'

## ನಿಷ್ಠೆಯು ಶ್ರದ್ಧೆಗೆ ಕಾರಣ

(ಭಾಷ್ಯ)

೫೯೦ ನಿಷ್ಠಾ ಗುರುಶುಶ್ರೂಷಾದಿತತ್ಪರತ್ವಂ[1] ಬ್ರಹ್ಮವಿಜ್ಞಾನಾಯ ॥

(ಭಾಷ್ಯಾರ್ಥ)

ನಿಷ್ಠೆಯೆಂದರೆ ಗುರುಶುಶ್ರೂಷಾದಿಗಳಲ್ಲಿ ಬ್ರಹ್ಮವಿಜ್ಞಾನಕ್ಕಾಗಿ ತತ್ಪರನಾಗಿರುವದು.[2]

---

1 'ಗುರುಶುಶ್ರೂಷಾದಿಃ ತತ್ಪರತ್ವಮ್' ಎಂಬ ಪಾಠವನ್ನು ಹೀಗೆ ಒಂದೇ ಪದವಾಗಿಟ್ಟುಕೊಂಡಿದೆ.

2 ಗೀ. ಭಾ. ೪-೩೯ನ್ನು ನೋಡಿ.

# ಏಳನೆಯ ಅಧ್ಯಾಯ-ಇಪ್ಪತ್ತೊಂದನೆಯ ಖಂಡ

( ಭೂಮವಿದ್ಯೆ )

## ಕೃತಿಯಿಂದ ನಿಷ್ಠೆಯ ಸಿದ್ಧಿ

(ಉಪನಿಷತ್ತು)

**ಯದಾ ವೈ ಕರೋತ್ಯಥ ನಿಸ್ತಿಷ್ಠತಿ ನಾಽಕೃತ್ವಾ ನಿಸ್ತಿಷ್ಠತಿ ಕೃತ್ವೈವ ನಿಸ್ತಿಷ್ಠತಿ ಕೃತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಕೃತಿಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವಾಗ ಮಾಡುತ್ತಾನೋ ಆಗ ನಿಷ್ಠೆಯುಳ್ಳವನಾಗುತ್ತಾನೆ. ಮಾಡದೆ ನಿಷ್ಠೆಯುಳ್ಳವನಾಗುವದಿಲ್ಲ, ಮಾಡಿಯೇ ನಿಷ್ಠೆಯುಳ್ಳವನಾಗುತ್ತಾನೆ. ಕೃತಿಯನ್ನೇ ವಿಜಿಜ್ಞಾಸೆಮಾಡಬೇಕು. 'ಭಗವಂತನೆ, ಕೃತಿಯನ್ನು ವಿಜಿಜ್ಞಾಸೆಮಾಡುತ್ತೇನೆ.'

## ಕೃತಿಯು ನಿಷ್ಠೆಗೆ ಕಾರಣ

(ಭಾಷ್ಯ)

೫೯೧ ಯದಾ ವೈ ಕರೋತಿ । ಕೃತಿರಿನ್ದ್ರಿಯಸಂಯಮಃ ಚಿತ್ತೈಕಾಗ್ರ್ಯತಾಕರಣಂ ಚ । ಸತ್ಯಾಂ ಹಿ ತಸ್ಯಾಂ ನಿಷ್ಠಾದೀನಿ ಯಥೋಕ್ತಾನಿ ಭವನ್ತಿ ವಿಜ್ಞಾನಾವಸಾನಾನಿ ॥

(ಭಾಷ್ಯಾರ್ಥ)

ಯಾವಾಗ ಮಾಡುತ್ತಾನೋ (ಎಂಬ ಕಂಡಿಕೆಯಲ್ಲಿ) ಕೃತಿ ಎಂದರೆ ಇಂದ್ರಿಯ ಸಂಯಮವು ಮತ್ತು ಚಿತ್ತೈಕಾಗ್ರ್ಯತೆಯನ್ನು ಮಾಡಿಕೊಳ್ಳುವದು. ಆ ಕೃತಿ ಯಿದ್ದರಲ್ಲವೆ, ನಿಷ್ಠೆಯೇ ಮುಂತಾದ ಮೇಲೆ ಹೇಳಿದ (ವಿಜ್ಞಾನಾಂತವಾದ ಸಾಧನಗಳು ಉಂಟಾಗುವವು) ?

---

# ಏಳನೆಯ ಅಧ್ಯಾಯ–ಇಪ್ಪತ್ತೆರಡನೆಯ ಖಂಡ

( ಭೂಮವಿದ್ಯೆ )

## ಸುಖಜ್ಞಾನದಿಂದ ಕೃತಿ

(ಉಪನಿಷತ್ತು)

**ಯದಾ ವೈ ಸುಖಂ ಲಭತೇಽಥ ಕರೋತಿ ನಾಽಸುಖಂ ಲಬ್ಧ್ವಾ ಕರೋತಿ ಸುಖಮೇವ ಲಬ್ಧ್ವಾ ಕರೋತಿ ಸುಖಂ ತ್ವೇವ ವಿಜಿಜ್ಞಾಸಿತವ್ಯಮಿತಿ ಸುಖಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವಾಗ ಸುಖವನ್ನು ಪಡೆಯುತ್ತಾನೋ ಆಗ ಮಾಡುತ್ತಾನೆ. ಸುಖವನ್ನು ಪಡೆಯದ ಮಾಡುವದಿಲ್ಲ, ಸುಖವನ್ನು ಪಡೆದೇ ಮಾಡುತ್ತಾನೆ, ಸುಖವನ್ನೇ ವಿಜಿಜ್ಞಾಸೆಮಾಡಬೇಕು. 'ಭಗವಂತನೆ, ಸುಖವನ್ನು ವಿಜಿಜ್ಞಾಸಮಾಡುತ್ತೇನೆ.'

## ಸುಖಪ್ರಾಪ್ತಿಗಾಗಿಯೇ ಕೃತಿ

( ಭಾಷ್ಯ)

೫೯೨. ಸಾಽಪಿ ಕೃತಿಃ ಯದಾ ಸುಖಂ ಲಭತೇ। ಸುಖಂ ನಿರತಿಶಯಂ ವಕ್ಷ್ಯಮಾಣಂ ಲಬ್ಧವ್ಯಂ ಮಯಾ ಇತಿ ಮನ್ಯತೇ ತದಾ ಭವತೀತ್ಯರ್ಥಃ। ಯಥಾ ದೃಷ್ಟಫಲಸುಖಾ ಕೃತಿಃ, ತಥೇಹಾಪಿ ನಾಸುಖಂ ಲಬ್ಧ್ವಾ ಕರೋತಿ। ಭವಿಷ್ಯದಪಿ ಫಲಂ 'ಲಬ್ಧ್ವಾ' ಇತ್ಯುಚ್ಯತೇ । ತದುದ್ದಿಶ್ಯ ಪ್ರವೃತ್ತ್ಯುಪಪತ್ತೇಃ। ಅಥೇದಾನೀಂ ಕೃತ್ಯಾದಿಷು ಉತ್ತರೋತ್ತರೇಷು ಸತ್ಸು ಸತ್ಯಂ ಸ್ವಯಮೇವ ಪ್ರತಿಭಾಸತ ಇತಿ ನ ತದ್ವಿಜ್ಞಾನಾಯ ಪೃಥಗ್ಯತ್ನಃ ಕಾರ್ಯ ಇತಿ ಪ್ರಾಪ್ತಮ್ । ತತ ಇದಮುಚ್ಯತೇ। ಸುಖಂ ತ್ವೇವ ವಿಜಿಜ್ಞಾಸಿತವ್ಯಮ್ ಇತ್ಯಾದಿ। ಸುಖಂ ಭಗವೋ ವಿಜಿಜ್ಞಾಸೇ ಇತ್ಯಭಿಮುಖೀಭೂತಾಯ ಆಹ ॥

(ಭಾಷ್ಯಾರ್ಥ)

ಆ ಕೃತಿಯು ಯಾವಾಗ ಸುಖವನ್ನು ಪಡೆದುಕೊಳ್ಳುತ್ತಾನೋ, ಮುಂದೆ ಹೇಳುವ ಮಿಗಿಲಿಲ್ಲದ ಸುಖವನ್ನು ನಾನು ಪಡೆದುಕೊಳ್ಳಬೇಕು ಎಂದು ಎಣಿಸುತ್ತಾನೋ ಆಗ ಆಗುತ್ತದೆ ಎಂದರ್ಥ. ದೃಷ್ಟಫಲದಿಂದಾಗುವ ಸುಖದಿಂದ (ಲೋಕದಲ್ಲಿ) ಕೃತಿಯು ಹೇಗೆ (ಆಗುವದೋ) ಹಾಗೆಯೇ ಇಲ್ಲಿಯೂ ಸುಖವನ್ನು ಪಡೆಯದೆ ಮಾಡುವದಿಲ್ಲ. (ಸುಖವೆಂಬ) ಫಲವು ಮುಂದೆ ಆಗುವದಾದರೂ

(ಅದನ್ನು) ಪಡೆದುಕೊಂಡು- ಎಂದು (ಇಲ್ಲಿ) ಹೇಳಿರುತ್ತದೆ, ಏಕೆಂದರೆ ಅದನ್ನು ಉದ್ದೇಶಿಸಿಯೇ ತೊಡಗುವದಾಗುತ್ತದೆ

ಇನ್ನು ಈಗ ಕೃತಿಯೇ ಮುಂತಾದ ಮುಂದುಮುಂದಿನವು ಇದ್ದರೆ ಸತ್ಯವು ತಾನೇ ತೋರುತ್ತದೆಯಾದ್ದರಿಂದ ಅದರ ಅರಿವಿಗಾಗಿ ಬೇರೊಂದು ಯತ್ನವನ್ನು ಮಾಡತಕ್ಕದ್ದಿಲ್ಲ- ಎಂದು ಬಂದೊದಗಿತಷ್ಟೆ. ಅದಕ್ಕಾಗಿ ಇದನ್ನು ಹೇಳುತ್ತಾನೆ. ಸುಖವನ್ನೇ ವಿಜಿಜ್ಞಾಸೆಮಾಡಬೇಕು 'ಭಗವಂತನೆ. ಸುಖವನ್ನು ವಿಜಿಜ್ಞಾಸೆ ಮಾಡುತ್ತೇನೆ' ಎಂದು ಅಭಿಮುಖನಾದ (ನಾರದನಿಗೆ) ಹೀಗೆಂದು ಹೇಳುತ್ತಿದಾನೆ.

---

## ಏಳನೆಯ ಅಧ್ಯಾಯ-

## ಇಪ್ಪತ್ತುಮೂರನೆಯ ಖಂಡ

(ಭೂಮವಿದ್ಯೆ)

## ಭೂಮವೇ ಸುಖವು

(ಉಪನಿಷತ್ತು)

**ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾ ತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ ॥ ೧ ॥**

೧. ಯಾವದು ಭೂಮವೋ ಅದೇ ಸುಖವು. ಅಲ್ಪದಲ್ಲಿ ಸುಖವಿಲ್ಲ, ಭೂಮವೇ ಸುಖವು, ಭೂಮವನ್ನೇ ವಿಜಿಜ್ಞಾಸೆಮಾಡಬೇಕು. 'ಭಗವಂತನೆ, ಭೂಮವನ್ನು ವಿಜಿಜ್ಞಾಸೆಮಾಡುತ್ತೇನೆ.'

### ಭೂಮದಲ್ಲಿಯೇ ಸುಖವಿದೆ

(ಭಾಷ್ಯ)

೫೯೩. ಯೋ ವೈ ಭೂಮಾ ಮಹತ್, ನಿರತಿಶಯಂ ಬಹು ಇತಿ ಪರ್ಯಾಯಾಃ । ತತ್ ಸುಖಮ್ । ತತೋಽರ್ವಾಕ್ ಸಾತಿಶಯತ್ವಾತ್ ಅಲ್ಪಮ್ । ಅತಃ ತಸ್ಮಿನ್ನಲ್ಪೇ ಸುಖಂ ನಾಸ್ತಿ । ಅಲ್ಪಸ್ಯ ಅಧಿಕತೃಷ್ಣಾಹೇತುತ್ವಾತ್ । ತೃಷ್ಣಾ ಚ ಚ ದುಃಖಬೀಜಮ್ । ನ ಹಿ ದುಃಖಬೀಜಂ ಸುಖಂ ದೃಷ್ಟಂ ಜ್ವರಾದಿ ಲೋಕೇ । ತಸ್ಮಾದ್ ಯುಕ್ತಂ ನಾಲ್ಪೇ ಸುಖಮಸ್ತೀತಿ । ಅತೋ ಭೂಮೈವ ಸುಖಮ್ । ತೃಷ್ಣಾದಿ ದುಃಖಬೀಜತ್ವಾಸಂಭವಾತ್ ಭೂಮ್ನಃ ॥

(ಭಾಷ್ಯಾರ್ಥ)

ಯಾವದು ಭೂಮವೋ,—(ಭೂಮ) ದೊಡ್ಡದು, ಮಿಗಿಲಿಲ್ಲದ್ದು, ಬಹಳ-ಎಂಬಿವು ಪರ್ಯಾಯ(ಶಬ್ದ)ಗಳು— ಅದೇ ಸುಖವು ಅದರಿಂದೀಚೆಗೆ ಇರುವದು, ತನಗಿಂತ ಮಿಗಿಲಿರುವದರಿಂದ ಅಲ್ಪವು ಆದ್ದರಿಂದ ಆ ಅಲ್ಪದಲ್ಲಿ ಸುಖವು ಇರುವದಿಲ್ಲ, ಏಕೆಂದರೆ ಅಲ್ಪವು ಹೆಚ್ಚಿನದರ ತೃಷ್ಣೆಯನ್ನುಂಟುಮಾಡುತ್ತದೆ. ಆದರೆ ತೃಷ್ಣೆ ಎಂಬುದು ದುಃಖಕ್ಕೆ ಕಾರಣವು ದುಃಖಕ್ಕೆ ಕಾರಣವಾದ ಜ್ವರವೇ ಮುಂತಾದದ್ದು ಸುಖವಾಗಿರುವದು ಲೋಕದಲ್ಲಿ ಕಂಡುಬರುವದಿಲ್ಲವಷ್ಟೆ ? ಆದ್ದರಿಂದ ಅಲ್ಪದಲ್ಲಿ ಸುಖವಿಲ್ಲ ಎಂಬುದು ಸರಿ ಆದ್ದರಿಂದ ಭೂಮವೇ ಸುಖವು, ಏಕೆಂದರೆ ತೃಷ್ಣೆಯೇ ಮುಂತಾದ ದುಃಖಕಾರಣಕ್ಕೆ ಭೂಮದಲ್ಲಿ ಸಂಭವವಿರುವದಿಲ್ಲ

---

# ಏಳನೆಯ ಅಧ್ಯಾಯ-

## ಇಪ್ಪತ್ತುನಾಲ್ಕನೆಯ ಖಂಡ

(ಭೂಮವಿದ್ಯೆ)

## ಭೂಮವೇ ಅಮೃತ, ಅಲ್ಪವೇ ಮರ್ತ್ಯ

(ಉಪನಿಷತ್ತು)

**ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಽಥ ಯತ್ರಾಽನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಗ್ಂ ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ ॥ ೧ ॥**

೧. ಎಲ್ಲಿ ಮತ್ತೊಂದನ್ನು ಕಾಣದಿರುವನೋ ಮತ್ತೊಂದನ್ನು ಕೇಳದಿರುವನೋ ಮತ್ತೊಂದನ್ನು ಅರಿಯದಿರುವನೋ ಅದು ಭೂಮವು. ಇದನ್ನು ಎಲ್ಲಿ ಮತ್ತೊಂದನ್ನು ಕಾಣುತ್ತಾನೋ ಮತ್ತೊಂದನ್ನು ಕೇಳುತ್ತಾನೋ ಮತ್ತೊಂದನ್ನು ಅರಿಯುತ್ತಾನೋ ಅದು ಅಲ್ಪವು. ಯಾವದು ಭೂಮವೋ ಅದು ಅಮೃತವು, ಇನ್ನು ಯಾವದು ಅಲ್ಪವೋ ಅದು ಮರ್ತ್ಯವು. ಭಗವಂತನೆ, ಆ (ಭೂಮವು) ಏತರಮೇಲೆ ನಿಂತುಕೊಂಡಿರುವದು ? ತನ್ನ ಮಹಿಮೆಯಮೇಲೆ ನಿಂತಿರುವದು, ಅಥವಾ ಮಹಿಮೆಯಮೇಲೂ ನಿಂತಿರುವದಿಲ್ಲ.

## ಭೂಮದ ಲಕ್ಷಣ

(ಭಾಷ್ಯ)

೫೯೪. ಕಿಂಲಕ್ಷಣೋಽಸೌ ಭೂಮೇತಿ ? ಆಹ । ಯತ್ರ ಯಸ್ಮಿನ್ ಭೂಮ್ನಿ ತತ್ತ್ವೇ ನಾಽನ್ಯದ್ ದ್ರಷ್ಟವ್ಯಮ್ ಅನ್ಯೇನ ಕರಣೇನ ದ್ರಷ್ಟಾಽನ್ಯೋ ವಿಭಕ್ತೋ ದೃಶ್ಯಾತ್ ಪಶ್ಯತಿ । ತಥಾ ನಾನ್ಯತ್ ಶೃಣೋತಿ । ನಾಮರೂಪಯೋರೇವ ಅನ್ತರ್ಭಾವಾತ್ ವಿಷಯಭೇದಸ್ಯ ತದ್ಗ್ರಾಹಕಯೋರೇವ ಇಹ ದರ್ಶನಶ್ರವಣಯೋರ್ಗ್ರಹಣಮ್, ಅನ್ಯೇಷಾಂ ಚೋಪಲಕ್ಷಣಾರ್ಥತ್ವೇನ । ಮನನಂ ತು ಅತ್ರೋಕ್ತಂ ದ್ರಷ್ಟವ್ಯಂ ನಾನ್ಯನ್ಮನುತ ಇತಿ । ಪ್ರಾಯಶೋ ಮನನಪೂರ್ವಕತ್ವಾದ್ ವಿಜ್ಞಾನಸ್ಯ । ತಥಾ ನಾನ್ಯದ್ ವಿಜಾನಾತಿ । ಏವಂಲಕ್ಷಣೋ ಯಃ ಸ ಭೂಮಾ ॥

(ಭಾಷ್ಯಾರ್ಥ)

ಆ ಭೂಮದ ಲಕ್ಷಣವು ಯಾವದು ?- ಎಂದರೆ ಹೇಳುತ್ತಾನೆ : ಎಲ್ಲಿ, ಎಂದರೆ ಯಾವ ಭೂಮವೆಂಬ ತತ್ತ್ವದಲ್ಲಿ ಒಂದು ದ್ರಷ್ಟವ್ಯವನ್ನು, ಮತ್ತೊಂದು ಕರಣದಿಂದ, ದೃಶ್ಯಕ್ಕಿಂತ ಬೇರೆಯಾಗಿ ವಿಂಗಡವಾಗಿರುವ ಮತ್ತೊಬ್ಬ ದ್ರಷ್ಟೃವು ಕಾಣುವದಿಲ್ಲವೋ[1] , ಹೀಗೆಯೇ ಮತ್ತೊಂದನ್ನು ಕೇಳುವದಿಲ್ಲವೋ- ವಿಷಯಭೇದ(ಗಳೆಲ್ಲವೂ) ನಾಮರೂಪಗಳಲ್ಲಿಯೇ ಅಡಕವಾಗಿರುವದರಿಂದ ಅವುಗಳನ್ನು ಮಾತ್ರ ಗ್ರಹಿಸುವ ದರ್ಶನಶ್ರವಣಗಳನ್ನು ಮಿಕ್ಕವುಗಳಿಗೂ ಉಪಲಕ್ಷಣವಾಗಿ ಗ್ರಹಿಸಿದೆ[2]- ಮತ್ತೊಂದನ್ನು ಮನನಮಾಡುವದಿಲ್ಲವೋ ಎಂದು ಮನನವನ್ನೇನೊ ಇಲ್ಲಿ ಹೇಳಿದೆಯೆಂದು ಇಟ್ಟುಕೊಳ್ಳಬೇಕು ; ಏಕೆಂದರೆ **ಬಲುಮಟ್ಟಿಗೆ ಮನನಪೂರ್ವಕವಾಗಿಯೇ ವಿಜ್ಞಾನವಾಗುತ್ತದೆ.** ಮತ್ತು ಮತ್ತೊಂದನ್ನು ಅರಿಯುವದಿಲ್ಲವೋ,- ಹೀಗಿರುವ ಲಕ್ಷಣವುಳ್ಳದ್ದು ಯಾವದೋ ಅದು ಭೂಮವು.

---

1. ದ್ವೈತಾವಸ್ಥೆಯಲ್ಲಿ ಕ್ರಿಯಾಕಾರಕಫಲಗಳು ಬೇರೆಬೇರೆಯಾಗಿ ಅನುಭವಕ್ಕೆ ಬರುವವು ; ಆದರೆ ಅದ್ವೈತವಾದ ಭೂಮದಲ್ಲಿ ಆ ಭೇದವಿರುವದಿಲ್ಲ. ಬೃ. ಭಾ. ೨-೪-೧೪ ಭಾ. ಭಾ. ೩೭೬, ೩೭೭ನ್ನು ನೋಡಿ.

2. ದರ್ಶನ, ಶ್ರವಣಗಳನ್ನು ಹೇಳಿದರೆ ಸ್ಪರ್ಶ, ರಸ, ಗಂಧಗಳನ್ನು ವಿಷಯೀಕರಿಸುವದನ್ನು ಹೇಳಿದಂತೆಯೇ ಆಯಿತೆಂದು ಇಟ್ಟುಕೊಂಡಿದೆ ಎಂದರ್ಥ.

3. ಶ್ರವಣದಿಂದಲೇ ಕೆಲವುವೇಳೆ ಅರಿತುಕೊಂಡುಬಿಡಬಹುದೆಂಬ ಕಾರಣದಿಂದ ಬಲುಮಟ್ಟಿಗೆ ಎಂದಿದೆ.

## ಚರ್ಚೆ: ಭೂಮದಲ್ಲಿ ತನ್ನನ್ನು ಕಾಣುವದೇ ಮುಂತಾದ ವ್ಯವಹಾರವುಂಟೆ?

(ಭಾಷ್ಯ)

೫೯೫. ಕಿಮತ್ರ ಪ್ರಸಿದ್ಧಾನ್ಯದರ್ಶನಾಭಾವೋ ಭೂಮ್ನಿ ಉಚ್ಯತೇ, 'ನಾನ್ಯತ್ ಪಶ್ಯತಿ' ಇತ್ಯಾದಿನಾ, ಅಥಾನ್ಯನ್ನ ಪಶ್ಯತಿ, ಆತ್ಮಾನಂ ಪಶ್ಯತೀತ್ಯೇತತ್। ಕಿಂ ಚಾತಃ? ಯದ್ಯನ್ಯದರ್ಶನಾದ್ಯಭಾವಮಾತ್ರಮ್ ಇತ್ಯುಚ್ಯತೇ ತದಾ ದ್ವೈತ ಸಂವ್ಯವಹಾರವಿಲಕ್ಷಣೋ ಭೂಮಾ ಇತ್ಯುಕ್ತಂ ಭವತಿ। ಅಥಾಽನ್ಯದರ್ಶನವಿಶೇಷ ಪ್ರತಿಷೇಧೇನ ಆತ್ಮಾನಂ ಪಶ್ಯತೀತ್ಯುಚ್ಯತೇ, ತದಾ ಏಕಸ್ಮಿನ್ನೇವ ಕ್ರಿಯಾಕಾರಕ ಫಲಭೇದೋಽಭ್ಯುಪಗತೋ ಭವೇತ್ । ಯದ್ಯೇವಂ ಕೋ ದೋಷಃ ಸ್ಯಾತ್ ? ನನ್ವಯಮೇವ ದೋಷಃ ಸಂಸಾರಾನಿವೃತ್ತಿಃ । ಕ್ರಿಯಾಕಾರಕಫಲಭೇದೋ ಹಿ ಸಂಸಾರ ಇತಿ। ಆತ್ಮೈಕತ್ವ ಏವ ಕ್ರಿಯಾಕಾರಕಫಲಭೇದಃ ಸಂಸಾರವಿಲಕ್ಷಣಃ ಇತಿ ಚೇತ್ । ನ । ಆತ್ಮನೋ ನಿರ್ವಿಶೇಷೈಕತ್ವಾಭ್ಯುಪಗಮೇ ದರ್ಶನಾದಿಕ್ರಿಯಾ ಕಾರಕಫಲಭೇದಾಭ್ಯುಪಗಮಸ್ಯ ಶಬ್ದಮಾತ್ರತ್ವಾತ್ | ಅನ್ಯದರ್ಶನಾದ್ಯಭಾವೋಕ್ತಿ ಪಕ್ಷೇಽಪಿ 'ಯತ್ರ' ಇತಿ 'ಅನ್ಯನ್ನ ಪಶ್ಯತಿ' ಇತಿ ಚ ವಿಶೇಷಣೇ ಅನರ್ಥಕೇ ಸ್ಯಾತಾಮಿತಿ ಚೇತ್| ದೃಶ್ಯತೇ ಹಿ ಲೋಕೇ ಯತ್ರ ಶೂನ್ಯೇ ಗೃಹೇ ಅನ್ಯನ್ನ ಪಶ್ಯತೀತ್ಯುಕ್ತೇ ಸ್ತಮ್ಭಾದೀನ್ ಆತ್ಮಾನಂ ಚ ನ ನ ಪಶ್ಯತೀತಿ ಗಮ್ಯತೇ। ಏವ ಮಿಹಾಪಿ ಇತಿ ಚೇತ್। ನ। ತತ್ತ್ವಮಸಿ ಇತ್ಯೇಕತ್ವೋಪದೇಶಾತ್ ಅಧಿಕರಣಾ ಧಿಕರ್ತವ್ಯಭೇದಾನುಪಪತ್ತೇಃ। ತಥಾ ಸದೇಕಮೇವಾಽದ್ವಿತೀಯಂ ಸತ್ಯಮ್ ಇತಿ ಷಷ್ಠೇ ನಿರ್ಧಾರಿತತ್ವಾತ್। "ಅದೃಶ್ಯೇಽನಾತ್ಮ್ಯೇ" (ತೈ.೨-೭), "ನ ಸಂದೃಶೇ ತಿಷ್ಠತಿ ರೂಪಮಸ್ಯ" (ತೈ. ನಾ. ೧-೩), "ವಿಜ್ಞಾತಾರಮರೇ ಕೇನ ವಿಜಾನೀ ಯಾತ್" (೨-೪-೧೪) ಇತ್ಯಾದಿಶ್ರುತಿಭ್ಯಃ ಸ್ವಾತ್ಮನಿ ದರ್ಶನಾದ್ಯನುಪಪತ್ತಿಃ। 'ಯತ್ರ' ಇತಿ ವಿಶೇಷಣಮ್ ಅನರ್ಥಕಂ ಪ್ರಾಪ್ತಮಿತಿ ಚೇತ್। ನ। ಅವಿದ್ಯಾ ಕೃತಭೇದಾಪೇಕ್ಷತ್ವಾತ್। ಯಥಾ ಸತ್ಯೈಕತ್ವಾದ್ವಿತೀಯತ್ವಬುದ್ಧಿಂ ಪ್ರಕೃತಾಮ್ ಅಪೇಕ್ಷ್ಯ ಸದೇಕಮೇವಾಽದ್ವಿತೀಯಮ್ ಇತಿ ಸಂಖ್ಯಾದ್ಯನರ್ಹಮಪ್ಯುಚ್ಯತೇ। ಏವಂ ಭೂಮ್ನಿ ಏಕಸ್ಮಿನ್ನೇವ ಯತ್ರೇತಿ ವಿಶೇಷಣಮ್। ಅವಿದ್ಯಾವಸ್ಥಾಯಾಮ್ ಅನ್ಯದರ್ಶನಾನುವಾದೇನ ಚ ಭೂಮ್ನಸ್ತದಭಾವತ್ವಲಕ್ಷಣಸ್ಯ ವಿವಕ್ಷಿತತ್ವಾತ್ 'ನಾನ್ಯತ್ಪಶ್ಯತಿ' ಇತಿ ವಿಶೇಷಣಮ್। ತಸ್ಮಾತ್ ಸಂಸಾರವ್ಯವಹಾರೋ ಭೂಮ್ನಿ ನಾಸ್ತೀತಿ ಸಮುದಾಯಾರ್ಥಃ ॥

(ಭಾಷ್ಯಾರ್ಥ)

(ಪ್ರಶ್ನೆ) :– ಇಲ್ಲಿ 'ಮತ್ತೊಂದನ್ನು ಕಾಣುವದಿಲ್ಲ' ಮುಂತಾದ (ವಾಕ್ಯ) ದಿಂದ ಪ್ರಸಿದ್ಧವಾಗಿರುವ ಮತ್ತೊಂದನ್ನು ಕಾಣುವದೆಂಬುದು ಭೂಮದಲ್ಲಿಲ್ಲ

ವೆಂದಿದೆಯೆ, ಅಥವಾ ಮತ್ತೊಂದನ್ನು ಕಾಣುವದಿಲ್ಲ ಎಂದರೆ ತನ್ನನ್ನು ಕಾಣುತ್ತಾನೆ[1] ಎಂದು ಹೇಳಿದೆಯೆ?

(ಏಕದೇಶಿ) :- ಈ (ಚರ್ಚೆ)ಯಿಂದ ಏನು (ಪ್ರಯೋಜನ)[2] ?

(ಕೇಳಿದವ) :- ಮತ್ತೊಂದನ್ನು ಕಾಣುವದೇ ಮುಂತಾದದ್ದಿಲ್ಲವೆಂದಿಷ್ಟೇ ಹೇಳಿದೆಯೆಂದಾದರೆ, ಆಗ ದ್ವೈತವ್ಯವಹಾರಕ್ಕಿಂತ ವಿಲಕ್ಷಣವಾದದ್ದು ಭೂಮವು ಎಂದು ಹೇಳಿದಂತಾಗುವದು ಹಾಗಲ್ಲದೆ ಒಂದಾನೊಂದು ಅನ್ಯದರ್ಶನವನ್ನು ಅಲ್ಲಗಳೆದು ತನ್ನನ್ನು ಕಾಣುತ್ತಾನೆ ಎಂದು ಹೇಳಿದೆಯೆಂದಾದರೆ, ಆಗ ಒಂದೇ (ಆತ್ಮನಲ್ಲಿ) ಕ್ರಿಯಾಕಾರಕಫಲಭೇದವನ್ನು ಒಪ್ಪಿಕೊಂಡಂತೆ ಆಗುತ್ತದೆ.

(ಏಕದೇಶಿ) :- ಹೀಗೆಂದಾದರೆ[3] ಯಾವ ದೋಷವುಂಟಾಗುತ್ತದೆ ?

(ಸಿದ್ಧಾಂತಿ) .- ಸಂಸಾರವು ತೊಲಗುವದಿಲ್ಲವೆಂಬಿದೇ ದೋಷವಲ್ಲವೆ? ಕ್ರಿಯಾಕಾರಕಫಲಗಳು ಬೇರೆಬೇರೆಯಾಗಿರುವದೇ ಅಲ್ಲವೆ, ಸಂಸಾರವೆಂಬುದು ?

(ಏಕದೇಶಿ) :- ಆತ್ಮನು ಒಬ್ಬನೇ ಆಗಿರುವಲ್ಲಿಯೇ ಕ್ರಿಯಾಕಾರಕಫಲ ಭೇದವಿರುವದು ಸಂಸಾರಕ್ಕಿಂತ ವಿಲಕ್ಷಣವಾದದ್ದೇ.[4]

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ಆತ್ಮನಲ್ಲಿ ಯಾವ ವಿಶೇಷವೂ ಇಲ್ಲವೆಂದು ಒಪ್ಪಿದರೆ ಕಾಣುವದೇ ಮುಂತಾದ ಕ್ರಿಯಾಕಾರಕಫಲಭೇದವನ್ನು ಒಪ್ಪುವದೆಂಬುದು ಬರಿಯ ಮಾತಾಗುವದು.[5]

---

1. ತೈತ್ತಿರೀಯಬ್ರಹ್ಮಾನಂದವಲ್ಲಿಯಲ್ಲಿ (ತೈ. ೨-೧, ಭಾ. ಭಾ. ೧೦೦) ಜ್ಞಾನಶಬ್ದವು ಜ್ಞಾನಕರ್ತೃತ್ವವನ್ನು ಹೇಳುವದಿಲ್ಲವೆಂದು ಪ್ರತಿಪಾದಿಸುವಾಗ ಇವೇ ಪಕ್ಷವನ್ನು ಅನುವಾದ ಮಾಡಿಕೊಂಡು ಖಂಡಿಸಿವೆ.

2. ಎರಡು ಪಕ್ಷಗಳೂ ಆಗಲಿ ; ಆತ್ಮನು ತನ್ನನ್ನು ಅರಿಯುತ್ತಾನೆ ಎಂದಮಾತ್ರದಿಂದ ಏನು ಅನಿಷ್ಟವಾದೀತು ? -ಎಂದು ಭಾವ.

3. ಮತ್ತೊಂದನ್ನರಿಯುವದಿಲ್ಲ, ತನ್ನನ್ನು ಅರಿಯುತ್ತಾನೆ- ಎಂದಾದರೆ.

4. ಆತ್ಮನಲ್ಲಿ ದೃಷ್ಟಿಶ್ರುತ್ಯಾದಿಗಳು ಒಂದಕ್ಕಿಂತ ಒಂದು ಭಿನ್ನವಾಗಿಯೂ ಆತ್ಮರೂಪ ದಿಂದ ಒಂದೇ ಆಗಿಯೂ ಇವೆಯೆಂಬ ಭರ್ತೃಪ್ರಪಂಚರ ಮತವನ್ನು ಅನುವಾದಮಾಡಿ ಕೊಂಡು ಖಂಡಿಸಿರುವದನ್ನು ಬೃ. ಭಾ. ೪-೩-೨೪ (ಭಾ. ಭಾ. ೨೨೮ರಿಂದ ೨೩೧ರವರೆಗಿನ ಗ್ರಂಥ)ದಲ್ಲಿ ಕಾಣಬಹುದು.

5. ಉಪಾಧಿನಿಮಿತ್ತವಾಗಿರುವ ಚೈತನ್ಯಕ್ಕೆ ಈ ಹೆಸರುಗಳುಂಟಾಗಬಹುದು ; ಬರಿಯ ಚೈತನ್ಯದಲ್ಲಿ ಈ ಭೇದವನ್ನು ಕಲ್ಪಿಸುವದು ವಿಕಲ್ಪಮಾತ್ರವಾಗುವದು. ಆತ್ಮಸ್ವರೂಪ ವಾದ ಚಿನ್ಮಾತ್ರದಲ್ಲಿ ಶಬ್ದವಿಕಲ್ಪದಿಂದಾದ ಧರ್ಮವಿಶೇಷಗಳನ್ನು ಹೇಳಿದರೂ ಸ್ವರೂಪದಲ್ಲಿ ನಿಜವಾದ ಯಾವ ಭೇದವೂ ಇರುವದಿಲ್ಲವೆಂಬುದಕ್ಕೆ ಸೂ. ಭಾ. ೪-೪-೬ರಲ್ಲಿ ತಿಳಿಸಿರುವ ನ್ಯಾಯವನ್ನು ನೋಡಿ.

(ಆಕ್ಷೇಪ) :- ಮತ್ತೊಂದನ್ನು ಕಾಣುವದೇ ಮುಂತಾದದ್ದು ಇಲ್ಲವೆಂದಿದೆ ಎಂಬ ಪಕ್ಷದಲ್ಲಿಯೂ 'ಎಲ್ಲಿ' ಎಂಬ ಮತ್ತು 'ಮತ್ತೊಂದನ್ನು ಕಾಣುವದಿಲ್ಲ' ಎಂಬ ವಿಶೇಷಣಗಳು ವ್ಯರ್ಥವೇ ಆಗುತ್ತವೆ.[1] 'ಯಾವ ಬರಿಯ ಮನೆಯಲ್ಲಿ ಮತ್ತೆ ಯಾವದನ್ನು ಕಾಣುವದಿಲ್ಲವೋ' (ಅದೇ ಇಂಥವನ ಮನೆಯು) ಎಂದು ಹೇಳಿದರೆ ಕಂಬವೇ ಮುಂತಾದವುಗಳನ್ನೂ ತನ್ನನ್ನೂ ನೋಡುವದಿಲ್ಲವೆಂದೇನೂ ಅಲ್ಲ -ಎಂದು ಲೋಕದಲ್ಲಿಯೂ ಕಂಡಿದೆಯಲ್ಲವೆ[2] ? ಇಲ್ಲಿಯೂ ಹಾಗೇ (ಆಗಬಹುದಲ್ಲ) !

(ಪರಿಹಾರ) :- ಹಾಗಲ್ಲ, ಏಕೆಂದರೆ 'ಅದೇ ನೀನಾಗಿರುವೆ' ಎಂದು (ಜೀವಪರಮಾತ್ಮರ) ಏಕತ್ವವನ್ನೇ ಹೇಳಿರುವದರಿಂದ ಅಧಿಕರಣ, ಅಧಿಕರ್ತವ್ಯ- ಎಂಬ ಭೇದವು ಹೊಂದುವದಿಲ್ಲ.[3] ಮತ್ತು ತನಗೆರಡನೆಯದಲ್ಲದ ಸತ್ತೊಂದೇ ಸತ್ಯವು ಎಂದು ಆರನೆಯ (ಅಧ್ಯಾಯದಲ್ಲಿ) ಗೊತ್ತುಪಡಿಸಿದ್ದಾಗಿದೆ.[4] "ಅದೃಶ್ಯವೂ ಅನಾತ್ಮ್ಯವೂ" (ತೈ. ೨-೭), "ನೋಡುವದಕ್ಕೆ ಈತನಿಗೆ ರೂಪವಿಲ್ಲ" (ತೈ. ನಾ ೧-೩), "ಎಲೆ, ವಿಜ್ಞಾತೃವನ್ನು ಏತರಿಂದ ಅರಿತಾನು ?" (ಬೃ. ೨-೪-೧೪) -ಇವೇ ಮುಂತಾದ ಶ್ರುತಿಗಳ (ಪ್ರಮಾಣ)ದಿಂದ ತನ್ನ ಆತ್ಮನಲ್ಲಿ ದರ್ಶನವೇ ಮುಂತಾದ (ಕ್ರಿಯೆಯು) ಹೊಂದುವದಿಲ್ಲ(ವೆಂದಾಗುತ್ತದೆ).

(ಆಕ್ಷೇಪ) :- 'ಎಲ್ಲಿ' ಎಂಬ ವಿಶೇಷಣವು ವ್ಯರ್ಥವಾಯಿತಲ್ಲ[5] !

---

1. ಎಲ್ಲಿ ಎಂದರೆ ಭೂಮದಲ್ಲಿ ಎಂದರ್ಥ, ಆದರೆ ಭೂಮವು ಏತಕ್ಕೂ ಆಧಾರವಲ್ಲ. 'ಮತ್ತೊಂದನ್ನು ಕಾಣುವದಿಲ್ಲ' ಎಂಬುದು ಮತ್ತೊಂದು ಇದ್ದರೆ ಹೊಂದುವದು; ಆದರೆ ಭೂಮದಲ್ಲಿ ಮತ್ತೊಂದಿಲ್ಲ, ಆದ್ದರಿಂದ ನಿರ್ವಿಶೇಷಾತ್ಮನಲ್ಲಿ ದರ್ಶನಾದಿಗಳು ಇಲ್ಲ- ಎಂಬರ್ಥವನ್ನು ಮಾಡಿದರೆ ನಿಮ್ಮ ಪಕ್ಷದಲ್ಲಿಯೂ ಇವು ವ್ಯರ್ಥವಿಶೇಷಣಗಳೆಂದಾಗುತ್ತದೆ.

2. ಈ ಉದಾಹರಣೆಯಲ್ಲಿ ಮತ್ತೊಂದನ್ನು ಕಾಣುವದಿಲ್ಲ ಎಂದರೆ ಪ್ರಸಕ್ತವಾದ ಮತ್ತೊಂದನ್ನು ಕಾಣುವದಿಲ್ಲ ಎಂದೇ ನಿಷೇಧವೇ ಹೊರತು ತಾನು, ಕಂಬ ಮುಂತಾದವು- ಇವುಗಳನ್ನೂ ಕಾಣುವದಿಲ್ಲ ಎಂದು ಯಾರೂ ವಾಕ್ಯಾರ್ಥವನ್ನು ಮಾಡುವದಿಲ್ಲವಷ್ಟೆ? ಅದರಂತೆ ಭೂಮದಲ್ಲಿಯೂ ಆತ್ಮದರ್ಶನವನ್ನು ಹೇಳುವದು ತಪ್ಪಲ್ಲ ಎಂದು ಭಾವ.

3. ಜೀವನೇ ಪರಮಾತ್ಮನಾದರೆ ಪರಮಾತ್ಮನಲ್ಲಿ ಜೀವನು ತನ್ನನ್ನು ಕಾಣುವನು- ಎಂಬುದು ಹೊಂದುವದಿಲ್ಲ.

4. ಆದ್ದರಿಂದ ಮಿಕ್ಕದ್ದೆಲ್ಲವೂ ಅಸತ್ಯವೆಂದಾಯಿತು ; ಅಂಥ ಸತ್ಯಾತ್ಮನಲ್ಲಿ ತನ್ನನ್ನು ತಾನು ನೋಡುವದು- ಮುಂತಾದದ್ದು ಸತ್ಯವಾಗಿದೆಯೆಂದು ಹೇಳುವದು ಹೇಗೆ ಸರಿಯಾದೀತು? -ಎಂದು ಭಾವ.

5. ನಿರ್ವಿಶೇಷನಾದ ಆತ್ಮನಲ್ಲಿ ಅಧಿಕರಣಾದಿಭೇದವಿಲ್ಲವಷ್ಟೆ ? -ಎಂದು ಭಾವ. 'ಮತ್ತೊಂದನ್ನು ಕಾಣುವದಿಲ್ಲವೋ' ಎಂಬುದೂ ವ್ಯರ್ಥವಿಶೇಷಣವೇ ಎಂಬುದಕ್ಕೆ ಇದನ್ನು ಉಪಲಕ್ಷಣವಾಗಿ ಹೇಳಿದೆ.

(ಪರಿಹಾರ) :- ಹಾಗಲ್ಲ. ಏಕೆಂದರೆ (ಇದು) ಅವಿದ್ಯಾಕಲ್ಪಿತವಾದ ಭೇದದ ಅಪೇಕ್ಷೆಯಿಂದ ಹೇಳಿದ್ದಾಗಿದೆ. **ನಿಜವಾಗಿರುವ[1] ಏಕತ್ವ, ಅದ್ವಿತೀಯತ್ವ- ಎಂಬ ಪ್ರಕೃತವಾದ ಬುದ್ಧಿಯ ಅಪೇಕ್ಷೆಯಿಂದ ಏಕವೇ, ಅದ್ವಿತೀಯವೇ- ಎಂದು ಸಂಖ್ಯೆಯೇ ಮುಂತಾದದ್ದಕ್ಕೆ ಯೋಗ್ಯವಲ್ಲದ ಸತ್ತನ್ನು ಹೇಳುವೆವೋ[2] ಹೀಗೆಯೇ ಒಂದೇ ಆಗಿರುವ ಭೂಮದಲ್ಲಿ 'ಎಲ್ಲಿ' ಎಂಬ ವಿಶೇಷಣವನ್ನು (ಹೇಳಿದೆ). ಅವಿದ್ಯಾವಸ್ಥೆಯಲ್ಲಿ ಮತ್ತೊಂದನ್ನು ಕಾಣುವರೆಂಬುದನ್ನು ಅನುವಾದಮಾಡಿಕೊಂಡು ಭೂಮದಲ್ಲಿ ಅದಿಲ್ಲವೆಂದು ಹೇಳುವದಕ್ಕೆ ಹೊರಟಿರುವದರಿಂದ ಮತ್ತೊಂದನ್ನು ಕಾಣುವದಿಲ್ಲವೋ ಎಂಬ ವಿಶೇಷಣವನ್ನು (ಹಾಕಿದೆ).[3]** ಆದ್ದರಿಂದ ಸಂಸಾರವ್ಯವಹಾರವು ಭೂಮದಲ್ಲಿಲ್ಲ ಎಂಬುದೇ ಒಟ್ಟರ್ಥವು.[4]

## ಭೂಮವು ಅಮೃತ, ಅನಾತ್ಮವು ಮರ್ತ್ಯವು

### (ಭಾಷ್ಯ)

೫೯೭ ಅಥ ಯತ್ರ ಅವಿದ್ಯಾವಿಷಯೇ ಅನ್ಯೋಽನ್ಯೇನಾಽನ್ಯತ್ ಪಶ್ಯತೀತಿ ತದಲ್ಪಮ್ ಅವಿದ್ಯಾಕಾಲಭಾವಿ ಇತ್ಯರ್ಥಃ। ಯಥಾ ಸ್ವಪ್ನದೃಶ್ಯಂ ವಸ್ತು ಪ್ರಾಕ್ ಪ್ರಬೋಧಾತ್ ತತ್ಕಾಲಭಾವೀತಿ ತದ್ವತ್। ತತ ಏವ ತನ್ಮರ್ತ್ಯಂ ವಿನಾಶಿ ಸ್ವಪ್ನವಸ್ತುವದೇವ। ತದ್ವಿಪರೀತೋ ಭೂಮಾ ಯಸ್ತದಮೃತಮ್। ತಚ್ಛಬ್ದೋಽಮೃತತ್ವಪರಃ ॥

### (ಭಾಷ್ಯಾರ್ಥ)

ಇನ್ನು ಎಲ್ಲಿ, ಎಂದರೆ ಅವಿದ್ಯೆಯ ವಿಷಯದಲ್ಲಿ, ಒಬ್ಬನು, ಒಂದರಿಂದ ಮತ್ತೊಂದನ್ನು ಕಾಣುತ್ತಾನೋ, ಅದು ಅಲ್ಪವು , ಅವಿದ್ಯಾಕಾಲದಲ್ಲಿ (ಮಾತ್ರ)

---

1. ವ್ಯವಹಾರದೃಷ್ಟಿಯಲ್ಲಿ ಏಕತ್ವಾದಿಶಬ್ದಗಳಿಗೆ ವಾಚ್ಯವಾದ ಎಂದರ್ಥ.

2. ಸತ್ತಿನಲ್ಲಿ ಸಂಖ್ಯಾದಿಧರ್ಮಗಳಿಲ್ಲದ್ದರಿಂದ ಅದನ್ನು ಒಂದು, ಎರಡನೆಯದಿಲ್ಲದ್ದು ಎಂದು ಹೇಳುವದಕ್ಕೆ ಬರುವದಿಲ್ಲ. ಆದರೂ ಅವಿದ್ಯಾದೃಷ್ಟಿಯ ವ್ಯವಹಾರದಲ್ಲಿ ಸಂಖ್ಯೇಯವಾಗಿರುವ ವಸ್ತುಗಳಂತೆ ಇದು ಏಕತ್ವಾದಿಗಳಿಲ್ಲದ್ದು- ಎಂದು ಅತದ್ಧರ್ಮವ್ಯಾವೃತ್ತಿರೂಪವಾಗಿ ಸತ್ತನ್ನು ಉಪದೇಶಿಸಿದೆ. ಇದರಂತೆ ಸತ್ತೆಂಬ ಶಬ್ದವೂ ಅಸದ್ವ್ಯಾವೃತ್ತಿಗಾಗಿಯೇ ಹೇಳಿದ್ದು , ಏಕೆಂದರೆ ಸತ್ತು ಎಂಬ ಧರ್ಮವೂ ಪರಮಾರ್ಥತತ್ತ್ವದಲ್ಲಿರುವದಿಲ್ಲ.

3. ಅವಿದ್ಯಾದೃಷ್ಟಿಯಿಂದ ಪ್ರಾಪ್ತವಾದ ಅನ್ಯದರ್ಶನಾದಿಗಳು ಭೂಮದಲ್ಲಿಲ್ಲವೆಂದೇ ಆ ವಿಶೇಷಣಕ್ಕೂ ಅಭಿಪ್ರಾಯ.

4. ಸಂಖ್ಯಾದ್ಯಭಾವವಾಗಲಿ ಅನ್ಯದರ್ಶನಾದ್ಯಭಾವವಾಗಲಿ ಭೂಮದಲ್ಲಿದೆಯೆಂದೇನೂ ಅಭಿಪ್ರಾಯವಿಲ್ಲ ; ಏಕೆಂದರೆ ಅಭಾವವೂ ಅವಿದ್ಯಾದೃಷ್ಟಿಗೇ ಸೇರಿದ್ದು. ಆದ್ದರಿಂದ ಅವಿದ್ಯಾವಿಷಯವಾದ ಸಂಸಾರಕ್ಕಿಂತ ವಿಲಕ್ಷಣವಾದದ್ದು ಎಂಬುದಿಷ್ಟೇ ತಿಳಿಯತಕ್ಕದ್ದು - ಎಂದು ಅಭಿಪ್ರಾಯ.

ಇರತಕ್ಕದ್ದು ಎಂದರ್ಥ. ಹೇಗೆ ಎಚ್ಚರವಾಗುವದಕ್ಕಿಂತ ಮುಂಚೆ ಸ್ವಪ್ನದಲ್ಲಿ ಕಾಣುವ ವಸ್ತು ಆ ಕಾಲದಲ್ಲಿ ಮಾತ್ರ ಇರತಕ್ಕದ್ದೋ (ಹಾಗೆ) ಎಂದರ್ಥ.[1] ಆದ್ದರಿಂದಲೇ[2] ಅದು ಮರ್ತ್ಯವು, ಸ್ವಪ್ನವಸ್ತುವಿನಂತೆಯೇ ವಿನಾಶವಾಗತಕ್ಕದ್ದು.[3] ಇದಕ್ಕೆ ವಿಪರೀತವಾದದ್ದು ಭೂಮವು, ಅದು ಅಮೃತವು, ಇಲ್ಲಿ ತತ್ (ಅದು) ಎಂಬ ಶಬ್ದವು ಅಮೃತತ್ವವನ್ನು ಹೇಳುತ್ತದೆ.[4]

## ಭೂಮಕ್ಕೆ ಆಧಾರವು ಯಾವದೂ ಇಲ್ಲ

(ಭಾಷ್ಯ)

೫೯೭. ಸ ತರ್ಹಿ ಏವಂಲಕ್ಷಣೋ ಭೂಮಾ ಹೇ ಭಗವನ್ ಕಸ್ಮಿನ್ ಪ್ರತಿಷ್ಠಿತ ಇತ್ಯುಕ್ತವನ್ತಂ ನಾರದಂ ಪ್ರತ್ಯಾಹ ಸನತ್ಕುಮಾರಃ, ಸ್ವೇ ಮಹಿಮ್ನೀತಿ। ಸ್ವೇ ಆತ್ಮೀಯೇ ಮಹಿಮ್ನಿ। ಮಾಹಾತ್ಮ್ಯೇ ವಿಭೂತೌ ಪ್ರತಿಷ್ಠಿತೋ ಭೂಮಾ। ಯದಿ ಪ್ರತಿಷ್ಠಾಮ್ ಇಚ್ಛಸಿ ಕ್ವಚಿತ್। ಯದಿ ವಾ ಪರಮಾರ್ಥಮೇವ ಪೃಚ್ಛಸಿ ನ ಮಹಿಮ್ನ್ಯಪಿ ಪ್ರತಿಷ್ಠಿತ ಇತಿ ಬ್ರೂಮಃ। ಅಪ್ರತಿಷ್ಠಿತೋಽನಾಶ್ರಿತೋ ಭೂಮಾ ಕ್ವಚಿದಪೀತ್ಯರ್ಥಃ ॥

(ಭಾಷ್ಯಾರ್ಥ)

'ಹಾಗಾದರೆ ಈ ಸ್ವರೂಪದ ಆ ಭೂಮವು, ಎಲೈ ಭಗವಂತನೆ, ಏತರಲ್ಲಿ ಪ್ರತಿಷ್ಠಿತವಾಗಿರುತ್ತದೆ?' ಎಂದು ಕೇಳಿದ ನಾರದನಿಗೆ ಸನತ್ಕುಮಾರನು ಪ್ರತ್ಯುತ್ತರವನ್ನು ಹೇಳುತ್ತಾನೆ: ಸ್ವಂತಮಹಿಮೆಯಲ್ಲಿ, ಸ್ವಂತವಾದ ಎಂದರೆ ತನ್ನದೇ ಆದ ಮಹಿಮೆಯಲ್ಲಿ, ಮಹಾತ್ಮ್ಯದಲ್ಲಿ, ಎಂದರೆ ವಿಭೂತಿಯಲ್ಲಿ[5] (ಆ) ಭೂಮವು

---

1. ಅವಿದ್ಯೆಯು ಕಾಲದಲ್ಲಿದೆ ಎಂದು ಈ ವಾಕ್ಯದಿಂದ ತಿಳಿಯಬಾರದು, ಏಕೆಂದರೆ ಅವಿದ್ಯೆಯಿಂದಲೇ ಕಾಲವೂ ತೋರುತ್ತಿರುತ್ತದೆ. ಆದ್ದರಿಂದ ಅವಿದ್ಯಾಕಾಲಭಾವಿ ಎಂದರೆ ಅವಿದ್ಯೆಯಿದ್ದರೆ ತೋರುತ್ತದೆ, ಇಲ್ಲದಿದ್ದರೆ ತೋರುವದಿಲ್ಲ ಎಂದೇ ಅರ್ಥ.

2. ಅಲ್ಪವಾದ್ದರಿಂದಲೇ, ಅವಿದ್ಯಾಪರಿಚ್ಛಿನ್ನವಾಗಿರುವದರಿಂದಲೇ ಎಂದರ್ಥ.

3. ಸ್ವಪ್ನವಸ್ತುಗಳು ಸ್ವಪ್ನದಲ್ಲಿ ಮಾತ್ರವೇ ಕಾಣುತ್ತವೆ, ಎಚ್ಚರದಲ್ಲಿ ಕಾಣುವದಿಲ್ಲ-ಎಂದಿಷ್ಟೇ ಅರ್ಥ; ಸ್ವಪ್ನವಿರುವಷ್ಟುಕಾಲ - ಎಂದೇನೂ ಅರ್ಥವಲ್ಲ, ಏಕೆಂದರೆ ಸ್ವಪ್ನವು ಕಾಲದ ಆಧಾರದಿಂದ ಇರುವದಿಲ್ಲ, ಆಯಾ ಸ್ವಪ್ನದಲ್ಲಿಯೇ ಅದರದರ ಪ್ರಪಂಚದ ಕಾಲವು ಕಾಣುತ್ತಿರುತ್ತದೆ. ಸ್ವಪ್ನವಸ್ತುವು ನಿಜವಾಗಿರುವದಿಲ್ಲವಾದ್ದರಿಂದ ಅದಕ್ಕೆ ನಿಜವಾದ ವಿನಾಶವೂ ಇರುವದಿಲ್ಲ, ಸ್ವಪ್ನದಲ್ಲಿ ಇರುವಂತೆ ತೋರಿ ಎಚ್ಚರದ ಜ್ಞಾನದಿಂದ ಬಾಧಿತವಾಗತಕ್ಕದ್ದು ಎಂದು ಭಾಷ್ಯವಾಕ್ಯಕ್ಕೆ ಅರ್ಥಮಾಡಿಕೊಳ್ಳಬೇಕು.

4. ಭೂಮಾ ಎಂಬುದು ಸಂಸ್ಕೃತದಲ್ಲಿ ಪುಲ್ಲಿಂಗಶಬ್ದವಾದ್ದರಿಂದ ತತ್ ಎಂಬ ನಪುಂಸಕಶಬ್ದವು ಅದಕ್ಕೆ ವಿಶೇಷಣವಾಗಲಾರದು; ಆದ್ದರಿಂದ ಅದು ಅಮೃತತ್ವವೆಂಬ ನಪುಂಸಕಶಬ್ದಕ್ಕೆ ಸೇರಿದ್ದೆಂದು ತಿಳಿಯಬೇಕು ಎಂದು ಅಭಿಪ್ರಾಯ.

5. ಈ ಜಗತ್ತೆಲ್ಲ ಆತನ ಮಹಿಮೆಯೇ, ಇದರಲ್ಲೆಲ್ಲ ಇರುತ್ತಾನೆ.

ಪ್ರತಿಷ್ಠಿತವಾಗಿರುತ್ತದೆ. ಎಲ್ಲಾದರೂ ಒಂದು ಕಡೆ ಅದು ಇದ್ದುಕೊಂಡಿರಬೇಕೆಂದು ನಿನ್ನ ಅಭಿಪ್ರಾಯವಾದರೆ (ಇದು ಉತ್ತರವು).[1] ಹೀಗಲ್ಲದೆ ಪರಮಾರ್ಥವನ್ನೇ ಕೇಳುತ್ತಿರುವೆಯಾದರೆ, ಮಹಿಮೆಯಲ್ಲಿಯೂ ಅದು ಇದ್ದುಕೊಂಡಿರುವದಿಲ್ಲ ಎಂದು ಹೇಳುತ್ತೇವೆ (೮) ಭೂಮವು ಅಪ್ರತಿಷ್ಠಿತವಾದದ್ದು, ಎಲ್ಲಿ (ಯಾವದನ್ನೂ) ಆಶ್ರಯಿಸಿಕೊಂಡಿಲ್ಲ ಎಂದರ್ಥ.

## ಭೂಮವು ನಿಜವಾಗಿ ಪ್ರತಿಷ್ಠಾರಹಿತವೇ

(ಉಪನಿಷತ್ತು)

**ಗೋಅಶ್ವಮಿಹ ಮಹಿಮೇತ್ಯಾಚಕ್ಷತೇ ಹಸ್ತಿಹಿರಣ್ಯಂ ದಾಸಭಾರ್ಯಂ ಕ್ಷೇತ್ರಾಣ್ಯಾಯತನಾನೀತಿ ನಾಹಮೇವಂ ಬ್ರವೀಮಿ ಬ್ರವೀಮೀತಿ ಹೋವಾಚಾನ್ಯೋ ಹ್ಯನ್ಯಸ್ಮಿನ್ ಪ್ರತಿಷ್ಠಿತ ಇತಿ ॥**

೨. 'ಗೋಅಶ್ವವನ್ನು ಹಸ್ತಿಹಿರಣ್ಯವನ್ನು ದಾಸಭಾರ್ಯವನ್ನು ಹೊಲಗಳನ್ನು ಮನೆಗಳನ್ನು ಮಹಿಮೆಯೆನ್ನುವರು. ನಾನು ಹೀಗೆ ಹೇಳುವದಿಲ್ಲ, ಒಬ್ಬನು ಇನ್ನೊಂದರಲ್ಲಿ ಪ್ರತಿಷ್ಠಿತನಾಗಿರುತ್ತಾನಲ್ಲವೆ? (ಹೀಗೆ) ಹೇಳುತ್ತೇನೆ ಎಂದು ಹೇಳಿದನು.

### ಭೂಮವು ಅಪ್ರತಿಷ್ಠಿತವೆಂಬುದು ಹೇಗೆ?

(ಭಾಷ್ಯ)

೫೯೭ ಯದಿ ಸ್ವಮಹಿಮ್ನಿ ಪ್ರತಿಷ್ಠಿತೋ ಭೂಮಾ ಕಥಂ ತರ್ಹಿ ಅಪ್ರತಿಷ್ಠ ಉಚ್ಯತೇ ? ಶೃಣು । ಗೋಅಶ್ವಾದಿ ಇಹ ಮಹಿಮೇತಿ ಆಚಕ್ಷತೇ । ಗಾವಶ್ಚ ಅಶ್ವಾಶ್ಚ ಗೋಅಶ್ವಂ ದ್ವಂದ್ವೈಕವದ್ಭಾವಃ । ಸರ್ವತ್ರ ಗವಾಶ್ವಾದಿ ಮಹಿಮಾ ಇತಿ ಪ್ರಸಿದ್ಧಮ್ ತದಾಶ್ರಿತಃ, ತತ್ಪ್ರತಿಷ್ಠಶ್ಚೈತ್ರೋ ಭವತಿ । ಯಥಾ ನಾಽಹಮೇವಂ ಸ್ವತೋಽನ್ಯಂ ಮಹಿಮಾನಮ್ ಆಶ್ರಿತೋ ಭೂಮಾ ಚೈತ್ರವತ್ ಇತಿ ಬ್ರವೀಮಿ । ಅತ್ರ ಹೇತುತ್ವೇನ ಅನ್ಯೋ ಹಿ ಅನ್ಯಸ್ಮಿನ್ ಪ್ರತಿಷ್ಠಿತ ಇತಿ ವ್ಯವಹಿತೇನ ಸಂಬನ್ಧಃ । ಕಿಂ ತು ಏವಂ ಬ್ರವೀಮಿ ಇತಿ ಹೋವಾಚ ಸ ಏವೇತ್ಯಾದಿ ॥

(ಭಾಷ್ಯಾರ್ಥ)

ಭೂಮವು ತನ್ನ ಮಹಿಮೆಯಲ್ಲಿ ಪ್ರತಿಷ್ಠಿತವಾಗಿದೆಯಾದರೆ (ಅದು) ಅಪ್ರತಿಷ್ಠಿತವೆಂದು ಹೇಳುತ್ತೀಯಲ್ಲ, (ಇದು) ಹೇಗೆ (ಸರಿ)? ಎಂದರೆ ಕೇಳು!

---

1. ವ್ಯವಹಾರದೃಷ್ಟಿಯಿಂದ ಇದು ಉತ್ತರವು.

ಗೋ ಅಶ್ವಾದಿಯನ್ನು ಇಲ್ಲಿ ಮಹಿಮೆ ಎಂದು ಕರೆಯುತ್ತಾರೆ. ಎತ್ತುಗಳೂ ಕುದುರೆಗಳೇ ಗೋಅಶ್ವವು, (ಇದು) ಸಮಾಹಾರದ್ವಂದ್ವ(ಸಮಾಸವು) ಗವಾಶ್ವಾದಿಯೇ[1] ಮಹಿಮೆ ಎಂದು ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುತ್ತದೆ. ಅದನ್ನು ಆಶ್ರಯಿಸಿಕೊಂಡಿರುವದರಿಂದ ಚೈತ್ರನು ಅದರಲ್ಲಿ ಪ್ರತಿಷ್ಠಿತನಾಗಿರುತ್ತಾನೆ ಎಂಬುದು ಹೇಗೋ[2], ಹಾಗೆ ತನಗಿಂತ ಬೇರೆಯಾದ ಮಹಿಮೆಯನ್ನು ಭೂಮವು ಚೈತ್ರನಂತೆ ಆಶ್ರಯಿಸಿರುತ್ತದೆ ಎಂದು ಹೇಳುತ್ತಿಲ್ಲ[3]. 'ಒಂದು ಮತ್ತೊಂದರಲ್ಲಿಲ್ಲವೆ, ಪ್ರತಿಷ್ಠಿತವಾಗಿರುತ್ತದೆ?' ಎಂಬುದನ್ನು ಈ (ಅಭಿಪ್ರಾಯಕ್ಕೆ) ಹೇತುವಾಗಿ ವ್ಯವಹಿತವಾಗಿರುವದಕ್ಕೆ ಸಂಬಂಧ(ಮಾಡಿಕೊಳ್ಳಬೇಕು)[4]. ಮತ್ತೇನೆಂದರೆ ಹೀಗೆಂದು ಹೇಳುತ್ತೇನೆ ಎಂದು 'ಸ ಏವ' ಎಂಬಿದೇ ಮುಂತಾಗಿ ಹೇಳಿದನು[5].

---

# ಏಳನೆಯ ಅಧ್ಯಾಯ-ಇಪ್ಪತ್ತೈದನೆಯ ಖಂಡ

(ಭೂಮವಿದ್ಯೆ)

## ಭೂಮವೇ ಎಲ್ಲೆಲ್ಲಿಯೂ ಇದೆ, ನೋಡುವಾತನಿಗಿಂತ ಬೇರೆಯಲ್ಲ

(ಉಪನಿಷತ್ತು)

**ಸ ಏವಾಽಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ ಸ ಏವೇದಗ್ಂ ಸರ್ವಮಿತ್ಯಥಾ**

---

1. ಎತ್ತುಗಳೂ ಕುದುರೆಗಳೂ, ಆನೆ ಹಣಕಾಸು, ಆಳುಕಾಳು ಹೆಂಡಿರು, ಹೊಲಗಳು, ಮನೆಗಳು– ಇಂಥವುಗಳನ್ನೇ ಒಬ್ಬನ ಮಹಿಮೆಯೆನ್ನುವರು ಇವುಗಳಿದ್ದವನೇ ದೊಡ್ಡವನೆಂದು ಭಾವಿಸುವರು.

2. ಚೈತ್ರನೆಂಬ ಹೆಸರಿನ ಯಾವನಾದರೊಬ್ಬನು ತನ್ನ ಮಹಿಮೆಯಲ್ಲಿದ್ದಾನೆ– ಎನ್ನುವಾಗ ಆತನಗಿಂತ ಬೇರೆಯಾದ ಆಸ್ತಿಯನ್ನು ಅಶ್ರಯಿಸಿಕೊಂಡೇ ದೊಡ್ಡವನೆನಿಸಿಕೊಂಡಿದಾನೆ ಎಂದೇ ಲೋಕದಲ್ಲಿ ಅರ್ಥ.

3. ಭೂಮಕ್ಕಿಂತ ಮಹಿಮೆಯು ವ್ಯತಿರಿಕ್ತವಾಗಿವೆಯೆಂದೇನೂ ನನ್ನ ಅಭಿಪ್ರಾಯವಲ್ಲ, ಆ ಮಹಿಮೆಯು ಅವನನ್ನು ಬಿಟ್ಟು ಸ್ವತಂತ್ರವಾಗಿಲ್ಲವೇ ಇಲ್ಲ.

4. 'ನಾಹಮೇವಂ ಬ್ರವೀಮಿ' ಆದಮೇಲೆ 'ಬ್ರವೀಮಿ' ಎಂಬ ಮಾತಿದೆ, ನಡುವೆಯಿರುವ ಮಾತನ್ನು ಬಿಟ್ಟು ನಾಹಮೇವಂ ಬ್ರವೀಮಿ, ಅನ್ಯೋ ಹಿ ಅನ್ಯಸ್ಮಿನ್ ಪ್ರತಿಷ್ಠಿತಃ ಎಂದು ಸಂಬಂಧಮಾಡಿಕೊಳ್ಳಬೇಕು. ಮತ್ತೊಂದರಲ್ಲಿದ್ದರೆ ಅದರಲ್ಲಿ ಪ್ರತಿಷ್ಠಿತವಾಗಿದೆ ಎನ್ನಬಹುದಾಗಿತ್ತು– ಎಂದು ವಾಕ್ಯಾರ್ಥ.

5. ಇದೆ ಬ್ರವೀಮಿ– ಎಂಬ ಮಾತಿನ ವ್ಯಾಖ್ಯಾನ, ಹೀಗೆನ್ನುತ್ತೇನೆ ಎಂಬುವನ್ನು ಮುಂದಿನ ಕಂಡಿಕೆಯ ವಾಕ್ಯಕ್ಕೆ ಅನ್ವಯಿಸಿಕೊಳ್ಳಬೇಕೆಂದರ್ಥ.

**ತೋಽಹಂಕಾರಾದೇಶ ಏವಾಽಹಮೇವಾಽಧಸ್ತಾದಹಮುಪರಿಷ್ಟಾ ದಹಂ ಪಶ್ಚಾದಹಂ ಪುರಸ್ತಾದಹಂ ದಕ್ಷಿಣತೋಽಹಮುತ್ತರ ತೋಽಹಮೇವೇದಗ್ಂ ಸರ್ವಮಿತಿ ॥ ೧ ॥**

೧. ಅದೇ ಕೆಳಗೆ, ಅದೇ ಮೇಲೆ, ಅದೇ ಹಿಂದೆ, ಅದೇ ಮುಂದೆ, ಅದೇ ಬಲಕ್ಕೆ, ಅದೇ ಎಡಕ್ಕೆ, ಅದೇ ಇವೆಲ್ಲವೂ. ಇನ್ನು ಆದ್ದರಿಂದ ಅಹಂಕಾರಾದೇಶವೇ. ನಾನೇ ಕೆಳಗೆ, ನಾನೇ ಮೇಲೆ, ನಾನೇ ಹಿಂದೆ, ನಾನೇ ಮುಂದೆ, ನಾನೇ ಬಲಕ್ಕೆ, ನಾನೇ ಎಡಕ್ಕೆ, ನಾನೇ ಇದೆಲ್ಲವೂ.

## ಭೂಮವೇ ಎಲ್ಲೆಲ್ಲಿಯೂ ಇರುವದರಿಂದ ಅಪ್ರತಿಷ್ಠಿತ

(ಭಾಷ್ಯ)

೫೮೮. ಕಸ್ಮಾತ್ ಪುನಃ ಕ್ವಚಿನ್ನ ಪ್ರತಿಷ್ಠಿತ ಇತಿ ? ಉಚ್ಯತೇ। ಯಸ್ಮಾತ್ ಸ ಏವ ಭೂಮಾ ಅಧಸ್ತಾತ್ । ನ ತದ್ವ್ಯತಿರೇಕೇಣಾ ಅನ್ಯದ್ ವಿದ್ಯತೇ ಯಸ್ಮಿನ್ ಪ್ರತಿಷ್ಠಿತಃ ಸ್ಯಾತ್ । ತಥಾ ಉಪರಿಷ್ಟಾದಿತ್ಯಾದಿ ಸಮಾನಮ್। ಸತಿ ಭೂಮ್ನೋಽನ್ಯಸ್ಮಿನ್ ಭೂಮಾ ಹಿ ಪ್ರತಿಷ್ಠಿತಃ ಸ್ಯಾತ್, ನ ತು ತದಸ್ತಿ । ಸ ಏವ ತು ಸರ್ವಮ್ । ಅತಸ್ತಸ್ಮಾತ್[1] ಅಸೌ ನ ಕ್ವಚಿತ್ ಪ್ರತಿಷ್ಠಿತಃ ॥

(ಭಾಷ್ಯಾರ್ಥ)

ಹಾಗಾದರೆ ಯಾವ ಕಾರಣದಿಂದ (ಇದು) ಎಲ್ಲಿಯೂ ಪ್ರತಿಷ್ಠಿತವಲ್ಲ ? ಎಂದರೆ ಹೇಳುತ್ತೇನೆ. ಏಕೆಂದರೆ ಆ ಭೂಮವೇ ಕೆಳಗೆ , ಅದಕ್ಕಿಂತ ವ್ಯತಿರಿಕ್ತ ವಾಗಿ ಮತ್ತೊಂದಿಲ್ಲವೇ ಅಲ್ಲ, ಇದ್ದರಲ್ಲವೆ, ಅದರಲ್ಲಿ ಪ್ರತಿಷ್ಠಿತವಾಗಿದ್ದೀತು? ಇದರಂತೆ ಮೇಲೆ ಮುಂತಾದದ್ದು (ಈ ವಾಕ್ಯಕ್ಕೆ) ಸಮಾನವಾಗಿದೆ. ಭೂಮಕ್ಕಿಂತ ಮತ್ತೊಂದು ಇದ್ದಿದ್ದರಲ್ಲವೆ, ಭೂಮವು (ಎಲ್ಲಿಯಾದರೂ) ಪ್ರತಿಷ್ಠಿತವಾಗಿದೆ ಎನ್ನಬೇಕು ? ಆದರೆ ಅಂಥದ್ದು ಇಲ್ಲ, ಅದೇ ಎಲ್ಲವೂ ಆಗಿದೆ. ಹೀಗಿದೆಯಲ್ಲ, ಆದ್ದರಿಂದ ಅ (ಭೂಮವು) ಎಲ್ಲಿಯೂ ಪ್ರತಿಷ್ಠಿತವಾಗಿಲ್ಲ.

## ಭೂಮವು ದ್ರಷ್ಟೃವಿಗಿಂತ ಬೇರೆಯಲ್ಲ

(ಭಾಷ್ಯ)

೫೮೯. ಯತ್ರ ನಾನ್ಯತ್ ಪಶ್ಯತಿ ಇತ್ಯಧಿಕರಣಾಧಿಕರ್ತವ್ಯತಾನಿರ್ದೇ ಶಾತ್ ಸ ಏವಾಽಧಸ್ತಾದಿತಿ ಚ ಪರೋಕ್ಷನಿರ್ದೇಶಾತ್ । ದ್ರಷ್ಟುರ್ಜೀವಾದನ್ಯೋ

1. ಯತಸ್ತಸ್ಮಾತ್ ಎಂದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ; ಹಾಗಿದ್ದಂತೆ ಭಾವಿಸಿ ಯೇ ಕನ್ನಡಿಸಲಾಗಿದೆ. ಅಚ್ಚಿನ ಪುಸ್ತಕಗಳಲ್ಲೆಲ್ಲೋ ಅತಃ ಎಂದೇ ಇದೆ.

ಭೂಮಾ ಸ್ಯಾತ್ ಇತ್ಯಾಶಙ್ಕಾ ಕಸ್ಯಚಿನ್ಮಾ ಭೂತ್ ಇತ್ಯತೋಽಥಾನನ್ತರಮ್[1]
ಅಹಂಕಾರಾದೇಶೋಽಹಂಕಾರೇಣ ಆದಿಶ್ಯತ ಇತ್ಯಹಂಕಾರಾದೇಶಃ । ದ್ರಷ್ಟು
ರನನ್ಯತ್ವದರ್ಶನಾರ್ಥಂ ಭೂಮೈವ ನಿರ್ದಿಶ್ಯತೇಽಹಂಕಾರೇಣ 'ಅಹಮೇವಾ
ಧಸ್ತಾ'ದಿತ್ಯಾದಿನಾ ॥

(ಭಾಷ್ಯಾರ್ಥ)

'ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ' (೭-೨೪-೧) ಎಂದು ಅಧಿಕರ ಣಾಧಿಕರ್ತವ್ಯಭಾವವನ್ನು ಹೇಳಿ ತಿಳಿಸಿರುವದರಿಂದಲೂ[2] 'ಅದೇ ಕೆಳಗೆ' ಎಂದು ಪರೋಕ್ಷವಾಗಿ ತಿಳಿಸಿರುವದರಿಂದಲೂ[3] ನೋಡುವ ಜೀವನಿಗಿಂತ ಭೂಮವು ಬೇರೆಯಿರಬಹುದು- ಎಂಬ ಆಶಂಕೆಯು ಯಾರಿಗೂ ಆಗದಿರಲೆಂದು ಆ ಕಾರಣ ದಿಂದ ಇನ್ನು ಈ ಬಳಿಕ ಅಹಂಕಾರಾದೇಶವು[4]- ಅಹಂಕಾರದಿಂದ ಉಪದೇಶ ಮಾಡುತ್ತದೆಯಾದ್ದರಿಂದ ಅಹಂಕಾರದೇಶವು - ನೋಡುವ (ಜೀವ)ನಿಗಿಂತ ಬೇರೆಯಲ್ಲವೆಂದು ತಿಳಿಯುವದಕ್ಕಾಗಿ ಭೂಮವನ್ನೇ ಅಹಂಕಾರದಿಂದ 'ನಾನೇ ಕೆಳಗೆ' ಎಂದು ಮುಂತಾದ (ವಾಕ್ಯದಿಂದ) ತಿಳಿಸಲಾಗುತ್ತದೆ.

## ಭೂಮಾತ್ಮನಿರ್ದೇಶ, ಜ್ಞಾನಕ್ಕೆ ಫಲ

(ಉಪನಿಷತ್ತು)

**ಅಥಾತ ಆತ್ಮಾದೇಶ ಏವಾಽಽತ್ಮೈವಾಧಸ್ತಾದಾತ್ಮೋಪರಿಷ್ಟಾ
ದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ
ಆತ್ಮೈವೇದಗ್ಂ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ನೇವಂ
ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ
ಆತ್ಮಾನನ್ದಃ ಸ ಸ್ವರಾಡ್ ಭವತಿ ತಸ್ಯ ಸರ್ವೇಷು ಲೋಕೇಷು
ಕಾಮಚಾರೋ ಭವತಿ ಅಥ ಯೇಽನ್ಯಥಾತೋ ವಿದುರನ್ಯ**

---

1. 'ಇತ್ಯತೋಽನನ್ತರಮ್' ಎಂದು ಆ॥ ಪಾಠ ; 'ಇತಿ ಅಥಾತ ಅನನ್ತರಮ್' ಎಂದು ವಾ॥ ತೆ॥ ಪಾಠ. ನಾವು ಕೊಟ್ಟಿರುವ ಪಾಠವು ಭಾಷ್ಯಕ್ಕೂ ಮೂಲಕ್ಕೂ ಹೊಂದು ಗಡೆಯಾಗಿದೆ.

2. ಎಲ್ಲಿರುವ ಜೀವನು ಕಾಣುವದಿಲ್ಲವೋ-ಎಂಬ ವಾಕ್ಯದ ಅಕ್ಷರಾರ್ಥವನ್ನು ಹಿಡಿದರೆ, ಭೂಮದಲ್ಲಿ ಜೀವನು ಇರುತ್ತಾನೆಂದಾಗಿ ಭೂಮಜೀವರುಗಳು ಬೇರೆಬೇರೆಯೆಂದಾಗುತ್ತದೆ ; 'ಅದೇ ಕೆಳಗೆ' ಎಂಬ ವಾಕ್ಯದಲ್ಲಿ ಭೂಮವು ಜೀವನ ಕೆಳಗೆ ಇದೆಯೆಂದಾಗಿ ಆಗಲೂ ಭೂಮ ಜೀವರು ಬೇರೆಬೇರೆಯೆಂದು ಆಗುತ್ತಾರೆ.

3. ತನಗೆ ಪರೋಕ್ಷವಾಗಿರುವದು ತನಗಿಂತ ಬೇರೆಯಾಗಿರಬೇಕಷ್ಟೆ ?

4. 'ಅಹಂಕಾರಾದೇಶ ಏವ' ಎಂಬ ಏವಕಾರವನ್ನು ಭಾಷ್ಯದಲ್ಲಿ ಬಿಟ್ಟಿದೆ ; ಅಥವಾ ಬರೆದ[illegible] ಕೈಬಿಟ್ಟಿದ್ದಾರೆ.

**ರಾಜಾನಸ್ತೇ ಕ್ಷಯ್ಯಲೋಕಾ ಭವನ್ತಿ ತೇಷಾಗ್ಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ ॥ ೨ ॥**

೨. ಇನ್ನು ಆದ್ದರಿಂದ ಆತ್ಮಾದೇಶವೇ. ಆತ್ಮನೇ ಕೆಳಗೆ, ಆತ್ಮನೇ ಮೇಲೆ ; ಆತ್ಮನೇ ಹಿಂದೆ, ಆತ್ಮನೇ ಮುಂದೆ; ಆತ್ಮನೇ ಬಲಕ್ಕೆ, ಆತ್ಮನೇ ಎಡಕ್ಕೆ , ಆತ್ಮನೇ ಇದೆಲ್ಲವೂ. ಹೀಗೆಂದು ಕಂಡು ಕೊಂಡವನಾಗಿ, ಹೀಗೆ ಮನನಮಾಡಿ, ಹೀಗೆ ಅರಿತುಕೊಂಡ, ಅವನೇ ಆತ್ಮರತಿಯು, ಆತ್ಮಕ್ರೀಡನು, ಆತ್ಮಮಿಥುನನು, ಆತ್ಮಾನಂದನು. ಅವನು ಸ್ವರಾಜನಾಗುತ್ತಾನೆ, ಅವನಿಗೆ ಎಲ್ಲಾ ಲೋಕಗಳಲ್ಲಿಯೂ ಕಾಮಚಾರವಿರುತ್ತದೆ. ಇನ್ನು ಯಾರು ಇದಕ್ಕಿಂತ ಬೇರೆಯಾಗಿ ತಿಳಿದುಕೊಂಡಿರುವರೋ, (ಅವರು) ಮತ್ತೊಬ್ಬ ರಾಜನಿರುವವರು, ಅವರು ಕ್ಷಯ್ಯಲೋಕರಾಗುವರು. ಅವರಿಗೆ ಯಾವ ಲೋಕಗಳಲ್ಲಿಯೂ ಕಾಮಚಾರವಿರುವದಿಲ್ಲ.

## ಆತ್ಮಾದೇಶವೇತಕ್ಕೆ ?

(ಭಾಷ್ಯ)

೬೦೦. ಅಹಂಕಾರೇಣ ದೇಹಾದಿಸಂಘಾತೋಽಪಿ ಆದಿಶ್ಯತೇಽವಿವೇಕಿಭಿರಿತ್ಯತಃ, ತದಾಶಙ್ಕಾ ಮಾ ಭೂದಿತ್ಯತೋಽ[1]ಥಾನನ್ತರಮ್ ಆತ್ಮಾದೇಶಃ ಆತ್ಮನೈವ ಕೇವಲೇನ ಸತ್ಸ್ವರೂಪೇಣ ಶುದ್ಧೇನ ಆದಿಶ್ಯತೇ ಆತ್ಮೈವ ಸರ್ವತಃ ಸರ್ವಮಿತಿ ॥

(ಭಾಷ್ಯಾರ್ಥ)

ಅಹಂಕಾರದಿಂದ ದೇಹಾದಿಸಂಘಾತವನ್ನು ಅವಿವೇಕಿಗಳು ವ್ಯಪದೇಶ ಮಾಡುತ್ತಿರುತ್ತಾರಾದ್ದರಿಂದ ಅದೇ (ಭೂಮವೆಂಬ) ಆಶಂಕೆಯು ಆಗದಿರಲೆಂಬ ಆ ಕಾರಣದಿಂದ, ಇನ್ನು ಈ ಬಳಿಕ ಆತ್ಮಾದೇಶವು ಆತ್ಮನಿಂದಲೇ[2], ಕೇವಲ ಸದ್ರೂಪನಾದ ಶುದ್ಧ(ರೂಪನಾದ) ಆತ್ಮನಿಂದ, ಆತ್ಮನೇ ಎಲ್ಲಾಕಡೆಯಲ್ಲಿಯೂ ಎಲ್ಲವೂ ಆಗಿರುವನೆಂದು ಉಪದೇಶಮಾಡಲಾಗುವದು.

---

1. ಈ 'ಅತಃ' ಎಂಬ ಶಬ್ದವು ಭಾಷ್ಯದಲ್ಲಿ ಬಿಟ್ಟುಹೋಗಿದೆ.
2. ಆತ್ಮಾದೇಶ ವಿವ ಎಂಎ ವಿವಪಾಠಕ್ಕೆ ಇದು ಅರ್ಥವೆಂದು ಭಾವಿಸಬಹುದು.

# ಭೂಮಾತ್ಮಜ್ಞಾನಕ್ಕೆ ಫಲ

(ಭಾಷ್ಯ)

೬೦೧. ಏವವಮ್ ಏಕಮಜಂ ಸರ್ವತೋ ವ್ಯೋಮವತ್ ಪೂರ್ಣಮನ್ಯಶೂನ್ಯಂ ಪಶ್ಯನ್, ಸ ವಾ ಏಷ ವಿದ್ವಾನ್ ಮನನವಿಜ್ಞಾನಾಭ್ಯಾಮ್ । ಆತ್ಮರತಿಃ ಆತ್ಮನ್ಯೇವ ರತಿಃ ರಮಣಂ ಯಸ್ಯ ಸೋಽಯಮಾತ್ಮರತಿಃ । ತಥಾ ಆತ್ಮಕ್ರೀಡಃ । ದೇಹಮಾತ್ರಸಾಧನಾ ರತಿಃ, ಬಾಹ್ಯಸಾಧನಾ ಕ್ರೀಡಾ । ಲೋಕೇ ಸ್ತ್ರೀಭಿಃ ಸಖಿಭಿಶ್ಚ ಕ್ರೀಡತಿ ಇತಿ ದರ್ಶನಾತ್ । ನ ತಥಾ ವಿದುಷಃ, ಕಿಂ ತರ್ಹಿ ಆತ್ಮವಿಜ್ಞಾನನಿಮಿತ್ತಮೇವ ಉಭಯಂ ಭವತೀತ್ಯರ್ಥಃ । ಮಿಥುನಂ ದ್ವಂದ್ವಜನಿತಂ ಸುಖಮ್ । ತದಪಿ ದ್ವಂದ್ವನಿರಪೇಕ್ಷಮ್ ಅಸ್ಯ[1] ವಿದುಷಃ । ತಥಾ ಆತ್ಮಾನನ್ದಃ ಶಬ್ದಾದಿನಿಮಿತ್ತ ಆನನ್ದೋಽವಿದುಷಾಮ್ । ನ ತಥಾ ಅಸ್ಯ ವಿದುಷಃ, ಕಿಂ ತರ್ಹಿ ಆತ್ಮನಿಮಿತ್ತಮೇವ ಸರ್ವಂ ಸರ್ವದಾ ಸರ್ವಪ್ರಕಾರೇಣ ಚ । ದೇಹಜೀವಿತಭೋಗಾದಿನಿಮಿತ್ತಬಾಹ್ಯವಸ್ತುನಿರಪೇಕ್ಷ ಇತ್ಯರ್ಥಃ । ಸ ಏವಂಲಕ್ಷಣೋ ವಿದ್ವಾನ್ ಜೀವನ್ನೇವ ಸ್ವಾರಾಜ್ಯೇಽಭಿಷಿಕ್ತಃ ಪತಿತೇಽಪಿ ದೇಹೇ ಸ್ವರಾಡೇವ ಭವತಿ ।ಯತ ಏವಂ ಭವತಿ ತತ ಏವ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ । ಪ್ರಾಣಾದಿಷು ಪೂರ್ವಭೂಮಿಷು 'ತತ್ರಾಸ್ಯ' ಇತಿ ತಾವನ್ಮಾತ್ರಪರಿಚ್ಛಿನ್ನಕಾಮಚಾರತ್ವಮುಕ್ತಮ್ । ಅನ್ಯರಾಜತ್ವಂ ಚ ಅರ್ಥಪ್ರಾಪ್ತಮ್ । ಸಾತಿಶಯತ್ವಾತ್ । ಯಥಾಪ್ರಾಪ್ತಸ್ವಾರಾಜ್ಯಕಾಮಚಾರತ್ವಾನುವಾದೇನ ತತ್ತನ್ನಿವೃತ್ತಿರಿಹೋಚ್ಯತೇ ಸ ಸ್ವರಾಡ್ ಇತ್ಯಾದಿನಾ । ಅಥ ಪುನಃ ಯೇಽನ್ಯಥಾ ಅತಃ ಉಕ್ತದರ್ಶನಾತ್ ಅನ್ಯಥಾ ವೈಪರೀತ್ಯೇನ ಯಥೋಕ್ತಮೇವ ವಾ ಸಮ್ಯಙ್ನ ವಿದುಃ, ತೇಽನ್ಯರಾಜಾನೋ ಭವನ್ತಿ । ಅನ್ಯಃ ಪರೋ ರಾಜಾ ಸ್ವಾಮೀ ಯೇಷಾಂ ತೇ ಅನ್ಯರಾಜಾನಸ್ತೇ । ಕಿಂ ಚ ಕ್ಷಯ್ಯಲೋಕಾಃ ಕ್ಷಯ್ಯೋ ಲೋಕೋ ಯೇಷಾಂ ತೇ ಕ್ಷಯ್ಯಲೋಕಾಃ । ಭೇದದರ್ಶನಸ್ಯ ಅಲ್ಪವಿಷಯತ್ವಾತ್ । ಅಲ್ಪಂ ಚ ತನ್ಮರ್ತ್ಯಮ್ ಇತ್ಯವೋಚಾಮ । ತಸ್ಮಾದ್ ಯೇ ದ್ವೈತದರ್ಶಿನಃ ತೇ ಕ್ಷಯ್ಯಲೋಕಾಃ । ಸ್ವದರ್ಶನಾನುರೂಪ್ಯೇಣೈವ ಭವನ್ತಿ । ಅತ ಏವ ತೇಷಾಂ ಸರ್ವೇಷು ಲೋಕೇಷು ಅಕಾಮಚಾರೋ ಭವತಿ ॥

(ಭಾಷ್ಯಾರ್ಥ)

ಹೀಗೆ ಒಂದೂ ಜನ್ಮರಹಿತವೂ ಎಲ್ಲೆಲ್ಲಿಯೂ ಆಕಾಶದಂತೆ ತುಂಬಿಕೊಂಡಿರುವದೂ ಮತ್ತೊಂದಿಲ್ಲದ್ದೂ ಆಗಿರುವ (ಆತ್ಮನನ್ನು) ಮನನವಿಜ್ಞಾನಗಳಿಂದ ಕಂಡುಕೊಂಡಿರುವ ಆ ಈ ಜ್ಞಾನಿಯು ಆತ್ಮರತಿಯು , ಆತ್ಮನಲ್ಲಿಯೇ ರತಿಯು, ಎಂದರೆ ರಮಿಸುವದು, ಯಾವನಿಗಿರುವದೋ ಆ ಈತನು ಆತ್ಮರತಿಯು. ಇದರಂತೆ ಆತ್ಮ

1 ಯಸ್ಯ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಕ್ರೀಡನು , ದೇಹವೊಂದನ್ನೇ ಸಾಧನವಾಗಿಟ್ಟುಕೊಂಡು (ಆಡುವದು) ರತಿಯು, ಹೊರಗಿನ ಸಾಧನವನ್ನು (ಇಟ್ಟುಕೊಂಡು ಆಡುವದು) ಕ್ರೀಡೆ. 'ಸ್ತ್ರೀಯರೊಡನೆ ಯೂ ಸ್ನೇಹಿತರೊಡನೆಯೂ ಕ್ರೀಡಿಸುತ್ತಿದಾನೆ' ಎಂದು ಲೋಕದಲ್ಲಿ (ಪ್ರಯೋಗ ಮಾಡುವದು) ಕಂಡುಬಂದಿರುವದರಿಂದ (ಹೀಗೆ ಅರ್ಥವನ್ನು ಮಾಡಬೇಕು. ಆದರೆ) ಜ್ಞಾನಿಗೆ ಹೀಗಲ್ಲ , ಮತ್ತೇನೆಂದರೆ ಆತ್ಮವಿಜ್ಞಾನನಿಮಿತ್ತವಾಗಿಯೇ (ರತಿ, ಕ್ರೀಡೆ-) ಇವೆರಡೂ ಆಗುತ್ತವೆ ಎಂದರ್ಥ. ಮಿಥುನವೆಂದರೆ ದ್ವಂದ್ವನಿಮಿತ್ತ ದಿಂದಾಗುವ ಸುಖವು , ಅದೂ ಈ ಜ್ಞಾನಿಗೆ ದ್ವಂದ್ವದ ಅಪೇಕ್ಷೆಯಿಲ್ಲದೆಯೇ ಆಗುತ್ತದೆ. ಮತ್ತು ಆತ್ಮಾನಂದನು, ಅಜ್ಞಾನಿಗಳಿಗೆ ಶಬ್ದಾದಿನಿಮಿತ್ತದಿಂದ ಆನಂದವಾಗುತ್ತದೆ, ಈ ಜ್ಞಾನಿಗೆ ಹಾಗಲ್ಲ, ಮತ್ತೇನೆಂದರೆ ಆತ್ಮನಿಮಿತ್ತವಾಗಿಯೇ ಎಲ್ಲವೂ ಯಾವಾಗಲೂ ಎಲ್ಲಾ ಪ್ರಕಾರದಿಂದಲೂ (ಆಗುವದು). ದೇಹವು ಬದುಕಿರುವದು, ಭೋಗ– ಇವೇ ಮುಂತಾದದ್ದಕ್ಕೆ ಬೇಕಾದ ಹೊರಗಿನ ವಸ್ತುಗಳ ಅಪೇಕ್ಷೆಯಿಲ್ಲದವನು ಎಂದರ್ಥ. **ಇಂಥ ಲಕ್ಷಣದವನಾದ ಈ ಜ್ಞಾನಿಯು ಬದುಕಿರುವಾಗಲೇ ಸ್ವಾರಾಜ್ಯದಲ್ಲಿ ಅಭಿಷಿಕ್ತನಾಗಿದ್ದು ದೇಹವು ಬಿದ್ದ ಬಳಿಕವೂ ಸ್ವರಾಜನೇ ಆಗಿರುವನು.**[1] ಹೀಗಿರುವದಷ್ಟೆ, ಆದ್ದರಿಂದಲೇ ಅವನಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುತ್ತದೆ. ಪ್ರಾಣತ್ವವೇ ಮುಂತಾದ ಹಿಂದಿನ ಭೂಮಿಕೆಗಳಲ್ಲಿ 'ಅಲ್ಲಿ ಅವನಿಗೆ' ಎಂದು ಪರಿಚ್ಛಿನ್ನವಾದ ಕಾಮಚಾರತ್ವವನ್ನು ಹೇಳಿರುತ್ತದೆ.[2] (ಅಲ್ಲಿ) ಮತ್ತೊಬ್ಬ ರಾಜನಿರುವನೆಂಬುದೂ ಅರ್ಥವಶದಿಂದ ಪ್ರಾಪ್ತವಾಗಿರುತ್ತದೆ.[3] ಏಕೆಂದರೆ ಅವು ಸಾತಿಶಯವಾಗಿರು ತ್ತವೆ.[4] ತಾನೇ ಬಂದೊದಗಿರುವ ಕಾಮಚಾರತ್ವಪ್ರಾಪ್ತಿಯನ್ನು ಅನುವಾದ ಮಾಡಿಕೊಂಡು ಆಯಾ (ಕಾಮಚಾರತ್ವದ) ನಿವೃತ್ತಿಯನ್ನು 'ಅವನು ಸ್ವರಾಜ ನಾಗುವನು'– ಎಂದು ಮುಂತಾದ್ದರಿಂದ ಇಲ್ಲಿ ಹೇಳಿದೆ.[5]

---

1. ಈಗಿರುವ ಸ್ಥಿತಿಯೇ ಬೇರೆ, ಸತ್ತಮೇಲೆ ಬೇರೆ ಎಂಬುದಿಲ್ಲ ಎಂದರ್ಥ. ಬೃ. ಭಾ. ೪–೪–೬, ಭಾ. ಭಾ. ೨೭೧ನ್ನು ನೋಡಿ.

2. ಆಯಾ ಕ್ಷೇತ್ರದಲ್ಲಿ ಮಾತ್ರ ಕಾಮಚಾರವಿರುತ್ತದೆ , ಉದಾಹರಣೆಗೆ ನಾಮಬ್ರಹ್ಮ ಜ್ಞಾನಿಗೆ ನಾಮಕ್ಷೇತ್ರದಲ್ಲಿ ಮಾತ್ರವೇ ಕಾಮಚಾರವಿರುವದು, ಅದಕ್ಕಿಂತ ಹೆಚ್ಚಿನದಾದ ವಾಕ್ಕಿನ ಕ್ಷೇತ್ರದಲ್ಲಿ ಅವನಿಗೆ ಕಾಮಚಾರಿತ್ವವಿಲ್ಲ.

3. ಮತ್ತೊಬ್ಬರಿಗೆ ಅವನು ವಶವಾಗುತ್ತಾನೆ ಎಂದು ಆಯಾ ವಾಕ್ಯದಿಂದ ಹೇಳಿ ದಿದ್ದರೂ ಅರ್ಥದಿಂದ ಹಾಗೆಂದು ಸಿದ್ಧವಾಗುತ್ತದೆ.

4. ಅವಕ್ಕಿಂತ ಹೆಚ್ಚಿನದುಂಟು.

5. ಇಷ್ಟಿಷ್ಟು ಕ್ಷೇತ್ರದಲ್ಲಿ ಅವನಿಗೆ ಕಾಮಚಾರತ್ವವಿರುತ್ತವೆ ಎಂದು ಹೇಳಿದ್ದ ಅವಧಿ ಯನ್ನು ಇಲ್ಲಿ ಅಲ್ಲಗಳೆದಿದೆ ಎಂದರ್ಥ.

ಇನ್ನು ಇದಕ್ಕಿಂತ (ಇಲ್ಲಿ) ಹೇಳಿರುವ (ಭೂಮ)ದರ್ಶನಕ್ಕಿಂತ ಬೇರೆಯಾಗಿ ಇದಕ್ಕೆ ವಿಪರೀತವಾಗಿ,[1] (ತಿಳಿದುಕೊಂಡಿರುವರೋ) ಅಥವಾ (ಈ) ಹೇಳಿದ್ದನ್ನೇ ಚೆನ್ನಾಗಿ ಯಾರು ತಿಳಿದುಕೊಂಡಿಲ್ಲವೋ, ಅವರು ಅನ್ಯರಾಜರಾಗುವರು. ಅನ್ಯನು ಎಂದರೆ ಮತ್ತೊಬ್ಬನು ಯಾರಿಗೆ ರಾಜನೋ ಒಡೆಯನೋ ಅವರು ಅನ್ಯ ರಾಜರು , (ಅಂಥ ಅನ್ಯರಾಜ)ರಾಗುವರು. ಮತ್ತು ಕ್ಷಯ್ಯಲೋಕರಾಗುವರು. ನಾಶವಾಗುವ ಲೋಕವು ಯಾರದೋ ಅವರು ಕ್ಷಯ್ಯಲೋಕರು , ಏಕೆಂದರೆ ಭೇದದರ್ಶನವು ಅಲ್ಪವಿಷಯವುಳ್ಳದ್ದಾಗಿರುತ್ತದೆ.[2] ಅಲ್ಪವಾದದ್ದು ಮರ್ತ್ಯವು ಎಂದು ಹೇಳಿದೆವಲ್ಲವೆ ? ಆದ್ದರಿಂದ ಯಾರು ದ್ವೈತವನ್ನು ಕಾಣುತ್ತಿರುವರೋ ಅವರು ಕ್ಷಯ್ಯಲೋಕರು, ತಮ್ಮ ಜ್ಞಾನಕ್ಕೆ ಅನುಗುಣವಾಗಿಯೇ (ನಾಶವಾಗುವ ಲೋಕವುಳ್ಳವರು) ಆಗುತ್ತಾರೆ. ಆದ್ದರಿಂದಲೇ ಅವರಿಗೆ ಲೋಕಗಳಲ್ಲಿಯೂ ಅಕಾಮಚಾರವಿರುತ್ತದೆ.

---

# ಏಳನೆಯ ಅಧ್ಯಾಯ-ಇಪ್ಪತ್ತಾರನೆಯ ಖಂಡ

( ಭೂಮವಿದ್ಯೆ )

## ಆತ್ಮನಿಂದಲೇ ಇದೆಲ್ಲವೂ

(ಉಪನಿಷತ್ತು)

**ತಸ್ಯ ಹ ವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿಜಾನತ ಆತ್ಮತಃ ಪ್ರಾಣ ಆತ್ಮತ ಆಶಾಽಽತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವತಿರೋಭಾವಾವಾತ್ಮತೋಽನ್ನಮಾತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನಮಾತ್ಮತಶ್ಚಿತ್ತಮಾತ್ಮತಃ ಸಂಕಲ್ಪ ಆತ್ಮತೋ ಮನ ಆತ್ಮತೋ ವಾಗಾತ್ಮತೋ ನಾಮಾಽಽತ್ಮತೋ ಮನ್ತ್ರಾ ಆತ್ಮತಃ ಕರ್ಮಾಣ್ಯಾತ್ಮತ ಏವೇದಗ್‌ಂ ಸರ್ವಮಿತಿ ॥ ೧ ॥**

೧. ಹೀಗೆ ಕಂಡುಕೊಂಡಿರುವ, ಹೀಗೆ ಮನನಮಾಡಿರುವ, ಹೀಗೆ ಅರಿತುಕೊಂಡಿರುವ ಆ ಈತನಿಗೆ ಆತ್ಮನಿಂದಲೇ ಪ್ರಾಣವು,

---

1. ಎಂದರೆ ಮತ್ತೊಂದನ್ನು ಕಾಣುವದು, ಕೇಳುವದು– ಮುಂತಾಗಿ ಭಿನ್ನದೃಷ್ಟಿಗಳಾಗಿ ಎಂದರ್ಥ.

2. ಪರಿಚ್ಛಿನ್ನವಿಷಯವುಳ್ಳದ್ದಾಗಿರುತ್ತದೆ.

ಆತ್ಮನಿಂದಲೇ ಆಶೆ, ಆತ್ಮನಿಂದಲೇ ಸ್ಮರವು, ಆತ್ಮನಿಂದಲೇ ಆಕಾಶವು, ಆತ್ಮನಿಂದಲೇ ತೇಜಸ್ಸು, ಆತ್ಮನಿಂದಲೇ ಅಪ್ಪು, ಆತ್ಮನಿಂದಲೇ ಆವಿರ್ಭಾವತಿರೋಭಾವಗಳು, ಆತ್ಮನಿಂದಲೇ ಅನ್ನವು, ಆತ್ಮನಿಂದಲೇ ಬಲವು, ಆತ್ಮನಿಂದಲೇ ವಿಜ್ಞಾನವು, ಆತ್ಮನಿಂದಲೇ ಧ್ಯಾನವು, ಆತ್ಮನಿಂದಲೇ ಚಿತ್ತವು, ಆತ್ಮನಿಂದಲೇ ಸಂಕಲ್ಪವು, ಆತ್ಮನಿಂದಲೇ ಮನಸ್ಸು, ಆತ್ಮನಿಂದಲೇ ವಾಕ್ಕು, ಆತ್ಮನಿಂದಲೇ ನಾಮವು, ಆತ್ಮನಿಂದಲೇ ಮಂತ್ರಗಳು, ಆತ್ಮನಿಂದಲೇ ಕರ್ಮಗಳು, ಆತ್ಮನಿಂದಲೇ ಇದೆಲ್ಲವೂ.

## ಜ್ಞಾನಿಗೆ ಎಲ್ಲಾ ವ್ಯವಹಾರವೂ ಆತ್ಮನಿಂದಲೇ

(ಭಾಷ್ಯ)

೬೦೨. ತಸ್ಯ ಹ ವಾ ಏತಸ್ಯೇತ್ಯಾದಿ । ಸ್ವಾರಾಜ್ಯಂ ಪ್ರಾಪ್ತಸ್ಯ ಪ್ರಕೃತಸ್ಯ ವಿದುಷಃ ಇತ್ಯರ್ಥಃ । ಪ್ರಾಕ್ ಸದಾತ್ಮವಿಜ್ಞಾನಾತ್ ಸ್ವಾತ್ಮನೋಽನ್ಯಸ್ಮಾತ್ ಸತಃ ಪ್ರಾಣಾದೇರ್ನಾಮಾನ್ತಸ್ಯ ಉತ್ಪತ್ತಿಪ್ರಲಯೌ ಅಭೂತಾಮ್ । ಸದಾತ್ಮವಿಜ್ಞಾನೇ ತು ಸತಿ ಇದಾನೀಂ ಸ್ವಾತ್ಮತ ಏವ ಸಂವೃತ್ತೌ । ತಥಾ ಸರ್ವೋಽಪ್ಯನ್ಯೋ ವ್ಯವಹಾರಃ ಆತ್ಮತ ಏವ ವಿದುಷಃ ॥

(ಭಾಷ್ಯಾರ್ಥ)

'ತಸ್ಯ ಹ ವಾ ಏತಸ್ಯ' ಮುಂತಾದ (ಕಂಡಿಕೆಯ ಅಭಿಪ್ರಾಯವಿದು. ಆ ಈತನಿಗೆ ಎಂದರೆ) ಸ್ವಾರಾಜ್ಯವನ್ನು ಹೊಂದಿದ ಪ್ರಕೃತನಾದ ಜ್ಞಾನಿಗೆ ಎಂದರ್ಥ. ಸದ್ರೂಪನಾದ ಆತ್ಮನ ವಿಜ್ಞಾನವುಂಟಾಗುವ ಮುಂಚೆ ತನ್ನ ಆತ್ಮನಾದ ಸತ್ತಿಗಿಂತ ಬೇರೆಯಾಗಿದ್ದ (ತತ್ತ್ವದಿಂದ) ಪ್ರಾಣಾದಿನಾಮಾಂತವಾದ (ವಸ್ತು)ಗಳ ಉತ್ಪತ್ತಿ ಪ್ರಲಯಗಳುಂಟಾಗುತ್ತಿದ್ದವು. ಸದಾತ್ಮನ ವಿಜ್ಞಾನವುಂಟಾಗಲಾಗಿ ಈಗ (ಅವು) ತನ್ನ ಆತ್ಮನಿಂದಲೇ ಎಂದಾದವು. ಹೀಗೆಯೇ ಮಿಕ್ಕ ಎಲ್ಲಾ ವ್ಯವಹಾರವೂ ಜ್ಞಾನಿಗೆ ಆತ್ಮನಿಂದಲೇ (ಆಗುತ್ತಿರುವದು).[1]

---

1. ಪ್ರಾಣಾದಿನಾಮಾಂತವಾದ ತತ್ತ್ವಗಳು ಬೇರೆಬೇರೆಯೆಂದೂ ಅವುಗಳಿಂದ ಹಿಂದು ಹಿಂದಿನ ತತ್ತ್ವಗಳು ವ್ಯಾಪ್ತವಾಗಿ ಅವಕ್ಕಿಂತ ಸ್ಥೂಲತರವಾಗಿರುವವೆಂದೂ ದ್ವೈತದೃಷ್ಟಿಯಿಂದ ಆಗಿತ್ತು. ಆಗ ಅವುಗಳು ತನಗಿಂತ ವ್ಯತಿರಿಕ್ತವಾದ ಬೇರೆಯಾದ ಜಗತ್ಕಾರಣದಿಂದ ಉಂಟಾಗಿವೆ ಎಂಬ ತಪ್ಪುತಿಳಿವಳಿಕೆಯಿತ್ತು. ಆತ್ಮಜ್ಞಾನವುಂಟಾದಮೇಲೆ ತನ್ನ ಸ್ವರೂಪಕ್ಕಿಂತ ಅನ್ಯವಾಗಿ ಯಾವದೊಂದೂ ಇಲ್ಲವಾದ್ದರಿಂದ ಪ್ರಾಣಾದಿಗಳ ಉತ್ಪತ್ತಿಪ್ರಲಯಗಳು ತನ್ನ ಆತ್ಮನಿಂದಲೇ ಆಗುತ್ತವೆಯೆಂಬ ಅರಿವಾಯಿತು. ಕ್ರಿಯಾಕಾರಕಫಲವ್ಯವಹಾರವೆಲ್ಲವೂ ಆತ್ಮನ ಆಧಾರದಿಂದಲೇ ತೋರುತ್ತಿರುವವೆಂದೂ ಅವಕ್ಕೆ ಆತ್ಮನಿಗಿಂತ ಬೇರೆಯಾದ ಇರವು ಇಲ್ಲವೆಂದೂ ತಿಳಿಯಬಂತು

# ಆತ್ಮಜ್ಞಾನದ ಮಹಿಮೆಯೂ ಸಾಧನವೂ

(ಉಪನಿಷತ್ತು)

**ತದೇಷ ಶ್ಲೋಕೋ ನ ಪಶ್ಯೋ ಮೃತ್ಯುಂ ಪಶ್ಯತಿ ನ ರೋಗಂ ನೋತ ದುಃಖತಾಗ್ಂ ಸರ್ವಗ್ಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶ ಇತಿ । ಸ ಏಕಧಾ ಭವತಿ ತ್ರಿಧಾ ಭವತಿ ಪಞ್ಚಧಾ ಸಪ್ತಧಾ ನವಧಾ ಚೈವ ಪುನಶ್ಚೈಕಾದಶಃ ಸ್ಮೃತಃ ಶತಂ ಚ ದಶ ಚೈಕಶ್ಚ ಸಹಸ್ರಾಣಿ ಚ ವಿಂಶತಿರಾಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ಸ್ಮೃತಿಲಮ್ಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಸ್ತಸ್ಮೈ ಮೃದಿತಕಷಾಯಾಯ ತಮಸಸ್ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಸ್ತಗ್ಂ ಸ್ಕನ್ದ ಇತ್ಯಾಚಕ್ಷತೇ ತಗ್ಂ ಸ್ಕನ್ದ ಇತ್ಯಾಚಕ್ಷತೇ ॥ ೨ ॥**

೨. ಅಲ್ಲಿ ಈ ಶ್ಲೋಕವು : "ಪಶ್ಯನು ಮೃತ್ಯುವನ್ನು ಕಾಣುವದಿಲ್ಲ, ರೋಗವನ್ನು (ಕಾಣು)ವದಿಲ್ಲ, ದುಃಖತ್ವವನ್ನು (ಕಾಣು)ವದಿಲ್ಲ. ಪಶ್ಯನು ಎಲ್ಲವನ್ನೂ ಕಾಣುತ್ತಾನೆ, ಸರ್ವಥಾ ಸರ್ವವನ್ನೂ ಪಡೆದುಕೊಳ್ಳುತ್ತಾನೆ.'' ಅವನು ಒಂದೇತೆರನಾಗಿರುತ್ತಾನೆ. ಮೂರು ಬಗೆಯಾಗುತ್ತಾನೆ, ಐದು ಬಗೆ, ಏಳು ಬಗೆ, ಒಂಬತ್ತು ಬಗೆ, ಮತ್ತೆ ಹನ್ನೊಂದು ಬಗೆಯೆನಿಸುವನು; ನೂರು, ಹತ್ತು, ಒಂದು, ಸಾವಿರ, ಇಪ್ಪತ್ತು. ಆಹಾರಶುದ್ಧಿಯಾಗಲು ಸತ್ತ್ವಶುದ್ಧಿ, ಸತ್ತ್ವಶುದ್ಧಿಯಾಗಲು ನಿತ್ಯವಾದ ಸ್ಮೃತಿ, ಸ್ಮೃತಿಲಂಭವಾದರೆ ಎಲ್ಲಾ ಗ್ರಂಥಿಗಳ ವಿಪ್ರಮೋಕ್ಷ. ಆ ಮೃದಿತಕಷಾಯನಿಗೆ ಭಗವಂತನಾದ ಸನತ್ಕುಮಾರನು ತಮಸ್ಸಿನ ಆಚೆಯ ದಡವನ್ನು ತೋರಿಸಿಕೊಡುತ್ತಾನೆ. ಆತನನ್ನು ಸ್ಕಂದನೆಂದು ಕರೆಯುತ್ತಾರೆ. ಆತನನ್ನು ಸ್ಕಂದನೆಂದು ಕರೆಯುತ್ತಾರೆ.

## ಜ್ಞಾನದ ಹೆಚ್ಚುಗಾರಿಕೆ

(ಭಾಷ್ಯ)

**೬೦೩. ಕಿಂಚ ತದೇತಸ್ಮಿನ್ ಅರ್ಥೇ ಏಷ ಶ್ಲೋಕೋ ಮನ್ತ್ರೋಽಪಿ ಭವತಿ । ನ ಪಶ್ಯಃ । ಪಶ್ಯತೀತಿ ಪಶ್ಯಃ । ಯಥೋಕ್ತದರ್ಶೀ ವಿದ್ವಾನಿತ್ಯರ್ಥಃ । ಮೃತ್ಯುಂ ಮರಣಂ ರೋಗಂ ಜ್ವರಾದಿದುಃಖತಾಂ ದುಃಖಭಾವಂ ಚಾಪಿ ನ**

ಪಶ್ಯತಿ। ಸರ್ವಂ ಹ ಸರ್ವಮೇವ ಸ ಪಶ್ಯಃ ಪಶ್ಯತಿ । ಆತ್ಮಾನಮೇವ ಸರ್ವಮ್ । ತತಃ ಸರ್ವಮ್ ಆಪ್ನೋತಿ ಸರ್ವಶಃ ಸರ್ವಪ್ರಕಾರೈರಿತಿ । ಕಿಂಚ ಸ ವಿದ್ವಾನ್ ಪ್ರಾಕ್ ಸೃಷ್ಟಿಪ್ರಭೇದಾತ್ ಏಕಧೈವ ಭವತಿ, ಏಕಧೈವ ಚ ಸನ್ ತ್ರಿಧಾದಿಭೇದೈರನನ್ತಭೇದಪ್ರಕಾರೋ ಭವತಿ ಸೃಷ್ಟಿಕಾಲೇ। ಪುನಃ ಸಂಹಾರಕಾಲೇ ಮೂಲಮೇವ ಸ್ವಂ ಪಾರಮಾರ್ಥಿಕಮ್ ಏಕಧಾಭಾವಂ ಪ್ರತಿಪದ್ಯತೇ ಸ್ವತನ್ತ್ರ ಏವ ಇತಿ ವಿದ್ಯಾಂ ಫಲೇನ ಪ್ರರೋಚಯನ್ ಸ್ತೌತಿ ॥

(ಭಾಷ್ಯಾರ್ಥ)

ಮತ್ತು ಅಲ್ಲಿ ಈ ಅರ್ಥದಲ್ಲಿ ಈ ಶ್ಲೋಕವು ಎಂದರೆ ಮಂತ್ರವೂ ಇರುತ್ತದೆ: ಪಶ್ಯನು- ನೋಡುತ್ತಾನಾದ್ದರಿಂದ ಪಶ್ಯನು, ಮೇಲೆ ಹೇಳಿದ (ತತ್ತ್ವವನ್ನು) ಕಂಡುಕೊಂಡ ಜ್ಞಾನಿಯು ಎಂದರ್ಥ.- ಮೃತ್ಯುವನ್ನೂ ಸಾವನ್ನೂ (ಕಾಣುವದಿಲ್ಲ), ಜ್ವರವೇ ಮುಂತಾದ ರೋಗವನ್ನೂ ದುಃಖತ್ವವನ್ನೂ ದುಃಖಭಾವವನ್ನೂ ಕಾಣುವದಿಲ್ಲ. ಎಲ್ಲವನ್ನೂ- ಎಲ್ಲವೂ ಆಗಿರುವ ಆತ್ಮನನ್ನೇ ಎಲ್ಲವೆಂದು ಆ ಪಶ್ಯನು- ಕಾಣುತ್ತಾನೆ. ಅದರಿಂದ ಎಲ್ಲವನ್ನೂ ಸರ್ವಥಾ ಎಂದರೆ ಎಲ್ಲಾ ಪ್ರಕಾರಗಳಿಂದಲೂ ಪಡೆದುಕೊಳ್ಳುತ್ತಾನೆ (ಎಂಬುದು ಮಂತ್ರವು).

ಮತ್ತು ಆ ಜ್ಞಾನಿಯು ಸೃಷ್ಟಿಯ ಒಳಭೇದವು ಉಂಟಾಗುವದಕ್ಕೆ ಮುಂಚೆ ಒಂದೇ ತೆರನಾಗಿಯೇ ಇದ್ದು ಸೃಷ್ಟಿಕಾಲದಲ್ಲಿ ಮೂರು ಬಗೆಯೇ ಮುಂತಾದ ಅನಂತಭೇದಪ್ರಕಾರಗಳುಳ್ಳವನಾಗುತ್ತಾನೆ. ಮತ್ತೆ ಸಂಹಾರಕಾಲದಲ್ಲಿ ಮೂಲವಾಗಿರುವ ತನ್ನ ಪಾರಮಾರ್ಥಿಕವಾದ ಏಕಧಾಭಾವವನ್ನೇ ಸ್ವತಂತ್ರವಾಗಿ ಹೊಂದುತ್ತಾನೆ[1] -ಎಂದು ವಿದ್ಯೆಯನ್ನು ಫಲೋಕ್ತಿಯಿಂದ ಸವಿಗೊಳಿಸಿ ಹೊಗಳುತ್ತಿದಾನೆ.

## ಜ್ಞಾನಕ್ಕೆ ಸಾಧನ

(ಭಾಷ್ಯ)

೭೦೪. ಅಥೇದಾನೀಂ ಯಥೋಕ್ತಾಯಾ ವಿದ್ಯಾಯಾಃ ಸಮ್ಯಗವಭಾಸಕಾರಣಂ ಮುಖಾವಭಾಸಕಾರಣಸ್ಯೇವ ಆದರ್ಶಸ್ಯ ವಿಶುದ್ಧಿಕಾರಣಂ ಸಾಧನಮ್ ಉಪದಿಶ್ಯತೇ । ಆಹಾರಶುದ್ಧೌ । ಆಹ್ರಿಯತ ಇತ್ಯಾಹಾರಃ ಶಬ್ದಾದಿವಿಷಯವಿಜ್ಞಾನಂ ಭೋಕ್ತುರ್ಭೋಗಾಯ ಆಹ್ರಿಯತೇ । ತಸ್ಯ ವಿಷಯೋಪಲಬ್ಧಿಲಕ್ಷಣಸ್ಯ ವಿಜ್ಞಾನಸ್ಯ ಶುದ್ಧಿರಾಹಾರಶುದ್ಧಿಃ । ರಾಗದ್ವೇಷಮೋಹದೋಷೈರಸಂಸ್ಪೃಷ್ಟಂ[2] ವಿಷಯವಿಜ್ಞಾನಮ್ ಇತ್ಯರ್ಥಃ। ತಸ್ಯಾಮ್ ಆಹಾರಶುದ್ಧೌ ಸತ್ಯಾಂ ತದ್ವತೋಽನ್ತಃಕರಣಸ್ಯ ಸತ್ತ್ವಸ್ಯ ಶುದ್ಧಿಃ, ನೈರ್ಮಲ್ಯಂ ಭವತಿ। ಸತ್ತ್ವಶುದ್ಧೌ ಚ ಸತ್ಯಾಂ ಯಥಾವಗತೇ ಭೂಮಾತ್ಮನಿ ಧ್ರುವಾ ಅವಿಚ್ಛಿನ್ನಾ ಸ್ಮೃತಿಃ,

1. ಮತ್ತೊಂದು ತತ್ತ್ವದ ನಿಮಿತ್ತದಿಂದ ಹೀಗೆ ಏಕಧಾಭಾವವೂ ಅನಂತಭೇದಭಾವವೂ ಉಂಟಾಗುವದಿಲ್ಲ. 2. 'ಸಂಸ್ಪೃಷ್ಟಮ್' ಎಂಬದಕ್ಕಿಂತ ಈ ಪಾಠವು ಮೇಲು.

ಅವಿಸ್ಮರಣಂ ಭವತಿ | ತಸ್ಯಾಂ ಚ ಲಬ್ಧಾಯಾಂ ಸ್ಮೃತಿಲಮ್ಭೇ ಸತಿ ಸರ್ವೇಷಾಮ್ ಅವಿದ್ಯಾಕೃತಾನರ್ಥಪಾಶರೂಪಣಾಮ್ ಅನೇಕಜನ್ಮಾನ್ತರಾನುಭವಭಾವನಾ ಕಠಿನೀಕೃತಾನಾಂ ಹೃದಯಾಶ್ರಯಾಣಾಂ ಗ್ರನ್ಥೀನಾಂ ವಿಪ್ರಮೋಕ್ಷಃ ವಿಶೇಷೇಣ ಪ್ರಮೋಕ್ಷಣಂ ವಿನಾಶೋ ಭವತಿ[1] | ಯತ ಏತದುತ್ತರೋತ್ತರಂ ಯಥೋಕ್ತಮ್ ಆಹಾರಶುದ್ಧಿಮೂಲಂ ತಸ್ಮಾತ್ ಸಾ ಕಾರ್ಯೇತ್ಯರ್ಥಃ ||

(ಭಾಷ್ಯಾರ್ಥ)

ಇನ್ನು ಈಗ ಮೇಲೆ ಹೇಳಿರುವ ವಿದ್ಯೆಯು ಚೆನ್ನಾಗಿ ತೋರಿಕೊಳ್ಳುವದಕ್ಕೆ ಕಾರಣವಾದ (ಸಾಧನ)ವನ್ನು– ಮುಖವು ತೋರಿಕೊಳ್ಳುವದಕ್ಕೆ ಕಾರಣವಾಗಿರುವ ಕನ್ನಡಿಯ ವಿಶುದ್ಧಿ ಕಾರಣವಾದ ಸಾಧನದಂತಿರುವ (ಚಿತ್ತಶುದ್ಧಿ ಸಾಧನವನ್ನು)– ಉಪದೇಶಮಾಡಲಾಗುತ್ತದೆ : ಆಹಾರಶುದ್ಧಿಯಾಗಲು– ಆಹಾರವೆಂದರೆ ಆಹರಣಮಾಡಲ್ಪಡುವಿಕೆ ಶಬ್ದಾದಿವಿಷಯಗಳ ಅರಿವು ; ಭೋಕ್ತೃವಿನ ಭೋಗಕ್ಕಾಗಿ ತರಲ್ಪಡುತ್ತಿರುವದಲ್ಲ. (ಅದು) ಆ ವಿಷಯಗಳ ಅರಿವಿನ ರೂಪವಾದ ವಿಜ್ಞಾನದ ಶುದ್ಧಿಯೇ ಆಹಾರಶುದ್ಧಿಯು. ರಾಗದ್ವೇಷ ಮೋಹಗಳೆಂಬ ದೋಷಗಳ ಸಂಬಂಧವಿಲ್ಲದ ವಿಷಯವಿಜ್ಞಾನವು ಎಂದರ್ಥ. ಆ ಆಹಾರಶುದ್ಧಿಯುಂಟಾಗಲಾಗಿ– ಅದನ್ನುಳ್ಳ ಅಂತಃಕರಣವೆಂಬ ಸತ್ತ್ವದ ಶುದ್ಧಿಯು, ನೈರ್ಮಲ್ಯವು, ಉಂಟಾಗುವದು– ಮತ್ತು ಸತ್ತ್ವಶುದ್ಧಿಯಾಗಲಾಗಿ ಹಿಂದೆ ಗೊತ್ತುಪಡಿಸಿರುವ ಭೂಮಾತ್ಮನಲ್ಲಿ ಧ್ರುವವಾದ, ಕಡಿವಡೆಯದ, ಸ್ಮೃತಿಯು ಎಂದರೆ ಅವಿಸ್ಮರಣವು,[2] ಉಂಟಾಗುವದು. ಅದು ದೊರಕುವದೆಂಬ ಸ್ಮೃತಿಲಂಭವಾದರೆ, ಅವಿದ್ಯೆಯಿಂದಾದ ಅನರ್ಥಪಾಶಗಳ ರೂಪವಾಗಿರುವ, ಅನೇಕಜನ್ಮಾಂತರಗಳ ಅನುಭವದಿಂದ ಭಾವನೆಮಾಡಿಮಾಡಿ ಗಟ್ಟಿಯಾಗಿ ಹೃದಯವನ್ನು ಆಶ್ರಯಿಸಿಕೊಂಡಿರುವ ಗ್ರಂಥಿಗಳೆಲ್ಲವುಗಳ ವಿಪ್ರಮೋಕ್ಷವು, ಚೆನ್ನಾಗಿ ಬಿಚ್ಚಿಕೊಳ್ಳುವದು, ವಿನಾಶವು ಆಗುವದು.[3] ಹೀಗೆ ಮೇಲೆ ಹೇಳಿರುವ ಈ (ಸತ್ತ್ವಶುದ್ಧಿಯೇ) ಮುಂತಾದವು ಒಂದಾದಮೇಲೊಂದು (ಆಗುವದಕ್ಕೆ) ಆಹಾರಶುದ್ಧಿಯೇ ಮೂಲವಾಗಿರುವದರಿಂದ ಅದನ್ನು ಮಾಡಿಕೊಳ್ಳಬೇಕು ಎಂದರ್ಥ

---

1 ಇಲ್ಲಿ 'ಭವತೀತಿ' ಎಂದಿರುವ ಅಚ್ಚಿನಪಾಠದಲ್ಲಿ ಇತಿ ಬೇಕಿಲ್ಲವೆಂದು ಬಿಟ್ಟಿದೆ.

2. ಅನುಸಂಧಾನಮಾಡುತ್ತಲೇ ಇರುವದು ಎಂದರ್ಥ 'ಅನುಸ್ಮರಣಮ್' ಎಂಬ ಪಾಠದಲ್ಲಿ ಅನುಸ್ಮರಣವು, ಎಂದರೆ ಶಾಸ್ತ್ರಾಚಾರ್ಯೋಪದೇಶದಿಂದುಂಟಾಗುವ ನಿತ್ಯಜ್ಞಾನವು ಎಂದರ್ಥ. ಆತ್ಮಜ್ಞಾನವುಂಟಾದ ಬಳಿಕ ಆತ್ಮಸ್ಮೃತಿಸಂತಾನವನ್ನೇನೂ ಮಾಡಬೇಕಾದದ್ದಿಲ್ಲ, ಅದು ತಾನೇ ಪ್ರಾಪ್ತವಾಗಿರುತ್ತದೆ ಎಂಬುದಕ್ಕೆ ಬೃ ಭಾ ೧-೪-೭ (ಭಾ ಭಾ. ೧೩೮)ನ್ನು ನೋಡಿ.

3 ಗ್ರಂಥಿಯೆಂದರೆ ಹೃದಯವನ್ನಾಶ್ರಯಿಸಿರುವ ಬಲವಾದ ಅವಿದ್ಯಾವಾಸನೆಗಳ ರಾಶಿಯೇ, ಆತ್ಮದರ್ಶನದಿಂದ ಇದು ಆತ್ಯಂತಿಕವಾಗಿ ಹೋಗುವದನ್ನು ಗ್ರಂಥಿಭೇದವೆಂದೂ ಕರೆಯುವರು. ಮುಂ ಭಾ. ೨-೨-೯ (ಭಾ. ಭಾ. ೮೧)ನ್ನು ನೋಡಿ.

## ಆಖ್ಯಾಯಿಕೆಯ ಉಪಸಂಹಾರ

(ಭಾಷ್ಯ)

೬೦೫. ಸರ್ವಂ ಶಾಸ್ತ್ರಾರ್ಥಮ್ ಅಶೇಷತ ಉಕ್ತ್ವಾ ಆಖ್ಯಾಯಿಕಾಮ್ ಉಪಸಂಹರತಿ ಶ್ರುತಿಃ । ತಸ್ಮೈ ಮೃದಿತಕಷಾಯಾಯ ವಾರ್ಕ್ಷಾದಿರಿವ ಕಷಾಯೋ ರಾಗದ್ವೇಷಾದಿದೋಷಃ ಸತ್ತ್ವಸ್ಯ ರಞ್ಜನಾರೂಪತ್ವಾತ್ ಸ ಜ್ಞಾನವೈರಾಗ್ಯಾಭ್ಯಾಸರೂಪಕ್ಷಾರೇಣ ಕ್ಷಾಲಿತೋ ಮೃದಿತಃ ವಿನಾಶಿತಃ ಯಸ್ಯ ನಾರದಸ್ಯ ತಸ್ಮೈ ಯೋಗ್ಯಾಯ ಮೃದಿತಕಷಾಯಾಯ ತಮಸೋಽವಿದ್ಯಾಲಕ್ಷಣಾತ್ ಪಾರಂ ಪರಮಾರ್ಥತತ್ತ್ವಂ ದರ್ಶಯತಿ ದರ್ಶಿತವಾನ್ ಇತ್ಯರ್ಥಃ । ಕೋಽಸೌ ? ಭಗವಾನ್ । ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಮ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ । (ವಿ ಪು. ೬–೫–೭೮) ಏವಂ ಧರ್ಮಾ ಸನತ್ಕುಮಾರಃ । ತಮೇವ ಸನತ್ಕುಮಾರಂ ದೇವಂ ಸ್ಕನ್ದ ಇತ್ಯಾಚಕ್ಷತೇ ಕಥಯನ್ತಿ ತದ್ವಿದಃ । ದ್ವಿರ್ವಚನಮ್ ಅಧ್ಯಾಯಪರಿಸಮಾಪ್ತ್ಯರ್ಥಮ್ ॥

(ಭಾಷ್ಯಾರ್ಥ)

ಶಾಸ್ತ್ರಾರ್ಥವನ್ನೆಲ್ಲ ಸ್ವಲ್ಪವೂ ಉಳಿಯದಂತೆ ಹೇಳಿ ಶ್ರುತಿಯು ಆಖ್ಯಾಯಿಕೆಯನ್ನು ಉಪಸಂಹಾರಮಾಡುತ್ತಿದೆ. ಆ ಮೃದಿತಕಷಾಯನಿಗೆ ಮರದ (ಬಣ್ಣವೇ) ಮುಂತಾದದ್ದರಂತಿರುವ ರಾಗದ್ವೇಷಾದಿದೋಷವೇ **ಕಷಾಯವು**, ಏಕೆಂದರೆ (ಅದು) ಸತ್ತ್ವಕ್ಕೆ ರಂಗನ್ನುಂಟುಮಾಡುವದಾಗಿರುತ್ತದೆ, ಯಾವ ನಾರದನ ಆ (ಕಷಾಯವು) ಜ್ಞಾನವೈರಾಗ್ಯಾಭ್ಯಾಸರೂಪವಾದ ಕ್ಷಾರದಿಂದ ತೊಳೆದು ಮೃದಿತವಾಗಿತ್ತೋ, ನಾಶವಾಗಿತ್ತೋ[1] ಆ ಯೋಗ್ಯನಾದ ಮೃದಿತಕಷಾಯನಾದ (ನಾರದನಿಗೆ) ಅವಿದ್ಯಾರೂಪದ ತಮಸ್ಸಿನ ಆಚೆಯ ದಡವನ್ನು ಎಂದರೆ ಪರಮಾರ್ಥತತ್ತ್ವವನ್ನು ತೋರಿಸುತ್ತಾನೆ, ತಿಳಿಸಿಕೊಟ್ಟನು ಎಂದರ್ಥ ಆ (ತೋರಿಸಿಕೊಟ್ಟವನು), ಯಾರು ? ಭಗವಂತನಾದ– "ಭೂತಗಳ ಉತ್ಪತ್ತಿಯನ್ನೂ ಪ್ರಲಯವನ್ನೂ ಗತಿಯನ್ನೂ ಆಗತಿಯನ್ನೂ, ವಿದ್ಯೆಯನ್ನೂ ಅವಿದ್ಯೆಯನ್ನೂ (ಯಾವನು) ಬಲ್ಲನೋ ಆತನನ್ನು ಭಗವಂತನೆಂದು ಕರೆಯಬೇಕು." (ವಿ. ಪು. ೬–೫–೭೮) ಎಂಬೀ ಧರ್ಮಗಳುಳ್ಳ ಸನತ್ಕುಮಾರನು. ಅದೇ ಸನತ್ಕುಮಾರನನ್ನು 'ಸ್ಕಂದನು' ಎಂದು ಅದನ್ನು ಬಲ್ಲವರು ಕರೆಯುತ್ತಾರೆ. (ಆತನನ್ನು ಸ್ಕಂದನೆಂದು ಕರೆಯುತ್ತಾರೆ ಎಂದು) ಎರಡು ಸಲ ಹೇಳಿರುವದು ಅಧ್ಯಾಯದ ಪರಿಸಮಾಪ್ತಿ(ಯನ್ನು ತಿಳಿಸು)ವದಕ್ಕೆ.

---

1 ಈ ಸಾಧನವನ್ನು ಕಷಾಯಗಳನ್ನು ಪಕ್ವಗೊಳಿಸುವದು ಎಂದೂ ಕರೆಯುತ್ತಾರೆ.

# ಏಳನೆಯ ಅಧ್ಯಾಯದ ಸಾರ

ಇಲ್ಲಿ ನಾಮಾದಿಯಾಗಿ ಪ್ರಾಣಾಂತವಾಗಿರುವ ಬ್ರಹ್ಮವಿಕಾರಗಳನ್ನು ಕ್ರಮ ಕ್ರಮವಾಗಿ ವಿವರಿಸಿ ಅನಂತವಾದ ಭೂಮಬ್ರಹ್ಮದ ತತ್ತ್ವವನ್ನು ತಿಳಿಸಿಕೊಟ್ಟದೆ.

## ಒಂದನೆಯ ಖಂಡ

ನಾರದನು ಸನತ್ಕುಮಾರನ ಬಳಿಗೆ ಬಂದು ಬ್ರಹ್ಮವಿದ್ಯೆಯನ್ನು ಹೇಳಿಕೊಡಬೇಕೆಂದು ಬೇಡಿಕೊಂಡನು. "ನಿನಗೆ ತಿಳಿದಿರುವದನ್ನು ಹೇಳು, ಅಲ್ಲಿಂದ ಮುಂದಕ್ಕೆ ಹೇಳಿಕೊಡುವೆನು" ಎಂದು ಸನತ್ಕುಮಾರನು ಆಜ್ಞಾಪಿಸಲು ಅದರಂತೆ ನಾರದನು ತನಗೆ ಬಂದಿದ್ದ ಋಗ್ವೇದಾದಿಗಳ ತಿಳಿವಳಿಕೆಯನ್ನು ಒಂದೊಂದಾಗಿ ವಿವರಿಸಿ "ಭಗವಂತನೆ, ನಾನು ಬರಿಯ ಕರ್ಮೋಪ ಯುಕ್ತವಾದ ಮಂತ್ರಗಳನ್ನರಿತಿರುವೆನೇ ಹೊರತು ಆತ್ಮನನ್ನರಿತುಕೊಂಡಿಲ್ಲ, ಆತ್ಮನನ್ನು ಅರಿತು ಕೊಂಡವನಿಗೆ ಶೋಕವು ತೊಲಗುವದೆಂದು ದೊಡ್ಡವರಿಂದ ಕೇಳಿರುತ್ತೇನೆ. ದಯವಿಟ್ಟು ನನಗೆ ಶೋಕದಿಂದ ಪಾರುಮಾಡುವ ಆತ್ಮವಿದ್ಯೆಯನ್ನು ಹೇಳಿಕೊಡಬೇಕು" ಎಂದು ಕೇಳಿ ಕೊಂಡನು.

ಸನತ್ಕುಮಾರನು "ನಿನಗೆ ತಿಳಿದಿರುವದೆಲ್ಲವೂ ನಾಮವೇ. ನಾಮವೇ ಬ್ರಹ್ಮವೆಂದು ಉಪಾಸನೆಮಾಡು, ಅದರಿಂದ ನಾಮಕ್ಷೇತ್ರದಲ್ಲೆಲ್ಲ ನಿನಗೆ ಸ್ವಾತಂತ್ರ್ಯದ ವಿಹಾರವು ಬರುವದು" ಎಂದು ಉಪದೇಶಿಸಿದನು. ಆಗ ನಾರದನು "ಭಗವಂತನೆ, ನಾಮಕ್ಕಿಂತ ಹೆಚ್ಚಿನ ದುಂಟೆ?" ಎಂದು ಕೇಳಲು ಸನತ್ಕುಮಾರನು ಅದಕ್ಕಿಂತ ವಾಕ್ಕು ಹೆಚ್ಚಿನದು ಎಂದು ಉಪದೇಶಿಸಿದನು.

## ಎರಡರಿಂದ ಹದಿನೈದರವರೆಗಿನ ಖಂಡಗಳು

ಹೀಗೆಯೇ ವಾಕ್ಕು, ಮನಸ್ಸು, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಅನ್ನ, ಅಪ್ಪು, ತೇಜಸ್ಸು, ಆಕಾಶ, ಸ್ಮರ, ಆಶೆ, ಪ್ರಾಣ–ಎಂಬ ಹದಿಮೂರು ತತ್ತ್ವಗಳ ಸ್ವರೂಪ, ಮಹಿಮೆ, ಅವುಗಳನ್ನು ಬ್ರಹ್ಮವೆಂದು ಉಪಾಸನೆಮಾಡುವದರ ಫಲ– ಇವುಗಳನ್ನು ವಿವರಿಸಿ ಹೇಳಿದನು. ಇವು ಒಂದಕ್ಕಿಂತ ಒಂದು ಹೆಚ್ಚಾಗಿರುವವು. ಮುಂದೆಮುಂದೆ ಹೇಳಿದ ತತ್ತ್ವವು ಹಿಂದು ಹಿಂದಿನದಕ್ಕೆ ಕಾರಣವಾಗಿರುವದು; ಆಯಾ ತತ್ತ್ವವನ್ನು ಬ್ರಹ್ಮವೆಂದು ಉಪಾಸನೆಮಾಡಿ ದವನೇ ಆಯಾ ತತ್ತ್ವದ ಕ್ಷೇತ್ರದಲ್ಲೆಲ್ಲ ಕಾಮಚಾರಿತ್ವವಿರುವದು ಎಂದು ತಿಳಿಸಿದ ಬಳಿಕ ಪ್ರಾಣವನ್ನು ಉಪಾಸನೆಮಾಡಿದವನು ಮಿಕ್ಕ ಎಲ್ಲಾ ತತ್ತ್ವಗಳನ್ನು ಅತಿಕ್ರಮಿಸಿದ ತತ್ತ್ವವನ್ನು ಅರಿತವನಾಗಿರುತ್ತಾನೆ; ಆದ್ದರಿಂದ ಪ್ರಾಣವನ್ನವಲಂಬಿಸಿ ವ್ಯವಹರಿಸುವವನು ಅತಿವಾದಿಯಾಗಿರು ತ್ತಾನೆ– ಎಂದು ಪ್ರಾಣವಿದ್ಯೆಯನ್ನು ವಿಶೇಷವಾಗಿ ಹೊಗಳಿದನು.

## ಹದಿನಾರರಿಂದ ಇಪ್ಪತ್ತೈದರವರೆಗಿನ ಖಂಡಗಳು

ನಾರದನು ಪ್ರಾಣವಿದ್ಯೆಯೇ ಎಲ್ಲಕ್ಕೂ ಹೆಚ್ಚಿನದೆಂದು ಭಾವಿಸಿ ಮುಂದೆ 'ಇದಕ್ಕಿಂತ ಹೆಚ್ಚಿನದು ಇದೆಯೆ?' ಎಂದು ಕೇಳಲಿಲ್ಲ. ಆದರೂ ಸನತ್ಕುಮಾರನು ಶಿಷ್ಯನಿಗೆ ಪರಮಾರ್ಥ ವನ್ನು ಹೇಳಿಕೊಡಬೇಕೆಂದು ತಾನೇ ಉಪದೇಶಿಸುವದಕ್ಕೆ ಪ್ರಾರಂಭಿಸಿದನು.

"ಪರಮಾರ್ಥಸತ್ಯವನ್ನವಲಂಬಿಸಿ ಅತಿವಾದಮಾಡುವವನೇ, ನಿಜವಾದ ಅತಿವಾದಿಯು. ಅದನ್ನು ಅರಿತುಕೊಳ್ಳುವದೇ ವಿಜ್ಞಾನವು ಆ ವಿಜ್ಞಾನಕ್ಕೆ ಮನನವೂ ಅದಕ್ಕೆ ಶ್ರದ್ಧೆಯೂ, ಅದಕ್ಕೆ ನಿಷ್ಠೆಯೂ, ಅದಕ್ಕೆ ಇಂದ್ರಿಯಜಯವೂ, ಚಿತ್ತೈಕಾಗ್ರತೆಯೂ, ಅವಶ್ಯವು ; ಅದಕ್ಕೆ ಪರಮಾರ್ಥವಾದ ನಿರತಿಶಯಸುಖಪ್ರಾಪ್ತಿಯ ನಿಶ್ಚಯವೇ ಕಾರಣವು ಆ ಸುಖ ವೆಂಬುದು ಭೂಮವೇ, ಅಲ್ಪವಲ್ಲ , ಆದ್ದರಿಂದ ಭೂಮವನ್ನೇ ಅರಿತುಕೊಳ್ಳಬೇಕು" ಎಂದು ಬೋಧಿಸಿದ ಸನತ್ಕುಮಾರನ ವಚನವನ್ನು ಕೇಳಿ ಭೂಮಜ್ಞಾನವೇ ತನಗೆ ಬೇಕೆಂದು ನಾರದನು ಕೇಳಿಕೊಂಡನು

"ಎಲ್ಲಿ ಮತ್ತೊಂದರ ಅರಿವೇ ಆಗುವದಿಲ್ಲವೋ ಅದೇ ಭೂಮವು, ಅದೇ ಅಮೃತ ವಾದದ್ದು ಮಿಕ್ಕದ್ದು ಅಲ್ಪವು, ಮರ್ತ್ಯವು. ವ್ಯವಹಾರದೃಷ್ಟಿಯಿಂದ ಅದು ತನ್ನಲ್ಲಿ ಆಸರುವದು , ಪರಮಾರ್ಥದೃಷ್ಟಿಯಿಂದ ನೋಡಿದರೆ ಅದು ನಿರಾಧಾರವಾಗಿರುವದು, ಏಕೆಂದರೆ ಅದರಲ್ಲಿ ಯಾವ ದ್ವೈತವೂ ಇರುವದೇ ಇಲ್ಲ. ಆ ಭೂಮವೇ ಎಲ್ಲೆಲ್ಲಿಯೂ ಇರುತ್ತದೆ , ಅದೇ ಎಲ್ಲರಲ್ಲಿಯೂ ನಾನು ಎಂದು ಕರೆಯಿಸಿಕೊಳ್ಳತಕ್ಕದ್ದು. ಆದರೆ ಅದು ನಾನು ಎಂದು ಜನರು ಕರೆಯುತ್ತಿರುವ ದೇಹಾದಿಸಂಘಾತವಲ್ಲ. ಎಲ್ಲಕ್ಕೂ ತಿರುಳಾಗಿರುವ ಪರಿಶುದ್ಧ ನಾದ ಪ್ರತ್ಯಗಾತ್ಮನೇ ಭೂಮವು ಈ ತತ್ತ್ವವನ್ನು ಮನನವಿಜ್ಞಾನಗಳ ಮೂಲಕ ಕಂಡು ಕೊಂಡಿರುವಾತನಿಗೆ ನಿರಂಕುಶವಾದ ಕಾಮಚಾರವಿರುವದು, ಅವನು ಸ್ವಯಂರಾಜನಾಗಿರುವನು, ಮಿಕ್ಕವರಂತೆ ಅವನ ಲೋಕಗಳು ನಾಶವಾಗುವದಿಲ್ಲ, ಅವನಮೇಲೆ ಮತ್ತೊಬ್ಬ ರಾಜನಿರು ವದಿಲ್ಲ" ಎಂದು ತಿಳಿಸಿಕೊಟ್ಟನು.

## ಇಪ್ಪತ್ತಾರನೆಯ ಖಂಡ

ಯಾವನು ಹೀಗೆಂದು ಮನನವಿಜ್ಞಾನಗಳಿಂದ ತತ್ತ್ವವನ್ನು ಕಂಡುಕೊಂಡಿರುವನೋ ಅವನಿಗ ಪ್ರಾಣಾದಿಯಾಗಿ ನಾಮಾಂತವಾದ ಹಿಂದೆ ಹೇಳಿರುವದೆಲ್ಲವೂ ಆತ್ಮನಿಂದಲೇ ಉಂಟಾ ಗುವವೆಂಬ ಅರಿವು ಉಂಟಾಗುತ್ತದೆ ಅವನ ವ್ಯವಹಾರವೆಲ್ಲವೂ ಈ ಆತ್ಮನನ್ನೇ ಅವಲಂಬಿಸಿ ಕೊಂಡಿರುತ್ತದೆ. ಈ ಆತ್ಮಜ್ಞಾನಿಗೆ ರೋಗ, ದುಃಖ– ಮುಂತಾದ ಅನರ್ಥಗಳು ಯಾವವೂ ಕಾಣಿಸಿಕೊಳ್ಳುವದಿಲ್ಲ , ಆತನೇ ಎಲ್ಲವೂ ಆಗಿ ಎಲ್ಲವನ್ನೂ ಪಡೆದುಕೊಳ್ಳುವನು. ತಾನು ಒಬ್ಬನೇ ಆಗಿದ್ದರೂ ಸೃಷ್ಟಿಯಿಂದ ಅನಂತಪ್ರಕಾರಗಳಾಗಿ ತೋರಿಕೊಂಡು ಪ್ರಲಯಕಾಲದಲ್ಲಿ ಒಬ್ಬನೇ ಆಗುವ ಸ್ವಾತಂತ್ರ್ಯವು ಆತನದು.

ಈ ಆತ್ಮಜ್ಞಾನವಾಗುವದಕ್ಕೆ ಆಹಾರಶುದ್ಧಿಯು, ಎಂದರೆ ರಾಗದ್ವೇಷಾದಿಗಳಿಲ್ಲದ ವಿಷಯವಿಜ್ಞಾನವು, ಅತ್ಯವಶ್ಯವು. ಆಹಾರಶುದ್ಧಿಯಿಂದ ಆತ್ಮಜ್ಞಾನವುಂಟಾಗುವದು, ಅದು ಉಂಟಾದರೆ ಹೃದಯದಲ್ಲಿರುವ ಅವಿದ್ಯಾವಾಸನಾಗ್ರಂಥಿಗಳೆಲ್ಲವೂ ಬಿಚ್ಚಿಕೊಳ್ಳುವವು– ಎಂದು ಭಗವಂತನಾದ ಸನತ್ಕುಮಾರನು ರಾಗದ್ವೇಷಾದಿರಹಿತನಾದ ನಾರದನಿಗೆ ಉಪದೇಶಮಾಡಿದನು. ಆ ಸನತ್ಕುಮಾರನೇ ಸ್ಕಂದನು ಎಂದು ಬಲ್ಲವರು ಹೇಳುತ್ತಾರೆ

# ಎಂಟನೆಯ ಅಧ್ಯಾಯ-ಒಂದನೆಯ ಖಂಡ

## ( ದಹರವಿದ್ಯೆ )

## ಅಧ್ಯಾಯಸಂಬಂಧ

(ಭಾಷ್ಯ)

೬೦೬. ಯದ್ಯಪಿ ದಿಗ್ದೇಶಕಾಲಾದಿಭೇದಶೂನ್ಯಂ ಬ್ರಹ್ಮ ಸದೇಕಮೇವಾದ್ವಿತೀಯಮ್, ಆತ್ಮೈವೇದಂ ಸರ್ವಮ್ ಇತಿ ಚ ಷಷ್ಠಸಪ್ತಮಯೋರಧಿಗತಮ್, ತಥಾಪೀಹ ಮನ್ದಬುದ್ಧೀನಾಂ ದಿಗ್ದೇಶಾದಿಭೇದವದ್ ವಸ್ತು ಇತ್ಯೇವಂ ಭಾವಿತಾ ಬುದ್ಧಿರ್ನ ಶಕ್ಯತೇ ಸಹಸಾ ಪರಮಾರ್ಥವಿಷಯಾ ಕರ್ತುಮ್ ಇತಿ, ಅನಧಿಗಮ್ಯ ಚ ಬ್ರಹ್ಮ ನ ಪುರುಷಾರ್ಥಸಿದ್ಧಿರಿತಿ ತದಧಿಗಮಾಯ ಹೃದಯಪುಣ್ಡರೀಕದೇಶ ಉಪದೇಷ್ಟವ್ಯಃ। ಯದ್ಯಪಿ ಸತ್ಸಮ್ಯಕ್ಪ್ರತ್ಯಯೈಕವಿಷಯಂ ನಿರ್ಗುಣಂ ಚಾಽಽತ್ಮತತ್ತ್ವಮ್, ತಥಾಪಿ ಮನ್ದಬುದ್ಧೀನಾಂ ಗುಣವತ್ತ್ವಸ್ಯ ಇಷ್ಟತ್ವಾತ್ ಸತ್ಯಕಾಮಾದಿಗುಣವತ್ತ್ವಂ ಚ ವಕ್ತವ್ಯಮ್। ತಥಾ ಯದ್ಯಪಿ ಬ್ರಹ್ಮವಿದಾಂ ಸ್ತ್ರ್ಯಾದಿವಿಷಯೇಭ್ಯಃ ಸ್ವಯಮೇವ ಉಪರಮೋ ಭವತಿ, ತಥಾಪಿ ಅನೇಕಜನ್ಮವಿಷಯಸೇವಾಭ್ಯಾಸಜನಿತಾ ವಿಷಯವಿಷಯಾ ತೃಷ್ಣಾ ನ ಸಹಸಾ ನಿವರ್ತಯಿತುಂ ಶಕ್ಯತ ಇತಿ ಬ್ರಹ್ಮಚರ್ಯಾದಿಸಾಧನವಿಶೇಷೋ ವಿಧಾತವ್ಯಃ। ತಥಾ ಯದ್ಯಪಿ ಆತ್ಮೈಕತ್ವವಿದಾಂ ಗನ್ತೃಗಮನಗನ್ತವ್ಯಾಭಾವಾತ್ ಅವಿದ್ಯಾದಿದೇಹ[1]ಸ್ಥಿತಿನಿಮಿತ್ತಕ್ಷಯೇ ಗಮನ ಇವ ವಿದ್ಯುತ್, ಉದ್ಭೂತ ಇವ ವಾಯುಃ, ದಗ್ಧೇನ್ಧನ ಇವಾಽಗ್ನಿಃ, ಸ್ವಾತ್ಮನ್ಯೇವ ನಿರ್ವೃತಿಃ[2], ತಥಾಪಿ ಗನ್ತೃಗಮನಾದಿವಾಸಿತಬುದ್ಧೀನಾಂ ಹೃದಯದೇಶಗುಣವಿಶಿಷ್ಟಬ್ರಹ್ಮೋಪಾಸಕಾನಾಂ ಮೂರ್ಧನ್ಯಯಾ ನಾಡ್ಯಾ ಗತಿರ್ವಕ್ತವ್ಯಾ ಇತ್ಯಷ್ಟಮಃ ಪ್ರಪಾಠಕ ಆರಭ್ಯತೇ। ದಿಗ್ದೇಶಗುಣಗತಿಫಲಭೇದಶೂನ್ಯಂ ಹಿ ಪರಮಾರ್ಥಸದದ್ವಯಂ ಬ್ರಹ್ಮ ಮನ್ದಬುದ್ಧೀನಾಮ್ ಅಸದಿವ ಪ್ರತಿಭಾತಿ। ಸನ್ಮಾರ್ಗಸ್ಥಾಸ್ತಾವದ್ ಭವನ್ತು, ತತಃ ಶನೈಃ ಪರಮಾರ್ಥಸದಪಿ ಗ್ರಾಹಯಿಷ್ಯಾಮೀತಿ ಮನ್ಯತೇ ಶ್ರುತಿಃ ॥

(ಭಾಷ್ಯಾರ್ಥ)

ಬ್ರಹ್ಮವು ದಿಕ್ಕು, ದೇಶ, ಕಾಲ- ಮುಂತಾದ ಭೇದಗಳಿಲ್ಲದ್ದು , ತನಗೆರಡನೆಯದಿಲ್ಲದ ಒಂದೇ ಆದ ಸತ್ತು,[3] ಇದೆಲ್ಲವೂ ಆತ್ಮನೇ[4]- ಎಂದು ಆರನೆಯ

1. 'ಶೇಷ' ಎಂಬುದನ್ನು 'ದೇಹ' ಎಂದು ತಿದ್ದಿಕೊಂಡಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

2. 'ನಿವೃತ್ತಿಃ' ಎಂಬುದನ್ನು 'ನಿರ್ವೃತಿಃ' ಎಂದು ತೈ॥ ಪಾಠಕ್ಕನುಗುಣವಾಗಿ ತಿದ್ದಿಕೊಂಡಿದೆ.

3. ೬-೨-೧ನ್ನು ನೋಡಿ.

4. ೭-೨೫-೧ನ್ನು ನೋಡಿ.

ಏಳನೆಯ (ಪ್ರಪಾಠಕ)ಗಳಲ್ಲಿ ತಿಳಿದದ್ದಾಯಿತು ಎಂಬುದು ನಿಜವೇ; ಆದರೂ ಇಲ್ಲಿ ಮಂದಬುದ್ಧಿಗಳಾದವರಿಗೆ ದಿಕ್ಕು, ದೇಶ- ಮುಂತಾದ ಭೇದವುಳ್ಳದ್ದೇ ವಸ್ತು ಎಂದೇ ಭಾವನೆಯುಳ್ಳ ಬುದ್ಧಿಯನ್ನು ತಟ್ಟನೆ ಪರಮಾರ್ಥವಿಷಯವುಳ್ಳದ್ದನ್ನಾಗಿ ಮಾಡುವದು ಶಕ್ಯವಲ್ಲವಾದ್ದರಿಂದಲೂ ಬ್ರಹ್ಮವನ್ನು ಅರಿತುಕೊಳ್ಳದೆ ಪುರುಷಾರ್ಥವು ಸಿದ್ಧಿಸುವಂತಿಲ್ಲವಾದ್ದರಿಂದಲೂ (ಆ) ಬ್ರಹ್ಮವನ್ನು ಅರಿತುಕೊಳ್ಳುವದಕ್ಕಾಗಿ[1] ಹೃದಯಪುಂಡರೀಕವೆಂಬ **ದೇಶ**ವನ್ನು ಉಪದೇಶಮಾಡಬೇಕಾಗಿರುತ್ತದೆ ಆತ್ಮತತ್ತ್ವವು ಸತ್ತೆಂಬ ಸಮ್ಯಕ್ಪ್ರತ್ಯಯವೊಂದಕ್ಕೇ ವಿಷಯವೂ ನಿರ್ಗುಣವಾದದ್ದೂ (ಆಗಿದೆ), ನಿಜ, ಆದರೂ ಮಂದಮತಿಗಳಾದವರಿಗೆ (ಅದು) ಗುಣವುಳ್ಳದ್ದಾಗಿರಬೇಕೆಂಬುದು ಇಷ್ಟವಾಗಿರುವದರಿಂದ ಸತ್ಯಕಾಮತ್ವವೇ ಮುಂತಾದ **ಗುಣ**ಗಳುಳ್ಳದ್ದೆಂದು ಹೇಳಬೇಕಾಗಿರುತ್ತದೆ. ಮತ್ತು ಬ್ರಹ್ಮಜ್ಞಾನಿಗಳಿಗೆ ಸ್ತ್ರೀಯರೇ ಮುಂತಾದ ವಿಷಯಗಳಿಂದ ಉಪರತಿಯು ತಾನೇ ಆಗುತ್ತದೆ, ನಿಜ, ಆದರೂ ಅನೇಕ ಜನ್ಮಗಳಲ್ಲಿ ವಿಷಯಸೇವೆಯನ್ನು ಮಾಡಿದ ಅಭ್ಯಾಸದಿಂದುಂಟಾದ ವಿಷಯವಿಷಯವಾದ ತೃಷ್ಣೆಯನ್ನು ತಟ್ಟನೆ ಹಿಮ್ಮೆಟ್ಟಿಸುವದು ಆಗಲಾರದಾಗಿ **ಬ್ರಹ್ಮಚರ್ಯವೇ** ಮುಂತಾದ ಸಾಧನವಿಶೇಷವನ್ನು ವಿಧಿಸಬೇಕಾಗಿರುತ್ತದೆ. ಮತ್ತು ಆತ್ಮನು ಒಬ್ಬನೇ ಎಂದು ಅರಿತುಕೊಂಡಿರುವವರಿಗೆ ಹೋಗುವವನು, ಹೋಗುವಿಕೆ, ಹೋಗಿ ಸೇರಬೇಕಾದದ್ದು- ಇವುಗಳು ಇಲ್ಲದ್ದರಿಂದ ಅವಿದ್ಯೆಯೇ ಮುಂತಾದ ದೇಹಸ್ಥಿತಿಗೆ[2] (ಅವಶ್ಯವಾಗಿರುವ) ನಿಮಿತ್ತವು ಕ್ಷಯವಾಗಲು ಆಕಾಶದಲ್ಲಿ ಮಿಂಚಿನಂತೆ, ಮೇಲಕ್ಕೆದ್ದ ಗಾಳಿಯಂತೆ, ಕಟ್ಟಿಗೆಯನ್ನು ಸುಟ್ಟಿರುವ ಬೆಂಕಿಯಂತೆ, ತಮ್ಮ ಆತ್ಮನಲ್ಲಿಯೇ ನಿರ್ವೃತಿಯಾಗುವದು[3] ನಿಜ, ಆದರೂ ಗಂತೃಗಮನಾದಿವಾಸನೆಯಿಂದೊಡಗೂಡಿದ ಬುದ್ಧಿಯವರಾಗಿ ಹೃದಯದೇಶದಲ್ಲಿ ಗುಣವಿಶಿಷ್ಟವಾದ ಬ್ರಹ್ಮವನ್ನು ಉಪಾಸನೆಮಾಡಿದವರಿಗೆ ನೆತ್ತಿಯನಾಡಿಯ ಮೂಲಕ **ಗತಿ**ಯನ್ನು ಹೇಳಬೇಕಾಗಿದೆ. ಆದ್ದರಿಂದ (ಈ) ಎಂಟನೆಯ ಪ್ರಪಾಠಕವನ್ನು ಆರಂಭಿಸಿದೆ. ದಿಕ್ಕು, ದೇಶ, ಗುಣ, ಗತಿ, ಫಲ- ಎಂಬ ಭೇದಗಳಿಲ್ಲದ ಪರಮಾರ್ಥಸತ್ತಾದ ಅದ್ವಯಬ್ರಹ್ಮವು ಮಂದಮತಿಗಳಿಗೆ ಅಸತ್ತೆಂಬಂತೆ ತೋರುತ್ತಿದೆಯಲ್ಲವೆ?

---

1. ಸಾಕ್ಷಾತ್ಕಾರಮಾಡಿಕೊಳ್ಳುವದಕ್ಕಾಗಿ ಎಂದರ್ಥ.

2. 'ಅವಿದ್ಯಾದಿಶೇಷಸ್ಥಿತಿ' ಎಂಬ ಪಾಠಕ್ಕೆ ಅವಿದ್ಯೆಯೇ ಮುಂತಾದವುಗಳ ಶೇಷವು ಇರುವದಕ್ಕೆ ಕಾರಣವು ಎಂದು ಅರ್ಥವಾಗುತ್ತದೆ 'ಅವಿದ್ಯಾವಿಶೇಷಸ್ಯ ದೇಹಸ್ಥಿತಿನಿಮಿತ್ತಸ್ಯ ಕ್ಷಯೇ' ಎಂದು ಆ॥ ಮುದ್ರಿತಕೋಶದಲ್ಲಿ ಟೀಕೆಯನ್ನು ಬರೆದಿದೆ. ನಾವು ಇಟ್ಟುಕೊಂಡಿರುವ ಪಾಠದಲ್ಲಿ ಅನ್ವಯದ ಕ್ಲೇಶವಿಲ್ಲ.

3. ಮೋಕ್ಷಸುಖವು ಎಂದರ್ಥ. 'ನಿವೃತ್ತಿಃ' ಎಂಬ ಪಾಠಕ್ಕೆ 'ಆತ್ಮನಿ' ಎಂಬ ಸಪ್ತಮೀವಿಭಕ್ತಿಗೆ ಅನ್ವಯವಾಗುವದು ಕಷ್ಟ.

ಮೊದಲು ಸನ್ಮಾರ್ಗದಲ್ಲಿರುವವರಾಗಿರಲಿ, ಆಮೇಲೆ ಮೆಲ್ಲಗೆ ಪರಮಾರ್ಥಸತ್ತ್ವನ್ನೂ ತಿಳಿಸಿಕೊಡುವೆನು ಎಂಬುದು ಶ್ರುತಿಯ ಅಭಿಪ್ರಾಯ.[1]

# ದಹರೋಪಾಸನಾವಿಧಿ

(ಉಪನಿಷತ್ತು)

**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಸ್ತಸ್ಮಿನ್ ಯದನ್ತಸ್ತದ ನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ॥ ೧ ॥**

೧. ಇನ್ನು ಈ ಬ್ರಹ್ಮಪುರದಲ್ಲಿ ದಹರವಾದ ಪುಂಡರೀಕವೆಂಬ ವೇಶ್ಮವಿದೆಯಲ್ಲ, ಅದರ ಒಳಗೆ ದಹರವಾದ ಆಕಾಶವಿದೆಯಲ್ಲ, ಅದರ ಒಳಗೆ ಯಾವದಿದೆಯೋ ಅದನ್ನು ಅನ್ವೇಷಣಮಾಡಬೇಕು, ಅದನ್ನೇ ವಿಜಿಜ್ಞಾಸೆಮಾಡಬೇಕು.

(ಭಾಷ್ಯ)

೬೦೭. ಅಥ ಅನನ್ತರಂ ಯದಿದಂ ವಕ್ಷ್ಯಮಾಣಮ್ ದಹರಮ್ ಅಲ್ಪಂ ಪುಣ್ಡರೀಕಂ ಪುಣ್ಡರೀಕಸದೃಶಂ ವೇಶ್ಮೇವ ವೇಶ್ಮ। ದ್ವಾರಪಾಲಾದಿಮತ್ತ್ವಾತ್। ಅಸ್ಮಿನ್ ಬ್ರಹ್ಮಪುರೇ ಬ್ರಹ್ಮಣಃ ಪರಸ್ಯ ಪುರಮ್। ರಾಜ್ಞೋಽನೇಕಪ್ರಕೃತಿಮದ್ ಯಥಾ ಪುರಮ್, ತಥಾ ಇದಮ್ ಅನೇಕೇನ್ದ್ರಿಯಮನೋಬುದ್ಧಿಭಿಃ ಸ್ವಾಮ್ಯರ್ಥ ಕಾರಿಭಿರ್ಯುಕ್ತಮಿತಿ ಬ್ರಹ್ಮಪುರಮ್। ಪುರೇ ಚ ವೇಶ್ಮ ರಾಜ್ಞೋ ಯಥಾ ತಥಾ ತಸ್ಮಿನ್ ಬ್ರಹ್ಮಪುರೇ ಶರೀರೇ ದಹರಂ ವೇಶ್ಮ ಬ್ರಹ್ಮಣ ಉಪಲಬ್ಧ್ಯಧಿ ಷ್ಠಾನಮ್ ಇತ್ಯರ್ಥಃ। ಯಥಾ ವಿಷ್ಣೋಃ ಶಾಲಗ್ರಾಮಃ। ಅಸ್ಮಿನ್ ಹಿ ಸ್ವ ವಿಕಾರಶುಙ್ಗೇ ದೇಹೇ ನಾಮರೂಪವ್ಯಾಕರಣಾಯ ಪ್ರವಿಷ್ಟಂ ಸದಾಖ್ಯಂ ಬ್ರಹ್ಮ ಜೀವೇನಾಽಽತ್ಮನಾ ಇತ್ಯುಕ್ತಮ್। ತಸ್ಮಾತ್ ಅಸ್ಮಿನ್ ಹೃದಯಪುಣ್ಡರೀಕೇ ವೇಶ್ಮನಿ ಉಪಸಂಹೃತಕರಣೈರ್ಬಾಹ್ಯವಿಷಯವಿರಕ್ತೈರ್ವಿಶೇಷತೋ ಬ್ರಹ್ಮ ಚರ್ಯಸತ್ಯಸಾಧನಾಭ್ಯಾಂ ಯುಕ್ತೈಃ, ವಕ್ಷ್ಯಮಾಣಗುಣವದ್ ಧ್ಯಾಯಮಾನೈ ರ್ಬ್ರಹ್ಮ ಉಪಲಭ್ಯತ ಇತಿ ಪ್ರಕರಣಾರ್ಥಃ। ದಹರೋಽಲ್ಪತರಃ, ಅಸ್ಮಿನ್ ದಹರೇ ವೇಶ್ಮನಿ। ವೇಶ್ಮನೋಽಲ್ಪತ್ವಾತ್ ತದನ್ತರ್ವರ್ತಿನೋಽಲ್ಪತರತ್ವಮ್[2]। ಅನ್ತರಾಕಾಶಃ ಆಕಾಶಾಖ್ಯಂ ಬ್ರಹ್ಮ। "ಆಕಾಶೋ ವೈ ನಾಮ" (೮-೧೪-೧)

---

1. ಈ ಸವಿಶೇಷಬ್ರಹ್ಮೋಪಾಸನೆಯನ್ನು ಹೇಳಿದಮೇಲೆ ನಿರ್ವಿಶೇಷಬ್ರಹ್ಮವಿದ್ಯೆಯನ್ನೂ ಏಳರಿಂದ ಹನ್ನೆರಡರವರೆಗಿನ ಖಂಡಗಳಲ್ಲಿ ವರ್ಣಿಸಲಾಗುವದು.

2. ಇದರ ಮುಂದಿನ 'ವೇಶ್ಮನಃ' ಎಂಬ ಶಬ್ದವು ಅನಾವಶ್ಯಕವೆಂದು ಬಿಟ್ಟುಬಿಟ್ಟಿದೆ.

ಇತಿ ಹಿ ವಕ್ಷ್ಯತಿ । ಆಕಾಶ ಇವ ಅಶರೀರತ್ವಾತ್, ಸೂಕ್ಷ್ಮತ್ವಸರ್ವಗತತ್ವ ಸಾಮಾನ್ಯಾಚ್ಚ । ತಸ್ಮಿನ್ ಆಕಾಶಾಖ್ಯೇ ಯದನ್ತಃ ಮಧ್ಯೇ ತದನ್ವೇಷ್ಟವ್ಯಮ್ । ತದ್ವಾವ ತದೇವ ಚ ವಿಶೇಷೇಣ ಜಿಜ್ಞಾಸಿತವ್ಯಮ್ । ಗುರ್ವಾಶ್ರಯಶ್ರವಣಾದ್ಯುಪಾಯೈರನ್ವಿಷ್ಯ ಚ ಸಾಕ್ಷಾತ್ಕರಣೀಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಇನ್ನು ಈ ಬಳಿಕ, ಮುಂದೆ ಹೇಳಲಿರುವ ದಹರವಾದ ಅಲ್ಪವಾದ ಪುಂಡರೀಕವಾದ ಕಮಲದಂತಿರುವ, ವೇಶ್ಮವು, ದ್ವಾರಪಾಲಕರೇ ಮುಂತಾದವರಿರುವದರಿಂದ[1] ಅರಮನೆಯಂತಿರುವ (ಸ್ಥಾನ)ವಿದೆಯಲ್ಲ, ಈ ಬ್ರಹ್ಮಪುರದಲ್ಲಿ- ಪರಬ್ರಹ್ಮದ ಪುರವು, ರಾಜನಿಗೆ ಅನೇಕಪ್ರಜೆಗಳಿರುವ ಪುರವು ಹೇಗೋ ಹಾಗೆಯೇ ಅನೇಕವಾದ ಇಂದ್ರಿಯಮನೋಬುದ್ಧಿಗಳೆಂಬ ಒಡೆಯನ ಪ್ರಯೋಜನವನ್ನುಂಟುಮಾಡುವ (ಪದಾರ್ಥ)ಗಳಿಂದ ಕೂಡಿರುವದರಿಂದ (ಇದು) ಬ್ರಹ್ಮಪುರವು.[2] ಪುರದಲ್ಲಿ ಹೇಗೆ ರಾಜನ ಅರಮನೆಯಿರುವದೋ ಹಾಗೆಯೇ ಈ ಬ್ರಹ್ಮಪುರವೆಂಬ ಶರೀರದಲ್ಲಿ ದಹರವಾದ ಅರಮನೆ, ಎಂದರೆ ಬ್ರಹ್ಮವನ್ನು ಕಂಡುಕೊಳ್ಳುವದಕ್ಕೆ ಆಶ್ರಯವು ಎಂದರ್ಥ. ವಿಷ್ಣುವಿಗೆ ಸಾಲಗ್ರಾಮವು ಹೇಗೋ (ಹಾಗೆಯೇ ಇದು).[3] ಈ ತನ್ನ ಕಾರ್ಯರೂಪವಾದ ಶುಂಗವಾದ ದೇಹದಲ್ಲಿ[4] ನಾಮರೂಪಗಳನ್ನು ವಿಂಗಡಿಸುವದಕ್ಕಾಗಿ ಸತ್ತೆಂಬ ಬ್ರಹ್ಮವು ಜೀವನೆಂಬ ಆತ್ಮರೂಪದಿಂದ ಪ್ರವಿಷ್ಟವಾಗಿರುತ್ತದೆ[5] ಎಂದಲ್ಲವೆ, ಹಿಂದೆ ಹೇಳಿದೆ? ಆದ್ದರಿಂದ ಈ ಹೃದಯಪುಂಡರೀಕವೆಂಬ ವೇಶ್ಮದಲ್ಲಿ[6] ಕರಣಗಳನ್ನು ಉಪಸಂಹಾರಮಾಡಿಕೊಂಡು ಹೊರಗಿನ ವಿಷಯಗಳಲ್ಲಿ ವಿರಕ್ತರಾಗಿರುವ[7], ಅದರಲ್ಲಿಯೂ ಬ್ರಹ್ಮಚರ್ಯ, ಸತ್ಯ- ಎಂಬ ಸಾಧನಗಳಿಂದೊಡಗೂಡಿದವ

---

1. ೩-೧೩-೬ರಲ್ಲಿ ಹೇಳಿರುವ ಬ್ರಹ್ಮಪುರುಷರ ಸೂಚನೆಯಿದು.

2. ಸೂತ್ರಭಾಷ್ಯದಲ್ಲಿ ಇದು ಜೀವಪುರವೋ, ಬ್ರಹ್ಮಪುರವೋ? -ಎಂಬ ಸಂಶಯವನ್ನು ತೆಗೆದು ಇದು ಬ್ರಹ್ಮಪುರವೇ ಎಂದು ೧-೩-೧೪ (ಭಾ. ಭಾ. ೨೫೬)ರಲ್ಲಿ ನಿರ್ಣಯಿಸಿದೆ

3. ಹೃದಯದಲ್ಲಿಯೇ ಈ ಬ್ರಹ್ಮವನ್ನು ಕಂಡುಕೊಳ್ಳಬೇಕಾಗಿರುವದರಿಂದ ಇದು ಅದರ ವಾಸಸ್ಥಾನವೆಂದಿದೆ ಎಂದು ಭಾವ.

4. ೬-೮-೩ರ ಸೂಚನೆಯಿದು.

5. ೬-೩-೩ರಲ್ಲಿ ಹಾಗೆಂದು ಹೇಳಿದೆ. ಆದ್ದರಿಂದ ಬ್ರಹ್ಮವು ಜೀವನ ಪುರವನ್ನೇ ತನ್ನ ಪುರವಾಗಿ ಮಾಡಿಕೊಂಡು ಈ ಹೃದಯವೆಂಬ ವೇಶ್ಮದಲ್ಲಿದ್ದುಕೊಂಡಿದೆ ಎಂದು ಭಾವ.

6. ಇದರಲ್ಲಿ ಬ್ರಹ್ಮವು ಪ್ರವಿಷ್ಟವಾಗಿರುವದರಿಂದ ಇದು ವೇಶ್ಮವೆನಿಸಿದೆ ಎಂಬ ಸೂಚನೆಯೂ ಇಲ್ಲಿದೆ.

7. ಯಾವ ಬ್ರಹ್ಮವು ಹೃದಯಪುಂಡರೀಕದಲ್ಲಿ ಪ್ರವಿಷ್ಟವಾಗಿರುವದೋ ಅದನ್ನು ಬಾಹ್ಯವಿಷಯವಿರಕ್ತರಾದವರೇ ಉಪಾಸನೆಮಾಡಬಲ್ಲರು.

ರಾಗಿ[1] ಮುಂದೆ ಹೇಳಿರುವ ಗುಣಗಳುಳ್ಳದ್ದೆಂದು[2] ಧ್ಯಾನಮಾಡುತ್ತಿರುವವರಿಗೆ ಬ್ರಹ್ಮವು ತೋರಿಕೊಳ್ಳುತ್ತದೆ[3] ಎಂಬುದು (ಈ) ಪ್ರಕರಣದ ಅರ್ಥವು.

ದಹರವಾದ ಇನ್ನೂ ಅಲ್ಪವಾದ ಈ ದಹರವೇಶ್ಮವಲ್ಲಿರುವ- ವೇಶ್ಮವು ಅಲ್ಪತರವಾಗಿರುವದರಿಂದ ಅದರೊಳಗಿರುವ (ಆಕಾಶವು) ಇನ್ನೂ ಅಲ್ಪವಾಗಿವೆ (ಎಂದು ಭಾವ)- (ಆ) ಆಕಾಶದಲ್ಲಿ ಒಳಗೆ—ಆಕಾಶವೆಂಬುದು ಬ್ರಹ್ಮವು. "ಆಕಾಶ ವೆಂಬುದು (ನಾಮರೂಪಗಳನ್ನು ನಿರ್ವಾಹಮಾಡತಕ್ಕದ್ದು)" (೮-೧೪-೧) ಎಂದಲ್ಲವೆ, ಮುಂದೆ ಹೇಳಿದೆ? ಆಕಾಶದಂತೆ ಅಶರೀರವಾಗಿರುವದರಿಂದಲೂ ಸೂಕ್ಷ್ಮವಾಗಿ ಸರ್ವಗತವಾಗಿರುವದೆಂಬ ಹೋಲಿಕೆಯಿರುವದರಿಂದಲೂ (ಆಕಾಶವು ಬ್ರಹ್ಮವು) ಆ ಆಕಾಶವೆಂಬ (ಬ್ರಹ್ಮ)ದಲ್ಲಿ ಒಳಗೆ, ಅದರ ನಡುವೆ ಯಾವ (ದಿದೆಯೋ) ಅದನ್ನು ಅನ್ವೇಷಣಮಾಡಬೇಕು.[4] (ತದ್ವಾವ -ತದೇವ) ಅದನ್ನೇ ಗುರ್ವಾಶ್ರಯ, ಶ್ರವಣ- ಮುಂತಾದ ಉಪಾಯಗಳಿಂದ ಅನ್ವೇಷಣೆಮಾಡಿ[5] ವಿಜಿಜ್ಞಾಸಮಾಡಬೇಕು, ವಿಶೇಷವಾಗಿ ಅರಿತುಕೊಳ್ಳಬೇಕು, ಸಾಕ್ಷಾತ್ಕರಿಸಿ ಕೊಳ್ಳಬೇಕು[6] -ಎಂದರ್ಥ

## ದಹರಾಕಾಶದಲ್ಲಿ ಸರ್ವವೂ ಇದ್ದುಕೊಂಡಿರುತ್ತದೆ

(ಉಪನಿಷತ್ತು)

**ತಂ ಚೇದ್ ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ಸ ಬ್ರೂಯಾತ್ ॥ ೨ ॥**

**ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅನ್ತರೇವ ಸಮಾಹಿತೇ**

---

1. ಮುಂದೆ ಬ್ರಹ್ಮವನ್ನು ಸತ್ಯವೆಂದು ಉಪಾಸನೆಮಾಡಬೇಕೆಂದು ಹೇಳಿದೆ, ಬ್ರಹ್ಮ ಚರ್ಯವನ್ನು ಸಾಧನವಾಗಿ ವಿಧಿಸಿದೆ.

2. ಸತ್ಯಕಾಮಾದಿಗುಣಗಳುಳ್ಳ.

3. ಸಾಕ್ಷಾತ್ಕೃತವಾಗುತ್ತದೆ. ಉಪಾಸನೆಗೆ ಸಾಕ್ಷಾತ್ಕಾರವಾಗುವದು ಅವಶ್ಯವೆಂಬು ದನ್ನು ಸೂ. ಭಾ. ೪-೪-೫ರಲ್ಲಿ ಹೇಳಿದೆ

4. ಹುಡುಕಬೇಕು, ತಿಳಿಯುವದಕ್ಕೆ ಪ್ರಯತ್ನಿಸಬೇಕು ಎಂದರ್ಥ.

5. ಶ್ರವಣಾದಿಗಳೇ ಆತ್ಮಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಳ್ಳುವದಕ್ಕೆ ಮಾಡ ಬೇಕಾದ ಅನ್ವೇಷಣ.

6. ಸಾಕ್ಷಾತ್ಕಾರಕ್ಕೆ ಮಾಡುವ ಉಪಾಸನಾರೂಪವಾದ ಪ್ರಯತ್ನವೇ ಇಲ್ಲಿ ವಿಜಿಜ್ಞಾಸೆಯು

**ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚನ್ದ್ರಮಸಾವುಭೌ ವಿದ್ಯು ನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ ಸಮಾಹಿತಮಿತಿ ॥ ೩ ॥**

೨-೩. ಅವನನ್ನು ಕುರಿತು "ಈ ಬ್ರಹ್ಮಪುರದಲ್ಲಿ ಯಾವ ದಹರವಾದ ಪುಂಡರೀಕವೇಶ್ಮವಿರುವದೋ, ಇದರಲ್ಲಿ (ಯಾವ) ದಹರಾಕಾಶವಿರುವದೋ, ಅದರಲ್ಲಿ ಯಾವದನ್ನು (ಅದನ್ನೇ) ಅನ್ವೇಷಣೆಮಾಡಬೇಕು, (ಅವನ್ನೇ) ವಿಜಿಜ್ಞಾಸೆಮಾಡಬೇಕು ಎಂದಿರೋ ಅಂಥದ್ದು ಯಾವದಿರುತ್ತದೆ?" ಎಂದು (ಅವರು) ಕೇಳಿದರೆ ಅವನು ಹೀಗೆನ್ನಬೇಕು : "ಈ ಆಕಾಶವು ಎಷ್ಟುಮಟ್ಟಿಗಿದೆಯೋ ಹೃದಯದೊಳಗಿರುವ ಈ ಆಕಾಶವು ಅಷ್ಟೇ (ಇರುವದು). ಇವರಲ್ಲಿ ದ್ಯಾವಾಪೃಥಿವಿಗಳೆರಡೂ ಸಮಾಹಿತವಾಗಿರುವವು ; ಅಗ್ನಿಯೂ ವಾಯುವೂ ಇಬ್ಬರೂ, ಸೂರ್ಯಚಂದ್ರರಿಬ್ಬರೂ. ವಿದ್ಯುತ್ತೂ, ನಕ್ಷತ್ರಗಳೂ, ಮತ್ತು ಇಲ್ಲಿ ಇವನದಾಗಿ ಯಾವದಿರುವದೋ ಮತ್ತು ಯಾವದು ಇಲ್ಲವೋ ಅದೆಲ್ಲವೂ, ಇದರಲ್ಲಿ ಸಮಾಹಿತವಾಗಿರುವದು."

## ಶಂಕೆ: ಅಲ್ಪವಾದ ದಹರಾಕಾಶದಲ್ಲಿರುವದೇನು ?

(ಭಾಷ್ಯ)

೬೦೮. ತಂ ಚೇದೇವಮ್ ಉಕ್ತವನ್ತಮ್ ಆಚಾರ್ಯಂ ಯದಿ ಬ್ರೂಯುಃ ಅನ್ತೇವಾಸಿನಶ್ಚೋದಯೇಯುಃ । ಕಥಮ್ ? ಯದಿದಮ್ ಅಸ್ಮಿನ್ ಬ್ರಹ್ಮಪುರೇ ಪರಿಚ್ಛಿನ್ನೇ ಅನ್ತರ್ದಹರಂ ಪುಣ್ಡರೀಕಮ್ ವೇಶ್ಮ, ತತೋಽಪ್ಯನ್ತಃ ಅಲ್ಪತರ ಏವಾಕಾಶಃ । ಪುಣ್ಡರೀಕ ಏವ ವೇಶ್ಮನಿ ತಾವತ್ ಕಿಂ ಸ್ಯಾತ್ ? ಕಿಂ ತತೋಽಲ್ಪತರೇ ಖೇ ಯದ್ ಭವೇದ್ ಇತ್ಯಾಹುಃ । ದಹರೋಽಸ್ಮಿನ್ ಅನ್ತರಾಕಾಶಃ ಕಿಂ ತದತ್ರ ವಿದ್ಯತೇ ? ನ ಕಿಂಚನ ವಿದ್ಯತ ಇತ್ಯಭಿಪ್ರಾಯಃ । ಯದಿ ನಾಮ ಬದರಮಾತ್ರಂ ಕಿಮಪಿ ವಿದ್ಯತೇ, ಕಿಂ ತಸ್ಯಾನ್ವೇಷಣೇನ ವಿಜಿಜ್ಞಾಸನೇನ ವಾ ಫಲಂ ವಿಜಿಜ್ಞಾಸಿತುಃ ಸ್ಯಾತ್ ? ಅತೋ ಯತ್ ತತ್ರ ಅನ್ವೇಷ್ಟವ್ಯಂ ವಿಜಿಜ್ಞಾಸಿತವ್ಯಂ ವಾ ನ ತೇನ ಪ್ರಯೋಜನಮ್ । ಇತ್ಯುಕ್ತವತಃ ಸ ಆಚಾರ್ಯೋ ಬ್ರೂಯಾತ್ ಇತಿ ಶ್ರುತೇರ್ವಚನಮ್ ॥

(ಭಾಷ್ಯಾರ್ಥ)

ಹೀಗೆಂದ ಆಚಾರ್ಯನನ್ನು ಕುರಿತು ಶಿಷ್ಯರು ಹೀಗೆಂದರೆ, ಆಕ್ಷೇಪಿಸಿದರೆ- ಹೇಗೆ (ಆಕ್ಷೇಪಿಸಿದರೆ ? ಎಂದರೆ), ಈ ಪರಿಚ್ಛಿನ್ನವಾದ ಬ್ರಹ್ಮಪುರದ ಒಳಗೆ ದಹರ

ವಾದ ಪುಂಡರೀಕವೇಶ್ಮವಿದೆಯಲ್ಲ, ಅದಕ್ಕೂ ಒಳಗಿರುವ ಆಕಾಶವು ಇನ್ನೂ ಅಲ್ಪತರವಾಗಿಯೇ (ಇರುವದು). ಪುಂಡರೀಕವೆಂಬ ವೇಶ್ಮದಲ್ಲಿಯೇ ಮೊದಲು ಏನಿದ್ದೀತು? (ಇನ್ನು) ಅದಕ್ಕಿಂತಲೂ ಅಲ್ಪವಾಗಿರುವ ಆಕಾಶದಲ್ಲಿ ಏನಿದ್ದೀತು? ಎಂದರೆ, ಇವರಲ್ಲಿರುವ ದಹರಾಕಾಶವಿದೆಯಲ್ಲ, ಅದರಲ್ಲಿರುವದಾವದರೂ ಏನು? ಯಾವದೂ ಇರಲಾರದು- ಎಂದು ಅಭಿಪ್ರಾಯ. ಒಂದುವೇಳೆ ಯಃಕಶ್ಚಿತವಾಯಿ ನಷ್ಟು ಏನಾದರೂ ಇದ್ದರೂ ಅದನ್ನು ಅನ್ವೇಷಣೆಮಾಡುವದರಿಂದ ಅಥವಾ ವಿಜಿಜ್ಞಾಸೆಮಾಡುವದರಿಂದ ಯಾವ ಫಲವು ವಿಜಿಜ್ಞಾಸೆಮಾಡುವವನಿಗೆ ಆದೀತು? ಆದ್ದರಿಂದ (ತತ್=ತತ್ರ) ಅಲ್ಲಿ ಅನ್ವೇಷಣಮಾಡಬೇಕಾದದ್ದಾಗಲಿ ವಿಜಿಜ್ಞಾಸ ಮಾಡಬೇಕಾದದ್ದಾಗಲಿ (ಯಾವದಿದ್ದರೂ) ಅದರಿಂದ (ಯಾವ) ಪ್ರಯೋಜನವೂ ಇಲ್ಲ- ಎಂದೆನ್ನುವ (ಆ ಶಿಷ್ಯರಿಗೆ) ಆಚಾರ್ಯನು ಹೀಗೆನ್ನಬೇಕು- ಎಂಬುದು ಶ್ರುತಿಯ ವಚನವು.

## ಹೃದಯಾಕಾಶದ ಮಹತ್ತ್ವ

(ಭಾಷ್ಯ)

೬೦೯ ಶೃಣುತ । ತತ್ರ ಯದ್ ಬ್ರೂಥ ಪುಣ್ಡರೀಕಾನ್ತಃಖಸ್ಯ[1] ಅಲ್ಪತ್ವಾತ್ ತತ್ಸ್ಥಮ್ ಅಲ್ಪತರಂ ಸ್ಯಾದಿತಿ । ತದಸತ್ । ನ ಹಿ ಖಂ ಪುಣ್ಡರೀಕ ವೇಶ್ಮಗತಂ ಪುಣ್ಡರೀಕಾದಲ್ಪತರಂ ಮತ್ವಾ ಅವೋಚಂ ದಹರೋಽಸ್ಮಿನ್ ಅನ್ತ ರಾಕಾಶ ಇತಿ । ಕಿಂ ತರ್ಹಿ ಪುಣ್ಡರೀಕಮಲ್ಪಮ್. ತದನುವಿಧಾಯಿ ತತ್ಸ್ಥಮನ್ತಃ ಕರಣಂ ಪುಣ್ಡರೀಕಾಕಾಶಪರಿಚ್ಛಿನ್ನಮ್ । ತಸ್ಮಿನ್ ವಿಶುದ್ಧೇ ಸಂಹೃತಕರಣಾನಾಂ ಯೋಗಿನಾಂ ಸ್ವಚ್ಛ ಇವೋದಕೇ ಪ್ರತಿಬಿಮ್ಬರೂಪಮ್ ಆದರ್ಶ ಇವ ಶುದ್ಧೇ ಸ್ವಚ್ಛಂ ವಿಜ್ಞಾನಜ್ಯೋತಿಃಸ್ವರೂಪಾವಭಾಸಂ ತಾವನ್ಮಾತ್ರಂ ಬ್ರಹ್ಮ ಉಪ ಲಭ್ಯತ ಇತಿ ದಹರೋಽಸ್ಮಿನ್ನನ್ತರಾಕಾಶ ಇತ್ಯವೋಚಾಮ[2] ಅನ್ತಃಕರಣೋಪಾಧಿ ನಿಮಿತ್ತಮ್ । ಸ್ವತಸ್ತು ಯಾವಾನ್ ವೈ ಪ್ರಸಿದ್ಧಃ ಪರಿಮಾಣತಃ ಅಯಮಾ ಕಾಶೋ ಭೌತಿಕಃ, ತಾವಾನ್ ಏಷೋಽನ್ತರ್ಹೃದಯ ಆಕಾಶಃ । ಯಸ್ಮಿನ್ ಅನ್ವೇಷ್ಟವ್ಯಂ ವಿಜಿಜ್ಞಾಸಿತವ್ಯಂ ಚ ಅವೋಚಾಮ । ನಾಪ್ಯಾಕಾಶತುಲ್ಯಪರಿ ಮಾಣತ್ವಮಭಿಪ್ರೇತ್ಯ ತಾವಾನ್ ಇತ್ಯುಚ್ಯತೇ। ಕಿಂ ತರ್ಹಿ ಬ್ರಹ್ಮಣೋಽನುರೂಪಸ್ಯ ದೃಷ್ಟಾನ್ತಾನ್ತರಸ್ಯ ಅಭಾವಾತ್ । ಕಥಂ ಪುನರ್ನಾಕಾಶಸಮಮೇವ ಬ್ರಹ್ಮೇ ತ್ಯವಗಮ್ಯತೇ ? "ಯೇನಾವೃತಂ ಖಂ ಚ ದಿವಂ ಮಹೀಂ ಚ" (ತೈ.ನಾ. ೧), "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧), "ಏತಸ್ಮಿನ್ನು

1. 'ಅನ್ತಸ್ಥಸ್ಯ ಖಸ್ಯ' ಪಾ॥

2. ಈ ವಾಕ್ಯದಲ್ಲಿಯೂ ಮುಂದಿನ ವಾಕ್ಯದಲ್ಲಿಯೂ 'ಅವೋಚಮ್' ಎಂದೇ ಇದ್ದು ಬರೆದವರು 'ಅವೋಚಾಮ' ಎಂದು ತಿದ್ದಿಕೊಂಡಿರಬಹುದೆ ?

ಖಲ್ವಕ್ಷರೇ ಗಾರ್ಗ್ಯಾಕಾಶಃ" (ಬೃ. ೩-೮-೧೧) ಇತ್ಯಾದಿಶ್ರುತಿಭ್ಯಃ ಕಿಂ ಚ, ಉಭೇ ಅಸ್ಮಿನ್ ದ್ಯಾವಾಪೃಥಿವೀ ಬ್ರಹ್ಮಾಕಾಶೇ ಬುದ್ಧ್ಯುಪಾಧಿವಿಶಿಷ್ಟೇ। ಅನ್ತರೇವ ಸಮಾಹಿತೇ ಸಮ್ಯಕ್ ಆಹಿತೇ ಸ್ಥಿತೇ। "ಯಥಾ ವಾ ಅರಾ ನಾಭೌ" (೭-೧೫-೧) ಇತ್ಯುಕ್ತಂ ಹಿ[1] । ತಥಾ ಉಭಾವಗ್ನಿಶ್ಚ ವಾಯುಶ್ಚೇತ್ಯಾದಿ ಸಮಾನಮ್ । ಯಚ್ಚಾಽಸ್ಯ ಆತ್ಮನಃ ಆತ್ಮೀಯತ್ವೇನ ದೇಹವತೋಽಸ್ತಿ ವಿದ್ಯತ ಇಹ ಲೋಕೇ। ತಥಾ ಯಚ್ಚ ಆತ್ಮೀಯತ್ವೇನ ನ ವಿದ್ಯತೇ। ನಷ್ಟಂ ಭವಿಷ್ಯಚ್ಚ ನಾಸ್ತೀತ್ಯುಚ್ಯತೇ । ನ ತ್ವತ್ಯನ್ತಮೇವ ಅಸತ್ । ತಸ್ಯ ಹೃದಾಕಾಶೇ[2] ಸಮಾಧಾನಾನುಪಪತ್ತೇಃ ॥

(ಭಾಷ್ಯಾರ್ಥ)

ಕೇಳಿರಿ. ಪುಂಡರೀಕದೊಳಗಿನ ಆಕಾಶವು ಅಲ್ಪವಾಗಿರುವದರಿಂದ ಅದರೊಳಗಿನದು ಇನ್ನೂ ಅಲ್ಪವಾಗಿರಬೇಕು ಎಂದು ಹೇಳುತ್ತೀರಲ್ಲ,[3] ಅದು ಸರಿಯಲ್ಲ. ಪುಂಡರೀಕವೇಶ್ಮದಲ್ಲಿರುವ ಆಕಾಶವನ್ನು ಅಲ್ಪತರವೆಂದೆಣಿಸಿ 'ಇದರೊಳಗಿರುವ ದಹರಾಕಾಶವು' ಎಂದೇನೂ ನಾನು ಹೇಳಲಿಲ್ಲ. ಮತ್ತೇನೆಂದರೆ, ಪುಂಡರೀಕವು ಅಲ್ಪವಾಗಿದೆ, ಅದನ್ನನುಸರಿಸಿಕೊಂಡಿರುವ ಅದರಲ್ಲಿರುವ ಅಂತಃಕರಣವು ಪುಂಡರೀಕಾಕಾಶಪರಿಚ್ಛಿನ್ನವಾಗಿರುತ್ತದೆ.[4] ಆ ವಿಶುದ್ಧವಾದ (ಅಂತಃಕರಣದಲ್ಲಿ) ಕರಣಗಳನ್ನು ಉಪಸಂಹಾರಮಾಡಿ (ನೋಡುವ) ಯೋಗಿಗಳಿಗೆ[5] ಸ್ವಚ್ಛವಾದ ನೀರಿನಲ್ಲಿಯೂ ಶುದ್ಧವಾದ ಕನ್ನಡಿಯೊಳಗೂ ಪ್ರತಿಬಿಂಬರೂಪವು (ಕಾಣಬರು)ವಂತೆ, ಸ್ವಚ್ಛವಾದ ವಿಜ್ಞಾನಜ್ಯೋತಿಯ ಸ್ವರೂಪಾವಭಾಸವು ಅಷ್ಟೇ ಪರಿಮಾಣದ್ದಾಗಿ[6] ಬ್ರಹ್ಮವು ಕಾಣಬರುತ್ತದೆಯಾದ್ದರಿಂದ ಇದರೊಳಗಿನ ದಹರಾಕಾಶವು, ಎಂದು ಅಂತಃಕರಣೋಪಾಧಿಯ ನಿಮಿತ್ತವ(ನ್ನಿಟ್ಟುಕೊಂಡು) ಹೇಳಿದೆವು.[7]

1. 'ಇತ್ಯುಕ್ತಮ್' ಎಂದೋ 'ಇತಿ ಹ್ಯುಕ್ತಮ್' ಎಂದೋ ಮೂಲಭಾಷ್ಯದಲ್ಲಿದ್ದಿರಬೇಕೆಂದು ಕಾಣುತ್ತದೆ. 2. ಹೃದ್ಯಾಕಾಶೇ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

3. ಈ ಭಾಷ್ಯವಾಕ್ಯವು ಏನೋ ಹೆಚ್ಚುಕಡಿಮೆಯಾಗಿರಬೇಕು ; ಏಕೆಂದರೆ ಶಿಷ್ಯರು ಪುಂಡರೀಕವೇ ಅಲ್ಪ, ಅದರೊಳಗಿನ ಆಕಾಶವು ಅಲ್ಪತರ– ಎಂದು ಹೇಳಿರುತ್ತಾರೆ ; ಇಲ್ಲಿ ಆಕಾಶದೊಳಗಿನದು ಅಲ್ಪತರ ಎಂದಂತೆ ಅನುವಾದಮಾಡಿದಂತಾಗಿದೆ. ಈ ಅಭಿಪ್ರಾಯವು ವಾಕ್ಯಶೇಷಕ್ಕೂ ಅನುಗುಣವಾಗಿಲ್ಲ.

4. ಇಲ್ಲಿ ಪುಂಡರೀಕಾಕಾಶವೆಂದರೆ ಪುಂಡರೀಕದೊಳಗಿನ ಭೂತಾಕಾಶವೇ, ಬ್ರಹ್ಮವಲ್ಲ.

5. ಉಪಾಸಕರಿಗೆ.

6. ಆ ಅಂತಃಕರಣವನ್ನೆಲ್ಲ ವ್ಯಾಪಿಸಿಕೊಂಡು ಎಂದರ್ಥ.

7. ಹೃದಯದಿಂದಾಚೆಗೆ ಇಲ್ಲವೆಂಬ ಅಭಿಪ್ರಾಯದಿಂದಲ್ಲ. ಈ ವಾಕ್ಯದಲ್ಲಿಯೂ ಮುಂದಿನ ವಾಕ್ಯದಲ್ಲಿಯೂ 'ಅವೋಚಾಮ' ಎಂಬ ಪಾಠವನ್ನು ಒಪ್ಪಿ 'ಹೇಳಿದೆವು' ಎಂದು ಕನ್ನಡಿಸಲಾಗಿದೆ ; ಆದರೆ ಉಪಕ್ರಮಾನುಗುಣವಾಗಿ 'ಅವೋಚಮ್' ಎಂದಿದ್ದರೆ 'ಹೇಳಿದೆನು' ಎಂದೇ ಕನ್ನಡಿಸಬೇಕಾಗುವದು

ತಾನುತಾನಾದರೋ ಈ ಪ್ರಸಿದ್ಧವಾದ ಭೌತಿಕಾಕಾಶವು ಪರಿಮಾಣದಿಂದ ಎಷ್ಟು ಮಟ್ಟಿಗೆ ಇರುವದೋ ಈ ಹೃದಯದೊಳಗಿನ ಆಕಾಶವೂ ಅಷ್ಟೇ, ಅದರಲ್ಲಿಯೇ[1] ಅನ್ವೇಷಣಮಾಡಬೇಕು, ವಿಜಿಜ್ಞಾಸೆಮಾಡಬೇಕು – ಎಂದು ಹೇಳಿದೆವು. (ಬ್ರಹ್ಮವು) ಆಕಾಶಕ್ಕೆ ಸಮನಾದ ಪರಿಮಾಣವುಳ್ಳದ್ದೆಂಬ ಅಭಿಪ್ರಾಯದಿಂದಲೂ 'ಅಷ್ಟೇ' ಎಂದು ಹೇಳಿರುವದಿಲ್ಲ, ಮತ್ತೇನೆಂದರೆ ಬ್ರಹ್ಮಕ್ಕೆ ತಕ್ಕ ಮತ್ತೊಂದು ದೃಷ್ಟಾಂತವು ಇಲ್ಲದ್ದರಿಂದ (ಹಾಗೆಂದಿದೆ).[2]

(ಪ್ರಶ್ನೆ) :– ಬ್ರಹ್ಮವು ಆಕಾಶಕ್ಕೆ ಸಮವೇ ಎಂದಲ್ಲ ಎಂಬುದು ಹೇಗೆ ಗೊತ್ತಾಗುತ್ತದೆ ?

(ಉತ್ತರ) – "ಯಾವವರಿಂದ ಆಕಾಶವೂ ದ್ಯುಲೋಕವೂ ಭೂಮಿಯೂ ವ್ಯಾಪಿಸಿರುವದೋ'' (ಶ್ವ ನಾ ೧), "ಆ ಈ ಆತ್ಮನಿಂದ ಆಕಾಶವುಂಟಾಯಿತು" (ತೈ. ೨-೧), "ಗಾರ್ಗಿಯೆ, ಈ ಅಕ್ಷರದಲ್ಲಿ ಆಕಾಶವು (ಓತಪ್ರೋತವಾಗಿದೆ)" (ಬೃ ೩-೮-೧೧)[3] ಮುಂತಾದ ಶ್ರುತಿಗಳಿಂದ (ಹೀಗೆಂದು ಗೊತ್ತಾಗುತ್ತದೆ).

ಮತ್ತು ದ್ಯುಲೋಕ, ಪೃಥಿವಿ– ಎಂಬೀ ಎರಡೂ ಈ ಬುದ್ಧಿಯೆಂಬ ಉಪಾಧಿಯಿಂದೊಡಗೂಡಿದ ಬ್ರಹ್ಮಾಕಾಶದಲ್ಲಿ ಒಳಗೇ ಸಮಾಹಿತವಾಗಿರುತ್ತವೆ, (ಸಮ್ಯಕ್=) ಚೆನ್ನಾಗಿ (ಆಹಿತೇ) ಇಡಲ್ಪಟ್ಟವೆ, ಇದ್ದುಕೊಂಡಿರುತ್ತವೆ. "ಹೇಗೆ ಹಾರೆಕೋಲುಗಳು ಗುಂಬದಲ್ಲಿ" (೭-೧೫-೧) ಎಂದು ಹಿಂದೆ ಹೇಳಿದೆಯಲ್ಲವೆ ? ಇದರಂತೆ 'ಅಗ್ನಿ, ವಾಯು– ಈ ಎರಡೂ' ಮುಂತಾದ ಗ್ರಂಥವು (ಈ ವಾಕ್ಯಕ್ಕೆ) ಸಮಾನವಾಗಿದೆ. ಈ ದೇಹವುಳ್ಳ ಆತ್ಮನಿಗೆ ಈ ಲೋಕದಲ್ಲಿ

1 ಅದರಲ್ಲಿ ಎಂದರೆ ಆ ಬ್ರಹ್ಮವೆಂಬ ಆಕಾಶದಲ್ಲಿ. ಇಲ್ಲಿರುವ ದಹರಾಕಾಶವು ಭೂತವಲ್ಲ, ಜೀವನೂ ಅಲ್ಲ ಎಂದು ಸೂ ಭಾ ೧-೩-೧೪ರಿಂದ ೨೧ರವರೆಗೆ ಪ್ರತಿಪಾದಿಸಿದೆ. ಆಕಾಶದಲ್ಲಿರುವ ದ್ಯಾವಾಪೃಥಿವ್ಯಾದಿಗಳನ್ನು ಉಪಾಸನೆಮಾಡಬೇಕೆಂಬ ಅರ್ಥವೇನೂ ಇಲ್ಲವೆಂಬುದಕ್ಕೆ ಸೂ. ಭಾ. ೧-೩-೧೪ (ಭಾ ಭಾ ೨೫೮) ನೋಡಿ.

2. ಇದು ಅಲ್ಪತ್ವನಿವೃತ್ತಿಗಾಗಿಯೇ ಹೊರತು ಆಕಾಶದಷ್ಟೇ ಪರಿಮಾಣವುಳ್ಳದ್ದೆಂಬ ಅಭಿಪ್ರಾಯದಿಂದಲ್ಲ ಸೂ. ಭಾ ೧-೩-೨೧ನ್ನು ನೋಡಿ.

3 ಇಲ್ಲಿ ಅವ್ಯಾಕೃತಾಕಾಶಕ್ಕಿಂತ ಬ್ರಹ್ಮವು ವ್ಯಾಪಕವೆಂದಿರುವದರಿಂದ ಭೂತಾಕಾಶಕ್ಕಿಂತಲೂ ವ್ಯಾಪಕವೆಂದು ತಾನೇ ಸಿದ್ಧವಾಗುತ್ತದೆ.

4 ಹಿಂದೆ ಎಲ್ಲವೂ ಪ್ರಾಣದಲ್ಲಿ ಸಮರ್ಪಿತವಾಗಿವೆ ಎಂದೇ ಹೇಳಿದೆಯಾದರೂ ಆತ್ಮನಲ್ಲಿಯೇ ಪ್ರಾಣವು ಇರುವದರಿಂದ ಪ್ರಾಣದಲ್ಲಿರುವದೆಂದು ಹೇಳಿದ್ದು ಆತ್ಮನಲ್ಲಿದೆಯೆಂದು ಹೇಳಿದಂತೆಯೇ ಎಂದು ಭಾವಿಸಿ ಈ ವಾಕ್ಯವನ್ನು ಉದಾಹರಿಸಿರಬಹುದು. ಈ ಅರನಾಭಿ ದೃಷ್ಟಾಂತವನ್ನು ನೇರಾಗಿ ಆತ್ಮನಿಗೇ ಕೊಟ್ಟಿರುವದಕ್ಕೆ ಬೃ. ೨ ೫-೧೫ನ್ನು ನೋಡಿ.

5. ಇವುಗಳೆಲ್ಲವೂ ದ್ಯಾವಾಪೃಥಿವಿಗಳಂತೆ ಬ್ರಹ್ಮದಲ್ಲಿ ಅಂತರ್ಗತವಾಗಿವೆ ಎಂದು ಅರ್ಥ[illegible]ಕೆಂಬರ್ಥ.

ತನ್ನದಾಗಿ ಯಾವದು ಇದೆಯೋ, ಇರುತ್ತದೆಯೋ, ಮತ್ತು ಯಾವದು ತನ್ನದಾಗಿ ಇರುವದಿಲ್ಲವೋ- (ಅದೂ ಅಲ್ಲಿ ಸಮಾಹಿತವಾಗಿರುತ್ತವೆ ಇಲ್ಲಿ) ಕಳೆದುಹೋದದ್ದು ಮುಂದೆ ಆಗಲಿರುವದು- ಇವುಗಳನ್ನು 'ಇರುವದಿಲ್ಲ' ಎಂದಿದೆಯೇ ಹೊರತು ಅತ್ಯಂತವಾಗಿ ಅಸತ್ತಾಗಿರುವದನ್ನು (ಇಲ್ಲ ಎಂಬ ಶಬ್ದದಿಂದ ಹೇಳಿಲ್ಲ), ಏಕೆಂದರೆ (ಅತ್ಯಂತವಾಗಿ ಅಸತ್ತಾಗಿರುವದು) ಹೃದಯಾಕಾಶದಲ್ಲಿ[1] ಇದ್ದುಕೊಂಡಿರುತ್ತದೆ ಎಂಬುದು ಹೊಂದುವದಿಲ್ಲ[2]

## ಬ್ರಹ್ಮಕ್ಕೆ ಶರೀರದ ದೋಷಗಳು ಸೋಂಕವು

(ಉಪನಿಷತ್ತು)

**ತಂ ಚೇದ್ ಬ್ರೂಯುರಸ್ಮಿಗ್ಂಶ್ಚೇದಿದಂ ಬ್ರಹ್ಮಪುರೇ ಸರ್ವಗ್ಂ ಸಮಾಹಿತಗ್ಂ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾ ಯದೈತಜ್ಜರಾ ವಾಽಽಪ್ನೋತಿ ಪ್ರಧ್ವಗ್ಂಸತೇ ವಾ ಕಿಂ ತತೋಽತಿಶಿಷ್ಯತ ಇತಿ ॥ ೪ ॥**

**ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತ ಏತತ್ಸತ್ಯಂ ಬ್ರಹ್ಮಪುರಮಸ್ಮಿನ್ ಕಾಮಾಃ ಸಮಾಹಿತಾ ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶನ್ತಿ ಯಥಾನುಶಾಸನಂ ಯಂ ಯಮನ್ತಮಭಿಕಾಮಾ ಭವನ್ತಿ ಯಂ ಜನಪದಂ ಯಂ ಕ್ಷೇತ್ರ ಭಾಗಂ ತಮೇವೋಪಜೀವನ್ತಿ ॥ ೫ ॥**

೪-೫. ಅವನನ್ನು ಕುರಿತು "ಈ ಬ್ರಹ್ಮಪುರದಲ್ಲಿ ಎಲ್ಲವೂ ಸಮಾಹಿತವಾಗಿದ್ದರೆ ಸರ್ವಭೂತಗಳೂ ಸರ್ವಕಾಮಗಳೂ (ಸಮಾಹಿತವಾಗಿದ್ದರೆ), ಯಾವಾಗ ಇದನ್ನು ಜರೆಯು ಬಂದು ಸೇರುವದೋ, ಅಥವಾ (ಯಾವಾಗ ಇದು) ಪ್ರಧ್ವಂಸವಾಗುವದೋ ಆಗ ಏನು ಉಳಿದುಕೊಳ್ಳುತ್ತದೆ?" ಎಂದು ಕೇಳಿದರೆ ಅವನು ಹೀಗೆನ್ನಬೇಕು: "ಇದರ ಜರೆಯಿಂದ ಇದು ಜೀರ್ಣವಾಗುವದಿಲ್ಲ, ಇದರ

---

1. **ಹೃದ್ಯಾಕಾಶೇ (ಹೃದಯವೆಂಬ ಆಕಾಶದಲ್ಲಿ) ಎಂಬುದು ಹೊಂದುವದಿಲ್ಲ, ಆ ಪಾಠವನ್ನೇ ಇಟ್ಟುಕೊಂಡರೆ ಹೃದಯದೊಳಗಿನ ಆಕಾಶವಾದ ಬ್ರಹ್ಮದಲ್ಲಿ ಎಂದು ಅರ್ಥವನ್ನು ಮಾಡಿಕೊಳ್ಳಬೇಕು.**
2. ಏಕೆಂದರೆ ಅತ್ಯಂತವಾಗಿ ಅಸತ್ತಾಗಿರುವದು ಎತ್ತರಲ್ಲಿಯೂ ಇರುವದಿಲ್ಲ

ವಧೆಯಿಂದ ಇದು ನಾಶವಾಗುವದಿಲ್ಲ; ಇದು ಸತ್ಯವಾದ ಬ್ರಹ್ಮಪುರವು. ಇದರಲ್ಲಿ ಕಾಮಗಳು ಸಮಾಹಿತವಾಗಿರುತ್ತವೆ. ಇವನು ಅಪಹತ ಪಾಪ್ಮನೂ ವಿಜರನೂ ವಿಮೃತ್ಯುವೂ ವಿಶೋಕನೂ ವಿಜಿಘತ್ಸನೂ, ಅಪಿಪಾಸನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆದ ಆತ್ಮನು. ಹೇಗೆ ಇಲ್ಲಿ ಪ್ರಜೆಗಳು ಯಥಾನುಶಾಸನವಾಗಿ ಅನುಸರಿಸಿಕೊಂಡಿರುವರೋ ಯಾವಯಾವ ಅಂತವನ್ನು, ಯಾವ(ಯಾವ) ಜನಪದವನ್ನು, ಯಾವ (ಯಾವ) ಕ್ಷೇತ್ರಭಾಗವನ್ನು, ಕಾಮಿಸುವವರಾಗಿರುತ್ತಾರೋ ಅದವನ್ನೇ ಉಪಜೀವಿಸುತ್ತಿರುವರೋ (ಹಾಗೆ ಅಜ್ಞರು).

## ಶಂಕೆ: ಶರೀರವು ನಾಶವಾದರೆ ಬ್ರಹ್ಮವು ಉಳಿಯುವದಿಲ್ಲವಲ್ಲ !

(ಭಾಷ್ಯ)

೬೧೧. ತಂ ಚೇತ್ ಏವಮುಕ್ತವನ್ತಂ ಬ್ರೂಯುಃ ಪುನರನ್ತೇವಾಸಿನಃ, ಅಸ್ಮಿಂಶ್ಚೇತ್ ಯಥೋಕ್ತೇ ಚೇತ್ ಯದಿ ಬ್ರಹ್ಮಪುರೇ ಬ್ರಹ್ಮಪುರೋಪಲಕ್ಷಿತಾನ್ತರಾಕಾಶ ಇತ್ಯರ್ಥಃ। ಇದಂ ಸರ್ವಂ ಸಮಾಹಿತಮ್, ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ। ಕಥಮಾಚಾರ್ಯೇಣಾನುಕ್ತಾಃ ಕಾಮಾ ಅನ್ತೇವಾಸಿಭಿರುಚ್ಯನ್ತೇ ? ನೈಷ ದೋಷಃ। "ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ" (೮-೧-೩) ಇತ್ಯುಕ್ತಾ ಏವ ಹಿ ಆಚಾರ್ಯೇಣ ಕಾಮಾಃ। ಅಪಿ ಚ ಸರ್ವಶಬ್ದೇನ ಚೋಕ್ತಾ ಏವ ಕಾಮಾಃ। ಯದಾ ಯಸ್ಮಿನ್ ಕಾಲ ಏತತ್ ಶರೀರಂ ಬ್ರಹ್ಮಪುರಾಖ್ಯಂ ಜರಾವಲೀಪಲಿತಾದಿಲಕ್ಷಣಾ ವಯೋಹಾನಿರ್ವಾ ಆಪ್ನೋತಿ, ಶಸ್ತ್ರಾದಿನಾ ವಾ ವೃಕ್ಣಂ ಪ್ರಧ್ವಂಸತೇ ವಿಸ್ರಂಸತೇ ವಿನಶ್ಯತಿ ಕಿಂ ತತೋಽನ್ಯದತಿಶಿಷ್ಯತೇ। ಘಟಾಶ್ರಿತಕ್ಷೀರವದಗ್ನಿಸ್ನೇಹಾದಿವದ್ ಘಟನಾಶೇ ದೇಹನಾಶೇಽಪಿ ದೇಹಾಶ್ರಯಮ್ ಉತ್ತರೋತ್ತರಂ ಪೂರ್ವಪೂರ್ವನಾಶಾತ್ ನಶ್ಯತೀತ್ಯಭಿಪ್ರಾಯಃ। ಏವಂ ಪ್ರಾಪ್ತೇ ನಾಶೇ ಕಿಂ ತತೋಽನ್ಯದ್ ಯಥೋಕ್ತಾತ್, ಅತಿಶಿಷ್ಯತೇ ಅವತಿಷ್ಠತೇ ? ನ ಕಿಂಚಿದವತಿಷ್ಠತ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆಂದ ಆತನನ್ನು ಕುರಿತು ಶಿಷ್ಯರು ಮತ್ತೆ ಹೀಗೆಂದರೆ: ಈ ಮೇಲೆ ಹೇಳಿದ ಬ್ರಹ್ಮಪುರದಲ್ಲಿ, ಬ್ರಹ್ಮಪುರದಿಂದ ಉಪಲಕ್ಷಿತವಾದ ಅಂತರಾಕಾಶದಲ್ಲಿ ಎಂದರ್ಥ. ಇದೆಲ್ಲವೂ — ಸರ್ವಭೂತಗಳೂ ಸರ್ವಕಾಮಗಳೂ— ಸಮಾಹಿತವಾಗಿವೆ —

(ಆಕ್ಷೇಪ) :- ಆಚಾರ್ಯನು ಹೇಳದೆ ಇರುವ ಕಾಮಗಳನ್ನು ಶಿಷ್ಯರು ಹೇಳುತ್ತಿರುವದು ಹೇಗೆ (ಸರಿ) ?

(ಪರಿಹಾರ) :- ಇದೇನೂ ದೋಷವಲ್ಲ. ಏಕೆಂದರೆ "ಇವನದಾಗಿ ಇಲ್ಲಿ ಯಾವದಿರುವದೋ, ಯಾವದು ಇರುವದಿಲ್ಲವೋ" (೮-೩-೩) ಎಂದು ಆಚಾರ್ಯನು ಕಾಮಗಳನ್ನು ಹೇಳಿಯೇ ಇರುತ್ತಾನೆ. ಮತ್ತು 'ಎಲ್ಲವೂ' (೮-೩-೩) ಎಂಬ ಮಾತಿನಿಂದಲೂ ಕಾಮಗಳನ್ನು ಹೇಳಿಯೇ ಇರುತ್ತಾನೆ

ಯಾವಾಗ, ಯಾವ ಕಾಲದಲ್ಲಿ, ಈ ಬ್ರಹ್ಮಪುರವೆಂಬ ಶರೀರವನ್ನು ಜರೆಯು ತಲೆನರೆಯಾಗುವದೇ ಮುಂತಾದ ರೂಪದ, ಅಥವಾ ವಯಸ್ಸಾದ (ರೂಪದ ಮುಪ್ಪು), ಬಂದು ಸೇರಿಕೊಳ್ಳುವದೋ, ಅಥವಾ ಶಸ್ತ್ರಾದಿಗಳಿಂದ ಗಾಯಗೊಂಡು ಪ್ರಧ್ವಂಸವಾಗುವದೋ, ಸಡಿಲವಾಗುವದೋ, ನಾಶವಾಗುವದೋ, (ಆಗ) ಅದಕ್ಕಿಂತ ಬೇರೆಯಾಗಿ ಯಾವದು ಉಳಿದುಕೊಳ್ಳುವದು? ಗಡಿಗೆಯು ನಾಶವಾಗಲಾಗಿ ಗಡಿಗೆಯನ್ನಾಶ್ರಯಿಸಿಕೊಂಡಿರುವ ಹಾಲು, ಮೊಸರು, ಜಿಡ್ಡು- ಮುಂತಾದವುಗಳಂತೆ ದೇಹವು ನಾಶವಾದರೂ- ದೇಹವನ್ನಾಶ್ರಯಿಸಿಕೊಂಡಿರುವದು ಹಿಂದುಹಿಂದಿನದು ನಾಶವಾದರೆ ಮುಂದುಮುಂದಿನದು ನಾಶವಾಗುತ್ತದೆ ಎಂದು ಅಭಿಪ್ರಾಯ.[1] ಹೀಗೆ ನಾಶವು ಪ್ರಾಪ್ತವಾದರೆ -ಮೇಲೆ ಹೇಳಿದ ಅದಕ್ಕಿಂತಲೂ ಬೇರೆಯಾಗಿ[2] ಯಾವದು ಉಳಿದುಕೊಳ್ಳುವದು, ನಿಂತುಕೊಳ್ಳುವದು ? ಏನೂ ಉಳಿಯುವದೇ ಇಲ್ಲ ಎಂದು ಅಭಿಪ್ರಾಯ.

## ಶರೀರದ ದೋಷಗಳು ಬ್ರಹ್ಮಕ್ಕಿಲ್ಲ, ಅದರಲ್ಲಿ ಸರ್ವಕಾಮಗಳೂ ಇವೆ

(ಭಾಷ್ಯ)

೬೧೧. ಏವಮನ್ತೇವಾಸಿಭಿಶ್ಚೋದಿತಃ ಸ ಆಚಾರ್ಯೋ ಬ್ರೂಯಾತ್ ತನ್ಮತಿಮಪನಯನ್। ಕಥಮ್ ? ಅಸ್ಯ ದೇಹಸ್ಯ ಜರಯಾ ಏತದ್ ಯಥೋಕ್ತಮ್ ಅನ್ತರಾಕಾಶಾಖ್ಯಂ ಬ್ರಹ್ಮ ಯಸ್ಮಿನ್ ಸರ್ವಂ ಸಮಾಹಿತಂ ನ ಜೀರ್ಯತಿ ದೇಹವನ್ನ ವಿಕ್ರಿಯತ ಇತ್ಯರ್ಥಃ। ನ ಚಾಸ್ಯ ವಧೇನ ಶಸ್ತ್ರಾದಿಘಾತೇನ ಏತದ್ ಹನ್ಯತೇ ಯಥಾಕಾಶಮ್ । ಕಿಮು ತತೋಽಪಿ ಸೂಕ್ಷ್ಮತರಮ್ ಅಶಬ್ದಮಸ್ಪರ್ಶಂ

1. ದೇಹವಿರುವವರೆಗೆ ಅದರ ಒಂದು ಧರ್ಮದ ಕಾರ್ಯವಾಗಿ ಮತ್ತೊಂದು ಉಂಟಾಗುತ್ತದೆ. ದೇಹವೇ ನಾಶವಾದರೆ ಮತ್ತೇನೂ ಉಳಿಯಲಾರದು ; ಗಡಿಗೆಯೊಡೆದ ಮೇಲೆ ಅದನ್ನಾಶ್ರಯಿಸಿ ಹಾಲು ನಾಶವಾಗುವದು, ಅದನ್ನಾಶ್ರಯಿಸಿಕೊಂಡಿದ್ದ ಮೊಸರೂ ನಾಶವಾಗುವದು, ಅದನ್ನಾಶ್ರಯಿಸಿಕೊಂಡಿದ್ದ ಜಿಡ್ಡೂ ನಾಶವಾಗುವದು. ಆಕಾಶಕ್ಕೆ ಅದರ ಜಿಡ್ಡು ಹತ್ತಿಕೊಂಡಿರುವದಿಲ್ಲವಷ್ಟೆ ? ಎಂದು ಅಭಿಪ್ರಾಯ.

2. ಶರೀರಕ್ಕಿಂತ ಬೇರೆಯಾಗಿ- ಎಂದಭಿಪ್ರಾಯ.

ಬ್ರಹ್ಮ ದೇಹೇನ್ದ್ರಿಯಾದಿದೋಷೈರ್ನ ಸ್ಪೃಶ್ಯತ ಇತ್ಯರ್ಥಃ। ಕಥಂ ದೇಹೇನ್ದ್ರಿಯಾದಿದೋಷೈರ್ನ ಸ್ಪೃಶ್ಯತ ಇತಿ ಏತಸ್ಮಿನ್ನವಸರೇ ವಕ್ತವ್ಯಂ ಪ್ರಾಪ್ತಂ ತತ್ ಪ್ರಕೃತವ್ಯಾಸಙ್ಗೋ ಮಾ ಭೂದಿತಿ ನೋಚ್ಯತೇ। ಇನ್ದ್ರವಿರೋಚನಾಖ್ಯಾಯಿಕಾಯಾಮ್ ಉಪರಿಷ್ಟಾದ್ ವಕ್ಷ್ಯಾಮೋ ಯುಕ್ತಿತಃ। ಏತತ್ ಸತ್ಯಮ್ ಅವಿತಥಂ ಬ್ರಹ್ಮಪುರಂ ಬ್ರಹ್ಮೈವ ಪುರಮ್ ಬ್ರಹ್ಮಪುರಮ್। ಶರೀರಾಖ್ಯಂ ತು ಬ್ರಹ್ಮಪುರಂ ಬ್ರಹ್ಮೋಪಲಕ್ಷಣಾರ್ಥತ್ವಾತ್। ತತ್ತು ಅನೃತಮೇವ। "ವಾಚಾರಮ್ಭಣಂ ವಿಕಾರೋ ನಾಮಧೇಯಮ್" (೬-೧-೪,೫,೬) ಇತಿ ಶ್ರುತೇಃ। ತದ್ವಿಕಾರೇ ಅನೃತೇಽಪಿ ದೇಹಶುಙ್ಗೇ ಬ್ರಹ್ಮೋಪಲಭ್ಯತ ಇತಿ ಬ್ರಹ್ಮಪುರಮ್ ಇತ್ಯುಕ್ತಂ ವ್ಯಾವಹಾರಿಕಮ್। ಸತ್ಯಂ ತು ಬ್ರಹ್ಮಪುರಮ್ ಏತದೇವ ಬ್ರಹ್ಮ। ಸರ್ವವ್ಯವಹಾರಾಸ್ಪದತ್ವಾತ್। ಅತೋಽಸ್ಮಿನ್ ಪುಣ್ಡರೀಕೋಪಲಕ್ಷಿತೇ ಬ್ರಹ್ಮಪುರೇ ಸರ್ವೇ ಕಾಮಾ ಯೇ ಬಹಿರ್ಭವದ್ಭಿಃ ಪ್ರಾರ್ಥ್ಯನ್ತೇ ತೇಽಸ್ಮಿನ್ನೇವ ಸ್ವಾತ್ಮನಿ ಸಮಾಹಿತಾಃ। ಅತಸ್ತತ್ಪ್ರಾಪ್ತ್ಯುಪಾಯಮೇವ ಅನುತಿಷ್ಠತ ಬಾಹ್ಯವಿಷಯತೃಷ್ಣಾಂ ತ್ಯಜತ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆ ಶಿಷ್ಯರು ಆಕ್ಷೇಪಿಸಲಾಗಿ ಆ ಆಚಾರ್ಯನು ಅವರ (ತಪ್ಪು)ತಿಳಿವಳಿಕೆಯನ್ನು ಹೋಗಲಾಡಿಸಲು ಹೀಗೆನ್ನಬೇಕು. ಹೇಗೆಂದರೆ, ಈ ದೇಹದ ಮುಪ್ಪಿನಿಂದ ಈ ಮೇಲೆ ಹೇಳಿದ ಅಂತರಾಕಾಶವೆಂಬ ಬ್ರಹ್ಮವು, ಯಾವವರಲ್ಲಿ ಇದೆಲ್ಲವೂ ಸಮಾಹಿತವಾಗಿದೆಯೋ (ಅದು) ಜೀರ್ಣವಾಗುವದಿಲ್ಲ. ದೇಹದಂತೆ ಮುಪ್ಪಾಗುವದಿಲ್ಲ- ಎಂದರ್ಥ. ಇದರ ವಧೆಯಿಂದ ಶಸ್ತ್ರಾದಿಗಳಿಂದ ಹೊಡೆದು (ಕೊಂದದ್ದ)ರಿಂದ ಇದು ಆಕಾಶದಂತೆಯೇ ಹತವಾಗದೆ ಇರುತ್ತದೆ ಇನ್ನು ಆ (ಆಕಾಶ)ಕ್ಕಿಂತಲೂ ಸೂಕ್ಷ್ಮತರವಾಗಿರುವ ಅಶಬ್ದವೂ ಅಸ್ಪರ್ಶವೂ ಆಗಿರುವ (ಈ) ಬ್ರಹ್ಮವನ್ನು ದೇಹೇಂದ್ರಿಯಾದಿಗಳ ದೋಷಗಳು ಸೋಂಕುವದಿಲ್ಲವೆಂಬುದನ್ನು ಹೇಳತಕ್ಕದ್ದೇನು ? ಎಂದರ್ಥ. ದೇಹೇಂದ್ರಿಯಾದಿಗಳ ದೋಷಗಳು ( ಅದನ್ನು ) ಸೋಂಕುವದಿಲ್ಲವೆಂಬುದು ಹೇಗೆಂಬುದನ್ನು ಈ ಸಂದರ್ಭದಲ್ಲಿ ಹೇಳಬೇಕಾಗಿ ಬಂದೊದಗಿದರೂ ಅದನ್ನು ಪ್ರಕೃತ(ವಿಷಯದಿಂದ) ವಿಕ್ಷೇಪವಾಗದಿರಲೆಂದು[1] ಹೇಳಿರುವದಿಲ್ಲ. ಮುಂದೆ ಇಂದ್ರವಿರೋಚನರ ಕಥೆಯಲ್ಲಿ (ಅದನ್ನು) ಯುಕ್ತಿಸಹಿತವಾಗಿ[2] ಹೇಳುವೆವು.

**ಇದು ಸತ್ಯವಾದ ಹುಸಿಯಲ್ಲದ ಬ್ರಹ್ಮಪುರವು ; ಬ್ರಹ್ಮವೆಂಬ ಪುರವೇ ಬ್ರಹ್ಮಪುರವು. ಶರೀರವೆಂಬುದಾದರೋ ಬ್ರಹ್ಮಕ್ಕೆ ಉಪಲಕ್ಷಣ**

---

1 ಪ್ರಕೃತವಿಷಯವು ಉಪಾಸನೆ ; ಅದನ್ನು ಬಿಟ್ಟು ತತ್ತ್ವವಿಚಾರದ ಕಡೆಗೆ ತಿರುಗದೆ ಇರುವದಕ್ಕಾಗಿ ಎಂದರ್ಥ.

2. ನಿಜವಾಗಿ ಆತ್ಮನು ಅಶರೀರನೇ ಎಂಬುದು ಯುಕ್ತಿ.

**ವಾಗಿರುವದರಿಂದ ಬ್ರಹ್ಮಪುರವು.** ಅದು (ನಿಜವಾಗಿ) ಅನೃತವೇ, "ವಿಕಾರವು ವಾಚಾರಂಭಣವಾದ ಹೆಸರೇ" (೬-೧-೪,೫,೬) ಎಂಬ ಶ್ರುತಿಯಿಂದ (ಹಾಗೆಂದು ಸಿದ್ಧವಾಗುತ್ತದೆ). ತನ್ನ ವಿಕಾರವಾದ ದೇಹಶುಂಗವು ಅನೃತವಾಗಿದ್ದರೂ ಅದರಲ್ಲಿ ಬ್ರಹ್ಮವು ಕಾಣಬರುತ್ತದೆಯಾದ್ದರಿಂದ (ಆ ದೇಹವು) ಬ್ರಹ್ಮಪುರವೆಂದು ಹೇಳಿದ್ದು ವ್ಯಾವಹಾರಿಕವು ಸತ್ಯವಾದ ಬ್ರಹ್ಮಪುರವಾದರೋ, ಈ ಬ್ರಹ್ಮವೇ, ಏಕೆಂದರೆ (ಇದು) ಸರ್ವವ್ಯವಹಾರಗಳಿಗೂ ಆಸ್ಪದವಾಗಿರುತ್ತದೆ.[1] ಆದ್ದರಿಂದ **ಪುಂಡರೀಕೋಪಲಕ್ಷಿತವಾದ ಈ ಬ್ರಹ್ಮಪುರದಲ್ಲಿ ಸರ್ವಕಾಮಗಳೂ, ನೀವು ಹೊರಗೆ (ಸಿಕ್ಕುವವೆಂದು) ಬಯಸುತ್ತಿರುವಿರಲ್ಲ ಅವು, ಈ ನಿಮ್ಮ ಸ್ವಾತ್ಮನಲ್ಲಿಯೇ ಸಮಾಹಿತವಾಗಿರುತ್ತವೆ ಆದ್ದರಿಂದ ಅದನ್ನು ಪಡೆದುಕೊಳ್ಳುವ ಉಪಾಯವನ್ನೇ ಅನುಷ್ಠಾನಮಾಡಿರಿ, ಹೊರಗಿನ ವಿಷಯತೃಷ್ಣೆಯನ್ನು ಬಿಡಿರಿ- ಎಂದು ಅಭಿಪ್ರಾಯ.**

## ದಹರಾತ್ಮನ ಲಕ್ಷಣ

(ಭಾಷ್ಯ)

೬೧೨ ಏಷ ಆತ್ಮಾ ಭವತಾಂ ಸ್ವರೂಪಮ್ । ಶೃಣುತ ತಸ್ಯ ಲಕ್ಷಣಮ್ ಅಪಹತಪಾಪ್ಮಾ । ಅಪಹತಃ ಪಾಪ್ಮಾ ಧರ್ಮಾಧರ್ಮಾಖ್ಯೋ ಯಸ್ಯ ಸೋಽಯಮ್ ಅಪಹತಪಾಪ್ಮಾ । ತಥಾ ವಿಜರೋ ವಿಗತಜರೋ ವಿಮೃತ್ಯುಶ್ಚ । ತದುಕ್ತಂ ಪೂರ್ವಮೇವ "ನ ವಧೇನಾಸ್ಯ ಹನ್ಯತ" ಇತಿ । ಕಿಮರ್ಥಂ ಪುನರುಚ್ಯತೇ ? ಯದ್ಯಪಿ ದೇಹಸಂಬನ್ಧಿಭ್ಯಾಂ ಜರಾಮೃತ್ಯುಭ್ಯಾಂ ನ ಸಂಬಧ್ಯತೇ ; ಅನ್ಯಥಾಽಪಿ ಸಂಬನ್ಧಸ್ತಾಭ್ಯಾಂ ಸ್ಯಾತ್ ಇತ್ಯಾಶಙ್ಕಾನಿವೃತ್ತ್ಯರ್ಥಮ್ । ವಿಶೋಕೋ ವಿಗತಶೋಕಃ । ಶೋಕೋ ನಾಮ ಇಷ್ಟಾದಿ[2]ವಿಯೋಗನಿಮಿತ್ತೋ ಮಾನಸಃ ಸಂತಾಪಃ । ವಿಜಿಘತ್ಸೋ ವಿಗತಾಶನೇಚ್ಛಃ । ಅಪಿಪಾಸಃ, ಅಪಾನೇಚ್ಛಃ। ನನ್ವಪಹತಪಾಪ್ಮತ್ವೇನ ಜರಾದಯಃ ಶೋಕಾನ್ತಾಃ ಪ್ರತಿಷಿದ್ಧಾ ಏವ ಭವನ್ತಿ । ಕಾರಣಪ್ರತಿಷೇಧಾತ್ । ಧರ್ಮಾಧರ್ಮಕಾರ್ಯಾ ಹಿ ತ ಇತಿ । ಜರಾದಿಪ್ರತಿಷೇಧೇನ ವಾ ಧರ್ಮಾಧರ್ಮಯೋಃ ಕಾರ್ಯಾಭಾವೇ ವಿದ್ಯಮಾನಯೋರಪ್ಯಸತ್ತ್ವಮಿತ್ಯಪಿತಿ ಪೃಥಕ್ಪ್ರತಿಷೇಧೋಽನರ್ಥಕಃ ಸ್ಯಾತ್ । ಸತ್ಯಮೇವಮ್ । ತಥಾಽಪಿ ಧರ್ಮಕಾರ್ಯಾನನ್ದವ್ಯತಿರೇಕೇಣ ಸ್ವಾಭಾವಿಕಾನನ್ದೋ ಯಥೇಶ್ವರೇ "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೭) ಇತಿ ಶ್ರುತೇಃ । ತಥಾ ಅಧರ್ಮಕಾರ್ಯ

---

1. ಎಲ್ಲಾ ವ್ಯವಹಾರಗಳಿಗೂ ಆಶ್ರಯವಾಗಿರುವದನ್ನಲ್ಲವೆ, ಪುರವೆನ್ನುವದು ? ಎಲ್ಲಾ ಕಲ್ಪಿತವ್ಯವಹಾರಗಳಿಗೂ ಬ್ರಹ್ಮವೇ ಆಸ್ಪದವು ಎಂದರೆ ಅಧಿಷ್ಠಾನವು ; ಆದ್ದರಿಂದ ಅದನ್ನು ಪುರವೆಂದಿದೆ ಎಂದು ಅಭಿಪ್ರಾಯ.

2. ಈ ಆದಿಶಬ್ದವು ಹೆಚ್ಚು ; ಅನುವಾದದ ಟಿಪ್ಪಣಿಯನ್ನು ನೋಡಿ.

ಜರಾದಿವ್ಯತಿರೇಕೇಣಾಽಪಿ ಜರಾದಿದುಃಖಸ್ವರೂಪಂ ಸ್ವಾಭಾವಿಕಂ ಸ್ಯಾದಿತ್ಯಾ ಶಙ್ಕ್ಯೇತ। ಅತೋ ಯುಕ್ತಸ್ತನ್ನಿವೃತ್ತಯೇ ಜರಾದೀನಾಂ ಧರ್ಮಾಧರ್ಮಾಭ್ಯಾಂ ಪೃಥಕ್ಪ್ರತಿಷೇಧಃ । ಜರಾದಿಗ್ರಹಣಂ ಸರ್ವದುಃಖೋಪಲಕ್ಷಣಾರ್ಥಮ್ । ಪಾಪ ನಿಮಿತ್ತಾನಾಂ ತು ದುಃಖಾನಾಮ್ ಆನನ್ತ್ಯಾತ್ ಪ್ರತ್ಯೇಕಂ ಚ ತತ್ಪ್ರತಿಷೇಧ ಸ್ಯಾಽಶಕ್ಯತ್ವಾತ್ ಸರ್ವದುಃಖಪ್ರತಿಷೇಧಾರ್ಥಂ ಯುಕ್ತಮೇವ ಅಪಹತಪಾಪ್ಮತ್ವ ವಚನಮ್ । ಸತ್ಯಾ ಅವಿತಥಾ ಕಾಮಾ ಯಸ್ಯ ಸೋಽಯಂ ಸತ್ಯಕಾಮಃ । ವಿತಥಾ ಹಿ ಸಂಸಾರಿಣಾಂ ಕಾಮಾಃ । ಈಶ್ವರಸ್ಯ ತದ್ವಿಪರೀತಾಃ । ತಥಾ ಕಾಮ ಹೇತವಃ ಸಂಕಲ್ಪಾ ಅಪಿ ಸತ್ಯಾ ಯಸ್ಯ ಸ ಸತ್ಯಸಂಕಲ್ಪಃ । ಸಂಕಲ್ಪಾಃ ಕಾಮಾಶ್ಚ ಶುದ್ಧಸತ್ತ್ವೋಪಾಧಿನಿಮಿತ್ತಾ ಈಶ್ವರಸ್ಯ । ಚಿತ್ರಗುವತ್ । ನ ಸ್ವತಃ । 'ನೇತಿ ನೇತಿ' (ಬೃ. ೨-೩-೬) ಇತ್ಯುಕ್ತತ್ವಾತ್ । ಯಥೋಕ್ತಲಕ್ಷಣ ಏವಾಽಽತ್ಮಾ ವಿಜ್ಞೇಯೋ ಗುರುಭ್ಯಃ ಶಾಸ್ತ್ರತಶ್ಚ ಆತ್ಮಸಂವೇದ್ಯತಯಾ ಚ ಸ್ವಾರಾಜ್ಯಕಾಮೈಃ॥

(ಭಾಷ್ಯಾರ್ಥ)

ಇವನೇ ಆತ್ಮನು, ನಿಮ್ಮ ಸ್ವರೂಪವು.[1] ಅವನ ಲಕ್ಷಣವನ್ನು ಕೇಳಿರಿ (ಅವನು) ಅಪಹತಪಾಪ್ಮನು- ಯಾವನ ಧರ್ಮಾಧರ್ಮವೆಂಬ ಪಾಪವು ಅಪಹತ ವಾಗಿದೆಯೋ[2] ಆ ಇವನು ಅಪಹತಪಾಪ್ಮನು , ಮತ್ತು ವಿಜರನು ಮುಪ್ಪಿಲ್ಲದವನು, ವಿಮೃತ್ಯುವೂ ಆದವನು , 'ಇದರ ವಧೆಯಿಂದ ಅವನು ಹತನಾಗುವದಿಲ್ಲ' ಎಂದು ಇದನ್ನು ಹಿಂದೆಯೇ ಹೇಳಲಾಗಿದೆ. (ಹಾಗಾದರೆ) ಮತ್ತೆ ಹೇಳುತ್ತಿರುವದೇಕೆ ? ಎಂದರೆ, ದೇಹಸಂಬದ್ಧವಾದ ಮುಪ್ಪುಸಾವುಗಳ ಸಂಬಂಧವಿಲ್ಲದವನಾದರೂ ಮತ್ತೊಂದು ಬಗೆಯಿಂದಲೂ ಅವುಗಳ ಸಂಬಂಧವಿರಬಹುದು-ಎಂಬ ಶಂಕೆಯನ್ನು ತೊಲಗಿಸುವದಕ್ಕಾಗಿ (ಹೇಳಿದೆ) ವಿಶೋಕನು, ಎಂದರೆ ಶೋಕವಿಲ್ಲದವನು ಶೋಕವೆಂದರೆ ಇಷ್ಟವೇ (ಮುಂತಾದದ್ದರ)[3] ಅಗಲುವಿಕೆಯ ನಿಮಿತ್ತದಿಂದಾದ ಮನಸ್ಸಿನ ಸಂತಾಪವು. ವಿಜಿಘತ್ಸನು, ಎಂದರೆ ತಿನ್ನುವ ಇಚ್ಛೆಯಿಲ್ಲದವನು , ಅಪಿಪಾಸನು, ಕುಡಿಯುವ ಇಚ್ಛೆಯಿಲ್ಲದವನು.

---

1. ಆತ್ಮಶಬ್ದಕ್ಕೆ ಸ್ವರೂಪವೆಂಬುದೇ ಮುಖ್ಯಾರ್ಥ.

2. ಧರ್ಮಾಧರ್ಮಗಳು ಇದ್ದು ನಾಶವಾದವನು ಎಂದೇನೂ ಅರ್ಥವಲ್ಲ ; ಎಂದೆಂದಿಗೂ ನಾಶವಾಗಿರುವ, ಎಂದಿಗೂ ಇಲ್ಲದೆ ಇಲ್ಲವೆನಿಸಿಕೊಂಡಿರುವ, ಧರ್ಮಾಧರ್ಮಗಳುಳ್ಳವನು.

3. ಮೂಲದಲ್ಲಿ 'ಆದಿ' ಎಂಬ ಮಾತು ಹೆಚ್ಚು , ಇಷ್ಟವಿಯೋಗಾದಿ ಎಂದಿದ್ದರೆ ಇಷ್ಟದ ಅಗಲುವಿಕೆ ಮುಂತಾದದ್ದರ, ಎಂದರೆ ಅನಿಷ್ಟಪ್ರಾಪ್ತಿ- ಎಂದಾದರೂ ಅರ್ಥವಾಗುತ್ತದೆ. ಹಾಗೆಯೇ ಭಾಷ್ಯದಲ್ಲಿದ್ದು ಲೇಖಕರ ಕೈತಪ್ಪಿನಿಂದ ಈಗಿನ ಪಾಠವು ಬಂದಿದ್ದರೂ ಬಂದಿರ ಬಹುದಾಗಿದೆ.

(ಆಕ್ಷೇಪ) :- ಅಪಹತಪಾಪ್ಮನಾಗಿರುವದರಿಂದ ಮುಪ್ಪಿನಿಂದ ಹಿಡಿದು ಶೋಕದವರೆಗಿನ (ದೋಷ)ಗಳನ್ನು ಅಲ್ಲಗಳೆದಂತೆಯೇ ಆಗಿರುತ್ತದೆ. ಏಕೆಂದರೆ ಕಾರಣವನ್ನು ಅಲ್ಲಗಳೆದಿದೆ. ಅವುಗಳು ಧರ್ಮಾಧರ್ಮಗಳ ಕಾರ್ಯಗಳಷ್ಟೆ ? ಅಥವಾ ಮುಪ್ಪು ಮುಂತಾದವುಗಳನ್ನು ಅಲ್ಲಗಳೆದದ್ದರಿಂದ ಧರ್ಮಾಧರ್ಮಗಳ ಕಾರ್ಯವಿಲ್ಲವಾಗಲು (ಆ ಧರ್ಮಾಧರ್ಮಗಳು) ಇದ್ದರೂ ಇಲ್ಲದಂತೆಯೇ. ಆದ್ದರಿಂದ ಮತ್ತೆ ಅವುಗಳನ್ನು ಅಲ್ಲಗಳೆದಿರುವದು ವ್ಯರ್ಥವಾಗುವದಲ್ಲವೆ ?

(ಪರಿಹಾರ) :- ನಿಜ, ಹೀಗೆಯೇ (ಸರಿ) ಆದರೂ "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ. ೩-೯-೭) ಎಂಬ ಶ್ರುತಿಯ (ಪ್ರಮಾಣದಿಂದ) ಹೇಗೆ ಧರ್ಮಕಾರ್ಯವಾದ ಆನಂದಕ್ಕಿಂತ ಬೇರೆಯಾಗಿ ಪರಮೇಶ್ವರನಲ್ಲಿ ಸ್ವಾಭಾವಿಕಾನಂದವೂ (ಸಿದ್ಧವಾಗಿದೆಯೋ) ಹಾಗೆ ಅಧರ್ಮದ ಕಾರ್ಯವಾದ ಮುಪ್ಪು ಮುಂತಾದವುಗಳಿಗಿಂತ ಬೇರೆಯಾಗಿಯೂ ಮುಪ್ಪು ಮುಂತಾದವುಗಳ ದುಃಖದ ಸ್ವರೂಪವು ಸ್ವಾಭಾವಿಕ(ವಾಗಿಯೂ) ಇರಬಹುದಲ್ಲ !- ಎಂದು ಶಂಕಿಸಬಹುದು ಆದ್ದರಿಂದ ಆ (ಶಂಕೆ)ಯನ್ನು ತೊಲಗಿಸುವದಕ್ಕಾಗಿ ಧರ್ಮಾಧರ್ಮಗಳಿಗಿಂತ ಬೇರೆಯಾಗಿಯೇ ಮುಪ್ಪು ಮುಂತಾದವುಗಳನ್ನು ಅಲ್ಲಗಳೆಯುವದು ಯುಕ್ತವು. (ಇಲ್ಲಿ) ಮುಪ್ಪು ಮುಂತಾದವುಗಳನ್ನು ಹೇಳಿರುವದು ಎಲ್ಲಾ ಬಗೆಯ ದುಃಖಕ್ಕೂ ಉಪಲಕ್ಷಣವಾಗಿ. ಪಾಪನಿಮಿತ್ತದಿಂದಾಗುವ ದುಃಖಗಳಾದರೆ ಅನಂತವಾಗಿರುವದರಿಂದ ಅವುಗಳು (ಎಲ್ಲ)ವನ್ನೂ ಅಲ್ಲಗಳೆಯುವದು ಆಗಲಾರದಾದ್ದರಿಂದ ಎಲ್ಲಾ ದುಃಖಗಳನ್ನೂ ಅಲ್ಲಗಳೆಯುವದಕ್ಕಾಗಿ ಅಪಹತಪಾಪ್ಮನೆಂದು ಹೇಳಿದ್ದು ಯುಕ್ತವೇ (ಆಗಿದೆ).

ಸತ್ಯವಾದ ಹುಸಿಯಾಗದ ಕಾಮವುಳ್ಳವನಾದ್ದರಿಂದ ಆ ಇವನು ಸತ್ಯಕಾಮನು. ಸಂಸಾರಿಗಳ ಕಾಮಗಳು ಹುಸಿಯಾಗುವವಲ್ಲವೆ ? ಈಶ್ವರನ (ಕಾಮ)ಗಳು ಅವಕ್ಕೆ ವಿಪರೀತವಾದವುಗಳು. ಇದರಂತೆ ಕಾಮಕ್ಕೆ ಕಾರಣವಾಗಿರುವ ಸಂಕಲ್ಪಗಳೂ ಸತ್ಯವಾಗಿಯೇ ಯಾವನಿಗೆ ಇರುವವೋ ಅವನು ಸತ್ಯಸಂಕಲ್ಪನು. ಈಶ್ವರನ ಸಂಕಲ್ಪಗಳೂ ಕಾಮಗಳೂ ಶುದ್ಧಸತ್ತ್ವವೆಂಬ ಉಪಾಧಿಯ ನಿಮಿತ್ತದಿಂದ ಆದವುಗಳು , ಚಿತ್ರಗು (ಎಂಬ ಪ್ರಯೋಗ)ದಂತೆ[1] (ಇದನ್ನು ತಿಳಿಯಬೇಕು). ಸ್ವತಃ (ಅವನಿಗೆ ಕಾಮಸಂಕಲ್ಪಗಳಿರು)ವದಿಲ್ಲ, ಏಕೆಂದರೆ "ನೇತಿ ನೇತಿ'' (ಬೃ. ೨-೩-೬) ಹಾಗಲ್ಲ, ಹಾಗಲ್ಲ ಎಂದು (ಶ್ರುತಿಯಲ್ಲಿ) ಹೇಳಿದೆ.

---

1. ಈ ಉದಾಹರಣೆಯಲ್ಲಿ ಗೋವುಗಳು ಹೇಗೆ ಪುರುಷನ ಸ್ವರೂಪದಲ್ಲಿ ಪ್ರವಿಷ್ಟವಾಗಿರುವದಿಲ್ಲವೋ ಹಾಗೆಯೇ ಕಾಮಾದಿಗಳೂ ಆತ್ಮನ ಸ್ವರೂಪದಲ್ಲಿ ಪ್ರವಿಷ್ಟವಾಗಿರುವದಿಲ್ಲ- ಎಂದು ಅಭಿಪ್ರಾಯ.

(ಇಲ್ಲಿ) ಹೇಳಿರುವ ಲಕ್ಷಣವುಳ್ಳ ಆತ್ಮನನ್ನೇ ಗುರುಗಳಿಂದಲೂ ಶಾಸ್ತ್ರದಿಂದಲೂ ತನ್ನ ಅನುಭವಕ್ಕೆ ಹೊಂದಿಕೆಯಾಗಿ ಸ್ವಾರಾಜ್ಯಕಾಮರಾದವರು ಅರಿತುಕೊಳ್ಳಬೇಕು.

## ಆತ್ಮನ ವಿಜ್ಞಾನವಿಲ್ಲದಿದ್ದರೆ ಅಸ್ವಾತಂತ್ರ್ಯ

(ಭಾಷ್ಯ)

೬೧೩. ನ ಚೇದ್ವಿಜ್ಞಾಯತೇ ಕೋ ದೋಷಃ ಸ್ಯಾದಿತಿ ? ಶ್ರಣುತಾತ್ರ ದೋಷಂ ದೃಷ್ಟಾನ್ತೇನ । ಯಥಾ ಹ್ಯೇವೇಹ ಲೋಕೇ ಪ್ರಜಾ ಅನ್ವಾವಿಶನ್ತಿ ಅನುವರ್ತನ್ತೇ ಯಥಾನುಶಾಸನಮ್ । ಯಥೇಹ ಪ್ರಜಾ ಅನ್ಯಂ ಸ್ವಾಮಿನಂ ಮನ್ಯಮಾನಾಃ ತಸ್ಯ ಸ್ವಾಮಿನೋ ಯಥಾ ಯಥಾ ಅನುಶಾಸನಂ ತಥಾ ತಥಾ ಅನ್ವಾವಿಶನ್ತಿ । ಕಿಮ್ ? ಯಂ ಯಮನ್ತಂ ಪ್ರತ್ಯನ್ತಂ ಜನಪದಂ ಕ್ಷೇತ್ರಭಾಗಂ ಚ ಅಭಿಕಾಮಾಃ ಅರ್ಥಿನ್ಯೋ ಭವನ್ತಿ ಆತ್ಮಬುದ್ಧ್ಯನುರೂಪಂ ತಂ ತಮೇವ ಚ ಪ್ರತ್ಯನ್ತಾದಿಮ್ ಉಪಜೀವನ್ತೀತಿ ಏಷ ದೃಷ್ಟಾನ್ತೋಽಸ್ವಾತನ್ತ್ರ್ಯದೋಷಂ ಪ್ರತಿ ಪುಣ್ಯಫಲೋಪಭೋಗೇ ॥

(ಭಾಷ್ಯಾರ್ಥ)

(ಇವನನ್ನು) ಅರಿತುಕೊಳ್ಳದಿದ್ದರೆ ಏನು ದೋಷ ? ಎಂದರೆ ಇಲ್ಲಿ ದೋಷ (ವೇನೆಂಬುದನ್ನು) ದೃಷ್ಟಾಂತದಿಂದ (ತಿಳಿಸುತ್ತೇನೆ), ಕೇಳಿರಿ. ಹೇಗೆ ಪ್ರಜೆಗಳು ಈ ಲೋಕದಲ್ಲಿ ಯಥಾನುಶಾಸನವಾಗಿ ಅನುಸರಿಸಿಕೊಂಡಿರುವರೋ ಅನುವರ್ತಿಸುವರೋ, ಹೇಗೆ ಇಲ್ಲಿ ಪ್ರಜೆಗಳು ಮತ್ತೊಬ್ಬ ಒಡೆಯನನ್ನು ಒಪ್ಪಿ ಆ ಒಡೆಯನ ಅಪ್ಪಣೆಯು ಹೇಗೆಹೇಗೆ (ಆಗುವದೋ) ಹಾಗೆಹಾಗೆ ಅನುಸರಿಸುತ್ತಾರೋ- ಏನನ್ನು (ಅನುಸರಿಸುತ್ತಾರೆ) ? ಎಂದರೆ, ಯಾವಯಾವ ಅಂತವನ್ನು ಎಂದರೆ ಪ್ರಾಂತವನ್ನು (ಯಾವಯಾವ) ಜನಪದವನ್ನು ಮತ್ತು (ಯಾವಯಾವ) ಕ್ಷೇತ್ರಭಾಗವನ್ನು ಕಾಮಿಸುವವರಾಗಿರುತ್ತಾರೋ ತಮ್ಮತಮ್ಮ ಬುದ್ಧಿಗೆ ಅನುಸಾರವಾಗಿ (ಯಾವಯಾವದನ್ನು) ಬಯಸುತ್ತಾರೋ, ಆಯಾ ಪ್ರಾಂತಾದಿಗಳನ್ನೇ (ಹೇಗೆ) ಉಪಜೀವಿಸಿಕೊಂಡಿರುವರೋ- (ಹಾಗೆ) ಎಂಬುದಿದು ಪುಣ್ಯಫಲವನ್ನು ಉಪಭೋಗಿಸುವದರಲ್ಲಿ ಅಸ್ವಾತಂತ್ರ್ಯ(ವಿದೆ) ಎಂಬುದಕ್ಕೆ ದೃಷ್ಟಾಂತವು.[1]

## ದಹರೋಪಾಸನೆಯ ಫಲ

(ಉಪನಿಷತ್ತು)

**ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾ ಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ತದ್ಯ ಇಹಾಽಽತ್ಮಾನ**

---

1. ಒಡೆಯನು ಗೊತ್ತುಮಾಡಿಕೊಟ್ಟಷ್ಟನ್ನೇ ಅವನ ಅಧೀನದಲ್ಲಿರುವವರು ಅವನ ಅನುಮತಿಯಿಂದ ಭೋಗಿಸುತ್ತಿರುವರು ಎಂಬುದಕ್ಕೆ ಇದು ದೃಷ್ಟಾಂತವು.

**ಮನನುವಿದ್ಯ ವ್ರಜನ್ತ್ಯೇತಾಗ್‌ಂಶ್ಚ ಸತ್ಯಾನ್ ಕಾಮಾಂ ಸ್ತೇಷಾಗ್‌ಂ ಸರ್ವೇಷು ಲೋಕೇಷ್ವಕಾಮಚಾರೋ ಭವತ್ಯಥ ಯ ಇಹಾऽऽತ್ಮಾನಮನುವಿದ್ಯ ವ್ರಜನ್ತ್ಯೇತಾಗ್‌ಂಶ್ಚ ಸತ್ಯಾನ್ ಕಾಮಾಗ್‌ಂಸ್ತೇಷಾಗ್‌ಂ ಸರ್ವೇಷು ಲೋಕೇಷು ಕಾಮ ಚಾರೋ ಭವತಿ ॥ ೬ ॥**

೬. ಅಲ್ಲಿ (ಇದು ದೃಷ್ಟಾಂತವು) : ಹೇಗೆ ಇಲ್ಲಿ ಕರ್ಮಜಿತ ವಾದ ಲೋಕವು ಕ್ಷಯವಾಗುತ್ತದೆಯೋ ಹಾಗೆಯೇ ಇಲ್ಲಿ ಪುಣ್ಯಜಿತ ವಾದ ಲೋಕವು ಕ್ಷಯವಾಗುತ್ತದೆ. ಅವರೊಳಗೆ ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮಗಳನ್ನೂ ಅರಿತುಕೊಳ್ಳದೆ ಹೊರಟು ಹೋಗುತ್ತಾರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಅಕಾಮಚಾರ ವಿರುತ್ತದೆ ; ಇನ್ನು ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮ ಗಳನ್ನೂ ಅರಿತುಕೊಂಡು ಹೊರಟುಹೋಗುತ್ತಾರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಕಾಮಚಾರವಿರುತ್ತದೆ.

## ಅಜ್ಞರ ಪುಣ್ಯಭೋಗವು ಕ್ಷಯವಾಗತಕ್ಕದ್ದು

(ಭಾಷ್ಯ)

೬೧೪. ಅಥಾನ್ಯೋ ದೃಷ್ಟಾನ್ತಸ್ತತ್ಕ್ಷಯಂ ಪ್ರತಿ ತದ್ಯಥೇಹ ಇತ್ಯಾದಿಃ । ತತ್ ತತ್ರ ಯಥಾ ಇಹಲೋಕೇ ತಾಸಾಮೇವ ಸ್ವಾಮ್ಯನುಶಾಸನಾನುವರ್ತಿನೀ ನಾಂ ಪ್ರಜಾನಾಂ ಸೇವಾದಿ(ಕರ್ಮ)[1] ಜಿತೋ ಲೋಕಃ ಪರಾಧೀನೋಪಭೋಗಃ ಕ್ಷೀಯತೇ ಅನ್ತವಾನ್ ಭವತಿ । ಅಥ ಇದಾನೀಂ ದಾರ್ಷ್ಟಾನ್ತಿಕಮ್ ಉಪಸಂ ಹರತಿ । ಏವಮೇವ ಅಮುತ್ರ ಅಗ್ನಿಹೋತ್ರಾದಿಪುಣ್ಯಜಿತೋ ಲೋಕಃ ಪರಾಧೀ ನೋಪಭೋಗಃ ಕ್ಷೀಯತ ಏವೇತಿ । ಉಕ್ತೋ ದೋಷ ಏಷಾಮಿತಿ ವಿಷಯಂ ದರ್ಶಯತಿ ತದ್ಯ ಇತ್ಯಾದಿನಾ । ತತ್ ತತ್ರ ಯೇ ಇಹ ಅಸ್ಮಿಲ್ಲೋಕೇ ಜ್ಞಾನ ಕರ್ಮಣೋಃ ಅಧಿಕೃತಾ ಯೋಗ್ಯಾಃ ಸನ್ತ ಆತ್ಮಾನಂ ಯಥೋಕ್ತಲಕ್ಷಣಂ ಶಾಸ್ತ್ರಾ ಚಾರ್ಯೋಪದಿಷ್ಟಮ್ ಅನನುವಿದ್ಯ ಯಥೋಪದೇಶಮ್ ಅನು ಸ್ವಸಂವೇದ್ಯತಾಮ್ ಅಕೃತ್ವಾ ವ್ರಜನ್ತಿ ದೇಹಾದಸ್ಮಾತ್ ಪ್ರಯನ್ತಿ । ಯ ಏತಾಂಶ್ಚ ಯಥೋಕ್ತಾನ್ ಸತ್ಯಾನ್ ಸತ್ಯಸಂಕಲ್ಪಕಾರ್ಯಾಂಶ್ಚ ಸ್ವಾತ್ಮಸ್ಥಾನ್ ಕಾಮಾನ್ ಅನನುವಿದ್ಯ ವ್ರಜನ್ತಿ ತೇಷಾಂ ಸರ್ವೇಷು ಲೋಕೇಷು ಅಕಾಮಚಾರೋಽಸ್ವತಂತ್ರತಾ ಭವತಿ । ಯಥಾ ರಾಜಾನುಶಾಸನಾನುವರ್ತಿನೀನಾಂ ಪ್ರಜಾನಾಂ ಇತ್ಯರ್ಥಃ ॥

1. ಇಲ್ಲಿ ಈ ಮಾತು ಇರಬೇಕಿತ್ತು.

(ಭಾಷ್ಯಾರ್ಥ)

ಇನ್ನು ಅದು ಕ್ಷಯವಾಗುತ್ತದೆ ಎಂಬುದಕ್ಕೆ ಮತ್ತೊಂದು ದೃಷ್ಟಾಂತವನ್ನು ತದ್ಯಥೇಹ ಎಂದು ಮುಂತಾಗಿರುವ (ವಾಕ್ಯದಲ್ಲಿ ಕೊಟ್ಟಿದೆ). (ತತ್=ತತ್ರ) ಅಲ್ಲಿ, (ಈ ದೃಷ್ಟಾಂತವಿದೆ). ಈ ಲೋಕದಲ್ಲಿ ಒಡೆಯನ ಅಪ್ಪಣೆಯನ್ನು ಅನುಸರಿಸಿ ಕೊಂಡಿರುವ ಅದೇ ಪ್ರಜೆಗಳ (ಕರ್ಮಜಿತವಾದ)[1] ಸೇವಾದಿಗಳಿಂದ ಪಡೆದು ಕೊಂಡಿರುವ ಲೋಕವು ಪರಾಧೀನವಾದ ಉಪಭೋಗವು ಹೇಗೆ ಕ್ಷಯವಾಗು ವದೋ ಕೊನೆಯುಳ್ಳದ್ದಾಗುವದೋ- ಇನ್ನು ಈಗ ದಾರ್ಷ್ಟಾಂತಿಕವನ್ನು ಉಪ ಸಂಹಾರಮಾಡುತ್ತಲಿದಾನೆ- ಹಾಗೆಯೇ ಆ (ಪರಲೋಕದಲ್ಲಿ) ಅಗ್ನಿಹೋತ್ರವೇ ಮುಂತಾದ ಪುಣ್ಯದಿಂದ ಗೆದ್ದುಕೊಂಡಿರುವ ಲೋಕವೂ ಪರಾಧೀನವಾದ ಉಪ ಭೋಗವೂ ಕ್ಷಯವಾಗಿಯೇತೀರುವದು (ಈ) ಹೇಳಿದ ದೋಷವು ಇಂಥವರಿಗೆ ಎಂದು ವಿಷಯವನ್ನು (ಗೊತ್ತುಪಡಿಸಿ) ತದ್ಯೇ ಮುಂತಾದ (ವಾಕ್ಯ)ದಿಂದ ತಿಳಿಸು ತ್ತಿದಾನೆ: (ತತ್=ತತ್ರ) ಅವರೊಳಗೆ ಯಾರು ಇಲ್ಲಿ ಈ ಲೋಕದಲ್ಲಿ, ಜ್ಞಾನ ಕರ್ಮಗಳಿಗೆ ಅಧಿಕಾರಿಗಳಾಗಿ ಯೋಗ್ಯರಾಗಿದ್ದುಕೊಂಡು ಮೇಲೆ ಹೇಳಿದ ಲಕ್ಷಣವುಳ್ಳ ಶಾಸ್ತ್ರಾಚಾರ್ಯರುಗಳಿಂದ ಉಪದಿಷ್ಟವಾದ ಆತ್ಮನನ್ನು ಅರಿತು ಕೊಳ್ಳದೆ, ಉಪದೇಶಕ್ಕನುಗುಣವಾಗಿ ತಮ್ಮ ಅನುಭವಕ್ಕೆ ಬರುವಂತೆ ಮಾಡಿ ಕೊಳ್ಳದೆ,[2] ಹೊರಟುಹೋಗುತ್ತಾರೋ ಈ ದೇಹವನ್ನು ಬಿಟ್ಟು ತೆರಳುತ್ತಾರೋ, ಮತ್ತು ಯಾರು ಈ ಸತ್ಯವಾದ ಮತ್ತು ಸತ್ಯಸಂಕಲ್ಪಗಳ ಕಾರ್ಯವಾದ, ತಮ್ಮ ಆತ್ಮನಲ್ಲಿರುವ, ಕಾಮುಗಳನ್ನೂ[3] ಅರಿತುಕೊಳ್ಳದೆ ಹೊರಟುಹೋಗುತ್ತಾರೋ, ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಅಕಾಮಚಾರವು, ಅಸ್ವಾತಂತ್ರ್ಯವು ಇರುತ್ತದೆ,[4] ಹೇಗೆ ರಾಜನ ಅಪ್ಪಣೆಯನ್ನು ಅನುಸರಿಸಿ ನಡೆಯುವ ಪ್ರಜೆಗಳಿಗೆ (ಅಸ್ವಾತಂತ್ರ್ಯವಿರುವದೋ ಹಾಗೆ) ಎಂದರ್ಥ.

## ದಹರೋಪಾಸಕನಿಗೆ ಸರ್ವಲೋಕಗಳಲ್ಲಿಯೂ ಕಾಮಚಾರ

(ಭಾಷ್ಯ)

೬೧೫. ಅಥ ಯೇಽನ್ಯೇ ಇಹ ಲೋಕೇ ಆತ್ಮಾನಂ ಶಾಸ್ತ್ರಾಚಾರ್ಯೋಪ ದೇಶಮ್ ಅನುವಿದ್ಯ ಸ್ವಾತ್ಮಸಂವೇದ್ಯತಾಮ್ ಆಪಾದ್ಯ ವ್ರಜನ್ತಿ ಯಥೋ

1. ಮೂಲದಲ್ಲಿರಬೇಕಾಗಿದ್ದ ಕರ್ಮಜಿತೋ ಎಂಬದರ ಅನುವಾದವಿದು.

2. ಶಾಸ್ತ್ರದಲ್ಲಿ ಹೇಳಿರುವದನ್ನೂ ಗುರುಗಳ ಉಪದೇಶವನ್ನೂ ಅನುಸರಿಸಿ ಅನುಭವಕ್ಕೆ ತಂದುಕೊಳ್ಳಬೇಕೆಂಬುದನ್ನು 'ಅನುವಿದ್ಯ' ಎಂಬಲ್ಲಿಯ 'ಅನು' ತೋರಿಸುವದೆಂದು ಭಾವ.

3. ಆತ್ಮನನ್ನೂ ಆತ್ಮನಲ್ಲಿರುವ ಕಾಮುಗಳನ್ನೂ ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿ ಕೊಂಡವರಿಗೇ ಮುಂದೆ ಹೇಳಲಿರುವ ಫಲವಾಗುತ್ತದೆ ಎಂದು ಅಭಿಪ್ರಾಯ.

4. ಪರಾಧೀನವಾಗಿಯೇ ಭೋಗಗಳನ್ನು ಅನುಭವಿಸಬೇಕಾಗುತ್ತದೆ ಎಂದರ್ಥ ಅದು ಕ್ಷಯವೂ ಆಗುತ್ತದೆ ಎಂದು ಸೇರಿಸಿಕೊಳ್ಳಬೇಕು

ಕ್ತ್ರಾಂಶ್ಚ ಸತ್ಯಾನ್ ಕಾಮಾನ್, ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ರಾಜ್ಞ ಇವ ಸಾರ್ವಭೌಮಸ್ಯೇಹ ಲೋಕೇ ॥

(ಭಾಷ್ಯಾರ್ಥ)

ಇನ್ನು (ಇವರಿಗಿಂತ) ಬೇರೆಯವರಾದ ಯಾರು ಈ ಲೋಕದಲ್ಲಿ ಆತ್ಮನನ್ನು ಶಾಸ್ತ್ರಾಚಾರ್ಯೋಪದೇಶಕ್ಕನುಗುಣವಾಗಿ ಅರಿತುಕೊಂಡು ತಮ್ಮ ಅನುಭವಕ್ಕೆ ಗೋಚರವಾಗಿ ಮಾಡಿಕೊಂಡು, ಮೇಲೆ ಹೇಳಿದ ಸತ್ಯವಾದ ಕಾಮಗಳನ್ನೂ (ಅರಿತುಕೊಂಡು) ಹೊರಟುಹೋಗುತ್ತಾರೋ, ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಸಾರ್ವಭೌಮನಾದ ರಾಜನಿಗೆ ಈ ಲೋಕದಲ್ಲಿ ಹೇಗೋ (ಹಾಗೆ) ಕಾಮಚಾರವಿರುತ್ತದೆ.

---

# ಎಂಟನೆಯ ಅಧ್ಯಾಯ-ಎರಡನೆಯ ಖಂಡ

( ದಹರವಿದ್ಯೆ )

## ದಹರವಿದ್ಯೋಪಾಸಕನಿಗೆ ನಿರಂಕುಶಕಾಮಚಾರ

(ಉಪನಿಷತ್ತು)

**ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠನ್ತಿ ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ ॥ ೧ ॥**

**ಅಥ ಯದಿ ಮಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಮಾತರಃ ಸಮುತ್ತಿಷ್ಠನ್ತಿ ತೇನ ಮಾತೃಲೋಕೇನ ಸಂಪನ್ನೋ ಮಹೀಯತೇ ॥ ೨ ॥**

**ಅಥ ಯದಿ ಭ್ರಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಭ್ರಾತರಃ ಸಮುತ್ತಿಷ್ಠನ್ತಿ ತೇನ ಭ್ರಾತೃಲೋಕೇನ ಸಂಪನ್ನೋ ಮಹೀಯತೇ ॥ ೩ ॥**

**ಅಥ ಯದಿ ಸ್ವಸೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ವಸಾರಃ ಸಮುತ್ತಿಷ್ಠನ್ತಿ ತೇನ ಸ್ವಸೃಲೋಕೇನ ಸಂಪನ್ನೋ ಮಹೀಯತೇ ॥ ೪ ॥**

ಅಥ ಯದಿ ಸಖಿಲೋಕಕಾಮೋ ಭವತಿ ಸಂಕಲ್ಪಾದೇವಾಽಸ್ಯ ಸಖಾಯಃ ಸಮುತ್ತಿಷ್ಠನ್ತಿ ತೇನ ಸಖಿಲೋಕೇನ ಸಂಪನ್ನೋ ಮಹೀಯತೇ ॥ ೫ ॥

ಅಥ ಯದಿ ಗನ್ಧಮಾಲ್ಯಲೋಕಕಾಮೋ ಭವತಿ ಸಂಕಲ್ಪಾದೇವಾಽಸ್ಯ ಗನ್ಧಮಾಲ್ಯೇ ಸಮುತ್ತಿಷ್ಠತಸ್ತೇನ ಗನ್ಧಮಾಲ್ಯಲೋಕೇನ ಸಂಪನ್ನೋ ಮಹೀಯತೇ ॥ ೬ ॥

ಅಥ ಯದ್ಯನ್ನಪಾನಲೋಕಕಾಮೋ ಭವತಿ ಸಂಕಲ್ಪಾದೇವಾಽಸ್ಯಾನ್ನಪಾನೇ ಸಮುತ್ತಿಷ್ಠತಸ್ತೇನಾನ್ನಪಾನಲೋಕೇನ ಸಂಪನ್ನೋ ಮಹೀಯತೇ ॥ ೭ ॥

ಅಥ ಯದಿ ಗೀತವಾದಿತ್ರಲೋಕಕಾಮೋ ಭವತಿ ಸಂಕಲ್ಪಾದೇವಾಽಸ್ಯ ಗೀತವಾದಿತ್ರೇ ಸಮುತ್ತಿಷ್ಠತಸ್ತೇನ ಗೀತವಾದಿತ್ರಲೋಕೇನ ಸಂಪನ್ನೋ ಮಹೀಯತೇ ॥ ೮ ॥

ಅಥ ಯದಿ ಸ್ತ್ರೀಲೋಕಕಾಮೋ ಭವತಿ ಸಂಕಲ್ಪಾದೇವಾಽಸ್ಯ ಸ್ತ್ರಿಯಃ ಸಮುತ್ತಿಷ್ಠನ್ತಿ ತೇನ ಸ್ತ್ರೀಲೋಕೇನ ಸಂಪನ್ನೋ ಮಹೀಯತೇ ॥ ೯ ॥

೧. ಅವನು ಪಿತೃಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಪಿತೃಗಳು ಎದ್ದುನಿಲ್ಲುತ್ತಾರೆ; ಪಿತೃಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೨. ಇನ್ನು ಮಾತೃಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ತಾಯಿಯರು ಎದ್ದುನಿಲ್ಲುತ್ತಾರೆ; ಆ ಮಾತೃಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೩. ಇನ್ನು ಭ್ರಾತೃಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಅಣ್ಣತಮ್ಮಂದಿರು ಎದ್ದುನಿಲ್ಲುತ್ತಾರೆ; ಆ ಭ್ರಾತೃಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೪. ಇನ್ನು ಸ್ವಸೃಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಅಕ್ಕತಂಗಿಯರು ಎದ್ದುನಿಲ್ಲುತ್ತಾರೆ; ಆ ಸ್ವಸೃಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೫. ಇನ್ನು ಸಖಿಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಗೆಳೆಯರು ಎದ್ದುನಿಲ್ಲುತ್ತಾರೆ ; ಆ ಸಖಿಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೬. ಇನ್ನು ಗಂಧಮಾಲ್ಯಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಗಂಧಮಾಲ್ಯಗಳು ಎದ್ದುನಿಲ್ಲುತ್ತವೆ ; ಆ ಗಂಧಮಾಲ್ಯಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೭. ಇನ್ನು ಅನ್ನಪಾನಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಅನ್ನಪಾನಗಳು ಎದ್ದುನಿಲ್ಲುವವು ; ಆ ಅನ್ನಪಾನಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೮. ಇನ್ನು ಗೀತವಾದಿತ್ರಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಗೀತವಾದಿತ್ರಗಳು ಎದ್ದುನಿಲ್ಲುತ್ತವೆ ; ಆ ಗೀತವಾದಿತ್ರಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

೯. ಇನ್ನು ಸ್ತ್ರೀಲೋಕಕಾಮನಾಗುವನಾದರೆ ಸಂಕಲ್ಪದಿಂದಲೇ ಅವನಿಗೆ ಹೆಂಡಿರು ಎದ್ದುನಿಲ್ಲುತ್ತಾರೆ ; ಆ ಸ್ತ್ರೀಲೋಕದಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

## ಮುಕ್ತನಾದ ಉಪಾಸಕನಿಗೆ ಸಂಕಲ್ಪದಿಂದಲೇ ಕಾಮಸಿದ್ಧಿ

(ಭಾಷ್ಯ)

೬೧೬. ಕಥಂ ಸರ್ವೇಷು ಲೋಕೇಷು ಕಾಮಚಾರೋ ಭವತೀತಿ ? ಉಚ್ಯತೇ । ಯ ಆತ್ಮಾನಂ ಯಥೋಕ್ತಲಕ್ಷಣಂ ಹೃದಿ ಸಾಕ್ಷಾತ್ಕೃತವಾನ್ ವಕ್ಷ್ಯಮಾಣಬ್ರಹ್ಮಚರ್ಯಾದಿಸಾಧನಸಂಪನ್ನಃ ಸನ್, ತತ್ಸ್ಥಾಂಶ್ಚ ಸತ್ಯಾನ್ ಕಾಮಾನ್ ಸ ತ್ಯಕ್ತದೇಹೋ ಯದಿ ಪಿತೃಲೋಕಕಾಮಃ । ಪಿತರೋ ಜನಯಿತಾರಃ, ತ ಏವ ಸುಖಹೇತುತ್ವೇನ ಭೋಗ್ಯತ್ವಾತ್ ಲೋಕಾ ಉಚ್ಯನ್ತೇ । ತೇಷು ಕಾಮೋ ಯಸ್ಯ । ತೈಃ ಪಿತೃಭಿಃ ಸಂಬನ್ಧೇಚ್ಛಾ ಯಸ್ಯ ಭವತಿ ತಸ್ಯ ಸಂಕಲ್ಪಮಾತ್ರಾದೇವ ಪಿತರಃ ಸಮುತ್ತಿಷ್ಠನ್ತಿ, ಆತ್ಮಸಂಬನ್ಧಿತಾಮ್ ಆಪದ್ಯನ್ತೇ । ವಿಶುದ್ಧಸತ್ತ್ವತಯಾ ಸತ್ಯಸಂಕಲ್ಪತ್ವಾತ್ ಈಶ್ವರಸ್ಯೇವ । ತೇನ ಪಿತೃಲೋಕೇನ ಭೋಗೇನ ಸಂಪನ್ನಃ ಸಂಪತ್ತಿರಿಷ್ಟಪ್ರಾಪ್ತಿಃ, ತಯಾ ಸಮೃದ್ಧಃ, ಮಹೀಯತೇ ಪೂಜ್ಯತೇ ವರ್ಧತೇ ವಾ । ಮಹಿಮಾನಮ್ ಅನುಭವತಿ ॥

(ಭಾಷ್ಯಾರ್ಥ)

ಸರ್ವಲೋಕಗಳಲ್ಲಿ (ಅವನಿಗೆ) ಹೇಗೆ ಕಾಮಚಾರವಾಗುತ್ತದೆ ?– ಎಂದರೆ, ಹೇಳುತ್ತೇನೆ : ಯಾವನು ಮುಂದೆ ಹೇಳುವ ಬ್ರಹ್ಮಚರ್ಯಾದಿಸಾಧನಗಳಿಂದೊಡಗೂಡಿದವನಾಗಿ ಹಿಂದೆ ಹೇಳಿರುವ ಲಕ್ಷಣದ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಂಡಿರುವನೋ, ಅವನಲ್ಲಿರುವ ಸತ್ಯವಾದ ಕಾಮಗಳನ್ನೂ (ಸಾಕ್ಷಾತ್ಕಾರಮಾಡಿಕೊಂಡಿರುವನೋ), ಅವನು ದೇಹವನ್ನು ಬಿಟ್ಟಮೇಲೆ ಪಿತೃಲೋಕಕಾಮನಾಗಿದ್ದರೆ– ಪಿತೃಗಳು ಎಂದರೆ ಹುಟ್ಟಿಸಿದವರು[1] , ಸುಖಕ್ಕೆ ಕಾರಣರಾಗಿ ಭೋಗ್ಯರಾಗಿರುವದರಿಂದ ಅವರನ್ನೇ ಲೋಕವೆಂದಿದೆ. ಆ (ಪಿತೃಗಳಲ್ಲಿ) ಯಾವನಿಗೆ ಕಾಮವಿರುವದೋ, ಪಿತೃಗಳೊಡನೆ ಸಂಬದ್ಧ(ವಾಗಬೇಕೆಂಬ) ಇಚ್ಛೆಯು ಯಾವನಿಗೆ ಇರುತ್ತದೆಯೋ, ಅವನಿಗೆ ಸಂಕಲ್ಪಮಾತ್ರದಿಂದಲೇ[2] ಪಿತೃಗಳು ಎದ್ದು ನಿಲ್ಲುವರು, ತನಗೆ ಸಂಬಂಧಹೊಂದಿದವರಾಗುವರು , ಏಕೆಂದರೆ ಈಶ್ವರನಂತೆ ಅವನೂ ಸತ್ಯಸಂಕಲ್ಪನಾಗಿರುತ್ತಾನೆ,[3] ಆ ಪಿತೃಲೋಕವೆಂಬ ಭೋಗದಿಂದ ಸಂಪನ್ನನಾಗಿ– ಸಂಪತ್ತಿ ಎಂದರೆ ಇಷ್ಟಪ್ರಾಪ್ತಿ, ಅದರಿಂದ ಸಮೃದ್ಧಿಯನ್ನು ಹೊಂದಿ ಮಹಿತನಾಗುತ್ತಾನೆ, ಗೌರವಿಸಲ್ಪಡುತ್ತಾನೆ, ಅಥವಾ ವೃದ್ಧಿಯನ್ನು ಹೊಂದುತ್ತಾನೆ, ಮಹಿಮೆಯನ್ನು ಅನುಭವಿಸುತ್ತಾನೆ (ಎಂದಾದರೂ ವ್ಯಾಖ್ಯಾನಮಾಡಬಹುದು).

## ಉಪಾಸಕನಿಗೆ ಸದ್ವಿಷಯಕಾಮಗಳೇ ಆಗುತ್ತವೆ

(ಭಾಷ್ಯ)

೬೧೭. ಸಮಾನಮನ್ಯತ್ । ಮಾತರೋ ಜನಯಿತ್ರ್ಯೋಽತೀತಾಃ ಸುಖಹೇತುಭೂತಾಃ ಸಾಮರ್ಥ್ಯಾತ್ । ನ ಹಿ ದುಃಖಹೇತುಭೂತಾಸು ಗ್ರಾಮಸೂಕರಾದಿಜನ್ಮನಿಮಿತ್ತಾಸು ಮಾತೃಷು ವಿಶುದ್ಧಸತ್ತ್ವಸ್ಯ ಯೋಗಿನ ಇಚ್ಛಾ ತತ್ಸಂಬನ್ಧೋ ವಾ ಯುಕ್ತಃ ॥

(ಭಾಷ್ಯಾರ್ಥ)

ಮಿಕ್ಕ (ಗ್ರಂಥವು ಹಿಂದಿನ ಗ್ರಂಥಕ್ಕೆ) ಸಮಾನ(ವಾಗಿ ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು). ಮಾತೃಗಳು ಎಂದರೆ ಹಿಂದಿನ (ಜನ್ಮಗಳಲ್ಲಿ ತನ್ನನ್ನು) ಹಡೆದವರು, ಸುಖಕ್ಕೆ ಕಾರಣರಾಗಿದ್ದವರು (ಎಂದು) ಅರ್ಥವಶದಿಂದ (ನಿಶ್ಚಯಿಸ

---

1. ಹಿಂದಿನ ಜನ್ಮದಲ್ಲಿ ಇವನಿಗೆ ತಂದೆಗಳಾಗಿದ್ದವರು.

2. ಇವು ಬರಿಯ ಮಾನಸಸಂಕಲ್ಪಜವೇ ಆದರೂ ಸ್ಥಿರವಾಗಿ ಕಾರ್ಯಕರವಾಗಿರುವವೆಂಬುದಕ್ಕೆ ಸೂ. ಭಾ ೪–೪–೮ (ಭಾ. ಭಾ. ೫೯೮)ನ್ನು ನೋಡಿ. ಮುಂದೆ (೮–೫.೫)ರ ಭಾಷ್ಯದಲ್ಲಿ ಇವುಗಳ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

3. ಸತ್ಯಸಂಕಲ್ಪರಾದರೂ ಇವರಿಗೆ ಜಗತ್ಸೃಷ್ಟ್ಯಾದಿಸ್ವಾತಂತ್ರ್ಯವಿರುವದಿಲ್ಲವೆಂದು ವೇದಾಂತಸೂತ್ರ ೪–೪–೧೭ರಿಂದ ೨೧ರವರೆಗಿನ ಸೂತ್ರಭಾಷ್ಯದಲ್ಲಿ ಪ್ರತಿಪಾದಿಸಿದೆ.

ಬೇಕು). ಏಕೆಂದರೆ ವಿಶುದ್ಧಸತ್ತ್ವನಾದ ಯೋಗಿಗೆ[1] ದುಃಖಕ್ಕೆ ಕಾರಣರಾಗಿದ್ದ, ಊರಹೊಂದಿಯೋ ಮುಂತಾದ ಜನ್ಮಗಳಿಗೆ ನಿಮಿತ್ತರಾಗಿದ್ದ ತಾಯಿಯರಲ್ಲಿ[2] ಇಚ್ಛೆಯಾಗಲಿ, ಅದರ ಸಂಬಂಧವಾಗಲಿ (ಆಗುವದು) ಯುಕ್ತವಲ್ಲವಷ್ಟೆ ?

## ಕಾಮಚಾರಫಲದ ಉಪಸಂಹಾರ

(ಉಪನಿಷತ್ತು)

**ಯಂ ಯಮನ್ತಮಭಿಕಾಮೋ ಭವತಿ ಯಂ ಕಾಮಂ ಕಾಮಯತೇ । ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠತಿ ತೇನ ಸಂಪನ್ನೋ ಮಹೀಯತೇ ॥ ೧೦ ॥**

೧೦. ಯಾವಯಾವ ಅಂತವನ್ನು ಕಾಮಿಸುವವನಾಗಿರುತ್ತಾನೋ, ಯಾವ ಕಾಮವನ್ನು ಬಯಸುತ್ತಾನೋ, ಅದು ಇವನಿಗೆ ಸಂಕಲ್ಪದಿಂದಲೇ ಎದ್ದುನಿಲ್ಲುವದು. ಅದರಿಂದ ಸಂಪನ್ನನಾಗಿ ಮಹಿತನಾಗುತ್ತಾನೆ.

## ಸರ್ವಕಾಮಗಳೂ ಮುಕ್ತನಿಗೆ ಪ್ರಾಪ್ಯವಾಗಿರುವವು

(ಭಾಷ್ಯ)

೬೧೮. ಯಂ ಯಮನ್ತಂ ಪ್ರದೇಶಮ್ ಅಭಿಕಾಮೋ ಭವತಿ, ಯಂ ಚ ಕಾಮಂ ಕಾಮಯತೇ ಯಥೋಕ್ತವ್ಯತಿರೇಕೇಣಾಽಪಿ ಸೋಽಸ್ಯಾನ್ತಃ ಪ್ರಾಪ್ತುಮಿಷ್ಟಃ ಕಾಮಶ್ಚ ಸಂಕಲ್ಪಾದೇವ ಸಮುತ್ತಿಷ್ಠತ್ಯಸ್ಯ । ತೇನ ಇಚ್ಛಾವಿಘಾತತಯಾ ಅಭಿಪ್ರೇತಾರ್ಥಪ್ರಾಪ್ತ್ಯಾ ಚ ಸಂಪನ್ನೋ ಮಹೀಯತ ಇತ್ಯುಕ್ತಾರ್ಥಮ್ ॥

(ಭಾಷ್ಯಾರ್ಥ)

ಮೇಲೆ ಹೇಳಿದ್ದಕ್ಕಿಂತ ಬೇರೆಯಾದ ಯಾವಯಾವ ಅಂತವನ್ನು ಎಂದರೆ ಪ್ರದೇಶವನ್ನು ಕಾಮಿಸುವನಾಗಿರುತ್ತಾನೋ ಮತ್ತು ಯಾವ ಕಾಮವನ್ನು ಬಯಸುತ್ತಾನೋ, ಆ ಇವನು ಪಡೆಯಲೆಳಸಿದ ಅಂತವು ಸಂಕಲ್ಪದಿಂದಲೇ ಇವನಿಗೆ ಎದ್ದುನಿಲ್ಲುವದು. ಅದರಿಂದ ಇಚ್ಛೆಗೆ ಅಡ್ಡಿಯಿಲ್ಲದ್ದರಿಂದಲೂ, ಇಷ್ಟವಾದ ಅರ್ಥವು ದೊರಕುವದರಿಂದಲೂ ಸಂಪನ್ನನಾಗಿ 'ಮಹಿತನಾಗುವನು' ಎಂಬುದಕ್ಕೆ ಹಿಂದೆಯೇ ಅರ್ಥವನ್ನು ಹೇಳಿದೆ.

---

1. ಉಪಾಸಕನಿಗೆ ಎಂದರ್ಥ.

2. ಇಲ್ಲಿ ತಾಯಿಯರಲ್ಲಿ ಎಂದಿರುವದು ಉಪಲಕ್ಷಣ. ತಂದೆಗಳೇ ಮುಂತಾದವರೂ ಹೀಗೆಯೇ ಸುಖಹೇತುವಾಗಿದ್ದವರೇ ಉಪಾಸಕನ ಇಚ್ಛೆಗೆ ವಿಷಯರಾಗುವರು.

# ಎಂಟನೆಯ ಅಧ್ಯಾಯ-ಮೂರನೆಯ ಖಂಡ

(ದಹರವಿದ್ಯೆ)

## ಸತ್ಯಕಾಮಗಳಿಗೆ ಅನೃತದ ಮುಸುಕು

(ಉಪನಿಷತ್ತು)

**ತ ಇಮೇ ಸತ್ಯಾಃ ಕಾಮಾ ಅನೃತಾಪಿಧಾನಾಸ್ತೇಷಾಗ್ಂ ಸತ್ಯಾನಾಗ್ಂ ಸತಾಮನೃತಮಪಿಧಾನಂ ಯೋ ಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ ಲಭತೇ ॥ ೧ ॥**

೧. ಆ ಈ ಸತ್ಯವಾದ ಕಾಮಗಳು ಅನೃತದ ಮುಸುಕುಳ್ಳವು. ಸತ್ಯವಾಗಿದ್ದರೂ ಅವಕ್ಕೆ ಅನೃತವು ಮುಚ್ಚಳವು, ಯಾವಯಾವನು ಇಲ್ಲಿಂದ ಹೊರಟುಹೋಗುತ್ತಾನೋ ಅವನನ್ನು ಇಲ್ಲಿ ಕಾಣುವದಕ್ಕೆ ದೊರಕಿಸಿಕೊಳ್ಳುವದಿಲ್ಲವಷ್ಟೆ ?

### ತೃಷ್ಣೆಯೂ ಸ್ವೇಚ್ಛಾಚಾರವೂ ಸತ್ಯಕಾಮಗಳ ಪ್ರಾಪ್ತಿಗೆ ಅಡ್ಡಿ

(ಭಾಷ್ಯ)

೬೨೯. ಯಥೋಕ್ತಾತ್ಮಧ್ಯಾನಸಾಧನಾನುಷ್ಠಾನಂ ಪ್ರತಿ ಸಾಧಕಾನಾಮ್ ಉತ್ಸಾಹಜನನಾರ್ಥಮ್ ಅನುಕ್ರೋಶನ್ನಾಹ । ಕಷ್ಟಮಿದಂ ಖಲು ವರ್ತತೇ ಯತ್ ಸ್ವಾತ್ಮಸ್ಥಾಃ ಶಕ್ಯಪ್ರಾಪ್ಯಾ ಅಪಿ ತ ಇಮೇ ಸತ್ಯಾಃ ಕಾಮಾಃ ಅನೃತಾಪಿಧಾನಾಃ, ತೇಷಾಮ್ ಆತ್ಮಸ್ಥಾನಾಂ ಸ್ವಾಶ್ರಯಾಣಾಮೇವ ಸತಾಮ್ ಅನೃತಂ ಬಾಹ್ಯವಿಷಯೇಷು ಸ್ತ್ರ್ಯನ್ನಭೋಜನಾಚ್ಛಾದನಾದಿಷು ತೃಷ್ಣಾ ತನ್ನಿಮಿತ್ತಂ ಚ ಸ್ವೇಚ್ಛಾಪ್ರ[1]ಚಾರತ್ವಂ ಮಿಥ್ಯಾಜ್ಞಾನನಿಮಿತ್ತತ್ವಾತ್ ಅನೃತಮ್ ಇತ್ಯುಚ್ಯತೇ । ತನ್ನಿಮಿತ್ತಂ ಸತ್ಯಾನಾಂ ಕಾಮಾನಾಮ್ ಅಪ್ರಾಪ್ತಿರಿತಿ ಅಪಿಧಾನಮಿವ ಅಪಿಧಾನಮ್ । ಕಥಮ್ ಅನೃತಾಪಿಧಾನನಿಮಿತ್ತಂ ತೇಷಾಮ್ ಅಲಾಭ ಇತಿ ? ಉಚ್ಯತೇ । ಯೋ ಯೋ ಹಿ ಯಸ್ಮಾತ್ ಅಸ್ಯ ಜನ್ತೋಃ ಪುತ್ರೋ ಭ್ರಾತಾ ವಾ ಇಷ್ಟ ಇತಃ ಅಸ್ಮಾಲ್ಲೋಕಾತ್ ಪ್ರೈತಿ ಪ್ರಗಚ್ಛತಿ ಮ್ರಿಯತೇ ತಮ್ ಇಷ್ಟಂ ಪುತ್ರಂ ಭ್ರಾತರಂ ವಾ ಸ್ವಹೃದಯಾಕಾಶೇ ವಿದ್ಯಮಾನಮಪಿ ಇಹ ಪುನರ್ದರ್ಶನಾಯ ಇಚ್ಛನ್ನಪಿ ನ ಲಭತೇ ॥

---

1 'ಪ್ರಚಾರ' ಎಂಬ ಮಾತಿನಲ್ಲಿ ಪ್ರ ಹೆಚ್ಚು ; ಸ್ವೇಚ್ಛಾಚಾರ ಎಂದಿಷ್ಟೇ ಇದ್ದರೆ ಸಾಕು.

(ಭಾಷ್ಯಾರ್ಥ)

ಹಿಂದೆ ಹೇಳಿದ ಆತ್ಮಧ್ಯಾನವನ್ನೂ ಸಾಧನವನ್ನೂ ಮಾಡುವದರಲ್ಲಿ ಸಾಧಕರಿಗೆ ಉತ್ಸಾಹವನ್ನು ಉಂಟುಮಾಡುವದಕ್ಕೆಂದು ಕನಿಕರದಿಂದ (ಶ್ರುತಿಯು) ಹೀಗೆನ್ನುತ್ತಿದೆ ತಮ್ಮ ಆತ್ಮನಲ್ಲಿಯೇ ಇದ್ದು ಪಡೆಯುವದಕ್ಕೆ ಶಕ್ಯವಾಗಿದ್ದರೂ ಆ ಈ ಸತ್ಯಕಾಮಗಳು ಅನೃತದ ಮುಸುಕುಳ್ಳವು ಎಂಬುದು ಎಂಥ ಕಷ್ಟದ ಮಾತು! ಆತ್ಮನಲ್ಲಿದ್ದು ತನ್ನನ್ನೇ ಆಶ್ರಯಿಸಿಕೊಂಡಿರುವವಾದರೂ ಅನೃತವು, **ಹೊರಗಿನ ವಿಷಯಗಳಾದ ಹೆಂಡತಿ, ಅನ್ನದೂಟ, ಬಟ್ಟೆಬರೆ- ಮುಂತಾದವುಗಳಲ್ಲಿರುವ ತೃಷ್ಣೆಯೂ ಅದರ ನಿಮಿತ್ತದಿಂದಾದ ಸ್ವೇಚ್ಛಾಚಾರವೂ ಮಿಥ್ಯಾಜ್ಞಾನದ ನಿಮಿತ್ತದಿಂದಾಗುವದರಿಂದ (ಅವನ್ನು) ಅನೃತವೆಂದಿದೆ**[1]- ಆ (ಅನೃತದ) ನಿಮಿತ್ತ ಸತ್ಯವಾದ ಕಾಮಗಳು ದೊರಕದೆ ಇರುವದರಿಂದ (ಅವಕ್ಕೆ ಅದು) ಮುಸುಕಿನಂತೆ ಇದೆಯಾಗಿ (ಅದನ್ನು) ಮುಸುಕು (ಎಂದು ಕರೆದಿದೆ).

ಅನೃತವೆಂಬ ಮುಸುಕಿನ ನಿಮಿತ್ತದಿಂದ ಆ (ಕಾಮಗಳು) ದೊರಕದೆ ಇರುತ್ತವೆ ಎಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ (ಹಿ=ಯಸ್ಮಾತ್) ಹೇಗೆಂದರೆ, ಈ ಜೀವನಿಗೆ ಇಷ್ಟನಾದ ಮಗನೋ ಒಡಹುಟ್ಟಿದವನೋ ಯಾವ ಯಾವನು ಇಲ್ಲಿಂದ ಈ ಲೋಕದಿಂದ (ಪ್ರೈತಿ=ಪ್ರಗಚ್ಛತಿ) ಹೊರಟುಹೋಗುತ್ತಾನೋ ಸಾಯುತ್ತಾನೋ ಆ ಇಷ್ಟನಾದ ಮಗನನ್ನಾಗಲಿ ಒಡಹುಟ್ಟಿದವನನ್ನಾಗಲಿ (ಅವನು) ತನ್ನ ಹೃದಯಾಕಾಶದಲ್ಲಿರುತ್ತಾನಾದರೂ ಇಲ್ಲಿ ಮತ್ತೆ ನೋಡಬೇಕೆಂದು ಇಚ್ಛಿಸಿದರೂ ದೊರಕಿಸಿಕೊಳ್ಳಲಾರದೆ ಇರುತ್ತಾನೆ.

## ಹೃದಯಾಕಾಶದಲ್ಲಿಯೇ ಕಾಮಗಳಿರುತ್ತವೆ

(ಉಪನಿಷತ್ತು)

**ಅಥ ಯೇ ಚಾಸ್ಯೇಹ ಜೀವಾ ಯೇ ಚ ಪ್ರೇತಾ ಯಚ್ಚಾನ್ಯದಿಚ್ಛನ್ನ ಲಭತೇ ಸರ್ವಂ ತದತ್ರ ಗತ್ವಾ ವಿನ್ದತೇಽತ್ರ ಹ್ಯಸ್ಯೈತೇ ಸತ್ಯಾಃ ಕಾಮಾಃ ಅನೃತಾಪಿಧಾನಾಸ್ತದ್ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿನ್ದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿನ್ದನ್ತ್ಯನೃತೇನ ಹಿ ಪ್ರತ್ಯೂಢಾಃ ॥೨**

---

1. ಅನೃತವೆಂದರೆ ಕಾಮವು ಮತ್ತು ಸ್ವೇಚ್ಛಾಚಾರರೂಪವಾದ ಕರ್ಮವು- ಎಂದು ಸ್ಪಷ್ಟವಾಗಿ ಬರೆದಿರುವದನ್ನು ಲಕ್ಷಿಸಬೇಕು. ಇದು ಮಿಥ್ಯಾಜ್ಞಾನದಿಂದ ಆಗುವದರಿಂದ ಅನೃತವು. ಇಲ್ಲಿ ಅನೃತವೆಂದರೆ ಮೂಲಾವಿದ್ಯೆ ಎಂಬ ವ್ಯಾಖ್ಯಾನಕಾರರ ವಿವರಣೆಗೆ ಆಧಾರವೇ ಇಲ್ಲ.

೨. ಇನ್ನು ಇಲ್ಲಿರುವ ಯಾವ ಜೀವರು ಮತ್ತು ಯಾವ ಸತ್ತ (ಜೀವರು), ಮತ್ತು ಯಾವ ಮತ್ತೊಂದು- (ಇವನ್ನು) ಇಚ್ಛಿಸಿ (ದರೂ) ದೊರಕಿಸಿಕೊಳ್ಳಲಾರದಿರುವನೋ ಅದೆಲ್ಲವನ್ನೂ ಇಲ್ಲಿಗೆ ಹೋಗಿ ಪಡೆದುಕೊಳ್ಳುವನು. ಇಲ್ಲಿಯೇ ಅಲ್ಲವೆ, ಇವನ ಈ ಸತ್ಯ ಕಾಮಗಳು ಅನೃತದ ಮುಸುಕುಳ್ಳ(ವಾಗಿವೆ)? ಅಲ್ಲಿ ಹೇಗೆ ವಿಹಿತ ವಾಗಿರುವ ಹಿರಣ್ಯನಿಧಿಯನ್ನು ಅಕ್ಷೇತ್ರಜ್ಞರು ಮೇಲಿಮೇಲಿ ಸಂಚರಿ ಸುತ್ತಾ ಪಡೆಯದ ಇರುತ್ತಾರೋ ಹಾಗೆಯೇ ಈ ಸರ್ವಪ್ರಜೆಗಳೂ ದಿನದಿನವೂ ಈ ಬ್ರಹ್ಮಲೋಕವನ್ನು ಸೇರುತ್ತಿದ್ದರೂ ಪಡೆದುಕೊಳ್ಳದೆ ಇರುವರು. ಅನೃತದಿಂದಲ್ಲವ, ಸೆಳೆಯಲ್ಪಟ್ಟಿರುವರು?

## ಎಲ್ಲವನ್ನೂ ಹೃದಯಾಕಾಶದಲ್ಲಿ ಪಡೆದುಕೊಳ್ಳಬಹುದು

(ಭಾಷ್ಯ)

೬೨೦. ಅಥ ಪುನರ್ಯೇ ಚಾಸ್ಯ ವಿದುಷೋ ಜನ್ತೋರ್ಜೀವಾಃ ಜೀವನ್ತಿ ಇಹ ಪುತ್ರಾ ಭ್ರಾತ್ರಾದಯೋ ವಾ, ಯೇ ಚ ಪ್ರೇತಾ ಮೃತಾ ಇಷ್ಟಾಃ ಸಂಬನ್ಧಿ ನೋ ಯಚ್ಚಾನ್ಯದಿಹ ಲೋಕೇ ವಸ್ತ್ರಾನ್ನಪಾನಾದಿ ರತ್ನಾದಿ ವಾ ವಸ್ತು ಇಚ್ಛನ್ ನ ಲಭತೇ । ತತ್ಸರ್ವಮ್ ಅತ್ರ ಹೃದಯಾಕಾಶಾಖ್ಯೇ ಬ್ರಹ್ಮಣಿ ಗತ್ವಾ ಯಥೋಕ್ತೇನ ವಿಧಿನಾ ವಿನ್ದತೇ ಲಭತೇ । ಅತ್ರ ಅಸ್ಮಿನ್ ಹಾರ್ದಾಕಾಶೇ ಹಿ ಯಸ್ಮಾತ್ ಅಸ್ಯ ಏತೇ ಯಥೋಕ್ತಾಃ ಸತ್ಯಾಃ ಕಾಮಾ ವರ್ತನ್ತೇ ಅನೃತಾಪಿ ಧಾನಾಃ । ಕಥಮಿವ ತದನ್ಯಾಯ್ಯಮಿತಿ ? ಉಚ್ಯತೇ । ತತ್ ತತ್ರ ಯಥಾಽಪಿ ಹಿರಣ್ಯನಿಧಿಂ ಹಿರಣ್ಯಮೇವ ಪುನರ್ಗ್ರಹಣಾಯ ನಿಧಾತೃಭಿರ್ನಿಧೀಯತ ಇತಿ ನಿಧಿಃ । ತಂ ಹಿರಣ್ಯನಿಧಿಂ ನಿಹಿತಂ ಭೂಮೇರಧಸ್ತಾತ್ ನಿಕ್ಷಿಪ್ತಮ್ ಅಕ್ಷೇತ್ರಜ್ಞಾ ನಿಧಿಶಾಸ್ತ್ರೈರ್ನಿಧಿಕ್ಷೇತ್ರಮ್ ಅಜಾನನ್ತಃ, ತೇ ನಿಧೇರುಪರ್ಯುಪರಿ ಸಂಚರ ನ್ತೋಽಪಿ ನಿಧಿಂ ನ ವಿನ್ದೇಯುಃ ಶಕ್ಯವೇದನಮಪಿ । ಏವಮೇವ ಇಮಾ ಅವಿದ್ಯಾ ವತ್ಯಃ ಸರ್ವಾ ಇಮಾಃ ಪ್ರಜಾ ಯಥೋಕ್ತಂ ಹೃದಯಾಕಾಶಾಖ್ಯಂ ಬ್ರಹ್ಮ ಲೋಕಂ ಬ್ರಹ್ಮೈವ ಲೋಕೋ ಬ್ರಹ್ಮಲೋಕಃ, ತಮ್ । ಅಹರಹಃ [1]ಪ್ರತ್ಯಹಂ ಗಚ್ಛನ್ತ್ಯೋಽಪಿ ಸುಷುಪ್ತಕಾಲೇ ನ ವಿನ್ದನ್ತಿ ನ ಲಭನ್ತೇ ಏಷೋಽಹಂ ಬ್ರಹ್ಮ ಲೋಕಭಾವಮ್ ಆಪನ್ನೋಽಸ್ಮ್ಯದ್ಯ ಇತಿ । ಅನೃತೇನ ಯಥೋಕ್ತೇನ ಹಿ ಯಸ್ಮಾತ್ ಪ್ರತ್ಯೂಢಾಃ ಹೃತಾಃ ಸ್ವರೂಪಾತ್ ಅವಿದ್ಯಾದಿದೋಷೈರ್ಬಹಿರಪ

1. ಇದರ ಮುಂದಿನ ಹಿ ಬೇಕಿಲ್ಲ.

ಕೃಷ್ಟಾಃ ಇತ್ಯರ್ಥಃ । ಅತಃ ಕಷ್ಟಮಿದಂ ವರ್ತತೇ ಜನ್ತೂನಾಂ ಯತ್ ಸ್ವಾಯತ್ತಮಪಿ ಬ್ರಹ್ಮ ನ ಲಭ್ಯತ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಇನ್ನು ಈ ಜ್ಞಾನಿಯಾದ ಜೀವನ ಜೀವರುಗಳು, ಇಲ್ಲಿ ಬದುಕಿರುವ ಮಕ್ಕಳು ಅಥವಾ ಒಡಹುಟ್ಟಿದವರೇ ಮೊದಲಾದವರು ಯಾರಿರುವರೋ, ಮತ್ತು ಯಾರು ಇಷ್ಟರಾದ ಸಂಬಂಧಿಗಳು ಹೊರಟುಹೋಗಿರುವರೋ ಸತ್ತಿರುವರೋ, ಮತ್ತು ಇನ್ನು ಯಾವದು ಬಟ್ಟೆ, ಅನ್ನಪಾನ- ಮುಂತಾದದ್ದು ಅಥವಾ ರತ್ನವೇ ಮುಂತಾದ ವಸ್ತುವನ್ನು ಇಚ್ಛಿಸಿದರೂ ದೊರಕಿಸಿಕೊಳ್ಳಲಾರದೆ ಇರುವನೋ ಅದೆಲ್ಲವನ್ನೂ ಈ ಹೃದಯಾಕಾಶವೆಂಬ ಬ್ರಹ್ಮದಲ್ಲಿ, ಹಿಂದೆ ಹೇಳಿರುವ ಪ್ರಕಾರದಿಂದ ಸೇರಿದಾಗ[1] (ವಿನ್ದತೇ=ಲಭತೇ) ಪಡೆದುಕೊಳ್ಳುವನು. (ಹಿ=ಯಸ್ಮಾತ್) ಏಕೆಂದರೆ ಇಲ್ಲಿ, ಈ ಹಾರ್ದಾಕಾಶದಲ್ಲಲ್ಲವೆ, ಇವನ ಈ ಹೇಳಿದ ಸತ್ಯವಾದ ಕಾಮಗಳು ಅನೃತದ ಮುಸುಕುಳ್ಳವಾಗಿ ಇದ್ದುಕೊಂಡಿರುತ್ತವೆ ?

(ಅವು ಸಿಕ್ಕುವದಿಲ್ಲವಲ್ಲ), ಅದು ಹೇಗೆ ಅನ್ಯಾಯವು ? ಎಂಬುದನ್ನು (ದೃಷ್ಟಾಂತದಿಂದ) ಹೇಳಲಾಗುತ್ತದೆ : (ತತ್=ತತ್ರ) ಅಲ್ಲಿ ಹೇಗೆ ಹಿರಣ್ಯನಿಧಿಯನ್ನು- ಚಿನ್ನವೇ, ಮತ್ತೆ ತೆಗೆದುಕೊಳ್ಳೋಣವೆಂದು ಇಡುವವರು (ನೆಲದ) ಕೆಳಗೆ ಇಡುತ್ತಾರಾದ್ದರಿಂದ ನಿಧಿ(ಯೆನಿಸುವದು). ಆ ಹಿರಣ್ಯನಿಧಿಯನ್ನು- ನೆಲದ ಕೆಳಗೆ ನಿಹಿತವಾದದ್ದನ್ನು ಹಾಕಿಟ್ಟಿದ್ದನ್ನು ಅಕ್ಷೇತ್ರಜ್ಞರು ನಿಧಿಶಾಸ್ತ್ರಗಳಿಂದ[2] ನಿಧಿಕ್ಷೇತ್ರವನ್ನು ಅರಿತುಕೊಳ್ಳದವರು (ಇದಾರಲ್ಲ), ಅವರು ನಿಧಿಯ ಮೇಲೆಮೇಲೆ ಸಂಚರಿಸುತ್ತಿದ್ದರೂ ನಿಧಿಯನ್ನು ತಿಳಿಯುವದಕ್ಕೆ ಶಕ್ಯವಿದ್ದರೂ ಪಡೆದುಕೊಳ್ಳದೆ ಇರುತ್ತಾರೋ, ಹಾಗೆಯೇ ಈ ಅವಿದ್ಯಾವಂತರಾದ ಈ ಪ್ರಜೆಗಳೆಲ್ಲ ಹಿಂದೆ ಹೇಳಿರುವ ಹೃದಯಾಕಾಶವೆಂಬ ಬ್ರಹ್ಮಲೋಕವನ್ನು- ಬ್ರಹ್ಮವೆಂಬ ಲೋಕವೇ (ಇಲ್ಲಿ) ಬ್ರಹ್ಮಲೋಕವು.[3] **ಅದನ್ನು ದಿನದಿನವೂ ಸುಷುಪ್ತಿಕಾಲದಲ್ಲಿ ಹೋಗಿ ಸೇರುತ್ತಿದ್ದರೂ**[4]- ಇಗೊ, ನಾನು ಬ್ರಹ್ಮಲೋಕದ ಸ್ವರೂಪವನ್ನು ಈಗ ಹೊಂದಿದವನಾಗಿರುವೆನು ಎಂದು ಪಡೆದುಕೊಳ್ಳದೆ, ಸೇರದೆ ಇರುವರು. ಹಿಂದೆ ಹೇಳಿರುವ ಅನೃತದಿಂದಲ್ಲವೆ, (ಹಿ=ಯಸ್ಮಾತ್) ಸೆಳೆಯಲ್ಪಟ್ಟಿರುವವರು, ಸ್ವರೂಪದಿಂದ ಅವಿದ್ಯಾದೋಷದಿಂದ

1. ಉಪಾಸನೆಯಿಂದ ಸೇರಿದಾಗ.

2. ಇಂಥಲ್ಲಿ ನಿಧಿಯಿದೆ ಎಂದು ಅಂಜನಾದಿಗಳಿಂದ ಕಂಡುಹಿಡಿಯುವ ಶಾಸ್ತ್ರದಿಂಡ.

3. ಸತ್ಯಲೋಕವಲ್ಲವೆಂಬುದು ಸ್ಪಷ್ಟ.

4. ಸದ್ಬ್ರಹ್ಮಪ್ರಾಪ್ತಿಯು ಸುಷುಪ್ತಿಯಲ್ಲಾಗುವದೆಂದು ೬-೮-೧ರಲ್ಲಿ ಹೇಳಿಯೂ ಇದೆ, ಆದ್ದರಿಂದ ಈ ದಹರವು ಬ್ರಹ್ಮವೇ. ಸೂ. ಭಾ. ೧-೩-೧೫.

ಹೊರಕ್ಕೆಳೆಯಲ್ಪಡುತ್ತಿರುವರು ಎಂದರ್ಥ.[1] ಆದ್ದರಿಂದ ಜಂತುಗಳಿಗೆ ಸ್ವಾಧೀನವಾಗಿರುವ ಬ್ರಹ್ಮವುಕೂಡ ದೊರೆಯುವದಿಲ್ಲವಲ್ಲ! (ಅಯ್ಯೋ!) ಇದೆಂಥ ಕಷ್ಟದ ಮಾತು!- ಎಂದು (ಶ್ರುತಿಯ) ಅಭಿಪ್ರಾಯ

## ಹೃದಯಶಬ್ದನಿರುಕ್ತಿಯಿಂದ ದಹರಾಕಾಶಪ್ರಸಿದ್ಧಿ

(ಉಪನಿಷತ್ತು)

**ಸ ವಾ ಏಷ ಆತ್ಮಾ ಹೃದಿ ತಸ್ಯೈತದೇವ ನಿರುಕ್ತಗ್ಂ ಹೃದ್ಯಯಮಿತಿ ತಸ್ಮಾದ್ಧೃದಯಮಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ ॥ ೩ ॥**

೩. ಆ ಈ ಆತ್ಮನೇ ಹೃದಯದಲ್ಲಿ (ಹೇಳಿದವನು). ಅದಕ್ಕೆ ಹೃದಿ ಅಯಮ್ ಎಂಬುದೇ ನಿರುಕ್ತವು, ಆದ್ದರಿಂದ ( ಅದು ) ಹೃದಯವು. ಹೀಗೆಂದರಿತುಕೊಂಡಿರುವವನು ದಿನದಿನವೂ ಸ್ವರ್ಗಲೋಕವನ್ನು ಸೇರುತ್ತಾನೆ.

## ಹೃದಯಾಕಾಶವು ಬ್ರಹ್ಮವೆಂಬುದಕ್ಕೆ ಹೃದಯನಾಮನಿರ್ವಚನ

(ಭಾಷ್ಯ)

೬೨೧. ಸ ವೈ । ಯ ಆತ್ಮಾಽಪಹತಪಾಪ್ಮಾ ಇತಿ ಪ್ರಕೃತಃ, ವೈಶಬ್ದೇನ ತಂ ಸ್ಮಾರಯತಿ । ಏಷಃ ವಿವಕ್ಷಿತ ಆತ್ಮಾ ಹೃದಿ ಹೃದಯಪುಣ್ಡರೀಕೇ ಆಕಾಶಶಬ್ದೇನಾಭಿಹಿತಃ । ತಸ್ಯೈತಸ್ಯ ಹೃದಯಸ್ಯ ಏತದೇವ ನಿರುಕ್ತಮ್ ನಿರ್ವಚನಮ್ ನಾನ್ಯತ್ । ಹೃದಿ ಅಯಮಾತ್ಮಾ ವರ್ತತ ಇತಿ ಯಸ್ಮಾತ್ । ತಸ್ಮಾತ್ ಹೃದಯಮ್ । ಹೃದಯನಾಮನಿರ್ವಚನಪ್ರಸಿದ್ಧ್ಯಾಽಪಿ ಸ್ವಹೃದಯ ಆತ್ಮಾ ಇತ್ಯವಗನ್ತವ್ಯಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆತನೇ- 'ಅಪಹತಪಾಪ್ಮನಾದ ಆತ್ಮನು' (೮-೧-೫) ಎಂದು ಯಾವನು ಪ್ರಕೃತನಾಗಿರುತ್ತಾನೋ ಅವನನ್ನು (ಅವನೇ ಎಂದು) ವೈಶಬ್ದದಿಂದ ನೆನಪಿಗೆ ತಂದಿರುತ್ತದೆ. ಈ ವಿವಕ್ಷಿತನಾದ ಆತ್ಮನೇ ಹೃದಯದಲ್ಲಿ ಹೃದಯಪುಂಡರೀಕ

---

1 ಅವಿದ್ಯಾಕಾಮಕರ್ಮಗಳೇ ಅನೃತವು ಎಂದರ್ಥ ಇಲ್ಲಿ ಅನೃತವೆಂದರೆ ಮೂಲಾವಿದ್ಯೆಯೆಂದೂ ಅಪಿಧಾನವೆಂದರೆ ಅದರ ಆವರಣಶಕ್ತಿಯೆಂದೂ ವ್ಯಾಖ್ಯಾನಮಾಡುವ ಈಚಿನ ಕೆಲವರು ವೇದಾಂತಿಗಳ ಮತವು ಪ್ರಮಾಣಕ್ಕೂ ಭಾಷ್ಯಕ್ಕೂ ವಿರುದ್ಧವೆಂದು ಸ್ಪಷ್ಟವು.

ದಲ್ಲಿ ಆಕಾಶಶಬ್ದದಿಂದ ಹೇಳಿದವನು. ಆ ಈ ಹೃದಯಕ್ಕೆ ಇದೇ ನಿರುಕ್ತವು, ನಿರ್ವಚನವು, ಮತ್ತೊಂದಲ್ಲ (ಹೃದಿ) ಹೃದಯದಲ್ಲಿ (ಅಯಮ್) ಈ ಆತ್ಮನು ಇರುತ್ತಾನಲ್ಲ, ಆದ್ದರಿಂದ ಹೃದಯವು ; ಹೃದಯನಾಮನಿರ್ವಚನದ ಪ್ರಸಿದ್ಧಿಯಿಂದಲೂ ತನ್ನ ಹೃದಯದಲ್ಲಿ ಆತ್ಮನು (ಇರುವನೆಂದು) ಗೊತ್ತುಪಡಿಸಿಕೊಳ್ಳಬೇಕು – ಎಂದು ಅಭಿಪ್ರಾಯ.

## ನಾಮನಿರ್ವಚನಜ್ಞಾನಿಗೆ ಫಲ

(ಭಾಷ್ಯ)

೬೨೨ ಅಹರಹರ್ವೈ ಪ್ರತ್ಯಹಮ್ ಏವಂವಿದ್ ಹೃದ್ಯಯಮಾತ್ಮೇತಿ ಜಾನನ್ ಸ್ವರ್ಗಂ ಲೋಕಂ ಹಾರ್ದಂ ಬ್ರಹ್ಮ ಏತಿ ಪ್ರತಿಪದ್ಯತೇ । ನನ್ವನೇವಂವಿದಪಿ ಸುಷುಪ್ತಕಾಲೇ ಹಾರ್ದಂ ಬ್ರಹ್ಮ ಪ್ರತಿಪದ್ಯತ ಏವ । (ಸುಷುಪ್ತಕಾಲೇ)[1] 'ಸತಾ ಸೋಮ್ಯ ತದಾ ಸಂಪನ್ನಃ' (೬-೮-೧) ಇತ್ಯುಕ್ತತ್ವಾತ್ । ಬಾಢಮೇವಮ್ । ತಥಾಪ್ಯಸ್ತಿ ವಿಶೇಷಃ । ಯಥಾ ಜಾನನ್ ಅಜಾನಂಶ್ಚ ಸರ್ವೋ ಜನ್ತುಃ ಸದ್ಬ್ರಹ್ಮೈವ, ತಥಾಽಪಿ ತತ್ತ್ವಮಸೀತಿ ಪ್ರತಿಬೋಧಿತೋ ವಿದ್ವಾನ್ ಸದೇವ ನಾನ್ಯೋಽಸ್ಮೀತಿ ಜಾನನ್ ಸದೇವ ಭವತಿ । ಏವಮೇವ ವಿದ್ವಾನ್ ಅವಿದ್ವಾಂಶ್ಚ ಸುಷುಪ್ತೇ ಯದ್ಯಪಿ ಸತ್ಸಂಪದ್ಯತೇ, ತಥಾಪಿ ಏವಂವಿದೇವ ಸ್ವರ್ಗಂ ಲೋಕಮೇತೀತ್ಯುಚ್ಯತೇ । ದೇಹಪಾತೇಽಪಿ ವಿದ್ಯಾಫಲಸ್ಯ ಅವಶ್ಯಂಭಾವಿತ್ವಾದ್ ಇತ್ಯೇಷ ವಿಶೇಷಃ ॥

(ಭಾಷ್ಯಾರ್ಥ)

ದಿನದಿನವೂ ಪ್ರತಿದಿನವೂ ಹೀಗೆಂದರಿತುಕೊಂಡಿರುವವನು, ಹೃದಯದಲ್ಲಿ ಈ ಆತ್ಮ(ನಿರುವ)ನೆಂದು ಅರಿತುಕೊಂಡಿರುವವನು[2], ಸ್ವರ್ಗಲೋಕವನ್ನು ಹಾರ್ದಬ್ರಹ್ಮವನ್ನು ಸೇರುತ್ತಾನೆ.

(ಆಕ್ಷೇಪ) .– ಹೀಗೆಂದರಿತುಕೊಳ್ಳದವನೂ ಸುಷುಪ್ತಿಕಾಲದಲ್ಲಿ ಹಾರ್ದಬ್ರಹ್ಮವನ್ನು ಸೇರಿಯೇಸೇರುತ್ತಾನಲ್ಲ ? (ಸುಷುಪ್ತಿಕಾಲದಲ್ಲಿ) 'ಸೋಮ್ಯನೆ, ಆಗ ಸತ್ತಿನೊಡನೆ ಸೇರಿಕೊಳ್ಳುತ್ತಾನೆ' (೬-೮-೧) ಎಂದು ಹೇಳಿದೆಯಲ್ಲ !

(ಪರಿಹಾರ) :– ನಿಜ, ಹೀಗೆಯೇ. ಆದರೂ ವಿಶೇಷವುಂಟು. ಹೇಗೆ **ಅರಿತುಕೊಂಡವನೂ ಅರಿಯದೆ ಇರುವವನೂ ಪ್ರತಿಯೊಬ್ಬ ಜೀವನೂ**

---

1. ಈ ಮಾತು ಇಲ್ಲದಿದ್ದರೂ ಆಗಿತ್ತೆಂದು ತೋರುತ್ತದೆ, ಅ॥ ವಾ॥ ಪಾಠಗಳಲ್ಲಿ ಇದನ್ನು ಬಿಟ್ಟುಬಿಟ್ಟಿದೆ.

2. ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಂಡಿರುವವನು.

ಸದ್ಬ್ರಹ್ಮವೇ (ಆಗಿರುತ್ತಾ)ನಾದರೂ 'ಅದೇ ನೀನಾಗಿರುವೆ' ಎಂದು ತಿಳಿಸಲ್ಪಟ್ಟ ಜ್ಞಾನಿಯೇ ಸತ್ತೇ (ನಾನು) ಮತ್ತೊಬ್ಬನಲ್ಲ- ಎಂದು ಅರಿತುಕೊಂಡು ಸತ್ತೇ ಆಗುತ್ತಾನೋ, ಹಾಗೆಯೇ ಉಪಾಸನೆಮಾಡಿದವನೂ ಮಾಡದವನೂ ಸುಷುಪ್ತಿಯಲ್ಲಿ ಸತ್ತನ್ನೇ ಸೇರುತ್ತಾನೆಂಬುದು ನಿಜ; ಆದರೂ ಹೀಗೆಂದು ಉಪಾಸನೆಮಾಡಿದವನೇ ಸ್ವರ್ಗಲೋಕವನ್ನು ಸೇರುತ್ತಾನೆ ಎಂದು (ಇಲ್ಲಿ) ಹೇಳಿದೆ. ಏಕೆಂದರೆ ದೇಹಪಾತವಾದಮೇಲೂ ಉಪಾಸನೆಯ ಫಲವು ಅವಶ್ಯವಾಗಿ ಆಗುತ್ತದೆ- ಎಂಬಿದು (ಇಲ್ಲಿ) ವಿಶೇಷವು.[1]

## ಉಪಾಸಕನಿಗೆ ಸ್ವರೂಪಪ್ರಾಪ್ತಿ

(ಉಪನಿಷತ್ತು)

**ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ ಬ್ರಹ್ಮೇತಿ ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ ॥**

೪. ಇನ್ನು ಈ ಸಂಪ್ರಸಾದನಿದಾನಲ್ಲ, (ಅವನು) ಈ ಶರೀರದಿಂದ ಮೇಲಕ್ಕೆದ್ದು ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನೆ. ಇವನೇ ಆತ್ಮನು -ಎಂದನು. ಇದೇ ಅಮೃತವು, ಅಭಯವು, ಇದೇ ಬ್ರಹ್ಮವು. ಆ ಈ ಬ್ರಹ್ಮಕ್ಕೆ ಸತ್ಯವೆಂಬುದು ನಾಮವು.

## ದಹರೋಪಾಸಕನಿಗೆ ಆಗುವ ಸ್ವರೂಪಪ್ರಾಪ್ತಿ

(ಭಾಷ್ಯ)

೬೨೩. **ಸುಷುಪ್ತಕಾಲೇ ಸ್ವೇನ ಆತ್ಮನಾ ಸತಾ ಸಂಪನ್ನಃ[2] ಸನ್ ಸಮ್ಯಕ್ ಪ್ರಸೀದತೀತಿ ಜಾಗ್ರತ್ಸ್ವಪ್ನಯೋರ್ವಿಷಯೇಂದ್ರಿಯಸಂಯೋಗಜಾತಂ ಕಾಲುಷ್ಯಂ ಜಹಾತೀತಿ ಸಂಪ್ರಸಾದಶಬ್ದೋ ಯದ್ಯಪಿ ಸರ್ವಜನ್ತೂನಾಂ ಸಾಧಾರಣಃ, ತಥಾಪಿ 'ಏವಂವಿತ್ ಸ್ವರ್ಗಂ ಲೋಕಮೇತಿ' ಇತಿ ಪ್ರಕೃತತ್ವಾತ್, 'ಏಷ**

1. ದೃಷ್ಟಾಂತದಲ್ಲಿ ಜ್ಞಾನದಿಂದಲೇ ಫಲವು ಹೇಗೋ ದಾರ್ಷ್ಟಾಂತಿಕದಲ್ಲಿ ಉಪಾಸನೆಯಿಂದಲೇ ಫಲವು ಹಾಗೆ -ಎಂದು ಅಭಿಪ್ರಾಯ.

2. ಅನುವಾದದ ಟಿಪ್ಪಣಿಯನ್ನು ನೋಡಿ.

ಸಂಪ್ರಸಾದಃ' ಇತಿ ಸಂನಿಹಿತವದ್ ಯತ್ನವಿಶೇಷಾತ್ ಸಃ। ಅಥ ಇದಂ ಶರೀರಂ ಹಿತ್ವಾ ಅಸ್ಮಾಚ್ಛರೀರಾತ್ ಸಮುತ್ಥಾಯ ಶರೀರಾತ್ಮಭಾವನಾಂ ಪರಿತ್ಯಜ್ಯ ಇತ್ಯರ್ಥಃ। ನ ತು ಆಸನಾದಿವ ಸಮುತ್ಥಾಯ ಇತೀಹ ಯುಕ್ತಮ್। 'ಸ್ವೇನ ರೂಪೇಣ' ಇತಿ ವಿಶೇಷಣಾತ್। ನ ಹಿ ಅನ್ಯತ ಉತ್ಥಾಯ ಸ್ವರೂಪಂ ಸಂಪತ್ತ್ರವ್ಯಮ್। ಸ್ವರೂಪಮೇವ ಹಿ ತನ್ನ ಭವತಿ ಪ್ರತಿಪತ್ತವ್ಯಂ ಚೇತ್ ಸ್ಯಾತ್। ಪರಂ ಪರಮಾತ್ಮಲಕ್ಷಣಂ ವಿಜ್ಞಪ್ತಿಸ್ವಭಾವಂ ಜ್ಯೋತಿಃ, ಉಪಸಂಪದ್ಯ। ಸ್ವಾಸ್ಥ್ಯಮ್ ಉಪಗಮ್ಯೇತ್ಯೇತತ್। ಸ್ವೇನ ಆತ್ಮೀಯೇನ ರೂಪೇಣ ಅಭಿನಿಷ್ಪದ್ಯತೇ। ಪ್ರಾಗೇ ತಸ್ಯಾಃ ಸ್ವರೂಪಸಂಪತ್ತೇಃ, ಅವಿದ್ಯಯಾ ದೇಹಮೇವಾಪರಂ ರೂಪಮ್ ಆತ್ಮತ್ವೇನ ಉಪಗತಃ ಇತಿ ತದಪೇಕ್ಷಯಾ ಇದಮುಚ್ಯತೇ ಸ್ವೇನ ರೂಪೇಣೇತಿ। ಅಶರೀರತಾ ಹಿ ಆತ್ಮನಃ ಸ್ವರೂಪಮ್। ಯತ್ ಸ್ವಂ ಪರಂ ಜ್ಯೋತಿಃ ಸ್ವರೂಪಮ್ ಆಪದ್ಯತೇ ಸಂಪ್ರಸಾದಃ, ಏಷ ಆತ್ಮೇತಿ ಹೋವಾಚ। "ಸ ಬ್ರೂಯಾತ್" (೮-೧-೫) ಇತಿ ಯಃ ಶ್ರುತ್ಯಾ ನಿಯುಕ್ತೋಽನ್ತೇವಾಸಿಭ್ಯಃ। ಕಿಂ ಚ ಏತದಮೃತಮ್ ಅವಿನಾಶಿ ಭೂಮಾ "ಯೋ ವೈ ಭೂಮಾ ತದಮೃತಮ್" (೭-೨೪-೧) ಇತ್ಯುಕ್ತಮ್। ಅತ ಏವಾಽಭಯಮ್। ಭೂಮ್ನೋ ದ್ವಿತೀಯಾಭಾವಾತ್। ಅತ ಏತದ್ ಬ್ರಹ್ಮೇತಿ॥

(ಭಾಷ್ಯಾರ್ಥ)

ಸುಷುಪ್ತಿಕಾಲದಲ್ಲಿ ತನ್ನ ಆತ್ಮನಾದ ಸತ್ತಿನೊಂದಿಗೆ ಒಂದಾಗಿರುವವನಾಗಿ ಚೆನ್ನಾಗಿ ಪ್ರಸನ್ನನಾಗಿರುವದರಿಂದ ಜಾಗ್ರತ್ಸ್ವಪ್ನಗಳಲ್ಲಿರುವ ವಿಷಯೇಂದ್ರಿಯ ಸಂಯೋಗದಿಂದುಂಟಾದ ಕಲ್ಮಷವನ್ನು ಬಿಟ್ಟಿರುತ್ತಾನಾದ್ದರಿಂದ[1] 'ಸಂಪ್ರಸಾದ'ನೆಂಬ ಶಬ್ದವು ಎಲ್ಲಾ ಜೀವರಿಗೂ ಸಾಧಾರಣವಾಗಿರುತ್ತದೆಯೆಂಬುದು[2] ನಿಜ. ಆದರೂ 'ಹೀಗೆಂದರಿತವನು ಸ್ವರ್ಗಲೋಕಕ್ಕೆ ಹೋಗುತ್ತಾನೆ' (೮-೩-೩) ಎಂದು (ಉಪಾಸಕನೇ) ಪ್ರಕೃತನಾಗಿರುವದರಿಂದಲೂ 'ಈ ಸಂಪ್ರಸಾದನು' ಎಂದು ಹತ್ತಿರವಿರುವಂತೆ (ಶ್ರುತಿಯು) ವಿಶೇಷವಾಗಿ ಪ್ರಯತ್ನಮಾಡಿ (ಹೇಳಿರು)ವದರಿಂದಲೂ ಅವನೇ[3] (ಇಲ್ಲಿ ಸಂಪ್ರಸಾದನು. ಅವನು) ಇನ್ನು ಈ ಶರೀರವನ್ನು ಬಿಟ್ಟು ಈ

1. ಜಾಗ್ರತ್ಸ್ವಪ್ನಗಳ ಸಂಬಂಧವೇ ಸಂಸಾರದ ಕಲ್ಮಷವು. ಸ್ಥೂಲಸೂಕ್ಷ್ಮೋಪಾಧಿಗಳ ಸಂಬಂಧವಿಲ್ಲದಿದ್ದರೆ ಆತ್ಮನು ಸ್ವಚ್ಛನೇ.

2. ಸುಷುಪ್ತಿಯಲ್ಲಿ ಸತ್ತಿನಲ್ಲಿ ಸೇರಿದ್ದರೂ ಜೀವರು ಅದನ್ನು ಅರಿಯರು ಎಂದು ೬-೯-೧ರಲ್ಲಿ ಎಲ್ಲಾ ಜೀವರುಗಳಿಗೂ ಸದ್ರೂಪವನ್ನು ಹೇಳಿದೆ.

3. ಸುಷುಪ್ತಿಯಲ್ಲಿ ತನ್ನ ಸ್ವರೂಪಕ್ಕೆ ಸೇರಿಕೊಳ್ಳುತ್ತಾನೆ ಎಂದಿರುವರು ಯಾವ ಸ್ವಚ್ಛಸ್ವರೂಪವನ್ನು ಸೇರಿಕೊಳ್ಳುತ್ತಾನೋ ಆ ಸ್ವರೂಪವೇ ಅಪಹತಪಾಪ್ಮತ್ವಾದಿಗುಣಗಳಿಂದ ಕೂಡಿದ ಪರಮೇಶ್ವರನು ಎಂದು ಉಪಾಸ್ಯತತ್ತ್ವವನ್ನು ಹೊಗಳುವದಕ್ಕೆ ಹೀಗೆ ಹೇಳಿದೆಯೆಂದು ಭಾವ. ಸೂ. ಭಾ. ೧-೩-೨೦.

ಶರೀರದಿಂದ ಮೇಲಕ್ಕೆದ್ದು, **ಶರೀರವೇ ತಾನೆಂಬ ಭಾವನೆಯನ್ನು ಬಿಟ್ಟು ಎಂದರ್ಥ.**[1] ಆಸನವನ್ನು (ಬಿಟ್ಟೇಳು)ವಂತೆ ಮೇಲಕ್ಕೆದ್ದು ಎಂದೇನೂ (ಇಲ್ಲಿ ಹೇಳಿದೆಯೆಂಬುದು) ಯುಕ್ತವಾಗುವದಿಲ್ಲ. ಏಕೆಂದರೆ 'ತನ್ನ ರೂಪದಿಂದ (ಸಿದ್ಧನಾಗುತ್ತಾನೆ)' ಎಂದು ವಿಶೇಷಣವನ್ನು (ಹಾಕಿದೆ). ಮತ್ತೊಂದರಿಂದ ಎದ್ದು ಸ್ವರೂಪವನ್ನೇನೂ ಪಡೆದುಕೊಳ್ಳಬೇಕಾದದ್ದೇನೂ ಇಲ್ಲವಷ್ಟೆ? ಏಕೆಂದರೆ (ಹೊಸದಾಗಿ) ಪಡೆದುಕೊಳ್ಳತಕ್ಕದ್ದಾದರೆ (ಅದು) ಸ್ವರೂಪವೇ ಆಗುವದಿಲ್ಲ[2] ? ಹೆಚ್ಚಿನ, ಪರಮಾತ್ಮಸ್ವರೂಪವಾದ ಚೈತನ್ಯಸ್ವಭಾವದ, ಜ್ಯೋತಿಯನ್ನು ಸೇರಿ- ಸ್ವಸ್ಥತೆಯನ್ನು ಹೊಂದಿ ಎಂದು ತಾತ್ಪರ್ಯ- ಸ್ವವಾದ ತನ್ನ[3] ರೂಪದಿಂದ ಸಿದ್ಧನಾಗುತ್ತಾನೆ[4] ಈ ಸ್ವರೂಪಸಂಪತ್ತಿಗಿಂತ ಮೊದಲು ಅವಿದ್ಯೆಯಿಂದ ದೇಹವೆಂಬ ಅಪರರೂಪವನ್ನೇ ತಾನೆಂದು ಇಟ್ಟುಕೊಂಡಿದ್ದನಾದ್ದರಿಂದ ಅದರ ಹೋಲಿಕೆಯಿಂದ 'ತನ್ನ ರೂಪದಿಂದ'[5] ಎಂದಿರುತ್ತದೆ ಅಶರೀರತ್ವವೇ ಅಲ್ಲವೆ, ಆತ್ಮನ ಸ್ವರೂಪವು? ಯಾವ ತನ್ನ ಹೆಚ್ಚಿನ ಜ್ಯೋತಿಃಸ್ವರೂಪವನ್ನು (ಈ) ಸಂಪ್ರಸಾದನು ಹೊಂದುತ್ತಾನೋ ಅವನೇ ಆತ್ಮನು ಎಂದನು "ಅವನು ಶಿಷ್ಯರಿಗೆ ಹೀಗೆನ್ನಬೇಕು" (೮-೧-೫) ಎಂದು ಶ್ರುತಿಯು ಯಾವ (ಆಚಾರ್ಯನಿಗೆ) ಕಟ್ಟುಮಾಡಿತ್ತೋ (ಅವನು ಹೇಳಿದನು ಎಂದರ್ಥ) ಮತ್ತು ಇದೇ ಅಮೃತವು, ವಿನಾಶವಿಲ್ಲದ ಭೂಮವು: "ಭೂಮುವೆಂಬುದಿದೆಯಲ್ಲ, ಅದೇ ಅಮೃತವು" (೭-೨೪-೧) ಎಂದು ಹಿಂದೆ ಹೇಳಿದೆಯಷ್ಟೆ? ಆದ್ದರಿಂದಲೇ ಅಭಯವು, ಏಕೆಂದರೆ ಭೂಮಕ್ಕೆ ಎರಡನೆಯದು ಇರುವದಿಲ್ಲ[6] ಆದ್ದರಿಂದ ಇದೇ ಬ್ರಹ್ಮವು[7]

---

1. ಸುಷುಪ್ತಿಯಲ್ಲಿ ಅವನಿಗೆ ಶರೀರವೇ ತಾನೆಂಬ ಭಾವನೆಯಿರುವದಿಲ್ಲ ಎಂಬುವೇ ವಿವಕ್ಷಿತವೆಂದು ಭಾವ.

2. ಆದ್ದರಿಂದ ಸುಷುಪ್ತಿಯಲ್ಲಿ ಹೊಸದಾಗಿರುವ ರೂಪವನ್ನೇನೂ ಪಡೆಯುವದಿಲ್ಲ.

3. ಇದು ಮೂಲದಲ್ಲಿರುವ ಆತ್ಮೀಯೇನ ಎಂಬುದರ ಅನುವಾದವು, ತನ್ನ ಸ್ವರೂಪಕ್ಕಿಂತ ಬೇರೆಯಾದ ತನ್ನ ರೂಪವು ಇರುವದಿಲ್ಲವಾದ್ದರಿಂದ ಇಲ್ಲಿ ಆತ್ಮರೂಪೇಣ ಎಂದಿದ್ದರೆ ಹೇಗೋ ಹಾಗೆ ತನ್ನನ್ನೇ ಆತ್ಮೀಯವೆಂದಿದೆ ಎಂದು ತಿಳಿಯಬೇಕು.

4. ಸಿದ್ಧವಾಗುತ್ತಾನೆ ಎಂದಿರುವದು ಮೊದಲು ತನ್ನ ರೂಪಕ್ಕಿಂತ ಬೇರೆಯ ರೂಪದಲ್ಲಿದ್ದನು ಎಂಬ ವ್ಯಾವಹಾರಿಕಭಾವನೆಯಿಂದ ಹೇಳಿದ್ದು. ನಿಜವಾಗಿ ಯಾವಾಗಲೂ ಸತ್ಸಂಪತ್ತಿಯೇ ಇರುತ್ತದೆ. ಸೂ. ಭಾ. ೩-೨-೭ (ಭಾ. ಭಾ. ೨೬೬).

5. 'ಸ್ವೇನ ರೂಪೇಣ' ಎಂಬ ಪಾಠದ ಅನುವಾದವಿದು. 'ಪರಮಿತಿ' ಎಂದಿದ್ದರೆ ಇಲ್ಲಿ ಸಂದರ್ಭಕ್ಕೆ ಹೆಚ್ಚು ಹೊಂದುತ್ತದೆ, ಏಕೆಂದರೆ ಹಿಂದಿನದು ಅಪರರೂಪವು, ಇದು ಪರವು ಎಂಬುದು ವಿವಕ್ಷಿತವಾಗಿದೆ.

6. ಎರಡನೆಯದಿದ್ದರಲ್ಲವೆ ಭಯ?

7. ಯಾವದು ಅನಂತವೋ ಅದೇ ಬ್ರಹ್ಮ. ತೈ. ೨-೧. ಇದನ್ನೇ ಹೃದಯದಲ್ಲಿ ಅಪಹತಪಾಪ್ಮತ್ವಾದಿಗುಣಗಳುಳ್ಳದ್ದೆಂದು ಉಪಾಸನೆಮಾಡಬೇಕೆಂದು ನಾನು ಹೇಳಿರುವದು ಎಂದು ಆಚಾರ್ಯನ ಅಭಿಪ್ರಾಯ.

## ಉಪಾಸ್ಯಬ್ರಹ್ಮಕ್ಕೆ ಸತ್ಯವೆಂಬ ನಾಮ

(ಭಾಷ್ಯ)

೬೨೪. ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಅಭಿಧಾನಮ್ । ಕಿಂ ತತ್ ? ಸತ್ಯಮಿತಿ । ಸತ್ಯಂ ಹಿ ಅವಿತಥಂ ಬ್ರಹ್ಮ । "ತತ್ಸತ್ಯಂ ಸ ಆತ್ಮಾ" (೬-೮-೭) ಇತಿ ಹ್ಯುಕ್ತಮ್ । ಅಥ ಕಿಮರ್ಥಮಿದಂ ನಾಮ ಪುನರುಚ್ಯತೇ ? ತದುಪಾಸನವಿಧಿಸ್ತುತ್ಯರ್ಥಮ್ ॥

(ಭಾಷ್ಯಾರ್ಥ)

ಆ ಈ ಬ್ರಹ್ಮಕ್ಕೆ ನಾಮವು ಹೆಸರು ಯಾವದದು ? ಸತ್ಯವು ಎಂಬಿದು. ಬ್ರಹ್ಮವು ಸತ್ಯವು, ಹುಸಿಯಲ್ಲದ್ದು, ಅಲ್ಲವೆ ? "ಅದೇ ಸತ್ಯವು, ಅದೇ ಆತ್ಮನು" (೬-೮-೭) ಎಂದಲ್ಲವೆ, ಹಿಂದೆ ಹೇಳಿದೆ ?

(ಪ್ರಶ್ನೆ).— ಹಾಗಾದರೆ ಈ ಹೆಸರನ್ನು ಮತ್ತೆ ಹೇಳಿರುವದೇಕೆ ?

(ಉತ್ತರ).— ಅದನ್ನು ಉಪಾಸನೆಮಾಡಬೇಕೆಂದು ವಿಧಿಸಿರುವದನ್ನು ಸ್ತುತಿಸುವದಕ್ಕೆ.

## ಸತ್ಯನಾಮಾಕ್ಷರಗಳ ಮಹಿಮೆ

(ಉಪನಿಷತ್ತು)

**ತಾನಿ ಹ ವಾ ಏತಾನಿ ತ್ರೀಣ್ಯಕ್ಷರಾಣಿ ಸತೀಯಮಿತಿ ತದ್ಯತ್ ಸತ್ತದಮೃತಮಥ ಯತ್ತಿ ತನ್ಮರ್ತ್ಯಮಥ ಯದ್ಯಂ ತೇನೋಭೇ ಯಚ್ಛತಿ ಯದನೇನೋಭೇ ಯಚ್ಛತಿ ತಸ್ಮಾದ್ಯಮಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ ॥ ೫ ॥**

೫. ಆ ಈ ಮೂರು ಅಕ್ಷರಗಳು, 'ಸ, ತೀ, ಯಮ್' ಎಂಬಿವು. ಅಲ್ಲಿ ಯಾವದು ಸತ್ತೋ ಅದು ಅಮೃತವು ; ಇನ್ನು ಯಾವದು ತಿ ಎಂಬುದೋ ಅದು ಮರ್ತ್ಯವು; ಇನ್ನು ಯಾವದು ಯಮ್ ಎಂಬುದೋ ಅದರಿಂದ ಎರಡನ್ನೂ ಹಿಡಿತದಲ್ಲಿಟ್ಟಿರುತ್ತಾನೆ ; ಇದರಿಂದ ಎರಡನ್ನೂ ಹಿಡಿತದಲ್ಲಿಟ್ಟಿರುತ್ತಾನಲ್ಲವೆ, ಆದ್ದರಿಂದ ಯಮ್. ಹೀಗೆಂದರಿತವನು ದಿನದಿನವೂ ಸ್ವರ್ಗಲೋಕಕ್ಕೆ ಹೋಗುತ್ತಾನೆ.

## ಸತ್ಯವೆಂಬ ನಾಮದ ಅಕ್ಷರಗಳ ಮಹಿಮೆ

(ಭಾಷ್ಯ)

೬೨೫. ತಾನಿ ಹ ವಾ ಏತಾನಿ ಬ್ರಹ್ಮಣೋ ನಾಮಾಕ್ಷರಾಣಿ ತ್ರೀಣ್ಯೇತಾನಿ

ಸ ತೀ ಯಮ್ ಇತಿ। ಸಕಾರಃ, ತಕಾರಃ, ಯಮ್ ಇತಿ ಚ। ಈಕಾರಸ್ತಕಾರೇ ಉಚ್ಚಾರಣಾರ್ಥೋಽನುಬನ್ಧಃ। ಹ್ರಸ್ವೇನೈವಾಕ್ಷರೇಣ ಪುನಃ ಪ್ರತಿನಿರ್ದೇಶಾತ್। ತೇಷಾಮ್। ತತ್ ತತ್ರ ಯತ್ ಸತ್ ಸಕಾರಃ, ತದಮೃತಮ್। ಸದ್ಬ್ರಹ್ಮಾಮೃತವಾಚಕತ್ವಾತ್ ಅಮೃತ ಏವ। ಸಕಾರಸ್ತಕಾರಾನ್ತೋ ನಿರ್ದಿಷ್ಟಃ। ಅಥ ಯತ್ ತಿ ತಕಾರಃ ತನ್ಮರ್ತ್ಯಮ್। ಅಥ ಯದ್ ಯಮ್ ಅಕ್ಷರಮ್, ತೇನ ಅಕ್ಷರೇಣ ಅಮೃತಮರ್ತ್ಯಾಖ್ಯೇ ಪೂರ್ವೇ ಉಭೇ ಅಕ್ಷರೇ ಯಚ್ಛತಿ ಯಮಯತಿ[1] ನಿಯಮಯತಿ ವಶೀಕರೋತಿ ಆತ್ಮನಾ ಇತ್ಯರ್ಥಃ। ಯದ್ ಯಸ್ಮಾತ್ ಅನೇನ ಯಮಿತ್ಯೇತೇನ ಉಭೇ ಯಚ್ಛತಿ ತಸ್ಮಾದ್ ಯಮ್। ಸಂಯತೇ ಇವ ಹಿ ಏತೇನ ಯಮಾ ಲಕ್ಷ್ಯೇತೇ। ಬ್ರಹ್ಮನಾಮಾಕ್ಷರಸ್ಯಾಪಿ ಇದಮಮೃತತ್ವಾದಿಧರ್ಮವತ್ತ್ವಂ ಮಹಾಭಾಗ್ಯಮ್, ಕಿಮುತ ನಾಮವತ ಇತಿ ಉಪಾಸ್ಯತ್ವಾಯ ಸ್ತೂಯತೇ ಬ್ರಹ್ಮನಾಮನಿರ್ವಚನೇನೈವ। ನಾಮವತೋ ವೇತ್ತಾ ಏವಂವಿತ್ ಅಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ ಇತ್ಯುಕ್ತಾರ್ಥಮ್॥

(ಭಾಷ್ಯಾರ್ಥ)

ಆ ಇವು ಬ್ರಹ್ಮದ ನಾಮಾಕ್ಷರಗಳು, ಸ ತೀ ಯಮ್ ಎಂದು ಸಕಾರ, ತಕಾರ, ಯಮ್– ಎಂಬೀ ಮೂರು. (ಇಲ್ಲಿ ಸ ತೀ ಎಂಬಲ್ಲಿ) ತಕಾರದಲ್ಲಿರುವ ಈಕಾರವು ಉಚ್ಚಾರಣೆಗಾಗಿ (ಸೇರಿಸಿಕೊಂಡಿರುವ) ಅನುಬಂಧವು,[2] ಏಕೆಂದರೆ ಇವನ್ನು ಮತ್ತೆ ಪ್ರತಿನಿರ್ದೇಶಮಾಡುವಾಗ (ತಿ ಎಂದು) ಹ್ರಸ್ವದಿಂದಲೇ (ಹೇಳಿದೆ. ತತ್=ತತ್ರ) ಅಲ್ಲಿ ಸತ್ ಎಂಬುದಿದೆಯಲ್ಲ, ಸಕಾರವಿದೆಯಲ್ಲ, ಅದು ಅಮೃತವು; ಸದ್ಬ್ರಹ್ಮಾಮೃತವನ್ನು ಹೇಳುವದರಿಂದ ಅಮೃತವೇ. (ಇಲ್ಲಿ) ಸಕಾರವನ್ನು ತಕಾರಾಂತವಾಗಿ ನಿರ್ದೇಶಮಾಡಿರುತ್ತದೆ. ಇನ್ನು ತಿ ಎಂಬ ತಕಾರವಿದೆಯಲ್ಲ, ಅದು ಮರ್ತ್ಯವು. ಇನ್ನು ಯಮ್ ಎಂಬ ಅಕ್ಷರವಿದೆಯಲ್ಲ, ಆ ಅಕ್ಷರದಿಂದ ಅಮೃತ, ಮರ್ತ್ಯ, ಎಂಬ ಹಿಂದಿನ ಎರಡು ಅಕ್ಷರಗಳನ್ನು (ಯಚ್ಛತಿ=) ಹಿಡಿತ ಮಾಡುತ್ತಾನೆ ಯಮನಮಾಡುತ್ತಾನೆ. ನಿಯಮನಮಾಡುತ್ತಾನೆ, ಸ್ವಾಧೀನಕ್ಕೆ ತಂದುಕೊಳ್ಳುತ್ತಾನೆ ಎಂದರ್ಥ. ಈ ಯಮ್ ಎಂಬೀ (ಅಕ್ಷರದಿಂದ) ಎರಡನ್ನೂ ಹಿಡಿತದಲ್ಲಿಟ್ಟುಕೊಂಡಿರುತ್ತಾನಲ್ಲವೆ, ಆದ್ದರಿಂದ (ಅದು) ಯಮ್. ಈ ಯಮ್ ಎಂಬ(ಕ್ಷರ)ದಿಂದ (ಅವೆರಡೂ) ಸಂಯತವಾಗಿರುವಂತೆ ಕಾಣುತ್ತವೆಯಲ್ಲವೆ ?

ಬ್ರಹ್ಮನಾಮದ ಅಕ್ಷರಕ್ಕೆ ಕೂಡ ಈ ಅಮೃತತ್ವವೇ ಮುಂತಾದ ಧರ್ಮಗಳಿರುವ ಮಹಾಭಾಗ್ಯವಿದೆ, ಇನ್ನು ನಾಮವುಳ್ಳ (ಬ್ರಹ್ಮಕ್ಕೆ) ಹೇಳತಕ್ಕದ್ದೇನು ?

---

1. ಈ ಮಾತು ಆ॥ ವಾ॥ ಪಾಠಗಳಲ್ಲಿಲ್ಲ ; ಇಲ್ಲದಿದ್ದರೂ ಸಾಗುತ್ತದೆ.
2. ಅರ್ಥವಿಲ್ಲದ ಅಕ್ಷರವು.

ಎಂದು ನಾಮನಿರ್ವಚನದಿಂದಲೇ ಬ್ರಹ್ಮವನ್ನು ಉಪಾಸ್ಯವೆಂದು (ತಿಳಿಸುವದಕ್ಕಾಗಿ) ಹೊಗಳಿದೆ. ನಾಮವುಳ್ಳ (ಬ್ರಹ್ಮ)ವನ್ನು ಅರಿತವನು ಹೀಗೆಂದರಿತವನು, 'ಹೀಗೆಂದ ರಿತವನು ದಿನದಿನವೂ ಸ್ವರ್ಗಲೋಕಕ್ಕೆ ಹೋಗುತ್ತಾನೆ' ಎಂಬ ವಾಕ್ಯಕ್ಕೆ ಅರ್ಥವನ್ನು (ಹೇಳಿ)ದ್ದಾಗಿದೆ.

---

# ಎಂಟನೆಯ ಅಧ್ಯಾಯ—ನಾಲ್ಕನೆಯ ಖಂಡ

( ದ ಹ ರ ವಿ ದ್ಯೆ )

## ಆತ್ಮನ ಸ್ತುತಿ

(ಉಪನಿಷತ್ತು)

**ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ನೈತಗ್ಂ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಗ್ಂ ಸರ್ವೇ ಪಾಪ್ಮಾನೋಽತೋ ನಿವರ್ತನ್ತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ ॥ ೧ ॥**

೧. ಇನ್ನು (ಈ) ಆತ್ಮನಿದಾನಲ್ಲ, ಇವನು ಈ ಲೋಕಗಳ ಅಸಂಭೇದಕ್ಕೆ ಸೇತುವು, ವಿಧೃತಿಯು. ಈ ಸೇತುವನ್ನು ಅಹೋರಾತ್ರಗಳು ದಾಟವು. ಮುಪ್ಪು (ದಾಟದು), ಸಾವು (ದಾಟದು), ಶೋಕವು (ದಾಟದು), ಸುಕೃತವು (ದಾಟದು), ದುಷ್ಕೃತವು (ದಾಟದು). ಇವನಿಂದ ಎಲ್ಲಾ ಪಾಪ್ಮಗಳೂ ಅತ್ತ ಸರಿಯುವವು; ಈ ಬ್ರಹ್ಮಲೋಕವು ಅಪಹತಪಾಪ್ಮವಲ್ಲವೆ?

## ಉಪಾಸಕನು ಪಡೆಯುವ ಆತ್ಮನ ಸ್ವರೂಪ

(ಭಾಷ್ಯ)

೬೨೬. ಅಥ ಯ ಆತ್ಮೇತಿ। ಉಕ್ತಲಕ್ಷಣೋ ಯಃ ಸಂಪ್ರಸಾದಸ್ತಸ್ಯ ಸ್ವರೂಪಂ ವಕ್ಷ್ಯಮಾಣೈರುಕ್ತೈರನುಕ್ತೈಶ್ಚ ಗುಣೈಃ ಪುನಃ ಸ್ತೂಯತೇ ಬ್ರಹ್ಮಚರ್ಯಸಾಧನಸಂಬನ್ಧಾರ್ಥಮ್। ಯ ಏಷ ಯಥೋಕ್ತಲಕ್ಷಣ ಆತ್ಮಾ ಸ ಸೇತುರಿವ ಸೇತುಃ। ವಿಧೃತಿರ್ವಿಧರಣಃ। ಅನೇನ ಹಿ ಸರ್ವಂ ಜಗದ್ ವರ್ಣಾಶ್ರಮಾದಿ

ಕ್ರಿಯಾಕಾರಕಫಲಾದಿಭೇದನಿಯಮೈಃ ಕರ್ತುರನುರೂಪಂ ವಿದಧತಾ ವಿಧೃತಮ್। ಅಧ್ರಿಯಮಾಣಂ ಹೀಶ್ವರೇಣ ಇದಂ ವಿಶ್ವಂ ವಿನಶ್ಯೇದ್ಯತಃ, ತಸ್ಮಾತ್ ಸ ಸೇತು ರ್ವಿಧೃತಿಃ । ಕಿಮರ್ಥಂ ಸ ಸೇತುರಿತಿ ? ಆಹ । ಏಷಾಂ ಭೂರಾದೀನಾಂ ಲೋಕಾನಾಂ ಕರ್ತೃಕರ್ಮಫಲಾಶ್ರಯಾಣಾಮ್ ಅಸಂಭೇದಾಯ ಅವಿದಾರ ಣಾಯ । ಅವಿನಾಶಾಯೇತ್ಯೇತತ್ । ಕಿಂವಿಶಿಷ್ಟಶ್ಚಾಸೌ ಸೇತುರಿತಿ ? ಆಹ । ನೈತಂ ಸೇತುಮ್ ಆತ್ಮಾನಮ್ ಅಹೋರಾತ್ರೇ ಸರ್ವಸ್ಯ ಜನಿಮತಃ ಪರಿಚ್ಛೇದಕೇ ಸತೀ ನೈತಂ ತರತಃ। ಯಥಾ ಅನ್ಯೇ ಸಂಸಾರಿಣಃ ಕಾಲೇನ ಅಹೋರಾತ್ರಾದಿ ಲಕ್ಷಣೇನ ಪರಿಚ್ಛೇದ್ಯಾ ನ ತಥಾ ಅಯಂ ಕಾಲಪರಿಚ್ಛೇದ್ಯ ಇತ್ಯಭಿಪ್ರಾಯಃ। "ಯಸ್ಮಾದರ್ವಾಕ್ ಸಂವತ್ಸರೋಽಹೋಭಿಃ ಪರಿವರ್ತತೇ" (ಬೃ ೪-೪-೧೬) ಇತಿ ಶ್ರುತ್ಯಂತರಾತ್। ಅತ ಏವೈನಂ ನ ಜರಾ ತರತಿ ನ ಪ್ರಾಪ್ನೋತಿ। ತಥಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಮ್। ಸುಕೃತದುಷ್ಕೃತೇ ಧರ್ಮಾಧರ್ಮೌ । ಪ್ರಾಪ್ತಿರತ್ರ ತರಣಶಬ್ದೇನ ಅಭಿಪ್ರೇತಾ, ನಾತಿಕ್ರಮಣಮ್। ಕಾರಣಂ ಹ್ಯಾತ್ಮಾ। ನ ಶಕ್ಯಂ ಹಿ ಕಾರಣಾತಿಕ್ರಮಣಂ ಕರ್ತುಂ ಕಾರ್ಯೇಣ। ಅಹೋರಾತ್ರಾದಿ ಚ ಸರ್ವಂ ಸತಃ ಕಾರ್ಯಮ್। ಅನ್ಯೇನ ಹಿ ಅನ್ಯಸ್ಯ ಪ್ರಾಪ್ತಿ ರತಿಕ್ರಮಣಂ ವಾ ಕ್ರಿಯೇತ। ನ ತು ತೇನೈವ ತಸ್ಯ। ನ ಹಿ ಘಟೇನ ಮೃತ್ ಪ್ರಾಪ್ಯತೇ, ಅತಿಕ್ರಮ್ಯತೇ ವಾ । ಯದ್ಯಪಿ ಪೂರ್ವಂ "ಏಷ[1] ಆತ್ಮಾಽಪಹತ ಪಾಪ್ಮಾ" (೮-೧-೫) ಇತ್ಯಾದಿನಾ ಪಾಪ್ಮಾದಿಪ್ರತಿಷೇಧ ಉಕ್ತ ಏವ, ತಥಾಪೀ ಹಾಽಯಂ ವಿಶೇಷಃ, ನ ತರತೀತಿ ಪ್ರಾಪ್ತಿವಿಷಯತ್ವಂ ಪ್ರತಿಷಿಧ್ಯತೇ । ತತ್ರ ಅವಿಶೇಷೇಣ ಜರಾದ್ಯಭಾವಮಾತ್ರಮ್ ಉಕ್ತಮ್ । ಅಹೋರಾತ್ರಾದ್ಯಾ ಉಕ್ತಾ ಅನುಕ್ತಾಶ್ಚಾಽನ್ಯೇ ಸರ್ವೇ ಪಾಪ್ಮಾನ ಉಚ್ಯಂತೇ । ಅತೋಽಸ್ಮಾದಾತ್ಮನಃ ಸೇತೋರ್ನಿವರ್ತಂತೇಽಪ್ರಾಪ್ಯೈವ ಇತ್ಯರ್ಥಃ । ಅಪಹತಪಾಪ್ಮಾ ಹ್ಯೇಷ ಬ್ರಹ್ಮೈವ ಲೋಕೋ ಬ್ರಹ್ಮಲೋಕ ಉಕ್ತಃ ॥

(ಭಾಷ್ಯಾರ್ಥ)

'ಅಥ ಯ ಆತ್ಮಾ' ಎಂದು (ಮುಂತಾಗಿರುವ) ಗ್ರಂಥದಲ್ಲಿ ಹಿಂದೆ ಹೇಳಿರುವ ಸ್ವರೂಪದ ಸಂಪ್ರಸಾದನಿದಾನಲ್ಲ[2], ಅವನ ಸ್ವರೂಪವನ್ನು[3] ಮುಂದೆ ಹೇಳುವ- ಹಿಂದೆ ಹೇಳಿರುವ ಮತ್ತು ಹೇಳದೆ ಇರುವ- ಗುಣಗಳಿಂದ (ವರ್ಣಿಸಿ) ಬ್ರಹ್ಮಚರ್ಯವೆಂಬ ಸಾಧನದ ಸಂಬಂಧವನ್ನು (ಮಾಡಿಕೊಡು)ವದಕ್ಕಾಗಿ ಮತ್ತೂ ಹೊಗಳಲಾಗುತ್ತದೆ.

1. 'ಯ ಆತ್ಮಾ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.
2. ಉಪಾಸಕನಿರುವನಲ್ಲ, ಎಂದರ್ಥ.
3 ಮುಕ್ತಿಯಲ್ಲಿ ಅವನು ಪಡೆದುಕೊಳ್ಳಬೇಕಾಗಿರುವ ಸ್ವರೂಪವನ್ನು.

ಈ ಹಿಂದೆ ಹೇಳಿದ ಸ್ವರೂಪದ ಆತ್ಮನಿದಾನಲ್ಲ, ಅವನು ಸೇತುವು, ಸೇತು ವಿನಂತಿರುವವನು. ವಿಧೃತಿಯು, ವಿಧಾರಣಮಾಡಿರುವವನು. ಈ (ಸೇತು) ವಿನಿಂದಲೇ ಅಲ್ಲವೆ, ಸರ್ವಜಗತ್ತೂ ವರ್ಣಾಶ್ರಮಾದಿಗಳ ಕ್ರಿಯಾಕಾರಕಫಲವೇ ಮುಂತಾದ ಭೇದಗಳ ನಿಯಮಗಳಿಂದ ಕರ್ತೃವಿಗೆ ಅನುಗುಣವಾಗಿ ವಿಧಾನ ಮಾಡುತ್ತಿರುವದರಿಂದ ಹಿಡಿತದಲ್ಲಿಡಲ್ಪಟ್ಟಿದೆ ?[1] ಈಶ್ವರನು ಇದನ್ನು ಧಾರಣ ಮಾಡದೆ ಇದ್ದಿದ್ದರೆ ವಿಶ್ವವೂ ವಿನಾಶವಾದೀತಲ್ಲವೆ ? ಆದ್ದರಿಂದ ಆತ್ಮನು ವಿಧೃತಿ ಯಾದ ಸೇತು. ಯಾವ (ಫಲ)ಕ್ಕಾಗಿ ಅವನು ಸೇತು(ವಿನಂತಿದಾನೆ) ? ಎಂದರೆ (ಶ್ರುತಿ) ಹೇಳುತ್ತದೆ· ಕರ್ತೃಕರ್ಮಫಲಾಶ್ರಯಗಳಾದ ಈ ಭೂರಾದಿಲೋಕಗಳ ಅಸಂಭೇದಕ್ಕೆ, ಸೀಳಿಕೊಂಡುಹೋಗದಿರುವದಕ್ಕೆ, ವಿನಾಶವಾಗದಿರುವದಕ್ಕೆ ಎಂದು ತಾತ್ಪರ್ಯ.

ಇವನು ಎಂಥ ಸೇತು ? ಎಂದರೆ (ಶ್ರುತಿ) ಹೇಳುತ್ತಿದೆ. ಈ ಆತ್ಮನೆಂಬ ಸೇತುವನ್ನು ಅಹೋರಾತ್ರಗಳು, ಹುಟ್ಟುವದೆಲ್ಲಕ್ಕೂ ಪರಿಚ್ಛೇದಕಗಳಾಗಿರುವ ವಾದರೂ ಇದನ್ನು ತಾರಣಮಾಡುವದಿಲ್ಲ. ಹೇಗೆ ಮಿಕ್ಕ ಸಂಸಾರಿಗಳು ಅಹೋ ರಾತ್ರವೇ ಮುಂತಾದ[2] ಲಕ್ಷಣದ ಕಾಲದಿಂದ ಪರಿಚ್ಛಿನ್ನರಾಗಿರುವರೋ, ಹಾಗೆ ಇವನು ಕಾಲಪರಿಚ್ಛೇದ್ಯನಾಗಿರುವದಿಲ್ಲ ಎಂದು ಅಭಿಪ್ರಾಯ. "ಯಾವನಿಂದ ಈಚೆಗೆ ಸಂವತ್ಸರನು ದಿನಗಳಿಂದ ಸುತ್ತುತ್ತಿರುವನೋ ." (ಬೃ. ೪-೪-೧೬) ಎಂಬ ಬೇರೊಂದು ಶ್ರುತಿಯಿಂದ (ಹೀಗೆಂದು ಸಿದ್ಧವಾಗುತ್ತದೆ). ಆದ್ದರಿಂದಲೇ ಇವನನ್ನು ಮುಪ್ಪು (ನ ತರತಿ=ನ ಪ್ರಾಪ್ನೋತಿ) ಮುಟ್ಟುವದಿಲ್ಲ, ಮತ್ತು ಸಾವು (ಮುಟ್ಟು)ವದಿಲ್ಲ, ಶೋಕವು (ಮುಟ್ಟು)ವದಿಲ್ಲ, ಸುಕೃತವು (ಮುಟ್ಟು)ವದಿಲ್ಲ, ದುಷ್ಕೃತವು (ಮುಟ್ಟುವ)ದಿಲ್ಲ ಸುಕೃತದುಷ್ಕೃತಗಳೆಂದರೆ ಧರ್ಮಾಧರ್ಮಗಳು. ಇಲ್ಲಿ ತರಣವೆಂಬ ಶಬ್ದದಿಂದ (ಬಂದು) ಮುಟ್ಟುವದು ಎಂಬುದೇ ಅಭಿಪ್ರೇತವಾಗಿದೆ, ಮೀರುವದಲ್ಲ **ಆತ್ಮನು ಕಾರಣವಲ್ಲವೆ ? ಕಾರ್ಯವು ಕಾರಣವನ್ನು ಅತಿಕ್ರಮಿಸುವದು ಆಗಲಾರದಷ್ಟೆ ?** ಅಹೋರಾತ್ರವೇ ಮುಂತಾದದ್ದೆಲ್ಲವೂ ಸದ್ಬ್ರಹ್ಮದ ಕಾರ್ಯವು. ಒಂದು ಮತ್ತೊಂದನ್ನಲ್ಲವೆ, ಸೇರುವದು ಅಥವಾ ಅತಿಕ್ರಮಿಸುವದು –ಇವನ್ನು ಮಾಡೀತು ? ತಾನೇ ತನ್ನನ್ನು (ಸೇರಲಾರದು, ಅತಿಕ್ರಮಿಸಲೂ ಆರದು). ಗಡಿಗೆಯು ಮಣ್ಣನ್ನು ಸೇರುವದಾಗಲಿ, ಮೀರುವ ದಾಗಲಿ ಇಲ್ಲವಷ್ಟೆ ? ಹಿಂದೆ "ಏಷ ಆತ್ಮಾ ಅಪಹತಪಾಪ್ಮಾ" (೮-೧-೫) ಎಂದು

---

1. ಕರ್ಮಕ್ಕನುಗುಣವಾಗಿ ಈತನೇ ಫಲವನ್ನು ಕೊಡುತ್ತಾನೆ. ಸೂ.ಭಾ. ೩-೨-೩೮. ಇಲ್ಲಿ ಸೇತು ಎಂದಿರುವದರಿಂದ ಆತ್ಮನಿಗೆ ಪರಿಚ್ಛಿನ್ನತ್ವವೇನೂ ಪ್ರಾಪ್ತವಾಗುವದಿಲ್ಲವೆಂಬುದಕ್ಕೆ ಸೂ. ಭಾ. ೩-೨-೩೨ (ಭಾ. ಭಾ. ೩೦೮)ನ್ನು ನೋಡಿ

2. ಮುಂತಾದ ಎಂದರೆ ತಿಥ್ಯಾದಿಲಕ್ಷಣದ ಕಾಲವನ್ನು ಎಂದರ್ಥ.

ಮುಂತಾದ ಗ್ರಂಥದಿಂದ ಪಾಪ್ಮಾದಿಗಳಿಲ್ಲವೆಂದು ಹೇಳಿಯೇ ಇದೆ. ಆದರೂ ಇಲ್ಲಿ ಈ (ವಿಶೇಷವಿದೆ; ಏನೆಂದರೆ) ತರಣಮಾಡುವದಿಲ್ಲ ಎಂದು (ಅದಕ್ಕೆ) ಪ್ರಾಪ್ತಿ ವಿಷಯನಲ್ಲವೆಂದು ಹೇಳಿದೆ, ಅಲ್ಲಿಯೋ ಸಾಮಾನ್ಯವಾಗಿ ಮುಪ್ಪು ಮುಂತಾದವು ಇಲ್ಲ ಎಂದಿಷ್ಟೇ ಹೇಳಿತ್ತು. ಅಹೋರಾತ್ರವೇ ಮುಂತಾದ -ಹಿಂದೆ ಹೇಳಿರುವ ಮತ್ತು ಹೇಳದೆ ಇರುವ- ಮಿಕ್ಕ ಎಲ್ಲವನ್ನೂ ಪಾಪ್ಮಗಳು ಎಂದು ಕರೆದಿದೆ. ಇವನಿಂದ, ಈ ಆತ್ಮನೆಂಬ ಸೇತುವಿನಿಂದ ಸರ್ವಪಾಪಗಳೂ (ಅವನನ್ನು ಮುಟ್ಟದೆಯೇ) ಅತ್ತ ಸರಿಯುತ್ತವೆ ಎಂದರ್ಥ ಈ ಬ್ರಹ್ಮಲೋಕವು, ಬ್ರಹ್ಮವೆಂಬ ಲೋಕವು ಅಪಹತಪಾಪ್ಮವೆಂದಲ್ಲವೆ, ಹಿಂದೆ ಹೇಳಲಾಗಿದೆ?

## ಬ್ರಹ್ಮಪ್ರಾಪ್ತಿಯಿಂದಾಗುವ ಫಲ

(ಉಪನಿಷತ್ತು)

**ತಸ್ಮಾದ್ವಾ ಏತಗ್ᳬಂ ಸೇತುಂ ತೀರ್ತ್ವಾಽನ್ಧಃ ಸನ್ನನನ್ಧೋ ಭವತಿ ವಿದ್ಧಃ ಸನ್ನವಿದ್ಧೋ ಭವತ್ಯುಪತಾಪೀ ಸನ್ನನುಪತಾಪೀ ಭವತಿ ತಸ್ಮಾದ್ವಾ ಏತಗ್ᳬಂ ಸೇತುಂ ತೀರ್ತ್ವಾಽಪಿ ನಕ್ತಮಹರೇವಾಭಿನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ ॥ ೨ ॥**

೨. ಆದ್ದರಿಂದಲೇ ಈ ಸೇತುವನ್ನು ತರಣಮಾಡಿದರೆ ಕುರುಡನಾಗಿದ್ದವನು ಕುರುಡನಲ್ಲವಾಗುವನು, ಹೊಡೆಯಲ್ಪಟ್ಟವನು ಹೊಡೆಯಲ್ಪಡದವನಾಗುವನು, ಉಪತಾಪಿಯಾಗಿದ್ದವನು ಅನುಪತಾಪಿಯಾಗುವನು; ಆದ್ದರಿಂದಲೇ ಈ ಸೇತುವನ್ನು ತರಣಮಾಡಿದರ ರಾತ್ರಿಯೂ ಹಗಲೇ ಆಗಿಬಿಡುತ್ತದೆ. ಈ ಬ್ರಹ್ಮಲೋಕವು ಎಂದೆಂದಿಗೂ ಹೊಳೆಯುವದಲ್ಲವೆ?

## ಬ್ರಹ್ಮಪ್ರಾಪ್ತಿಯಾದರೆ ಸಕಲದೋಷಗಳೂ ತೊಲಗುವವು

(ಭಾಷ್ಯ)

೬೨೭. ಯಸ್ಮಾಚ್ಚ ಪಾಪ್ಮಕಾರ್ಯಮ್ ಆನ್ಧ್ಯಾದಿ ಶರೀರವತಃ ಸ್ಯಾತ್, ನ ತ್ವಶರೀರಸ್ಯ ತಸ್ಮಾದ್ ವಾ ಏತಮ್ ಆತ್ಮಾನಂ ಸೇತುಂ ತೀರ್ತ್ವಾ ಪ್ರಾಪ್ಯ ಅನನ್ಧೋ ಭವತಿ ದೇಹವತ್ತ್ವೇ ಪೂರ್ವಮ್ ಅನ್ಧೋಽಪಿ ಸನ್ । ತಥಾ ವಿದ್ಧಃ ಸನ್ ದೇಹವತ್ತ್ವೇ ಸ ದೇಹವಿಯೋಗೇ ಸೇತುಂ ಪ್ರಾಪ್ಯ ಅವಿದ್ಧೋ ಭವತಿ। ತಥಾ ಉಪತಾಪೀ ರೋಗಾದ್ಯುಪತಾಪವಾನ್ ಸನ್ ಅನುಪತಾಪೀ ಭವತಿ। ಕಿಂ ಚ ಯಸ್ಮಾತ್ ಅಹೋರಾತ್ರೇ ನ ಸ್ತಃ ಸೇತೌ ತಸ್ಮಾದ್ ವಾ ಏತಂ

ಸೇತುಂ ತೀರ್ತ್ವಾ ಪ್ರಾಪ್ಯ ನಕ್ತಮಪಿ ತಮೋರೂಪಂ ರಾತ್ರಿರಪಿ ಸರ್ವಮ್ ಅಹರೇವ ಅಭಿನಿಷ್ಪದ್ಯತೇ। ವಿಜ್ಞಪ್ತ್ಯಾತ್ಮಜ್ಯೋತಿಃಸ್ವರೂಪಮ್ ಅಹರಿವಾಹಃ ಸದೈಕರೂಪಂ ವಿದುಷಃ ಸಂಪದ್ಯತ ಇತ್ಯರ್ಥಃ। ಸಕೃದ್ವಿಭಾತಃ ಸದಾ ವಿಭಾತಃ ಸದಾ ಏಕರೂಪಃ ಹಿ[1] ಸ್ವೇನ ರೂಪೇಣ ಏಷ ಬ್ರಹ್ಮಲೋಕಃ ॥

(ಭಾಷ್ಯಾರ್ಥ)

ಪಾಪದ ಕಾರ್ಯವಾದ ಕುರುಡು ಮುಂತಾದವು ಶರೀರವಿದ್ದವನಿಗೆ ಆದೀತಲ್ಲದೆ ಅಶರೀರನಿಗೆ ಆಗಲಾರದಷ್ಟೆ? ಆದ್ದರಿಂದಲೇ ಈ ಆತ್ಮನೆಂಬ ಸೇತುವನ್ನು ತರಣಮಾಡಿದರೆ, ಸೇರಿದರೆ, ದೇಹವುಳ್ಳವನಾಗಿದ್ದಾಗ ಹಿಂದೆ ಕುರುಡನಾಗಿದ್ದರೂ, (ಈಗ) ಕುರುಡನಲ್ಲದೆ ಇರುತ್ತಾನೆ. ಮತ್ತು ದೇಹವಿದ್ದಾಗ ಹೊಡೆಯಲ್ಪಟ್ಟವನಾಗಿದ್ದರೂ ಅವನು ದೇಹವು ತೊಲಗಲು ಸೇತುವನ್ನು ಸೇರಿದರೆ ಹೊಡೆಯಲ್ಪಡದವನಾಗುವನು. ಮತ್ತು ಉಪತಾಪಿಯು ಎಂದರೆ ರೋಗವೇ ಮುಂತಾದ್ದರಿಂದ ನರಳುತ್ತಿರುವವನಾಗಿದ್ದರೂ (ಆಗ) ಅನುಪತಾಪಿಯಾಗುವನು. ಮತ್ತು (ಈ) ಸೇತುವಿನಲ್ಲಿ ಹಗಲುರಾತ್ರಿಗಳಿರುವದಿಲ್ಲವಲ್ಲ. ಆದ್ದರಿಂದಲೇ ಈ ಸೇತುವನ್ನು ತರಣಮಾಡಿದರೆ ಮುಟ್ಟಿದರೆ **ಕತ್ತಲೆಯ ರೂಪದ ರಾತ್ರಿಯು ಕೂಡ ಎಲ್ಲವೂ ಹಗಲೇ ಆಗಿಬಿಡುತ್ತದೆ; ಚೈತನ್ಯಾತ್ಮಜ್ಯೋತಿಃಸ್ವರೂಪವು ಹಗಲೇ ಎಂದರೆ ಹಗಲಿನಂತೆಯೇ ಯಾವಾಗಲೂ ಒಂದೇ ರೂಪದ್ದಾಗಿ (ಈ) ಉಪಾಸಕನಿಗೆ ಆಗಿಬಿಡುತ್ತದೆ- ಎಂದರ್ಥ.** ಎಂದೆಂದಿಗೂ ಹೊಳೆಯುವದು, ಯಾವಾಗಲೂ ತನ್ನ (ಚೈತನ್ಯ)ರೂಪದಿಂದ ಒಂದೇ ರೂಪವಾಗಿರುವದಲ್ಲವೆ, ಈ ಬ್ರಹ್ಮಲೋಕವು?

## ಬ್ರಹ್ಮಚಾರಿಗಳಿಗೇ ಈ ಫಲವು

(ಉಪನಿಷತ್ತು)

**ತದ್ಯ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿನ್ದನ್ತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಗ್ಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥ ೩ ॥**

೩. ಇಲ್ಲಿ ಯಾರು ಈ ಬ್ರಹ್ಮಲೋಕವನ್ನು ಬ್ರಹ್ಮಚರ್ಯದಿಂದ ಅರಿತುಕೊಳ್ಳುವರೋ ಅವರಿಗೇ ಈ ಬ್ರಹ್ಮಲೋಕವು. ಅವರಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುವದು.

---
1. ಈ ಮಾತು ಭಾಷ್ಯದಲ್ಲಿದ್ದು ಅಚ್ಚಿನ ಪುಸ್ತಕಗಳಲ್ಲಿ ಬಿಟ್ಟುಹೋಗಿದೆ.

## ಬ್ರಹ್ಮಚರ್ಯವು ಉಪಾಸಕರಿಗೆ ಬಹುಮುಖ್ಯ

(ಭಾಷ್ಯ)

೬೨೮. ತತ್ ತತ್ರ ಏವಂ ಸತಿ ಏತಂ ಯಥೋಕ್ತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣ ಸ್ತ್ರೀವಿಷಯತೃಷ್ಣಾತ್ಯಾಗೇನ ಶಾಸ್ತ್ರಾಚಾರ್ಯೋಪದೇಶಮನು ವಿನ್ದನ್ತಿ ಸ್ವಾತ್ಮಸಂವೇದ್ಯತಾಮ್ ಆಪಾದಯನ್ತಿ ಯೇ ತೇಷಾಮೇವ ಬ್ರಹ್ಮ ಚರ್ಯಸಾಧನವತಾಂ ಬ್ರಹ್ಮವಿದಾಮೇಷ ಬ್ರಹ್ಮಲೋಕಃ । ನಾನ್ಯೇಷಾಂ ಸ್ತ್ರೀ ವಿಷಯಸಂಪರ್ಕಜಾತತೃಷ್ಣಾನಾಂ ಬ್ರಹ್ಮವಿದಾಮಪಿ ಇತ್ಯರ್ಥಃ । ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ಇತ್ಯುಕ್ತಾರ್ಥಮ್ । ತಸ್ಮಾತ್ ಪರಮಮ್ ಏತತ್ ಸಾಧನಂ ಬ್ರಹ್ಮಚರ್ಯಂ ಬ್ರಹ್ಮವಿದಾಮ್ ಇತ್ಯಭಿಪ್ರಾಯಃ॥

(ಭಾಷ್ಯಾರ್ಥ)

(ತತ್ = ತತ್ರ) ಅಲ್ಲಿ, ಹೀಗಿರುವದರಿಂದ, ಈ ಹಿಂದೆ ಹೇಳಿರುವ ಬ್ರಹ್ಮ ಲೋಕವನ್ನು **ಬ್ರಹ್ಮಚರ್ಯ**ದಿಂದ ಸ್ತ್ರೀವಿಷಯದ ತೃಷ್ಣೆಯನ್ನು ಬಿಡುವದರಿಂದ ಶಾಸ್ತ್ರಾಚಾರ್ಯರ ಉಪದೇಶಕ್ಕೆ ಅನುಗುಣವಾಗಿ ಯಾರು ಅರಿತುಕೊಳ್ಳುವರೋ ತಮ್ಮ ಅನುಭವಕ್ಕೆ ವಿಷಯವಾಗಿ ಮಾಡಿಕೊಳ್ಳುವರೋ, **ಆ ಬ್ರಹ್ಮಚರ್ಯ ಸಾಧನವುಳ್ಳ ಬ್ರಹ್ಮೋಪಾಸಕರಿಗೇ ಈ ಬ್ರಹ್ಮಲೋಕವು ದೊರಕು ವದು**); **ಮಿಕ್ಕವರಿಗೆ ಸ್ತ್ರೀವಿಷಯಸಂಪರ್ಕದಲ್ಲಿ ತೃಷ್ಣೆಯುಂಟಾದ ಬ್ರಹ್ಮೋಪಾಸಕರಿಗೆಕೂಡ (ದೊರಕುವದಿಲ್ಲ) ಎಂದರ್ಥ.** 'ಅವರಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುವದು' ಎಂಬ ವಾಕ್ಯಕ್ಕೆ ಅರ್ಥವನ್ನು ಹೇಳಿದ್ದಾಗಿದೆ. ಆದ್ದರಿಂದ ಬ್ರಹ್ಮೋಪಾಸಕರಿಗೆ ಈ ಬ್ರಹ್ಮಚರ್ಯವು ಪರಮ ಸಾಧನವು ಎಂದು ಅಭಿಪ್ರಾಯ.

---

# ಎಂಟನೆಯ ಅಧ್ಯಾಯ—ಐದನೆಯ ಖಂಡ

( ದಹರವಿದ್ಯೆ )

## ಬ್ರಹ್ಮಚರ್ಯಸ್ತುತಿ

(ಉಪನಿಷತ್ತು)

**ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮ ಚರ್ಯೇಣ ಹ್ಯೇವ ಯೋ ಜ್ಞಾತಾ ತಂ ವಿನ್ದತೇಽಥ ಯದಿಷ್ಟ ಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾಽಽತ್ಮಾನಮನುವಿನ್ದತೇ ॥ ೧ ॥**

೧. ಇನ್ನು ಯಾವದನ್ನು ಯಜ್ಞವೆನ್ನುವರೋ ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಅಲ್ಲವೆ, ಯಾವನು ಜ್ಞಾತೃವೋ ಅವನು ಅದನ್ನು ಪಡೆದುಕೊಳ್ಳುತ್ತಾನೆ ? ಇನ್ನು ಯಾವದನ್ನು ಇಷ್ಟವೆನ್ನುವರೋ, ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಇಷ್ಟಿಯನ್ನು ಮಾಡಿಯಲ್ಲವೆ, ಆತ್ಮನನ್ನು ಪಡೆದುಕೊಳ್ಳುತ್ತಾನೆ ?

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೭೨೯ ಯ ಆತ್ಮಾ ಸೇತುತ್ವಾದಿಗುಣೈಃ ಸ್ತುತಸ್ತತ್ಪ್ರಾಪ್ತಯೇ ಜ್ಞಾನಸಹಕಾರಿಸಾಧನಾನ್ತರಂ ಬ್ರಹ್ಮಚರ್ಯಾಖ್ಯಂ ವಿಧಾತವ್ಯಮ್ ಇತ್ಯಾಹ। ಯಜ್ಞಾದಿಭಿಶ್ಚ ತತ್ ಸ್ತೌತಿ ಕರ್ತವ್ಯಾರ್ಥಮ್ ॥

(ಭಾಷ್ಯಾರ್ಥ)

ಯಾವ ಆತ್ಮನನ್ನು ಸೇತುತ್ವವೇ ಮುಂತಾದ ಗುಣಗಳಿಂದ ಹೊಗಳಲಾಯಿತೋ ಅವನನ್ನು ಪಡೆಯುವದಕ್ಕೆ ಜ್ಞಾನಕ್ಕೆ ಸಹಕಾರಿಯಾದ ಬ್ರಹ್ಮಚರ್ಯವೆಂಬ ಮತ್ತೊಂದು ಸಾಧನಾಂತರವನ್ನು ವಿಧಾನಮಾಡುವದಕ್ಕೆಂದು (ಶ್ರುತಿ) ಹೇಳುತ್ತಿದೆ. ಆ (ಬ್ರಹ್ಮಚರ್ಯ)ವನ್ನು (ಅವಶ್ಯವಾಗಿ) ಮಾಡತಕ್ಕದ್ದೆಂದು (ತಿಳಿಸು)ವದಕ್ಕಾಗಿ ಯಜ್ಞವೇ ಮುಂತಾದ (ರೂಪ)ಗಳಿಂದಲೂ ಹೊಗಳುತ್ತಿದೆ :

## ಬ್ರಹ್ಮಚರ್ಯವೇ ಯಜ್ಞ, ಇಷ್ಟ

(ಭಾಷ್ಯ)

೬೩೦. ಅಥ ಯದ್ ಯಜ್ಞ ಇತ್ಯಾಚಕ್ಷತೇ ಲೋಕೇ ಪರಮಪುರುಷಾರ್ಥಸಾಧನಂ ಕಥಯನ್ತಿ ಶಿಷ್ಟಾಃ, ತದ್ ಬ್ರಹ್ಮಚರ್ಯಮೇವ। ಯಜ್ಞಸ್ಯಾಪಿ ಯತ್ ಫಲಂ ತದ್ ಬ್ರಹ್ಮಚರ್ಯವಾನ್ ಲಭತೇ। ಅತೋ ಯಜ್ಞೋಽಪಿ ಬ್ರಹ್ಮಚರ್ಯಮೇವೇತಿ ಪ್ರತಿಪತ್ತವ್ಯಮ್। ಕಥಂ ಬ್ರಹ್ಮಚರ್ಯಂ ಯಜ್ಞ ಇತಿ ? ಆಹ। ಬ್ರಹ್ಮಚರ್ಯೇಣೈವ ಹಿ ಯಸ್ಮಾತ್ ಯೋ ಜ್ಞಾತಾ ಸ ತಂ ಬ್ರಹ್ಮಲೋಕಂ ಯಜ್ಞಸ್ಯಾಪಿ ಪಾರಂಪರ್ಯೇಣ ಫಲಭೂತಂ ವಿನ್ದತೇ ಲಭತೇ। ತತೋ ಯಜ್ಞೋಽಪಿ ಬ್ರಹ್ಮಚರ್ಯಮೇವೇತಿ। ಯೋ ಜ್ಞಾತಾ ಇತ್ಯಕ್ಷರಾನುವೃತ್ತೇಃ ಯಜ್ಞೋ ಬ್ರಹ್ಮಚರ್ಯಮೇವ। ಅಥ ಯದಿಷ್ಟಮಿತಿ ಆಚಕ್ಷತೇ ಬ್ರಹ್ಮಚರ್ಯಮೇವ ತತ್। ಕಥಮ್ ? ಬ್ರಹ್ಮಚರ್ಯೇಣೈವ ಸಾಧನೇನ ತಮ್ ಈಶ್ವರಮ್ ಇಷ್ಟ್ವಾ ಪೂಜಯಿತ್ವಾ ಅಥವಾ ಏಷಣಾಮಾತ್ಮವಿಷಯಾಂ ಕೃತ್ವಾ ತಮಾತ್ಮಾನಮ್ ಅನುವಿನ್ದತೇ। ಏಷಣಾದಿಷ್ಟಮಪಿ ಬ್ರಹ್ಮಚರ್ಯಮೇವ ॥

(ಭಾಷ್ಯಾರ್ಥ)

ಇನ್ನು ಯಾವದನ್ನು ಯಜ್ಞವೆಂದು ಲೋಕದಲ್ಲಿ ಕರೆಯುವರೋ ಪರಮ ಪುರುಷಾರ್ಥಕ್ಕೆ ಸಾಧನವೆಂದು[1] ಶಿಷ್ಟರು ಹೇಳುತ್ತಿರುವರೋ, ಅದು ಬ್ರಹ್ಮ ಚರ್ಯವೇ. ಯಜ್ಞದ ಫಲವು ಯಾವದೋ ಅದನ್ನು ಬ್ರಹ್ಮಚರ್ಯವುಳ್ಳವನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಯಜ್ಞವೂ ಬ್ರಹ್ಮಚರ್ಯವೇ ಎಂದು ತಿಳಿಯ ಬೇಕು. ಬ್ರಹ್ಮಚರ್ಯವು ಯಜ್ಞವೆಂಬುದು ಹೇಗೆ? -ಎಂದರೆ (ಶ್ರುತಿ) ಹೇಳು ತ್ತಿದೆ: ಬ್ರಹ್ಮಚರ್ಯದಿಂದಲೇ ಅಲ್ಲವೆ, ಯಾವನು ಜ್ಞಾತೃವಾಗಿರುವನೋ ಅವನು ಯಜ್ಞಕ್ಕೂ ಪರಂಪರೆಯಿಂದ ಫಲಭೂತವಾಗಿರುವ ಆ ಬ್ರಹ್ಮಲೋಕವನ್ನು (ವಿನ್ದತೇ=ಲಭತೇ) ಪಡೆದುಕೊಳ್ಳುತ್ತಾನೆ. ಆದ್ದರಿಂದ ಯಜ್ಞವೂ ಬ್ರಹ್ಮ ಚರ್ಯವೇ. (ಯೋ ಜ್ಞಾತಾ ಎಂಬಲ್ಲಿ) ಯಾವನು ಜ್ಞಾತೃವಾಗಿರುವನೋ ಎಂಬದರ ಅಕ್ಷರಗಳು ಅನುವರ್ತಿಸಿಕೊಂಡಿರುವದರಿಂದ ಯಜ್ಞವು ಬ್ರಹ್ಮಚರ್ಯವೇ[2].

ಇನ್ನು ಯಾವದನ್ನು ಇಷ್ಟವೆಂದು ಕರೆಯುತ್ತಾರೋ ಅದು ಬ್ರಹ್ಮಚರ್ಯವೇ, ಹೇಗೆ? ಎಂದರೆ, ಬ್ರಹ್ಮಚರ್ಯವೆಂಬ ಸಾಧನದಿಂದಲೇ (ಇಷ್ಟ್ವಾ=) ಪೂಜಿಸಿ ಅಥವಾ ಆತ್ಮವಿಷಯವಾದ ಏಷಣೆಯನ್ನು ಮಾಡಿ ಆ ಆತ್ಮನನ್ನು ಪಡೆದುಕೊಳ್ಳು ತ್ತಾನೆ. ಏಷಣೆಮಾಡುವದರಿಂದ ಇಷ್ಟವೂ ಬ್ರಹ್ಮಚರ್ಯವೇ[3].

(ಉಪನಿಷತ್ತು)

**ಅಥ ಯತ್ಸತ್ರಾಯಣಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮಚರ್ಯೇಣ ಹ್ಯೇವ ಸತ ಆತ್ಮನಸ್ತ್ರಾಣಂ ವಿನ್ದತೇಽಥ ಯನ್ಮೌನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ ಬ್ರಹ್ಮ ಚರ್ಯೇಣ ಹ್ಯೇವಾಽಽತ್ಮಾನಮನುವಿದ್ಯ ಮನುತೇ ॥ ೨ ॥**

೨. ಇನ್ನು ಸತ್ರಾಯಣವೆನ್ನುವರಲ್ಲ, ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಅಲ್ಲವೆ, ಸತ್ತಿನಿಂದ ತನ್ನ ತ್ರಾಣವನ್ನು ಪಡೆದುಕೊಳ್ಳುತ್ತಾನೆ? ಇನ್ನು ಮೌನವೆನ್ನುವರಲ್ಲ, ಅದು ಬ್ರಹ್ಮ ಚರ್ಯವೇ. ಬ್ರಹ್ಮಚರ್ಯದಿಂದಲೇ ಅಲ್ಲವೆ, ಆತ್ಮನನ್ನು ಅರಿತು ಕೊಂಡು ಮನನಮಾಡುತ್ತಾನೆ?

---

1. ಪರಂಪರೆಯಿಂದ ಮೋಕ್ಷಕ್ಕೂ ಯಜ್ಞವು ಸಾಧನ.

2. ಯಜ್ಞದ ಫಲವು ಬ್ರಹ್ಮಚರ್ಯದಿಂದ ಸಿಕ್ಕುವದೊಂದು, 'ಯೋ ಜ್ಞಾತಾ' ಎಂಬಲ್ಲಿ ರುವ ಯಕಾರಜ್ಞಕಾರಗಳು ಯಜ್ಞದಲ್ಲಿರುವದೊಂದು- ಈ ಕಾರಣದಿಂದ ಯಜ್ಞವೆಂದರೆ ಬ್ರಹ್ಮಚರ್ಯವೇ.

3. 'ಇಷ್ಟಿ'ಯಿಂದ ಪರಮಾತ್ಮನನ್ನು ಪಡೆಯುವಂತೆ ಬ್ರಹ್ಮಚರ್ಯದ 'ಇಷ್ಟಿ'ಯಿಂದ (ಪೂಜೆಯಿಂದ), ಅಥವಾ ಏಷಣೆಯಿಂದ (ಅಭಿಲಾಷೆಯಿಂದ)ಲೇ ಪಡೆಯುತ್ತಾರಾದ್ದರಿಂದ ಇಷ್ಟವೂ ಬ್ರಹ್ಮಚರ್ಯವೇ.

# ಬ್ರಹ್ಮಚರ್ಯವೇ ಸತ್ರಾಯಣಮೌನಗಳು

(ಭಾಷ್ಯ)

೬೩೧. ಅಥ ಯತ್ ಸತ್ರಾಯಣಮಿತಿ ಆಚಕ್ಷತೇ ಬ್ರಹ್ಮಚರ್ಯಮೇವ ತತ್ ತಥಾ। ಸತಃ ಪರಸ್ಮಾದಾತ್ಮನಃ, ಆತ್ಮನಸ್ತ್ರಾಣಂ ರಕ್ಷಣಂ ಬ್ರಹ್ಮಚರ್ಯ ಸಾಧನೇನ ವಿನ್ದತೇ। ಅತಃ ಸತ್ರಾಯಣಶಬ್ದಮಪಿ ಬ್ರಹ್ಮಚರ್ಯಮೇವ ತತ್। ಅಥ ಯನ್ಮೌನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್। ಬ್ರಹ್ಮಚರ್ಯೇಣೈವ ಸಾಧನೇನ ಯುಕ್ತಃ ಸನ್ ಆತ್ಮಾನಂ ಶಾಸ್ತ್ರಾಚಾರ್ಯಾಭ್ಯಾಮ್ ಅನುವಿದ್ಯ ಪಶ್ಚಾನ್ಮನುತೇ ಧ್ಯಾಯತಿ। ಅತೋ ಮೌನಶಬ್ದಮಪಿ ಬ್ರಹ್ಮಚರ್ಯಮೇವ ॥

(ಭಾಷ್ಯಾರ್ಥ)

ಇನ್ನು ಯಾವದನ್ನು ಸತ್ರಾಯಣವೆಂದು[1] ಕರೆಯುವರೋ ಅದು ಹಾಗೆ[2] ಬ್ರಹ್ಮಚರ್ಯವೇ ಸತ್ತಿನಿಂದ ಎಂದರೆ ಪರಮಾತ್ಮನಿಂದ, ತನ್ನ ತ್ರಾಣವನ್ನು ರಕ್ಷಣವನ್ನು ಬ್ರಹ್ಮಚರ್ಯಸಾಧನದಿಂದ ಪಡೆದುಕೊಳ್ಳುತ್ತಾನೆ.[3] ಆದ್ದರಿಂದ ಸತ್ರಾಯಣಶಬ್ದವಾಚ್ಯವಾದದ್ದು ಬ್ರಹ್ಮಚರ್ಯವೇ. ಇನ್ನು ಯಾವದನ್ನು ಮೌನ ವೆನ್ನುವರೋ ಅದು ಬ್ರಹ್ಮಚರ್ಯವೇ. ಬ್ರಹ್ಮಚರ್ಯವೆಂಬ ಸಾಧನದಿಂದ ಯುಕ್ತನಾಗಿಯೇ ಆತ್ಮನನ್ನು ಶಾಸ್ತ್ರಾಚಾರ್ಯರುಗಳಿಂದ ಅರಿತುಕೊಂಡು ಆ ಬಳಿಕ ಮನನಮಾಡುತ್ತಾನೆ, ಎಂದರೆ ಧ್ಯಾನಮಾಡುತ್ತಾನೆ. ಆದ್ದರಿಂದ ಮೌನ ಶಬ್ದದಿಂದ ಹೇಳಿರುವದೂ ಬ್ರಹ್ಮಚರ್ಯವೇ.

(ಉಪನಿಷತ್ತು)

**ಅಥ ಯದನಾಶಕಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದೇಷ ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿನ್ದ ತೇಽಥ ಯದರಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ತದರಶ್ಚ[4] ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯ**

1. 'ಬಹುಯಜಮಾನರುಗಳು ಮಾಡುವ ವೈದಿಕಕರ್ಮಕ್ಕೆ ಸತ್ರಾಯಣವೆಂಬ ಹೆಸರು'_ ಎಂದು ಟೀಕೆ.

2. 'ಯಜ್ಞ, ಇಷ್ಟಗಳು ಹೇಗೋ ಹಾಗೆ' ಎಂದು ಟೀಕೆ. ಸತ್ರಾಯಣವೆಂದು ಪರಂಪರಾಸಾಧನದಿಂದ ಪರಮಾತ್ಮನನ್ನು ಪಡೆಯುವೆದರ ಮೂಲಕ ತನ್ನನ್ನು ತಾನು ರಕ್ಷಿಸಿ ಕೊಳ್ಳುವಂತೆ ಎಂದೂ ಅರ್ಥಮಾಡಬಹುದು, ಆಗ ವಾ॥ ಪಾಠದಂತೆ 'ತಥಾ' ಎಂಬುದು ಉತ್ತರವಾಕ್ಯಕ್ಕೆ ಸೇರಿರುತ್ತದೆ.

3. 'ಸತ್ ತ್ರ' ಎಂದು ಸತ್ರಶಬ್ದವನ್ನು ಬಿಡಿಸಿಕೊಂಡು ಸತ್ರಾಯಣ ಎಂಬುದನ್ನು ಸತ್ (ಪರಮಾತ್ಮನಿಂದ) ತ್ರಾಣ (ಕಾಪಾಡಿಕೊಳ್ಳುವದು) ಎಂಬರ್ಥವನ್ನು ತೆಗೆದಿದೆ. ಇದೂ ಬ್ರಹ್ಮ ಚರ್ಯವನ್ನು ಹೊಗಳುವದಕ್ಕೇ.

4. 'ತದರಶ್ಚ' ಎಂಬ ಪಾಠಕ್ಕಿಂತ ಇದೇ ಭಾಷ್ಯಾನುಗುಣವೆಂದು ತೋರುತ್ತದೆ.

**ಸ್ಯಾಮಿತೋ ದಿವಿ ತದೈರಂಮದೀಯಗ್ಂ ಸರಸ್ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಗ್ಂ ಹಿರಣ್ಮಯಮ್ ॥ ೩ ॥**

೩. ಇನ್ನು ಯಾವದನ್ನು ಅನಾಶಕಾಯನವೆನ್ನುವರೋ ಅದು ಬ್ರಹ್ಮಚರ್ಯವೇ. ಯಾವನನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುತ್ತಾನೋ (ಆ) ಈ ಆತ್ಮನು ನಾಶವಾಗುವದಿಲ್ಲವಷ್ಟೆ? ಇನ್ನು ಯಾವದನ್ನು ಅರಣ್ಯಾಯನವೆನ್ನುವರೋ ಅದು ಬ್ರಹ್ಮಚರ್ಯವೇ. ಅಲ್ಲಿ ಅರವೂ ಣ್ಯವೂ ಎಂಬ ಅರ್ಣವಗಳು. ಅಲ್ಲಿ ಬ್ರಹ್ಮಲೋಕದಲ್ಲಿ, ಇಲ್ಲಿಂದ ಮೂರನೆಯದಾದ ದ್ಯುಲೋಕದಲ್ಲಿ, ಐರಂಮದೀಯ ಸರಸ್ಸು. ಅಲ್ಲಿ ಸೋಮಸವನ ಅಶ್ವತ್ಥವು. ಅಪರಾಜಿತವಾದ ಬ್ರಹ್ಮನ ಪುರವು, ಪ್ರಭುವಿಮಿತವಾದ ಹಿರಣ್ಮಯವಾದ (ಮಂಟಪವು)

## ಅನಾಶಕಾಯನ, ಅರಣ್ಯಾಯನ– ಇವೂ ಬ್ರಹ್ಮಚರ್ಯವೇ

(ಭಾಷ್ಯ)

೬೩೨. ಅಥ ಯದನಾಶಕಾಯನಮ್ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಯಮ್ ಆತ್ಮಾನಂ ಬ್ರಹ್ಮಚರ್ಯೇಣಾನುವಿನ್ದತೇ । ಸ ಏಷ ಹಿ ಆತ್ಮಾ ಬ್ರಹ್ಮಚರ್ಯಸಾಧನವತೋ ನ ನಶ್ಯತಿ । ತಸ್ಮಾತ್ ಅನಾಶಕಾಯನಮಪಿ ಬ್ರಹ್ಮಚರ್ಯಮೇವ । ಅಥ ಯದರಣ್ಯಾಯನಮ್ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್ । ಅರಣ್ಯಶಬ್ದಯೋರರ್ಣವಯೋರ್ಬ್ರಹ್ಮಚರ್ಯವತೋಽಯನಾದರಣ್ಯಾಯನಂ ಬ್ರಹ್ಮಚರ್ಯಮ್। ಯೋ ಜ್ಞಾನಾದ್ ಯಜ್ಞಃ, ಏಷಣಾದಿಷ್ಟಮ್, ಸತಸ್ತ್ರಾಣಾತ್ ಸತ್ರಾಯಣಮ್, ಮನನಾನ್ಮೌನಮ್, ಅನಶನಾದನಾಶಕಾಯನಮ್, ಅರಣ್ಯಯೋರ್ಗಮನಾದರಣ್ಯಾಯನಮ್– ಇತ್ಯಾದಿಭಿರ್ಮಹದ್ಭಿಃ ಪುರುಷಾರ್ಥಸಾಧನೈಃ ಸ್ತುತತ್ವಾತ್ ಬ್ರಹ್ಮಚರ್ಯಂ ಪರಮಂ ಜ್ಞಾನಸ್ಯ ಸಹಕಾರಿಕಾರಣಂ ಸಾಧನಮ್ ಇತ್ಯತೋ ಬ್ರಹ್ಮವಿದಾ ಯತ್ನತೋ ರಕ್ಷಣೀಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಇನ್ನು ಯಾವದನ್ನು ಅನಾಶಕಾಯನವೆನ್ನುವರೋ[1] ಅದು ಬ್ರಹ್ಮಚರ್ಯವೇ. ಯಾವ ಆತ್ಮನನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುವನೋ ಆ ಈ ಆತ್ಮನು ಬ್ರಹ್ಮಚರ್ಯವೆಂಬ ಸಾಧನವುಳ್ಳವನಿಗೆ ನಾಶವಾಗುವದಿಲ್ಲ, ಆದ್ದರಿಂದ

1. ಉಪವಾಸತತ್ಪರನಾಗಿರುವದು.

ಅನಾಶಕಾಯನವೂ ಬ್ರಹ್ಮಚರ್ಯವೇ. ಇನ್ನು ಯಾವದನ್ನು ಅರಣ್ಯಾಯನ[1]ವೆನ್ನುವರೋ, ಅದು ಬ್ರಹ್ಮಚರ್ಯವೇ. ಅರ, ಣ್ಯ-ಎಂಬ ಶಬ್ದ(ವಾಚ್ಯ)ಗಳಾದ ಅರ್ಣವಗಳನ್ನು ಬ್ರಹ್ಮಚರ್ಯವುಳ್ಳವನು ಪಡೆದುಕೊಳ್ಳುವನಾದ್ದರಿಂದ ಬ್ರಹ್ಮಚರ್ಯವು ಅರಣ್ಯಾಯನವು.

ಯಾವನು ಜ್ಞಾನದಿಂದ ಯಜ್ಞವು[2], ಏಷಣೆಮಾಡುವದರಿಂದ ಇಷ್ಟವು, ಸತ್ತಿನಿಂದ ರಕ್ಷಣೆಮಾಡಿಕೊಳ್ಳುವದರಿಂದ ಸತ್ರಾಯಣವು, ಮನನಮಾಡುವದರಿಂದ ಮೌನವು, ನಾಶವಾಗದಿರುವದರಿಂದ ಅನಾಶಕಾಯನವು, ಅರ ಮತ್ತು ಣ್ಯ-ಇವುಗಳನ್ನು ಪಡೆಯಿಸುವದರಿಂದ ಅರಣ್ಯಾಯನವು- ಎಂದು ಮುಂತಾಗಿ **ಮಹಾಮಹಾಪುರುಷಾರ್ಥಸಾಧನಗಳಿಂದ (ಇದನ್ನು) ಸ್ತೋತ್ರಮಾಡಿರುವದರಿಂದ ಬ್ರಹ್ಮಚರ್ಯವು ಜ್ಞಾನಕ್ಕೆ ಹೆಚ್ಚಿನ ಸಹಕಾರಿಕಾರಣವಾದ ಸಾಧನವು ; ಆದ್ದರಿಂದ ಬ್ರಹ್ಮಜ್ಞಾನಿಯು ಇದನ್ನು ಯತ್ನಪೂರ್ವಕವಾಗಿ ಕಾಪಾಡಿಕೊಳ್ಳಬೇಕು** ಎಂದರ್ಥ.

## ಬ್ರಹ್ಮಲೋಕದ ವೈಭವ

(ಭಾಷ್ಯ)

೬೩೩. ತತ್ ತತ್ರ ಹಿ ಬ್ರಹ್ಮಲೋಕೇ ಅರಶ್ಚ ಹ ವೈ ಪ್ರಸಿದ್ಧೋ ಣ್ಯಶ್ಚ ಅರ್ಣವೌ ಸಮುದ್ರೌ । ಸಮುದ್ರೋಪಮೇ ವಾ ಸರಸೀ। ತೃತೀಯಸ್ಯಾಂ ಭುವಮ್ ಅನ್ತರಿಕ್ಷಂ ಚಾಪೇಕ್ಷ್ಯ ತೃತೀಯಾ ದ್ಯೌಃ । ತಸ್ಯಾಂ ತೃತೀಯಸ್ಯಾಮ್ ಇತಃ ಅಸ್ಮಾಲ್ಲೋಕಾದಾರಭ್ಯ ಗಣ್ಯಮಾನಾಯಾಂ ದಿವಿ। ತತ್ ತತ್ರೈವ ಚ ಐರಮ್ ಇರಾ ಅನ್ನಮ್, ತನ್ಮಯ ಐರೋ ಮಣ್ಡಃ.। ತೇನ ಪೂರ್ಣಮ್ ಐರಂ ಮದೀಯಮ್ । ತದುಪಯೋಗಿನಾಂ ಮದಕರಂ ಹರ್ಷೋತ್ಪಾದಕಂ ಸರಃ । ತತ್ರೈವ ಚ ಅಶ್ವತ್ಥೋ ವೃಕ್ಷಃ ಸೋಮಸವನೋ ನಾಮತಃ। ಸೋಮೋಽಮೃತಂ ತನ್ನಿಃಸ್ರವೋಽಮೃತಸ್ರವಃ ಇತಿ ವಾ। ತತ್ರೈವ ಚ ಬ್ರಹ್ಮಲೋಕೇ (ಪರ್ಯೈಃ) ಬ್ರಹ್ಮಚರ್ಯಸಾಧನರಹಿತೈರ್ಬ್ರಹ್ಮಚರ್ಯಸಾಧನವದ್ಭ್ಯೋಽನ್ಯೈಃ ನ ಜೀಯತ ಇತಿ ಅಪರಾಜಿತಾ ನಾಮ ಪೂಃ ಪುರೀ ಬ್ರಹ್ಮಣೋ ಹಿರಣ್ಯಗರ್ಭಸ್ಯ। ಬ್ರಹ್ಮಣಾ ಚ ಪ್ರಭುಣಾ ವಿಶೇಷೇಣ ಮಿತಂ ನಿರ್ಮಿತಂ, ತಚ್ಚ ಹಿರಣ್ಮಯಂ ಸೌವರ್ಣಂ ಪ್ರಭುವಿಮಿತಂ 'ಮಣ್ಡಪಮ್' ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

(**ತತ್= ತತ್ರ**) ಆ ಬ್ರಹ್ಮಲೋಕದಲ್ಲಿಯೇ ಅರವೆಂದು (ವೈ =) ಪ್ರಸಿದ್ಧವಾದ, ಮತ್ತು ಣ್ಯ(ವೆಂದು ಪ್ರಸಿದ್ಧವಾದ) ಅರ್ಣವಗಳು, ಸಮುದ್ರಗಳು, ಅಥವಾ

1. ಅರಣ್ಯವಾಸತತ್ಪರನಾಗಿರುವದು.
2. ಭಾ. ಭಾ. ೬೩೦ನ್ನು ನೋಡಿ.

ಸಮುದ್ರದಂತಿರುವ ಸರೋವರಗಳು ; ಮೂರನೆಯದಾದ- ಭೂಮಿಯನ್ನೂ ಅಂತ ರಿಕ್ಷವನ್ನೂ ಹೋಲಿಸಿದರೆ ಮೂರನೆಯ ದ್ಯುಲೋಕವಿದೆಯಲ್ಲ, ಆ ಇಲ್ಲಿಂದ ಈ ಲೋಕದಿಂದ ಗಣಿಸಿದರೆ ಮೂರನೆಯದಾದ ದ್ಯುಲೋಕದಲ್ಲಿ (ಅರ್ಣವಗಳಿವೆ). ಮತ್ತು ಅಲ್ಲಿಯೇ ಐರವು-ಇರಾ ಎಂದರೆ ಅನ್ನವು, ತನ್ಮಯವಾದ ಐರವು ಎಂದರೆ (ಅದರ ಸಾರವು)- ಅದರಿಂದ ತುಂಬಿರುವ ಐರಂಮದೀಯವಾದ ಎಂದರೆ ಅದನ್ನುಪ ಯೋಗಿಸಿದವರಿಗೆ ಮದವನ್ನುಂಟುಮಾಡುವ ಹರ್ಷವನ್ನುಂಟುಮಾಡುವ ಸರೋ ವರವು (ಇದೆ). ಅಲ್ಲಿಯೇ ಸೋಮಸವನವೆಂಬ ಹೆಸರಿನ ಅಶ್ವತ್ಥವೃಕ್ಷವು ; ಅಥವಾ ಸೋಮವೆಂದರೆ ಅಮೃತವು, ಅದನ್ನು ಸುರಿಸುತ್ತಿರುವ ಅಮೃತಸ್ರಾವಿಯಾದ (ವೃಕ್ಷವು) ಎಂದಾದರೂ (ವ್ಯಾಖ್ಯಾನಮಾಡಿಕೊಳ್ಳಬಹುದು). ಮತ್ತು ಅದೇ ಬ್ರಹ್ಮಲೋಕದಲ್ಲಿ ಪರರಿಂದ ಎಂದರೆ ಬ್ರಹ್ಮಚರ್ಯಸಾಧನಗಳಲ್ಲಿರುವದಾದ ಬ್ರಹ್ಮಚರ್ಯಸಾಧನವುಳ್ಳವರಿಗಿಂತ ಬೇರೆಯವರಿಂದ ಗೆದ್ದುಕೊಳ್ಳಲಾಗದ್ದರಿಂದ ಅಪರಾಜಿತಾ ಎಂಬ (ಪೂಃ=ಪುರೀ) ಹಿರಣ್ಯಗರ್ಭಬ್ರಹ್ಮನ ಪುರಿ(ಯಿದೆ). ಮತ್ತು ಪ್ರಭುವಾದ ಬ್ರಹ್ಮನಿಂದ ವಿಶೇಷವಾಗಿ ಮಿತವಾದ, ನಿರ್ಮಿತವಾದ, ಮತ್ತು ಹಿರಣ್ಮಯವಾದ ಸುವರ್ಣಮಯವಾದ ಪ್ರಭುವಿಮಿತವಾದ 'ಮಂಟಪವು' (ಇದೆ) ಎಂದು ವಾಕ್ಯಶೇಷವು.

(ಉಪನಿಷತ್ತು)

**ತದ್ಯ ಏವೈತಾವರಂ ಚ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮಚರ್ಯೇಣಾನುವಿನ್ದನ್ತಿ ತೇಷಾಮೇವೈಷ ಬ್ರಹ್ಮಲೋಕ ಸ್ತೇಷಾಗ್ಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥**

೪. ಆ ಬ್ರಹ್ಮಲೋಕದಲ್ಲಿರುವ ಅರ, ಮತ್ತು ಣ್ಯ- ಎಂಬ ಅರ್ಣವಗಳನ್ನು ಯಾರು ಬ್ರಹ್ಮಚರ್ಯೆಯಿಂದ ಪಡೆದುಕೊಳ್ಳುವರೋ ಅವರಿಗೇ ಈ ಬ್ರಹ್ಮಲೋಕವು. ಅವರಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುವದು.

## ಬ್ರಹ್ಮಚರ್ಯೆಯ ಫಲ

(ಭಾಷ್ಯ)

೬೩೪. ತತ್ ತತ್ರ ಬ್ರಹ್ಮಲೋಕೇ ಏತೌ ಅರ್ಣವೌ ಯೌ ಅರಣ್ಯಾಖ್ಯೌ ಉಕ್ತೌ, ಬ್ರಹ್ಮಚರ್ಯೇಣ ಸಾಧನೇನ ಅನುವಿನ್ದನ್ತಿ ಯೇ ತೇಷಾಮೇವ ಏಷ ಯೋ ವ್ಯಾಖ್ಯಾತೋ ಬ್ರಹ್ಮಲೋಕಃ । ತೇಷಾಂ ಚ ಬ್ರಹ್ಮಚರ್ಯಸಾಧನವತಾಂ ಬ್ರಹ್ಮವಿದಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ। ನಾನ್ಯೇಷಾಮ್ ಅಬ್ರಹ್ಮಚರ್ಯಪರಾಣಾಂ ಬಾಹ್ಯವಿಷಯಾಸಕ್ತಬುದ್ಧೀನಾಂ ಕದಾಚಿದಪೀ ತ್ಯರ್ಥಃ ॥

(ಭಾಷ್ಯಾರ್ಥ)

(ತತ್=ತತ್ರ) ಆ ಬ್ರಹ್ಮಲೋಕದಲ್ಲಿ ಅರ, ಣ್ಯ- ಎಂದು ಹೇಳಿತಲ್ಲ, (ಆ) ಈ ಅರ್ಣವಗಳನ್ನು ಯಾರು ಬ್ರಹ್ಮಚರ್ಯಸಾಧನದಿಂದ ಪಡೆದುಕೊಳ್ಳುವರೋ ಅವರಿಗೇ, (ಹಿಂದೆ) ವಿವರಿಸಿತಲ್ಲ, (ಆ) ಈ ಬ್ರಹ್ಮಲೋಕವು (ದೊರಕುವದು). ಮತ್ತು ಬ್ರಹ್ಮಚರ್ಯವೆಂಬ ಸಾಧನವುಳ್ಳ ಆ ಬ್ರಹ್ಮಜ್ಞಾನಿಗಳಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವುಂಟಾಗುವದು. ಬ್ರಹ್ಮಚರ್ಯಪರರಲ್ಲದ, ಬಾಹ್ಯ ವಿಷಯಗಳಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳ ಮಿಕ್ಕವರಿಗೆ ಎಂದಿಗೂ (ದೊರಕದು) ಎಂದರ್ಥ.[1]

## ಚರ್ಚೆ: ಇಲ್ಲಿ ಬ್ರಹ್ಮಚರ್ಯವನ್ನೇ ಮುಖ್ಯವಾಗಿ ಹೊಗಳಿದೆಯೆ ?

(ಭಾಷ್ಯ)

೬೩೫ ನನ್ವತ್ರ ತ್ವಮಿನ್ದ್ರಃ, ತ್ವಂ ಯಮಃ, ತ್ವಂ ವರುಣಃ ಇತ್ಯಾದಿಭಿರ್ಯಥಾ ಕಶ್ಚಿತ್, ಸ್ತೂಯತೇ ಮಹಾರ್ಹಃ, ಏವಮ್ ಇಷ್ಟಾದಿಭಿಃ ಶಬ್ದೈರ್ನ ಸ್ತ್ರ್ಯಾದಿವಿಷಯತೃಷ್ಣಾನಿವೃತ್ತಿಮಾತ್ರಂ ಸ್ತುತ್ಯರ್ಹಮ್ । ಕಿಂ ತರ್ಹಿ ಜ್ಞಾನಸ್ಯ ಮೋಕ್ಷಸಾಧನತ್ವಾತ್ ತದೇವ ಇಷ್ಟಾದಿಭಿಃ ಸ್ತೂಯತ ಇತಿ ಕೇಚಿತ್ । ನ। ಸ್ತ್ರ್ಯಾದಿಬಾಹ್ಯವಿಷಯತೃಷ್ಣಾಪಹೃತಚಿತ್ತಾನಾಂ ಪ್ರತ್ಯಗಾತ್ಮವಿವೇಕವಿಜ್ಞಾನಾನುಪಪತ್ತೇಃ । "ಪರಾಞ್ಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ ಪಶ್ಯತಿ ನಾನ್ತರಾತ್ಮನ್" (ಕಾ. ೨-೧-೧) ಇತ್ಯಾದಿಶ್ರುತಿಸ್ಮೃತಿಶತೇಭ್ಯಃ । ಜ್ಞಾನಸಹಕಾರಿಕಾರಣಂ ಸ್ತ್ರ್ಯಾದಿವಿಷಯತೃಷ್ಣಾನಿವೃತ್ತಿಸಾಧನಂ ವಿಧಾತವ್ಯಮೇವೇತಿ ಯುಕ್ತೈವ ತತ್ಸ್ತುತಿಃ । ನನು ಚ ಯಜ್ಞಾದಿಭಿಃ ಸ್ತುತಂ ಬ್ರಹ್ಮಚರ್ಯಮಿತಿ ಯಜ್ಞಾದೀನಾಂ ಪುರುಷಾರ್ಥಸಾಧನತ್ವಂ ಗಮ್ಯತೇ । ಸತ್ಯಂ ಗಮ್ಯತೇ, ನ ತ್ವಿಹ ಬ್ರಹ್ಮಲೋಕಂ ಪ್ರತಿ ಯಜ್ಞಾದೀನಾಂ ಸಾಧನತ್ವಮಭಿಪ್ರೇತ್ಯ ಯಜ್ಞಾದಿಭಿರ್ಬ್ರಹ್ಮಚರ್ಯಂ ಸ್ತೂಯತೇ, ಕಿಂ ತರ್ಹಿ ತೇಷಾಂ ಪ್ರಸಿದ್ಧಂ ಪುರುಷಾರ್ಥಸಾಧನತ್ವಮಪೇಕ್ಷ್ಯ । ಯಥಾ ಇನ್ದ್ರಾದಿಭಿಃ ರಾಜಾ। ನ ತು ಯತ್ರೇನ್ದ್ರಾದೀನಾಂ ವ್ಯಾಪಾರಸ್ತತ್ರೈವ ರಾಜ್ಞ ಇತಿ, ತದ್ವತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷ) :— ಇಲ್ಲಿ 'ನೀನು ಇಂದ್ರನು', 'ನೀನು ಯಮನು', 'ನೀನು ವರುಣನು'- ಎಂದು ಮಹಾರ್ಹನಾದವನೊಬ್ಬನನ್ನು ಹೇಗೆ ಹೊಗಳುತ್ತಾರೋ

---

1. ಬ್ರಹ್ಮಚರ್ಯಸಹಿತವಾದ ಉಪಾಸನೆಯೇ ವೀರ್ಯವಂತವಾಗಿ ಬ್ರಹ್ಮಲೋಕ ಪರ್ಯಂತವಾದ ಪೂರ್ಣಫಲವನ್ನೂ ಅಲ್ಲಿ ಸಂಕಲ್ಪಮಾತ್ರಜನ್ಯವಾದ ಸರ್ವಭೋಗಗಳನ್ನೂ ಕೊಡುವದು- ಎಂದು ಅಭಿಪ್ರಾಯ.

ಹಾಗೆಯೇ ಇಷ್ಟವೇ ಮುಂತಾದ ಶಬ್ದಗಳಿಂದ ಒರಿಯ ಸ್ತ್ರೀಯರೇ ಮುಂತಾದ ವಿಷಯಗಳ ತೃಷ್ಣೆಯ ನಿವೃತ್ತಿಯನ್ನೇ ಹೊಗಳಿದೆ ಎಂಬುದು ಸರಿಯಲ್ಲ, ಮತ್ತೇನೆಂದರೆ ಜ್ಞಾನವು ಮೋಕ್ಷಕ್ಕೆ ಕಾರಣವಾಗಿರುವದರಿಂದ ಅದನ್ನೇ (ಇಲ್ಲಿ) ಇಷ್ಟಾದಿಗಳಿಂದ ಹೊಗಳಿದೆ ಎಂದು **ಕೆಲವರು** (ಹೇಳುತ್ತಿದಾರಲ್ಲ) !

(ಪರಿಹಾರ) :— ಹಾಗಲ್ಲ. **ಸ್ತ್ರ್ಯಾದಿಯಾದ ಹೊರಗಿನ ವಿಷಯಗಳ ತೃಷ್ಣೆಯಃ ಅಪಹರಿಸಿದ ಚಿತ್ತವುಳ್ಳವರಿಗೆ ಪ್ರತ್ಯಗಾತ್ಮನ ವಿವೇಕ ವಿಜ್ಞಾನವು ಉಂಟಾಗಲಾರದು.** "ಸ್ವಯಂಭುವು ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುತ್ತಾನೆ, ಆದ್ದರಿಂದ ಹೊರಕ್ಕೇ ನೋಡುತ್ತಾನೆಯೇ ಹೊರತು ಒಳಗಿನ ಆತ್ಮನನ್ನು ನೋಡುತ್ತಿಲ್ಲ" (ಕಾ. ೨-೧-೧) ಎಂದು ಮುಂತಾಗಿರುವ ನೂರಾರು ಶ್ರುತಿಸ್ಮೃತಿಗಳು[1] (ಇದಕ್ಕೆ ಪ್ರಮಾಣವು), ಜ್ಞಾನಕ್ಕೆ ಸಹಕಾರಿ ಕಾರಣವಾದ ಸ್ತ್ರ್ಯಾದಿವಿಷಯದ ತೃಷ್ಣೆಯನ್ನು ನೀಗಿಕೊಳ್ಳತಕ್ಕದ್ದೆಂಬ ಸಾಧನವನ್ನು ವಿಧಿಸಬೇಕಾಗಿರುವದರಿಂದ ಅವನ್ನು (ಇಲ್ಲಿ) ಹೊಗಳಿರುವದು ಯುಕ್ತವೇ (ಆಗಿರುತ್ತದೆ).

(ಶಂಕೆ) :— ಬ್ರಹ್ಮಚರ್ಯವನ್ನು ಯಜ್ಞಾದಿಗಳೆಂದು ಹೊಗಳಿರುವದರಿಂದ ಯಜ್ಞಾದಿಗಳೂ ಪುರುಷಾರ್ಥಸಾಧನವೆಂದಾಗುವದಲ್ಲವೆ ?

(ಪರಿಹಾರ) :— ನಿಜ, ಆಗುವದು. ಆದರೆ ಇಲ್ಲಿ ಬ್ರಹ್ಮಲೋಕಕ್ಕೆ ಯಜ್ಞಾದಿಗಳು ಸಾಧನವೆಂಬ ಅಭಿಪ್ರಾಯದಿಂದಲೇನೂ ಯಜ್ಞಾದಿಗಳೆಂದು ಬ್ರಹ್ಮಚರ್ಯವನ್ನು ಹೊಗಳಿರುವದಿಲ್ಲ ; ಮತ್ತೇನೆಂದರೆ ಅವು ಪುರುಷಾರ್ಥಸಾಧನವೆಂಬುದು ಪ್ರಸಿದ್ಧವಾಗಿದೆಯಲ್ಲ, ಅದನ್ನಿಟ್ಟುಕೊಂಡು ಹೇಳಿದೆ ಹೇಗೆ ಇಂದ್ರಾದಿಗಳಿಂದ ರಾಜನನ್ನು ಹೊಗಳುತ್ತಾರಾದರೂ ಎಲ್ಲಿ ಇಂದ್ರಾದಿಗಳ ವ್ಯಾಪಾರವೋ ಅಲ್ಲಿಯೇ ರಾಜನ ( ವ್ಯಾಪಾರವು ಎಂದೇನೂ ಅಭಿಪ್ರಾಯವಿರುವದಿಲ್ಲವಷ್ಟೆ ), ಹಾಗೆಯೇ (ಇದು).

## ಚರ್ಚೆ :
## ಬ್ರಹ್ಮಲೋಕದ ಪದಾರ್ಥಗಳು ಮಾನಸಮಾತ್ರವೆ ?

(ಭಾಷ್ಯ)

೬೩೬. ಯ ಇಮೇಽರ್ಣವಾದಯೋ ಬ್ರಾಹ್ಮಲೌಕಿಕಾಃ ಸಂಕಲ್ಪಜಾಶ್ಚ ಪಿತ್ರಾದಯೋ ಭೋಗಾಃ,ತೇ ಕಿಂ ಪಾರ್ಥಿವಾ ಆಪ್ಯಾಶ್ಚ, ಯಥಾ ಇಹ ಲೋಕೇ

1. ಇಲ್ಲಿ ಸ್ಮೃತಿ ಎಂಬ ಮಾತು ಹೆಚ್ಚಾಗಿ ಬಿದ್ದಿರುವಂತೆ ಕಾಣುತ್ತದೆ ; ಏಕೆಂದರೆ ಯಾವ ಸ್ಮೃತಿಯನ್ನೂ ಭಾಷ್ಯದಲ್ಲಿ ಉದಾಹರಿಸಿಲ್ಲ.

ದೃಶ್ಯನ್ತೇ ತದ್ವತ್ ಅರ್ಣವವೃಕ್ಷಪೂಃಸ್ವರ್ಣಮಣ್ಡಪಾನಿ, ಆಹೋಸ್ವಿನ್ಮಾನಸ ಪ್ರತ್ಯಯಮಾತ್ರಾಣೀತಿ ? ಕಿಂ ಚಾತಃ ? ಯದಿ ಪಾರ್ಥಿವಾ ಆಪ್ಯಾಶ್ಚ ಸ್ಥೂಲಾಃ ಸ್ಯುಃ, ಹೃದ್ಯಾಕಾಶೇ ಸಮಾಧಾನಾನುಪಪತ್ತಿಃ । ಪುರಾಣೇ ಚ ಮನೋಮಯಾನಿ ಬ್ರಹ್ಮಲೋಕೇ ಶರೀರಾದೀನೀತಿ ವಾಕ್ಯಂ ವಿರುಧ್ಯೇತ । "ಅಶೋಕಮಹಿಮಮ್" (ಬೃ. ೫-೧೦-೧) ಇತ್ಯಾದ್ಯಾಶ್ಚ ಶ್ರುತಯಃ । ನನು ಸಮುದ್ರಾಃ ಸರಿತಃ ಸರಾಂಸಿ ವಾಪ್ಯಃ ಕೂಪಾ ಯಜ್ಞಾ ವೇದಾ ಮನ್ತ್ರಾದಯಶ್ಚ ಮೂರ್ತಿಮನ್ತೋ ಬ್ರಹ್ಮಾಣಮ್ ಉಪತಿಷ್ಠನ್ತಿ ಇತಿ ಮಾನಸತ್ವೇ ವಿರುಧ್ಯೇತ ಪುರಾಣಸ್ಮೃತಿಃ । ನ । ಮೂರ್ತಿಮತ್ತ್ವೇ ಪ್ರಸಿದ್ಧರೂಪಾಣಾಮೇವ ತತ್ರ ಗಮನಾನುಪಪತ್ತೇಃ । ತಸ್ಮಾತ್ ಪ್ರಸಿದ್ಧಮೂರ್ತಿವ್ಯತಿರೇಕೇಣ ಸಾಗರಾದೀನಾಂ ಮೂರ್ತ್ಯನ್ತರಂ ಸಾಗರಾದಿಭಿರುಪಾತ್ತಂ ಬ್ರಹ್ಮಲೋಕಗನ್ತೃ ಕಲ್ಪನೀಯಮ್ । ತುಲ್ಯಾಯಾಂ ಚ ಕಲ್ಪನಾಯಾಂ ಯಥಾಪ್ರಸಿದ್ಧಾ ಏವ ಮಾನಸ್ಯ ಆಕಾರವತ್ಯಃ ಪುಂಸ್ತ್ರ್ಯಾದ್ಯಾ ಮೂರ್ತಯೋ ಯುಕ್ತಾಃ ಕಲ್ಪಯಿತುಮ್ । ಮಾನಸದೇಹಾನುರೂಪ್ಯಸಂಬನ್ಧೋಪಪತ್ತೇಃ । ದೃಷ್ಟಾ ಹಿ ಮಾನಸ್ಯ ಏವ ಆಕಾರವತ್ಯಃ ಪುಂಸ್ತ್ರ್ಯಾದ್ಯಾ ಮೂರ್ತಯಃ ಸ್ವಪ್ನೇ । ನನು ತಾ ಅನೃತಾ ಏವ । "ತ ಇಮೇ ಸತ್ಯಾಃ ಕಾಮಾಃ" (೮-೩-೧) ಇತಿ ಶ್ರುತಿಸ್ತಥಾ ಸತಿ ವಿರುಧ್ಯೇತ । ನ । ಮಾನಸಪ್ರತ್ಯಯಸ್ಯ ಸತ್ಯತ್ವೋಪಪತ್ತೇಃ ।[1] ಮಾನಸಾ ಹಿ ಪ್ರತ್ಯಯಾಃ ಸ್ತ್ರೀಪುರುಷಾದ್ಯಾಕಾರಾಃ ಸ್ವಪ್ನೇ ದೃಶ್ಯನ್ತೇ । ನನು ಜಾಗ್ರದ್ವಾಸನಾರೂಪಾಃ ಸ್ವಪ್ನದೃಶ್ಯಾ ನ ತು ತತ್ರ ಸ್ತ್ರ್ಯಾದಯಃ ಸ್ವಪ್ನೇ ವಿದ್ಯನ್ತೇ। ಅತ್ಯಲ್ಪಮಿದಮುಚ್ಯತೇ । ಜಾಗ್ರದ್ವಿಷಯಾ ಅಪಿ ಮಾನಸಪ್ರತ್ಯಯಾಭಿನಿರ್ವೃತ್ತಾ ಏವ । ಸದೀಕ್ಷಾಭಿನಿರ್ವೃತ್ತತೇಜೋಽಬನ್ನಮಯತ್ವಾಜ್ಜಾಗರಿತವಿಷಯಾಣಾಮ್ । ಸಂಕಲ್ಪಮೂಲಾ ಹಿ ಲೋಕಾ ಇತಿ ಚೋಕ್ತಮ್ "ಸಮಕ್ಲೃಪತಾಂ ದ್ಯಾವಾಪೃಥಿವೀ" (೭-೪-೨) ಇತ್ಯತ್ರ । ಸರ್ವಶ್ರುತಿಷು ಚ ಪ್ರತ್ಯಗಾತ್ಮನ ಉತ್ಪತ್ತಿಃ ಪ್ರಲಯಶ್ಚ ತತ್ರೈವ ಸ್ಥಿತಿಶ್ಚ "ಯಥಾ ವಾ ಅರಾ ನಾಭೌ" (೭-೧೫-೧) ಇತ್ಯಾದಿನಾ ಉಚ್ಯತೇ । ತಸ್ಮಾನ್ಮಾನಸಾನಾಂ ಬಾಹ್ಯಾನಾಂ ಚ ವಿಷಯಾಣಾಮ್ ಇತರೇತರಕಾರ್ಯಕಾರಣತ್ವಮ್ ಇಷ್ಯತ ಏವ ಬೀಜಾಙ್ಕುರವತ್ । ಯದ್ಯಪಿ ಬಾಹ್ಯಾ ಏವ ಮಾನಸಾ ಮಾನಸಾ ಏವ ಚ ಬಾಹ್ಯಾ ನಾನೃತತ್ವಂ ತೇಷಾಂ ಕದಾಚಿದಪಿ ಸ್ವಾತ್ಮನಿ ಭವತಿ । ನನು ಸ್ವಪ್ನೇ ದೃಷ್ಟಾಃ ಪ್ರತಿಬುದ್ಧಸ್ಯ ಅನೃತಾ ಭವನ್ತಿ ವಿಷಯಾಃ । ಸತ್ಯಮೇವ । ಜಾಗ್ರದ್ಬೋಧಾಪೇಕ್ಷಂ ತು ತದನೃತತ್ವಂ ನ ಸ್ವತಃ । ತಥಾ ಸ್ವಪ್ನಬೋಧಾಪೇಕ್ಷಂ ಚ ಜಾಗ್ರದ್ದೃಷ್ಟವಿಷಯಾನೃತತ್ವಂ ನ ಸ್ವತಃ । ವಿಶೇಷಾಕಾರಮಾತ್ರಂ ತು ಸರ್ವೇಷಾಂ ಮಿಥ್ಯಾಪ್ರತ್ಯಯನಿಮಿತ್ತಮ್ ಇತಿ ವಾಚಾರಮ್ಭಣಂ ವಿಕಾರೋ ನಾಮಧೇಯಮನೃತಮ್, ತ್ರೀಣಿ ರೂಪಾಣೀತ್ಯೇವ

---

1. 'ಸತ್ಯತ್ವೋಪಪತ್ತೇಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಸತ್ಯಮ್ । ತಾನ್ಯಪಿ ಆಕಾರವಿಶೇಷತೋಽನೃತಂ ಸ್ವತಃ ಸನ್ಮಾತ್ರರೂಪತಯಾ ಸತ್ಯಮ್ । ಪ್ರಾಕ್ಸದಾತ್ಮಪ್ರತಿಬೋಧಾತ್ ಸ್ವವಿಷಯೇಽಪಿ ಸರ್ವಂ ಸತ್ಯಮೇವ ಸ್ವಪ್ನದೃಶ್ಯಾ ಇವೇತಿ ನ ಕಶ್ಚಿದ್ ವಿರೋಧಃ । ತಸ್ಮಾನ್ಮಾನಸಾ ಏವ ಬ್ರಾಹ್ಮಲೌಕಿಕಾ ಅರಣ್ಯಾದಯಃ ಸಂಕಲ್ಪಜಾಶ್ಚ ಪಿತ್ರಾದಯಃ ಕಾಮಾಃ । ಬಾಹ್ಯವಿಷಯಭೋಗವತ್ ಅಶುದ್ಧಿರಹಿತತ್ವಾತ್ ಶುದ್ಧಸತ್ತ್ವಸಂಕಲ್ಪಜನ್ಯಾ ಇತಿ ನಿರತಿಶಯಸುಖಾಃ ಸತ್ಯಾಶ್ಚೇಶ್ವರಾಣಾಂ ಭವನ್ತಿ ಇತ್ಯರ್ಥಃ[1] । ಸತ್ಸತ್ಯಾತ್ಮಪ್ರತಿಬೋಧೇಽಪಿ ರಜ್ಜ್ವಾಮಿವ ಕಲ್ಪಿತಾಃ ಸರ್ಪಾದಯಃ ಸದಾತ್ಮಸ್ವರೂಪತಾಮೇವ ಪ್ರತಿಪದ್ಯನ್ತ ಇತಿ ಸದಾತ್ಮನಾ ಸತ್ಯಾ ಏವ ಭವನ್ತಿ ॥

(ಭಾಷ್ಯಾರ್ಥ)

(ಸಂಶಯ) :— ಬ್ರಹ್ಮಲೋಕದಲ್ಲಿರುವ ಈ ಅರ್ಣವಾದಿಗಳೂ ಸಂಕಲ್ಪದಿಂದುಂಟಾಗುವ ಪಿತ್ರಾದಿಭೋಗಗಳೂ- ಈ ಲೋಕದಲ್ಲಿ ಕಂಡುಬರುವವಲ್ಲ, ಹಾಗೆಯೇ ಅರ್ಣವಗಳು, ವೃಕ್ಷಗಳು, ಪುರ, ಸ್ವರ್ಣಮಂಡಪ ಇವುಗಳಂತೆಯೇ - ಪಾರ್ಥಿವಗಳೂ ಪ್ರಾಪ್ಯಗಳೂ ಆಗಿರುವವೊ, ಅಥವಾ ಬರಿಯ ಮಾನಸಪ್ರತ್ಯಯಗಳೊ ?

(ಪ್ರಶ್ನೆ) :— ಈ (ವಿಚಾರ)ದಿಂದ ಏನು ಪ್ರಯೋಜನ ?

(ಉತ್ತರ) :— (ಅವು) ಪಾರ್ಥಿವಗಳಾಗಿ ಪ್ರಾಪ್ಯವಾಗಿರುವ ಸ್ಥೂಲವಸ್ತುಗಳೇ ಆಗಿದ್ದರೆ (ಅವು) ಹೃದಯದಲ್ಲಿರುವ ಆಕಾಶದಲ್ಲಿ ಇಡಲ್ಪಟ್ಟವೆ (ಎಂದು ೮-೩-೧ರಲ್ಲಿ ಹೇಳಿರುವದು) ಹೊಂದುವದಿಲ್ಲ. ಬ್ರಹ್ಮಲೋಕದಲ್ಲಿರುವ ಶರೀರಾದಿಗಳು ಮನೋಮಯವಾಗಿರುವವೆಂದು (ಹೇಳುವ) ಪುರಾಣವಾಕ್ಯಕ್ಕೆ[2] ವಿರೋಧವಾಗುವದು. "ಶೋಕವಿಲ್ಲದ್ದು ಹಿಮವಿಲ್ಲದ್ದು" (ಬೃ. ೫-೧೦-೧) ಮುಂತಾದ ಶ್ರುತಿಗಳಿಗೂ (ವಿರೋಧವಾಗುವದು).

(ಆಕ್ಷೇಪ) .— (ಅವು) ಮಾನಸವೇ ಆದರೆ ಸಮುದ್ರಗಳೂ ನದಿಗಳೂ ಸರೋವರಗಳೂ ಭಾವಿಗಳೂ (ಕೆರೆ)ಕಟ್ಟೆಗಳೂ ಯಜ್ಞಗಳೂ ವೇದಗಳೂ ಮಂತ್ರಾದಿಗಳೂ ಮೂರ್ತಿಮಂತವಾಗಿಯೇ ಬ್ರಹ್ಮನನ್ನು ಸೇವಿಸುತ್ತಿರುವವು- ಎಂಬ **ಪುರಾಣಸ್ಮೃತಿಗೆ** ವಿರುದ್ಧವಾಗುವದಲ್ಲ !

---

1. ಈ ಮಾತು ಇಲ್ಲಿ ಬೇಕಿಲ್ಲವೆಂದು ತೋರುತ್ತದೆ.

2. ಮುಕ್ತರಾಗಿ ಬ್ರಹ್ಮಲೋಕಕ್ಕೆ ಹೋದವರಿಗೆ ಮನಸ್ಸಿರುತ್ತದೆ, ಸಾಂಕಲ್ಪಿಕಶರೀರೇಂದ್ರಿಯಗಳು ಇರಲೂಬಹುದು, ಇಲ್ಲದೆಯೂ ಇರಬಹುದು. ಸೂ. ಭಾ. ೪-೪-೧೨ನ್ನು ನೋಡಿ.

(ಸಮಾಧಾನ) :— ಹಾಗಲ್ಲ ಏಕೆಂದರೆ (ಅವು) ಮೂರ್ತಿಮಂತವಾಗಿದ್ದರೆ ಪ್ರಸಿದ್ಧವಾಗಿರುವ ರೂಪದಿಂದಲೇ (ಅವು) ಅಲ್ಲಿಗೆ ಹೋಗುವವೆಂಬುದು ಯುಕ್ತವಾಗುವದಿಲ್ಲ ಆದ್ದರಿಂದ ಸಾಗರಾದಿಗಳಿಗೆ ಪ್ರಸಿದ್ಧವಾಗಿರುವ ಆಕಾರಕ್ಕಿಂತ ವ್ಯತಿರಿಕ್ತವಾದ ಮತ್ತೊಂದು ಆಕಾರವನ್ನು ಸಾಗರಾದಿಗಳು ತೆಗೆದುಕೊಂಡು (ಇರುತ್ತವೆಂದೂ ಅದೇ) ಬ್ರಹ್ಮಲೋಕಕ್ಕೆ ಹೋಗುವವೆಂದೂ ಕಲ್ಪಿಸಬೇಕಾಯಿತು ಕಲ್ಪಿಸತಕ್ಕದ್ದು (ಹೇಗೂ) ಸಮಾನವಾಗಿರುವದರಿಂದ ಪ್ರಸಿದ್ಧವಾಗಿರುವ ಮಾನಸವಾದ ಆಕಾರವುಳ್ಳ ಪುರುಷರು, ಸ್ತ್ರೀಯರು- ಮುಂತಾದ ಮೂರ್ತಿಗಳನ್ನೇ ಕಲ್ಪಿಸುವದು ಯುಕ್ತ , ಏಕೆಂದರೆ ಮಾನಸದೇಹಕ್ಕೆ ಅನುಗುಣವಾದ (ಆಕಾರಗಳ) ಸಂಬಂಧವೇ (ಇಲ್ಲಿ) ಹೊಂದುತ್ತದೆ ಸ್ವಪ್ನದಲ್ಲಿ ಪುರುಷರು ಸ್ತ್ರೀಯರು- ಮುಂತಾದ ಮಾನಸಮೂರ್ತಿಗಳು ಸಾಕಾರವಾಗಿ ಕಂಡುಬರುತ್ತಿರುವವಷ್ಟೆ ?

(ಆಕ್ಷೇಪ).— ಆ (ಸ್ವಪ್ನಮೂರ್ತಿಗಳು) ಹುಸಿಯೇ ಅಲ್ಲವೆ ? ಹಾಗಾದರೆ "ಆ ಈ ಸತ್ಯವಾದ ಕಾಮುಗಳು" (೮-೩-೧) ಎಂಬ ಶ್ರುತಿಗೆ ವಿರೋಧವಾಗುವದಲ್ಲ !

(ಪರಿಹಾರ) .- ಹಾಗಲ್ಲ. ಏಕೆಂದರೆ ಮಾನಸಪ್ರತ್ಯಯಗಳು ಸತ್ಯವಾಗಿರಬಹುದಾಗಿದೆ ಮಾನಸಪ್ರತ್ಯಯಗಳು ಸ್ವಪ್ನದಲ್ಲಿ ಸ್ತ್ರೀಪುರುಷರೇ- ಮುಂತಾದ ಆಕಾರಗಳುಳ್ಳವಾಗಿರುವದು ಕಂಡುಬಂದಿದೆಯಷ್ಟೆ ?[1]

(ಆಕ್ಷೇಪ) .- ಸ್ವಪ್ನದೃಶ್ಯಗಳು ಎಚ್ಚರದ ವಾಸನೆಯ ರೂಪಗಳೇ , ಆ ಸ್ವಪ್ನದಲ್ಲಿ ಸ್ತ್ರೀಯರೇ ಮುಂತಾದವರು (ನಿಜವಾಗಿ) ಇರುವದಿಲ್ಲ. ಅಲ್ಲವೆ?[2]

(ಪರಿಹಾರ) ,- ಇದು ತೀರ ಸ್ವಲ್ಪವನ್ನು ಹೇಳಿದಂತಾಯಿತು. **ಜಾಗ್ರದ್ವಿಷಯಗಳೂ ಮಾನಸಪ್ರತ್ಯಯದಿಂದ ಆದವುಗಳೇ: ಏಕೆಂದರೆ ಜಾಗ್ರದ್ವಿಷಯಗಳು ಸದ್ಬ್ರಹ್ಮದ ಈಕ್ಷಣದಿಂದಾದ ತೇಜೋಬನ್ನಗಳ ವಿಕಾರವಾಗಿರುತ್ತವೆ.**[3] ಲೋಕಗಳು ಸಂಕಲ್ಪಮೂಲಕವಾಗಿಯೇ ಇರುತ್ತವೆ ಎಂದಲ್ಲವೆ, ''ದ್ಯಾವಾಪೃಥಿವಿಗಳು ಸಂಕಲ್ಪಮಾಡಿರುತ್ತವೆ'' (೭-೪-೨)

1. ಕನಸಿನಲ್ಲಿ ಪ್ರತ್ಯಯಗಳೇ ಸಾಕಾರವುಳ್ಳ ವಿಷಯಗಳಾಗಿ ತೋರುತ್ತವೆ ಎಂಬ ವ್ಯಾವಹಾರಿಕದೃಷ್ಟಿಯಿಂದ ಹೇಳಿದ್ದಿದು.

2 ಏಕೆಂದರೆ ಅವು ಎಚ್ಚರದಲ್ಲಿ ಬಾಧಿತವಾಗಿಬಿಡುತ್ತವೆ ಎಂದು ಪೂರ್ವಪಕ್ಷಿಯ ಭಾವ.

3 ಇಲ್ಲಿ ಜಾಗ್ರದ್ವಸ್ತುಗಳು ಮಾನಸಪ್ರತ್ಯಯದಿಂದ ಆಗಿವೆ ಎಂದರೆ ಯಾವನಾದರೊಬ್ಬ ಜೀವನ ಮನಸ್ಸಂಕಲ್ಪದಿಂದ ಆಗಿವೆ ಎಂದು ಇಟ್ಟುಕೊಂಡಾರೆಂಬ ಶಂಕೆಯಿಂದ ಸತ್ತಿನ ಆಲೋಚನೆಯಿಂದ ಉಂಟಾಗಿವೆ ಎಂದಿದೆ. ಬ್ರಹ್ಮವು ಸೃಷ್ಟಿಸುವಾಗ ಮಾಡುವ ಸಂಕಲ್ಪವೂ ಮಾನಸವೇ ; ಸಮಷ್ಟಿಮನಸ್ಸೇ ಜಗತ್ತಿನ ಸೃಷ್ಟಿಗೆ ಕಾರಣ. ತೇಜೋಬನ್ನಗಳು ಮಾನಸವಾಗಿರುವದರಿಂದ ಸ್ವಾಪ್ನವಿಷಯಗಳಂತೆ ಅವೂ ಚೈತನ್ಯವ್ಯತಿರಿಕ್ತವಾಗಿರುವದಿಲ್ಲ-ಎಂದು ಭಾವ.

ಎಂಬಲ್ಲಿ ಹೇಳಿರುತ್ತದೆ. ಎಲ್ಲಾ ಶ್ರುತಿಗಳಲ್ಲಿಯೂ ಪ್ರತ್ಯಗಾತ್ಮನಿಂದಲೇ ಉತ್ಪತ್ತಿಯನ್ನೂ ಪ್ರಲಯವನ್ನೂ ಅವನಲ್ಲಿಯೇ ಸ್ಥಿತಿಯನ್ನೂ "ಗುಂಬದಲ್ಲಿ ಹಾರೆಕೋಲುಗಳು ಹೇಗೋ ಹಾಗೆ" (೭-೧೫-೧) ಮುಂತಾದ ರೀತಿಯಿಂದ ಹೇಳಿರುತ್ತದೆ. ಆದ್ದರಿಂದ ಹೊರಗಿನ ಮತ್ತು ಮಾನಸವಾದ ವಿಷಯಗಳಿಗೆ ಬೀಜಾಂಕುರದಂತೆ ಪರಸ್ಪರಕಾರ್ಯಕಾರಣಭಾವವು ಇಷ್ಟವೇ ಆಗಿರುತ್ತದೆ.[1] ಹೊರಗಿನ (ವಿಷಯಗಳೇ) ಮಾನಸವೂ ಇಷ್ಟವಾಗಿಯೇ ಇದೆ.[2] ಬಾಹ್ಯ(ವಿಷಯ)ಗಳೇ ಮಾನಸ(ವಿಷಯಗಳು), ಮಾನಸ(ವಿಷಯ)ಗಳೇ ಬಾಹ್ಯಗಳು— ಎಂಬಿದು ನಿಜವೇ ಆದರೂ[3] ಅವುಗಳಿಗೆ ತಮ್ಮ ಆತ್ಮ(ರೂಪ)ದಲ್ಲಿ ಅನೃತತ್ವವು ಎಂದಿಗೂ ಆಗುವದಿಲ್ಲ,[4]

(ಆಕ್ಷೇಪ) :— ಸ್ವಪ್ನದಲ್ಲಿ ಕಂಡ ವಿಷಯಗಳು ಎಚ್ಚತ್ತವನಿಗೆ ಅನೃತವಾಗುವವಲ್ಲ !

(ಪರಿಹಾರ) :— ನಿಜ **ಆ ಅನೃತತ್ವವು ಎಚ್ಚರದ ಅರಿವಿನ ಅಪೇಕ್ಷೆಯಿಂದಲೇ ಹೊರತು ಸ್ವತಃ ಅಲ್ಲ. ಅದರಂತೆ ಎಚ್ಚರದಲ್ಲಿ ಕಂಡ ವಿಷಯಗಳು ಅನೃತವಾಗುವದೂ[5] ಸ್ವಪ್ನದ ಅರಿವಿನ ದೃಷ್ಟಿ**

---

1. "ಸತ್ತಿನ ಈಕ್ಷಣಕ್ಕೆ ಹಿಂದಿನ ಕಲ್ಪದ ವಿಷಯಕ್ಕೆ ಸದೃಶವಾದದ್ದೇ ಗೋಚರವಾಗುತ್ತದೆ, ಅದಕ್ಕೆ ಹಿಂದಿನ ಕಲ್ಪದ ವಿಷಯಕ್ಕೆ ಸದೃಶವಾದದ್ದು ಗೋಚರವಾಗುತ್ತದೆ, ಆದ್ದರಿಂದ ಸಂವಿತ್ತೇ (ಅರಿವೇ) ತನ್ನ ಅವಿದ್ಯೆಯಿಂದ ವಿವರ್ತವಾಗುತ್ತದೆ. ಏಕೆಂದರೆ ನಿರವಯವವಾದ ಸನ್ಮಾತ್ರಕ್ಕೆ ಈಕ್ಷಣಾದಿಗಳು ಸ್ವರಸವಾಗಿ ಹೊಂದುವದಿಲ್ಲ. ಹೀಗೆ ಎಲ್ಲವೂ ಸಂವಿತ್ತಿನ ವಿವರ್ತವಾದರೂ ಈ ಅನಿರ್ವಚನೀಯನಿಮಿತ್ತನೈಮಿತ್ತಿಕಭಾವವು ವಿರುದ್ಧವಲ್ಲ"— ಎಂಬ ಟೀಕೆಯ ವಿವರಣಕ್ಕೆ ಭಾಷ್ಯದಲ್ಲಿ ಆಧಾರವು ಕಾಣುವದಿಲ್ಲ.

2. ಬಾಹ್ಯವಿಷಯಗಳು ಮಾನಸಭಾವಗಳಿಗೂ ಮಾನಸಭಾವಗಳು ಬಾಹ್ಯವಿಷಯಗಳಿಗೂ— ಬೀಜವು ಮೊಳಕೆಗೂ ಆ ಮೊಳಕೆಯು ಮತ್ತೊಂದು ಬೀಜಕ್ಕೂ ಕಾರಣವಾಗಿರುವಂತೆ— ಕಾರಣವಾಗಿರುತ್ತವೆ ಎಂಬಿದು ವ್ಯಾವಹಾರಿಕದೃಷ್ಟಿಯಿಂದ.

3. ಈ ವಾಕ್ಯವನ್ನು ಟೀಕಾನುಸಾರವಾಗಿ ಮುಂದಿನ ವಾಕ್ಯಕ್ಕೆ ಅನ್ವಯಿಸಿದೆ ; ಹಿಂದಿನ ವಾಕ್ಯಕ್ಕೂ ಅದನ್ನು ಅನ್ವಯಿಸಿಕೊಳ್ಳಬಹುದು. ನಿಜವಾಗಿ ನೋಡಿದರೆ ಎರಡೂ ಅನೃತವಾದರೂ ವ್ಯಾವಹಾರಿಕದೃಷ್ಟಿಯಿಂದ ಕಾರ್ಯಕಾರಣಭಾವವನ್ನೊಪ್ಪಿದರೂ ದೋಷವಿಲ್ಲ ಎಂದು ಆಗ ಅಭಿಪ್ರಾಯ.

4. ತೋರುವ ರೂಪದಿಂದ ಹುಸಿಯಾದರೂ ಆತ್ಮನೇ ಅವುಗಳ ನಿಜ ; ಆ ರೂಪದಿಂದ ಎಂದರೆ ಅವು ಆತ್ಮರೂಪದಿಂದ ಸತ್ಯವೇ.

5. ಎಚ್ಚರದ ವಿಷಯಗಳು ಸ್ವಪ್ನದಲ್ಲಿ ಅನೃತವಾಗುವದೆಂದರೆ ಅವು ಅಲ್ಲಿ ಇಲ್ಲದೆ ಸ್ವರೂಪವ್ಯಭಿಚಾರವನ್ನು ಹೊಂದುವದು ಎಂದಿಷ್ಟೇ ಅಭಿಪ್ರಾಯ. ಏಕೆಂದರೆ ಸ್ವಪ್ನದ ವಿಷಯಗಳು ಎಚ್ಚರದಲ್ಲಿ ಬಾಧಿತವಾಗುವಂತೆ ಎಚ್ಚರದ ವಿಷಯಗಳೇನೂ ಕನಸಿನಲ್ಲಿ ಬಾಧಿತವಾಗುವದಿಲ್ಲ, ಅಲ್ಲಿ ಎಚ್ಚರದ ಪರಾಮರ್ಶವೇ ಇರುವದಿಲ್ಲ.

**ಯಿಂದಲೇ ಹೊರತು ಸ್ವತಃ ಅಲ್ಲ. ಎಲ್ಲಾ (ವಿಷಯಗಳಿಗೂ) ವಿಶೇಷಾಕಾರವು ಮಾತ್ರ ಮಿಥ್ಯಾಪ್ರತ್ಯಯದ ನಿಮಿತ್ತದಿಂದ ಆಗಿರುತ್ತದೆಯಾಗಿರುವದರಿಂದ ವಿಕಾರವು ವಾಚಾರಂಭಣವಾದ ಹೆಸರೇ, ಮೂರು ರೂಪಗಳೆಂಬುದೇ ಸತ್ಯವು.**[1] **ಆ ರೂಪಗಳೂ ಆಯಾ ಆಕಾರದಿಂದ ಅನೃತವು, ಸ್ವತಃ ಎಂದರೆ ಸನ್ಮಾತ್ರರೂಪದಿಂದ ಸತ್ಯವೇ. ಸದ್ರೂಪಾತ್ಮನ ಜ್ಞಾನಕ್ಕಿಂತ ಮೊದಲು ಪ್ರತಿಯೊಂದೂ ಸ್ವಪ್ನದೃಶ್ಯಗಳಂತೆ ತನ್ನ ತನ್ನ ವಿಷಯದಲ್ಲಿಯೂ ಸತ್ಯವೇ.**[2] ಆದ್ದರಿಂದ ಯಾವ ವಿರೋಧವೂ ಇಲ್ಲ **ಆದ್ದರಿಂದ ಬ್ರಹ್ಮಲೋಕದಲ್ಲಿರುವ ಅರ, ಣ್ಯ– ಮುಂತಾದವುಗಳೂ ಸಂಕಲ್ಪದಿಂದುಂಟಾದ ಪಿತ್ರಾದಿಕಾಮಗಳೂ ಮಾನಸವೇ.** (ಅವು) ಹೊರಗಿನ ವಿಷಯಗಳ ಭೋಗದಂತೆ ಅಶುದ್ಧಿಯಿಲ್ಲದವುಗಳಾದ್ದರಿಂದಲೂ ಶುದ್ಧ ಸತ್ತ್ವದ ಸಂಕಲ್ಪದಿಂದಾದವುಗಳಾಗಿರುವದರಿಂದ ಈಶ್ವರರಾದವರಿಗೆ[3] ನಿರತಿಶಯ ಸುಖವನ್ನುಂಟುಮಾಡುವವುಗಳೂ ಸತ್ಯವಾದವುಗಳೂ[4] ಆಗಿರುತ್ತವೆ[5]. **ಸತ್ತೆಂಬ ಸತ್ಯಾತ್ಮನ ಜ್ಞಾನವಾದರೂ ಹಗ್ಗದಲ್ಲಿ ಕಲ್ಪಿತವಾದ ಸರ್ಪಾದಿಗಳು (ಹೇಗೋ ಹಾಗೆ) ಸದಾತ್ಮನ ಸ್ವರೂಪವನ್ನೇ ಪಡೆದುಕೊಳ್ಳುವವಾದ್ದರಿಂದ ಸದ್ರೂಪದಿಂದ ಸತ್ಯವೇ ಆಗಿರುತ್ತವೆ.**[6]

---

1. ೬–೪–೧ನ್ನೂ ಅದರ ಭಾಷ್ಯವನ್ನೂ ನೋಡಿ.

2. ಸ್ವಪ್ನದೃಶ್ಯಗಳು ಸ್ವಪ್ನಕಾಲಕ್ಕೆ ಸತ್ಯವಾಗಿರುವಂತೆ ವ್ಯಾವಹಾರಿಕಪದಾರ್ಥಗಳು ವ್ಯವಹಾರವಿರುವವರೆಗೂ ಸತ್ಯವೇ ಎಂದಭಿಪ್ರಾಯ. ಪ್ರಮಾಣಪ್ರಮೇಯವ್ಯವಹಾರವು ಸ್ವಾಪ್ನ ವ್ಯವಹಾರದಂತೆ ಆತ್ಮಜ್ಞಾನವುಂಟಾಗುವವರೆಗೂ ಸತ್ಯವೇ ಎಂಬುದಕ್ಕೆ ಸೂ. ಭಾ. ೨–೧–೧೪ (ಭಾ. ಭಾ. ೪೩೬)ನ್ನು ನೋಡಿ.

3. ಮುಕ್ತರಾದವರಿಗೆ.

4. ವ್ಯಾವಹಾರಿಕಸತ್ಯವಾಗಿರುವವುಗಳು, ಅರ್ಥಕ್ರಿಯೆಯನ್ನುಂಟುಮಾಡುವವುಗಳು.

5. ಇದರ ಮುಂದೆ ಇರುವ 'ಇತ್ಯರ್ಥಃ' ಎಂಬ ಮಾತು ಹೆಚ್ಚೆಂದೇ ಕಾಣಿಸುತ್ತದೆ ; ಏಕೆಂದರೆ ಇಲ್ಲಿ ಮೂಲಾಕ್ಷರವನ್ನೇನೂ ವ್ಯಾಖ್ಯಾನಮಾಡಿಲ್ಲ. ಚರ್ಚೆಯ ವಿಷಯದ ತೀರ್ಮಾನವನ್ನು ಉಪಸಂಹಾರಮಾಡಿದೆ, ಅಷ್ಟೆ. ಆದ್ದರಿಂದ ನಾವು ಅದನ್ನು ಕನ್ನಡಿಸಿಲ್ಲ.

6. ಎಲ್ಲವೂ ಸದ್ರೂಪದಿಂದ ಸತ್ಯ, ತನ್ನ ವಿಶೇಷವಾದ ಆಕಾರದಿಂದ ಮಿಥ್ಯೆ – ಎಂಬುದೇ ವೇದಾಂತಸಿದ್ಧಾಂತ.

# ಎಂಟನೆಯ ಅಧ್ಯಾಯ-ಆರನೆಯ ಖಂಡ

( ದಹರವಿದ್ಯೆ )

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೬೩೭. ಯಸ್ತು ಹೃದಯಪುಣ್ಡರೀಕಗತಂ ಯಥೋಕ್ತಗುಣವಿಶಿಷ್ಟಂ ಬ್ರಹ್ಮ ಬ್ರಹ್ಮಚರ್ಯಾದಿಸಾಧನಸಂಪನ್ನಸ್ತ್ಯಕ್ತಬಾಹ್ಯವಿಷಯಾನೃತತೃಷ್ಣಃ ಸನ್ ಉಪಾಸ್ತೇ, ತಸ್ಯೇಯಂ ಮೂರ್ಧನ್ಯಯಾ ನಾಡ್ಯಾ ಗತಿರ್ವಕ್ತವ್ಯಾ ಇತಿ ನಾಡೀ ಖಣ್ಡ ಆರಭ್ಯತೇ ॥

(ಭಾಷ್ಯಾರ್ಥ)

ಯಾವನಾದರೆ ಹೃದಯಪುಂಡರೀಕದಲ್ಲಿರುವ ಹಿಂದೆ ಹೇಳಿದ ಗುಣಗಳುಳ್ಳ ಬ್ರಹ್ಮವನ್ನು ಬ್ರಹ್ಮಚರ್ಯಾದಿಸಾಧನಗಳಿಂದೊಡಗೂಡಿದವನಾಗಿ, ಅನೃತವಾದ ಹೊರಗಿನ ವಿಷಯಗಳಲ್ಲಿ ಬಿಡಲ್ಪಟ್ಟ ತೃಷ್ಣೆಯುಳ್ಳವನಾಗಿ ಉಪಾಸನೆಮಾಡುತ್ತಾನೋ, ಅವನಿಗೆ ಈ ನೆತ್ತಿಯ ನಾಡಿಯಿಂದ ಗತಿಯನ್ನು ಹೇಳಬೇಕಾಗಿದೆಯಾದ್ದರಿಂದ (ಈ) ನಾಡೀಖಂಡವನ್ನು ಆರಂಭಿಸಿರುತ್ತದೆ.

## ಹೃದಯನಾಡಿಗಳು

(ಉಪನಿಷತ್ತು)

**ಅಥ ಯಾ ಏತಾ ಹೃದಯಸ್ಯ ನಾಡ್ಯಸ್ತಾಃ ಪಿಙ್ಗಲಸ್ಯಾಣಿಮ್ನಸ್ತಿಷ್ಠನ್ತಿ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯೇತ್ಯಸೌ ವಾ ಆದಿತ್ಯಃ ಪಿಙ್ಗಲ ಏಷ ಶುಕ್ಲ ಏಷ ನೀಲ ಏಷ ಪೀತ ಏಷ ಲೋಹಿತಃ ॥ ೧ ॥**

೧. ಇನ್ನು ಈ ಹೃದಯದ ನಾಡಿಗಳಿವೆಯಲ್ಲ, ಅವು ಪಿಂಗಲವಾದ, ಅಣುವಾದ, (ರಸದಿಂದ ತುಂಬಿದವುಗಳಾಗಿ), ಬಿಳಿಯ, ಕಪ್ಪಾದ, ಹಳದಿಯ, ಕೆಂಪಾದ (ರಸದಿಂದ ತುಂಬಿದವುಗಳಾಗಿ) ಇರುತ್ತವೆ. ಈ ಆದಿತ್ಯನೇ ಪಿಂಗಲನು, ಇವನೇ ಬಿಳಿಯವನು, ಇವನೇ ಕರಿಯವನು, ಇವನೇ ಹಳದಿಯವನು, ಇವನೇ ಕೆಂಪು.

## ಹೃದಯನಾಡಿಗಳ ವರ್ಣ

(ಭಾಷ್ಯ)

೬೩೮. ಅಥ ಯಾ ಏತಾ ವಕ್ಷ್ಯಮಾಣಾ ಹೃದಯಸ್ಯ ಪುಣ್ಡರೀಕಾಕಾರಸ್ಯ ಬ್ರಹ್ಮೋಪಾಸನಸ್ಥಾನಸ್ಯ ಸಂಬನ್ಧಿನ್ಯೋ ನಾಡ್ಯಃ, ಹೃದಯಮಾಂಸಪಿಣ್ಡಾತ್

ಸರ್ವತೋ ವಿನಿಃಸೃತಾ ಆದಿತ್ಯಮಣ್ಡಲಾದಿವ ರಶ್ಮಯಃ, ತಾಶ್ಚೈತಾಃ ಪಿಙ್ಗಲಸ್ಯ ವರ್ಣವಿಶೇಷವಿಶಿಷ್ಟಸ್ಯ, ಅಣಿಮ್ನಃ ಸೂಕ್ಷ್ಮರಸಸ್ಯ ರಸೇನ ಪೂರ್ಣಾಃ, ತದಾಕಾರಾ ಏವ ತಿಷ್ಠನ್ತಿ ವರ್ತನ್ತ ಇತ್ಯರ್ಥಃ । ತಥಾ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯ ಚ ರಸಸ್ಯ ಪೂರ್ಣಾ ಇತಿ ಸರ್ವತ್ರ ಅಧ್ಯಾಹಾರ್ಯಮ್ । ಸೌರೇಣ ತೇಜಸಾ ಪಿತ್ತಾಖ್ಯೇನ ಪಾಕಾಭಿನಿರ್ವೃತ್ತೇನ ಕಫೇನ ಅಲ್ಪೇನ ಸಂಪರ್ಕಾತ್ ಪಿಙ್ಗಲಂ ಭವತಿ । ಸೌರಂ ತೇಜಃ ಪಿತ್ತಾಖ್ಯಮ್ । ತದೇವ ವಾತಭೂಯಸ್ತ್ವಾತ್ ನೀಲಂ ಭವತಿ । ತದೇವ ಚ ಕಫಭೂಯಸ್ತ್ವಾತ್ ಶುಕ್ಲಮ್ । ಕಫೇನ ಸಮತಾಯಾಂ ಪೀತಮ್ । ಶೋಣಿತಬಾಹುಲ್ಯೇನ ಲೋಹಿತಮ್ । ವೈದ್ಯಕಾದ್ವಾ ವರ್ಣ ವಿಶೇಷಾ ಅನ್ವೇಷ್ಟವ್ಯಾಃ ಕಥಂ ಭವನ್ತೀತಿ । ಶ್ರುತಿಸ್ತು ಆಹ ಆದಿತ್ಯಸಂಬನ್ಧಾ ದೇವ ತತ್ತೇಜಸೋ ನಾಡೀಷು ಅನುಗತಸ್ಯ ಏತೇ ವರ್ಣವಿಶೇಷಾ ಇತಿ । ಕಥಮ್? ಅಸೌ ವಾ ಆದಿತ್ಯಃ ಪಿಙ್ಗಲೋ ವರ್ಣತಃ । ಏಷ ಆದಿತ್ಯಃ ಶುಕ್ಲೋಽಪಿ । ಏಷ ನೀಲಃ, ಏಷ ಪೀತಃ, ಏಷ ಲೋಹಿತ ಆದಿತ್ಯ ಏವ ॥

(ಭಾಷ್ಯಾರ್ಥ)

ಇನ್ನು ಈ ಮುಂದೆ ಹೇಳಲಿರುವ, ಪುಂಡರೀಕಾಕಾರದ ಹೃದಯವೆಂಬ ಬ್ರಹ್ಮೋಪಾಸನಾಸ್ಥಾನದ ಸಂಬಂಧವುಳ್ಳ ನಾಡಿಗಳಿವೆಯಲ್ಲ, ಸೂರ್ಯಮಂಡಲ ದಿಂದ ಹೊರಟಿರುವ ರಶ್ಮಿಗಳಂತೆ ಹೃದಯಮಾಂಸಪಿಂಡದಿಂದ ಎಲ್ಲಾ ಕಡೆಗೂ ಹೊರಟಿವೆಯಲ್ಲ, ಆ ಈ ನಾಡಿಗಳು ಪಿಂಗಲವಾದ (ಕಂದುಬಣ್ಣವೆಂಬ) ವರ್ಣ ವಿಶೇಷದಿಂದೊಡಗೂಡಿದ ಅಣುವಾದ ಸೂಕ್ಷ್ಮತರವಾದ ರಸದಿಂದ ತುಂಬಿಕೊಂಡು ಅದೇ ಆಕಾರದಿಂದ (ತಿಷ್ಠನ್ತಿ= ವರ್ತನ್ತೇ) ಇದ್ದುಕೊಂಡಿವೆಯಲ್ಲ- ಎಂದರ್ಥ. ಇದರಂತೆ ಬಿಳುಪಾದ, ಕಪ್ಪಾದ, ಹಳದಿಯ, ಕೆಂಪಾದ 'ರಸದಿಂದ ತುಂಬಿರುವ' ಎಂದು ಎಲ್ಲಾ ಕಡೆಯಲ್ಲಿಯೂ ಅಧ್ಯಾಹಾರಮಾಡಿಕೊಳ್ಳಬೇಕು. ಪಿತ್ತವೆಂಬ ಹೆಸರಿನ ಸೂರ್ಯಸಂಬಂಧಿಯಾದ ತೇಜಸ್ಸಿನಿಂದ[1] ಪಾಕದಿಂದುಂಟಾದ ಕಫವು ಸ್ವಲ್ಪಮಟ್ಟಿಗೆ ಪಿತ್ತವೆಂಬ ಸೌರತೇಜಸ್ಸು ಬೆರಕೆಯಾಗಲು ಕಂದುಬಣ್ಣವಾಗು ವದು. ಅದೇ ವಾತವು ಹೆಚ್ಚಾಗಿರುವಾಗ ಕಪ್ಪಾಗಿರುವದು. ಅದೇ ಕಫವು ಹೆಚ್ಚಾಗಿರುವಾಗ ಬಿಳುಪಾಗಿರುವದು. ಕಫಕ್ಕೆ ಸಮವಾಗಿ (ವಾತವೂ ಬೆರಕೆಯಾಗಿ ದ್ದರೆ) ಹಳದಿಯಾಗಿರುತ್ತದೆ , ರಕ್ತವು ಹೆಚ್ಚಾಗಿದ್ದರೆ ಕೆಂಪಾಗಿರುತ್ತದೆ. ಅಥವಾ ಈ ವರ್ಣವಿಶೇಷಗಳು ಹೇಗೆ ಆಗುವವೆಂಬುದನ್ನು ವೈದ್ಯಶಾಸ್ತ್ರದಿಂದ ತಿಳಿದು ಕೊಳ್ಳಬೇಕು.[2] ಶ್ರುತಿಯೇನೋ ಸೂರ್ಯನ ಸಂಬಂಧದಿಂದಲೇ ಆ ತೇಜಸ್ಸಿಗೆ

---

1. ಆಮಾಶಯದಲ್ಲಿ ಪಿತ್ತವು ಅನ್ನರಸಕ್ಕೆ ಬೇರೆಬೇರೆಯ ರಸವನ್ನು ಉಂಟುಮಾಡು ತ್ತದೆ ಎಂದು ಹೇಳುತ್ತಾರೆ.

2. ಆ ಶಾಸ್ತ್ರವೇ ಈ ವಿಷಯದಲ್ಲಿ ಪ್ರಮಾಣ.

ನಾಡಿಗಳಲ್ಲಿದ್ದುಕೊಂಡಿರುವಾಗ ಈ ವರ್ಣವಿಶೇಷಗಳಾಗಿರುತ್ತವೆ ಎಂದು ಹೇಳುತ್ತದೆ.[1] ಹೇಗೆಂದರೆ, ಆ ಆದಿತ್ಯನೇ ಬಣ್ಣದಲ್ಲಿ ಕಂದು, ಈ ಆದಿತ್ಯನೇ ಬಿಳುಪಾಗಿಯೂ ಇರುತ್ತಾನೆ, ಇವನೇ ಕಪ್ಪು, ಇವನೇ ಹಳದಿ, ಈ ಆದಿತ್ಯನೇ ಕೆಂಪು[2]

## ನಾಡಿಗಳಿಗೂ ಸೂರ್ಯನಿಗೂ ಸಂಬಂಧ

(ಉಪನಿಷತ್ತು)

**ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛನ್ತೀಮಂ ಚಾಮುಂ ಚಾಽಮುಷ್ಮಾದಾದಿತ್ಯಾತ್ ಪ್ರತಾಯನ್ತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯನ್ತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ ॥ ೨ ॥**

೨. ಅಲ್ಲಿ ಹೇಗೆ ಮಹಾಪಥವು ಹಬ್ಬಿಕೊಂಡು ಎರಡು ಊರುಗಳನ್ನು- ಈ (ವೂರು), ಆ (ವೂರು) ಎರಡನ್ನೂ- ಸೇರುವದೋ ಹಾಗೆಯೇ ಈ ಆದಿತ್ಯನ ರಶ್ಮಿಗಳು ಈ (ಲೋಕ), ಆ (ಲೋಕ)- ಎರಡು ಲೋಕಗಳನ್ನೂ ಸೇರಿರುತ್ತವೆ. ಆ ಆದಿತ್ಯನಿಂದ ಹಬ್ಬಿಕೊಂಡಿವೆ, ಅವು ಈ ನಾಡಿಗಳಲ್ಲಿ ಹಾದುಹೋಗಿವೆ ; ಈ ನಾಡಿಗಳಿಂದ ಹಬ್ಬಿಕೊಂಡಿವೆ, ಅವು ಆ ಆದಿತ್ಯನಲ್ಲಿ ಹಾದುಹೋಗಿವೆ.

## ನಾಡಿಗಳಿಗೂ ಸೂರ್ಯನಿಗೂ ರಶ್ಮಿಸಂಬಂಧ

(ಭಾಷ್ಯ)

೬೩೯. ತಸ್ಯ ಅಧ್ಯಾತ್ಮಂ ನಾಡೀಭಿಃ ಕಥಂ ಸಂಬನ್ಧ ಇತ್ಯತ್ರ ದೃಷ್ಟಾನ್ತಮ್ ಆಹ| ತತ್ ತತ್ರ ಯಥಾ ಲೋಕೇ ಮಹಾನ್ ವಿಸ್ತೀರ್ಣಃ ಪನ್ಥಾ ಮಹಾಪಥ ಆತತೋ ವ್ಯಾಪ್ತಃ, ಉಭೌ ಗ್ರಾಮೌ ಗಚ್ಛತಿ ಇಮಂ ಚ ಸಂನಿಹಿತಮ್ ಅಮುಂ ಚ ವಿಪ್ರಕೃಷ್ಟಂ ದೂರಸ್ಥಮ್, ಏವಂ[3] ಯಥಾ ದೃಷ್ಟಾನ್ತೋ ಮಹಾಪಥ

---

1. ವೈದ್ಯಕಕ್ಕೂ ಅದಕ್ಕೂ ಈ ವಿಷಯದಲ್ಲಿ ವಿರೋಧವೇನೂ ಇಲ್ಲ.

2. ನಾಡೀರಸಗಳ ವರ್ಣದ ವಿಷಯಕ್ಕೆ ಬೃ. ೪-೩-೨೦ನ್ನು ನೋಡಿ. ನಾಡಿಗಳ ವಿಷಯಕ್ಕೆ ಬೃ. ಭಾ. ೪-೪-೯(ಭಾ. ಭಾ. ೨೮೪)ನ್ನು ನೋಡಿ.

3. ಈ ಮಾತು ಅವಶ್ಯವಿಲ್ಲ ; ಅಥವಾ 'ಯಥಾಯಂ ದೃಷ್ಟಾನ್ತೋ .ಪ್ರವಿಷ್ಟ ಇತಿ' ಎಂದಿಪ್ಪದೂ ಆಗಬಹುದಿತ್ತೆಂದು ತೋರುತ್ತದೆ.

ಉಭೌ ಗ್ರಾಮೌ ಪ್ರವಿಷ್ಟಃ, ಏವಮೇವ ಏತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಅಮುಂ ಚಾದಿತ್ಯಮಣ್ಡಲಮ್ ಇಮಂ ಚ ಪುರುಷಂ ಗಚ್ಛನ್ತಿ, ಉಭಯತ್ರ ಪ್ರವಿಷ್ಟಾ ಯಥಾ ಮಹಾಪಥಃ । ಕಥಮ್ ? ಅಮುಷ್ಮಾತ್ ಆದಿತ್ಯ ಮಣ್ಡಲಾತ್ ಪ್ರತಾಯನ್ತೇ ಸಂತತಾ ಭವನ್ತಿ । ತಾ ಅಧ್ಯಾತ್ಮಮ್ ಆಸು ಪಿಙ್ಗಲಾದಿವರ್ಣಾಸು ಯಥೋಕ್ತಾಸು ನಾಡೀಷು ಸೃಪ್ತಾ ಗತಾಃ ಪ್ರವಿಷ್ಟಾ ಇತ್ಯರ್ಥಃ। ಆಭ್ಯೋ ನಾಡೀಭ್ಯಃ ಪ್ರತಾಯನ್ತೇ ಪ್ರವೃತ್ತಾಃ ಸನ್ತಾನಭೂತಾಃ ಸತ್ಯಸ್ತೇಽಮುಷ್ಮಿನ್ । ರಶ್ಮೀನಾಮುಭಯಲಿಙ್ಗತ್ವಾತ್ ತೇ ಇತ್ಯುಚ್ಯನ್ತೇ ॥[1]

(ಭಾಷ್ಯಾರ್ಥ)

ಆ (ಆದಿತ್ಯ)ನಿಗೆ ಅಧ್ಯಾತ್ಮವಾಗಿ ನಾಡಿಗಳೊಡನೆ ಹೇಗೆ ಸಂಬಂಧವಿದೆ? ಎಂದರೆ, ಅದಕ್ಕೆ (ಶ್ರುತಿಯು) ದೃಷ್ಟಾಂತವನ್ನು ಹೇಳುತ್ತಿದೆ (ತತ್=ತತ್ರ) ಅಲ್ಲಿ ಹೇಗೆ ಲೋಕದಲ್ಲಿ ಮಹಾಪಥವು ಎಂದರೆ ದೊಡ್ಡ ರಸ್ತೆಯು ಹಬ್ಬಿಕೊಂಡು (ಉದ್ದಕ್ಕೆ) ವ್ಯಾಪಿಸಿಕೊಂಡು ಎರಡು ಊರುಗಳನ್ನು ಸೇರಿರುವದೋ, ಈ ಹತ್ತಿರದ (ಊರು), ಆ ಅತ್ತಲಿರುವ ದೂರದ (ಊರು)– ಎರಡು ಊರುಗಳನ್ನು ದೊಡ್ಡ ರಸ್ತೆಯು ಎರಡು ಊರುಗಳನ್ನು ಹೊಕ್ಕಿರುವದೆಂಬೀ ದೃಷ್ಟಾಂತವಿರುವದಲ್ಲ, ಹಾಗೆಯೇ ಈ ಆದಿತ್ಯನ ರಶ್ಮಿಗಳು ಆ ಆದಿತ್ಯಮಂಡಲ, ಈ ಪುರುಷ– ಎರಡು ಲೋಕಗಳನ್ನೂ ಸೇರಿರುತ್ತವೆ. ದೊಡ್ಡ ರಸ್ತೆಯಂತೆ ಎರಡನ್ನೂ ಹೊಕ್ಕಿರುತ್ತವೆ. ಹೇಗೆಂದರೆ, ಆ ಆದಿತ್ಯಮಂಡಲದಿಂದ ಹಬ್ಬಿಕೊಂಡಿವೆ, ಉದ್ದಕ್ಕೆ ಹೋಗಿರುತ್ತವೆ. ಅವು ಅಧ್ಯಾತ್ಮವಾಗಿ ಪಿಂಗಲವೇ ಮುಂತಾದ ಬಣ್ಣಗಳ ಹಿಂದೆ ಹೇಳಿದ ಈ ನಾಡಿಗಳಲ್ಲಿ ಹಾದುಹೋಗಿರುತ್ತವೆ ಅಲ್ಲಿ ನಡೆದಿವೆ, ಹೊಕ್ಕಿರುತ್ತವೆ ಎಂದರ್ಥ. ಈ ನಾಡಿಗಳಿಂದ ಹಬ್ಬಿಕೊಂಡಿವೆ, ಉದ್ದಕ್ಕೆ ಹೊರಟಿರುವವುಗಳಾಗಿ ಅವು ಆ (ಆದಿತ್ಯ)ನಲ್ಲಿ ಹಾದುಹೋಗಿರುತ್ತವೆ. ರಶ್ಮಿ(ಶಬ್ದವು) ಉಭಯಲಿಂಗವಾದ್ದರಿಂದ (ಅವನ್ನು ಮೂಲದಲ್ಲಿ) ತೇ (ಎಂದು ಪುಲ್ಲಿಂಗದ ಮಾತಿನಿಂದ) ಕರೆದಿದೆ.

## ಸುಷುಪ್ತಿಯಲ್ಲಿ ನಾಡಿಗಳ ದ್ವಾರದಿಂದ ಪರಮಾತ್ಮಪ್ರವೇಶ

(ಉಪನಿಷತ್ತು)

**ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ ತಂ ನ ಕಶ್ಚನ ಪಾಪ್ಮಾ ಸ್ಪೃಶತಿ ತೇಜಸಾ ಹಿ ತದಾ ಸಂಪನ್ನೋ ಭವತಿ ॥ ೩ ॥**

---

1. 'ಆದಿತ್ಯೇ ಸೃಪ್ತಾಃ' ಎಂಬ ಮಾತುಗಳು ಮೂಲಭಾಷ್ಯದಲ್ಲಿದ್ದು ಇಲ್ಲಿ ಬಿಟ್ಟು ಹೋಗಿರುತ್ತದೆ.

೩. ಅಲ್ಲಿ ಯಾವಾಗ ಹೀಗೆ ಸುಪ್ತನಾಗಿ, ಸಮಸ್ತನಾಗಿ, ಸಂಪ್ರಸನ್ನನಾಗಿ ಸ್ವಪ್ನವನ್ನು ಅರಿಯದೆ ಇರುವನೋ, ಆಗ ಈ ನಾಡಿಗಳಲ್ಲಿ ಸೇರಿಕೊಂಡಿರುತ್ತಾನೆ. ಅವನನ್ನು ಯಾವ ಪಾಪವೂ ಅಂಟಿಕೊಂಡಿರುವದಿಲ್ಲ ; ಆಗ ತೇಜಸ್ಸಿನಿಂದ ಸಂಪನ್ನನಾಗಿರುತ್ತಾನಷ್ಟೆ.

## ಸುಷುಪ್ತಿಯಲ್ಲಿ ಜೀವನು ದಹರಾಕಾಶವನ್ನೇ ಸೇರಿರುತ್ತಾನೆ

(ಭಾಷ್ಯ)

೬೪೦. ತತ್ ತತ್ರ ಏವಂ ಸತಿ ಯತ್ರ ಯಸ್ಮಿನ್ ಕಾಲೇ ಏತತ್ ಸ್ವಪನಮ್ ಅಯಂ ಜೀವಃ ಸುಪ್ತೋ ಭವತಿ । ಸ್ವಾಪಸ್ಯ ದ್ವಿಪ್ರಕಾರತ್ವಾದ್ ವಿಶೇಷಣಂ ಸಮಸ್ತ ಇತಿ । ಉಪಸಂಹೃತಸರ್ವಕರಣವೃತ್ತಿಃ ಇತ್ಯೇತತ್ । ಅತೋ ಬಾಹ್ಯವಿಷಯಸಂಪರ್ಕಜನಿತಕಾಲುಷ್ಯಾಭಾವಾತ್ ಸಮ್ಯಕ್ ಪ್ರಸನ್ನಃ ಸಂಪ್ರಸನ್ನೋ ಭವತಿ । ಅತ ಏವ ಸ್ವಪ್ನಂ ವಿಷಯಾಕಾರಾಭಾಸಂ ಮಾನಸಂ ಸ್ವಪ್ನಪ್ರತ್ಯಯಂ ನ ವಿಜಾನಾತಿ । ನಾಽನುಭವತೀತ್ಯರ್ಥಃ । ಯದೈವಂ ಸುಪ್ತೋ ಭವತಿ ಆಸು ಸೌರತೇಜಃಪೂರ್ಣಾಸು ಯಥೋಕ್ತಾಸು ನಾಡೀಷು ತದಾ ಸೃಪ್ತಃ ಪ್ರವಿಷ್ಟೋ ನಾಡೀಭಿರ್ದ್ವಾರಭೂತಾಭಿರ್ಹೃದಯಾಕಾಶಂ ಗತೋ ಭವತೀತ್ಯರ್ಥಃ । ನ ಹ್ಯನ್ಯತ್ರ ಸತ್ಸಂಪತ್ತೇಃ ಸ್ವಪ್ನಾದರ್ಶನಮಸ್ತೀತಿ ಸಾಮರ್ಥ್ಯಾತ್ 'ನಾಡೀಷು' ಇತಿ ಸಪ್ತಮೀ ತೃತೀಯಯಾ ಪರಿಣಮ್ಯತೇ ॥

(ಭಾಷ್ಯಾರ್ಥ)

(ತತ್=ತತ್ರ) ಅಲ್ಲಿ ಹೀಗಿರುವಲ್ಲಿ, ಎಲ್ಲಿ ಯಾವ ಕಾಲದಲ್ಲಿ ಈ ನಿದ್ರೆಯನ್ನು ಈ ಜೀವನು ಸುಪ್ತನಾಗಿರುತ್ತಾನೋ,[1] ನಿದ್ರೆಯು ಎರಡು ಬಗೆಯಾಗಿರುವದರಿಂದ 'ಸಮಸ್ತನಾಗಿ' ಎಂಬ ವಿಶೇಷಣವನ್ನು ಕೊಟ್ಟಿದೆ, ಕರಣವೃತ್ತಿಗಳೆಲ್ಲವನ್ನೂ ಉಪಸಂಹಾರಮಾಡಿಕೊಂಡಿರುತ್ತಾನೋ ಎಂದರ್ಥ.[2] ಆದ್ದರಿಂದ ಹೊರಗಿನ ವಿಷಯಗಳ ಸಂಪರ್ಕದಿಂದುಂಟಾದ ಕೊಳಕು ಇಲ್ಲದ್ದರಿಂದ ಸಂಪ್ರಸನ್ನನಾಗಿ ಚೆನ್ನಾಗಿ ತಿಳಿಯಾಗಿರುತ್ತಾನೋ[3] (ಎಂದರ್ಥ). ಆದ್ದರಿಂದಲೇ[4] ಸ್ವಪ್ನವನ್ನು ಎಂದರೆ

---

1. ಆಟವನ್ನು ಆಡುತ್ತಾನೆ ಎಂಬಂತೆ ಈ ಪ್ರಯೋಗ.

2. ಸ್ವಪ್ನದಲ್ಲಿ ಎಚ್ಚರದ ಶರೀರೇಂದ್ರಿಯಗಳಿಲ್ಲದಿದ್ದರೂ ಅಂತಃಕರಣದ ವ್ಯಾಪಾರವು ನಡೆದೇ ಇರುತ್ತದೆ ; ಆದ್ದರಿಂದ ಸಮಸ್ತನಾಗಿರುವದಿಲ್ಲ ಎಂದು ಭಾವ.

3. ಸ್ವಪ್ನದಲ್ಲಿ ನಿಜವಾದ ವಿಷಯಗಳಿಲ್ಲದಿದ್ದರೂ ವಿಷಯಾಭಾಸಗಳ ಸಂಪರ್ಕವೆಂಬ ಕಾಲುಷ್ಯವಿರುತ್ತದೆ.

4. ಸಮಸ್ತನೂ ಸಂಪ್ರಸನ್ನನೂ ಆಗಿರುವದರಿಂದಲೇ ಎಂದರ್ಥ.

ವಿಷಯಾಕಾರವಂತಿರುವ ಮಾನಸವಾದ ಸ್ವಪ್ನಪ್ರತ್ಯಯವನ್ನು[1] ಅರಿಯದಿರುವನೋ ಅನುಭವಿಸುತ್ತಿರುವದಿಲ್ಲವೋ ಎಂದರ್ಥ.

ಎಲ್ಲಿ ಹೀಗೆ ಸುಪ್ತನಾಗಿರುತ್ತಾನೋ ಆಗ ಹಿಂದೆ ಹೇಳಿದ ಸೌರತೇಜಸ್ಸಿನಿಂದ ತುಂಬಿರುವ ಈ ನಾಡಿಗಳಲ್ಲಿ ಸೇರಿಕೊಂಡು, ಒಳಹೊಕ್ಕವ(ನಾಗಿರುತ್ತಾನೆ). ನಾಡಿಗಳನ್ನು ದ್ವಾರವಾಗಿ ಮಾಡಿಕೊಂಡು ಹೃದಯಾಕಾಶವನ್ನು ಸೇರಿರುತ್ತಾನೆ ಎಂದರ್ಥ.[2] **ಸತ್ಸಂಪತ್ತಿಯಾಗದೆ ಸ್ವಪ್ನವನ್ನು ಕಾಣದೆ ಇರುವದಿಲ್ಲವಷ್ಟೆ;** ಆದ್ದರಿಂದ ನಾಡಿಗಳಲ್ಲಿ ಎಂಬೀ ಸಪ್ತಮಿಯನ್ನು (ನಾಡಿಗಳಿಂದ ಎಂದು) ತೃತೀಯಾ ವಿಭಕ್ತಿಯಾಗಿ ಮಾರ್ಪಡಿಸಿಕೊಳ್ಳಬೇಕಾಗಿದೆ.

## ಸುಷುಪ್ತಜೀವನಿಗೆ ಕರ್ಮಸಂಬಂಧವಿಲ್ಲ

(ಭಾಷ್ಯ)

೬೪೧. ತಂ ಸತಾ ಸಂಪನ್ನಂ ನ ಕಶ್ಚನ ಕಶ್ಚಿದಪಿ ಧರ್ಮಾಧರ್ಮರೂಪಃ ಪಾಪ್ಮಾ ಸ್ಪೃಶತಿ[3] । ಸ್ವರೂಪಾವಸ್ಥಿತತ್ವಾತ್ ತದಾ ಆತ್ಮನಃ । ದೇಹೇನ್ದ್ರಿಯ ವಿಶಿಷ್ಟಂ ಹಿ ಸುಖದುಃಖಕಾರ್ಯಪ್ರದಾನೇನ ಪಾಪ್ಮಾ ಸ್ಪೃಶತಿ[4] । ನ ತು ಸತ್ಸಂಪನ್ನಂ ಸ್ವರೂಪಾವಸ್ಥಂ ಕಶ್ಚಿದಪಿ ಪಾಪ್ಮಾ ಸ್ಪ್ರಷ್ಟುಮ್ ಉತ್ಸಹತೇ । ಅವಿಷಯತ್ವಾತ್ । ಅನ್ಯೋ ಹಿ ಅನ್ಯಸ್ಯ ವಿಷಯೋ ಭವತಿ, ನ ತ್ವನ್ಯತ್ವಂ ಕೇನಚಿತ್ ಕುತಶ್ಚಿದಪಿ ಸತ್ಸಂಪನ್ನಸ್ಯ । ಸ್ವರೂಪಪ್ರಚ್ಯವನಂ ತು ಆತ್ಮನೋ ಜಾಗ್ರತ್ಸ್ವಪ್ನಾವಸ್ಥಾಂ ಪ್ರತಿ ಗಮನಂ ಬಾಹ್ಯವಿಷಯಪ್ರತಿಬೋಧಃ, ಅವಿದ್ಯಾಕಾಮಕರ್ಮಬೀಜಸ್ಯ ಬ್ರಹ್ಮವಿದ್ಯಾಹುತಾಶದಾಹನಿಮಿತ್ತಮ್ ಇತ್ಯವೋಚಾಮ ಷಷ್ಠ ಏವ । ತದಿಹಾಪಿ ಪ್ರತ್ಯೇತವ್ಯಮ್ । ಯದ್ಯೈವಂ ಸುಪ್ತಃ ಸೌರೇಣ ತೇಜಸಾ ಹಿ[5] ತದಾ ನಾಡ್ಯನ್ತರ್ಗತೇನ ಸರ್ವತಃ ಸಂಪನ್ನೋ ವ್ಯಾಪ್ತೋ ಭವತಿ । ಅತೋ ವಿಶೇಷೇಣ ಚಕ್ಷುರಾದಿನಾಡೀದ್ವಾರೈರ್ಬಾಹ್ಯವಿಷಯಭೋಗಾಯ ಅಪ್ರಸೃತಾನಿ ಕರಣಾನಿ

---

1. ಸ್ವಪ್ನದಲ್ಲಿ ಅಂತಃಕರಣಪ್ರತ್ಯಯವನ್ನೇ ಸ್ವಯಂಪ್ರಕಾಶನಾದ ಆತ್ಮನು ಬೆಳಗುತ್ತಿರುತ್ತಾನೆ. ಬೃ. ಭಾ. ೪-೩-೯ (ಭಾ. ಭಾ. ೧೮೩)ನ್ನು ನೋಡಿರಿ

2. ಇಲ್ಲಿ ನಾಡೀದ್ವಾರದಿಂದ ಉತ್ಕ್ರಾಂತಿಯನ್ನು ಹೇಳಬೇಕಾಗಿರುವದರಿಂದ ನಾಡಿಗಳನ್ನು ಹೊಗಳಿದೆಯೇ ಹೊರತು ನಾಡಿಗಳಲ್ಲಿ ಸುಪ್ತನಾಗುತ್ತಾನೆ ಎಂದು ಪ್ರತಿಪಾದಿಸುವದಕ್ಕಲ್ಲ. ಸೂ. ಭಾ. ೩-೨-೭ (ಭಾ. ಭಾ. ೨೬೫) ನ್ನು ನೋಡಿರಿ. ಯಾವಾಗಲೂ ಬ್ರಹ್ಮವೇ ಆಗಿರುವ ಜೀವನಿಗೆ ಹೇಗೆ ಸುಷುಪ್ತಿಯಲ್ಲಿ ಸತ್ಸಂಪತ್ತಿ ಎಂಬುದರ ಅರ್ಥವನ್ನು ಸೂ ಭಾ. ೩-೨-೭ (ಭಾ. ಭಾ. ೨೬೬)ರಲ್ಲಿ ವಿವರಿಸಿದೆ.

3. ಇದರ ಮುಂದಿರುವ ಇತಿಶಬ್ದವು ಹೆಚ್ಚೆಂದು ಬಿಟ್ಟುಬಿಟ್ಟಿದೆ.

4. ಇಲ್ಲಿರುವ ಇತಿಯೂ ಬೇಕಿಲ್ಲ.

5. ಇಲ್ಲಿ 'ತದಾ' ಎಂಬ ಮಾತು ಬಿಟ್ಟುಹೋಗಿದೆ.

ಅಸ್ಯ ತದಾ ಭವನ್ತಿ । ತಸ್ಮಾದ್ ಅಯಂ ಕರಣಾನಾಂ ನಿರೋಧಾತ್ ಸ್ವಾತ್ಮನ್ಯೇವಾಽವಸ್ಥಿತಃ ಸ್ವಪ್ನಂ ನ ವಿಜಾನಾತೀತಿ ಯುಕ್ತಮ್ ॥

(ಭಾಷ್ಯಾರ್ಥ)

**ಆ ಸತ್ತಿನೊಡನೆ ಸಂಪನ್ನನಾದ (ಜೀವನನ್ನು) ಯಾವದೊಂದು ಒಂದಿಷ್ಟೂ ಧರ್ಮಾಧರ್ಮರೂಪವಾದ ಪಾಪವು ಸೋಂಕುವದಿಲ್ಲ; ಏಕೆಂದರೆ ಆಗ ಆತ್ಮನು ಸ್ವರೂಪದಲ್ಲಿಯೇ ಇದ್ದುಕೊಂಡಿರುತ್ತಾನೆ.** ದೇಹೇಂದ್ರಿಯಗಳಿಂದ ಕೂಡಿರುವವನನ್ನಲ್ಲವೆ, ಸುಖದುಃಖಗಳೆಂಬ ಫಲವನ್ನು ಕೊಟ್ಟು ಪಾಪವು ಸೋಂಕುತ್ತದೆ[1] ? ಇಷ್ಟೇ ಹೊರತು ಸತ್ಸಂಪನ್ನನಾಗಿ ಸ್ವರೂಪದಲ್ಲಿಯೇ ಇರುವವನನ್ನು ಯಾವದೊಂದು ಪಾಪವೂ ಸೋಂಕಲಾರದು, ಏಕೆಂದರೆ (ಅವನು ಅದಕ್ಕೆ) ವಿಷಯನಲ್ಲ (ಇದರ ವಿವರ). **ಒಬ್ಬನು ಇನ್ನೊಂದಕ್ಕೆ ವಿಷಯನಾಗಿರಬಹುದು; ಆದರೆ ಸತ್ಸಂಪನ್ನನಾಗಿರುವವನಿಗೆ ಯಾವದಕ್ಕಿಂತಲೂ ಯಾವ ಕಾರಣದಿಂದಲೂ ಅನ್ಯತ್ವವು ಇರುವದಿಲ್ಲ.[2] (ಸುಷುಪ್ತನಾದವನು ಮತ್ತೆ) ಸ್ವರೂಪದಿಂದ ಜಾರಿಬೀಳುವದು ಮಾತ್ರ ಎಂದರೆ ಜಾಗ್ರತ್ಸ್ವಪ್ನಾವಸ್ಥೆಗೆ ಬರುವದು, ಹೊರಗಿನ ವಿಷಯವನ್ನು ಅರಿಯುವದು– (ಇದು) ಅವಿದ್ಯಾಕಾಮಕರ್ಮಬೀಜವು[3] ಬ್ರಹ್ಮವಿದ್ಯೆಯೆಂಬ ಅಗ್ನಿಯಿಂದ ಸುಟ್ಟುಹೋಗದೆ ಇರುವ ನಿಮಿತ್ತದಿಂದ** ಎಂದು ಆರನೆಯ (ಪ್ರಪಾಠಕ)ದಲ್ಲಿಯೇ ಹೇಳಿರುತ್ತೇವೆ[4] ಅದನ್ನು ಇಲ್ಲಿಯೂ ತಿಳಿಯಬೇಕು.

ಯಾವಾಗ ಹೀಗೆ ಸುಪ್ತನಾಗಿರುತ್ತಾನೋ ಆಗ ನಾಡಿಯೊಳಗಿರುವ ಸೂರ್ಯನ ತೇಜಸ್ಸಿನಿಂದಲ್ಲವೆ, ಎಲ್ಲೆಲ್ಲಿಯೂ ಸಂಪನ್ನನಾಗಿ, ವ್ಯಾಪ್ತನಾಗಿ ಇರು

---

1. ದೇಹೇಂದ್ರಿಯಗಳಿಲ್ಲದೆ ಯಾವನೂ ಕರ್ಮವನ್ನು ಮಾಡಲಾರನು, ಅದರ ಫಲವನ್ನೂ ಅನುಭವಿಸಲಾರನು. ಆದ್ದರಿಂದ ಸುಷುಪ್ತಿಯಲ್ಲಿ ಕರ್ಮದ ಸೋಂಕಿಲ್ಲ.

2. ಸುಷುಪ್ತಿಯಲ್ಲಿ ಆತ್ಮನಿಗಿಂತ ಬೇರೆಯಾಗಿ ಬಿಂಗಡವಾಗಿರುವ ದ್ವಿತೀಯವಸ್ತುವೇ ಇರುವದಿಲ್ಲ ಅಲ್ಲಿ ಅಂತಃಕರಣ, ಇಂದ್ರಿಯ, ವಿಷಯ ಎಲ್ಲವೂ ಆತ್ಮನಲ್ಲಿ ಒಂದಾಗಿರುತ್ತದೆ. ಬೃ. ಭಾ ೪–೩–೨೨ (ಭಾ.ಭಾ.೨೨೬)ನ್ನು ನೋಡಿ. ಆದ್ದರಿಂದಲೂ ಸುಷುಪ್ತನಿಗೆ ಕರ್ಮದ ಸೋಂಕಿಲ್ಲ ಎಂದು ಅಭಿಪ್ರಾಯ.

3. ಅವಿದ್ಯಾಕಾಮಕರ್ಮಗಳು ಜ್ಞಾನವಾದಲ್ಲದೆ ಹೋಗಲಾರವು, ಆದ್ದರಿಂದ ಸುಷುಪ್ತಿಯಲ್ಲಿ ಅವು ಇಲ್ಲವಾದರೂ ಜೀವರಿಗೆ ಅವುಗಳು ವಾಸನಾರೂಪದಿಂದ ಇದ್ದುಕೊಂಡೇ ಇರುತ್ತವೆ ಎಂದರ್ಥ. ಇಲ್ಲಿ ಬೀಜವೆಂದರೆ 'ಮೂಲಾವಿದ್ಯೆ' ಎಂಬ ಟೀಕೆಗೆ ಭಾಷ್ಯಾಧಾರವಿರುವದಿಲ್ಲ.

4. ಸತ್ಸಂಪತ್ತಿಯಾಗಿದ್ದರೂ ತಾವು ಸದ್ರೂಪರೆಂಬುದನ್ನು ಅರಿಯದೆ ಇರುವದರಿಂದ ಜೀವರಿಗೆ ಅವಿದ್ಯಾವಾಸನೆಯು ಹಾಗೆಯೇ ಉಳಿದುಕೊಂಡಿರುವದೆಂದು ೬–೯–೩ರ (ಭಾ ಭಾ. ೫೦೮) ಭಾಷ್ಯದಲ್ಲಿ ತಿಳಿಸಿದೆ.

ತ್ತಾನೆ ? ಆದ್ದರಿಂದ[1] ಚಕ್ಷುಸ್ಸೇ ಮುಂತಾದವುಗಳ ನಾಡಿಗಳ ದ್ವಾರದಿಂದ ಹೊರಗಿನ ವಿಷಯಗಳ ಭೋಗಕ್ಕಾಗಿ ಕರಣಗಳು ಆಗ ಹೊರಟುಬರದೆ ಇರುತ್ತವೆ **ಆದ್ದರಿಂದ ಕರಣಗಳ ಉಪಸಂಹಾರವಾಗಿರುವದರಿಂದ ತನ್ನ ಆತ್ಮನಲ್ಲಿಯೇ ಇದ್ದುಕೊಂಡಿರುವದರಿಂದಲೇ ಸ್ವಪ್ನವನ್ನು ಅರಿಯದೆ ಇರುತ್ತಾನೆ ಎಂಬುದು ಯುಕ್ತವು.**[2]

## ಉಪಾಸಕನ ಉತ್ಕ್ರಾಂತಿ, ಬ್ರಹ್ಮಲೋಕಗಮನ

(ಉಪನಿಷತ್ತು)

**ಅಥ ಯತ್ರೈತದಬಲಿಮಾನಂ ನೀತೋ ಭವತಿ ತಮಭಿತ ಆಸೀನಾ ಆಹುರ್ಜಾನಾಸಿ ಮಾಂ ಜಾನಾಸಿ ಮಾಮಿತಿ ಸ ಯಾವದಸ್ಮಾಚ್ಛರೀರಾದನುತ್ಕ್ರಾನ್ತೋ ಭವತಿ ತಾವಜ್ಜಾನಾತಿ ॥ ೪ ॥**

**ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ ಸ ಓಮಿತಿ ವಾ ಹೋದ್ವಾ ಮೀಯತೇ ಸ ಯಾವತ್ ಕ್ಷಿಪ್ಯೇನ್ಮನಸ್ತಾವದಾದಿತ್ಯಂ ಗಚ್ಛತ್ಯೇತದ್ವೈ ಖಲು ಲೋಕದ್ವಾರಂ ವಿದುಷಾಂ ಪ್ರಪದನಂ ನಿರೋಧೋಽವಿದುಷಾಮ್ ॥ ೫ ॥**

೪. ಇನ್ನು ಯಾವಾಗ ಅಬಲತೆಯನ್ನು ಹೊಂದಿದವನಾಗುತ್ತಾನೋ ಆಗ ಅವನ ಸುತ್ತಲೂ ಕುಳಿತವರು 'ನನ್ನನ್ನು ಬಲ್ಲೆಯ, ನನ್ನನ್ನು ಬಲ್ಲೆಯ ?' ಎಂದು ಕೇಳುತ್ತಿರುವರು. ಅವನು ಎಲ್ಲಿಯವರೆಗೆ ಈ ಶರೀರವನ್ನು ಬಿಟ್ಟು ಉತ್ಕ್ರಾಂತನಾಗದೆ ಇರುವನೋ ಅಲ್ಲಿಯವರೆಗೆ ಅರಿಯುತ್ತಿರುತ್ತಾನೆ.

೫. ಇನ್ನು ಯಾವಾಗ ಈ ಶರೀರದಿಂದ ಉತ್ಕ್ರಾಂತನಾಗುತ್ತಾನೋ ಆಗ ಈ ರಶ್ಮಿಗಳಿಂದಲೇ ಮೇಲಕ್ಕೆ ಆಕ್ರಮಿಸುತ್ತಾನೆ. ಅವನು ಓಮ್ ಎನ್ನುತ್ತಲೋ ಮೇಲಕ್ಕೋ ಸಾಯುತ್ತಾನೆ. ಅವನು ಎಷ್ಟು

---

1. ತೇಜಸ್ಸು ಕರಣಗಳನ್ನು ಮುಸುಕಿಕೊಂಡು ಮಂಕುಮಾಡಿರುವದರಿಂದ ಎಂದರ್ಥ. ಇಲ್ಲಿ ತೇಜಸ್ಸು ಎಂದರೆ ಬ್ರಹ್ಮಚೈತನ್ಯವೇ ಎಂದೂ ಸೂ. ಭಾ. ೩-೨-೮ರಲ್ಲಿ ಮತ್ತೊಂದು ಅರ್ಥವನ್ನು ಕೊಟ್ಟಿದೆ. ಆಗ ಅದ್ವಿತೀಯವಾದ ತನ್ನ ಸ್ವರೂಪದಲ್ಲಿಯೇ ಇರುವದರಿಂದ ಕರಣವ್ಯಾಪಾರವಿರುವದಿಲ್ಲ ಎಂದರ್ಥ. ಇಲ್ಲಿ ಕೊಟ್ಟಿರುವದು ವ್ಯಾವಹಾರಿಕದೃಷ್ಟಿಯಿಂದಲೂ ಆ ಎರಡನೆಯ ಅರ್ಥವು ಪಾರಮಾರ್ಥಿಕದೃಷ್ಟಿಯಿಂದಲೂ ಸರಿ.

2. ಈ ವಾಕ್ಯವು ಎರಡು ದೃಷ್ಟಿಗಳಿಗೂ ಹೊಂದುವಂತಿದೆ. ಸೂ. ಭಾ. ೩-೨-೮ (ಭಾ. ಭಾ. ೨೬೮) ವನ್ನು ನೋಡಿ.

ಬೇಗ ಮನಸ್ಸುಹಾಕುವನೋ ಅಷ್ಟರಲ್ಲಿ ಆದಿತ್ಯನನ್ನು ಸೇರುತ್ತಾನೆ. ಈ ಲೋಕದ್ವಾರವು ಜ್ಞಾನಿಗಳಿಗೆ ಸೇರಿಸತಕ್ಕದ್ದು, ಅಜ್ಞಾನಿಗಳಿಗೆ ತಡೆಯೂ (ಆಗಿರುತ್ತದೆ)ಯಷ್ಟೆ ?

## ಉತ್ಕ್ರಾಂತಿಗೆ ಪೂರ್ವಾವಸ್ಥೆ

(ಭಾಷ್ಯ)

೬೪೨. ತತ್ರ ಏವಂ ಸತಿ ಅಥ ಯತ್ರ ಯಸ್ಮಿನ್ ಕಾಲೇ ಅಬಲಿಮಾನಮ್ ಅಬಲಭಾವಂ ದೇಹಸ್ಯ ರೋಗಾದಿನಿಮಿತ್ತಂ ಜರಾದಿನಿಮಿತ್ತಂ ವಾ ಕೃಶೀಭಾವಮೇತತ್ ನಯನಂ ನೀತಃ ಪ್ರಾಪಿತೋ ದೇವದತ್ತೋ ಭವತಿ ಮುಮೂರ್ಷುರ್ಯದಾ ಭವತೀತ್ಯರ್ಥಃ । ತಮ್ ಅಭಿತಃ ಸರ್ವತೋ ವೇಷ್ಟಯಿತ್ವಾ ಆಸೀನಾ ಜ್ಞಾತಯಃ ಆಹುಃ ಜಾನಾಸಿ ಮಾಂ ತವ ಪುತ್ರಂ ಜಾನಾಸಿ ಮಾಂ ಪಿತರಂ ಚೇತ್ಯಾದಿ । ಸ ಮುಮೂರ್ಷುಃ, ಯಾವತ್ ಅಸ್ಮಾತ್ ಶರೀರಾತ್ ಅನುತ್ಕ್ರಾಂತೋಽನಿರ್ಗತೋ ಭವತಿ ತಾವತ್ ಪುತ್ರಾದೀನ್ ಜಾನಾತಿ ॥

(ಭಾಷ್ಯಾರ್ಥ)

ಅಲ್ಲಿ ಹೀಗಿರುವಲ್ಲಿ ಇನ್ನು ಯಾವಾಗ ಯಾವ ಕಾಲದಲ್ಲಿ ಅಬಲಿತ್ವವನ್ನು ದೌರ್ಬಲ್ಯವನ್ನು ದೇಹಕ್ಕೆ ರೋಗಾದಿಗಳು ಬಂದ ನಿಮಿತ್ತದಿಂದಲೋ[1] ಮುಪ್ಪು ಮುಂತಾದವು ಬಂದದ್ದರ ನಿಮಿತ್ತದಿಂದಲೋ ಕೃಶತ್ವವನ್ನು-(ಏತತ್ ನಯನಮ್) ಹೀಗೆ ದೇವದತ್ತನು[2] ಹೊಂದಿದವನಾಗುತ್ತಾನೋ, ಎಂದರೆ ಯಾವಾಗ ಸಾಯಲಾಗುತ್ತಾನೋ ಎಂದರ್ಥ. (ಆಗ) ಅವನ ಎಲ್ಲಾ ಕಡೆಯಲ್ಲಿಯೂ ಸುತ್ತಿಕೊಂಡು ಕುಳಿತಿರುವ ಜ್ಞಾತಿಗಳು 'ನಿನ್ನ ಮಗನಾದ ನನ್ನನ್ನು ಬಲ್ಲೆಯ ?, ತಂದೆಯಾದ ನನ್ನನ್ನು ಬಲ್ಲೆಯ ? '[3] ಎಂದು ಮುಂತಾಗಿ ಕೇಳುತ್ತಿರುವರು. ಆ ಸಾಯಲಿರುವ (ಪುರುಷನು) ಎಲ್ಲಿಯವರೆಗೆ ಈ ಶರೀರದಿಂದ ಉತ್ಕ್ರಾಂತನಾಗಿರುವದಿಲ್ಲವೋ ( ಶರೀರವನ್ನು ) ಬಿಟ್ಟುಹೋಗಿರುವದಿಲ್ಲವೋ ಅಲ್ಲಿಯವರೆಗೂ ಮಗನೇ ಮುಂತಾದವರನ್ನು ಅರಿಯುತ್ತಿರುತ್ತಾನೆ.

---

1. ಶರೀರದೌರ್ಬಲ್ಯನಿಮಿತ್ತದಿಂದಲೇ ಜೀವನಿಗೆ ದೌರ್ಬಲ್ಯ, ಸ್ವತಃ ಇಲ್ಲ. ಬೃ.ಭಾ. ೪-೪-೧ (ಭಾ. ಭಾ ೨೫೨).

2. ಈ ಉತ್ಕ್ರಾಂತಿಕ್ರಮವು ಉಪಾಸಕರಿಗೂ ಮಿಕ್ಕವರಿಗೂ ಸಮಾನವಾಗಿದೆ ಎಂಬುದನ್ನು ಸೂಚಿಸುವದಕ್ಕೆ ಈ ಹೆಸರನ್ನು ಕೊಟ್ಟಿದೆ.

3. ಗುರುತಿಸಿ ಅರಿಯುತ್ತಾನೋ ಇಲ್ಲವೋ – ಎಂಬುದನ್ನು ತಿಳಿದುಕೊಳ್ಳುವದಕ್ಕೆ ಹಾಕುವ ಪ್ರಶ್ನೆಯಿದು. ೬-೧೫-೧ರ ಭಾಷ್ಯವನ್ನು ನೋಡಿರಿ.

## ಉಪಾಸಕನು ಬ್ರಹ್ಮಲೋಕಕ್ಕೆ ಹೋಗುವ ಕ್ರಮ

(ಭಾಷ್ಯ)

೬೪೩. ಅಥ ಯತ್ರ ಯದಾ ಏತದಿತಿ[1] ಕ್ರಿಯಾವಿಶೇಷಣಮ್ । ಅಸ್ಮಾತ್ ಶರೀರಾತ್ ಉತ್ಕ್ರಾಮತಿ, ಅಥ ತದಾ, ಏತೈರೇವ ಯಥೋಕ್ತಾಭಿಃ ರಶ್ಮಿಭಿಃ ಊರ್ಧ್ವಮ್ ಆಕ್ರಮತೇ ಯಥಾಕರ್ಮಜಿತಂ ಲೋಕಂ ಪ್ರತಿ ಅವಿದ್ವಾನ್ । ಇತರಸ್ತು ವಿದ್ವಾನ್ ಯಥೋಕ್ತಸಾಧನಸಂಪನ್ನಃ ಸ ಓಮಿತಿ ಓಂಕಾರೇಣ ಆತ್ಮಾನಂ ಧ್ಯಾಯನ್ ಯಥಾಪೂರ್ವಂ ವಾ ಹ ಏವ ಉದ್ವಾ ಊರ್ಧ್ವಂ ವಾ ವಿದ್ವಾಂಶ್ಚೇತ್ ಇತರಸ್ತಿರ್ಯಙ್ ವಾ ಇತ್ಯಭಿಪ್ರಾಯಃ । ಮೀಯತೇ ಪ್ರಮೀಯತೇ ಗಚ್ಛತಿ ಇತ್ಯರ್ಥಃ । ಸ ವಿದ್ವಾನ್ ಉತ್ಕ್ರಮಿಷ್ಯನ್ ಯಾವತ್ ಕ್ಷಿಪ್ಯೇನ್ಮನಃ । ಯಾವತಾ ಕಾಲೇನ ಮನಸಃ ಕ್ಷೇಪಃ ಸ್ಯಾತ್ ತಾವತಾ ಕಾಲೇನ ಆದಿತ್ಯಂ ಗಚ್ಛತಿ ಪ್ರಾಪ್ನೋತಿ । ಕ್ಷಿಪ್ರಂ ಗಚ್ಛತೀತ್ಯರ್ಥಃ । ನ ತು ತಾವತೈವ ಕಾಲೇನ ಇತಿ ವಿವಕ್ಷಿತಮ್ । ಕಿಮರ್ಥಮ್ ಆದಿತ್ಯಂ ಗಚ್ಛತೀತಿ ? ಉಚ್ಯತೇ । ಏತದ್ವೈ ಖಲು ಪ್ರಸಿದ್ಧಂ ಬ್ರಹ್ಮಲೋಕಸ್ಯ ದ್ವಾರಂ ಯ ಆದಿತ್ಯಸ್ತೇನ ದ್ವಾರಭೂತೇನ ಬ್ರಹ್ಮ ಲೋಕಂ ಗಚ್ಛತಿ ವಿದ್ವಾನ್ । ಅತೋ ವಿದುಷಾಂ ಪ್ರಪದನಮ್ । ಪ್ರಪದ್ಯತೇ ಬ್ರಹ್ಮಲೋಕಂ ಅನೇನ ದ್ವಾರೇಣೇತಿ ಪ್ರಪದನಮ್ । ನಿರೋಧನಂ ನಿರೋಧಃ ಅಸ್ಮಾತ್ ಆದಿತ್ಯಾದ್ ಅವಿದುಷಾಂ ಭವತೀತಿ ನಿರೋಧಃ । ಸೌರೇಣ ತೇಜಸಾ ದೇಹ ಏವ ನಿರುದ್ಧಾಃ ಸನ್ತೋ ಮೂರ್ಧನ್ಯಯಾ ನಾಡ್ಯಾ ನೋತ್ಕ್ರಮನ್ತ ಏವ ಇತ್ಯರ್ಥಃ । "ವಿಷ್ವಙ್ಙನ್ಯಾ" (೮-೬-೬) ಇತಿ ಶ್ಲೋಕಾತ್ ॥

(ಭಾಷ್ಯಾರ್ಥ)

ಇನ್ನು (ಯತ್ರ=ಯದಾ) ಯಾವಾಗ- (ಮೂಲದಲ್ಲಿ) ಏತತ್ (ಹೀಗೆ) ಎಂಬುದು ಕ್ರಿಯಾವಿಶೇಷಣವು- ಈ ಶರೀರದಿಂದ ಉತ್ಕ್ರಾಂತನಾಗುತ್ತಾನೋ (ಅಥ= ತದಾ) ಆಗ ಹಿಂದೆ ಹೇಳಿರುವ ಇದೇ ರಶ್ಮಿಗಳ ಮೂಲಕವಾಗಿ[2] ಮೇಲಕ್ಕೆ ಆಕ್ರಮಿಸುತ್ತಾನೆ. ಅಜ್ಞನು ತನ್ನತನ್ನ ಕರ್ಮದಿಂದ ಗೆದ್ದುಕೊಂಡ ಲೋಕವನ್ನು ಕುರಿತು ಹೋಗುತ್ತಾನೆ ; ಇನ್ನೊಬ್ಬನಾದ ಹಿಂದೆ ಹೇಳಿರುವ ಸಾಧನಯುಕ್ತನಾದ ಉಪಾಸಕನಿದ್ದಾನಲ್ಲ, ಅವನು ಓಮ್ ! ಎಂದು ಓಂಕಾರದಿಂದ ಆತ್ಮನನ್ನು ಮೊದಲಿನಂತೆಯೇ ಧ್ಯಾನಮಾಡುತ್ತಾ (ಉದ್ವಾ=ಊರ್ಧ್ವಂ) ಜ್ಞಾನಿಯಾದರೆ ಮೇಲ

---

1. 'ಏತತ್ಕ್ರಿಯಾವಿಶೇಷಣಮಿತಿ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. ರಾತ್ರಿಯಲ್ಲಿಕೂಡ ಈ ನಾಡೀರಶ್ಮಿಸಂಬಂಧವಿರುತ್ತದೆ , ಆದ್ದರಿಂದಲೇ ಮನಸ್ಸು ಮಾಡಿದಕೂಡಲೆ ಲೋಕಪ್ರಾಪ್ತಿಯಾಗುವದೆಂದಿದೆ. ಸೂ.ಭಾ. ೪-೨-೧೯ನ್ನು ನೋಡಿ.

ಕ್ಕೋ, ಮತ್ತೊಬ್ಬನಾದರೆ ಅಡ್ಡಡ್ಡಲಾಗಿಯೋ (ಮ್ರಿಯತೇ=ಪ್ರಮ್ರಿಯತೇ) ಸಾಯುತ್ತಾನೆ, ಹೋಗುತ್ತಾನೆ ಎಂದರ್ಥ.

ಆ ಜ್ಞಾನಿಯು ಉತ್ಕ್ರಾಂತನಾಗಲಿರುವಾಗ ಮನಸ್ಸನ್ನು ಎಷ್ಟುಬೇಗ ಹಾಕುವನೋ, (ಅವನ) ಮನಸ್ಸನ್ನು ಎಷ್ಟುಕಾಲದಲ್ಲಿ ಹಾಕುವದಾದೀತೋ ಅಷ್ಟುಕಾಲದೊಳಗೆ ಆದಿತ್ಯನನ್ನು ಸೇರುತ್ತಾನೆ, ಪಡೆದುಕೊಳ್ಳುತ್ತಾನೆ, ಬೇಗನೆ ಹೋಗುತ್ತಾನೆ ಎಂದರ್ಥ, ಅಷ್ಟೇ ಹೊರತು ಅಷ್ಟೇ ಕಾಲದೊಳಗೆ ಎಂಬುದೇನೂ ವಿವಕ್ಷಿತವಲ್ಲ.[1]

(ಅವನು) ಏತಕ್ಕಾಗಿ ಆದಿತ್ಯನ ಬಳಿಗೆ ಹೋಗುತ್ತಾನೆ? ಎಂದರೆ (ಶ್ರುತಿ) ಹೇಳುತ್ತಿದೆ. ಈ ಆದಿತ್ಯನಿದಾನಲ್ಲ, ಇವನೇ ಬ್ರಹ್ಮಲೋಕಕ್ಕೆ ದ್ವಾರವೆಂಬುದು ಪ್ರಸಿದ್ಧವು. ಆ ದ್ವಾರವಾಗಿರುವ (ಆದಿತ್ಯನ ಮೂಲಕವಾಗಿ) ಬ್ರಹ್ಮಲೋಕಕ್ಕೆ ಉಪಾಸಕನು ಹೋಗುತ್ತಾನೆ. ಆದ್ದರಿಂದ ಜ್ಞಾನಿಗಳಿಗೆ (ಇದು) ಪ್ರಪದನವು, ಈ ದ್ವಾರದಿಂದ ಬ್ರಹ್ಮಲೋಕವನ್ನು ಪಡೆಯಬಹುದಾದ್ದರಿಂದ (ಇದು) ಪ್ರಪದನವು, (ಸೇರಿಸತಕ್ಕದ್ದು). ಅಜ್ಞರಿಗೆ ಈ ಆದಿತ್ಯನಿಂದ ನಿರೋಧವು (ತಡೆಯು) ಆಗುತ್ತದೆಯಾದ್ದರಿಂದ ಇವನು (ಅವರಿಗೆ) ನಿರೋಧನವು, ತಡೆಯು ಸೌರ ತೇಜಸ್ಸಿನಿಂದ (ಅವರು) ದೇಹದಲ್ಲಿಯೇ ತಡೆದಿಡಲ್ಪಡುವರಾದ್ದರಿಂದ ನೆತ್ತಿಯ ನಾಡಿಯಿಂದ ಉತ್ಕ್ರಾಂತರಾಗುವದೇ ಇಲ್ಲ ಎಂದರ್ಥ.[2] "ಮಿಕ್ಕವು ಎಲ್ಲಾ ಕಡೆಯಲ್ಲಿಯೂ (ಉತ್ಕ್ರಾಂತಿಗೆ ದ್ವಾರಗಳಾಗಿರುವವು)" ಎಂಬ (ಮುಂದಿನ) ಶ್ಲೋಕ(ವಾಕ್ಯದಿಂದ ಇದು ಸಿದ್ಧವಾಗುತ್ತದೆ).[3]

---

1. ದಹರೋಪಾಸಕರೂ ಅರ್ಚಿರಾದಿಮಾರ್ಗದಿಂದಲೇ ಹೋಗುತ್ತಾರೆ. ಆದ್ದರಿಂದ ಬೇಗನೆ ಎಂದೇ ಅರ್ಥಮಾಡಬೇಕು. ಹಾಗಿಲ್ಲದಿದ್ದರೆ 'ಏತೈರೇವ' ಎಂಬ ವಾಕ್ಯವು ರಶ್ಮಿಗಳನ್ನನುಸರಿಸಿ ಹೋಗುತ್ತಾರೆಂಬುದನ್ನು ಹೇಳುವದಲ್ಲದೆ ರಶ್ಮಿಗಳು ಅವಶ್ಯವೆನ್ನುವದು, ಅರ್ಚಿರಾದಿಗಳು ಇಲ್ಲವೆನ್ನುವದು– ಎಂಬ ಎರಡು ಕಾರ್ಯವನ್ನು ಒಂದೇ ವಾಕ್ಯಕ್ಕೆ ಹೇಳಬೇಕಾಗುತ್ತದೆ. ಸೂ. ಭಾ. ೪–೩–೧.

2. ಆದಿತ್ಯನು ಅವರಿಗೆ ತಡೆಯೆಂದದ್ದರಿಂದ ಆದಿತ್ಯಲೋಕದವರೆಗೂ ಅವರು ಹೋಗುವರೆಂಬ ಅಭಿಪ್ರಾಯವೇನೂ ಇಲ್ಲ. ಸೂರ್ಯನ ರಶ್ಮಿಗಳೇ ಆ ಮಾರ್ಗಕ್ಕೆ ಅವರು ಹೋಗದಂತೆ ತಡೆಗಟ್ಟುತ್ತವೆ ಎಂದು ಅರ್ಥ.

3. ಈ ಶ್ಲೋಕದಲ್ಲಿ ಮಿಕ್ಕವರಿಗೆ ಸುಷುಮ್ನಾನಾಡಿಯಿಂದ ಗಮನವೇ ಇಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟಿದೆ. ಆದ್ದರಿಂದ ವಾಕ್ಯಶೇಷದಿಂದಲೇ ಅಜ್ಞರಿಗೆ ಆದಿತ್ಯಪ್ರಾಪ್ತಿಯಿಲ್ಲವೆಂಬುದು ಸಿದ್ಧವಾಗುತ್ತದೆ ಎಂದು ಭಾವ.

# ಉಪಾಸಕರಿಗೆ ಸುಷುಮ್ನಾನಾಡಿಯಿಂದ ಗತಿ

(ಉಪನಿಷತ್ತು)

**ತದೇಷ ಶ್ಲೋಕಃ—**

**ಶತಂ ಚೈಕಾ ಚ ಹೃದಯಸ್ಯ ನಾಡ್ಯ-**
**ಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತ್ಯುತ್ಕ್ರಮಣೇ ಭವನ್ತಿ ॥೬**

೬. ಅಲ್ಲಿ ಈ ಶ್ಲೋಕವು: "ನೂರೂ ಒಂದೂ ಹೃದಯದ ನಾಡಿಗಳು. ಅವುಗಳಲ್ಲಿ ಒಂದು ನೆತ್ತಿಯನ್ನು ಒಡೆದುಕೊಂಡು ಹೊರಟಿರುತ್ತದೆ. ಅದರಿಂದ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುವನು ; ಮಿಕ್ಕವು ಎಲ್ಲಾ ಕಡೆಯಲ್ಲಿಯೂ ಉತ್ಕ್ರಮಣಕ್ಕೆ ಆಗುವವು, ಉತ್ಕ್ರಮಣಕ್ಕೆ ಆಗುವವು."

## ಸುಷುಮ್ನಾನಾಡಿಯೊಂದೇ ಅಮೃತತ್ವನಾಡಿ

(ಭಾಷ್ಯ)

೬೪೪ ತತ್ ಏತಸ್ಮಿನ್ ಯಥೋಕ್ತೇಽರ್ಥೇ ಏಷ ಶ್ಲೋಕೋ ಮನ್ತ್ರೋ ಭವತಿ । ಶತಂ ಚ ಏಕಾ ಚ । ಏಕೋತ್ತರಶತಂ ನಾಡ್ಯಃ ಹೃದಯಸ್ಯ ಮಾಂಸಪಿಣ್ಡಭೂತಸ್ಯ ಸಂಬನ್ಧಿನ್ಯಃ ಪ್ರಧಾನತೋ ಭವನ್ತಿ । ಅನನ್ತ್ಯಾದ್ ದೇಹನಾಡೀನಾಮ್ । ತಾಸಾಮ್ ಏಕಾ ಮೂರ್ಧಾನಮ್ ಅಭಿನಿಃಸೃತಾ ವಿನಿರ್ಗತಾ । ತಯಾ ಊರ್ಧ್ವಮ್ ಆಯನ್ ಗಚ್ಛನ್ ಅಮೃತತ್ವಮ್ ಅಮೃತಭಾವಮ್ ಏತಿ । ವಿಷ್ವಙ್ ನಾನಾಗತಯಃ ತಿರ್ಯಗ್ವಿಸರ್ಪಿಣ್ಯಃ ಊರ್ಧ್ವಗಾಶ್ಚ ಅನ್ಯಾ ನಾಡ್ಯೋ ಭವನ್ತಿ ಸಂಸಾರಗಮನದ್ವಾರಭೂತಾ ನ ತು ಅಮೃತತ್ವಾಯ, ಕಿಂ ತರ್ಹಿ ಉತ್ಕ್ರಮಣೇ ಏವ, ಉತ್ಕ್ರಾನ್ತ್ಯರ್ಥಮೇವ ಭವನ್ತಿ ಇತ್ಯರ್ಥಃ । ದ್ವಿರಭ್ಯಾಸಃ ಪ್ರಕರಣಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಅಲ್ಲಿ ಈ ಹಿಂದೆ ಹೇಳಿದ ಅರ್ಥದಲ್ಲಿ ಈ ಶ್ಲೋಕವು ಮಂತ್ರವು ಇದೆ: ನೂರೂ ಒಂದೂ– ನೂರೊಂದು– ನಾಡಿಗಳು ಮಾಂಸಪಿಂಡವಾದ ಹೃದಯದ ಸಂಬಂಧಿಗಳಾದ ನಾಡಿಗಳು ಪ್ರಧಾನವಾಗಿರುವವು (ಎಂದರ್ಥ), ಏಕೆಂದರೆ ದೇಹನಾಡಿಗಳು ಅನಂತ(ವಾಗಿವೆ). ಆ (ನಾಡಿಗಳೊಳಗೆ) ಒಂದು ನೆತ್ತಿಯನ್ನು ಒಡೆದು

ಕೊಂಡು (ಅಭಿನಿಃಸೃತಾ=ವಿನಿರ್ಗತಾ) ಹೊರಹೊರಟಿದೆ. ಆ (ನಾಡಿ)ಯಿಂದ ಮೇಲಕ್ಕೆ (ಆಯನ್=ಗಚ್ಛನ್) ಹೋಗುವವನು ಅಮೃತತ್ವವನ್ನು ಅಮೃತಭಾವ ವನ್ನು ಹೊಂದುತ್ತಾನೆ. ಎಲ್ಲಾ ಕಡೆಗೂ ಬೇರೆಬೇರೆ ಗತಿಗಳುಳ್ಳ ಅಡ್ಡಡ್ಡಲಾಗಿ ಹಾದಿರುವ, ಮೇಲಕ್ಕೂ ಹೋಗಿರುವ ಮಿಕ್ಕ ನಾಡಿಗಳು ಸಂಸಾರಗಮನಕ್ಕೆ ದ್ವಾರ ವಾದ (ನಾಡಿಗಳೇ ಹೊರತು) ಅಮೃತತ್ವಕ್ಕೆ (ದ್ವಾರ)ಗಳಲ್ಲ ಮತ್ತೇನೆಂದರೆ ಉತ್ಕ್ರಾಂತಿಗೆ (ಬರಿಯ) ಉತ್ಕ್ರಾಂತಿಗಾಗಿಯೇ (ಅವು) ಇರುತ್ತವೆ ಎಂದರ್ಥ. ('ಉತ್ಕ್ರಮಣೇ ಭವನ್ತಿ ಎಂದು) ಎರಡು ಸಲ (ಹೇಳಿರುವದು ಈ) ಪ್ರಕರಣವು ಮುಗಿಯಿತು (ಎಂದು ತಿಳಿಸುವದಕ್ಕೆ).

---

# ಎಂಟನೆಯ ಅಧ್ಯಾಯದ ಒಂದರಿಂದ ಆರರವರೆಗಿನ ಖಂಡಗಳ ಸಾರ

ಈ ಗ್ರಂಥಭಾಗದಲ್ಲಿ ದಹರವಿದ್ಯೆಯನ್ನು ವರ್ಣಿಸಿದೆ

## ಒಂದನೆಯ ಖಂಡ

ಈ ಬ್ರಹ್ಮಪುರವಾದ ದೇಹದಲ್ಲಿ ದಹರವಾದ ಪುಂಡರೀಕವೆಂಬ ಮನೆಯಿದೆ, ಅದರೊಳಗಿನ ದಹರಾಕಾಶದಲ್ಲಿ ಯಾವದಿದೆಯೋ ಅದನ್ನು ಹುಡುಕಿ ಅರಿತುಕೊಳ್ಳಬೇಕು "ಇದರಲ್ಲಿ ಅರಿತು ಕೊಳ್ಳತಕ್ಕದ್ದೇನಿದೆ ? " ಎಂದು ಶಿಷ್ಯರು ಕೇಳಿದರೆ "ಹೊರಗಿರುವ ಆಕಾಶದಷ್ಟು ಆ ಆಕಾಶ ವಿದೆ. ಅದರಲ್ಲಿ ದ್ಯಾವಾಪೃಥಿವಿಗಳು, ಅಗ್ನಿವಾಯುಗಳು, ಸೂರ್ಯಾಚಂದ್ರಮಸರು, ಮಿಂಚು ನಕ್ಷತ್ರಗಳು, ಮಿಕ್ಕದ್ದೆಲ್ಲವೂ ಅದರೊಳಗೆ ಇದ್ದುಕೊಂಡಿರುವದು" ಎಂದು ಆಚಾರ್ಯನು ಹೇಳ ಬೇಕು.

"ಈ ದೇಹದಲ್ಲಿ ಎಲ್ಲವೂ, ಎಲ್ಲಾ ಭೂತಗಳೂ ಎಲ್ಲಾ ಕಾಮುಗಳೂ ಇರುವದಾದರೆ ಇವಕ್ಕೆ ಮುಪ್ಪಾಗಲಿ ಸಾವಾಗಲಿ ಬಂದರೆ ಆಮೇಲೆ ಏನೂ ಉಳಿಯುವದಿಲ್ಲವಲ್ಲ ! " ಎಂದು ಅವರು ಕೇಳಬಹುದು. "ಇದರ ಮುಪ್ಪಿನಿಂದ ಅದಕ್ಕೆ ಮುಪ್ಪಿಲ್ಲ, ಇದರ ಸಾವಿನಿಂದ ಅದಕ್ಕೆ ಅದಕ್ಕೆ ಸಾವಿಲ್ಲ, ಅದರಲ್ಲಿ ಕಾಮುಗಳೆಲ್ಲವೂ ಇರುತ್ತವೆ. ಅದೇ ಎಲ್ಲರ ಆತ್ಮನು, ಅಪಹತ ಪಾಪ್ಮನು, ವಿಜರನು, ವಿಮೃತ್ಯು, ವಿಶೋಕನು, ಹಸಿವಿಲ್ಲದವನು, ಬಾಯಾರಿಕೆಯಿಲ್ಲದವನು ; ಸತ್ಯಕಾಮನು, ಸತ್ಯಸಂಕಲ್ಪನು ಈ ಆತ್ಮನನ್ನು ಅರಿತುಕೊಳ್ಳದವರು ಪರವಶರಾಗಿ ತಮ್ಮ ಕರ್ಮಫಲವನ್ನು ಅನುಭವಿಸುತ್ತಿರುವರು. ಈ ಲೋಕದಲ್ಲಿ ಕರ್ಮದ ಫಲವು ನಾಶವಾಗುವಂತೆ ಸ್ವರ್ಗಾದಿಪುಣ್ಯಫಲವೂ ನಾಶವಾಗುವದು. ಆದರೆ ಯಾರು ಈ ಆತ್ಮನನ್ನು ಉಪಾಸನೆಮಾಡಿ ದೇಹವನ್ನು ಬಿಡುವರೋ ಅವರಿಗೆ ಸರ್ವಕಾಮುಗಳೂ ಇಚ್ಛಾನುಸಾರವಾಗಿ ದೊರೆಯುವವು" ಎನ್ನಬೇಕು.

## ಎರಡನೆಯ ಖಂಡ

ಈ ಉಪಾಸಕನಿಗೆ ಪಿತೃಲೋಕ, ಮಾತೃಲೋಕ, ಭ್ರಾತೃಲೋಕ, ಸ್ವಸೃಲೋಕ, ಗಂಧ ಮಾಲ್ಯಲೋಕ, ಗೀತವಾದಿತ್ರಲೋಕ, ಸ್ತ್ರೀಲೋಕ– ಹೀಗೆ ಯಾವಯಾವದರ ಇಚ್ಛೆಯುಂಟಾ ದರೂ ಅದದು ಅವನಿಗೆ ಸಂಕಲ್ಪಮಾತ್ರದಿಂದಲೇ ಎದುರಿಗೆ ಬಂದು ನಿಲ್ಲುವದು. ಅದರ ಭೋಗ ದಿಂದ ಅವನು ಪೂಜ್ಯನೂ ಮಹಿಮಾವಂತನೂ ಆಗುವನು.

## ಮೂರನೆಯ ಖಂಡ

ಈ ಆತ್ಮನಲ್ಲಿರುವ ಸತ್ಯಕಾಮುಗಳಿಗೆ ವಿಷಯತೃಷ್ಣೆ ಎಂಬ ಅನೃತವೇ ಮುಸುಕು. ಆ ಅನೃತಕ್ಕೆ ವಶರಾದವರಿಗೆ ಆ ಕಾಮುಗಳು ಹೋದರೆ ಮತ್ತೆ ಸಿಗದೆ ಇರುವವು. ಆದರೆ ಈ

ಹಿಂದೆ ಹೇಳಿದ ರೀತಿಯಿಂದ ಉಪಾಸನೆಮಾಡಿದವರಿಗೆ ಅವೆಲ್ಲವೂ ದೊರಕುವವು. ಅರಿಯದವರು ಚಿನ್ನದ ನಿಕ್ಷೇಪವಿರುವ ನೆಲದ ಮೇಲೆಯೇ ಓಡಾಡುತ್ತಿದ್ದರೂ ಅದು ಅವರಿಗೆ ಸಿಕ್ಕದೆ ಇರುವಂತೆ ಮಿಕ್ಕ ಜೀವರು ಪ್ರತಿದಿನವೂ ಸುಷುಪ್ತಿಕಾಲದಲ್ಲಿ ಈ ಬ್ರಹ್ಮವನ್ನು ಸೇರುತ್ತಿದ್ದರೂ ಅದನ್ನು ಪಡೆಯದೆ ಇರುವರು, ಏಕೆಂದರೆ ಅವರನ್ನು ಹಿಂದೆ ಹೇಳಿದ ತೃಷ್ಣಾರೂಪವಾದ ಅನೃತವು ಹೊರಕ್ಕೆ ದಬ್ಬುವದು.

ಈ ಅಪಹತಪಾಪ್ಮತ್ವವೇ ಮುಂತಾದ ಗುಣಗಳಿಂದೊಡಗೂಡಿದ ಆತ್ಮನು ಹೃದಯದಲ್ಲಿರುತ್ತಾನೆ ಆದ್ದರಿಂದ ಅವನಿಗೆ 'ಹೃದಯಮ್' (ಹೃದಯದಲ್ಲಿ ಇವನು) ಎಂಬುದೇ ನಿರ್ವಚನವು. ಹೀಗೆಂದರಿತವನು ದಿನದಿನವೂ ಸುಷುಪ್ತಿಕಾಲದಲ್ಲಿ ಈ ದಹರಾಕಾಶವೆಂಬ ಸ್ವರ್ಗಲೋಕಕ್ಕೆ ಹೋಗುತ್ತಿರುವನು. ಹೀಗೆ ಸುಷುಪ್ತಿಯಲ್ಲಿ ಬ್ರಹ್ಮವನ್ನು ಪಡೆಯುವ ಈ ಸಂಪ್ರಸಾದನು ಈ ಸಂಸಾರವನ್ನು ಬಿಟ್ಟೆದ್ದು ಶರೀರಾಭಿಮಾನವನ್ನು ಬಿಟ್ಟು ತನ್ನ ರೂಪದಿಂದ ನಿಲ್ಲುವನು, ಇವನೇ ಆತ್ಮನು- ಎಂಬುದು ಗುರುವಚನವು ಇದೇ ಅಮೃತವು, ಅಭಯವು, ಇದೇ ಬ್ರಹ್ಮವು.

ಈ ಬ್ರಹ್ಮಕ್ಕೆ 'ಸತ್ಯ' ಎಂಬುದು ನಾಮವು ಸ, ತ್, ಯ- ಎಂಬ ಮೂರಕ್ಷರಗಳೊಳಗೆ ಸತ್ ಎಂಬುದು ಅಮೃತವು, ತ್ ಎಂಬುದು ಮರ್ತ್ಯವು, ಯ ಎಂಬುದು ಇವೆರಡನ್ನೂ ಕೂಡಿಸಿಡುವದು. ಹೀಗೆ ಸತ್ಯವೆಂಬ ನಾಮವುಳ್ಳ ಬ್ರಹ್ಮವನ್ನು ತಿಳಿದವನು ದಿನದಿನವೂ ಸುಷುಪ್ತಿಯಲ್ಲಿ ಸ್ವರ್ಗಲೋಕಕ್ಕೆ ಹೋಗುತ್ತಿರುತ್ತಾನೆ

## ನಾಲ್ಕನೆಯ ಖಂಡ

ಈ ಆತ್ಮನು ಸೇತು ವಿಧೃತಿಯು, ಈ ಲೋಕಗಳು ನಾಶವಾಗದಂತೆ ನೋಡಿಕೊಳ್ಳುವ ಕರ್ಮಫಲದಾತೃವು ಈ ಸೇತುವನ್ನು ಅಹೋರಾತ್ರಗಳು ಮುಟ್ಟವು, ಜರಾಮೃತ್ಯುಗಳಾಗಲಿ ಶೋಕವಾಗಲಿ ಸುಕೃತದುಷ್ಕೃತಗಳಾಗಲಿ ಸೋಂಕವು. ಇದರಿಂದಿಚೇಗೇ ಎಲ್ಲಾ ಪಾಪಗಳೂ ಸರಿಯುತ್ತವೆ. ಏಕೆಂದರೆ ಇದು ಅಪಹತಪಾಪ್ಮವಾದ ಬ್ರಹ್ಮಲೋಕವು.

ಈ ಸೇತುವನ್ನು ಮುಟ್ಟಿದ ಕುರುಡನು ಇನ್ನು ಕುರುಡನಲ್ಲ, ಗಾಯಗೊಂಡವನು ಗಾಯಗೊಂಡವನಲ್ಲ, ನರಳುವವನು ನರಳುವವನಲ್ಲ ಆದ್ದರಿಂದ ಈ ಸೇತುವನ್ನು ಮುಟ್ಟಿದರೆ ರಾತ್ರಿಯೂ ಹಗಲೇ ಆಗುತ್ತದೆ. ಈ ಬ್ರಹ್ಮಲೋಕವು ಎಂದೆಂದಿಗೂ ಬೆಳಗುತ್ತಲೇ ಇರುವದು.

ಈ ಬ್ರಹ್ಮಲೋಕವನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುವವರಿಗೇ ದಕ್ಕುವದು ಅವರಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುವದು.

## ಐದನೆಯ ಖಂಡ

ಯಜ್ಞವೆಂಬುದು ಬ್ರಹ್ಮಚರ್ಯವೇ; ಏಕೆಂದರೆ ಯಾವನು ಜ್ಞಾತೃವೋ ಆ ಲೋಕವನ್ನು ಮುಟ್ಟುತ್ತಾನೆ. ಇಷ್ಟವೆಂಬುದೂ ಬ್ರಹ್ಮಚರ್ಯವೇ, ಏಕೆಂದರೆ ಬ್ರಹ್ಮಚರ್ಯದಿಂದ ಯಜನಮಾಡಿಯೇ ಅದನ್ನು ಪಡೆಯುತ್ತಾರೆ. ಸತ್ರಾಯಣವೆಂಬುದೂ ಬ್ರಹ್ಮಚರ್ಯವೇ; ಏಕೆಂದರೆ ಸತ್ತೆಂದರೆ ಪರಮಾತ್ಮನು ಆ ಪರಮಾತ್ಮನಿಂದ ತನ್ನನ್ನು ತ್ರಾಣಮಾಡಿಕೊಳ್ಳುವದು (ಕಾಪಾಡುವಿಕೆ) ಬ್ರಹ್ಮಚರ್ಯದಿಂದಲೇ. ಮೌನವೆಂಬುದೂ ಬ್ರಹ್ಮಚರ್ಯೆಯೇ; ಏಕೆಂದರೆ ಆತ್ಮನನ್ನು ತಿಳಿದುಕೊಂಡು ಮನನಮಾಡುವದಕ್ಕೆ ಬ್ರಹ್ಮಚರ್ಯವೇ ಸಾಧನ. ಅನಾಶಕಾಯನ

ವೆಂಬುದೂ ಬ್ರಹ್ಮಚರ್ಯೆಯೇ, ಏಕೆಂದರೆ ಬ್ರಹ್ಮಚರ್ಯದಿಂದ ಪಡೆದುಕೊಂಡ ಆತ್ಮಸ್ವರೂಪವು ನಾಶವಾಗುವದಿಲ್ಲ.

ಬ್ರಹ್ಮಲೋಕದಲ್ಲಿ ಅರ, ಣ್ಯ- ಎಂಬ ಸರೋವರಗಳು, ಊಟಮಾಡಿದವರಿಗೆ ಮದವನ್ನುಂಟುಮಾಡುವ ಐರಂಮದೀಯಸರೋವರ, ಸೋಮಾಮೃತವನ್ನು ಸುರಿಸುವ ಅಶ್ವತ್ಥವೃಕ್ಷ, ಬ್ರಹ್ಮಚರ್ಯೆಯಿಲ್ಲದವರಿಗೆ ದೊರಕದ ಅಪರಾಜಿತಪುರ, ಬ್ರಹ್ಮನು ನಿರ್ಮಿಸಿಕೊಂಡಿರುವ ಹಿರಣ್ಮಯಮಂಡಪ- ಇವೆಲ್ಲ ಇರುತ್ತವೆ ಈ ಭೋಗಸಾಮಗ್ರಿಗಳಿಂದ ಕೂಡಿರುವ ಬ್ರಹ್ಮಲೋಕವು ಬ್ರಹ್ಮಚರ್ಯೆಯುಳ್ಳ ಉಪಾಸಕರಿಗೇ ದೊರಕುವದು , ಅವರಿಗೆ ಸರ್ವಸ್ವಾತಂತ್ರ್ಯವೂ ಇರುವದು.

## ಆರನೆಯ ಖಂಡ

ಹೃದಯದಿಂದ ಬಗೆಬಗೆಯ ಬಣ್ಣದ ರಸಗಳು ಹರಿಯುವ ನಾಡಿಗಳು ಹೊರಟಿವೆ ಅವಕ್ಕೆ ಬಗೆಬಗೆಯ ಬಣ್ಣಗಳುಳ್ಳ ಸೂರ್ಯನ ಸಂಬಂಧವಿದೆ. ಊರಿಂದೂರಿಗೆ ಹೋಗುವ ದೊಡ್ಡ ರಸ್ತೆಯ ಹಾಗೆ ಸೂರ್ಯರಶ್ಮಿಗಳು ಹೃದಯವನ್ನೂ ಸೂರ್ಯನನ್ನೂ ಕೂಡಿಸುತ್ತವೆ. ಸುಷುಪ್ತನಾಗಿರುವಾಗ ಈ ನಾಡಿಗಳಲ್ಲಿ ಜೀವನು ಹೊಕ್ಕು ಅವುಗಳ ಮೂಲಕ ಪರಮಾತ್ಮನಲ್ಲಿ ಒಂದಾಗುತ್ತಾನೆ. ಆದ್ದರಿಂದ ಅಲ್ಲಿ ಅವನಿಗೆ ಯಾವ ಕರ್ಮವೂ ಅಂಟುವದಿಲ್ಲ.

ಶರೀರದೌರ್ಬಲ್ಯದಿಂದ ಮನುಷ್ಯನು ಸಾಯುವ ಕಾಲವು ಬರಲು ಆಗ ಈ ಉಪಾಸಕನು ಮೇಲೆ ಹೇಳಿದ ರಶ್ಮಿಗಳಿಂದ ಹೊರಟು ದಹರಾಕಾಶರೂಪಿಯಾದ ಪರಮೇಶ್ವರನನ್ನೇ ಧ್ಯಾನಿಸುತ್ತಾ ಅರ್ಚಿರಾದಿಮಾರ್ಗದಿಂದ ಹೊರಟು ಆದಿತ್ಯನ ಮೂಲಕ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಹೃದಯದಿಂದ ಅನೇಕನಾಡಿಗಳು ಹೊರಟಿವೆ. ಅವುಗಳಲ್ಲಿ ಸುಷುಮ್ನೆ ಎಂಬ ನಾಡಿಯು ನೆತ್ತಿಯನ್ನು ಒಡೆದುಕೊಂಡು ಹೊರಕ್ಕೆ ಬಂದಿರುವದು. ಅದರ ಮೂಲಕ ಸಾಧಕನಾದ ದಹರಬ್ರಹ್ಮೋಪಾಸಕನು ಹೋಗಿ ಬ್ರಹ್ಮಲೋಕವನ್ನು ಸೇರುತ್ತಾನೆ ಉಳಿದ ನಾಡಿಗಳಿಂದ ಉತ್ಕ್ರಾಂತರಾಗುವ ಮಿಕ್ಕವರೆಲ್ಲರಿಗೂ ಸಂಸಾರಗತಿಯೇ ಆಗುವದು.

# ಎಂಟನೆಯ ಅಧ್ಯಾಯ-ಏಳನೆಯ ಖಂಡ

## (ಅವಸ್ಥಾತ್ರಯನಿರೂಪಣದಿಂದ ಆತ್ಮತತ್ತ್ವನಿರ್ಧಾರಣ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೬೪೫. "ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ ಬ್ರಹ್ಮ" (೮-೩-೪) ಇತ್ಯುಕ್ತಮ್ . ತತ್ರ ಕೋಽಸೌ ಸಂಪ್ರಸಾದಃ ? ಕಥಂ ವಾ ತಸ್ಯಾಧಿಗಮೋ ಯಥಾ ಸೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಯೇನ ಸ್ವರೂಪೇಣಾಭಿನಿಷ್ಪದ್ಯತೇ ಸ ಕಿಂಲಕ್ಷಣ ಆತ್ಮಾ ? ಸಂಪ್ರಸಾದಸ್ಯ ಚ ದೇಹಸಂಬನ್ಧೀನಿ ಪರರೂಪಾಣಿ, ತತೋ ಯದನ್ಯತ್ ಕಥಂ ಸ್ವರೂಪಮ್ ? ಇತ್ಯೇತೇಽರ್ಥಾ ವಕ್ತವ್ಯಾಃ ಇತ್ಯುತ್ತರೋ ಗ್ರನ್ಥ ಆರಭ್ಯತೇ । ಆಖ್ಯಾಯಿಕಾ ತು ವಿದ್ಯಾಗ್ರಹಣಸಂಪ್ರದಾನವಿಧಿಪ್ರದರ್ಶನಾರ್ಥಾ ವಿದ್ಯಾಸ್ತುತ್ಯರ್ಥಾ ಚ ರಾಜಸೇವಿತಂ ಪಾನೀಯಮ್ ಇತಿವತ್ ॥

(ಭಾಷ್ಯಾರ್ಥ)

"ಇನ್ನು ಈ ಸಂಪ್ರಸಾದನಿದ್ದಾನಲ್ಲ, (ಅವನು) ಈ ಶರೀರದಿಂದ ಎದ್ದು ಪರಂಜ್ಯೋತಿಯನ್ನು ಸೇರಿ ಸ್ವವಾದ[1] ರೂಪದಿಂದ ಸಿದ್ಧನಾಗುತ್ತಾನೆ. ಇವನೇ ಆತ್ಮನು , ಇದೇ ಅಮೃತವು, ಅಭಯವು. ಇದು ಬ್ರಹ್ಮವು'' (೮-೩-೪) ಎಂದು ಹಿಂದೆ ಹೇಳಿರುತ್ತದೆ. ಅಲ್ಲಿ ಈ ಸಂಪ್ರಸಾದನೆಂಬುವನು ಯಾರು ? ಅವನು ಈ ಶರೀರದಿಂದ ಎದ್ದು ಪರಂಜ್ಯೋತಿಯನ್ನು ಸೇರಿ ಸ್ವವಾದ ರೂಪದಿಂದ ಸಿದ್ಧನಾಗುವಂತೆ, ಅವನನ್ನು ಅರಿತುಕೊಳ್ಳುವದು ಹೇಗೆ ? ಯಾವ ಸ್ವರೂಪದಿಂದ ಸಿದ್ಧನಾಗುತ್ತಾನೋ ಆ ಆತ್ಮನು ಎಂಥ ಸ್ವರೂಪದವನು ? ಮತ್ತು ಸಂಪ್ರಸಾದನಿಗೆ ದೇಹಸಂಬಂಧವುಳ್ಳವು ಪರರೂಪಗಳಷ್ಟೆ, ಅವಕ್ಕಿಂತ ಬೇರೆಯಾದದು ಸ್ವರೂಪವೆಂಬುದು ಹೇಗೆ ? ಎಂಬೀ ಅರ್ಥಗಳನ್ನು ಹೇಳಬೇಕೆಂದು ಮುಂದಿನ ಗ್ರಂಥವನ್ನು ಆರಂಭಿಸಿರುತ್ತದೆ (ಇಲ್ಲಿ ಹೇಳಿರುವ) ಕಥೆಯಾದರೋ ವಿದ್ಯೆಯನ್ನು

---

1. ಸ್ವರೂಪವೇ ಆದ ಎಂದರ್ಥ, ಸ್ವಂತವಾದ, ತನ್ನದಾದ ಎಂದಲ್ಲ ; ಏಕೆಂದರೆ ಯಾವವನ್ನು ಪಡೆದುಕೊಳ್ಳುತ್ತಾನೋ ಅವೆಲ್ಲ ಸ್ವಂತವೇ, ತನ್ನದೇ. ಸೂ. ಭಾ. ೪-೪-೧ (ಭಾ ಫಾ ೫೯೧)ನ್ನು ನೋಡಿ

ಸ್ವೀಕರಿಸುವ ಬಗೆ, (ಮತ್ತು ಹೇಳಿ)ಕೊಡುವ ರೀತಿ– ಇವುಗಳನ್ನು ತಿಳಿಸುವದಕ್ಕೆ, ಮತ್ತು 'ಈ ನೀರು ರಾಜರು ಸೇವಿಸಿದ್ದು' ಎಂಬಂತೆ ವಿದ್ಯೆಯನ್ನು ಹೊಗಳುವದಕ್ಕೆ.

## ಪ್ರಜಾಪತಿಯು ಆತ್ಮಜ್ಞಾನಫಲವನ್ನು ಹೇಳಿದ್ದು

(ಉಪನಿಷತ್ತು)

**ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸವಿಜಿಜ್ಞಾಸಿತವ್ಯಃ ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಗ್‌ಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ॥ ೧ ॥**

೧. ಯಾವ ಆತ್ಮನು ಅಪಹತಪಾಪ್ಮನೂ ವಿಜರನೂ ವಿಮೃತ್ಯುವೂ ವಿಶೋಕನೂ ಹಸಿವಿಲ್ಲದವನೂ ಬಾಯಾರಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೋ ಅವನನ್ನು ಅನ್ವೇಷಣ ಮಾಡಬೇಕು, ಅವನನ್ನೇ ವಿಜಿಜ್ಞಾಸೆಮಾಡಬೇಕು. ಯಾವಾತನು ಆ ಆತ್ಮನನ್ನು ಅನುವೇದನಮಾಡಿಕೊಂಡು ಅರಿತುಕೊಳ್ಳುವನೋ ಅವನು ಸರ್ವಲೋಕಗಳನ್ನೂ ಪಡೆದುಕೊಳ್ಳುತ್ತಾನೆ, ಸರ್ವಕಾಮಗಳನ್ನೂ (ಪಡೆದುಕೊಳ್ಳುತ್ತಾನೆ)- ಎಂದು ಪ್ರಜಾಪತಿಯು ಹೇಳಿದನಂತೆ.

### ಆತ್ಮಲಕ್ಷಣ

(ಭಾಷ್ಯ)

೬೪೬. ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸಃ ಅಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ, ಯಸ್ಯೋಪಾಸನಾಯ ಉಪಲಬ್ಧ್ಯರ್ಥಂ ಹೃದಯಪುಣ್ಡರೀಕಮಭಿಹಿತಮ್, ಯಸ್ಮಿನ್ ಕಾಮಾಃ ಸಮಾಹಿತಾಃ ಸತ್ಯಾ ಅನೃತಾಪಿಧಾನಾಃ, ಯದುಪಾಸನಸಹಭಾವಿ ಬ್ರಹ್ಮಚರ್ಯಂ ಸಾಧನಮ್ ಉಕ್ತಮ್, ಉಪಾಸನಫಲಭೂತಕಾಮಪ್ರತಿಪತ್ತಯೇ ಚ ಮೂರ್ಧನ್ಯಯಾ ನಾಡ್ಯಾ ಗತಿರಭಿಹಿತಾ ಸೋಽನ್ವೇಷ್ಟವ್ಯಃ ಶಾಸ್ತ್ರಾಚಾರ್ಯೋಪದೇಶೈರ್ಜ್ಞಾತವ್ಯಃ । ಸ ವಿಶೇಷೇಣ ಜ್ಞಾತುಮೇಷ್ಟವ್ಯೋ ವಿಜಿಜ್ಞಾಸಿತವ್ಯಃ । ಸ್ವಸಂವೇದ್ಯತಾಮ್ ಆಪಾದಯಿತವ್ಯಃ ॥

(ಭಾಷ್ಯಾರ್ಥ)

ಯಾವ ಆತ್ಮನು ಅಪಹತಪಾಪ್ಮನೋ, ಮುಪ್ಪಿಲ್ಲದವನೋ ಸಾವಿಲ್ಲದವನೋ ಶೋಕರಹಿತನೋ ಹಸಿವಿಲ್ಲದವನೋ ನೀರಡಿಕೆಯಿಲ್ಲದವನೋ ಸತ್ಯಕಾಮನೋ ಸತ್ಯಸಂಕಲ್ಪನೋ,[1] ಯಾವನನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳುವದಕ್ಕೆ ಉಪಾಸನೆಮಾಡಲೆಂದು ಹೃದಯಪುಂಡರೀಕ(ವೆಂಬ ಸ್ಥಾನವನ್ನು) ಹೇಳಿದ್ದಾಗಿದೆಯೋ ಯಾವ (ಆತ್ಮನಲ್ಲಿ) ಅನೃತವೆಂಬ ಮುಸಿಕಿನಿಂದ (ಮರೆಯಾಗಿರುವ) ಸತ್ಯಕಾಮಗಳು ಇರುತ್ತವೆಯೋ, ಯಾವ (ಆತ್ಮನ) ಉಪಾಸನೆಯ ಸಹಕಾರಿಯಾಗಿ ಬ್ರಹ್ಮಚರ್ಯವೆಂಬ ಸಾಧನವನ್ನು ಹೇಳಿದ್ದಾಯಿತೋ[2] ಉಪಾಸನೆಯ ಫಲವಾದ ಕಾಮಗಳನ್ನು ಪಡೆದುಕೊಳ್ಳುವದಕ್ಕಾಗಿ ನಡುನೆತ್ತಿಯ ನಾಡಿಯಿಂದ ಗತಿಯನ್ನು ಹೇಳಿದ್ದಾಯಿತೋ, ಅವನನ್ನು ಅನ್ವೇಷಣಮಾಡಬೇಕು ಶಾಸ್ತ್ರಾಚಾರ್ಯರುಗಳ ಉಪದೇಶಗಳಿಂದ ತಿಳಿದುಕೊಳ್ಳಬೇಕು ಅವನನ್ನು ವಿಜಿಜ್ಞಾಸೆ ಮಾಡಬೇಕು, ವಿಶೇಷವಾಗಿ ಅರಿಯುವದಕ್ಕೆ ಇಚ್ಛೆಮಾಡಬೇಕು, ತನ್ನ ಅನುಭವಕ್ಕೆ ಗೋಚರನಾಗಿ ಮಾಡಲ್ಪಡಬೇಕು.[3]

## ಆತ್ಮವಿಜ್ಞಾನದ ಫಲ.

(ಭಾಷ್ಯ)

೬೪೭ ಕಿಂ ತಸ್ಯ ಅನ್ವೇಷಣಾದ್ ವಿಜಿಜ್ಞಾಸನಾಚ್ಚ ಸ್ಯಾದಿತಿ ? ಉಚ್ಯತೇ । ಸ ಸರ್ವಾಂಶ್ಚ ಲೋಕಾನ್ ಆಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಂ ಯಥೋಕ್ತೇನ ಪ್ರಕಾರೇಣ ಶಾಸ್ತ್ರಾಚಾರ್ಯೋಪದೇಶೇನ ಅನ್ವಿಷ್ಯ[4]

1. ಸವಿಶೇಷನಿರ್ವಿಶೇಷಬ್ರಹ್ಮಗಳಿಗೆ ಯಾವ ತಾರತಮ್ಯವೂ ಇಲ್ಲ, ಆದರ ಆಕಾರೋಪದೇಶವನ್ನು ಮಾಡಿರುವದು ಉಪಾಸನೆಗಾಗಿ. ಸೂ. ಭಾ ೩-೨-೧೫ನ್ನು ನೋಡಿ. ಇಲ್ಲಿ ಸತ್ಯಕಾಮಾದಿಗಳನ್ನು ಹೇಳಿರುವದು ಬ್ರಹ್ಮದ ವಿಭೂತಿಯನ್ನು ತಿಳಿಸುವದಕ್ಕೇ ಹೊರತು ಅವೂ ಬ್ರಹ್ಮದ ಸ್ವರೂಪಕ್ಕೇ ಸೇರಿದವೆಂದು ತಿಳಿಸುವದಕ್ಕೇನೂ ಅಲ್ಲ. ಮುಂದೆ ಅಮೃತ, ಅಭಯ –ಎಂಬ ಎರಡು ವಿಶೇಷಣಗಳನ್ನೇ ಹೇಳಿರುವದು ಇದಕ್ಕೆ ಒತ್ತಾಸೆಯನ್ನು ಕೊಡುತ್ತದೆ ನಿರ್ಗುಣವಾಕ್ಯದಲ್ಲಿಯೂ ಸ್ತುತಿಗಾಗಿ ಗುಣಗಳನ್ನು ಹೇಳಬಹುದೆಂಬುದಕ್ಕೆ ಸೂ. ಭಾ ೩-೩-೨೯ (ಭಾ. ಭಾ. ೪೯೪)ನ್ನು ನೋಡಿ.

2 ಆ ಉಪಾಸ್ಯಬ್ರಹ್ಮದ ಪರಮಾರ್ಥಸ್ವರೂಪವನ್ನೇ ಇಲ್ಲಿ ಅನ್ವೇಷಣೆಮಾಡಿ ಅರಿತುಕೊಳ್ಳಬೇಕೆಂದು ಹೇಳಿದೆ ಎಂದು ಭಾವ.

3. ಆ ಆತ್ಮನೇ ನಾನು ಎಂಬ ನೇರಾದ ಅರಿವನ್ನು ಮಾಡಿಕೊಳ್ಳಬೇಕು ; ಶಾಸ್ತ್ರಾಚಾರ್ಯರ ಉಪದೇಶದಿಂದಾದ ಪರೋಕ್ಷಜ್ಞಾನವು ಮಾತ್ರ ಸಾಲದು– ಎಂದು ಅಭಿಪ್ರಾಯ.

4. ಈ ಭಾಷ್ಯಕ್ಕೆ ಅನುಗುಣವಾಗಿ ಮೂಲದಲ್ಲಿಯೂ 'ಅನುವಿದ್ಯ' ಎಂಬುದರ ಬದಲು 'ಅನ್ವಿಷ್ಯ' ಎಂದಿದ್ದರೂ ಇದ್ದಿರಬಹುದೆಂದು ಕಲ್ಪಿಸುವದಕ್ಕೆ ಅವಕಾಶವಿದೆ– ಎಂದು ಕೆಲವರು ಊಹಿಸುತ್ತಾರೆ. ಆದರೆ ೩ನೆಯ ಕಂಡಿಕೆಯಲ್ಲಿ 'ಅನುವಿದ್ಯ' ಎಂಬ ಪಾಠವೇ ಇದೆ.

ವಿಜಾನಾತಿ ಸ್ವಸಂವೇದ್ಯತಾಮ್ ಆಪಾದಯತಿ ತಸ್ಯೈತತ್ ಸರ್ವಲೋಕಕಾಮಾ ವಾಪ್ತಿಃ ಸರ್ವಾತ್ಮತಾ ಫಲಂ ಭವತಿ ಇತಿ ಹ ಕಿಲ ಪ್ರಜಾಪತಿರುವಾಚ ||

(ಭಾಷ್ಯಾರ್ಥ)

ಅವನನ್ನು ಅನ್ವೇಷಣೆಮಾಡಿ ವಿಜಿಜ್ಞಾಸೆಮಾಡಿಕೊಂಡದ್ದರಿಂದ ಏನಾಗು ವದು? ಎಂದರೆ ಹೇಳುತ್ತಾನೆ ಅವನು ಸರ್ವಲೋಕಗಳನ್ನೂ ಸರ್ವಕಾಮುಗಳನ್ನೂ ಪಡೆಯುಕೊಳ್ಳುತ್ತಾನೆ ಯಾವನು ಈ ಹೇಳಿದ ಪ್ರಕಾರದಿಂದ ಶಾಸ್ತ್ರಾಚಾರ್ಯರ ಉಪದೇಶದಿಂದ ಹುಡುಕಿ ಅರಿತುಕೊಳ್ಳುತ್ತಾನೋ ತನ್ನ ಅನುಭವಕ್ಕೆ ವಿಷಯ ವಾಗಿ ಮಾಡಿಕೊಳ್ಳುತ್ತಾನೋ ಅವನಿಗೆ ಈ ಸರ್ವಲೋಕಕಾಮಾವಾಪ್ತಿ ಎಂಬ ಸರ್ವಾತ್ಮತ್ವ(ರೂಪ)[1] ಫಲವು ಆಗುವದು ಎಂದು ಪ್ರಜಾಪತಿಯು (ಹ= ಕಿಲ) ಹೇಳಿದನಂತೆ.

## ಅನ್ವೇಷ್ಟವ್ಯೋ ವಿಜಿಜ್ಞಾಸಿತವ್ಯಃ ಎಂಬುದು ಅಪೂರ್ವವಿಧಿಯಲ್ಲ

(ಭಾಷ್ಯ)

೬೪೮. ಅನ್ವೇಷ್ಟವ್ಯೋ ವಿಜಿಜ್ಞಾಸಿತವ್ಯಃ ಇತಿ ಚೈಷ ನಿಯಮವಿಧಿರೇವ ನಾಪೂರ್ವವಿಧಿಃ । ಏವಮ್ ಅನ್ವೇಷ್ಟವ್ಯೋ ವಿಜಿಜ್ಞಾಸಿತವ್ಯ ಇತ್ಯರ್ಥಃ । ದೃಷ್ಟಾರ್ಥತ್ವಾದನ್ವೇಷಣವಿಜಿಜ್ಞಾಸನಯೋಃ । ದೃಷ್ಟಾರ್ಥತ್ವಂ ಚ ದರ್ಶಯಿಷ್ಯತಿ "ನಾಽಹಮತ್ರ ಭೋಗ್ಯಂ ಪಶ್ಯಾಮಿ" (೮-೯-೧, ೮-೧೦-೨, ೮-೧೧-೨) ಇತ್ಯ ನೇನ ಅಸಕೃತ್ । ಪರರೂಪೇಣ ಚ ದೇಹಾದಿಧರ್ಮೈರವಗಮ್ಯಮಾನಸ್ಯ ಆತ್ಮನಃ ಸ್ವರೂಪಾಧಿಗಮೇ ವಿಪರೀತಾಧಿಗಮನಿವೃತ್ತಿರ್ದೃಷ್ಟಂ ಫಲಮ್ ಇತಿ ನಿಯಮಾರ್ಥತೈವಾಽಸ್ಯ ವಿಧೇರ್ಯುಕ್ತಾ ನ ತು ಅಗ್ನಿಹೋತ್ರಾದೀನಾಮಿವ ಅಪೂರ್ವವಿಧಿತ್ವಮಿಹ ಸಂಭವತಿ ||

(ಭಾಷ್ಯಾರ್ಥ)

ಅನ್ವೇಷಣೆಮಾಡಬೇಕು, ವಿಜಿಜ್ಞಾಸೆಮಾಡಬೇಕು- ಎಂಬುದು ನಿಯಮ ವಿಧಿಯೇ ಹೊರತು ಅಪೂರ್ವವಿಧಿಯಲ್ಲ.[2] ಹೀಗೆಯೇ ಅನ್ವೇಷಣೆಮಾಡಬೇಕು,

1. ಸರ್ವಲೋಕಗಳನ್ನೂ ಕಾಮುಗಳನ್ನೂ ಪಡೆಯುವವೆಂದರೆ ಬೇರೆಬೇರೆಯ ಲೋಕ ಗಳನ್ನು ಪಡೆದವರ ಮತ್ತು ಕಾಮುಗಳನ್ನು ಪಡೆದವರ ಎಲ್ಲರ ಆತ್ಮನೂ ಆಗಿರುವನೆಂಬ ಅಪರಿಚ್ಛಿನ್ನಾತ್ಮಜ್ಞಾನವೇ. ಬೃ. ಭಾ. ೩-೯-೨೮ (ಭಾ. ಭಾ ೧೩೯).

2. ಏಕೆಂದರೆ ಆತ್ಮಜ್ಞಾನವನ್ನು ವಿಧಿಸುವದಕ್ಕೆ ಬರುವದಿಲ್ಲ. ಸೂ. ಭಾ. ೧-೧-೪ (ಭಾ. ಭಾ. ೫೧). ಬೃ. ಭಾ. ೧-೪-೭ರಲ್ಲಿ ಆತ್ಮೇತ್ಯೇವೋಪಾಸೀತ ಎಂಬ ವಾಕ್ಯವಿಷಯದ ಚರ್ಚೆಯನ್ನು (ಭಾ. ಭಾ. ೧೩೫ರಿಂದ ಮುಂದಕ್ಕೆ) ನೋಡಿರಿ.

ವಿಜಿಜ್ಞಾಸೆಮಾಡಬೇಕು- ಎಂದರ್ಥ[1], ಏಕೆಂದರೆ (ಈ) ಅನ್ವೇಷಣೆವಿಜಿಜ್ಞಾಸೆಗಳಿಗೆ ದೃಷ್ಟಫಲವಿದೆ[2] "ನನಗೆ ಇಲ್ಲಿ ಭೋಗವು ಕಾಣಿಸುತ್ತಿಲ್ಲ" (೮-೯-೧, ೮-೧೦-೨, ೮-೧೧-೨) ಎಂಬೀ ವಾಕ್ಯದಿಂದ (ಶ್ರುತಿಯು) ಮುಂದೆ ಮತ್ತೆಮತ್ತೆ (ಇವುಗಳಿಗೆ) ದೃಷ್ಟಫಲವೇ (ವಿವಕ್ಷಿತವೆಂಬುದನ್ನು) ತಿಳಿಸುತ್ತಿದೆ.[3] **ದೇಹವೇ ಮುಂತಾದವುಗಳ ಧರ್ಮಗಳುಳ್ಳವನೆಂದು ಮತ್ತೊಂದು ರೂಪವುಳ್ಳವನಾಗಿ ನಿಶ್ಚಯಿಸಿಕೊಂಡಿರುವ ಆತ್ಮನ ಸ್ವರೂಪವನ್ನು ಅರಿತುಕೊಳ್ಳಲು ತಪ್ಪುತಿಳಿವಳಿಕೆಯು ತೊಲಗುವದೆಂಬ ದೃಷ್ಟಫಲವಾಗುವದಾದ್ದರಿಂದ[4] ಈ ವಿಧಿಗೆ ನಿಯಮಾರ್ಥವನ್ನು (ಹೇಳುವದೇ) ಯುಕ್ತವೇ ಹೊರತು ಅಗ್ನಿಹೋತ್ರಾದಿಗಳಂತೆ[5] ಇಲ್ಲಿ ಅಪೂರ್ವವಿಧಿಯು ಸಂಭವಿಸುವದಿಲ್ಲ**

## ಇಂದ್ರವಿರೋಚನರು ಆತ್ಮಜ್ಞಾನಕ್ಕಾಗಿ ಹೊರಟದ್ದು

(ಉಪನಿಷತ್ತು)

**ತದ್ಧೋಭಯೇ ದೇವಾಸುರಾ ಅನುಬುಬುಧಿರೇ ತೇ ಹೋಚುರ್ಹನ್ತ ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾಗ್ಂಶ್ಚ ಲೋಕಾನಾಪ್ನೋತಿ ಸರ್ವಾಗ್ಂಶ್ಚ ಕಾಮಾನಿತೀನ್ದ್ರೋ ಹೈವ ದೇವಾನಾಮಭಿಪ್ರವವ್ರಾಜ ವಿರೋಚನೋಽಸುರಾಣಾಂ ತೌ ಹಾಸಂವಿದಾನಾವೇವ ಸಮಿತ್ಪಾಣೀ ಪ್ರಜಾಪತಿಸಕಾಶಮಾಜಗ್ಮತುಃ ॥ ೨ ॥**

೨. ಅದನ್ನು ದೇವಾಸುರರುಗಳಿಬ್ಬರೂ ತಿಳಿದುಕೊಂಡರು. ಅವರು " ಒಳ್ಳೆಯದು, ಯಾವ ಆತ್ಮನನ್ನು ಅನ್ವೇಷಣೆಮಾಡಿದರೆ

---

1. ವಿಷಯರೂಪದಿಂದ ಅರಿತುಕೊಂಡರೆ ಸಾಲದು ; ಅಪಹತಪಾಪ್ಮತ್ವಾದಿರೂಪನು ನಾನು ಎಂದು ಅರಿತುಕೊಳ್ಳಬೇಕು- ಎಂದರ್ಥ.

2 ದಹರವಿದ್ಯೆಯಂತೆ ಲೋಕಾಂತರದಲ್ಲಿ ಆಗುವ ಫಲವನ್ನು ಇಲ್ಲಿ ಹೇಳಿಲ್ಲ.

3. ಇಲ್ಲಿಯೇ ಆಗುವ ಫಲವೇ ವಿವಕ್ಷಿತವೆಂಬುದಕ್ಕೆ ಗಮಕವಿದು.

4. ದೇಹಾದಿಗಳು ನಾನೆಂದು ತಿಳಿದುಕೊಂಡದ್ದರಿಂದ ಆದ ಅನರ್ಥವು ಅಪಹತಪಾಪ್ಮತ್ವಾದಿಗುಣಗಳುಳ್ಳವನು ನಾನೆಂದು ಅರಿತುಕೊಂಡಾಗ ತೊಲಗುವದು ಅವಶ್ಯವಾಗಿ ಅನುಭವಕ್ಕೆ ಬರಬೇಕಾಗಿದೆ. ಆದ್ದರಿಂದಲೂ ಇಲ್ಲಿ ದೃಷ್ಟಫಲವನ್ನುದ್ದೇಶಿಸಿದೆ.

5. ಆತ್ಮಜ್ಞಾನದಂತೆ ಅಗ್ನಿಹೋತ್ರಾದಿಜ್ಞಾನವು ಮೊದಲೇ ಪ್ರಾಪ್ತವಾಗಿಲ್ಲ, ವಾಕ್ಯಜ್ಞಾನದಿಂದ ಯಾವ ದೃಷ್ಟಫಲವೂ ಆಗುವದಿಲ್ಲ, ಅವುಗಳನ್ನು ಅನುಷ್ಠಾನಮಾಡಿದಮೇಲೆಯೇ ಅದೃಷ್ಟವಾದ ಸ್ವರ್ಗಾದಿಫಲವು ದೊರಕಬೇಕಾಗಿದೆ ಆದ್ದರಿಂದ ಅಲ್ಲಿ ಅಪೂರ್ವವಿಧಿಯೇ ಎಂಬುದು ಯುಕ್ತ.

ಎಲ್ಲಾ ಲೋಕಗಳನ್ನೂ ಎಲ್ಲಾ ಕಾಮಗಳನ್ನೂ ಪಡೆದುಕೊಳ್ಳುತ್ತಾನೋ ಆ ಆತ್ಮನನ್ನು ಹುಡುಕೋಣ!'' ಎಂದುಕೊಂಡರು. ದೇವತೆಗಳೊಳಗೆ ಇಂದ್ರನೇ ಹೋದನು, ಅಸುರರೊಳಗೆ ವಿರೋಚನನು (ಹೋದನು). ಅವರು (ಮತ್ತೊಬ್ಬರಿಗೆ) ಅರಿಯದೆಯೇ ಸಮಿತ್ಪಾಣಿಗಳಾಗಿ ಪ್ರಜಾಪತಿಯ ಹತ್ತಿರಕ್ಕೆ ಬಂದರು.

## ಇಂದ್ರವಿರೋಚನರೇ ಪ್ರಜಾಪತಿಯ ಬಳಿಗೆ ಬಂದದ್ದು

(ಭಾಷ್ಯ)

೬೪೯. 'ತದ್ಧೋಭಯೇ' ಇತ್ಯಾದ್ಯಾಖ್ಯಾಯಿಕಾಪ್ರಯೋಜನಮುಕ್ತಮ್। ತದ್ ಹ ಕಿಲ ಪ್ರಜಾಪತೇರ್ವಚನಮ್ ಉಭಯೇ ದೇವಾಸುರಾಃ, ದೇವಾಶ್ಚಾಸುರಾಶ್ಚ ದೇವಾಸುರಾಃ । ಅನು ಪರಮ್ಪರಾಗತಂ ಸ್ವಕರ್ಣಗೋಚರಾಪನ್ನಮನುಬುಬುಧಿರೇ ಅನುಬುದ್ಧವನ್ತಃ। ತೇ ಚ ಏತತ್ ಪ್ರಜಾಪತಿವಚೋ ಬುದ್ಧ್ವಾ ಕಿಮ್ ಅಕುರ್ವನ್ನಿತಿ? ಉಚ್ಯತೇ। ತೇ ಹೋಚುಃ ಉಕ್ತವನ್ತೋಽನ್ಯೋನ್ಯಂ ದೇವಾಃ ಸ್ವಪರಿಷದಿ, ಅಸುರಾಶ್ಚ । ಹನ್ತ ಯದ್ಯನುಮತಿರ್ಭವತಾಂ ಪ್ರಜಾಪತಿನೋಕ್ತಂ ತಮ್ ಆತ್ಮಾನಮ್ ಅನ್ವಿಚ್ಛಾಮೋ ಅನ್ವೇಷಣಂ ಕುರ್ಮಃ। ಯಮಾತ್ಮಾನಮ್ ಅನ್ವಿಷ್ಯ ಸರ್ವಾಂಶ್ಚ ಲೋಕಾನ್ ಆಪ್ನೋತಿ, ಸರ್ವಾಂಶ್ಚ ಕಾಮಾನ್ । ಇತ್ಯುಕ್ತ್ವಾ ಇನ್ದ್ರೋ ಹೈವ ರಾಜೈವ ಸ್ವಯಂ ದೇವಾನಾಮ್ ಇತರಾನ್ ದೇವಾಂಶ್ಚ ಭೋಗಪರಿಚ್ಛದಂ ಚ ಸರ್ವಂ ಸ್ಥಾಪಯಿತ್ವಾ ಶರೀರಮಾತ್ರೇಣೈವ ಪ್ರಜಾಪತಿಂ ಪ್ರತಿ ಅಭಿಪ್ರವವ್ರಾಜ ಪ್ರಗತವಾನ್ । ತಥಾ ವಿರೋಚನೋಽಸುರಾಣಾಮ್ । ವಿನಯೇನ ಗುರವೋ ಅಭಿಗನ್ತವ್ಯಾಃ ಇತ್ಯೇತದ್ ದರ್ಶಯತಿ । ತ್ರೈಲೋಕ್ಯರಾಜ್ಯಾಚ್ಚ ಗುರುತರಾ ವಿದ್ಯೇತಿ । ಯತೋ ದೇವಾಸುರರಾಜೌ ಮಹಾಭೋಗಾರ್ಹೌ[1] ಸನ್ತೌ ತಥಾ ಗುರುಮ್ ಅಭ್ಯುಪಗತವನ್ತೌ । ತೌ ಹ ಕಿಲ ಅಸಂವಿದಾನಾವೇವ ಅನ್ಯೋನ್ಯಂ ಸಂವಿದಮಕುರ್ವಾಣೌ ವಿದ್ಯಾಫಲಂ ಪ್ರತ್ಯನ್ಯೋನ್ಯಮ್ ಈರ್ಷ್ಯಾಂ ದರ್ಶಯನ್ತೌ ಸಮಿತ್ಪಾಣೀ ಸಮಿದ್ಭಾರಹಸ್ತೌ ಪ್ರಜಾಪತಿಸಕಾಶಮ್ ಆಜಗ್ಮತುಃ, ಆಗತವನ್ತೌ ॥

(ಭಾಷ್ಯಾರ್ಥ)

'ತದ್ಧೋಭಯೇ' (ಅದನ್ನು ಇಬ್ಬರೂ) ಎಂದು ಮುಂತಾಗಿರುವ ಕಥೆಯ ಪ್ರಯೋಜನವನ್ನು ಹಿಂದೆ (ಭಾ. ಭಾ. ೬೪೫ರಲ್ಲಿ) ಹೇಳಿರುತ್ತದೆ.

---

1. 'ಮಹಾರ್ಹ' ಎಂಬಲ್ಲಿ 'ಅರ್ಹ' ಹೆಚ್ಚೆಂದು ಬಿಟ್ಟಿದೆ.

ಆ ಪ್ರಜಾಪತಿಯ ವಾಕ್ಯವನ್ನು ದೇವಾಸುರರಿಬ್ಬರೂ- ದೇವತೆಗಳೂ ಅಸುರರೂ ದೇವಾಸುರರು (ಅವರಿಬ್ಬರೂ)- (ಅನು=) ಒಬ್ಬರಿಂದೊಬ್ಬರಿಗೆ ಬಂದು ತಮ್ಮ ಕಿವಿಗೆ ಬಿದ್ದದ್ದನ್ನು (ಅನುಬುಬುಧಿರೇ=ಅನುಬುದ್ಧವನ್ತಃ) ತಿಳಿದು ಕೊಂಡರು. ಅವರು ಈ ಪ್ರಜಾಪತಿಯ ವಾಕ್ಯವನ್ನು ಅರಿತುಕೊಂಡು ಏನು ಮಾಡಿದರು ?- ಎಂದರೆ (ಶ್ರುತಿ) ಹೇಳುತ್ತಿದೆ ಅವರು ದೇವತೆಗಳೂ ಅಸುರರೂ ತಮ್ಮತಮ್ಮ ಗುಂಪಿನಲ್ಲಿ ಒಬ್ಬರಿಗೊಬ್ಬರು ಹೀಗೆ ಹೇಳಿಕೊಂಡರಂತೆ. "(ಹನ್ತ=) ನೀವು ಒಪ್ಪುವದಾದರೆ, ಯಾವ ಆತ್ಮನನ್ನು ಹುಡುಕಿ (ತಿಳಿದುಕೊಂಡರೆ) ಸರ್ವ ಲೋಕಗಳನ್ನೂ ಪಡೆದುಕೊಳ್ಳುತ್ತಾರೋ, ಸರ್ವಕಾಮಗಳನ್ನೂ ಪಡೆದುಕೊಳ್ಳು ತ್ತಾರೋ, ಪ್ರಜಾಪತಿಯು ಹೇಳಿರುವ ಆ ಆತ್ಮನನ್ನು (ಅನ್ವಿಚ್ಛಾಮಃ=ಅನ್ವೇ ಷಣಂ ಕುರ್ಮಃ) ಹುಡುಕೋಣ!" ಹೀಗೆಂದು ಇಂದ್ರನು, ದೇವತೆಗಳ ರಾಜನು ತಾನೇ, ಮಿಕ್ಕ ದೇವತೆಗಳನ್ನೂ ಭೋಗಸಾಮಗ್ರಿಯನ್ನೂ ಎಲ್ಲವನ್ನೂ ಅತ್ತಿಟ್ಟು ತಾನೊಬ್ಬನೇ ಬರಿಯ ಶರೀರದೊಡನೆ ಪ್ರಜಾಪತಿಯ ಬಳಿಗೆ (ಅಭಿಪ್ರವವ್ರಾಜ= ಪ್ರಗತವಾನ್) ಹೊರಟನು. ಹಾಗೆಯೇ ಅಸುರರೊಳಗೆ ವಿರೋಚನನು ತಾನೇ ಹೊರಟನು).

ಗುರುಗಳ ಬಳಿಗೆ ವಿನಯದಿಂದ ಹೋಗಬೇಕು, ಎಂಬಿದನ್ನೂ ತ್ರೈಲೋಕ್ಯ ರಾಜ್ಯಕ್ಕಿಂತಲೂ ವಿದ್ಯೆಯು ಹೆಚ್ಚಿನದು- ಎಂಬಿದನ್ನೂ (ಶ್ರುತಿಯು) ತಿಳಿಸಿಕೊಟ್ಟಂ ತಾಯಿತು. ಏಕೆಂದರೆ ದೇವಾಸುರರ ರಾಜರುಗಳು ಹೆಚ್ಚಿನ ಭೋಗಕ್ಕೆ ಯೋಗ್ಯ ರಾಗಿದ್ದರೂ ಹಾಗೆ ಗುರುವಿನ ಬಳಿಗೆ (ವಿನಯದಿಂದ) ಹೋದರು.

ಅವರಿಬ್ಬರೂ (ಮತ್ತೊಬ್ಬರಿಗೆ) ತಿಳಿಯದಂತೆಯೇ ಒಬ್ಬರಿಗೊಬ್ಬರು ತಿಳಿವಳಿಕೆ ಯನ್ನು ಕೊಡದೆಯೇ ವಿದ್ಯೆಯ ಫಲದ ವಿಷಯದಲ್ಲಿ ಒಬ್ಬರಲ್ಲೊಬ್ಬರು ಈರ್ಷ್ಯೆ ಯನ್ನು ತೋರಿಸುತ್ತಾ[1] ಸಮಿತ್ಪಾಣಿಗಳಾಗಿ ಸಮಿತ್ತಿನ ಸಿವುಡನ್ನು ಕೈಯಲ್ಲಿ ಹಿಡಿದುಕೊಂಡು ಪ್ರಜಾಪತಿಯ ಸಾಮೀಪ್ಯಕ್ಕೆ ಬಂದರು, ಬಂದವರಾದರು.

## ಬ್ರಹ್ಮಚರ್ಯೆಯಲ್ಲಿದ್ದು ತಮ್ಮ ಇಚ್ಛೆಯನ್ನು ತಿಳಿಸಿದ್ದು

(ಉಪನಿಷತ್ತು)

**ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತುಸ್ತೌ ಹ ಪ್ರಜಾಪತಿರುವಾಚ ಕಿಮಿಚ್ಛನ್ತಾವವಾಸ್ತಮಿತಿ ತೌ**

1. ಆ ಫಲವು ತಮಗೇ ಮೊದಲು ಆಗಬೇಕು, ಮತ್ತೊಬ್ಬರಿಗೆ ಆಗಬಾರದು- ಎಂಬ ಭಾವದಿಂದ ಎಂದರ್ಥ.

**ಹೋಚತುರ್ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ಸ ಸರ್ವಾಗ್‌ಂಶ್ಚ ಲೋಕಾನಾಪ್ನೋತಿ ಸರ್ವಾಗ್‌ಂಶ್ಚ ಕಾಮಾನ್ ಯಸ್ತಮಾತ್ಮಾನಮನು ವಿದ್ಯ ವಿಜಾನಾತೀತಿ ಭಗವತೋ ವಚೋ ವೇದಯನ್ತೇ ತಮಿಚ್ಛನ್ತಾವವಾಸ್ತಮಿತಿ ॥ ೩ ॥**

೩. ಅವರಿಬ್ಬರೂ ಮೂವತ್ತೆರಡು ವರ್ಷಗಳವರೆಗೆ ಬ್ರಹ್ಮಚರ್ಯವಾಸವನ್ನು ಮಾಡಿಕೊಂಡಿದ್ದರು. ಅವರನ್ನು ಕುರಿತು ಪ್ರಜಾಪತಿಯು 'ಏನನ್ನು ಬಯಸಿ (ಬ್ರಹ್ಮಚರ್ಯ)ದಿಂದಿದ್ದೀರಿ ?' ಎಂದು ಕೇಳಿದನು. ಅವರು 'ಯಾವ ಆತ್ಮನು ಅಪಹತಪಾಪ್ಮನೋ ವಿಜರನೂ ವಿಮೃತ್ಯುವೂ ಶೋಕರಹಿತನೂ ಹಸಿವಿಲ್ಲದವನೂ ನೀರಡಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೋ ಅವನನ್ನೇ ಅನ್ವೇಷಣೆಮಾಡಬೇಕು. ಅವನನ್ನೇ ವಿಜಿಜ್ಞಾಸೆಮಾಡಬೇಕು. ಯಾವನು ಅವನನ್ನು ತಿಳಿದುಕೊಂಡು ಅನುಭವಕ್ಕೆ ತಂದುಕೊಳ್ಳುವನೋ ಅವನು ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಪಡೆದುಕೊಳ್ಳುವನು' ಎಂಬ ಭಗವಂತನಾದ (ನಿನ್ನ) ವಚನವನ್ನು (ಶಿಷ್ಯರು) ತಿಳಿದಿರುತ್ತಾರೆ. ಅವನನ್ನು ಇಚ್ಛಿಸಿ ಬ್ರಹ್ಮಚರ್ಯದಿಂದಿರುತ್ತೇವೆ' ಎಂದರು.

## ಬ್ರಹ್ಮಚರ್ಯದಲ್ಲಿದ್ದ ಮೇಲೆ ಆತ್ಮಜ್ಞಾನೇಚ್ಛೆಯನ್ನು ತಿಳಿಸಿದ್ದು

(ಭಾಷ್ಯ)

೬೫೦. **ತೌ ಹ ಗತ್ವಾ ದ್ವಾತ್ರಿಂಶತಂ ವರ್ಷಾಣಿ ಶುಶ್ರೂಷಾಪರೌ ಭೂತ್ವಾ ಬ್ರಹ್ಮಚರ್ಯಮ್ ಊಷತುಃ, ಉಷಿತವನ್ತೌ । ಅಭಿಪ್ರಾಯಜ್ಞಃ ಪ್ರಜಾಪತಿಸ್ತೌ ಉವಾಚ । ಕಿಮಿಚ್ಛನ್ತೌ ಕಿಂ ಪ್ರಯೋಜನಮಭಿಪ್ರೇತ್ಯ ಇಚ್ಛನ್ತೌ ಅವಾಸ್ತಮ್ ಉಷಿತವನ್ತೌ ಯುವಾಮ್ ? ಇತಿ । ಇತ್ಯುಕ್ತೌ ತೌ ಹ ಊಚತುಃ । 'ಯ ಆತ್ಮಾ' ಇತ್ಯಾದಿ ಭಗವತೋ ವಚೋ ವೇದಯನ್ತೇ ಶಿಷ್ಟಾಃ । ಅತಸ್ತಮ್ ಆತ್ಮಾನಂ ಜ್ಞಾತುಮಿಚ್ಛನ್ತೌ ಅವಾಸ್ತಮಿತಿ । ಯದ್ಯಪಿ ಪ್ರಾಕ್ ಪ್ರಜಾಪತೇಃ ಸಮೀಪಾಗಮನಾತ್ ಅನ್ಯೋನ್ಯಮ್ ಈರ್ಷ್ಯಾಯುಕ್ತೌ ಅಭೂತಾಮ್ ತಥಾಽಪಿ ವಿದ್ಯಾಪ್ರಾಪ್ತಿಪ್ರಯೋಜನಗೌರವಾತ್ ತ್ಯಕ್ತರಾಗದ್ವೇಷಮೋಹೇರ್ಷ್ಯಾದಿದೋಷಾವೇವ ಭೂತ್ವಾ ಊಷತುರ್ಬ್ರಹ್ಮಚರ್ಯಂ ಪ್ರಜಾಪತೌ । ತೇನೇದಂ ಪ್ರಖ್ಯಾಪಿತಮ್ ಆತ್ಮವಿದ್ಯಾಗೌರವಮ್ ॥**

(ಭಾಷ್ಯಾರ್ಥ)

ಅವರು (ಅಲ್ಲಿಗೆ) ಹೋಗಿ ಮೂವತ್ತೆರಡು ವರ್ಷಗಳವರೆಗೆ ಶುಶ್ರೂಷೆಯಲ್ಲಿಯೇ ಇದ್ದುಕೊಂಡು ಬ್ರಹ್ಮಚರ್ಯವಾಸವನ್ನು ಮಾಡಿಕೊಂಡಿದ್ದರು. (ಅವರ) ಅಭಿಪ್ರಾಯವನ್ನು ಅರಿತುಕೊಂಡು ಪ್ರಜಾಪತಿಯಿಂತೆಂದನು : ಏನನ್ನಿಚ್ಛಿಸುವವರಾಗಿ, ಯಾವ ಪ್ರಯೋಜನವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದು (ಅದನ್ನು) ಇಚ್ಛಿಸಿ ನೀವು (ಅವಾಸ್ತಮ್= ಉಷಿತವನ್ತೌ) ವಾಸಮಾಡಿಕೊಂಡಿದ್ದೀರಿ ? ಹೀಗೆನ್ನಲು "'ಯಾವ ಆತ್ಮನು' ಎಂದು ಮುಂತಾದ ಭಗವಂತನಾದ ನಿನ್ನ ವಚನವನ್ನು ಶಿಷ್ಟರು ಕೇಳಿ ತಿಳಿದುಕೊಂಡಿರುತ್ತಾರೆ, ಆದ್ದರಿಂದ ಆ ಆತ್ಮನನ್ನು ಅರಿತುಕೊಳ್ಳಬೇಕೆಂದು ಇಚ್ಛಿಸುವವರಾಗಿ ವಾಸಮಾಡಿಕೊಂಡಿದೇವೆ" ಎಂದರು.

ಪ್ರಜಾಪತಿಯ ಬಳಿಗೆ ಬರುವ ಮುಂಚೆ ಒಬ್ಬರಲ್ಲೊಬ್ಬರು ಈರ್ಷ್ಯೆಯುಳ್ಳವರಾಗಿದ್ದರೆಂಬುದು (ನಿಜ), ಆದರೂ ವಿದ್ಯೆಯನ್ನು ಪಡೆದುಕೊಳ್ಳಬೇಕೆಂಬ ಪ್ರಯೋಜನದ ಗೌರವದಿಂದ ರಾಗ, ದ್ವೇಷ, ಮೋಹ, ಈರ್ಷ್ಯೆ- ಮುಂತಾದ ದೋಷಗಳನ್ನು ಬಿಟ್ಟೇ ಪ್ರಜಾಪತಿಯಲ್ಲಿ ಬ್ರಹ್ಮಚರ್ಯವನ್ನು ಮಾಡುತ್ತಾ ವಾಸಮಾಡಿಕೊಂಡಿದ್ದರು. ಇದರಿಂದ ಆತ್ಮವಿದ್ಯೆಯ ಈ ಹೆಚ್ಚುಗಾರಿಕೆಯನ್ನು ಹೊರಪಡಿಸಿ ತಿಳಿಸಿದ್ದಾಯಿತು.[1]

## ಪ್ರಜಾಪತಿಯ ಉಪದೇಶ: ದ್ರಷ್ಟೃವೇ ಬ್ರಹ್ಮ

(ಉಪನಿಷತ್ತು)

**ತೌ ಹ ಪ್ರಜಾಪತಿರುವಾಚ ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ ಬ್ರಹ್ಮೇತ್ಯಥ ಯೋಽಯಂ ಭಗವೋಽಪ್ಸು ಪರಿಖ್ಯಾಯತೇ ಯಶ್ಚಾಯಮಾದರ್ಶೇ ಕತಮ ಏಷ ಇತ್ಯೇಷ ಉ ಏವೈಷು ಸರ್ವೇಷ್ವನ್ತೇಷು ಪರಿಖ್ಯಾಯತ ಇತಿ ಹೋವಾಚ ॥ ೪ ॥**

೪. ಅವರಿಬ್ಬರನ್ನು ಕುರಿತು ಪ್ರಜಾಪತಿಯಿಂತೆಂದನು : 'ಈ ಕಣ್ಣಿನಲ್ಲಿ ಪುರುಷನು ಕಾಣಿಸುತ್ತಾನಲ್ಲ, ಇವನೇ ಆತ್ಮನು, ಇದೇ ಅಮೃತವು, ಇದೇ ಅಭಯವು, ಇದೇ ಬ್ರಹ್ಮವು.' 'ಹಾಗಾದರೆ,

1. ಇಂದ್ರವಿರೋಚನರು ಆತ್ಮವಿದ್ಯೆಗಾಗಿ ತಮ್ಮ ದೊಡ್ಡಸ್ತಿಕೆಯನ್ನು ಬದಿಗಿಟ್ಟು ಬಂದಿದ್ದರು, ಈಗ ಅದಕ್ಕಾಗಿ ತಮ್ಮ ರಾಗದ್ವೇಷಾದಿಗಳನ್ನುಕೂಡ ಬಿಟ್ಟು ಪ್ರಜಾಪತಿಯಲ್ಲಿ ವಿದ್ಯಾರ್ಥಿಗಳಾದರು. ಎಂದು ಆತ್ಮವಿದ್ಯೆಯ ಹೆಚ್ಚುಗಾರಿಕೆಯನ್ನು ತಿಳಿಸಿದಂತೆ ಆಯಿತು.

ಭಗವಂತನೆ, ಈ ಅಪ್ಪಿನಲ್ಲಿ ತೋರುತ್ತಿರುವನಲ್ಲ ಈತನು, ಮತ್ತು ಕನ್ನಡಿಯಲ್ಲಿ ತೋರುತ್ತಿರುವನಲ್ಲ ಈತನು, (ಇವರಲ್ಲಿ) ಇವನು ಯಾರು ?' 'ಎಲ್ಲಾ ಅಂತಗಳಲ್ಲಿಯೂ ಇವನೇ ತೋರುತ್ತಿರುತ್ತಾನೆ' ಎಂದನು

## ಅಕ್ಷಿಪುರುಷನ ವಿಷಯಕ್ಕೆ ಪ್ರಶ್ನೋತ್ತರಗಳು

(ಭಾಷ್ಯ)

೬೫೧. ತೌ ಏವಂ ತಪಸ್ವಿನೌ ಶುದ್ಧಕಲ್ಮಷೌ ಯೋಗ್ಯೌ ಉಪಲಕ್ಷ್ಯ ಪ್ರಜಾಪತಿರುವಾಚ ಹ | ಯ ಏಷೋಽಕ್ಷಿಣಿ ಪುರುಷಃ ನಿವೃತ್ತಚಕ್ಷುರ್ಭಿರ್ಮೃದಿತ ಕಷಾಯೈಃ ದೃಶ್ಯತೇ ಯೋಗಿಭಿರ್ದ್ರಷ್ಟಾ ಏಷ ಆತ್ಮಾ ಅಪಹತಪಾಪ್ಮಾದಿಗುಣೋ ಯಮ್ ಅವೋಚಂ ಪುರಾ ಅಹಂ ಯದ್ವಿಜ್ಞಾನಾತ್ ಸರ್ವಲೋಕಕಾಮಾವಾಪ್ತಿಃ। ಏತದಮೃತಂ ಭೂಮಾಖ್ಯಮ್ । ಅತ ಏವಾಭಯಮ್ । ಅತ ಏವ ಬ್ರಹ್ಮ ವೃದ್ಧ ತಮಮಿತಿ। ಅಥೈತತ್ ಪ್ರಜಾಪತಿನೋಕ್ತಮ್ ಅಕ್ಷಿಣಿ ಪುರುಷೋ ದೃಶ್ಯತೇ ಇತಿ ವಚಃ ಶ್ರುತ್ವಾ ಛಾಯಾರೂಪಂ ಪುರುಷಂ ಜಗೃಹತುಃ। ಗೃಹೀತ್ವಾ ಚ ದೃಢೀ ಕರಣಾಯ ಪ್ರಜಾಪತಿಂ ಪೃಷ್ಟವನ್ತೌ । ಅಥ ಯೋಽಯಂ ಹೇ ಭಗವಃ ಅಪ್ಸು ಪರಿಖ್ಯಾಯತೇ ಪರಿ ಸಮನ್ತಾತ್ ಜ್ಞಾಯತೇ. ಯಶ್ಚಾಯಂ ಆದರ್ಶೇ ಆತ್ಮನಃ ಪ್ರತಿಬಿಮ್ಬಾಕಾರಃ ಪ್ರತಿಖ್ಯಾಯತೇ ಖಡ್ಗಾದೌ ಚ ಕತಮ ಏಷ ಏಷಾಂ ಭಗವದ್ಭಿ ರುಕ್ತಃ ? ಕಿಂ ವಾ ಏಕ ಏವ ಸರ್ವೇಷ್ವಿತಿ ? ಏವಂ ಪೃಷ್ಟಃ ಪ್ರಜಾಪತಿರುವಾಚ। ಏಷ ಉ ಏವ ಯಶ್ಚಕ್ಷುಷಿ ದ್ರಷ್ಟಾ ಮಯೋಕ್ತ ಇತ್ಯೇತತ್ ಮನಸಿ ಕೃತ್ವಾ ಏಷು ಸರ್ವೇಷು ಅನ್ತೇಷು ಮಧ್ಯೇಷು ಪರಿಖ್ಯಾಯತ ಇತಿ ಹೋವಾಚ ॥

(ಭಾಷ್ಯಾರ್ಥ)

ಹೀಗೆ ತಪಸ್ಸನ್ನು ಮಾಡಿ ಶುದ್ಧಕಲ್ಮಷರಾಗಿ[1] ಯೋಗ್ಯರಾಗಿದ್ದ[2] ಅವರಿಬ್ಬ ರನ್ನೂ ನೋಡಿ ಪ್ರಜಾಪತಿಯು ಇಂತೆಂದನು : ಚಕ್ಷುಸ್ಸನ್ನು ಹಿಂತಿರುಗಿಸಿಕೊಂಡು[3] ಮೃದಿತಕಷಾಯರಾಗಿರುವ[4] ಯೋಗಿಗಳಿಗೆ[5] ಕಾಣಬರುತ್ತಾನಲ್ಲ[6] ಈ ದ್ರಷ್ಟೃವಾದ

1. ಬ್ರಹ್ಮಚರ್ಯೆಯಿಂದ ರಾಗಾದಿದೋಷಗಳನ್ನು ಕಳೆದುಕೊಂಡಿದ್ದ.

2 ಆತ್ಮವಿದ್ಯೆಗೆ ತಕ್ಕವರಾಗಿದ್ದ.

3. ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸಿಕೊಂಡು ಎಂದರ್ಥ. ಕ. ೨-೧-೧.

4 ಜ್ಞಾನವೈರಾಗ್ಯಗಳಿಂದ ರಾಗದ್ವೇಷಗಳನ್ನು ಕಳೆದುಕೊಂಡ. ೭-೨೬-೨(ಭಾ. ಭಾ ೬೦೫).

5 ನಿದಿಧ್ಯಾಸನಮಾಡುವವರಿಗೆ.

6. ಅನುಭವಕ್ಕೆ ಗೋಚರನಾಗುತ್ತಾನಲ್ಲ ಎಂದರ್ಥ ; ಏಕೆಂದರೆ ದ್ರಷ್ಟೃವು ದೃಶ್ಯ ನಾಗುವಹಾಗಿಲ್ಲ. ೪-೧೫-೧, (ಭಾ. ಭಾ. ೩೪೧) ಭಾಷ್ಯವನ್ನೂ ಸೂ. ಭಾ ೧-೨-೧೭, (ಭಾ. ಭಾ. ೧೮೭) ಇವುಗಳ ಭಾಷ್ಯಗಳನ್ನೂ ನೋಡಿ.

ಪುರುಷನಿದ್ದಾನಲ್ಲ ಇವನೇ ಹಿಂದೆ ನಾನು ಹೇಳಿದ ಅಪಹತಪಾಪ್ಮಾದಿಗುಣಗಳುಳ್ಳ ಆತ್ಮನು, ಇವನನ್ನು ಅರಿತುಕೊಳ್ಳುವದರಿಂದಲೇ ಸರ್ವಲೋಕಕಾಮಗಳ ಪ್ರಾಪ್ತಿಯಾಗುವದು. ಇದೇ ಭೂಮವೆಂಬ ಅಮೃತವು, ಆದ್ದರಿಂದಲೇ (ಇದೇ) ಅಭಯವು, ಆದ್ದರಿಂದಲೇ (ಇದೇ) ಬ್ರಹ್ಮವು, ಎಲ್ಲಕ್ಕಿಂತಲೂ ಹೆಚ್ಚಿನದು.

ಆಗ ಈ ಪ್ರಜಾಪತಿಯು ಹೇಳಿದ 'ಈ ಕಣ್ಣಿನಲ್ಲಿ ಪುರುಷನು ಕಾಣಿಸುತ್ತಿದಾನಲ್ಲ' ಎಂಬ ವಾಕ್ಯವನ್ನು ಕೇಳಿ ನೆರಳಿನಾಕಾರದ ಪುರುಷನನ್ನೇ (ಆತ್ಮನೆಂದು ಅಪರಿಬ್ಬರೂ) ಗ್ರಹಿಸಿದರು. ಮತ್ತು (ತಾವು) ಗ್ರಹಿಸಿದ್ದನ್ನು ಗಟ್ಟಿಗೊಳಿಸಿಕೊಳ್ಳುವದಕ್ಕಾಗಿ ಪ್ರಜಾಪತಿಯನ್ನು ಹೀಗೆಂದು ಕೇಳಿದರು : ಹಾಗಾದರೆ ಎಲೈ ಭಗವಂತನೆ, ನೀರಿನಲ್ಲಿ ಕಾಣಿಸುತ್ತಿದಾನಲ್ಲ ಎಲ್ಲೆಲ್ಲಿಯೂ ತಿಳಿಯಬರುತ್ತಿದಾನಲ್ಲ ಈತನು, ಮತ್ತು ಕನ್ನಡಿಯಲ್ಲಿಯೂ ಕತ್ತಿ ಮುಂತಾದವುಗಳಲ್ಲಿಯೂ ತನ್ನ ಪ್ರತಿಬಿಂಬದ ಆಕಾರವಾಗಿ ಕಾಣಬರುತ್ತಿದಾನಲ್ಲ ಈತನು – ಇವರುಗಳಲ್ಲಿ ಪೂಜ್ಯರಾದ ತಾವು ಹೇಳಿದ ಈ (ಆತ್ಮನು) ಯಾರು ? ಅಥವಾ ಇವೆಲ್ಲದರೊಳಗೂ (ಅವನು) ಒಬ್ಬನೇಯೊ ?[1] ಹೀಗೆಂದು ಕೇಳಲು ಪ್ರಜಾಪತಿಯು ಕಣ್ಣಿನಲ್ಲಿ ದ್ರಷ್ಟೃವಿದಾನಲ್ಲ, ಇವನನ್ನೇ ನಾನು ಹೇಳಿದ್ದು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು,[2] ಇಂತೆಂದನು : ಈತನೇ ಈ ಸರ್ವ ಅಂತಗಳಲ್ಲಿಯೂ ಸ್ಥಾನಗಳಲ್ಲಿಯೂ ಕಾಣಿಸುತ್ತಿರುತ್ತಾನೆ– ಎಂದನು.

## ಪ್ರಜಾಪತಿಯು ಇಲ್ಲಿ ಸುಳ್ಳುಹೇಳಿದಾನೆಯೆ?

(ಭಾಷ್ಯ)

೬೫೨. ನನು ಕಥಂ ಯುಕ್ತಂ ಶಿಷ್ಯಯೋರ್ವಿಪರೀತಗ್ರಹಣಮ್ ಅನುಜ್ಞಾತಂ ಪ್ರಜಾಪತೇರ್ವಿಗತದೋಷಸ್ಯ ಆಚಾರ್ಯಸ್ಯ ಸತಃ ? ಸತ್ಯಮೇವಮ್ । ನಾನುಜ್ಞಾತಮ್ । ಕಥಮ್ ? ಆತ್ಮನ್ಯಧ್ಯಾರೋಪಿತಪಾಣ್ಡಿತ್ಯಮಹತ್ತ್ವಬೋದ್ಧೃತ್ವೌ ಹಿ ಇನ್ದ್ರವಿರೋಚನೌ, ತಥೈವ ಚ ಪ್ರಥಿತೌ ಲೋಕೇ । ತೌ ಯದಿ ಪ್ರಜಾಪತಿನಾ ಮೂಢೌ ಯುವಾಂ ವಿಪರೀತಗ್ರಾಹಿಣೌ ಇತ್ಯುಕ್ತೌ ಸ್ಯಾತಾಮ್, ತತಸ್ತಯೋಶ್ಚಿತ್ತೇ ದುಃಖಂ ಸ್ಯಾತ್ । ತಜ್ಜನಿತಾಚ್ಚ ಚಿತ್ತಾವಸಾದಾತ್ ಪುನಃ ಪ್ರಶ್ನಶ್ರವಣಗ್ರಹಣಾವಧಾರಣಂ ಪ್ರತಿ ಉತ್ಸಾಹವಿಘಾತಃ ಸ್ಯಾತ್ । ಅತೋ ರಕ್ಷ

---

1. ಛಾಯಾಪುರುಷನು ಅಕ್ಷಿಪುರುಷನಲ್ಲವೆಂಬುದಕ್ಕೆ ಸೂ ಭಾ. ೧-೨-೧೭ (ಭಾ.ಭಾ ೧೮೪)ವನ್ನು ನೋಡಿ. ಪ್ರಜಾಪತಿಯು ಛಾಯಾಪುರುಷನನ್ನೇ ಅಮೃತಾಭಯಬ್ರಹ್ಮವೆಂದು ಉಪದೇಶಿಸಿದ್ದರೆ ಅವನು ಸುಳ್ಳುಹೇಳಿದನೆಂದಾಗುತ್ತದೆ ಸೂ. ಭಾ. ೧-೩-೨೯ (ಭಾ ಭಾ. ೨೬೭)

2. ನಾನು ಈತನನ್ನೇ ಹೇಳುತ್ತಿದೇನೆ ಎಂಬ ಅಭಿಪ್ರಾಯದಿಂದ ಹೀಗೆಂದನು, ಆದರೆ ಸ್ಪಷ್ಟವಾಗಿ 'ಛಾಯಾಪುರುಷನಲ್ಲ' ಎಂದು ಹೇಳಲಿಲ್ಲ ಎಂದು ಅಭಿಪ್ರಾಯ

ಣೀಯೌ ಶಿಷ್ಯೌ ಇತಿ ಮನ್ಯತೇ ಪ್ರಜಾಪತಿಃ। ಗೃಹ್ಣೀತಾಂ ತಾವತ್ತತ್ ಉದಶರಾವದೃಷ್ಟಾನ್ತೇನ ಅಪನೇಷ್ಯಾಮೀತಿ ಚ। ನನು ನ ಯುಕ್ತಮೇಷ ಉ ಏವ ಇತ್ಯನೃತಂ ವಕ್ತುಮ್! ನ ಚಾನೃತಮುಕ್ತಮ್। ಕಥಮ್? ಆತ್ಮನೋಕ್ತೋ ಅಕ್ಷಿಪುರುಷೋ ಮನಸಿ ಸನ್ನಿಹಿತತರಃ ಶಿಷ್ಯಗೃಹೀತಾತ್ ಛಾಯಾತ್ಮನಃ, ಸರ್ವೇಷಾಂ ಚಾಭ್ಯನ್ತರಃ। "ಸರ್ವಾನ್ತರಃ" (ಬೃ. ೩-೪-೧) ಇತಿ ಶ್ರುತೇಃ। ತಮೇವಾವೋಚತ್ ಏಷ ಉ ಏವೇತಿ। ಅತೋ ನಾನೃತಮುಕ್ತಮ್ ಪ್ರಜಾಪತಿನಾ। ತಥಾ ಚ ತಯೋರ್ವಿಪರೀತಗ್ರಹಣನಿವೃತ್ತ್ಯರ್ಥಂ ಹಿ ಆಹ[1] ॥

(ಭಾಷ್ಯಾರ್ಥ)

(ಆಕ್ಷೇಪ) . ಶಿಷ್ಯರುಗಳ ತಪ್ಪುತಿಳಿವಳಿಕೆಯನ್ನು (ಸರಿ ಎಂದು) ಒಪ್ಪುವದು (ಯಾವ) ದೋಷವೂ ಇಲ್ಲದ ಆಚಾರ್ಯನಾದ[2] ಪ್ರಜಾಪತಿಗೆ ಹೇಗೆ ಯುಕ್ತ ?

(ಪರಿಹಾರ) : ನಿಜ, ಹೀಗೇ (ಸರಿ, ಆದರೆ ಪ್ರಜಾಪತಿಯು) ಒಪ್ಪಿರುವದಿಲ್ಲ. ಹೇಗೆಂದರೆ ಪಾಂಡಿತ್ಯವನ್ನೂ ದೊಡ್ಡಸ್ತಿಕೆಯನ್ನೂ (ವಿಷಯವನ್ನು ಸರಿಯಾಗಿ) ತಿಳಿದುಕೊಂಡಿರುವವರೆಂಬುದನ್ನೂ ಇಂದ್ರವಿರೋಚನರು ತಮ್ಮಲ್ಲಿ ಅಧ್ಯಾರೋಪಿಸಿಕೊಂಡಿರುತ್ತಾರೆ.[3] ಹಾಗೆಂದೇ ಲೋಕದಲ್ಲಿ ಪ್ರಖ್ಯಾತರೂ ಆಗಿರುತ್ತಾರೆ. ಅಂಥವರಿಗೆ ಪ್ರಜಾಪತಿಯು 'ನೀವು ಮೂಢರು, ತಪ್ಪಾಗಿ ತಿಳಿದುಕೊಂಡಿರಿ !' ಎಂದು ಹೇಳಿದ್ದರೆ, ಆಗ ಅವರಿಗೆ ಮನಸ್ಸಿನಲ್ಲಿ ದುಃಖವಾಗುತ್ತಿತ್ತು; ಅದರಿಂದ ಚಿತ್ತವು ಕುಸಿದು ಮತ್ತೆ ಪ್ರಶ್ನೆಮಾಡುವದು, (ಹೇಳಿದ್ದನ್ನು) ಕೇಳುವದು, ಗ್ರಹಿಸುವದು, ನಿಶ್ಚಯಿಸಿಕೊಳ್ಳುವದು-- ಇವುಗಳಲ್ಲಿರುವ ಉತ್ಸಾಹವು ನಾಶವಾಗಿಬಿಡುತ್ತಿತ್ತು. ಆದ್ದರಿಂದ ಶಿಷ್ಯರನ್ನು (ಹಾಗೆಯೇ) ಇಟ್ಟುಕೊಳ್ಳಬೇಕು ಎಂದು ಪ್ರಜಾಪತಿಯು ಅಭಿಪ್ರಾಯಪಟ್ಟಿರುತ್ತಾನೆ. ಈಗ್ಗೆ ಅದನ್ನು (ಹಾಗೆಯೇ) ಗ್ರಹಿಸಿಕೊಂಡಿರಲಿ, (ಅದನ್ನು)[4] ನೀರಿನ ಶರಾವೆಯ ದೃಷ್ಟಾಂತದಲ್ಲಿ ಕಳೆಯುವೆನು ಎಂದೂ (ಅಭಿಪ್ರಾಯಪಟ್ಟಿರುತ್ತಾನೆ).

---

1. ಈ ವಾಕ್ಯವು ಮುಂದಿನ ಖಂಡದ ಭಾಷ್ಯಕ್ಕೆ ಪರಾಮರ್ಶಕ ಇದನ್ನು ಮುಂದಿನ ಕಂಡಿಕೆಯ ಅವತರಣಿಕೆಯಾಗಿಯೇ ವಾ॥ ಪಾಠದಲ್ಲಿಟ್ಟುಕೊಂಡಿದೆ.

2. ದೋಷಗಳಿದ್ದವನು ತಿಳಿಯದೆ ಹೇಳಬಹುದು, ತಿಳಿದುತಿಳಿದೂ ಸುಳ್ಳನ್ನು ಹೇಳಬಹುದು, ಆದರೆ ಶುದ್ಧಸತ್ತ್ವನಾದವನು ಹೇಳಲಾರನು ; ಶಿಷ್ಯರ ಅನುಗ್ರಹಕ್ಕಾಗಿ ಹೊರಟಿರುವ ಆಚಾರ್ಯನಂತೂ ಎಂದಿಗೂ ಹೇಳಲಾರನು ಎಂದು ಭಾವ.

3. ನಿಜವಾಗಿ ಅವರಿಗೆ ಶಾಸ್ತ್ರಜ್ಞಾನವಿಲ್ಲ. ಮಹತ್ತ್ವವೂ ಇಲ್ಲ, ವಿಷಯವನ್ನು ಸರಿಯಾಗಿ ತಿಳಿದುಕೊಳ್ಳುವ ಶಕ್ತಿಯೂ ಇಲ್ಲ- ಎಂದು ಅಭಿಪ್ರಾಯ.

4. ಇಲ್ಲಿರುವ ತತ್ ಎಂಬ ಶಬ್ದವು ಮಧ್ಯಮಣಿನ್ಯಾಯದಿಂದ ಹಿಂದಿನ ವಾಕ್ಯಕ್ಕೂ ಮುಂದಿನ ವಾಕ್ಯಕ್ಕೂ ಅನ್ವಯಿಸುತ್ತದೆ

(ಆಕ್ಷೇಪ) : — 'ಈತನೇ (ಎಲ್ಲೆಲ್ಲಿಯೂ ಕಾಣಿಸುತ್ತಿರುತ್ತಾನೆ)' ಎಂದು ಸುಳ್ಳನ್ನು ಹೇಳಿದ್ದು ಸರಿಯಲ್ಲವಲ್ಲವೆ ?

( ಪರಿಹಾರ.) :— ಸುಳ್ಳನ್ನು ಹೇಳಿಯೂ ಇಲ್ಲ. ಹೇಗೆಂದರೆ, ತಾನು ಹೇಳಿದ ಅಕ್ಷಿಪುರುಷನು ಶಿಷ್ಯರು ಗ್ರಹಿಸಿರುವ ಛಾಯಾತ್ಮನಿಗಿಂತ (ಅವನ) ಮನಸ್ಸಿನಲ್ಲಿ ಇನ್ನೂ ಹತ್ತಿರದಲ್ಲಿರುತ್ತಾನೆ, ಮತ್ತು ಎಲ್ಲಕ್ಕಿಂತಲೂ ಒಳಗೆ ಇರುತ್ತಾನೆ, ಏಕೆಂದರೆ "ಸರ್ವಾಂತರನು" (ಬೃ ೩-೪-೧) ಎಂದು ಶ್ರುತಿಯಿದೆ.[1] ಅವನನ್ನೇ "ಈತನೇ" ಎಂದು ಹೇಳಿರುತ್ತಾನೆ[2], ಆದ್ದರಿಂದ ಪ್ರಜಾಪತಿಯು ಸುಳ್ಳುಹೇಳಲಿಲ್ಲ ಆದ್ದರಿಂದಲೇ ಅಲ್ಲವೆ, ಅವರ ತಪ್ಪುತಿಳಿವಳಿಕೆಯನ್ನು ತೊಲಗಿಸುವದಕ್ಕೆ ಮುಂದೆ ಹೇಳಿದಾನೆ ?[3]

---

# ಎಂಟನೆಯ ಅಧ್ಯಾಯ-ಎಂಟನೆಯ ಖಂಡ

(ಅವಸ್ಥಾತ್ರಯನಿರೂಪಣ)

## ನೀರಿನ ಶ್ರಾವೆಯ ದೃಷ್ಟಾಂತ

(ಉಪನಿಷತ್ತು)

**ಉದಶರಾವ ಆತ್ಮಾನಮವೇಕ್ಷ್ಯ ಯದಾತ್ಮನೋ ನ ವಿಜಾನೀಥ ಸ್ತನ್ಮೇ ಪ್ರಬ್ರೂತಮಿತಿ ತೌ ಹೋದಶರಾವೇಽವೇಕ್ಷಾಂಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ ತೌ ಹೋಚತುಃ ಸರ್ವಮೇವೇದಮಾವಾಂ ಭಗವ ಆತ್ಮಾನಂ ಪಶ್ಯಾವ ಆ ಲೋಮಭ್ಯ ಆ ನಖೇಭ್ಯಃ ಪ್ರತಿರೂಪಮಿತಿ ॥ ೧ ॥**

೧. 'ಉದಶರಾವದಲ್ಲಿ ನಿಮ್ಮನ್ನು ನೋಡಿಕೊಂಡು ಆತ್ಮನ (ವಿಷಯದಲ್ಲಿ) ಏನು ತಿಳಿಯದೆ ಇರುವಿರೋ ಅದನ್ನು ನನಗೆ ಹೇಳಿರಿ'.

---

1 ಈತನೇ ಎಂದು ಏತಚ್ಛಬ್ದದಿಂದ ಹೇಳಿರುವದು ಅತ್ಯಂತ ಸಮೀಪದಲ್ಲಿರುವ ಸರ್ವಾಂತರಾತ್ಮನನ್ನು ತಿಳಿಸುವದಕ್ಕೆ ಎಂದು ಅಭಿಪ್ರಾಯ.

2. ಈ ದ್ರಷ್ಟೃವಾದ ಆತ್ಮನೇ ಈ ಎಲ್ಲಾ ಸ್ಥಾನಗಳಲ್ಲಿಯೂ ಸರಿಯಾಗಿ ನೋಡುವವರಿಗೆ ಕಾಣಬರುತ್ತಾನೆ. ಯಾವ ಆಕಾರವನ್ನು ನೋಡುವದಕ್ಕೂ ಈ ಅಕ್ಷ್ಯುಪಲಕ್ಷಿತನಾದ ದ್ರಷ್ಟೃವೇ ಬೇಕು, ಇವನನ್ನು ಬಿಟ್ಟರೆ ನೀವು ಹೇಳಿದ ಯಾವ ಪುರುಷನೂ ಕಾಣಿಸುವಂತೆಯೇ ಇಲ್ಲ- ಎಂಬ ಅಭಿಪ್ರಾಯವು ಈ ಪ್ರಜಾಪತಿವಾಕ್ಯದಲ್ಲಿ ಅಡಗಿದೆ.

3. ಆದ್ದರಿಂದಲೂ ಸುಳ್ಳುಹೇಳಿದಂತಾಗಲಿಲ್ಲ ಎಂದು ಭಾವ.

ಅವರು ಉದಶರಾವದಲ್ಲಿ ನೋಡಿದರು. ಅವರನ್ನು ಕುರಿತು ಪ್ರಜಾ ಪತಿಯು 'ನಿಮಗೆ ಏನು ಕಾಣಿಸುತ್ತಿದೆ?' ಎಂದನು. ಅವರು 'ಭಗವಂತನೆ, ನಾವು ಇದೆಲ್ಲವನ್ನೂ ಕೂದಲುಗಳವರೆಗೂ ಉಗುರುಗಳ ವರೆಗೂ ಪ್ರತಿಬಿಂಬವನ್ನು ಕಾಣುತ್ತಿದ್ದೇವೆ' ಎಂದರು.

## ಶ್ರಾವೆಯಲ್ಲಿ ಪ್ರತಿಬಿಂಬದರ್ಶನ

(ಭಾಷ್ಯ)

೬೫೩ ಉದಶರಾವೇ ಉದಕಪೂರ್ಣೇ ಶರಾವಾದೌ ಆತ್ಮಾನಮವೇಕ್ಷ್ಯ ಅನನ್ತರಂ ಯತ್ತತ್ರ ಆತ್ಮಾನಂ ಪಶ್ಯನ್ತೌ (ಆತ್ಮನಃ)[1] ನ ವಿಜಾನೀಥಃ, ತನ್ಮೇ ಮಮ ಪ್ರಬ್ರೂತಮ್ ಆಚಕ್ಷೀಯಾಥಾಮ್ । ಇತ್ಯುಕ್ತೌ ತೌ ಹ ತಥೈವ ಉಪ ಶರಾವೇ ಅವೇಕ್ಷಾಂಚಕ್ರಾತೇ ಅವೇಕ್ಷಣಂ ಚಕ್ರತುಃ । ತಥಾ ಕೃತವನ್ತೌ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥಃ ? ಇತಿ ? ನನು 'ತನ್ಮೇ ಪ್ರಬ್ರೂತಮ್' ಇತ್ಯುಕ್ತಾಭ್ಯಾಮ್ ಉದಶರಾವೇ ಅವೇಕ್ಷಣಂ ಕೃತ್ವಾ ಪ್ರಜಾಪತಯೇ ನ ನಿವೇದಿ ತಮ್ 'ಇದಮ್ ಆವಾಭ್ಯಾಂ ನ ವಿದಿತಮ್' ಇತಿ । ಅನಿವೇದಿತೇ ಚ ಅಜ್ಞಾನ ಹೇತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ । ತತ್ರ ಕೋಽಭಿಪ್ರಾಯ ಇತಿ । ಉಚ್ಯತೇ । ನೈವ ತಯೋಃ 'ಇದಮಾವಯೋರವಿದಿತಮ್' ಇತ್ಯಾಶಙ್ಕಾ ಅಭೂತ್ । ಛಾಯಾತ್ಮನಿ ಆತ್ಮಪ್ರತ್ಯಯೋ ನಿಶ್ಚಿತ ಏವಾಽಽಸೀತ್ । ಯೇನ ವಕ್ಷ್ಯತಿ "ತೌ ಹ ಶಾನ್ತಹೃದಯೌ ಪ್ರವವ್ರಜತುಃ" (೮-೮-೩) ಇತಿ । ನ ಹಿ ನಿಶ್ಚಿತೇ ಅಭಿಪ್ರೇತಾರ್ಥೇ ಪ್ರಶಾನ್ತಹೃದಯತ್ವಮ್ ಉಪಪದ್ಯತೇ । ತೇನ ನೋಚತುಃ 'ಇದಮಾವಾಭ್ಯಾಮ್ ಅವಿದಿತಮ್' ಇತಿ । ವಿಪರೀತಗ್ರಾಹಿಣೌ ಚ ಶಿಷ್ಯೌ ಅನುಪೇಕ್ಷಣೀಯೌ ಇತಿ ಸ್ವಯಮೇವ ಪಪ್ರಚ್ಛ ಕಿಂ ಪಶ್ಯಥ ?' ಇತಿ । ವಿಪರೀತನಿಶ್ಚಯಾಪನಯಾಯ ಚ ವಕ್ಷ್ಯತಿ "ಸಾಧ್ವಲಂಕೃತೌ" (೮-೮-೨) ಇತ್ಯೇವಮಾದಿ । ತೌ ಹೋಚತುಃ । ಸರ್ವಮೇವೇದಮಾವಾಂ ಭಗವ ಆತ್ಮಾನಂ ಪಶ್ಯಾವಃ ಆ ಲೋಮಭ್ಯ ಆ ನಖೇಭ್ಯಃ ಪ್ರತಿರೂಪಮ್ ಇತಿ । ಯಥೈವ ಆವಾಂ ಹೇ ಭಗವಃ ಲೋಮನಖಾದಿಮನ್ತೌ ಸ್ವಃ, ಏವಮೇವ ಇದಂ ಲೋಮನಖಾದಿ ಸಹಿತಮ್ ಆವಯೋಃ ಪ್ರತಿರೂಪಮ್ ಉದಶರಾವೇ ಪಶ್ಯಾವಃ ಇತಿ ॥

(ಭಾಷ್ಯಾರ್ಥ)

ಉದಶರಾವದಲ್ಲಿ ನೀರುತುಂಬಿದ ಶ್ರಾವೆಯೇ ಮುಂತಾದದ್ದರಲ್ಲಿ[2] ನಿಮ್ಮನ್ನು

---

1. ಈ ಮಾತು ಇಲ್ಲಿ ಬಿಟ್ಟುಹೋಗಿರುತ್ತದೆ.

2. ಇಲ್ಲಿ 'ಆದೌ' ಎಂಬ ಮಾತು ಮೂಲದಲ್ಲಿಕ್ಕೋ ಇಲ್ಲವೋ ತಿಳಿಯದು, ಪಾತ್ರೆಯು ಮುಖ್ಯವಲ್ಲವೆಂಬುದನ್ನು ತಿಳಿಸುವದಕ್ಕೆ ಆಚಾರ್ಯರು ಈ ಮಾತನ್ನು ಹಾಕಿದ್ದರೂ ಹಾಕಿರ ಬಹುದು.

ನೋಡಿಕೊಂಡು ಆ ಬಳಿಕ ಅಲ್ಲಿ ನಿಮ್ಮನ್ನು ನೋಡಿಕೊಂಡ ಬಳಿಕ (ಆತ್ಮನ ವಿಷಯದಲ್ಲಿ) ಯಾವದು ನಿಮಗೆ ತಿಳಿಯುವದಿಲ್ಲವೋ ಅದನ್ನು (ಮೇ=ಮಮ) ನನಗೆ ಹೇಳಿರಿ, ತಿಳಿಸಿರಿ ಎಂದು (ಪ್ರಜಾಪತಿಯು) ಹೇಳಲು ಅವರು ಹಾಗೆಯೇ ನೀರಿನ ಶ್ರಾವೆಯಲ್ಲಿ ( ಅವೇಕ್ಷಾಂಚಕ್ರಾತೇ=ಅವೇಕ್ಷಣಂ ಕೃತವನ್ತೌ) ನೋಡಿ ಕೊಂಡರು. ಹಾಗೆ ಮಾಡಿ(ಬಂದ) ಅವರನ್ನು ಪ್ರಜಾಪತಿಯು 'ನಿಮಗೆ ಏನು ಕಾಣಿಸುತ್ತಿದೆ ? ' ಎಂದನು.

(ಪ್ರಶ್ನೆ) :- 'ಅದನ್ನು ನನಗೆ ಹೇಳಿರಿ' ಎಂದು ಹೇಳಿದ ಮೇಲೆ ನೀರಿನ ಶ್ರಾವೆ ಯಲ್ಲಿ ನೋಡಿ ಪ್ರಜಾಪತಿಗೆ 'ಇದು ನಮಗೆ ತಿಳಿಯಲಿಲ್ಲ' ಎಂದು ಹೇಳಲಿಲ್ಲ. ಆದರೆ ಅಜ್ಞಾನಕಾರಣವನ್ನು (ಅವರು) ತಿಳಿಸದಿದ್ದರೂ ಪ್ರಜಾಪತಿಯು 'ನಿಮಗೆ ಏನು ಕಾಣಿಸುತ್ತದೆ ?' ಎಂದು ಕೇಳಿದನು. ಇಲ್ಲಿ (ಅವನ) ಅಭಿಪ್ರಾಯವೇನು ?

(ಉತ್ತರ) :— ಹೇಳುತ್ತೇವೆ. 'ಇದು ನಮಗೆ ತಿಳಿಯಲಿಲ್ಲ' ಎಂಬ ಆಶಂಕೆಯು ಅವರಿಗೆ ಆಗಲೇ ಇಲ್ಲ. ಛಾಯಾತ್ಮನೇ ಆತ್ಮನೆಂಬ ತಿಳಿವಳಿಕೆಯು[1] ಅವರಿಗೆ ನಿಶ್ಚಿತವಾಗಿಯೇ ಆಯಿತು. ಆದ್ದರಿಂದಲೇ "ಅವರು ಶಾಂತಹೃದಯರಾಗಿ ಹೊರಟುಹೋದರು" (೮-೮-೩) ಎಂದು ಮುಂದೆ ಹೇಳಿರುತ್ತದೆ. ತಮ್ಮ ಅಭಿಪ್ರಾಯದ ವಿಷಯದಲ್ಲಿ ನಿಶ್ಚಯವಾಗದೆ ಇದ್ದರೆ ಪ್ರಶಾಂತಹೃದಯರಾಗುವ ದೆಂಬುದು ಹೊಂದಲಾರದಷ್ಟೆ , ಆದ್ದರಿಂದ (ಅವರು) 'ನಮಗೆ ಇದು ತಿಳಿಯಲಿಲ್ಲ' ಎಂದು ಹೇಳಲಿಲ್ಲ. ಆದರೆ ತಪ್ಪುಗ್ರಹಿಕೆಯುಳ್ಳವರಾದ ಶಿಷ್ಯರನ್ನು ಉಪೇಕ್ಷೆಮಾಡ ತಕ್ಕದ್ದಲ್ಲ ಎಂದು (ಪ್ರಜಾಪತಿಯು) 'ನಿಮಗೆ ಏನು ಕಾಣಿಸುತ್ತಿದೆ ?' ಎಂದು ತಾನೇ ಕೇಳಿದನು. ಈ ತಪ್ಪುನಿಶ್ಚಯವನ್ನು ಕಳೆದುಹಾಕುವದಕ್ಕೆ "ಚೆನ್ನಾಗಿ ಅಲಂಕೃತರಾಗಿ" (೮-೮-೨) ಎಂದು ಮುಂತಾಗಿ (ಮುಂದೆ) ಹೇಳಿಯೂ ಇರು ತ್ತಾನೆ.[2]

ಅವರಿಬ್ಬರೂ ಇಂತೆಂದರು : "ಭಗವಂತನೆ, ನಾವು ಇದೆಲ್ಲ ಆತ್ಮವನ್ನು- ಕೂದಲುಗಳವರೆಗೂ ಉಗುರುಗಳವರೆಗೂ (ಎಲ್ಲದರ) ಪ್ರತಿಬಿಂಬವನ್ನೂ- ನೀರಿನ ಶ್ರಾವೆಯಲ್ಲಿ ಕಾಣುತ್ತಲಿದ್ದೇವೆ" ಎಂದರು.

## ಅಲಂಕರಿಸಿಕೊಂಡು ಪ್ರತಿಬಿಂಬವನ್ನು ನೋಡಿದ್ದು

(ಉಪನಿಷತ್ತು)

**ತೌ ಹ ಪ್ರಜಾಪತಿರುವಾಚ ಸಾಧ್ವಲಂಕೃತೌ ಸುವಸನೌ ಪರಿ ಷ್ಕೃತೌ ಭೂತ್ವೋದಶರಾವೇಽವೇಕ್ಷೇಥಾಮಿತಿ ತೌ ಹ ಸಾಧ್ವಲಂ**

---

1. ನಮ್ಮದೇ ಈ ನೆರಳು, ಆದ್ದರಿಂದ ದೇಹವೇ ಆತ್ಮನು ಎಂಬ ತಿಳಿವಳಿಕೆಯು- ಎಂದಭಿಪ್ರಾಯ.

2. ಆದ್ದರಿಂದಲೂ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕೆಂದು ತಾನೇ ಈ ಪ್ರಶ್ನೆ ಯನ್ನು ಹಾಕಿದ್ದಾನೆಂದು ನಿಶ್ಚಯವಾಗುತ್ತದೆ ಎಂದು ಭಾವ.

**ಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷಾಂ ಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ ॥ ೨ ॥**

೨. ಅವರನ್ನು ಪ್ರಜಾಪತಿಯು ಹೇಳಿದನು: 'ಚೆನ್ನಾಗಿ ಅಲಂಕೃತರಾಗಿ, ಸುವಸನರಾಗಿ, ಪರಿಷ್ಕೃತರಾಗಿ ಉದಶರಾವದಲ್ಲಿ ನೋಡಿಕೊಳ್ಳಿರಿ.' ಅವರು ಚೆನ್ನಾಗಿ ಅಲಂಕೃತರಾಗಿ ಸುವಸನರಾಗಿ ಪರಿಷ್ಕೃತರಾಗಿ ಉದಶರಾವದಲ್ಲಿ ನೋಡಿಕೊಂಡರು. ಅವರನ್ನು ಪ್ರಜಾಪತಿಯು 'ನಿಮಗೆ ಏನು ಕಾಣಿಸುತ್ತಿದೆ?' ಎಂದನು.

## ಅಲಂಕರಿಸಿಕೊಂಡು ನೋಡಿಸಿದ್ದರ ಅಭಿಪ್ರಾಯ

(ಭಾಷ್ಯ)

೬೫೪. ತೌ ಹ ಪುನಃ ಪ್ರಜಾಪತಿರುವಾಚ ಛಾಯಾತ್ಮನಿಶ್ಚಯಾಪನಯನಾಯ। ಸಾಧ್ವಲಂಕೃತೌ ಯಥಾ ಸ್ವಗೃಹೇ ಸುವಸನೌ ಮಹಾರ್ಹವಸ್ತ್ರಪರಿಧಾನೌ ಪರಿಷ್ಕೃತೌ ಛಿನ್ನಲೋಮನಖೌ ಚ ಭೂತ್ವಾ ಉದಶರಾವೇ ಪುನರೀಕ್ಷೇಥಾಮ್[1] ಇತಿ। ಇಹ ಚ ನಾದಿದೇಶ 'ಯದಜ್ಞಾತಂ ತನ್ಮೇ ಪ್ರಬ್ರೂತಮ್' ಇತಿ। ಕಥಂ ಪುನರನೇನ ಸಾಧ್ವಲಂಕಾರಾದಿ ಕೃತ್ವಾ ಉದಶರಾವೇ ಅವೇಕ್ಷಣೇನ ತಯೋಶ್ಛಾಯಾತ್ಮಗ್ರಹೋಽಪನೀತಃ ಸ್ಯಾತ್? ಸಾಧ್ವಲಂಕಾರಸುವಸನಾದೀನಾಮ್ ಆಗನ್ತುಕಾನಾಂ ಛಾಯಾಕರತ್ವಮ್ ಉದಶರಾವೇ ಯಥಾ ಶರೀರಸಂಬದ್ಧಾನಾಮ್, ಏವಂ ಶರೀರಸ್ಯಾಪಿ ಛಾಯಾಕರತ್ವಮ್ ಪೂರ್ವಂ ಬಭೂವ ಇತಿ ಗಮ್ಯತೇ। ಶರೀರೈಕದೇಶಾನಾಂ ಚ ಲೋಮನಖಾದೀನಾಂ ನಿತ್ಯತ್ವೇನಾಭಿಪ್ರೇತಾನಾಮ್ ಅಖಣ್ಡಿತಾನಾಂ ಛಾಯಾಕರತ್ವಂ ಪೂರ್ವಮಾಸೀತ್। ಛಿನ್ನೇಷು ಚ ನೈವ ಲೋಮನಖಾದಿಚ್ಛಾಯಾ ದೃಶ್ಯತೇ। ಅತಃ ಲೋಮನಖಾದಿವತ್ ಶರೀರಸ್ಯಾಪ್ಯಾಗಮಾಪಾಯಿತ್ವಂ ಸಿದ್ಧಮಿತಿ ಉದಶರಾವಾದೌ ದೃಶ್ಯಮಾನಸ್ಯ ತನ್ನಿಮಿತ್ತಸ್ಯ ಚ ದೇಹಸ್ಯ ಅನಾತ್ಮತ್ವಂ ಸಿದ್ಧಮ್। ಉದಶರಾವಾದೌ ಛಾಯಾಕರತ್ವಾತ್। ದೇಹಸಂಬದ್ಧಾಲಂಕಾರಾದಿವತ್। ನ ಕೇವಲಮ್ ಏತಾವತ್। ಏತೇನ ಯಾವತ್ ಕಿಂಚಿದಾತ್ಮೀಯತ್ವಾಭಿಮತಂ ಸುಖದುಃಖರಾಗದ್ವೇಷಮೋಹಾದಿ ಚ ಕಾದಾಚಿತ್ಕತ್ವಾತ್ ನಖಲೋಮಾದಿವದನಾತ್ಮಾ ಇತಿ ಪ್ರತ್ಯೇತವ್ಯಮ್। ಏವಮ್ ಅಶೇಷಮಿಥ್ಯಾಗ್ರಹಾಪನಯನನಿಮಿತ್ತೇ ಸಾಧ್ವಲಂಕಾರಾದಿ ದೃಷ್ಟಾನ್ತೇ ಪ್ರಜಾಪತಿನಾ ಉಕ್ತೇ ಶ್ರುತ್ವಾ ತಥಾ ಕೃತವತೋರಪಿ ಛಾಯಾತ್ಮ

---

1. 'ಅವೇಕ್ಷೇಥಾಮ್' ಎಂದೇ ಮೊದಲು ಭಾಷ್ಯದಲ್ಲಿದ್ದು 'ಈಕ್ಷೇಥಾಮ್' ಎಂದು ಲೇಖಕರು ಬರೆದುಕೊಂಡಿರಬಹುದೇನೊ.

ವಿಪರೀತಗ್ರಹೋ ನಾಪಜಗಾಮ ಯಸ್ಮಾತ್ ತಸ್ಮಾತ್ ಸ್ವದೋಷೇಣೈವ ಕೇನ ಚಿತ್ ಪ್ರತಿಬದ್ಧವಿವೇಕವಿಜ್ಞಾನೌ ಇನ್ದ್ರವಿರೋಚನೌ ಅಭೂತಾಮಿತಿ ಗಮ್ಯತೇ, ತೌ ಪೂರ್ವವದೇವ ದೃಢನಿಶ್ಚಯೌ ಪಪ್ರಚ್ಛ 'ಕಿಂ ಪಶ್ಯಥಃ' ಇತಿ ॥

(ಭಾಷ್ಯಾರ್ಥ)

ಅವರನ್ನು ಕುರಿತು ಪ್ರಜಾಪತಿಯು ಛಾಯಾತ್ಮನಿಶ್ಚಯವನ್ನು ತೊಲಗಿಸುವದಕ್ಕಾಗಿ ಮತ್ತೂ ಇಂತೆಂದನು "ನಿಮ್ಮ ಮನೆಯಲ್ಲಿ ಹೇಗೋ ಹಾಗೆ ಚೆನ್ನಾಗಿ ಅಲಂಕರಿಸಿಕೊಂಡು, ಸುವಸನರಾಗಿ ಹೆಚ್ಚಿನ ಬೆಲೆಯುಳ್ಳ ವಸ್ತ್ರಗಳನ್ನು ಹೊದೆದುಕೊಂಡು, ಪರಿಷ್ಕೃತರಾಗಿ ಕೂದಲುಗಳನ್ನೂ ಉಗುರುಗಳನ್ನೂ ತಗೆಸಿಹಾಕಿಕೊಂಡವರಾಗಿ ನೀರಿನ ಶ್ರಾವೆಯಲ್ಲಿ ಮತ್ತೆ ನೋಡಿಕೊಳ್ಳಿರಿ" ಆದರೆ ಇಲ್ಲಿ ಏನು ತಿಳಿಯುವದಿಲ್ಲವೋ ಅದನ್ನು ನನಗೆ ಹೇಳಿರಿ ಎಂದು ಅಪ್ಪಣೆಮಾಡಲಿಲ್ಲ[1]

(ಪ್ರಶ್ನೆ):— ಹೀಗೆ ಚೆನ್ನಾಗಿ ಅಲಂಕಾರಮಾಡಿಕೊಂಡು ನೀರಿನ ಶ್ರಾವೆಯಲ್ಲಿ ನೋಡಿಕೊಂಡದ್ದರಿಂದ ಛಾಯೆಯೇ ಆತ್ಮನೆಂಬ ಅವರ ತಿಳಿವಳಿಕೆಯು ಹೇಗೆ ತೊಲಗೀತು ?

(ಉತ್ತರ) — ಆಗಂತುಕವಾಗಿ ಶರೀರಕ್ಕೆ ಸಂಬದ್ಧವಾಗಿದ್ದ ಒಳ್ಳೆಯ ಅಲಂಕಾರ, ಒಳ್ಳೆಯ ವಸ್ತ್ರಗಳು ಮುಂತಾದವು ಹೇಗೆ ನೀರಿನ ಶ್ರಾವೆಯಲ್ಲಿ ನೆರಳನ್ನುಂಟುಮಾಡಿದವೋ, ಹಾಗೆಯೇ ಶರೀರವೂಕೂಡ ಇದಕ್ಕೆ ಮೊದಲು ನೆರಳನ್ನುಂಟುಮಾಡಿತು ಎಂದು ನಿಶ್ಚಯವಾಗುತ್ತದೆ ಶರೀರದ ಒಂದು ಭಾಗವಾದ ನಿತ್ಯವೆಂದು ಬಗೆದಿದ್ದ, ಕೂದಲು ಉಗುರು ಮುಂತಾದವುಗಳಿಗೆ ಕತ್ತರಿಸಿ ಹಾಕುವದಕ್ಕೆ ಮುಂಚೆ—ಛಾಯಾಕರತ್ವವಿತ್ತು; ಕತ್ತರಿಸಿಹಾಕಿದ ಮೇಲೆ ಕೂದಲು, ಉಗುರು - ಮುಂತಾದವುಗಳ ನೆರಳು (ಈಗ) ಕಾಣಿಸುವದೇ ಇಲ್ಲ ಆದ್ದರಿಂದ ಕೂದಲು, ಉಗುರು - ಮುಂತಾದವುಗಳಂತೆ ಶರೀರವುಕೂಡ ಹೋಗೀ ಬಂದೂ ಮಾಡತಕ್ಕದ್ದು ಎಂದು ಸಿದ್ಧವಾಯಿತಾದ್ದರಿಂದ ನೀರಿನ ಶ್ರಾವೆಯೇ ಮುಂತಾದದ್ದರಲ್ಲಿ ಕಾಣುವದೂ ಮತ್ತು ಅದಕ್ಕೆ ನಿಮಿತ್ತವಾದ ದೇಹವೂ ಅನಾತ್ಮವೆಂದು ಸಿದ್ಧವಾಯಿತು , ಏಕೆಂದರೆ ದೇಹಸಂಬದ್ಧವಾದ ಅಲಂಕಾರಾದಿಗಳಂತೆಯೇ (ಇವೂ) ನೀರಿನ ಶ್ರಾವೆಯಂತೆಯೇ ಮುಂತಾದವುಗಳಲ್ಲಿ ನೆರಳನ್ನುಂಟುಮಾಡುತ್ತವೆ. ಇಷ್ಟೇ ಅಲ್ಲ, ಇದರಿಂದ **ಯಾವ ಯಾವದು ತನ್ನದೆಂದು ಅಭಿಮತವಾಗಿರುವದೋ (ಆ) ಸುಖದುಃಖ ರಾಗದ್ವೇಷಮೋಹಾದಿಗಳುಕೂಡ, ಆಗಂತುಕವಾಗಿರುವದರಿಂದ ಉಗುರು ಕೂದಲುಗಳಂತೆ ಅನಾತ್ಮವೇ ಎಂದು ತಿಳಿಯಬೇಕು.**

---

1 ಆದ್ದರಿಂದ ಈ ದೃಷ್ಟಾಂತದಿಂದ ಅವರ ತಪ್ಪುತಿಳಿಕೆಯು ಹೋಗಿರಬೇಕೆಂದು ಅವನು ನಿರೀಕ್ಷಿಸಿದ್ದನೆಂದು ಗೊತ್ತಾಗುತ್ತದೆ ಎಂದು ಅಭಿಪ್ರಾಯ.

ಹೀಗೆ ತಪ್ಪುತಿಳಿವಳಿಕೆಯನ್ನೆಲ್ಲ ತೊಲಗಿಸುವದಕ್ಕೆ ಕಾರಣವಾದ ಸಾಧ್ವಲಂಕಾರಾದಿದೃಷ್ಟಾಂತವನ್ನು ಪ್ರಜಾಪತಿಯು ಹೇಳಲು (ಅದನ್ನು) ಕೇಳಿ ಅವರಿಬ್ಬರೂ ಹಾಗೆ ಮಾಡಿದರೂ ಛಾಯಾತ್ಮವಿಪರೀತಜ್ಞಾನವು ಹೋಗಲಿಲ್ಲವಷ್ಟೆ, ಆದರಿಂದ ಯಾವದೋ ಒಂದು ತಮ್ಮ ದೋಷದಿಂದಲೇ ಇಂದ್ರವಿರೋಚನರ ವಿವೇಕಜ್ಞಾನಕ್ಕೆ ಅಡ್ಡಿಯಾಗಿತ್ತೆಂದು ನಿಶ್ಚಯವಾಗುತ್ತದೆ ಹೀಗೆ ಗಟ್ಟಿಯಾಗಿ ನಿಶ್ಚಯಿಸಿಕೊಂಡಿದ್ದ ಅವರನ್ನು ಮೊದಲಿನಂತೆಯೇ[1] ನಿಮಗೆ ಏನು ಕಾಣಿಸುತ್ತದೆ ? ಎಂದು ಕೇಳಿದನು.

## ಇಂದ್ರವಿರೋಚನರು ಹಿಂತಿರುಗಿಹೋದದ್ದು

(ಉಪನಿಷತ್ತು)

**ತೌ ಹೋಚತುರ್ಯಥೈವೇದಮಾವಾಂ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಸ್ವ ಏವಮೇವೇಮೌ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತಾವಿತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ ಬ್ರಹ್ಮೇತಿ ತೌ ಹ ಶಾನ್ತಹೃದಯೌ ಪ್ರವವ್ರಜತುಃ ॥ ೩ ॥**

೧. ಅವರು ಇಂತೆಂದರು: 'ಭಗವಂತನೆ, ನಾವು ಹೇಗೆ ಚೆನ್ನಾಗಿ ಅಲಂಕರಿಸಿಕೊಂಡು ಸುವಸನರಾಗಿ ಪರಿಷ್ಕೃತರಾಗಿರುತ್ತೇವೋ ಹೀಗೆಯೇ ಭಗವಂತನೆ, ಇವರೂ ಚೆನ್ನಾಗಿ ಅಲಂಕರಿಸಿಕೊಂಡು ಸುವಸನರಾಗಿ ಪರಿಷ್ಕೃತರಾಗಿ(ರುತ್ತಾರೆ)'. (ಅವನು) 'ಇವನೇ ಆತ್ಮನು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು' ಎಂದನು. ಅವರು ಶಾಂತಹೃದಯರಾಗಿ ಹೊರಟುಹೋದರು.

## ಪ್ರಜಾಪತಿಯು ಮತ್ತೂ ಆತ್ಮಸ್ವರೂಪವನ್ನೇ ಹೇಳಿ ಸುಮ್ಮನಾದದ್ದು

(ಭಾಷ್ಯ)

೬೫೫. ತೌ ತಥೈವ ಪ್ರತಿಪನ್ನೌ ಯಥೈವೇದಮಿತಿ ಪೂರ್ವವತ್ । ಯಥಾ ಸಾಧ್ವಲಂಕಾರಾದಿವಿಶಿಷ್ಟಾವಾವಾಂ ಸ್ವಃ, ಏವಮೇವ ಇಮೌ ಛಾಯಾತ್ಮಾನಾವಿತಿ ಸುತರಾಂ ವಿಪರೀತನಿಶ್ಚಯೌ ಬಭೂವತುಃ । ಯಸ್ಯ ಆತ್ಮನೋ

1. ಇನ್ನೊಂದು ಉಪಾಯದಿಂದ ಇವರ ತಪ್ಪುತಿಳಿವಳಿಕೆಯನ್ನು ತೊಲಗಿಸಬೇಕೆಂಬ ಉದ್ದೇಶದಿಂದ ಎಂದರ್ಥ.

ಲಕ್ಷಣಂ ‘ಯ ಆತ್ಮಾಽಪಹತಪಾಪ್ಮಾ’ (೮-೭-೧) ಇತ್ಯುಕ್ತ್ವಾ ಪುನಸ್ತದ್ವಿಶೇಷಮನ್ವೇಷಮಾಣಯೋಃ[1] ‘ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ’ (೮-೭-೪) ಇತಿ ಸಾಕ್ಷಾದಾತ್ಮನಿ ನಿರ್ದಿಷ್ಟೇ ತದ್ವಿಪರೀತಗ್ರಹಾಪನಯಾಯ ಉದಶರಾವಸಾಧ್ವಲಂಕಾರದೃಷ್ಟಾನ್ತೇಽಪಿ ಅಭಿಹಿತೇ ಆತ್ಮಸ್ವರೂಪಬೋಧಾದ್ ವಿಪರೀತಗ್ರಹೋ ನಾಪಗತಃ। ಅತಃ ಸ್ವದೋಷೇಣ ಕೇನಚಿತ್ ಪ್ರತಿಬದ್ಧೌ ವಿವೇಕವಿಜ್ಞಾನಸಾಮರ್ಥ್ಯೇ ಇತಿ ಮತ್ವಾ ಯಥಾಭಿಪ್ರೇತಮೇವ ಆತ್ಮಾನಂ ಮನಸಿ ನಿಧಾಯ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ಪ್ರಜಾಪತಿಃ ಪೂರ್ವವತ್। ನ ತು ತದಭಿಪ್ರೇತಮಾತ್ಮಾನಮ್। ‘ಯ ಆತ್ಮಾ’ (೮-೭-೧) ಇತ್ಯಾದ್ಯಾತ್ಮಲಕ್ಷಣಶ್ರವಣೇನ, ಅಕ್ಷಿಪುರುಷಶ್ರುತ್ಯಾ ಚ, ಉದಶರಾವಾದ್ಯುಪಪತ್ತ್ಯಾ ಚ ಸಂಸ್ಕೃತೌ ತಾವತ್। ಮದ್ವಚನಂ ಸರ್ವಂ ಪುನಃ ಪುನಃ ಸ್ಮರತೋಃ ಪ್ರತಿಬನ್ಧಕ್ಷಯಾಚ್ಚ ಸ್ವಯಮೇವ ಆತ್ಮವಿಷಯೋ ವಿವೇಕೋ ಭವಿಷ್ಯತೀತಿ ಮನ್ವಾನಃ ಪುನರ್ಬ್ರಹ್ಮಚರ್ಯಾದೇಶೇ ಚ ತಯೋಃ ಚಿತ್ತದುಃಖೋತ್ಪತ್ತಿಂ ಪರಿಜಿಹೀರ್ಷನ್ ಕೃತಾರ್ಥಬುದ್ಧಿತಯಾ ಗಚ್ಛನ್ತಾವಪಿ ಉಪೇಕ್ಷಿತವಾನ್ ಪ್ರಜಾಪತಿಃ। ತೌ ಹ ಇನ್ದ್ರವಿರೋಚನೌ ಶಾನ್ತಹೃದಯೌ ತುಷ್ಟಹೃದಯೌ ಕೃತಾರ್ಥಬುದ್ಧೀ ಇತ್ಯರ್ಥಃ। ನ ತು ಶಮ ಏವ। ಶಮಶ್ಚೇತ್ ತಯೋರ್ಜಾತೋ ವಿಪರೀತಗ್ರಹೋ ವಿಗತೋಽಭವಿಷ್ಯತ್। ಪ್ರವವ್ರಜತುಃ ಗತವನ್ತೌ ॥

(ಭಾಷ್ಯಾರ್ಥ)

ಅವರು ಹಾಗೆಯೇ, ಇದು ಹೇಗಿರುವದೋ ಹಾಗೆಯೇ ಎಂದು, ಮೊದಲಿನಂತೆಯೇ ತಿಳಿದುಕೊಂಡರು. ಹೇಗೆ ಒಳ್ಳೆಯ ಅಲಂಕಾರವೇ ಮುಂತಾದವುಗಳಿಂದೊಡಗೂಡಿ ನಾವು ಇರುವೆವೋ ಹಾಗೆಯೇ ಈ ಎರಡು ಛಾಯಾತ್ಮಗಳೂ (ಇವೆ) ಎಂದು ಇನ್ನೂ ಹೆಚ್ಚಾಗಿಯೇ ವಿಪರೀತವಾದ ನಿಶ್ಚಯವುಳ್ಳವರಾದರು.[2]

ಯಾವ ಆತ್ಮನ ಲಕ್ಷಣವನ್ನು[3] "ಯಾವ ಆತ್ಮನು ಅಪಹತಪಾಪ್ಮನೋ" (೮-೭-೧) ಎಂದು ಹೇಳಿ ಮತ್ತೆ ಆ (ಆತ್ಮನ) ವಿಶೇಷಸ್ವರೂಪವನ್ನು ಹುಡುಕುತ್ತಿದ್ದ ಆ ಇಬ್ಬರಿಗೆ "ಅಕ್ಷಿಯಲ್ಲಿ ಯಾವ ಈ ಪುರುಷನು ಕಾಣಬರುತ್ತಿರುವನೋ" (೮-೭-೪) ಎಂದು ನೇರಾಗಿಯೇ[4] ಆತ್ಮನನ್ನು ತೋರಿಸಿಕೊಡಲು ಅವರ ವಿಪರೀತಗ್ರಹಣೆಯನ್ನು ತಪ್ಪಿಸುವದಕ್ಕಾಗಿ ನೀರಿನ ಶ್ರಾವೆ, ಒಳ್ಳೆಯ ಅಲಂಕಾರ-

1. ಅನ್ವಿಷ್ಯಮಾಣಯೋಃ ಎಂಬ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ವಿರೋಚನನ ದೇಹಾತ್ಮಬುದ್ಧಿಯೂ ಇಂದ್ರನ ಛಾಯಾತ್ಮವಿಚಾರವೂ ಇನ್ನೂ ಬಲಗೊಂಡವು ಎಂದರ್ಥ.

3 ಮೊದಲು ಸಾಮಾನ್ಯಲಕ್ಷಣವನ್ನು ಹೇಳಿದ್ದನು.

4 ಇಂದ್ರಿಯಗಳಲ್ಲಿರುವ ದ್ರಷ್ಟೃವು ಎಂದು ವಿಶೇಷರೂಪದಿಂದ ಹೇಳಿದನು.

ಇವುಗಳ ದೃಷ್ಟಾಂತವನ್ನು ಹೇಳಿದಮೇಲೂ[1] ಆತ್ಮಸ್ವರೂಪಜ್ಞಾನದಿಂದ ವಿಪರೀತಜ್ಞಾನವು ತೊಲಗಲಿಲ್ಲ.[2] ಆದ್ದರಿಂದ ಯಾವದೋ ಒಂದು ತಮ್ಮ ದೋಷದಿಂದ (ಇವರ) ಜ್ಞಾನಶಕ್ತಿಗೆ ಅಡ್ಡಿಯಾಗಿದೆ ಎಂದುಕೊಂಡು (ತನಗೆ) ಅಭಿಪ್ರೇತನಾಗಿದ್ದ ಆತ್ಮನನ್ನೇ[3] ಮನಸ್ಸಿನಲ್ಲಿಟ್ಟುಕೊಂಡು 'ಇವನೇ ಆತ್ಮನು' ಎಂದು ಹೇಳಿದನು, ಇದು ಅಮೃತವು. ಅಭಯವು, ಇದು ಬ್ರಹ್ಮವು ಎಂದು ಪ್ರಜಾಪತಿಯು ಮೊದಲಿನಂತೆಯೇ ಹೇಳಿದನೇ ಹೊರತು ಅವರಿಗೆ ಒಪ್ಪಾಗಿದ್ದ ಆತ್ಮನನ್ನು[4] (ಹೇಳ)ಲಿಲ್ಲ. "ಯಾವ ಆತ್ಮನು" (೮-೭-೧) ಎಂಬ **ಆತ್ಮಲಕ್ಷಣವನ್ನು ಶ್ರವಣಮಾಡಿದ್ದರಿಂದಲೂ ಅಕ್ಷಿಪುರುಷನ ಶ್ರವಣದಿಂದಲೂ ನೀರಿನ ಶ್ರಾವೆಯೇ ಮುಂತಾದ ಉಪಪತ್ತಿಯಿಂದಲೂ[5] ಸದ್ಯಕ್ಕೆ (ಇವರು) ಸಂಸ್ಕಾರವನ್ನು ಪಡೆದಿರುತ್ತಾರೆ.[6] ನನ್ನ ಮಾತೆಲ್ಲವನ್ನೂ ಮತ್ತೆಮತ್ತೆ ಸ್ಮರಿಸುತ್ತಿದ್ದರೆ[7] ಪ್ರತಿಬಂಧವು ಕ್ಷಯವಾದರೆ ಆತ್ಮವಿಷಯದ ವಿವೇಕವು ತಾನೇ ಆಗುತ್ತದೆ**- ಎಂದುಕೊಂಡು ಮತ್ತೆ ಬ್ರಹ್ಮಚರ್ಯದಿಂದ (ಇದ್ದುಕೊಂಡಿರಿ) ಎಂದು ಕಟ್ಟುಮಾಡಿದರೆ ಅವರಿಗೆ ಚಿತ್ತದಲ್ಲಾಗಬಹುದಾದ ದುಃಖವನ್ನು ಪರಿಹರಿಸುವದಕ್ಕಾಗಿ ಕೃತಾರ್ಥರಾದೆವೆಂಬ ಬುದ್ಧಿಯಿಂದ ಹೋಗುತ್ತಿದ್ದರೂ (ಅವರನ್ನು) ಪ್ರಜಾಪತಿಯು ಉಪೇಕ್ಷೆಮಾಡಿದನು.[8]

ಆ ಇಂದ್ರವಿರೋಚನರು ಶಾಂತಹೃದಯರಾಗಿ, ಸಂತೋಷದಿಂದೊಡಗೂಡಿದ ಹೃದಯವುಳ್ಳವರಾಗಿ, ಕೃತಾರ್ಥರಾದೆವೆಂಬ ಬುದ್ಧಿಯುಳ್ಳವರಾಗಿ ಎಂದರ್ಥ

---

1. ಛಾಯಾಪುರುಷನಲ್ಲವೆಂದು ತಿಳಿಸುವದಕ್ಕಾಗಿ ನೀರಿನ ಶ್ರಾವೆಯ ದೃಷ್ಟಾಂತವನ್ನೂ ಅಲಂಕೃತಪುರುಷರ ದೃಷ್ಟಾಂತವನ್ನೂ ಹೇಳಿದನು.

2. ಅಪಹತಪಾಪ್ಮನೇ ಮುಂತಾದ ಲಕ್ಷಣವುಳ್ಳ ಅಧ್ಯಾತ್ಮವಲ್ಲಿ ದ್ರಷ್ಟೃವಾಗಿರುವ ಆತ್ಮನನ್ನು ಗ್ರಹಿಸದೆ ಶರೀರ, ಛಾಯೆ- ಇವನ್ನೇ ಅವರು ಗ್ರಹಿಸಿದರು.

3. ದ್ರಷ್ಟೃವಾಗಿರುವ ಕೂಟಸ್ಥಸಾಕ್ಷಿಯನ್ನೇ ಹೇಳಿದನು. ಏಷಃ ಎಂಬ ಮಾತು ಇದನ್ನು ಸೂಚಿಸುತ್ತದೆ

4. ದೇಹವನ್ನು ಅಥವಾ ಅದರ ನೆರಳನ್ನು.

5. ಆಗಮದಿಂದ ಆತ್ಮನ ಲಕ್ಷಣವನ್ನು ಕೇಳಿದ್ದಾರೆ, ಅವರು ತಮ್ಮ ಇಂದ್ರಿಯಗಳಿಗಿಂತ ಒಳಗಿರುವ ಆತ್ಮನೆಂಬ ವಿಶೇಷಸ್ವರೂಪವನ್ನು ಕೇಳಿರುತ್ತಾರೆ, ಆತ್ಮನು ದೇಹವಾಗಲಿ ಛಾಯಾಪುರುಷನಾಗಲಿ ಅಲ್ಲವೆಂಬುದಕ್ಕೆ ಯುಕ್ತಿಯನ್ನೂ ತಿಳಿದಿರುತ್ತಾರೆ.

6. ಅಂತಃಕರಣದಲ್ಲಾಗಿರುವ ಈ ಸಂಸ್ಕಾರವು ಎಂದಿಗೂ ವ್ಯರ್ಥವಾಗಲಾರದು

7. ಮತ್ತೆಮತ್ತೆ ಈ ವಿಷಯವನ್ನು ಮನದಂದುಕೊಂಡರೆ ಅಧ್ಯಾರೋಪಿತಾಂಶಗಳು ಅವಶ್ಯವಾಗಿ ಬಾಧಿತವಾಗಬೇಕು. ಸೂ. ಭಾ. ೪-೧-೨, (ಭಾ. ಭಾ ೫೦೬).

8. ಇವರು ಕೆಟ್ಟುಹೋಗಲಿ ಎಂದೇನೂ ಅಸಡ್ಡೆ ಮಾಡಲಿಲ್ಲ.

ಇಷ್ಟೇ ಹೊರತು (ನಿಜವಾದ) ಶಮವೇ (ಅವರಿಗೆ ಉಂಟಾ)ಗಿರಲಿಲ್ಲ, ಶಮವೇ ಆಗಿದ್ದಿದ್ದರೆ ಅವರಿಗೆ ಆಗಿದ್ದ ವಿಪರೀತಗ್ರಹಣವು ತೊಲಗಿಹೋಗುತ್ತಿತ್ತು—[1] ಹೋದರು, ಹೊರಟುಹೋದವರಾದರು

## ದೇಹಾತ್ಮವಾದದ ನಿಂದೆ

(ಉಪನಿಷತ್ತು)

**ತೌ ಹಾನ್ವೀಕ್ಷ್ಯ ಪ್ರಜಾಪತಿರುವಾಚಾನುಪಲಭ್ಯಾತ್ಮಾನಮನನುವಿದ್ಯ ವ್ರಜತೋ ಯತರ ಏತದುಪನಿಷದೋ ಭವಿಷ್ಯನ್ತಿ ದೇವಾ ವಾಸುರಾ ವಾ ತೇ ಪರಾಭವಿಷ್ಯನ್ತೀತಿ ಸ ಹ ಶಾನ್ತಹೃದಯ ಏವ ವಿರೋಚನೋಽಸುರಾಞ್ಜಗಾಮ ತೇಭ್ಯೋ ಹೈತಾಮುಪನಿಷದಂ ಪ್ರೋವಾಚಾತ್ಮೈವೇಹ ಮಹಯ್ಯ ಆತ್ಮಾ ಪರಿಚರ್ಯ ಆತ್ಮಾನಮೇವೇಹ ಮಹಯನ್ನಾತ್ಮಾನಂ ಪರಿಚರನ್ನುಭೌ ಲೋಕಾವವಾಪ್ನೋತೀಮಂ ಚಾಮುಂ ಚೇತಿ ॥ ೪ ॥**

೪. ಅವರನ್ನು ಕಂಡು ಪ್ರಜಾಪತಿಯು "ಆತ್ಮನನ್ನು ತಿಳಿಯದೆ ಅರಿತುಕೊಳ್ಳದೆಯೇ ಹೋಗುತ್ತಿದಾರೆ. (ಇವರಿಬ್ಬರಲ್ಲಿ) ಯಾರು, ದೇವತೆಗಳೇ ಆಗಲಿ, ಅಸುರರೇ ಆಗಲಿ, ಈ ಉಪನಿಷತ್ತುಳ್ಳವರಾಗುವರೋ ಅವರು ಸೋತುಹೋಗುವರು" ಎಂದನು. ಆ ವಿರೋಚನನು ಶಾಂತಹೃದಯನಾಗಿಯೇ ಅಸುರರನ್ನು ಹೋಗಿ (ಸೇರಿ)ದನು. ಅವರಿಗೆ ಈ ಉಪನಿಷತ್ತನ್ನು ಹೇಳಿದನು : 'ಆತ್ಮವನ್ನೇ ಮಹೀಕರಣ ಮಾಡಬೇಕು, ಆತ್ಮವನ್ನೇ ಪರಿಚರಣಮಾಡಬೇಕು ; ಆತ್ಮವನ್ನು ಮಹೀಕರಣಮಾಡಿ, ಆತ್ಮನನ್ನೇ ಪರಿಚರಣಮಾಡುವವನು ಈ (ಲೋಕ) ಮತ್ತು ಆ (ಲೋಕ)- ಎರಡು ಲೋಕಗಳನ್ನೂ ಪಡೆದುಕೊಳ್ಳುತ್ತಾನೆ.

### ವಿರೋಚನನ ನಿಶ್ಚಯ

(ಭಾಷ್ಯ)

೬೫೬. ಏವಂ ತಯೋರ್ಗತಯೋರಿನ್ದ್ರವಿರೋಚನಯೋಃ, ರಾಜ್ಞೋರ್ಭೋಗಾಸಕ್ತಯೋಃ ಯಥೋಕ್ತವಿಸ್ಮರಣಂ ಸ್ಯಾತ್ ಇತ್ಯಾಶಙ್ಕ್ಯ ಅಪ್ರತ್ಯಕ್ಷಂ ಪ್ರತ್ಯಕ್ಷವಚನೇನ ಚ ಚಿತ್ತದುಃಖಂ ಪರಿಜಿಹೀರ್ಷುಸ್ತೌ ದೂರಂ ಗಚ್ಛನ್ತೌ

1 ಪರಮಶಾಂತಿಯು ಆತ್ಮಜ್ಞಾನದಿಂದಲೇ ದೊರಕತಕ್ಕದ್ದು ಎಂದರ್ಥ. ಆದ್ದರಿಂದ ಶಾಂತಿಯಿಲ್ಲೇ ಜ್ಞಾನಕ್ಕೆ ಪ್ರಯತ್ನಿಸಬೇಕು ಎಂದೂ ಹೇಳಿದಂತೆ ಆಯಿತು.

ಅನ್ವೀಕ್ಷ್ಯ 'ಯ ಆತ್ಮಾಽಪಹತಪಾಪ್ಮಾ' (೮-೭-೧) ಇತ್ಯಾದಿವಚನವದ್ ಏತದಪಿ ಅನಯೋಃ ಶ್ರವಣಗೋಚರತ್ವಮ್ ಏಷ್ಯತೀತಿ ಮತ್ವಾ ಉವಾಚ ಪ್ರಜಾಪತಿಃ । ಅನುಪಲಭ್ಯ ಯಥೋಕ್ತಲಕ್ಷಣಮಾತ್ಮಾನಮ್ ಅನನುವಿದ್ಯ ಸ್ವಾತ್ಮಪ್ರತ್ಯಕ್ಷಂ ಚ ಅಕೃತ್ವಾ ವಿಪರೀತನಿಶ್ಚಯೌ ಚ ಭೂತ್ವಾ ಇನ್ದ್ರವಿರೋಚನೌ ಏತೌ ವ್ರಜತಃ, ಗಚ್ಛೇಯಾತಾಮ್ । ಅತೋ ಯತರೇ ದೇವಾ ವಾ ಅಸುರಾ ವಾ ಕಿಂ ವಿಶೇಷಿತೇನ ? ಏತದುಪನಿಷದಃ –ಆಭ್ಯಾಂ ಯಾ ಗೃಹೀತಾ ಆತ್ಮವಿದ್ಯಾ ನೇಯಮ್ ಉಪನಿಷದ್ ಯೇಷಾಂ ದೇವಾನಾಮ್ ಅಸುರಾಣಾಂ ವಾ ತೇ ಏತದುಪನಿಷದಃ– ಏವಂವಿಜ್ಞಾನಾಃ ಏತನ್ನಿಶ್ಚಯಾ ಭವಿಷ್ಯನ್ತಿ ಇತ್ಯರ್ಥಃ । ತೇ ಕಿಮ್ ? ಪರಾಭವಿಷ್ಯನ್ತಿ ಶ್ರೇಯೋಮಾರ್ಗಾತ್ ಪರಾಭೂತಾ ಬಹಿರ್ಭೂತಾ ವಿನಷ್ಟಾ ಭವಿಷ್ಯನ್ತೀತ್ಯರ್ಥಃ । ಸ್ವಗೃಹಂ ಗಚ್ಛತೋಃ ಸುರಾಸುರರಾಜಯೋಃ ಯೋಽಸುರರಾಜಃ ಸ ಹ ಶಾನ್ತಹೃದಯ ಏವ ಸನ್ ವಿರೋಚನಃ, ಅಸುರಾನ್ ಜಗಾಮ । ಗತ್ವಾ ಚ ತೇಭ್ಯೋಽಸುರೇಭ್ಯಃ ಶರೀರಾತ್ಮಬುದ್ಧಿಃ ಯಾ ಉಪನಿಷತ್ ತಾಮ್ ಏತಾಮ್ ಉಪನಿಷದಂ ಪ್ರೋವಾಚ ಉಕ್ತವಾನ್ ದೇಹಮಾತ್ರಮೇವಾಽಽತ್ಮಾ ಪಿತ್ರಾ ಉಕ್ತ ಇತಿ । ತಸ್ಮಾತ್ ಆತ್ಮೈವ ದೇಹ ಇಹ ಲೋಕೇ ಮಹಯ್ಯಃ ಪೂಜನೀಯಃ । ತಥಾ ಪರಿಚರ್ಯಃ ಪರಿಚರಣೀಯಃ । ತಥಾ ಆತ್ಮಾನಮೇವ ಇಹ ಲೋಕೇ ದೇಹಂ ಮಹಯನ್ ಪರಿಚರಂಶ್ಚ ಉಭೌ ಲೋಕೌ ಅವಾಪ್ನೋತಿ ಇಮಂ ಚಾಮುಂ ಚ । ಇಹಲೋಕಪರಲೋಕಯೋರೇವ ಸರ್ವೇ ಲೋಕಾಃ ಕಾಮಾಶ್ಚ ಅನ್ತರ್ಭವನ್ತೀತಿ ರಾಜ್ಞೋಽಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆ ಆ ಇಂದ್ರವಿರೋಚನರು ಹೊರಟುಹೋಗಲಾಗಿ ರಾಜರುಗಳು ಭೋಗಾಸಕ್ತರಾಗಲು ಹಿಂದೆ ಹೇಳಿರುವ (ಉಪದೇಶವು) ಮರೆತುಹೋಗಬಹುದೆಂದು ಶಂಕಿಸಿ ಎದುರಿಗೆ ಹೇಳಿದರೆ ಚಿತ್ತದುಃಖವುಂಟಾಗುವದರಿಂದ (ಅದನ್ನು) ಪರಿಹರಿಸುವದಕ್ಕಾಗಿ ಅಪ್ರತ್ಯಕ್ಷವಾಗಿ ಅವರು ದೂರದಲ್ಲಿ ಹೋಗುತ್ತಿರುವದನ್ನು ಕಂಡು "ಯಾವ ಆತ್ಮನು ಅಪಹತಪಾಪ್ಮನೋ" (೮-೭-೧) ಮುಂತಾದ ವಚನದಂತೆ ಈ (ವಾಕ್ಯವೂ) ಇವರ ಕಿವಿಗೆ ಬೀಳುವದೆಂದೆಣಿಸಿ ಪ್ರಜಾಪತಿಯು ಇಂತೆಂದನು : (ನಾನು) ಹಿಂದೆ ಹೇಳಿರುವ ಲಕ್ಷಣದ ಆತ್ಮನನ್ನು ತಿಳಿದುಕೊಳ್ಳದೆ ಮತ್ತು ಅರಿತುಕೊಳ್ಳದೆಯೇ ತಮಗೆ ಪ್ರತ್ಯಕ್ಷವಾಗುವಂತೆ ಮಾಡಿಕೊಳ್ಳದೆ[1] (ಇದಕ್ಕೆ) ವಿಪರೀತವಾದ ನಿಶ್ಚಯವುಳ್ಳವರೂ ಆಗಿ ಈ ಇಂದ್ರವಿರೋಚನರು ಹೋಗುತ್ತಿದಾರೆ, ಹೋಗಿಬಿಡಬಹುದು. ಆದ್ದರಿಂದ (ಇವರಲ್ಲಿ) ಯಾರು– ಇಂಥವರೆಂದು ಹೇಳಿದ್ದರಿಂದೇನು ? ದೇವತೆಗಳಾಗಲಿ ಅಸುರರಾಗಲಿ, ಈವುಪನಿಷತ್ತು

1. ಅನುಭವಕ್ಕೆ ತಂದುಕೊಳ್ಳದೆ.

ಳ್ಳವರಾಗಿ, ಇವರಿಬ್ಬರೂ ಗ್ರಹಿಸಿರುವ ಆತ್ಮವಿದ್ಯೆಯಿದೆಯಲ್ಲ, ಆ ಈ ಉಪನಿಷತ್ತು ದೇವತೆಗಳಲ್ಲಿ ಅಥವಾ ಅಸುರರಲ್ಲಿ ಯಾರಲ್ಲಿರುವದೋ ಅವರು ಈವುಪನಿಷತ್ತುಳ್ಳವರು– ಈ ವಿಜ್ಞಾನವುಳ್ಳವರಾಗಿ, ಈ ನಿಶ್ಚಯವುಳ್ಳವರಾಗಿ ಆಗುವರೋ ಎಂದರ್ಥ ಅವರು ಏನು ? (ಎಂದರೆ ಅವರು) ಸೋಲುವರು , ಶ್ರೇಯೋಮಾರ್ಗದಿಂದ ಪರಾಭೂತರಾಗಿ ಹೊರಚ್ಚಾಗಿ ವಿನಷ್ಟರಾಗುವರು ಎಂದರ್ಥ.

ತಮ್ಮ ಮನೆಗೆ ಹೋಗುತ್ತಿದ್ದ ದೇವಾಸುರರಾಜರುಗಳಲ್ಲಿ ಅಸುರರಾಜನಾದ ವಿರೋಚನನಿದ್ದನಲ್ಲ, ಅವನು ಶಾಂತಹೃದಯನೇ ಆಗಿ ಅಸುರರ ಬಳಿಗೆ ಹೋದನು. ಹೋಗಿ ಆ ಅಸುರರಿಗೆ ಶರೀರವೇ ಆತ್ಮನೆಂಬ ತಿಳಿವಳಿಕೆಯ (ರೂಪದ) ಉಪನಿಷತ್ತಿತ್ತಲ್ಲ, ಆ ಈ ಉಪನಿಷತ್ತನ್ನು[1] ಹೇಳಿದನು. ದೇಹಮಾತ್ರವೇ ಪಿತೃ(ವಾದ ಪ್ರಜಾಪತಿಯು) ಹೇಳಿದ ಆತ್ಮನು ಎಂದು ಹೇಳಿದವನಾದನು. ಆದ್ದರಿಂದ ಆತ್ಮವೇ, ದೇಹವೇ, ಈ ಲೋಕದಲ್ಲಿ ಮಹೀಕರ್ತವ್ಯವಾದದ್ದು, ಗೌರವಿಸತಕ್ಕದ್ದು , ಮತ್ತು ಪರಿಚರಿಸತಕ್ಕದ್ದು, ಸೇವಿಸತಕ್ಕದ್ದು. ಮತ್ತು ಆತ್ಮನಾದ ದೇಹವನ್ನೇ ಈ ಲೋಕದಲ್ಲಿ ಮಹೀಕರಿಸಿದರೆ, ಪರಿಚರಣಮಾಡಿದರೆ, ಈ (ಲೋಕ) ಮತ್ತು ಆ (ಲೋಕ), ಎರಡು ಲೋಕಗಳನ್ನೂ ಪಡೆದುಕೊಳ್ಳುತ್ತಾನೆ (ಎಂದನು) ಸರ್ವಲೋಕಗಳೂ ಕಾಮಗಳೂ ಇಹಲೋಕಪರಲೋಕಗಳೊಳಗೇ ಅಡಕವಾಗಿರುತ್ತವೆ ಎಂಬುದು (ಅಸುರ)ರಾಜನ ಅಭಿಪ್ರಾಯವು.

## ಅಸುರರ ಉಪನಿಷತ್ತು

(ಉಪನಿಷತ್ತು)

**ತಸ್ಮಾದಪ್ಯದ್ಯೇಹಾದದಾನಮಶ್ರದ್ದಧಾನಮಯಜಮಾನಮಾಹು ರಾಸುರೋ ಬತೇತ್ಯಸುರಾಣಾಂ ಹ್ಯೇಷೋಪನಿಷತ್ ಪ್ರೇತಸ್ಯ ಶರೀರಂ ಭಿಕ್ಷಯಾ ವಸನೇನಾಽಲಂಕಾರೇಣೇತಿ ಸಗ್ಂಸ್ಕುರ್ವ ನ್ತ್ಯೇತೇನ ಹ್ಯಮುಂ ಲೋಕಂ ಜೇಷ್ಯನ್ತೋ ಮನ್ಯನ್ತೇ ॥ ೫ ॥**

೫. ಆದ್ದರಿಂದ ಈಗಲೂ ಶ್ರದ್ಧೆಮಾಡದವನನ್ನು ಯಾಗಮಾಡದವನನ್ನು 'ಅಯ್ಯೋ, ಆಸುರನು !' ಎನ್ನುವರು. ಇದು ಅಸುರರ ಉಪನಿಷತ್ತಲ್ಲವೆ? ಸತ್ತವನ ಶರೀರವನ್ನು ಭಿಕ್ಷೆಯಿಂದಲೂ ವಸನದಿಂದಲೂ ಅಲಂಕಾರದಿಂದಲೂ ಸಂಸ್ಕಾರಮಾಡುತ್ತಾರೆ ; ಇದರಿಂದಲೇ ಅಲ್ಲವೆ, ಆ ಲೋಕವನ್ನು ಗೆದ್ದುಕೊಳ್ಳುವೆವೆಂದು ಭಾವಿಸಿರುತ್ತಾರೆ?

---

1. ಉಪನಿಷತ್ತೆಂದರೆ ಆತ್ಮಜ್ಞಾನ, ಇದು ಉಪನಿಷದಾಭಾಸಮಾತ್ರ.

## ದೇಹಾತ್ಮವಾದವೇ ಅಸುರರ ಉಪನಿಷತ್ತು

(ಭಾಷ್ಯ)

೬೫೭ ತಸ್ಮಾತ್ ತತ್ಸಂಪ್ರದಾಯೋಽದ್ಯಾಪಿ ಅನುವರ್ತತ ಇತಿ । ಇಹ ಲೋಕೇ ಅದದಾನಂ ದಾನಮಕುರ್ವಾಣಮ್ ಅವಿಭಾಗಶೀಲಮ್, ಅಶ್ರದ್ದಧಾನಂ ಸತ್ಕಾರ್ಯೇಷು ಶ್ರದ್ಧಾರಹಿತಂ ಯಥಾಶಕ್ತಿ ಅಯಜಮಾನಮ್ ಅಯಜನ ಸ್ವಭಾವಮ್ ಆಹುಃ 'ಆಸುರಃ ಖಲ್ವಯಂ ಯತ ಏವಂಸ್ವಭಾವೋ ಬತ' ಇತಿ ಖಿದ್ಯಮಾನಾ ಆಹುಃ ಶಿಷ್ಟಾಃ । ಅಸುರಾಣಾಂ ಹಿ ಯಸ್ಮಾತ್ ಅಶ್ರದ್ದಧಾನತಾದಿ ಲಕ್ಷಣಾ ಏಷಾ ಉಪನಿಷತ್ । ತಯಾ ಉಪನಿಷದಾ ಸಂಸ್ಕೃತಾಃ ಸನ್ತಃ ಪ್ರೇತಸ್ಯ ಶರೀರಂ ಕುಣಪಂ ಭಿಕ್ಷಯಾ ಗನ್ಧಮಾಲ್ಯಾನ್ನಾದಿಲಕ್ಷಣಯಾ ವಸನೇನ ವಸ್ತ್ರಾದಿನಾ ಆಚ್ಛಾದನಾದಿಪ್ರಕಾರೇಣ ಅಲಂಕಾರೇಣ ಧ್ವಜಪತಾಕಾದಿಕರಣೇನ ಇತಿ ಏವಂ ಸಂಸ್ಕುರ್ವನ್ತಿ । ಏತೇನ ಕುಣಪಸಂಸ್ಕಾರೇಣ ಅಮುಂ ಪ್ರೇತ್ಯ ಪ್ರತಿಪತ್ತವ್ಯಂ ಲೋಕಂ ಜೇಷ್ಯನ್ತೋ ಮನ್ಯನ್ತೇ ॥

(ಭಾಷ್ಯಾರ್ಥ)

ಆದ್ದರಿಂದ ಅವನ ಸಂಪ್ರದಾಯವು ಈಗಲೂ ನಡೆದುಕೊಂಡುಬಂದಿದೆ ಯಾದ್ದರಿಂದ ಈ ಲೋಕದಲ್ಲಿ ಕೊಡದಿರುವವನನ್ನೂ ದಾನಮಾಡದೆ ಇರುವವನನ್ನೂ (ತನ್ನ ಸ್ವತ್ತನ್ನು ಜನರಲ್ಲಿ) ಹಂಚದೆ ಇರುವ ಸ್ವಭಾವದವನನ್ನೂ, ಶ್ರದ್ಧೆ ಮಾಡದವನನ್ನೂ ಸತ್ಕಾರ್ಯಗಳಲ್ಲಿ ಶ್ರದ್ಧೆಯಿಲ್ಲದವನನ್ನೂ, ಶಕ್ತಿಯಿದ್ದಷ್ಟುಮಟ್ಟಿಗೆ ಯಾಗಮಾಡದವನನ್ನೂ ಯಾಗಮಾಡದ ಸ್ವಭಾವದವನನ್ನೂ 'ಇವನು ಆಸುರನಲ್ಲವೆ ? ಏಕೆಂದರೆ ಇಂಥ ಸ್ವಭಾವದವನಾಗಿರುತ್ತಾನೆ[1], ಅಯ್ಯೋ' ಎಂದು (ಆಗ ಹತ್ತಿರ)ವಿರುವ ಶಿಷ್ಟರು ದುಃಖಿತರಾಗಿ ಎನ್ನುತ್ತಾರೆ. ಶ್ರದ್ಧೆಮಾಡದಿರುವದೇ ಮುಂತಾದ ಲಕ್ಷಣದ ಇದು ಅಸುರರ ಉಪನಿಷತ್ತಲ್ಲವೆ ? ಈ ಉಪನಿಷತ್ತಿನಿಂದ ಸಂಸ್ಕೃತರಾಗಿ[2] ಸತ್ತವನ ಶರೀರವನ್ನೂ ಹೆಣವನ್ನೂ ಭಿಕ್ಷೆಯಿಂದ ಎಂದರೆ ಗಂಧ, ಹೂ, ಅನ್ನ-ಮುಂತಾದವುಗಳಿಂದಲೂ ವಸನದಿಂದಲೂ ವಸ್ತ್ರಾದಿಗಳಿಂದಲೂ ಹೊದಿಕೆಯೇ ಮುಂತಾದ ರೂಪದ (ಬಟ್ಟೆಯಿಂದಲೂ) ಅಲಂಕಾರದಿಂದಲೂ ಧ್ವಜ, ಪತಾಕೆ- ಮುಂತಾದವುಗಳನ್ನು ಏರ್ಪಡಿಸುವದರಿಂದಲೂ ಇಂತು ಹೀಗೆ ಸಂಸ್ಕಾರ ಮಾಡುತ್ತಾರೆ. ಈ ಶವಸಂಸ್ಕಾರದಿಂದ ಆ ಸತ್ತ ಬಳಿಕ ಪಡೆದುಕೊಳ್ಳಬೇಕಾದ ಲೋಕವನ್ನು ಗೆದ್ದುಕೊಳ್ಳುವೆವು ಎಂದು ಭಾವಿಸಿರುತ್ತಾರೆ.

---

1. ಯಜ್ಞದಾನತಪಸ್ಸು ಮುಂತಾದವು ಸ್ವಭಾವವಾಗಿ ದೈವಸಂಪತ್ತನ್ನು ಸೂಚಿಸುವವು, ಯಾರಿಗೆ ದೇಹವೇ ಪ್ರಧಾನವೆಂಬ ತಿಳಿವಳಿಕೆಯಿರುವದೋ ಅವರಿಗೆ ಈ ಸ್ವಭಾವವಿರುವದಿಲ್ಲ.

2. ಅಂತಃಕರಣದಲ್ಲಿ ಅದೇ ವಾಸನೆಯಿಂದ ಕೂಡಿದವರಾಗಿ ಎಂದರ್ಥ.

# ಎಂಟನೆಯ ಅಧ್ಯಾಯ-ಒಂಬತ್ತನೆಯ ಖಂಡ

( ಅವಸ್ಥಾತ್ರಯನಿರೂಪಣ )

## ಇಂದ್ರನು ಛಾಯಾತ್ಮನಾದವನನ್ನು ಬಿಟ್ಟು ಬಂದದ್ದು

( ಉಪನಿಷತ್ತು )

**ಅಥ ಹೇನ್ದ್ರೋಽಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ಯಥೈವ ಖಲ್ವಯಮಸ್ಮಿಞ್ಛರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನನ್ಧೇಽನ್ಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ॥ ೧ ॥**

**ನಾಹಮತ್ರ ಭೋಗ್ಯಂ ಪಶ್ಯಾಮೀತಿ[1] ಸ ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ ಯಚ್ಛಾನ್ತಹೃದಯಃ ಪ್ರಾವ್ರಾಜೀಃ ಸಾರ್ಧಂ ವಿರೋಚನೇನ ಕಿಮಿಚ್ಛನ್ ಪುನರಾಗಮ ಇತಿ ಸ ಹೋವಾಚ ಯಥೈವ ಖಲ್ವಯಂ ಭಗವೋಽಸ್ಮಿಞ್ಛರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತಃ ಏವಮೇವಾಯಮಸ್ಮಿನ್ನನ್ಧೇಽನ್ಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ನಾಽಹಮತ್ರ ಭೋಗ್ಯಂ ಪಶ್ಯಾಮೀತಿ ॥ ೨ ॥**

೧-೨. ಇನ್ನು ಇಂದ್ರನು ದೇವತೆಗಳನ್ನು ಸೇರದೆಯೇ ಈ ಅಂಜಿಕೆಯನ್ನು ಕಂಡುಕೊಂಡನು : ಹೇಗೆ ಇದು ಈ ಶರೀರವು ಚೆನ್ನಾಗಿ ಅಲಂಕೃತವಾದರೆ ಚೆನ್ನಾಗಿ ಅಲಂಕೃತವಾಗುವದೋ, ಸುವಸನವುಳ್ಳದ್ದಾಗಿದ್ದರೆ ಸುವಸನವುಳ್ಳದ್ದಾಗಿರುವದೋ, ಪರಿಷ್ಕೃತವಾಗಿದ್ದರೆ ಪರಿಷ್ಕೃತವಾಗಿರುವದೋ ಹಾಗೆಯೇ ಇದು ಈ (ಶರೀರವು) ಕುರುಡಾಗಿದ್ದರೆ ಕುರುಡಾಗಿರುವದು, ಸ್ರಾಮವಾಗಿದ್ದರೆ ಸ್ರಾಮವಾಗಿರುವದು, ಪರಿವೃಕ್ಣವಾಗಿದ್ದರೆ ಪರಿವೃಕ್ಣವಾಗಿರುವದು. ಈ ಶರೀರವು ನಾಶವಾದರೆ (ಅದನ್ನೇ) ಅನುಸರಿಸಿ ತಾನೂ ನಾಶವಾಗುವದು. ನನಗೆ (ಇದರಲ್ಲಿ) ಭೋಗ್ಯವು ಕಾಣಿಸುವದಿಲ್ಲ. ಅವನು ಸಮಿತ್ಪಾಣಿಯಾಗಿ

1. ಈ ವಾಕ್ಯವು ಹಿಂದಿನ ವಾಕ್ಯದ ಕೊನೆಯಲ್ಲಿಯೇ ವಾ॥ ಪಾಠದಲ್ಲಿ ಪಠಿತವಾಗಿದೆ.

ಮತ್ತೆ ಬಂದನು. ಅವನನ್ನು ಕುರಿತು ಪ್ರಜಾಪತಿಯು 'ಮಘವಂತನೆ, ಶಾಂತಹೃದಯನಾಗಿ ವಿರೋಚನನೊಡನೆ ಹೋದೆಯಲ್ಲ, ಏನನ್ನು ಬಯಸಿ ಮತ್ತೆ ಬಂದೆ?' ಎಂದನು. ಅವನು 'ಭಗವಂತನೆ, ಹೇಗೆ ಇದು ಈ ಶರೀರವು ಚೆನ್ನಾಗಿ ಅಲಂಕೃತವಾದರೆ ಚೆನ್ನಾಗಿ ಅಲಂಕೃತ ವಾಗಿರುವದೋ, ಸುವಸನವುಳ್ಳದ್ದಾಗಿದ್ದರೆ ಸುವಸನವುಳ್ಳದ್ದಾಗಿರು ವದೋ, ಪರಿಷ್ಕೃತವಾದರೆ ಪರಿಷ್ಕೃತವಾಗಿರುವದೋ, ಹಾಗೆಯೇ ಇದು ಈ (ಶರೀರವು) ಕುರುಡಾಗಿದ್ದರೆ ಕುರುಡಾಗಿರುವದು. ಸ್ರಾಮ ವಾಗಿದ್ದರೆ ಸ್ರಾಮವಾಗಿರುವದು, ಪರಿವೃಕ್ಣವಾಗಿದ್ದರೆ ಪರಿವೃಕ್ಣ ವಾಗಿರುವದು. ಈ ಶರೀರವು ನಾಶವಾದರೆ (ಅದನ್ನೇ) ಅನುಸರಿಸಿ ತಾನೂ ನಾಶವಾಗುವದು. ನನಗೆ ಇದರಲ್ಲಿ ಭೋಗ್ಯವು ಕಾಣಿಸು ವದಿಲ್ಲ' ಎಂದನು.

## ಇಂದ್ರನು ದೇಹಚ್ಛಾಯಾತ್ಮವಾದದಲ್ಲಿ ದೋಷವನ್ನು ಕಂಡದ್ದು

(ಭಾಷ್ಯ)

೭೫೮. ಅಥ ಹ ಕಿಲ ಇನ್ದ್ರಃ ಅಪ್ರಾಪ್ಯೈವ ದೇವಾನ್ ದೈವ್ಯಾ ಅಕ್ರೌರ್ಯಾದಿಸಂಪದಾ ಯುಕ್ತತ್ವಾತ್ ಗುರೋರ್ವಚನಂ ಪುನಃಪುನಃ ಸ್ಮರ ನ್ನೇವ ಗಚ್ಛನ್ ಏತದ್ ವಕ್ಷ್ಯಮಾಣಂ ಭಯಂ ಸ್ವಾತ್ಮಗ್ರಹಣನಿಮಿತ್ತಂ[1] ದದರ್ಶ ದೃಷ್ಟವಾನ್ । ಉದಶರಾವದೃಷ್ಟಾನ್ತೇನ ಪ್ರಜಾಪತಿನಾ ಯದರ್ಥೋ ನ್ಯಾಯ ಉಕ್ತಃ, ತದೇಕದೇಶೋ ಮಘವತಃ ಪ್ರತ್ಯಭಾದ್ ಬುದ್ಧೌ । ಯೇನ ಛಾಯಾತ್ಮಗ್ರಹಣೇ ದೋಷಂ ದದರ್ಶ । ಕಥಮ್ ? ಯಥೈವ ಖಲು ಅಯಮ್ ಅಸ್ಮಿನ್ ಶರೀರೇ ಸಾಧ್ವಲಂಕೃತೇ ಛಾಯಾತ್ಮಾಽಪಿ ಸಾಧ್ವಲಂಕೃತೋ ಭವತಿ ಸುವಸನೇ ಚ ಸುವಸನಃ ಪರಿಷ್ಕೃತೇ ಪರಿಷ್ಕೃತಃ । ಯಥಾ ನಖಲೋಮಾದಿ ದೇಹಾವಯವಾಪಗಮೇ ಛಾಯಾತ್ಮಾಽಪಿ ಪರಿಷ್ಕೃತೋ ಭವತಿ ನಖಲೋಮಾದಿ ರಹಿತೋ ಭವತಿ । ಏವಮೇವಾಯಂ ಛಾಯಾತ್ಮಾಽಪಿ ಅಸ್ಮಿನ್ ಶರೀರೇ ನಖ ಲೋಮಾದಿಭಿರ್ದೇಹಾವಯವತ್ವಸ್ಯ ತುಲ್ಯತ್ವಾತ್ ಅನ್ಧೇ ಚಕ್ಷುಷೋಽಪಗಮೇ ಅನ್ಧೋ ಭವತಿ । ಸ್ರಾಮೇ ಸ್ರಾಮಃ । ಸ್ರಾಮಃ ಕಿಲ ಏಕನೇತ್ರಃ । ತಸ್ಯಾನ್ಧ ತ್ವೇನ ಗತತ್ವಾತ್ ಚಕ್ಷುರ್ನಾಸಿಕಾ ವಾ ಯಸ್ಯ ಸದಾ ಸ್ರವತಿ ಸ ಸ್ರಾಮಃ । ಪರಿವೃಕ್ಣಃ ಛಿನ್ನಹಸ್ತಃ, ಛಿನ್ನಪಾದೋ ವಾ । ಸ್ರಾಮೇ ಪರಿವೃಕ್ಣೇ ವಾ ದೇಹೇ

---

1. ಅನುವಾದದ ಟಿಪ್ಪಣಿಯನ್ನು ನೋಡಿ.

ಛಾಯಾತ್ಮಾಽಪಿ ತಥಾ ಭವತಿ । ತಥಾ ಅಸ್ಯ ದೇಹಸ್ಯ ನಾಶಮನು ಏಷ ನಶ್ಯತಿ । ಅತೋ ನಾಹಮತ್ರ ಅಸ್ಮಿನ್ ಛಾಯಾತ್ಮದರ್ಶನೇ ದೇಹಾತ್ಮದರ್ಶನೇ ವಾ ಭೋಗ್ಯಂ ಫಲಂ ಪಶ್ಯಾಮೀತಿ ॥

(ಭಾಷ್ಯಾರ್ಥ)

ಇನ್ನು ಇಂದ್ರನು ದೇವತೆಗಳನ್ನು ಸೇರದೆಯೇ- ಅಕ್ರೌರ್ಯವೇ ಮುಂತಾದ ದೈವಸಂಪತ್ತಿನಿಂದ[1] ಕೂಡಿಕೊಂಡಿದ್ದದ್ದರಿಂದ ಗುರುವಚನವನ್ನು ಮತ್ತೆಮತ್ತೆ ಸ್ಮರಿಸುತ್ತಲೇ ಹೋಗುತ್ತಾ- ತನ್ನ ಆತ್ಮಗ್ರಹಣದ ನಿಮಿತ್ತದಿಂದ[2] ಈ ಮುಂದೆ ಹೇಳಲಿರುವ ಅಂಜಿಕೆಯನ್ನು ಕಂಡುಕೊಂಡನು. ನೀರಿನ ಶ್ರಾವೆಯ ದೃಷ್ಟಾಂತ ದಿಂದ ಪ್ರಜಾಪತಿಯು ಏತಕ್ಕಾಗಿ ನ್ಯಾಯವನ್ನು ಹೇಳಿದ್ದನೋ[3] ಅದರಲ್ಲಿ ಒಂದು ಭಾಗವು[4] ಇಂದ್ರನ ಬುದ್ಧಿಯಲ್ಲಿ ಹೊಳೆಯಿತು , ಅದರಿಂದ ಛಾಯಾತ್ಮಗ್ರಹಣ ದಲ್ಲಿ ದೋಷವನ್ನು ಕಂಡುಕೊಂಡನು. ಹೇಗೆಂದರೆ ? ಹೇಗೆ ಈ ಶರೀರವು ಚೆನ್ನಾಗಿ ಅಲಂಕೃತವಾದರೆ ಈ ಛಾಯಾತ್ಮವೂ ಚೆನ್ನಾಗಿ ಅಲಂಕೃತವಾಗಿರು ವದೋ, ಸುವಸನವುಳ್ಳದ್ದಾದರೆ ಸುವಸನವುಳ್ಳದ್ದಾಗಿರುವದೋ, ಪರಿಷ್ಕೃತವಾದರೆ ಪರಿಷ್ಕೃತವಾಗಿರುವದೋ, ಹೇಗೆ ಉಗುರು ಕೂದಲು ಮುಂತಾದ ದೇಹಾವಯವ ಗಳು ಹೋದರೆ ಛಾಯಾತ್ಮವೂ ಪರಿಷ್ಕೃತವಾಗಿರುವದೋ ಎಂದರೆ ಉಗುರು ಕೂದಲು ಮುಂತಾದವುಗಳಿಲ್ಲದ್ದಾಗಿರುವದೋ, ಹಾಗೆಯೇ ಈ ಛಾಯಾತ್ಮವು ಈ ಶರೀರವು—ದೇಹದ ಅವಯವವಾಗಿರುವದೆಂಬುದು (ಕಣ್ಣು ಮುಂತಾದವುಗಳಿಗೂ) ಉಗುರು, ಕೂದಲು ಮುಂತಾದವುಗಳಿಗೂ ಸಮಾನವಾಗಿರುವದರಿಂದ- ಕುರು ಡಾದರೆ ಕಣ್ಣು ಹೋದರೆ (ತಾನೂ) ಕುರುಡಾಗುವದು. ಸ್ರಾಮವಾದರೆ ಸ್ರಾವ್ರ ವಾಗುವದು. ಸ್ರಾಮವೆಂದರೆ ಒಕ್ಕಣ್ಣನು , ಆ (ಅರ್ಥವು) ಅಂಧ ಎಂಬ ಮಾತಿನಲ್ಲಿ ಸೇರಿಹೋಗಿರುತ್ತದೆಯಾದ್ದರಿಂದ ಕಣ್ಣೋ ಮೂಗೋ ಯಾವನಿಗೆ ಯಾವಾಗಲೂ ಸೋರುತ್ತಿರುವದೋ ಅವನು ಸ್ರಾಮನು. ಪರಿವೃಕ್ಣನು ಎಂದರೆ ಕೈಕತ್ತರಿಸಿಹೋಗಿರುವ (ಮೋಟುಗೈಯನು), ಅಥವಾ ಕಾಲುಕತ್ತರಿಸಿಹೋದ (ಹೆಳವನು). ದೇಹವು ಸ್ರಾಮವಾಗಿದ್ದರೆ ಅಥವಾ ಪರಿವೃಕ್ಣವಾಗಿದ್ದರೆ

---

1. ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ವಿವರಿಸಿರುವ ದೈವಸಂಪತ್ತೆಲ್ಲವನ್ನೂ ಇಲ್ಲಿ ಸೇರಿಸಿಕೊಳ್ಳಬೇಕು.

2. ನೆರಳನ್ನೇ ಆತ್ಮನೆಂದು ತಿಳಿದುಕೊಂಡದ್ದರಿಂದ ಎಂದರ್ಥ; ಸ್ವಾತ್ಮಾಗ್ರಹಣ ಎಂದು ಪಾಠವಿದ್ದರೆ ತನ್ನ ಆತ್ಮನನ್ನು ಸರಿಯಾಗಿ ತಿಳಿದುಕೊಳ್ಳದ್ದರ ನಿಮಿತ್ತದಿಂದ ಎಂದು ಕನ್ನಡಿಸಬೇಕು.

3. ಆಗಮಾಪಾಯವುಳ್ಳದ್ದೆಲ್ಲವೂ ಅನಾತ್ಮನೇ ಎಂಬುದನ್ನು ತಿಳಿಸುವದಕ್ಕೆ ಪ್ರಜಾ ಪತಿಯು ನ್ಯಾಯವನ್ನು ಹೇಳಿದ್ದನು

4. ದೇಹವೂ ಛಾಯೆಯೂ ಅನಾತ್ಮವೆಂಬ ಭಾಗವು.

ಛಾಯಾತ್ಮವು ತಾನೂ ಹಾಗೆಯೇ ಇರುವದು. ಮತ್ತು ಈ ದೇಹವು ನಾಶವಾದರೆ ಅದನ್ನನುಸರಿಸಿ ತಾನೂ ನಾಶವಾಗುತ್ತದೆ. ಆದ್ದರಿಂದ ನನಗೆ ಇದರಲ್ಲಿ ಈ ಛಾಯಾತ್ಮದರ್ಶನದಲ್ಲಿ ಅಥವಾ ದೇಹಾತ್ಮದರ್ಶನದಲ್ಲಿ[1] ಭೋಗವೂ ಫಲವೂ ಕಾಣಿಸುವದಿಲ್ಲ.

## ಇಂದ್ರನು ಪ್ರಜಾಪತಿಯಲ್ಲಿ ತನ್ನ ಅಭಿಪ್ರಾಯವನ್ನು ಹೇಳಿಕೊಂಡದ್ದು

(ಭಾಷ್ಯ)

೬೫೫. ಏವಂ ದೋಷಂ ದೇಹಚ್ಛಾಯಾತ್ಮದರ್ಶನೇಽಧ್ಯವಸ್ಯ ಸ ಸಮಿತ್ಪಾಣಿಃ ಬ್ರಹ್ಮಚರ್ಯಂ ವಸ್ತುಂ ಪುನರೇಯಾಯ । ತಂ ಹ ಪ್ರಜಾಪತಿರುವಾಚ । ಮಘವನ್ ಯತ್ ಶಾನ್ತಹೃದಯಃ ವ್ರಾವ್ರಾಜೀಃ ಪ್ರಗತವಾನಸಿ ವಿರೋಚನೇನ ಸಾರ್ಧಂ ಕಿಮಿಚ್ಛನ್ ಪುನರಾಗಮ ಇತಿ? ವಿಜಾನನ್ನಪಿ ಪುನಃ ಪಪ್ರಚ್ಛ ಇನ್ದ್ರಾಭಿಪ್ರಾಯಾಭಿವ್ಯಕ್ತಯೇ 'ಯದ್ವೇತ್ಥ ತೇನ ಮೋಪಸೀದ' (೭-೧-೧) ಇತಿ ಯದ್ವತ್ । ತಥಾ ಚ ಸ್ವಾಭಿಪ್ರಾಯಂ ಪ್ರಕಟಮ್ ಅಕರೋತ್ ಯಥೈವ ಖಲು ಅಯಮ್ ಇತ್ಯಾದಿ । ಏವಮೇವ ಇತಿ ಚಾನ್ವಮೋದತ ಪ್ರಜಾಪತಿಃ ॥

(ಭಾಷ್ಯಾರ್ಥ)

ಹೀಗೆ ದೇಹಚ್ಛಾಯಾತ್ಮದರ್ಶನದಲ್ಲಿ ದೋಷವಿದೆಯೆಂದು ನಿಶ್ಚಯಿಸಿ ಅವನು ಕೈಯಲ್ಲಿ ಸಮಿತ್ತನ್ನಿಟ್ಟುಕೊಂಡು ಬ್ರಹ್ಮಚರ್ಯವಾಸಕ್ಕಾಗಿ ಮತ್ತೆ ಬಂದನು.

ಅವನನ್ನು ಕುರಿತು ಪ್ರಜಾಪತಿಯು 'ಮಘವಂತನೆ, ಶಾಂತಹೃದಯನಾಗಿ ವಿರೋಚನನೊಡನೆ ಹೋಗಿದ್ದೆಯಲ್ಲ, ಮತ್ತೆ ಏನನ್ನು ಬಯಸಿ ಬಂದಿರುವೆ ? ' ಎಂದನು. (ತನಗೆ) ಗೊತ್ತಿದ್ದರೂ "ಏನನ್ನು ತಿಳಿದುಕೊಂಡಿದೀಯೋ ಅದನ್ನು ತಿಳಿಸಿ ನನ್ನ ಬಳಿಗೆ ಬಾ " (೭-೧-೧) ಎಂದಂತೆ ಇಂದ್ರನ ಅಭಿಪ್ರಾಯವನ್ನು ಹೊರಪಡಿಸುವದಕ್ಕಾಗಿ ಮತ್ತೂ ಹೇಳಿದನು. ಆದ್ದರಿಂದಲೇ ತನ್ನ ಅಭಿಪ್ರಾಯವನ್ನು "ಹೇಗೆ ಇವನು ..'' ಎಂದು ಮುಂತಾಗಿ (ಇಂದ್ರನು) ತನ್ನ ಅಭಿಪ್ರಾಯವನ್ನು ಪ್ರಕಟಮಾಡಿಕೊಂಡಿರುತ್ತಾನೆ. ಪ್ರಜಾಪತಿಯು 'ಹೀಗೇ ಸರಿ' ಎಂದು (ಅದನ್ನು) ಒಪ್ಪಿದನು.

---

1. ಇಂದ್ರನಿಗೆ ದೇಹಕ್ಕಿಂತಲೂ ಛಾಯಾತ್ಮಕ್ಕಿಂತಲೂ ಬೇರೆಯಾಗಿಯೇ ಆತ್ಮನಿರಬೇಕೆಂದು ಹೊಳೆದಿತ್ತೆಂದು ಭಾವ.

# ಇಂದ್ರವಿರೋಚನರ ಮತಭೇದಕ್ಕೆ ಕಾರಣ

(ಭಾಷ್ಯ)

೬೬೦. ನನು ತುಲ್ಯೇ ಅಕ್ಷಿಪುರುಷಶ್ರವಣೇ ದೇಹಚ್ಛಾಯಾಮ್ ಇನ್ದ್ರೋಽಗ್ರಹೀದಾತ್ಮೇತಿ, ದೇಹಮೇವ ತು ವಿರೋಚನಃ । ತತ್ ಕಿಂನಿಮಿತ್ತಮ್ ? ತತ್ರ ಮನ್ಯನ್ತೇ[1] । ಯಥಾ ಇನ್ದ್ರಸ್ಯ ಉದಶರಾವಾದಿಪ್ರಜಾಪತಿವಚನಂ ಸ್ಮರತೋ ದೇವಾನ್ ಅಪ್ರಾಪ್ತಸ್ಯೈವ ಆಚಾರ್ಯೋಕ್ತಬುದ್ಧ್ಯಾ ಛಾಯಾತ್ಮಗ್ರಹಣಂ ತತ್ರ ದೋಷದರ್ಶನಂ ಚ ಅಭೂತ್ ನ ತಥಾ ವಿರೋಚನಸ್ಯ, ಕಿಂ ತರ್ಹಿ ದೇಹ ಏವ ಆತ್ಮದರ್ಶನಂ ನಾಪಿ ತತ್ರ ದೋಷದರ್ಶನಂ ಬಭೂವ । ತದ್ವದೇವ ವಿದ್ಯಾಗ್ರಹಣ ಸಾಮರ್ಥ್ಯಪ್ರತಿಬನ್ಧದೋಷಾಲ್ಪತ್ವಬಹುತ್ವಾಪೇಕ್ಷವಮ್ ಇನ್ದ್ರವಿರೋಚನಯೋ ಶ್ಛಾಯಾತ್ಮದೇಹಯೋರ್ಗ್ರಹಣಮ್ । ಇನ್ದ್ರೋಽಲ್ಪದೋಷತ್ವಾದ್ ದೃಶ್ಯತ ಇತಿ ಶ್ರುತ್ಯರ್ಥಮೇವ ಶ್ರದ್ದಧಾನತಯಾ ಜಗ್ರಾಹ । ಇತರಃ ಛಾಯಾನಿಮಿತ್ತಂ ದೇಹಂ ಹಿತ್ವಾ ಶ್ರುತ್ಯರ್ಥಂ ಲಕ್ಷಣಯಾ ಜಗ್ರಾಹ ಪ್ರಜಾಪತಿನೋಕ್ತೋಽಯಮಿತಿ । ದೋಷಭೂಯಸ್ತ್ವಾತ್ । ಯಥಾ ಕಿಲ ನೀಲಾನೀಲಯೋರಾದರ್ಶೇ ದೃಶ್ಯಮಾನ ಯೋರ್ವಾಸಸೋರ್ಯನ್ನೀಲಂ ತನ್ಮಹಾರ್ಹಮಿತಿ ಛಾಯಾನಿಮಿತ್ತಂ ವಾಸ ಏವೋಚ್ಯತೇ ನ ಛಾಯಾ, ತದ್ವದಿತಿ ವಿರೋಚನಾಭಿಪ್ರಾಯಃ । ಸ್ವಚಿತ್ತಗುಣ ದೋಷವಶಾದೇವ ಹಿ ಶಬ್ದಾರ್ಥಾವಧಾರಣಂ ತುಲ್ಯೇಽಪಿ ಶ್ರವಣೇ ಖ್ಯಾಪಿತಂ 'ದಾಮ್ಯತ', 'ದತ್ತ', 'ದಯಧ್ವಮ್' ಇತಿ ದಕಾರಮಾತ್ರಶ್ರವಣಾದ್ ಶ್ರುತ್ಯನ್ತರೇ। ನಿಮಿತ್ತಾನ್ಯಪಿ ತದನುಗುಣಾನ್ಯೇವ ಸಹಕಾರೀಣಿ ಭವನ್ತಿ ॥

(ಭಾಷ್ಯಾರ್ಥ)

(ಪ್ರಶ್ನೆ):— ಅಕ್ಷಿಪುರುಷನ (ವಿಷಯದ) ಶ್ರವಣವು (ಇಬ್ಬರಿಗೂ) ಸಮಾನ ವಾದರೂ ಇಂದ್ರನು ದೇಹದ ನೆರಳನ್ನೇ ಆತ್ಮನೆಂದು ಗ್ರಹಿಸಿದನು , ವಿರೋಚನ ನಾದರೋ ದೇಹವನ್ನೇ (ಆತ್ಮನೆಂದು ಗ್ರಹಿಸಿದನಲ್ಲ), ಇದಕ್ಕೆ ಕಾರಣವೇನು ?

(ಉತ್ತರ) :— ಇಲ್ಲಿ ಬಲ್ಲವರ ಮತವೇನೆಂದರೆ[2], ಹೇಗೆ ಇಂದ್ರನು ನೀರಿನ ಶ್ರಾವೆಯೇ ಮುಂತಾದ (ವಿಷಯದ) ಪ್ರಜಾಪತಿವಾಕ್ಯವನ್ನು ಸ್ಮರಿಸಿಕೊಂಡದ್ದ ರಿಂದ[3] ದೇವತೆಗಳನ್ನು ಸೇರದೆಯೇ ಆಚಾರ್ಯನು ಹೇಳಿದ ತಿಳಿವಳಿಕೆಯಿಂದ ಛಾಯಾತ್ಮನನ್ನು ಗ್ರಹಿಸುವದೂ ಅದರಲ್ಲಿ ದೋಷವನ್ನು ಕಂಡುಕೊಳ್ಳುವದೂ

1. 'ಮನ್ಯತೇ' ಎಂದು ಪಾ||.

2. 'ಮನ್ಯತೇ' ಎಂಬ ಪಾಠಕ್ಕೆ ನಮ್ಮ ಮತವೇನೆಂದರೆ ಎಂದರ್ಥ ತಾತ್ಪರ್ಯದಲ್ಲಿ ಹೆಚ್ಚುಕಡಿಮೆಯಿಲ್ಲ.

3. ಆಚಾರ್ಯವಾಕ್ಯಸ್ಮರಣೆಯು ತತ್ತ್ವವಿಚಾರಕ್ಕೆ ಸಹಕಾರಿಯೆಂದು ಸೂಚಿಸಿದಂತೆ ಆಯಿತು.

ಆಯಿತೋ ಹಾಗೆ ವಿರೋಚನನಿಗೆ ಆಗಲಿಲ್ಲ, ಮತ್ತೇನೆಂದರೆ ದೇಹದಲ್ಲಿಯೇ ಆತ್ಮ ಬುದ್ಧಿಯುಂಟಾಯಿತು, ಅದರಲ್ಲಿ ದೋಷದೃಷ್ಟಿಯೂ ಉಂಟಾಗಲಿಲ್ಲ. ಆದರಂತೆಯೇ **ವಿದ್ಯೆಯನ್ನು ಗ್ರಹಿಸುವ ಶಕ್ತಿಗೆ ಅಡ್ಡಿಯಾದ ದೋಷವು ಅಲ್ಪವಾಗಿದ್ದದ್ದು, ಹೆಚ್ಚಾಗಿದ್ದದ್ದು**[1]**–ಇವುಗಳ ಅಪೇಕ್ಷೆಯಿಂದ ಇಂದ್ರವಿರೋಚನರುಗಳು ಛಾಯಾತ್ಮ, ದೇಹ– ಇವುಗಳನ್ನು ಗ್ರಹಿಸಿದರು.** ಇಂದ್ರನಿಗೆ ದೋಷವು ಸ್ವಲ್ಪವೇ ಇದ್ದದ್ದರಿಂದ ದೃಶ್ಯತೇ (ಕಾಣಿಸುತ್ತದೆ) ಎಂಬ ಶ್ರುತಿಯ ಅರ್ಥವನ್ನೇ[2] ಶ್ರದ್ಧೆಯಿಟ್ಟು[3] ಗ್ರಹಿಸಿದನು ಇನ್ನೊಬ್ಬನಾದ (ವಿರೋಚನನು) ದೋಷವು ಹೆಚ್ಚಾಗಿದ್ದದ್ದರಿಂದ ಶ್ರುತ್ಯರ್ಥವನ್ನು ಬಿಟ್ಟು ಛಾಯೆಗೆ ಕಾರಣವಾಗಿರುವ ದೇಹವನ್ನೇ ಇದೇ ಪ್ರಜಾಪತಿಯು ಹೇಳಿದ್ದು ಎಂದು ಲಕ್ಷಣೆಯಿಂದ[4] ಗ್ರಹಿಸಿದನು.

ಹೇಗೆ ಕನ್ನಡಿಯಲ್ಲಿ ಕಾಣಿಸುವ ಕಪ್ಪು, ಕಪ್ಪಿಲ್ಲದ್ದು– ಹೀಗೆ (ಎರಡು) ಬಟ್ಟೆಗಳಲ್ಲಿ ಯಾವದು ಕಪ್ಪಾಗಿದೆಯೋ ಅದು ಹೆಚ್ಚಿನ ಬೆಲೆಯುಳ್ಳದ್ದು ಎಂದರೆ ನೆರಳಿಗೆ ಕಾರಣವಾದ ಬಟ್ಟೆಯನ್ನೇ ಹೇಳುತ್ತಾರೆಯೇ ಹೊರತು ನೆರಳನ್ನಲ್ಲವಷ್ಟೆ ? ಹಾಗೆಯೇ (ಇಲ್ಲಿಯೂ ತಿಳಿಯಬೇಕು) ಎಂದು ವಿರೋಚನನ ಅಭಿಪ್ರಾಯ. ತಮ್ಮ ತಮ್ಮ ಚಿತ್ತದ ಗುಣದೋಷಗಳ ವಶದಿಂದಲ್ಲವೆ, ದಕಾರಮಾತ್ರಶ್ರವಣದಿಂದ 'ದಮ ಮಾಡಿರಿ', 'ದಾನಮಾಡಿರಿ', 'ದಯೆಮಾಡಿರಿ'– ಎಂದು ಶ್ರವಣವೇನೋ ಸಮಾನವಾಗಿದ್ದರೂ ಶಬ್ದಕ್ಕೆ (ಬೇರೆಬೇರೆಯ) ಅರ್ಥವನ್ನು ನಿರ್ಧರಿಸಿದರೆಂದು ಬೇರೊಂದು ಶ್ರುತಿಯಲ್ಲಿ[5] ತಿಳಿಸಿದೆಯಲ್ಲವೆ ? ನಿಮಿತ್ತಗಳೂ ಅದಕ್ಕೆ ಅನುಗುಣವಾಗಿಯೇ ಸಹಕಾರಿಗಳಾಗಿರುತ್ತವೆ.[6]

---

1. ಇಂದ್ರನಿಗೆ ಅಂತಃಕರಣದೋಷವು ಅಲ್ಪವಾದ್ದರಿಂದ ಗ್ರಹಣಕ್ಕೆ ಹೆಚ್ಚು ಅಡ್ಡಿಯಾಗಲಿಲ್ಲ. ವಿರೋಚನನಿಗೆ ಹೆಚ್ಚಾಗಿದ್ದದ್ದರಿಂದ ಅಡ್ಡಿಯಾಯಿತು ಎಂದು ಅಭಿಪ್ರಾಯ.

2. ಕಾಣಿಸುವದು ಛಾಯೆಯಾದ್ದರಿಂದ 'ಕಾಣಿಸುತ್ತದೆ' ಎಂಬ ಮಾತು ಮುಖ್ಯಾರ್ಥದಲ್ಲಿ ಅದಕ್ಕೆ ಹೊಂದುತ್ತದೆ. ಶ್ರುತಿಯ ಅರ್ಥ ಎಂದರೆ ವಾಕ್ಯದ ಅಕ್ಷರಾರ್ಥ.

3. ಶ್ರದ್ಧೆಯೂ ವಿಚಾರಕ್ಕೆ ಅಂಗವೆಂದು ಸೂಚಿಸಿದಂತೆ ಆಯಿತು

4. ಕಾಣಿಸುವದು ಛಾಯೆಯಾದರೂ ದೇಹವನ್ನು ತಿಳಿಸುವದೇ ಪ್ರಜಾಪತಿಯ ಉದ್ದೇಶವು– ಎಂದು ಲಕ್ಷಣಾರ್ಥವನ್ನು ಸ್ವೀಕರಿಸಿದನು.

5. ಬೃ. ೫-೨-೩.

6. ಶ್ರವಣಕ್ಕೆ ಅನುಗುಣವಾಗಿರುವ ನಿಮಿತ್ತಗಳೂ ಸಹಕಾರಿಯಾಗಿರುತ್ತವೆ, ಸಹಕಾರಿಗುಣಗಳು ಇಲ್ಲದಿದ್ದರೆ ಶ್ರವಣಾರ್ಥವು ಸರಿಯಾಗಿ ತಿಳಿಯುವದಿಲ್ಲ ಎಂದರ್ಥ. 'ಶ್ರವಣಮಾಡಿದವರ ಚಿತ್ತಗುಣದೋಷಾಲ್ಪತ್ವಬೃಹತ್ವಕ್ಕೆ ತಕ್ಕಂತೆ ಯುಕ್ತಿಗಳೂ ತೋರುವವು' ಎಂದು ಟೀಕೆ.

## ಇಂದ್ರನು ಮತ್ತೆ ಬ್ರಹ್ಮಚರ್ಯದಿಂದಿದ್ದದ್ದು

(ಉಪನಿಷತ್ತು)

**ಏವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಗ್‌ಂಶತಂ ವರ್ಷಾಣೀತಿ ಸ ಹಾಪರಾಣಿ ದ್ವಾತ್ರಿಗ್‌ಂಶತಂ ವರ್ಷಾಣ್ಯುವಾಸ ತಸ್ಮೈ ಹೋವಾಚ ॥ ೩ ॥**

೩. 'ಮಘವಂತನೆ, ಇದು ಹೀಗೆಯೇ. ಆದರೆ ಈ (ಆತ್ಮ)ನನ್ನೇ ನಿಮಗೆ ಮತ್ತೂ ಅನುವ್ಯಾಖ್ಯಾನಮಾಡುವೆನು. ಮತ್ತೂ ಮೂವತ್ತೆರಡು ವರ್ಷಗಳು (ಇಲ್ಲಿ) ಇದ್ದುಕೊಂಡಿರು ಎಂದನು. ಅವನು ಮತ್ತೂ ಮೂವತ್ತೆರಡು ವರ್ಷಗಳು (ಬ್ರಹ್ಮಚರ್ಯ)ವಾಸ ಮಾಡಿಕೊಂಡಿದ್ದನು. ಅವನಿಗೆ (ಪ್ರಜಾಪತಿ) ಇಂತೆಂದನು :

## ಮತ್ತೂ ಬ್ರಹ್ಮಚರ್ಯದಿಂದಿರು ಎಂದು ಕಟ್ಟುಮಾಡಿದ್ದು

(ಭಾಷ್ಯ)

೬೬೧. ಏವಮೇವೈಷ ಮಘವನ್ ಸಮ್ಯಕ್ ತ್ವಯಾ ಅವಗತಂ ನ ಚ್ಛಾಯಾ ಆತ್ಮಾ ಇತ್ಯುವಾಚ ಪ್ರಜಾಪತಿಃ । ಯೋ ಮಯೋಕ್ತ ಆತ್ಮಾ ಪ್ರಕೃತಃ ಏತಮೇವ ಆತ್ಮಾನಂ ತು ತೇ ಭೂಯಃ ಪೂರ್ವಂ ವ್ಯಾಖ್ಯಾತಮಪಿ ಅನುವ್ಯಾಖ್ಯಾಸ್ಯಾಮಿ, ಯಸ್ಮಾತ್ ಸಕೃದ್ ವ್ಯಾಖ್ಯಾತಂ ದೋಷರಹಿತಾನಾಮ್ ಅವಧಾರಣ ವಿಷಯಂ ಪ್ರಾಪ್ತಮಪಿ ನಾಗ್ರಹೀಃ, ಅತಃ ಕೇನಚಿದ್ ದೋಷೇಣ ಪ್ರತಿಬದ್ಧ ಗ್ರಹಣಸಾಮರ್ಥ್ಯಸ್ತ್ವಮ್ । ಅತಃ ತತ್‌ಕ್ಷಪಣಾಯ ವಸಾಽಪರಾಣಿ ದ್ವಾತ್ರಿಂಶತಂ ವರ್ಷಾಣಿ ಇತ್ಯುಕ್ತ್ವಾ ತಥಾ ಉಷಿತವತೇ ಕ್ಷಪಿತದೋಷಾಯ ತಸ್ಮೈ ಹೋವಾಚ ॥

(ಭಾಷ್ಯಾರ್ಥ)

ಮಘವಂತನೆ, ಇದು ಹೀಗೆಯೇ , ನೀನು ಸರಿಯಾಗಿ ನಿಶ್ಚಯಿಸಿದ್ದೀಯೆ, ಛಾಯೆಯು ಆತ್ಮನಲ್ಲ- ಎಂದು ಪ್ರಜಾಪತಿಯೆಂದನು. ನಾನು ಹೇಳಿದ ಪ್ರಕೃತನಾದ ಆತ್ಮನಿದಾನಲ್ಲ, ಈ ಆತ್ಮನನ್ನೇ[1] ಮತ್ತೂ, ಮೊದಲು ಹೇಳಿದ್ದರೂ, ಅನುವ್ಯಾಖ್ಯಾನಮಾಡುವೆನು. **ಒಂದು ಸಲ ವಿವರಿಸಿದ್ದು ದೋಷರಹಿತರಾದವರಿಗೆ ಅವಧಾರಣೆಗೆ ವಿಷಯವಾಗಬೇಕಾಗಿದ್ದರೂ[2] (ಅದನ್ನು) ಗ್ರಹಿಸ**

1. ನಾನು ಹೇಳಿದ ಆತ್ಮನನ್ನೇ, ನೀನು ತಿಳಿದುಕೊಂಡದ್ದ ಆತ್ಮನನ್ನಲ್ಲ.
2 ನಿಶ್ಚಯಿಸಿಕೊಳ್ಳಬಹುದಾಗಿದ್ದರೂ.

**ಲಿಲ್ಲವಷ್ಟೆ, ಆದ್ದರಿಂದ ಯಾವದೋ ದೋಷದಿಂದ ನಿನ್ನ ಗ್ರಹಣಶಕ್ತಿಗೆ ಅಡ್ಡಿಯಾಗಿದೆ (ಎನ್ನಬೇಕು).** ಆದ್ದರಿಂದ ಆ (ದೋಷವನ್ನು) ತೊಲಗಿಸುವದಕ್ಕಾಗಿ ಮತ್ತೂ ಮೂವತ್ತೆರಡು ವರ್ಷಗಳು (ಬ್ರಹ್ಮಚರ್ಯದಿಂದ) ಇದ್ದುಕೊಂಡಿರು ಎಂದು ನುಡಿದು ಅದರಂತೆ (ಬ್ರಹ್ಮಚರ್ಯ)ವಾಸವನ್ನು ಮಾಡಿದ ಮೇಲೆ ದೋಷಕ್ಷಯವಾಗಲು ಅವನಿಗೆ (ಪ್ರಜಾಪತಿ)ಯಿಂತೆಂದನು.

---

# ಎಂಟನೆಯ ಅಧ್ಯಾಯ-ಹತ್ತನೆಯ ಖಂಡ

( ಅವಸ್ಥಾತ್ರಯನಿರೂಪಣ )

## ಸ್ವಪ್ನಾತ್ಮನ ಉಪದೇಶ, ಇಂದ್ರನ ಅಸಂತೋಷ

(ಉಪನಿಷತ್ತು)

**ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ ಬ್ರಹ್ಮೇತಿ ಸ ಹ ಶಾನ್ತಹೃದಯಃ ಪ್ರವವ್ರಾಜ ಸ ಹಾಽಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ತದ್ಯದ್ಯಪೀದಗ್ಂ ಶರೀರಮನ್ಧಂ ಭವತ್ಯನನ್ಧಃ ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ ॥ ೧ ॥**

**ನ ವಧೇನಾಽಸ್ಯ ಹನ್ಯತೇ ನಾಽಸ್ಯ ಸ್ರಾಮ್ಯೇಣ ಸ್ರಾಮೋ ಘ್ನನ್ತಿ ತ್ವೇವೈನಂ ವಿಚ್ಛಾದಯನ್ತೀವಾಽಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಽಹಮತ್ರ ಭೋಗ್ಯಂ ಪಶ್ಯಾಮೀತಿ ॥ ೨ ॥**

೧-೨. 'ಯಾವ ಇವನು ಸ್ವಪ್ನದಲ್ಲಿ ಮಹೀಕೃತನಾಗಿ ಚರಿಸುತ್ತಿರುವನೋ ಇವನೇ ಆತ್ಮನು. ಇದೇ ಅಮೃತವು, ಅಭಯವು, ಇದೇ ಬ್ರಹ್ಮವು.' ಅವನು ಶಾಂತಹೃದಯನಾಗಿ ಹೊರಟುಹೋದನು. ಅವನು ದೇವತೆಗಳನ್ನು ಸೇರದೆಯೇ ಈ ಅಂಜಿಕೆಯನ್ನು ಕಂಡುಕೊಂಡನು. ಆ ಈ ಶರೀರವು ಕುರುಡಾಗಿದ್ದರೂ ಅವನು ಕುರುಡಾಗಿರುವದಿಲ್ಲ, ಸ್ರಾಮವಾಗಿದ್ದರೂ ಅಸ್ರಾಮನಾಗಿರುತ್ತಾನೆ ; ಇದರ ದೋಷದಿಂದ ಇವನು ದೂಷಿತನಾಗುವದೇ ಇಲ್ಲ ; ಇದರ ಕೊಲೆಯಿಂದ ಅವನು ಹತನಾಗುವದಿಲ್ಲ, ಇದರ ಸ್ರಾಮ್ಯದಿಂದ ಸ್ರಾಮನೂ

ಆಗುವದಿಲ್ಲ. ಆದರೆ ಇವನನ್ನು ಕೊಲ್ಲುವಂತಿರುತ್ತಾರೆ, ಬೆನ್ನಟ್ಟಿ ಕೊಂಡು ಬರುವಂತಿರುತ್ತಾರೆ ; (ಇವನು) ಅಪ್ರಿಯವನ್ನು ಅನುಭವಿಸು ತ್ತಿರುತ್ತಾನೆ, ಮತ್ತು ಅಳುವಂತೆಯೂ ಇರುತ್ತಾನೆ. ನನಗೆ ಇಲ್ಲಿ ಭೋಗ್ಯವು ಕಾಣಿಸುವದಿಲ್ಲ.

## ಸ್ವಪ್ನದ ವಿಮರ್ಶೆ

(ಭಾಷ್ಯ)

೬-೨. ಯ ಆತ್ಮಾ ಅಪಹತಪಾಪ್ಮಾದಿಲಕ್ಷಣಃ "ಯ ಏಷೋಽಕ್ಷಿಣಿ" (೮-೭-೪) ಇತ್ಯಾದಿನಾ ವ್ಯಾಖ್ಯಾತಃ, ಏಷ ಸಃ । ಕೋಽಸೌ ? ಯಃ ಸ್ವಪ್ನೇ ಮಹೀಯಮಾನಃ ಸ್ತ್ರ್ಯಾದಿಭಿಃ ಪೂಜ್ಯಮಾನಃ, ಚರತಿ ಅನೇಕವಿಧಾನ್ ಸ್ವಪ್ನ ಭೋಗಾನ್ ಅನುಭವತೀತ್ಯರ್ಥಃ । 'ಏಷ ಆತ್ಮಾ ಇತಿ ಹೋವಾಚ' ಇತ್ಯಾದಿ ಸಮಾನಮ್ । ಸ ಹ ಏವಮುಕ್ತಃ ಶಾನ್ತಹೃದಯಃ ಪ್ರವವ್ರಾಜ । ಸ ಹ ಅಪ್ರಾ ಪ್ಯೈವ ದೇವಾನ್ ಪೂರ್ವವತ್ ಅಸ್ಮಿನ್ನಪ್ಯಾತ್ಮನಿ ಭಯಂ ದದರ್ಶ । ಕಥಮ್ ? ತದಿದಂ ಶರೀರಂ ಯದ್ಯಪ್ಯನ್ಧಂ ಭವತಿ ಸ್ವಪ್ನಾತ್ಮಾ ಯಃ, ಅನನ್ಧಃ ಸ ಭವತಿ । ಯದಿ ಸ್ರಾಮಮಿದಂ ಶರೀರಮ್, ಅಸ್ರಾಮಶ್ಚ ಸ ಭವತಿ । ನೈವೈಷಃ ಸ್ವಪ್ನಾತ್ಮಾ ಅಸ್ಯ ದೇಹಸ್ಯ ದೋಷೇಣ ದುಷ್ಯತಿ । ನಾಪಿ ಅಸ್ಯ ವಧೇನ ಸ ಹನ್ಯತೇ ಛಾಯಾ ತ್ಮವತ್ । ನ ಚಾಽಸ್ಯ ಸ್ರಾಮ್ಯೇಣ ಸ್ರಾಮಃ ಸ್ವಪ್ನಾತ್ಮಾ ಭವತಿ । ಯತ್ ಅಧ್ಯಾಯಾದೌ ಆಗಮಮಾತ್ರೇಣ ಉಪನ್ಯಸ್ತಂ "ನಾಸ್ಯ ಜರಯೈತಜ್ಜೀರ್ಯತಿ" (೮-೧-೫) ಇತ್ಯಾದಿ ತದಿಹ ನ್ಯಾಯೇನ ಉಪಪಾದಯಿತುಮುಪನ್ಯಸ್ತಮ್ । ನ ತಾವದಯಂ ಛಾಯಾತ್ಮವದ್ ದೇಹದೋಷಯುಕ್ತಃ । ಕಿಂ ತು ಘ್ನನ್ತಿ ತ್ವೇವ ಏನಮ್ । ಏವಶಬ್ದ ಇವಾರ್ಥೇ । ಘ್ನನ್ತೀವೈನಂ ಕೇಚನ ಇತಿ ದ್ರಷ್ಟವ್ಯಮ್ ನ ತು ಘ್ನನ್ತ್ಯೇವೇತಿ । ಉತ್ತರೇಷು ಇವಶಬ್ದದರ್ಶನಾತ್ । 'ನಾಸ್ಯ ವಧೇನ ಹನ್ಯತ' ಇತಿ ವಿಶೇಷಣಾತ್ ಘ್ನನ್ತಿ ತ್ವೇವ ಇತಿ ಚೇತ್ । ನೈವಮ್ । ಪ್ರಜಾ ಪತಿಂ ಪ್ರಮಾಣೀಕುರ್ವತೋಽನೃತವಾದಿತ್ವಾಪಾದನಾನುಪಪತ್ತೇಃ "ಏತ ದಮೃತಮ್" ಇತ್ಯೇತತ್ ಪ್ರಜಾಪತಿವಚನಂ ಕಥಂ ಮೃಷಾ ಕುರ್ಯಾದಿನ್ದ್ರಸ್ತಂ ಪ್ರಮಾಣೀಕುರ್ವನ್ ? ನನು ಛಾಯಾಪುರುಷೇ ಪ್ರಜಾಪತಿನಾ ಉಕ್ತೇ "ಅಸ್ಯ ಶರೀರಸ್ಯ ನಾಶಮನ್ವೇಷ ನಶ್ಯತಿ" (೮-೯-೨) ಇತಿ ದೋಷಮಭ್ಯದಧಾತ್ । ತಥಾ ಇಹಾಪಿ ಸ್ಯಾತ್ । ನೈವಮ್ । ಕಸ್ಮಾತ್ ? "ಯ ಏಷೋಽಕ್ಷಿಣಿ ಪುರುಷೋ ದೃಶ್ಯತ" (೮-೭-೪) ಇತಿ ನ ಛಾಯಾತ್ಮಾ ಪ್ರಜಾಪತಿನೋಕ್ತ ಇತಿ ಮನ್ಯತೇ ಮಘವಾನ್ । ಕಥಮ್? ಅಪಹತಪಾಪ್ಮಾದಿಲಕ್ಷಣೇ ಪೃಷ್ಟೇ ಯದಿ ಛಾಯಾತ್ಮಾ ಪ್ರಜಾಪತಿನಾ ಉಕ್ತಃ ಇತಿ ಮನ್ಯತೇ ತದಾ ಕಥಂ ಪ್ರಜಾಪತಿಂ ಪ್ರಮಾಣೀಕೃತ್ಯ ಪುನಃ ಪ್ರವಣಾಯ ಸಮಿತ್ಪಾಣಿರ್ಗಚ್ಛೇತ್ ? ಜಗಾಮ ಚ । ತಸ್ಮಾನ್ನ

ಚ್ಛಾಯಾತ್ಮಾ ಪ್ರಜಾಪತಿನಾ ಉಕ್ತ ಇತಿ ಮನ್ಯತೇ। ತಥಾ ಚ ವ್ಯಾಖ್ಯಾತಂ ದ್ರಷ್ಟಾಽಕ್ಷಿಣಿ ದೃಶ್ಯತ ಇತಿ। ತಥಾ ವಿಚ್ಛಾದಯನ್ತೀವ ವಿದ್ರಾವಯನ್ತೀವ ತಥಾ ಚ ಪುತ್ರಾದಿಮರಣನಿಮಿತ್ತಮ್ ಅಪ್ರಿಯವೇತ್ತೇವ ಭವತಿ। ಅಪಿ ಚ ಸ್ವಯಮಪಿ ರೋದಿತೀವ। ನನ್ವಪ್ರಿಯಂ ವೇತ್ತ್ಯೇವ, ಕಥಂ ವೇತ್ತೇವೇತಿ ? ಉಚ್ಯತೇ। ನ। ಅಮೃತಾಭಯತ್ವವಚನಾನುಪಪತ್ತೇಃ। "ಧ್ಯಾಯತೀವ" (ಬೃ. ೪-೩-೭) ಇತಿ ಚ ಶ್ರುತ್ಯನ್ತರಾತ್। ನನು ಪ್ರತ್ಯಕ್ಷವಿರೋಧ ಇತಿ ಚೇತ್। ನ। ಶರೀರಾತ್ಮತ್ವಪ್ರತ್ಯಕ್ಷವದ್ ಭ್ರಾನ್ತಿಸಂಭವಾತ್। ತಿಷ್ಠತು ತಾವದಪ್ರಿಯ ವೇತ್ತೇವ ನ ವಾ ಇತಿ। ನಾಹಮತ್ರ ಭೋಗ್ಯಂ ಪಶ್ಯಾಮಿ ಸ್ವಪ್ನಾತ್ಮಜ್ಞಾನೇಽಪಿ ಇಷ್ಟಂ ಫಲಂ ನೋಪಲಭ ಇತ್ಯಭಿಪ್ರಾಯಃ॥

(ಭಾಷ್ಯಾರ್ಥ)

"ಕಣ್ಣಿನಲ್ಲಿ ಕಾಣುತ್ತಾನಲ್ಲ, ಇವನು" (೮-೭-೪) ಎಂದು ಮುಂತಾದ (ವಾಕ್ಯ)ದಿಂದ ಯಾವ ಅಪಹತಪಾಪ್ಮಾದಿಲಕ್ಷಣಗಳುಳ್ಳ ಆತ್ಮನನ್ನು ತಿಳಿಸಿಕೊಟ್ಟಿದ್ದಾಗಿದೆಯೋ ಅವನು ಇವನೇ. (ಇವನೇ ಎಂದರೆ) ಅವನು ಯಾರು ? ಎಂದರೆ ಸ್ವಪ್ನದಲ್ಲಿ ಮಹೀಕೃತನಾಗಿ ಸ್ತ್ರ್ಯಾದಿಗಳಿಂದ ಪೂಜಿತನಾಗಿ ಚರಿಸುತ್ತಿರುವನೋ, ಅನೇಕವಿಧವಾದ ಸ್ವಪ್ನಭೋಗಗಳನ್ನು ಅನುಭವಿಸುತ್ತಿರುವನೋ ( ಅವನು ) ಎಂದರ್ಥ. 'ಇವನೇ ಆತ್ಮನು ಎಂದನು' ಎಂದು ಮುಂತಾಗಿರುವ ( ವಾಕ್ಯದ ಅರ್ಥವು ಹಿಂದಿನ ಇದೇ ವಾಕ್ಯದರ್ಥಕ್ಕೆ) ಸಮಾನ(ವಾಗಿದೆ).

ಹೀಗೆನ್ನಲು ಆ ಇಂದ್ರನು ಶಾಂತಹೃದಯನಾಗಿ ಹೊರಟುಹೋದನು. ಅವನು ದೇವತೆಗಳನ್ನು ಸೇರದೆಯೇ ಹಿಂದಿನಂತೆಯೇ ಈ ಆತ್ಮನಲ್ಲಿಯೂ ಅಂಜಿಕೆಯನ್ನು ಕಂಡುಕೊಂಡನು. ಹೇಗೆಂದರೆ, ಆ ಶರೀರವು ಕುರುಡಾದರೂ ಸ್ವಪ್ನಾತ್ಮನಿದಾನಲ್ಲ, ಅವನು ಅನಂಧನಾಗಿರುತ್ತಾನೆ, ಈ ಶರೀರವು ಸ್ರಾಮವಾಗಿದ್ದರೂ ಅವನು ಅಸ್ರಾಮನೂ ಆಗಿರುತ್ತಾನೆ. ಈ ಸ್ವಪ್ನಾತ್ಮನು ಈ ದೇಹದ ದೋಷದಿಂದ ದೂಷಿತನಾಗಿರುವದೇ ಇಲ್ಲ

ಇದರ ಕೊಲೆಯಿಂದ ಅವನು ಛಾಯಾತ್ಮನಂತೆ ಹತನಾಗುವದೂ ಇಲ್ಲ ; ಇದರ ಸ್ರಾಮತ್ವದಿಂದ (ಆ) ಸ್ವಪ್ನಾತ್ಮನು ಸ್ರಾಮನೂ ಆಗಿರುವದಿಲ್ಲ. (ಈ) ಅಧ್ಯಾಯದ ಆದಿಯಲ್ಲಿ **"ಇದರ ಮುಪ್ಪಿನಿಂದ ಇದು ಮುಪ್ಪಾಗುವದಿಲ್ಲ" (೮-೧-೫) ಎಂದು ಆಗಮಮಾತ್ರದಿಂದ ಹೇಳಿತ್ತಲ್ಲ, ಅದನ್ನು ಯುಕ್ತಿಯಿಂದ ಹೊಂದಿಸಿ ತೋರಿಸುವದಕ್ಕೆ (ಇಲ್ಲಿ) ಹೇಳಿದೆ.**[1]

---

1. ಉಪದೇಶರೂಪವಾಗಿ ಹೇಳಿರುವ ವಿಷಯವನ್ನು ವಿಶದಗೊಳಿಸುವ ಅನುಭವಾಂಗ ಯುಕ್ತಿಯೂ ಶ್ರುತ್ಯನುಗೃಹೀತವಾಗಿದೆ ಎಂದು ಭಾವ. ಸೂ. ಭಾ. ೨-೧-೬ (ಭಾ ಭಾ ೪೧೮)ನ್ನು ನೋಡಿ.

ಅಂತೂ ಈ (ಸ್ವಪ್ನಾತ್ಮನು) ಛಾಯಾತ್ಮನಂತೆ ದೇಹದೋಷದಿಂದ ಕೂಡಿರುವದಿಲ್ಲ. ಆದರೆ ಇವನನ್ನು 'ಘ್ನನ್ತಿ ತ್ವೇವೈನಮ್', ಇಲ್ಲಿ ಏವಶಬ್ದವು ಇವ ಎಂಬರ್ಥದಲ್ಲಿ (ಪ್ರಯೋಗಿಸಲ್ಪಟ್ಟಿರುತ್ತದೆ. ಯಾರೋ) ಕೆಲವರು ಇವನನ್ನು ಕೊಲ್ಲುವಂತೆ (ಕಾಣಿಸುತ್ತದೆ) ಎಂದು (ಈ ವಾಕ್ಯದ ಅರ್ಥವನ್ನು) ಇಟ್ಟುಕೊಳ್ಳಬೇಕು, ಇಷ್ಟೇ ಹೊರತು ಕೊಂದೇಕೊಲ್ಲುತ್ತಾರೆ ಎಂದು (ಅರ್ಥಮಾಡ) ಬಾರದು. ಏಕೆಂದರೆ ಮುಂದಿನ (ವಾಕ್ಯಗಳಲ್ಲೆಲ್ಲ) ಇವಶಬ್ದವೇ ಕಾಣಬರುತ್ತದೆ.

(ಆಕ್ಷೇಪ) :- 'ಇದನ್ನು ಕೊಲ್ಲುವದರಿಂದ (ಇವನು) ಹತನಾಗುವದಿಲ್ಲ' ಎಂದು ವಿಶೇಷಣವನ್ನು (ಕೊಟ್ಟಿರುವದರಿಂದ ಇವನನ್ನು ಯಾರೋ) ಕೊಲ್ಲುತ್ತಾರೆಂದೇ (ಅರ್ಥವಾಗಲಿ)![1]

(ಪರಿಹಾರ) :- ಹಾಗಲ್ಲ. ಏಕೆಂದರೆ ಪ್ರಜಾಪತಿಯು ಪ್ರಮಾಣ(ಭೂತ) ನೆಂದು ಎಣಿಸಿರುವ (ಇಂದ್ರನು ಅವನು) ಸುಳ್ಳುಹೇಳುವವನೆಂದು ಮಾಡುವದು ಹೊಂದುವದಿಲ್ಲ. "ಇದು ಅಮೃತವು ." ಎಂಬೀ ಪ್ರಜಾಪತಿಯ ವಾಕ್ಯವನ್ನು ಆ (ಪ್ರಜಾಪತಿಯು) ಪ್ರಮಾಣವೆಂದು ಎಣಿಸಿರುವ ಇಂದ್ರನು- ಹೇಗೆತಾನೆ ಸುಳ್ಳೆಂದು ಮಾಡಿಕೊಂಡಾನು ?

(ಆಕ್ಷೇಪ) :- ಛಾಯಾಪುರುಷನನ್ನು ಪ್ರಜಾಪತಿಯು ಹೇಳಲಾಗಿ "ಈ ಶರೀರವು ನಾಶವಾದರೆ ಅದನ್ನನುಸರಿಸಿ ಇವನೂ ನಾಶವಾಗುವನು" (೮-೯-೨) ಎಂದು ದೋಷವನ್ನು ಹೇಳಿದನಲ್ಲ ? ಹಾಗೆಯೇ ಇಲ್ಲಿಯೂ ಆಗಬಹುದಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ "ಈ ಅಕ್ಷಿಯಲ್ಲಿ ಕಾಣಿಸುತ್ತಿರುವ ಪುರುಷನಿದಾನಲ್ಲ" (೮-೭-೪) ಎಂಬಲ್ಲಿ ಛಾಯಾತ್ಮನನ್ನು ಪ್ರಜಾಪತಿಯು ಹೇಳಲಿಲ್ಲವೆಂದು ಮಘವಂತನು ತಿಳಿದಿರುತ್ತಾನೆ. ಹೇಗೆಂದರೆ, ಅಪಹತಪಾಪ್ಮನೇ ಮುಂತಾದ ಲಕ್ಷಣವುಳ್ಳ (ಆತ್ಮನನ್ನು) ಕೇಳಲು ಪ್ರಜಾಪತಿಯು ಛಾಯಾತ್ಮನನ್ನು ಹೇಳಿರುತ್ತಾನೆ ಎಂದು (ಅವನು) ಎಣಿಸಿದ್ದನಾದರೆ, ಆಗ ಪ್ರಜಾಪತಿಯನ್ನು ಪ್ರಮಾಣವೆಂದು ತಿಳಿದ (ಇಂದ್ರನು) ಮತ್ತೂ ಶ್ರವಣಕ್ಕಾಗಿ ಸಮಿತ್ಪಾಣಿಯಾಗಿ ಹೇಗೆತಾನೆ ಹೋದಾನು ? ಆದರೆ (ಹಾಗೆ) ಹೋದನು[2]. ಆದ್ದರಿಂದ ಛಾಯಾತ್ಮನನ್ನು ಪ್ರಜಾಪತಿಯು ಹೇಳಿಲ್ಲವೆಂದು (ಅವನು) ಎಣಿಸುತ್ತಾನೆ.[3]

---

1. ಶರೀರವನ್ನು ಕೊಂದರೆ ಅವನು ನಾಶವಾಗುವದಿಲ್ಲ ಎಂದದ್ದರಿಂದ ಅವನನ್ನೇ ಕೊಂದರೆ ನಾಶವಾಗಬಹುದು ಎಂದು ಅರ್ಥವಾಗಬಹುದಲ್ಲವೆ ?- ಎಂದು ಭಾವ.

2. ಆದ್ದರಿಂದ ಕಣ್ಣಿನಲ್ಲಿ ಕಾಣಿಸುತ್ತಾನೆ ಎಂದ ಆತ್ಮನು ಛಾಯಾತ್ಮನಲ್ಲವೆಂದೇ ಅವನ ಮತವೆಂದಾಯಿತು.

3. ಆದ್ದರಿಂದಲೇ ನಿಜವಾದ ಆತ್ಮನನ್ನು ತಿಳಿದುಕೊಳ್ಳುವದಕ್ಕಾಗಿ ಶಿಷ್ಯನಾಗಿ ಬಂದಿರುತ್ತಾನೆ.

ಆದ್ದರಿಂದಲೇ 'ಕಣ್ಣಿನಲ್ಲಿ ದ್ರಷ್ಟೃವೇ ಕಾಣಿಸುತ್ತಾನೆ' ಎಂದು ನಾವು ವ್ಯಾಖ್ಯಾನ ಮಾಡಿರುತ್ತೇವೆ.[1]

ಇದರಂತೆ (ವಿಚ್ಛಾದಯನ್ತೀವ=ವಿದ್ರಾವಯನ್ತೀವ) ಬೆನ್ನಟ್ಟಿಸಿಕೊಂಡು ಬರುವಂತಿರುತ್ತಾರೆ, ಓಡಿಸಿಕೊಂಡು ಬರುವಂತಿರುತ್ತಾರೆ. ಮತ್ತು ಪುತ್ರಾದಿಗಳು ಸತ್ತದ್ದೇ ಮುಂತಾದ ಕಾರಣದಿಂದ ಅಪ್ರಿಯವನ್ನು ಅನುಭವಿಸುವಂತೆ ಇರುತ್ತಾನೆ. ಮತ್ತು ತಾನೂ ಅಳುತ್ತಿರುವಂತಿರುತ್ತಾನೆ.

(ಆಕ್ಷೇಪ) :- ಅಪ್ರಿಯವನ್ನು ಅನುಭವಿಸಿಯೇತೀರುತ್ತಾನೆ, (ಹೀಗಿರುವಲ್ಲಿ) ಅರಿಯುವಂತಿರುತ್ತಾನೆ (ಎಂದು ವ್ಯಾಖ್ಯಾನಮಾಡಿದ್ದು) ಹೇಗೆ (ಸರಿ) ?

(ಪರಿಹಾರ) :- ಹೇಳುತ್ತೇವೆ. (ಇದು) ಸರಿಯಲ್ಲ ಏಕೆಂದರೆ (ಆತ್ಮನು) ಅಮೃತನು, ಅಭಯನು- ಎಂಬ ವಚನವು (ಆಗ) ಹೊಂದುವದಿಲ್ಲ.[2] "ಧ್ಯಾನ ಮಾಡುತ್ತಿರುವಂತಿರುತ್ತಾನೆ" (ಬೃ ೪-೩-೭) ಎಂದು ಬೇರೊಂದು ಶ್ರುತಿಯೂ ಇದೆ.

(ಆಕ್ಷೇಪ) - (ಇದು) ಪ್ರತ್ಯಕ್ಷವಿರುದ್ಧವಲ್ಲವೆ ?

(ಪರಿಹಾರ) :- ಶರೀರವನ್ನು ಆತ್ಮನೆಂದು (ತಿಳಿಯುವ ಪ್ರತ್ಯಕ್ಷ)ದಂತೆ (ಇದೂ) ಭ್ರಾಂತಿಯಾಗಿರಬಹುದಾಗಿದೆ.

ಅಪ್ರಿಯವನ್ನು ಅರಿಯುತ್ತಿರುವನೋ ಇಲ್ಲವೋ ಎಂಬುದು ಹಾಗಿರಲಿ. ಇಲ್ಲಿ ನನಗೆ ಭೋಗ್ಯವು ಕಾಣಿಸುತ್ತಿಲ್ಲ ಸ್ವಪ್ನಾತ್ಮಜ್ಞಾನದಲ್ಲಾದರೂ ಇಷ್ಟಫಲವು ಕಾಣಿಸುತ್ತಿಲ್ಲ ಎಂದು ಅಭಿಪ್ರಾಯ.

## ಮತ್ತೂ ಮೂವತ್ತೆರಡು ವರ್ಷಗಳ ಬ್ರಹ್ಮಚರ್ಯ

(ಉಪನಿಷತ್ತು)

**ಸ ಸಮಿತ್ಪಾಣಿಃ ಪುನರೇಯಾಯ ತಗ್ಂ ಹ ಪ್ರಜಾಪತಿರುವಾಚ ಮಘವನ್ ಯಚ್ಛಾನ್ತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ ಪುನರಾಗಮ ಇತಿ ಸ ಹೋವಾಚ ತದ್ಯದ್ಯಪೀದಂ ಭಗವಃ ಶರೀರಮನ್ಧಂ ಭವತ್ಯನನ್ಧಃ ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ ॥ ೩ ॥**

---

1. ದೃಶ್ಯತೇ ಎಂಬುದಕ್ಕೆ ನೋಡಲ್ಪಡುತ್ತಾನೆ ಎಂದು ಅರ್ಥಮಾಡಿದ್ದರೆ ಛಾಯಾತ್ಮನೆಂದಾಗುತ್ತಿತ್ತು.

2. ಅಭಯವಾದ ಆತ್ಮಸ್ವರೂಪದಲ್ಲಿ ಅಪ್ರಿಯಾನುಭವರೂಪವಾದ ಸಂಸಾರವು ಇರಲಾರದು ಎಂದು ಭಾವ 'ವೇತ್ತೃತ್ವವು ವಿಕಾರವಾದರೆ ಅಮೃತತ್ವವಿರಲಾರದು ; ಏಕೆಂದರೆ ಮೃದಾದಿಗಳಂತೆ ಅವನಿಗೆ ವಿನಾಶಿಯೆಂದಾಗುವದು. ಆದ್ದರಿಂದ ಇವಶಬ್ದವೇ ಯುಕ್ತ' ಎಂದು ಟೀಕೆ

**ನ ವಧೇನಾಽಸ್ಯ ಹನ್ಯತೇ ನಾಽಸ್ಯ ಸ್ರಾಮ್ಯೇಣ ಸ್ರಾಮೋ ಘ್ನನ್ತಿ ತ್ವೇವೈನಂ ವಿಚ್ಛಾದಯನ್ತೀವಾಽಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಹಮತ್ರ ಭೋಗ್ಯಂ ಪಶ್ಯಾಮೀತ್ಯೇವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನು ವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಗ್‌ಂಶತಂ ವರ್ಷಾಣೀತಿ ಸ ಹಾಪರಾಣಿ ದ್ವಾತ್ರಿಗ್‌ಂಶತಂ ವರ್ಷಾಣ್ಯುವಾಸ ತಸ್ಮೈ ಹೋವಾಚ ॥೪॥**

೩-೪. ಅವನು ಸಮಿತ್ಪಾಣಿಯಾಗಿ ಮತ್ತೂ ಬಂದನು. ಅವನನ್ನು ಕುರಿತು ಪ್ರಜಾಪತಿಯು 'ಮಘವಂತನೆ, ಶಾಂತಹೃದಯನಾಗಿ ಹೊರಟುಹೋಗಿದ್ದೆಯಲ್ಲ, ಏನನ್ನು ಇಚ್ಛಿಸಿ ಮತ್ತೆ ಬಂದಿದ್ದೀಯೆ?' ಎಂದನು. ಅವನು 'ಭಗವಂತನೆ, ಆ ಈ ಶರೀರವು ಕುರುಡಾಗಿದ್ದರೂ ಅವನು ಅನಂಧನಾಗಿರುತ್ತಾನೆ, ಸ್ರಾಮವಾಗಿದ್ದರೂ ಅಸ್ರಾಮನಾಗಿರುತ್ತಾನೆ; ಇವನು ಇದರ ದೋಷದಿಂದ ದೂಷಿತನಾಗಿರುವದೇ ಇಲ್ಲ. ಇದರ ವಧೆಯಿಂದ ಹತನಾಗುವದಿಲ್ಲ, ಇದರ ಸ್ರಾಮ್ಯದಿಂದ ಸ್ರಾಮನಾಗುವದಿಲ್ಲ.[1] ಆದರೆ ಇವನನ್ನು ಕೊಲ್ಲುವಂತಿರುತ್ತಾರೆ, ಬೆನ್ನಟ್ಟಿಕೊಂಡು ಬರುವಂತಿರುತ್ತಾರೆ, ಅಪ್ರಿಯವನ್ನನುಭವಿಸುವಂತೆ ಇರುತ್ತಾನೆ, ಅಳುವಂತೆಯೂ ಇರುತ್ತಾನೆ. ಇದರಲ್ಲಿ ನನಗೆ ಭೋಗ್ಯವು ಕಾಣಿಸುವದಿಲ್ಲ' ಎಂದನು. ಮಘವಂತನೆ, ಇವನು ಹಾಗೆಯೇ. ಆದರೆ ಈತನನ್ನೇ ನಿನಗೆ ಮತ್ತೆ ಹೇಳುವೆನು; ಮತ್ತೂ ಮೂವತ್ತೆರಡು ವರ್ಷಗಳು ವಾಸಮಾಡಿಕೊಂಡಿರು' ಎಂದನು. ಅವನು ಮತ್ತೂ ಮೂವತ್ತೆರಡು ವರ್ಷಗಳು ಇದ್ದುಕೊಂಡಿದ್ದನು. ಅವನಿಗೆ ಇಂತೆಂದು ಹೇಳಿದನು:

## ಮತ್ತೂ ಬ್ರಹ್ಮಚರ್ಯದಿಂದಿರು ಎಂದು ಕಟ್ಟುಮಾಡಿದ್ದು

**(ಭಾಷ್ಯ)**

೬೬೩. ಏವಮೇವೈಷಃ। ತವಾಭಿಪ್ರಾಯೇಣ ಇತಿ ವಾಕ್ಯಶೇಷಃ। ಆತ್ಮನೋಽಮೃತಾಭಯಗುಣವತ್ತ್ವಸ್ಯ ಅಭಿಪ್ರೇತತ್ವಾತ್। ದ್ವಿರುಕ್ತಮಪಿ ನ್ಯಾಯತೋ ಮಯಾ ಯಥಾವನ್ನಾವಧಾರಯತಿ। ತಸ್ಮಾತ್ ಪೂರ್ವವತ್ ಅಸ್ಯ ಅದ್ಯಾಪಿ

1. ಇದರಿಂದ ಎಚ್ಚರದ ಕಾರ್ಯಕರಣಸಂಘಾತಕ್ಕೆ ಇವನು ಕಟ್ಟುಬಿದ್ದಿಲ್ಲವೆಂದಾಯಿತು.

ಪ್ರತಿಬನ್ಧಕಾರಣಮಸ್ತೀತಿ ಮನ್ವಾನಃ, ತತ್ಕ್ಷಪಣಾಯ ಪುನಃಪರಾಣಿ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮ್ ಇತ್ಯಾದಿದೇಶ ಪ್ರಜಾಪತಿಃ । ತಥಾ ಉಷಿತವತೇ ಕ್ಷಪಿತಕಲ್ಮಷಾಯ ಆಹ ॥

(ಭಾಷ್ಯಾರ್ಥ)

ಇವನು ಹೀಗೆಯೇ (ಸರಿ), ನಿನ್ನ ಅಭಿಪ್ರಾಯದಂತೆ (ಹೀಗೆಯೇ) ಎಂದು ವಾಕ್ಯಶೇಷ. ಏಕೆಂದರೆ ಆತ್ಮನು ಅಮೃತ, ಅಭಯ- ಎಂಬ ಗುಣವುಳ್ಳವನೆಂದು (ಪ್ರಜಾಪತಿಯ) ಅಭಿಪ್ರಾಯವಿರುತ್ತದೆ[1] ನಾನು ಎರಡು ಸಲ ಯುಕ್ತಿಯಿಂದ ತಿಳಿಸಿದರೂ ಇದ್ದಂತೆ ಇವನು (ಗೊತ್ತುಪಡಿಸಿಕೊಳ್ಳಲಿಲ್ಲವಲ್ಲ), ಆದ್ದರಿಂದ ಹಿಂದಿನಂತೆ ಈಗಲೂ ಅಡ್ಡಿಯಾದ ಕಾರಣವು ಇದೆ ಎಂದು ಎಣಿಸಿದವನಾಗಿ ಅದನ್ನು ಹೋಗಲಾಡಿಸುವದಕ್ಕಾಗಿ ಮತ್ತೂ ಮೂವತ್ತೆರಡು ವರ್ಷಗಳು ಬ್ರಹ್ಮಚರ್ಯವನ್ನು (ಮಾಡಿಕೊಂ)ಡಿರು- ಎಂದು ಪ್ರಜಾಪತಿಯು ಅಪ್ಪಣೆಕೊಟ್ಟನು. ಹಾಗೆ ಇದ್ದುಕೊಂಡಿದ್ದು (ಚಿತ್ತ)ದೋಷವನ್ನು ಕಳೆದುಕೊಂಡ (ಇವ)ನಿಗೆ (ಅವನು) ಹೇಳಿದನೇನೆಂದರೆ

---

# ಎಂಟನೆಯ ಅಧ್ಯಾಯ-ಹನ್ನೊಂದನೆಯ ಖಂಡ

( ಅವಸ್ಥಾತ್ರಯನಿರೂಪಣ )

## ಸುಷುಪ್ತಾತ್ಮನ ಉಪದೇಶವೂ, ಇಂದ್ರನ ಅಸಂತೋಷವೂ

(ಉಪನಿಷತ್ತು)

**ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮೇತಿ ಹೋವಾಚೈತದಮೃತಮಭಯ ಮೇತದ್ ಬ್ರಹ್ಮೇತಿ ಸ ಹ ಶಾನ್ತಹೃದಯಃ ಪ್ರವವ್ರಾಜ ಸ ಹಾಽ ಪ್ರಾಪ್ಯೈವ ದೇವಾನೇತದ್ ಭಯಂ ದದರ್ಶ ನಾಹ ಖಲ್ವಯ ಮೇವಗ್ಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಽಹಮತ್ರ ಭೋಗ್ಯಂ ಪಶ್ಯಾಮೀತಿ ॥ ೧ ॥**

---

1. ಆತ್ಮನು ಅಮೃತನಾಗಿರುವನೆಂದು ಪ್ರಜಾಪತಿಯ ಅಭಿಪ್ರಾಯ ; ಅದು ಇಂದ್ರನಿಗೂ ಗೊತ್ತಿತ್ತು. ಆದರೆ ಸ್ವಪ್ನದಲ್ಲಿ ಹಾಗೆ ಕಾಣುವದಿಲ್ಲವಲ್ಲ ಎಂದು ಇಂದ್ರನ ಶಂಕೆ ಅದನ್ನು ಪರಿಹರಿಸಬೇಕಾಗಿದೆ. ಪ್ರಜಾಪತಿಯ ಅಭಿಪ್ರಾಯದಲ್ಲಿ ಎಚ್ಚರದಲ್ಲಿ ಹೇಗೋ ಹಾಗೆ ಸ್ವಪ್ನದಲ್ಲಿಯೂ ಸಾಕ್ಷಿಯಾದ ಆತ್ಮನು ಅಮೃತಾಭಯಸ್ವರೂಪನು.

೧. 'ಅಲ್ಲಿ ಯಾವಾಗ ಹೀಗೆ ಸುಪ್ತನಾಗಿ ಸಮಸ್ತನಾಗಿ ಸಂಪ್ರಸನ್ನನಾಗಿ ಸ್ವಪ್ನವನ್ನು ಅರಿಯದೆ ಇರುವನೋ (ಅ) ಇವನೇ ಆತ್ಮನು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು' ಎಂದನು. ಅವನು ಶಾಂತಹೃದಯನಾಗಿ ಹೊರಟುಹೋದನು. ಅವನು ದೇವತೆಗಳನ್ನು ಸೇರದೆಯೇ ಈ ಅಂಜಿಕೆಯನ್ನು ಕಂಡುಕೊಂಡನು. "ಇವನು ನಾನು ಇಂಥವನಾಗಿರುವೆನು ಎಂದಿಂತು ಈಗ ಅರಿತಿರುವದೇ ಇಲ್ಲ, ಈ ಭೂತಗಳನ್ನು ಅರಿತಿರುವದೇ ಇಲ್ಲ. ವಿನಾಶವನ್ನೇ ಹೊಂದಿರುತ್ತಾನೆ, ನನಗೆ ಇಲ್ಲಿ (ಯಾವ) ಭೋಗ್ಯವೂ ಕಾಣಿಸುವದಿಲ್ಲ."

(ಭಾಷ್ಯ)

೬೬ಳ. ಪೂರ್ವವತ್ 'ಏತಂ ತ್ವೇವ' ಇತ್ಯಾದಿ ಉಕ್ತ್ವಾ 'ತದ್ಯತ್ರೈತತ್ ಸುಪ್ತಃ' ಇತ್ಯಾದಿ ವ್ಯಾಖ್ಯಾತಂ ವಾಕ್ಯಮ್ । ಅಕ್ಷಿಣಿ ಯೋ ದ್ರಷ್ಟಾ ಸ್ವಪ್ನೇ ಚ ಮಹೀಯಮಾನಶ್ಚರತಿ ಸ ಏಷ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತಿ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮೇತಿ ಸ್ವಾಭಿಪ್ರೇತಮೇವ । ಮಘವಾಂಸ್ತತ್ರಾಪಿ ದೋಷಂ ದದರ್ಶ । ಕಥಮ್ ? ನಾಹ ನೈವ ಸುಷುಪ್ತಸ್ಥೋಽಪಿ ಆತ್ಮಾ ಖಲು ಅಯಂ ಸಂಪ್ರತಿ ಸಮ್ಯಗಿದಾನೀಂ ಚ ಆತ್ಮಾನಂ ಜಾನಾತಿ ನೈವಂ ಜಾನಾತಿ । ಕಥಮ್ ? ಅಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ಚ ಇತಿ । ಯಥಾ ಜಾಗ್ರತಿ ಸ್ವಪ್ನೇ ವಾ । ಅತೋ ವಿನಾಶಮೇವ ವಿನಾಶಮಿವೇತಿ ಪೂರ್ವವದ್ ದ್ರಷ್ಟವ್ಯಮ್ । ಅಪೀತೋಽಪಿಗತೋ ಭವತಿ । ವಿನಷ್ಟ ಇವ ಭವತೀತ್ಯಭಿಪ್ರಾಯಃ । ಜ್ಞಾನೇ ಹಿ ಸತಿ ಜ್ಞಾತುಃ ಸದ್ಭಾವೋಽವಗಮ್ಯತೇ ನಾಽಸತಿ ಜ್ಞಾನೇ । ನ ಚ ಸುಷುಪ್ತಸ್ಯ ಜ್ಞಾನಂ ದೃಶ್ಯತೇ । ಅತೋ ವಿನಷ್ಟ ಇವೇತ್ಯಭಿಪ್ರಾಯಃ । ನ ತು ವಿನಾಶಮೇವ ಆತ್ಮನೋ ಮನ್ಯತೇ । ಅಮೃತಾಭಯವಚನಸ್ಯ ಪ್ರಾಮಾಣ್ಯಮಿಚ್ಛನ್ ॥

(ಭಾಷ್ಯಾರ್ಥ)

ಮೊದಲಿನಂತೆಯೇ[1] 'ಇವನನ್ನೇ ನಿನಗೆ (ಮತ್ತೂ ಅನುವ್ಯಾಖ್ಯಾನಮಾಡುವೆನು)' ಎಂದು ಮುಂತಾಗಿ ಹೇಳಿ (ಪ್ರಜಾಪತಿಯು) 'ಅಲ್ಲಿ ಯಾವಾಗ ಹೀಗೆ ಸುಪ್ತನಾಗಿ' ಎಂದು ಮುಂತಾಗಿ ( ಹೇಳಿರುವ ) ವಾಕ್ಯವನ್ನು ( ಹಿಂದೆಯೇ ) ವ್ಯಾಖ್ಯಾನಮಾಡಲಾಗಿದೆ.[2]

---

1. ನಿನ್ನ ಅಭಿಪ್ರಾಯದಂತೆ ಈ ದೋಷವಿರುವದು ನಿಜ, ಆದರೆ ನಾನು ಹೇಳಿದ ಆತ್ಮನಲ್ಲಿ ದೋಷವಿಲ್ಲ. ಇದು ಹೇಗೆಂಬುದನ್ನು ನಾನು ಆಗಲೆ ಹೇಳಿರುತ್ತೇನಾದರೂ ನಿನಗೆ ಸ್ಪಷ್ಟವಾಗುವದಕ್ಕಾಗಿ ಮತ್ತೂ ಹೇಳುತ್ತಿದೇನೆ- ಎಂಬ ಅಭಿಪ್ರಾಯವನ್ನು ಮೊದಲಿನಂತೆಯೇ ಎಂಬ ಮಾತಿನಿಂದ ಸೂಚಿಸಿದೆ.

2. ೮-೬-೩ರಲ್ಲಿ ವಿವರಿಸಿದೆ.

ಕಣ್ಣಿನಲ್ಲಿ ಯಾವನು ದ್ರಷ್ಟೃವಾಗಿರುವನೋ, ಮತ್ತು ಸ್ವಪ್ನದಲ್ಲಿ (ಯಾವನು ಮಹಿತನಾಗಿ ಚರಿಸುತ್ತಿರುವನೋ, ಆ ಇವನೇ ಸುಪ್ತನಾಗಿ ಸಮಸ್ತನಾಗಿ ಸಂಪ್ರಸನ್ನನಾಗಿ ಸ್ವಪ್ನವನ್ನು ಅರಿಯದೆ ಇರುತ್ತಾನೆ. ಇವನೇ ಆತ್ಮನು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು- ಎಂದು ತನಗೆ ಅಭಿಪ್ರೇತನಾಗಿದ್ದ (ಆತ್ಮನನ್ನೇ) ಹೇಳಿದನು.[1] ಮಘವಂತನು ಅಲ್ಲಿಯೂ ದೋಷವನ್ನೇ ಕಂಡನು. ಹೇಗೆಂದರೆ ಸುಷುಪ್ತನಾಗಿರುವ ಈ ಆತ್ಮನುಕೂಡ ಈಗಲೂ ಚೆನ್ನಾಗಿ ಆತ್ಮನನ್ನು (ನಾಹ=ನ್ವೈವ) ಅರಿತಿರುವದೇ ಇಲ್ಲ, ಹೀಗೆ ತಿಳಿಯುವದಿಲ್ಲ. ಹೇಗೆ ? ಎಂದರೆ ಎಚ್ಚರದಲ್ಲಿ ಅಥವಾ ಸ್ವಪ್ನದಲ್ಲಿ ಹೇಗೆ ನಾನು ಇಂಥವನು ಎಂದಾಗಲಿ, ಈ ಭೂತಗಳನ್ನಾಗಲಿ ತಿಳಿದಿರುವವೇ ಇಲ್ಲ ಆದ್ದರಿಂದ (ವಿನಾಶವನ್ನೇ), ವಿನಾಶವನ್ನೇ- ಎಂದಿರುವದನ್ನು 'ವಿನಾಶಮಿವ' ವಿನಾಶವನ್ನು (ಅಪೀತಃ=ಅಪಿಗತಃ) ಹೊಂದಿದವನಂತೆಯೇ ಇರುತ್ತಾನೆ ಎಂದು ಹಿಂದಿನಂತೆಯೇ (ಅರ್ಥ)ಮಾಡಿಕೊಳ್ಳಬೇಕು.[2] ಜ್ಞಾನವಿದ್ದರಲ್ಲವೆ, ಜ್ಞಾತೃವು ಇರುತ್ತಾನೆಂದು ಗೊತ್ತಾಗುವದು ? ಜ್ಞಾನವಿಲ್ಲದಿದ್ದರೆ (ಗೊತ್ತಾಗು)ವದಿಲ್ಲ ಆದರೆ ಸುಷುಪ್ತನಿಗೆ ಜ್ಞಾನವು ಕಾಣಿಸುವದಿಲ್ಲ, ಆದ್ದರಿಂದ (ಅವನು) ವಿನಷ್ಟನಾದಂತೆಯೇ ಎಂದು (ಇಂದ್ರನ) ಅಭಿಪ್ರಾಯ. ಇಷ್ಟೇ ಹೊರತು ಅಮೃತಾಭಯವಾಕ್ಯವು ಪ್ರಮಾಣವೆಂದು ಹಿಡಿದ (ಇಂದ್ರನು) ಆತ್ಮನಿಗೆ ವಿನಾಶವೇ (ಆಯಿತೆಂದು) ತಿಳಿದಿರುವದಿಲ್ಲ

## ಇಂದ್ರನು ಮತ್ತೂ ಬ್ರಹ್ಮಚರ್ಯಕ್ಕೆ ನಿಂತದ್ದು

(ಉಪನಿಷತ್ತು)

**ಸ ಸಮಿತ್ಪಾಣಿಃ ಪುನರೇಯಾಯ ತಗ್‌ಂ ಹ ಪ್ರಜಾಪತಿರುವಾಚ ಮಘವನ್ ಯಚ್ಛಾನ್ತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ ಪುನರಾಗಮ ಇತಿ ಸ ಹೋವಾಚ ನಾಹ ಖಲ್ವಯಂ ಭಗವ ಏವಗ್‌ಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹ ಮತ್ರ ಭೋಗ್ಯಂ ಪಶ್ಯಾಮೀತಿ ॥ ೨ ॥**

---

1 ಇಂದ್ರನಿಗೆ ಅಭಿಮತನಾಗಿದ್ದ ವಿಶೇಷಾತ್ಮನನ್ನು ಹೇಳಲಿಲ್ಲ ; ಸಾಕ್ಷಿಯನ್ನೇ ಹೇಳಿದನು

2 ಏಕೆಂದರೆ ಅಮೃತನಾಗಿರುತ್ತಾನೆ ಎಂದು ಪ್ರಜಾಪತಿಯು ಹೇಳಿದ ಆತ್ಮನಿಗೆ ವಿನಾಶವು ಬರುವಂತಿಲ್ಲ. ಹೀಗೆ ಎಲ್ಲಾ ಪರ್ಯಾಯಗಳಲ್ಲಿಯೂ ಇಂದ್ರನು ತನಗೆ ತೋರಿದ ಅನುಭವದಂತೆ ಆತ್ಮನಲ್ಲಿ ದೋಷವನ್ನು ಹೇಳಿರುತ್ತಾನೆ, ಪ್ರಜಾಪತಿಯು ತನಗೆ ಸಂಮತನಾದ ಸಾಕ್ಷಿಯನ್ನೇ ಅಮೃತಾಭಯಸ್ವರೂಪನೆಂದು ಹೇಳಿರುತ್ತಾನೆ ಎಂದು ತಿಳಿಯಬೇಕು.

**ಏವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ನೋ ಏವಾನ್ಯತ್ರೈತಸ್ಮಾದ್ ವಸಾಪರಾಣಿ ಪಞ್ಚ ವರ್ಷಾಣೀತಿ ಸ ಹಾಪರಾಣಿ ಪಞ್ಚ ವರ್ಷಾಣ್ಯುವಾಸ ತಾನ್ಯೇಕಶತಗ್ಂ ಸಂಪೇದುರೇತತ್ತದ್ಯದಾಹುರೇಕಶತಗ್ಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ ತಸ್ಮೈ ಹೋವಾಚ ॥ ೩ ॥**

೨. ಅವನು ಸಮಿತ್ಪಾಣಿಯಾಗಿ ಮತ್ತೆ ಬಂದನು. ಅವನನ್ನು ಕುರಿತು ಪ್ರಜಾಪತಿಯಿಂತೆಂದನು : "ಮಘವಂತನೆ, ಶಾಂತಹೃದಯನಾಗಿ ಹೋಗಿದ್ದೆಯಲ್ಲ, ಏನನ್ನು ಇಚ್ಛಿಸಿ ಮತ್ತೆ ಬಂದಿದ್ದೀಯೆ?" ಎಂದನು. ಅವನು "ಭಗವಂತನೆ, ಇವನು ನಾನು ಇಂಥವನು ಎಂದಿಂತು ಈಗ ತನ್ನನ್ನು ಅರಿತಿರುವದೇ ಇಲ್ಲ, ಈ ಭೂತಗಳನ್ನು (ಅರಿತಿರು)ವದೇ ಇಲ್ಲ; ವಿನಾಶವನ್ನೇ ಹೊಂದಿದವನಂತೆ ಇರುತ್ತಾನೆ. ನನಗೆ ಇಲ್ಲಿ ಯಾವ ಭೋಗ್ಯವೂ ಕಾಣಿಸುವದಿಲ್ಲ" ಎಂದನು.

೩. "ಮಘವಂತನೆ, ಇವನು ಹೀಗೆಯೇ. ಆದರೆ ಈತನನ್ನೇ ನಿನಗೆ ಮತ್ತೂ ಅನುವ್ಯಾಖ್ಯಾನಮಾಡುವೆನು, ಇವನನ್ನು ಬಿಟ್ಟು ಬೇರೆಯವನನ್ನು ಹೇಳುವದೇ ಇಲ್ಲ. ಇನ್ನೂ ಐದು ವರ್ಷಗಳು ವಾಸಮಾಡಿಕೊಂಡಿರು." ಅವನು ಮತ್ತೂ ಐದು ವರ್ಷಗಳು ಇದ್ದುಕೊಂಡಿದ್ದನು. ಅವು ನೂರೊಂದಾದವು. ಇದನ್ನೇ "ನೂರೊಂದು ವರ್ಷಗಳವರೆಗೇ ಮಘವಂತನು ಪ್ರಜಾಪತಿಯ ಬಳಿಯಲ್ಲಿ ಬ್ರಹ್ಮಚರ್ಯವಾಸವನ್ನು ಮಾಡಿಕೊಂಡಿದ್ದನು' ಎನ್ನುತ್ತಿದಾರೆ. ಅವನಿಗೆ ಹೀಗೆಂದು ಹೇಳಿದನು :

## ಇನ್ನೂ ಐದು ವರ್ಷ ಬ್ರಹ್ಮಚರ್ಯದಿಂದಿರುವಂತೆ ಪ್ರಜಾಪತಿ ಹೇಳಿದ್ದು

(ಭಾಷ್ಯ)

**೨-೩** ಪೂರ್ವವತ್ ಏವಮೇವೇತ್ಯುಕ್ತ್ವಾ ಆಹ। ಯೋ ಮಯೋಕ್ತಸ್ತ್ರಿಭಿಃ ಪರ್ಯಾಯೈಃ, ತಮೇವೈತಂ ನೋ ಏವ ಅನ್ಯತ್ರ ಏತಸ್ಮಾತ್ ಆತ್ಮನೋಽನ್ಯಂ ಕಂಚನ, ಕಿಂ ತರ್ಹಿ ಏತಮೇವ ವ್ಯಾಖ್ಯಾಸ್ಯಾಮಿ। ಸ್ವಲ್ಪಸ್ತು ದೋಷಸ್ತವಾವಶಿಷ್ಟಃ। ತತ್ಕ್ಷಪಣಾಯ ವಸಾಪರಾಣಿ ಅನ್ಯಾನಿ ಪಞ್ಚ ವರ್ಷಾಣಿ। ಇತ್ಯುಕ್ತಃ

ಸ ತಥಾ ಚಕಾರ । ತಸ್ಮೈ ಮೃದಿತಕಷಾಯಾದಿದೋಷಾಯ ಸ್ಥಾನತ್ರಯದೋಷ ಸಂಬನ್ಧರಹಿತಮ್ ಆತ್ಮನಃ ಸ್ವರೂಪಮ್ ಅಪಹತಪಾಪ್ಮತ್ವಾದಿಲಕ್ಷಣಂ ಮಘವತೇ ತಸ್ಮೈ ಹೋವಾಚ । ತಾನ್ಯೇಕಶತಂ ಸಂಪೇದುಃ ಸಂಪನ್ನಾನಿ ಬಭೂವುಃ । ಯದಾಹುರ್ಲೋಕೇ ಶಿಷ್ಟಾ ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ ಇತಿ ತದೇತದ್ ದ್ವಾತ್ರಿಂಶತಮ್ ಇತ್ಯಾದಿನಾ ದರ್ಶಿತ ಮಿತಿ ಆಖ್ಯಾಯಿಕಾತೋಽಪಸೃತ್ಯ ಶ್ರುತ್ಯಾ ಉಚ್ಯತೇ। ಏವಂ ಕಿಲ ಏತದಿನ್ದ್ರ[1]ತ್ವಾದಪಿ ಗುರುತರಮ್, ಇನ್ದ್ರೇಣಾಪಿ ಮಹತಾ ಯತ್ನೇನ ಏಕೋತ್ತರವರ್ಷ ಶತಕೃತಾಯಾಸೇನ ಪ್ರಾಪ್ತಮಾತ್ಮಜ್ಞಾನಮ್ । ಅತೋ ನಾತಃಪರಂ ಪುರುಷಾ ರ್ಥಾನ್ತರಮಸ್ತಿ ಇತ್ಯಾತ್ಮಜ್ಞಾನಂ ಸ್ತೌತಿ ॥

(ಭಾಷ್ಯಾರ್ಥ)

ಮೊದಲಿನಂತೆ ಹೀಗೆಯೇ ಎಂದು ಹೇಳಿ (ಪ್ರಜಾಪತಿಯು) ಇಂತೆಂದನು : 'ಮೂರು ಪರ್ಯಾಯಗಳಿಂದ ನಾನು ಹೇಳಿದೆನಲ್ಲ, ಆ ಇವನನ್ನೇ- ಈ ಆತ್ಮ ನಿಗಿಂತ ಬೇರೆಯಲ್ಲ, ಬೇರೆ ಯಾವನನ್ನೂ ಅಲ್ಲ, ಮತ್ತೇನೆಂದರೆ ಇವನನ್ನೇ ವಿವರಿಸಿ ಹೇಳುವೆನು. ಆದರೆ ನಿನಗೆ ಸ್ವಲ್ಪ ದೋಷವು (ಇನ್ನೂ) ಉಳಿದುಕೊಂಡಿದೆ. ಅದನ್ನು ತೊಲಗಿಸುವದಕ್ಕೆ ಇನ್ನೂ ಮತ್ತೂ ಐದು ವರ್ಷಗಳವರೆಗೆ ವಾಸಮಾಡಿ ಕೊಂಡಿರು ' ಹೀಗೆನ್ನಲು ಅವನು ಹಾಗೇ ಮಾಡಿದನು.

ಕಷಾಯವೇ ಮುಂತಾದ ದೋಷಗಳನ್ನು ತೊಲಗಿಸಿಕೊಂಡಿದ್ದ ಆತನಿಗೆ ಅವಸ್ಥಾತ್ರಯದ ದೋಷದ ಸಂಬಂಧವಿಲ್ಲದ ಆತ್ಮನ ಸ್ವರೂಪವನ್ನು, ಅಪಹತ ಪಾಪ್ಮತ್ವವೇ ಮುಂತಾದದ್ದನ್ನು, ಆ ಮಘವಂತನಿಗೆ ಹೇಳಿದನು.

ಇವು ನೂರೊಂದು ವರ್ಷಗಳಾದವು, (ನೂರೊಂದನ್ನು) ಸೇರಿದವಾದವು. ಲೋಕದಲ್ಲಿ ಶಿಷ್ಟರು 'ನೂರೊಂದು ವರ್ಷಗಳವರೆಗೆ ಮಘವಂತನು ಪ್ರಜಾಪತಿಯ ಬಳಿಯಲ್ಲಿ ಬ್ರಹ್ಮಚರ್ಯವಾಸವನ್ನು ಮಾಡಿಕೊಂಡಿದ್ದನು' ಎನ್ನುವರಲ್ಲ, ಆ ಇದನ್ನೇ 'ಮೂವತ್ತೆರಡು (ವರ್ಷಗಳ)ವರೆಗೆ' (೮-೯-೩) ಮುಂತಾದ (ಗ್ರಂಥ ದಿಂದ) ತಿಳಿಸಲಾಗಿದೆ ಎಂದು ಆಖ್ಯಾಯಿಕಾ(ರೂಪ)ದಿಂದ ಇತ್ತಬಂದು ಶ್ರುತಿಯು (ತನ್ನ ರೂಪ)ದಿಂದ ಹೇಳುತ್ತಿದೆ : **ಹೀಗೆ ಆ ಜ್ಞಾನವು ಇಂದ್ರತ್ವಕ್ಕಿಂತಲೂ ಹೆಚ್ಚಿನದು, ಇಂದ್ರನುಕೂಡ ಮಹಾಪ್ರಯತ್ನದಿಂದ ನೂರೊಂದು ವರ್ಷಗಳವರೆಗೆ ಆಯಾಸಪಟ್ಟು ಆತ್ಮಜ್ಞಾನವನ್ನು ಸಂಪಾದಿಸಿ ಕೊಂಡನು; ಆದ್ದರಿಂದ ಇದಕ್ಕಿಂತಲೂ ಹೆಚ್ಚಿನ ಪುರುಷಾರ್ಥವು ಮತ್ತೊಂದಿಲ್ಲ ಎಂದು ಆತ್ಮಜ್ಞಾನವನ್ನು (ಶ್ರುತಿಯು) ಹೊಗಳಿರುತ್ತದೆ.**

---

1. 'ಏತತ್' ಎಂಬುದಕ್ಕೆ ತತ್ ಎಂದು ನಾ॥

# ಎಂಟನೆಯ ಅಧ್ಯಾಯ-ಹನ್ನೆರಡನೆಯ ಖಂಡ

(ಅವಸ್ಥಾತ್ರಯಾತೀತಾತ್ಮನ ಸ್ವರೂಪ)

## ಅಶರೀರಾತ್ಮನ ಹೆಚ್ಚುಗಾರಿಕೆ

(ಉಪನಿಷತ್ತು)

**ಮಘವನ್ ಮರ್ತ್ಯಂ ವಾ ಇದಗ್ಂ ಶರೀರಮಾತ್ತಂ ಮೃತ್ಯುನಾ ತದಸ್ಯಾಮೃತಸ್ಯಾಶರೀರಸ್ಯಾಽತ್ಮನೋಽಧಿಷ್ಠಾನಮಾತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ ನ ವೈ ಸಶರೀರಸ್ಯ ಸತಃ ಪ್ರಿಯಾ ಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸನ್ತಂ ನ ಪ್ರಿಯಾ ಪ್ರಿಯೇ ಸ್ಪೃಶತಃ ॥ ೧ ॥**

೧. ಮಘವಂತನೆ, ಈ ಶರೀರವು ಮರ್ತ್ಯವು, ಮೃತ್ಯುವಿನಿಂದ ಆತ್ತವಾಗಿರುತ್ತದೆ. ಇದು ಈ ಅಮೃತನಾದ ಅಶರೀರನಾದ ಆತ್ಮನಿಗೆ ಅಧಿಷ್ಠಾನವು. ಸಶರೀರನು ಪ್ರಿಯಾಪ್ರಿಯಗಳಿಂದ ಆತ್ತನಾಗಿರುತ್ತಾನಷ್ಟೆ? ಸಶರೀರನಾದವನಿಗೆ ಪ್ರಿಯಾಪ್ರಿಯಗಳ ಅಪಹತಿಯು ಇಲ್ಲವಷ್ಟೆ? ಅಶರೀರನೇ ಆಗಿರುವವನನ್ನು ಪ್ರಿಯಾಪ್ರಿಯಗಳು ಸೋಂಕಲಾರದು.

### ಮರ್ತ್ಯವಾದ ಶರೀರವು ಆತ್ಮನಿಗೆ ಅಧಿಷ್ಠಾನವು

(ಭಾಷ್ಯ)

೬೬೬. ಮಘವನ್ ಮರ್ತ್ಯಂ ವೈ ಮರಣಧರ್ಮಿ ಇದಂ ಶರೀರಮ್ । ಯನ್ಮನ್ಯಸೇ ಅಕ್ಷ್ಯಾಧಾರಾದಿಲಕ್ಷಣಃ, ಸಂಪ್ರಸಾದಲಕ್ಷಣ ಆತ್ಮಾ ಮಯೋಕ್ತೋ ವಿನಾಶಮೇವಾಪೀತೋ ಭವತೀತಿ । ಶೃಣು ತತ್ರ ಕಾರಣಮ್ । ಯದಿದಂ ಶರೀರಂ ವೈ ಯತ್ ಪಶ್ಯಸಿ ತದೇತನ್ಮರ್ತ್ಯಂ ವಿನಾಶಿ । ತಚ್ಚ ಆತ್ತಂ ಮೃತ್ಯುನಾ ಗ್ರಸ್ತಂ ಸತತಮೇವ । ಕದಾಚಿದೇವ ಮ್ರಿಯತ ಇತಿ ಮರ್ತ್ಯಮ್ ಇತ್ಯುಕ್ತೇ ನ ತಥಾ ಸಂತ್ರಾಸೋ ಭವತಿ ಯಥಾ ಗ್ರಸ್ತಮೇವ ಸದಾ ವ್ಯಾಪ್ತಮೇವ ಮೃತ್ಯುನಾ ಇತ್ಯುಕ್ತ ಇತಿ ವೈರಾಗ್ಯಾರ್ಥಂ ವಿಶೇಷ ಉಚ್ಯತೇ[1] । 'ಆತ್ತಂ ಮೃತ್ಯುನಾ' ಇತಿ । ಕಥಂ ನಾಮ ದೇಹಾಭಿಮಾನತೋ ವಿರಕ್ತಃ ಸನ್ನಿವರ್ತೇತ[2] ಇತಿ । ಶರೀರಮ್ ಇತಿ ಅತ್ರ ಸಹೇನ್ದ್ರಿಯಮನೋಭಿರುಚ್ಯತೇ । ತಚ್ಛರೀರಮ್ ಅಸ್ಯ ಸಂಪ್ರಸಾದಸ್ಯ

1. 'ವಿಶೇಷ ಇತ್ಯುಚ್ಯತೇ' ಎಂಬ ಪಾಠಕ್ಕಿಂತ ಈ ಪಾ॥ ಪಾಠವೇ ಮೇಲು.
2. ನಿವರ್ತತೇ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

ತ್ರಿಸ್ಥಾನತಯಾ ಗಮ್ಯಮಾನಸ್ಯ ಅಮೃತಸ್ಯ ಮರಣಾದಿದೇಹೇನ್ದ್ರಿಯಮನೋಧರ್ಮವರ್ಜಿತಸ್ಯ ಇತ್ಯೇತತ್ । 'ಅಮೃತಸ್ಯ ಇತ್ಯನೇನೈವ ಅಶರೀರತ್ವೇ ಸಿದ್ಧೇ ಪುನರಶರೀರಸ್ಯೇತಿ ವಚನಂ ವಾಯ್ವಾದಿವತ್ ಸಾವಯವತ್ವಮೂರ್ತಿಮತ್ತ್ವೇ ಮಾ ಭೂತಾಮಿತ್ಯಾತ್ಮನಃ[1] । ಆತ್ಮನೋ ಭೋಗಾಧಿಷ್ಠಾನಮ್ । ಆತ್ಮನೋ ವಾ ಸತ ಈಕ್ಷಿತುಃ ತೇಜೋಽಬನ್ನಾದಿಕ್ರಮೇಣ ಉತ್ಪನ್ನಮ್ ಅಧಿಷ್ಠಾನಮ್ । ಜೀವ ರೂಪೇಣ ಪ್ರವಿಶ್ಯ ಸದೇವ ಅಧಿತಿಷ್ಠತ್ಯಸ್ಮಿನ್ನಿತಿ ವಾ ಅಧಿಷ್ಠಾನಮ್ ॥

(ಭಾಷ್ಯಾರ್ಥ)

ಮಘವಂತನೆ, ಈ ಶರೀರವು ಮರ್ತ್ಯವೇ, ಮರಣಧರ್ಮಿಯೇ ಅಷ್ಟೆ. ಕಣ್ಣೆಂಬ ಆಧಾರವುಳ್ಳವನೂ ಸಂಪ್ರಸಾದಸ್ವರೂಪನೂ ಆದ ಆತ್ಮನನ್ನು ನಾನು ಹೇಳಿದೆನೆಂದು (ಅವನು) ವಿನಾಶವನ್ನೇ ಹೊಂದಿರುತ್ತಾನೆಂದೂ ತಿಳಿದುಕೊಂಡಿದ್ದೀಯಲ್ಲ, ಅದಕ್ಕೆ ಕಾರಣವನ್ನು (ಹೇಳುವೆನು) ಕೇಳು. ಈ ಶರೀರವನ್ನು ಕಾಣುತ್ತಿರುವೆಯಲ್ಲ. ಆ ಇದು ಮರ್ತ್ಯವು, ವಿನಾಶಿಯು. ಮತ್ತು ಇದು ಮೃತ್ಯುವಿನಿಂದ ಆತ್ತವು, ಯಾವಾಗಲೂ ಗ್ರಸ್ತವೇ ಆಗಿದೆ. ಯಾವಾಗಲೋ ಒಮ್ಮೆಯೇ ಸಾಯುತ್ತದೆಯಾದ್ದರಿಂದ ಮರ್ತ್ಯವು ಎಂದು ಹೇಳಿದರೆ, ಯಾವಾಗಲೂ ಮೃತ್ಯುವಿನಿಂದ ಗ್ರಸ್ತವೇ ಆಗಿದೆ, ವ್ಯಾಪ್ತವೇ ಆಗಿದೆಯೆಂದು ಹೇಳಿದರೆ ಆಗುವಷ್ಟು ಅಂಜಿಕೆಯಾಗುವದಿಲ್ಲ ಆದ್ದರಿಂದ 'ಮೃತ್ಯುವಿನಿಂದ ಆತ್ತವಾಗಿರುತ್ತದೆ' ಎಂದು ವೈರಾಗ್ಯಕ್ಕಾಗಿ ವಿಶೇಷವನ್ನು ಹೇಳಿರುತ್ತದೆ. ಹೇಗಾದರೂ ವಿರಕ್ತನಾಗಿ ದೇಹಾಭಿಮಾನದಿಂದ ಹಿಂತಿರುಗಲಿ ಎಂದು (ಹೀಗೆ ಹೇಳಿದೆ). 'ಶರೀರವು' ಎಂದು ಇಲ್ಲಿ ಇಂದ್ರಿಯ ಮನಸ್ಸುಗಳೊಡನೆಯೇ (ಶರೀರವನ್ನು) ಹೇಳಿದೆ. ಆ ಶರೀರವು ಈ ಮೂರು ಅವಸ್ಥೆಗಳುಳ್ಳವನೆಂದು ತಿಳಿಯಬರುವ ಸಂಪ್ರಸಾದನಿಗೆ ಅಮೃತನಾದ ಎಂದರೆ ಸಾವೇ ಮುಂತಾದ ದೇಹೇಂದ್ರಿಯಮನೋಧರ್ಮಗಳಿಲ್ಲದ ಎಂದರ್ಥ, ಅಮೃತನಾದ ಎಂಬುದರಿಂದಲೇ ಅಶರೀರನೆಂದು ಸಿದ್ಧವಾದರೂ ಮತ್ತೆ 'ಅಶರೀರನಾದ' ಎಂದು ಹೇಳಿರುವದು ವಾಯ್ವಾದಿಗಳಂತೆ[2] ಸಾವಯವತ್ವಮೂರ್ತಿಮತ್ತ್ವಗಳೂ (ಇವನಿಗೆ) ಆಗಬಾರದೆನ್ನುವದಕ್ಕಾಗಿ. (ಇಂಥ ಅಮೃತನಾದ ಅಶರೀರನಾದ)-ಆತ್ಮನಿಗೆ **ಭೋಗಾಧಿಷ್ಠಾನವು**.[3] ಅಥವಾ ಆತ್ಮನಾದ ಸತ್ತೆಂಬ ಈಕ್ಷಿತೃ

1. ಈ ಮಾತು ಇಲ್ಲದಿದ್ದರೂ ಆಗುತ್ತದೆ. ವಾ॥ ಪಾಠದಲ್ಲಿಲ್ಲವೂ ಇಲ್ಲ.

2. ಮುಂದೆ ೮-೧೨-೨ರಲ್ಲಿ ಇವುಗಳನ್ನು ಹೇಳಿದೆ, ಅವುಗಳೆಲ್ಲ ಮೂರ್ತಗಳು.

3. ಜೀವನು ಭೋಗಗಳನ್ನು ಅನುಭವಿಸುವದಕ್ಕೆ ಅಧಿಷ್ಠಾನವು ಎಂದರೆ 'ಆಶ್ರಯ'ವಾಗಿರುವದರಿಂದ ಶರೀರಕ್ಕೆ ಅಧಿಷ್ಠಾನವೆಂದು ಹೆಸರು. ಶರೀರಾಭಿಮಾನದಿಂದಲೇ ಭೋಗವು ಸಾಧ್ಯ.

ವಿನಿಂದ ತೇಜೋಬನ್ನಾದಿಕ್ರಮದಿಂದ ಉಂಟಾಗಿರುವ **ಅಧಿಷ್ಠಾನವು.**[1] ಅಥವಾ ಜೀವರೂಪದಿಂದ ಒಳಹೊಕ್ಕು ಸತ್ತೇ ಇದರಲ್ಲಿ ಇದ್ದುಕೊಂಡಿದೆಯಾದ್ದರಿಂದ (ಆತ್ಮನ) **ಅಧಿಷ್ಠಾನವು** (ಎಂದಾದರೂ ಅರ್ಥವನ್ನು ಮಾಡಬಹುದು).[2]

## ಸಶರೀರನಿಗೆ ಪ್ರಿಯಾಪ್ರಿಯಗಳು ತಪ್ಪವು

(ಭಾಷ್ಯ)

೬೬೭. ಯಸ್ಯೇದಮೀದೃಶಂ ನಿತ್ಯಮೇವ ಮೃತ್ಯುಗ್ರಸ್ತಂ ಧರ್ಮಾಧರ್ಮ ಜನಿತತ್ವಾತ್ ಪ್ರಿಯಾಪ್ರಿಯವತ್ ಅಧಿಷ್ಠಾನಮ್, ತದಧಿಷ್ಠಿತಸ್ತದ್ವಾನ್ ಸಶರೀರೋ ಭವತಿ । ಅಶರೀರಸ್ವಭಾವಸ್ಯ ಆತ್ಮನಃ ತದೇವಾಹಂ ಶರೀರಂ ಶರೀರ ಮೇವ ಚಾಹಮ್ ಇತ್ಯವಿವೇಕಾತ್ಮಭಾವಃ ಸಶರೀರತ್ವಮ್ । ಅತ ಏವ ಸಶರೀರಃ ಸನ್ ಆತ್ತೋ ಗ್ರಸ್ತಃ ಪ್ರಿಯಾಪ್ರಿಯಾಭ್ಯಾಮ್ । ಪ್ರಸಿದ್ಧಮೇತತ್ । ತಸ್ಯ ಚ ನ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರ್ಬಾಹ್ಯವಿಷಯಸಂಯೋಗ ವಿಯೋಗನಿಮಿತ್ತಯೋರ್ಬಾಹ್ಯವಿಷಯಸಂಯೋಗವಿಯೋಗೌ ಮಮ ಇತಿ ಮನ್ಯಮಾನಸ್ಯ ಅಪಹತಿರ್ವಿನಾಶ ಉಚ್ಛೇದಃ ಸಂತತಿರೂಪಯೋರ್ನಾಸ್ತೀತಿ ॥[3]

(ಭಾಷ್ಯಾರ್ಥ)

ಯಾವನಿಗೆ ಈ ಇಂಥ ನಿತ್ಯವೂ ಮೃತ್ಯುಗ್ರಸ್ತವಾದ, ಧರ್ಮಾಧರ್ಮಗಳಿಂದ ಉಂಟಾಗಿರುವದರಿಂದ[4] ಪ್ರಿಯಾಪ್ರಿಯಗಳುಳ್ಳ ಅಧಿಷ್ಠಾನವಿರುವದೋ, ಅದರ ಲ್ಲಿದ್ದುಕೊಂಡಿರುವದರಿಂದ ಅದನ್ನುಳ್ಳವನಾಗಿ ಸಶರೀರನಾಗಿರುತ್ತಾನೆ. **ಆತ್ಮನು ಅಶರೀರಸ್ವಭಾವನೇ ಆಗಿದ್ದರೂ ಆ ಶರೀರವೇ ನಾನು, ನಾನು ಶರೀರವೇ ಎಂದು ಅವಿವೇಕದಿಂದ ಆಗಿರುವ ತಾದಾತ್ಮ್ಯಭಾವವೇ ಸಶರೀರತ್ವವು.**[5] ಆದ್ದರಿಂದಲೇ ಸಶರೀರನಾಗಿ ಪ್ರಿಯಾಪ್ರಿಯಗಳಿಂದ ಆತ್ತ (ನಾಗಿರುತ್ತಾನೆ), ಗ್ರಸ್ತನಾಗಿರುತ್ತಾನೆ, ಇದು ಪ್ರಸಿದ್ಧವಾಗಿರುತ್ತದೆ.[6] ಹೀಗೆ

---

1. ಈಕ್ಷಿತೃವಿನಿಂದ ಮೇಲಕ್ಕೆ ಎದ್ದುಬಂದಿದೆ, 'ಅಧಿತಿಷ್ಠತ್ಯಸ್ಮಾತ್' ಎಂಬರ್ಥದಲ್ಲಿ ಅಧಿಷ್ಠಾನವು, ಅದರ ಕಾರ್ಯವು ಎಂದರ್ಥ, ಆಗ ಸದಾತ್ಮನಿಗಿಂತ ಇದು ಬೇರೆಯಾಗಿಲ್ಲ ವೆಂಬ ಅಭಿಪ್ರಾಯವು ಹೊರಡುತ್ತದೆ.

2. ಸತ್ತೇ ಜೀವರೂಪದಿಂದ ಒಳಹೊಕ್ಕು ಇಲ್ಲಿ ವಾಸಮಾಡುತ್ತಿದೆ ಎಂದದ್ದರಿಂದ ಜೀವನು ಈಗಲೂ ಸದ್ರೂಪದಿಂದಲೇ ಇರುತ್ತಿದಾನೆ ಎಂಬ ವಿಶೇಷಾರ್ಥವು ಹೊರಡುತ್ತದೆ.

3. ಇಲ್ಲಿರುವ ಇತಿಯು ಇಲ್ಲದಿದ್ದರೂ ಸಾಗುತ್ತದೆ.

4. ಧರ್ಮದಿಂದ ಪ್ರಿಯವೂ ಅಧರ್ಮದಿಂದ ಅಪ್ರಿಯವೂ ಗಂಟುಬೀಳುತ್ತದೆ.

5. ಶರೀರಾತ್ಮರ ಅನ್ಯೋನ್ಯಾಧ್ಯಾಸವೇ ಸಶರೀರತ್ವವೇ ಹೊರತು ನಿಜವಾಗಿ ಆತ್ಮನಿಗೆ ಶರೀರದ ಸಂಬಂಧವಿಲ್ಲ. ಸೂ. ಭಾ. ಅಧ್ಯಾಸಭಾಷ್ಯ (ಭಾ. ಭಾ. ೮)ನ್ನು ನೋಡಿ.

6. ಶರೀರವಿದ್ದು ಧರ್ಮಾಧರ್ಮಗಳನ್ನು ಮಾಡದಿರುವವರು ಯಾರೂ ಇಲ್ಲ, ಪ್ರಿಯಾಪ್ರಿಯಗಳು ಬಂದೊದಗದವರು ಯಾರೂ ಇಲ್ಲ

ಸಶರೀರನಾಗಿರುವವನಿಗೆ ಹೊರಗಿನ ವಿಷಯಸಂಯೋಗವಿಯೋಗಗಳ ನಿಮಿತ್ತ ದಿಂದಾಗುವ- ಹೊರಗಿನ ವಿಷಯಗಳ ಸಂಯೋಗವಿಯೋಗಗಳು ನನಗೇ ಎಂದು ಭಾವಿಸಿಕೊಂಡಿರುವ (ಸಶರೀರನಿಗೆ) ಪ್ರಿಯಾಪ್ರಿಯಗಳ ಅಪಹತಿಯು, ವಿನಾಶವು, ಸಂತತವಾಗಿರುವ ಅವುಗಳ ಕಡಿದುಹೋಗುವಿಕೆಯು[1] ಇಲ್ಲ.

## ಅಶರೀರನಾದವನಿಗೆ ಪ್ರಿಯಾಪ್ರಿಯಗಳು ಸೋಂಕವು

(ಭಾಷ್ಯ)

೬೬೮. ತಂ ಪುನರ್ದೇಹಾಭಿಮಾನಾದ್[2] ಅಶರೀರಸ್ವರೂಪವಿಜ್ಞಾನೇನ ನಿವರ್ತಿತಾವಿವೇಕಜ್ಞಾನಮ್ ಅಶರೀರಂ ವಾವ[3] ಸನ್ತಂ ಪ್ರಿಯಾಪ್ರಿಯೇ ನ ಸ್ಪೃಶತಃ । ಸ್ಪೃಶಿಃ ಪ್ರತ್ಯೇಕಂ ಸಂಬಧ್ಯತ ಇತಿ ಪ್ರಿಯಂ ನ ಸ್ಪೃಶತಿ ಅಪ್ರಿಯಂ ನ ಸ್ಪೃಶತೀತಿ ವಾಕ್ಯದ್ವಯಂ ಭವತಿ । "ನ ಮ್ಲೇಚ್ಛಾಶುಚ್ಯಧಾರ್ಮಿಕೈಃ ಸಹ ಸಂಭಾಷೇತ" (ಗೌ ಧ. ೧-೯-೧೭) ಇತಿ ಯದ್ವತ್ । ಧರ್ಮಾಧರ್ಮಕಾರ್ಯೇ ಹಿ ತೇ । ಅಶರೀರತಾ ತು ಸ್ವರೂಪಮಿತಿ ತತ್ರ ಧರ್ಮಾಧರ್ಮಯೋರಸಂಭವಾತ್ ತತ್ಕಾರ್ಯಾಭಾವೋ ದೂರತ ಏವ ಇತ್ಯತೋ ನ ಪ್ರಿಯಾಪ್ರಿಯೇ ಸ್ಪೃಶತಃ । ನನು ಯದಿ ಪ್ರಿಯಮಪಿ ಅಶರೀರಂ ನ ಸ್ಪೃಶತೀತಿ[4] ಯನ್ಮಘವತಾ ಉಕ್ತಂ ಸುಷುಪ್ತಸ್ಥೋ ವಿನಾಶಮೇವ ಅಪೀತೋ ಭವತೀತಿ ತದೇವೇಹಾಪ್ಯಾಪನ್ನಮ್ । ನೈಷ ದೋಷಃ । ಧರ್ಮಾಧರ್ಮಕಾರ್ಯಯೋಃ ಶರೀರಸಂಬನ್ಧಿನೋಃ ಪ್ರಿಯಾಪ್ರಿಯಯೋಃ ಪ್ರತಿಷೇಧಸ್ಯ ವಿವಕ್ಷಿತತ್ವಾತ್ । ಅಶರೀರಂ ನ ಪ್ರಿಯಾಪ್ರಿಯೇ ಸ್ಪೃಶತ ಇತಿ । ಆಗಮಾಪಾಯಿನೋರ್ಹಿ ಸ್ಪರ್ಶಶಬ್ದೋ ದೃಷ್ಟಃ । ಯಥಾ ಶೀತಸ್ಪರ್ಶಃ, ಉಷ್ಣಸ್ಪರ್ಶಃ ಇತಿ । ನ ತ್ವಗ್ನೇರುಷ್ಣಪ್ರಕಾಶಯೋಃ ಸ್ವಭಾವಭೂತಯೋರಗ್ನಿನಾ ಸ್ಪರ್ಶ ಇತಿ ಭವತಿ । ತಥಾ ಅಗ್ನೇಃ ಸವಿತುರ್ವಾ ಉಷ್ಣಪ್ರಕಾಶವತ್ ಸ್ವರೂಪಭೂತಸ್ಯ ಆನನ್ದಸ್ಯ ಪ್ರಿಯಸ್ಯಾಪಿ ನೇಹ ಪ್ರತಿಷೇಧಃ । "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨೮-೭), "ಆನನ್ದೋ ಬ್ರಹ್ಮ" (ತೈ. ೩-೬) ಇತ್ಯಾದಿಶ್ರುತಿಭ್ಯಃ । ಇಹಾಪಿ 'ಭೂಮೈವ ಸುಖಮ್' (೭-೨೩-೧) ಇತ್ಯುಕ್ತತ್ವಾತ್ ॥[5]

---

1. ಪ್ರಿಯಾಪ್ರಿಯಗಳು ಸಂತತವಾಗಿ ಬರುತ್ತಿರೇ ಇರುವವು. ಆಗಾಗಿನ ಪ್ರಿಯಾಪ್ರಿಯಗಳು ಹೋದರೂ ಸಂತತಿಯು ನಾಶವಾಗುವದಿಲ್ಲ ಎಂದರ್ಥ

2. ಇಲ್ಲಿ 'ನಿರ್ಮುಕ್ತಂ', 'ನಿವೃತ್ತಂ'- ಇಂಥ ಯಾವದಾದರೊಂದು ಶಬ್ದವು ಬೇಕಾಗಿದೆ.

3. ಈ ಮಾತು ಭಾಷ್ಯದಲ್ಲಿದ್ದು ಬಿಟ್ಟುಹೋಗಿರಬಹುದು.

4 ಈ ಇತಿಯು ಇಲ್ಲದಿದ್ದರೂ ಆಗುತ್ತಿತ್ತು.

5. ಇದು ಶ್ರುತಿಯ ಅರ್ಥಮಾತ್ರ.

(ಭಾಷ್ಯಾರ್ಥ)

ಆದರೆ ದೇಹಾಭಿಮಾನದಿಂದ (ಬಿಡುಗಡೆಯಾಗಿ) ಅಶರೀರವಾದ (ತನ್ನ) ಸ್ವರೂಪದ ವಿಜ್ಞಾನದಿಂದ ಅವಿವೇಕಜ್ಞಾನವನ್ನು ತೊಲಗಿಸಿಕೊಂಡು ಅಶರೀರನಾಗಿರುತ್ತಾನಲ್ಲ,[1] ಅವನನ್ನು ಪ್ರಿಯಾಪ್ರಿಯಗಳು ಸೋಂಕಲಾರವು ಇಲ್ಲಿ 'ಸೋಂಕು' ಎಂಬುದು ಒಂದೊಂದಕ್ಕೂ ಸಂಬಂಧಿಸಿರುತ್ತದೆ, ಪ್ರಿಯವು ಸೋಂಕಲಾರದು, ಅಪ್ರಿಯವು ಸೋಂಕಲಾರದು-ಎರಡು (ಬೇರೆಬೇರೆಯ) ವಾಕ್ಯವಾಗಿದೆ. "ಮ್ಲೇಚ್ಛಾಶುಚ್ಯಧಾರ್ಮಿಕರೊಡನೆ ಸಂಭಾಷಣಮಾಡಬಾರದು" (ಗೌ. ಧ. ೧-೯-೧೭) ಎಂಬಲ್ಲಿ ಹೇಗೋ (ಹಾಗೆಯೇ ಇಲ್ಲಿಯೂ ತಿಳಿಯಬೇಕು)[2] ಆ (ಪ್ರಿಯಾಪ್ರಿಯಗಳು) ಧರ್ಮಾಧರ್ಮದ ಕಾರ್ಯಗಳಷ್ಟೆ? ಅಶರೀರತ್ವವಾದರೆ ಸ್ವರೂಪವೇ ಆಗಿರುವದರಿಂದ ಅದರಲ್ಲಿ ಧರ್ಮಾಧರ್ಮಗಳು ಸಂಭವಿಸುವದಿಲ್ಲ.[3] ಅವುಗಳ ಕಾರ್ಯವು (ಅವು) ಎಂಬುದು ದೂರದಲ್ಲಿಯೇ (ಉಳಿಯಿತು) ಆದ್ದರಿಂದ (ಅಶರೀರನನ್ನು) ಪ್ರಿಯಾಪ್ರಿಯಗಳು ಸೋಂಕಲಾರವು

(ಆಕ್ಷೇಪ).– ಅಶರೀರನಾದವನನ್ನು ಪ್ರಿಯವೂ ಸೋಂಕುವದಿಲ್ಲವೆನ್ನುವದಾದರೆ 'ಸುಷುಪ್ತಿಯಲ್ಲಿರುವವನು ವಿನಾಶವನ್ನೇ ಹೊಂದಿದವನಾಗಿರುತ್ತಾನೆ' ಎಂದು ಮಘವಂತನು ಹೇಳಿದ್ದನಲ್ಲ, ಅದೇ ಇಲ್ಲಿಯೂ ಬಂದೊದಗಿತಲ್ಲ!

(ಪರಿಹಾರ) – ಈ ದೋಷವಿಲ್ಲ. ಏಕೆಂದರೆ 'ಅಶರೀರನನ್ನು ಪ್ರಿಯಾಪ್ರಿಯಗಳು ಸೋಂಕಲಾರವು' ಎಂಬಲ್ಲಿ ಶರೀರಕ್ಕೆ ಸಂಬಂಧಪಟ್ಟಿರುವ ಧರ್ಮಾಧರ್ಮಕಾರ್ಯಗಳಾದ ಪ್ರಿಯಾಪ್ರಿಯಗಳನ್ನು ಅಲ್ಲಗಳೆಯಬೇಕೆಂಬುದೇ (ಇಲ್ಲಿ) ವಿವಕ್ಷಿತವಾಗಿದೆ ಆಗಮಾಪಾಯಿಗಳ ವಿಷಯದಲ್ಲಲ್ಲವೆ, ಸ್ಪರ್ಶಶಬ್ದವು (ಪ್ರಯುಕ್ತವಾಗುವದು) ಕಂಡುಬಂದಿದೆ? ಉದಾಹರಣೆಗೆ ಶೀತಸ್ಪರ್ಶ, ಉಷ್ಣಸ್ಪರ್ಶ- ಎಂದು (ಸ್ಪರ್ಶಶಬ್ದವನ್ನು ಹಾಗೆ ಪ್ರಯೋಗಿಸುತ್ತಾರೆ). ಅಷ್ಟೇ ಹೊರತು ಬೆಂಕಿಗೆ ಸ್ವಭಾವವೇ ಆಗಿರುವ ಬಿಸಿಬೆಳಕುಗಳ ಸ್ಪರ್ಶವು ಬೆಂಕಿಗೆ (ಆಗುತ್ತದೆ) ಎಂದೇನೂ (ಪ್ರಯೋಗ)ವಾಗುವದಿಲ್ಲ.[4] ಹೀಗೆ ಬೆಂಕಿಗೆ ಅಥವಾ ಸೂರ್ಯನಿಗೆ (ಇರುವ)

1. ಅವಸ್ಥಾತ್ರಯಸಂಬಂಧವು ತನಗೆ ಇಲ್ಲವೆಂಬ ತುರೀಯಜ್ಞಾನವುಳ್ಳವನಾಗಿರುತ್ತಾನಲ್ಲ ಎಂದರ್ಥ.

2 ಈ ಸೂತ್ರದಲ್ಲಿ ಮ್ಲೇಚ್ಛರು ಮುಂತಾದವರಲ್ಲಿ ಒಬ್ಬೊಬ್ಬರೊಡನೆ ಮಾತನಾಡಬಹುದು ಮ್ಲೇಚ್ಛಾದಿಗಳೆಲ್ಲರೂ ಇರುವಾಗ ಮಾತನಾಡಬಾರದು ಎಂಬ ಅಭಿಪ್ರಾಯವೇನೂ ಇಲ್ಲ, ಒಬ್ಬೊಬ್ಬರೊಡನೆಯೂ ಮಾತನಾಡಬಾರದು ಎಂದೇ ಸೂತ್ರದ ಅಭಿಪ್ರಾಯ.

3. ಸೂ. ಭಾ ೧-೧-೪ (ಭಾ ಭಾ. ೪೨)ದಲ್ಲಿ ಅಶರೀರತ್ವವೇ ಮೋಕ್ಷವೆಂದೂ ಅದು ಸ್ವಾಭಾವಿಕವೆಂದೂ ಪ್ರತಿಪಾದಿಸಿರುವದನ್ನು ನೋಡಿ.

4 ಏಕೆಂದರೆ ಬಿಸಿಬೆಳಕುಗಳು ಬೆಂಕಿಸೂರ್ಯರ ಸ್ವಭಾವವೇ ಆಗಿರುವದರಿಂದ ಅವನ್ನು ಅವುಗಳು ಹೊಸದಾಗಿ ಸೋಂಕಬೇಕಾದದ್ದೇನೂ ಇರುವದಿಲ್ಲ

ಬಿಸಿಬೆಳಕುಗಳಂತೆ (ಆತ್ಮನ) ಸ್ವರೂಪವೇ ಆಗಿರುವ ಆನಂದವೆಂಬ ಪ್ರಿಯವನ್ನು (ಇಲ್ಲಿ) ಅಲ್ಲಗಳೆದಿಲ್ಲ. ಏಕೆಂದರೆ "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ ೩-೯ ೧೮ ೭), "ಆನಂದವು ಬ್ರಹ್ಮ" (ತೈ ೩-೬) ಇವೇ ಮುಂತಾದ ಶ್ರುತಿಗಳಿಂದ (ಆನಂದವು ಆತ್ಮನ ಸ್ವರೂಪವೇ ಎಂದು ಗೊತ್ತಾಗಿರುತ್ತದೆ). ಇಲ್ಲಿಯೂ (೭-೨೩-೧) ಭೂಮವೇ ಸುಖವೆಂಬು ಹೇಳಿರುತ್ತದೆ

## ಪ್ರಜಾಪತಿಯು
## ಸಂವೇದ್ಯಾನಂದಪ್ರಾಪ್ತಿಯನ್ನು ಹೇಳುವದಿಲ್ಲ

(ಭಾಷ್ಯ)

೬೬೯. ನನು ಭೂಮ್ನಃ ಪ್ರಿಯಸ್ಯೈಕತ್ವೇ ಅಸಂವೇದ್ಯತ್ವಾತ್ ಸ್ವರೂಪೇಣೈವ ವಾ ನಿತ್ಯಸಂವೇದ್ಯತ್ವಾತ್ ನಿರ್ವಿಶೇಷತಾ ಇತಿ ನೇನ್ದ್ರಸ್ಯ ತದಿಷ್ಟಮ್। "ನಾಹ ಖಲ್ವಯಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮಿ" (೭-೧೧-೨) ಇತ್ಯುಕ್ತತ್ವಾತ್। ತದ್ಧಿ ಇನ್ದ್ರಸ್ಯ ಇಷ್ಟಂ ಯದ್ ಭೂತಾನಿ ಚ ಆತ್ಮಾನಂ ಚ ಜಾನಾತಿ ನ ಚಾಽಪ್ರಿಯಂ ಕಿಂಚಿದ್ ವೇತ್ತಿ, ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯೇನ ಜ್ಞಾನೇನ। ಸತ್ಯಮೇತದಿಷ್ಟಮಿನ್ದ್ರಸ್ಯ "ಇಮಾನಿ ಭೂತಾನಿ ಮತ್ತೋಽನ್ಯಾನಿ, ಲೋಕಾಃ ಕಾಮಾಶ್ಚ ಸರ್ವೇ ಮತ್ತೋಽನ್ಯೇ, ಅಹಮೇಷಾಂ ಸ್ವಾಮೀ" ಇತಿ। ನ ತ್ವೇತದಿನ್ದ್ರಸ್ಯ ಹಿತಮ್। ಹಿತಂ ಚ ಇನ್ದ್ರಸ್ಯ ಪ್ರಜಾಪತಿನಾ ವಕ್ತವ್ಯಮ್। ವ್ಯೋಮವದಶರೀರಾತ್ಮತಯಾ ಸರ್ವಭೂತಲೋಕಕಾಮಾತ್ಮತ್ವೋಪಗಮೇನ ಯಾ ಪ್ರಾಪ್ತಿಃ, ತದ್ ಹಿತಮ್ ಇನ್ದ್ರಾಯ ವಕ್ತವ್ಯಮ್ ಇತಿ ಪ್ರಜಾಪತಿನಾ ಅಭಿಪ್ರೇತಮ್। ನ ತು ರಾಜ್ಞೋ ರಾಜ್ಯಪ್ರಾಪ್ತಿವದನ್ಯತ್ವೇನ। ತತ್ರೈವಂ ಸತಿ ಕಂ ಕೇನ ವಿಜಾನೀಯಾತ್ ಆತ್ಮೈಕತ್ವೇ ಇಮಾನಿ ಭೂತಾನ್ಯಯಮಹಮಸ್ಮೀತಿ ?॥

(ಭಾಷ್ಯಾರ್ಥ)

(ಆಕ್ಷೇಪ) :- ಪ್ರಿಯವಾದ ಭೂಮವು ಒಂದೇ ಆದರೆ (ಅದು) ಅಸಂವೇದ್ಯವೇ ಆಗಿರುವದರಿಂದ, ಅಥವಾ ಸ್ವರೂಪದಿಂದ ನಿತ್ಯಸಂವೇದ್ಯವೇ ಆಗಿರುವದರಿಂದ[1] (ಅದರಲ್ಲಿ) ಯಾವ ವಿಶೇಷವೂ ಇಲ್ಲವಾಗಿ ಅದು ಇಂದ್ರನಿಗೆ ಇಷ್ಟವಾದದ್ದಲ್ಲ- ಏಕೆಂದರೆ "ಇವನು ಈ 'ನಾನು ಇಂಥವನು' ಎಂದು ತನ್ನನ್ನು ಅರಿತುಕೊಂಡಿರುವದೇ ಇಲ್ಲ, ಈ ಭೂತಗಳನ್ನು (ಅರಿತುಕೊಂಡಿರು)ವದೇ ಇಲ್ಲ,

---

1. ಆ ಸುಖವನ್ನು ಅನುಭವಿಸಬೇಕಾದ ಆವಶ್ಯಕತೆಯೇ ಇಲ್ಲದ್ದರಿಂದ ಎಂದರ್ಥ. ಆತ್ಮಾನಂದವು ಸಂವೇದ್ಯವಲ್ಲವೆಂಬ ವಿಷಯಕ್ಕೆ ಬೃ ಭಾ. ೩-೯-೨೮ (ಭಾ. ಭಾ. ೧೩೪೮)ನ್ನು ನೋಡಿ.

ವಿನಾಶವನ್ನೇ ಹೊಂದಿರುತ್ತಾನೆ, ನನಗೆ ಇಲ್ಲಿ ಯಾವ ಭೋಗ್ಯವೂ ಕಾಣಿಸುತ್ತಿಲ್ಲ" (೮-೧೧-೨) ಎಂದು (ಇಂದ್ರನು) ಹೇಳಿರುತ್ತಾನೆ. ಭೂತಗಳನ್ನೂ ತನ್ನನ್ನೂ ಅರಿತುಕೊಳ್ಳಬೇಕು, ಅಪ್ರಿಯವಾದದ್ದು ಯಾವದನ್ನೂ ಅನುಭವಿಸಬಾರದು, ಅವನು ಯಾವ ಜ್ಞಾನದಿಂದ ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೋ-[1] ಎಂಬಿದಲ್ಲವೆ, ಇಂದ್ರನಿಗೆ ಇಷ್ಟವಾಗಿದ ?

(ಪರಿಹಾರ) - ನಿಜ. "ಈ ಭೂತಗಳು ನನಗಿಂತ ಬೇರೆಯಾಗಿವೆ, ಲೋಕಗಳೂ ಕಾಮಗಳೂ ಎಲ್ಲವೂ ನನಗಿಂತ ಬೇರೆಯಾಗಿವೆ, ಇವುಗಳಿಗೆ ನಾನು ಸ್ವಾಮಿಯು" ಎಂಬಿದೇ ಇಂದ್ರನಿಗೆ ಇಷ್ಟವಾಗಿದೆ ಆದರೆ ಇದು ಇಂದ್ರನಿಗೆ ಹಿತವಲ್ಲ ಇಂದ್ರನಿಗೆ ಹಿತವಾದದ್ದು ಯಾವದೋ ಅದನ್ನೇ ಪ್ರಜಾಪತಿಯು ಹೇಳಬೇಕು. **ಆಕಾಶದಂತೆ ಅಶರೀರಸ್ವರೂಪನಾಗಿರುವದರಿಂದ ಸರ್ವಭೂತಲೋಕಕಾಮಗಳಿಗೂ ಆತ್ಮನಾಗಿರುವದರಿಂದ ಯಾವ ಪ್ರಾಪ್ತಿಯುಂಟೋ ಆ ಹಿತವನ್ನೇ ಇಂದ್ರನಿಗೆ ಹೇಳಬೇಕು ಎಂಬುದು ಪ್ರಜಾಪತಿಗೆ ಅಭಿಪ್ರೇತವಾಗಿರುತ್ತದೆ; ಇಷ್ಟೇ ಹೊರತು ರಾಜನಿಗೆ ರಾಜ್ಯಪ್ರಾಪ್ತಿಯಾಗುವಂತೆ (ಅವನಿಗಿಂತ) ಬೇರೆಯಾಗಿದ್ದುಕೊಂಡು (ಪ್ರಾಪ್ತವಾಗೆಂಬುದು ಅವನಿಗೆ ಅಭಿಪ್ರೇತ)ವಲ್ಲ. ಹೀಗಿರುವಲ್ಲಿ ಆತ್ಮನು ಒಬ್ಬನೇ ಆಗಿರುವಲ್ಲಿ ಯಾರನ್ನು ಏತರಿಂದ ಅರಿಯಬೇಕು? ಇವು ಭೂತಗಳು, ನಾನು ಇಂಥವನು ಎಂದು (ಹೇಗೆ ಅರಿಯಬೇಕು)[2] ?**

## ಮುಕ್ತನಿಗೆ ಐಶ್ವರ್ಯವನ್ನು ಹೇಳುವ ವಾಕ್ಯಗಳ ಗತಿ

(ಭಾಷ್ಯ)

೬೭೦ ನನ್ವಸ್ಮಿನ್ ಪಕ್ಷೇ "ಸ್ತ್ರೀಭಿರ್ವಾ ಯಾನೈರ್ವಾ" (೮-೧೨-೩) "ಸ ಯದಿ ಪಿತೃಲೋಕಕಾಮಃ" (೮-೨-೧), "ಸ ಏಕಧಾ ಭವತಿ " (೭-೨೬-೨) ಇತ್ಯಾದ್ಯೈಶ್ವರ್ಯಶ್ರುತಯೋಽನುಪಪನ್ನಾಃ । ನ । ಸರ್ವಾತ್ಮನಃ, ಸರ್ವಫಲಸಂಬನ್ಧೋಪಪತ್ತೇರವಿರೋಧಾತ್ । ಮೃದ ಇವ ಸರ್ವಘಟಕರಕಕುಣ್ಡಾದ್ಯಾಪ್ತಿಃ । ನನು ಸರ್ವಾತ್ಮತ್ವೇ ದುಃಖಸಂಬನ್ಧೋಽಪಿ ಸ್ಯಾದಿತಿ ಚೇತ್ । ನ । ದುಃಖಸ್ಯಾಪಿ ಆತ್ಮತ್ವೋಪಗಮಾತ್ ಅವಿರೋಧಃ । ಆತ್ಮನಿ ಅವಿದ್ಯಾಕಲ್ಪನಾನಿಮಿತ್ತಾನಿ ದುಃಖಾನಿ ರಜ್ಜ್ವಾಮಿವ ಸರ್ಪಾದೀನಿ[3] ಕಲ್ಪನಾನಿಮಿತ್ತಾನಿ। ಸಾ ಚಾಽವಿದ್ಯಾ ಅಶರೀರಾತ್ಮೈಕತ್ವಸ್ವರೂಪದರ್ಶನೇನ ದುಃಖನಿಮಿತ್ತಾ ಉಚ್ಛಿನ್ನಾ ಇತಿ ದುಃಖಸಂಬನ್ಧಾಶಙ್ಕಾ ನ ಸಂಭವತಿ । ಶುದ್ಧಸತ್ತ್ವಸಂಕಲ್ಪನಿಮಿತ್ತಾನಾಂ ತು

---

1 ಮೂಲದಲ್ಲಿ 'ಯೇನ' ಎಂದಿರುವದನ್ನು ಹಾಗೆಯೇ ಕನ್ನಡಿಸಿದೆ, ಆದರೆ ಯೇನ ಎಂಬುದನ್ನು ಬಿಟ್ಟರೆ ಕಷ್ಟವಿಲ್ಲದೆ ವಾಕ್ಯಾನ್ವಯವಾಗುತ್ತದೆ.

2 ಬೃ. ೨-೪-೧೪ರ ಸೂಚನೆ.

3 'ಸರ್ಪಾದಿಕಲ್ಪನಾ' ಎಂಬ ಪಾಠಕ್ಕಿಂತ ಇದೇ ಮೇಲು

ಕಾಮಾನಾಮ್ ಈಶ್ವರದೇಹಸಂಬನ್ಧಃ ಸರ್ವಭೂತೇಷು ಮಾನಸಾನಾಮ್ | ಪರ ಏವ ಸರ್ವಸತ್ತ್ವೋಪಾಧಿದ್ವಾರೇಣ ಭೋಕ್ತಾ ಇತಿ ಸರ್ವಾವಿದ್ಯಾಕೃತಸಂವ್ಯವಹಾರಾಣಾಂ ಪರ ಏವಾಽಽತ್ಮಾ ಆಸ್ಪದಂ ನಾನ್ಯೋಽಸ್ತೀತಿ ವೇದಾನ್ತಸಿದ್ಧಾನ್ತಃ ॥

(ಭಾಷ್ಯಾರ್ಥ)

(ಆಕ್ಷೇಪ) .— ಈ ಪಕ್ಷದಲ್ಲಿ[1] "ಸ್ತ್ರೀಯರಿಂದಾಗಲಿ ಯಾನಗಳಿಂದಾಗಲಿ" (೮-೧೨-೩), "ಅವನು ಪಿತೃಲೋಕಗಳ ಕಾಮವುಳ್ಳವನಾದರೆ" (೮-೨-೧),[2] "ಅವನು ಒಂದೇ ವಿಧವಾಗಿರುತ್ತಾನೆ " (೭-೨೬-೨)- ಇವೇ ಮುಂತಾದ ಐಶ್ವರ್ಯಶ್ರುತಿಗಳು ಹೊಂದುವದಿಲ್ಲವಲ್ಲ !

(ಪರಿಹಾರ) — ಹಾಗಲ್ಲ ಸರ್ವಾತ್ಮನಾಗಿರುವ (ಮುಕ್ತ)ನಿಗೆ ಎಲ್ಲಾ ಫಲಗಳ ಸಂಬಂಧವೂ ಆಗಬಹುದಾದ್ದರಿಂದ (ಇಲ್ಲಿ ಯಾವ) ವಿರೋಧವೂ ಇರುವದಿಲ್ಲ ಮಣ್ಣಿಗೆ ಎಲ್ಲಾ ಗಡಿಗೆಗಳು, ಕುಡಿಕೆಗಳು, ಕುಂಡಗಳು- ಮುಂತಾದವುಗಳ ಪ್ರಾಪ್ತಿಯಾದಂತೆಯೇ (ಇದು )[3]

(ಆಕ್ಷೇಪ) — (ಮುಕ್ತನು) ಸರ್ವಾತ್ಮನಾದರೆ (ಅವನಿಗೆ) ದುಃಖದ ಸಂಬಂಧವೂ ಆಗಬೇಕಾಯಿತಲ್ಲ !

(ಪರಿಹಾರ) .—ಹಾಗಲ್ಲ ಏಕೆಂದರೆ ದುಃಖಕ್ಕೂ (ಅವನು) ಆತ್ಮನೆಂದು ಒಪ್ಪಿರುವದರಿಂದ (ಇಲ್ಲಿ ಯಾವ) ವಿರೋಧವೂ ಇಲ್ಲ. **ಹಗ್ಗದಲ್ಲಿ ಹೇಗೆ ಹಾವು ಮುಂತಾದವುಗಳು ಕಲ್ಪನೆಯ ನಿಮಿತ್ತದಿಂದಾಗಿರುವವೋ, ಹಾಗೆ ಆತ್ಮನಲ್ಲಿ ಅವಿದ್ಯಾಕಲ್ಪನೆಯ ನಿಮಿತ್ತದಿಂದ ದುಃಖಗಳು ಆಗಿರುತ್ತವೆ. ಆದರೆ ದುಃಖಕಾರಣವಾದ ಆ ಅವಿದ್ಯೆಯು ಅಶರೀರನಾದ ಆತ್ಮನು ಒಬ್ಬನೇ (ನಾನು) ಎಂದು ಸ್ವರೂಪವನ್ನು ಅರಿತುಕೊಂಡದ್ದರಿಂದ ನಾಶವಾಗಿಬಿಟ್ಟಿರುವದರಿಂದ ದುಃಖಸಂಬಂಧವೂ ( ಆಗಬಹುದೆಂಬ ) ಆಶಂಕೆಯು ಸಂಭವಿಸುವದಿಲ್ಲ.[4] ಆದರೆ ಶುದ್ಧಸತ್ತ್ವಸಂಕಲ್ಪನಿಮಿತ್ತ**

---

1. ತನಗಿಂತ ವ್ಯತಿರಿಕ್ತವಾದ ಲೋಕಕಾಮಗಳನ್ನು ಇಲ್ಲಿ ಹೇಳಿಲ್ಲವೆಂಬ ಪಕ್ಷದಲ್ಲಿ

2. ಈ ವಾಕ್ಯವು ಸಗುಣಬ್ರಹ್ಮವಿದ್ಯೆಯ ಫಲವನ್ನು ಹೇಳುವದಾದರೂ ಪೂರ್ವಪಕ್ಷಿಯು ಅದನ್ನು ಲೆಕ್ಕಕ್ಕೆ ತಾರದೆ ಉದಾಹರಿಸಿರುತ್ತಾನೆ.

3. ಮಣ್ಣು ಗಡಿಗೆಯನ್ನು ಹೊಸದಾಗಿ ಪಡೆಯಬೇಕಾದದ್ದಿಲ್ಲ; ಹಾಗೆಯೇ ಸರ್ವಾತ್ಮನಾದ ಜ್ಞಾನಿಯು ಯಾವದನ್ನೂ ಹೊಸದಾಗಿ ಪಡೆದುಕೊಳ್ಳಬೇಕಾದದ್ದಿರುವದಿಲ್ಲ , ಆದ್ದರಿಂದ ಸಗುಣವಿದ್ಯೆಯಿಂದಾಗುವ ಫಲವೂ ಇವನಿಗೇ ಎಂದು ಹೇಳಬಹುದು.

4. ಜ್ಞಾನಿಯ ದೃಷ್ಟಿಯಿಂದ ದುಃಖವು ಇರುವದೇ ಇಲ್ಲ.

ದಿಂದಾಗಿರುವ ಮಾನಸಕಾಮಗಳಿಗೂ ಸರ್ವಭೂತಗಳಲ್ಲಿಯೂ ಈಶ್ವರ ದೇಹಸಂಬಂಧವಿರುತ್ತದೆ.[1] ಏಕೆಂದರೆ ಪರಮಾತ್ಮನೇ ಸರ್ವರ ಸತ್ತ್ವಗಳೆಂಬ ಉಪಾಧಿದ್ವಾರದಿಂದ ಭೋಕ್ತೃವಾಗಿರುತ್ತಾನೆ.[2] ಅವಿದ್ಯೆಯಿಂದಾಗಿರುವ ಎಲ್ಲಾ ವ್ಯವಹಾರಗಳಿಗೂ ಪರಮಾತ್ಮನೇ ಆಸ್ಪದನಾಗಿರುತ್ತಾನೆಯೇ ಹೊರತು ಮತ್ತೊಬ್ಬನಲ್ಲ ಎಂಬುದು ವೇದಾಂತ ಸಿದ್ಧಾಂತವು.[3]

## ಚರ್ಚೆ : ಪ್ರಜಾಪತಿಯು ಪ್ರತಿಪರ್ಯಾಯದಲ್ಲಿಯೂ ಒಬ್ಬನೇ ಆತ್ಮನನ್ನು ಹೇಳಿದನೆ?

### ಪೂರ್ವಪಕ್ಷ : ಇಲ್ಲಿ ಬೇರೆಬೇರೆಯ ಆತ್ಮರುಗಳನ್ನೇ ಹೇಳಿದೆ

(ಭಾಷ್ಯ)

೬೭೧ ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಇತಿ ಛಾಯಾಪುರುಷ ಏವ ಪ್ರಜಾಪತಿನಾ ಉಕ್ತಃ । ಸ್ವಪ್ನಸುಷುಪ್ತಯೋಶ್ಚ ಅನ್ಯ ಏವ । ನ ಪರೋಽಪಹತಪಾಪ್ಮತ್ವಾದಿಲಕ್ಷಣಃ । ವಿರೋಧಾತ್ ಇತಿ ಕೇಚಿನ್ಮನ್ಯನ್ತೇ । ಛಾಯಾದ್ಯಾತ್ಮನಾಂ ಚೋಪದೇಶೇ ಪ್ರಯೋಜನಮ್ ಆಚಕ್ಷತೇ । ಆದಾವೇವ ಉಚ್ಯಮಾನೇ ಕಿಲ ದುರ್ವಿಜ್ಞೇಯತ್ವಾತ್ ಪರಸ್ಯಾಽತ್ಮನಃ, ಅತ್ಯನ್ತಬಾಹ್ಯವಿಷಯಾಸಕ್ತಚೇತಸೋಽತ್ಯನ್ತಸೂಕ್ಷ್ಮವಸ್ತುಶ್ರವಣೇ ವ್ಯಾಮೋಹೋ ಮಾ ಭೂದಿತಿ । ಯಥಾ ಕಿಲ ದ್ವಿತೀಯಾಯಾಂ ಸೂಕ್ಷ್ಮಂ ಚನ್ದ್ರಂ ದಿದರ್ಶಯಿಷುರ್ವೃಕ್ಷಂ ಕಂಚಿತ್ ಪ್ರತ್ಯಕ್ಷಮ್ ಆದೌ ದರ್ಶಯತಿ ಪಶ್ಯಾಮುಮ್, ಏಷ ಚನ್ದ್ರ ಇತಿ । ತತೋಽನ್ಯಂ

---

1. ಈ ವಾಕ್ಯಕ್ಕೆ ಸರಿಯಾದ ಅರ್ಥವೇನೆಂಬುದು ಸ್ಪಷ್ಟವಾಗುವಂತಿಲ್ಲ. "ಶುದ್ಧಸತ್ತ್ವವು ಎಂದರೆ ರಜಸ್ತಮಸ್ಸುಗಳ ಸಂಬಂಧವಿಲ್ಲದ್ದು, ಮಾಯೆಯ ಏಕದೇಶವಾದ ಅದರಿಂದ ಉಂಟಾದ ಸಂಕಲ್ಪಗಳ ನಿಮಿತ್ತದಿಂದ ಕಾಮಗಳೆಂಬ ಐಶ್ವರ್ಯವಿಶೇಷಗಳು ಸರ್ವಭೂತಗಳಲ್ಲಿಯೂ ಈಶ್ವರಾಭಿಧ್ಯಾನರೂಪವಾದ ಮನೋಮಾತ್ರದಿಂದ ಸಿದ್ಧರಿಗೆ ಈಶ್ವರಸ್ವಭಾವಸಂಬಂಧವು ಮಾಯಾವಸ್ಥೆಯಲ್ಲಿ ಸಿದ್ಧವಾಗುತ್ತದೆ" ಎಂದು ಟೀಕೆ. ಜ್ಞಾನಿಯು ಸರ್ವಭೂತಗಳಿಗೂ ಆತ್ಮನಾಗಿರುವದರಿಂದ ಶುದ್ಧಸಂಕಲ್ಪದಿಂದಾಗುವ ಕಾಮಗಳ ಪ್ರಾಪ್ತಿಯು ಯಾರಿಗೇ ಆದರೂ ಅವುಗಳಿಂದಾದ ಆನಂದವು ಜ್ಞಾನಿಗೇ ಎಂದು ವ್ಯವಹಾರದೃಷ್ಟಿಯಿಂದ ಹೊಗಳಿರುತ್ತಾರೆ ಎಂಬುದು ವಾಕ್ಯದ ಅಭಿಪ್ರಾಯವೆಂದು ತಿಳಿದುಕೊಂಡರೆ ಸಾಕಾಗಿದೆ. ಬೃ. ಭಾ ೩-೯-೨೮-೭ (ಭಾ. ಭಾ. ೧೩೯ನ್ನು) ನೋಡಿ. ಮುಂದೆ ೮-೧೨-೩ರ ಭಾಷ್ಯ (ಭಾ.ಭಾ. ೬೭೮)ವನ್ನೂ ನೋಡಿ.

2. ಭೋಕ್ತೃವಿನ ಪರಮಾರ್ಥರೂಪವೇ ಪರಮಾತ್ಮನು.

3. ಪರಮಾತ್ಮನಲ್ಲಿಯೇ ಎಲ್ಲಾ ವ್ಯವಹಾರಗಳೂ ಕಲ್ಪಿತವಾಗಿರುವದರಿಂದ ಜ್ಞಾನಿಗೆ ಎಲ್ಲಾ ..ಗೆಯ ಉತ್ತಮಫಲಗಳೂ ಆಗುವವೆಂದು ಹೊಗಳುವದರಲ್ಲಿ ಔಚಿತ್ಯವಿದೆ ಎಂದರ್ಥ.

ತತೋಽಪ್ಯನ್ಯಂ ಗಿರಿಮೂರ್ಧಾನಂ ಚ ಚನ್ದ್ರಸಮೀಪಸ್ಥಮ್ ಏಷ ಚನ್ದ್ರ ಇತಿ ! ತತೋಽಸೌ ಚನ್ದ್ರಂ ಪಶ್ಯತಿ । ಏವಮೇತದ್ ಯ ಏಷೋಽಕ್ಷಿಣಿ ಇತ್ಯಾದ್ಯುಕ್ತಂ ಪ್ರಜಾಪತಿನಾ ತ್ರಿಭಿಃ ಪರ್ಯಾಯೈರ್ನ ಪರ ಇತಿ । ಚತುರ್ಥೇ ತು ಪರ್ಯಾಯೇ ದೇಹಾನ್ಮತ್ರ್ಯಾತ್ ಸಮುತ್ಥಾಯ ಅಶರೀರತಾಮಾಪನ್ನೋ ಜ್ಯೋತಿಃಸ್ವರೂಪಮ್। ಯಸ್ಮಿನ್ ಉತ್ತಮಪುರುಷೇ ಸ್ತ್ರ್ಯಾದಿಭಿರ್ಜಕ್ಷತ್ ಕ್ರೀಡನ್ ರಮಮಾಣೋ ಭವತಿ ಸ ಉತ್ತಮಃ ಪುರುಷಃ ಪರ ಉಕ್ತಂ ಇತಿ ಚಾಽಽಹುಃ ॥

(ಭಾಷ್ಯಾರ್ಥ)

"ಕಣ್ಣಿನಲ್ಲಿ ಈ ಪುರುಷನು ಕಾಣಿಸುತ್ತಿದಾನಲ್ಲ" (೮-೭-೪) ಎಂದು ಛಾಯಾಪುರುಷನನ್ನೇ ಪ್ರಜಾಪತಿಯು ಹೇಳಿರುತ್ತಾನೆ. ಸ್ವಪ್ನಸುಷುಪ್ತಿಗಳಲ್ಲಿ ಬೇರೆ(ಬೇರೆಯ ಪುರುಷ)ನನ್ನೇ (ಹೇಳಿರುತ್ತಾನೆ) ಇಷ್ಟೇ ಹೊರತು ಅಪಹತ ಪಾಪ್ಮತ್ವಾದಿಲಕ್ಷಣವುಳ್ಳ ಪರ(ಮಾತ್ಮನನ್ನು) ಹೇಳಿರುವದಿಲ್ಲ . ಏಕೆಂದರೆ ಹಾಗೆಂದರೆ) ವಿರೋಧವಾಗುತ್ತದೆ-[1] ಎಂದು **ಕೆಲವರು**[2] ಅಭಿಪ್ರಾಯಪಟ್ಟಿರುತ್ತಾರೆ ಛಾಯಾ(ಪುರುಷನೇ) ಮುಂತಾದ ಆತ್ಮರುಗಳನ್ನು ಉಪದೇಶಮಾಡುವದರಲ್ಲಿ (ಈ ಪ್ರಯೋಜನ(ವಿದೆಯೆಂದು ಅವರು) ಹೇಳುತ್ತಾರೆ ಮೊದಲೇ ಹೇಳಿದರೆ ಪರಮಾತ್ಮನನ್ನು ತಿಳಿದುಕೊಳ್ಳುವದು ಕಷ್ಟವಾಗಿರುವದರಿಂದ ಅತ್ಯಂತವಾಗಿ ಹೊರಗಿರುವ ವಿಷಯಗಳಲ್ಲಿ ಆಸಕ್ತವಾಗಿರುವ ಚಿತ್ತವುಳ್ಳ(ಇಂದ್ರನಿಗೆ) ಅತ್ಯಂತಸೂಕ್ಷ್ಮವಾಗಿರುವ ಆತ್ಮವಸ್ತುವನ್ನು ಶ್ರವಣಮಾಡುವಲ್ಲಿ ಭ್ರಾಂತಿಯಾಗದೆ ಇರಲೆಂಬುದು (ಪ್ರಯೋಜನವು). ಹೇಗೆ ಬಿದಿಗೆಯ ದಿನ ಸೂಕ್ಷ್ಮವಾಗಿರುವ ಚಂದ್ರನನ್ನು ತೋರಿಸಬೇಕೆನ್ನುವವನು ಪ್ರತ್ಯಕ್ಷವಾಗಿರುವ ಒಂದಾನೊಂದು ಮರವನ್ನು- 'ಇದನ್ನು ನೋಡು, ಇವನೇ ಚಂದ್ರನು'- ಎಂದು ತೋರಿಸುತ್ತಾನೆ. ಆಮೇಲೆ ಮತ್ತೊಂದನ್ನೂ, ಆಮೇಲೆ ಚಂದ್ರನ ಹತ್ತಿರವಿರುವ ಮತ್ತೂ ಒಂದು ಬೆಟ್ಟದ ತುದಿಯನ್ನೂ 'ಇವನೇ ಚಂದ್ರನು' ಎಂದು ತೋರಿಸುತ್ತಾನೆ. ಆಗ ಅವನು ಚಂದ್ರನನ್ನು ಕಾಣುತ್ತಾನೆ

---

1. 'ಒಬ್ಬನೇ ಅವಸ್ಥಾವಂತನಾಗಿರುವದು, ಮತ್ತು ಅಪಹತಪಾಪ್ಮನಾಗಿರುವದು- ಎಂಬುದು ವಿರುದ್ಧವು' ಎಂದು ಟೀಕೆ. ಪ್ರಜಾಪತಿಯು ಅಪಹತಪಾಪ್ಮತ್ವಾದಿಸ್ವರೂಪವನ್ನು ಹೇಳುತ್ತೇನೆಂದು ಹೊರಟು ಜೀವನನ್ನೂ ಛಾಯಾತ್ಮನನ್ನೂ ಸ್ವಪ್ನಾತ್ಮನನ್ನೂ ಸುಷುಪ್ತಾತ್ಮನನ್ನೂ ಹೇಳಿದರೆ ತನ್ನ ಮಾತಿಗೆ ವಿರುದ್ಧವಾಗುತ್ತದೆ ಎಂಬ ಭಾವವೂ ಇಲ್ಲಿರುತ್ತದೆ.

2. ಇವರು ಯಾರೆಂಬುದು ಗೊತ್ತಾಗಲಿಲ್ಲ. ಸೂ ಭಾ. ೧-೩-೧೯ (ಭಾ. ಭಾ. ೨೬೪) ರಲ್ಲಿಯೂ ಈ ಪರ್ಯಾಯಗಳಲ್ಲಿ ಪರಮಾತ್ಮನನ್ನು ಹೇಳಲಿಲ್ಲವೆಂಬವರ ಪೂರ್ವಪಕ್ಷವನ್ನು ಖಂಡಿಸಿದೆ , ಆದರೆ ಅಲ್ಲಿ ಚಂದ್ರದರ್ಶನನ್ಯಾಯವನ್ನು ಹೇಳಿಲ್ಲ. "ಏತಂ ತ್ವೇವ" ಎಂಬಲ್ಲಿ ಏತಚ್ಛಬ್ದಕ್ಕೆ ಪರಮಾತ್ಮನೇ ಪರಾಮರ್ಶವಿಷಯನೆಂದು ಹೇಳಿದೆ. ಪೂರ್ವಪಕ್ಷಾನುವಾದದಲ್ಲಿ ಸೂತ್ರಭಾಷ್ಯಕ್ಕೂ ಉಪನಿಷದ್ವಾಕ್ಯಕ್ಕೂ ಇಷ್ಟುಮಟ್ಟಿನ ಭೇದವು ಏತಕ್ಕಾಗಿವೆ ಎಂಬುದನ್ನು ಪಂಡಿತರು ನಿರ್ಣಯಿಸಬೇಕಾಗಿದೆ.

ಇದರಂತೆಯೇ "ಈ ಕಣ್ಣಿನಲ್ಲಿ .." ಎಂದು ಮುಂತಾಗಿ ಪ್ರಜಾಪತಿಯು ಮೂರು ಪರ್ಯಾಯಗಳಲ್ಲಿ ಹೇಳಿದ್ದನ್ನು (ತಿಳಿಯಬೇಕು. ಇಷ್ಟೇ ಹೊರತು) ಪರಮಾತ್ಮನಲ್ಲ. ಆದರೆ ನಾಲ್ಕನೆಯ ಪರ್ಯಾಯದಲ್ಲಿ ಮರ್ತ್ಯವಾದ ದೇಹವನ್ನು ಬಿಟ್ಟಿದ್ದು ಅಶರೀರತ್ವವನ್ನು ಹೊಂದಿದ ಜ್ಯೋತಿಃಸ್ವರೂಪನಾದ ಯಾವ ಉತ್ತಮಪುರುಷನಲ್ಲಿ[1] ಸ್ತ್ರೀಯರೇ ಮುಂತಾದವರೊಡನೆ ನಗುತ್ತಾ ಕ್ರೀಡಿಸುತ್ತಾ ರಮಿಸುತ್ತಾ ಇರುವನೋ ಆ- ಉತ್ತಮಪುರುಷನಾದ ಪರ(ಮಾತ್ಮನನ್ನು) ಹೇಳಿರುತ್ತಾನೆ ಎನ್ನುತ್ತಾರೆ

## ಸಿದ್ಧಾಂತ :
## ಅವಸ್ಥಾತ್ರಯದಲ್ಲಿಯೂ ಪರಮಾತ್ಮನನ್ನೇ ಇಲ್ಲಿ ಹೇಳಿದೆ

(ಭಾಷ್ಯ)

೬೭೧. ಸತ್ಯಂ ರಮಣೀಯಾ ತಾವದಿಯಂ ವ್ಯಾಖ್ಯಾ ಶ್ರೋತುಮ್ । ನ ತ್ವರ್ಥೋಽಸ್ಯ ಗ್ರನ್ಥಸ್ಯೈವಂ ಸಂಭವತಿ । ಕಥಮ್ ಅಕ್ಷಿಣಿ ಪುರುಷೋ ದೃಶ್ಯತ ಇತ್ಯುಪನ್ಯಸ್ಯ ಶಿಷ್ಯಾಭ್ಯಾಂ ಛಾಯಾತ್ಮನಿ ಗೃಹೀತೇ ತಯೋಸ್ತದ್ವಿಪರೀತಗ್ರಹಣಂ ಮತ್ವಾ ತದಪನಯಾಯ ಉದಶರಾವೋಪನ್ಯಾಸಃ, 'ಕಿಂ ಪಶ್ಯಥ' (೮-೮-೧) ಇತಿ ಚ ಪ್ರಶ್ನಃ ಸಾಧ್ವಲಂಕಾರೋಪದೇಶಶ್ಚಾನರ್ಥಕಃ ಸ್ಯಾದ್ ಯದಿ ಛಾಯಾತ್ಮೈವ ಪ್ರಜಾಪತಿನಾ ಅಕ್ಷಿಣಿ ದೃಶ್ಯತ ಇತ್ಯುಪದಿಷ್ಟಃ । ಕಿಂಚ ಯದಿ ಸ್ವಯಮುಪದಿಷ್ಟ ಇತಿ ಗ್ರಹಣಸ್ಯಾಪ್ಯಪನಯಕಾರಣಂ ವಕ್ತವ್ಯಂ ಸ್ಯಾತ್ । ಸ್ವಪ್ನಸುಷುಪ್ತಾತ್ಮಗ್ರಹಣಯೋರಪಿ ತದಪನಯಕಾರಣಂ ಚ ಸ್ವಯಂ ಬ್ರೂಯಾತ್ । ನ ಚೋಕ್ತಮ್ ತೇನ । ತೇನ ಮನ್ಯಾಮಹೇ ನಾಕ್ಷಿಣಿ ಚ್ಛಾಯಾತ್ಮಾ ಪ್ರಜಾಪತಿನೋಪದಿಷ್ಟಃ[2] । ಕಿಂ ಚಾನ್ಯತ್ ಅಕ್ಷಿಣಿ ದ್ರಷ್ಟಾ ಚೇದ್ ದೃಶ್ಯತ ಇತ್ಯುಪದಿಷ್ಟಃ ಸ್ಯಾತ್, ತತ ಇದಂ ಯುಕ್ತಂ 'ಏತಂ ತ್ವೇವ ತೇ' ಇತ್ಯುಕ್ತ್ವಾ ಸ್ವಪ್ನೇಽಪಿ ದ್ರಷ್ಟುರೇವೋಪದೇಶಃ ॥

(ಭಾಷ್ಯಾರ್ಥ)

ನಿಜ, ಈ ವ್ಯಾಖ್ಯಾನವು ಕೇಳುವದಕ್ಕೇನೋ ರಮಣೀಯವಾಗಿದೆ ಆದರೆ ಈ ಗ್ರಂಥಕ್ಕೆ ಮಾತ್ರ ಈ ಅರ್ಥವು ಹೊಂದುವದಿಲ್ಲ ಹೇಗೆಂದರೆ "ಕಣ್ಣಿನಲ್ಲಿ ಪುರುಷನು ಕಾಣಿಸುತ್ತಾನೆ" (೮-೭-೪) ಎಂದು ಉಪದೇಶಿಸಿ ಶಿಷ್ಯರಿಬ್ಬರೂ ಛಾಯಾತ್ಮನನ್ನು ಗ್ರಹಿಸಲು ಅವರಿಗೆ (ಉಂಟಾಗಿದ್ದ) ಆ ವಿಪರೀತಗ್ರಹಣವನ್ನು ತಿಳಿದುಕೊಂಡು ಅದನ್ನು ತೆಗೆದುಹಾಕುವದಕ್ಕಾಗಿ ನೀರಿನ ಪ್ರಾವೆಯ ದೃಷ್ಟಾಂತವನ್ನು ಹೇಳಿದ್ದು, 'ನಿಮಗೆ ಏನು ಕಾಣಿಸುತ್ತದೆ?' (೮-೮-೧) ಎಂಬ ಪ್ರಶ್ನೆ,

1. ೮-೧೨-೩ರ ಪರಾಮರ್ಶವಿದು.

2 ಇಲ್ಲೊಂದು "ಇತಿ" ಇದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

ಚೆನ್ನಾಗಿ ಅಲಂಕಾರಮಾಡಿಕೊಳ್ಳಿರೆಂದು ಹೇಳಿದ್ದು-(ಇದೆಲ್ಲವೂ) 'ಕಣ್ಣಿನಲ್ಲಿ ಕಾಣುತ್ತಾನಲ್ಲ' ಎಂದು ಛಾಯಾತ್ಮನನ್ನೇ ಪ್ರಜಾಪತಿಯು ಉಪದೇಶಮಾಡಿರುವನೆಂದಿಟ್ಟುಕೊಂಡರೆ ವ್ಯರ್ಥವಾಗುವದು. ಮತ್ತು ತಾನೇ ಉಪದೇಶಮಾಡಿರುವದರಿಂದ (ಅವರು) ಹಾಗೆ ಗ್ರಹಣಮಾಡಿದ್ದನ್ನು ತೆಗೆದುಹಾಕುವದಕ್ಕೆ ಕಾರಣವನ್ನು ಹೇಳಬೇಕಾಗುವದು ಸ್ವಪ್ನಸುಷುಪ್ತಾತ್ಮರುಗಳನ್ನು ಗ್ರಹಿಸಿದ್ದರಲ್ಲಿಯೂ ಆ (ತಿಳಿವಳಿಕೆಯನ್ನು) ತೆಗೆದುಹಾಕುವದಕ್ಕೆ ಕಾರಣವನ್ನು ತಾನೇ ಹೇಳಬೇಕಾಗುವದು. ಆದರೆ (ಹಾಗೆ) ಹೇಳಿರುವದಿಲ್ಲ ಆದ್ದರಿಂದ ಕಣ್ಣಿನಲ್ಲಿರುವ ಛಾಯಾತ್ಮನನ್ನು ಪ್ರಜಾಪತಿಯು ಉಪದೇಶಮಾಡಿಲ್ಲ ಎಂದು ನಾವು ತಿಳಿಯಬೇಕಾಗಿದೆ. ಇನ್ನೊಂದು ಮಾತೇನೆಂದರೆ, ಕಣ್ಣಿನಲ್ಲಿರುವ ದ್ರಷ್ಟೃವೇ ಉಪದಿಷ್ಟನಾಗಿರುವನೆಂದಾದರೆ, ಆಗ 'ಇವನನ್ನೇ ನಿನಗೆ (ಮತ್ತೂ ವಿವರಿಸಿ ಹೇಳುವೆನು)' ಎಂದು ಸ್ವಪ್ನದಲ್ಲಿಯೂ ಆ ದ್ರಷ್ಟೃವನ್ನೇ ಉಪದೇಶಿಸಿರುತ್ತಾನೆ ಎಂಬುದು ಸರಿಯಾಗುವದು.

## ಸ್ವಪ್ನದಲ್ಲಿಯೂ ಸಾಕ್ಷಿಯನ್ನೇ ಉಪದೇಶಿಸಿರುತ್ತದೆ

(ಭಾಷ್ಯ)

೬೭೩ ಸ್ವಪ್ನೇ ನ ದ್ರಷ್ಟಾ ಉಪದಿಷ್ಟ ಇತಿ ಚೇತ್ । ನ । 'ಅಪಿ ರೋದಿತೀವ', 'ಅಪ್ರಿಯವೇತ್ತೇವ' ಇತ್ಯುಪದೇಶಾತ್ । ನ ಚ ದ್ರಷ್ಟುರನ್ಯಃ ಕಶ್ಚಿತ್ ಸ್ವಪ್ನೇ ಮಹೀಯಮಾನಶ್ಚರತಿ । "ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ" (ಬೃ ೪-೩ ೯) ಇತಿ ನ್ಯಾಯತಃ ಶ್ರುತ್ಯನ್ತರೇ ಸಿದ್ಧತ್ವಾತ್ । ಯದ್ಯಪಿ ಸ್ವಪ್ನೇ ಸಧೀರ್ಭವತಿ ತಥಾಪಿ ನ ಧೀಃ ಸ್ವಪ್ನಭೋಗೋಪಲಬ್ಧಿಂ ಪ್ರತಿ ಕರಣತ್ವಂ ಭಜತೇ । ಕಿಂ ತರ್ಹಿ ಪಟಚಿತ್ರವಜ್ಜಾಗ್ರದ್ವಾಸನಾಶ್ರಯಾ ದೃಶ್ಯೈವ ಧೀರ್ಭವತೀತಿ ನ ದ್ರಷ್ಟುಃ ಸ್ವಯಂಜ್ಯೋತಿಷ್ಟ್ವಬಾಧಃ ಸ್ಯಾತ್। ಕಿಂ ಚಾನ್ಯತ್। ಜಾಗ್ರತ್ಸ್ವಪ್ನಯೋರ್ಭೂತಾನಿ ಚ ಆತ್ಮಾನಂ ಚ ಜಾನಾತಿ ಇಮಾನಿ ಭೂತಾನಿ, ಅಯಮಹಮಸ್ಮಿ-ಇತಿ ಪ್ರಾಪ್ತೌ ಸತ್ಯಾಂ ಪ್ರತಿಷೇಧೋ ಯುಕ್ತಃ ಸ್ಯಾತ್ 'ನಾಹ ಖಲ್ವಯಮ್' ಇತ್ಯಾದಿ। ತಥಾ ಚೇತನಸ್ಯೈವ ಅವಿದ್ಯಾನಿಮಿತ್ತಯೋಃ ಸಶರೀರತ್ವೇ ಸತಿ ಪ್ರಿಯಾಪ್ರಿಯಯೋರಪಹತಿರ್ನಾಸ್ತಿ ಇತ್ಯುಕ್ತ್ವಾ ತಸ್ಯೈವಾಽಶರೀರಸ್ಯ ಸತೋ ವಿದ್ಯಾಯಾಂ ಸತ್ಯಾಂ ಸಶರೀರತ್ವೇ ಪ್ರಾಪ್ತಯೋಃ ಪ್ರತಿಷೇಧೋ ಯುಕ್ತಃ "ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (೮-೧೨-೧) ಇತಿ । ಏಕಶ್ಚಾಽಽತ್ಮಾ ಸ್ವಪ್ನಬುದ್ಧಾನ್ತಯೋರ್ಮಹಾಮತ್ಸ್ಯವದಸಙ್ಗಃ ಸಂಚರತೀತಿ ಶ್ರುತ್ಯನ್ತರೇ ಸಿದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ) :— ಸ್ವಪ್ನದಲ್ಲಿ ದ್ರಷ್ಟೃವನ್ನು ಉಪದೇಶಿಸಿಯೇ ಇಲ್ಲವಲ್ಲ !

(ಪರಿಹಾರ):—ಹಾಗಲ್ಲ. ಏಕೆಂದರೆ 'ಅಳುವಂತೆ ಇರುತ್ತಾನೆ', 'ಅಪ್ರಿಯ ವನ್ನು ಅನುಭವಿಸುವಂತೆ ಇರುತ್ತಾನೆ' (೮-೧೦-೪) ಎಂದು (ದ್ರಷ್ಟೃವನ್ನು)ಉಪ ದೇಶಿಸಿದೆ.[1] ದ್ರಷ್ಟೃವಿಗೆ ಬೇರೆಯಾದ ಮತ್ತೊಬ್ಬನು ಯಾರೂ ಸ್ವಪ್ನದಲ್ಲಿ ಮಹಿತ ನಾಗಿ ಚರಿಸುತ್ತಿರುವದಿಲ್ಲ.[2] ಏಕೆಂದರೆ "ಇಲ್ಲಿ ಈ ಪುರುಷನು ಸ್ವಯಂಜ್ಯೋತಿ ಯು" (ಬೃ. ೪-೩-೯) ಎಂದು ನ್ಯಾಯಪೂರ್ವಕವಾಗಿ ಬೇರೊಂದು ಶ್ರುತಿಯಲ್ಲಿ (ಅವನು ದ್ರಷ್ಟೃವೆಂದೇ) ಸಿದ್ಧವಾಗಿರುತ್ತದೆ. ಸ್ವಪ್ನದಲ್ಲಿ ಧೀಯುಕ್ತನಾಗಿರುತ್ತಾ ನೆಂಬುದು ನಿಜ [3] ಆದರೂ ಧೀಯು ಸ್ವಪ್ನದ ಭೋಗವನ್ನು ಅರಿಯುವದಕ್ಕೆ ಕರಣವಾಗಿರುವದಿಲ್ಲ, ಮತ್ತೇನೆಂದರೆ ಬಟ್ಟೆಯ ಚಿತ್ರದಂತೆ ಧೀಯು ಜಾಗ್ರದ್ವಾ ಸನೆಗೆ ಆಶ್ರಯವಾಗಿ[4] ದೃಶ್ಯನೇ ಆಗಿರುವದರಿಂದ ದ್ರಷ್ಟೃವಿನ ಸ್ವಯಂಜ್ಯೋತಿಷ್ಟ್ವ ಕ್ಕೆ (ಅದರಿಂದ) ಬಾಧಕವಾಗಿರುವದಿಲ್ಲ.[5]

ಇನ್ನೊಂದೇನೆಂದರೆ, ಜಾಗ್ರತ್ಸ್ವಪ್ನಗಳಲ್ಲಿ 'ಇವುಗಳು ಭೂತಗಳು, ನಾನು ಇಂಥವನು'- ಎಂದು ಭೂತಗಳನ್ನೂ ತನ್ನನ್ನೂ ಅರಿಯುತ್ತಿರುತ್ತಾನೆ ಎಂದು ಬಂದೊದಗಿದ್ದರೆ 'ಇವನು (ಈಗ) ' (೮-೧೧-೨) ಎಂದು ಮುಂತಾಗಿ (ಅಂಥ ಅರಿವನ್ನು) ಅಲ್ಲಗಳೆಯುವದು ಯುಕ್ತವಾಗುವದು [6] ಮತ್ತು ಚೇತನನಾಗಿರುವ (ಆತ್ಮ)ನಿಗೆ ಸಶರೀರತ್ವವಿರುವಲ್ಲಿ ಅವಿದ್ಯಾನಿಮಿತ್ತವಾದ 'ಪ್ರಿಯಾಪ್ರಿಯಗಳ ಅಪ ಹತಿಯಿರುವದಿಲ್ಲ' ಎಂದು ಹೇಳಿ ಅವನಿಗೇ ವಿದ್ಯೆಯು ಬರಲು ಅಶರೀರತ್ವವುಂಟಾ ದಾಗ -ಸಶರೀರತ್ವದಲ್ಲಿ ಪ್ರಾಪ್ತವಾಗಿದ್ದ (ಪ್ರಿಯಾಪ್ರಿಯಗಳ) 'ಅಶರೀರನಾಗಿರು ವವನನ್ನು ಪ್ರಿಯಾಪ್ರಿಯಗಳು ಸೋಂಕಲಾರವು' ಎಂದು ಅಲ್ಲಗಳೆಯುವದು ಯುಕ್ತವು [7] ಒಬ್ಬ ಆತ್ಮನೇ ಸ್ವಪ್ನಜಾಗ್ರದವಸ್ಥೆಗಳಲ್ಲಿ ಮಹಾಮತ್ಸ್ಯದಂತೆ

---

1 ಹಾಗಿಲ್ಲದಿದ್ದರೆ 'ಅಂತೆ' ಎಂದು ಹೇಳುತ್ತಿರಲಿಲ್ಲ

2 ಎರಡು ಅವಸ್ಥೆಗಳಿಗೂ ಸಮಾನನಾದ ಆತ್ಮನು ಮತ್ತೊಬ್ಬನಿಲ್ಲ, ಸ್ವಪ್ನದಲ್ಲಿ ವಾಸನಾಮಯಪ್ರಮಾತೃವೊಬ್ಬನೇ ಇರುತ್ತಾನೆ

3. ಬೃ. ಮಾ. ೪-೧-೭ರ ಪರಾಮರ್ಶವಿದು.

4. ಎಚ್ಚರದ ದೃಷ್ಟಿಯಿಂದ ಹೇಳಿದ್ದಿದು.

5 ಬೃ ಭಾ. ೪-೩-೯ (ಭಾ ಭಾ. ೧೮೬)ನ್ನು ನೋಡಿ.

6. ಸುಷುಪ್ತಿಯಲ್ಲಿ ಅರಿಯುವದಿಲ್ಲ ಎಂಬುದು ಮತ್ತೊಂದವಸ್ಥೆಯಲ್ಲಿ ಅರಿಯುತ್ತಾನೆ ಎಂಬುದನ್ನಿಟ್ಟುಕೊಂಡಿದೆ; ಹಾಗಿಲ್ಲದಿದ್ದರೆ ಅಪ್ರಾಪ್ತನಿಷೇಧವಾಗುತ್ತದೆ ಆದ್ದರಿಂದಲೂ ಒಬ್ಬನೇ ಆತ್ಮನನ್ನು ಇಲ್ಲಿ ಉಪದೇಶಿಸಿದೆ ಎನ್ನಬೇಕು.

7. ಅವಿದ್ಯೆಯಿಂದ ಸಶರೀರತ್ವ, ವಿದ್ಯೆಯಿಂದ ಅಶರೀರತ್ವ- ಎಂದಾದರೆ ಪ್ರಿಯಾ ಪ್ರಿಯನಿಷೇಧವು ಸರಿಯಾಗುತ್ತದೆ, ಇಲ್ಲದಿದ್ದರೆ ಅದೂ ಅಪ್ರಾಪ್ತನಿಷೇಧವೇ ಆಗುತ್ತದೆ.

ಅಸಂಗನಾಗಿ ಸಂಚರಿಸುತ್ತಿರುತ್ತಾನೆ ಎಂದು ಬೇರೊಂದು ಶ್ರುತಿಯಲ್ಲಿ ಸಿದ್ಧವಾಗಿರುತ್ತದೆ.[1]

## ತುರೀಯನು ಜೀವನಿಗಿಂತ ಬೇರೆಯಲ್ಲ

(ಭಾಷ್ಯ)

೬೭೪   ಯಚ್ಚೋಕ್ತಂ ಸಂಪ್ರಸಾದಃ ಶರೀರಾತ್ ಸಮುತ್ಥಾಯ ಯಸ್ಮಿನ್ ಸ್ತ್ರ್ಯಾದಿಭಿಃ ರಮಮಾಣೋ ಭವತಿ ಸೋಽನ್ಯಃ ಸಂಪ್ರಸಾದಾತ್ ಅಧಿಕರಣನಿರ್ದಿಷ್ಟ ಉತ್ತಮಃ ಪುರುಷ ಇತಿ । ತದಸ್ಯಸತ್ । ಚತುರ್ಥೇಽಪಿ ಪರ್ಯಾಯೇ ಏತಂ ತ್ವೇವ ತ ಇತಿ ವಚನಾತ್ । ಯದಿ ತತೋಽನ್ಯೋಽಭಿಪ್ರೇತಃ ಸ್ಯಾತ್ । ಪೂರ್ವವದೇತಂ ತ್ವೇವ ತ ಇತಿ ನ ಬ್ರೂಯಾನ್ಮೃಷಾ ಪ್ರಜಾಪತಿಃ। ಕಿಂಚಾನ್ಯತ್ । ತೇಜೋಽಬನ್ನಾದೀನಾಂ ಸ್ರಷ್ಟುಃ ಸತಃ ಸ್ವವಿಕಾರದೇಹಶುಙ್ಗೇ ಪ್ರವೇಶಂ ದರ್ಶಯಿತ್ವಾ ಪ ವಿಷ್ಟಾಯ ಪುನಸ್ತತ್ತ್ವಮಸಿ ಇತ್ಯುಪದೇಶೋ ಮೃಷಾ ಪ್ರಸಜ್ಯೇತ । 'ತಸ್ಮಿನ್ ತ್ವಂ ಸ್ತ್ರ್ಯಾದಿಭೀ ರನ್ತಾ ಭವಿಷ್ಯಸಿ' ಇತಿ ಯುಕ್ತ ಉಪದೇಶೋಽಭವಿಷ್ಯತ್ ಯದಿ ಸಂಪ್ರಸಾದಾತ್ ಅನ್ಯ ಉತ್ತಮಃ ಪುರುಷೋ ಭವೇತ್ । ತಥಾ ಭೂಮ್ನಿ 'ಅಹಮೇವ' (೭-೨೫-೨) ಇತ್ಯಾದಿಶ್ಯ "ಆತ್ಮೈವೇದಂ ಸರ್ವಮ್" ಇತಿ ನೋಪಸಮಹರಿಷ್ಯದ್ ಯದಿ ಭೂಮಾ ಜೀವಾದನ್ಯೋಽಭವಿಷ್ಯತ್ । "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩) ಇತ್ಯಾದಿಶ್ರುತ್ಯನ್ತರಾಚ್ಚ । ಸರ್ವಶ್ರುತಿಷು ಚ ಪರಸ್ಮಿನ್ ಆತ್ಮಶಬ್ದಪ್ರಯೋಗೋ ನಾಭವಿಷ್ಯತ್ ಪ್ರತ್ಯಗಾತ್ಮಾ ಚೇತ್ ಸರ್ವಜನ್ತೂನಾಂ ಪರ ಆತ್ಮಾ ನ ಭವೇತ್ । ತಸ್ಮಾತ್, ಏಕ ಏವ ಆತ್ಮಾ ಪ್ರಕರಣೇ ಸಿದ್ಧಃ ॥

(ಭಾಷ್ಯಾರ್ಥ)

ಇನ್ನು ಸಂಪ್ರಸಾದನು ಶರೀರವನ್ನು ಬಿಟ್ಟೆದ್ದು ಯಾವನಲ್ಲಿ ಸ್ತ್ರ್ಯಾದಿಗಳೊಡನೆ ರಮಿಸುತ್ತಾ ಇರುವನೋ ಆ (ತುರೀಯನು) ಸಂಪ್ರಸಾದನಿಗಿಂತ ಬೇರೆ, (ಅವನನ್ನೇ 'ಅವನಲ್ಲಿ' ಎಂದು) ಅಧಿಕರಣ(ವಾಗಿ) ತಿಳಿಸಿರುವ ಉತ್ತಮಪುರುಷನು -ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದೂ ಸರಿಯಲ್ಲ. ಏಕೆಂದರೆ ನಾಲ್ಕನೆಯ ಪರ್ಯಾಯದಲ್ಲಿಯೂ "ಇವನನ್ನೇ ನಿನಗೆ (ವಿವರಿಸಿ ಹೇಳುವೆನು)" (೮-೧೧-೩) ಎಂದು ಹೇಳಿರುತ್ತದೆ. ಆ (ಸಂಪ್ರಸಾದನಿಗಿಂತ) ಬೇರೆ ಯಾವನೊಬ್ಬನು (ಪ್ರಜಾಪತಿಗೆ) ಅಭಿಪ್ರೇತನಾಗಿದ್ದಿದ್ದರೆ ಮೊದಲು 'ಇವನನ್ನೇ ನಿನಗೆ

1. ಬೃ. ೪-೩-೧೮ಅನ್ನು ನೋಡಿ. ಇದರಿಂದಲೂ ಜಾಗ್ರತ್ತಿನಲ್ಲಿ ಹೇಳಿದ ಆತ್ಮನನ್ನೇ ಸ್ವಪ್ನದಲ್ಲಿ ಹೇಳಿವೆಯೆಂದೂ ಸುಷುಪ್ತಿಯಲ್ಲಿ ಅವನಿಗೇ ಅಜ್ಞಾನವನ್ನು ಹೇಳಿದೆಯೆಂದೂ ತುರೀಯನಾದ ಅವನಿಗೆ ಪ್ರಿಯಾಪ್ರಿಯಗಳ ಸಂಬಂಧವನ್ನು ಅಲ್ಲಗಳೆದಿದೆಯೆಂದೂ ಆಗುತ್ತದೆ ಎಂದು ಭಾವ.

(ಹೇಳುವೆನು)' ಎಂದು ಪ್ರಜಾಪತಿಯು ಸುಳ್ಳುಸುಳ್ಳೇ ಹೇಳುತ್ತಿರಲಿಲ್ಲ.[1] ಇನ್ನೂ ಒಂದು ಮಾತು. ತೇಜೋಬನ್ನಗಳನ್ನು ಸೃಷ್ಟಿಸಿದ ಸತ್ತು ತನ್ನ ವಿಕಾರವಾದ ದೇಹಶುಂಗದಲ್ಲಿ ಪ್ರವೇಶಮಾಡಿತೆಂದು ತಿಳಿಸಿ (ಹಾಗೆ) ಪ್ರವೇಶಮಾಡಿದ (ಶ್ವೇತಕೇತುವಿನ ರೂಪದ ಆತ್ಮನಿಗೆ) 'ಅದೇ ನೀನಾಗಿರುವೆ' ಎಂದು ಹೇಳಿರುವ ಉಪದೇಶವೂ ಸುಳ್ಳಾಗಬೇಕಾಗುವದು.[2] ಆ (ಸತ್ತಿನಲ್ಲಿ) ನೀನು ಸ್ತ್ರೀಯರೇ ಮುಂತಾದವರೊಡನೆ ರಮಿಸುತ್ತಿರುವೆ ಎಂದು ಉಪದೇಶಿಸುವದೇ- ಸಂಪ್ರಸಾದನಿಗಿಂತ ಉತ್ತಮಪುರುಷನು ಅನ್ಯನಾಗಿದ್ದಿದ್ದರೆ- ಯುಕ್ತವಾಗುತ್ತಿತ್ತು[3], ಮತ್ತು ಭೂಮದ (ವಿಷಯ)ದಲ್ಲಿ "ನಾನೇ (ಕೆಳಗೆ)''(೭-೨೫-೧) ಎಂದು ಹೇಳಿಕೊಟ್ಟು "ಇದೆಲ್ಲವೂ ಆತ್ಮನೇ'' (೭-೨೫-೨) ಎಂದು - ಭೂಮವು ಜೀವನಿಗಿಂತ ಬೇರೆಯಾಗಿದ್ದಿದ್ದರೆ- ಉಪಸಂಹಾರಮಾಡುತ್ತಿರಲಿಲ್ಲ.[4] "ಇವನಿಗಿಂತ ಬೇರೆ ದ್ರಷ್ಟೃವಿಲ್ಲ'' ( ಬೃ. ೩-೭-೨೩) ಎಂದು ಮುಂತಾಗಿ ಬೇರೊಂದು ಶ್ರುತಿಯಿಂದಲೂ ಹೀಗೆಂದೇ ಸಿದ್ಧವಾಗುತ್ತದೆ. ಸರ್ವಪ್ರಾಣಿಗಳ ಪ್ರತ್ಯಗಾತ್ಮನೂ ಪರಮಾತ್ಮನೇ ಆಗಿರದಿದ್ದರೆ ಸರ್ವಶ್ರುತಿಗಳಲ್ಲಿಯೂ ಪರ(ಬ್ರಹ್ಮ)ದಲ್ಲಿ ಆತ್ಮಶಬ್ದವನ್ನು ಪ್ರಯೋಗಿಸುತ್ತಿರಲಿಲ್ಲ.[5] ಆದ್ದರಿಂದ (ಈ) ಪ್ರಕರಣದಲ್ಲಿ (ಹೇಳಿರುವವನು) ಒಬ್ಬನೇ ಆತ್ಮನು- ಎಂದು ಸಿದ್ಧವಾಯಿತು.[6]

---

1. ಮೊದಲಿಂದ ಕೊನೆಯವರೆಗೂ ಒಬ್ಬ ಆತ್ಮನನ್ನೇ ಹೇಳಿರುತ್ತಾನೆ ಎಂಬುದಕ್ಕೆ ಇದೊಂದು ಮುಖ್ಯಗಮಕವು

2 ಜೀವನು ಬೇರೆ, ಪರಮಾತ್ಮನು ಬೇರೆ- ಎಂಬವರ ಪಕ್ಷದಲ್ಲಿ ಶರೀರಪ್ರವೇಶವನ್ನು ಮಾಡಿದ ಮೇಲೆ ಆಗಿರುವ ಜೀವನು ಪರಮಾತ್ಮನಲ್ಲ, ಆದ್ದರಿಂದ ಅವನಿಗೆ "ಅದೇ ನೀನಾಗಿರುವೆ" ಎಂದು ಉಪದೇಶಿಸುವದು ತಪ್ಪಾಗುವದು.

3. "ಈಗ ಆಗಿರುವೆ'' ಎನ್ನಬಾರದು, ನೀನು ಸತ್ತ ಬಳಿಕ ಸದ್ಬ್ರಹ್ಮದಲ್ಲಿದ್ದುಕೊಂಡು ಕ್ರೀಡಿಸುತ್ತಿರುವೆ- ಎಂದು ಹೇಳಬೇಕಾಗುವದು. ಆದ್ದರಿಂದ ೮-೧೨-೩ರಲ್ಲಿ 'ತತ್ರ' ಎಂದರೆ ಅವನಲ್ಲಿ ಎಂದರ್ಥವಲ್ಲ, ಸರ್ವಾತ್ಮನಾದ ತನ್ನ ಸ್ವರೂಪದಲ್ಲಿ ಎಂದೇ ಅರ್ಥ.

4. ಭೂಮವೂ ಆತ್ಮನೂ ಒಬ್ಬನೇ ಆದರೇ ಹೀಗೆ ಉಪಸಂಹಾರಮಾಡಿದ್ದು ಸರಿಯೆಂದಾಗುವದು.

5. ಬ್ರಹ್ಮವನ್ನು ಆತ್ಮನೆಂಬ ಶಬ್ದದಿಂದ ಕರೆದಿರುವದೂ ಒಂದು ಗಮಕ, ಏಕೆಂದರೆ ಬ್ರಹ್ಮವೂ ಪ್ರತ್ಯಗಾತ್ಮನೂ ಬೇರೆಯಾಗಿದ್ದರೆ ಶ್ರುತಿ ಹೀಗೆಂದು ಕರೆಯುತ್ತಿರಲಿಲ್ಲ ಬೃ.ಭಾ. ೨-೧-೨೦ (ಭಾ. ೪೨ ೩೧೧) ನೋಡಿ.

6. ನಮ್ಮ ಆತ್ಮನೇ ನಿಜವಾಗಿ ಪರಮಾರ್ಥವಾಗಿ ಅಪಹತಪಾಪ್ಮನಾಗಿದ್ದಾನೆ ಎಂಬುದನ್ನು ತಿಳಿಸುವದಕ್ಕೇ ಚಕ್ಷುಷಿ ಪುರುಷಃ ಎಂಬಲ್ಲಿಂದ ಉತ್ತಮಪುರುಷನವರೆಗೂ ಹೇಳಿದೆ, ಬೇರೆ ಬೇರೆ ಆತ್ಮರನ್ನು ಇಲ್ಲಿ ಹೇಳಿಲ್ಲ ಎಂದರ್ಥ.

## ಆತ್ಮನಲ್ಲಿ ಸಂಸಾರಿತ್ವವು ಕಲ್ಪಿತವಾಗಿದೆ

(ಭಾಷ್ಯ)

೬೭೫. ನ ಚಾಽಽತ್ಮನಃ ಸಂಸಾರಿತ್ವಮ್ । ಅವಿದ್ಯಾಧ್ಯಸ್ತತ್ವಾದಾತ್ಮನಿ ಸಂಸಾರಸ್ಯ । ನ ಹಿ ರಜ್ಜುಶುಕ್ತಿಕಾಗಗನಾದಿಷು ಸರ್ಪರಜತಮಲಾದೀನಿ ಮಿಥ್ಯಾಜ್ಞಾನಾಧ್ಯಸ್ತಾನಿ ತೇಷಾಂ ಭವನ್ತೀತಿ । ಏತೇನ ಸಶರೀರಸ್ಯ ಪ್ರಿಯಾಪ್ರಿಯಯೋರಪಹತಿರ್ನಾಸ್ತೀತಿ ವ್ಯಾಖ್ಯಾತಮ್ । ಯಚ್ಚ ಸ್ಥಿತಮ್ ಅಪ್ರಿಯವೇತ್ತೇವೇತಿ (೮-೧೦-೪) ನಾಪ್ರಿಯವೇತ್ತೈವೇತಿ ಸಿದ್ಧಮ್ । ಏವಂ ಚ ಸತಿ ಸರ್ವಪರ್ಯಾಯೇಷು 'ಏತದಮೃತಮಭಯಮೇತದ್ ಬ್ರಹ್ಮ' ಇತಿ ಪ್ರಜಾಪತೇರ್ವಚನಮ್, ಯದಿ ವಾ ಪ್ರಜಾಪತಿಚ್ಛದ್ಮರೂಪಾಯಾಃ ಶ್ರುತೇರ್ವಚನಂ ಸತ್ಯಮೇವ ಭವೇತ್ । ನ ಚ ತತ್ ಕುತರ್ಕಬುದ್ಧ್ಯಾ ಮೃಷಾಕರ್ತುಂ ಯುಕ್ತಮ್ । ತತೋ ಗುರುತರಸ್ಯ ಪ್ರಮಾಣಾನ್ತರಸ್ಯಾನುಪಪತ್ತೇಃ । ನನು ಪ್ರತ್ಯಕ್ಷಂ ದುಃಖಾದ್ಯಪ್ರಿಯವೇತ್ತೃತ್ವಮ್ ಅವ್ಯಭಿಚಾರ್ಯನುಭೂಯತ ಇತಿ ಚೇತ್ । ನ । ಜರಾದಿರಹಿತೋ[1] ಜೀರ್ಣೋಽಹಂ ಜಾತೋಽಹಮ್ ಆಯುಷ್ಮಾನ್ ಗೌರಃ ಕೃಷ್ಣೋ ಮೃತ ಇತ್ಯಾದಿ ಪ್ರತ್ಯಕ್ಷಾನುಭವವತ್ ತದುಪಪತ್ತೇಃ । ಸರ್ವಮಸ್ಯೇತತ್ ಸತ್ಯಮಿತಿ ಚೇತ್ । ಅಸ್ತ್ಯೇವೈತದೇವಂ ದುರವಗಮಮ್ । ಯೇನ ದೇವರಾಜೋಽಪ್ಯುದಶರಾವಾದಿದರ್ಶಿತಾವಿನಾಶಯುಕ್ತಿರಪಿ ಮುಮೋಹೈವಾತ್ರ ವಿನಾಶಮೇವಾಽಪೀತೋ ಭವತೀತಿ । ತಥಾ ವಿರೋಚನೋ ಮಹಾಪ್ರಾಜ್ಞಃ ಪ್ರಾಜಾಪತ್ಯೋಽಪಿ ದೇಹಮಾತ್ರಾತ್ಮದರ್ಶನೋ ಬಭೂವ । ತಥಾ ಇನ್ದ್ರಸ್ಯ ಆತ್ಮವಿನಾಶಭಯಸಾಗರ ಏವ ವೈನಾಶಿಕಾ ನ್ಯಮಜ್ಜನ್ । ತಥಾ ಸಾಂಖ್ಯಾ ದ್ರಷ್ಟಾರಂ ದೇಹಾದಿವ್ಯತಿರಿಕ್ತಮವಗಮ್ಯಾಪಿ ತ್ಯಕ್ತಾಗಮಪ್ರಮಾಣತ್ವಾತ್ ಮೃತ್ಯುವಿಷಯ ಏವ ಅನ್ಯತ್ವದರ್ಶನೇ ತಸ್ಥುಃ । ತಥಾಽನ್ಯೇ ಕಾಣಾದಾದಿದರ್ಶನಾಃ ಕಷಾಯರಕ್ತಮಿವ ಕ್ಷಾರಾದಿಭಿರ್ವಸ್ತ್ರಂ ನವಭಿರಾತ್ಮಗುಣೈರ್ಯುಕ್ತಮ್ ಆತ್ಮದ್ರವ್ಯಂ ವಿಶೋಧಯಿತುಂ ಪ್ರವೃತ್ತಾಃ । ತಥಾ ಅನ್ಯೇ ಕರ್ಮಿಣೋ ಬಾಹ್ಯವಿಷಯಾಪಹೃತಚೇತಸೋ ವೇದಪ್ರಮಾಣಾ ಅಪಿ ಪರಮಾರ್ಥಸತ್ಯಮ್ ಆತ್ಮೈಕತ್ವಂ ಸ್ವವಿನಾಶಮಿವ[2] ಇನ್ದ್ರವನ್ಮನ್ಯಮಾನಾಃ ಘಟೀಯನ್ತ್ರವದ್ ಆರೋಹಾವರೋಹಪ್ರಕಾರೈರನಿಶಂ ಬಮ್ಭ್ರಮತಿ । ಕಿಮನ್ಯೇ ಕ್ಷುದ್ರಜನ್ತವೋ ವಿವೇಕಹೀನಾಃ ಸ್ವಭಾವತ ಏವ ಬಹಿರ್ವಿಷಯಾಪಹೃತಚೇತಸಃ । ತಸ್ಮಾದಿದಂ ತ್ಯಕ್ತಸರ್ವಬಾಹ್ಯೈ

---

1. ಈ ವಿಶೇಷಣವು ಇಲ್ಲಿಲ್ಲದಿದ್ದರೂ ಆಗುತ್ತಿತ್ತೆಂದು ಕಾಣುತ್ತದೆ. ಅನುವಾದದ ಟಿಪ್ಪಣಿಯನ್ನು ನೋಡಿ.

2. 'ಸ್ವ' ಎಂಬ ಮಾತನ್ನು ಸೇರಿಸಿಕೊಂಡಿದೆ; ಪಾ ಪಾಠದ ಸವಿನಾಶಮಿವ ಎಂಬುದಕ್ಕಿಂತ ಇದು ಮೇಲು. ಅನುವಾದದ ಟಿಪ್ಪಣಿಯನ್ನು ನೋಡಿ

ಷಣ್ಯೈರನನ್ಯಶರಣ್ಯೈಃ ಪರಮಹಂಸಪಾರಿವ್ರಾಜಕ್ಯೈರತ್ಯಾಶ್ರಮಿಭಿರ್ವೇದಾನ್ತವಿಜ್ಞಾನಪರ್ಯೈರೇವ ವೇದನೀಯಂ ಪೂಜ್ಯತಮೈಃ ಪ್ರಾಜಾಪತ್ಯಂ ಚೇಮಂ ಸಂಪ್ರದಾಯಮ್ ಅನುಸರದ್ಭಿರುಪನಿಬದ್ಧಂ ಪ್ರಕರಣಚತುಷ್ಟಯೇನ । ತಥಾಽನುಶಾಸತ್ಯದ್ಯಾಪಿ ತ ಏವ ನಾನ್ಯ ಇತಿ ॥

(ಭಾಷ್ಯಾರ್ಥ)

ಆತ್ಮನಿಗೆ ಸಂಸಾರಿತ್ವವೂ (ನಿಜವಾಗಿ) ಇಲ್ಲ.[1] ಏಕೆಂದರೆ ಸಂಸಾರವು ಆತ್ಮನಲ್ಲಿ ಅವಿದ್ಯೆಯಿಂದ ಅಧ್ಯಸ್ತವಾಗಿರುತ್ತದೆ.[2] ಹಗ್ಗ, ಕಪ್ಪೆಯ ಚಿಪ್ಪು, ಆಕಾಶ- ಮುಂತಾದವುಗಳಲ್ಲಿ ಮಿಥ್ಯಾಜ್ಞಾನದಿಂದ ಅಧ್ಯಸ್ತವಾದ ಹಾವು, ಬೆಳ್ಳಿ, ಕಲ್ಮಷ- ಮುಂತಾದವು ಅವುಗಳಿಗೆ ಆಗುವದಿಲ್ಲವಷ್ಟೆ.[3] ಇದರಿಂದ ಸಶರೀರನಾದವನಿಗೆ ಪ್ರಿಯಾಪ್ರಿಯಗಳ ಅಪಹತಿಯಿಲ್ಲ- ಎಂಬ (ವಾಕ್ಯದ ಅರ್ಥವನ್ನು) ವಿವರಿಸಿ ಹೇಳಿದಂತೆ ಆಯಿತು.[4] "ಅಪ್ರಿಯವನ್ನು ಅನುಭವಿಸುವವನಂತೆ ಇರುತ್ತಾನೆ" (೮-೧೦-೪) ಎಂದಿತ್ತಲ್ಲ, (ಅಲ್ಲಿ ನಿಜವಾಗಿ) ಅಪ್ರಿಯವನ್ನು ಅನುಭವಿಸುವವನೇ ಅಲ್ಲ- ಎಂದೂ ಸಿದ್ಧವಾಯಿತು. ಹೀಗಿರುವದರಿಂದ ಎಲ್ಲಾ ಪರ್ಯಾಯಗಳಲ್ಲಿಯೂ 'ಇದು ಅಮೃತವು, ಅಭಯವು, ಇದು ಬ್ರಹ್ಮವು' ಎಂಬ ಪ್ರಜಾಪತಿಯ ವಚನವು ಅಥವಾ ಪ್ರಜಾಪತಿಯ ನೆಪದ ರೂಪದಲ್ಲಿರುವ ಶ್ರುತಿಯ ವಚನವು[5], ಸತ್ಯವೇ ಆಗುವದು. ಅದನ್ನು ಕುತರ್ಕಬುದ್ಧಿಯಿಂದ ಸುಳ್ಳುಮಾಡುವದು ಯುಕ್ತವಲ್ಲ, ಏಕೆಂದರೆ ಆ (ಶ್ರುತಿಗಿಂತ) ಹೆಚ್ಚಿನ ಪ್ರಮಾಣವೇ ಇರುವದಿಲ್ಲ.[6]

---

1 ಎಲ್ಲಾ ಅವಸ್ಥೆಗಳಲ್ಲಿಯೂ ಪರಮಾತ್ಮನನ್ನೇ ಹೇಳಿದೆಯೆಂದರೆ ಪರಮಾತ್ಮನಿಗೇ ಸಂಸಾರಿತ್ವವೆಂಬ ವಿರೋಧವಾಗುವದಲ್ಲ !- ಎಂಬ ಶಂಕೆಗೆ ಪರಿಹಾರವಿದು.

2. ಜೀವತ್ವವು ಅಧ್ಯಸ್ತವಾಗಿದೆ, ಜೀವನು ನಿಜವಾಗಿ ಪರಮಾತ್ಮನೇ- ಎಂದು ಭಾವ. ಈ ವಿಷಯಕ್ಕೆ ಸೂ ಭಾ. ೧-೩-೧೯ (ಭಾ. ಭಾ. ೨೬೭)ನ್ನು ನೋಡಿ.

3. ಅಧ್ಯಸ್ತದ ಗುಣವು ಅಥವಾ ದೋಷವು ಯಾವದರಲ್ಲಿ ಅಧ್ಯಸ್ತವಾಗಿದೆಯೋ ಆ ಆಸ್ಪದಕ್ಕೆ ಆಗುವದಿಲ್ಲ ಎಂದು ಭಾವ. ಸೂ. ಅಧ್ಯಾಸಭಾಷ್ಯ, (ಭಾ.ಭಾ. ೪ )ವನ್ನು ನೋಡಿ.

4. ಸಶರೀರತ್ವವೂ ಪ್ರಿಯಾಪ್ರಿಯಗಳೂ ಅಧ್ಯಸ್ತವಾಗಿವೆ, ಅಧ್ಯಾಸದಶೆಯಲ್ಲಿ ಅವು ತಪ್ಪವು ಎಂದು ಆ ವಾಕ್ಯಕ್ಕೆ ಅರ್ಥವೆಂದು ಭಾವ.

5. ಶ್ರುತಿಯೇ ಇಂದ್ರಪ್ರಜಾಪತಿಸಂವಾದರೂಪದಿಂದ ಹೀಗೆ ಉಪದೇಶಿಸಿದೆ- ಎಂದರಿಯಬೇಕು. ಏಕೆಂದರೆ ಶ್ರುತಿಯು ಅಪೌರುಷೇಯ- ಎಂದು ಭಾವ.

6. ಶ್ರುತಿಯು ಜೀವನ ಪರಮಾತ್ಮತ್ವವನ್ನೇ ಕಳೆಯುವದರಿಂದ ಪ್ರಮಾಣವ್ಯವಹಾರವನ್ನೇ ಕಳೆಯುವ ಅಂತ್ಯಪ್ರಮಾಣವಾಗಿದೆ, ಗೀ. ಭಾ. ೨-೬೯ (ಭಾ ಭಾ ೧೨೯)ವನ್ನು ನೋಡಿ.

(ಆಕ್ಷೇಪ) :– ಪ್ರತ್ಯಕ್ಷವಾಗಿ ದುಃಖವೇ ಮುಂತಾದ ಅಪ್ರಿಯವನ್ನು ಅನುಭವಿಸುವದು, ತಪ್ಪದೆ ಅನುಭವಕ್ಕೆ ಬರುತ್ತಿದೆಯಲ್ಲ[1] !

(ಪರಿಹಾರ) :– ಹಾಗಲ್ಲ. ಮುಪ್ಪು ಮುಂತಾದದ್ದಿಲ್ಲದವನು,[2] ನಾನು ಮುದುಕನಾದನು, ಹುಟ್ಟಿದೆನು, ಆಯುಷ್ಮಂತನು, ಬೆಳ್ಳಗಿರುವವನು, ಕಪ್ಪಗಿರುವವನು, ಸತ್ತೆನು'–ಎಂದು ಮುಂತಾಗಿರುವ ಪ್ರತ್ಯಕ್ಷಾನುಭವದಂತೆಯೇ ಆ ಅನುಭವವೂ ಇರಬಹುದಾಗಿದೆ.[3]

(ಆಕ್ಷೇಪ) :– ಇದೆಲ್ಲವೂ ಸತ್ಯವೇ ಅಲ್ಲವೆ ?

(ಪರಿಹಾರ) :– ಇದು ಹೀಗೆ ದುರ್ಜ್ಞೇಯವಾಗಿ ಇದ್ದೇ ಇದೆ.[4] ಏಕೆಂದರೆ ದೇವತೆಗಳ ರಾಜನುಕೂಡ[5] ಸೇರಿನ ಶ್ರಾವೆಯೇ ಮುಂತಾದದ್ದರಿಂದ (ಆತ್ಮನಿಗೆ) ವಿನಾಶವಿಲ್ಲವೆಂದು ಯುಕ್ತಿಯಿಂದ ತಿಳಿಸಿಕೊಟ್ಟಮೇಲೂ 'ವಿನಾಶವನ್ನೇ ಹೊಂದಿದವನಾಗುತ್ತಾನೆ' (೮-೧೧-೩) ಎಂಬ ಈ (ವಿಷಯದಲ್ಲಿ) ಮೋಹವನ್ನು ಪಡೆದಿದ್ದನು. ಹೀಗೆಯೇ ವಿರೋಚನನು ಮಹಾಪ್ರಾಜ್ಞನೂ ಪ್ರಜಾಪತಿಯ ವಂಶದವನೂ ಆದರೂ ದೇಹಮಾತ್ರವೇ ಆತ್ಮನೆಂದು ತಿಳಿದುಕೊಂಡವನಾದನು. (ಮತ್ತು) ಹೀಗೆಯೇ ಇಂದ್ರನಂತೆ ಆತ್ಮನು ನಾಶವಾಗುವನೆಂಬ ಭಯಸಾಗರದಲ್ಲಿಯೇ **ವೈನಾಶಿಕರು** ಮುಳುಗಿದರು.[6] ಇದರಂತೆ **ಸಾಂಖ್ಯರು** ದ್ರಷ್ಟೃವು ದೇಹಕ್ಕಿಂತ ವ್ಯತಿರಿಕ್ತನೆಂದು ಗೊತ್ತುಮಾಡಿಕೊಂಡಮೇಲೂ ಆಗಮಪ್ರಮಾಣ

---

1. ಯಾರಿಗೂ ಕನಸಿನಲ್ಲಿ ಅಪ್ರಿಯವೇತ್ತೃತ್ವವು ತಪ್ಪಿದ್ದಲ್ಲ ; ಆದ್ದರಿಂದ ಸ್ವಪ್ನಾತ್ಮನು ಅಪಹತಪಾಪ್ಮನೆಂಬುದು ಪ್ರತ್ಯಕ್ಷವಿರುದ್ಧ– ಎಂದು ಆಕ್ಷೇಪಕನ ಭಾವ.

2. ಈ ವಿಶೇಷಣವು ಇಲ್ಲಿ ಬೇಕಿಲ್ಲವೆಂದು ತೋರುತ್ತದೆ, ಏಕೆಂದರೆ ದೇಹಧರ್ಮಗಳನ್ನು ಅಧ್ಯಾಸಮಾಡಿಕೊಂಡ ಪ್ರತ್ಯಕ್ಷಾನುಭವದಂತೆ ದುಃಖಿತ್ವಾದಿಗಳ ಪ್ರತ್ಯಕ್ಷಾನುಭವವೂ ಆಭಾಸವೆಂಬುದೇ ಪ್ರಕೃತಕ್ಕೆ ಬೇಕಾಗಿದೆ.

3. ಆಭಾಸವಾಗಿರಬಹುದಾಗಿದೆ ಎಂದರ್ಥ. ಶ್ರುತಿಯು ಸುಷುಪ್ತ್ಯನುಭವದಿಂದ ದುಃಖಿತ್ವಾದಿಗಳ ವ್ಯಭಿಚಾರವನ್ನು ತೋರಿಸುತ್ತಿದೆ. ಆದ್ದರಿಂದ ಅವ್ಯಭಿಚರಿತವಾಗಿರುವ ಆತ್ಮಸ್ವರೂಪಕ್ಕೆ ದುಃಖಿತ್ವಾದಿಗಳು ಅಂಟುವದಿಲ್ಲವೆಂಬುದೇ ಯುಕ್ತ. ದೇಹಧರ್ಮದಂತೆ ಮನಸ್ಸಿನ ಧರ್ಮಗಳೂ ಅಧ್ಯಸ್ತವೆಂಬುದಕ್ಕೆ ಗೀ. ಭಾ. ೧೩–೨ (ಭಾ. ಭಾ. ೨೧೫) ವನ್ನು ನೋಡಿ. ದುಃಖಿತ್ವ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತಿರುವದರಿಂದಲೇ ಅನುಭವಿತೃವಾದ ಆತ್ಮನ ಧರ್ಮವಲ್ಲ ಎಂಬ ಯುಕ್ತಿಯನ್ನು ತೈ. ಭಾ. ೩–೧೦ (ಭಾ. ಭಾ ೨೫೨) ಸೂ. ಭಾ. ೪–೧–೨ (ಭಾ. ಭಾ. ೫೦೭)– ಇವುಗಳಲ್ಲಿ ಕಾಣಬಹುದು. ದುಃಖಿತ್ವಾದಿಗಳು ಕಲ್ಪಿತಾತ್ಮನ ವಿಷಯವೆಂಬುದನ್ನು ಬೃ. ಭಾ. ೧–೪–೭ (ಭಾ. ಭಾ. ೧೨೫)ರಲ್ಲಿ ಹೇಳಿದೆ.

4. ಅಂತಃಕರಣದೋಷದಿಂದ ಹೀಗೆ ದುಃಖಿತ್ವಾದಿಗಳಲ್ಲಿ ಸತ್ಯತ್ವಬುದ್ಧಿಯುಂಟಾಗುವದು ಸ್ವಾಭಾವಿಕವೆಂದರ್ಥ.

5. ದೇವತೆಗಳಿಗೆ ಚಿತ್ತವು ಹೆಚ್ಚು ನಿರ್ಮಲವಾಗಿರುತ್ತದೆಯಾದರೂ.

6. ಏಕೆಂದರೆ ಅವರು ಕ್ಷಣಿಕವಿಜ್ಞಾನವಾದವನ್ನೂ ಶೂನ್ಯವಾದವನ್ನೂ ಅಂಗೀಕರಿಸಿದರು.

ವನ್ನು ಬಿಟ್ಟಿದ್ದರಿಂದ ಮೃತ್ಯುವಿಷಯವಾದ ಅನ್ಯತ್ವದರ್ಶನದಲ್ಲಿಯೇ ನಿಂತರು.[1] ಮತ್ತು ಬೇರೆಯವರಾದ **ಕಾಣಾದಾದಿ**ದರ್ಶನದವರು ಕಷಾಯದಿಂದ ರಂಗು ಬಳಿದ ಬಟ್ಟೆಯನ್ನು ಕ್ಷಾರವೇ ಮುಂತಾದವುಗಳಿಂದ (ತೊಳೆಯುವದಕ್ಕೆ ಹೋಗುವಂತೆ) ಒಂಬತ್ತು ಆತ್ಮಗುಣಗಳಿಂದ[2] ಕೂಡಿದ ಆತ್ಮದ್ರವ್ಯವನ್ನು ವಿಶುದ್ಧಿಗೊಳಿಸುವದಕ್ಕೆ ಪ್ರಯತ್ನಪಟ್ಟರು[3] ಮತ್ತು ಬೇರೆಯವರಾದ ಕರ್ಮಿಗಳೂ ವೇದಪ್ರಮಾಣವನ್ನು (ಇಟ್ಟುಕೊಂಡಿರು)ವವರಾದರೂ[4] ಹೊರಗಿನ ವಿಷಯಗಳಿಂದ ಅಪಹೃತವಾದ ಚಿತ್ತವುಳ್ಳವರಾದ್ದರಿಂದ ಪರಮಾರ್ಥಸತ್ಯವಾದ ಆತ್ಮೈಕ್ಯವು ತಮ್ಮ ವಿನಾಶವೇ ಎಂದು[5] ಇಂದ್ರನಂತೆ ಬಗೆದು, (ನೀರಿನ) ಯಾತದಂತೆ ಏರಿಳಿತದ ಪ್ರಕಾರದಿಂದ ಯಾವಾಗಲೂ ತೊಳಲುತ್ತಿರುವರು[6] ಇನ್ನು ಸ್ವಭಾವದಿಂದಲೇ ಹೊರಗಿನ ವಿಷಯಗಳಿಂದ ಅಪಹೃತರಾದ ಚಿತ್ತವುಳ್ಳವರಾಗಿ ವಿವೇಕಹೀನರಾದ ಮಿಕ್ಕ ಅಲ್ಪಜೀವರುಗಳ (ವಿಷಯದಲ್ಲಿ ಹೇಳ)ತಕ್ಕದ್ದೇನಿದೆ ?

ಆದ್ದರಿಂದ **ಎಲ್ಲಾ ಹೊರಗಿನ ಏಷಣೆಗಳನ್ನೂ ತ್ಯಾಗಮಾಡಿದ, ಮತ್ತೊಂದನ್ನು ಶರಣುಹೊಂದದಿರುವ, ಪರಮಹಂಸಪರಿವ್ರಾಜಕರಾದ, ಅತ್ಯಾಶ್ರಮಿಗಳಾದ, ವೇದಾಂತವಿಜ್ಞಾನದಲ್ಲಿಯೇ ತಾತ್ಪರ್ಯವುಳ್ಳವರಿಗೇ ಇದು ತಿಳಿಯಬರತಕ್ಕದ್ದು, ಮತ್ತು ಈ ಪ್ರಾಜಾಪತ್ಯಸಂಪ್ರದಾಯವನ್ನು ಅನುಸರಿಸಿರುವ ಪೂಜ್ಯತಮರು ಪ್ರಕರಣಚತುಷ್ಟಯದಲ್ಲಿ[7] (ಇದನ್ನು) ತಿಳಿಸಿಕೊಟ್ಟಿರುತ್ತಾರೆ.** ಆದ್ದರಿಂದಲೇ ಈಗಲೂ

---

1 ಆತ್ಮಭೇದವನ್ನೂ ಪ್ರಕೃತಿಪುರುಷಭೇದವನ್ನೂ ಒಪ್ಪಿದರು, ಆದರೆ ಮೃತ್ಯುಭಯಕ್ಕೆ ತುತ್ತಾದರು.

2. ಇಚ್ಛಾದಿಗಳು ವಿಷಯವೆಂದು ತಿಳಿದರೂ ವಿಷಯಿಯಾದ ಆತ್ಮನಿಗೆ ಅಂಟಿರುವವೆಂದು ಅವರ ಕುಕಲ್ಪನೆ

3. ಆತ್ಮನು ಮೋಕ್ಷದಲ್ಲಿ ಸರ್ವದುಃಖರಹಿತನಾಗಿರುತ್ತಾನೆಂದು ಅವರ ಕಲ್ಪನೆ.

4 ಮೀಮಾಂಸಕರು ತಾರ್ಕಿಕರಂತೆ ಕೇವಲತರ್ಕವನ್ನು ನಂಬುವದಿಲ್ಲವಾದರೂ ಬಾಹ್ಯದೃಷ್ಟಿಯವರಾದ್ದರಿಂದ ಅವರಿಗೂ ತತ್ತ್ವವು ತಿಳಿಯಲಿಲ್ಲ ಎಂದರ್ಥ.

5. ಕ್ರಿಯಾಕಾರಕಫಲಾತ್ಮಕಜಗತ್ತು ಸತ್ಯವು, ನಾವು ಕರ್ತೃಭೋಕ್ತೃಸ್ವರೂಪರು – ಎಂದು ತಿಳಿದಿರುವದರಿಂದ ಸುಷುಪ್ತ್ಯಾದಿಗಳಲ್ಲಿರುವದೇ ತಮ್ಮ ಸ್ವರೂಪವೆಂದು ತಿಳಿದರೆ ನಮ್ಮ ಸ್ವರೂಪದ ನಾಶವೇ ಆಗುವದು– ಎಂದು ತಿಳಿದುಕೊಂಡಿರುತ್ತಾರೆ ಎಂದು ಅಭಿಪ್ರಾಯ. 'ಸವಿನಾಶಮ್' ಎಂಬ ಪಾ|| ಪಾಠಕ್ಕಿಂತ 'ಸ್ವವಿನಾಶಮ್' ಎಂಬ ಪಾಠವು ಮೇಲೆಂಬುದು ಸ್ಪಷ್ಟವಾಗಿದೆ. ಈ ಅಭಿಪ್ರಾಯಕ್ಕೆ ಮಾಂ.ಕಾ.ಭಾ. ೪–೪೨ (ಭಾ. ಭಾ ೨೮೭)ನ್ನು ನೋಡಿ.

6. ಮಿಥ್ಯಾಸಂಸಾರದುಃಖವನ್ನೇ ಸತ್ಯವೆಂದು ನಂಬಿರುವರು.

7. 'ಸ್ಥಾನತ್ರಯ ಮತ್ತು ತುರೀಯ'– ಎಂಬ ವಿಷಯದ ಪ್ರಕರಣಚತುಷ್ಟಯವು ಎಂದು ಟೀಕೆ. ಈ ವಿಷಯವನ್ನು ವೇದಾಂತಸಂಪ್ರದಾಯವನ್ನು ಬಲ್ಲ ಶ್ರೀಗೌಡಪಾದರವರು ಆಗಮಪ್ರಕರಣವೇ ಮುಂತಾದ ನಾಲ್ಕು ಪ್ರಕರಣಗಳಲ್ಲಿ ತಿಳಿಸಿರುತ್ತಾರೆ– ಎಂಬ ಅಭಿಪ್ರಾಯವೂ ಇಲ್ಲಿ ಧ್ವನಿತವಾಗುತ್ತಿದೆ

ಅವರೇ ಅನುಶಾಸನಮಾಡಬಲ್ಲರೇ ಹೊರತು ಮತ್ತೊಬ್ಬರಲ್ಲ.[1]

## ಅಶರೀರಸ್ವರೂಪಪ್ರಾಪ್ತಿಪ್ರಕಾರ

(ಉಪನಿಷತ್ತು)

**ಅಶರೀರೋ ವಾಯುರಭ್ರಂ ವಿದ್ಯುತ್ ಸ್ತನಯಿತ್ನುರಶರೀರಾಣ್ಯೇತಾನಿ ತದ್ಯಥೈತಾನ್ಯಮುಷ್ಮಾದಾಕಾಶಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯನ್ತೇ ॥ ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಪುರುಷಃ ಸ ತತ್ರ ಪರ್ಯೇತಿ ಜಕ್ಷತ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ನೋಪಜನಗ್ಂ ಸ್ಮರನ್ನಿದಗ್ಂ ಶರೀರಗ್ಂ ಸ ಯಥಾ ಪ್ರಯೋಗ್ಯ ಆಚರಣೇ ಯುಕ್ತ ಏವಮೇವಾಽಯಮಸ್ಮಿಞ್ಛರೀರೇ ಪ್ರಾಣೋ ಯುಕ್ತಃ ॥ ೩ ॥**

೨ ೩. ವಾಯು ಅಶರೀರವು; ಮೋಡ, ಮಿಂಚು, ಗುಡುಗು -ಇವುಗಳೂ ಅಶರೀರಗಳು. ಅಲ್ಲಿ ಹೇಗೆ ಇವು ಆ ಆಕಾಶದಿಂದ ಎದ್ದು ಪರಂಜ್ಯೋತಿಯನ್ನು ಸೇರಿ ತಮ್ಮ ರೂಪದಿಂದ ಸಿದ್ಧವಾಗುತ್ತವೆಯೋ ಹಾಗೆಯೇ, ಈ ಸಂಪ್ರಸಾದನು ಈ ಶರೀರದಿಂದ ಎದ್ದು ಪರಂಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಸಿದ್ಧನಾಗುತ್ತಾನೆ, ಅವನು ಉತ್ತಮಪುರುಷನು. ಅವನು ಅಲ್ಲಿ ನಗುತ್ತಾ, ಕ್ರೀಡಿಸುತ್ತಾ, ರಮಿಸುತ್ತಾ, ಸ್ತ್ರೀಯರುಗಳಿಂದಲೋ ಯಾನಗಳಿಂದಲೋ ಜ್ಞಾತಿಗಳಿಂದಲೋ ಉಪಜನವಾದ ಈ ಶರೀರವನ್ನು ಸ್ಮರಿಸದೆ ವಿಹರಿಸುತ್ತಿರುವನು. ಅದು ಹೇಗೆಂದರೆ (ಹೇಗೆ) ಪ್ರಯೋಗ್ಯವು ಆಚರಣದಲ್ಲಿ ಯುಕ್ತವಾಗಿರುವದೋ, ಹಾಗೆಯೇ ಈ ಶರೀರದಲ್ಲಿ ಪ್ರಾಣವು ಯುಕ್ತವಾಗಿರುತ್ತದೆ.

### ಆತ್ಮನ ಸ್ವರೂಪನಿಷ್ಪತ್ತಿಗೆ ದೃಷ್ಟಾಂತ

(ಭಾಷ್ಯ)

೭೭೬. ತತ್ರ ಅಶರೀರಸ್ಯ ಸಂಪ್ರಸಾದಸ್ಯ ಅವಿದ್ಯಯಾ ಶರೀರೇಣ ಅವಿಶೇಷತಾಂ ಸಶರೀರತಾಮೇವ ಸಂಪ್ರಾಪ್ತಸ್ಯ ಶರೀರಾತ್ ಸಮುತ್ಥಾಯ

1. ಈಗಲೂ ಈ ಸಂಪ್ರದಾಯವನ್ನು ಬಲ್ಲ ವಿರಕ್ತರೇ ಆತ್ಮತತ್ತ್ವವನ್ನು ತಿಳಿಸಿಕೊಡಬಲ್ಲರು.

ಸ್ವೇನ ರೂಪೇಣ ಯಥಾ ಅಭಿನಿಷ್ಪತ್ತಿಃ, ತಥಾ ವಕ್ತವ್ಯಾ ಇತಿ ದೃಷ್ಟಾನ್ತ ಉಚ್ಯತೇ। ಅಶರೀರೋ ವಾಯುಃ। ಅವಿದ್ಯಮಾನಂ ಶಿರಃಪಾಣ್ಯಾದಿಮಚ್ಛರೀರಮ್ ಅಸ್ಯೇತಿ ಅಶರೀರಃ। ಕಿಂಚಾಭ್ರಂ ವಿದ್ಯುತ್, ಸ್ತನಯಿತ್ನುರಿತ್ಯೇತಾನಿ ಚ ಅಶರೀರಾಣಿ। ತತ್ ತತ್ರ ಏವಂ ಸತಿ ವರ್ಷಾದಿಪ್ರಯೋಜನಾವಸಾನೇ ಯಥಾ ಅಮುಷ್ಮಾದಿತಿ ಭೂಮಿಷ್ಠಾ ಶ್ರುತಿಃ ದ್ಯುಲೋಕಸಂಬನ್ಧಿನಮ್ ಆಕಾಶದೇಶಂ ವ್ಯಪದಿಶತಿ। ಏತಾನಿ ಯಥೋಕ್ತಾನಿ ಆಕಾಶಸಮಾನರೂಪತಾಮ್ ಆಪನ್ನಾನಿ ಸ್ವೇನ ವಾಯ್ವಾದಿರೂಪೇಣ ಅಗೃಹ್ಯಮಾಣಾನಿ ಆಕಾಶಾಖ್ಯತಾಂ ಗತಾನಿ, ಯಥಾ ಸಂಪ್ರಸಾದೋಽವಿದ್ಯಾವಸ್ಥಾಯಾಂ ಶರೀರಾತ್ಮಭಾವಮೇವ ಆಪನ್ನಃ। ತಾನಿ ಚ ತಥಾಭೂತಾನಿ ಅಮುಷ್ಮಾದ್ ದ್ಯುಲೋಕಸಂಬನ್ಧಿನಃ ಆಕಾಶದೇಶಾತ್ ಸಮುತ್ತಿಷ್ಠನ್ತಿ ವರ್ಷಣಾದಿಪ್ರಯೋಜನಾಭಿನಿರ್ವೃತ್ತಯೇ। ಕಥಮ್ ? ಶಿಶಿರಾಪಾಯೇ ಸಾವಿತ್ರಂ ಪರಂಜ್ಯೋತಿಃ ಪ್ರಕೃಷ್ಟಂ ಗ್ರೈಷ್ಮಕಮ್ ಉಪಸಂಪದ್ಯ। ಸಾವಿತ್ರಮಭಿತಾಪಂ ಪ್ರಾಪ್ಯ ಇತ್ಯರ್ಥಃ। ಆದಿತ್ಯಾಭಿತಾಪೇನ ಪೃಥಗ್ಭಾವಮ್ ಆಪಾದಿತಾಃ ಸನ್ತಃ ಸ್ವೇನ ಸ್ವೇನ ರೂಪೇಣ ಪುರೋವಾತಾದಿ ವಾಯುರೂಪೇಣ ಸ್ತಿಮಿತಭಾವಂ ಹಿತ್ವಾ, ಅಭ್ರಮಪಿ ಭೂಮಿಪರ್ವತಹಸ್ತ್ಯಾದಿ ರೂಪೇಣ, ವಿದ್ಯುದಪಿ ಸ್ವೇನ ಜ್ಯೋತಿರ್ಲತಾದಿಚಪಲರೂಪೇಣ, ಸ್ತನಯಿತ್ನುರಪಿ ಸ್ವೇನ ಗರ್ಜಿತಾಶನಿರೂಪೇಣ- ಇತ್ಯೇವಂ ಪ್ರಾವೃಡಾಗಮೇ ಸ್ವೇನ ಸ್ವೇನ ರೂಪೇಣ ಅಭಿನಿಷ್ಪದ್ಯನ್ತೇ ॥

(ಭಾಷ್ಯಾರ್ಥ)

ಇಲ್ಲಿ ಅಶರೀರನಾಗಿರುವ ಸಂಪ್ರಸಾದನು, ಅವಿದ್ಯೆಯಿಂದ ಶರೀರದ ಸಮಾನತ್ವವನ್ನು, ಸಶರೀರತ್ವವನ್ನೇ, ಪಡೆದಿದ್ದು, ಶರೀರವನ್ನು ಬಿಟ್ಟಿದ್ದು ತನ್ನ ರೂಪದಿಂದ ಹೇಗೆ ಸಿದ್ಧಿ(ಯನ್ನು ಪಡೆಯುವನೆಂಬುದನ್ನು) ತಿಳಿಸಬೇಕು- ಎಂದು (ಅದಕ್ಕೆ) ದೃಷ್ಟಾಂತವನ್ನು ಹೇಳಲಾಗುತ್ತಿದೆ.

ವಾಯುವು ಅಶರೀರವು, ತಲೆ, ಕೈ- ಮುಂತಾದವುಗಳಿರುವ ಶರೀರವು ಇದಕ್ಕಿಲ್ಲವಾದ್ದರಿಂದ ಅಶರೀರವು, ಮತ್ತು ಮೋಡ, ಮಿಂಚು, ಗುಡುಗು- ಎಂಬಿವುಗಳೂ ಅಶರೀರಗಳೇ. (ತತ್=ತತ್ರ) ಇದು ಹೀಗಿರುವಲ್ಲಿ ಮಳೆಯೇ ಮುಂತಾದ ಪ್ರಯೋಜನವು ಮುಗಿಯಲು ಹೇಗೆ ಆ - ನೆಲದಮೇಲೆ ಇದ್ದುಕೊಂಡಿರುವ (ದೃಷ್ಟಿಯಿಂದ) ಶ್ರುತಿಯು ದ್ಯುಲೋಕಕ್ಕೆ ಸಂಬಂಧಪಟ್ಟಿರುವ ಆಕಾಶಪ್ರದೇಶವನ್ನು (ಆ ಆಕಾಶದಿಂದ) ಎಂದು ತೋರಿಸಿ ಹೇಳುತ್ತಿದೆ. ಆಕಾಶಕ್ಕೆ ಸಮಾನವಾದ ರೂಪವನ್ನು ಹೊಂದಿದ್ದು ತಮ್ಮದಾದ ವಾಯ್ವಾದಿಗಳ ರೂಪದಿಂದ ತೋರದೆ ಇದ್ದು- ಸಂಪ್ರಸಾದನು ಅವಿದ್ಯಾವಸ್ಥೆಯಲ್ಲಿ ಶರೀರಾತ್ಮಭಾವವನ್ನೇ ಪಡೆದಿರುವಂತೆ ಆಕಾಶವೆಂಬ ಹೆಸರನ್ನೇ ಪಡೆದಿರುವ ಈ ಹೇಳಿದ (ವಾಯ್ವಾದಿಗಳು), ಹೀಗಿರುವ— ಈ (ವಾಯ್ವಾದಿಗಳು) ಆ ದ್ಯುಲೋಕಸಂಬಂಧವುಳ್ಳ

ಆಕಾಶದ ದೇಶದಿಂದ- ಮಳೆಗರೆಯುವದೇ ಮುಂತಾದ ಪ್ರಯೋಜನವನ್ನುಂಟು ಮಾಡುವದಕ್ಕಾಗಿ- ಮೇಲಕ್ಕೇಳುವವೋ (ಎಂದರ್ಥ). ಹೇಗೆಂದರೆ, ಶಿಶಿರ ಋತುವು ಹೋಗಲು ಸೂರ್ಯನ ಪರಂಜ್ಯೋತಿಯನ್ನು ಹೆಚ್ಚಿನದಾದ ಗ್ರೀಷ್ಮಕಾಲದ (ಜ್ಯೋತಿಯನ್ನು) ಸೇರಿ, ಸೂರ್ಯನ (ಬಿಸಿಲಿನ) ತಾಪವನ್ನು ಹೊಂದಿ ಎಂದರ್ಥ. ಸೂರ್ಯನ ಕಾವಿನಿಂದ ಬೇರೆಯಾಗಿರುವ ಸ್ವರೂಪವನ್ನು ಹೊಂದಿದವಾಗಿ, ತಮ್ಮ ರೂಪದಿಂದ, ಮುಂಗಾಳಿಯೇ ಮುಂತಾದ ವಾಯುರೂಪದಿಂದ, ಸುಮ್ಮನಿದ್ದ (ಮೊದಲನೆಯ) ರೂಪವನ್ನು ಬಿಟ್ಟು, ಮೋಡವೂ ಭೂಮಿ, ಪರ್ವತ, ಆನೆ- ಮುಂತಾದವುಗಳ ರೂಪದಿಂದ, ಮಿಂಚೂ ಬಳ್ಳಿಬೆಳಕೇ ಮುಂತಾದ ಚಪಲ ರೂಪದಿಂದ, ಗುಡುಗೂ ತನ್ನ ಗರ್ಜನೆ, ಆಲಿಕಲ್ಲು -ಇವುಗಳ ರೂಪದಿಂದ, ಮಳೆಗಾಲವು ಬರುತ್ತಲೂ (ಹೀಗೆ) ತಮ್ಮ ರೂಪದಿಂದ (ಹೇಗೆ) ಸಿದ್ಧನಾಗುವವೋ—

## ವಿದ್ಯೆಯಿಂದ ಸ್ವರೂಪವನ್ನು ಪಡೆದವನೇ ಉತ್ತಮಪುರುಷನು

(ಭಾಷ್ಯ)

೬೭೭　ಯಥಾಽಯಂ ದೃಷ್ಟಾನ್ತಃ. ವಾಯ್ವಾದೀನಾಮಾಕಾಶಾದಿಸಾಮ್ಯಗಮನವತ್ ಅವಿದ್ಯಯಾ ಸಂಸಾರಾವಸ್ಥಾಯಾಂ ಶರೀರಸಾಮ್ಯಮಾಗತೋ 'ಅಹಮಮುಷ್ಯ ಪುತ್ರಃ, ಜಾತೋ ಜೀರ್ಣೋ ಮರಿಷ್ಯೇ, ಇತ್ಯೇವಂ ಪ್ರಕಾರಮ್, ಪ್ರಜಾಪತಿನೇವ ಮಘವಾನ್, ಯಥೋಕ್ತೇನ ಕ್ರಮೇಣ ನಾಽಸಿ ತ್ವಂ ದೇಹೇನ್ದ್ರಿಯಾದಿಧರ್ಮಾ ತತ್ತ್ವಮಸಿ ಇತಿ ಪ್ರತಿಬೋಧಿತಃ ಸನ್, ಸ ಏಷ ಸಂಪ್ರಸಾದೋ ಜೀವಃ । ಅಸ್ಮಾಚ್ಛರೀರಾದಾಕಾಶಾದಿವ ವಾಯ್ವಾದಯಃ ಸಮುತ್ಥಾಯ, ದೇಹಾದಿವಿಲಕ್ಷಣಮ್ ಆತ್ಮನೋ ರೂಪಮ್ ಅವಗಮ್ಯ, ದೇಹಾತ್ಮಭಾವನಾಂ ಹಿತ್ವಾ ಇತ್ಯೇತತ್ । ಸ್ವೇನ ರೂಪೇಣ ಸದಾತ್ಮನೈವ ಅಭಿನಿಷ್ಪದ್ಯತ ಇತಿ ವ್ಯಾಖ್ಯಾತಂ ಪುರಸ್ತಾತ್ । ಸ ಯೇನ ಸ್ವೇನ ರೂಪೇಣ ಸಂಪ್ರಸಾದೋಽಭಿನಿಷ್ಪದ್ಯತೇ ಪ್ರಾಕ್ ಪ್ರತಿಬೋಧಾತ್[1], ಭ್ರಾನ್ತಿನಿಮಿತ್ತಾತ್ ಸರ್ಪೋ ಭವತಿ ಯಥಾ ರಜ್ಜುಃ ಪಶ್ಚಾತ್ ಕೃತಪ್ರಕಾಶಾ ರಜ್ಜ್ವಾತ್ಮನಾ ಸ್ವೇನ ರೂಪೇಣ ಅಭಿನಿಷ್ಪದ್ಯತ ಏವಮ್[2] । ಸ ಉತ್ತಮಪುರುಷಃ । ಉತ್ತಮಶ್ಚಾಽಸೌ ಪುರುಷಶ್ಚೇತಿ ಉತ್ತಮಪುರುಷಃ । ಸ ಏವೋತ್ತಮಪುರುಷಃ । ಅಕ್ಷಿಸ್ವಪ್ನಪುರುಷೌ ವ್ಯಕ್ತೌ, ಅವ್ಯಕ್ತಶ್ಚ ಸುಷುಪ್ತಃ ಸಮಸ್ತಃ ಸಂಪ್ರಸನ್ನಃ । ಅಶರೀರಶ್ಚ ಸ್ವೇನ ರೂಪೇಣೇತ್ಯೇಷಾಮ್, ಏಷ ಸ್ವೇನ

---

1　ತದ್ಭ್ರಾನ್ತಿ ಎಂದು ಅಚ್ಚಿನ ಪಾಠ, ಅಲ್ಲಿ ತತ್ ಹೆಚ್ಚೆಂದು ಬಿಟ್ಟುಬಿಟ್ಟಿದೆ.

2.　ಇದನ್ನು ಈ ವಾಕ್ಯಕ್ಕೇ ಸೇರಿಸುವದು ಉತ್ತಮ; ಇದರ ಮುಂದೆ ಅಚ್ಚಿನ ಪುಸ್ತಕದಲ್ಲಿರುವ ಚಶಬ್ದವನ್ನು ಬಿಟ್ಟುಬಿಟ್ಟಿದೆ.

ರೂಪೇಣಾಽವಸ್ಥಿತಃ, ಕ್ಷರಾಕ್ಷರೌ ವ್ಯಾಕೃತಾವ್ಯಾಕೃತೌ ಅಪೇಕ್ಷ್ಯ ಉತ್ತಮ ಪುರುಷಃ । ಕೃತನಿರ್ವಚನೋ ಹ್ಯಯಂ ಗೀತಾಸು ॥

(ಭಾಷ್ಯಾರ್ಥ)

ಈ ದೃಷ್ಟಾಂತವು ಹೇಗೋ (ಹಾಗೆ)– ವಾಯ್ವಾದಿಗಳು ಆಕಾಶಾದಿಸಮಾನತ್ವ ವನ್ನು ಹೊಂದಿದಂತೆ– ಅವಿದ್ಯೆಯಿಂದ ಸಂಸಾರಾವಸ್ಥೆಯಲ್ಲಿ 'ನಾನು ಇಂಥವನ ಮಗನು, ಹುಟ್ಟಿದೆನು, ಮುದುಕನಾದೆನು, ಸಾಯುವೆನು' ಎಂಬೀ ಪ್ರಕಾರದ ಶರೀರದ ಸಾಮ್ಯವನ್ನು ಹೊಂದಿರುತ್ತಾನೆ. ಪ್ರಜಾಪತಿಯಿಂದ ಇಂದ್ರನು ಹೇಗೋ ಹಾಗೆ, (ಆಚಾರ್ಯನಿಂದ) ಹಿಂದೆ ಹೇಳಿರುವ ಕ್ರಮದಿಂದ[1] 'ನೀನು ದೇಹೇಂದ್ರಿಯ ಗಳ ಧರ್ಮಗಳುಳ್ಳವನಲ್ಲ, ಆ ಬ್ರಹ್ಮವೇ ನೀನಾಗಿರುವೆ' ಎಂದು ಪ್ರತಿಬೋಧಿತ ನಾದವನಾಗಿ, ಆ ಈ ಸಂಪ್ರಸಾದನು, ಜೀವನು, ಈ ಶರೀರದಿಂದ– ವಾಯ್ವಾದಿ ಗಳು ಆಕಾಶದಿಂದ (ಹೇಗೆ ಏಳುತ್ತವೆಯೋ) ಹಾಗೆ– ಎದ್ದು ದೇಹಾದಿವಿಲಕ್ಷಣ ವಾದ ತನ್ನ ರೂಪವನ್ನು ಅರಿತುಕೊಂಡು, ದೇಹವೇ ತಾನೆಂಬ ಭಾವನೆಯನ್ನು ಬಿಟ್ಟು[2]– ಎಂದರ್ಥ (ಶರೀರದಿಂದ ಎದ್ದು) ತನ್ನದೇ ಆದ ರೂಪದಿಂದ, ಸಮ್ರಾಪ ದಿಂದಲೇ ಸಿದ್ಧನಾಗುತ್ತಾನೆ– ಎಂಬೀ (ವಾಕ್ಯವನ್ನು) ಹಿಂದೆ[3] ವ್ಯಾಖ್ಯಾನಮಾಡ ಲಾಗಿದೆ.

ಆ ಸಂಪ್ರಸಾದನು ಯಾವ ತನ್ನ ರೂಪದಿಂದ ಸಿದ್ಧನಾಗುತ್ತಾನೋ– ತಿಳಿವಳಿಕೆಯುಂಟಾಗುವ ಮುಂಚೆ ಹಗ್ಗವು ಭ್ರಾಂತಿನಿಮಿತ್ತದಿಂದ ಹೇಗೆ ಹಾವಾ ಗಿರುವದೋ, ಆಮೇಲೆ ಬೆಳಕಿನಿಂದ ತೋರಿಸಲು ಹಗ್ಗದ ರೂಪದ ತನ್ನ ರೂಪ ದಿಂದಲೇ (ಹೇಗೆ) ಸಿದ್ಧವಾಗುವದೋ ಹಾಗೆ (ಯಾವ ರೂಪದಿಂದ ಇವನು ಸಿದ್ಧ ನಾಗುತ್ತಾನೋ)– ಅವನು ಉತ್ತಮಪುರುಷನು, ಉತ್ತಮನಾದ ಪುರುಷನಾದ್ದ ರಿಂದ ಉತ್ತಮಪುರುಷನು. ಅವನೇ ಉತ್ತಮಪುರುಷನು **ಅಕ್ಷಿಸ್ವಪ್ನ ಪುರುಷರು ವ್ಯಕ್ತರು, ಸುಷುಪ್ತನೂ ಸಮಸ್ತನೂ ಸಂಪ್ರಸನ್ನನೂ ಆಗಿರುವ (ಪುರುಷನು) ಅವ್ಯಕ್ತನು; ತನ್ನ ಸ್ವರೂಪದಿಂದ ಸಿದ್ಧನಾಗಿರು ವನಲ್ಲ, ಇವನು ಕ್ಷರಾಕ್ಷರರೆಂಬ ವ್ಯಾಕೃತಾವ್ಯಾಕೃತ[4] (ಪುರುಷರು)**

---

1. ಅವಸ್ಥಾತ್ರಯಪರೀಕ್ಷಣಕ್ರಮದಿಂದ.

2. ಶರೀರವನ್ನು ಬಿಟ್ಟೇಳುವದು– ಎಂದರೆ ಸಾಯುವದಲ್ಲ ; ಶ್ರುತಿಯಲ್ಲಿ ಹೇಳಿರುವ ಆತ್ಮಸ್ವರೂಪವನ್ನು ವಿಂಗಡಿಸಿಕೊಂಡು ಅರಿಯುವದೇ, ಇದರಂತೆ ಸ್ವರೂಪನಿಷ್ಪತ್ತಿ ಎಂದರೆ ಈ ವಿವೇಕವಿಜ್ಞಾನದ ಫಲವಾಗಿ, ಕೇವಲಾತ್ಮನೇ ತಾನೆಂಬ ನಿಶ್ಚಯದಲ್ಲಿ ನೆಲೆನಿಲ್ಲುವದೇ ಸೂ. ಭಾ. ೧–೩–೧೯, (ಭಾ. ಭಾ. ೨೬೬)ನ್ನು ಸೂ. ಭಾ. ೪–೪–೧ರಿಂದ ೩ರಲ್ಲಿರುವ ನಿರ್ಣಯ ವನ್ನು ನೋಡಿರಿ.

3. ೮–೩–೪ (ಭಾ. ಭಾ. ೬೨೩)ನ್ನು ನೋಡಿರಿ.

4. ಇಲ್ಲಿ ಅವಸ್ಥೆಗಳೊಳಗೆ 'ಆಧಿದೈವಿಕಾದಿಪ್ರಪಂಚವನ್ನೆಲ್ಲ ಸೇರಿಸಿದೆ ಎಂದು' ಭಾವ ಮಾಂ ಕಾ ಮಂ. ೩, (ಭಾ. ಭಾ. ೧೨)ನ್ನು ನೋಡಿ.

**ಹೋಲಿಸಿದರೆ ಉತ್ತಮಪುರುಷನು.** ಗೀತೆಗಳಲ್ಲಿ ಇವನ ನಿರ್ವಚನವನ್ನು ಮಾಡಿದೆಯಷ್ಟೆ[1] ?

## ಮುಕ್ತಾತ್ಮನ ಐಶ್ವರ್ಯ-

(ಭಾಷ್ಯ)

೬೭೮. ಸ ಸಂಪ್ರಸಾದಃ ಸ್ವೇನ ರೂಪೇಣ ತತ್ರ ಸ್ವಾತ್ಮನಿ ಸ್ವಸ್ಥತಯಾ ಸರ್ವಾತ್ಮಭೂತಃ ಪರ್ಯೇತಿ। ಕ್ವಚಿದಿನ್ದ್ರಾದ್ಯಾತ್ಮನಾ ಜಕ್ಷದ್ ಹಸನ್ ಭಕ್ಷಯನ್ ವಾ ಭಕ್ಷ್ಯಾನ್ ಉಚ್ಚಾವಚಾನ್ ಈಪ್ಸಿತಾನ್, ಕ್ವಚಿನ್ಮನೋಮಾತ್ರೈಃ ಸಂಕಲ್ಪಾದೇವ ಸಮುತ್ಥಿತೈರ್ಬ್ರಾಹ್ಮಲೌಕಿಕೈರ್ವಾ ಕ್ರೀಡನ್ ಸ್ತ್ರ್ಯಾದಿಭಿಃ. ರಮಮಾಣಶ್ಚ ಮನಸೈವ। ನೋಪಜನಂ ಸ್ತ್ರೀಪುಂಸಯೋರನ್ಯೋನ್ಯೋಪಗಮೇನ ಜಾಯತ ಇತಿ ಉಪಜನಮ್। ಆತ್ಮಭಾವೇನ ವಾ ಆತ್ಮಸಾಮೀಪ್ಯೇನ ಜಾಯತ ಇತ್ಯುಪಜನಮ್ ಇದಂ ಶರೀರಮ್। ತನ್ನ ಸ್ಮರನ್। ತತ್ಸ್ಮರಣೇ ಹಿ ದುಃಖಮೇವ ಸ್ಯಾತ್। ದುಃಖಾತ್ಮಕತ್ವಾತ್ ತಸ್ಯ। ನನ್ವನುಭೂತಂ ಚೇನ್ನ ಸ್ಮರೇದಸರ್ವಜ್ಞತ್ವಂ ಮುಕ್ತಸ್ಯ। ನೈಷ ದೋಷಃ। ಯೇನ ಮಿಥ್ಯಾಜ್ಞಾನಾದಿನಾ ಜನಿತಮ್, ತಚ್ಚ ಮಿಥ್ಯಾಜ್ಞಾನಾದಿ ವಿದ್ಯಯಾ ಉಚ್ಛೇದಿತಮ್। ಅತಸ್ತನ್ನಾನುಭೂತಮೇವೇತಿ ನ ತದಸ್ಮರಣೇ ಸರ್ವಜ್ಞತ್ವಹಾನಿಃ। ನ ಹ್ಯುನ್ಮತ್ತೇನ ಗ್ರಹಗೃಹೀತೇನ ವಾ ಯದನುಭೂತಂ ತದುನ್ಮಾದಾದ್ಯಪಗಮೇಽಪಿ ಸ್ಮರ್ತವ್ಯಂ ಸ್ಯಾತ್ ತಥಾ ಇಹಾಪಿ ಸಂಸಾರಿಭಿರವಿದ್ಯಾದೋಷವದ್ಭಿರ್ಯದನುಭೂಯತೇ ತತ್ಸರ್ವಾತ್ಮಾನಮ್ ಅಶರೀರಂ ನ ಸ್ಪೃಶತಿ। ಅವಿದ್ಯಾನಿಮಿತ್ತಾಭಾವಾತ್। ಯೇ ತೂಚ್ಛಿನ್ನದೋಷೈರ್ಮೃದಿತಕಷಾಯೈರ್ಮಾನಸಾಃ ಸತ್ಯಾಃ ಕಾಮಾಃ ಅನೃತಾಪಿಧಾನಾ ಅನುಭೂಯನ್ತೇ ವಿದ್ಯಾಭಿವ್ಯಙ್ಗ್ಯತ್ವಾತ್ ತ ಏವ ಮುಕ್ತೇನ ಸರ್ವಾತ್ಮಭೂತೇನ ಸಂಬಧ್ಯನ್ತ ಇತಿ ಆತ್ಮಜ್ಞಾನಸ್ತುತಯೇ ನಿರ್ದಿಶ್ಯನ್ತೇ। ಅತಃ ಸಾಧ್ವೇತದ್ ವಿಶಿನಷ್ಟಿ 'ಯ ಏತೇ ಬ್ರಹ್ಮಲೋಕೇ' (೮-೧೨-೫) ಇತಿ। ಯತ್ರ ಕ್ವಚನ ಭವನ್ತೋಽಪಿ ಬ್ರಹ್ಮಣ್ಯೇವ ಹಿ ತೇ ಲೋಕೇ ಭವನ್ತೀತಿ ಸರ್ವಾತ್ಮತ್ವಾದ್ ಬ್ರಹ್ಮಣ ಉಚ್ಯನ್ತೇ॥

(ಭಾಷ್ಯಾರ್ಥ)

ಆ ಸಂಪ್ರಸಾದನು ತನ್ನ ರೂಪದಿಂದ ಅಲ್ಲಿ ಎಂದರೆ (ಆ) ತನ್ನ ಸ್ವರೂಪದಲ್ಲಿ[2] ಸ್ವಸ್ಥನಾಗಿರುವದರಿಂದ ಸರ್ವಾತ್ಮನಾಗಿದ್ದುಕೊಂಡು[3] ಒಂದು ಕಡೆಯಲ್ಲಿ ಇಂದ್ರಾದಿ

---

1. ಗೀ. ೧೫-೧೬, ೧೭, ೧೮ನ್ನು ನೋಡಿ.

2. ಉತ್ತಮಪುರುಷನು ಆಧಾರವಾಗಿರುತ್ತಾನೆಂದೂ ಅವನಲ್ಲಿ ಜೀವನು ಆಧೇಯನಾಗಿರುತ್ತಾನೆಂದೂ ಅರ್ಥವಲ್ಲ, ಆ ಸ್ವರೂಪದಲ್ಲಿರುತ್ತಾನೆ ಎಂದೇ ಅರ್ಥ- ಎಂದು ಅಭಿಪ್ರಾಯ. ಹಿಂದೆ (ಭಾ ಭಾ. ೬೭೨)ರಲ್ಲಿಯೇ ಈ ವ್ಯಾಖ್ಯಾನಕ್ಕೆ ಕಾರಣವನ್ನು ತಿಳಿಸಿದೆ.

3. ಎಲ್ಲರಿಗೂ ತಾನೊಬ್ಬನೇ ಆತ್ಮನಾಗಿರುವದರಿಂದ

ರೂಪದಿಂದ (ಜಕ್ಷತ್= )ನಗುತ್ತಾ, ಅಥವಾ ತನಗೆ ಇಷ್ಟವಾದ ಬಗೆಬಗೆಯ ಭಕ್ಷ್ಯಗಳನ್ನು ತಿನ್ನುತ್ತಾ, ಅಥವಾ ಇನ್ನೊಂದು ಕಡೆಯಲ್ಲಿ ಸಂಕಲ್ಪದಿಂದಲೇ ಎದ್ದು ಬಂದಿರುವ ಕೇವಲ ಮಾನಸವಾದ ಬ್ರಹ್ಮಲೋಕದ ಸ್ತ್ರ್ಯಾದಿಗಳೊಡನೆ ಮನಸ್ಸಿನಿಂದಲೇ ರಮಿಸುತ್ತಾ, ಉಪಜನವಾದ –ಸ್ತ್ರೀಪುರುಷರು ಒಬ್ಬರನ್ನೊಬ್ಬರು ಸೇರುವದರಿಂದ ಉಂಟಾಗುವದಾದ್ದರಿಂದ (ಶರೀರವು) ಉಪಜನವು . ಅಥವಾ ಆತ್ಮನ (ಉಪ) ಸಮೀಪದಲ್ಲಿ ಇರುವದರಿಂದ ಆತ್ಮಭಾವದಿಂದಲೇ (ಜಾಯತೇ) ಉಂಟಾಗುತ್ತದೆಯಾದ್ದರಿಂದ ಈ ಶರೀರವು ಉಪಜನವು– ಇದನ್ನು ಸ್ಮರಿಸದೆ ಎಂದರ್ಥ. ಇದನ್ನು ಸ್ಮರಿಸಿಕೊಂಡರೆ ದುಃಖವೇ ಆಗುವದಲ್ಲವೆ ? ಏಕೆಂದರೆ ಇದು ದುಃಖಾತ್ಮಕವೇ ಆಗಿದೆ

(ಆಕ್ಷೇಪ).— (ಹಿಂದೆ) ಅನುಭವಿಸಿದ (ಶರೀರವನ್ನು) ಸ್ಮರಿಸಿಕೊಳ್ಳದಿದ್ದರೆ ಮುಕ್ತನು ಸರ್ವಜ್ಞನಲ್ಲವೆಂದೇ ಆಗುವದಲ್ಲ !

(ಪರಿಹಾರ) ·— ಇದೇನೂ ದೋಷವಲ್ಲ. ಯಾವ ಮಿಥ್ಯಾಜ್ಞಾನದಿಂದ (ಅದು) ಉಂಟಾಗಿತ್ತೋ[1] ಆ ಮಿಥ್ಯಾಜ್ಞಾನವೇ ಮುಂತಾದದ್ದು ವಿದ್ಯೆಯಿಂದ ನಾಶಗೊಳಿಸಲ್ಪಟ್ಟಿರುತ್ತದೆ. ಆದ್ದರಿಂದ ಅದು (ನಿಜವಾಗಿ) ಅನುಭವಿಸಿದ್ದೇ ಅಲ್ಲವಾದ್ದರಿಂದ ಅದರ ನೆನಪಿಲ್ಲದೆಹೋದರೆ ಸರ್ವಜ್ಞತ್ವಕ್ಕೆ (ಯಾವ) ಹಾನಿಯೂ ಇಲ್ಲ ಹುಚ್ಚನಾಗಿದ್ದವನು ಅಥವಾ ಗ್ರಹಾವಿಷ್ಟನಾಗಿದ್ದವನು ಏನನ್ನು ಅನುಭವಿಸಿದ್ದನೋ ಅದನ್ನು ಹುಚ್ಚು ಮುಂತಾದದ್ದು ಹೋದ ಮೇಲೂ ಸ್ಮರಿಸತಕ್ಕದ್ದಿಲ್ಲವಷ್ಟೆ ? ಹಾಗೆಯೇ ಇಲ್ಲಿಯೂ ಅವಿದ್ಯಾದೋಷವುಳ್ಳ ಸಂಸಾರಿಗಳಾದವರು ಯಾವದನ್ನು ಅನುಭವಿಸುವರೋ ಅದು ಸರ್ವಾತ್ಮನಾದ ಅಶರೀರನನ್ನು ಸೋಂಕಲಾರದು, ಏಕೆಂದರೆ (ಅವನಲ್ಲಿ) ಅವಿದ್ಯೆಯೆಂಬ ನಿಮಿತ್ತವಿರುವದಿಲ್ಲ. ಆದರೆ ದೋಷರಹಿತರಾಗಿ ಮೃದಿತಕಷಾಯರಾದವರು ಅನೃತಾಪಿಧಾನವುಳ್ಳ ಯಾವ ಸತ್ಯಕಾಮಗಳನ್ನು ಅನುಭವಿಸುವರೋ (ಅವು) ವಿದ್ಯೆಯಿಂದ ತೋರಿಕೊಳ್ಳುವವಾದ್ದರಿಂದ[2] ಅವು ಮಾತ್ರವೇ ಸರ್ವಾತ್ಮನಾಗಿರುವ ಮುಕ್ತನಿಗೆ ಸಂಬದ್ಧವಾಗುತ್ತವೆಯಾಗಿ[3] ಅವನು

1. ಅನುಭೂತವಾಗಿತ್ತೋ ಎಂದರ್ಥ. ಅಥವಾ ಶರೀರವು ಮಿಥ್ಯಾಜ್ಞಾನದಿಂದ ತೋರುತ್ತಿತ್ತೇ ಹೊರತು ನಿಜವಾಗಿ ಯಾವಾಗಲೂ ಇರಲೇ ಇಲ್ಲ– ಎಂದು ವಿವಕ್ಷಿತವಾಗಿರಬಹುದು. ಸಶರೀರತ್ವವು ಮಿಥ್ಯಾಜ್ಞಾನಕೃತವೇ ಎಂಬುದಕ್ಕೆ ಸೂ. ಭಾ. ೧ ೧–೪ (ಭಾ. ಭಾ ೫೮)ನ್ನು ನೋಡಿ.

2. ಉಪಾಸನೆಯೂ ವಿದ್ಯೆಯೇ , ಅದ್ದರಿಂದ ಅವಿದ್ಯೆಯಿಂದ ಕಾಣುತ್ತಿದ್ದ ದುಃಖಾತ್ಮಕವಾದ ಶರೀರದ ಸಂಬಂಧವಿಲ್ಲದಿದ್ದರೂ ವಿದ್ಯೆಯಿಂದಾಗಿರುವ ಬ್ರಹ್ಮಲೋಕದ ಭೋಗಗಳ ಆನಂದವು ಜ್ಞಾನಿಗೆ ಆಗುವವೆಂದು ಹೇಳುವದು ಯುಕ್ತವೇ ಆಗಿದೆ ಎಂದು ಭಾವ. ಶ್ರೋತ್ರಿಯನೂ ಅಕಾಮಹತನೂ ಆದವನ ಆನಂದದಲ್ಲಿ ಸಕಲಾನಂದಗಳೂ ಅಡಕವಾಗಿರುವವೆಂಬುದಕ್ಕೆ ತೈ. ಭಾ. ೨–೮ (ಭಾ. ಭಾ ೨೦೦)ನ್ನು ನೋಡಿ.

3 ಪರಮಾರ್ಥದೃಷ್ಟಿಯಿಂದ ಎಲ್ಲವೂ ಜ್ಞಾನಿಯ ಆತ್ಮನಲ್ಲಿಯೇ ಕಲ್ಪಿತವಾಗಿವೆ ಎಂಬ [illegible] ಹಿಂದೆ ಭಾ. ಭಾ. ೬೬೮ರಲ್ಲಿ ಹೇಳಿರುವದನ್ನು ಇಲ್ಲಿಯೂ ಮನದಂದುಕೊಳ್ಳಬೇಕು.

ಆತ್ಮಜ್ಞಾನದ ಸ್ತುತಿಗಾಗಿ (ಇಲ್ಲಿ) ತಿಳಿಸಿರುತ್ತದೆ. ಆದ್ದರಿಂದಲೇ[1] (೮–೧೨–೫ ರಲ್ಲಿ) "ಬ್ರಹ್ಮಲೋಕದಲ್ಲಿರುವವಲ್ಲ, ಈ (ಕಾಮುಗಳನ್ನು ಮನಸ್ಸಿನಿಂದ ಕಾಣುತ್ತಾ ರಮಿಸುತ್ತಾನೆ)'' ಎಂದು (ಶ್ರುತಿಯು) ಹೀಗೆ ವಿಶೇಷಣವನ್ನು ಹಾಕಿರುವದು (ಸರಿಯೇ ಆಗಿರುತ್ತದೆ). ಅವು ಎಲ್ಲೆಲ್ಲಿದ್ದರೂ ಬ್ರಹ್ಮವೆಂಬ ಲೋಕದಲ್ಲಲ್ಲವೆ[2], ಅವು ಇರುತ್ತವೆ? ಆದ್ದರಿಂದ ಸರ್ವಾತ್ಮವಾಗಿರುವದರಿಂದ (ಅವು) ಬ್ರಹ್ಮಕ್ಕೆ ಸೇರಿದವೆಂದಿದೆ.

## ದ್ವಿತೀಯಾಭಾವವಿದ್ದರೂ ಕಾಣುತ್ತಾನೆ ಎಂಬುದರ ಅಭಿಪ್ರಾಯ

(ಭಾಷ್ಯ)

೬೭೯. ನನು ಕಥಮೇಕಃ ಸನ್ "ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ" (೭–೨೪–೧), "ಕಾಮಾಂಶ್ಚ ಬ್ರಾಹ್ಮಲೌಕಿಕಾನ್ ಪಶ್ಯನ್ ರಮತ"[3] (೮–೧೨–೫) ಇತಿ ಚ ವಿರುದ್ಧಮ್? ಯದ್ಯೇಕೋ ಯಸ್ಮಿನ್ನೇವ ಕ್ಷಣೇ ಪಶ್ಯತಿ ಸ ತಸ್ಮಿನ್ನೇವ ಕ್ಷಣೇ ನ ಪಶ್ಯತಿ ಚೇತಿ? ನೈಷ ದೋಷಃ। ಶ್ರುತ್ಯನ್ತರೇ ಪರಿಹೃತತ್ವಾತ್। ದ್ರಷ್ಟುರ್ದೃಷ್ಟೇರವಿಪರಿಲೋಪಾತ್ ಪಶ್ಯನ್ನೇವ ಭವತಿ। ದ್ರಷ್ಟುರನ್ಯತ್ವೇನ ಕಾಮಾನಾಮಭಾವಾನ್ನ ಪಶ್ಯತಿ ಚೇತಿ। ಯದ್ಯಪಿ ಸುಷುಪ್ತೇ ತದುಕ್ತಂ ಮುಕ್ತಸ್ಯಾಪಿ ಸರ್ವೈಕತ್ವಾತ್ ಸಮಾನೋ ದ್ವಿತೀಯಾಭಾವಃ। "ಕೇನ ಕಂ ಪಶ್ಯೇತ್'' (ಬೃ. ೨–೪–೧೪) ಇತಿ ಚೋಕ್ತಮೇವ ॥

(ಭಾಷ್ಯಾರ್ಥ)

(ಆಕ್ಷೇಪ).– ಒಬ್ಬನೇ ಆಗಿದ್ದು ''(ಎಲ್ಲಿ) ಮತ್ತೊಂದನ್ನು ಕಾಣುವದಿಲ್ಲವೊ, ಮತ್ತೊಂದನ್ನು ಕೇಳುವದಿಲ್ಲವೋ, ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು'', (೭–೨೪–೧), (ಎಂದೂ) 'ಬ್ರಹ್ಮಲೋಕದಲ್ಲಿರುವ ಕಾಮುಗಳನ್ನು ಕಾಣುತ್ತಾ ರಮಿಸುತ್ತಿರುತ್ತಾನೆ' (೮–೧೨–೫) ಎಂದೂ ವಿರುದ್ಧವಾಗಿ (ಹೇಳಿದ್ದು) ಹೇಗೆ (ಸರಿ)? ಒಬ್ಬನೇ ಯಾವ ಕ್ಷಣದಲ್ಲಿ ಕಾಣುತ್ತಾನೋ ಅದೇ ಕ್ಷಣದಲ್ಲಿ ಕಾಣುವದಿಲ್ಲ ಎಂದಂತೆ (ಅಲ್ಲವೆ, ಇದು)?

(ಪರಿಹಾರ):– ಇದೇನೂ ದೋಷವಲ್ಲ. ಏಕೆಂದರೆ ಇದನ್ನು ಮತ್ತೊಂದು ಶ್ರುತಿಯಲ್ಲಿ 'ದ್ರಷ್ಟೃವಿನ ದೃಷ್ಟಿಗೆ ಯಾವ ಲೋಪವೂ ಇಲ್ಲದ್ದರಿಂದ ಕಾಣುತ್ತಲೇ ಇರುತ್ತಾನೆ, ದ್ರಷ್ಟೃವಿಗೆ ಬೇರೆಯಾಗಿ ಕಾಮುಗಳು (ಯಾವವೂ) ಇಲ್ಲದಿರುವದ

1. ಹೀಗೆ ಸಗುಣೋಪಾಸಕರ ಫಲವನ್ನು ಜ್ಞಾನದ ಸ್ತುತಿಗೆಂದು ಜ್ಞಾನಿಗಳಿಗೂ ಹೇಳಬಹುದಾದ್ದರಿಂದಲೇ.

2. ಬ್ರಹ್ಮದಲ್ಲಿಯೇ ಅಲ್ಲವೆ? ಎಂದರ್ಥ

3. ಇದು ಶ್ರುತಿಯ ಅರ್ಥವು ಮಾತ್ರ.

ರಿಂದ ಕಾಣುವದೂ ಇಲ್ಲ' (ಬೃ. ೪-೩-೨೩)[1] ಎಂದು ಪರಿಹರಿಸಿರುತ್ತದೆ. ಇದನ್ನು ಹೇಳಿದ್ದು ಸುಷುಪ್ತಿಯ ವಿಷಯವಾದರೂ ಮುಕ್ತನೂ[3] ಎಲ್ಲದರೊಡನೆ ಒಂದಾಗಿರುವದರಿಂದ ಎರಡನೆಯ ವಸ್ತುವಿಲ್ಲವೆಂಬುದು ಸಮಾನವಾಗಿರುತ್ತದೆ.

"(ಅಲ್ಲಿ) ಏತರಿಂದ ಯಾರನ್ನು ನೋಡಿಯಾನು !" (ಬೃ. ೪-೫-೧೫) ಎಂದೂ (ಅಲ್ಲಿ) ಹೇಳಿಯೇ ಇರುತ್ತದೆ[2]

## ಅಕ್ಷಿಯಲ್ಲಿ ಕಾಣುತ್ತಾನೆ ಎಂಬುದರ ಅಭಿಪ್ರಾಯ

(ಭಾಷ್ಯ)

೬೮೦ ಅಶರೀರಸ್ವರೂಪೋಽಪಹತಪಾಪ್ಮಾದಿಲಕ್ಷಣಃ ಸನ್ ಕಥಮೇಷ ಪುರುಷೋಽಕ್ಷಿಣಿ ದೃಶ್ಯತ ಇತ್ಯುಕ್ತಃ ಪ್ರಜಾಪತಿನಾ ? ತತ್ರ ಯಥಾಽಸಾವಕ್ಷಿಣಿ ಸಾಕ್ಷಾದ್ ದೃಶ್ಯತೇ ತದ್ವಕ್ತವ್ಯಮಿತೀದಮಾರಭ್ಯತೇ। ತತ್ರ ಕೋ ಹೇತುರಕ್ಷಿಣಿ ದರ್ಶನ ಇತಿ ? ಆಹ। ಸ ದೃಷ್ಟಾನ್ತೋ ಯಥಾ ಪ್ರಯೋಗ್ಯಃ। ಪ್ರಯೋಗ್ಯ ಪರೋ ವಾ ಸಶಬ್ದಃ। ಪ್ರಯುಜ್ಯತ ಇತಿ ಪ್ರಯೋಗ್ಯಃ। ಅಶ್ವೋ ಬಲೀವರ್ದೋ ವಾ। ಯಥಾ ಲೋಕೇ ಆಚರತ್ಯನೇನೇತ್ಯಾಚರಣಃ ರಥೋಽನೋ ವಾ। ತಸ್ಮಿನ್ ಆಚರಣೇ ಯುಕ್ತಃ, ತದಾಕರ್ಷಣಾಯ। ಏವಮಸ್ಮಿನ್ ಶರೀರೇ ರಥಸ್ಥಾನೀಯೇ ಪ್ರಾಣಃ ಪಞ್ಚವೃತ್ತಿಃ, ಇನ್ದ್ರಿಯಮನೋಬುದ್ಧಿಸಂಯುಕ್ತಃ ಪ್ರಜ್ಞಾತ್ಮಾ ವಿಜ್ಞಾನಕ್ರಿಯಾಶಕ್ತಿದ್ವಯಸಂಮೂರ್ಛಿತಾತ್ಮಾ ಯುಕ್ತಃ ಸ್ವಕರ್ಮಫಲೋಪ ಭೋಗನಿಮಿತ್ತಂ ನಿಯುಕ್ತಃ। "ಕಸ್ಮಿನ್ನ್ವಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ" (ಪ್ರ. ೬-೩) ಇತೀಶ್ವರೇಣ ರಾಜ್ಞೇವ ಸರ್ವಾಧಿಕಾರೀ ದರ್ಶನಶ್ರವಣಚೇಷ್ಟಾವ್ಯಾಪಾರೇಽಧಿಕೃತಃ। ತಸ್ಯೈವ ತು ಮಾತ್ರೈಕದೇಶಶ್ಚಕ್ಷುರಿನ್ದ್ರಿಯಂ ರೂಪೋಪಲಬ್ಧಿದ್ವಾರಭೂತಮ್ ॥

(ಭಾಷ್ಯಾರ್ಥ)

ಅಶರೀರಸ್ವರೂಪನೂ ಅಪಹತಪಾಪ್ಮಾದಿಲಕ್ಷಣದವನೂ ಆದ ಈ ಪುರುಷನು ಕಣ್ಣಿನಲ್ಲಿ ಕಾಣಬರುತ್ತಾನೆಂದು ಪ್ರಜಾಪತಿಯು ಹೇಳಿದ್ದು ಹೇಗೆ[4] ? ಇಲ್ಲಿ ಹೇಗೆ

---

1. ಆತ್ಮನು ಚಿನ್ಮಾತ್ರಸ್ವರೂಪನಾಗಿರುತ್ತಾನೆ, ಎಲ್ಲಾ ವಸ್ತುಗಳೂ ಅವನ ಸ್ವರೂಪ ದಿಂದ ಅವನಲ್ಲಿಯೇ ಅಡಕವಾಗಿರುತ್ತವೆ, ಅವನಿಗಿಂತ ಬೇರೆಯಿಲ್ಲ ಎಂದರ್ಥ.

2. ಸೂ. ಭಾ. ೪-೪-೧೬ನ್ನು ನೋಡಿ.

3. ಆದ್ದರಿಂದ ದ್ವಿತೀಯವಸ್ತುವನ್ನು ಕಾಣುವದಿಲ್ಲವೆಂದು ಹೇಳಿರುವದೇ ಯುಕ್ತ, ಆದರೂ ಸ್ತುತಿಗಾಗಿ ಸಗುಣೋಪಾಸಕರಿಗೆ ಆಗುವ ಫಲಕ್ಕೂ ಭೋಕ್ತೃವಾದವನು ನಿಜವಾಗಿ ಆತ್ಮನೇ ಆಗಿರುವದರಿಂದ ಜ್ಞಾನಿಗೆ ಆ ಫಲವೂ ಆಗುವವೆಂದು ಹೇಳಬಹುದಾಗಿದೆ ಎಂದು ಅಭಿಪ್ರಾಯ.

4. ಹಾಗೆ ಹೇಳಿದ್ದರಿಂದ ಶರೀರೇಂದ್ರಿಯದ ದೋಷವು ಆತ್ಮನಿಗೆ ಬರುವದಲ್ಲ !

ಈತನು ಕಣ್ಣಿನಲ್ಲಿ ನೇರಾಗಿ ಕಾಣಬರುತ್ತಾನೋ ಅದನ್ನು ಹೇಳಬೇಕೆಂದು ಈ ಈ (ಗ್ರಂಥವನ್ನು) ಆರಂಭಿಸಿರುತ್ತದೆ. ಕಣ್ಣಿನಲ್ಲಿದ್ದು ಕಾಣುವದಕ್ಕೆ ಕಾರಣ ವೇನು ? ಎಂದರೆ ಹೇಳುತ್ತಾನೆ, ಆ ದೃಷ್ಟಾಂತವು ಹೇಗೆಂದರೆ ಹೇಗೆ ಪ್ರಯೋಗ್ಯ ವು- ಅಥವಾ (ಆ ಪ್ರಯೋಗ್ಯವು ಎಂದು) ಸಶಬ್ದವನ್ನು ಪ್ರಯೋಗ್ಯಕ್ಕೆ ವಿಶೇಷಣ ವೆಂದಾದರೂ ಹೇಳಬಹುದು. (ಪ್ರಯುಜ್ಯತೇ) ಉಪಯೋಗಿಸಲ್ಪಡುತ್ತದೆಯಾದ್ದ ರಿಂದ ಕುದುರೆ ಅಥವಾ ಎತ್ತು ಪ್ರಯೋಗ್ಯವೆನಿಸುವದು. ಲೋಕದಲ್ಲಿ (ಹೇಗೆ ಪ್ರಯೋಗ್ಯವು) – ಯಾವದರಿಂದ ಸಂಚರಿಸುವರೋ ಆ (ಕುದುರೆ)ಗಾಡಿಯು ಅಥವಾ ಬಂಡಿಯು ಆಚರಣವೆನಿಸುವದು. ಆ ಆಚರಣದಲ್ಲಿ ಅದನ್ನು ಎಳೆಯು ವದಕ್ಕೆ- ನೊಗಕ್ಕೆ ಕಟ್ಟಲ್ಪಟ್ಟಿರುವದೋ ಹಾಗೆ ರಥದಂತಿರುವ ಈ ಶರೀರದಲ್ಲಿ ಪಂಚವೃತ್ತಿಗಳುಳ್ಳ, ಇಂದ್ರಿಯಮನೋಬುದ್ಧಿಗಳಿಂದೊಡಗೂಡಿದ ಪ್ರಾಣವು ಎಂದರೆ ವಿಜ್ಞಾನಕ್ರಿಯಾಶಕ್ತಿಗಳೆಂಬ ಎರಡು (ಶಕ್ತಿ)ಗಳು ಸೇರಿರುವ ಆತ್ಮನಾದ ಪ್ರಜ್ಞಾತ್ಮವು, ಯುಕ್ತವಾಗಿರುತ್ತದೆ, ತನ್ನ ಕರ್ಮಫಲದ ಉಪಭೋಗದ ನಿಮಿತ್ತ ದಿಂದ ನಿಯುಕ್ತವಾಗಿರುತ್ತದೆ,[1] "ಯಾವದು ಉತ್ಕ್ರಾಂತವಾದರೆ ನಾನು ಉತ್ಕ್ರಾಂತನಾಗುವೆನು, ಅಥವಾ ಯಾವದು ನಿಂತುಕೊಂಡಿದ್ದರೆ ನಿಂತುಕೊಂಡಿರು ವೆನು" (ಪ್ರ.೬–೩) ಎಂದು ಆಲೋಚಿಸಿ ನೋಡಿ ಪರಮೇಶ್ವರನು- ರಾಜನು ಸರ್ವಾಧಿಕಾರಿಯನ್ನು ನಿಯಮಿಸುವಂತೆ- ನೋಡುವದು, ಕೇಳುವದು, ಮತ್ತು ಕೆಲಸದ ವ್ಯಾಪಾರದಲ್ಲಿ ಅದನ್ನು ನಿಯೋಜಿಸಿರುತ್ತಾನೆ. ರೂಪವನ್ನು ನೋಡು ವದಕ್ಕೆ ದ್ವಾರವಾಗಿರುವ ಚಕ್ಷುರಿಂದ್ರಿಯವೊ, ಆ ಪ್ರಾಣದ್ದೇ ಮಾತ್ರೆಯು, ಏಕದೇಶವು.[2]

## ಜ್ಞಾನವು ಆತ್ಮನದು, ವಿಶೇಷದರ್ಶನವು ಕರಣದ್ದು

(ಉಪನಿಷತ್ತು)

**ಅಥ ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾ ಣೀತಿ ಸ ಆತ್ಮಾ ಗನ್ಧಾಯ ಘ್ರಾಣಮಥ ಯೋ ವೇದೇದಮಭಿ**

---

1. "ಸ ಏಷ ಪ್ರಾಣ ಏವ ಪ್ರಜ್ಞಾತ್ಮಾ "(ಕೌ. ೩–೮) ಎಂಬ ಕೌಷೀತಕ್ಯುಪನಿಷತ್ತಿನ ಸೂಚನೆಯಿದು. ಇಲ್ಲಿ "ಇನ್ದ್ರಿಯಮನೋಬುದ್ಧಿಸಂಯುಕ್ತಃ" ಎಂಬ ವಾಕ್ಯವು ಕಾಠಕೋ ಪನಿಷತ್ತಿನ ೧–೩–೩, ೪ರ ಸೂಚನೆಯಂತಿದೆಯೆಂದೂ ಪ್ರಾಣನನ್ನೂ ಆತ್ಮನನ್ನೂ ಅಭಿನ್ನವಾಗಿ ಎಣಿಸಿದೆಯೆಂದೂ ಟೀಕೆ. ಆದರೆ ಪ್ರಾಣವು ಕರಣಾತ್ಮಕವೆಂದೂ ಆತ್ಮನು ಅದಕ್ಕಿಂತ ವಿಲಕ್ಷಣ ನೆಂದೂ ಹೇಳುವದಕ್ಕೆ ಹೊರಟಿರುವ ಈ ಪ್ರಕರಣಕ್ಕೆ ಅದು ಒಪ್ಪಾಗಿರುವಂತೆ ತೋರುವದಿಲ್ಲ

2. ಆದ್ದರಿಂದ ಆ ಚಕ್ಷುಸ್ಸು ರೂಪವಿಶೇಷವಿಜ್ಞಾನಕ್ಕಾಗಿ ಈ ಶರೀರದಲ್ಲಿರುತ್ತದೆ. ಇದನ್ನು ಮುಂದೆ ಸ್ಪಷ್ಟಪಡಿಸಲಾಗುವದು.

**ವ್ಯಾಹರಾಣೀತಿ ಸ ಆತ್ಮಾಽಭಿವ್ಯಾಹಾರಾಯ ವಾಗಥ ಯೋ ವೇದೇದಗ್ಂ ಶೃಣವಾನೀತಿ ಸ ಆತ್ಮಾ ಶ್ರವಣಾಯ ಶ್ರೋತ್ರಮ್ ॥ ೪ ॥**

**ಅಥ ಯೋ ವೇದೇದಂ ಮನ್ವಾನೀತಿ ಸ ಆತ್ಮಾ ಮನೋಽಸ್ಯ ದೈವಂ ಚಕ್ಷುಃ ಸ ವಾ ಏಷ ಏತೇನ ದೈವೇನ ಚಕ್ಷುಷಾ ಮನಸೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ ॥ ೫ ॥**

೪-೫. ಇನ್ನು ಎಲ್ಲಿ ಈ ಆಕಾಶವನ್ನು ಚಕ್ಷುಸ್ಸು ಅನುಸರಿಸಿರುವದೋ ಅಲ್ಲಿ ಆ ಚಾಕ್ಷುಷಪುರುಷನು; ದರ್ಶನಕ್ಕೆ ಚಕ್ಷುಸ್ಸು. ಇನ್ನು ಇದನ್ನು ಮೂಸೋಣವೆಂದು ಯಾವನು ಅರಿಯುವನೋ ಅವನು ಆತ್ಮನು, ಗಂಧಕ್ಕೆ ಘ್ರಾಣವು, ಇನ್ನು ಯಾವನು ಇದನ್ನು ನುಡಿಯೋಣವೆಂದು ಅರಿಯುವನೋ ಅವನು ಆತ್ಮನು, ನುಡಿಯುವದಕ್ಕೆ ವಾಕ್ಕು; ಇನ್ನು ಇದನ್ನು ಕೇಳೋಣವೆಂದು ಯಾವನು ಅರಿಯುವನೋ ಅವನು ಆತ್ಮನು, ಕೇಳುವದಕ್ಕೆ ಶ್ರೋತ್ರವು. ಇನ್ನು ಯಾವನು ಇದನ್ನು ಮನನಮಾಡೋಣವೆಂದು ಅರಿಯುವನೋ ಅವನು ಆತ್ಮನು, ಅವನಿಗೆ ಮನಸ್ಸು ದೈವಚಕ್ಷುಸ್ಸು. ಆ ಇವನು ದೈವಚಕ್ಷುಸ್ಸಾದ ಮನಸ್ಸಿನಿಂದ ಈ ಬ್ರಹ್ಮಲೋಕಗಳಲ್ಲಿರುವವಲ್ಲ, ಆ ಕಾಮಗಳನ್ನು ಕಾಣುತ್ತಾ ರಮಿಸುತ್ತಿರುವನು.

## ಅಶರೀರಾತ್ಮನು ಇಂದ್ರಿಯಗಳಲ್ಲಿ ಕಾಣಬರುವ ಬಗೆ

(ಭಾಷ್ಯ)

೬೮೧. ಅಥ ಯತ್ರ ಕೃಷ್ಣತಾರೋಪಲಕ್ಷಿತಮ್ ಆಕಾಶಂ ದೇಹಚ್ಛಿದ್ರಮ್ ಅನುವಿಷಣ್ಣಮ್ ಅನುಷಕ್ತಮ್, ಅನುಗತಂ ಚಕ್ಷುಃ,[1] ತತ್ರ ಸ ಪ್ರಕೃತೋ ಅಶರೀರ ಆತ್ಮಾ ಚಾಕ್ಷುಷಃ, ಚಕ್ಷುಷಿ ಭವ ಇತಿ ಚಾಕ್ಷುಷಃ ಪುರುಷಃ[2] ತಸ್ಯ ದರ್ಶನಾಯ ರೂಪೋಪಲಬ್ಧಯೇ ಚಕ್ಷುಃ ಕರಣಮ್ । ಯಸ್ಯ ತತ್ ದೇಹಾದಿಭಿಃ ಸಂಹತತ್ವಾತ್ ಪರಸ್ಯ ದ್ರಷ್ಟುರರ್ಥೇ, ಸೋಽತ್ರ ಚಕ್ಷುಷಿ ದರ್ಶನೇನ ಲಿಙ್ಗೇನ ದೃಶ್ಯತೇ ಪರೋಽಶರೀರೋಽಸಂಹತಃ । ಅಕ್ಷಿಣಿ ದೃಶ್ಯತ ಇತಿ ಪ್ರಜಾಪತಿನಾ ಉಕ್ತಮ್ ಸರ್ವೇನ್ದ್ರಿಯದ್ವಾರೋಪಲಕ್ಷಣಾರ್ಥಮ್ । ಸರ್ವವಿಷಯೋಪಲಬ್ಧಾ

1. ಈ ಮಾತು ಮೂಲದಲ್ಲಿದ್ದು ಬಿಟ್ಟುಹೋಗಿದೆ.
2. ಈ ಮಾತು ಮೂಲಾನುಸಾರವಾಗಿ ಇಲ್ಲಿರಬೇಕಿತ್ತು.

ಹಿ ಸ ಏವೇತಿ । ಸ್ಫುಟೋಪಲಬ್ಧಿಹೇತುತ್ವಾತ್ತು 'ಅಕ್ಷಿಣಿ' ಇತಿ ವಿಶೇಷವಚನಂ ಸರ್ವಶ್ರುತಿಷು । "ಅಹಮದರ್ಶಮಿತಿ ತತ್ಸತ್ಯಂ ಭವತಿ" (ಬೃ. ೪-೧-೪?)[1] ಇತಿ ಶ್ರುತೇಃ । ಅಥಾಪಿ ಯೋಽಸ್ಮಿನ್ ದೇಹೇ ವೇದ । ಕಥಮ್ ? ಇದಂ ಸುಗನ್ಧಿ ದುರ್ಗನ್ಧಿ ವಾ ಜಿಘ್ರಾಣೀತಿ । ಅಸ್ಯ ಗನ್ಧಂ ವಿಜಾನೀಯಾಮ್ ಇತಿ ಸ ಆತ್ಮಾ ತಸ್ಯ ಗನ್ಧಾಯ ಗನ್ಧವಿಜ್ಞಾನಾಯ ಘ್ರಾಣಮ್ । ಅಥ ಯೋ ವೇದ ಇದಂ ವಚನಮ್ ಅಭಿವ್ಯಾಹರಾಣೀತಿ ವದಿಷ್ಯಾಮೀತಿ ಸ ಆತ್ಮಾ । ಅಭಿವ್ಯಾಹರಣ ಕ್ರಿಯಾಸಿದ್ಧಯೇ ಕರಣಂ ವಾಗಿನ್ದ್ರಿಯಮ್ । ಅಥ ಯೋ ವೇದ ಇದಂ ಶೃಣವಾನೀತಿ ಸ ಆತ್ಮಾ ಶ್ರವಣಾಯ ಶ್ರೋತ್ರಮ್ ॥

(ಭಾಷ್ಯಾರ್ಥ)

ಇನ್ನು ಎಲ್ಲಿ ಕರಿಗುಡ್ಡೆಯಿಂದುಪಲಕ್ಷಿತವಾದ ಆಕಾಶವನ್ನು ದೇಹರಂಧ್ರ ವನ್ನು ಚಕ್ಷುಸ್ಸು ಅನುಸರಿಸಿರುವದೋ ಅಲ್ಲಿ ಆ ಪ್ರಕೃತನಾದ ಅಶರೀರನಾದ ಆತ್ಮನು ಚಾಕ್ಷುಷನಾದ– ಚಕ್ಷುಸ್ಸಿನಲ್ಲಿರುವದರಿಂದ ಚಾಕ್ಷುಷನೆನಿಸುವ– ಪುರುಷ (ನಾಗಿರುವನು). ಅವನಿಗೆ ದರ್ಶನಕ್ಕೆ ರೂಪವನ್ನರಿಯುವದಕ್ಕೆ **ಚಕ್ಷುಸ್ಸು ಕರಣವು.[2] ಅದು ದೇಹಾದಿಗಳಿಂದ ಸಂಹತವಾಗಿರುವದರಿಂದ ಯಾವ ದ್ರಷ್ಟೃವಾದ ಪರಮಾತ್ಮನಿಗಾಗಿರುವದೋ, ಆ ಅಶರೀರನೂ ಅಸಂಹತ ನೂ ಆದ ಪರಮಾತ್ಮನು ಇಲ್ಲಿ ಚಕ್ಷುಸ್ಸಿನಲ್ಲಿ ದರ್ಶನವೆಂಬ ಲಿಂಗದಿಂದ ಕಂಡುಬರುತ್ತಾನೆ.**[3]

"ಕಣ್ಣಿನಲ್ಲಿ ಕಾಣಿಸುತ್ತಾನೆ" ಎಂದು ಪ್ರಜಾಪತಿಯು ಹೇಳಿರುವದು ಎಲ್ಲಾ ಇಂದ್ರಿಯಗಳೆಂಬ ದ್ವಾರಗಳಿಗೂ ಉಪಲಕ್ಷಣಕ್ಕಾಗಿ, ಏಕೆಂದರೆ ಅವನೇ ಎಲ್ಲಾ ವಿಷಯಗಳ ಉಪಲಬ್ಧೃವಾಗಿರುತ್ತಾನೆ. ಸ್ಫುಟವಾಗಿ ಅರಿಯುವದಕ್ಕೆ ಕಾರಣ

---

1. ಇದು ಶ್ರುತಿಯ ಅರ್ಥಮಾತ್ರವೆಂದರೆ ನಾವು ಕೊಟ್ಟಿರುವ ಸ್ಥಾನಾಂಕವು ಸರಿ, ಅಲ್ಲಿ ಪಾಠವು "ಅಥಾದ್ರಾಕ್ಷಮಿತಿ ತತ್ಸತ್ಯಂ ಭವತಿ" ಎಂದೇ ಇದೆ, ಇಲ್ಲಿ ಕೊಟ್ಟಿರುವದು ಶ್ರುತ್ಯಕ್ಷರವೇ ಆದರೆ ನಮಗೆ ಆ ವಾಕ್ಯವು ದೊರೆತಿಲ್ಲ

2. ಚಕ್ಷುಸ್ಸನ್ನು ಕರಣವಾಗಿ ಉಪಯೋಗಿಸಿಕೊಳ್ಳುವದರಿಂದ ಚಾಕ್ಷುಷಪುರುಷನೆನಿಸಿ ರುವನು, ನಿಜವಾಗಿ ನೋಡಿದರೆ ಅವನು ಅಶರೀರನೇ ಎಂದರೆ ದೇಹಕರಣರಹಿತನೇ.

3. ಸಂಹತವಾದದ್ದರ ವ್ಯಾಪಾರವು ಅಸಂಹತವಾದ ಪರಾರ್ಥಕ್ಕಾಗಿ ಎಂಬ ನ್ಯಾಯ ದಿಂದ ಚಕ್ಷುಸ್ಸು ಸಂಹತವಾಗಿರುವದರಿಂದ ದರ್ಶನದ ಫಲವು ಅಸಂಹತನಾದ ಅಶರೀರಾತ್ಮ ನಿಗಾಗಿ ಎಂದು ನಿಶ್ಚಯವಾಗುತ್ತದೆ. ಹೀಗೆ ಚಕ್ಷುಸ್ಸಿನಲ್ಲಿ ದ್ರಷ್ಟೃವಾಗಿರುವವನು ಎಂದು ಅಶರೀರಾತ್ಮನು ಕಂಡುಬರುತ್ತಾನೆ ಎಂಬ ಭಾವದಿಂದ 'ದೃಶ್ಯತೇ' ಎಂದಿದೆ ಎಂದರ್ಥ. ಇಲ್ಲಿ ನಿಜವಾಗಿ ಆತ್ಮನಿಗೆ ಕರ್ತೃತ್ವವಿದೆ ಎಂಬುದೇನೂ ವಿವಕ್ಷಿತವಲ್ಲವೆಂಬುದನ್ನು ನೆನಪಿಡಬೇಕು.

ವಾಗಿರುವದರಿಂದ[1] ಎಲ್ಲಾ ಶ್ರುತಿಗಳಲ್ಲಿಯೂ 'ಚಕ್ಷುಸ್ಸಿನಲ್ಲಿ' ಎಂದೇ ವಿಶೇಷವಾಗಿ ಹೇಳಿರುತ್ತದೆ. "ನಾನು ಕಂಡೆನು ಎಂದು (ಹೇಳುತ್ತಾನಲ್ಲ) ಅದು ಸತ್ಯವಾಗಿರುತ್ತದೆ" (ಬೃ ೪-೧-೪) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).

(ಅಥ= ಅಪಿ) ಮತ್ತು ಯಾವನು ಈ ದೇಹದಲ್ಲಿ ಅರಿಯುತ್ತಾನೋ- ಹೇಗೆ (ಅರಿಯುತ್ತಾನೆ) ಎಂದರೆ- ಈ ಒಳ್ಳೆಯ ವಾಸನೆಯುಳ್ಳ ಅಥವಾ ಕೆಟ್ಟ ವಾಸನೆಯುಳ್ಳ (ವಸ್ತು)ವನ್ನು ಮೂಸೋಣ, ಇದರ ವಾಸನೆಯನ್ನು ಅರಿತುಕೊಳ್ಳೋಣ ಎಂದು (ಯಾವನು ಅರಿಯುತ್ತಾನೋ) ಅವನು ಆತ್ಮನು. ಅವನಿಗೆ ವಾಸನೆಗೆ ವಾಸನೆಯನ್ನು ಅರಿತುಕೊಳ್ಳುವದಕ್ಕೆ **ಘ್ರಾಣವು.** ಮತ್ತು ಈ ವಚನವನ್ನು ನುಡಿಯೋಣ ಹೇಳೋಣ- ಎಂದು ಅರಿಯುತ್ತಾನೋ ಅವನು ಆತ್ಮನು , ನುಡಿಯುವದೆಂಬ ಕ್ರಿಯೆ ಉಂಟಾಗುವದಕ್ಕೆ **ವಾಗಿಂದ್ರಿಯವು** ಕರಣವು. ಇನ್ನು ಯಾವನು ಇದನ್ನು ಕೇಳೋಣ ಎಂದು ಅರಿಯುತ್ತಾನೋ ಅವನು ಆತ್ಮನು . ಕೇಳುವದಕ್ಕೆ ಶ್ರೋತ್ರವು

## ಅರಿವೇ ಆತ್ಮನ ಸ್ವರೂಪವು

(ಭಾಷ್ಯ)

೭೮೨. ಅಥ ಯೋ ವೇದ ಇದಂ ಮನ್ವಾನೀತಿ ಮನನವ್ಯಾಪಾರಮ್ ಇನ್ದ್ರಿಯಾಸಂಸ್ಪೃಷ್ಟಂ ಕೇವಲಂ ಮನ್ವಾನೀತಿ ವೇದ ಸ ಆತ್ಮಾ। ಮನನಾಯ ಮನಃ। ಯೋ ವೇದ ಸ ಆತ್ಮಾ ಇತ್ಯೇವಂ ಸರ್ವತ್ರ ಪ್ರಯೋಗಾದ್ ವೇದನಮಸ್ಯ ಸ್ವರೂಪಮಿತಿ ಅವಗಮ್ಯತೇ । ಯಥಾ ಯಃ ಪುರಸ್ತಾತ್ ಪ್ರಕಾಶಯತಿ ಸ ಆದಿತ್ಯಃ, ಯೋ ದಕ್ಷಿಣತೋ ಯಃ ಪಶ್ಚಾತ್, ಯ ಉತ್ತರತೋ ಯ ಊರ್ಧ್ವಂ ಪ್ರಕಾಶಯತಿ ಸ ಆದಿತ್ಯಃ ಇತ್ಯುಕ್ತೇ ಪ್ರಕಾಶಸ್ವರೂಪಃ ಸ ಇತಿ ಗಮ್ಯತೇ। ದರ್ಶನಾದಿಕ್ರಿಯಾನಿರ್ವೃತ್ತ್ಯರ್ಥಾನಿ ತು ಚಕ್ಷುರಾದಿಕರಣಾನಿ। ಇದಂ ಚಾಸ್ಯ ಆತ್ಮನಃ ಸಾಮರ್ಥ್ಯಾದವಗಮ್ಯತೇ, ಆತ್ಮನಃ ಸತ್ತಾಮಾತ್ರ ಏವ ಜ್ಞಾನಕರ್ತೃತ್ವಂ ನ ತು ವ್ಯಾಪೃತತಯಾ। ಯಥಾ ಸವಿತುಃ, ಸತ್ತಾಮಾತ್ರ ಏವ ಪ್ರಕಾಶನಕರ್ತೃತ್ವಂ ನ ತು ವ್ಯಾಪೃತತಯೇತಿ, ತದ್ವತ್ ॥

(ಭಾಷ್ಯಾರ್ಥ)

ಇನ್ನು ಯಾವನು ಇದನ್ನು ಮನನಮಾಡೋಣ. ಇಂದ್ರಿಯವ್ಯಾಪಾರದ ಸೋಂಕಿಲ್ಲದ ಬರಿಯ ಮನನವ್ಯಾಪಾರವನ್ನು ಮಾಡೋಣ ಎಂದು ಅರಿಯುತ್ತಾನೋ, ಅವನು ಆತ್ಮನು , ಮನನಕ್ಕೆ ಮನಸ್ಸು

---

1 ಮಿಕ್ಕ ಜ್ಞಾನೇಂದ್ರಿಯಗಳಿಗಿಂತಲೂ ಕಣ್ಣಿನಲ್ಲಿ ಸ್ಫುಟತರವಾಗಿ ತಿಳಿಯಬರುತ್ತದೆ ಎಂದರ್ಥ

**"ಯಾವನು ಅರಿಯುತ್ತಾನೋ, ಅವನು ಆತ್ಮನು' ಎಂದಿಂತು ಎಲ್ಲೆಲ್ಲಿಯೂ ಪ್ರಯೋಗಿಸಿರುವದರಿಂದ ಅರಿವೇ ಇವನ ಸ್ವರೂಪವೆಂದು ಗೊತ್ತಾಗುತ್ತದೆ.** ಹೇಗೆ ಯಾವನು ಮುಂದುಗಡೆ ಬೆಳಗುತ್ತಾನೋ ಅವನು ಆದಿತ್ಯನು, ಯಾವನು ಬಲಕ್ಕೆ, ಯಾವನು ಹಿಂದಕ್ಕೆ, ಯಾವನು ಎಡಕ್ಕೆ ಯಾವನು ಮೇಲಕ್ಕೆ (ಎಲ್ಲೆಲ್ಲಿಯೂ) ಪ್ರಕಾಶಿಸುತ್ತಿರುವನೋ ಅವನೇ ಆದಿತ್ಯನು ಎಂದು ಹೇಳಿದರೆ ಅವನು ಪ್ರಕಾಶಸ್ವರೂಪನು ಎಂದು ಗೊತ್ತಾಗುತ್ತದೆಯೋ (ಹಾಗೆಯೇ ಇದು) ನೋಡುವದೇ ಮುಂತಾದ ಕ್ರಿಯೆಗಳನ್ನು ಮಾಡುವದಕ್ಕೇ ಚಕ್ಷುರಾದಿ ಕರಣಗಳು (ಇರುತ್ತವೆ), ಮತ್ತು **ಆತ್ಮನ ಇರವುಮಾತ್ರವೇ ಜ್ಞಾನಕರ್ತೃತ್ವವೇ ಹೊರತು (ಆಯಾ) ಕೆಲಸವನ್ನು ಮಾಡುವದರಿಂದಲ್ಲ ಎಂಬಿದೂ ಅರ್ಥವಶದಿಂದ ಗೊತ್ತಾಗುತ್ತದೆ.** ಸೂರ್ಯನ ಇರವು ಮಾತ್ರವೇ ಬೆಳಗುವದೆಂಬ (ಕ್ರಿಯೆಗೆ) ಕರ್ತೃವಾಗಿರುವದೇ ಹೊರತು (ಬೆಳಗುವ) ವ್ಯಾಪಾರವನ್ನು ಮಾಡುವದರಿಂದಲ್ಲ ಎಂಬುದು ಹೇಗೋ (ಹಾಗೆಯೇ ಇದು)

## ಮುಕ್ತನಿಗೆ ದೈವಮನಸ್ಸಿನಿಂದ ಸರ್ವಕಾಮಾವಾಪ್ತಿ

(ಭಾಷ್ಯ)

೭೮೩. ಮನೋಽಸ್ಯಾಽಽತ್ಮನಃ ದೈವಮ್ ಅಪ್ರಾಕೃತಮ್ ಇತರೇನ್ದ್ರಿಯೈರಸಾಧಾರಣಂ ಚಕ್ಷುಃ । ಚಷ್ಟೇ ಪಶ್ಯತಿ ಅನೇನೇತಿ ಚಕ್ಷುಃ । ವರ್ತಮಾನಕಾಲವಿಷಯಾಣಿ ಚೇನ್ದ್ರಿಯಾಣಿ । ಅತೋಽದೈವಾನಿ ತಾನಿ । ಮನಸ್ತು ತ್ರಿಕಾಲವಿಷಯೋಪಲಬ್ಧಿಕರಣಂ ವ್ಯವಹಿತದೋಷಂ ಚ ಸೂಕ್ಷ್ಮವ್ಯವಹಿತಾದಿಸರ್ವೋಪಲಬ್ಧಿಕರಣಂ ಚ ಇತಿ ದೈವಂ ಚಕ್ಷುರುಚ್ಯತೇ । ಸ ವೈ ಮುಕ್ತಃ ಸ್ವರೂಪಾಪನ್ನೋ ಅವಿದ್ಯಾಕೃತದೇಹೇನ್ದ್ರಿಯಮನೋವಿಯುಕ್ತಃ, ಸರ್ವಾತ್ಮಭಾವಮಾಪನ್ನಃ ಸನ್ ಏಷ ವ್ಯೋಮವದ್ ವಿಶುದ್ಧಃ ಸರ್ವೇಶ್ವರೋ ಮನಉಪಾಧಿಃ[1] ಸನ್ ಏತೇನೈವೇಶ್ವರೇಣ ಮನಸಾ ಏತಾನ್ ಕಾಮಾನ್ ಸವಿತೃಪ್ರಕಾಶವನ್ನಿತ್ಯಪ್ರತತೇನ ದರ್ಶನೇನ ಪಶ್ಯನ್ ರಮತೇ । ಕಾನ್ ಕಾಮಾನಿತಿ ವಿಶಿನಷ್ಟಿ । ಯ ಏತೇ ಬ್ರಹ್ಮಲೋಕೇ[2] ಹಿರಣ್ಯನಿಧಿವದ್ ಬಾಹ್ಯವಿಷಯಾಸಙ್ಗಾನೃತೇನಾಪಿಹಿತಾಃ ಸಂಕಲ್ಪಮಾತ್ರಲಭ್ಯಾಃ ತಾನ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮನಸ್ಸು ಈ ಆತ್ಮನಿಗೆ ದೈವವಾದ, ಎಂದರೆ ಪ್ರಾಕೃತವಲ್ಲದ ಮಿಕ್ಕ ಇಂದ್ರಿಯಗಳಂತಲ್ಲದ ಚಕ್ಷುಸ್ಸು, ಇದರಿಂದ (ಚಷ್ಟೇ) ಕಾಣುತ್ತಾನಾದ್ದರಿಂದ ಚಕ್ಷುಸ್ಸು;

---

1. 'ಸರ್ವೇಶ್ವರೋ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. "ಬ್ರಹ್ಮಣಿ ಲೋಕೇ" ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

ಇಂದ್ರಿಯಗಳಿಗೆ ವರ್ತಮಾನಕಾಲದ ವಿಷಯಗಳೇ ಇರುವವಾದ್ದರಿಂದ ಅವು ಅದೈವಗಳು. ಆದರೆ ಮನಸ್ಸು ಮೂರು ಕಾಲದ ವಿಷಯಗಳನ್ನೂ ಕಾಣುವದಕ್ಕೆ ಕರಣವಾಗಿರುತ್ತದೆ ; ಯಾವ ದೋಷವೂ ಇಲ್ಲದ್ದು ಸೂಕ್ಷ್ಮವೂ ವ್ಯವಹಿತವೂ (ಆಗಿರುವ ವಸ್ತುವೇ) ಮುಂತಾದ ಎಲ್ಲವನ್ನೂ ಅರಿಯುವದಕ್ಕೆ ಕಾರಣವಾಗಿರುವದರಿಂದ (ಅದನ್ನು) ದೈವಚಕ್ಷುಸ್ಸು ಎಂದಿದೆ.

ಆ ಮುಕ್ತನು ಸ್ವರೂಪವನ್ನು ಪಡೆದುಕೊಂಡವನಾಗಿ ಅವಿದ್ಯೆಯಿಂದಾಗಿದ್ದ ದೇಹ, ಇಂದ್ರಿಯ, ಮನಸ್ಸು-ಇವುಗಳಿಲ್ಲದವನಾಗಿ, ಸರ್ವಾತ್ಮಭಾವವನ್ನು ಹೊಂದಿದವನಾಗಿರುವ ಈ ಆಕಾಶದಂತೆ ನಿರ್ಮಲನಾಗಿರುವ (ಮುಕ್ತನು) ಸರ್ವಸ್ವತಂತ್ರನಾದ ಮನಸ್ಸೆಂಬ ಉಪಾಧಿಯುಳ್ಳವನಾಗಿ[1] ಈ ಸ್ವತಂತ್ರವಾದ ಮನಸ್ಸಿನಿಂದಲೇ ಈ ಕಾಮಗಳನ್ನು ಸೂರ್ಯನ ಪ್ರಕಾಶದಂತೆ ನಿತ್ಯವೂ ವ್ಯಾಪಿಸಿಕೊಂಡಿರುವ ದರ್ಶನದಿಂದ[2] ಕಾಣುತ್ತಾ ರಮಿಸುತ್ತಿರುವನು. ಯಾವ ಕಾಮಗಳನ್ನು ಎಂಬುದನ್ನು ವಿಶೇಷವಾಗಿ (ಶ್ರುತಿ) ಹೇಳುತ್ತಿದೆ. ಬ್ರಹ್ಮಲೋಕದಲ್ಲಿ ಹಿರಣ್ಯನಿಧಿಯಂತೆ ಹೊರಗಿನ ವಿಷಯಗಳ ಆಸಂಗವೆಂಬ ಅನೃತದಿಂದ ಮುಚ್ಚಲ್ಪಟ್ಟಿರುವವಾಗಿ[3] ಸಂಕಲ್ಪಮಾತ್ರವಾಗಿರುವವಲ್ಲ, (ಆ ಕಾಮಗಳನ್ನು ಕಾಣುತ್ತಾ ರಮಿಸುತ್ತಿರುವನು) ಎಂದರ್ಥ.

## ದೇವತೆಗಳಿಗೆ ಈ ಜ್ಞಾನದಿಂದಾದ ಫಲ

(ಉಪನಿಷತ್ತು)

**ತಂ ವಾ ಏತಂ ದೇವಾ ಆತ್ಮಾನಮುಪಾಸತೇ ತಸ್ಮಾತ್ ತೇಷಾಗ್ಂ ಸರ್ವೇ ಚ ಲೋಕಾ ಆತ್ತಾಃ ಸರ್ವೇ ಚ ಕಾಮಾಃ ಸ ಸರ್ವಾಗ್ಂಶ್ಚ ಲೋಕಾನಾಪ್ನೋತಿ ಸರ್ವಾಗ್ಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ಪ್ರಜಾಪತಿರುವಾಚ ॥ ೬ ॥**

೬. ಆ ಈ ಆತ್ಮನನ್ನು ದೇವತೆಗಳು ಉಪಾಸನೆಮಾಡುತ್ತಾರೆ. ಆದ್ದರಿಂದ ಅವರಿಗೆ ಎಲ್ಲಾ ಲೋಕಗಳೂ ಸ್ವಾಯತ್ತವಾಗಿವೆ, ಸರ್ವಕಾಮಗಳೂ (ಸಿಕ್ಕಿರುತ್ತವೆ). ಯಾವನು ಆ ಆತ್ಮನನ್ನು ತಿಳಿದು

---

1. ಬದ್ಧನಾಗಿದ್ದಾಗ ಮನಸ್ಸಿನ ಶಕ್ತಿಯು ಪರಿಮಿತವಾಗಿತ್ತು, ಈಗ ಅದಕ್ಕೆ ಯಾವ ತಡೆಯೂ ಇಲ್ಲ.

2. ಈ ದರ್ಶನವು ಮತ್ತೆಮತ್ತೆ ಹುಟ್ಟುಹೊಂದುಗಳನ್ನು ಪಡೆಯುವದಿಲ್ಲ ಎಂದಭಿಪ್ರಾಯ.

3. ವಿಷಯಾಸಂಗದಿಂದಲೇ ಅವು ತನ್ನಲ್ಲಿರುವವೆಂಬುದು ತಿಳಿಗಿಲ್ಲ ಎಂದರ್ಥ.

ಕೊಂಡು ಅರಿತುಕೊಳ್ಳುವನೋ ಅವನು ಸರ್ವಲೋಕಗಳನ್ನೂ ಸರ್ವ ಕಾಮಗಳನ್ನೂ ಪಡೆದುಕೊಳ್ಳುವನು- ಎಂದು ಪ್ರಜಾಪತಿಯು ಹೇಳಿದನು, ಪ್ರಜಾಪತಿಯು ಹೇಳಿದನು.

## ದೇವತೆಗಳಿಗೆ
## ಆತ್ಮಜ್ಞಾನದಿಂದ ಸರ್ವಲೋಕಕಾಮಗಳೂ ದೊರಕಿವೆ

(ಭಾಷ್ಯ)

೭೮೪. ಯಸ್ಮಾದೇಷ ಇನ್ದ್ರಾಯ ಪ್ರಜಾಪತಿನೋಕ್ತ ಆತ್ಮಾ, ತಸ್ಮಾತ್ ತತಃ ಶ್ರುತ್ವಾ ತಮಾತ್ಮಾನಮ್ ಅದ್ಯತ್ವೇಽಪಿ ದೇವಾ ಉಪಾಸತೇ | ತದುಪಾಸನಾಚ್ಚ ತೇಷಾಂ ಸರ್ವೇ ಚ ಲೋಕಾ ಆತ್ತಾಃ ಪ್ರಾಪ್ತಾಃ ಸರ್ವೇ ಚ ಕಾಮಾಃ । ಯದರ್ಥಂ ಹಿ ಇನ್ದ್ರ ಏಕಶತಂ ವರ್ಷಾಣಿ ಪ್ರಜಾಪತೌ ಬ್ರಹ್ಮಚರ್ಯಮ್ ಉವಾಸ ತತ್ಫಲಂ ಪ್ರಾಪ್ತಂ ದೇವೈಃ ಇತ್ಯಭಿಪ್ರಾಯಃ । ತದ್ಯುಕ್ತಂ ದೇವಾನಾಂ ಮಹಾಭಾಗ್ಯತ್ವಾತ್, ನ ತ್ವಿದಾನೀಂ ಮನುಷ್ಯಾಣಾಮ್ ಅಲ್ಪಜೀವಿತತ್ವಾತ್, ಮನ್ದತರಪ್ರಜ್ಞತ್ವಾಚ್ಚ ಸಂಭವತೀತಿ ಪ್ರಾಪ್ತೇ ಇದಮುಚ್ಯತೇ ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಇದಾನೀಂತನೋಽಪಿ । ಕೋಽಸೌ ? ಇನ್ದ್ರಾದಿವತ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಸಾಮಾನ್ಯೇನ ಕಿಲ ಪ್ರಜಾಪತಿರುವಾಚ । ಅತಃ ಸರ್ವೇಷಾಮ್ ಆತ್ಮಜ್ಞಾನಂ ತತ್ಫಲಪ್ರಾಪ್ತಿಶ್ಚ ತುಲ್ಯೈವ ಭವತೀತ್ಯರ್ಥಃ । ದ್ವಿರ್ವಚನಂ ಪ್ರಕರಣಸಮಾಪ್ತ್ಯರ್ಥಮ್ ॥

(ಭಾಷ್ಯಾರ್ಥ)

ಈ ಆತ್ಮನನ್ನು ಇಂದ್ರನಿಗೆ ಪ್ರಜಾಪತಿಯು ಹೇಳಿದನಷ್ಟೆ ? ಆದ್ದರಿಂದ ಅವನಿಂದ ಶ್ರವಣಮಾಡಿ ಆ ಆತ್ಮನನ್ನು ಈಗಲೂ ದೇವತೆಗಳು ಉಪಾಸನೆಮಾಡುತ್ತಿರುತ್ತಾರೆ. ಮತ್ತು ಆ ಉಪಾಸನೆಯಿಂದ ಆ (ದೇವತೆ)ಗಳಿಗೆ ಎಲ್ಲಾ ಲೋಕಗಳೂ ಸ್ವಾಯತ್ತವಾಗಿವೆ, ದೊರಕಿವೆ, ಎಲ್ಲಾ ಕಾಮಗಳೂ (ದೊರಕಿವೆ). ಯಾವದಕ್ಕಾಗಿ ಇಂದ್ರನು ನೂರೊಂದು ವರ್ಷಗಳವರೆಗೆ ಪ್ರಜಾಪತಿಯ ಬಳಿಯಲ್ಲಿ ಬ್ರಹ್ಮಚರ್ಯವಾಸವನ್ನು ಮಾಡಿದನೋ ಆ ಫಲವು ದೇವತೆಗಳಿಗೆ ಸಿಕ್ಕಿದೆ ಎಂದು ಅಭಿಪ್ರಾಯ.

**ದೇವತೆಗಳು ಮಹಾತ್ಮರಾದ್ದರಿಂದ (ಅದು) ಸರಿಯಾಯಿತು ; ಆದರೆ ಈಗ ಮನುಷ್ಯರು ಸ್ವಲ್ಪವೇ ಆಯುಸ್ಸುಳ್ಳವರಾದ್ದರಿಂದಲೂ ಬಹಳ ಕಡಿಮೆಯ ತಿಳಿವಳಿಕೆಯುಳ್ಳವರಾದ್ದರಿಂದಲೂ (ಅದು) ಸಂಭವಿಸಲಾರದು- ಎಂಬ ಶಂಕೆಯು ಪ್ರಾಪ್ತವಾಗಲಾಗಿ ಇದನ್ನು ಶ್ರುತಿ**

**ಹೇಳುತ್ತಿದೆ :** ಅವನು ಈಗಿನವನಾದರೂ ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೆ. ಯಾರವನು ? ಎಂದರೆ ಇಂದ್ರನೇ ಮೊದಲಾದವರಂತೆ[1] ಆತ್ಮನನ್ನು ತಿಳಿದುಕೊಂಡು[2] ಯಾವನು ಅರಿತುಕೊಳ್ಳುವನೋ ಅವನು–ಎಂದು (ಎಲ್ಲರಿಗೂ) ಸಮಾನವಾಗಿಯೇ[3] ಪ್ರಜಾಪತಿಯು ಹೇಳಿರುತ್ತಾನೆ. ಆದ್ದರಿಂದ ಎಲ್ಲರಿಗೂ ಆತ್ಮಜ್ಞಾನವೂ ಅದರ ಫಲಪ್ರಾಪ್ತಿಯೂ ಸಮಾನವಾಗಿಯೇ ಆಗುತ್ತದೆ ಎಂದರ್ಥ (ಪ್ರಜಾಪತಿರುವಾಚ ಎಂದು) ಎರಡು ಸಲ ಹೇಳಿರುವದು (ಈ) ಪ್ರಕರಣಸಮಾಪ್ತಿ(ಯನ್ನು ಸೂಚಿಸು)ವದಕ್ಕಾಗಿ.

---

# ಎಂಟನೆಯ ಅಧ್ಯಾಯ-ಹದಿಮೂರನೆಯ ಖಂಡ

( ಜಪಧ್ಯಾನಾರ್ಥಮಂತ್ರಗಳು )

## ಉಪಾಸಕನಿಗೆ ಮಂತ್ರ

(ಉಪನಿಷತ್ತು)

**ಶ್ಯಾಮಾಚ್ಛಬಲಂ ಪ್ರಪದ್ಯೇ ಶಬಲಾಚ್ಛ್ಯಾಮಂ ಪ್ರಪದ್ಯೇಽಶ್ವ ಇವ ರೋಮಾಣಿ ವಿಧೂಯ ಪಾಪಂ ಚನ್ದ್ರ ಇವ ರಾಹೋರ್ಮುಖಾತ್ ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮೀತ್ಯಭಿಸಂಭವಾಮೀತಿ ॥ ೧ ॥**

೧. ಶ್ಯಾಮದಿಂದ ಶಬಲವನ್ನು ಹೊಂದುವೆನು; ಶಬಲದಿಂದ ಶ್ಯಾಮವನ್ನು ಪಡೆದಿರುತ್ತೇನೆ. ಕುದುರೆಯು ಮೈಗೂದಲುಗಳನ್ನು ಹೇಗೋ ಹಾಗೆ ಪಾಪವನ್ನು ಕೊಡವಿಹಾಕಿ, ಚಂದ್ರನು ರಾಹುವಿನ ಮುಖದಿಂದ ಬಿಡುಗಡೆಹೊಂದಿದವನು ಹೇಗೋ ಹಾಗೆ ಶರೀರವನ್ನು ಕೊಡವಿಹಾಕಿ ಕೃತಾತ್ಮನಾಗಿ ಅಕೃತವಾದ ಬ್ರಹ್ಮಲೋಕವನ್ನು ಪಡೆದುಕೊಳ್ಳುವೆನು, ಪಡೆದುಕೊಳ್ಳುವೆನು.

## ಉಪಾಸಕನು ಮಾಡುವ ಬ್ರಹ್ಮಲೋಕಧ್ಯಾನ

(ಭಾಷ್ಯ)

೬೮೫. 'ಶ್ಯಾಮಾತ್ ಶಬಲಂ ಪ್ರಪದ್ಯೇ' ಇತ್ಯಾದಿಮನ್ತ್ರಾಮ್ನಾಯಃ ಪಾವನೋ ಜಪಾರ್ಥಶ್ಚ ಆಧ್ಯಾನಾರ್ಥೋ[4] ವಾ। ಶ್ಯಾಮೋ ಗಮ್ಭೀರೋ ವರ್ಣಃ।

---

1. ಇವನಲ್ಲದೆ ಅನೇಕರು ಆತ್ಮನನ್ನು ಅರಿತುಕೊಂಡಿರುತ್ತಾರೆ.
2. ಶಾಸ್ತ್ರಾಚಾರ್ಯರಿಂದ ತಿಳಿದುಕೊಂಡು.
3. ಎಲ್ಲರಿಗೂ ಆಗುವದೆಂದೇ.
4. 'ಧ್ಯಾನಾರ್ಥೋ' ಪಾ॥

ಶ್ಯಾಮ ಇವ ಶ್ಯಾಮಃ ಹಾರ್ದಂ ಬ್ರಹ್ಮ। ಅತ್ಯನ್ತದುರವಗಾಹ್ಯತ್ವಾತ್। ತದ್ ಹಾರ್ದಂ ಬ್ರಹ್ಮ ಜ್ಞಾತ್ವಾ ಧ್ಯಾನೇನ ತಸ್ಮಾತ್ ಶ್ಯಾಮಾತ್ ಶಬಲಮ್ ಶಬಲ ಇವ ಶಬಲಃ, ಅರಣ್ಯಾದ್ಯನೇಕಕಾಮಮಿಶ್ರತ್ವಾದ್ ಬ್ರಹ್ಮಲೋಕಸ್ಯ ಶಾಬಲ್ಯಮ್। ತಂ ಬ್ರಹ್ಮಲೋಕಂ ಶಬಲಂ ಪ್ರಪದ್ಯೇ। ಮನಸಾ ಶರೀರಪಾತಾದ್ವಾ ಊರ್ಧ್ವಂ ಗಚ್ಛೇಯಮ್। ಯಸ್ಮಾದಹಂ ಶಬಲಾದ್ ಬ್ರಹ್ಮಲೋಕಾತ್, ನಾಮರೂಪ ವ್ಯಾಕರಣಾಯ ಶ್ಯಾಮಂ ಪ್ರಪದ್ಯೇ। ಹಾರ್ದಭಾವಂ ಪ್ರಪನ್ನೋಽಸ್ಮಿ ಇತ್ಯಭಿಪ್ರಾಯಃ। ಅತಸ್ತಮೇವ ಪ್ರಕೃತಿಸ್ವರೂಪಮಾತ್ಮಾನಂ ಶಬಲಂ ಪ್ರಪದ್ಯ ಇತ್ಯರ್ಥಃ। ಕಥಂ ಶಬಲಂ ಬ್ರಹ್ಮಲೋಕಂ ಪ್ರಪದ್ಯ ಇತಿ? ಉಚ್ಯತೇ। ಅಶ್ವ ಇವ ಸ್ವಾನಿ ಲೋಮಾನಿ ವಿಧೂಯ ಕಮ್ಪನೇನ ಶ್ರಮಂ ಪಾಂಸ್ವಾದಿ ಚ ರೋಮತೋಽಪನೀಯ ಯಥಾ ನಿರ್ಮಲೋ ಭವತಿ, ಏವಂ ಹಾರ್ದಬ್ರಹ್ಮಜ್ಞಾನೇನ ವಿಧೂಯ ಪಾಪಂ ಧರ್ಮಾಧರ್ಮಾಖ್ಯಂ ಚನ್ದ್ರ ಇವ ಚ ರಾಹುಗ್ರಸ್ತಃ, ತಸ್ಮಾದ್ ರಾಹೋರ್ಮುಖಾತ್ ಪ್ರಮುಚ್ಯ ಭಾಸ್ವರೋ ಭವತಿ ಯಥಾ। ಏವಂ ಧೂತ್ವಾ ಪ್ರಹಾಯ ಶರೀರಂ ಸರ್ವಾನರ್ಥಾಶ್ರಯಂ ಇಹೈವ, ಧ್ಯಾನೇನ ಕೃತಾತ್ಮಾ ಕೃತಕೃತ್ಯಃ ಸನ್, ಅಕೃತಂ ನಿತ್ಯಂ ಬ್ರಹ್ಮಲೋಕಮ್ ಅಭಿಸಂಭವಾಮೀತಿ। ದ್ವಿರ್ವಚನಮ್ ಮನ್ತ್ರಸಮಾಪ್ತ್ಯರ್ಥಮ್॥

(ಭಾಷ್ಯಾರ್ಥ)

"ಶ್ಯಾಮಾಚ್ಛಬಲಂ ಪ್ರಪದ್ಯೇ" ಎಂದುಮುಂತಾಗಿರುವ ಮಂತ್ರವನ್ನು (ಇಲ್ಲಿ) ಪಠಿಸಿರುವುದು (ಅದು) ಪಾವನವಾಗಿದೆ ಎಂಬ ಕಾರಣದಿಂದ ಮತ್ತು (ಅದನ್ನು) ಜಪಿಸಬೇಕು ಎಂಬ ಕಾರಣದಿಂದಲೂ[1] (ಆಗಿದೆ). ಅಥವಾ (ಇಲ್ಲಿ ಹೇಳಿರುವಂತೆ) ಧ್ಯಾನಮಾಡಬೇಕು ಎಂದಾದರೂ ಹೇಳಬಹುದು.[2]

ಶ್ಯಾಮ (ಕಪ್ಪು) ಎಂಬುದು ದಟ್ಟವಾಗಿರುವ (ಕಪ್ಪು)ಬಣ್ಣ. ಶ್ಯಾಮದಂತಿರುವದರಿಂದ ಹಾರ್ದಬ್ರಹ್ಮವನ್ನು ಶ್ಯಾಮವು ಎಂದಿದೆ, ಏಕೆಂದರೆ (ಅದು) ಅತ್ಯಂತವಾಗಿ ದುಷ್ಪ್ರವೇಶ್ಯವಾಗಿರುತ್ತದೆ.[3] ಆ ಹಾರ್ದಬ್ರಹ್ಮವನ್ನು ಧ್ಯಾನದಿಂದ ಅರಿತುಕೊಂಡು[4] ಶ್ಯಾಮದಿಂದ ಶಬಲವನ್ನು- (ಚಿತ್ರವರ್ಣದ್ದನ್ನು)-ಶಬಲದಂತೆ ಇರುವದ

---

1. ಈ ಮಂತ್ರವನ್ನು ಜಪಿಸುವದರಿಂದ ಉಪಾಸಕನ ಅಂತಃಕರಣವು ಪವಿತ್ರವಾಗಿ ಉಪಾಸನೆಯು ಸುಲಭವಾಗಿ ಆಳವಡುವದು ಎಂದು ಭಾವ.

2 ಮಂತ್ರದಲ್ಲಿರುವ ಅಭಿಪ್ರಾಯದಂತೆ ಧ್ಯಾನವನ್ನು ಮಾಡುತ್ತಿದ್ದರೆ ಹಾರ್ದಬ್ರಹ್ಮವಿದ್ಯೆಯು ವೀರ್ಯವತ್ತರವಾಗುವದು ಎಂದು ಭಾವ. ಈ ವ್ಯಾಖ್ಯಾನದಂತೆ ಹಾರ್ದಬ್ರಹ್ಮವಿದ್ಯೆಗೆ ಇದೂ ಅಂಗವಾಗಿರುತ್ತದೆ.

3 ಉಪಾಸಕರಲ್ಲದವರು ಹೊರಗಿನ ಕಾಮಗಳನ್ನೇ ಬೆನ್ನಟ್ಟುವದರಿಂದ ಅವರಿಗೆ ಹಾರ್ದಬ್ರಹ್ಮವು ದುರವಗಾಹ್ಯವಾಗಿರುತ್ತದೆ.

4. ಸಾಕ್ಷಾತ್ಕಾರಮಾಡಿಕೊಂಡು ಎಂದರ್ಥ.

ರಿಂದ ಶಬಲವು. ಅರ, ಣ್ಯ- ಮುಂತಾದ ಅನೇಕ ಕಾಮಗಳಿಂದ ಮಿಶ್ರವಾಗಿರುವದರಿಂದ ಬ್ರಹ್ಮಲೋಕದಲ್ಲಿ ಶಬಲತ್ವ(ವನ್ನು ಹೇಳಿದೆ). ಆ ಬ್ರಹ್ಮಲೋಕವೆಂಬ ಶಬಲವನ್ನು- ಮನಸ್ಸಿನಿಂದ ಸೇರುವೆನು, ಅಥವಾ ಶರೀರಪಾತವಾದಮೇಲೆ ಹೋಗಿ ಸೇರುವೆನು ,[1] ಏಕೆಂದರೆ ನಾನು ಶಬಲವಾದ ಬ್ರಹ್ಮಲೋಕದಿಂದ ನಾಮರೂಪವ್ಯಾಕರಣಕ್ಕಾಗಿ ಶ್ಯಾಮವನ್ನು ಸೇರಿರುತ್ತೇನೆ, ಹಾರ್ದಭಾವವನ್ನು ಪಡೆದಿರುತ್ತೇನೆ ಎಂದರ್ಥ.[2] ಆದ್ದರಿಂದ (ನನ್ನ) ಪ್ರಕೃತಿಸ್ವರೂಪವಾದ ಆತ್ಮನಾದ ಆ ಶಬಲವನ್ನೇ ಸೇರುತ್ತೇನೆ ಎಂದರ್ಥ.

ಶಬಲವಾದ ಬ್ರಹ್ಮಲೋಕವನ್ನು ಹೇಗೆ ಸೇರುವೆ ?- ಎಂದರೆ ಹೇಳಲಾಗುತ್ತದೆ. ಕುದುರೆಯು ತನ್ನ ಮೈಗೂದಲುಗಳನ್ನು ಕೊಡಹಿ ಚೆನ್ನಾಗಿ ಒದರಿಕೊಂಡು ಆಯಾಸವನ್ನೂ ಧೂಳು ಮುಂತಾದದ್ದನ್ನೂ ಮೈಗೂದಲಿನಿಂದ ತೆಗೆದುಹಾಕಿಕೊಂಡು ಹೇಗೆ ನಿರ್ಮಲವಾಗುತ್ತದೆಯೋ, ಹಾಗೆಯೇ ಹಾರ್ದಬ್ರಹ್ಮದ ಜ್ಞಾನದಿಂದ ಧರ್ಮಾಧರ್ಮಗಳೆಂಬ ಪಾಪವನ್ನು[3] ಕೊಡಹಿಕೊಂಡು, ಮತ್ತು ರಾಹುಗ್ರಸ್ತನಾದ ಚಂದ್ರನು ಆ ರಾಹುವಿನಿಂದ ಬಿಡುಗಡೆಯಾಗಿ ಹೇಗೆ ಪ್ರಕಾಶಮಯನಾಗುವನೋ ಹಾಗೆ ಸರ್ವಾನರ್ಥಗಳಿಗೂ ಆಶ್ರಯವಾಗಿರುವ ಶರೀರವನ್ನು ಕೊಡಹಿಕೊಂಡು ಇಲ್ಲಿಯೇ ಧ್ಯಾನದಿಂದ ನಾಶಮಾಡಿಕೊಂಡು[4] ಕೃತಾತ್ಮನಾಗಿ ಕೃತಕೃತ್ಯನಾಗಿ ಅಕೃತವಾದ ನಿತ್ಯವಾದ ಬ್ರಹ್ಮಲೋಕವನ್ನು ಪಡೆದುಕೊಳ್ಳುವೆನು. (ಪಡೆದುಕೊಳ್ಳುವೆನು ಎಂಬುದನ್ನು) ಎರಡು ಸಲ ಹೇಳಿರುವದು ಮಂತ್ರದ ಪರಿಸಮಾಪ್ತಿಯನ್ನು (ಸೂಚಿಸುವದಕ್ಕೆ).

---

1. ಈಗಲೇ ಫಲವಾಗಿರುವ ಬ್ರಹ್ಮಲೋಕವನ್ನು ಮುಟ್ಟಿದಂತೆ ಧ್ಯಾನವು ಅಳವಡಲಿ, ಶರೀರವು ಬಿದ್ದ ಬಳಿಕ ಅದರ ಪ್ರಾಪ್ತಿಯೇ ಆಗಲಿ '- ಎಂದರ್ಥ. ಧ್ಯಾನವು ಬಲವಾದರೆ ಲೋಕಪ್ರಾಪ್ತಿಯು ಅವಶ್ಯವಾಗಿ ಆಗುತ್ತದೆ ಎಂದು ಅಭಿಪ್ರಾಯ.

2. ಹೃದಯದಲ್ಲಿರುವ ಆತ್ಮನೂ ಬ್ರಹ್ಮಲೋಕದಲ್ಲಿರುವ ಆತ್ಮನೂ ಒಬ್ಬನೇ ಎಂದರ್ಥ.

3. ಧರ್ಮಾಧರ್ಮಗಳೆರಡೂ ಸಗುಣವಿದ್ಯಾಬಲದಿಂದ ಹೋಗುವವೆಂಬುದಕ್ಕೆ ಸೂ. ಭಾ. ೪-೧-೧೩ (ಭಾ. ಭಾ. ೫೨೮)ವನ್ನು ನೋಡಿ.

4. ಧ್ಯಾನದಿಂದಾದ ಸಾಕ್ಷಾತ್ಕಾರದಿಂದಲೇ ಶರೀರವು ತನಗಿಲ್ಲವೆಂಬ ನಿಶ್ಚಯವಾಗಿರುತ್ತದೆ ಎಂದು ಭಾವ. ಈ ಮಂತ್ರವನ್ನು ಜ್ಞಾನಿಯಾದವನು ಬ್ರಹ್ಮಸ್ವರೂಪವನ್ನು ಪಡೆದುಕೊಳ್ಳುವನೆಂಬರ್ಥದಲ್ಲಿಯೂ ವ್ಯಾಖ್ಯಾನಮಾಡುವದಕ್ಕೆ ಬರುವಂತಿದೆ ; ಆದರೆ ಭಾಷ್ಯದಲ್ಲಿ ಅದರ ಸೂಚನೆಯೇನೂ ಕಾಣುವದಿಲ್ಲ.

# ಎಂಟನೆಯ ಅಧ್ಯಾಯ-ಹದಿನಾಲ್ಕನೆಯ ಖಂಡ

( ಬ್ರಹ್ಮಲಕ್ಷಣವೂ, ಧ್ಯಾನಮಂತ್ರವೂ )

## ಬ್ರಹ್ಮಲಕ್ಷಣ, ಉಪಾಸಕನಿಗೆ ಮಂತ್ರ

(ಉಪನಿಷತ್ತು)

**ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ ತದಮೃತಗ್ಂ ಸ ಆತ್ಮಾ ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ ಯಶೋಽಹಂ ಭವಾಮಿ ಬ್ರಾಹ್ಮಣಾನಾಂ ಯಶೋ ರಾಜ್ಞಾಂ ಯಶೋ ವಿಶಾಂ ಯಶೋಽಹಮನುಪ್ರಾಪತ್ಸಿ ಸ ಹಾಽಹಂ ಯಶಸಾಂ ಯಶಃ ಶ್ಯೇತಮದತ್ಕಮದತ್ಕಗ್ಂ ಶ್ಯೇತಂ ಲಿನ್ದು ಮಾಭಿಗಾಂ ಲಿನ್ದು ಮಾಭಿಗಾಮ್ ॥೧॥**

೧. ಆಕಾಶನೆಂಬವನು ನಾಮರೂಪಗಳ ನಿರ್ವಾಹಕನು. ಅವುಗಳು ಯಾತರೊಳಗೆ (ಇವೆಯೋ) ಅದು ಬ್ರಹ್ಮವು, ಅದು ಅಮೃತವು, ಅದು ಆತ್ಮನು. ಪ್ರಜಾಪತಿಯ ಸಭೆಯನ್ನೂ ವೇಶ್ಮವನ್ನೂ ನಾನು ಸೇರುವಂತಾಗಲಿ! ನಾನು ಬ್ರಾಹ್ಮಣರ ಯಶಸ್ಸಾಗುವಂತಾಗಲಿ! ರಾಜರುಗಳ ಯಶಸ್ಸಾಗುವಂತಾಗಲಿ! ವೈಶ್ಯರ ಯಶಸ್ಸಾಗುವಂತಾಗಲಿ! ಯಶಸ್ಸನ್ನು ನಾನು ಪಡೆಯುವಂತಾಗಲಿ! ಆ ನಾನು ಯಶಸ್ಸುಗಳ ಯಶಸ್ಸು! ಶ್ಯೇತವೂ ಅದತ್ಕವೂ ಆದ ಅದತ್ಕವೂ ಶ್ಯೇತವೂ ಆದ ಲಿಂದುವನ್ನು (ನಾನು) ಸೇರದೆ ಇರಲಿ! ಲಿಂದುವನ್ನು (ನಾನು) ಸೇರದೆ ಇರಲಿ!

### ಧ್ಯಾನಕ್ಕಾಗಿ ಬ್ರಹ್ಮಲಕ್ಷಣ

(ಭಾಷ್ಯ)

೬೮೬. ಆಕಾಶೋ ವಾ ಇತ್ಯಾದಿ ಬ್ರಹ್ಮಣೋ ಲಕ್ಷಣನಿರ್ದೇಶಾರ್ಥಮ್ ಆಧ್ಯಾನಾಯ । ಆಕಾಶೋ ವೈ ನಾಮ ಶ್ರುತಿಷು ಪ್ರಸಿದ್ಧ ಆತ್ಮಾ । ಆಕಾಶ ಇವ ಅಶರೀರತ್ವಾತ್ ಸೂಕ್ಷ್ಮತ್ವಾಚ್ಚ । ಸ ಚ ಆಕಾಶೋ ನಾಮರೂಪಯೋಃ ಸ್ವಾತ್ಮಸ್ಥಯೋರ್ಜಗದ್ಬೀಜಭೂತಯೋಃ ಸಲಿಲಸ್ಯೇವ ಫೇನಸ್ಥಾನೀಯಯೋರ್ನಿರ್ವಹಿತಾ ನಿರ್ವೋಢಾ ವ್ಯಾಕರ್ತಾ । ತೇ ನಾಮರೂಪೇ ಯದನ್ತರಾ ಯಸ್ಯ ಬ್ರಹ್ಮಣೋಽನ್ತರಾ ಮಧ್ಯೇ ವರ್ತೇತೇ । ತಯೋರ್ವಾ ನಾಮರೂಪಯೋರನ್ತರಾ ಮಧ್ಯೇ । ಅನ್ಯತ್ ನಾಮರೂಪಾಭ್ಯಾಮ್ ಅಸ್ಪೃಷ್ಟಂ ಯದಿತ್ಯೇತತ್ । ತದ್ಬ್ರಹ್ಮ ।

ನಾಮರೂಪವಿಲಕ್ಷಣಂ ನಾಮರೂಪಾಭ್ಯಾಮ್ ಅಸ್ಪೃಷ್ಟಮ್ ತಥಾಪಿ ತಯೋರ್ನಿರ್ವೋಢೃ । ಏವಂಲಕ್ಷಣಂ ಬ್ರಹ್ಮೇತ್ಯರ್ಥಃ । ಇದಮೇವ ಮೈತ್ರೇಯೀಬ್ರಾಹ್ಮಣೇನೋಕ್ತಂ ಚಿನ್ಮಾತ್ರಾನುಗಮಾತ್ ಸರ್ವತ್ರ ಚಿತ್ಸ್ವರೂಪತೈವೇತಿ ಗಮ್ಯತ ಏಕವಾಕ್ಯತಾ । ಕಥಂ ತದವಗಮ್ಯತ ಇತಿ ? ಆಹ । ಸ ಆತ್ಮಾ । ಆತ್ಮಾ ಹಿ ನಾಮ ಸರ್ವಜನ್ತೂನಾಂ ಪ್ರತ್ಯಕ್ಚೇತನಃ ಸ್ವಸಂವೇದ್ಯಃ ಪ್ರಸಿದ್ಧಃ । ತೇನೈವ ಸ್ವರೂಪೇಣ ಉನ್ನೀಯ ಅಶರೀರೋ ವ್ಯೋಮವತ್ ಸರ್ವಗತ ಆತ್ಮಾ ಬ್ರಹ್ಮೇತ್ಯವಗನ್ತವ್ಯಮ್ । ತಚ್ಚಾಽಽತ್ಮಾ ಬ್ರಹ್ಮ ಅಮೃತಮ್ ಅಮರಣಧರ್ಮಾ ॥

(ಭಾಷ್ಯಾರ್ಥ)

'ಆಕಾಶೋ ವೈ' ಮುಂತಾದ (ವಾಕ್ಯವು) ಧ್ಯಾನಮಾಡುವದಕ್ಕಾಗಿ ಬ್ರಹ್ಮದ ಲಕ್ಷಣವನ್ನು ಹೇಳುವದಕ್ಕೆ (ಬಂದಿರುತ್ತದೆ)

ಆಕಾಶವು ಎಂದಲ್ಲವೆ, ಶ್ರುತಿಗಳಲ್ಲಿ ಆತ್ಮನು ಪ್ರಸಿದ್ಧನಾಗಿರುತ್ತಾನೆ ?[1] ಆಕಾಶದಂತೆ ಅಶರೀರನಾಗಿರುವದರಿಂದಲೂ, ಸೂಕ್ಷ್ಮನಾಗಿರುವದರಿಂದಲೂ (ಈ ಹೆಸರು ಅವನಿಗೆ ಬಂದಿದೆ) ಆ ಆಕಾಶವು ತನ್ನಲ್ಲಿರುವ, ಜಗತ್ತಿಗೆ ಬೀಜವಾಗಿರುವ, ನೀರಿನಲ್ಲಿರುವ ನೊರೆಯಂತಿರುವ[2] ನಾಮರೂಪಗಳನ್ನು ನಿರ್ವಾಹ ಮಾಡತಕ್ಕದ್ದು, ವ್ಯಾಕರಣಮಾಡತಕ್ಕದ್ದು.[3] ಆ ನಾಮರೂಪಗಳು (ಯದನ್ತರಾ= ಯಾವ ಬ್ರಹ್ಮದ (ಅಂತರಾ ಎಂದರೆ) ಒಳಗೆ ಇರುತ್ತವೆಯೋ, ಅಥವಾ (ತೇ=) ಆ ನಾಮರೂಪಗಳ ಅಂತರಾ ಎಂದರೆ ಒಳಗೆ ಯಾವದು ಇರುತ್ತದೆಯೋ[4] -ಯಾವದು ನಾಮರೂಪಗಳಿಂದ (ಯಾವಾಗಲೂ) ಸೋಂಕಲ್ಪಡದೆ ಇರುತ್ತದೆಯೋ ಎಂದರ್ಥ[5]— ಅದು ಬ್ರಹ್ಮವು ನಾಮರೂಪಗಳಿಗಿಂತ ವಿಲಕ್ಷಣವಾಗಿ

---

1 ಸೂ. ಭಾ ೧-೧-೨೨ (ಭಾ ಭಾ ೧೨೦)ನ್ನು ನೋಡಿ

2. ಈ ದೃಷ್ಟಾಂತಕ್ಕೆ ಬೃ.ಭಾ. ೧-೪-೭ (ಭಾ.ಭಾ. ೧೨೦), ೨-೪-೧೦ (ಭಾ.ಭಾ ೩೬೮), ೩-೫-೧ (ಭಾ.ಭಾ.೫೪), ಐ. ಭಾ. ೧-೧ ಇವನ್ನು ನೋಡಿ.

3. ಜೀವೇನಾತ್ಮನಾ ಎಂದು (೬ ೩-೨ರಲ್ಲಿ) ಹೇಳಿರುವ ನಾಮರೂಪವ್ಯಾಕರಣವೂ ಬ್ರಹ್ಮದ್ದೇ. ಸೂ. ಭಾ. ೨-೪-೨೦ (ಭಾ. ಭಾ. ೨೦೭).

4. ಇದರಿಂದ ನಾಮರೂಪಗಳಿಗಿಂತ ವಿಲಕ್ಷಣವಾದ ವಸ್ತುವಿವೆಂದು ಹೇಳಿದಂತೆ ಆಯಿತು. ಸೂ. ಭಾ ೧ ೩-೪೧.

5. ನಾಮರೂಪಗಳು ಅವಿದ್ಯಾಕಲ್ಪಿತವಾಗಿರುತ್ತವೆ, ಅವುಗಳ ತತ್ತ್ವವು ಬ್ರಹ್ಮವೇ ಆಗಿರುತ್ತದೆ. ಆದ್ದರಿಂದ ನಾಮರೂಪಗಳ ಸೋಂಕು ಅದಕ್ಕಿಲ್ಲ. ಸೂ. ಭಾ. ೨-೧-೧೪ (ಭಾ. ಭಾ ೪೪೦), ಬ್ರಹ್ಮದಲ್ಲಿ ಅಪೇಕ್ಷೆಯಿಂದಲೇ ನಾಮರೂಪಗಳಿಗೆ ಇರವಾದರೂ ಬ್ರಹ್ಮವು ಅವುಗಳ ಸ್ವರೂಪವಲ್ಲ. ತೈ. ಭಾ. ೨-೬ (ಭಾ. ಭಾ. ೧೬೫).

ಯೂ ನಾಮರೂಪಗಳ ಸೋಂಕಿಲ್ಲದ್ದಾಗಿಯೂ ಆದರೂ ಅವುಗಳನ್ನು ನಿರ್ವಾಹ ಮಾಡತಕ್ಕದ್ದು- ಎಂಬೀ ಲಕ್ಷಣವುಳ್ಳದ್ದು ಬ್ರಹ್ಮವು ಎಂದರ್ಥ. ಇದನ್ನೇ ಮೈತ್ರೇಯೀಬ್ರಾಹ್ಮಣದಲ್ಲಿ[1] ಎಲ್ಲೆಲ್ಲಿಯೂ ಚಿನ್ಮಾತ್ರವು ಅನುಗತವಾಗಿರುವದ ರಿಂದ (ಎಲ್ಲವೂ) ಚಿತ್ಸ್ವರೂಪವೇ (ಆಗಿರುತ್ತದೆ) ಎಂದು ಹೇಳಿದೆಯಾಗಿದೆ. (ಆ ವಾಕ್ಯಕ್ಕೂ ಇದಕ್ಕೂ) ಏಕವಾಕ್ಯತೆಯಿದೆ. ಅದು ಹೇಗೆ ಗೊತ್ತಾಗುತ್ತದೆ ?[2] ಎಂದರೆ (ಶ್ರುತಿ) ಹೇಳುತ್ತದೆ. ಅದೇ ಆತ್ಮನು. **ಆತ್ಮನು ಎಂದರೆ ಸರ್ವ ಜೀವರುಗಳಿಗೂ ಸ್ವಾನುಭವವೇದ್ಯವಾಗಿರುವ ಒಳಗಿದ್ದುಕೊಂಡಿರುವ ಚೇತನವೆಂದು ಪ್ರಸಿದ್ಧವಾಗಿದೆ.** ಆ (ಬ್ರಹ್ಮದ) ಸ್ವರೂಪದಿಂದಲೇ ಊಹಿಸಿಕೊಂಡು ಬ್ರಹ್ಮವು ಅಶರೀರನಾದ ಆಕಾಶದಂತೆ ಸರ್ವಗತನಾದ ಆತ್ಮನು ಎಂದು ನಿಶ್ಚಯಿಸಬೇಕು ಮತ್ತು ಆ ಆತ್ಮನಾದ ಬ್ರಹ್ಮವು ಅಮೃತವು, ಸಾವೆಂಬ ಧರ್ಮವಿಲ್ಲದ್ದು.

## ಉಪಾಸಕನ ಪ್ರಾರ್ಥನೆ

(ಭಾಷ್ಯ)

೬೮೭. ಅತ ಊರ್ಧ್ವಂ ಮನ್ತ್ರಃ । ಪ್ರಜಾಪತಿಶ್ಚತುರ್ಮುಖಃ । ತಸ್ಯ ಸಭಾಂ ವೇಶ್ಮ ಪ್ರಭುವಿಮಿತಂ ವೇಶ್ಮ ಪ್ರಪದ್ಯೇ ಗಚ್ಛೇಯಮ್ । ಕಿಂ ಚ ಯಶೋಽಹಂ ಯಶೋ ನಾಮ ಆತ್ಮಾಽಹಂ ಭವಾಮಿ ಬ್ರಾಹ್ಮಣಾನಾಮ್ । ಬ್ರಾಹ್ಮಣಾ ಏವ ಹಿ ವಿಶೇಷತಸ್ತಮ್ ಉಪಾಸತೇ । ತತಸ್ತೇಷಾಂ ಯಶೋ ಭವಾಮಿ । ತಥಾ ರಾಜ್ಞಾಂ ವಿಶಾಂ ಚ । ತೇಽಪಿ ಅಧಿಕೃತಾ ಏವೇತಿ ತೇಷಾಮಪಿ ಆತ್ಮಾ ಭವಾಮಿ । ತದ್ಯಶೋಽಹಮ್ ಅನುಪ್ರಾಪತ್ಸಿ । ಅನುಪ್ರಾಪ್ತುಮ್ ಇಚ್ಛಾಮಿ । ಸ ಹ ಅಹಂ ಯಶಸಾಮ್ ಆತ್ಮನಾಂ ದೇಹೇನ್ದ್ರಿಯಮನೋ ಬುದ್ಧಿಲಕ್ಷಣಾನಾಂ ಯಶಃ[3] ಆತ್ಮಾ । ಕಿಮರ್ಥಮ್ ಅಹಮೇವಂ ಪ್ರಪದ್ಯೇ ಇತಿ ? ಉಚ್ಯತೇ । ಶ್ಯೇತಂ ವರ್ಣತಃ ಪಕ್ವಬದರಸಮಂ ರೋಹಿತಮ್ । ತಥಾ ಅದತ್ಕಮ್ । ದನ್ತರಹಿತಮಪಿ ಅದತ್ಕಂ ಭಕ್ಷಯಿತೃ ಸ್ತ್ರೀವ್ಯಞ್ಜನಂ ತತ್ಸೇವಿನಾಂ ತೇಜೋಬಲವೀರ್ಯವಿಜ್ಞಾನಧರ್ಮಾಣಾಮ್ ಅಪಹನ್ತೃ ವಿನಾಶಯಿತೃ

---

1. ಅಲ್ಲಿ ದುಂದುಭ್ಯಾದಿದೃಷ್ಟಾಂತಗಳಿಂದ ಇದನ್ನು ಪ್ರತಿಪಾದಿಸಿದೆ. ಬೃ.ಭಾ. ೨-೪-೭ (ಭಾ. ಭಾ. ೩೬೧).

2. ನಾಮರೂಪವ್ಯತಿರಿಕ್ತವಾದ ಬ್ರಹ್ಮವನ್ನು ನಾವು ಅರಿತುಕೊಳ್ಳುವದು ಹೇಗೆ ? ನಮಗೆ ತಿಳಿಯಬರುವದೆಲ್ಲ ನಾಮರೂಪವೇ ಅಲ್ಲವೆ ?- ಎಂದು ಶಂಕೆಯ ಭಾವ.

3. ಈ ಮಾತು ಇಲ್ಲಿರಬೇಕಾದದ್ದು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ.

ಇತ್ಯೇತತ್ । ಯದೇವಂಲಕ್ಷಣಂ ಶ್ವೈತಂ ಲಿನ್ದು ಪಿಚ್ಛಲಂ ತನ್ಮಾಭಿಗಾಂ ಮಾಭಿಗಚ್ಛೇಯಮ್ । ದ್ವಿರ್ವಚನಮ್ ಅತ್ಯನ್ತಾನರ್ಥಹೇತುತ್ವಪ್ರದರ್ಶನಾರ್ಥಮ್ ॥

(ಭಾಷ್ಯಾರ್ಥ)

ಇನ್ನುಮುಂದೆ ಮಂತ್ರವು.[1] ಪ್ರಜಾಪತಿಯೆಂದರೆ ಚತುರ್ಮುಖ(ಬ್ರಹ್ಮ)ನು ಅವನ ಸಭೆಯನ್ನು ವೇಶ್ಮವನ್ನು ಎಂದರೆ ಪ್ರಭುವಿಮಿತವಾದ ಅರಮನೆಯನ್ನು ಸೇರುವೆನು, ಹೊಂದುವಂತಾಗಲಿ! ಮತ್ತು ನಾನು ಬ್ರಾಹ್ಮಣರ ಯಶಸ್ಸು, ಯಶಸ್ಸೆಂಬ ಆತ್ಮನು ಆಗಲಿ! **ಬ್ರಾಹ್ಮಣರೇ ಅಲ್ಲವೆ, ವಿಶೇಷವಾಗಿ ಆ (ಆತ್ಮನನ್ನು) ಉಪಾಸನೆಮಾಡುತ್ತಾರೆ? ಆದ್ದರಿಂದ (ನಾನು) ಅವರ ಯಶಸ್ಸು ಆಗುವಂತಾಗಲಿ! ಹೀಗೆಯೇ ರಾಜರುಗಳ ವೈಶ್ಯರುಗಳ (ಆತ್ಮನೂ ಆಗುವಂತಾಗಲಿ). ಅವರೂ ಅಧಿಕಾರಿಗಳೇ ಆದ್ದರಿಂದ ಅವರಿಗೂ ಆತ್ಮನಾಗುವಂತಾಗಲಿ!** ಆ ಯಶಸ್ಸನ್ನು ನಾನು (ಅನುಪ್ರಾಪತ್ಸಿ=) ಪಡೆಯಲಿಚ್ಛಿಸುವೆನು ಆ ನಾನು ಯಶಸ್ಸುಗಳ ಎಂದರೆ ಆತ್ಮರುಗಳ- ದೇಹೇಂದ್ರಿಯಮನೋಬುದ್ಧಿರೂಪಗಳಾದ (ಆತ್ಮರ-[2]) ಯಶಸ್ಸು ಆತ್ಮನು.

ಏತಕ್ಕೋಸ್ಕರ ನಾನು ಹೀಗೆ ಪಡೆಯಬೇಕು ? ಎಂದರೆ ಹೇಳಲಾಗುತ್ತದೆ : ಶ್ವೇತವಾದ ಎಂದರೆ ಬಣ್ಣದಲ್ಲಿ ಮಾಗಿದ ಎಗಚೀಕಾಯಿಯಂತೆ ಕೆಂಪಗಿರುವದು. ಮತ್ತು ಅದತ್ಕವು ಎಂದರೆ **ಹಲ್ಲುಗಳಿಲ್ಲದ್ದಾದರೂ ತಿನ್ನತಕ್ಕದ್ದು, ಎಂದರೆ ಸ್ತ್ರೀವ್ಯಂಜನವು. ಏಕೆಂದರೆ ಅದನ್ನು ಸೇವಿಸುವವರ ತೇಜಸ್ಸು, ಬಲ, ವೀರ್ಯ, ವಿಜ್ಞಾನ, ಧರ್ಮ- ಇವುಗಳನ್ನು ಅಪಹರಿಸತಕ್ಕದ್ದು, ವಿನಾಶಗೊಳಿಸತಕ್ಕದ್ದು** ಎಂದು ತಾತ್ಪರ್ಯ. ಇಂಥ ಲಕ್ಷಣದ ಶ್ವೇತವರ್ಣದ ಲಿಂದು ಅಂಟಿನಂತೆ ಜಾರುವ (ಸ್ತ್ರೀಲಿಂಗ) ಇದೆಯಲ್ಲ, ಅದನ್ನು ಸೇರದೆ ಇರುವಂತಾಗಲಿ! (ಎಂದಿಗೂ) ಪಡೆಯದಂತಾಗಲಿ! (ಮಾಭಿಗಾಮ್ ಎಂದು) ಎರಡು ಸಲ ಹೇಳಿರುವದು ಅತ್ಯಂತವಾಗಿ (ಅದು) ಅನರ್ಥಕ್ಕೆ ಕಾರಣವೆಂದು ತಿಳಿಸುವದಕ್ಕೆ.

---

1. ಹಿಂದಿನ ವಾಕ್ಯವು ನಿರ್ಗುಣಬ್ರಹ್ಮದ ಲಕ್ಷಣವಾದರೂ ಈ ಮಂತ್ರವು ಕಾರ್ಯಬ್ರಹ್ಮದ ವಿಷಯವೇ ಎಂದು ಸೂ.ಭಾ. ೪-೩-೧೪ (ಛಾ.ಭಾ. ೩೮೦)ರಲ್ಲಿ ನಿರ್ಣಯಿಸಿದೆ

2 ಆತ್ಮರೆಂದು ತೋರುವ ದೇಹಾದಿಗಳ ಎಂದರ್ಥ, ಏಕೆಂದರೆ ಆತ್ಮನು ಒಬ್ಬನೇ ಅನೇಕವಲ್ಲ.

# ಎಂಟನೆಯ ಅಧ್ಯಾಯ - ಹದಿನೈದನೆಯ ಖಂಡ

(ಗುರುವಂಶವೂ ಸಾಧನಕಲಾಪವೂ)

## ಗುರುವಂಶ, ಸಾಧನ, ಫಲ

(ಉಪನಿಷತ್ತು)

**ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯ ಆಚಾರ್ಯಕುಲಾದ್ ವೇದಮಧೀತ್ಯ ಯಥಾ ವಿಧಾನಂ ಗುರೋಃ ಕರ್ಮಾತಿಶೇಷೇಣಾಽಭಿಸಮಾವೃತ್ಯ ಕುಟುಮ್ಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧದಾತ್ಮನಿ ಸರ್ವೇನ್ದ್ರಿಯಾಣಿ ಸಂಪ್ರತಿ ಷ್ಠಾಪ್ಯಾಹಿಗ್ಂಸನ್ ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯಃ ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕ ಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾ ವರ್ತತೇ ॥ ೧ ॥**

೧. ಆ ಇದನ್ನು ಬ್ರಹ್ಮನು ಪ್ರಜಾಪತಿಗೆ ಹೇಳಿದನು : ಪ್ರಜಾಪತಿಯು ಮನುವಿಗೆ, ಮನುವು ಪ್ರಜೆಗಳಿಗೆ, ಗುರುವಿನ ಕರ್ಮವನ್ನು ಮಾಡಿ ಉಳಿದ (ಕಾಲದಲ್ಲಿ) ಯಥಾವಿಧಾನವಾಗಿ ವೇದವನ್ನು ಅಧ್ಯಯನಮಾಡಿ ಆಚಾರ್ಯಕುಲದಿಂದ ಸಮಾವರ್ತನಮಾಡಿ ಕುಟುಂಬದಲ್ಲಿ ಶುಚಿಯಾದ ದೇಶದಲ್ಲಿ ಸ್ವಾಧ್ಯಾಯವನ್ನು ಅಧ್ಯಯನ ಮಾಡುತ್ತಾ ಧಾರ್ಮಿಕರನ್ನಾಗಿ ವಿಧಾನಮಾಡುತ್ತಾ ಆತ್ಮನಲ್ಲಿಯೇ ಸರ್ವೇಂದ್ರಿಯಗಳನ್ನೂ ಹಿಂತಿರುಗಿಸಿ ತೀರ್ಥಗಳನ್ನು ಬಿಟ್ಟು ಮಿಕ್ಕೆಡ ಯಲ್ಲಿ ಯಾವ ಭೂತಗಳನ್ನೂ ಹಿಂಸೆಮಾಡದೆ, ಆಯುಸ್ಸಿರುವವರೆಗೂ ನಡೆಯುತ್ತಿರುವವನಾದರೆ ಅವನು ಬ್ರಹ್ಮಲೋಕವನ್ನು ಪಡೆದುಕೊಳ್ಳು ತ್ತಾನೆ, ಮತ್ತೆ ಹಿಂತಿರುಗುವದೂ ಇಲ್ಲ, ಮತ್ತೆ ಹಿಂತಿರುಗುವದೂ ಇಲ್ಲ.

### ಗುರುವಂಶಪರಂಪರೆ

(ಭಾಷ್ಯ)

೬೮೮. ತದ್ ಹ ಏತದಾತ್ಮಜ್ಞಾನಂ ಸೋಪಕರಣಮ್ ಓಮಿತ್ಯೇ ತದಕ್ಷರಮ್ ಇತ್ಯಾದ್ಯೈಃ ಸಹೋಪಾಸನೈಃ ತದ್ವಾಚಕೇನ ಗ್ರನ್ಥೇನ ಅಷ್ಟಾ

ಧ್ಯಾಯೀಲಕ್ಷಣೇನ ಸಹ ಬ್ರಹ್ಮಾ ಹಿರಣ್ಯಗರ್ಭಃ ಪರಮೇಶ್ವರೋ ವಾ ತದ್ದ್ವಾರೇಣ ಪ್ರಜಾಪತಯೇ ಕಶ್ಯಪಾಯ ಉವಾಚ । ಅಸಾವಪಿ ಮನವೇ ಸ್ವಪುತ್ರಾಯ । ಮನುಃ ಪ್ರಜಾಭ್ಯಃ ಇತ್ಯೇವಂ ಶ್ರುತ್ಯರ್ಥಸಂಪ್ರದಾಯಪರಮ್ಪರಯಾ ಆಗತಮ್ ಉಪನಿಷದ್ವಿಜ್ಞಾನಮ್ ಅದ್ಯಾಪಿ ವಿದ್ವತ್ಸು ಅವಗಮ್ಯತೇ ॥

(ಭಾಷ್ಯಾರ್ಥ)

ಆ ಈ ಆತ್ಮಜ್ಞಾನವನ್ನು, ಉಪಕರಣಸಹಿತವಾಗಿ[1] 'ಓಮಿತ್ಯೇದಕ್ಷರಮ್' (೧-೧-೧) ಮುಂತಾದ ಉಪಾಸನೆಗಳೊಡನೆ, ಅದನ್ನು ಹೇಳುವ ಎಂಟು ಅಧ್ಯಾಯಗಳ ರೂಪದಲ್ಲಿರುವ ಗ್ರಂಥದೊಡನೆ ಬ್ರಹ್ಮನು, ಹಿರಣ್ಯಗರ್ಭನು, ಅಥವಾ ಅವನ ದ್ವಾರದಿಂದ ಪರಮೇಶ್ವರನು,[2] ಪ್ರಜಾಪತಿಗೆ ಕಶ್ಯಪನಿಗೆ, ಹೇಳಿದನು ೀ (ಕಶ್ಯಪನೂ) ತನ್ನ ಮಗನಾದ ಮನುವಿಗೆ ಹೇಳಿದನು , ಮನುವು ಪ್ರಜೆಗಳಿಗೆ (ಹೇಳಿದನು)- ಎಂದಿಂತು ಶ್ರುತ್ಯರ್ಥವನ್ನು (ಒಬ್ಬರಿಗೊಬ್ಬರು ಉಪದೇಶಿಸುವ) ಸಂಪ್ರದಾಯಪರಂಪರೆಯಿಂದ ಬಂದಿರುವ ಉಪನಿಷದ್ವಿಜ್ಞಾನವು ಈಗಲೂ ವಿದ್ವಾಂಸರಲ್ಲಿ ಗೊತ್ತಾಗಿ ತಿಳಿಯಬರುತ್ತದೆ [3]

## ಸಾಧನಕ್ರಮ

(ಭಾಷ್ಯ)

ಓಮ್ ಯಥೇಹ ಷಷ್ಠಾದ್ಯಧ್ಯಾಯತ್ರಯೇ ಪ್ರಕಾಶಿತಾ ಆತ್ಮವಿದ್ಯಾ ಸಫಲಾ ಅವಗಮ್ಯತೇ ತಥಾ ಕರ್ಮಣಾಂ ನ ಕಶ್ಚನಾರ್ಥಃ ಇತಿ ಪ್ರಾಪ್ತೇ ತದಾನರ್ಥಕ್ಯಪ್ರಾಪ್ತಿಪರಿಜಿಹೀರ್ಷಯಾ ಇದಂ ಕರ್ಮಣೋಽವಿದ್ವದ್ಭಿರನುಷ್ಠೀಯಮಾನಸ್ಯ[4] ವಿಶಿಷ್ಟಫಲವತ್ತ್ವೇನ ಅರ್ಥವತ್ತ್ವಮುಚ್ಯತೇ । ಆಚಾರ್ಯಕುಲಾದ್ ವೇದಮಧೀತ್ಯ' ಸಹಾಽರ್ಥತೋ ಅಧ್ಯಯನಂ ಕೃತ್ವಾ ಯಥಾವಿಧಾನಂ ಯಥಾಸ್ಮೃತ್ಯುಕ್ತೈರ್ನಿಯಮೈರ್ಯುಕ್ತಃ ಸನ್ ಇತ್ಯರ್ಥಃ । ಸರ್ವ

---

1. 'ಶಮಾದಿಗಳೊಡನೆ' ಎಂದು ಟೀಕೆ. ಅನುಕೂಲವಾದ ಅವಸ್ಥಾತ್ರಯವಿಚಾರವೇ ಮುಂತಾದ ತರ್ಕವೆಂಬ ಉಪಕರಣದೊಡನೆ ಎಂದೂ ಹೇಳಬಹುದು. ಸೂ.ಭಾ. ೧-೧-೧ (ಭಾ.ಭಾ. ೨೦), ೨-೧-೬ (ಭಾ.ಭಾ. ೪೧೮)- ಇವನ್ನು ನೋಡಿ.

2. ಪರಮೇಶ್ವರನು ಬ್ರಹ್ಮನಿಗೂ ಬ್ರಹ್ಮನು ಪ್ರಜಾಪತಿಗೂ ಹೇಳಿದನು ಎಂದರ್ಥ ಶ್ವೇ. ೬-೧೮ನ್ನು ನೋಡಿ.

3. ಪ್ರಜೆಗಳಿಗೆ ಹೇಳಿದನು ಎಂದದ್ದರ ಆರ್ಥಿಕಾರ್ಥವಿದು. ಗುರೂಪದೇಶಪರಂಪರೆಯಿಂದ ತಿಳಿದುಕೊಂಡ ಜ್ಞಾನಿಗಳು ಈಗಲೂ ಇದ್ದೇಇರುತ್ತಾರೆ , ಅವರಿಂದ ಬೇರೆ ಅಧಿಕಾರಿಗಳೂ ತಿಳಿದುಕೊಳ್ಳಬಹುದು- ಎಂದು ಭಾವ.

4 ವಿದ್ವದ್ಭಿಃ' ಎಂಬುದಕ್ಕಿಂತ ಈ ಪಾಠವೇ ಮೇಲು. ಅನುವಾದದ ಟಿಪ್ಪಣಿಯನ್ನು ನೋಡಿ

ಸ್ಯಾಪಿ ವಿಧೇಃ ಸ್ಮೃತ್ಯುಕ್ತಸ್ಯ ಉಪಕುರ್ವಾಣಕಂ ಪ್ರತಿ ಕರ್ತವ್ಯತ್ವೇ ಗುರು ಶುಶ್ರೂಷಾಯಾಃ ಪ್ರಾಧಾನ್ಯಪ್ರದರ್ಶನಾರ್ಥಮ್ ಆಹ। (ಗುರೋಃ ಕರ್ಮಾತಿ ಶೇಷೇಣ)[1] ಗುರೋಃ ಕರ್ಮ ಯತ್ಕರ್ತವ್ಯಂ ತತ್ಕೃತ್ವಾ, ಕರ್ಮಶೂನ್ಯೋ ಯೋಽತಿಶಿಷ್ಟಃ ಕಾಲಃ, ತೇನ ಕಾಲೇನ ವೇದಮಧೀತ್ಯ ಇತ್ಯರ್ಥಃ। ಏವಂ ಹಿ ನಿಯಮವತಾ ಅಧೀತೋ ವೇದಃ ಕರ್ಮಜ್ಞಾನಫಲಪ್ರಾಪ್ತಯೇ ಭವತಿ ನಾನ್ಯಥಾ ಇತ್ಯಭಿಪ್ರಾಯಃ । ಅಭಿಸಮಾವೃತ್ಯ ಧರ್ಮಜಿಜ್ಞಾಸಾಂ ಸಮಾಪ ಯಿತ್ವಾ ಗುರುಕುಲಾತ್ ನಿವೃತ್ಯ ನ್ಯಾಯತೋ ದಾರಾನಾಹೃತ್ಯ ಕುಟುಮ್ಬೇ ಸ್ಥಿತ್ವಾ ಗಾರ್ಹಸ್ಥ್ಯೇ ವಿಹಿತೇ ಕರ್ಮಣಿ ತಿಷ್ಠನ್ ಇತ್ಯರ್ಥಃ। ತತ್ರಾಪಿ ಗಾರ್ಹ ಸ್ಥ್ಯವಿಹಿತಾನಾಂ ಕರ್ಮಣಾಂ ಸ್ವಾಧ್ಯಾಯಸ್ಯ ಪ್ರಾಧಾನ್ಯಪ್ರದರ್ಶನಾರ್ಥಮ್ ಉಚ್ಯತೇ। ಶುಚೌ ವಿವಿಕ್ತೇ ಅಮೇಧ್ಯಾದಿರಹಿತೇ ದೇಶೇ ಯಥಾವತ್ ಆಸೀನಃ ಸ್ವಾಧ್ಯಾಯಮ್ ಅಧೀಯಾನಃ। ನೈತ್ಯಕಮ್ ಅಧಿಕಂ ಚ ಯಥಾಶಕ್ತಿ ಋಗಾದ್ಯ ಭ್ಯಾಸಂ ಚ ಕುರ್ವನ್ ಧಾರ್ಮಿಕಾನ್ ಪುತ್ರಾನ್ ಶಿಷ್ಯಾಂಶ್ಚ ಧರ್ಮಯುಕ್ತಾನ್ ವಿದಧತ್ ಧಾರ್ಮಿಕತ್ವೇನ ತಾನ್ ನಿಯಮಯನ್ ಆತ್ಮನಿ ಸ್ವಹೃದಯೇ ಹಾರ್ದೇ ಬ್ರಹ್ಮಣಿ ಸರ್ವೇನ್ದ್ರಿಯಾಣಿ ಸಂಪ್ರತಿಷ್ಠಾಪ್ಯ ಉಪಸಂಹೃತ್ಯ, ಇನ್ದ್ರಿಯಗ್ರಹ ಣಾತ್ ಕರ್ಮಾಣಿ ಚ ಸಂನ್ಯಸ್ಯ। ಅಹಿಂಸನ್ ಹಿಂಸಾಮ್ ಪರಪೀಡಾಮ್ ಅಕುರ್ವನ್ ಸರ್ವಭೂತಾನಿ ಸ್ಥಾವರಜಙ್ಗಮಾನಿ ಭೂತಾನಿ ಅಪೀಡಯನ್ ಇತ್ಯರ್ಥಃ। ಭಿಕ್ಷಾನಿಮಿತ್ತಮ್ ಅಟನಾದಿನಾಽಪಿ ಪರಪೀಡಾ ಸ್ಯಾದಿತ್ಯತ ಆಹ। ಅನ್ಯತ್ರ ತೀರ್ಥೇಭ್ಯಃ। ತೀರ್ಥಂ ನಾಮ ಶಾಸ್ತ್ರಾನುಜ್ಞಾವಿಷಯಃ। ತತೋಽನ್ಯ ತ್ರೇತ್ಯರ್ಥಃ । ಸರ್ವಾಶ್ರಮಿಣಾಂ ಚೈತತ್ ಸಮಾನಮ್। ತೀರ್ಥೇಭ್ಯೋಽನ್ಯತ್ರ ಅಹಿಂಸೈವೇತ್ಯನ್ಯೇ ವರ್ಣಯನ್ತಿ ॥

(ಭಾಷ್ಯಾರ್ಥ)

ಆರನೆಯದರಿಂದ ಹಿಡಿದು ಮೂರು ಅಧ್ಯಾಯದ (ಗ್ರಂಥಭಾಗದಲ್ಲಿ) ಇಲ್ಲಿ ಪ್ರಕಾಶಿತವಾಗಿರುವ ಬ್ರಹ್ಮವಿದ್ಯೆಯು ಸಫಲವೆಂದು ನಿಶ್ಚಿತವಾಗಿರುವದಷ್ಟೆ. ಆದ್ದರಿಂದ ಕರ್ಮಗಳಿಂದ ಆಗಬೇಕಾದ ಪ್ರಯೋಜನವೇನೂ ಇಲ್ಲ ಎಂದು ಅವುಗಳಿಗೆ ಆನರ್ಥಕ್ಯವು ಬಂದೊದಗುತ್ತದೆ. (ಅದನ್ನು) ಪರಿಹರಿಸುವದಕ್ಕಾಗಿ

---

1. ಈ ಮಾತು ಭಾಷ್ಯದಲ್ಲಿದ್ದು ಬಿಟ್ಟುಹೋದಂತೆ ಕಾಣುತ್ತದೆ.

ಅಜ್ಞಾನಿಗಳು ಮಾಡುವ ಕರ್ಮಕ್ಕೆ ವಿಶಿಷ್ಟಫಲವಿರುವದರಿಂದ[1] ಸಾರ್ಥಕ್ಯ ವಿರುವದೆಂಬುದನ್ನು (ಇಲ್ಲಿ) ಹೇಳಲಾಗುತ್ತಿದೆ :

ಆಚಾರ್ಯಕುಲದಿಂದ– ಯಥಾವಿಧಾನವಾಗಿ ಸ್ಮೃತ್ಯುಕ್ತವಾಗಿರುವ ನಿಯಮಗಳಿಂದ ಕೂಡಿದವನಾಗಿ[2] ಅರ್ಥಸಹಿತವಾಗಿ ಅಧ್ಯಯನಮಾಡುತ್ತಾ ಎಂದರ್ಥ **ಉಪಕುರ್ವಾಣಕನಿಗೆ ಸ್ಮೃತಿಯಲ್ಲಿ ಹೇಳಿರುವ ವಿಧಿಯೆಲ್ಲವೂ ಕರ್ತವ್ಯವೇ ಆಗಿರುವದರಿಂದ ಗುರುಶುಶ್ರೂಷೆಗೆ ಪ್ರಾಮುಖ್ಯವನ್ನು ತಿಳಿಸುವದಕ್ಕಾಗಿ (ಶ್ರುತಿ) ಹೇಳುತ್ತಿದೆ:** (ಗುರೋಃ ಕರ್ಮಾತಿಶೇಷೇಣ–) ಗುರುವಿನ ಕರ್ಮವನ್ನು ಯಾವದನ್ನು ಮಾಡಬೇಕೋ ಅದನ್ನು[3] ಮಾಡಿ (ಅಂಥ) ಕರ್ಮವಿಲ್ಲದೆ ಕಾಲವು ಉಳಿದಿರುವದಲ್ಲ, ಆ ಕಾಲದಲ್ಲಿ ವೇದವನ್ನು ಅಧ್ಯಯನಮಾಡಿ[4] ಎಂದರ್ಥ. ಹೀಗೆ **ನಿಯಮವುಳ್ಳವನಾಗಿ ಅಧ್ಯಯನಮಾಡಿದ ವೇದವೇ ಕರ್ಮಜ್ಞಾನಗಳ ಫಲಪ್ರಾಪ್ತಿಗೆ ಸಾಧಕವಾಗುವದೇ ಹೊರತು ಮತ್ತೊಂದು ಬಗೆಯಿಂದ ಆಗಲಾರದಷ್ಟೆ?**[5]– ಎಂದು ಅಭಿಪ್ರಾಯ. ಸಮಾವರ್ತನಮಾಡಿ ಧರ್ಮಜಿಜ್ಞಾಸೆಯನ್ನು ಮುಗಿಸಿ

---

1. "ಅಜ್ಞರು ಮಾಡುವ ಕರ್ಮಕ್ಕೆ ಸಾಫಲ್ಯವನ್ನು ಅಜ್ಞರ ಸಂತೋಷಕ್ಕಾಗಿ ಹೇಳಿದೆ' ಎಂದು **ಟೀಕೆ.** ವೇದವೆಲ್ಲವೂ ಪ್ರಮಾಣವೇ ಆಗಿರುವದರಿಂದ ಜ್ಞಾನದಿಂದಲೇ ಪರಮಪುರುಷಾರ್ಥವಾದರೆ ಕರ್ಮಕ್ಕೆ ಫಲವೇ ಇಲ್ಲವಾಯಿತಲ್ಲ !– ಎಂಬ ಶಂಕೆಗೆ ಪರಿಹಾರವಾಗಿ ಹೇಳಿದೆ ಎಂಬರ್ಥವು ಹೆಚ್ಚು ಸ್ವರಸವಾಗಿರುತ್ತದೆ. ಅಜ್ಞರು ಮಾಡುವ ಕರ್ಮಕ್ಕೂ ವಿಶಿಷ್ಟ ಫಲವಿದೆ, ಏಕೆಂದರೆ ಅವರು ಮಾಡುವ ಕರ್ಮವೂ ಪರಂಪರೆಯಿಂದ ಬ್ರಹ್ಮಲೋಕಪ್ರಾಪ್ತಿಗೆ ಕಾರಣವಾಗಿದೆ ಎಂದು ಅಭಿಪ್ರಾಯ. ಅಚ್ಚಿನ ಪುಸ್ತಕಗಳಲ್ಲಿ 'ಅವಿದ್ವದ್ಭಿಃ' ಎಂಬುವಕ್ಕೆ ಬದಲು 'ವಿದ್ವದ್ಭಿಃ' ಎಂಬ ಪಾಠವಿದೆ ಆಗ ಉಪಾಸಕರು ಎಂಬರ್ಥವನ್ನು ಮಾಡಬೇಕಾಗುವದು. ಇದು ಹಿಂದುಮುಂದಿನ ಗ್ರಂಥಕ್ಕೆ ಹೊಂದುವದಿಲ್ಲವೆಂದು ಕಾಣುತ್ತದೆ ಆತ್ಮಜ್ಞಾನವಿಲ್ಲದವರು ಮಾಡುವ ಕರ್ಮಗಳಿಗೆ ಸ್ವರ್ಗಾದಿಗಳೇ ಫಲವಲ್ಲದೆ ಚಿತ್ತಶುದ್ಧಿದ್ವಾರದಿಂದ ಜ್ಞಾನಪ್ರಾಪ್ತಿಯಮೂಲಕ ವಿಶಿಷ್ಟಫಲವೂ ಉಂಟೆಂಬುದಕ್ಕೆ ಗೀ.ಭಾ. ೧೮–೪೬ರ ಅವತರಣಿಕೆ (ಭಾ. ಭಾ ೫೪೭), ತೈ. ಭಾ. ೧–೧೧(ಭಾ. ಭಾ. ೮೧)ನ್ನು ನೋಡಿರಿ.

2. ಬ್ರಹ್ಮಚರ್ಯಾಶ್ರಮದಲ್ಲಿರುವವನಿಗೆ ಹೇಳಿರುವ ನಿಯಮಗಳನ್ನನುಸರಿಸುತ್ತಾ.

3. ಸಮಿದಾಹರಣವೇ ಮುಂತಾದದ್ದು, ಮನೆಯ ಕೆಲಸಕ್ಕೆ ಸಹಾಯ, ಕಾಲೊತ್ತುವದು ಮುಂತಾದದ್ದು– ಇವೆಲ್ಲವನ್ನೂ.

4. ವೇದಮಧೀತ್ಯ ಎಂಬ ಹಿಂದಿನ ಪಾಠಕ್ಕೆ ಇದರ ಅನ್ವಯವೆಂದು ಇಲ್ಲಿ ತೋರಿಸಿದೆ

5. ಕರ್ಮಗಳ ಫಲವಾದ ಚಿತ್ತಶುದ್ಧಿಯೂ ಪರಂಪರೆಯಿಂದ ಜ್ಞಾನಫಲವಾದ ಮುಕ್ತಿಯೂ ನಿಯಮಾಧ್ಯಯನದ ಫಲವು ಎಂದಭಿಪ್ರಾಯ.

ಕೊಂಡು[1] ಗುರುಕುಲದಿಂದ[2] ಹಿಂತಿರುಗಿ ನ್ಯಾಯದಿಂದ[3] ಹೆಂಡತಿಯನ್ನು ಸಂಪಾದಿಸಿಕೊಂಡು, ಕುಟುಂಬದಲ್ಲಿದ್ದುಕೊಂಡು, ಗಾರ್ಹಸ್ಥ್ಯಕ್ಕೆ ವಿಹಿತವಾಗಿರುವ ಕರ್ಮಗಳನ್ನು ಮಾಡುತ್ತಾ ಎಂದರ್ಥ.[4] ಅದರಲ್ಲಿಯೂ **ಗಾರ್ಹಸ್ಥ್ಯಕ್ಕೆ ವಿಹಿತವಾಗಿರುವ ಕರ್ಮಗಳೊಳಗೆ ಅಧ್ಯಯನಕ್ಕೆ ಪ್ರಾಧಾನ್ಯವನ್ನು ತಿಳಿಸುವದಕ್ಕಾಗಿ (ಶ್ರುತಿ) ಹೇಳುತ್ತಿದೆ :** ಶುಚಿಯಾದ ಶುದ್ಧವಾದ ಅಮೇಧ್ಯಾದಿಗಳಿಲ್ಲದ ದೇಶದಲ್ಲಿ ಸರಿಯಾಗಿ ಕುಳಿತುಕೊಂಡು[5] ಸ್ವಶಾಖಾಧ್ಯಯನವನ್ನು ಮಾಡುತ್ತಾ, ದಿನದಿನವೂ ಮಾಡಬೇಕಾದ ಮತ್ತು ಹೆಚ್ಚಿಗೆಯಾಗಿ ತನ್ನ ಶಕ್ತಿಯಿದ್ದಷ್ಟು ಋಗಾದಿಗಳ ಅಭ್ಯಾಸವನ್ನು ಮಾಡುತ್ತಾ, **ಮಕ್ಕಳನ್ನೂ ಶಿಷ್ಯರನ್ನೂ ಧಾರ್ಮಿಕರನ್ನಾಗಿ ಮಾಡುತ್ತಾ** ಧರ್ಮಯುಕ್ತರನ್ನಾಗಿಮಾಡುತ್ತಾ ಧಾರ್ಮಿಕರಾಗಿರುವಂತೆ ಅವರನ್ನು ನಿಯಮಿಸುತ್ತಾ, ಆತ್ಮನಾದ ತನ್ನ ಹೃದಯದಲ್ಲಿರುವ ಹಾರ್ದಬ್ರಹ್ಮದಲ್ಲಿ ಎಲ್ಲಾ ಇಂದ್ರಿಯಗಳನ್ನೂ ಇಟ್ಟು, ಉಪಸಂಹಾರಮಾಡಿಕೊಂಡು, ಇಂದ್ರಿಯಗಳನ್ನು ಎಂದಿರುವದರಿಂದ ಕರ್ಮಗಳನ್ನು ಬಿಟ್ಟು ಎಂದರ್ಥ.[6] ಯಾವ ಭೂತಗಳನ್ನೂ ಸ್ಥಾವರಜಂಗಮಭೂತಗಳನ್ನು (ಯಾವವನ್ನೂ) ಹಿಂಸೆಮಾಡದೆ ಪೀಡಿಸದೆ ಎಂದರ್ಥ. **ಭಿಕ್ಷಾನಿಮಿತ್ತವಾಗಿ ಓಡಾಡುವದರಲ್ಲಿಯೂ ಮತ್ತೊಬ್ಬರಿಗೆ ಪೀಡೆಯಾದೀತೆಂದು ಇದನ್ನು (ಶ್ರುತಿ) ಹೇಳಿದೆ.** ತೀರ್ಥಗಳನ್ನು ಬಿಟ್ಟು ಮಿಕ್ಕೆಡೆಯಲ್ಲಿ, ತೀರ್ಥವೆಂದರೆ ಶಾಸ್ತ್ರದಲ್ಲಿ ಅನುಮತಿಯನ್ನು ಕೊಟ್ಟಿರುವ ವಿಷಯವು, ಅದಕ್ಕಿಂತ ಬೇರೆಯಾದ ಕಡೆಯಲ್ಲಿ ಎಂದರ್ಥ. ಇದು ಎಲ್ಲಾ ಆಶ್ರಮಿಗಳಿಗೂ ಸಮಾನವಾದ ಉಪದೇಶವು.[7] ತೀರ್ಥಗಳನ್ನು ಬಿಟ್ಟು ಮಿಕ್ಕ

---

1. "ಅಧ್ಯಯನಮಾಡಿ" ಎಂದಿಷ್ಟೇ ಇಲ್ಲಿದ್ದರೂ ವೇದವು ಅರ್ಥವನ್ನು ಹೇಳುವದರಿಂದ ವೇದಾರ್ಥವಾದ ಕರ್ಮವನ್ನು ಜಿಜ್ಞಾಸೆಮಾಡಿಯೇ ಸಮಾವರ್ತನಮಾಡಬೇಕು – ಎಂದು ಶಾ. ಭಾ. ೧-೧-೧ರಲ್ಲಿ ತೀರ್ಮಾನಿಸಿದೆ.

2. "ಆಚಾರ್ಯಕುಲಾತ್" ಎಂಬ ಪದವನ್ನು ಇಲ್ಲಿಗೆ ಹೊಂದಿಸಿಕೊಳ್ಳಬೇಕು ಎಂದು ಭಾವ. 3. ಶಾಸ್ತ್ರೋಕ್ತವಿಧಿಯಿಂದ.

4. ಕುಟುಂಬದಲ್ಲಿರುವದು ಎಂದರೆ ಗೃಹಸ್ಥಾಶ್ರಮದ ಕರ್ಮಗಳನ್ನು ಮಾಡುತ್ತಿರುವದು– ಎಂದೇ ಅರ್ಥವೆಂದು ಭಾವ.

5. ಪದ್ಮಾಸನಾದ್ಯಾಸನವನ್ನು ಅಳವಡಿಸಿಕೊಂಡು ಎಂದರ್ಥ.

6. ಇಲ್ಲಿ ಕರ್ಮಸಂನ್ಯಾಸಮಾಡಿ ಎಂದರೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಎಂದೂ ಅರ್ಥಮಾಡಬಹುದು ; ಅದಕ್ಕೆ ಮುಂದಿನ ವಾಕ್ಯಶೇಷದ ಆಧಾರವಿದೆ. ಆದರೆ ಇಲ್ಲಿ ಗಾರ್ಹಸ್ಥ್ಯವೇ ಪ್ರಧಾನವೆಂಬುದು ಈ ಗ್ರಂಥಭಾಗದಿಂದಲೂ ಸೂ. ಭಾ. ೩-೪-೪೮, ೪೯ (ಛಾ. ಭಾ. ೪೯೩) ಇವುಗಳಿಂದಲೂ ಸ್ಪಷ್ಟವಾಗುತ್ತದೆ. ಆದ್ದರಿಂದ 'ಉಪಾಸನೆಗಾಗಿ ಕರ್ಮವನ್ನು ಬಿಟ್ಟು' ಎಂದಿಷ್ಟೇ ಇಲ್ಲಿ ಅರ್ಥಮಾಡಬೇಕೆ, ಹೇಗೆಂಬುದನ್ನು ವಿದ್ವಾಂಸರು ನಿರ್ಣಯಿಸಬೇಕಾಗಿದೆ.

7. ಬರಿಯ ಗೃಹಸ್ಥರಿಗೆ ಮಾತ್ರವೇ ಹೇಳಿಲ್ಲ.

ಕಡೆಗಳಲ್ಲಿ ಅಹಿಂಸೆಯೇ (ಇಲ್ಲಿ ವಿವಕ್ಷಿತವಾಗಿದೆ) ಎಂದು ಮತ್ತೆ ಕೆಲವರು ವರ್ಣಿಸಿರುತ್ತಾರೆ.[1]

## ಉಪಾಸಕನಿಗೆ ಫಲ

### (ಭಾಷ್ಯ)

೬೯೦. ಕುಟುಮ್ಬ ಏವೈತತ್ ಸರ್ವಂ ಕುರ್ವನ್ ಸ ಖಲ್ವಧಿಕೃತೋ ಯಾವದಾಯುಷಂ ಯಾವಜ್ಜೀವಮೇವಂ ಯಥೋಕ್ತೇನ ಪ್ರಕಾರೇಣೈವ ವರ್ತಯನ್ ಬ್ರಹ್ಮಲೋಕಮಭಿಸಂಪದ್ಯತೇ ದೇಹಾನ್ತೇ । ನ ಚ ಪುನರಾವರ್ತತೇ ಶರೀರಗ್ರಹಣಾಯ । ಪುನರಾವೃತ್ತೇಃ ಪ್ರಾಪ್ತಾಯಾಃ ಪ್ರತಿಷೇಧಾತ್ ಅರ್ಚಿರಾದಿನಾ ಮಾರ್ಗೇಣ ಕಾರ್ಯಬ್ರಹ್ಮಲೋಕಮಭಿಸಂಪದ್ಯ ಯಾವದ್ಬ್ರಹ್ಮಲೋಕಸ್ಥಿತಿಸ್ತಾವತ್ ತತ್ರೈವ ತಿಷ್ಠತಿ ಪ್ರಾಕ್ತತೋ ನಾಽಽವರ್ತತ ಇತ್ಯರ್ಥಃ । ದ್ವಿರಭ್ಯಾಸ ಉಪನಿಷದ್ವಿದ್ಯಾಪರಿಸಮಾಪ್ತ್ಯರ್ಥಃ ॥

### (ಭಾಷ್ಯಾರ್ಥ)

ಕುಟುಂಬದಲ್ಲಿಯೇ ಇದೆಲ್ಲವನ್ನೂ ಮಾಡುತ್ತಾ ಆ ಅಧಿಕಾರಿಯು ಆಯುಸ್ಸಿರುವವರೆಗೂ ಬದುಕಿರುವವರೆಗೂ[2] ಹೀಗೆ ಹಿಂದೆ ಹೇಳಿದ ರೀತಿಯಿಂದ ನಡೆಯುತ್ತಿರುವವನಾದರೆ ದೇಹ(ಪಾತ)ವಾದ ಬಳಿಕ ಬ್ರಹ್ಮಲೋಕವನ್ನು ಪಡೆದುಕೊಳ್ಳುತ್ತಾನೆ. ಶರೀರಧಾರಣವನ್ನು ಮಾಡುವದಕ್ಕೆ ಮತ್ತೆ ಹಿಂತಿರುಗುವದಿಲ್ಲ. ಹಿಂತಿರುಗುವದೆಂಬುದು ಪ್ರಾಪ್ತವಾದದ್ದನ್ನೇ ಇಲ್ಲಿ ಅಲ್ಲಗಳೆದಿರುವದರಿಂದ (ಹೀಗೆ)[3] ಅರ್ಚಿರಾದಿಮಾರ್ಗದಿಂದ ಕಾರ್ಯಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮಲೋಕವು ಎಲ್ಲಿ

---

1. ತೀರ್ಥಗಳಲ್ಲಿ ಹಿಂಸೆಮಾಡಿದ್ದು ಹಿಂಸೆಯೇ ಅಲ್ಲ ಎಂದು ಅವರ ಅಭಿಪ್ರಾಯ.

2. ಸಾಯುವ ಕಾಲದವರೆಗೂ ಉಪಾಸನೆಮಾಡುತ್ತಲೇ ಇರಬೇಕು. ಸೂ. ಭಾ. ೪-೧-೧೨.

3. ದಕ್ಷಿಣಮಾರ್ಗದಿಂದ ಹೋದವರು ಬರುತ್ತಾರಾದ್ದರಿಂದ ಇವರು ಬರುವದಿಲ್ಲ ಎಂದಿದೆ ಎಂದು ಟೀಕೆ. ಈ ವಾಕ್ಯವನ್ನು ಮುಂದಕ್ಕೆ ಅನ್ವಯಿಸಿದರೆ ಕಲ್ಪಾಂತರದಲ್ಲಿ ಬರುತ್ತಾರಾದ್ದರಿಂದ ಈ ಕಲ್ಪದಲ್ಲಿ ಬರುವದಿಲ್ಲವೆಂದು ಅಲ್ಲಗಳೆದಿದೆ ಎಂಬ ತಾತ್ಪರ್ಯವನ್ನು ಇದರಿಂದ ತೆಗೆಯಬಹುದು. ಬ್ರಹ್ಮಲೋಕಕ್ಕೆ ಹೋದವರು (೧) ಕಲ್ಪಾಂತರದಲ್ಲಿ ಬರುತ್ತಾರೆಂಬುದಕ್ಕೆ ೫-೧೦-೨ (ಛಾ. ಭಾ. ೪೦೫)ನ್ನೂ ಬೃ. ಭಾ. ೬-೨-೧೫ (ಭಾ.ಭಾ. ೪೫೦)ನ್ನೂ ನೋಡಿ. (೨) ಅಥವಾ ಬ್ರಹ್ಮಲೋಕದಲ್ಲಿ ಜ್ಞಾನವಾದವರಿಗೆ ಬ್ರಹ್ಮನೊಡನೆಯೇ ಮುಕ್ತಿಯಾಗುತ್ತದೆ. ಸೂ. ಭಾ. ೪-೩-೧೦, ೪-೩-೨೨-ಇವನ್ನು ನೋಡಿ.

ಯವರೆಗೆ ಇರುವದೋ ಅಲ್ಲಿಯವರೆಗೂ ಅಲ್ಲಿಯೇ ಇದ್ದುಕೊಂಡಿರುತ್ತಾನೆ, ಅದಕ್ಕಿಂತ ಮುಂಚೆ- ಹಿಂತಿರುಗುವದಿಲ್ಲ ಎಂದರ್ಥ. ('ನ ಚ ಪುನರಾವರ್ತತೇ' ಮತ್ತೆ ಹಿಂತಿರುಗುವದೂ ಇಲ್ಲ- ಎಂದು) ಎರಡು ಸಲ ಹೇಳಿರುವದು ಉಪನಿಷದ್ವಿದ್ಯೆಯು ಮುಗಿಯಿತೆಂದು ತಿಳಿಸುವದಕ್ಕೆ.

ಇತಿ ಶ್ರೀಗೋವಿನ್ದಭಗವತ್ಪೂಜ್ಯಪಾದಶಿಷ್ಯಸ್ಯ ಪರಮಹಂಸಪರಿವ್ರಾಜಕಾಚಾರ್ಯಸ್ಯ ಶ್ರೀಶಂಕರಭಗವತಃ ಕೃತೌ ಛಾಂದೋಗ್ಯೋಪನಿಷದ್ಭಾಷ್ಯೇಽಷ್ಟಮೋಽಧ್ಯಾಯಃ

**ಸಮಾಪ್ತಂ ಚೋಪನಿಷದ್ಭಾಷ್ಯಮ್**

ಓಂ ತತ್ಸತ್



# ಎಂಟನೆಯ ಅಧ್ಯಾಯದ ಏಳನೆಯ ಖಂಡ ದಿಂದ ಹದಿನೈದರವರೆಗಿನ ಖಂಡಗಳ ಸಾರ

## ಏಳನೆಯ ಖಂಡ

"ಯಾವ ಆತ್ಮನು ಅಪಹತಪಾಪ್ಮನಾಗಿರುವನೋ ವಿಜರನೂ ವಿಮೃತ್ಯುವೂ ವಿಶೋಕನೂ ಹಸಿವುಬಾಯಾರಿಕೆಗಳಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೋ ಅವನನ್ನೇ ಅನ್ವೇಷಣಮಾಡಬೇಕು, ಅವನನ್ನೇ ವಿಜಿಜ್ಞಾಸೆಮಾಡಬೇಕು. ಯಾವನು ಅವನನ್ನು ತಿಳಿದು ಕೊಂಡು ಅರಿತುಕೊಳ್ಳುವನೋ ಅವನು ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಪಡೆದು ಕೊಳ್ಳುತ್ತಾನೆ" ಎಂದು ಒಮ್ಮೆ ಪ್ರಜಾಪತಿಯು ನುಡಿದನಂತೆ

ಇದು ದೇವಾಸುರರಿಬ್ಬರ ಕಿವಿಗೂ ಬಿದ್ದಿತು ಈ ಆತ್ಮನನ್ನು ಅರಿತುಕೊಳ್ಳಬೇಕೆಂದು ದೇವರಾಜನಾದ ಇಂದ್ರನೂ ಅಸುರರಾಜನಾದ ವಿರೋಚನನೂ ಹೊರಟು ಸಮಿತ್ಪಾಣಿಗಳಾಗಿ ಬಂದು ಮೂವತ್ತೆರಡು ವರ್ಷಗಳವರೆಗೆ ಪ್ರಜಾಪತಿಯಲ್ಲಿ ಬ್ರಹ್ಮಚರ್ಯದಿಂದಿದ್ದರು ಪ್ರಜಾ ಪತಿಯು ಅವರು ಏತಕ್ಕೆ ಬಂದರೆಂಬುದನ್ನು ಅವರಿಂದ ತಿಳಿದುಕೊಂಡನು

"ಕಣ್ಣಿನಲ್ಲಿ ಈ ಪುರುಷನು ಕಾಣಿಸುತ್ತಿರುವನಲ್ಲ ಇವನೇ ಆತ್ಮನು, ಅಮೃತವೂ ಅಭಯ ವೂ ಆದ ಬ್ರಹ್ಮವು" ಎಂದು ಅವನು ಅವರಿಗೆ ಉಪದೇಶಿಸಿದನು. ಅವರು ಛಾಯಾಪುರುಷ ನಿರಬಹುದೆಂದುಕೊಂಡು "ನೀರು, ಕನ್ನಡಿ ಇವುಗಳಲ್ಲಿ ಕಾಣುವದಲ್ಲ, ಅದರಲ್ಲಿ ಈ ಆತ್ಮನು ಯಾರು ?" ಎಂದು ಕೇಳಿದರು. "ಅವನು ಎಲ್ಲಾ ಕಡೆಯಲ್ಲಿಯೂ ಕಾಣಿಸುತ್ತಾನೆ" ಎಂದು ಪ್ರಜಾಪತಿಯು ಉತ್ತರವಿತ್ತನು.

## ಎಂಟನೆಯ ಖಂಡ

ಪ್ರಜಾಪತಿಯು "ನೀರಿನ ಪಾತ್ರೆಯಲ್ಲಿ ನಿಮ್ಮನ್ನು ನೋಡಿಕೊಂಡು ಬನ್ನಿರಿ , ನಿಮಗೆ ತಿಳಿಯದೆ ಇದ್ದದ್ದನ್ನು ತಿಳಿಸಿರಿ" ಎಂದನು ಅವರನ್ನು ಏನು ಕಂಡಿರೆಂದು ಕೇಳಲು 'ನಮ್ಮ ಸ್ವರೂಪವೇ ಕಾಣಿಸುತ್ತಿದೆ" ಎಂದರು

ಆಗ ಪ್ರಜಾಪತಿಯು "ಕ್ಷೌರವನ್ನು ಮಾಡಿಸಿಕೊಂಡು ಉತ್ತಮವೇಷಭೂಷಣಗಳಿಂದೊಡ ಗೂಡಿ ನೋಡಿರಿ !" ಎಂದನು. ಆಗಲೂ ಅವರು "ನಾವು ಹೇಗಿದ್ದೇವೋ ಹಾಗೆಯೇ ಈ ಛಾಯಾಪುರುಷರು ಕಾಣಿಸುತ್ತಿದಾರೆ" ಎಂದರು

ಪ್ರಜಾಪತಿಯು "ಇವನೇ ಆತ್ಮನು" ಎಂದು ದ್ರಷ್ಟೃಪುರುಷನನ್ನು ಹೇಳಿದನು. ಅವರು ತೃಪ್ತರಾಗಿ ಹೊರಟುಹೋದರು. ಪ್ರಜಾಪತಿಯು "ಇವರಿಗೆ ಆತ್ಮಜ್ಞಾನವಾಗಿಲ್ಲ. ಈಗಿನ ತಿಳಿವಳಿಕೆಯನ್ನೇ ನಂಬಿಕೊಂಡವರು ಪರಾಭೂತರಾಗುವರು" ಎಂದನು. ಅಸುರರಾಜನು ದೇಹವೇ ಆತ್ಮನೆಂದು ಪ್ರಜಾಪತಿಯು ಹೇಳಿದನೆಂದು ಭಾವಿಸಿ ಆ ತಿಳಿವಳಿಕೆಯನ್ನೇ ಅಸುರರಲ್ಲಿ ಹರಡಿದನು. ಅಸುರರಲ್ಲಿ ಈ ತಿಳಿವಳಿಕೆಯೇ ಇಂದಿಗೂ ಇದೆ.

## ಒಂಬತ್ತನೆಯ ಖಂಡ

ಇಂದ್ರನು ದೇವತೆಗಳಲ್ಲಿಗೆ ಹೋಗದೆ ದಾರಿಯಲ್ಲಿ "ಛಾಯಾಪುರುಷನು ಆತ್ಮನಾಗಲಾರನು, ಏಕೆಂದರೆ ಶರೀರವನ್ನೇ ಅನುಸರಿಸಿ ಅದು ಕಾಣುತ್ತಿದೆ ; ಅದು ಶರೀರದೊಡನೆ ನಾಶವಾಗುತ್ತದೆ. ಈ ಜ್ಞಾನದಿಂದೇನೂ ಫಲವು ಕಾಣಿಸುವದಿಲ್ಲ" ಎಂದುಕೊಂಡು ಹಿಂತಿರುಗಿ ಮತ್ತೆ ಸಮಿತ್ಪಾಣಿಯಾಗಿ ಪ್ರಜಾಪತಿಯಲ್ಲಿಗೆ ಬಂದು ತನ್ನ ಅಭಿಪ್ರಾಯವನ್ನು ಹೇಳಿಕೊಂಡನು.

ಪ್ರಜಾಪತಿಯು "ಇದು ನಿಜ, ಈ ಆತ್ಮನನ್ನೇ ನಿನಗೆ ಮತ್ತೆ ಹೇಳುವೆನು. ಇನ್ನೂ ಮೂವತ್ತೆರಡು ವರ್ಷಗಳವರೆಗೆ ಬ್ರಹ್ಮಚರ್ಯದಿಂದಿರು" ಎಂದನು.

## ಹತ್ತನೆಯ ಖಂಡ

ಪ್ರಜಾಪತಿಯು "ಈ ಸ್ವಪ್ನದಲ್ಲಿ ಮಹಿತನಾಗಿ ಭೋಗಾನುಭವವನ್ನು ಮಾಡುತ್ತಿರುವನಲ್ಲ, ಇವನೇ ಆತ್ಮನು, ಅಮೃತಾಭಯವಾದ ಬ್ರಹ್ಮವು" ಎಂದನು. ಇಂದ್ರನು ತೃಪ್ತನಾಗಿ ಹೊರಟು ಹೋದನು

ಆದರೆ ದಾರಿಯಲ್ಲಿ ಅವನಿಗೆ ಹೀಗೆ ತೋರಿತು "ಸ್ವಪ್ನಪುರುಷನು ಶರೀರವನ್ನನುಸರಿಸಿಲ್ಲವೆಂಬುದು ನಿಜ , ಆದರೆ ಇವನನ್ನು ಯಾರೋ ಹೊಡೆಯುವಂತೆ, ಓಡಿಸಿಕೊಂಡು ಬರುವಂತೆ, ಇವನು ಅಪ್ರಿಯವನ್ನು ಅನುಭವಿಸುವಂತೆ ಕಾಣಿಸುತ್ತಿದೆಯಲ್ಲ ! ಇವನು ಹೇಗೆ ಆತ್ಮನಾದಾನು?" ಹೀಗೆಂದುಕೊಂಡು ಮತ್ತೂ ಪ್ರಜಾಪತಿಯಲ್ಲಿಗೆ ಬಂದು ತನ್ನ ವಿಚಾರವನ್ನು ಹೇಳಿಕೊಂಡನು.

ಪ್ರಜಾಪತಿಯು "ಇದು ನಿಜ ಇವನೇ ಆತ್ಮನನ್ನು ಮತ್ತೂ ಹೇಳಿಕೊಡುವೆನು. ಇನ್ನೂ ಮೂವತ್ತೆರಡು ವರ್ಷ ಬ್ರಹ್ಮಚರ್ಯದಿಂದಿರು " ಎಂದನು.

## ಹನ್ನೊಂದನೆಯ ಖಂಡ

"ಸಂಪೂರ್ಣವಾಗಿ ಸುಪ್ತನಾಗಿ ಸಂಪ್ರಸನ್ನನಾಗಿರುವನಲ್ಲ ಇವನೇ ಆತ್ಮನು, ಅಮೃತಾಭಯಬ್ರಹ್ಮವು" ಎಂದು ಪ್ರಜಾಪತಿಯು ಹೇಳಿದ್ದನ್ನು ಕೇಳಿ ಇಂದ್ರನು ತೃಪ್ತನಾಗಿ ಹೊರಟು ಹೋದನು.

ಆದರೆ ದಾರಿಯಲ್ಲಿ ಅವನಿಗೆ ಹೀಗೆ ತೋರಿತು "ಈ ಅವಸ್ಥೆಯಲ್ಲಿ ನಾನು ಇಂಥವನು, ಇವರು ಇಂಥವರು- ಎಂಬ ಜ್ಞಾನವೇ ಇರುವದಿಲ್ಲ ! ಇವನು ಹೇಗೆ ಆ ಆತ್ಮನಾದಾನು ?" ಈ ತನ್ನ ಯೋಚನೆಯನ್ನು ಮತ್ತೆ ಪ್ರಜಾಪತಿಯ ಬಳಿಗೆ ಬಂದು ಅವನು ಹೇಳಿಕೊಂಡನು

ಪ್ರಜಾಪತಿಯು "ಇದು ನಿಜ. ಇವನನ್ನೇ ಮತ್ತೂ ಒನ್ಮೆ ನಿನಗೆ ಹೇಳಿಕೊಡುವೆನು, ಇನ್ನೂ ಐದು ವರ್ಷಗಳು ಬ್ರಹ್ಮಚರ್ಯದಿಂದಿರು" ಎಂದನು. ಇಂದ್ರನು ಹೀಗೆ ಒಟ್ಟು ನೂರೊಂದು ವರ್ಷಗಳವರೆಗೆ ಬ್ರಹ್ಮಚರ್ಯದಿಂದಿದ್ದನು.

## ಹನ್ನೆರಡನೆಯ ಖಂಡ

"ಮಘವಂತನೆ, ಈ ಶರೀರವು ಮರ್ತ್ಯವು. ಇದು ಅಮೃತನೂ ಅಶರೀರನೂ ಆದ ಆತ್ಮನಿಗೆ ಅಧಿಷ್ಠಾನವು. ಸಶರೀರನಾದವನಿಗೆ ಮೃತ್ಯುವುಂಟು, ಪ್ರಿಯಾಪ್ರಿಯಗಳು ತಪ್ಪವು. ಆದರೆ ಅಶರೀರನಾದವನನ್ನು ಪ್ರಿಯಾಪ್ರಿಯಗಳು ಸೋಂಕವು. ಹೇಗೆ ವಾಯು, ಮೋಡ, ಮಿಂಚು, ಗುಡುಗು- ಇವುಗಳು ಸಾಮಾನ್ಯವಾಗಿ ಆಕಾಶದಲ್ಲಿ ಒಂದಾಗಿರುವಂತೆ ತೋರುತ್ತಿದ್ದು

ಸೂರ್ಯತಾಪದಿಂದ ಎದ್ದು ಮಳೆಗಾಲದಲ್ಲಿ ತಮ್ಮತಮ್ಮ ರೂಪಿನಿಂದ ತೋರಿಕೊಳ್ಳುವವೋ ಹಾಗೆ ಈ ಸಂಪ್ರಸಾದಾತ್ಮನು ವಿವೇಕದಿಂದ ಈ ಶರೀರವನ್ನು ಬಿಟ್ಟಿದ್ದು ಪರಂಜ್ಯೋತಿಯಾದ ತನ್ನ ಸ್ವರೂಪದಿಂದ ತೋರಿಕೊಳ್ಳುವನು. ಅವನೇ ಉತ್ತಮಪುರುಷನು. ಈ ಸ್ವರೂಪದಲ್ಲಿ ಆತ್ಮನು ಮುಕ್ತನಾಗಿರುತ್ತಾನೆ. ಎಲ್ಲಾ ಕಾಮುಗಳೂ ಸರ್ವಾತ್ಮನಾದ ಅವನವೇ ಆಗಿರುತ್ತವೆ.

ವಿಶೇಷಜ್ಞಾನವು ಚಕ್ಷುರಾದಿಕರಣಗಳಿಂದ ತೋರುತ್ತಿದ್ದರೂ ಚೈತನ್ಯಸ್ವರೂಪವು ಆತ್ಮನದೇ. ಜೀವನ್ಮುಕ್ತನಾದವನು ವಿಶುದ್ಧವಾದ ದೈವಮನಸ್ಸಿನಿಂದ ಬ್ರಹ್ಮಲೋಕದಲ್ಲಿ ಮುಕ್ತರಿಗಾಗುವ ಮಾನಸವಾದ ಸರ್ವಕಾಮುಗಳನ್ನೂ ಪಡೆದಿರುತ್ತಾನೆ. ಈ ಆತ್ಮನನ್ನು ದೇವತೆಗಳು ಅರಿತು ಉಪಾಸನೆಮಾಡುತ್ತಿರುವದರಿಂದ ಅವರಿಗೆ ಸರ್ವಲೋಕಕಾಮುಗಳೂ ದೊರೆತಿರುವವು" ಎಂದು ನಿಜವಾದ ಆತ್ಮಸ್ವರೂಪವನ್ನು ಬೋಧಿಸಿದನು.

## ಹದಿಮೂರನೆಯ ಖಂಡ

ಹಾರ್ದಬ್ರಹ್ಮರೂಪವು ಬ್ರಹ್ಮಲೋಕದ ಶಬಲಬ್ರಹ್ಮದಿಂದಲೇ ಆಗಿರುವದು ನಾನು ಹಾರ್ದಬ್ರಹ್ಮದ ಉಪಾಸನೆಯಿಂದ ಧರ್ಮಾಧರ್ಮಗಳನ್ನು ಕೊಡಹಿಕೊಂಡು ಬ್ರಹ್ಮಲೋಕವನ್ನು ಪಡೆದುಕೊಳ್ಳುವೆನು- ಎಂದು ಉಪಾಸಕನು ಈ ಅರ್ಥದ ಮಂತ್ರವನ್ನು ಜಪಿಸುತ್ತಾ ಧ್ಯಾನಿಸುತ್ತಿರಬೇಕು.

## ಹದಿನಾಲ್ಕನೆಯ ಖಂಡ

ಆಕಾಶದಂತೆ ಅಶರೀರನೂ ಸೂಕ್ಷ್ಮನೂ ಆಗಿರುವ ಬ್ರಹ್ಮವೇ ನಾಮರೂಪಗಳನ್ನು ವ್ಯಾಕರಣಮಾಡಿರುತ್ತದೆ. ಆ ಬ್ರಹ್ಮವು ಅಮೃತವಾದ ಆತ್ಮತತ್ತ್ವವೇ ಆಗಿರುತ್ತದೆ- ಎಂಬೀ ಬ್ರಹ್ಮ ಲಕ್ಷಣವನ್ನು ಹೇಳುವ ಮಂತ್ರದರ್ಥವನ್ನು ಧ್ಯಾನಮಾಡಬೇಕು.

ಉಪಾಸಕನಾದವನು ಪ್ರಜಾಪತಿಯ ಸಭೆಯನ್ನು ನಾನು ಪ್ರವೇಶಿಸುವೆನು ! ಬ್ರಾಹ್ಮಣರ, ಕ್ಷತ್ರಿಯರ, ಮತ್ತು ವೈಶ್ಯರ, ಆತ್ಮನೇ ನಾನಾಗುವೆನು' ಎಲ್ಲಾ ಆತ್ಮರುಗಳಿಗೂ ಆತ್ಮನು ನಾನು. ಇನ್ನುಮುಂದೆ ನಾನು ಗರ್ಭವಾಸವನ್ನು ಅನುಭವಿಸದೆ ಇರುವದಕ್ಕಾಗಿ ಈ ಆತ್ಮಸ್ವರೂಪವನ್ನು ಹೊಂದಬೇಕು ' ಎಂಬರ್ಥದ ಮಂತ್ರವನ್ನು ಜಪಿಸುತ್ತಿರಬೇಕು.

## ಹದಿನೈದನೆಯ ಖಂಡ

ಈ ಉಪನಿಷದ್ವಿದ್ಯೆಯನ್ನು ಗರ್ಭೀಕರಿಸಿಕೊಂಡಿರುವ ಉಪನಿಷದ್ಗ್ರಂಥವನ್ನು ಹಿರಣ್ಯಗರ್ಭನ ಮೂಲಕ ಪರಮೇಶ್ವರನು ಪ್ರಜಾಪತಿಗೂ ಪ್ರಜಾಪತಿಯು ಮನುವಿಗೂ ಮನುವು ಪ್ರಜೆಗಳಿಗೂ ಹೇಳಿದನು. ಹೀಗೆ ವಿದ್ಯೆಯು ಜನರಲ್ಲಿ ಬಂದು ನಿಂತಿದೆ.

ಜ್ಞಾನದಿಂದಲೇ ಪರಮಪುರುಷಾರ್ಥವು ದೊರಕುವದಾದರೂ ಬ್ರಹ್ಮಚಾರಿಯಾಗಿದ್ದು ಗುರುಕುಲವಾಸಮಾಡಿ ವೇದಾಧ್ಯಯನವನ್ನು ಮಾಡಿದ ಬಳಿಕ ಗೃಹಸ್ಥನಾಗಿ ಶಾಸ್ತ್ರೀಯಕರ್ಮಗಳನ್ನು ಅನುಷ್ಠಾನಮಾಡುತ್ತಾ ಇಂದ್ರಿಯಗಳನ್ನೆಲ್ಲ ಉಪಸಂಹಾರಮಾಡಿಕೊಂಡು ಹಾರ್ದಬ್ರಹ್ಮೋಪಾಸನೆಯನ್ನು ಮಾಡುತ್ತಾ ಶಾಸ್ತ್ರದಲ್ಲಿ ಅನುಜ್ಞೆಮಾಡಿರುವದು ಹೊರತು ಮತ್ತೆಯಾವ ಪ್ರಾಣಿಹಿಂಸೆಯನ್ನೂ ಮಾಡದೆ ಬದುಕಿರುವವರೆಗೂ ಸಾಧನವನ್ನು ಮಾಡುತ್ತಿರುವಾತನು ಬ್ರಹ್ಮಲೋಕವನ್ನು ಪಡೆಮಕೊಳ್ಳುತ್ತಾನೆ, ಅವನು ಮತ್ತೆ ಈ ಕಲ್ಪದಲ್ಲಿ ಸಂಸಾರಕ್ಕೆ ಹಿಂತಿರುಗುವದಿಲ್ಲ. ಅಲ್ಲಿ ಜ್ಞಾನವಾದರೆ ಕ್ರಮಮುಕ್ತಿಯನ್ನು ಪಡೆದುಕೊಳ್ಳುತ್ತಾನೆ.

---

# ಪರಿಶಿಷ್ಟ

## ವೇದೋಕ್ತಕರ್ಮಗಳು

ಛಾಂದೋಗ್ಯೋಪನಿಷತ್ತಿನಲ್ಲಿ ಮಿಕ್ಕ ಎಲ್ಲಾ ಉಪನಿಷತ್ತುಗಳಲ್ಲಿರುವದಕ್ಕಿಂತಲೂ ಹೆಚ್ಚಾಗಿ ಕರ್ಮಗಳ ಪರಾಮರ್ಶವು ಕಂಡುಬರುವದರಿಂದ ವೇದಗಳಿಗೂ ಕರ್ಮಗಳಿಗೂ ಇರುವ ಸಂಬಂಧವನ್ನು ಈ ಪರಿಶಿಷ್ಟದಲ್ಲಿ ಸ್ವಲ್ಪಮಟ್ಟಿಗೆ ತಿಳಿಸಲಾಗಿರುತ್ತದೆ. ಇಲ್ಲಿರುವ ಪಾರಿಭಾಷಿಕಶಬ್ದಗಳನ್ನು ಮಿಕ್ಕ ಉಪನಿಷತ್ತುಗಳಲ್ಲಿ ಅಥವಾ ಭಾಷ್ಯಗಳಲ್ಲಿ ಪ್ರಯೋಗಿಸಿರುವದು ಕಂಡುಬಂದರೆ ವಾಚಕರು ಅಲ್ಲಿಯೂ ಈ ಪರಿಶಿಷ್ಟದಲ್ಲಿ ಕೊಟ್ಟಿರುವ ವಿವರಣೆಯನ್ನೇ ಮನದಂದುಕೊಳ್ಳಬಹುದು.

## ಕರ್ಮಗಳಲ್ಲಿ ನಿತ್ಯತ್ವಾದಿವಿಭಾಗ

ಎಲ್ಲಾ ಕರ್ಮಗಳನ್ನೂ ನಿತ್ಯ, ನೈಮಿತ್ತಿಕ, ಕಾಮ್ಯ- ಎಂದು ಮೂರು ವಿಭಾಗಗಳಾಗಿ ವಿಂಗಡಿಸಿರುತ್ತಾರೆ. ಅವಶ್ಯವಾಗಿ ಆಯಾ ಕಾಲದಲ್ಲಿ ಮಾಡಲೇಬೇಕಾಗಿದ್ದು ಮಾಡದೆ ಇದ್ದರೆ **'ಪ್ರತ್ಯವಾಯ'**(ದೋಷ)ವುಂಟೆಂದು ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳು **ನಿತ್ಯಕರ್ಮಗಳು.** ಯಾವದಾದರೂ ನಿಮಿತ್ತವು ಬಂದೊದಗಿದಾಗ ಆಗಲೇ ಅವಶ್ಯವಾಗಿ ಮಾಡಬೇಕೆಂದು ವಿಧಿಸಿರುವ ಕರ್ಮಗಳು **ನೈಮಿತ್ತಿಕಕರ್ಮಗಳು.** ಸರಿಯಾಗಿ ನೋಡಿದರೆ ಈ ಎರಡು ಬಗೆಯ ಕರ್ಮಗಳೂ ನಿಮಿತ್ತವಿರುವಾಗಲೇ ಮಾಡತಕ್ಕವಾದ್ದರಿಂದ ನೈಮಿತ್ತಿಕವೇ. ಆದರೂ ನಿಮಿತ್ತವು ನಿಯತವಾಗಿ ಪ್ರಾಪ್ತವಾದದ್ದು ನಿತ್ಯ, ಅನಿಯತವಾಗಿ ಪ್ರಾಪ್ತವಾದದ್ದು ನೈಮಿತ್ತಿಕ- ಎಂದು ಇವುಗಳನ್ನು ಶಾಸ್ತ್ರದಲ್ಲಿ ವ್ಯವಹರಿಸಿರುತ್ತದೆ. (೩) ಫಲೇಚ್ಛೆಯಿಂದ ಮಾಡುವ ಕರ್ಮಗಳು **ಕಾಮ್ಯಕರ್ಮಗಳು.** (೪) ಕರ್ಮಗಳಲ್ಲಿ ಆಗಬಹುದಾದ ಲೋಪಾದಿದೋಷಗಳ ಪರಿಹಾರಕ್ಕಾಗಿ ಮಾಡುವವು **ಪ್ರಾಯಶ್ಚಿತ್ತಕರ್ಮಗಳು.**

## ವೈದಿಕಕರ್ಮಗಳು

ವೇದೋಕ್ತಕರ್ಮಗಳು ನಾಲ್ಕು ಬಗೆ: (೧) ಪ್ರತಿದಿನವೂ ಸಾಯಂಪ್ರಾತಃಕಾಲಗಳಲ್ಲಿ ಮೊಸರು, ಹಾಲು, ಅಕ್ಕಿ- ಮುಂತಾದ ವಿಹಿತದ್ರವ್ಯಗಳಿಂದ ಮಾಡುವ **ಅಗ್ನಿಹೋತ್ರ**ವೇ ಮುಂತಾದ ಕೆಲವು ಹೋಮಗಳಿಗೆ **'ದರ್ವೀಹೋಮ'** ಗಳೆಂದು ಹೆಸರು. (೨) ಪ್ರತಿಯೊಂದು ಅಮಾವಾಸ್ಯೆ ಅಥವಾ ಹುಣ್ಣಿಮೆ- ಈ ದಿನಗಳಲ್ಲಿ ಚರು, ಪುರೋಡಾಶ- ಮುಂತಾದ ವಿಹಿತದ್ರವ್ಯಗಳಿಂದ ಮಾಡುವ ಯಾಗವಿಶೇಷಗಳಿಗೆ **ಇಷ್ಟಿಗಳು** ಎಂದು ಹೆಸರು. ಇವುಗಳನ್ನು **ಯಾಗ**ಗಳೆಂದೂ

ಕರೆಯುವದುಂಟು. (೩) ಪ್ರತಿವರ್ಷ ಋತುವಿನಲ್ಲಿಯೂ ಬೇರೆ ಗೊತ್ತಾದ ಕಾಲ ಗಳಲ್ಲಿಯೂ ಆಯಾ ಫಲಕ್ಕಾಗಿ ಪಶುವಿನ ಹೃದಯವೇ ಮುಂತಾದ ಅಂಗಗಳಿಂದ ಮಾಡುವ ಯಾಗಗಳಿಗೆ **'ಪಶುಯಾಗಗಳು'** ಎಂಮ ಹೆಸರು. (೪) ವಸಂತ ದಲ್ಲಿ ಅಥವಾ ಬೇರೆಯ ಆಯಾ ಗೊತ್ತಾದ ಕಾಲಗಳಲ್ಲಿ ಆಯಾ ಫಲದ ಪ್ರಾಪ್ತಿ ಗಾಗಿ ಸೋಮಲತೆಯನ್ನು ಕ್ರಿಯಕ್ಕೆ ಕೊಂಡು ಅದರ ರಸವನ್ನು 'ಗ್ರಹ', 'ಚಮಸ' -ಮುಂತಾದ ಪಾತ್ರೆಗಳಲ್ಲಿ ತುಂಬಿ ದೇವತೆಗಳಿಗೆ ಕೊಡುವದು **'ಸೋಮ ಯಾಗ'**ವು.

ಈ ಕರ್ಮಗಳೆಲ್ಲವೂ 'ಆಹಿತಾಗ್ನಿಯಾದ' ವಿವಾಹಿತನಾದ ದ್ವಿಜನು (ಬ್ರಾಹ್ಮಣ, ಕ್ಷತ್ರಿಯ, ಅಥವಾ ವೈಶ್ಯನು) ಮಾಡತಕ್ಕವು. ಕರ್ಮಕ್ಕಾಗಿ **ಗಾರ್ಹ ಪತ್ಯ, ದಕ್ಷಿಣಾಗ್ನಿ, ಆಹವನೀಯ-ಎಂಬ ಮೂರು ಅಗ್ನಿಗಳನ್ನು ಅಗ್ನ್ಯಾ ಧಾನ**ವೆಂಬ ಕರ್ಮದಿಂದ ಸಂಪಾದಿಸಿಕೊಂಡಿರಬೇಕು. ಇವುಗಳಲ್ಲಿ **ಗಾರ್ಹ್ಯ ಪತ್ಯ**ವು ಆಧಾನವಾದಂದಿನಿಂದ ಬದುಕಿರುವವರೆಗೂ ಧಾರಣೆಮಾಡತಕ್ಕದ್ದು, ಮಿಕ್ಕೆರಡನ್ನೂ ಆಯಾ ಕರ್ಮಕ್ಕೆ ಬೇಕಾಗುವಂತೆ ಗಾರ್ಹಪತ್ಯದಿಂದ ಎತ್ತಿ ತಮ್ಮ ತಮ್ಮ ಸ್ಥಾನಗಳಲ್ಲಿ ಇಟ್ಟುಕೊಳ್ಳಬೇಕಾಗುವದು ಕರ್ಮವು ಮುಗಿದಮೇಲೆ ಅವು ಮತ್ತೊಂದು ಯಜ್ಞಕ್ಕೆ ಉಪಯೋಗವಾಗುವದಿಲ್ಲ. ಗಾರ್ಹಪತ್ಯಾಗ್ನಿಯು ಯಾವ ಕಾರಣದಿಂದಲಾದರೂ ನಾಶವಾದರೆ ಕೂಡಲೆ **ಪ್ರಾಯಶ್ಚಿತ್ತ**ವನ್ನು ಮಾಡಿಕೊಂಡು ಮತ್ತೆ ಅದನ್ನು ಉತ್ಪಾದನೆಮಾಡಿಕೊಳ್ಳಬೇಕು, ಬಹುಕಾಲ ಹೀಗೆ ವಿಚ್ಛಿತ್ತಿಯಾದರೆ **ಪುನರಾಧಾನ**ವೆಂಬ ಕ್ರಮದಿಂದ ಅದನ್ನು ಮತ್ತೆ ಏರ್ಪಡಿಸಿಕೊಳ್ಳಬೇಕಾಗು ವದು. ಒಬ್ಬನ ಅಗ್ನಿಯಲ್ಲಿ ಇನ್ನೊಬ್ಬನು ಯಾಗಾದಿಗಳನ್ನು ಮಾಡುವದಕ್ಕೆ ಬರುವದಿಲ್ಲ.

## ಕರ್ಮಗಳ ಪ್ರಕೃತಿವಿಕೃತಿಭಾವವೂ ಅಂಗಾಂಗಿಭಾವವೂ

ಇಷ್ಟಿ, ಪಶುಯಾಗ, ಸೋಮಯಾಗ- ಇವುಗಳಂತೆ ಇರುವ ಬೇರೆಯ ಕರ್ಮ ಗಳು ಇವುಗಳ **ವಿಕೃತಿ**ಗಳೆನಿಸುವವು. ಯಾವ ಕರ್ಮಕ್ಕೆ ಸಮಗ್ರವಾಗಿ ಅಂಗ ಗಳೆಲ್ಲ ಉಪದಿಷ್ಟವಾಗಿರುವವೋ ಅದು **ಪ್ರಕೃತಿ ;** ಯಾವದಕ್ಕೆ ಮತ್ತೊಂದರಿಂದ ಅಂಗಗಳನ್ನು ತಂದು ಸೇರಿಸಿಕೊಳ್ಳಬೇಕಾಗಿರುವದೋ ಅದು **ವಿಕೃತಿ**- ಎಂಬುದು ಸಾಮಾನ್ಯನಿಯಮ. ಪ್ರಕೃತಿವಿಕೃತಿಗಳಿಗೆ ಸಾಮ್ಯವು ದ್ರವ್ಯದಿಂದ, ದೇವತೆ ಯಿಂದ, ಅಥವಾ ದೇವತಾವಾಚಿಪದಾಕ್ಷರದಿಂದ- ಹೀಗೆ ಮೂರು ಬಗೆಯಲ್ಲಿರ ಬಹುದು. ಇಷ್ಟಿಗಳಿಗೆಲ್ಲಕ್ಕೂ ಅಗ್ನೀಷೋಮೀಯಪಶುಯಾಗಕ್ಕೂ **ದರ್ಶಪೂರ್ಣ ಮಾಸಗಳು** ಪ್ರಕೃತಿ ; ಮಿಕ್ಕ ಪಶುಯಾಗಗಳಿಗೆಲ್ಲ **ಅಗ್ನೀಷೋಮೀಯಪಶು ಯಾಗ**ವು ಪ್ರಕೃತಿ , ಮಿಕ್ಕ ಸೋಮಯಾಗಗಳಿಗೆಲ್ಲ **ಜ್ಯೋತಿಷ್ಟೋಮ**ವೆಂಬ

ಸೋಮಯಾಗವು ಪ್ರಕೃತಿ. ಇದು ಸಾಮಾನ್ಯನಿಯಮವು, ವಿಶೇಷಗಳನ್ನು ಮಹರ್ಷಿಗಳ ಸೂತ್ರದಿಂದ ತಿಳಿದುಕೊಳ್ಳಬೇಕು.

**ಇಷ್ಟಿಗಳು** ಬೇರೆಯ ಇಷ್ಟಿಗಳಿಗೆ **ಅಂಗ**ವಾಗಿರಬಹುದು, ಪಶುಯಾಗಕ್ಕೂ ಸೋಮಯಾಗಕ್ಕೂ ಅಂಗವಾಗಿರಬಹುದು, **ಪಶುಯಾಗ**ಗಳು ಸೋಮಯಾಗಗಳಿಗೆ ಮಾತ್ರ ಅಂಗ; **ಸೋಮಯಾಗ**ಗಳು ಬೇರೆಯ ಸೋಮಯಾಗಗಳಿಗೆ ಮಾತ್ರ ಅಂಗವಾಗಿರುವವು

## ಕರ್ಮಗಳಿಗೆ ವೇದಗಳ ಸಂಬಂಧ

ಅಗ್ನಿಹೋತ್ರವು **ಯಜುರ್ವೇದವಿಹಿತ**ವಾಗಿರುತ್ತದೆ ದರ್ಶಪೂರ್ಣಮಾಸವೇ ಮುಂತಾದ **ಇಷ್ಟಿಗಳೂ ಪಶುಯಾಗವೂ ಋಗ್ವೇದಯಜುರ್ವೇದ**ಗಳನ್ನನುಸರಿಸಿ ನಡೆಯುವವು ಅಲ್ಲಿ **ಋಗ್ವೇದದಿಂದ ಯಾಜ್ಯಾ, ಪುರೋನುವಾಕ್ಯಾ, ಸಾಮಧೇನೀ, ಪ್ರೈಷ**- ಮುಂತಾದವುಗಳನ್ನು ಮಾಡಬೇಕಾಗುವದು, **ಶಾಖಾಚ್ಛೇದ, ಹವಿರ್ನಿರ್ವಾಪ, ಅವಘಾತ, ಪ್ರೋಕ್ಷಣ, ಪೇಷಣ, ಪುರೋಡಾಶಶ್ರಪಣ, ಪ್ರಯಾಜಾನುಯಾಜಾದಿಗಳು- ಇವೆಲ್ಲ ಯಜುರ್ವೇದವನ್ನು ಅನುಸರಿಸಿರುವವು. ಹೀಗೆಯೇ ಪಶುಯಾಗದಲ್ಲಿ ಯೂಪಚ್ಛೇದನ, ಉಪಾಕರಣ- ಮುಂತಾದ ಕ್ರಿಯೆಗಳು ಯಜುರ್ವೇದದಿಂದಲೂ ಯಾಜ್ಯಾದಿಗಳು ಋಗ್ವೇದದಿಂದಲೂ ಆಗುವವು; ಸೋಮಯಾಗವು ಮೂರು ವೇದಗಳಿಂದಲೂ ಆಗುವವು**

## ಋಗ್ವೇದಯಜುರ್ವೇದಸಾಮವೇದಗಳಲ್ಲಿ ಪ್ರತಿಪಾದಿತವಾಗಿರುವ ವಿಷಯ

**ಋಗ್ವೇದಯಜುರ್ವೇದಗಳಲ್ಲಿ** ಅಗ್ನಿಹೋತ್ರ, ಇಷ್ಟಿ, ಪಶುಗಳು-ಎಂಬ ಮೂರನ್ನು ಮಾತ್ರ ವಿಶೇಷವಾಗಿ ಹೇಳಿರುತ್ತದೆ, ಸೋಮಯಾಗಗಳಲ್ಲಿ ಕೆಲವನ್ನು ಮಾತ್ರ ವಿಧಿಸಿದೆ ಯಜುರ್ವೇದದ ಶಾಖೆಗಳಲ್ಲಿ ಅಗ್ನ್ಯಾಧಾನ, ಅಗ್ನಿಹೋತ್ರ, ಪುನರಾಧಾನ, ಆಗ್ರಯಣ, ಚಾತುರ್ಮಾಸ್ಯಗಳು, ಕಾಮ್ಯೇಷ್ಟಿಗಳು, ಕಾಮ್ಯಪಶುಗಳು, ಸೌತ್ರಾಮಣಿ, ಅಗ್ನಿಚಯನ, ಅಗ್ನಿಷ್ಟೋಮಾದಿಸಪ್ತಸ್ತೋಮಸಂಸ್ಥೆಗಳು[1], ರಾಜಸೂಯ, ಅಂತ್ಯೇಷ್ಟಿ, ಪುರುಷಮೇಧ, ಅಶ್ವಮೇಧ, ಗವಾಮಯನ- ಇಷ್ಟು ಕರ್ಮಗಳನ್ನು ಮಾತ್ರ ಅಂಗಸಮೇತವಾಗಿ ವಿಧಿಸಿದೆ, ತೈತ್ತಿರೀಯದಲ್ಲಿ ಇನ್ನೂ ಕೆಲವು ಸೋಮಯಾಗಗಳನ್ನು ಹೆಚ್ಚಾಗಿ ವಿಧಿಸಿರುತ್ತದೆ. **ಸಾಮವೇದ**ದಲ್ಲಿ ಇಷ್ಟಿಪಶುಚಾತುರ್ಮಾಸ್ಯಗಳನ್ನು ಬಿಟ್ಟು, ಸೋಮಯಾಗವನ್ನೇ ವಿಶೇಷವಾಗಿ ವಿಧಿಸಿರುತ್ತದೆ.

1. ಸಂಸ್ಥೆಗಳ ವಿಷಯಕ್ಕೆ ೧೦೬೬ನೆಯ ಪುಟದ ಟಿಪ್ಪಣಿಯನ್ನು ನೋಡಿ.

## ಸಾಮವೇದಸಂಹಿತೆ

ಮಿಕ್ಕ ವೇದಗಳಂತೆ ಸಾಮವೇದವೂ ಸಂಹಿತೆ, ಬ್ರಾಹ್ಮಣ- ಎಂಬ ಎರಡು ಮಹಾಭಾಗಗಳಾಗಿ ವಿಂಗಡವಾಗಿರುತ್ತದೆ. ಸಂಹಿತೆಯಲ್ಲಿ **ಆರ್ಚಿಕ, ಗಾನ**- ಎಂಬ ಎರಡು ವಿಭಾಗಗಳಿವೆ. ಆರ್ಚಿಕದಲ್ಲಿ ಪೂರ್ವಾರ್ಚಿಕ (ಛಂದ ಆರ್ಚಿಕ), ಉತ್ತರಾರ್ಚಿಕ- ಎಂದು ಎರಡು ಪ್ರವಿಭಾಗಗಳುಂಟು. ಇವೆರಡರಲ್ಲಿಯೂ ಬರಿಯ ಋಕ್ಕುಗಳೇ ಇರುತ್ತವೆ. ಮೊದಲನೆಯ ಪ್ರವಿಭಾಗದಲ್ಲಿ ಸಾಮಗಳಿಗೆ ಆಧಾರ ವಾದ ಋಕ್ಕುಗಳನ್ನೂ, ಎರಡನೆಯದರಲ್ಲಿ ಕ್ರತುಗಳಲ್ಲಿ ಗಾನಮಾಡತಕ್ಕ ಸಾಮ ಗಳಿಗೆ ಆಧಾರವಾಗಿರುವ ಋಕ್ಕುಗಳನ್ನು **ಸೂಕ್ತ**ರೂಪದಿಂದ ಹೇಳಿರುತ್ತದೆ.

## ಸಾಮಗಾನ

ಒಂದೊಂದು ಸಾಮಕ್ಕೆ ಆಧಾರವಾಗಿರುವ ಒಂದೊಂದು ಋಕ್ಕಿನೊಡನೆ ಮುಂದಿನ ಎರಡನ್ನು ಸೇರಿಸಿಕೊಂಡು ಈ ಮೂರನ್ನು ಒಂದಾನೊಂದು ಆವೃತ್ತಿ ಕ್ರಮದಿಂದ ಗಾನಮಾಡಬೇಕಾಗುತ್ತದೆ ಎಂಬುದು ಸಾಮಾನ್ಯನಿಯಮವು , ಹಾಗೆ ಮಾಡುವದು **ಸ್ತೋತ್ರ**ವೆನಿಸುವದು. ಸ್ತುತಿಯು ಮುಗಿಯುವದಕ್ಕೆ ಬೇಕಾ ದಷ್ಟು ಋಕ್ಕುಗಳ ಸಮುದಾಯವೇ **ಸೂಕ್ತವು.**

ಸಾಮವೇದದ ಗಾನಭಾಗವು **ಪ್ರಕೃತಿ, ಆರಣ್ಯಕ, ಊಹ, ರಹಸ್ಯ**- ಎಂದು ನಾಲ್ಕು ಬಗೆ. ಮೊದಲನೆಯದನ್ನು ಊರಿನಲ್ಲಿಯೂ ಎರಡನೆಯದನ್ನು ಅರಣ್ಯದಲ್ಲಿಯೂ ಗಾನಮಾಡತಕ್ಕದ್ದು- ಎಂಬ ವಿಶೇಷವನ್ನು ಬಿಟ್ಟರೆ ಈ ಎರಡಕ್ಕೆ ಮತ್ತೆಯಾವ ತಾರತಮ್ಯವೂ ಇರುವದಿಲ್ಲ. ಪ್ರಕೃತಿಗ್ರಂಥದಲ್ಲಿ ಬಲುಮಟ್ಟಿಗೆ ಪೂರ್ವಾರ್ಚಿಕದಲ್ಲಿರುವ ಋಕ್ಕುಗಳನ್ನೇ ಗಾನವಾಗಿ ಮಾರ್ಪಡಿಸಿಕೊಂಡಿರುತ್ತದೆ. ಗಾನದಲ್ಲಿ ಸ್ವರಗಳೆಂದರೆ ಮಿಕ್ಕ ವೇದಭಾಗಗದಲ್ಲಿರುವಂತೆ ಉದಾತ್ತಾದಿಗಳೆಂದು ಅಭಿಪ್ರಾಯವಲ್ಲ , ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಸಪ್ತಸ್ವರಗಳೇ ಆಗಿವೆ. ಗಾನಪದ್ಧತಿಯನ್ನು ಬಲ್ಲವರಿಂದ ಹೇಳಿಸಿಕೊಂಡು ಕಲಿಯಬೇಕು.[1]

ಒಂದೊಂದು ಋಕ್ಕಿನಿಂದ ಒಂದೊಂದು ಸಾಮವು ಹುಟ್ಟಿರುವದೆಂದೂ ಆ ಸಾಮಗಳನ್ನು ಪ್ರಕೃತಿಗ್ರಂಥದಲ್ಲಿ ತೋರಿಸಿದೆ ಎಂದೂ ತಿಳಿಸಿದ್ದಾಗಿದೆಯಷ್ಟೆ. ಈ ಸಾಮಗಳನ್ನು ಇದೇ ಕ್ರಮದಲ್ಲಿ ಕ್ರತುಗಳಲ್ಲಿ ಗಾನಮಾಡುವದಕ್ಕೆ ಬರುವದಿಲ್ಲ. ಆದ್ದರಿಂದ ಯಾವ ಯಾವ ಋಕ್ಕಿಗೆ ಯಾವ ಯಾವ ಋಕ್ಕುಗಳನ್ನು ಸೇರಿಸಿ ಕೊಂಡು ಯಾವ ಯಾವ **ತೃಚ**ಗಳನ್ನು ಹೇಗೆಹೇಗೆ ಗಾನಮಾಡಬೇಕಾಗುವದೆಂಬು

---

1. ಗ್ರಾಮೇ ಗೇಯ (ಅಥವಾ ವೇಯ, ಪ್ರಕೃತಿ) ಗಾನ ಮತ್ತು ಆರಣ್ಯಕಗಾನ- ಇವೆರಡನ್ನೂ "ಬೊಂಬಾಯಿಪ್ರಾಂತದ ಸ್ವಾಧ್ಯಾಯಮಂಡಲ"ದವರು ಪ್ರಕಟಿಸಿರುತ್ತಾರೆ. ಆ ಗ್ರಂಥದ ಭೂಮಿಕೆಯಲ್ಲಿ ಸಾಮಸ್ವರಗಳ ವಿಚಾರವನ್ನು ಸ್ವಲ್ಪಮಟ್ಟಿಗೆ ತಿಳಿಸಿದೆ.

ದನ್ನು ಊಹಿಸಿ ಒಂದು ಗ್ರಂಥವನ್ನು ಏರ್ಪಡಿಸಿರುತ್ತಾರೆ. ಇದಕ್ಕೆ **ಊಹಗ್ರಂಥ**ವೆಂದು ಹೆಸರು. ಹೀಗೆಯೇ ಆರಣ್ಯಗೇಯಸಾಮಗಳಿಂದಾಗಿರುವ ತೃಚಗಳನ್ನು **ರಹಸ್ಯಗ್ರಂಥ**ದಲ್ಲಿ ತಿಳಿಸಿದೆ. ಈ ಕಾರಣದಿಂದ **ಊಹ, ರಹಸ್ಯ- ಇವೆರಡೂ ಪೌರುಷೇಯವೆಂದು ಮೀಮಾಂಸಕರು ಭಾವಿಸಿರುತ್ತಾರೆ**

## ಸಾಮವೇದದ ಬ್ರಾಹ್ಮಣಗಳು

ಸಾಮವೇದಕ್ಕೆ ಸಾವಿರ ಶಾಖೆಗಳೆಂದು ಪ್ರಸಿದ್ಧಿ. ಅವುಗಳಲ್ಲಿ ಕೌಥುಮ, ರಾಣಾಯನೀಯ, ಜೈಮಿನೀಯ (ತಲವಕಾರೀಯ)- ಎಂಬೀ ಮೂರು ಶಾಖೆಗಳು ಈಗಲೂ ಕಂಡುಬರುತ್ತವೆ, ಇವುಗಳಲ್ಲಿಯೂ ಕೌಥುಮಶಾಖೆಯೇ ಬಹಳ ಪ್ರಸಿದ್ಧ ; ಆ ಶಾಖೆಗೆ ಸೇರಿದ **ತಾಂಡ್ಯಬ್ರಾಹ್ಮಣ**ವೊಂದೇ ಈಗ ಮುದ್ರಿತವಾಗಿ ಸಿಕ್ಕುವ ಗ್ರಂಥ. ತಾಂಡಿ ಎಂಬ ಋಷಿಯಿಂದ ದೃಷ್ಟವಾಗಿರುವದರಿಂದ ಇದಕ್ಕೆ **ತಾಂಡ್ಯಬ್ರಾಹ್ಮಣ**ವೆಂದು ಹೆಸರು. ಇದರಲ್ಲಿ ಇಪ್ಪತ್ತೈದು ಪ್ರಪಾಠಕಗಳಿರುವದರಿಂದ ಇದಕ್ಕೆ **ಪಂಚವಿಂಶತಿಬ್ರಾಹ್ಮಣ**ವೆಂದೂ ಹೆಸರುಂಟು. **ಪ್ರೌಢಬ್ರಾಹ್ಮಣ**ವೆಂಬುದು ಇದಕ್ಕೆ ಇನ್ನೊಂದು ಹೆಸರು.

**ತಾಂಡ್ಯಬ್ರಾಹ್ಮಣದಲ್ಲಿ** ಜ್ಯೋತಿಷ್ಟೋಮದಿಂದ ಹಿಡಿದು ಸಹಸ್ರಸಂವತ್ಸರಪರ್ಯಂತವಾದ ಸೋಮಯಾಗಗಳನ್ನೂ ಅವಕ್ಕೆ ಅಂಗವಾಗಿರುವ ಸ್ತೋತ್ರಗಳು, ಅವುಗಳು ಇಂತಿಷ್ಟು ಸಂಖ್ಯೆ ಎಂದು ಗೊತ್ತಾಗಿರುವ **ಸ್ತೋಮ**ಗಳು, ಅವುಗಳನ್ನು ಹೇಗೆ ಹೇಳಬೇಕಾದದ್ದು-ಎಂಬಿದನ್ನೂ ಪ್ರತಿಪಾದಿಸಿದೆ. ಪ್ರೌಢಬ್ರಾಹ್ಮಣ, ಷಡ್ವಿಂಶಬ್ರಾಹ್ಮಣ, ಸಾಮವಿಧಾನಬ್ರಾಹ್ಮಣ, ಆರ್ಷೇಯಬ್ರಾಹ್ಮಣ, ದೈವತಬ್ರಾಹ್ಮಣ, ಛಾಂದೋಗ್ಯೋಪನಿಷತ್ತು, ಸಂಹಿತೋಪನಿಷತ್ತು, ವಂಶಬ್ರಾಹ್ಮಣ- ಎಂದು ಬ್ರಾಹ್ಮಣಗ್ರಂಥಗಳು ಒಟ್ಟು ಎಂಟು-ಎಂದು ಸಾಯಣಾಚಾರ್ಯರು ಬರೆದಿರುತ್ತಾರೆ.

## ಸೋಮಯಾಗಸ್ವರೂಪದ ವರ್ಣನೆ

ಇಲ್ಲಿ **ಅಗ್ನಿಷ್ಟೋಮಸಂಸ್ಥಾಕವಾದ**[1] ಜ್ಯೋತಿಷ್ಟೋಮವೇ ಮುಂತಾದ

---

1. ಸಂಸ್ಥೆ ಎಂದರೆ ಕ್ರತುವಿನ ಸಮಾಪ್ತಿ. ಯಾವ ಸಾಮವನ್ನು ಉಚ್ಚರಿಸಿದಮೇಲೆಯೇ ಯಾವ ಕ್ರತುವು ಮುಗಿಯುವದೋ ಅದು ಆ ಸಂಸ್ಥೆಯುಳ್ಳದ್ದು. ಉದಾಹರಣೆಗೆ ಅಗ್ನಿಷ್ಟೋಮ ಎಂಬುದು ಒಂದಾನೊಂದು ಸಾಮವು, ಅದು ಯಾವ ಸೋಮಯಾಗದಲ್ಲಿರುವದೋ ಅಲ್ಲಿ ಅದನ್ನು ಗಾನಮಾಡಿದ ಬಳಿಕ ಮತ್ತೆ ಯಾವ ಗಾನವನ್ನೂ ಮಾಡುವದಿಲ್ಲ. ಆದ್ದರಿಂದ ಆ ಸಮಾಪ್ತಿಗೆ ಅಗ್ನಿಷ್ಟೋಮಸಂಸ್ಥೆ- ಎಂದು ಹೆಸರು ಆ ಕಾರಣ ಆ ಕ್ರತುವನ್ನು ಅಗ್ನಿಷ್ಟೋಮಸಂಸ್ಥಾಕವೆನ್ನುವರು. ಹೀಗೆ ಉಕ್ಥಸಂಸ್ಥಾಕ, ಷೋಡಶಿಸಂಸ್ಥಾಕ ಎಂದು ಮುಂತಾಗಿ ಕ್ರತುಗಳನ್ನು ಕರೆಯುತ್ತಾರೆ. ಸಂಸ್ಥಾಪದವನ್ನು ಬಿಟ್ಟು ಅಗ್ನಿಷ್ಟೋಮ, ಉಕ್ಥ್ಯ- ಎಂದು ಮುಂತಾಗಿ ಸಂಕ್ಷೇಪವಾಗಿಯೂ ಕರೆಯುವದುಂಟು. ಇಂಥ ಸಂಸ್ಥೆಗಳು ಏಳು ಉಂಟು.

ಸೋಮಯಾಗಗಳನ್ನು ಹೇಳಿದೆ ಎಂದು ಮೇಲೆ ಹೇಳಿದ್ದಾಗಿದೆ. ಈ ಯಾಗಗಳಿಗೆ ಮೂರು ವೇದಗಳ ಸಂಬಂಧವೂ ಇದೆ ಎಂಬುದನ್ನೂ ತಿಳಿಸಿದ್ದಾಗಿದೆ. ಸೋಮ ಯಾಗಕ್ಕೆ ಋಗ್ವೇದಯಜುರ್ವೇದವಿಹಿತವಾದ ಕರ್ಮಗಳನ್ನು ಮಾಡುವದಕ್ಕೆ ನಾಲ್ಕುನಾಲ್ಕು ಜನ, ಸಾಮವೇದವಿಹಿತವಾದ ಕ್ರಿಯಾಕಲಾಪಗಳನ್ನು ಮಾಡು ವವರು ನಾಲ್ಕು ಜನ, ಕರ್ಮಗಳಲ್ಲಿ ನ್ಯೂನಾತಿರೇಕಗಳನ್ನು ನೋಡುವದಕ್ಕೆ ನಾಲ್ಕು ಜನ– ಹೀಗೆ **ಹದಿನಾರು ಜನ ಋತ್ವಿಜರು** ಬೇಕಾಗುವರು ಇವರೆಲ್ಲರೂ ಆಹಿತಾಗ್ನಿಗಳೇ ಆಗಿರಬೇಕು. ಯಾಗವನ್ನು ಮಾಡುವವನು ಯಜಮಾನನೆನಿಸು ವನು ; ಅವನಿಗೆ ಋತ್ವಿಜರ ಸಹಾಯವಿಲ್ಲದೆ ಈ ಕರ್ಮಗಳನ್ನು ಮಾಡುವದು ಸಾಧ್ಯವೇ ಇಲ್ಲ. ಋತ್ವಿಜರ ವಿವರವು ಹೀಗಿರುತ್ತದೆ ಹೋತೃ, ಮೈತ್ರಾವರುಣ, ಅಚ್ಛಾವಾಕ, ಗ್ರಾವಸ್ತುತ್– ಇದು **ಹೋತೃಗಣ** : ಅಧ್ವರ್ಯು, ಪ್ರತಿಪ್ರಸ್ಥಾತಾ, ನೇಷ್ಟಾ, ಉನ್ನೇತಾ– ಇದು **ಅಧ್ವರ್ಯುಗಣ** , ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ, ಸುಬ್ರಹ್ಮಣ್ಯ– ಇದು **ಉದ್ಗಾತೃಗಣ** ; ಬ್ರಹ್ಮ, ಬ್ರಾಹ್ಮಣಾಚ್ಛಂಸಿ, ಆಗ್ನೀಧ್ರ, **ಪೋತೃ**– ಇದು **ಬ್ರಹ್ಮಗಣ.** ಈ ಗಣಗಳಲ್ಲಿ ಮೊದಲನೆಯವರಿಗೆ ಸಹಾಯಕರಾಗಿ ಮಿಕ್ಕ ಮೂರುಮೂರು ಪುರುಷರು, ಅವರನ್ನು ಹೋತೃಪುರುಷರು. ಅಧ್ವರ್ಯುಪುರುಷರು– ಎಂದು ಮುಂತಾಗಿ ಕರೆಯುತ್ತಾರೆ

ಆಯಾ ದೇವತೆಯನ್ನುದ್ದೇಶಿಸಿ ಆಯಾ ಹವಿಸ್ಸನ್ನು ಕೊಡುವದೇ **ಯಾಗವು** **ಅಧ್ವರ್ಯುವು ಜುಹೂ** ಮುಂತಾದ ಪಾತ್ರೆಯಲ್ಲಿ ಹವಿಸ್ಸನ್ನಿಟ್ಟುಕೊಂಡು **ಹೋತೃವನ್ನು ನೋಡಿ** 'ಅಗ್ನಯೇಽನುಬ್ರೂಹಿ'(ಅಗ್ನಿಗಾಗಿ ಅನುವಾಕ್ಯಾಋಕ್ಕನ್ನು ಹೇಳು) ಎನ್ನುವನು. **ಈ ಪ್ರೈಷವು** (ಕೇಳಿಕೊಂಡದ್ದು) ಆದ ಬಳಿಕವೇ ಹೇಳು ವದಾದ್ದರಿಂದ ಈ ಋಕ್ಕಿಗೆ **'ಅನುವಾಕ್ಯಾ'** ಎಂದು ಹೆಸರು. ಈ ಋಕ್ಕನ್ನು ಪಠಿಸಿದ ಮೇಲೆ **ಆಗ್ನೀಧ್ರನನ್ನು** ಕುರಿತು 'ಆಶ್ರಾವಯ' (ಹವಿಸ್ಸನ್ನು ಕೊಡು ತ್ತೇನೆ, ದೇವತೆಗೆ ಇದನ್ನು ತಿಳಿಸು) ಎಂದು ಅಧ್ವರ್ಯು ಕೇಳಿಕೊಳ್ಳುವನು , ಆಗ ಅವನು 'ಅಸ್ತು ಶ್ರೌಷಟ್' (ಆಗಲಿ ತಿಳಿಸುತ್ತೇನೆ) ಎನ್ನುವನು. ಇದಾದ ಬಳಿಕ **ಹೋತೃವನ್ನು** ಕುರಿತು 'ಯಜ'(ಪ್ರಕೃತದೇವತೆಯ **ಯಾಜ್ಯಾ**ಋಕ್ಕನ್ನು ಹೇಳು) ಎಂದು ಕೇಳಿಕೊಳ್ಳುವನು. ಹೋತೃವು ಆ ಋಕ್ಕನ್ನು ಹೇಳಿ ಅದರ ಕೊನೆಯಲ್ಲಿ 'ವೌಷಟ್', 'ವಷಟ್' ಮುಂತಾದ ವಷಟ್ಕಾರವನ್ನು ಹೇಳುತ್ತಾನೆ. ಇದಾದಮೇಲೆ **ಅಧ್ವರ್ಯುವು** ತನ್ನ ಕೈಯಲ್ಲಿದ್ದ ಹವಿಸ್ಸನ್ನು ಅಗ್ನಿಯಲ್ಲಿ ಹಾಕ ಬೇಕು , ಹಾಗೆ ಹಾಕುವ ಸಮಕಾಲದಲ್ಲಿಯೇ **ಯಜಮಾನನು** ದೇವತೆಗಾಗಿ ಹವಿಸ್ಸಿನ ಸ್ವತ್ವದ ತ್ಯಾಗವನ್ನು ತಿಳಿಸುವಂತೆ ( ಇದಮಗ್ನಯೇ ನ ಮಮ, ಅಗ್ನಯ ಇದಂ ನ ಮಮ– ಮುಂತಾದವನ್ನು ಇದು ನನ್ನದಲ್ಲ, ಅಗ್ನಿಗೋಸ್ಕರವಿದು ಎಂಬರ್ಥವನ್ನು ಸೂಚಿಸುವದಕ್ಕಾಗಿ ) ಉಚ್ಚರಿಸಬೇಕು. ಇಷ್ಟಿಗಳಲ್ಲಿ ಇದು

ಸಾಮಾನ್ಯಕ್ರಮವು. ಪಶುಸೋಮಯಾಗಗಳಲ್ಲಿ ಮಾತ್ರ **ಮೈತ್ರಾವರುಣ**ನೆಂಬ ಹೋತೃಗಣದ ಎರಡನೆಯ ಋತ್ವಿಜನು **ಪುರೋನುವಾಕ್ಯಾ** ಎಂಬ ಋಕ್ಕನ್ನು ಹೇಳಿದ ಬಳಿಕವೇ ಹೋತೃವು ಯಾಜ್ಯಾಋಕ್ಕನ್ನು ಪಠಿಸಬೇಕಾಗುವದು. ಗಾನ ವಿಲ್ಲದೆ ಸ್ವರತ್ರಯವೂ ಇಲ್ಲದೆ ಒಂದೇ ಸ್ವರದ ಋಕ್ಕಿನಿಂದ ಮಾಡುವ ದೇವತಾ ಸ್ತುತಿಗೆ **ಶಸ್ತ್ರ**ವೆಂದು ಹೆಸರು. ಹೋತೃವು ಶಸ್ತ್ರವನ್ನು ಹೇಳುತ್ತಿರುವಾಗ ಅಧ್ವರ್ಯು ವು ಅವನನ್ನು ಪ್ರೋತ್ಸಾಹಿಸುವದಕ್ಕಾಗಿ 'ಓಥಾಮೋ ದೇವ','ಮದಾಮೋದ ಇವ' ಎಂದು ಮುಂತಾಗಿ ಪಠಿಸುವ ವಾಕ್ಯಕ್ಕೆ '**ಪ್ರತಿಗರ**'ವೆಂದು ಹೆಸರು ಇದರ ಪ್ರಕಾರ ವಿಶೇಷಗಳನ್ನು ಆಯಾ ಸೂತ್ರಗಳಲ್ಲಿ ವಿವರಿಸಿರುತ್ತದೆ

## ಯಾಗದಲ್ಲಿ ಸವನಗಳು, ಮಂತ್ರಗಳ ಛಂದಸ್ಸು

ಸೋಮಯಾಗದಲ್ಲಿ ಪ್ರಾತಃಸವನ, ಮಾಧ್ಯಾಹ್ನಿಕಸವನ, ಸಾಯಂಸವನ- ಎಂಬ ಮೂರು ನಿಯತಕಾಲಗಳಿರುತ್ತವೆ. ಆಗಲೆ ಸೋಮವನ್ನು ಹಿಂಡಿ ಯಾಗ ವನ್ನು ಮಾಡತಕ್ಕದ್ದು ಇಂಥಿಂಥ ಸವನಕಾಲಕ್ಕೆ, ಇಂಥಿಂಥದ್ದು ಅಧಿದೇವತೆ, ಅದರ ಮುಂದೆ ಅಥವಾ ಹಿಂದೆ ಇಂಥಿಂಥ ಮಂತ್ರಗಳನ್ನು ವಿನಿಯೋಗಿಸತಕ್ಕದ್ದೆಂಬ ನಿಯಮವುಂಟು. ಮಂತ್ರಗಳು ಋಕ್ಕು, ಸಾಮ, ಯಜುಸ್ಸು- ಎಂಬ ಮೂರು ಪ್ರಕಾರವಾಗಿರುತ್ತವೆ ಋಕ್ಕುಗಳು ಇಂತಿಷ್ಟು ಅಕ್ಷರದ ಇಂತಿಷ್ಟು ಪಾದದಲ್ಲಿದ್ದರೆ ಇಂಥಿಂಥ ಛಂದಸ್ಸಿಗೆ ಸೇರಿದವು ಎಂಬ ನಿಯಮವಿದೆ. ಸಾಮಗಳಿಗೆ ಋಕ್ಕುಗಳೇ ಮೂಲವಾಗಿರುವದರಿಂದ ಅವುಗಳಿಗೇ ಅದೇ ಛಂದಸ್ಸುಗಳೆಂಬುದು ಸ್ಪಷ್ಟವಾಗಿದೆ. ಯಜುಸ್ಸುಗಳಿಗೆ ಮಾತ್ರ ಈ ನಿಯಮವಿಲ್ಲ ಮಂತ್ರಗಳ ಋಷಿ, ಛಂದಸ್ಸು, ದೇವತೆ, ವಿನಿಯೋಗ- ಇಷ್ಟನ್ನು ತಿಳಿದಿರಬೇಕಾದದ್ದು ಅವಶ್ಯವು. ವೇದದಲ್ಲಿ ಬರುವ ಛಂದಸ್ಸುಗಳು ಯಾವವೆಂದರೆ ಗಾಯತ್ರೀ, ಉಷ್ಣಿಕ್, ಅನುಷ್ಟುಪ್; ಬೃಹತೀ, ಪಙ್ಕ್ತಿ, ತ್ರಿಷ್ಟುಪ್, ಜಗತೀ- ಎಂಬೀ ಏಳು. ಗಾಯತ್ರಿಗೆ ಇಪ್ಪತ್ತು ನಾಲ್ಕು ಅಕ್ಷರಗಳು , ಅದಕ್ಕಿಂತ ನಾಲ್ಕು ಹೆಚ್ಚು ಅಕ್ಷರಗಳು ಅಂದರೆ ಇಪ್ಪತ್ತೆಂಟು ಅಕ್ಷರಗಳು ಉಷ್ಣಿಕ್ಛಂದಸ್ಸಿಗೆ , ಹೀಗೆಯೇ ಮುಂದುಮುಂದಕ್ಕೆ ಹೆಚ್ಚು ಅಕ್ಷರ ಗಳು ಅನುಷ್ಟುಬಾದಿಗಳಿಗೆ ಇರುತ್ತವೆ ಇವುಗಳಲ್ಲಿ ಗಾಯತ್ರಿಗೇ ಹೆಚ್ಚಿನ ಪ್ರಾಶಸ್ತ್ಯವನ್ನು ವೇದದಲ್ಲಿ ಕೊಟ್ಟಿರುತ್ತದೆ

## ಸ್ತೋತ್ರಗಳು, ಸ್ತೋಮಗಳು

ಆಯಾ ಗ್ರಹ, ಚಮಸ- ಮುಂತಾದ ಪಾತ್ರೆಗಳಲ್ಲಿ ಆಯಾ ದೇವತೆಗಳಿಗೋ ಸ್ಕರ ಸೋಮರಸವನ್ನು ಇಟ್ಟುಕೊಂಡಾದ ಮೇಲೆ, ಸದಸ್ಸೆಂಬ ಮಂಟಪದಲ್ಲಿ

**‘ಔದುಂಬರೀ’** ಎಂಬ ಕಂಬದ ಬಳಿಯಲ್ಲಿ[1] ಕುಳಿತುಕೊಂಡಿರುವ ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ– ಎಂಬ ಮೂವರು ಋತ್ವಿಜರು ಸಾಮವಿಶಿಷ್ಟವಾದ ಋಕ್ಕುಗಳಿಂದ ಮಾಡುವ ಸ್ತುತಿಗೆ **ಸ್ತೋತ್ರ**ವೆಂಬ ಹೆಸರು. ಆಗ ಒಂದೊಂದು ಸಾಮವನ್ನು ಮೂರು ಮೂರು ಋಕ್ಕುಗಳಿಂದ ಗಾನಮಾಡಬೇಕಾಗುವದು. ಆ ಗಾನಕ್ಕೆ ಇಂತಿಷ್ಟೆಂಬ ಸಂಖ್ಯೆಯನ್ನು ವಿಧಿಸಿ ಹೇಳಿರುತ್ತದೆ ; ಆ ಸಂಖ್ಯೆಗಳಿಗೆ **ಸ್ತೋಮ**ಗಳು ಎಂದು ಹೆಸರು. ತ್ರಿವೃತ್ (ಒಂಬತ್ತು), ಪಂಚದಶ (ಹದಿನೈದು) ಸಪ್ತದಶ (ಹದಿನೇಳು), ಏಕವಿಂಶ (ಇಪ್ಪತ್ತೊಂದು), ತ್ರಿಣವ (ಇಪ್ಪತ್ತೇಳು), ತ್ರಯಸ್ತ್ರಿಂಶ (ಮೂವತ್ತುಮೂರು), ಚತುರ್ವಿಂಶ (ಇಪ್ಪತ್ತುನಾಲ್ಕು), ಚತುಶ್ಚತ್ವಾರಿಂಶ (ನಲವತ್ತುನಾಲ್ಕು), ಅಷ್ಟಾಚತ್ವಾರಿಂಶ (ನಲವತ್ತೆಂಟು)– ಹೀಗೆ ಸಂಖ್ಯಾ ವಿಶೇಷಗಳಿಂದ ಈ **ಸ್ತೋಮಗಳು ಒಂಬತ್ತು ಬಗೆ**ಯಾಗಿರುತ್ತವೆ.

ಯಾವ ಯಾವ ಸಂದರ್ಭದಲ್ಲಿ ಎಷ್ಟೆಷ್ಟು ಸಂಖ್ಯೆಯ ಸ್ತೋತ್ರಗಳನ್ನು ಗಾನ ಮಾಡಬೇಕೆಂದು ವಿಧಿಸಿರುತ್ತದೆಯೋ ಅಲ್ಲಲ್ಲಿ ಮೂರು ಋಕ್ಕುಗಳನ್ನು ಮೂರು ಸಲ ಆವೃತ್ತಿಮಾಡಿಕೊಂಡು ಆಯಾ ಸಂಖ್ಯೆಯನ್ನು ಏರ್ಪಡಿಸಿಕೊಳ್ಳಬೇಕಾಗುವದು. ಉದಾಹರಣೆಗೆ **ಮಾಧ್ಯಂದಿನ ಪವಮಾನ** ಎಂಬ ಒಂದು ಸ್ತೋತ್ರವುಂಟು. ಅದರಲ್ಲಿ **ಒಂದನೆಯ ಪರ್ಯಾಯ**ಕ್ಕೆ ಮೊದಲನೆಯ ಋಕ್ಕನ್ನು ಮೂರು ಸಾರಿ, ಎರಡನೆಯ ಮೂರನೆಯ ಋಕ್ಕುಗಳನ್ನು ಒಂದೊಂದು ಸಾರಿ, ಹೀಗೆ ಗಾನಮಾಡಬೇಕು , **ಎರಡನೆಯ ಪರ್ಯಾಯ**ಕ್ಕೆ ಅದೇ ಒಂದನೆಯ ಋಕ್ಕನ್ನು ಒಂದು ಸಾರಿ, ಎರಡನೆಯದನ್ನು ಮೂರು ಸಾರಿ, ಮೂರನೆಯದನ್ನು ಒಂದು ಸಾರಿ– ಹೀಗೆ ಗಾನಮಾಡಬೇಕು ; **ಮೂರನೆಯ ಪರ್ಯಾಯ**ಕ್ಕೆ ಒಂದೆರಡನೆಯ ಋಕ್ಕುಗಳನ್ನು ಒಂದೊಂದು ಸಾರಿ, ಮೂರನೆಯದನ್ನು ಮೂರು ಸಾರಿ– ಹೀಗೆ ಗಾನಮಾಡಬೇಕು. ಇಲ್ಲಿಗೆ ಹದಿನೈದು ಸಾರಿಯಾಗುವದರಿಂದ ಇದು **ಪಂಚವಿಂಶತಿಸ್ತೋಮ**ವೆನಿಸುತ್ತದೆ. ಈ ಸ್ತೋಮಕ್ಕೆ ಈಗ ಹೇಳಿದ ಪ್ರಕಾರವಲ್ಲದೆ ಇನ್ನೂ ಎರಡು ಪ್ರಕಾರಗಳುಂಟು. ಇದರಂತೆ ಮೇಲೆ ಹೇಳಿದ ಒಂಬತ್ತು ಸ್ತೋಮಗಳಿಗೂ ಇಂಥ **ವಿಷ್ಟುತಿ**ಗಳು ಒಟ್ಟು ಇಪ್ಪತ್ತೆಂಟು ಇರುತ್ತವೆ. ಈ ವಿಷ್ಟುತಿಗಳನ್ನೆಲ್ಲ ಬ್ರಾಹ್ಮಣದಲ್ಲಿ ವಿವರಿಸಿ ಹೇಳಿದೆ. ಗಾನಗಳನ್ನು ಎಣಿಸುವದಕ್ಕೆ ‘ಕುಶಾ’ ಎಂಬ ಹೆಸರಿನ ಚೋಟುದ್ದದ ಚೂಪುತುದಿಯುಳ್ಳ ಅತ್ತಿ ಮರದ ಕಡ್ಡಿಗಳನ್ನು ಒಂದಾನೊಂದು ಗೊತ್ತಾದ ಕ್ರಮದಿಂದ ಅಡ್ಡಡ್ಡಲಾಗಿ

---

1. ಇದರ ಉತ್ತರಕ್ಕೆ ಮುಖವಾಗಿ ಉದ್ಗಾತೃ, ಪಶ್ಚಿಮಕ್ಕೆ ಪ್ರಸ್ತೋತೃ, ದಕ್ಷಿಣಕ್ಕೆ ಪ್ರತಿಹರ್ತೃ, ಮಿಕ್ಕ ಹೋತ್ರಾದಿಋತ್ವಿಜರು ಪೂರ್ವಾಭಿಮುಖರಾಗಿರುವರು ಎಂದು ತಾ. ಬ್ರಾ. ೬–೪–೧೪.

ಅಥವಾ ಸೀಟಾಗಿ ಇಡುವರು. ಉದಾಹರಣೆಗೆ ಮೇಲೆ ವಿವರಿಸಿದ ಮಾಧ್ಯಂದಿನ ಪವಮಾನದ ವಿಷ್ಟುತಿಪ್ರಕಾರಕ್ಕೆ ಹೀಗೆ ಕುಶಾನಿಕ್ಷೇಪಮಾಡಬೇಕು :

(೩) — — ≡
(೨) | ||| |
(೧) ≡ — —

## ಸಾಮದಲ್ಲಿ ಭಕ್ತಿಗಳು, ಸ್ತೋಭಗಳು

ಸಾಮವನ್ನು ಅವಯವಗಳಾಗಿ ಪಿಂಗಡಿಸಿಕೊಂಡು ಉದ್ಗಾತೃವೇ ಮುಂತಾದವರು ಪಠಿಸುತ್ತಾರೆ. ಇವಕ್ಕೆ **ಭಕ್ತಿ**ಗಳು ಎಂದು ಸಂಜ್ಞೆ. ಸಾಮದ ಆದಿಯಲ್ಲಿ ಉದ್ಗಾತೃವು ಪಠಿಸುವ ಹಿಮ್ ಎಂಬ ಶಬ್ದವು **ಹಿಂಕಾರವು**, ಪ್ರಸ್ತೋತೃವು ಗಾನಮಾಡುವ ಸಾಮಾವಯವವು **ಪ್ರಸ್ತಾವವು**, ಉದ್ಗಾತೃವು ಗಾನಮಾಡುವ ಭಾಗವು **ಉದ್ಗೀಥವು**, ಪ್ರತಿಹರ್ತೃವು ಗಾನಮಾಡುವ ಭಾಗವು **ಪ್ರತಿಹಾರವು ;** ಕೊನೆಯಲ್ಲಿ ಎಲ್ಲರೂ ಒಟ್ಟಾಗಿ ಮಾಡುವ ಗಾನಭಾಗವು **ನಿಧನವು.** ಇವು ಪಂಚಭಕ್ತಿಗಳು. **ಆದಿ** ಎಂಬ ಹೆಸರಿನ ಓಂಕಾರವನ್ನೂ **ಉಪದ್ರವ** ಎಂಬ ಉಪಾಂತ್ಯಭಾಗವನ್ನೂ ಸೇರಿಸಿಕೊಂಡರೆ ಸಾಮಕ್ಕೆ ಸಪ್ತಭಕ್ತಿಗಳಾಗುವವು ; ಈ ಎರಡು ಭಕ್ತಿಗಳನ್ನೂ ಉದ್ಗಾತೃವೇ ಹಾಡುತ್ತಾನೆ.

ಸಾಮಗಳನ್ನು ಗಾನಮಾಡುವಾಗ ಗಾನಕ್ಕಾಗಿ ಸಾಮವೇದಿಗಳು ನಡುನಡುವೆ ಸೇರಿಸಿಕೊಳ್ಳುವ ಅರ್ಥಶೂನ್ಯವಾದ ಅಕ್ಷರಗಳಿಗೆ **ಸ್ತೋಭ**ಗಳು ಎಂದು ಹೆಸರು. ಹಾಉ, ಹಾಇ, ಅಥ, ಇಹ, ಈ, ಊ, ಏ, ಔಹೋಇ, ಹಾ, ಸ್ವರ, ವಾಕ್, ಅನಿರುಕ್ತವಾದ ಹುಂಕಾರ– ಇಷ್ಟು ಸ್ತೋಭಗಳ ಹೆಸರುಗಳನ್ನೂ ಮೇಲೆ ಹೇಳಿದ ಸಾಮಭಕ್ತಿಗಳ ಹೆಸರುಗಳನ್ನೂ ಛಾಂದೋಗ್ಯೋಪನಿಷತ್ತಿನಲ್ಲಿ ಉಪಾಸನಾ ಪ್ರಸಂಗದಿಂದ ಪರಾಮರ್ಶಿಸಿರುವದು ಕಂಡುಬರುತ್ತದೆ. ಇಂಥಿಂಥ ಸ್ತೋಭಗಳು ರಥಂತರ, ವಾಮದೇವ್ಯ– ಮುಂತಾದ ಇಂಥಿಂಥ ಹೆಸರಿನ ಸಾಮದಲ್ಲಿ ಕಾಣಬರುತ್ತವೆ– ಎಂದು ಉಪನಿಷದ್ಭಾಷ್ಯದಲ್ಲಿ ಹೇಳಿದೆ. ಆ ಸಾಮಗಳ ಹೆಸರುಗಳನ್ನು ಶಬ್ದಾನುಕ್ರಮಣಿಕೆಯಲ್ಲಿ ನೋಡಬೇಕು.

## ಷಡ್ವಿಂಶಾದಿಬ್ರಾಹ್ಮಣಗಳು

(೨) **ಷಡ್ವಿಂಶ**ವೆಂಬ ಎರಡನೆಯ ಬ್ರಾಹ್ಮಣವು ತಾಂಡ್ಯಬ್ರಾಹ್ಮಣದ ಶೇಷವೇ. ತಾಂಡ್ಯೋಕ್ತವಾದ ಕೆಲವು ಕರ್ಮಗಳ ವಿಶೇಷವನ್ನೂ ಅಲ್ಲಿ ಹೇಳದಿರುವ ಕೆಲವು ಕರ್ಮಗಳನ್ನೂ ಇಲ್ಲಿ ಪ್ರತಿಪಾದಿಸಿದೆ. (೩) **ಸಾಮವಿಧಾನ** ಬ್ರಾಹ್ಮಣದಲ್ಲಿ ಕೃಚ್ಛ್ರಚಾಂದ್ರಾಯಣಾದಿಪ್ರಾಯಶ್ಚಿತ್ತಗಳನ್ನು ಹೇಳಿದೆ ; ಅವೆಲ್ಲ

ಆಯಾ ಸಾಮಾಧ್ಯಯನರೂಪವಾಗಿರುತ್ತವೆ. ಅವಕ್ಕೆ ಅಂಗವಾದ ಕೆಲವು ಹೋಮಗಳನ್ನೂ ಅಲ್ಲಿ ಹೇಳಿದೆ. (೪) **ಆರ್ಷೇಯಬ್ರಾಹ್ಮಣ**ದಲ್ಲಿ ಸಂಹಿತೋಕ್ತವಾದ ಸಾಮಗಳ ಋಷ್ಯಾದಿಗಳನ್ನು ತಿಳಿಸಿದೆ. (೫) **ದೈವತಬ್ರಾಹ್ಮಣ**ದಲ್ಲಿ ನಿಧನದೇವತೆಗಳು, ಛಂದಸ್ಸುಗಳು, ಅವುಗಳ ದೇವತೆಗಳು- ಮುಂತಾದ ವಿಷಯಗಳಿವೆ. (೬) **ಉಪನಿಷತ್ತು** ಆರನೆಯ ಬ್ರಾಹ್ಮಣಗ್ರಂಥವೆಂದು ಪರಿಗಣಿಸಲಾಗಿದೆ. ಇದರ ವಿಷಯಕ್ಕೆ **ಪೀಠಿಕೆ**ಯನ್ನು ನೋಡಿ (೭) **ಸಂಹಿತೋಪನಿಷತ್ತಿನಲ್ಲಿ** ಮಂತ್ರಸಂಹಿತಾಭೇದಗಳು, ಅಧ್ಯಯನಪ್ರಶಂಸೆ- ಮುಂತಾದ ವಿಚಾರಗಳಿವೆ. (೮) **ವಂಶಬ್ರಾಹ್ಮಣ**ವೆಂಬುದು ಕೊನೆಯ ಬ್ರಾಹ್ಮಣವು ಇದರಲ್ಲಿ ಸಂಪ್ರದಾಯಪ್ರವರ್ತಕರಾದ ಆಚಾರ್ಯರ ಪರಂಪರೆಯ ವರ್ಣನೆಯಿದೆ

# ಉಪನಿಷದ್ವಿಭಾಗಗಳ ವರ್ಣಾನುಕ್ರಮಣಿಕೆ

# ಶಬ್ದಾನುಕ್ರಮಣಿಕೆ

ಬಹಳಕಡೆಗಳಲ್ಲಿರುವ ಶಬ್ದಗಳಿಗೆ ಕೆಲವೇ ಭಾಷ್ಯಭಾಗಗಳ ಸಂಖ್ಯೆಗಳನ್ನು ಕೊಟ್ಟಿದೆ. ವಿವರಣೆಯಲ್ಲಿ ಕಪ್ಪಕ್ಷರದಲ್ಲಿರುವದು ಆ ಮಾತನ್ನು ಅನುಕ್ರಮಣಿಕೆಯಲ್ಲಿ ನೋಡಬೇಕೆಂಬುದನ್ನು ಸೂಚಿಸುತ್ತದೆ.

---

**೫೮. ಕಾರ್ಯಕಾರಣಪರಂಪರಾ-**
ಕಾರ್ಯದ ಕಾರಣ, ಅದರ ಕಾರಣ- ಹೀಗೆ ಒಂದರಹಿಂದೊಂದು ಬರುವ ಕಾರ್ಯಕಾರಣಗಳ ಸಾಲು, ೪೯೮

**೫೯. ಕಾರ್ಯಕರಣಸಂಘಾತಃ-**
ದೇಹೇಂದ್ರಿಯಗಳು, ಒಟ್ಟುಗೂಡಿ ಕೆಲಸ ಮಾಡುವ ಗುಂಪು, ೨೩೨, ೪೭೪, ೫೪೫, ೬೦೦.

**೬೦. ಕೈವಲ್ಯಸಂನಿಕೃಷ್ಟಫಲಮ್-**
ಮೋಕ್ಷಕ್ಕೆ ಹತ್ತಿರವಿರುವ ಫಲ, ಬ್ರಹ್ಮಲೋಕಪ್ರಾಪ್ತಿ, ೫

**೬೧ ಕ್ರಿಯಾಕಾರಕಫಲಭೇದಃ-**
ಕ್ರಿಯೆ, ಅದರ ಸಾಮಗ್ರಿ ಮತ್ತು ಫಲ-ಎಂಬ ಭೇದ, ೫, ೫೮೧, ೫೯೫, ೬೨೬.

**೬೨ ಗುಣಪ್ರಧಾನಭಾವಃ-**
ಒಂದು ಹೆಚ್ಚಾಗಿ ಪ್ರಧಾನವಾಗಿರುವದು, ಮಿಕ್ಕದ್ದು ಅದಕ್ಕೆ ಅಧೀನವಾಗಿರುವದು -ಹೀಗಿರುವಿಕೆ, ೪೬೭.

**೬೩. ಗ್ರನ್ಥಯಃ-**
ಹೃದಯವನ್ನು ಬಲವಾಗಿ ಆಶ್ರಯಿಸಿಕೊಂಡಿರುವ ಅವಿದ್ಯಾವಾಸನೆಗಳ ರಾಶಿ, ೬೦೪.

**೬೪. ಚನ್ದ್ರಲೋಕಪ್ರತಿಪತ್ತಿಃ-**
ಕರ್ಮಿಗಳು ಧೂಮಾದಿಮಾರ್ಗದಿಂದ ಪಡೆಯುವ ಗತಿ, ೨.

**೬೫. ತದ್ವಿದ್ಯಸಂವಾದಃ-**
ಆ ವಿದ್ಯೆಯನ್ನು ಬಲ್ಲವರೊಡನೆ ವಾದಮಾಡುವದು, ೭೪.

**೬೬. ತಪಃ-**
(೧) ಧ್ಯಾನ, ೧೮೭, (೨) ಕೃಚ್ಛ್ರ ಚಾಂದ್ರಾಯಣಾದಿಗಳು, ವಾನಪ್ರಸ್ಥ, ೧೭೬.

**೬೭ ತೀರ್ಥಮ್-**
(೧) ವಿದ್ಯಾದಾನಕ್ಕೆ ಪಾತ್ರ, ೨೨೮, (೨) ಶಾಸ್ತ್ರದಲ್ಲಿ ಆಗಬಹುದೆಂದಿರುವ ಯೋಗ್ಯಸಂದರ್ಭ, ೬೮೯.

**೬೮ ತ್ರೈಮಿರಿಕದ್ವಿಚನ್ದ್ರಪ್ರತ್ಯಯಃ-**
ಕಣ್ಣುಪರೆಬಂದವನಿಗೆ ಆಗುವ ಇಬ್ಬರು ಚಂದ್ರರ ಅರಿವು, ೧೭೯.

**೬೯ ತ್ರಯೀ ವಿದ್ಯಾ-**
ವೇದವಿದ್ಯೆ, ೧೮೭, ೩೫೧, ೩೫೨.

**೭೦. ದತ್ತಮ್-**
ಯಜ್ಞಸಂದರ್ಭದಲ್ಲಲ್ಲದೆ ಕೊಡುವ ದಾನ, ೪೦೭.

**೭೧ ದೃಷ್ಟಂ ಫಲಮ್-**
ಈ ಲೋಕದಲ್ಲಾಗುವ ಕರ್ಮಫಲ, ಅಥವಾ ಉಪಾಸನೆ, ೩೩.

**೭೨. ದೃಷ್ಟಿವಿಶೇಷಃ-**
ಕರ್ಮಾಂಗಗಳಿಗೆ, ಸಂಸ್ಕಾರವನ್ನು ಮಾಡುವ ಒಂದೊಂದು ಭಾವನೆ, ೧೬೭.

**೭೩. ದೇವತಾರೂಪಮ್-**
ಜೀವನ ಪರಮಾತ್ಮಸ್ವರೂಪ, ೪೯೫, ೪೯೬, ೬೨೨.

**೭೪ ದೇಶಕಾಲನಿಮಿತ್ತಾದ್ಯನೃತಾಭಿಸಂಧಿಃ-**
ಕರ್ಮಕ್ಕೆ ಫಲವಾಗುವದಕ್ಕೆ ದೇಶಕಾಲಾದಿಗಳು ಬೇಕೆಂಬ ಮಿಥ್ಯಾವಸ್ತುವಿನ ಭಾವನೆ, ೫೩೪.

**೭೫. ದೇಹಪಾತಃ, ಶರೀರಪಾತಃ-**
ದೇಹವು ಬಿದ್ದುಹೋಗುವದು, ಸಾವು, ೫೨೭, ೫೨೮, ೫೩೯.

**೭೬. ದೇಹಾತ್ಮದರ್ಶನಮ್, ಶರೀರಾತ್ಮಭಾವಃ-**
ದೇಹವೇ ತಾನೆಂಬ ತಿಳಿವಳಿಕೆ, ೬೫೯, ೬೭೬.

**೭೭. ಧರ್ಮಸ್ಕನ್ಧಾಃ-**
ಧರ್ಮವನ್ನು ಮಾಡುವ ಆಶ್ರಮಗಳು, ೧೭೬.

**೭೮. ಧೂಮಾದಿಮಾರ್ಗಃ-**
ಕರ್ಮಿಗಳು ಫಲಾನುಭವಕ್ಕೆ ಹೋಗುವ ದಕ್ಷಿಣಮಾರ್ಗ, ೨

**೭೯ ಧ್ಯಾನಾಹಾರಾಃ-**
ಧ್ಯಾನವೇ ಆಹಾರವಾಗಿ, ಮತ್ತೆ ಯಾವ ಆಹಾರವೂ ಇಲ್ಲದಿರುವವರು, ೬೮೭

**೮೦. ನಿಮಿತ್ತನೈಮಿತ್ತಿಕತ್ವಮ್-**
ಈ ನಿಮಿತ್ತಕಾರಣದಿಂದ ಇಂಥ ಕಾರ್ಯ ವಾಗುವದು ಎಂಬ ಸಂಬಂಧ, ೪೫೪

**೮೧ ನೈಷ್ಠಿಕಃ-**
ಜೀವಮಾನವೆಲ್ಲ ಗುರುಕುಲದಲ್ಲಿಯೇ ಇದ್ದುಕೊಂಡಿರುವ ಬ್ರಹ್ಮಚಾರಿ, ೧೭೬, ೪೦೬

**೮೨. ನ್ಯಾಯಯೋಗವೌ-**
ಯುಕ್ತಿ, ಸಾಂಪ್ರದಾಯಿಕೋಪದೇಶ- ಎಂಬ ಜ್ಞಾನಸಾಧನಗಳು, ೫೧೭.

**೮೩. ಪರಮಾತ್ಮವಿಕಾರಃ-**
ಪರಮಾತ್ಮನ ಕಾರ್ಯ,(ಮಿಥ್ಯಾಪ್ರಪಂಚ) ೧೮೮.

**೮೪. ಪರಮಾತ್ಮಾ-**
ಬ್ರಹ್ಮ, ೭.

**೮೫. ಪರಮಾರ್ಥಸತ್, ಪರಮಾರ್ಥಸತ್ಯಮ್-**
ನಿಜವಾಗಿರುವದು, ಸತ್ಯವಾಗಿ ತೋರುವದು ಮಾತ್ರವಲ್ಲ, ನಿಜವಾಗಿಯೂ ಸತ್ಯ ವಾಗಿರುವದು, ೫೦೫, ೫೮೫, ೫೩೭, ೬೦೬.

**೮೬. ಪರವಿದ್ಯಾ-**
ಕರ್ಮವಿಷಯವಲ್ಲದ, ಪರಮಾತ್ಮವಿಷಯಕ ವಾದ ಜ್ಞಾನ, ೫೪೭.

**೮೭. ಪರಾ ದೇವತಾ-**
ಪರಮಾತ್ಮ, ೫೦೪, ೫೩೨, ೫೪೦, ೫೮೧

**೮೮. ಪರಿವ್ರಾಜಕಃ, ಪರಿವ್ರಾಟ್-**
ಪರಮಹಂಸಸಂನ್ಯಾಸಿ, ೧೭೬,೧೭೮,೧೭೯.

**೮೯. ಪಾಪ್ಮಾ-**
(೧) ಧರ್ಮಾಧರ್ಮರೂಪವಾದ ಕಲ್ಮಷ, ೬೧೨, (೨) ಅಧರ್ಮದಲ್ಲಿ ಆಸಕ್ತಿ, ೨೨, ೨೩.

**೯೦ ಪಾರಿಪ್ಲವಾಃ-**
ಅಶ್ವಮೇಧದಲ್ಲಿ ಕೆಲವು ಕಥೆಗಳನ್ನು ಹೇಳ ಬೇಕಾದ ರಾತ್ರಿಗಳು, ೨೦೮.

**೯೧. ಪಾರಿಶೇಷ್ಯಮ್-**
ಮಿಕ್ಕದ್ದೆಲ್ಲವೂ ಹೊಂದುವದಿಲ್ಲವಾಗಿ ಇದೊಂದೇ ಉಳಿದಿವೆಯಾದ್ದರಿಂದ ಎಂಬ ಯುಕ್ತಿ, ೪೦೨.

**೯೨. ಪುಣ್ಯಲೋಕಃ-**
ಧರ್ಮದ ಫಲವಾಗಿ ಉಪಕುರ್ವಾಣ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥರಿಗೆ ದೊರಕುವ ಫಲ, ೧೭೮, ೧೮೩.

**೯೩. ಪುರುಷಃ-**
(೧) ಶರೀರೇಂದ್ರಿಯಗಳ ಗುಂಪು, ಶರೀರವು, ೨೩೨, ೨೩೩, ೨೬೪, (೨) ಎಲ್ಲವನ್ನೂ ತುಂಬಿಕೊಂಡಿರುವ ಪರಮಾತ್ಮ, ೩೩೫.

**೯೪. ಪುರುಷಾರ್ಥಸಿದ್ಧಿಃ-**
ಪುರುಷನು ಬಯಸುವ (ಮೋಕ್ಷದ ಸಿದ್ಧಿ),೨.

**೯೫. ಪೂರ್ತಮ್-**
ವಾಪೀಕೂಪಾದಿಗಳನ್ನು ಏರ್ಪಡಿಸುವ ಕರ್ಮ, ೪೦೭.

**೯೬. ಪ್ರಜಾಪತಿಃ-**
ವಿರಾಟ್ಪುರುಷ, ಕಶ್ಯಪ, ೧೦೮, ೬೪೭, ೬೫೨, ೬೫೯, ೬೭೧.

**೯೭. ಪ್ರಣವಃ-**
ಓಂಕಾರ, ಬ್ರಹ್ಮ, ೧೭೭, ೧೭೮.

**೯೮. ಪ್ರತಿಮಾ-**
ವಿಷ್ಣು ಮುಂತಾದ ದೇವತೆಗಳ ಮೂರ್ತಿ, ೫೫೨.

**೯೯. ಪ್ರತಿಷಿದ್ಧಸೇವಾ-**
ಶಾಸ್ತ್ರದಲ್ಲಿ ಕೂಡದೆಂದು ಹೇಳಿದ ಕರ್ಮ ವನ್ನು ಮಾಡುವದು, ೧೫೨.

**೧೦೦ ಪ್ರತ್ಯಕ್ಷಾದಿಪ್ರಮಾಣಾನಿ**–
ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ–ಮುಂತಾದ ಪ್ರಮಾಣಗಳು, ೨೫೯

**೧೦೧. ಪ್ರತ್ಯಗಾತ್ಮಾ**–
ಪ್ರಾಣಿಗಳೊಳಗಿರುವ ಆತ್ಮ, ೬೭೪

**೧೦೨. ಪ್ರತ್ಯವಾಯಃ**–
ಕರ್ಮವನ್ನು ಮಾಡದಿದ್ದರೆ ದೋಷ, ೧೮೧.

**೧೦೩. ಪ್ರಧಾನಮ್**–
ಜಗತ್ಕಾರಣವೆಂದು ಸಾಂಖ್ಯರು ಕಲ್ಪಿಸಿರುವ ಕಾರಣ, ೪೫೬.

**೧೦೪ ಪ್ರಮಾಣಪ್ರಮೇಯಬುದ್ಧಿಃ**–
ಇದು ಅರಿಯುವ ಸಾಧನ, ಇದು ಅರಿಯಲ್ಪಡುವ ವಸ್ತು ಎಂಬ ಬುದ್ಧಿ, ೧೭೯.

**೧೦೫. ಪ್ರವೃತ್ತಫಲಮ್**–
ಫಲವನ್ನುಂಟುಮಾಡುವದಕ್ಕೆ ಆರಂಭಿಸಿರುವ (ಕರ್ಮ), ೫೨೯.

**೧೦೬ ಪ್ರಾಣಕರಣಸಂಘಾತಃ**–
ಪ್ರಾಣ ಮತ್ತು ಕರಣಗಳು ಸೇರಿದ ಒಟ್ಟು (ಸೂಕ್ಷ್ಮಶರೀರ), ೫೦೪.

**೧೦೭. ಪ್ರಾಣವಿಜ್ಞಾನ**–
ಉದ್ಗೀಥವನ್ನು ಪ್ರಾಣನೆಂದು ಉಪಾಸನೆ ಮಾಡುವದು, ೩೨.

**೧೦೮. ಪ್ರಾಣಸಂಬನ್ಧಃ**–
(ಆತ್ಮನು ಜೀವನೆನಿಸುವದಕ್ಕೆ ಕಾರಣವಾದ) ಕರಣಸಂಬಂಧ, ೪೦೫.

**೧೦೯. ಪ್ರಾಯಶ್ಚಿತ್ತಮ್**–
ಪಾಪವನ್ನು ಕಳೆಯುವದಕ್ಕೆ ಮಾಡಿದ ಕರ್ಮ, ೫೨೯.

**೧೧೦. ಬಹಿಷ್ಪವಮಾನಮ್**–
ಒಂದಾನೊಂದು ಸಾಮಸ್ತೋತ್ರ, 'ಉಪಾಸ್ಮೈ ಗಾಯತ', 'ದವಿದ್ಯುತತ್ಯಾ', 'ಪವಸ್ವ' ಎಂಬ ಮೂರು ತೃಚಗಳಿಂದಾಗಿರುವ ಒಂಬತ್ತು ಋಕ್ಕುಗಳ ಗಾನ, ೧೦೪.

**೧೧೧. ಬೃಹತ್**–
ಒಂದಾನೊಂದು ಸಾಮ, ('ತ್ವಾಮಿದ್ಧಿ ಹವಾಮಹೇ' ಋ. ೬–೪೬-೧), ೧೫೩

**೧೧೨ ಬ್ರಹ್ಮ**–
(೧) ಪರಮಾತ್ಮ, ೩೪೫; (೨) ಸತ್ಯಲೋಕದಲ್ಲಿರುವ ಹಿರಣ್ಯಗರ್ಭ, ೩೪೫.

**೧೧೩. ಬ್ರಹ್ಮದೃಷ್ಟಿಃ**–
ಬ್ರಹ್ಮವೆಂದು ಭಾವಿಸುವದು, ೨೭೭, ೩೦೬.

**೧೧೪. ಬ್ರಹ್ಮಪ್ರತಿಪತ್ತಿಃ**–
ಬ್ರಹ್ಮಪ್ರಾಪ್ತಿ, ೨.

**೧೧೫ ಬ್ರಹ್ಮಲೋಕಃ**–
ಬ್ರಹ್ಮನಿರುವ ಲೋಕ, ೬೨೭, ೬೨೮, ೬೩೩.

**೧೧೬. ಬ್ರಹ್ಮವಿಜ್ಞಾನಮ್, ಬ್ರಹ್ಮವಿದ್ಯಾ**–
ಉಪಾಸನೆ, ೨೨೭, ೨೨೯, ೨೭೫

**೧೧೭ ಬ್ರಹ್ಮವಿದ್**–
(೧) ಸಾಕ್ಷಾತ್ಕಾರಮಾಡಿಕೊಂಡಿರುವ ಉಪಾಸಕ, ೨೨೬, ೨೭೫, ೩೨೩, ೩೩೯, ೩೪೫

**೧೧೮ ಬ್ರಹ್ಮಸಂಸ್ಥಃ**–
ಬ್ರಹ್ಮದಲ್ಲಿಯೇ ನಿಷ್ಠನಾಗಿರುವವನು, ಪ್ರಣವಸೇವೆಯನ್ನು ಮಾಡುತ್ತಿರುವವನು, ೧೭೬, ೧೭೮, ೧೭೯.

**೧೧೯. ಬ್ರಹ್ಮಹತ್ಯಾ**–
ಅನೇಕಜನ್ಮಗಳಿಗೆ ಕಾರಣವಾದ ಬ್ರಹ್ಮಹತ್ಯೆ, ೪೧೦

**೧೨೦. ಬ್ರಹ್ಮಾದಿಸ್ತಮ್ಬಪರ್ಯನ್ತಮ್**–
ಬ್ರಹ್ಮದಿಂದ ಹಿಡಿದು ಸ್ಥಾವರದವರೆಗಿನ (ಜಗತ್ತು), ೫೮೪.

**೧೨೧. ಭಕ್ತಿಃ**–
ಸಾಮದ ಅವಯವ, ಪ್ರಸ್ತಾವ, ಉದ್ಗೀಥ ಮುಂತಾದವು, ೭, ೧೦೬, ೧೩೩, ೧೩೫, ೧೩೬.

**೧೪೭. ವಿದ್ಯಾ-**
(೧) ಉಪಾಸನೆ, ೨, ೧೬, ೨೨೮, ೨೬೮, ೨೭೪, ೨೯೬, ೩೩೪, ೩೮೬, (೨) ಜ್ಞಾನ, ೪೪೩, ೬೦೪, ೬೦೮.

**೧೪೮. ವಿದ್ಯಾಕ್ರಿಯಾಶಕ್ತಿ ಸಂಮೂರ್ಛಿತಾತ್ಮಾ-**
ಜ್ಞಾನಶಕ್ತಿಕ್ರಿಯಾಶಕ್ತಿಗಳೆರಡೂ ಸೇರಿರುವ ಪ್ರಾಣ, ೬೮೦

**೧೪೯. ವಿದ್ಯಾವಿದ್ಯಾಪ್ರತ್ಯಯೌ-**
ಆತ್ಮಸ್ವರೂಪಸಿಶ್ಚಯರೂಪವಾದ ಪ್ರತ್ಯಯ, ಆತ್ಮನ ವಿಷಯದ ಮಿಥ್ಯಾಪ್ರತ್ಯಯ-ಇವುಗಳು, ೧೭೯.

**೧೫೦. ವಿದ್ಯಾಸಂಪ್ರದಾನನ್ಯಾಯಃ-**
ಜ್ಞಾನದ ರಹಸ್ಯವನ್ನು ಉಪದೇಶ ಮಾಡುವ ವಿಧಾನ, ೪೧೯.

**೧೫೧. ವಿಪರೀತಗ್ರಹಣಮ್, ವಿಪರೀತಾಧಿಗಮಃ-**
ತಪ್ಪಾಗಿ ತಿಳಿದುಕೊಳ್ಳುವದು, ೪೫೨, ೬೪೮, ೬೫೨, ೬೫೪, ೬೫೫.

**೧೫೨. ವಿರಾಟ್-**
(೧) ಪ್ರಜಾಪತಿಬ್ರಹ್ಮ, ೨೨೭, (೨) ಅನ್ನ, ೧೦೮.

**೧೫೩. ವಿಷ್ಣ್ವಾದಿಬುದ್ಧಿಃ-**
ಪ್ರತಿಮೆಯೇ ಮುಂತಾದದ್ದರಲ್ಲಿ ವಿಷ್ಣುವೇ ಮುಂತಾದ ದೇವತೆಗಳ ಬುದ್ಧಿ, ೫೪೨, ೫೫೨.

**೧೫೪. ವೇದಾನ್ತಪ್ರಮಾಣಮ್-**
ಶ್ರುತಿವಾಕ್ಯರೂಪಪ್ರಮಾಣ, ೧೮೫.

**೧೫೫. ವೇದೋಕ್ತಂ ಪಾರಿವ್ರಾಜ್ಯಮ್-**
ಶ್ರುತಿವಿಹಿತವಾದ ಸಂನ್ಯಾಸ, ೧೮೪.

**೧೫೬. ವೈನಾಶಿಕಾಃ, ಮಹಾವೈನಾಶಿಕಾಃ-**
ಯಾವುದೊಂದು ವಸ್ತುವೂ ಪರಮಾರ್ಥ ಪಾ ಲ್ಲ- ಎನ್ನುವವರು, ೪೫೧, ೪೫೩.

**೧೫೭. ವೈರಾಜಸಾಮ-**
ಒಂದು ಬಗೆಯ ಸಾಮ, ('ಪಿಬಾ ಸೋಮಮಿನ್ದ್ರಮನ್ದತು ತ್ವಾ', ಋ. ೭-೧೩೦-೨), ೧೦೮, ೧೫೦.

**೧೫೮. ವೈರೂಪಮ್-**
ಒಂದು ಬಗೆಯ ಸಾಮ, ('ಯದ್ದ್ಯಾವ ಇನ್ದ್ರ ತೇ ಶತಮ್', ಋ. ೮-೭೦-೫) ೧೫೫.

**೧೫೯. ವೈಶೇಷಿಕಾಃ-**
ಸತ್ತೆಯೆಂಬ ಸಾಮಾನ್ಯವಿದೆಯೆಂಬ (ವೈಶೇಷಿಕ)ವಾದಿಗಳು, ೪೫೦.

**೧೬೦. ವೈಶ್ವದೇವ್ಯಮ್-**
ಒಂದು ಬಗೆಯ ಸಾಮ, (ಪ್ರಮಿತ್ರಾಯ ಪ್ರಾರ್ಯಮ್ಣೇ ಋ. ೬-೧೦೭-೫), ೧೦೮

**೧೬೧. ವ್ಯಾಕೃತ-**
ನಾಮತೂಪಗಳಾಗಿ ವಿಂಗಡಿಸಿದ, ೪೬೬, ೪೬೭.

**೧೬೨. ವ್ಯಾವಹಾರಿಕಮ್-**
ವ್ಯವಹಾರದಲ್ಲಿ ನಿಜವೆಂದು ತೋರುವ, ೬೧೧.

**೧೬೩. ವ್ಯಾವೃತ್ತ್ಯನುವೃತ್ತೀ-**
ಅನ್ವಯವ್ಯತಿರೇಕಗಳು, ೪೯೩.

**೧೬೪. ಶಕ್ವರ್ಯಃ-**
ಒಂದು ಬಗೆಯ ಸಾಮ, ('ಪ್ರೋಷ್ವಸ್ಮೈ ಪುರೋರಥಮ್', ಋ. ೧೦-೧೩೩-೧) ೧೫೯.

**೧೬೫. ಶರೀರಾತ್ಮಭಾವನಾ-**
ದೇಹವೇ ತಾನೆಂದು ಬಗೆಯುವದು, ೬೨೩.

**೧೬೬. ಶಾಸ್ತ್ರಾರ್ಥಃ-**
ಶಾಸ್ತ್ರವು ತಾತ್ಪರ್ಯದಿಂದ ಹೇಳುವ ವಿಷಯ, ೫೮೪.

**೧೬೭. ಶುದ್ಧಸತ್ತ್ವಮ್-**
ದೋಷಸಂಬಂಧವಿಲ್ಲದ ಅಂತಃಕರಣ, ೬೧೨, ೬೩೬, ೬೭೦.

